# ಇತಿಹಾಸ ದರ್ಶನ

## ಸಂಪುಟ ೨೦/೨೦೦೫

೨೦೦೪ರ ಸೆಪ್ಟೆಂಬರ್ ೨೪ ರಿಂದ ೨೬ರ ವರೆಗೆ ಹೊನ್ನಾಳಿಯ ಹಿರೇಕಲ್ಮಠದಲ್ಲಿ
ಸಮಾವೇಶಗೊಂಡಿದ್ದ ಕರ್ನಾಟಕ ಇತಿಹಾಸ ಅಕಾದೆಮಿಯ ಹದಿನೆಂಟನೆಯ ಸಮ್ಮೇಳನದಲ್ಲಿ
ಅಕಾದೆಮಿಯ ಸದಸ್ಯರು ಮಂಡಿಸಿದ ವಿದ್ವತ್ ಪ್ರಬಂಧಗಳ ಸಂಪುಟ

ಸಂಪಾದಕರು

**ಎಂ.ಜಿ. ನಾಗರಾಜ್**

**ಡಾ।। ಪಿ.ವಿ. ಕೃಷ್ಣಮೂರ್ತಿ**



**ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು**

# ITIHĀSA DARŚANA

The Volume of the Scholarly papers presented and the General body Proceedings of the Eighteenth Annual Conference of **The Karnataka Ithihasa Academy** (Regd.,) held at Honnali, Davanagere District on 24th, 25th & 26th September 2004

**Volume 20, Septmber - 2005**

Pages : **480 + xL**

ಬೆಲೆ : ರೂ. ೨೫೦/-

ಪುಟಗಳು : ೪೮೦ + xL



Edited by : **M. G. Nagaraj**
**Dr. P. V. Krishna murthy**

Published by : Karnataka Itihasa Academy (Regd.)
Gokhale Institute of Public Affairs Premises
Basavanagudi Road, Narasimharaja Colony
Bangalore - 560 019

Price : **Rs. 250/-**

## ಪ್ರಬಂಧಕಾರರ ಗಮನಕ್ಕೆ

೧. ಈ ಸಂಪುಟದ ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ **ಅಭಿಪ್ರಾಯಗಳಿಗೆ ಆಯಾ ಲೇಖಕರೇ ಹೊಣೆ.** ಅವು ಅಕಾದೆಮಿಯ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳಲ್ಲ.

೨. ಕರ್ನಾಟಕ ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲುವ ಬರಹಗಳಿಗೆ 'ಇತಿಹಾಸ ದರ್ಶನ' ಮೀಸಲಾಗಿದೆ.

೩. ಲೇಖನಗಳು **ಹಸ್ತಲಿಖಿತ ೧೦** ಪುಟಗಳ ಪರಿಮಿತಿಯಲ್ಲಿ ಇರುವುದು ಸೂಕ್ತ. ಲೇಖನಗಳನ್ನು ಹಾಳೆಯ ಒಂದೇ ಮಗ್ಗುಲಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಬೆರಳಚ್ಚು ಮಾಡಿಸಿದ್ದರೆ ಅಗತ್ಯವಿರುವೆಡೆ ತಿದ್ದುಪಡಿ ಮಾಡಿರಬೇಕು. ಅಡಿಟಿಪ್ಪಣಿಗಳನ್ನು, ಗ್ರಂಥಲೇಖನಾಧಾರ ವಿವರಗಳನ್ನು ಈಗಾಗಲೇ ಸಂಶೋಧನ ಬರಹಗಳಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವ ಕ್ರಮದಲ್ಲಿ ನೀಡುವುದು ಉತ್ತಮ.

೪. ಲೇಖನಕ್ಕೆ ಸಂಬಂಧಿಸಿದ ಛಾಯಾಚಿತ್ರಗಳನ್ನು ಕಳುಹಿಸುವಲ್ಲಿ, ಚಿತ್ರದ ಹಿಂಬದಿಯಲ್ಲಿ ಚಿತ್ರದ ಶೀರ್ಷಿಕೆ ಮತ್ತು ಲೇಖಕರ ಹೆಸರನ್ನು ಬರೆಯಬೇಕು. ಬರೆಯದೆ ಹೋದರೆ ಚಿತ್ರಗಳ ಪ್ರಕಟಣೆ ಕಷ್ಟವಾಗುತ್ತದೆ.

೫. ಈಗಿನ ೧೯ನೇ ಸಮ್ಮೇಳನದಲ್ಲಿ ಮಂಡಿತ ಪ್ರಬಂಧಗಳನ್ನು ಅನಿವಾರ್ಯ ಕಾರಣಗಳಿಂದ ಅಲ್ಲಿಯೇ ಕೊಡಲಾಗದಿರುವ ಅಕಾದೆಮಿಯ ಸದಸ್ಯ ಲೇಖಕರು, ದಯಮಾಡಿ ತಮ್ಮ ಪೂರ್ಣ ವಿಳಾಸದೊಡನೆ ಸಮ್ಮೇಳನ ಮುಗಿದ ಎರಡು ತಿಂಗಳ ಒಳಗಾಗಿ, **ಸಂಪಾದಕರು, ಇತಿಹಾಸ ದರ್ಶನ,** ಕರ್ನಾಟಕ ಇತಿಹಾಸ ಅಕಾದೆಮಿ, ಗೋಖಲೆ ಸಾರ್ವಜನಿಕ ಸಂಸ್ಥೆ ಆವರಣ, ನರಸಿಂಹರಾಜ ಕಾಲೋನಿ, ಬೆಂಗಳೂರು-೫೬೦ ೦೧೯, ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರಿದೆ.

೬. ಪ್ರಬಂಧದ ಲೇಖನದ ನಕಲು ಅಥವಾ ಜೆರಾಕ್ಸ್ ಪ್ರತಿಯ ಬದಲು ಮೂಲಪ್ರತಿಯನ್ನೆ ದಯವಿಟ್ಟು ಕಳುಹಿಸಿ. ಹಾಗೆಯೇ ಲೇಖನಗಳಲ್ಲಿ **ಲೇಖಕರು ತಮ್ಮ ಈಚಿನ ಸರಿಯಾದ ವಿಳಾಸವನ್ನು ದಾಖಲಿಸಲು ದಯವಿಟ್ಟು ಮರೆಯಬಾರದೆಂದು ಪ್ರಾರ್ಥಿಸಿದೆ.**

೭. ಸಮ್ಮೇಳನದಲ್ಲಿ ಮಂಡಿಸಿದ ಲೇಖನಗಳನ್ನು ಬೇರೆಡೆ ಪ್ರಕಟ ಮಾಡಿದ್ದರೆ ಅಥವಾ ಬೇರೆಡೆ ಪ್ರಕಟನೆಗೆ ಕಳುಹಿಸಿದ್ದರೆ ದಯವಿಟ್ಟು ತಿಳಿಸಬೇಕೆಂದು ವಿನಂತಿ. ಮಂಡಿತ ಪ್ರಬಂಧಗಳು ಮೊದಲಿಗೆ ಅಕಾದೆಮಿಗೆ ಮೀಸಲು ಕಾಣಿಕೆ ಅಲ್ಲವೆ !

ಲಕ್ಷ್ಮಿ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨



# ಶ್ರೀ ಜಗದ್ಗುರು ರಂಭಾಪುರೀ ವೀರಸಿಂಹಾಸನ ಮಹಾಸಂಸ್ಥಾನ ಪೀಠ

ಬಾಳೆಹೊನ್ನೂರು-೫೭೭ ೧೧೨ ಚಿಕ್ಕಮಗಳೂರು ಜಿಲ್ಲೆ

**ಶ್ರೀಮದ್ ರಂಭಾಪುರಿ ವೀರಸಿಂಹಾಸನಾಧೀಶ್ವರ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರು**

ದಿನಾಂಕ : ೧೧-೭-೨೦೦೫ ವಾಸ್ತವ್ಯ : ಬೆಂಗಳೂರು

## ಶುಭಾಶೀರ್ವಾದ ಸಂದೇಶ

ಮಾನವ ಜೀವನ ಅಮೂಲ್ಯ. ಜೀವನದ ಉಜ್ವಲ ಭವಿಷ್ಯಕ್ಕಾಗಿ ಎಲ್ಲರ ಕಾತುರ. ಉತ್ಕರ್ಷತೆ ಮತ್ತು ಪ್ರಗತಿ ಮಾನವ ಜೀವನದ ಪರಮಗುರಿ ಆಗಬೇಕು. ಆದರ್ಶ ಮೌಲ್ಯಗಳನ್ನು ಉಳಿಸಿ ಬೆಳೆಸಬೇಕಾದುದು ಎಲ್ಲರ ಧರ್ಮ. ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡಬೇಕಾದುದು ಸರ್ವರ ಕರ್ತವ್ಯವಾಗಿದೆ.

ಸಾಹಿತ್ಯ ಮತ್ತು ಸಂಸ್ಕೃತಿ ಮಾನವನ ಎರಡು ಕಣ್ಣುಗಳು ಇದ್ದಂತೆ. ಇವು ಯಾವಾಗಲೂ ಬೆಳೆಯಬೇಕು. ಮಾನವ ಕಲ್ಯಾಣದ ಗುರಿ ಇವುಗಳಲ್ಲಿ ಅಡಕವಾಗಿವೆ. ಸುಸಂಸ್ಕೃತ ಸಮಾಜ ನಿರ್ಮಾಣಕ್ಕೆ ಇವೆಲ್ಲ ಭದ್ರವಾದ ಅಡಿಪಾಯ ಇದ್ದಹಾಗೆ.

ನಾವು ವಿಜ್ಞಾನ ಯುಗದಲ್ಲಿ ಪ್ರವರ್ತನಶೀಲರಾದಾಗ್ಯೂ ನಮ್ಮ ಸಂಸ್ಕೃತಿ ಇತಿಹಾಸವನ್ನು ಮರೆಯುವಂತಿಲ್ಲ. ಇತಿಹಾಸದ ಅವಶೇಷಗಳು ಮತ್ತು ಕುರುಹುಗಳು ಭವಿಷ್ಯತ್ತಿನ ಜನಾಂಗಕ್ಕೆ ಪ್ರೇರಕಶಕ್ತಿಯಾಗಿ ಗೋಚರಿಸುತ್ತವೆ. ಕರ್ನಾಟಕ ಇತಿಹಾಸ ಅಕಾದೆಮಿ (ರಿ)ಯ ೧೮ನೇ ವಾರ್ಷಿಕ ಸಮ್ಮೇಳನವು ದಾವಣಗೆರೆ ಜಿಲ್ಲೆ ಹೊನ್ನಾಳಿ ಶ್ರೀ ಹಿರೇಕಲ್ಮಠದಲ್ಲಿ ಜರುಗಿತು. ಈ ವಿಶಿಷ್ಠ ಸಮಾರಂಭದ ಸಾನಿಧ್ಯವನ್ನು ಶ್ರೀ ಪೀಠವಹಿಸಿತ್ತು. ಈ ಸಂದರ್ಭದಲ್ಲಿ ಇತಿಹಾಸ ತಜ್ಞರೂ ಮತ್ತು ಸಂಸ್ಥೆಯ ಅಧ್ಯಕ್ಷರೂ ಆದ ಡಾ॥ ಸೂರ್ಯನಾಥ ಕಾಮತ್ ಅವರು ಶ್ರೀ ಪೀಠದ ಆಶೀರ್ವಾದ ಬಯಸಿ ಪ್ರಾರ್ಥಿಸಿದರು. ಆಗ ಪ್ರತಿವರುಷ ಇತಿಹಾಸ ಅಕಾದೆಮಿ ಸಮ್ಮೇಳನದ ಅಪೂರ್ವ ಸನ್ನಿವೇಶದಲ್ಲಿ ಹೊರತರುವ "ಇತಿಹಾಸ ದರ್ಶನ" ಕೃತಿ ಪ್ರಸಾರ ಪ್ರಕಟಣೆಗೆ ಇಪ್ಪತ್ತೈದು ಸಹಸ್ರ (೨೫,೦೦೦=೦೦) ರೂಪಾಯಿ ಆಶೀರ್ವದಿಸುವುದಾಗಿ ಘೋಷಿಸಿದ್ದೆವು.

ಅದರಂತೆ ಇಂದು 'ಇತಿಹಾಸದರ್ಶನ -೨೦' ಕೃತಿ ಪ್ರಕಟಣೆಗೆ ಮೊದಲ ಕೊಡುಗೆಯಾಗಿ ಆಶೀರ್ವದಿಸುತ್ತಿದ್ದೇವೆ. ಕರ್ನಾಟಕ ಇತಿಹಾಸ ಅಕಾದೆಮಿ ಉತ್ತಮ ಕಾರ್ಯ ಮಾಡುತ್ತಾ ಮುನ್ನಡೆದಿದೆ. ಇದು ಇನ್ನಷ್ಟು ಮತ್ತಷ್ಟು ಬೆಳೆಯಲಿ ಬಲಗೊಳ್ಳಲಿ. ಇದಕ್ಕಾಗಿ ಶ್ರಮಿಸುವ ಅಕಾದೆಮಿ ಅಧ್ಯಕ್ಷರನ್ನು ಮತ್ತು ಸಂಪಾದಕರಾದ ಶ್ರೀ. ಎಂ. ಜಿ. ನಾಗರಾಜ್, ಡಾ॥ ಪಿ. ವಿ. ಕೃಷ್ಣಮೂರ್ತಿ ಮೊದಲ್ಗೊಂಡು ಸಮಸ್ತ ನಿರ್ದೇಶಕ ಮಂಡಳಿಯ ಎಲ್ಲ ಸದಸ್ಯರಿಗೂ ಶುಭ ಹಾರೈಕೆಗಳು.

ಪರಮ ದಯಾಳು ಶ್ರೀ ಪಾರ್ವತೀಪರಮೇಶ್ವರರು ಹಾಗೂ ಶ್ರೀ ಜಗದ್ಗುರು ರೇಣುಕಾಚಾರ್ಯರು ಸರ್ವರಿಗೂ ಮಂಗಲ ಪರಂಪರೆಯನ್ನು ಅನುಗ್ರಹಿಸಲಿ.

ಇತ್ಯನಂತಶಿವಾಶಿಷಃ
೧೧-೭-೨೦೦೫

**'ಇತಿಹಾಸದರ್ಶನ' ಪ್ರಕಟಣೆಗೆ ಆಶೀರ್ವದಿತ ಪ್ರಪ್ರಥಮ ನಿರಂತರ ವಾರ್ಷಿಕ ನಿಧಿ ಕೊಡುಗೆ ರೂ. ೨೫,೦೦೦**

★ **ಪ್ರತಿ ವಾರ್ಷಿಕನಿಧಿ ಕೊಡುಗೆ ಆರಂಭಿಸಿದ ವರ್ಷ : ೨೦೦೫** ★

ದಾವಣಗೆರೆ ಜಿಲ್ಲೆ ಹೊನ್ನಾಳಿಯಲ್ಲಿ ನಡೆದ
ಹದಿನೆಂಟನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರು



ಶ್ರೀ ಕೆಳದಿ ಗುಂಡಾಜೋಯಿಸ್



ಪ್ರೊ॥ ಕೆ. ಅಭಿಶಂಕರ್ ಅವರ ಸ್ಮರಣಾರ್ಥ ಸಮ್ಮೇಳನಾಧ್ಯಕ್ಷರಿಗೆ ನೀಡುವ ನೆನಪಿನ ಶಿಲ್ಪ ಕಾಣಿಕೆ
ಪ್ರತಿವರ್ಷ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನಾಧ್ಯಕ್ಷರಿಗೆ ಈ ಕಾಣಿಕೆ ನೀಡಲು
ಶ್ರೀಮತಿ ವಿಶಾಲಕ್ಷಿ ಅಭಿಶಂಕರ್ ಅವರು ಪುದುವಟ್ಟು ಇಟ್ಟಿದ್ದಾರೆ.
(ಶಿಲ್ಪ ಕಲಾವಿದೆ : ಶ್ರೀಮತಿ ಕನಕಮೂರ್ತಿ)



ಸಮ್ಮೇಳನ ಸಭಾಂಗಣಕ್ಕೆ ಶ್ರೀಮದ್ರಂಭಾಪುರಿ ಮಹಾಸನ್ನಿಧಿಯವರಿಗೆ ಹೊನ್ನಾಳಿ ಹಿರೇಕಲ್ಮಠದ ಕಿರಿಯ ಶ್ರೀಗಳಾದ ಷ|| ಬ್ರ|| ಸಿದ್ಧಪಾದ ಶಿವಾಚಾರ್ಯ ಸ್ವಾಮಿಗಳು ಮತ್ತು ಸುಮಂಗಲಿಯರು ಪೂರ್ಣಕುಂಭದೊಡನೆ ಭಕ್ತಿಪೂರ್ವಕ ಸ್ವಾಗತ ಬಯಸುತ್ತಿರುವುದು



ಸಮ್ಮೇಳನಾಧ್ಯಕ್ಷರನ್ನು ಸಮ್ಮೇಳನ ಸಭಾಂಗಣಕ್ಕೆ ಸುಮಂಗಲಿಯರು ಪೂರ್ಣಕುಂಭ ಸ್ವಾಗತದೊಡನೆ ಬರಮಾಡಿಕೊಳ್ಳುತ್ತಿರುವುದು



ಶ್ರೀಮದ್ ರಂಭಾಪುರೀ ವೀರಸಿಂಹಾಸನಾಧೀಶ್ವರ ಶ್ರೀ ಶ್ರೀ ಶ್ರೀ ಜ. ೧೦೦೮ ವೀರ ಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರ ಸಾನಿಧ್ಯದಲ್ಲಿ ಅಕಾದೆಮಿಯ ೧೮ನೇ ವಾರ್ಷಿಕ ಸಮ್ಮೇಳನದ ಉದ್ಘಾಟನೆ



ಸಮ್ಮೇಳನಾಧ್ಯಕ್ಷ ಶ್ರೀ ಕೆಳದಿ ಗುಂಡಾಜೋಯಿಸ್ ಅವರಿಗೆ
ಹೊನ್ನಾಳಿ ಹಿರೇಕಲ್ಮಠದ ಪೂಜ್ಯ
ಶ್ರೀ ಷ|| ಬ್ರ|| ಒಡೆಯರ್ ಚಂದ್ರಶೇಖರ್ ಶಿವಾಚಾರ್ಯ
ಸ್ವಾಮಿಗಳವರಿಂದ ಸನ್ಮಾನ



ಹೊನ್ನಾಳಿ ಹಿರೇಕಲ್ಮಠದ ಸಮ್ಮೇಳನದ ಆಶ್ರಯದಾತರಾದ
ಹಿರಿಯ ಶ್ರೀಗಳಾದ ಷ|| ಬ್ರ|| ಒಡೆಯರ್ ಚಂದ್ರಶೇಖರ
ಶಿವಾಚಾರ್ಯ ಸ್ವಾಮಿಗಳವರು



ಪೂಜ್ಯ ಸ್ವಾಮೀಜಿಯವರಿಂದ ಡಾ. ಬಾ.ರಾ. ಗೋಪಾಲ್ ಪ್ರಶಸ್ತಿ ವಿಜೇತ
ಡಾ. ಬಿ. ರಾಜಶೇಖರಪ್ಪನವರಿಗೆ ಸನ್ಮಾನ



ಸಮ್ಮೇಳನದ ಗೋಷ್ಠಿಯೊಂದರಲ್ಲಿ ವಿದ್ವಾಂಸರಿಂದ ಪ್ರಬಂಧಮಂಡನೆ



ಸಮ್ಮೇಳನದ ಗೋಷ್ಠಿಯಲ್ಲಿ ವಿದ್ವಾಂಸರ ಸಮುದಾಯ



೧೮ನೇ ವಾರ್ಷಿಕ ಸಮ್ಮೇಳನದ ಸಮಾರೋಪ




ಮೈಸೂರು ಜಿಲ್ಲೆ ವರುಣಾ ಗ್ರಾಮದಲ್ಲಿ ಹಿಸ್ಟರಿ ಅಂಡ್ ಹೆರಿಟೇಜ್, ಟಿ. ನರಸೀಪುರ
ಅವರ ಆಶ್ರಯದಲ್ಲಿ ವಿದ್ಯಾರ್ಥಿಗಳಿಗೆ ಶಾಸನಗಳ ಪ್ರತಿ ತೆಗೆಯುವ ಕಾರ್ಯಾಗಾರ



ವರುಣಾ ಗ್ರಾಮದಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ ಅಂಗವಾಗಿ
ಶ್ರೀ ಡಿ.ಎಂ. ನಾಗರಾಜ್ ಅವರಿಂದ ಉಪನ್ಯಾಸ




ಬಳ್ಳಾರಿ ಜಿಲ್ಲಾ ಘಟಕದಿಂದ ಇತಿಹಾಸ ಪರಂಪರೆ ಉಳಿಸಿ ಕಾರ್ಯಕ್ರಮದ ಉದ್ಘಾಟನೆ
ಚಿತ್ರದಲ್ಲಿ ಸರ್ವಶ್ರೀ ಎಸ್.ಎಸ್. ದುಡಗಿ, ಎ. ರವೀಂದ್ರ, ವೈ. ಹನುಮಂತರೆಡ್ಡಿ, ಟಿ.ಎಚ್.ಎಂ. ಬಸವರಾಜು

# ಅಧ್ಯಕ್ಷರ ನುಡಿ

'ಇತಿಹಾಸ ದರ್ಶನ'ದ ೨೦ನೆಯ ಸಂಪುಟ ಇದಾದರೂ ಈಗ ನಡೆಯುತ್ತಿರುವುದು ೧೯ನೆಯ ಸಮ್ಮೇಳನ. ಇತಿಹಾಸ ಪ್ರಸಿದ್ಧ ಸೇಡಿಂಬ ಪಟ್ಟಣದಲ್ಲಿ ನಡೆಯುತ್ತಿದೆ. ಹೈದರಾಬಾದ್ ಕರ್ನಾಟಕದಲ್ಲಿ ಹಿಂದಿನ ರಾಯಚೂರಿನ ಸಮ್ಮೇಳನದ ನಂತರ ಇದು ಎರಡನೆಯ ಸಮ್ಮೇಳನ.

ಅಕಾದೆಮಿಯು ಹಲವು ಹಿರಿಯರ ನೆರವಿನಿಂದ ಹಾಗೂ ಶ್ರೀ ಆದಿಚುಂಚನಗಿರಿ ಸಂಸ್ಥಾನ ಮಠಾಧೀಶರಾದ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳ ಮಾರ್ಗದರ್ಶನದಿಂದ ಮಾಗಡಿ ಕೋಟೆಯ ವಿಧ್ವಂಸನದ ವಿರುದ್ಧ ೨೦೦೫ರಲ್ಲಿ ಯಶಸ್ವೀ ಚಳವಳಿ ನಡೆಸಿದೆ. ಹಂಪೆಯಲ್ಲಿ ಹೊಸದಾಗಿ ಸಮಾಧಿಗಳನ್ನು ರಚಿಸಿ, ಅಲ್ಲಿನ ರಕ್ಷಿತ ಪರಿಸರದಲ್ಲಿ ಸ್ಥಳವನ್ನು ಅತಿಕ್ರಮಿಸುವ ಸತತ ಯತ್ನದ ಬಗ್ಗೆ ಧ್ವನಿಯೆತ್ತಿದೆ. ಈ ಬಗ್ಗೆ ಹಂಪೆ ರಕ್ಷಣಾ ಪ್ರಾಧಿಕಾರಕ್ಕೂ 'ಯುನೆಸ್ಕೊ' ತಂಡಕ್ಕೂ ದೂರು ನೀಡಿದೆ. ಆದರೆ ಸಾರ್ವಜನಿಕರು ಎಚ್ಚೆತ್ತು ಆಯಾ ಊರಿನ ಸ್ಮಾರಕಗಳ ರಕ್ಷಣೆ, ರಕ್ಷಿತ ಸ್ಮಾರಕಗಳ ನಿವೇಶನಗಳ ಒತ್ತುವರಿ ತಡೆಯುವಲ್ಲಿ ಬಲವಾಗಿ ಪ್ರತಿಭಟನೆ ಮಾಡದಿದ್ದರೆ, ನಮ್ಮ ಪಾರಂಪರಿಕ ಸ್ಮಾರಕಗಳಿಗೆ ಯೋಗ್ಯ ಉತ್ತರಾಧಿಕಾರಿ ಪೀಳಿಗೆ ನಾವಲ್ಲವೆಂಬ ಅಪಕೀರ್ತಿಗೆ ಪಾತ್ರರಾಗಬೇಕಾಗುವುದು; ಈ ಅಭಿಮಾನಶೂನ್ಯತೆ ನಮಗೆ ಗೌರವ ತಾರದು.

ಹಂಪಿ ಕನ್ನಡ ವಿಶ್ವವಿದ್ಯಾಲಯ, ಸ್ವಾಮಿ ರಾಮಾನಂದ ಸ್ಮಾರಕ ಸಮಿತಿ (ಗುಲ್ಬರ್ಗ), ಶ್ರೀ ಧರ್ಮಸ್ಥಳದ ಶ್ರೀ ಮಂಜುನಾಥ ದೇವಾಲಯದ ಶಿಕ್ಷಣ ಸಂಸ್ಥೆ ಮೊದಲಾದವರು 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹದ ಅಂಗವಾಗಿ ಕಾರ್ಯಕ್ರಮಗಳ ಸರಣಿಯನ್ನೇ ನಡೆಸುತ್ತಿದ್ದಾರೆ. ಅಕಾದೆಮಿಯ ಹೊಸಪೇಟೆ ಸ್ಥಳೀಯ ಘಟಕ ಹಾಗೂ ಅನೇಕ ಜಿಲ್ಲಾ ಘಟಕಗಳು (ದಕ್ಷಿಣ ಕನ್ನಡ, ಉಡುಪಿ ಇತ್ಯಾದಿ) ಇದೇ ರೀತಿ ಕಾರ್ಯಕ್ರಮಗಳನ್ನು ನಡೆಸುತ್ತಿದ್ದಾರೆ. ಇಂಥವರ ಸಂಖ್ಯೆ ಬೆಳೆಯಬೇಕು. ಸ್ವಾಮಿ ರಾಮಾನಂದ ತೀರ್ಥ ಸ್ಮಾರಕ ಸಮಿತಿಯು ಪ್ರೊ. ಕುಷ್ಟಗಿಯವರ ನೇತೃತ್ವದಲ್ಲಿ ವರ್ಷವಿಡೀ ವಾರಕ್ಕೊಂದರಂತೆ 'ಪರಂಪರೆ ಉಳಿಸಿ' ಕಾರ್ಯಕ್ರಮ ನಡೆಸಿದೆ. ಇಂಥ ಕಾರ್ಯಕ್ರಮಗಳು ನಮ್ಮ ಇತಿಹಾಸದ ಬಗ್ಗೆ ಅಭಿಮಾನ ಮೂಡಿಸಲು ನೆರವಾಗುವವೆಂಬುದನ್ನು ನಾವು ಗಮನಿಸಬೇಕು. ನಾಡಿನ ಪೂಜ್ಯ ಮಠಾಧೀಶರು ಇಂಥ ಕಾರ್ಯಕ್ರಮ ಹಮ್ಮಿಕೊಂಡರೆ ನಮ್ಮ ಯತ್ನ ಹೆಚ್ಚು ಪರಿಣಾಮಕಾರಿ ಆಗುವುದು.

ಈ ಸಂಪುಟದ ಪ್ರಕಟಣೆಗೆ ಶ್ರೀಮದ್ ರಂಭಾಪುರೀ ಸಂಸ್ಥಾನ ಪೀಠಾಧೀಶರಾದ ಶ್ರೀ ಶ್ರೀ ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು ನೀಡಿದ ಆರ್ಥಿಕ ನೆರವನ್ನು ಆದರಪೂರ್ವಕ ಕೃತಜ್ಞತೆಯಿಂದ ಸ್ಮರಿಸುತ್ತೇವೆ.

ಈ ಸಂಪುಟದ ಸಂಪಾದಕದ್ವಯರೂ ಸಂಪಾದನಾ ಕಾರ್ಯವನ್ನು ಚೊಕ್ಕವಾಗಿ ನಿರ್ವಹಿಸಿದ್ದಕ್ಕೆ ಅಭಿನಂದನೆಗಳು. ಮುದ್ರಕರನ್ನಂತೂ ಮನಃಪೂರ್ವಕ ನೆನೆಯಲೇಬೇಕು.

**ಸೂರ್ಯನಾಥ ಕಾಮತ್**

# ಸಂಪಾದಕೀಯ

ಆಧುನಿಕ ಯುಗದ ಸಾಂಸ್ಕೃತಿಕ ವಿಕಸನದ ಹಾದಿಯು 'ಕಲಂಬರಿಗೆ'ಯಲ್ಲಿ, ಆದಿ ಶಿಲಾಯುಗದಿಂದ ವಿವಿಧ ಆಯಾಮಗಳನ್ನು ಪಡೆದುಕೊಂಡೇ ಬಂದಿದೆ. ಶಾತವಾಹನರ ಸಾಂಸ್ಕೃತಿಕ ಅಭೀಪ್ಸೆಗೆ ಸಂಕೇತವಾದದ್ದು ಸನ್ನತಿ; ಬೌದ್ಧಕೇಂದ್ರವಷ್ಟೇ ಅಲ್ಲ, ಬೌದ್ಧ ವಾಸ್ತುವಿನ ಕಲಾತ್ಮಕ ಕೌಶಲ್ಯಕ್ಕೆ ಕಲ್ಲರಳಿ ಸುಮಧ್ವನಿ ಆಡಿಸಿದ ನೆಲೆ. ಸನಿಹದ ಭೀಮಾನದಿ ದಂಡೆಯ ಮೇಲಿನ ಪ್ರಸಿದ್ಧ ಚಂದ್ರಲಾ ಪರಮೇಶ್ವರಿ ಈ ಪ್ರದೇಶದ ಅಧಿದೇವತೆ. ರಾಷ್ಟ್ರಕೂಟರಿಂದ ಹಿಡಿದು ಕ್ರಿ.ಶ. ೧೯೯೦ರವರೆಗೂ ತನ್ನ ಗುಡಿಯ ಶರೀರಕ್ಕೆ ವಾಸ್ತುವಿನ ಆಯಾಮಗಳನ್ನು ತುಂಬಿಕೊಂಡು ಬಂದಾಕೆ. ಶ್ರೀಚಕ್ರತಳ ವಿನ್ಯಾಸವನ್ನು ಗರ್ಭಗೃಹದಲ್ಲಿ ಹೊಂದಿರುವಂತೆ, ವಿಮಾನ ಗೋಪುರದ ಮೇಲೆಯೂ ಅದೇ ವಿನ್ಯಾಸದ ಕೌಶಲ್ಯಪೂರ್ಣ ಪದ್ಮರೂಪ ವಾಸ್ತುವನ್ನು ಹೊಂದಿ, ಸಹಸ್ರಾರರ ನೆಲೆಯ ಗುಮ್ಮಟ ಕಳಶವನ್ನು ಹೊಂದಿರುವ ಚೆಲುವಿನ ಗುಡಿಯ ಪ್ರಧಾನ ದೇವತೆ. ಪ್ರಾಕಾರದಲ್ಲಿ ಪಾಣಿಪೀಠ ರಹಿತವಾದ ಪ್ರಾಚೀನ ನೀಳ ಶಿವಲಿಂಗಗಳ ಚೆಲ್ಲುವರಿಯೂ ಇದೆ. ಅವು ಆರ್ಷೇಯ ಕಲಾತ್ಮಕ ಪ್ರತೀಕಗಳಂತಿವೆ. ನವರಾತ್ರಿಯ ದೀಪೋತ್ಸವ, ದವನ ಹುಣ್ಣಿಮೆಯ ಸಮಯದಲ್ಲಿ ರಥೋತ್ಸವ, ಶ್ರಾವಣದಲ್ಲಿ ಜಾತ್ರೆ ಇತ್ಯಾದಿಗಳು ಈಕೆಗೆ ಜನಪದರಿಂದ ಜಾನಪದ ಮೀಸಲು ಹಾಗು ಶಿಷ್ಟ ಆಚಾರಗಳ ಸಮನ್ವಯ ದೀಕ್ಷೆ. ಈ ನೆರೆಯ ಶಿರವಾಳದಲ್ಲಿ ರೇವಣಸಿದ್ಧರ ಪ್ರಭಾವ ವಲಯ. ಕೃಷ್ಣೆಯ ತೀರದಲ್ಲಿ ಸೂರ್ಯನನ್ನು ಆಕರ್ಷಿಸಿದ ಛಾಯಾ ಭಗವತಿ ಕ್ಷೇತ್ರವಿದೆ. ಸೂರ್ಯ ತನ್ನ ಮೊದಲ ಭಾರ್ಯೆ ಸಂಮಜ್ಞಳನ್ನು ಮತ್ತೆ ನೆನಪಿಸಿಕೊಂಡ ಸಂವೇದನೆಯ ಕ್ಷೇತ್ರವೂ ಈ ಜಿಲ್ಲೆಯಲ್ಲಿದೆ. ಹೀಗಾಗಿ ಶಕ್ತಿ ದೇವತೆಯ ಪ್ರಚ್ಛನ್ನ ಪರಿಸರ ಈ ಗಂಡುನೆಲದ ಪುರುಷರಲ್ಲಿ ಆವಾಹನೆಗೊಂಡಿದೆ ಎನ್ನಬೇಕು. ಹಲಕರಟಿಯ ಜಾನಪದ ಆಚರಣಾ ವೈಭವದ ವೀರಭದ್ರ, ಭದ್ರಕಾಳಿ, ದೇವರ ತೇಗೂರಿನ ಪ್ರಾಚೀನ ಗಣೇಶ ಹೀಗೆಯೇ ಗಮನಾರ್ಹವಾಗಿವೆ.

ಶೈಕ್ಷಣಿಕವಾಗಿ 'ಕರ್ನಾಟಕ ಬಾಲಶಿಕ್ಷೆ'ಯ ನೆಲೆ ಈ ಜಿಲ್ಲೆಯಲ್ಲಿದ್ದಂತೆ ಕ್ರಿ.ಶ. ೧೦೫೮ರ ಕಲ್ಯಾಣಿ ಚಾಲುಕ್ಯ ತ್ರೈಲೋಕ್ಯಮಲ್ಲ ೧ನೇ ಸೋಮೇಶ್ವರನ ಕಾಲದ ನಾಗಾವಿ : ಪ್ರಖ್ಯಾತ ಗ್ರಂಥಭಂಡಾರ ಹೊಂದಿದ್ದುದರ ಕುರುಹಾಗಿ ನಿರ್ವಹಣೆಕಾರ ಸರಸ್ವತಿ ಭಣ್ಡಾರಿಗೆ ಸಂಭಾವನೆಗಾಗಿ ೩೦ ಮತ್ತರುಗಳನ್ನು ಕೊಟ್ಟಿರುವುದಿದೆ. ಕರ್ನಾಟಕದ ಪ್ರಾಚೀನ ಗ್ರಂಥಾಲಯದ ಅಸ್ತಿತ್ವಕ್ಕೆ ಮೊದಲ ಸಾಕ್ಷಿಯಾದ ನಾಗಾವಿ ತ್ರೈಪುರುಷದೇವರ ಶಾಲೆಯಿದ್ದ ಮಹಾಘಟಿಕಾಸ್ಥಾನವಾಗಿತ್ತು. ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಕಲಚೂರಿ, ದೇವಗಿರಿ ಯಾದವ, ಹೊಯ್ಸಳ, ಕಾಕತೀಯ, ಬಹಮನಿ, ಷಾಹಿ ಸುಲ್ತಾನರು ಹಾಗು ನಿಜಾಂ ಆಡಳಿತದ ವೈಖರಿಗಳನ್ನು ಕಂಡಿದೆ ಈ ಜಿಲ್ಲೆ. ಈ ಜಿಲ್ಲೆಯ ಸುರಪುರದ ಗಡ್ಡಿಪಿಡ್ಡೆ ನಾಯಕ ಔರಂಗಜೇಬನನ್ನು ಎದುರಿಸಿದಾತ. ಹಾಗೆಯೇ ಆಂಗ್ಲರೆದುರು ೧೮೫೭ರ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡವ ರಾಜಾ ವೆಂಕಟಪ್ಪನಾಯಕ. ಇಂಥ ವೀರ ಸಾಂಸ್ಕೃತಿಕ ಭೂಮಿಯಲ್ಲಿರುವ ಕಮಲಾ ನದಿ ದಂಡೆಯ ಸೇಡಿಂಬಾಪುರ (ಸೇಡಂ) ತಾಲ್ಲೂಕಿನ ಮಳಖೇಡ, ರಾಷ್ಟ್ರಕೂಟರ ಪ್ರಾಚೀನ ರಾಜಧಾನಿ. ಅಗ್ರಹಾರ ಸೇಡಿಂಬಾಪುರದಲ್ಲಿ, ಶಾಂತಿನಾಥ-ಬ್ರಹ್ಮಜಿನಾಲಯ, ಲೋಕ ಜಿನಾಲಯ ಮಾಣಿಕೇಶ್ವರ ಗುಡಿ ಇತ್ಯಾದಿಗಳು ೧೧-೧೨ನೇ ಶತಮಾನದಿಂದಲೇ ಬಾಳಿ ಬಂದವು. ಮಾನಸ್ತಂಭವನ್ನು 'ಬಾಣಂತಿಕಲ್ಲು' ಎಂದು ಕರೆಯುವ ವಾಂಛೆ ಇಲ್ಲಿನ ಜನಪದದ್ದು. ಸೇಡಂದುರ್ಗದ ಕೋಟೆ ಇಂದು ಉಳಿದಿಲ್ಲವಾದರೂ ಜನತೆಯ ಸ್ಮರಣೆಯಲ್ಲಿ ಪರಂಪರೆಯಲ್ಲಿ ಅಳಿದು ಹೋಗಿಲ್ಲ. ಹೀಗೆ ವಿಶಿಷ್ಟ ಸಾಂಸ್ಕೃತಿಕ ಮಾದರಿಗಳನ್ನು ಹೊಂದಿರುವ ಗುಲ್ಬರ್ಗ ಜಿಲ್ಲೆಯ ಸೇಡಂನಲ್ಲಿ ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಂಸ್ಥೆಯ ಆಶ್ರಯದಲ್ಲಿ ಸೆಪ್ಟೆಂಬರ್ ೧೧ ರಿಂದ ೧೩ರವರೆಗೆ ಅಕಾದೆಮಿಯ ೧೯ನೆಯ ವಾರ್ಷಿಕ ಸಮ್ಮೇಳನದ ವ್ಯವಸ್ಥೆ ಆಗಿದೆ.

ಹಿಂದಿನ ವರ್ಷ ಹೊನ್ನಾಳಿಯಲ್ಲಿ ನಡೆದ ಅಕಾದೆಮಿಯ ೧೮ನೆಯ ವಾರ್ಷಿಕ ಸಮ್ಮೇಳನದಲ್ಲಿ ಮಂಡಿತ ಪ್ರಬಂಧಗಳ ಪೈಕಿ ೮೩ ಪ್ರಬಂಧಗಳು ಈ ಬಾರಿ **ಇತಿಹಾಸ ದರ್ಶನ**ದ ೨೦ನೇ ಸಂಪುಟದಲ್ಲಿ ಪ್ರಕಟವಾಗಿವೆ. ಈ

ಪ್ರಬಂಧಗಳಲ್ಲಿ ಹೊಸ ಶೋಧಗಳಲ್ಲಿ ವಿಪುಲ ಆಸಕ್ತಿ ತೋರಿರುವಂತೆಯೇ, ಪುನರ್ ಪರಿಶೀಲನಾ ಪ್ರಯತ್ನಗಳೂ ಸೂಚನೆಗೊಂಡಿವೆ. ಮಾಹಿತಿ ನೀಡುವಲ್ಲಿ ಅಧ್ಯಯನದ ಆಳ ತೋರಿರುವ ಪ್ರಬಂಧಗಳೂ ಇವೆ: ರೂಢಿಯ ನಂಬುಗೆಗಳನ್ನು ಹೊಸ ಆಯಾಮದಿಂದ ನೋಡಿರುವ ಪ್ರಯತ್ನಗಳೂ ಇವುಗಳಲ್ಲಿವೆ. ಕ್ಷೇತ್ರ ಕಾರ್ಯಗಳ ತನ್ಮಯತೆ, ನಿಷ್ಣಾತತೆ ಕೆಲವೆಡೆ ಕಾಣಬರುತ್ತವೆ. ಸೂಕ್ಷ್ಮಾಧ್ಯಯನಗಳು ಇಲ್ಲಿ ಕಂಡುಬಂದರೂ, ಎಲ್ಲವೂ ಪರಿಪೂರ್ಣವೆನ್ನುವಂತಿಲ್ಲ. ಇತಿಮಿತಿ ಗುರುತಿಸಿಕೊಳ್ಳುವ ಸಂವೇದನೆಯು, ಪ್ರಜ್ಞೆಯೂ ಇಲ್ಲಿ ಕೆಲವೆಡೆ ಕಾಣಬರುವುದು ಗಮನಾರ್ಹ. ಆದರೆ ಮಂಡಿತ ಪ್ರಬಂಧಗಳು ನೆನಪಿನೋಲೆ ಬರೆದ ಮೇಲೂ ಸಕಾಲಕ್ಕೆ ತಲುಪದಿದ್ದರೆ ಪರಿವಿಡಿಯ ಅನುಕ್ರಮಣಿಕೆಯಲ್ಲಿ ವ್ಯತ್ಯಾಸವಾಗುತ್ತದೆ. ಹಾಗು ವಿಷಯ ವಲಯದಲ್ಲಿ ಇರಬೇಕಾದ ಸ್ಥಾನ ಎಲ್ಲಿಯೋ ಚಲಿಸಿ ಓದುಗರ ಸಂವೇದನೆಯ ಮೇಲೂ ಪರಿಣಾಮ ಬೀಳಬಹುದು. ಇದನ್ನು ಮಾನ್ಯ ಪ್ರಬಂಧಕಾರರು ಗಮನಿಸಿ ಸಹಕರಿಸಬೇಕೆಂದು ನಮ್ಮ ಆಶಯ. ದಯವಿಟ್ಟು 'ಪ್ರಬಂಧಕಾರರ ಗಮನಕ್ಕೆ' ಸೂಚನೆಯನ್ನು ಸಂಪುಟದ ಆರಂಭದ ೨ನೇ ಪುಟದಲ್ಲಿ ಗಮನಿಸಿ.

'ಇತಿಹಾಸ ದರ್ಶನ'ದ ಮುದ್ರಣಕ್ಕೆ ೨೦೦೫ನೇ ಸಾಲಿನಿಂದ ೨೫ ಸಾವಿರ ರೂ.ಗಳ ನಿಧಿ ನೆರವನ್ನು ಪ್ರಪ್ರಥಮ ಕೊಡುಗೆಯಾಗಿ ನಿರಂತರವಾಗಿ ಆಶೀರ್ವದಿಸಿರುವ ಶ್ರೀಮದ್ರಂಭಾಪುರಿ ಪೀಠಾಧೀಶರಾದ ಜ|| ಶ್ರೀ ಶ್ರೀ ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸನ್ನಿಧಿಯವರಲ್ಲಿ ನಮ್ಮ ಭಕ್ತಿ ಗೌರವಪೂರ್ವಕ ಪ್ರಣಾಮಗಳಿವೆ.

ಈ ಬಾರಿ ಸಂಪಾದನ ಹಾಗು ಸಂಶೋಧನ ಕ್ಷೇತ್ರದ ಖ್ಯಾತ ಪ್ರಾಮಾಣಿಕ ಸಜ್ಜನ ವಿದ್ವಾಂಸರಾದ, ಶ್ರವಣಬೆಳಗೊಳದ ಕುರಿತ ಐತಿಹಾಸಿಕ ವಿದ್ವತ್ ಕೃತಿಯನ್ನು ಪ್ರಕಟಿಸಿರುವ ಸಂಶೋಧಕರೂ ಆದ ಹುಬ್ಬಳ್ಳಿಯ ಡಾ|| ಬಿ.ವ್ಹಿ. ಶಿರೂರ ಅವರು ಅಕಾದೆಮಿಯ ೧೯ನೆಯ ವಾರ್ಷಿಕ ಸಮ್ಮೇಳನಾಧ್ಯಕ್ಷರಾಗಿ ಆಯ್ಕೆಗೊಂಡಿರುವುದಕ್ಕೆ ಮತ್ತು ಶಾಸನ ಕ್ಷೇತ್ರದಲ್ಲಿ, ಶಾಸ್ತ್ರ ಕ್ಷೇತ್ರದಲ್ಲಿ, ಸಾಹಿತ್ಯ ಕ್ಷೇತ್ರದಲ್ಲಿ ಖ್ಯಾತಿಲಾಭಕ್ಕೆ ಆಸೆ ಪಡದೆ ಮೌನವಾಗಿಯೇ ಅಮೂಲ್ಯ ಸೇವೆ ಸಲ್ಲಿಸಿ 'ಆಂಧ್ರಪ್ರದೇಶದ ಕನ್ನಡ ಶಾಸನಗಳು' ಶಾಸನ ಸಂಪುಟವನ್ನು ವಿದ್ವತ್‌ಪೂರ್ಣವಾಗಿ ಡಾ. ರಾ. ಶೇಷಶಾಸ್ತ್ರಿಯವರೊಡನೆ ಸಂಪಾದಿಸಿರುವ ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನ ಮೂಲಕ ಆಂಧ್ರಪ್ರದೇಶದ ಕನ್ನಡ ಶಾಸನಗಳು, ಎಂಬ ತಮ್ಮ ವಿದ್ವತ್ ಕೃತಿಯನ್ನೂ ಪ್ರಕಟಪಡಿಸಿರುವ ಡಾ. ಕೆ.ಆರ್. ಗಣೇಶ್ ಅವರು ಡಾ. ಬಾ.ರಾ. ಗೋಪಾಲ್ ದತ್ತಿಪ್ರಶಸ್ತಿಗೆ ಆಯ್ಕೆಯಾಗಿರುವುದಕ್ಕೆ ಅಭಿನಂದನೆಗಳು.

ನಮ್ಮ ಕಾರ್ಯಗಳಲ್ಲಿ ಸಹಕಾರ ನೀಡುತ್ತಿರುವ ಅಕಾದೆಮಿಯ ಅಧ್ಯಕ್ಷರಾದಿಯಾಗಿ, ಕಾರ್ಯಕಾರಿ ಸಮಿತಿ ಹಾಗು ಸರ್ವ ಸದಸ್ಯರಿಗೂ ನಾವು ಆಭಾರಿಯಾಗಿದ್ದೇವೆ. ಹಾಗೆಯೇ ಹೊಸದಾಗಿ ಪಿಎಚ್.ಡಿ. ಪಡೆದು ಅಕಾದೆಮಿಯ ಸನ್ಮಾನಕ್ಕೆ ಪಾತ್ರರವಾಗಿರುವ ಅಕಾದೆಮಿಯ ಸದಸ್ಯರಿಗೆ ಅಭಿನಂದನೆಗಳು. ಲೇಖಕ-ಲೇಖನ ಸೂಚಿ ಸಿದ್ಧಪಡಿಸುವಲ್ಲಿ ನಮಗೆ ನೆರವಾದ ಕು|| ಎಸ್.ಕೆ. ವೀಣಾ ಕೃಷ್ಣಮೂರ್ತಿ ಅವರಿಗೂ ನಮ್ಮ ಅಭಿಮಾನಗಳಿವೆ. ಈ ಸಂಪುಟವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ಲಕ್ಷ್ಮಿ ಮುದ್ರಣಾಲಯದ ಮಾಲೀಕರಾದ ಶ್ರೀ ಅಶೋಕ್‌ಕುಮಾರ್, ಡಿಟಿಪಿ ಸಿಬ್ಬಂದಿ ವರ್ಗದ ಶ್ರೀಮತಿ ಸತ್ಯಕುಮಾರಿ, ಎಸ್. ಮಂಜನಾಥ್, ಶ್ರೀ ಬಾವು ಪತ್ತಾರ್, ಪಿ.ಎಸ್. ಸುಬ್ರಮಣಿ, ಕು|| ದೀಪಾ ಹಾಗೂ ಇತರ ಸಿಬ್ಬಂದಿ ವರ್ಗದವರಿಗೂ ನಮ್ಮ ಕೃತಜ್ಞತೆಗಳು.

ಬೆಂಗಳೂರು : ೫.೯.೨೦೦೫
ಪಾರ್ಥಿವ ನಾಮ ಸಂವತ್ಸರ, ಭಾದ್ರಪದ ಶು ೨.
ಉತ್ತರಾ ನಕ್ಷತ್ರ, ಸೋಮವಾರ

**ಎಂ.ಜಿ. ನಾಗರಾಜ್**
**ಡಾ. ಪಿ.ವಿ. ಕೃಷ್ಣಮೂರ್ತಿ**

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.,)

ಬೆಂಗಳೂರು

**ಕಾರ್ಯಕಾರಿ ಸಮಿತಿ**

(ದಿನಾಂಕ ೨೦೦೪ರಲ್ಲಿ ಆಯ್ಕೆಯಾದವರು)

**ಅಧ್ಯಕ್ಷರು**

ಡಾ|| ಸೂರ್ಯನಾಥ ಕಾಮತ್

**ಉಪಾಧ್ಯಕ್ಷರು**

ಶ್ರೀ ಎಂ.ಜಿ. ನಾಗರಾಜ್

ಪ್ರೊ|| ವಸಂತ ಕುಷ್ಟಗಿ

**ಪ್ರಧಾನ ಕಾರ್ಯದರ್ಶಿ**

ಡಾ|| ಎಚ್.ಎಸ್. ಗೋಪಾಲರಾವ್

**ಕಾರ್ಯದರ್ಶಿಗಳು**

ಡಾ|| ಕೆ. ವಸಂತಲಕ್ಷ್ಮಿ

ಡಾ|| ಚೆನ್ನಕ್ಕ ಪಾವಟೆ

**ಕೋಶಾಧ್ಯಕ್ಷರು**

ಶ್ರೀ ಎಂ.ಬಿ. ಪಾಟೀಲ್, ಬೆಂಗಳೂರು

**ಸದಸ್ಯರು**

*ಡಾ|| ಅ. ಸುಂದರ*

*ಪ್ರೊ|| ದೇವರಕೊಂಡಾರೆಡ್ಡಿ, ಹಂಪಿ*

*ಡಾ|| ರಾಜಶೇಖರಪ್ಪ, ಚಿತ್ರದುರ್ಗ*

*ಡಾ|| ಎಚ್. ಚಂದ್ರಶೇಖರ, ಬೆಂಗಳೂರು*

*ಡಾ|| ಶ್ರೀಮತಿ ಸ್ಮಿತಾ ಸುರೇಬಾನಕರ, ಬೆಳಗಾವಿ*

*ಡಾ|| ಕೆಳದಿ ವೆಂಕಟೇಶ್ ಜೋಯಿಸ್, ಕೆಳದಿ*

*ಡಾ|| ಡಿ.ಎನ್. ಯೋಗೀಶ್ವರಪ್ಪ, ತುಮಕೂರು*

*ಡಾ|| ಪಿ.ಎನ್. ನರಸಿಂಹಮೂರ್ತಿ, ಉಡುಪಿ*

*ಡಾ|| ಗಣಪತಿಗೌಡ, ಮಡಿಕೇರಿ*

*ಡಾ|| ಎಂ.ಕೆ. ದುರುಗಪ್ಪ, ಕನಕಗಿರಿ*

*ಪ್ರೊ|| ಎಂ. ಶಿವಶಂಕರಯ್ಯ, ಹೊನ್ನಾಳಿ*

*ಶ್ರೀ ಕುಂ.ಬಾ. ಸದಾಶಿವಪ್ಪ, ಹರಪನಹಳ್ಳಿ*

*ಶ್ರೀ ಅಮರೇಶ್ ಯತಗಲ್, ಲಿಂಗಸೂಗುರು*

# ಪರಿವಿಡಿ


☆ ಶುಭಾಶೀರ್ವಾದ ಸಂದೇಶ

☆ ಸಮ್ಮೇಳನಾಧ್ಯಕ್ಷರು ಹಾಗೂ ಹಿಂದಿನ ಸಮ್ಮೇಳನದ ಛಾಯಾಚಿತ್ರಗಳು

☆ ಅಕಾದೆಮಿಯ ಅಧ್ಯಕ್ಷರ ನುಡಿ

☆ ಸಂಪಾದಕೀಯ

☆ ಕಾರ್ಯಕಾರಿ ಸಮಿತಿ

☆ ವಾರ್ಷಿಕ ಅಧಿವೇಶನಗಳ ಸರ್ವಾಧ್ಯಕ್ಷರು ಮತ್ತು ಡಾ. ಬಾ.ರಾ. ಗೋಪಾಲ್ ಪ್ರಶಸ್ತಿ ವಿಜೇತರು

☆ ಸಮ್ಮೇಳನಾಧ್ಯಕ್ಷರ ಭಾಷಣ

☆ ಪ್ರಶಸ್ತಿ ದತ್ತಿ ಉಪನ್ಯಾಸ

☆ ಪರಿವಿಡಿ

| | | | |
|---|---|---|---|
| ೧. | ಅರಸೀಕೆರೆ ತಾಲ್ಲೋಕು ಚಲುವನ ಹಳ್ಳಿಯ ಬೃಹತ್ ಶಿಲಾಯುಗದ ನೆಲೆ | ಡಾ|| ಹನುಮ ನಾಯಕ | ೧ |
| ೨. | ಹಳೇ ದೊಡ್ಡೇರಿಯ ಪ್ರಾಕ್ಚಾರಿತ್ರಿಕ ಕುರುಹುಗಳು | ಎಸ್. ಜಿ. ರಾಮದಾಸರೆಡ್ಡಿ | ೫ |
| ೩. | ಮಳ್ಳಪ್ಪನಗುಡ್ಡದ ಪರಿಸರ-ನವಶಿಲಾಯುಗದಿಂದ ಈವರೆಗೆ | ಮುತ್ತುರಾಜು | ೯ |
| ೪. | ಕೆಂಚನಗುಡ್ಡ ಪರಿಸರ - ಒಂದು ಪರಿಶೀಲನೆ | ಡಾ. ಎಂ. ಕೊಟ್ರೇಶ್ | ೧೬ |
| ೫. | ಕರ್ನಾಟಕದ ಬೌದ್ಧಧರ್ಮದ ಮೇಲೆ ಹೊಸಬೆಳಕು : ರಾಜಘಟ್ಟ ಉತ್ಖನನ - ಭಾಗ ೨ | ಡಾ ಎಂ.ಎಸ್. ಕೃಷ್ಣಮೂರ್ತಿ<br>ಡಾ ಎಂ.ವಿ. ಕೃಷ್ಣಪ್ಪ | ೨೦ |
| ೬. | ಮತ್ತಿಗೂಡು ಕುದುರೆಬೀರಪ್ಪ ವೃತ್ತದ ಪ್ರಾಚ್ಯಾವಶೇಷಗಳು | ಜಯದೇವಪ್ಪ ಜೈನಕೇರಿ | ೩೨ |
| ೭. | ಮದಿಹಳ್ಳಿ ಮತ್ತು ಬೆಣವಾಡದ ಪ್ರಾಚ್ಯಾವಶೇಷಗಳು | ಡಾ. ಶ್ರೀಮತಿ ಸ್ಮಿತಾ ಸುರೆಬಾನಕರ | ೩೬ |
| ೮. | ಮುತ್ತಗಿಯ ಪ್ರಾಚ್ಯಾವಶೇಷಗಳು | ಪ್ರೊ. ಕೆ. ಸಿ. ಮಲ್ಲಿಗವಾಡ | ೪೦ |
| ೯. | ವಿಪ್ರ ಗ್ರಾಮದ ಅವಶೇಷಗಳು | ಡಾ. ಎಚ್. ಜಯಮ್ಮ ಕರಿಯಣ್ಣ | ೪೫ |
| ೧೦. | ಕೋಣನತಲೆ ಗ್ರಾಮದ ಪ್ರಾಚ್ಯಾವಶೇಷಗಳು | ರಾಕೇಶ್ ಬಿ.ಸಿ. | ೪೮ |
| ೧೧. | ಸಂಹವನ ಮಾಧ್ಯಮವಾಗಿ ಪ್ರಾಚ್ಯವಸ್ತು ಸಂಗ್ರಹಾಲಯಗಳು : ಒಂದು ಸಾಂಸ್ಕೃತಿಕ ಸಮೀಕ್ಷೆ | ಡಾ. ಎಸ್. ಕೆ. ಮೇಲಕಾರ | ೫೨ |
| ೧೨. | ಶಿಲ್ಪಗಳಲ್ಲಿ ಜೈನ ಯಕ್ಷಿಯರು | ಡಾ. ಚನ್ನಕ್ಕ ಪಾವಟೆ | ೬೩ |
| ೧೩. | ಹುಬ್ಬಳ್ಳಿ ಮತ್ತು ಕುಂದಗೋಳ ತಾಲ್ಲೂಕುಗಳ ಅಪರೂಪದ ಗಜಲಕ್ಷ್ಮೀ ಶಿಲ್ಪಗಳು | ಜಯಮ್ಮ .ಬಿ | ೬೮ |
| ೧೪. | ಹೊನ್ನಾಳಿ ತಾಲ್ಲೂಕಿನ ಕೆಲವು ವಿಶಿಷ್ಟ ಶಿಲ್ಪಗಳು | ಡಾ. ಬಾಲಸುಬ್ರಮಣ್ಯ | ೭೧ |
| ೧೫. | ಉತ್ತರಕನ್ನಡ ಜಿಲ್ಲೆಯಲ್ಲಿನ ಬೌದ್ಧ ಧರ್ಮ | ಡಾ. ಗಣಪತಿಗೌಡ. ಎಸ್. | ೭೫ |
| ೧೬. | ತೊಣ್ಣೂರಿನ ಕಣ್ಮರೆಯಾದ ನಖರೇಶ್ವರ ದೇವಾಲಯ | ಡಾ. ಸಿ. ಮಹದೇವ | ೭೯ |
| ೧೭. | ಕುರುವಗಡ್ಡೆ ರಾಮೇಶ್ವರ ದೇವಸ್ಥಾನದ ಸಂಕ್ಷಿಪ್ತ ಇತಿಹಾಸ | ಕೆ. ವಿನೋದಮ್ಮ | ೮೨ |
| ೧೮. | ಮೂರು ಪ್ರಾಚೀನ ದೇವಾಲಯಗಳ ಶೋಧನೆ | ಸಾಸಲು ಜೆ. ವಿಶ್ವನಾಥ್ | ೮೬ |
| ೧೯. | ಹಾನಗಲ್ಲ ತಾಲ್ಲೂಕು ಕಲ್ಕೇರಿಯ ಸ್ಮಾರಕ ಶಿಲ್ಪಗಳು | ಡಾ. ರು.ಮ. ಷಡಕ್ಷರಯ್ಯ | ೮೯ |
| ೨೦. | ಕೆಳದಿ ಪಾರ್ವತೀ ದೇವಾಲಯದ ಕಾಷ್ಠ ಶಿಲ್ಪಗಳು- ಮುಂದುವರಿದ ಅಧ್ಯಯನ | ಡಾ. ಜಿ.ವಿ. ಕಲ್ಲಾಪುರ | ೯೭ |
| ೨೧. | ಹಿರೇಗುತ್ತಿಯ ಹೊಸ ಶಾಸನ-ಶಿಲ್ಪಗಳು | ಜಯಶ್ರೀ ಬಿ. ದೇಶಮಾನ್ಯೆ | ೧೦೧ |

| | | |
|---|---|---|
| ೨೨. ದಾನಚಿಂತಾಮಣಿ ಅತ್ತಿಮಬ್ಬೆಯ ಪ್ರಾಚೀನ ಶಾಸನ (ಕ್ರಿ.ಶ. ೯೮೭) | ಡಾ. ಡಿ. ವಿ. ಪರಮಶಿವಮೂರ್ತಿ | ೧೦೩ |
| ೨೩. ಅಪ್ರಕಟಿತ ಬಳಗಾನೂರು ಶಾಸನ | ಚನ್ನಬಸಪ್ಪ ಬಿ. | ೧೦೬ |
| ೨೪. ಕೊಡಗು ಜಿಲ್ಲೆ, ಬೆಂಗಳೂರು ಜಿಲ್ಲೆ, ತುಮಕೂರು ಜಿಲ್ಲೆಯ ಕೆಲವು ಅಪ್ರಕಟಿತ ಶಾಸನಗಳು | ಎಂ. ಜಿ. ನಾಗರಾಜ್ | ೧೦೯ |
| ೨೫. ಚೆಂಡೂರ ಗ್ರಾಮದ ನಿರೂಪ : ಅಪ್ರಕಟಿತ ತಾಮ್ರಶಾಸನ | ಡಾ\|\| ಕೆ. ರವೀಂದ್ರನಾಥ | ೧೩೦ |
| ೨೬. ಸೇನಬೋಯತ್ತಿಯ ಕಂಚಿನ ಶಾಸನ | ಡಾ. ವೈ. ಉಮಾನಾಥ ಶೆಣೈ | ೧೩೩ |
| ೨೭. ಕಪ್ಪೆ ಅರಭಟ್ಟನನ್ನು ಗುರುತಿಸುವ ಒಂದು ಪ್ರಯತ್ನ | ಡಾ. ಎಚ್.ಎಸ್. ಗೋಪಾಲ ರಾವ್ | ೧೩೬ |
| ೨೮. ಕನ್ಯಾನದ ಶಾಸನ - ಒಂದು ಅಧ್ಯಯನ | ಡಾ. ಬಿ. ಜಗದೀಶ ಶೆಟ್ಟಿ | ೧೪೪ |
| ೨೯. ಬೆಂಗಳೂರುಪೂರ್ವ ತಾಲೂಕು ಶಾಸನಗಳ ಹಿನ್ನೆಲೆಯಲ್ಲಿ ಒಂದು ಅಧ್ಯಯನ | ಡಾ. ಪಿ.ವಿ. ಕೃಷ್ಣಮೂರ್ತಿ | ೧೪೮ |
| ೩೦. ಭಾರತೀಯ ಇತಿಹಾಸ ಸಂಶೋಧನಾ ಮಂಡಳಿಯಲ್ಲಿರುವ ಸಂತೇಬೆನ್ನೂರು ನಾಯಕರ ಒಂದು ತಾಮ್ರಶಾಸನ | ಸಂತೇಬೆನ್ನೂರು ಸುಮತೀಂದ್ರ ನಾಡಿಗ್ | ೧೫೫ |
| ೩೧. ಹೊನ್ನಾಳಿ ತಾಲ್ಲೂಕು ಕುಂದೂರಿನ ಅಪ್ರಕಟಿತ ತಾಮ್ರಶಾಸನ | ಡಾ\|\| ಎಸ್.ಜಿ. ಸಾಮಕ್ | ೧೫೯ |
| ೩೨. ಮೈಸೂರು ರಾಜಒಡೆಯರ ಕಾಲದ ಮೊದಲ ಶಾಸನ | ಜಿ. ಕೆ. ದೇವರಾಜಸ್ವಾಮಿ | ೧೬೩ |
| ೩೩. ಮಳವಳ್ಳಿಯ ಸ್ತಂಭಶಾಸನ - ಒಂದು ವಿಶ್ಲೇಷಣೆ | ಬಿ.ಎಸ್. ರಾಮಭಟ್ಟ | ೧೭೦ |
| ೩೪. ಹಲ್ಮಿಡಿ ಶಾಸನ ಒಂದು ಅಧ್ಯಯನ | ಪ್ರೊ. ಕ.ವೆಂ. ರಾಜಗೋಪಾಲ | ೧೭೪ |
| ೩೫. ಹೊನ್ನಾಳಿ ಹಿರೇಕಲ್ಮಠದ ಶಾಸನೋಲ್ಲೇಖ - ಒಂದು ಟಿಪ್ಪಣಿ | ಡಾ\|\| ಜಗದೀಶ | ೧೮೧ |
| ೩೬. ಕೃಷ್ಣದೇವರಾಯನ ಕಾಲದ ಕನ್ನಡ ಶಾಸನಗಳ ಭಾಷೆ | ಎಸ್. ಎಸ್. ಭಗವತಿ<br>ಎಚ್. ಎಸ್. ಮೇಲಿನಮನಿ | ೧೮೩ |
| ೩೭. ಹರಿಹರದ ಶಾಸನಗಳಲ್ಲಿ ಗಿಡ, ಮರ, ಭೂಮಿ, ನೀರು, ಸುಂಕ ಇತ್ಯಾದಿ - ಒಂದು ವೈಜ್ಞಾನಿಕ ನೋಟ | ಹರಿಹರ ಶ್ರೀನಿವಾಸರಾವ್ | ೧೮೭ |
| ೩೮. ಶಾಸನಗಳ ಹಿನ್ನೆಲೆಯಲ್ಲಿ ಮುಗಿಲಕುಲದ ಗರುಡರು | ಆರ್. ವೆಂಕಟೇಶ್ ಮೂರ್ತಿ | ೧೯೩ |
| ೩೯. ಚಿಕ್ಕಮಗಳೂರು ಜಿಲ್ಲೆಯ ಶಾಸನ ಕವಿಗಳು, ಲಿಪಿಕಾರರು, ರೂವಾರಿಗಳು | ಡಾ\|\| ಎಸ್.ಎಂ. ನಾಗಭೂಷಣ | ೧೯೭ |
| ೪೦. ಶೃಂಗೇರಿ ಮಠದ ದಾಖಲೆಗಳಲ್ಲಿ ಕೆಳದಿ ನಾಯಕರ ಕಾಲದ ಮಠ ಮತ್ತು ದೇವಾಲಯಗಳ ಉಲ್ಲೇಖ | ಡಾ\|\| ಎ.ಕೆ. ಶಾಸ್ತ್ರಿ | ೨೦೩ |
| ೪೧. ಶತಮಾನ ಪತ್ರಗಳಲ್ಲಿ ಸಂಕೇತಿ ಸಮಾಜ - ಒಂದು ಅವಲೋಕನ | ಡಾ. ಬಿ.ವಿ. ಸುಧಾಮಣಿ | ೨೦೭ |
| ೪೨. ಗಾಜನೂರು ಅಗ್ರಹಾರ; ಪಲ್ಲಕ್ಕಿ ಕೃಷ್ಣಾಚಾರ್; ಕೆಳದಿ ಬಸಪ್ಪನಾಯಕನ ಅಪ್ರಕಟಿತ ಶಾಸನ ದಾಖಲೆ | ಕೆಳದಿ ಗುಂಡಾಜೋಯಿಸ್ | ೨೧೧ |
| ೪೩. ಕೆಳದಿ ಕಾಲದ ಹಲಸನಾಡು ಕರಣಿಕ ಮನೆತನದ ಅಪೂರ್ವ ದಾಖಲೆ | ಡಾ. ಕೆಳದಿ ವೆಂಕಟೇಶ ಜೋಯಿಸ್ | ೨೨೪ |
| ೪೪. ಕೆಳದಿ ಅರಸರ ಮೂರು ಅಪ್ರಕಟಿತ ದಾಖಲೆಗಳು | ವ. ರಮೇಶ ಕಾರಂತ | ೨೩೭ |
| ೪೫. ಮೆಕೆಂಜಿ ಸಂಗ್ರಹಿತ ದೇವರಾಯನ ಅಪ್ರಕಟಿತ ತಮಿಳು ಕೈಫಿಯತ್ತು | ಡಾ. ತಮಿಳ್ ಸೆಲ್ವಿ | ೨೪೩ |
| ೪೬. ಸುಂಕ ವಿನಾಯತಿ ಮಂಗಳೂರು ವ್ಯಾಪಾರಿಗಳ ಮತ್ತು ಉಡುಪಿ ಕೃಷ್ಣ ಮಠದ ಅರ್ಜಿಗಳು (೧೮೧೩ ಮತ್ತು ೧೮೧೫) | ಡಾ\| ಮಾಲತಿ ಕೆ. ಮೂರ್ತಿ | ೨೫೧ |
| ೪೭. ನನ್ನಿನೊಳಂಬನ ಅಪರೂಪದ ಚಿನ್ನದ ಗದ್ಯಾಣ | ಮಂದರ್ಕೆ ನಿತ್ಯಾನಂದಪೈ | ೨೫೭ |
| ೪೮. ನೀತಿವಾಕ್ಯಾಮೃತಂ - ಕೆಲ ಇಣುಕು ನೋಟಗಳು | ಡಾ\| ಜ್ಯೋತ್ಸ್ನಾ ಕಾಮತ್ | ೨೫೯ |
| ೪೯. ಕನ್ನಡಿಗರು ಪರಿಚಯಿಸಿದ ಕಟ್ಬೋಗರಗಳು | ಡಾ\| ಬಿ. ಮಂಜುಳಾ | ೨೬೨ |
| ೫೦. ಬಿಜಾಪುರದ ಅರಸರಿಗೆ ಜಲಸ್ರೋತದ ರಾಜಯೋಗ-ಜನಭೋಗ | ಡಾ\| ಎಸ್.ಕೆ. ಜೋಶಿ | ೨೬೫ |
| ೫೧. ಜಲದುರ್ಗ-ಒಂದು ವಿಶಿಷ್ಟ ಐತಿಹಾಸಿಕ ನೆಲೆ | ಅಮರೇಶ ಯತಗಲ್ | ೨೭೨ |
| ೫೨. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಕೆರೆಗಳು | ಡಾ. ಹೆಚ್. ಎಸ್. ಉಷಾರಾಣಿ | ೨೭೭ |
| ೫೩. ಕನಕಗಿರಿಯ ಕಲಾತ್ಮಕ ಬಾವಿಗಳು | ಡಾ. ಎಂ. ಕೆ. ದುರುಗಪ್ಪ | ೨೮೦ |
| ೫೪. ಸಂಸ್ಕೃತಪದ ನಿರ್ದಿಷ್ಟ ಘಟಕವಾಗಿರುವ ಸ್ಥಳನಾಮಗಳು | ಡಾ. ಭೋಜರಾಜ ಪಾಟೀಲ | ೨೮೫ |

| | | |
|---|---|---|
| ೫೫. ಕಾಣೆಕಾರಹಳ್ಳಿ - ನಾಮ ವಿವೇಚನೆ | ಡಾ। ಮುನಿರಾಜಪ್ಪ | ೨೮೭ |
| ೫೬. ಸೂಳೆ ಎಂಬ ಪದದಿಂದ ಆರಂಭವಾಗುವ ಸ್ಥಳಗಳ ವಿಶ್ಲೇಷಣೆ | ಪ್ರೊ. ದೇವರ ಕೊಂಡಾರೆಡ್ಡಿ | ೨೮೯ |
| ೫೭. ಮೈಸೂರಿನ ಕನ್ನೇಗೌಡನ ಕೊಪ್ಪಲು ಬಡಾವಣೆ | ಡಾ. ಬಿ. ಎಸ್. ಶ್ಯಾಮಲಾರತ್ನಕುಮಾರಿ | ೨೯೨ |
| ೫೮. ಕುಮಾರರಾಮನ ಭಟ್ಟರಹಳ್ಳಿಯ ಶೋಧನೆ | ವೈ. ಹನುಮಂತರೆಡ್ಡಿ | ೨೯೮ |
| ೫೯. ತುಳುನಾಡಿನಲ್ಲಿ ವೀರಶೈವರ ಆರಂಭಿಕ ನೆಲೆಗಳು | ಪ್ರೊ. ಗೋಪಾಲಕೃಷ್ಣ ಸಾಮಗ | ೩೦೧ |
| ೬೦. ರೇವಣಸಿದ್ಧ ಪರಂಪರೆಯ ಹಾಲುಮತ ಮಠಗಳು | ಡಾ. ಎಫ್.ಟಿ. ಹಳ್ಳಿಕೇರಿ | ೩೦೫ |
| ೬೧. ಕೊಂಡಾಡಿಯ ಜಂಗಮ ಮಠ | ಕೆ. ನಾರಾಯಣ ನಾಯಕ್ | ೩೧೪ |
| ೬೨. ಹೊನ್ನಾಳಿ ಶ್ರೀ ಚನ್ನಪ್ಪಸ್ವಾಮಿ ಮಠದ ಸಾಂಸ್ಕೃತಿಕ ಮತ್ತು ಐತಿಹಾಸಿಕ ಅಧ್ಯಯನ | ಎಂ. ಶಿವಶಂಕರಯ್ಯ | ೩೧೮ |
| ೬೩. ಹೊಳೆದಂಡೆ ಹೊನ್ನಾಳಿ - ಐತಿಹಾಸಿಕ ಅವಲೋಕನ | ಡಾ॥ ಡಿ. ಎನ್. ಯೋಗೀಶ್ವರಪ್ಪ | ೩೨೬ |
| ೬೪. ಹೊನ್ನಾಳಿ ನವಾಬರು | ಕೆ. ಸಿದ್ದಪ್ಪ | ೩೩೪ |
| ೬೫. ಚನ್ನಗಿರಿ ತಾಲೂಕಿನ ವಿಶಿಷ್ಟ ಇತಿಹಾಸದ ಸೂಳೆಕೆರೆ (ಶಾಂತಿ ಸಾಗರ) | ಬಸವರಾಜಪ್ಪ ಪರಪ್ಪ ಕಂದಗಲ್ | ೩೪೧ |
| ೬೬. ಕಾಲಗರ್ಭಲೀನ ಜಾಲಿಹಾಳ ಸಂಸ್ಥಾನ | ದೇವೇಂದ್ರ ಮಾಧವನವರ | ೩೪೪ |
| ೬೭. ತರೀಕೆರೆ ಪಾಳೆಯಗಾರ ಸರ್ಜಪ್ಪನಾಯಕನ ಕಥನ : ಹೊಸಪಾಠ | ಡಾ. ವಿರೂಪಾಕ್ಷಿ ಪೂಜಾರಹಳ್ಳಿ | ೩೫೨ |
| ೬೮. ಬ್ರಿಟಿಷರ ಕಾಲದ ಸೇತುವೆಗಳು | ಕೇಶವ ಉಮ್ಮರ್ಜಿ | ೩೫೬ |
| ೬೯. ತುಳುನಾಡಿನಲ್ಲಿ ಗುರ್ಜರರು | ಶ್ರೀಮತಿ ಇಂದಿರ ಹೆಗ್ಗಡೆ | ೩೫೮ |
| ೭೦. ಕರಾವಳಿ ಕರ್ನಾಟಕದ ಜಾನಪದ - ಇತಿಹಾಸ ಒಂದು ವಿಶ್ಲೇಷಣೆ | ಡಾ। ಕೆ.ಜಿ. ವಸಂತ ಮಾಧವ | ೩೬೨ |
| ೭೧. ಸಂಗೀತ ಕಲೆಗೆ ರಾಷ್ಟ್ರೀಯ ಮನ್ನಣೆ ಬೆಳೆದು ಬಂದ ಹಾದಿಯಲ್ಲಿ ಮೈಸೂರಿನ ಕೊಡುಗೆ | ಡಾ. ಬಿ. ಲೀಲಾ | ೩೬೬ |
| ೭೨. ಸ್ವಾತಂತ್ರ್ಯಪೂರ್ವ ಮೈಸೂರು ರಾಜ್ಯದ ಮಹಿಳಾ ಖೈದಿಗಳ ಸ್ಥಿತಿಗತಿ ಸುಧಾರಣೆ ಕಾಯ್ದೆ | ಎಸ್.ಎ. ಲಕ್ಷ್ಮೀದೇವಿ | ೩೭೨ |
| ೭೩. ಮೈಸೂರು ರಾಜ್ಯದ ೧೮೮೮ರ ಮೊದಲ ವಸ್ತುಪ್ರದರ್ಶನದಲ್ಲಿ ಶಿವಮೊಗ್ಗ ಜಿಲ್ಲೆಯ ಪಾತ್ರ | ವೇಮಗಲ್ ಸೋಮಶೇಖರ್ | ೩೭೫ |
| ೭೪. ಕರ್ನಾಟಕದ ಏಕೀಕರಣದ ಚಳವಳಿಯಲ್ಲಿ ದಾವಣಗೆರೆಯ ಪಾತ್ರ | ಡಾ. ಹೆಚ್. ಈ. ಬಸವರಾಜಪ್ಪ | ೩೭೯ |
| ೭೫. ಎರಡು ಪ್ರಮುಖ ಪ್ರಾಕ್ಚಾರಿತ್ರಿಕ ನೆಲೆಗಳ ಶೋಧ - ಒಂದು ಟಿಪ್ಪಣಿ | ಡಾ. ಪಿ.ಎನ್. ನರಸಿಂಹಮೂರ್ತಿ | ೩೮೯ |
| ೭೬. ವಾಸ್ತುವಿನ ಭಾಗಗಳನ್ನು ಬೆಸೆಯುವ ಸಂಧಿಕರ್ಮ | ಡಾ. ಕೂ.ಸ. ಅಪರ್ಣ | ೩೯೨ |
| ೭೭. ಗುಬ್ಬಿ ಹೊಸಹಳ್ಳಿ ಅರಸು ಮನೆತನದಲ್ಲಿಯ ಕಂಠೀರವ ನರಸರಾಜ ಒಡೆಯರ ನಿರೂಪಗಳು ಮತ್ತು ಚಿಕ್ಕದೇವರಾಜ ಒಡೆಯರ ನಿರೂಪ | ಡಾ॥ ಬಿ. ನಂಜುಂಡ ಸ್ವಾಮಿ | ೪೦೩ |
| ೭೮. ಹೈದರಾಬಾದ ಸಂಸ್ಥಾನದ ವಿಮೋಚನೆಯ ಕಲಬುರಗಿ ಕನ್ನಡ ಸಾಹಿತ್ಯ ಸಂಘದ ಪಾತ್ರ | ಪ್ರೊ. ವಸಂತ ಕುಷ್ಟಗಿ | ೪೦೯ |
| ೭೯. ಮಾಘಣಂದಿ ಭಟಾರಕರ ನೆಲೆ - ಕೆಲ್ಲಂಗೇಕೆ! | ಡಾ. ಕೆ. ವಸಂತಲಕ್ಷ್ಮಿ | ೪೧೫ |
| ೮೦. ಮೈಸೂರಿನ ಅರಣ್ಯಾಡಳಿತದಲ್ಲಿ ಗಜಸಂರಕ್ಷಣಾ ನೀತಿ (೧೮೩೧ - ೧೯೪೯) | ಬಿ. ಪಂಪಾದೇವಿ | ೪೧೯ |
| ೮೧. ಶಿಲ್ಪಗಳಲ್ಲಿ ಆನೆ - ವೈವಿಧ್ಯದ ಚಿತ್ರಗಳು | ಡಾ॥ ಹೆಚ್. ಚಂದ್ರಶೇಖರ | ೪೨೧ |
| ೮೨. ಹುಲ್ಲೂರು ವೀರಭದ್ರ ದೇವಾಲಯದ ಶಾಸನ - ಒಂದು ಮರುಪರಿಶೀಲನೆ | ಡಾ ಬಿ. ರಾಜಶೇಖರಪ್ಪ | ೪೨೬ |
| ೮೩. ಮೈಸೂರು ಒಡೆಯರ ಕಾಲದಲ್ಲಿ ಕ್ರೀಡಾ - ಮನರಂಜನೆ (ಕ್ರಿ.ಶ. ೧೬೧೦-೧೭೬೧) | ಡಾ. ಮಹಾದೇವಿ | ೪೩೧ |
| ☆ Highlights | | ೪೩೮ |
| ☆ ಲೇಖಕ-ಲೇಖನ ಸೂಚಿ | | ೪೫೨ |
| ☆ ೨೦೦೪ನೇ ಸಾಲಿನ ವಾರ್ಷಿಕ ವರದಿ | | ೪೬೧ |

# ಈವರೆಗೆ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಅಧಿವೇಶನಗಳ ಸರ್ವಾಧ್ಯಕ್ಷರು ಹಾಗೂ ಇತರ ವಿವರಗಳು

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು |
|---|---|---|---|---|
| ೧. | ೧೫-೧೭ ಮೇ ೧೯೮೭ | ಬೆಂಗಳೂರು | ಕರ್ನಾಟಕ ಇತಿಹಾಸ ಅಕಾದೆಮಿ | ಡಾ|| ಎಂ. ಚಿದಾನಂದಮೂರ್ತಿ |
| ೨. | ೨೩-೨೪ ಅಕ್ಟೋಬರ್ ೧೯೮೮ | ತುಮಕೂರು | *ಸಿದ್ಧಗಂಗಾಕ್ಷೇತ್ರ : ಡಾ| ಶಿವಕುಮಾರ ಸ್ವಾಮಿಗಳು ಮತ್ತು ತುಮಕೂರು ಜಿಲ್ಲಾ ಇತಿಹಾಸ ಪರಿಷತ್ತು* | ಡಾ|| ಜಿ. ಎಸ್. ಗಾಯಿ |
| ೩. | ೧೦-೧೧ ಜೂನ್ ೧೯೮೯ | ಗದಗ | *ಶ್ರೀ ಮ. ನಿ. ಪ್ರ. ಜ|| ಡಾ|| ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಶ್ರೀ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ, ಗದಗ* | ಡಾ|| ಶ್ರೀನಿವಾಸ ರಿತ್ತಿ |
| ೪. | ೨೧-೨೨ ಜುಲೈ ೧೯೯೦ | ದಾವಣಗೆರೆ | *ಡಾ|| ಸದ್ಯೋಜಾತ ಶಿವಾಚಾರ್ಯ ಸ್ವಾಮೀಜಿ, ಹಿರೇಮಠ, ದಾವಣಗೆರೆ* | ಡಾ|| ಎಸ್. ಆರ್. ರಾವ್ |
| ೫. | ೧೨-೧೪ ಜುಲೈ ೧೯೯೧ | ಚಿತ್ರದುರ್ಗ | *ಚಿನ್ಮೂಲಾದ್ರಿ ಶ್ರೀ ಮುರುಘ ರಾಜೇಂದ್ರ ಬೃಹನ್ಮಠ, ಚಿತ್ರದುರ್ಗ* | ಡಾ|| ಬಾ. ರಾ. ಗೋಪಾಲ್ |
| ೬. | ೧೧-೧೩ ಜುಲೈ ೧೯೯೨ | ರಾಯಚೂರು | *ಪಂಡಿತ್ ತಾರಾನಾಥ ಶಿಕ್ಷಣ ಸಂಸ್ಥೆ ರಾಯಚೂರು* | ಡಾ|| ಕೆ. ವಿ. ರಮೇಶ್ |
| ೭. | ೨೩-೨೫ ಜುಲೈ ೧೯೯೩ | ಮೈಸೂರು | *ಸುತ್ತೂರು ಮಠದ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಜೆ. ಎಸ್. ಎಸ್. ಸಂಸ್ಥೆ, ಮೈಸೂರು* | ಡಾ|| ಅ. ಸುಂದರ |
| ೮. | ೯-೧೦ ಜುಲೈ ೧೯೯೪ | ಸೊಂಡೂರು | *ಶ್ರೀ ಎಂ. ವೈ. ಘೋರ್ಪಡೆ ಕರ್ನಾಟಕ ಸೇವಾ ಸಂಘ, ಸೊಂಡೂರು* | ಡಾ|| ಎಂ. ಎಂ. ಕಲಬುರ್ಗಿ |

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು |
|---|---|---|---|---|
| ೯. | ೯-೧೧ ಸೆಪ್ಟೆಂಬರ್ ೧೯೯೫ | ಬೆಳಗಾವಿ | ಶ್ರೀ ಮ. ನಿ. ಪ್ರ. ಸಿದ್ಧರಾಮ ಮಹಾಸ್ವಾಮಿಗಳು - ಶ್ರೀ ನಾಗನೂರು ರುದ್ರಾಕ್ಷಿಮಠದ ವೀರಶೈವ ಅಧ್ಯಯನ ಅಕಾದೆಮಿ, ಬೆಳಗಾವಿ | ಡಾ|| ಎ.ವಿ. ನರಸಿಂಹಮೂರ್ತಿ |
| ೧೦. | ೭-೯ ಜೂನ್ ೧೯೯೬ | ಧಾರವಾಡ | ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಶ್ರೀ ಮ. ನಿ. ಪ್ರ. ಶಿವಯೋಗಿ ಮಹಾಸ್ವಾಮಿಗಳು ಶ್ರೀ ಮುರುಘಾಮಠ ಧಾರವಾಡ | ಡಾ|| ಜಿ. ಎಸ್. ದೀಕ್ಷಿತ್ |
| ೧೧. | ೨೫-೨೭ ಅಕ್ಟೋಬರ್ ೧೯೯೭ | ಸಿರಸಿ | ಶ್ರೀ ಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನ ಮಠ ಹಾಗೂ ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನ, ಸಿರಸಿ | ಪ್ರೊ|| ಕೆ. ಅಭಿಶಂಕರ್ |
| ೧೨. | ೧೪-೧೬ ನವೆಂಬರ್ ೧೯೯೮ | ಬೆಂಗಳೂರು | ಕರ್ನಾಟಕ ಇತಿಹಾಸ ಅಕಾದೆಮಿ | ಡಾ|| ಎಸ್. ನಾಗರಾಜು |
| ೧೩. | ೧೧-೧೩ ಜೂನ್ ೧೯೯೯ | ಹರಪನಹಳ್ಳಿ | ಮಾನ್ಯ ಸಚಿವ ಶ್ರೀ ಡಿ. ನಾರಾಯಣದಾಸ್ ಮತ್ತು ಆಯೋಜಕರಾದ ಶ್ರೀ ಕುಂ. ಬಾ. ಸದಾಶಿವಪ್ಪ, ಸ್ವಾಗತ ಸಮಿತಿ, ಹರಪನಹಳ್ಳಿ | ಡಾ|| ಶ್ರೀನಿವಾಸ ಹಾವನೂರ |
| ೧೪. | ೮-೧೦ ಜುಲೈ ೨೦೦೦ | ಹಂಪಿ | ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ | ಶ್ರೀ ಸಿ. ಟಿ. ಎಂ. ಕೊಟ್ರಯ್ಯ |
| ೧೫. | ೧೩-೧೫ ಅಕ್ಟೋಬರ್ ೨೦೦೧ | ಉಡುಪಿ | ಪೂಜ್ಯ ಶ್ರೀ ವಿಶ್ವೇಶ್ವರ ತೀರ್ಥ ಪಾದಂಗಳು ಪೇಜಾವರ ಮಠಾಧೀಶರು, ಉಡುಪಿ | ಡಾ|| ಜ್ಯೋತ್ಸ್ನಾ ಕಾಮತ್ |
| ೧೬. | ೨೨-೨೪ ಸೆಪ್ಟೆಂಬರ್ ೨೦೦೨ | ಹೊಸನಗರ | ಪೂಜ್ಯಶ್ರೀ ರಾಘವೇಶ್ವರ ಭಾರತೀ ಸ್ವಾಮಿಗಳು ಶ್ರೀ ರಾಮಚಂದ್ರಾಪುರ ಮಠ | ಡಾ. ಎ.ಕೆ. ಶಾಸ್ತ್ರಿ |
| ೧೭. | ೧೩-೧೫ ಸೆಪ್ಟೆಂಬರ್ ೨೦೦೩ | ಬಾದಾಮಿ | ವಿಶ್ವಚೇತನ ಸಂಸ್ಥೆ ಬಾದಾಮಿ | ಡಾ. ಎಸ್. ರಾಜಶೇಖರ್ |

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು | |
|---|---|---|---|---|---|
| ೧೮. | ೨೪-೨೬ ಸೆಪ್ಟೆಂಬರ್ ೨೦೦೪ | ಹೊನ್ನಾಳಿ | ಶ್ರೀ ಚನ್ನಪ್ಪಸ್ವಾಮಿ ವಿದ್ಯಾಪೀಠ ಚನ್ನ-ಚೇತನ ಪ್ರಕಾಶನ ಮತ್ತು ಹಿರೇಕಲ್ಮಠ | ಶ್ರೀ ಕೆಳದಿ ಗುಂಡಾ ಜೋಯಿಸ್ |  |

## ಡಾ|| ಬಾ.ರಾ. ಗೋಪಾಲ್ ದತ್ತಿ ಪ್ರಶಸ್ತಿ ಸನ್ಮಾನಿತರು

| | | | | |
|---|---|---|---|---|
| ೧ | ೧೫ನೇ ವಾರ್ಷಿಕ ಸಮ್ಮೇಳನ ಅಕ್ಟೋಬರ್ ೨೦೦೧ | ಉಡುಪಿ | ಡಾ. ಕೆ.ವಿ. ರಮೇಶ |  |
| ೨ | ೧೬ನೇ ವಾರ್ಷಿಕ ಸಮ್ಮೇಳನ ಸೆಪ್ಟಂಬರ್ ೨೦೨೦ | ಹೊಸದುರ್ಗ | ಡಾ. ಶ್ರೀನಿವಾಸ ರಿತ್ತಿ |  |
| ೩ | ೧೭ನೇ ಸಮ್ಮೇಳನದ ಸೆಪ್ಟಂಬರ್ ೨೦೦೩ | ಬಾದಾಮಿ | ಡಾ. ದೇವರ ಕೊಂಡಾರೆಡ್ಡಿ |  |
| ೪ | ೧೮ನೇ ಸಮ್ಮೇಳನ ಸೆಪ್ಟಂಬರ್ ೨೦೦೪ | ಹೊನ್ನಾಳಿ | ಡಾ. ಬಿ. ರಾಜಶೇಖರಪ್ಪ |  |
| ೫ | ೧೯ನೇ ಸಮ್ಮೇಳನ ಸಪ್ಟಂಬರ್ ೨೦೦೫ | ಸೇಡಂ | ಡಾ. ಕೆ. ಆರ್. ಗಣೇಶ |  |

# ಕರ್ನಾಟಕ ಇತಿಹಾಸ ಅಕಾದೆಮಿಯ ೧೮ನೆಯ ವಾರ್ಷಿಕ ಸಮ್ಮೇಳನ

## ಹೊನ್ನಾಳಿ ದಿನಾಂಕ ೨೪, ೨೫, ೨೬, ಸೆಪ್ಟೆಂಬರ್ ೨೦೦೫

## ಸಮ್ಮೇಳನಾಧ್ಯಕ್ಷರು : ಕೆಳದಿ ಗುಂಡಾಜೋಯಿಸ್*

### ಅಧ್ಯಕ್ಷರ ಭಾಷಣ

ಅಭಿಮಾನದ ಇತಿಹಾಸಜ್ಞ ಸಹೋದರ-ಸಹೋದರಿಯರೇ,

ಕರ್ನಾಟಕ ಇತಿಹಾಸ ಅಕಾದೆಮಿಯ ಆಜೀವ ಗೌರವಾಧ್ಯಕ್ಷರೂ ಮಹಾನ್ ಚಿಂತಕರೂ ಆಗಿದ್ದ ದಿ|| ಪ್ರೊ|| ಜಿ.ಎಸ್. ದೀಕ್ಷಿತರು ಕಳೆದ ಐದು ದಶಕಗಳ ಹಿಂದೆ ಶಿವಮೊಗ್ಗದಲ್ಲಿ ಜರುಗಿದ ಕೆಳದಿ ಇತಿಹಾಸ ಸಮ್ಮೇಳನದಲ್ಲಿ ನನ್ನನ್ನು ಗುರುತಿಸಿ ಇತಿಹಾಸದೆಡೆಗೆ ಕೊಂಡೊಯ್ದ ಪೂಜ್ಯ ಹಿರಿಯರು ಹಾಗೂ ಗುರುಗಳು. ಅವರ ಪವಿತ್ರ ಆತ್ಮವನ್ನು ನೆನೆಯುತ್ತಾ ಮಾತಾಪಿತೃಗಳಿಗೆ ವಂದಿಸುತ್ತೇನೆ. ಅಧ್ಯಕ್ಷ ಡಾ|| ಸೂರ್ಯನಾಥ ಕಾಮತ್, ಉಪಾಧ್ಯಕ್ಷ ಶ್ರೀ ಎಂ.ಜಿ. ನಾಗರಾಜ್, ಪೂಜ್ಯ ಶ್ರೀ ಷ.ಬ್ರ. ಒಡೆಯರ್ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು, ಹಿರೇಕಲ್ಮಠ, ಹೊನ್ನಾಳಿ, ಡಾ|| ಎಚ್.ಎಸ್. ಗೋಪಾಲರಾವ್, ಡಾ|| ಚೆನ್ನಕ್ಕ ಪಾವಟೆ, ಡಾ|| ಕೆ. ವಸಂತಲಕ್ಷ್ಮಿ, ಶ್ರೀ ಎಂ.ಬಿ. ಪಾಟೀಲ್ ಮತ್ತು ಇನ್ನಿತರ ಕಾರ್ಯಕಾರಿ ಸಮಿತಿಯ ಸದಸ್ಯರುಗಳು ಹಾಗೂ ಇಲ್ಲಿ ಸೇರಿರುವ ಇತಿಹಾಸ ಪ್ರೇಮಿಗಳಿಗೆ ನನ್ನನ್ನು ಅಧ್ಯಕ್ಷನನ್ನಾಗಿ ಮಾಡಿದುದಕ್ಕೆ ವಿನಮ್ರ ವಂದನೆ ಸಲ್ಲಿಸುತ್ತೇನೆ. ನನಗೆ ಸಂದ ಗೌರವ ಕೆಳದಿ ಅರಸರು, ಲಿಂಗಣ್ಣಕವಿ ಹಾಗೂ ಕೆಳದಿ ಸಂಶೋಧನಾಲಯಕ್ಕೆ ಸಲ್ಲತಕ್ಕದೆಂದು ವಿನಮ್ರವಾಗಿ ವಿನಂತಿಸಿಕೊಳ್ಳುತ್ತೇನೆ. ಇದಕ್ಕಾಗಿ ಕೆಳದಿ ವಸ್ತುಸಂಗ್ರಹಾಲಯ/ಇತಿಹಾಸ ಸಂಶೋಧನಾಕೇಂದ್ರ ತಮ್ಮನ್ನು ಕೃತಜ್ಞತೆಯಿಂದ ಸದಾ ಸ್ಮರಿಸುತ್ತದೆ. ಇತಿಹಾಸ ಅಕಾದೆಮಿಯು ಕೇವಲ ವಿಶ್ವವಿದ್ಯಾಲಯದ ಇತಿಹಾಸ ತಜ್ಞರನ್ನು ಸಮ್ಮೇಳನದ ಅಧ್ಯಕ್ಷ ಸ್ಥಾನಕ್ಕೆ ಸೀಮಿತಗೊಳಿಸಿಕೊಳ್ಳದೇ ಕೆಲವು ದೇಶಗಳಲ್ಲಿರುವಂತೆ ತಜ್ಞತೆ ಗಳಿಸಿರುವ ಇತರರನ್ನೂ ಗುರುತಿಸಿ, ಅಧ್ಯಕ್ಷ ಸ್ಥಾನಕ್ಕೆ ಆಯ್ಕೆ ಮಾಡುತ್ತಿದೆ. ದಿ|| ಶ್ರೀ ಕೆ. ಅಭಿಶಂಕರ್ ಅವರಂತೆ ನನ್ನನ್ನೂ ಗುರುತಿಸಿ ಗೌರವ ಸಲ್ಲಿಸಿದುದಕ್ಕೆ ತಮ್ಮನ್ನು ಕೃತಜ್ಞತೆಯೊಂದಿಗೆ ಸ್ಮರಿಸುತ್ತಾ, ದೇವರು ಎಲ್ಲರಿಗೂ ಒಳ್ಳೆಯದನ್ನು ಮಾಡಲೆಂದು ಕೇಳಿಕೊಳ್ಳುವೆನು.

ಪ್ರಾಗೈತಿಹಾಸಿಕ ಕಾಲದ ಚರಿತ್ರೆಯಿಂದ ಆರಂಭಿಸಿ (ಡಾ|| ಸಂಕಾಲಿಯಾ, ಡಾ|| ಎಸ್.ಆರ್. ರಾವ್, ಡಾ|| ಅ. ಸುಂದರ ಇತ್ಯಾದಿ) ಸ್ವಾತಂತ್ರ್ಯ ಹೋರಾಟದ ಕಾಲದವರೆಗೆ (ಡಾ|| ಸೂರ್ಯನಾಥ ಕಾಮತ್) ಸಂಶೋಧನೆ, ಅನ್ವೇಷಣೆ ಪ್ರಕಟಣೆಗಳು ಸಾಕಷ್ಟು ಪ್ರಗಲ್ಭವಾಗಿ ನಡೆದಿರುವುದು ತಮಗೆ ವೇದ್ಯವೇ ಇದೆ. ಬ್ರಿಟಿಷರ ಕಾಲದಲ್ಲಿ ಬರೆದ ಕರ್ನಾಟಕ ಇತಿಹಾಸವು ಈಗಿನ ಪೀಳಿಗೆಗೆ ಪ್ರೇರಣೆಯನ್ನೊದಗಿಸಿದ ಪರಿಣಾಮವಾಗಿ ಕರ್ನಾಟಕ ಇತಿಹಾಸ ಅಕಾದೆಮಿಯ ವಿದ್ವಾಂಸರಿಂದ, ಜನಸಾಮಾನ್ಯರಿಗಾಗಿಯೇ ಇತಿಹಾಸ ಮತ್ತು ಸಂಸ್ಕೃತಿಯನ್ನು ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ,

Study the past
Live in the present
Work for the future,

ಚರಿತ್ರೆಯನ್ನು ಅಧ್ಯಯನ ಮಾಡು, ಇದರ ಹಿನ್ನೆಲೆಯಲ್ಲಿ ಬಾಳು, ಭವಿಷ್ಯಕ್ಕಾಗಿ ಹೋರಾಡು (ಕಾರ್ಯಮಾಡು) ಎಂಬ ಮಾತನ್ನು ಮೂಲೆ ಮೂಲೆಗೂ ಪ್ರಸರಿಸುತ್ತಾ ಸಾಂಸ್ಕೃತಿಕ ಪ್ರಜ್ಞೆಯನ್ನು ಎಚ್ಚರಿಸಿ, ಭವಿಷ್ಯಕ್ಕಾಗಿ ದುಡಿಯುತ್ತಿರುವುದು ಶುಭ ಸಂಕೇತವಾಗಿದೆ. ಅದರಲ್ಲೂ ಹಳ್ಳಿಗಳು ಕೂಡ ಈಚೆಗೆ ಇವುಗಳ ಮಹತ್ವವನ್ನು ಕಂಡುಕೊಂಡಿರುವುದು ಕರ್ನಾಟಕ ಇತಿಹಾಸ ಅಕಾದೆಮಿಯ ಹೆಗ್ಗಳಿಕೆಯೆಂಬುದನ್ನು ಒತ್ತಿ ಹೇಳಬೇಕಾಗಿದೆ.

**ವಿಶ್ವವಿದ್ಯಾಲಯ ಇತಿಹಾಸ ವಿಭಾಗಗಳು**

ಸ್ವಾತಂತ್ರ್ಯ ಪೂರ್ವದಲ್ಲಿ ಇತಿಹಾಸ ಪ್ರಾಧ್ಯಾಪಕರುಗಳು ವಿವಿಧ ಯೋಜನೆಗಳನ್ನು ಕೈಗೊಳ್ಳಲು ವಿದ್ಯಾರ್ಥಿಗಳಿಗೆ ಪ್ರೇರಣೆಯಾದ ಉದಾಹರಣೆಗಳು ಸಾಕಷ್ಟಿವೆ. ಈಗಿನ ಸ್ನಾತಕೋತ್ತರ ಇತಿಹಾಸ ಪ್ರಬಂಧಗಳು ಎಷ್ಟೋ ಬಾರಿ ಆಗಿನ ವಿದ್ಯಾರ್ಥಿ ಪ್ರಬಂಧಗಳಿಗೆ ಸರಿಗಟ್ಟಲಾರವೆಂದೇ ಹೇಳಬೇಕು. ಆಗಿನ ಪದವಿಯೂ ವೈಜ್ಞಾನಿಕ ತಳಹದಿಯಿಂದ ವಿದ್ಯಾರ್ಥಿಗಳನ್ನು ತರಬೇತುಗೊಳಿಸಿ ಮೌಲ್ಯಯುಕ್ತ ಪ್ರಬಂಧಗಳನ್ನು ಸಿದ್ಧಪಡಿಸುವಲ್ಲಿ ಸಫಲತೆ ಗಳಿಸಿತ್ತು. ಇಂತಹ ಅನೇಕ ಇತಿಹಾಸ ಪ್ರಬಂಧಗಳು ಹಸ್ತಪ್ರತಿಯಾಗಿದ್ದು ಪ್ರಕಟವಾಗದೆ ಮೂಲೆಗುಂಪಾಗಿಯೂ, ಕಣ್ಮರೆಯಾಗಿಯೂ ಇರುವುದು ಕಂಡುಬರುತ್ತದೆ. ಇದು ದುರ್ದೈವ! ಇಂತಹ ಅಪ್ರಕಟಿತ ಪ್ರಬಂಧಗಳ ಸೂಚಿಯನ್ನಾದರೂ ಅದರಲ್ಲಿರುವ ವಿಷಯಾನುಕ್ರಮಣಿಕೆ (Contents) ಗಳೊಂದಿಗೆ ದಾಖಲಿಸಿದಲ್ಲಿ ಇವುಗಳು ಮಹಾ ಪ್ರಬಂಧಗಳಷ್ಟೇ ವಿಪುಲ ಸಂಪುಟಗಳಾಗಬಲ್ಲವು. ಅಧ್ಯಯನಶೀಲರು ಇವುಗಳ ಕಡೆಗೆ ಲಕ್ಷ್ಯ ಕೊಡುವುದು ಅಗತ್ಯ.

**ಇತಿಹಾಸ ವಸ್ತು ಸಂಗ್ರಹಾಲಯ**

ಭಾರತ ಹಳ್ಳಿಗಳ ದೇಶ; ವೇದಕಾಲದಿಂದ ಆರಂಭಗೊಂಡು ವೈವಿಧ್ಯಮಯ ಇತಿಹಾಸ ಮತ್ತು ಸಂಸ್ಕೃತಿಗಳು ಇಲ್ಲಿರುವಷ್ಟು

* ಕೆಳದಿ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ - ೫೭೭ ೪೦೧

ಬೇರೆಲ್ಲಿಯೂ ಕಾಣಲಾರದು. ಸ್ವಾತಂತ್ರ್ಯ ಪೂರ್ವದಲ್ಲಿ ಸುಮಾರು ೫೭೦ ಸಂಸ್ಥಾನಗಳ ಪೈಕಿ ಹೆಚ್ಚಿನವುಗಳ ಮೂಲ ಕೇಂದ್ರ ಬಿಂದುಗಳು ಹಳ್ಳಿಗಳೇ ಆಗಿವೆ. ಕರ್ನಾಟಕದಲ್ಲಿಯಂತೂ ವಿಜಯನಗರದ ನಂತರ ಸುಮಾರು ೭೭ ಪಾಳೆಯಪಟ್ಟುಗಳಿದ್ದುದು ಇತಿಹಾಸದಿಂದ ವ್ಯಕ್ತಪಡುತ್ತದೆ. ಇಂತಹ ಪಾಳೆಯಪಟ್ಟುಗಳಲ್ಲಿದ್ದ ಪುರಾತನ ಮೂಲ ಸಾಮಗ್ರಿಗಳು ದೆಹಲಿಯ ರಾಷ್ಟ್ರೀಯ ವಸ್ತುಸಂಗ್ರಹಾಲಯದ ಆದಿಯಾಗಿ ದೊಡ್ಡ ಪಟ್ಟಣಗಳ ಹಾಗೂ ಸರಕಾರಿ ವಸ್ತು ಸಂಗ್ರಹಾಲಯಗಳಲ್ಲಿ ಸೇರಿಹೋಗಿವೆ. (ಬುಕಾನನ್‌ನ ಪ್ರವಾಸೀ ಕಥನ ಹಾಗೂ ದಿವಾನ್ ಪೂರ್ಣಯ್ಯನವರ ಸಂಕೀರ್ಣ ದಾಖಲೆ ಮತ್ತು ಹಯವದನರಾಯರ QJMS ಲೇಖನ ಸಂಪುಟ ನೋಡಿರಿ). ಇವುಗಳ ಮೂಲ ಇತಿಹಾಸವನ್ನು ಗುರುತಿಸುವುದು ಶ್ರಮಸಾಧ್ಯವೆಂದು ಹೇಳಬೇಕು. ಹಲವು ಸಂದರ್ಭಗಳಲ್ಲಿ ಇವುಗಳ ಮೂಲ ಶೋಧನೆಗೆ Catalogue ಅಥವಾ ಸೂಚಿಗಳೂ ಅಲಭ್ಯವಾಗಿವೆ. ರಾಜ ಮಹಾರಾಜರುಗಳು ದೇವಾಲಯಗಳಿಗೆ ನೀಡಿದ್ದ ಆಭರಣಗಳು ಕರಗಿಸಿಯೋ ಅಥವಾ ಕಣ್ಮರೆಯಾಗಿಯೋ ಅಲಭ್ಯವಾಗಿರುವುದನ್ನು ಕಂಡುಕೊಳ್ಳಬಹುದು. ಆಯಾ ಪಾಳೆಯಪಟ್ಟಿನ ಕೇಂದ್ರಸ್ಥಾನಗಳಲ್ಲಿ ಒಂದು ವಸ್ತು ಸಂಗ್ರಹಾಲಯದ ಸ್ಥಾಪನೆ, ಪೋಷಣೆಯಾಗಿ ಆಯಾ ಪಾಳೆಯಗಾರರ ಬಗ್ಗೆ ಇತಿಹಾಸಾಸಕ್ತರು ಸರ್ವತೋಮುಖ ಅಧ್ಯಯನವನ್ನು ಮಾಡುವಲ್ಲಿ ಅವಕಾಶಗಳನ್ನು ಕಲ್ಪಿಸಬೇಕು. ಇದಕ್ಕೆ ಆ ಪಾಳೆಯ ಪಟ್ಟಿನ ಈ ಕೆಳಗಿನ ಸಂಗ್ರಹ ಮತ್ತು ಅಧ್ಯಯನ ಅಗತ್ಯ.

(೧) ಮೆಕೆಂಜೀ ಸಂಗ್ರಹದಂತೆ ಕ್ಷೇತ್ರಾಧ್ಯಯನ; (೨) ಪ್ರಾಚ್ಯಾವಶೇಷಗಳು, (೩) ಶಾಸನಗಳು, (೪) ಚಾರಿತ್ರಿಕ ದಾಖಲೆಗಳು, (೫) ಸ್ಮಾರಕಗಳು, (೬) ಜನಪದ ಸಂಗತಿಗಳು, (೭) ಸ್ವಾತಂತ್ರ್ಯಾಂದೋಲನ ಇತಿಹಾಸಗಳು, ಹಾಗೂ (೮) ಪ್ರಾಚೀನ ಉತ್ಸವೇತ್ಯಾದಿಗಳು ಇವುಗಳ (ಈಚೆಗಿನವರೆಗೆ) ಅಧ್ಯಯನ ಆಗಬೇಕು.

ಇಂತಹ ಸಮಗ್ರ ಮೂಲ ಸಾಮಗ್ರಿಗಳು ವಸ್ತು ಸಂಗ್ರಹಾಲಯಗಳಲ್ಲಿದ್ದರೆ ಸಾಂಸ್ಕೃತಿಕ ಹಾಗೂ ಐತಿಹಾಸಿಕ ಕಾರಣಗಳಿಂದ ಪ್ರವಾಸಿಗಳ ಆಕರ್ಷಣೆಯಿಂದ ಮೊದಲುಗೊಂಡು ವಿದ್ವಾಂಸರ ಅಧ್ಯಯನದವರೆಗೆ ಆಗುವ ಪ್ರಯೋಜನ ಊಹಿಸಲೂ ಅಸಾಧ್ಯ. ಈಗಾಗಲೇ ತಿಳಿಸಿದಂತೆ ವಸ್ತು ಸಂಗ್ರಹಾಲಯಗಳು ಇತಿಹಾಸದ ಮೂಲ ಸಾಮಗ್ರಿಯ ಕೇಂದ್ರಬಿಂದು; ವಿವಿಧ ಕಾನೂನುಗಳ ತೊಡಕುಗಳನ್ನು ದಾಟಿ ಅನೇಕ ವಸ್ತು ಸಂಗ್ರಹಾಲಯಗಳಿಂದ ಮೂಲ ಸಾಮಗ್ರಿಗಳನ್ನು ಸಮಗ್ರ ವೈಜ್ಞಾನಿಕ ಸಂಶೋಧನೆಗೆ ಒಳಪಡಿಸುವುದು ಅಗತ್ಯ. ಈ ಹಿನ್ನೆಲೆಯಲ್ಲಿ ಈಗಿರುವ ಸರಕಾರಿ, ಖಾಸಗೀ ವಸ್ತುಸಂಗ್ರಹಾಲಯಗಳು ಪೂರ್ವಾಗ್ರಹ ಪೀಡಿತವಾಗಿ ಅಥವಾ ಮತ್ತಾವ ಕಾರಣದಿಂದಲೋ ಅಧ್ಯಯನಶೀಲರಿಗೆ ಸಾಮಗ್ರಿಗಳನ್ನು ನೀಡುವಲ್ಲಿ ಕೈಗೆಟುಕಲಾರದಷ್ಟು ಹೊರ ಉಳಿದಿವೆ. ವಿದೇಶಗಳ ವಸ್ತುಸಂಗ್ರಹಾಲಯಗಳಲ್ಲಿ ಅಧ್ಯಯನಶೀಲರಿಗೆ ದೊರಕುವಷ್ಟೂ ಸೌಲಭ್ಯ ನಮ್ಮ ದೇಶದಲ್ಲಿರದಿರುವುದು ಇತಿಹಾಸಕ್ಕೆ ಅಪಾರ ನಷ್ಟ.

ಕನಿಷ್ಠ ಪಕ್ಷ ಅವುಗಳ Catalogue (ಸೂಚಿಯೂ) ಇಲ್ಲದಿರುವುದೂ ಇದಕ್ಕೆ ಕಾರಣವಾಗಿದೆ.

**ಇತಿಹಾಸದ ಕ್ಯಾಟಲಾಗ್**

ಕ್ಯಾಟಲಾಗ್ ಕುರಿತು ವೈವಿಧ್ಯಮಯ ಐತಿಹಾಸಿಕ ಪರಂಪರೆಯಿದ್ದು ಅವುಗಳನ್ನು ಇಲ್ಲಿ ಚರ್ಚಿಸುವುದು ಅಪ್ರಕೃತ. ಪ್ರಾಚ್ಯವಸ್ತುಗಳು, ಮರದ ಕೆತ್ತನೆಗಳು, ಶಾಸನಗಳು, ಸ್ಮಾರಕಗಳು, ಜನಪದ ದಾಖಲೆಗಳು, ಚಾರಿತ್ರಿಕ ದಾಖಲೆಗಳು, ವರ್ಣಚಿತ್ರಗಳು, ನಕಾಶೆಗಳು ಇಂಥವುಗಳ ಕ್ಯಾಟಲಾಗನ್ನು ಸಿದ್ಧಪಡಿಸುವಲ್ಲಿ ಗಮನ ನೀಡಬೇಕು. ಮೂಲ ಸಾಮಗ್ರಿಗಳನ್ನು ಜತನದಿಂದ ಕಾಪಾಡುವುದು ಅಗತ್ಯವಾಗಿದ್ದು ಇವುಗಳ ಮಾದರಿಗಳನ್ನು ಸಂಗ್ರಹಿಸಿ, ಇತಿಹಾಸ ಸಂಶೋಧನೆಗೆ ದೊರಕಿಸಿಕೊಡಲು ಸಾಧ್ಯವಿದೆ. ರಕ್ಷಣೆಗೊಳಪಟ್ಟ ಶಾಸನಗಳ ಪಡಿಯಚ್ಚುಗಳನ್ನು ಆಯಾ ಪಾಳೆಯಪಟ್ಟಿನ ವಸ್ತು ಸಂಗ್ರಹಾಲಯಗಳಲ್ಲಿ ಪ್ರದರ್ಶನಕ್ಕೆ ಅಳವಡಿಸಬಹುದಾಗಿದೆ. ಪ್ರತಿಯೊಂದು ಗ್ರಂಥಭಂಡಾರ ಹಾಗೂ ಚಿಕ್ಕ ವಸ್ತು ಸಂಗ್ರಹಾಲಯಗಳಲ್ಲಿ ಕ್ಯಾಟಲಾಗ್‌ನ ಪ್ರತಿಗಳು ಇರುವುದು ಅತ್ಯಗತ್ಯ. ೧೯೭೩ರಲ್ಲಿ ಮಧುರೆಯಲ್ಲಿ ಜರುಗಿದ All India Museum Association ನ ಸಭೆಯಲ್ಲಿ "Development of Small Museums in Karnataka" ಪ್ರಬಂಧದ ಮೂಲಕ ನಾನೇ ಸಾದರಪಡಿಸಿದ್ದು ಅದು "Small Museum" ಗ್ರಂಥದಲ್ಲಿ ಪ್ರಕಟವಾಗಿದೆ. ಆಗಿನ ಅಧ್ಯಕ್ಷರಾಗಿದ್ದ ಅಂತರರಾಷ್ಟ್ರೀಯ ವಸ್ತು ಸಂಗ್ರಹಾಲಯ ತಜ್ಞೆ ಶ್ರೀಮತಿ ಡಾ|| ಗ್ರೇಸ್ ಮೋರ್ಲೆ, ಡಾ|| ಬ್ಯಾನರ್ಜಿ, ಡಾ|| ಶಿವರಾಮ ಮೂರ್ತಿ ಇವರು ಇದು ಚಿಕ್ಕ ವಸ್ತು ಸಂಗ್ರಹಾಲಯ ಕುರಿತಂತೆ ಉತ್ತಮ ಪ್ರಬಂಧವೆಂದು ಪರಿಗಣಿಸಿ ಪ್ರಕಟಿಸಿದ್ದಾರೆ. ಇದೇ ರೀತಿ ಗ್ರಾಮಾಂತರ ಪ್ರಸಿದ್ಧ ದೇವಾಲಯಗಳ ಧಾರ್ಮಿಕ ವಿಧಿಗಳ ಉಗಮ, ವಿಕಾಸಗಳನ್ನು ಇಂತಹ ಗ್ರಾಮಾಂತರ ವಸ್ತು ಸಂಗ್ರಹಾಲಯ ಮುಖಾಂತರ ಶೇಖರಿಸಬಹುದು.

**ಓಲೆಗರಿಗಳು ಹಾಗೂ ಲಿಪಿಗಳ ಇತಿಹಾಸ**

ಬೌದ್ಧರ 'ಲಲಿತ ವಿಸ್ತರ' ಕೃತಿಯಲ್ಲಿ ಕಂಡುಬಂದಂತೆ ಸುಮಾರು ಅರವತ್ತುನಾಲ್ಕು ಲಿಪಿಗಳ ಉಗಮ ಮತ್ತು ವಿಕಾಸಗಳ ಇತಿಹಾಸವು ಮೌಲಿಕವಾಗಿದ್ದು, ಇವುಗಳ ಅಧ್ಯಯನಗಳು ಅಲಭ್ಯವೆಂದೇ ಹೇಳಬಹುದು. ಪ್ರಾಚೀನ ಕಾಲದ ಪುಸ್ತಕ ಭಂಡಾರಗಳ ಕುರಿತಂತೆ ಡಾ|| ಗುಂಜಾಳ ಅವರು ಸಾಕಷ್ಟು ಅಧ್ಯಯನ ನಡೆಸಿದ್ದು ಅವುಗಳಲ್ಲಿ ಮಹಮ್ಮದ್ ಗವಾನನಿಂದ ಆರಂಭಿಸಿ ಟಿಪ್ಪುವಿನವರೆಗೆ ಹಸ್ತಪ್ರತಿ ಸಂಗ್ರಹಗಳ ಮಾಹಿತಿಗಳು ಲಭಿಸುತ್ತವೆ. ಆದರೆ ಆ ಸಂಗ್ರಹಗಳೇ ಕಣ್ಮರೆಯಾಗಿವೆ. ಓಲೆಗರಿಗಳು ಸಾಂಸ್ಕೃತಿಕ ಸಂಪತ್ತುಗಳ ತವನಿಧಿ. ಪಾಂಡಿಚೇರಿಯಲ್ಲಿರುವ ಫ್ರೆಂಚ್ ಇಂಡಾಲಜಿ ಅಧ್ಯಯನ ಸಂಸ್ಥೆಯ ಪ್ರಕಾರ ಕರ್ನಾಟಕ-ತಮಿಳುನಾಡುಗಳಿಂದ ವಿಪುಲ ಪ್ರಾಚೀನ ಓಲೆಗರಿಗಳು ವಿದೇಶಗಳ ಪ್ರಾಚೀನ ಸಂಶೋಧನಾ ಭಂಡಾರಗಳಲ್ಲಿ ಶೇಖರಿಸಲ್ಪಟ್ಟಿವೆ. ಇವುಗಳ ಸಮಗ್ರ Catalogue ಸಹ ಅಲಭ್ಯ. ವಿಶ್ವ ಸಂಸ್ಕೃತ ಸಮ್ಮೇಳನದಲ್ಲಿ ನಾನು ಸಾದರಪಡಿಸಿದ Our

Wealth of Palmleaf Manuscripts ಅನ್ನು ಇಲ್ಲಿ ಗಮನಿಸಬಹುದು. ಡಾ॥ ಕಲ್ಬುರ್ಗಿಯವರು ಲಂಡನ್‌ನಲ್ಲಿರುವ ಹಸ್ತಪ್ರತಿ ಸಂಗ್ರಹಗಳ ಬಗ್ಗೆ ಅಧ್ಯಯನಾದಿಗಳಿಗೆ ವಿಪುಲ ಅವಕಾಶಗಳಿವೆಯೆಂದು ಕಂಡುಕೊಂಡು ತಿಳಿಸಿದ್ದಾರೆ.

**ಕೆಳದಿ ವಸ್ತು ಸಂಗ್ರಹಾಲಯದ ಉಗಮ, ವಿಕಾಸ**

ಈ ಹಿನ್ನೆಲೆಯಲ್ಲಿ ಕೆಳದಿ ವಸ್ತು ಸಂಗ್ರಹಾಲಯ ಹೇಗೆ ಬೆಳೆದು ಬಂತೆಂಬುದನ್ನು ತಿಳಿಸುವುದು ಅಪ್ರಸ್ತುತವಾಗದು.

ನಾಲ್ಕು ದಶಕಗಳ ಹಿಂದೆ ಮೈಸೂರು ಸರಕಾರದ ಪ್ರಾಚ್ಯವಸ್ತು ಸಂಶೋಧನಾ ಇಲಾಖೆಯ ನಿರ್ದೇಶಕರಾಗಿದ್ದ ಡಾ॥ ಶೇಷಾದ್ರಿ ಹಾಗೂ ಉಪನಿರ್ದೇಶಕ ಶ್ರೀ ಹನುಮಂತರಾಯರು ತಮ್ಮ ಇಲಾಖೆಯ ವಾರ್ಷಿಕ ವರದಿಕಾರ್ಯದ ಅಂಗವಾಗಿ ಕೆಳದಿಗೆ ಭೇಟಿಯಿತ್ತರು. ಇದಕ್ಕಿಂತ ಮುಂಚೆ ನಮ್ಮ ಮನೆಯ ಹಿರಿಯರು ಶೇಖರಿಸಿಟ್ಟಿದ್ದ ಸುಮಾರು ಎರಡು ಲಾರಿಯಷ್ಟು ಪುರಾತನ ವಸ್ತು ಸಾಮಗ್ರಿಗಳನ್ನು ಡಾ॥ ದೇವರಾಜ್ ಅವರು ಕಂಡು ಇವುಗಳ ಮಾದರಿಗಳನ್ನು ಸರಿಪಡಿಸಿ ವೈಜ್ಞಾನಿಕ ರಕ್ಷಣೆಗೆ ಸರಕಾರವನ್ನು ಕೇಳಿಕೊಂಡಿದ್ದರು. ಈ ಕಾರಣದಿಂದಲೇ ಡಾ॥ ಶೇಷಾದ್ರಿಗಳು ಪ್ರೊ॥ ನೀಲಕಂಠ ಶಾಸ್ತ್ರಿಗಳೊಂದಿಗೆ ಸಮಾಲೋಚಿಸಿ ಇವುಗಳನ್ನು ಕೊಂಡು ಮೈಸೂರು ಹಾಗೂ ಬೆಂಗಳೂರು ವಸ್ತು ಸಂಗ್ರಹಾಲಯ ದಲ್ಲಿರಿಸಲು ಸುಮಾರು ಅರವತ್ತು ಸಾವಿರ ರೂಪಾಯಿಗಳ ವೆಚ್ಚದ ಅಂದಾಜು ಮಾಡಿದ್ದರು. ಇದಾದ ಎರಡು ವಾರಗಳ ನಂತರ ನಮ್ಮ ಸಂಗ್ರಹವನ್ನು ಕಂಡ ಶ್ರೀಮಾನ್ ಸತೀಶ್‌ಚಂದ್ರ, ಐ.ಎ.ಎಸ್. (ಆಗಿನ ಶಿವಮೊಗ್ಗ ವಿಭಾಗಾಧಿಕಾರಿಗಳು) ಅವರಿಗೆ ನಮ್ಮ ಹಿರಿಯರ ಸಂಗ್ರಹದಲ್ಲಿದ್ದ ಪ್ರಾಚ್ಯ ವಸ್ತುಗಳೊಂದಿಗೆ ಕೆಳದಿ ಇತಿಹಾಸ ಮತ್ತು ಸಂಸ್ಕೃತಿಯ ಪುನರುಜ್ಜೀವನಕ್ಕೆ ಕೆಳದಿಯಲ್ಲಿಯೇ ಗ್ರಾಮಾಂತರ ವಸ್ತು ಸಂಗ್ರಹಾಲಯ ಮತ್ತು ಸಂಶೋಧನಾ ಕೇಂದ್ರವನ್ನು ಏಕೆ ಸ್ಥಾಪಿಸಿ ಬೆಳೆಸಬಾರದೆನ್ನಿಸಿತು. ವಿಭಾಗಾಧಿಕಾರಿ ಶ್ರೀ ಸತೀಶ್‌ಚಂದ್ರ ಇವರು ನನ್ನನ್ನು ಉತ್ತೇಜಿಸಿ ಹಣಕ್ಕಾಗಿ ಆಸೆಪಡದೆ, ಹಿರಿಯರ ಆಸ್ತಿಯನ್ನು ಇಲ್ಲಿಯೇ ಇರಿಸಿ ಎಂದರು ಮತ್ತು ಕರ್ನಾಟಕದ ಸಂಪದ್ಭರಿತ ಸಂಶೋಧನ ಕೇಂದ್ರವನ್ನಾಗಿ ರೂಪಿಸಲು ಗ್ರಾಮಾಂತರ ವಸ್ತು ಸಂಗ್ರಹಾಲಯ ಸ್ಥಾಪನೆಗೆ ಸರಕಾರದಿಂದಲೇ ಆರ್ಥಿಕ ಸೌಲಭ್ಯವನ್ನು ದೊರಕಿಸಿಕೊಡುವು ದಾಗಿಯೂ ತಿಳಿಸಿ ಭರವಸೆ ನೀಡಿದರು. ಶ್ರೀ ಹನುಮಂತ ರಾಯರೊಂದಿಗೆ ಯೋಜನೆಯೊಂದನ್ನು ರೂಪಿಸಿ Re-organisation and Development of Small Museums ಮುಖಾಂತರ ಅನುದಾನವನ್ನು ದೊರಕಿಸಿಕೊಟ್ಟರು. ಇದರ ಅಂಗವಾಗಿ ನಮ್ಮ ಹಳೆಯ ಕಟ್ಟಡದಲ್ಲಿ ಪ್ರಾಚೀನ ವಸ್ತುಗಳ ರಕ್ಷಣೆಗಾಗಿ ಚಿಕ್ಕ ಹಾಲ್ ಒಂದನ್ನು ಅಧಿಕಾರಿಗಳ ಸಹಾಯಗ ಳೊಂದಿಗೆ ನಿರ್ಮಿಸಲಾಯಿತು. I.A.S. ಅಧಿಕಾರಿಗಳಾದ ಶ್ರೀ ಸತೀಶ್‌ಚಂದ್ರನ್ ಹಾಗ ಶ್ರೀ ಜಿ.ವಿ.ಕೆ. ರಾಯರ ಮುಖಾಂತರ ಅನೇಕ ಉನ್ನತಾಧಿಕಾರಿಗಳು ಹಾಗೂ ಇತಿಹಾಸಜ್ಞರ ಪರಿಚಯ ವಾಯಿತು. ಅದರಿಂದ ನನ್ನಲ್ಲಿ ಕೆಳದಿ ಇತಿಹಾಸ ಮತ್ತು ಸಂಸ್ಕೃತಿ ಅಧ್ಯಯನದ ಬಗ್ಗೆ ಮತ್ತು ವಿಶೇಷವಾಗಿ ಇತರ ಪ್ರಾಚೀನ ಹಸ್ತಪ್ರತಿ ಗಳು ಮತ್ತು ಕನ್ನಡ ಮೋಡೀ ಲಿಪಿಗಳ ಬಗ್ಗೆ ಆಸಕ್ತಿ ಉಂಟಾಯಿತು. ಇದೇ ಕಾಲದಲ್ಲಿ ಶಿವಮೊಗ್ಗ ವಸ್ತು ಸಂಗ್ರಹಾಲಯ ಸ್ಥಾಪನೆಗೆ ಶ್ರೀ ನಾಗೇಗೌಡರು ನನ್ನನ್ನು ಸರ್ವೇಕ್ಷಣಾಧಿಕಾರಿಯನ್ನಾಗಿ ಆಯ್ಕೆ ಮಾಡಿದ್ದರಿಂದ ನನ್ನ ಸರಕಾರಿ ಉದ್ಯೋಗಕ್ಕೆ ರಾಜೀನಾಮೆ ನೀಡು ವಂತಾಯಿತು. ಶಿವಮೊಗ್ಗ ವಸ್ತುಸಂಗ್ರಹಾಲಯಕ್ಕೆ ನಾನು ಸಂಗ್ರಹಿಸಿಕೊಟ್ಟಿದ್ದ ವಸ್ತುಗಳ ಯಾದಿಯನ್ನು ಸಿದ್ಧಪಡಿಸಿಕೊಟ್ಟಿದ್ದೆ. ಇವುಗಳನ್ನು ಮನಗಂಡ ಅಂತರರಾಷ್ಟ್ರೀಯ ಖ್ಯಾತ ಪುರಾತತ್ವಜ್ಞೆ ಡಾ॥ ಗ್ರೇಸ್ ಮೋರ್ಲೆ ಅವರು ನನ್ನನ್ನು 'ಚಿಕ್ಕ ವಸ್ತು ಸಂಗ್ರಹಾಲ ಯಗಳು' ಕುರಿತು ಮಧುರೆ ವಸ್ತು ಸಂಗ್ರಹಾಲಯದಲ್ಲಿ ಜರಗುವ ದೆಹಲಿಯ All India Museum Association ಸಮ್ಮೇಳನದಲ್ಲಿ ಪ್ರಬಂಧ ಮಂಡಿಸಲು ಆಹ್ವಾನಿಸಿ ಪ್ರೋತ್ಸಾಹಿಸಿದರು. ಈ ಪ್ರಬಂಧ ಸಿದ್ಧಪಡಿಸಲು ಡಾ॥ ಎ. ಸುಂದರ ಅವರು ನೀಡಿದ ಸಹಕಾರವನ್ನು ಎಂದಿಗೂ ಮರೆಯಲಾರೆನು. ಇಲ್ಲಿ ಸಾದರಪಡಿಸಿದ Organisation and Development of Small Museums in Karnataka ಎಂಬ ನನ್ನ ಪ್ರಬಂಧವು ಕೊಲ್ಕತ್ತಾದ ಡಾ॥ ಬ್ಯಾನರ್ಜಿ ಹಾಗೂ ರಾಷ್ಟ್ರೀಯ ವಸ್ತುಸಂಗ್ರಹಾಲಯದ ಮಹಾ ನಿರ್ದೇಶಕರಾದ ಡಾ॥ ಶಿವರಾಮಮೂರ್ತಿಗಳ ಮನಗೆದ್ದಿತು. ಡಾ॥ ಶಿವರಾಮ ಮೂರ್ತಿಗಳು ಮೈಸೂರಿನಲ್ಲಿ ಜರುಗಿದ All India Museum Association ನ ಸಮ್ಮೇಳನದ ಅಧ್ಯಕ್ಷರಾಗಿದ್ದಾಗ ನನ್ನನ್ನು ಕರೆಸಿಕೊಂಡರು. (ಕೆಳದಿ ಬಸವರಾಜನ ಕೃತಿ ಶಿವತತ್ವರತ್ನಾಕರ ಕೃತಿಯ ಬಗ್ಗೆ ತಾವು ಅಧ್ಯಯನ ನಡೆಸಿ ಜರ್ಮನ್ ಭಾಷೆಗೆ ಭಾಷಾಂತರಿಸಲು ಅವರು ತೊಡಗಿದ್ದರು). ವಿಜಯನಗರ ಆಸ್ಥಾನದಲ್ಲಿ ನಮ್ಮ ಪೂರ್ವಿಕರು ಪುರೋಹಿತ ರಾಗಿದ್ದುದನ್ನು ಗಮನಿಸಿ, ಆಗ ತಿಳಿಸಿದ್ದರು. ದೆಹಲಿಯಲ್ಲಿ ನಾನು ಅವರ ಮನೆಯಲ್ಲಿದ್ದಾಗ ಇವುಗಳನ್ನು ತೋರಿಸಿ, ಗ್ರಾಮಾಂತರ ಮ್ಯೂಜಿಯಂನ ಅಭಿವೃದ್ಧಿಗಾಗಿ ಅವರು ಆರ್ಥಿಕ ಸಹಾಯವನ್ನೂ ದೊರಕಿಸಿಕೊಟ್ಟಿದ್ದನ್ನು ಮರೆಯುವಂತಿಲ್ಲ. ಖ್ಯಾತ ಶಾಸತನಜ್ಞ ಡಾ॥ ಕೆ.ವಿ. ರಮೇಶ್ ಅವರು ನನ್ನನ್ನು All India Epigraphical Congress ಗೆ ಸದಸ್ಯನನ್ನಾಗಿಸಿ, ಪುಣೆ, ಕಲ್ಕತ್ತ, ತಂಜಾವೂರು ಮುಂತಾದೆಡೆಗಳಲ್ಲಿ ಪ್ರಬಂಧ ಸಾದರಪಡಿಸಲು ಪ್ರೋತ್ಸಾಹಿಸಿದರು. ತಂಜಾವೂರಿನಲ್ಲಿ ಸಾದರಪಡಿಸಿದ ಪ್ರಬಂಧ "Tanjavoor to Vijayarajadurga" ಪುಸ್ತಕ ರೂಪದಲ್ಲಿ Institute of Asian Studies, ತಮಿಳುನಾಡು ಇವರು ಪ್ರಕಟಿಸಿರುವುದನ್ನು ಅವಲೋಕಿ ಸಬಹುದು. ಪ್ರಕೃತ ಸ್ಥಾಪನೆಯ ಹಿನ್ನೆಲೆ ಇಷ್ಟು ಸಾಕೆನ್ನಿಸುತ್ತದೆ. ಮದರಾಸಿನ ಪ್ರಾಧ್ಯಾಪಕ ಡಾ॥ ಗೋಪಾಲಕೃಷ್ಣರವರ ಸಹಾಯ ವನ್ನು ಇಲ್ಲಿ ನೆನೆಸಲೇಬೇಕಾಗಿದೆ.

**ಕೆಳದಿ ಇತಿಹಾಸ ಮತ್ತು ಸಂಸ್ಕೃತಿ**

ಮಹಾನ್ ಚರಿತ್ರಕಾರ ದಿ॥ ಪ್ರೊ॥ ಜಿ.ಎಸ್. ದೀಕ್ಷಿತರು ಕೆಳದಿ ಇತಿಹಾಸದ ಕುರಿತಂತೆ ಪೂಜ್ಯ ಶ್ರೀ ಕೌಲೇದುರ್ಗದ ಶ್ರೀ ಶ್ರೀಗಳ ಆರ್ಥಿಕ ಸಹಾಯದಿಂದ ಅಖಿಲ ಭಾರತ ಸಮ್ಮೇಳನ ವೊಂದನ್ನು ಸುಮಾರು ೧೯೬೯ರಲ್ಲಿ ಸಂಘಟಿಸಿದರು. ಇದು ನನ್ನ ಮೇಲೆ ಅದ್ಭುತ ಪರಿಣಾಮ ಬೀರಿತು. ಇದರಲ್ಲಿ ನನ್ನನ್ನು

ವಿಶೇಷವಾಗಿ ಪೂಜ್ಯ ದೀಕ್ಷಿತರು ಆಹ್ವಾನಿಸಿ ಕೆಳದಿ ಲಿಂಗಣ್ಣ ಕವಿಯ ಪೀಳಿಗೆಗೆ ಸೇರಿದ್ದರಿಂದ ನನಗೇ ಎಚ್ಚರಿಕೆ ನೀಡಿ ನನ್ನ ಈ ಇತಿಹಾಸಾಧ್ಯಯನಕ್ಕೆ ತಳಹದಿ ಹಾಕಿದರು. ದೀಕ್ಷಿತರ ಕೆಳದಿ ಇತಿಹಾಸ ಚಳವಳಿ ಲೇಖನವನ್ನು "ಕೆಳದಿ ಶ್ರೀ" ಕೃತಿಯಲ್ಲಿ ಕಾಣ ಬಹುದು. ಡಾ॥ ಸೂರ್ಯನಾಥ ಕಾಮತ್ ಅವರ ಪಠ್ಯ ಭಾಗದಲ್ಲಿ ಕೆಳದಿ ಇತಿಹಾಸವನ್ನು ಸೇರಿಸಿ ಮುಂದಿನ ಅಧ್ಯಯನಗಳಿಗೆ ಅನುವು ಮಾಡಿಕೊಟ್ಟರು. ಈ ಎಲ್ಲ ಸಂಗತಿಗಳು ಅಖಿಲ ಭಾರತ ಮಟ್ಟದಲ್ಲಿ ಕೆಳದಿ ಇತಿಹಾಸದ ಸಂಶೋಧನೆ ಬಗ್ಗೆ ವಿದ್ವಾಂಸರಲ್ಲಿ ಆಸಕ್ತಿ ಮೂಡಿಸಿದುವು. ಇದಕ್ಕೆ ಮೂಲ ಸಾಮಗ್ರಿಗಳ ಖಜಾನೆಯಾದ ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರ ಕಾರಣವೆಂಬುದು ತಮಗೆ ವೇದ್ಯವೇ ಇದೆ. ಮುಂಬೈ ವಿಶ್ವವಿದ್ಯಾಲಯದಲ್ಲಿ ಅಲ್ವಾರಿಸ್ ಅವರ Nayakas of Ikkeri, ಮದರಾಸ್ ವಿಶ್ವವಿದ್ಯಾಲಯದಲ್ಲಿ ಡಾ॥ ಸ್ವಾಮಿನಾಥನ್ ಅವರ Nayakas of Ikkeri, ಪೂನಾ ವಿಶ್ವವಿದ್ಯಾನಿಲಯದಲ್ಲಿದ್ದ ಡಾ॥ ಚಿಟ್ನೀಸ್ ಅವರ Keladi Polity, ಡಾ॥ ರಾಧಾ ಕೃಷ್ಣಮೂರ್ತಿಗಳ Shivatattva Ratnakara: A Cultural Study, ದೆಹಲಿ ವಿಶ್ವವಿದ್ಯಾಲಯದಲ್ಲಿ ಕೆಳದಿ ಇತಿಹಾಸದಲ್ಲಿ ಸ್ತ್ರೀಯರು ಕುರಿತು ಸಾದರ ಪಡಿಸಿದ ಅಪ್ರಕಟಿತ ಮಹಾಪ್ರಬಂಧ, ಖ್ಯಾತ ಶಾಸನತಜ್ಞ ಡಾ॥ ಲಕ್ಷ್ಮಿ ನಾರಾಯಣರಾಯರ ಕೆಳದಿ ಶಾಸನಗಳ ತುಲನಾತ್ಮಕ ಅಧ್ಯಯನ, ಮುಂಬಯಿ ವಿಶ್ವವಿದ್ಯಾಲಯ ದಲ್ಲಿ ಸಾದರ ಪಡಿಸಿದ ಡಾ॥ ವೆಂಕಟೇಶ್ ಜೋಯಿಸರ ಕೆಳದಿ ಅರಸರ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಕೆಳದಿ ಸಂಶೋಧ ನಾಲಯ ಇದನ್ನು ಪ್ರಕಟಿಸಿದೆ), ಬೆಂಗಳೂರು ವಿಶ್ವವಿದ್ಯಾನಿಲಯವು ಪ್ರಕಟಿಸಿದ ಡಾ॥ ಸಾ.ಶಿ. ಮರುಳಯ್ಯನವರ ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ, ಅಲಹಾಬಾದ್‌ನಲ್ಲಿರುವ ಗೀತಗೌರೀ ಮುಂತಾದವರ ಕೆಳದಿ ಕಾಲದ ಬರಹಗಳನ್ನು ಇಲ್ಲಿ ಹೆಸರಿಸಬಹುದು. ಕೆಳದಿ ಇತಿಹಾಸದ ಮಹತ್ವವನ್ನರಿತ ಖ್ಯಾತ ಬೆನಗಲ್ ರಾಮ ರಾಯರು ಶಿವತತ್ವ ರತ್ನಾಕರವನ್ನು ಪ್ರಾಚೀನ ಹಸ್ತಪ್ರತಿಯಿಂದ ಸಂಪಾದಿಸಿದ್ದು ಭಾರತದಲ್ಲಲ್ಲದೆ ವಿದೇಶಗಳಲ್ಲಿಯೂ ಪ್ರಖ್ಯಾತಿ ಗಳಿಸಿದೆ. ಡಾ॥ ಸಾಲೆತೂರರು ಸೆಂಟ್ ಫೋರ್ಟ್‌ಜಾರ್ಜ್ ನಲ್ಲಿರುವ ಅಪ್ರಕಟಿತ ಕೆಳದಿಶಾಸನ ಪ್ರಕಟಿಸಿರುವರಲ್ಲದೆ ಡಾ॥ ಪಿ.ಬಿ. ದೇಸಾಯಿಯವರು 'ಕೆಳದಿನೃಪ ವಿಜಯ'ವನ್ನು ಮರಾಠಿ ಯಲ್ಲಿಯೂ ಪ್ರಕಟಿಸಿದ್ದಾರೆ. ಕೆಳದಿ ಕಾಲದ ಲಿಂಗಣ್ಣ ಕವಿಯ ಕೆಳದಿನೃಪ ವಿಜಯವು ಸರಕಾರ ಹಾಗೂ ವಿಶ್ವವಿದ್ಯಾಲಯಗಳಿಂದ ಅನೇಕ ಮುದ್ರಣಗಳನ್ನು ಕಂಡಿದೆ. ಇವುಗಳ ಹಸ್ತಪ್ರತಿಗಳು ಲಂಡನ್, ಮದರಾಸ್, ಕಲ್ಕತ್ತ ಹಾಗೂ ಕೆಳದಿ ವಸ್ತು ಸಂಗ್ರಹಾಲಯಗಳ ಲ್ಲಿಯೂ ಕಂಡುಬಂದಿವೆ. ಈಚೆಗೆ ವಿವಿಧ ವಿಶ್ವವಿದ್ಯಾಲಯಗಳಿಂದ ಕೆಳದಿ ಇತಿಹಾಸ-ಸಂಸ್ಕೃತಿ ಕುರಿತು ಮಹಾಪ್ರಬಂಧಗಳು ವಿಪುಲ ವಾಗಿ ಬೆಳಕು ಕಾಣುತ್ತಿರುವುದು ತಮಗೆ ವೇದ್ಯವಿದೆ. ಒಂದೆರಡು ಬೃಹತ್ ಸಂಪುಟಗಳಾಗುವಷ್ಟು ನೂತನ ಸಂಶೋಧನೆಗಳೂ ಹೊರಬರುತ್ತಿರುವುದನ್ನು ಗಮನಿಸಬಹುದು. ಕೆಳದಿನೃಪ ವಿಜಯ ಇಷ್ಟರಲ್ಲಿಯೇ ಹಿಂದಿಯಲ್ಲಿಯೂ ಪ್ರಕಟವಾಗಲಿದೆ.

**ಕೆಳದಿ ಸಂಶೋಧನಾ ಕೇಂದ್ರ**

ಪ್ರಾಚ್ಯವಸ್ತುಸಂಗ್ರಹಾಲಯದ ಆಗಿನ ನಿರ್ದೇಶಕ ಡಾ॥ ಎ. ಸುಂದರ ಅವರು ಗ್ರಾಮಾಂತರ ಕ್ಷೇತ್ರದಲ್ಲಿ ಜನ ಸಾಮಾನ್ಯರ ಸಾಂಸ್ಕೃತಿಕ ಪುರೋಭಿವೃದ್ಧಿಗಾಗಿ ಕೆಳದಿಯಲ್ಲಿ ಸರಕಾರದ ವತಿಯಿಂದಲೇ ನೂತನ ಕಟ್ಟಡವನ್ನು ಆಗಿನ ವಾರ್ತಾ ಪ್ರವಾಸೋದ್ಯಮ ಕಾರ್ಯದರ್ಶಿ ಶ್ರೀ ಮೇಲ್ಕೋಟೆ ಐಎಎಸ್ ಅವರ ಸಹಾಯದಿಂದ (ನಮ್ಮ ಹಿರಿಯರು ದಾನವಾಗಿ ನೀಡಿದ ನಿವೇಶನದಲ್ಲಿ) ನಿರ್ಮಿಸಿಕೊಟ್ಟರು. ಆಗಿನ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗ್ಗಡೆರವರು ನನ್ನನ್ನು ಕರೆಸಿಕೊಂಡು ಮುಖ್ಯ ಕಾರ್ಯ ದರ್ಶಿಗಳಾದ ಶ್ರೀ ಸತೀಶ್‌ಚಂದ್ರನ್, ಐಎಎಸ್ ಅವರ ಸಲಹೆಯ ಮೇರೆಗೆ ಸಂಶೋಧನಾದಿ ಚಟುವಟಿಕೆಗಳಿಗೆ (ನಾನು ಯಾವ ಪ್ರತಿಫಲವನ್ನು ಹೊಂದಬಾರದೆಂದು ಮೊದಲಿನಿಂದಲೂ ಶ್ರೀ ಸತೀಶ್‌ಚಂದ್ರನ್ ಹಾಗೂ ಶ್ರೀ ಚಿರಂಜೀವಿಸಿಂಗ್ ಅವರು ಷರತ್ತು ಹಾಕಿದ್ದರಿಂದ ಈವರೆಗೂ ಯಾವ ಪ್ರತಿಫಲವನ್ನೂ ತೆಗೆದುಕೊಂಡಿ ರುವುದಿಲ್ಲವೆಂಬುದನ್ನು ನಮ್ರತೆಯಿಂದ ನಿವೇದಿಸಿಕೊಳ್ಳುತ್ತೇನೆ) ವಾರ್ಷಿಕ ಅನುದಾನವನ್ನು ದೊರಕಿಸಿಕೊಟ್ಟರು. ಇವುಗಳಿಗೆ ವಿವಿಧ ಅಡಚಣೆಗಳು ಬಂದು, ಸಿಬ್ಬಂದಿಗಳಿಗೆ ಸಂಬಳಗಳೇ ನಿಂತುಹೋಗಿ ಈ ಸಂಶೋಧನಾಲಯ ದಿಕ್ಕೆಟ್ಟ ಸಂದರ್ಭದಲ್ಲಿ ಇತಿಹಾಸ ಅಕಾದೆಮಿಯ ಡಾ॥ ಸೂರ್ಯನಾಥ ಕಾಮತ್ ಹಾಗೂ ಡಾ॥ ಗೋಪಾಲರಾವ್ ಇದನ್ನು ರಕ್ಷಿಸಿರುವುದನ್ನು ನೆನೆಸಿಕೊಳ್ಳು ತ್ತೇನೆ. ಹಾಗೂ ಕ್ಯೂರೇಟರ್ ಡಾ॥ ವೆಂಕಟೇಶ್ ಜೋಯಿಸ್‌ರಿಗೆ ಶ್ರೀ ರಾಮಚಂದ್ರಾಪುರ ಮಠದಲ್ಲಿ ನಡೆದ ಇತಿಹಾಸ ಸಮ್ಮೇಳನದ ಮುಂದಾಳತ್ವ ನೀಡಿ ವಿವಿಧ ರೀತಿಗಳಲ್ಲಿ ಮುನ್ನಡೆಸುತ್ತಿರುವುದನ್ನು ಈ ಸಂಶೋಧನಾಲಯ ಎಂದಿಗೂ ಮರೆಯಲಾರದು. ಇದು ತಮ್ಮೆಲ್ಲರ ಪ್ರೀತಿ ವಾತ್ಸಲ್ಯ ಎಂಬುದನ್ನು ತಿಳಿಸಲು ತಾವು ಅಧ್ಯಕ್ಷ ರಾಗಿ ಆಯ್ಕೆ ಮಾಡಿದ ನನಗೆ ಹೆಮ್ಮೆಯುಂಟಾಗುತ್ತದೆ. ಕೆಳದಿ ಸಂಶೋಧನಾಲಯವನ್ನು ವಿದ್ವಾಂಸರು ಪ್ರೀತಿಯಿಂದ ಬೆಳೆಸಿ, ಸಂಶೋಧನಾದಿ ಪ್ರಕಟಣೆಗಳನ್ನು ಕೈಗೊಂಡಿರುವುದನ್ನು ಡಾ॥ ವೆಂಕಟೇಶ್ ಜೋಯಿಸ್ ಮಾರ್ಗದರ್ಶನದಲ್ಲಿ ಜಪಾನಿನ ವಿದ್ವಾಂಸರುಗಳು ಜಪಾನ್ ಭಾಷೆಯಲ್ಲಿಯೇ ಕೆಳದಿ ಇತಿಹಾಸವನ್ನು ಪ್ರಕಟಿಸಿರುವುದನ್ನು ಕಾಣಬಹುದು. ಡಾ॥ ವಸಂತ ಮಾಧವ, ಡಾ॥ ಬಿ.ಎಸ್. ಶಾಸ್ತ್ರಿ (ಗೋವ) ಮುಂತಾದವರು ಕೆಳದಿ ಇತಿಹಾಸ ವನ್ನು ಸಂಪದ್ಭರಿತವನ್ನಾಗಿಸಿ ವಿದೇಶಗಳಲ್ಲಿಯೂ ದಾಖಲೆಗಳನ್ನು ಅಧ್ಯಯನಕ್ಕಾಗಿ ಮುಂದಿನ ಪೀಳಿಗೆಗೆ ಬೆಳಕು ಕಾಣಿಸಿದ್ದಾರೆ.

**ಕೆಳದಿ ಸಂಶೋಧನಾಲಯ ಪೋಷಕರು**

**ಕೆಳದಿ ಸಂಶೋಧನಾಲದ ಪ್ರಯೋಜನಗಳು**

ಕೆಳದಿ ಸಂಶೋಧನಾಲಯದ ಪ್ರೇರಣೆಯಿಂದಲೇ ಮಲೆನಾಡು ರಿಸರ್ಚ್ ಅಕಾದೆಮಿಯಂಥ ಹಲವು ಸಂಸ್ಥೆಗಳು, ವಸ್ತುಸಂಗ್ರಹಾಲಯಗಳು ಜನ್ಮತಾಳಿವೆ. ರೆವಿನ್ಯೂ, ಪಿ.ಡಬ್ಲ್ಯೂ.ಡಿ., ಪೊಲೀಸ್, ಸರ್ವೆ, ಅರಣ್ಯ ಇಲಾಖೆ, ಮಿಲಿಟರಿ, ಭಾರತ ಸರಕಾರದ ಪುರಾತತ್ವ ಇಲಾಖೆ, ಪ್ರವಾಸೋದ್ಯಮ ಇಲಾಖೆ, ಪತ್ರಾಗಾರ ಇಲಾಖೆ, ಧಾರ್ಮಿಕ ದತ್ತಿ ಇಲಾಖೆ,

ನ್ಯಾಯಾಲಯಗಳು, ದೂರವಾಣಿ, ದೂರದರ್ಶನ, ಈ ಎಲ್ಲ ಸಂಸ್ಥೆಗಳು ಕೆಳದಿ ಸಂಶೋಧನಾಲಯದ ತಜ್ಞರುಗಳಿಂದ ಉಪಯೋಗಗಳನ್ನು ಪಡೆದಿರುವುದನ್ನು ದಾಖಲೆಗಳಲ್ಲಿ ಅವಲೋಕಿಸಬಹುದಾಗಿದೆ. ಸ್ವೀಡನ್ ವಿಶ್ವವಿದ್ಯಾಲಯ ಹಾಗೂ ನಯಾಗರಾ ಜಲಪಾತ ವಸ್ತು ಸಂಗ್ರಹಾಲಯಗಳು ಕೆಳದಿ ವಸ್ತು ಸಂಗ್ರಹಾಲಯದ ಪ್ರಾವೀಣ್ಯತೆಯನ್ನು ಉಪಯೋಗಿಸಿಕೊಳ್ಳಲು ಮುಂದೆ ಬಂದಿರುವುದನ್ನು ಕಾಣಬಹುದು. ಇಂದಿರಾಗಾಂಧಿ ರಾಷ್ಟ್ರೀಯ ಸಂಶೋಧನಾ ಸಂಸ್ಥೆಯು ಇದರ ಪ್ರಯೋಜನ ಪಡೆದಿದೆ. ಶ್ರೀ ಚಿರಂಜೀವಿಸಿಂಗ್ ಯುನೆಸ್ಕೋ ಪ್ರತಿನಿಧಿಯಾಗಿದ್ದಾಗ Memory of the World ಯೋಜನೆಯಡಿ ಕೆಳದಿ ಸಂಶೋಧನಾಲಯಕ್ಕೂ ಮಾನ್ಯತೆ ದೊರಕಿಸಿ ಕೊಟ್ಟಿದ್ದಾರೆ. ವಿವಿಧ ವಿಶ್ವವಿದ್ಯಾಲಯಗಳು ನಾನಾ ರೀತಿಗಳಲ್ಲಿ ಈ ಸಂಶೋಧನಾಲಯದ ಪ್ರಯೋಜನ ಪಡೆದಿರುವುದನ್ನು ವಿವಿಧ ಸಂಪುಟಗಳ ಸಂದರ್ಶಕರ ಪುಸ್ತಕಗಳಲ್ಲಿ ಅವಲೋಕಿಸಬಹುದು. ಇವುಗಳನ್ನು ಮನಗುಂಡು ಭಾರತ ಸರಕಾರ ರಾಷ್ಟ್ರೀಯ ಸಂಗ್ರಹಾಲಯ ಕೆಳದಿಯಲ್ಲಿ ಕಟ್ಟಡ ನಿರ್ಮಿಸಿದೆ.

### ಪ್ರಾಚೀನ ಹಸ್ತಪ್ರತಿ ಸಂರಕ್ಷಣೆ

ಕೆಳದಿ ಸಂಶೋಧನಾಲಯ ಪ್ರಾಚೀನ ಹಸ್ತಪ್ರತಿ ಸಂರಕ್ಷಣೆಯಲ್ಲಿಯೂ ಅಪೂರ್ವ ಪ್ರಗತಿ ಸಾಧಿಸಿದೆ. ಇಟಲಿ ಪ್ರವಾಸಿ ಪಿಯತ್ರೋ ಡಲ್ಲೆ ವಲ್ಲೆಯ, ಪೀಟರ್ ಮಂಡಿಯ ಪತ್ರಾಗಾರ ವರ್ಣನೆ ಕುರಿತ ಮೂಲ ಸಾಮಗ್ರಿಗಳನ್ನು ಅದು ಕಲೆಹಾಕಿದೆ. ಕೆಳದಿ ವಸ್ತು ಸಂಗ್ರಹಾಲಯ ವೀಕ್ಷಕರು ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಹಸ್ತ ಪ್ರತಿಗಳನ್ನು ರಕ್ಷಿಸಲು ದೇಣಿಗೆಯಾಗಿ ನೀಡಿರುವುದು ಇದರ ಹೆಗ್ಗಳಿಕೆಯಾಗಿದೆ. ಈ ವಸ್ತು ಸಂಗ್ರಹಾಲಯ ಶಿವಮೊಗ್ಗ ಜಿಲ್ಲೆಯ ಮೂಲೆಯ ಹಳ್ಳಿಯಲ್ಲಿದ್ದರೂ ದೇಶ ವಿದೇಶಗಳ ಗಣ್ಯರಾದ ಇತಿಹಾಸ ವಿದ್ವಾಂಸರ ಆಕರ್ಷಣೆಯ ಕೇಂದ್ರವಾಗಿರುವುದನ್ನು ಕೆಳದಿಯಲ್ಲಿ ಕಾಣಬಹುದು.

ದೇಶದಲ್ಲಿಯೇ ವಿಶೇಷವಾಗಿ ಯಾರಗಮನಕ್ಕೂ ಬಾರದ ತಿಗಳಾರಿ ಲಿಪಿ ಹಸ್ತಪ್ರತಿ ಕೇಂದ್ರವು ಕೆಳದಿ ಸಂಶೋಧನಾಲಯವೆಂದೇ ಹೇಳಬಹುದು. ಇದನ್ನು ಗಮನಿಸಿದ ಶ್ರೀಮತಿ ಮಾರ್ಗರೆಟ್ ಆಳ್ವ, ಶ್ರೀ ಬೂಟಾಸಿಂಗ್ ಹಾಗೂ ಶ್ರೀ ಅಡ್ವಾನಿ ಅವರು ಲೋಕಸಭೆಯಲ್ಲಿ ಪ್ರಶ್ನೋತ್ತರವನ್ನು ಮಂಡಿಸಿ, ಪ್ರಧಾನ ಮಂತ್ರಿಯವರಿಂದಲೇ ನೇರವಾಗಿ Financial assistance for ferreting our ancient knowledge containing in the palmleaf MSs ಯೋಜನೆ ಜಾರಿಗೆ ತಂದಿದ್ದರಿಂದ A Catalogue of Ancient Tigalari Palmleaf Manuscripts in India Vol. I ಪ್ರಕಟವಾಗಿ ವಿದ್ವಾಂಸರಿಂದ ಶ್ಲಾಘನೆ ಗಳಿಸಿದೆ. ಇದನ್ನು ಜಪಾನ್ ಸರಕಾರದ ಪತ್ರಾಗಾರ ಇಲಾಖೆಯು 'ಕಿಟನೋಮಾರು' ಸಂಪುಟದಲ್ಲಿ ವಿಮರ್ಶೆಗೆ ಆಯ್ಕೆ ಮಾಡಿದ್ದೂ ಇದರ ಹೆಗ್ಗಳಿಕೆ. ತಿಗಳಾರಿಲಿಪಿಯ ಓದಿನ ತರಬೇತಿ ಬಗ್ಗೆ ಪ್ರಯತ್ನ ನಡೆಯುತ್ತಿದೆ. ಭಾರತದ ಅಗ್ರಮಾನ್ಯ ಪತ್ರಿಕೆ 'ದಿ ಹಿಂದೂ' ಇದನ್ನು ವಿಮರ್ಶಿಸಿದೆ. ಆಂಧ್ರದ ಕುಪ್ಪಂ ದ್ರಾವಿಡ ವಿಶ್ವವಿದ್ಯಾಲಯ ಸಂಪುಟದಲ್ಲಿ ಇದನ್ನು ವಿಮರ್ಶಿಸುತ್ತಾ, of data about the palmleaf manuscripts, let alone taking possession of them especially from highly orthodox householders is not an easy task. Keladi Gunda Jois, an ardent manuscriptologist has devoted fully and committed to the laborious work of collection of these manuscripts by visiting monasteries, temples and individuals in the nooks and corners of this region. He has a great ambition to unearth the treasure trove of this kind of historical and literary documents for the benefit of posterity', ಎಂದು ಉಲ್ಲೇಖಿಸಿದೆ.

### ಕನ್ನಡ ಮೋಡಿ ಲಿಪಿ

ದೇಶದ ಬಹು ಭಾಗದಲ್ಲಿರುವ ಕನ್ನಡ ಮೋಡೀ ಲಿಪಿ ಚಾರಿತ್ರಿಕ ದಾಖಲೆ ಪತ್ರಗಳ ಮೂಲ ಶೋಧನೆಯ ಕೇಂದ್ರವೂ ಕೆಳದಿ ಸಂಶೋಧನಾಲಯವೆಂದೇ ಹೇಳಬಹುದು. ಅಖಿಲ ಭಾರತ ಶಾಸನತಜ್ಞರ ಸಮ್ಮೇಳನದ ಅಂಗವಾಗಿ ಮಿಥಿಕ್ ಸೊಸೈಟಿಯಲ್ಲಿ ಕೆಳದಿ ಮ್ಯೂಜಿಯಂನಿಂದ ಚಾರಿತ್ರಿಕ ದಾಖಲೆ ಪ್ರದರ್ಶನ ಕೈಗೊಳ್ಳಲಾಯಿತು. ದಿ॥ ಪ್ರೊ॥ ಜಿ.ಎಸ್. ದೀಕ್ಷಿತರು, ಈ ಲಿಪಿಯನ್ನು ಕಲಿಸಲು ಡಾ॥ ಎ.ಕೆ. ಶಾಸ್ತ್ರಿಗಳನ್ನು ನನ್ನಲ್ಲಿಗೆ ಕಳಿಸಿದ್ದರು. ಸರಕಾರ ಕೆಳದಿ ಸಂಶೋಧನಾಲಯದ ನೇತೃತ್ವದಲ್ಲಿ ಹಲವಾರು ತರಬೇತಿ ಶಿಬಿರಗಳನ್ನು ಕೈಗೊಂಡಿದ್ದು, ಅಧಿಕಾರಿಗಳು, ವಿದ್ವಾಂಸರು ಹಾಗೂ ಇತರರು ಸೇರಿ ಸುಮಾರು ೧೫೦ ಜನಗಳಿಗೆ ತರಬೇತಿ ನೀಡಲಾಗಿದೆ. ಡಾ॥ ಎ.ಕೆ. ಶಾಸ್ತ್ರಿಗಳನ್ನು ಬಿಟ್ಟಲ್ಲಿ, ಇತರರಾರೂ ಈ ಕ್ಷೇತ್ರದಲ್ಲಿಯೂ ಪ್ರಗತಿ ಸಾಧಿಸಿರುವುದು ಕಂಡುಬರುವುದಿಲ್ಲ. 'ಕಡತದ ಶಾಸ್ತ್ರಿ' ಎಂದೇ ಕರ್ನಾಟಕ ಇತಿಹಾಸ ಅಕಾದೆಮಿಯಿಂದ ಪುರಸ್ಕೃತಗೊಂಡು ಭಾರತದ ವಿಶ್ವವಿದ್ಯಾಲಯದ ಅನುದಾನ ಆಯೋಗದವರೆಗೂ ಪ್ರಗತಿ ಸಾಧಿಸಿದ ಡಾ॥ ಶಾಸ್ತ್ರಿಗಳ ಸಾಧನೆಯು ಕೆಳದಿ ಸಂಶೋಧನಾಲಯದ ಹೆಮ್ಮೆಯೆಂದರೆ ಉತ್ಪ್ರೇಕ್ಷೆಯಲ್ಲ. ದೆಹಲಿ ಪತ್ರಾಗಾರದ ಮುಖ್ಯಾಧಿಕಾರಿ ಡಾ॥ ಎಸ್.ಎನ್. ಪ್ರಸಾದ್, ಅಲ್ಲದೆ ಪ್ರೊ॥ ಜಿ.ಎಸ್. ದೀಕ್ಷಿತ್, ಡಾ॥ ದೇಶಿಕಾಚಾರ್, ಡಾ॥ ಎ.ಕೆ. ಶಾಸ್ತ್ರಿಗಳ ಸಂಗಮವು ಕೆಳದಿಯಲ್ಲಿಯೇ ಆಗಿ ಕರ್ನಾಟಕ ಪತ್ರಾಗಾರದ ಯೋಜನೆಗೆ ನಾಂದಿಯಾಗಿರುವುದನ್ನು ಮರೆಯುವಂತಿಲ್ಲ. ರಾಜ್ಯ ಪತ್ರಾಗಾರದ ಪ್ರಥಮ ನಿರ್ದೇಶಕರಾದ ಡಾ॥ ದೇಶಿಕಾಚಾರ್ ಅವರು ನನ್ನನ್ನು ಸರಕಾರದ ಉನ್ನತಾಧಿಕಾರಿ ಸಮಿತಿ ಸದಸ್ಯನನ್ನಾಗಿಸಿದುದೂ ಕೆಳದಿ ಸಂಶೋಧನಾಲಯಕ್ಕೆ ದೊರೆತ ಗೌರವವಾಗಿದೆ. ಪತ್ರಾಗಾರದ ಸಾವಿರಾರು ಮೋಡಿ ಲಿಪಿ ಪತ್ರಗಳನ್ನು ಕನ್ನಡಿಸಿಕೊಟ್ಟು ಕೆಳದಿ ಸಂಶೋಧನಾಲಯ ಸೇವೆ ಸಲ್ಲಿಸಿದೆ. ಶ್ರೀ ಧರ್ಮಸ್ಥಳ, ಶ್ರೀ ಶೃಂಗೇರಿ, ಶ್ರೀ ರಾಮಚಂದ್ರಾಪುರ ಮಠ, ಗೋವಾ ಪರ್ತಗಾಳಿ ಮಠ, ಆರ್ಯ ಅಕ್ಷೋಭ್ಯತೀರ್ಥ ಮಠ, ಹುಬ್ಬಳ್ಳಿ ಶ್ರೀ ಜಗದ್ಗುರು ಮೂರುಸಾವಿರ ಮಠ, ಶ್ರೀ ಮಂತ್ರಾಲಯ, ಶ್ರೀ ತಿರುಮಕೂಡ್ಲು ನರಸಿಂಹರಾಜಪುರ ಮಠ, ಬೆನಾರಸ್ ಜಂಗಮವಾಡಿ ಮಠ, ಶ್ರೀ ಉತ್ತರಾದಿ ಮಠ,

ಶ್ರೀ ಪೇಜಾವರ ಮಠ, ಶ್ರೀ ಪುತ್ತಿಗೆ ಮಠ ಇತ್ಯಾದಿಯಾಗಿ ಅನೇಕ ಮಠಗಳು, ಧಾರ್ಮಿಕ ಸಂಸ್ಥೆಗಳು ತಮ್ಮಲ್ಲಿನ ದಾಖಲೆಗಳ ಯಾದಿಯನ್ನು ಸಿದ್ಧಪಡಿಸಿಕೊಡಲು ಈ ಸಂಶೋಧನಾಲಯದ ನೆರವು ಪಡೆದಿದೆ. ಹಲವು ಮಠಗಳು ಭಾರತ ಸರಕಾರದ ಆರ್ಥಿಕ ನೆರವಿನಿಂದ ಯಾದಿಗಳನ್ನು ಪ್ರಕಟಿಸಿವೆ. ಇಂತಹ ಯಾದಿಗಳ ಆಕರಗಳನ್ನು ಇಂದಿರಾಗಾಂಧಿ ರಾಷ್ಟ್ರೀಯ ಕಲಾ ಕೇಂದ್ರವು ಮೈಕ್ರೋಫಿಲ್ಮ್‌ನಲ್ಲಿ ಅಳವಡಿಸಿಕೊಂಡಿವೆ. ಕರ್ನಾಟಕ ಸರಕಾರ ನನ್ನನ್ನು ತಮಿಳುನಾಡಿಗೆ ಸಂಶೋಧನೆಗೆ ಕಳಿಸಿದ ಸಂದರ್ಭದಲ್ಲಿ, ಆ ಸರಕಾರವು ಕರ್ನಾಟಕ ಇತಿಹಾಸದ ಅಸಂಖ್ಯ ದಾಖಲೆಗಳನ್ನು ನಾಶಮಾಡಿದ್ದ ಕನ್ನಡ ನಾಡಿನ ದುರ್ದೈವದ ಸಂಗತಿ ತಿಳಿಯಿತು. ತಂಜಾವೂರಿನ ಗೋವಿಂದ ದೀಕ್ಷಿತನ (ಈತನು ಕನ್ನಡಿಗ) ಚರಿತ್ರೆ ಹಾಗೂ ದಾಖಲೆಗಳೂ ಸಂಶೋಧನೆಗೆ ಕಾದು ಕುಳಿತಿವೆ. ಶ್ರೀ ಸುಮತೀಂದ್ರ ನಾಡಿಗರು ಸಂತೇಬೆನ್ನೂರು ಇತಿಹಾಸ, ಸಂಸ್ಕೃತಿ ಕುರಿತು ಸಮಗ್ರ ಮಾಹಿತಿಯನ್ನೇ ಕಲೆಹಾಕಿದ್ದು, ಪ್ರಕಟಣೆಗೆ ಸಿದ್ಧವಾಗಿದ್ದು, ಬೆಳಕು ಕಾಣುವುದು ಅಗತ್ಯ.

### ಪಾಳೆಗಾರರ ಸಂಶೋಧನಾ ಕೇಂದ್ರ

ಕರ್ನಾಟಕ ಸುಮಾರು ೭೭ ವಿಜಯನಗರೋತ್ತರ ಪಾಳೆಯಗಾರರ ಇತಿಹಾಸಗಳಿಂದ ಕೂಡಿದೆಯೆಂದು ನಂಬಿಕೆ. ಇಂತಹ ಪಾಳೆಯಪಟ್ಟುಗಳ ಮುಖ್ಯ ಕೇಂದ್ರಗಳಲ್ಲಿ ಸಂಶೋಧನಾ ಕೇಂದ್ರಗಳು ಆಯಾ ಸ್ಥಳದ ಇತಿಹಾಸಾಸಕ್ತರ ನೆರವಿನಿಂದ ರಚನೆಯಾದಲ್ಲಿ ಇತಿಹಾಸ ಅಧ್ಯಯನದ ವಿಕೇಂದ್ರೀಕರಣದಲ್ಲಿ ಮಹತ್ವದ ಮೈಲುಗಲ್ಲಾಗಲಿದೆ. ಕೆಳದಿ ಸಂಶೋಧನಾಲಯದ ಸಹಯೋಗದಿಂದ ಬೆಂಗಳೂರು ವಿಶ್ವವಿದ್ಯಾಲಯವು ಇತಿಹಾಸ ಕೋಶವೊಂದನ್ನು ಸಿದ್ಧಪಡಿಸಲು ಯೋಜನೆಯೊಂದನ್ನು ಹಮ್ಮಿಕೊಂಡಿತ್ತು. ಇದು ಏನಾಯಿತೋ ತಿಳಿಯದು. ಪ್ರತಿಯೊಂದು ಊರಿನ, ಅದು ಪಟ್ಟಣ ಕೇಂದ್ರವಾಗಲೀ ಗ್ರಾಮವಾಗಲೀ ಆ ಪ್ರದೇಶಗಳ ಕ್ಷೇತ್ರೇತಿಹಾಸಗಳೊಂದಿಗೆ ಅವಶೇಷಗಳ ಸಮೀಕ್ಷೆಗಳನ್ನು ಕೈಗೊಂಡು ಅವುಗಳ ಯಾದಿಗಳನ್ನು ಆ ಇತಿಹಾಸ ಸಂಶೋಧಕರು ಸಿದ್ಧಪಡಿಸಿಟ್ಟುಕೊಳ್ಳುವುದು ಅಗತ್ಯ. ಕಾಲಾನುಕ್ರಮದಲ್ಲಿ ಇವುಗಳು ತಾಲ್ಲೂಕುವಾರು ಬೃಹತ್ ಸಂಪುಟಗಳಿಗೆ ಆಕರಗಳನ್ನು ಒದಗಿಸಬಲ್ಲವು. ಇದು ದೀರ್ಘಕಾಲೀನ ಯೋಜನೆಯಾಗಿದ್ದು, ನಿರುದ್ಯೋಗಿ ಇತಿಹಾಸ ಪದವೀಧರರುಗಳಿಗೆ ಇವು ನೆರವಾಗುವುದಲ್ಲದೆ ಮುಂದಿನ ಪೀಳಿಗೆಗೆ ಸ್ಮಾರಕಗಳ ರಕ್ಷಣೆಗೆ ಉತ್ತಮ ಕೊಡುಗೆಯಾಗಬಲ್ಲವು. ಕರ್ನಾಟಕ ಇತಿಹಾಸ ಅಕಾದೆಮಿಯ ಸದಸ್ಯರೆಲ್ಲರೂ ಇದಕ್ಕೆ ಸಹಕರಿಸುವುದು ಅಗತ್ಯ. ಪ್ರೈಮರಿ ಶಾಲೆಗಳ ಹಾಗೂ ಪ್ರೌಢಶಾಲೆಗಳ ಇತಿಹಾಸ ಅಧ್ಯಾಪಕರು ಪರಿಶ್ರಮವಹಿಸಿದಲ್ಲಿ, ಅವುಗಳನ್ನು ಸಂಗ್ರಹಿಸಿ ಪ್ರದರ್ಶಿಸಿದಲ್ಲಿ ಮಕ್ಕಳಿಗೆ ಇತಿಹಾಸ ಪ್ರಜ್ಞೆಯನ್ನು ಗಳಿಸಿಕೊಡುವುದು ಸಾಧ್ಯವಾಗಬಹುದು. ಒಟ್ಟಿನಲ್ಲಿ ಇದೊಂದು ಆಂದೋಲನದ ಸ್ವರೂಪದ ಯೋಜನೆಯಾಗಬೇಕು. ಇದೇ ನಿಟ್ಟಿನಲ್ಲಿ ಪತ್ರಿಕೆಗಳಲ್ಲಿ ಪ್ರಕಟವಾದ ಐತಿಹಾಸಿಕ ಮಾಹಿತಿಗಳನ್ನು ಕಲೆಹಾಕಿದ ಸಂಪುಟವೂ ಪ್ರಕಟಣೆಗೆ ಯೋಗ್ಯವಾಗಿದೆ.

### ಕರ್ನಾಟಕ ಇತಿಹಾಸ ಅಕಾದೆಮಿ ಕುರಿತು

ಆರಂಭದಲ್ಲಿ ಕೈಬೆರಳೆನಿಷ್ಟು ಇತಿಹಾಸ ಪ್ರೇಮಿಗಳು ಸ್ಥಾಪಿಸಿ, ಟೊಂಕ ಕಟ್ಟಿ ಬೆಳೆಸಿದ ಕರ್ನಾಟಕ ಇತಿಹಾಸ ಅಕಾದೆಮಿ ಖ್ಯಾತ ವಿದ್ವಾಂಸ ಪ್ರೊ।। ಜಿ.ಎಸ್. ದೀಕ್ಷಿತ್, ಅಲ್ಲದೆ ಡಾ।। ಸೂರ್ಯನಾಥ ಕಾಮತ್, ಡಾ।। ಗೋಪಾಲರಾವ್, ಪ್ರೊ।। ಎಂ.ಜಿ. ನಾಗರಾಜ್ ಮುಂತಾದವರ ನೇತೃತ್ವದಲ್ಲಿ ಮುನ್ನಡೆಯುತ್ತಿರುವುದು ರೋಚಕ ಇತಿಹಾಸವೇ ಆಗಿದೆ. ಉದಾಹರಣೆಗೆ ಕೆಳದಿ ಸಂಶೋಧನಾಲಯಕ್ಕೆ ಅನುದಾನ ಅನಗತ್ಯವೆಂದು ಸರಕಾರವೇ ಸಮಿತಿ ನೇಮಿಸಿ, ವರದಿ ಸಲ್ಲಿಸಿರಲು, ಬೆಂಗಳೂರಲ್ಲಿಯೇ ಇದ್ದ ಡಾ।। ಸೂರ್ಯನಾಥ ಕಾಮತ್, ಡಾ।। ಗೋಪಾಲರಾವ್ ಹಾಗೂ ಇತರ ಪ್ರಮುಖರು ಸಂಬಂಧಪಟ್ಟ ಸಚಿವರು, ಅಧಿಕಾರಿಗಳನ್ನು ಭೇಟಿಯಾಗಿ, ಈ ಸಂಶೋಧನಾಲಯಕ್ಕೆ ಒದಗಿದ್ದ ಕಂಟಕ ಗಳನ್ನು ದೂರ ಮಾಡಿದ್ದು ಬಹಳಷ್ಟು ಜನರಿಗೆ ತಿಳಿದಿರಲಿಕ್ಕಿಲ್ಲ. ಬೆಂಗಳೂರಿನಿಂದ ದೂರದಲ್ಲಿರುವ ಕೆಳದಿ ಸಂಶೋಧನಾಲಯಕ್ಕೆ ಇದರ ಪರಿಣಾಮದಿಂದ ಐತಿಹಾಸಿಕ ಸಾಂಸ್ಕೃತಿಕ ಸಂಪತ್ತು ಹೇಗೆ ರಕ್ಷಿಸಲ್ಪಟ್ಟಿತು, ಎಂಬುದು ಮುಂದಿನ ಪೀಳಿಗೆಗೆ ದಾಖಲಾಗುವುದು ಸೂಕ್ತ. ಇದು ಕೇವಲ ಒಂದು ಉದಾಹರಣೆಯಷ್ಟೆ. ಇಂತಹ ನಿಸ್ವಾರ್ಥ ಸೇವೆಗಳನ್ನು ಬೆಂಗಳೂರಿನಲ್ಲಿದ್ದುಕೊಂಡೇ ಕೈಗೊಳ್ಳುತ್ತಿರುವ ಇತಿಹಾಸ ಅಕಾದೆಮಿ ಕಾರ್ಯಕಾರಿ ಸಮಿತಿಯು ಎಲ್ಲ ವಿದ್ವಾಂಸರ ಸಾಧನೆ ಶ್ಲಾಘನೀಯವಾಗಿರುವುದು ನಮಗೆಲ್ಲ ಹೆಮ್ಮೆಯ ಸಂಗತಿ. ಇದರಿಂದ ಕರ್ನಾಟಕ ಇತಿಹಾಸ ಅಕಾದೆಮಿ ಹೇಗೆ ಸೇವೆ ಮಾಡುತ್ತಿದೆಯೆಂಬುದು ಮನದಟ್ಟಾಗುತ್ತದೆ. ಹಂಪಿಯಲ್ಲಿ ಆಗುತ್ತಿರುವ ಸೇತುವೆಯಂಥ ವಿಕೃತಿಯ ಬಗ್ಗೆ ಯುನೆಸ್ಕೋ ಸೂಚಿಸಿದ ಅಸಮಾಧಾನಕ್ಕೆ ದನಿಗೂಡಿಸಿ ನ್ಯಾಯಾಲಯದ ಕಟ್ಟೆ ಏರಿದ್ದು ಇದೇ ಅಕಾದೆಮಿ.

### ಆಗಬೇಕಾದ ಕಾರ್ಯಗಳು

ಕರ್ನಾಟಕದ ಅನೇಕ ಜಿಲ್ಲೆಗಳಲ್ಲಿ ವಸ್ತು ಸಂಗ್ರಹಾಲಯಗಳಿದ್ದು ಅಲ್ಲಿನ ಆಕರಗಳು ಇತಿಹಾಸ ಸಂಶೋಧನೆಗಳಿಗೆ ನಿಲುಕಲಾರದಂತಿವೆ. ಇವುಗಳಲ್ಲಿರುವ ಯಾದಿಗಳು ಸುಲಭವಾಗಿ ಕೈಗೆಟಕಲಾರದಂತಿವೆ. ಇದರ ನಿವಾರಣೆಗಾಗಿ ವೈಜ್ಞಾನಿಕ ರೀತಿಯಲ್ಲಿ ಸೂಚಿ (Catalogue) ಗಳನ್ನು ಸಿದ್ಧಪಡಿಸಿ ಸಂಶೋಧನೆಗೆ ದೊರಕಿಸಿ ಕೊಡುವ ವ್ಯವಸ್ಥೆ ಅಗತ್ಯ.

All India Museum Association ನಂತೆ ಕರ್ನಾಟಕ ಇತಿಹಾಸ ಅಕಾದೆಮಿ ಮಾರ್ಗದರ್ಶನದಲ್ಲಿ ವರ್ಷಕ್ಕೊಂದು ಬಾರಿ ವಿಚಾರ ಸಂಕಿರಣ ಏರ್ಪಡಿಸುವುದು ಅಗತ್ಯ. ಇದರಲ್ಲಿ ಸರಕಾರವು ಶಿಫಾರಸ್ಸು ಮಾಡಿ ಭಾರತದ ವಸ್ತುಸಂಗ್ರಹಾಲಯ ತಜ್ಞರೊಂದಿಗೆ ಸಮನ್ವಯದ ಮೂಲಕ ಎಲ್ಲ ವಸ್ತು ಸಂಗ್ರಹಾಲಯಗಳ ಅಭಿವೃದ್ಧಿಗೆ ಶ್ರಮಿಸುವುದು ಹಾಗೂ ಆಕರ ಸಂಗ್ರಹಣೆಗಳಿಗೆ ಯೋಗ್ಯ ಏರ್ಪಾಟು ಮಾಡುವುದು ಆಗಬೇಕು.

ಸರಕಾರದ ಖಜಾನೆಗಳಲ್ಲಿರುವ ಐತಿಹಾಸಿಕ ಆಭರಣೇತ್ಯಾದಿಗಳು ಕರಗಿಸುವುದರಿಂದಲೋ, ಇನ್ನಾವ ಕಾರಣದಿಂದಲೋ

ಕಣ್ಮರೆಯಾಗುತ್ತಿವೆ. ಇವುಗಳ ಯಾದಿಗಳನ್ನು ಗೌಪ್ಯವಾಗಿ ಸಿದ್ಧಪಡಿಸಿ, ಸುಭದ್ರ ರಕ್ಷಣೆ ನೀಡಿ ಸರಕಾರದ ಅನುಮತಿಯೊಂದಿಗೆ ಸಂಶೋಧನೆಗೆ ದೊರಕಿಸಿಕೊಡುವುದು, ಹಿಂದಿನ ಜೆಂದಿಗೆ ರಿಜಿಷ್ಟರುಗಳು ನಾಶವಾಗದಂತೆ ನೋಡಿಕೊಳ್ಳುವುದು ಅತ್ಯವಶ್ಯ.

ಕೆಳದಿ ಇತಿಹಾಸದ ಅಪಾರ ದಾಖಲೆಗಳು ದೇಶ ವಿದೇಶಗಳಲ್ಲಿ ವಿಪುಲವಾಗಿದ್ದು, ಇವುಗಳ ವೈಜ್ಞಾನಿಕ ರಕ್ಷಣೆ ಅಗತ್ಯ. ಅಪ್ರಕಟಿತ ಆಕರಗಳ ಸಲುವಾಗಿ ಕನಿಷ್ಠ ಪಕ್ಷ ಕ್ಯಾಟಲಾಗನ್ನು ಸಿದ್ಧಪಡಿಸಲು (ಉನ್ನತ ಅಧಿಕಾರಿಗಳ ಸಮಿತಿ ಸಭೆಯಲ್ಲಿ ಕೈಗೊಂಡ ತೀರ್ಮಾನದಂತೆ) ನಾನು ಸರಕಾರಕ್ಕೆ ಸಲ್ಲಿಸಿದ ವರದಿಯನ್ನು ಕೆಳದಿ ಸಂಶೋಧನಾಲಯದ ಮುಖಾಂತರ ಕಾರ್ಯಗತಗೊಳಿಸಲು ಸರಕಾರವನ್ನು ಒತ್ತಾಯಿಸುವುದು ಅಗತ್ಯ.

ಸರಕಾರವೇ ಮಂಜೂರು ಮಾಡಿದ ಕೆಳದಿ ರಾಣಿ ಚೆನ್ನಮ್ಮಾಜಿಯ ಪುತ್ಥಳಿಯನ್ನು ಶೀಘ್ರವಾಗಿ ಸ್ಥಾಪಿಸುವುದು, ಕೇರಳದ ಬೇಕಲ ಕೋಟೆಯಲ್ಲಿ ಕೆಳದಿ ಶಿವಪ್ಪನಾಯಕನ ಪುತ್ಥಳಿ ಸ್ಥಾಪಿಸುವುದು, ಕೆಳದಿ, ಇಕ್ಕೇರಿ, ನಗರ, ಕೌಲೇದುರ್ಗ, ಬೇಕಲಕೋಟೆಗಳನ್ನು ಪ್ರವಾಸೀ ಕೇಂದ್ರವಾಗಿ ಅಭಿವೃದ್ಧಿ ಪಡಿಸುವುದು, ಇವುಗಳಿಗೆ ಪ್ರವಾಸೀ ಮಾರ್ಗದರ್ಶಿಗಳನ್ನು ನೇಮಕ ಮಾಡುವುದು ಆಗಬೇಕಾದ ಕೆಲಸಗಳು.

ಕರ್ನಾಟಕ ಇತಿಹಾಸ ಅಕಾದೆಮಿಗೆ ರೈಲ್ವೆ ಬೋರ್ಡಿನವರು ಬರೆದ ಪತ್ರದಲ್ಲಿ ತಿಳಿಸಿದಂತೆ ಶಿವಮೊಗ್ಗ-ತಾಳಗುಪ್ಪ ಬ್ರಾಡ್‌ಗೇಜನ್ನು ಶೀಘ್ರವಾಗಿ ಕೈಗೊಳ್ಳುವಂತಾಗಬೇಕು.

ಶಿವಮೊಗ್ಗ ಜಿಲ್ಲೆಯಲ್ಲಿರುವ ಕಾಸರವಳ್ಳಿ ಪುರಾತನ ಮನೆ ಇತ್ಯಾದಿ ವಿಪುಲ ಸ್ಮಾರಕಗಳನ್ನು ಜಪಾನ್ ಸರಕಾರದ ನೀತಿ ನಿರೂಪಣೆಯಂತೆ ಕರ್ನಾಟಕದೆಲ್ಲೆಡೆಯೂ Heritage House ಆಗಿ ಪರಿವರ್ತಿಸಿ ಆಯಾ ವಂಶಿಕರಿಗೆ ರಕ್ಷಿಸಲು ಪ್ರೋತ್ಸಾಹಿಸಬೇಕು.

ಖ್ಯಾತ ಚಾರಿತ್ರಿಕ ಮನೆತನಗಳ ವಂಶಿಕರ ಗೃಹ-ನಿವೇಶನಗಳನ್ನು ಮುಂದಿನ ಪೀಳಿಗೆಗಾಗಿ ರಕ್ಷಿಸಬೇಕು.

ಕರ್ನಾಟಕ ಇತಿಹಾಸ ಅಕಾದೆಮಿಯಿಂದ ವರ್ಷಕ್ಕೊಂದು ಬಾರಿ ಸರ್ವೇಕ್ಷಣೆ ಪ್ರವಾಸ ಕೈಗೊಂಡು ಹೀನಸ್ಥಿತಿಯಲ್ಲಿರುವ ಪ್ರಾಚೀನ ಸ್ಮಾರಕಗಳ ವರದಿ ಸಿದ್ಧಪಡಿಸಿ, ಸರಕಾರಕ್ಕೆ ಸಲ್ಲಿಸುವಂತಾಗಬೇಕು.

ಪ್ರಾಚ್ಯ ವಸ್ತುಸಂಗ್ರಹಾಲಯದ ಕೇಂದ್ರ ಕಚೇರಿಯು ರಾಜಧಾನಿ ಪ್ರದೇಶದಲ್ಲಿರುವಂತೆ ಕೇಳಿಕೊಳ್ಳುವುದು. ಹಂಪೆ ಉತ್ಸವದಂತೆ ಕೆಳದಿ ಉತ್ಸವ ಕೈಗೊಳ್ಳುವಂತೆ ಒತ್ತಾಯಿಸುವುದು. ಅಥವಾ ಆಯಾ ಅರಸು ಮನೆತನಗಳ ಪರಂಪರೆಯ ಉತ್ಸವಗಳನ್ನು ಆಯಾ ಕೇಂದ್ರಗಳಲ್ಲಿ ಜರುಗಿಸಲು ಸರಕಾರವನ್ನು ಕೇಳಿಕೊಳ್ಳುವುದು.

ಪ್ರತೀ ಜಿಲ್ಲೆಗಳಲ್ಲಿಯೂ ಕನಿಷ್ಟಪಕ್ಷ ೨೦ ಜನರಿಗೆ ಕನ್ನಡ ಮೋಡಿ ಲಿಪಿ ತರಬೇತಿ ನೀಡುವುದು. ಇದರಿಂದ ಸರಕಾರ ಹಾಗೂ ನ್ಯಾಯಾಲಯಗಳಲ್ಲಿರುವ ದಾಖಲೆಗಳನ್ನು ಲಿಪ್ಯಂತರ ಕನ್ನಡೀಕರಣ ಮಾಡಲು ಅವಕಾಶವುಂಟಾಗುತ್ತದೆ.

ಐತಿಹಾಸಿಕ ತಾಣಗಳ ಬಗ್ಗೆ brochure ಸಿದ್ಧಪಡಿಸಿಕೊಡಲು ಸರಕಾರವು ಕರ್ನಾಟಕ ಇತಿಹಾಸ ಅಕಾದೆಮಿಯ ವಿದ್ವಾಂಸರ ಸಹಕಾರ ಪಡೆಯುವುದು ಅಗತ್ಯ.

ಪತ್ರಾಗಾರಗಳಲ್ಲಿರುವ ಆಕರಗಳು ಅಧ್ಯಯನಶೀಲರಿಗೆ ಸುಸೂತ್ರವಾಗಿ ಲಭಿಸಲು ಸರಕಾರವನ್ನು ಕೇಳಿಕೊಳ್ಳುವುದು. ವಸ್ತು ಸಂಗ್ರಹಾಲಯಗಳ ವಸ್ತುಗಳ ಕಂಪ್ಯೂಟರೀಕರಣಗೊಳ್ಳುವುದು ಅಗತ್ಯ.

ಉಚ್ಚ ನ್ಯಾಯಾಲಯದಲ್ಲಿರುವ ವಿಲ್ಸನ್ ಗ್ಲೋಸರಿ ನಿಘಂಟಿನ ಮಾದರಿಯಲ್ಲಿ ಚಾರಿತ್ರಿಕ ದಾಖಲೆಗಳ ಕ್ಲಿಷ್ಟಪದಗಳ ಅರ್ಥವನ್ನೊಳಗೊಂಡ ನಿಘಂಟನ್ನು ಸಿದ್ಧಪಡಿಸುವುದು.

ಕರ್ನಾಟಕ ಇತಿಹಾಸ, ಅದರಲ್ಲೂ ಕೆಳದಿ ಇತಿಹಾಸಾಧ್ಯಯನಕ್ಕೆ ಡಾ॥ ವಸಂತ ಮಾಧವ ಅವರ ಅಂಬೋಣದಂತೆ ವಿದೇಶೀಯ ಭಾಷೆಗಳೊಂದಿಗೆ ಮರಾಠಿ, ತಮಿಳು ಭಾಷಾಧ್ಯಾಯನವೂ ಅಗತ್ಯ. ಅದರಲ್ಲೂ ಬೆಳಕು ಕಾಣದಿರುವ ಡಚ್ ಭಾಷೆಯ ಆಕರಗಳು ದೆಹಲಿಯ ರಾಷ್ಟ್ರೀಯ ಪತ್ರಾಗಾರದಲ್ಲಿ (ಹಾಲೆಂಡ್‌ನಿಂದ ಸಂಗ್ರಹಿಸಿದ ಮಾಹಿತಿಗಳು) ಇವೆ. ಕನಿಷ್ಠ ಪಕ್ಷ ಈ ಭಾಷೆಯಲ್ಲಿ ಪರಿಣತಿ ಗಳಿಸಲು ವಿದ್ಯಾರ್ಥಿ ವೇತನದ ಅವಶ್ಯಕತೆಯಿದೆ. ಐಸಿಹೆಚ್‌ಆರ್‌ಈ ಬಗ್ಗೆ ಕ್ರಮ ಕೈಗೊಳ್ಳುವುದು ಅಗತ್ಯ.

ವಾರಾಣಸಿಯಲ್ಲಿರುವ ಕೆಳದಿ ಅರಸರ ಶಾಸನಗಳು ಹಾಗೂ ಅವಶೇಷಗಳನ್ನು ಮುಂದಿನ ಪೀಳಿಗೆಗೆ ರಕ್ಷಿಸುವುದು.

ಬೊಂಬಾಯಿ ವಿಶ್ವವಿದ್ಯಾಲಯದ ಗ್ರಂಥಭಂಡಾರದಲ್ಲಿರುವ ಅಲ್ವಾರಿಸ್ ಅವರ ಕೆಳದಿ ಇತಿಹಾಸದ ಅಪ್ರಕಟಿತ ಮಹಾಪ್ರಬಂಧದ ಕನ್ನಡ ಭಾಷಾಂತರದ ಅವಶ್ಯಕತೆ ಇದೆ.

ಸುಮಾರು ೩೦೦ ಶಾಸನಗಳನ್ನೊಳಗೊಂಡ ಗೋಕರ್ಣದ ಶಾಸನಗಳ ಪ್ರಕಟಣೆಯು ಆಗಬೇಕಾದ ಕೆಲಸ.

ಸದ್ಯಕ್ಕೆ ಇಷ್ಟಾದರೂ ಪ್ರಗತಿಯಾಗಲೆಂದು ಕೇಳಿಕೊಳ್ಳುವೆನು. ಸಮಯಾಭಾವದಿಂದ ಇಷ್ಟನ್ನು ಮಾತ್ರ ವಿವರಿಸಲಾಗಿದೆ. ಕುವೆಂಪು ಅವರೇ ಹೇಳಿದಂತೆ ಕರ್ನಾಟಕದ ಶಾಂತಿನಿಕೇತನವಾದ ಕೆಳದಿ ಸಂಶೋಧನಾಲಯವನ್ನು ಬಲಪಡಿಸಿ ತಮ್ಮೆಲ್ಲರನ್ನೂ ಈ ಕಾರ್ಯದಲ್ಲಿ ತೊಡಗಿಸಿಕೊಳ್ಳಬೇಕಾಗಿದೆ. ಈ ಕಾರಣದಿಂದ ತಮ್ಮಲ್ಲಿ ಕೆಳದಿ ಸಂಶೋಧನಾಲಯದ ನಮ್ರ ವಿನಂತಿ ಏನೆಂದರೆ ಈ ಸಂಶೋಧನಾ ಕೇಂದ್ರವನ್ನು ಈವರೆಗಿನ ಸಂಶೋಧನೆಗಳೊಂದಿಗೆ ನಿಮ್ಮ ಕೈಗೆ ಒಪ್ಪಿಸಲಾಗಿದೆ. ದಯಮಾಡಿ ಇವುಗಳನ್ನು ಜತನವಾಗಿ ನಿಮ್ಮದಾಗಿಸಿಕೊಂಡು ರಕ್ಷಿಸಿ, ಈ ಸಂಶೋಧನಾಲಯ ನೀಡುವ ಆಕರ, ಆದರಾತಿಥ್ಯವನ್ನು ಸ್ವೀಕರಿಸಿ, ನಮ್ಮ ಹಿರಿಯರ ಮನಸ್ಸಂತೋಷಪಡಿಸಿ ಕೆಳದಿ ಶ್ರೀ ರಾಮೇಶ್ವರನ ಪ್ರೀತಿಗೆ ಪಾತ್ರರಾಗಬೇಕಾಗಿ ಪ್ರಾರ್ಥಿಸಿಕೊಳ್ಳುವೆನು. ನನ್ನ ಭಾಷಣ ದೀರ್ಘವೆನಿಸಿದರೆ ಹಂಸಕ್ಷೀರ ನ್ಯಾಯದಂತೆ ಇದನ್ನು ಗಮನಿಸ ಬೇಕಾಗಿ ವಿನಂತಿಸುವೆನು.



# ಇತಿವೃತ್ತ

| | | |
|---|---|---|
| ಹೆಸರು | : | ಕೆಳದಿ ಗುಂಡಾ ಜೋಯಿಸ್ |
| ತಂದೆಯ ಹೆಸರು | : | ಕೆಳದಿ ನಂಜುಂಡ ಜೋಯಿಸ್ |
| ಜನ್ಮ ದಿನಾಂಕ | : | ೨೭.೯.೧೯೩೧ |
| ವಿದ್ಯಾರ್ಹತ | : | ಎಂ.ಎ(ಮೈಸೂರು ವಿಶ್ವವಿದ್ಯಾಲಯ), ವೇದಾಗಮ (ಕರ್ನಾಟಕ ಸರ್ಕಾರ) |
| ವಂಶ ಹಿನ್ನೆಲೆ | : | ಕನ್ನಡ ರತ್ನ, ಸಂಸ್ಕೃತ ಸಾಹಿತ್ಯ ಹಿಂದಿ ಪ್ರಬೋಧ (ಭಾರತ ಸರ್ಕಾರ) ವಿಜಯನಗರ ಅಚ್ಯುತದೇವರಾಯನ ಪೌರೋಹಿತರು ಕೆಳದಿ ಲಿಂಗಣ್ಣ ಕವಿ ಅನುಬಂಧಿ ಪೀಳಿಗೆಯವರು; ಕೆಳದಿ ರಾಜ್ಯ ಸ್ಥಾಪನೆಯಲ್ಲಿ ಪಾತ್ರವಹಿಸಿದವರಲ್ಲಿ ಇವರ ಪೂರ್ವಿಕರು ಒಬ್ಬರು. (ವೆಂಕಟಾದ್ರಿ ಜೋಯಿಸರು) |
| ಸಾಧನೆ; ಸ್ಥಾನ ಗೌರವಗಳು | : | Founder Secretary, Keladi Museum & H.R.B.; Member : Dept of Archives and Archaeology, High Power Committee, Mujaray, Dept.; Examiner, Kannada Sahitya Parishat; Translator, I.C.H.R.; Senior Research Fellow, Govt of India; Director, Kannada Modi lipi, Training schemes, Dept of Archives and Kannada & Culture Dept.; Survey Officer Shimoga Museum. ಈ ಹಿಂದೆ ಆ ಸರಕಾರಿ ಕೆಲಸಗಳಿಗೆ ರಾಜೀನಾಮೆ ಸಲ್ಲಿಸಿರುವೆನು. |
| ಸಂಶೋಧನ ಯೋಜನೆಗಳು | : | Historical Records-Survey Evaluation, Cataloagueging in the Parthagali Mutt, Goa, (Govt of Karnataka), Hubli 3000 Mutt (Govt of India), B.M.S. Foundation (Govt of India), Keladi Museum & H.R.B., (Govt of Karnataka) Tigalari Script : Govt of India Fellow ship and CIIL (Govt of India) - Others : Sringeri Mutt, Jain Literature Research Institute Bombay, Mantralayam (Andhra), Dharmasthala, Arya Akshobya Thirtha Mutt, Kashi Jangamavadi Mutt, Udupi Kashi Mutt (ಇವರು ತಾಡಪತ್ರ ಗ್ರಂಥತಜ್ಞ ಎಂಬ ಬಿರುದಿತ್ತು ಸನ್ಮಾನಿಸಿದ್ದಾರೆ), Archaeological Survey of India, Dept of Archaeology & Museums, Shri Vadiraj Mutt, Shri Swaranavalli Mutt, Shri Ramachandrapur Mutt, etc. |
| ಅಪರೂಪದ ಶೋಧಗಳು | : | (1) Aghoreshwara Shrine of Ikkeri ancient big sculpture (ಅದು ಈವರೆಗೂ ಲಭಿಸಿಲ್ಲ) according to Italian Travelogues A/C.<br>(2) Decipherment of ancient Tigalari Manuscripts.<br>(3) Inscriptions - unpublished in the gold and silver materials, Kalasa, Shankaranarayana, Kollur, Gadag, Sringeri Mutt etc.,<br>(4) The ancient Temple unit by Raja Rama S/o Shivaji (unnoticed)<br>(5) Tanjavoor Archaeological sources in the ancient palm leaf Mss.<br>(6) Documents of Kaveri rivers distribution in the Post Independence diary of the chief Eng. |

ಸಂಪ್ರಬಂಧ

ಸಾದರಪಡಿಸಿದ್ದು : (1) Archaeological Institute of America : our wealth of palm leaf manuscripts.
(2) AIMA - Mathura Delhi Organisational Problems of Small Museums in Karnataka.
(3) AIEC Calcutta - unpublished copper plate records of KELADI rulers.
(4) AIEC Aurangabad unpublished copper plate grant of Dharmasthala.
(5) AIEC Tanjavoor : Historical background of Tanjavoor in the Plam leaf Manuscripts World Sanskrit Conference South East Asia confeunce in Karnataka ದಲ್ಲಿ ಸುಮಾರು ೧೮೦ ಲೇಖನಗಳು, ಅಂಕಣಕಾರಿಕೆ, ಜನಪ್ರಗತಿ, ತಾಯಿನಾಡು, ಪ್ರಜಾಮತ, ಧರ್ಮಭಾರತಿ ೨೪೦ ಸುಮಾರು

ಪ್ರಕಟಿತ ಕೃತಿಗಳು : ಸುಮಾರು ೨೮. ತಮಿಳುನಾಡಿನ ಕನ್ನಡ ಮಂತ್ರಿ ಗೋವಿಂದ ದೀಕ್ಷಿತನ ಕುರಿತು ವಿವರಗಳು ನನ್ನ ಪ್ರಕಟಿತ ಕೃತಿಯಲ್ಲಿ ಕೊನೆ ಪುಟದಲ್ಲಿದೆ.

ಪ್ರಶಸ್ತಿಗಳು ಮತ್ತು

ಸನ್ಮಾನಗಳು : ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಒದಗಿದೆ; ಸರ್ವೋಚ್ಚ ನ್ಯಾಯಮೂರ್ತಿಗಳೊಂದಿಗೆ ಟೌನ್ ಹಾಲ್‌ನಲ್ಲಿ ಇತ್ಯಾದಿ ೨೮ ಸನ್ಮಾನಗಳು ನಡೆದಿವೆ. ಅಭಿನಂದನಾ ಗ್ರಂಥ ಸಮರ್ಪಿತವಾಗಿದೆ; ತಮಿಳುನಾಡಿಗೆ ಸರಕಾರದ ಪರವಾಗಿ ಸಾಂಸ್ಕೃತಿಕ ನಿಯೋಗ ಹೋಗಿಬಂದಿದ್ದು ಆಗಿದೆ.

ಇತರೆ : ಸರಕಾರಿ ಸಿಬ್ಬಂದಿಗಳಿಗೆ ಪ್ರತಿ ಸಾಲಿನಲ್ಲಿಯೂ ಕನ್ನಡ ಮೋಡಿ ಲಿಪಿ ತರಬೇತಿಯಿತ್ತಿದ್ದು ಸುಮಾರು ೫ ವರ್ಷ ೫೦ ದಿನಗಳು.

ಧಾರ್ಮಿಕ,

ಸಾಮಾಜಿಕ ಸೇವೆ : ಕೆಳದಿ ದೇವಸ್ಥಾನ ಜೀರ್ಣೋದ್ಧಾರ, ಟಾರ್ ರಸ್ತೆ ನಿರ್ಮಾಣ; ಅಂಗವಿಕಲರಿಗೆ ಸರಕಾರದಿಂದ ಮಾಸಾಶಸನ ಮಂಜೂರು ಮಾಡಿಸಿದ್ದು; ಮನೆ ಸುಟ್ಟುಹೋಗಿದ್ದ ಗ್ರಾಮದ ರೈತರುಗಳಿಗೆ ಸರಕಾರದಿಂದ ಮನೆ ನಿರ್ಮಿಸಿ ಕೊಟ್ಟಿದ್ದು; ಹಳ್ಳಿಗಳಿಗೆ ಸರಕಾರದಿಂದ ಸರಕಾರಿ ಪ್ರೌಢಶಾಲೆ ಮಂಜೂರು ಮಾಡಿಸಿದ್ದು; ಕೆಳದಿ ರಾಣಿ ಚೆನ್ನಮ್ಮಾಜಿ ಪುತ್ಥಳಿ ಮಂಜೂರು ಮಾಡಿಸಿದ್ದು; ಬೇಕಲಕೋಟೆ ಪ್ರವಾಸೋದ್ದಿಮೆ, ಕೆಳದಿ ಪ್ರವಾಸೀ ಕೇಂದ್ರ, ದಾನಿಗಳ ಮುಖಾಂತರ ದೇವಾಲಯ ಜೀರ್ಣೋದ್ಧಾರ ಮಾಡಿಸಿದ್ದು; ಹೊನಲು ಯೋಜನೆ ಮಂಜೂರು ಮಾಡಿಸಿದ್ದು; ಕೆಳದಿ ರಾಣಿ ಚೆನ್ನಮ್ಮಾಜಿ ತ್ರಿಶತಮಾನೋತ್ಸವಾಚರಣೆ ಕೆಳದಿ; ಇಕ್ಕೇರಿ ಚೆನ್ನಗಿರಿ, ಶಿವಮೊಗ್ಗ, ನಿರುದ್ಯೋಗಿಗಳಿಗೆ ಉದ್ಯೋಗ ಕೊಡಿಸಿದ್ದು; ಸುಮಾರು ೬ ಹಲವು ಪುರಾತನ ಅವಶೇಷಗಳ ಜೀರ್ಣೋದ್ಧಾರ ಇತ್ಯಾದಿ.



ಡಾ. ಬಾ.ರಾ. ಗೋಪಾಲ್ ಪ್ರಶಸ್ತಿ ಪುರಸ್ಕೃತ
ಡಾ. ಬಿ. ರಾಜಶೇಖರಪ್ಪ ಅವರ ವಿಶೇಷ ದತ್ತಿ ಉಪನ್ಯಾಸ

# ಶಾಸನಗಳ ಅನ್ವೇಷಣೆ ಮತ್ತು ಪುನರ್ ಪರಿಶೀಲನೆ

ಕರ್ನಾಟಕ ಇತಿಹಾಸ ಅಕಾದೆಮಿಯ ೨೯ನೇ ಸಮ್ಮೇಳನದ ಅಧ್ಯಕ್ಷರಾದ ಶ್ರೀ ಕೆಳದಿ ಗುಂಡಾ ಜೋಯಿಸ್ ಅವರೆ, ಅಕಾದೆಮಿಯ ಅಧ್ಯಕ್ಷರೂ ಪ್ರಸ್ತುತ ಪ್ರಶಸ್ತಿ ದತ್ತಿ ಉಪನ್ಯಾಸ ಕಾರ್ಯಕ್ರಮದ ಅಧ್ಯಕ್ಷರೂ ಆದ ಡಾ. ಸೂರ್ಯನಾಥ ಕಾಮತ್ ಅವರೆ, ಇತಿಹಾಸ ಅಕಾದೆಮಿಯ ಎಲ್ಲ ಪದಾಧಿಕಾರಿಗಳೆ, ಅಕಾದೆಮಿಯ ಎಲ್ಲ ಹಿರಿಯ ಕಿರಿಯ ಸದಸ್ಯ ಮಿತ್ರರೆ, ಎಲ್ಲ ಇತಿಹಾಸ ಪ್ರೇಮಿಗಳೆ,

ಅಕಾದೆಮಿಯ ವಾರ್ಷಿಕ ಸಮ್ಮೇಳನದಲ್ಲಿ ಪಾಲ್ಗೊಳ್ಳುವುದೇ ನನಗೊಂದು ಹರ್ಷದ ಸಂಗತಿ. ಅದರಲ್ಲಿ ಈ ಬಾರಿ, ಹಿರಿಯ ಶಾಸನ ತಜ್ಞರಾಗಿದ್ದ ಡಾ. ಬಾ.ರಾ. ಗೋಪಾಲ್ ಅವರ ಹೆಸರಲ್ಲಿ ಅಕಾದೆಮಿಯು ನನಗೆ ಪ್ರಶಸ್ತಿ ನೀಡಿರುವುದು ನನ್ನ ಹರ್ಷವನ್ನು ಇಮ್ಮಡಿಸಿದೆ. ಹಿಂದೆ ಈ ಪ್ರಶಸ್ತಿ: ಡಾ. ಕೆ.ವಿ. ರಮೇಶ್, ಡಾ. ಶ್ರೀನಿವಾಸ ರಿತ್ತಿ, ಇಂಥ ಹಿರಿಯರಿಗೆ ಸಂದಿದೆ. ಇಂಥ ಪ್ರಶಸ್ತಿಗೆ ನಾನು ಎಷ್ಟು ಮಾತ್ರಕ್ಕೆ ಅರ್ಹನೋ ನನಗೆ ತಿಳಿಯದು. ಈ ಪ್ರಶಸ್ತಿಯನ್ನು ನಾಡಿನ ಹಿರಿಯ ಶಾಸನ ತಜ್ಞರ ಗೌರವ ಸ್ಮರಣೆಯೊಂದಿಗೆ, ತುಂಬು ಕೃತಜ್ಞತೆಯಿಂದ, ಅಷ್ಟೇ ವಿನಮ್ರತೆಯಿಂದ ನಾನು ಇಂದು ಸ್ವೀಕರಿಸಿದ್ದೇನೆ.

ಈ ಪ್ರಶಸ್ತಿಗೆ ನನ್ನನ್ನು ಆಯ್ಕೆ ಮಾಡಿದ ಅಕಾದೆಮಿಯ ಅಧ್ಯಕ್ಷರಿಗೆ; ಎಲ್ಲ ಪದಾಧಿಕಾರಿಗಳಿಗೆ, ಕಾರ್ಯಕಾರಿ ಸಮಿತಿಯ ಎಲ್ಲ ಸದಸ್ಯರಿಗೆ, ಡಾ. ಬಾ.ರಾ. ಗೋಪಾಲ್ ಅವರಿಗೆ ಪ್ರಿಯವಾಗಿದ್ದ ಶಾಸನ ಕ್ಷೇತ್ರದ ಸಂಶೋಧನೆ ಸಾಧನೆಗೆಂದೇ ಈ ವಿಶೇಷ ಪ್ರಶಸ್ತಿ ಸ್ಥಾಪನೆ ಮಾಡಿರುವ ಅವರ ಕುಟುಂಬದ ಎಲ್ಲ ಸದಸ್ಯರಿಗೆ, ನನ್ನ ತುಂಬು ಹೃದಯದ ಕೃತಜ್ಞತೆಗಳು. ಈ ಪ್ರಶಸ್ತಿ ಕೇವಲ ನನಗಷ್ಟೇ ಅಲ್ಲ, ನಾನು ಈ ಕ್ಷೇತ್ರದಲ್ಲಿ ಕೆಲಸ ಮಾಡಲು ಕಾರಣರಾದ ನನ್ನ ಎಲ್ಲ ಹಿತೈಷಿಗಳಿಗೂ ಸಲ್ಲುತ್ತದೆ.

ನನ್ನ ಎಲ್ಲ ವಿದ್ಯಾಗುರುಗಳು, ಮಿತ್ರರು, ನನ್ನ ಹುಟ್ಟೂರಿನ ಹಿರಿಯರು, ನನ್ನ ಅಣ್ಣ, ನನ್ನ ಪತ್ನಿ ಮತ್ತು ಮಕ್ಕಳು, ನನ್ನ ಬಂಧುಗಳು, ವಿದ್ಯಾರ್ಥಿಗಳು, ನನ್ನ ಕಾಲೇಜು ಶಿಕ್ಷಣ ಇಲಾಖೆಯ ಎಲ್ಲ ಹಿತೇಚ್ಛುಗಳು, ನನ್ನ ಸಂಶೋಧನ ಕೃತಿಗಳು ಪ್ರಕಟವಾಗಲು ಕಾರಣರಾದ ಪ್ರಿಯಮಿತ್ರ ಡಾ. ಮೀರಾಸಾಬಿಹಳ್ಳಿ ಶಿವಣ್ಣ, ಅವನ್ನು ಪ್ರಕಟಿಸಿದ ಪ್ರೊ|| ಎನ್. ಬಸವರಾಧ್ಯರು, ಶ್ರೀ ಸಿವಿಜಿ ಚಂದ್ರು ಹಾಗೂ ಶ್ರೀಮತಿ ಗಿರಿಜಾಚಂದ್ರು, ಶ್ರೀ ನಾ. ಪ್ರಭಾಕರ್, ನನ್ನ ಸಂಶೋಧನೆಯ ಬಗ್ಗೆ ಪ್ರೀತಿ ಅಭಿಮಾನಗಳನ್ನು ತೋರಿದ ಚಿತ್ರದುರ್ಗದ ಶ್ರೀ ಬೃಹನ್ಮಠದ ಹಿಂದಿನ ಮತ್ತು ಇಂದಿನ ಪೂಜ್ಯ ಜಗದ್ಗುರುಗಳು, ಶ್ರೀಮಠದ ಆಡಳಿತಾಧಿಕಾರಿ ಶ್ರೀ ಎಸ್.ಕೆ. ಬಸವರಾಜನ್, ಶ್ರೀ ಪಿ.ಆರ್. ವೀರಭದ್ರನಾಯಕರೇ ಮೊದಲಾದ ಚಿತ್ರದುರ್ಗದ ಎಲ್ಲ ರಾಜವಂಶಸ್ಥರು, ನನ್ನ ಬಹುವರ್ಷಗಳ ಸಂಶೋಧನ ಒಡನಾಡಿ ಶ್ರೀ ಟಿ.ಎನ್. ಮಂಜಣ್ಣ, ನನ್ನ ಸಂಶೋಧನೆಗೆ ಉತ್ತೇಜಿಸಿದ ಡಾ. ಎಂ. ಚಿದಾನಂದಮೂರ್ತಿ, ಡಾ. ಎಂ.ಎಂ. ಕಲಬುರ್ಗಿ, ಡಾ. ಎನ್. ಎಸ್. ತಾರಾನಾಥ, ಡಾ. ವೀರಣ್ಣ ರಾಜೂರ, ಡಾ. ಎ. ಮುರಿಗೆಪ್ಪ, ಡಾ. ಬಿ.ಆರ್. ಹಿರೇಮಠ, ಡಾ. ಬಿ. ನಂಜುಂಡಸ್ವಾಮಿ, ಡಾ. ಸಿ.ಪಿ. ನಾಗರಾಜ, ಶ್ರೀ ಜಿ.ಎಸ್. ಉಜ್ಜನಪ್ಪ, ಶ್ರೀ ಜೆ. ಬಸವರಾಜಪ್ಪ, ಶ್ರೀ ಎಸ್.ಸಿ. ಮಹಾರುದ್ರಪ್ಪ ಹಾಗೂ ಶ್ರೀ ಎ. ರುದ್ರಪ್ಪ ಮೊದಲಾದ ಚಿತ್ರದುರ್ಗದ ಪತ್ರಕರ್ತ ಮಿತ್ರರು ಅವರೆಲ್ಲರಿಗೂ ನನ್ನ ತುಂಬು ಕೃತಜ್ಞತೆಗಳು.

ಪ್ರಸ್ತುತ ಪ್ರಶಸ್ತಿ ಈ ಕ್ಷೇತ್ರದಲ್ಲಿ ನಾನು ಕೆಲಸ ಮಾಡುವಲ್ಲಿ ನನ್ನ ಜವಾಬ್ದಾರಿಯನ್ನು ಅಕ್ಷರಶಃ ಹೆಚ್ಚಿಸಿದೆ; ನಾನು ಮುಂದೆ ಇನ್ನಷ್ಟು ಕ್ರಿಯಾಶೀಲತೆಯಿಂದ ಕೆಲಸ ಮಾಡಲು, ಈ ಪ್ರಶಸ್ತಿಯ ಮೂಲಕ ಅಕಾದೆಮಿ ಮತ್ತು ಈ ಪ್ರಶಸ್ತಿ ಸ್ಥಾಪಕರು, ನನ್ನಲ್ಲಿ ಹೆಚ್ಚಿನ ಪ್ರೇರಣೆಯುಂಟು ಮಾಡಿದ್ದಾರೆ; ಎಂದು ಭಾವಿಸುತ್ತೇನೆ. ಅದಕ್ಕಾಗಿ ಅವರೆಲ್ಲರಿಗೆ ಮತ್ತೊಮ್ಮೆ ನನ್ನ ಹಾರ್ದಿಕ ಕೃತಜ್ಞತೆಗಳು.

ನಾನು ಮೂಲತಃ ಇತಿಹಾಸದ ವಿದ್ಯಾರ್ಥಿಯಲ್ಲ, ಸಾಹಿತ್ಯದ ವಿದ್ಯಾರ್ಥಿ. ಹಾಗೆ ನೋಡಿದರೆ ನನ್ನ ಪದವಿ ವಿಜ್ಞಾನ ವಿಷಯಗಳ ಪದವಿ; ಅದಾದ ಮೇಲೆ ಕನ್ನಡದಲ್ಲಿ ಸ್ನಾತಕೋತ್ತರ ಪದವಿ, ಸಾಹಿತ್ಯದ ಅಧ್ಯಯನ, ಅಧ್ಯಾಪನ, ಕವನ ರಚನೆ, ವಿಮರ್ಶೆ, ಭಾಷಾ-ವಿಜ್ಞಾನ-ಇವುಗಳಲ್ಲಿ ಆಸಕ್ತನಾಗಿದ್ದ ನಾನು ಶಾಸನ ಸಂಶೋಧನೆಯ ಕಡೆಗೆ ತಿರುಗಿದ್ದು ಒಂದು ಆಕಸ್ಮಿಕ. ಕಾಲೇಜಿನಲ್ಲಿ ಬಿಎಸ್ಸಿ ಓದುತ್ತಿರುವಾಗಲೇ ಸಾಹಿತ್ಯದ ಕಡೆಗೆ ಆಕರ್ಷಿತನಾದ ನಾನು ಕನ್ನಡ ಎಂ.ಎ. ಓದಿ, ಕನ್ನಡ ಅಧ್ಯಾಪಕನಾಗಿ ಚಿತ್ರದುರ್ಗದ ಸರ್ಕಾರಿ ಕಾಲೇಜಿಗೆ ಬರುವ ಹೊತ್ತಿಗೆ ಚಿತ್ರದುರ್ಗದ ಬಗ್ಗೆ ತರಾಸು ಅವರು ಬರೆದಿದ್ದ ಕಾದಂಬರಿಗಳು, ನನ್ನ ಮನಸ್ಸನ್ನು ಸೂರೆ ಮಾಡಿದ್ದವು. ಕನ್ನಡ ದ್ವಿತೀಯ ಎಂ.ಎ. ವಿದ್ಯಾರ್ಥಿಯಾಗಿದ್ದಾಗಲೇ 'ತರಂಗ' ಎಂಬ ಹೆಸರಿನ ನನ್ನ ಕವನ ಸಂಕಲನವೊಂದು ಪ್ರಕಟವಾಗಿತ್ತು; ವಿಮರ್ಶಕರ ಮೆಚ್ಚುಗೆಯನ್ನು ಗಳಿಸಿತ್ತು. ತರಾಸು ಕಾದಂಬರಿಗಳ ಗುಂಗು ಮತ್ತು ದುರ್ಗದ ರುದ್ರರಮ್ಯ ನಿಸರ್ಗ ಇನ್ನಷ್ಟು ಕವನ ಇತ್ಯಾದಿಗಳಿಗೆ ನನಗೆ ಪ್ರೇರಣೆಯಾಗಬಹುದೆನ್ನಿಸಿತ್ತು. ಆದರೆ ನನ್ನ ದಾರಿಯೇ ಬೇರೆಯಾಯಿತು.

ಚಿತ್ರದುರ್ಗವು ಐತಿಹಾಸಿಕ ಸಾಂಸ್ಕೃತಿಕ ವಿಷಯದಲ್ಲಿ ಸಂಪದ್ಭರಿತವಾದ ಗಣಿ. ಅದು ಹಲವರನ್ನು ಹಲವು ರೀತಿಯಲ್ಲಿ

ಆಕರ್ಷಿಸಿದೆ. ಅಂಥವರಲ್ಲಿ ನಾನೂ ಒಬ್ಬ. ನನ್ನ ಹುಟ್ಟೂರಾದ ದಾವಣಗೆರೆ ಜಿಲ್ಲೆಯ ಹರಿಹರ ತಾಲ್ಲೂಕಿನ ಕೊಕ್ಕನೂರಿನ ಬಳಿಯ ಹೊಲವೊಂದರಲ್ಲಿ ಬಿದ್ದಿದ್ದ, 'ಬಿದ್ದಕಲ್ಲು' ಎಂದೇ ಕರೆಯುತ್ತಿದ್ದ ವೀರಗಲ್ಲೊಂದರ ಮೇಲಿನ ಪ್ರಾಚೀನ ಲಿಪಿ, ಬಾಲ್ಯಕಾಲದಿಂದ ಒಂದು ಒಗಟಾಗಿ ನನ್ನನ್ನು ಕಾಡುತ್ತಿತ್ತು. ಇದೀಗ ದುರ್ಗಕ್ಕೆ ಬಂದ ಮೇಲೆ ಇಲ್ಲಿಯ ಶಿಲಾಶಾಸನಗಳು ಪ್ರಾಚೀನ ಲಿಪಿಯ ಬಗೆಗಿನ ನನ್ನ ಕುತೂಹಲವನ್ನು ಹೆಚ್ಚಿಸುತ್ತಿದ್ದವು. ದುರ್ಗದಲ್ಲಿ ನಡೆದ ಪುಸ್ತಕ-ಪ್ರದರ್ಶನವೊಂದಲ್ಲಿ ನನ್ನ ಶ್ರೀಮತಿಯ ಕಣ್ಣಿಗೆ ಬಿದ್ದ (ಶ್ರೀ ಟಿ.ಎಸ್. ರಾಜಗೋಪಾಲ್ ಅವರು ಬರೆದ) 'ಕನ್ನಡ ಲಿಪಿಯ ಹುಟ್ಟು ಮತ್ತು ಬೆಳವಣಿಗೆ' ಎಂಬ ಚಿಕ್ಕ ಪುಸ್ತಕವೊಂದು, ಪುರಾತನ ಲಿಪಿಯ ಬಗೆಗಿನ ನನ್ನ ಕುತೂಹಲವನ್ನು ಕಲಿಕೆಯತ್ತ ತಿರುಗಿಸಿತು. ಅದು, ಅದಾದ ಮೇಲೆ ಡಾ. ಎ.ವಿ. ನರಸಿಂಹಮೂರ್ತಿ, ಶ್ರೀ ಸಿ. ಶಿವರಾಮಮೂರ್ತಿ ಹೀಗೆ ಬೇರೆ ಬೇರೆಯವರು ಬರೆದ ಇನ್ನು ಕೆಲವು ಪುಸ್ತಕಗಳನ್ನು ನೋಡುತ್ತ, ಶಾಸನಲಿಪಿಯ ನನ್ನ ಕಲಿಕೆ ಮುಂದುವರಿಯಿತು.

ಆ ಹೊತ್ತಿಗಾಗಲೇ, ಡಾ. ಎಂ. ಚಿದಾನಂದಮೂರ್ತಿ ಅವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಮತ್ತು ಇವರ ಬರಹಗಳು ಹಾಗೂ ಡಾ. ಎಂ.ಎ. ಕಲಬುರ್ಗಿ ಅವರ 'ಶಾಸನ ವ್ಯಾಸಂಗ' ಮತ್ತಿತರ ಬರಹಗಳು, ಅವರಿಬ್ಬರಿಗೆ ಪತ್ರಿಕೆಗಳಲ್ಲಿ ಆಗಾಗ ನಡೆಯುತ್ತಿದ್ದ 'ವಿದ್ವತ್ ಸಮರ', ನನ್ನನ್ನು ಸಂಶೋಧನ ಕ್ಷೇತ್ರದತ್ತ ಸೆಳೆದಿದ್ದುವು. ಇದರ ಜೊತೆಗೆ ನನ್ನ ಹಿರಿಯ ಸಹೋದ್ಯೋಗಿಯೂ ಇತಿಹಾಸ ವಿದ್ವಾಂಸರೂ ಆದ ಡಾ. ಎಂ.ವಿ. ಶ್ರೀನಿವಾಸ್ ಅವರ ಸಂಪರ್ಕ, ಶಾಸನ ಮತ್ತು ಇತಿಹಾಸ ಕ್ಷೇತ್ರಗಳ ನನ್ನ ಆಸಕ್ತಿಯನ್ನು ಮತ್ತಷ್ಟು ತೀವ್ರಗೊಳಿಸಿತು. ನಂತರದ ಕಾಲದಲ್ಲಿ, ಚಿತ್ರದುರ್ಗ ಇತಿಹಾಸದ ಬಗ್ಗೆ ಕೆಲಸ ಮಾಡುತ್ತಿದ್ದ ಶ್ರೀ ಲಕ್ಷ್ಮಣ್ ತೆಲಗಾವಿ ಅವರು ಮತ್ತು ಇನ್ನು ಕೆಲವರು ಮಿತ್ರರು ಬೇರೆ ಬೇರೆ ಸಂಪುಟಗಳಿಗೆ ಸಂಶೋಧನ ಲೇಖನಗಳನ್ನು ಬರೆಯಲು ನನ್ನನ್ನು ಉತ್ತೇಜಿಸಿದರು. ಅವರಿಬ್ಬರೂ ಸೇರಿ ಹೊರತಂದ 'ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು' ಎಂಬ ಸಂಪುಟದ ಲೇಖನಗಳು, ಚಿತ್ರದುರ್ಗದ ಬಗೆಗಿನ ನನ್ನ ಕುತೂಹಲ ವನ್ನು ದ್ವಿಗುಣಗೊಳಿಸಿದುವು. ಇಂಥ ಹಿನ್ನೆಲೆ ಹಾಗೂ ಕುತೂಹಲ ದಿಂದ ಪ್ರಾರಂಭವಾದ ಶಾಸನಲಿಪಿಯ ಕಲಿಕೆ, ಚಿತ್ರದುರ್ಗದ ಬಗೆಗಿನ ಅಧ್ಯಯನ ಹಾಗೂ ಕ್ಷೇತ್ರ ಕಾರ್ಯ, ನನಗೆ ಅರಿವಿಲ್ಲದಂತೆಯೇ ವಿಸ್ತಾರವಾದ ಜಗತ್ತಿಗೆ ನನ್ನನ್ನು ಕೊಂಡೊಯ್ದಿದ್ದುವು. ದುರ್ಗದ ಬಾಹ್ಯ ನಿಸರ್ಗದ ಕಡೆಗಿದ್ದ ನನ್ನ ದೃಷ್ಟಿ ಇಲ್ಲಿಯ ಕಲ್ಬರಹಗಳು, ಪ್ರಾಚ್ಯಾವಶೇಷಗಳು ಮತ್ತು ಇತಿಹಾಸದ ಆಕರಗಳ ಕಡೆ ಹರಿಯಿತು. ಅವೆಲ್ಲವೂ ಆಪ್ತವಾಗಿ ತಮ್ಮ ಆತ್ಮಕಥನವನ್ನು ನನ್ನ ಅಂತರಂಗಕ್ಕೆ ಹೇಳುವಂತೆ ಭಾಸವಾಯಿತು. ಹೀಗಾಗಿ ಸಾಹಿತ್ಯ ಜಗತ್ತಿನ ಕಡೆಗಿನ ನನ್ನ ಹೆಜ್ಜೆಗಳು ಸಂಶೋಧನ ಜಗತ್ತಿನ ಕಡೆಗೆ ಸೆಳೆಯಲ್ಪಟ್ಟುವು.

ಶಾಸನಗಳ ನನ್ನ ಕಲಿಕೆ, ಅನ್ವೇಷಣೆಗೆ ಮುಂದುವರಿಯಿತು. ಹಳೆಯ ಚಿತ್ರದುರ್ಗ ಜಿಲ್ಲೆಯಲ್ಲಿ ಶ್ರೀ ಬಿ.ಎಲ್. ರೈಸ್ ಅವರು ೬೫೦ಕ್ಕೂ ಹೆಚ್ಚು ಶಾಸನಗಳನ್ನು ಓದಿ ಪ್ರಕಟಿಸಿದ್ದರು. ಅವರ ತರುವಾಯ ಆರ್. ನರಸಿಂಹಾಚಾರ್, ಡಾ. ಎಂ.ಎಚ್. ಕೃಷ್ಣ, ಡಾ. ಎಂ. ಶೇಷಾದ್ರಿ ಮತ್ತು ಈ ಕಾಲದ ಕೆಲವರು ಎಲ್ಲಾ ಸೇರಿ ಸುಮಾರು ೫೦ರಷ್ಟು ಶಾಸನಗಳನ್ನು ಬೆಳಕಿಗೆ ತಂದಿದ್ದರು. ೧೯೮೧ರಿಂದ ಈವರೆಗೆ, ಹಳೆಯ ಚಿತ್ರದುರ್ಗ ಜಿಲ್ಲೆಯ ವ್ಯಾಪ್ತಿ ಯಲ್ಲಿ, ಮೇಲ್ಕಂಡ ಮಹನೀಯರಿಗೆ ಸಿಕ್ಕಿರದ ಸುಮಾರು ೪೦೦ ರಷ್ಟು ಶಾಸನಗಳು ನನ್ನ ಅನ್ವೇಷಣೆಯಲ್ಲಿ ದೊರೆತಿವೆ ಎಂಬ ಸಂಗತಿಯನ್ನು ವಿನಮ್ರವಾಗಿ ತಿಳಿಸಲಿಚ್ಛಿಸುತ್ತೇನೆ. ಶಾಸನದ ಲಿಪಿ ಅಧ್ಯಯನ ಕುರಿತಂತೆ ಈ ಕ್ಷೇತ್ರದಲ್ಲಿ ನಾನು ಕಂಡುಕೊಂಡ ಅಥವಾ ನನ್ನ ಅನುಭವಕ್ಕೆ ಬಂದ ಕೆಲವು ಅಂಶಗಳ ಬಗ್ಗೆ ಇಲ್ಲಿ ಕೆಲವು ಮಾತುಗಳನ್ನು ನಾನು ಆಡಬೇಕಾಗಿದೆ.

ಯಾವುದೇ ಶಾಸನದ ಶೋಧದಿಂದ ನಮ್ಮ ಜ್ಞಾನದ ವಲಯ ವಿಸ್ತಾರಗೊಳ್ಳುವುದಕ್ಕೆ ಸಹಾಯವಾಗುತ್ತದೆ ಎಂಬುದನ್ನು ವಿವರಿಸ ಬೇಕಾಗಿಲ್ಲ. ಅದರಂತೆ ನಾನು ಕೈಕೊಂಡ ಶಾಸನ ಕುರಿತ ಅನ್ವೇಷಣೆ, ಸಂಶೋಧನೆ, ಪ್ರಧಾನವಾಗಿ ಚಿತ್ರದುರ್ಗ ಜಿಲ್ಲೆಯದಾದರೂ, ಅವು ಈ ಜಿಲ್ಲೆಯ ಗಡಿಯನ್ನು ದಾಟಿ ತುಮಕೂರು, ಕೊಪ್ಪಳ, ದಾವಣಗೆರೆ ಹೀಗೆ ಬೇರೆ ಜಿಲ್ಲೆಗಳನ್ನೂ ಒಳಗೊಂಡಿದ್ದು, ಹೊಸ ದಾಗಿ ದೊರೆತ ಶಾಸನಗಳಿಂದ ದುರ್ಗ ಮತ್ತು ಬೇರೆ ಭಾಗಗಳ ಇತಿಹಾಸ ಮತ್ತಷ್ಟು ಸ್ಫುಟಗೊಳ್ಳಲು ಸಹಾಯವಾಗಿದೆ. ಹೊಸದಾಗಿ ದೊರೆತವುಗಳಷ್ಟೇ ಅಲ್ಲ, ಬೇರೆಯ ಶಾಸನ ತಜ್ಞರಿಂದ ಪ್ರಕಟವಾಗಿ ರುವ ಶಾಸನಗಳ ಮರುಪರಿಶೀಲನೆಯಿಂದ, ಇತಿಹಾಸದಲ್ಲಿ ವ್ಯತ್ಯಾಸಗೊಂಡಿದ್ದ ಕೆಲವು ಸಂಗತಿಗಳು, ಎರವಾಗಿದ್ದ ಸಂಗತಿಗಳು, ನುಣುಚಿಕೊಂಡಿದ್ದ ಸಂಗತಿಗಳು, ಕೈಗೆಟುಕಿ, ಇತಿಹಾಸಕ್ಕೆ ನ್ಯಾಯ ದೊರೆಯಲು ಸಾಧ್ಯವಾಗಿದೆ, ಎಂದರೆ ಉತ್ಪ್ರೇಕ್ಷೆಯಾಗದೆಂದು ಭಾವಿಸುತ್ತೇನೆ. ಚಂದ್ರವಳ್ಳಿ ಶಾಸನದ ವಿಷಯವಾಗಿ ಈಗಾಗಲೇ ನಾನು ವಿವರವಾದ ಲೇಖನ ಪ್ರಕಟಿಸಿರುವೆನಾದರೂ, ಮತ್ತೊಮ್ಮೆ ಸಂಕ್ಷಿಪ್ತವಾಗಿ ಅದರ ಬಗ್ಗೆ ಮತ್ತು ಇನ್ನು ಕೆಲವು ಶಾಸನಗಳ ಬಗ್ಗೆ ಇಲ್ಲಿ ಪ್ರಸ್ತಾಪಿಸುತ್ತೇನೆ :

ಡಾ. ಎಂ.ಎಚ್. ಕೃಷ್ಣ ಅವರು ೧೯೨೯ರಷ್ಟು ಹಿಂದೆಯೇ ಬೆಳಕಿಗೆ ತಂದಿದ್ದ ಪ್ರಸಿದ್ಧವಾದ ಕದಂಬರ ಮಯೂರವರ್ಮನ ಚಂದ್ರವಳ್ಳಿ ಶಾಸನ ಅವರ ಓದಿಕೆಯ ರೀತ್ಯಾ ಪ್ರಾಕೃತ ಭಾಷೆಯ ದೆಂದೂ, ಅವನು ಅನೇಕ ರಾಜ್ಯಗಳನ್ನು ಗೆದ್ದು ಇಲ್ಲಿ ಒಂದು ಕೆರೆಯನ್ನು ನಿರ್ಮಿಸಿದ್ದನೆಂದೂ ಸ್ವೀಕೃತವಾಗಿತ್ತು. ಆದರೆ ೧೯೮೪ ರಲ್ಲಿ ನಾನು ಕೈಕೊಂಡ ಪುನರ್‌ಪರಿಶೀಲನೆಯಲ್ಲಿ ಅದು ಈವರೆಗೆ ತಿಳಿದಿದ್ದಂತೆ ಪ್ರಾಕೃತ ಭಾಷೆಯದಿರದೆ ಸಂಸ್ಕೃತ ಭಾಷೆಯದೆಂದೂ, ಇದರಲ್ಲಿ ಮಯೂರನು ಒಂದು ರಾಜ್ಯವನ್ನು ಗೆದ್ದುದರ ಉಲ್ಲೇಖವೂ ಇಲ್ಲದೆ, ಕೇವಲ ಕೆರೆಯೊಂದನ್ನು ಜೀರ್ಣೋದ್ಧಾರ ಮಾಡಿದ್ದನೆಂದೂ

ತಿಳಿದುಬಂತು. ನನ್ನ ಈ ಹೊಸ ಓದಿಕೆಯನ್ನು ವ್ಯಾಖ್ಯಾನವನ್ನೂ ಹಿರಿಯ ಶಾಸನ ತಜ್ಞರಾದ ಡಾ. ಕೆ.ವಿ. ರಮೇಶ್, ಡಾ. ಜಿ.ಎಸ್. ಗಾಯಿ, ಡಾ. ಬಾ.ರಾ. ಗೋಪಾಲ್, ಡಾ. ಎಂ.ಎಂ. ಕಲಬುರ್ಗಿ, ಡಾ. ಎಂ. ಚಿದಾನಂದಮೂರ್ತಿ, ಡಾ. ಅ. ಸುಂದರ, ಡಾ. ಎಂ.ವಿ. ನರಸಿಂಹಮೂರ್ತಿ ಮೊದಲಾದವರು ನಿರ್ದಿಷ್ಟ ಪಡಿಸಿರುತ್ತಾರೆ.

ಕ್ಷೇತ್ರ ಕಾರ್ಯದ ಅನುಭವದ ಹಿನ್ನೆಲೆಯಲ್ಲಿ ನನ್ನದೇ ದಾರಿಯಲ್ಲಿ ಸಾಗಿದ್ದ ನನಗೆ, ಮೇಲಿನ ವಿದ್ವಾಂಸರು ನನ್ನ ಹೊಸ ಓದನ್ನು ಒಪ್ಪಿಕೊಂಡದ್ದು, ನಾನು ಶಾಸನ ಸಂಶೋಧನೆಯ ಕ್ಷೇತ್ರದಲ್ಲಿ ಸರಿಯಾದ ಹೆಜ್ಜೆಗಳನ್ನಿಟ್ಟಿದ್ದೇನೆ ಎಂಬ ಭರವಸೆಯನ್ನು ತುಂಬಿತು. ಆ ತರುವಾಯದಲ್ಲಿ ಇನ್ನೂ ಹಲವು ವಿದ್ವಾಂಸರೂ, ಸಂಶೋಧಕರೂ ನನ್ನ ಹೊಸ ಓದನ್ನು ಒಪ್ಪಿಕೊಂಡಿರುತ್ತಾರೆ; ಅವರಲ್ಲಿ ಕೆಲವರು ಪಠ್ಯಪುಸ್ತಕಗಳಲ್ಲೂ ಆ ವಿಷಯವನ್ನು ಸೇರಿಸಿರುತ್ತಾರೆ.

ಇಲ್ಲಿ ಒಂದು ಮಾತನ್ನು ಹೇಳಬೇಕೆನಿಸುತ್ತಿದೆ : ಈ ಶಾಸನ ಕುರಿತ ನನ್ನ ಹೊಸ ಓದನ್ನು ಒಪ್ಪುವುದು ಬಿಡುವುದು ಆಯಾ ಸಂಶೋಧಕರ ಸತ್ಯಾಸತ್ಯತೆಯ ಕಾಳಜಿಗೆ, ಪ್ರಾಂಜಲ ಸ್ವಭಾವಕ್ಕೆ ಬಿಟ್ಟದ್ದು. ಆದರೆ ಈಚೆಗೆ ಕೆಲವರು, ಪ್ರಾಚೀನ ಲಿಪಿ ಕುರಿತ ತಮ್ಮ ಪುಸ್ತಕಗಳಲ್ಲಿ, ಡಾ. ಎಂ.ಎಚ್. ಕೃಷ್ಣ ಅವರು ಪ್ರಾಕೃತದ್ದೆಂದು ಕೊಟ್ಟಿದ್ದ ಶಾಸನದ ಲಿಪಿಚಿತ್ರವನ್ನೇ ಕೊಟ್ಟಿದ್ದಾರೆ. ನನ್ನ ಹೊಸ ಓದಿನ ಬಗ್ಗೆ ಅವರೂ ತಿಳಿದಿದ್ದು ಅದು ಅವು ಗಮನಕ್ಕೇ ಬಂದಿಲ್ಲವೇನೋ ಎಂಬಂತೆ ಆ ಬಗ್ಗೆ ಏನೊಂದು ಪ್ರಸ್ತಾಪವನ್ನೂ ಮಾಡದೆ ಹೋಗಿದ್ದಾರೆ. ನನ್ನ ಓದನ್ನು ಅವರೆಲ್ಲ ಒಪ್ಪಬೇಕೆಂದೇನೂ ಇಲ್ಲ. ಒಂದು ವೇಳೆ ಆ ಓದು ಅವರಿಗೆ ಒಪ್ಪಿತವಾಗಿರದಿದ್ದರೂ ಇಂಥದೊಂದು ಹೊಸ ಓದು ಅಥವಾ ಅಭಿಪ್ರಾಯ ಬಂದಿದೆ ಎಂಬಷ್ಟಾದರೂ ಅವರು ಉಲ್ಲೇಖಿಸಬಹುದಿತ್ತು. ಅಷ್ಟು ಸಹೃದಯತೆಯನ್ನು ತೋರುವುದು ಅವರಿಗೆ ಸಾಧ್ಯವಿರಲಿಲ್ಲವೆ? ನಮ್ಮ ಸಂಶೋಧನ ಕ್ಷೇತ್ರದವರೇ ಒಂದು ಮುಖ್ಯ ಶಾಸನದ ಬಗೆಗಿನ ಹೊಸ ಸಂಗತಿಗೆ ತಮ್ಮನ್ನು ತೆರೆದುಕೊಳ್ಳದೆ ಹೋದರೆ? ಎಂದು ಆಶ್ಚರ್ಯವಾಗುತ್ತದೆ.

ಇಲ್ಲಿ ಮತ್ತೂ ಒಂದು ಮಾತನ್ನು ಸೇರಿಸಬೇಕಾಗಿದೆ: ಕೆಲವರು ಸಂಶೋಧನ ಬರಹಗಾರರು, ಶಾಸನ ಸಂಪುಟಗಳ ಸಂಪಾದಕರು, ತಮ್ಮ ಸಂಶೋಧನ ಬರಹಕ್ಕೆ ಅಥವಾ ಸಂಪುಟಕ್ಕೆ ಇತರ ಶಾಸನ ಸಂಪಾದಕರ, ಬರಹಗಾರರ ಪುಸ್ತಕಗಳನ್ನೂ ಬರಹಗಳನ್ನೂ ಬಳಸಿಕೊಂಡರೂ, ಅವುಗಳ ಸಂಪಾದಕರುಗಳನ್ನು ಬರಹಗಾರರನ್ನೂ ಪೂರ್ಣವಾಗಿ ಸೂಕ್ತವಾಗಿ ಉಲ್ಲೇಖಿಸುವ ಕ್ರಮ, ಶಿಸ್ತು, ಜವಾಬ್ದಾರಿ, ಉದಾರತೆಗಳನ್ನು ತೋರಿಲ್ಲದಿರುವುದನ್ನು ಗಮನಿಸಿದ್ದೇನೆ. ಆರೋಗ್ಯಕರವಲ್ಲದ ಈ ಪ್ರವೃತ್ತಿ ವಿಷಾದನೀಯವಷ್ಟೇ ಅಲ್ಲ, ಖಂಡನೀಯ. ಇಲ್ಲಿ ಮೇಲ್ನೋಟಕ್ಕೆ ಇದೊಂದು ಸಣ್ಣ ಸಂಗತಿ ಎನಿಸಬಹುದು. ಆದರೆ, ಇಂಥ ನಿರ್ಲಕ್ಷ್ಯ ಧೋರಣೆಯಿಂದ ಅಧ್ಯಯನ ಶಿಸ್ತು ಹಾಳಾಗುವುದಲ್ಲದೆ, ಹಾಗೆ ಮಾಡಿದವರೂ ವಿಶ್ವಸನೀಯತೆಯನ್ನು ಕಳೆದುಕೊಳ್ಳುತ್ತಾರೆ. ಜೊತೆಗೆ ಇದು ಈ ಕ್ಷೇತ್ರದಲ್ಲಿ ಹೊಸದಾಗಿ ಪ್ರವೇಶ ಮಾಡುತ್ತಿರುವವರ ಮೇಲೂ ದುಷ್ಪರಿಣಾಮ ಬೀರುವ ಸಾಧ್ಯತೆ ಇದೆ. ಹಾಗಾದರೆ ಅಧ್ಯಯನದ ಶಿಸ್ತು ಉಳಿಯುವುದು ಹೇಗೆ ? ಎಂಬ ಚಿಂತೆ ಕಾಡುತ್ತದೆ.

ಕರ್ನಾಟಕದಲ್ಲಿ ಸಾವಿರಾರು ಸಂಖ್ಯೆಯ ಶಾಸನಗಳು ಪ್ರಕಟವಾಗಿದ್ದರೂ, ಮಹಿಳೆಯೊಬ್ಬಳು ಶಾಸನಕಾರ್ತಿಯಾಗಿ ರಚಿಸಿದ ಒಂದು ಶಾಸನವೂ ಈವರೆಗೆ ಕಂಡುಬಂದಿಲ್ಲ ಎಂಬ ಹೇಳಿಕೆಯಿದ್ದದ್ದು ಶಾಸನಾಭ್ಯಾಸಿಗಳಿಗೆ ತಿಳಿದದ್ದೇ. ಅದಕ್ಕೆ ಪ್ರತಿಯಾಗಿ ಶ್ರೀಬಿಜಾಬೆ ಅರ್ಥಾತ್ ಶ್ರೀವಿಜಯಬ್ಬೆ ಎಂಬ ಮಹಿಳೆಯೊಬ್ಬಳು ಪ್ರಾಯಃ ಶಾಸನಕಾರ್ತಿಯಾಗಿ ರಚಿಸಿದ ಒಂದು ಶಾಸನ ಎಂಬಂತೆ ನನ್ನ ಮರುಪರಿಶೀಲನೆಯಲ್ಲಿ ವ್ಯಕ್ತವಾದದ್ದು ದುರ್ಗದ ಸಮೀಪದ ಪಂಡರಹಳ್ಳಿ-ಗಂಜಿಗಟ್ಟಿಯ ಬಳಿಯ ಪಾಂಡುರಂಗನಬೆಟ್ಟದ ಭೀಮೇಶ್ವರ ಗುಹಾಲಯದ ಬದಿಯ ಬಂಡೆಯಲ್ಲಿರುವ ಒಂದು ಶಾಸನದಿಂದ. ಇದನ್ನು ಪ್ರಕಟಿಸಿದ್ದ ಶ್ರೀ ಬಿ.ಎಲ್. ರೈಸ್ ಅವರು ಇದರ ಕಾಲ ಕ್ರಿ.ಶ. ಸುಮಾರು ೫೦೦? ಎಂದು ಬರೆದಿದ್ದರು; ಇದನ್ನು ರಚಿಸಿದ್ದು ಒಬ್ಬ ಮಹಿಳೆ ಎಂಬ ಅಂಶವನ್ನು ಅವರು ಗಮನಿಸಿರಲಿಲ್ಲ. ಆದರೆ ಲಿಪಿ ಲಕ್ಷಣದಿಂದ ಇದು ಅಷ್ಟು ಪ್ರಾಚೀನವಾದದ್ದಿರದೆ, ಕ್ರಿ.ಶ. ಸುಮಾರು ೭-ಅನೆಯ ಶತಮಾನದ್ದಿರುವಂತೆ ಕಂಡುಬಂದಿತು. ಮತ್ತು ಈ ಶ್ರೀ ಬಿಜಾಬೆ, ಸಂಸ್ಕೃತದ ಪ್ರಖ್ಯಾತ ಕವಿ ಲಾಕ್ಷಣಿಕ ದಂಡಿಯನ್ನು ತನ್ನ ಕೃತಿಯೊಂದರಲ್ಲಿ ತರಾಟೆಗೆ ತೆಗೆದುಕೊಂಡ ಕವಯಿತ್ರಿ ಎಂದು ಹೆಸರಾದ, ಇಮ್ಮಡಿ ಪುಲಿಕೇಶಿಯ ಮಗನಾದ ಚಂದ್ರಾದಿತ್ಯನ ಪ್ರಿಯಪತ್ನಿ ವಿಜಯಾಂಕಾ ಅಥವಾ ವಿಜಯಾದೇವಿ ಇದ್ದಿರಬಹುದೆ? ಎಂಬ ಸಂದೇಹವೂ ನನಗಿದೆ.

ಈ ವ್ಯಾಖ್ಯಾನ ಸತ್ಯವಾದರೆ, ಈ ಶಾಸನಕ್ಕೆ ವಿಶೇಷ ಮಹತ್ವ ಬರುವುದರಲ್ಲಿ ಸಂದೇಹವಿಲ್ಲ.

ಚಿತ್ರದುರ್ಗದ ಪ್ರಾಚೀನ ಹೆಸರು ಬರುವಲ್ಲೆಲ್ಲ ಬಿ.ಎಲ್. ರೈಸ್ ಅವರು ಬಹುತೇಕ ಕಡೆ ಅದನ್ನು ಬೆಮ್ಮತ್ತನೂರು, ಬೆಮ್ಮತ್ತನಕಲ್ಲು ಎಂದು 'ಬೆ'ಯಿಂದ ಪ್ರಾರಂಭವಾದಂತೆ ಓದಿದ್ದರು. ಈ ಕುರಿತು ಡಾ. ಎಂ.ಎಂ. ಕಲಬುರ್ಗಿ ಅವರು ಪ್ರಾರಂಭದ ಅಕ್ಷರ 'ಬೆ' ಇರದೆ 'ಚಿ' ಇದ್ದಿರಬೇಕೆಂದೂ, ಆ ಎರಡೂ ಅಕ್ಷರಗಳ ರೂಪ ಸಾದೃಶ್ಯದಿಂದ ರೈಸ್ ಹಾಗೆ ತಪ್ಪಾಗಿ ಓದಿರಬಹುದೆಂದೂ, ಶಾಸನಲಿಪಿಯ ತಮ್ಮ ಅನುಭವದ ಬಲದಿಂದ ಒಂದು ಊಹೆಯನ್ನು ವ್ಯಕ್ತಪಡಿಸಿದ್ದರು. ರೈಸ್ ಅವರು ಪ್ರಾಚೀನ ಚಿತ್ರದುರ್ಗದ ಹೆಸರನ್ನು ಬಹುತೇಕ ಕಡೆ 'ಬೆ'ಯಿಂದ ಪ್ರಾರಂಭವಾದಂತೆ ಓದಿದ್ದರೂ ಕೆಲವೆಡೆ ಬಿಮ್ಮಚ್ಚನೂರು ಎಂದು 'ಬಿ'ಯಿಂದ, ಇನ್ನು ಕೆಲವೆಡೆ ಭಿಂಮತನೂರು ಎಂದು 'ಭಿ'ಯಿಂದ, ಮತ್ತೆ ಕೆಲವೆಡೆ

ಚಿಮ್ಮತ್ತನೂರು ಎಂದು 'ಚಿ' ಯಿಂದ ಪ್ರಾರಂಭವಾದಂತೆ ಸಹ ಓದಿದ್ದರು. ಹೀಗೆ ಆ ನಾಲ್ಕು ಅಕ್ಷರಗಳ ರೂಪಸಾದೃಶ್ಯವಿದೆಯೆಂಬ ಬಗ್ಗೆ ಅಧ್ಯಯನ ಮುಂದುವರಿಸಿದ ನಾನು, ಆ ನಾಲ್ಕೂ ಅಕ್ಷರಗಳನ್ನು ಬೇರೆ ಬೇರೆ ಕಾಲದ ಶಾಸನಗಳಿಂದ (ಕೆಲವೆಡೆ ಪ್ರತಿ ತೆಗೆದು) ಗುರುತಿಸಿಕೊಂಡು, ಒಂದು ತೌಲನಿಕ ಕೋಷ್ಟಕ ಸಿದ್ಧಪಡಿಸಿದಾಗ ಆ ನಾಲ್ಕು ಅಕ್ಷರಗಳಲ್ಲೂ ರೂಪ ಸಾದೃಶ್ಯವಿದ್ದುದು ಗೋಚರಿಸಿತು. ಇದರಿಂದ ಚಿತ್ರದುರ್ಗದ ಪ್ರಾಚೀನ ಹೆಸರಿನ ಪ್ರಾರಂಭಾಕ್ಷರದ ಸಮಸ್ಯೆ ಬಿಡಿಸುವಲ್ಲಿ ಡಾ. ಕಲಬುರ್ಗಿ ಅವರು ಪ್ರಥಮದಲ್ಲಿ ತೋರಿದ ಮಾರ್ಗ ಮುಖ್ಯವಾದ ಕೀಲಿಕೈ ಆಯಿತು; ಎಲ್ಲ ಕಡೆಯಲ್ಲಿ ಪ್ರಾರಂಭಾಕ್ಷರ 'ಚಿ'ಯೇ ಇರುವುದು ದೃಢಪಟ್ಟಿತು. ಆ ತರುವಾಯ ಚಿತ್ರದುರ್ಗ ಹೆಸರಿನ ನಿಷ್ಪತ್ತಿಯತ್ತ ನನ್ನ ಅಧ್ಯಯನ ಮುಂದುವರಿಯಿತು.

ಕ್ರಿ.ಶ. ೧೩ನೇ ಶತಮಾನದ ಅಂತ್ಯದಲ್ಲಿ ಚಿತ್ರದುರ್ಗದಲ್ಲಾದ 'ಪೆರುಮಾಳೆಪುರ' ಎಂಬ ಬ್ರಹ್ಮಪುರಿ ಕುರಿತ ಶಾಸನವೊಂದನ್ನು ರೈಸ್ ಅವರು ಪ್ರಕಟಿಸಿದ್ದರು. ಅದೇ ಪಾಠವಿರುವ ಇನ್ನೊಂದು ಶಾಸನ ನನಗೆ ದೊರೆತಾಗ ಅದರ ಅಂತ್ಯದಲ್ಲಿ 'ಬ್ರಹ್ಮಪುರಿ ಗಿರಿ' ಎಂದು ರೈಸ್ ಓದಿದ್ದಂತೆ ಪಾಠವಿರದೆ, 'ಬ್ರಹ್ಮಪುರಿಗೇರಿ' ಎಂಬ ಪಾಠ ಇದ್ದದ್ದು ಗೋಚರಿಸಿತು. ಅಷ್ಟು ಹೊತ್ತಿಗಾಗಲೇ ರೈಸ್ ಅವರ ಪಾಠದಿಂದ ಅನೇಕ ಅಸಂಗತ ತೀರ್ಮಾನಗಳು ಅಭಿಪ್ರಾಯಗಳು ಬಂದಿದ್ದುವು. ಅವೆಲ್ಲ ನಿವಾರಣೆಯಾದುವು.

ಹೀಗೇ ಬಿ.ಎಲ್. ರೈಸ್ ಅವರು ಒಂದು ಗ್ರಾನೈಟ್ ಗುಂಡಿನ ಮೇಲಿನ ಬರಹವನ್ನು 'ಸಟಿಕಟ್ಟೆ ಬಾಗವೆ' ಎಂದು ಓದಿದ್ದರು; ಅದರ ಕಾಲವನ್ನು ನಮೂದಿಸಿರಲಿಲ್ಲ. ರೈಸ್ ಅವರು ಗಮನಿಸಿದೆ ಹೋದ, ಈ ಶಾಸನದ ಜೊತೆಗಿನ ಒಂದು ರೇಖಾ ಚಿತ್ರವನ್ನು ಡಾ. ಎಂ.ಎಚ್. ಕೃಷ್ಣ ಅವರು ಇಲ್ಲಿ ಗುರುತಿಸಿದರಾದರೂ, ಅದು ಏನೆಂದು ಸ್ಪಷ್ಟಪಡಿಸಿಕೊಳ್ಳದೆ ಹೋಗಿದ್ದರು; ಜೊತೆಗೆ, ರೈಸ್ ಅವರು ಕೊಟ್ಟಿದ್ದ ಪಾಠದ ಬಗ್ಗೆಯೂ ಅವರು ಏನನ್ನೂ ಹೇಳಿರಲಿಲ್ಲ. ಆದರೆ ಈ ಶಾಸನ ಮತ್ತು ಚಿತ್ರಗಳನ್ನು ಮರುಪರಿಶೀಲಿಸಿದಾಗ ಅಲ್ಲಿದ್ದುದು 'ಸಟಿಕವೆ ಬಾಗವೆ' ಎಂಬ ಪಾಠ ಮತ್ತು ಬದಿಯ ಚಿತ್ರ ತೀರ್ಥಂಕರ ಇತ್ಯಾದಿ ಎಂದು ಸ್ಪಷ್ಟವಾಗಿ, ಆ ಬರಹ ಕ್ರಿ.ಶ. ಸುಮಾರು ೧೪ನೇ ಶತಮಾನದ ಸೆಟಿಕವೆ ಮತ್ತು ಬಾಗವೆ ಎಂಬ ಇಬ್ಬರು ಜೈನ ಸ್ತ್ರೀಯರ ನಿಸದಿ ಶಾಸನ ಎಂದು ವ್ಯಕ್ತವಾಯಿತು.

ಶಾಸನಗಳ ಪಾಠದ ಅಧ್ಯಯನದಲ್ಲಿ ನಾವು ಎಷ್ಟು ಎಚ್ಚರಿಕೆ ವಹಿಸಿದರೂ ಕಡಮೆಯೇ. ನಮ್ಮ ಗಮನದಲ್ಲಿ ಕಿಂಚಿತ್ತು ವ್ಯತ್ಯಯವಾದರೂ, ಅಸಮರ್ಪಕ ಗ್ರಹಿಕೆ, ಅಸಂಗತ ತೀರ್ಮಾನಗಳಿಗೆ ದಾರಿಯಾಗುತ್ತದೆ. ಇದಕ್ಕೆ ಒಂದು ಒಳ್ಳೆಯ ನಿದರ್ಶನವೆಂದರೆ: ಚಿತ್ರದುರ್ಗಕ್ಕೆ ಹಿಂದೆ ಇದ್ದ ಹೆಸರುಗಳಲ್ಲಿ 'ಹಿಡಿಂಬನಾಥ ಪಟ್ಟಣ' ಒಂದು ಎಂದೂ ಅದು ಶಾಸನಗಳಲ್ಲೇ ಇದೆಯೆಂದೂ ಹುಲ್ಲೂರು ಶ್ರೀನಿವಾಸ ಜೋಯಿಸರು ಹೇಳಿದ್ದಾರೆ. ಆದರೆ ಶಾಸನಗಳನ್ನು ಪರಿಶೀಲಿಸಿದಾಗ ರೈಸ್ ಅವರು ಪ್ರಕಟಿಸಿರುವ ಕ್ರಿ.ಶ. ೧೨೮೬ರ ಒಂದು ಶಾಸನದಲ್ಲಿ ಅಂತ್ಯದಲ್ಲಿ ಅಂಕಿತ ಹಾಕಿರುವ ಭಾಗದಲ್ಲಿ 'ಶ್ರೀ ಹಿಡಿಂಬನಾಥ ಪಟ್ಟಣದ ವೊಪ್ಪ' ಎಂದಿದೆ. ರೈಸರೇ ಪ್ರಕಟಿಸಿದ ಇದೇ ದಿನಾಂಕವಿರುವ ಇನ್ನೊಂದು ಶಾಸನದಲ್ಲಿ 'ಶ್ರೀ ಭೀಮೇಶ್ವರ ದೇವರು ಪಟ್ಟಣದ ವೊಪ್ಪ' ಎಂದು ಅಂಕಿತ ಹಾಕಿರುವುದು ಸ್ಪಷ್ಟವಾಗುತ್ತದೆ. ಆದ್ದರಿಂದ ಮೇಲೆ ಇರುವುದು ಹಿಡಿಂಬನಾಥ ಪಟ್ಟಣ ಎಂದು ಪಟ್ಟಣದ ಹೆಸರಲ್ಲ; ಹಿಡಿಂಬನಾಥ ದೇವರ ಉಲ್ಲೇಖ ಮಾಡಿ ಹಾಕಲಾದ ಪಟ್ಟಣದ ವೊಪ್ಪ ಎಂಬುದನ್ನು ಗಮನಿಸಬೇಕು.

ಶಾಸನತಜ್ಞರು ತುಂಬ ಪರಿಶ್ರಮದಿಂದ ಶಾಸನಗಳನ್ನು ಓದಿ ವಿವರ ಕೊಟ್ಟು ಪ್ರಕಟಿಸಿದ್ದಾರೆ. ಬೆಲೆ ಕಟ್ಟಲಾದ ಈ ಕಾರ್ಯಕ್ಕೆ ಅವರು ಪ್ರಾತಃಸ್ಮರಣೀಯರು. ಆದರೂ ಕೆಲವು ಮಿತಿಗಳಿಂದ ಅವರು ಕೊಟ್ಟ ಶಾಸನ ಪಾಠದಲ್ಲಿ ಅಥವಾ ಅದರ ವ್ಯಾಖ್ಯಾನದಲ್ಲಿ ವ್ಯತ್ಯಾಸಗಳಾಗಿದ್ದರೆ ನಮ್ಮ ಇತಿಹಾಸ, ಸಂಸ್ಕೃತಿ, ಭಾಷೆ ಇವುಗಳಿಗೆ ಸಂಬಂಧಿಸಿದಂತೆ ಏನೇನು ಲೋಪಗಳುಂಟಾಗಬಹುದು ಎಂಬುದಕ್ಕೆ ಮೇಲೆ ತಿಳಿಸಿದವು ಕೆಲವೇ ಕೆಲವು ನಿದರ್ಶನಗಳು. ಕರ್ನಾಟಕದಂತಹ ದೊಡ್ಡ ರಾಜ್ಯದ ಒಂದು ಜಿಲ್ಲೆಯ ಚಿಕ್ಕ ಭಾಗದ ನಿದರ್ಶನಗಳು ಹೀಗಿದ್ದರೆ, ಇನ್ನು ಇಡೀ ರಾಜ್ಯದ ವ್ಯಾಪ್ತಿಯಲ್ಲಿ ಇಂಥ ಪಾಠವ್ಯತ್ಯಾಸ ಮತ್ತು ಅಂಥ ಪಾಠವನ್ನು ಆಧರಿಸಿ ಬಂದ ಅಸಮಂಜಸ ಅಭಿಪ್ರಾಯ ಅಧಿಕ ಸಂಖ್ಯೆಯಲ್ಲಿರಬಹುದೆಂದು ಯಾರೂ ಊಹಿಸಬಹುದು. ರಾಜ್ಯದ ಎಲ್ಲ ಶಾಸನಗಳಲ್ಲದಿದ್ದೂ, ಕೆಲವು ಮುಖ್ಯ ಶಾಸನಗಳನ್ನಾದರೂ ಒಮ್ಮೆ ಮರುಪರಿಶೀಲಿಸುವುದು ಮತ್ತು ಮರುವ್ಯಾಖ್ಯಾನಿಸುವುದು ಇಂದಿನ ಒಂದು ತೀವ್ರ ಅಗತ್ಯ ಎಂದು ನನ್ನ ಭಾವನೆ.

ನನ್ನ ಶಾಸನ ಅನ್ವೇಷಣೆಯಲ್ಲಿ ದೊರೆತ ಕೆಲವು ಶಾಸನಗಳ ಬಗ್ಗೆ ನಾನು ಸ್ವಲ್ಪವಾದರೂ ಪ್ರಸ್ತಾಪಿಸದಿದ್ದರೆ, ಅದೊಂದು ಕೊರತೆಯಾದಂತೆ. ಅವುಗಳಲ್ಲಿ ಕೆಲವಾದರೂ ಮಹತ್ತ್ವದ ಶಾಸನಗಳಾಗಿರುವುದು ನನಗೆ ಹರ್ಷವನ್ನು ತಂದಿದೆ. ಧವಳಪ್ಪನ ಗುಡ್ಡದ ಬೃಹತ್ ಬಂಡೆಯಲ್ಲಿ ಆಳೆತ್ತರದ ಅಂಡಾಕೃತಿಯ ನೈಸರ್ಗಿಕ ಗುಳಿಯಲ್ಲಿ ಕೆಂಪು ಬಣ್ಣದಲ್ಲಿ ಬರೆದಿರುವ ಕ್ರಿ.ಶ. ಸು. ೫ನೇ ಶತಮಾನದ ಎರಡೇ ಎರಡು ಸಾಲುಗಳ ಸಂಸ್ಕೃತ ವರ್ಣಶಾಸನ ಈವರೆಗೆ ಕರ್ನಾಟಕದಲ್ಲಿ ದೊರೆತ ವರ್ಣಶಾಸನಗಳಲ್ಲೆಲ್ಲ ತುಂಬ ಪ್ರಾಚೀನವಾದದ್ದೆಂಬ ಪರಿಗಣನೆಗೆ ಪಾತ್ರವಾಗಿದೆ. ಇದು ಬೆಳಕಿಗೆ ಬರುವ ಮೊದಲು ಬಾದಾಮಿಯಲ್ಲಿ ದೊರೆತ ಕ್ರಿ.ಶ. ಸು. ೭-೮ನೇ ಶತಮಾನದ ವರ್ಣಶಾಸನಗಳೇ ಆ ಗುಂಪಿನ ಅತ್ಯಂತ ಪ್ರಾಚೀನ ಶಾಸನಗಳಾಗಿದ್ದುವು.

ಕನ್ನಡದ ಅತಿ ಪ್ರಾಚೀನ ವೀರಗಲ್ಲು, ವೀರಗಲ್ಲು ಶಾಸನ ಎನ್ನುವುದರಿಂದ ಹಿಡಿದು ಈವರೆಗೆ ದೊರೆತ ಕನ್ನಡದ ಅತ್ಯಂತ ಪ್ರಾಚೀನ ಪದ್ಯವಿರುವ ಶಾಸನ ಎನ್ನುವವರೆಗೆ ಪ್ರಸಿದ್ಧಿ ಹೊಂದಿ

ದವು, ತಮಟಕಲ್ಲಿನ ಕ್ರಿ.ಶ. ಸು. ೬ನೇ ಶತಮಾನದವೆಂದು ರೈಸ್ ಪ್ರಕಟಿಸಿರುವ ಎರಡು ಶಾಸನಗಳು. ಈಚಿನ ವರ್ಷಗಳಲ್ಲಿ ಈ ಶಾಸನಗಳನ್ನು ಮರುಪರಿಶೀಲಿಸಲೆಂದು ನಾನು ಹೋದಾಗ, ವೀರರ ಉಬ್ಬುಶಿಲ್ಪದ ಜೊತೆಗೆ ಕನ್ನಡ ಲಿಪಿಯಲ್ಲಿ ಸಂಸ್ಕೃತ ಶಾಸನ ಇರುವ ಕಲ್ಲು ಚಪ್ಪಡಿಯ ಮೇಲೆ ಒಂದು ಮೂಲೆಯಲ್ಲಿ ಅದೇ ಕ್ರಿ.ಶ. ೬ನೇ ಶತಮಾನದ ವಟ್ಟೆಳುತ್ತು ಲಿಪಿಯಲ್ಲಿ ತಮಿಳು ನಾಡಿನ ಏಳೂರ್ ಮೂಲದ ವ್ಯಕ್ತಿಯೊಬ್ಬನ ಹೆಸರನ್ನು ತಿಳಿಸುವ ತಮಿಳಿನ ಚಿಕ್ಕ ಶಾಸನವೊಂದಿದ್ದುದು ಗೋಚರಿಸಿತು. ಈ ಶಾಸನ ಈಗ ಕರ್ನಾಟಕದಲ್ಲಿ ದೊರೆತ ವಟ್ಟೆಳುತ್ತು ಲಿಪಿಯ ಅತ್ಯಂತ ಪ್ರಾಚೀನ ತಮಿಳು ಶಾಸನ ಇದಾಗಿದೆ.

ಹೊಸದುರ್ಗ ತಾಲ್ಲೂಕಿನ ನೀರಗುಂದ ಗ್ರಾಮದಲ್ಲಿ ನನಗೆ ದೊರೆತ ಕ್ರಿ.ಶ. ೧೩ನೇ ಶತಮಾನದ ಹೊಯ್ಸಳ ೧ನೇ ನರಸಿಂಹನ ಕಾಲದ ಒಂದು ಶಾಸನ, ಅಗ್ರಹಾರದ ಬ್ರಾಹ್ಮಣರ ಭೂಮಿ ಮತ್ತು ಅವುಗಳ ಆಯ ವಿವರಗಳಲ್ಲದೆ, ಆ ಭೂಮಿ ಸಾಗುವಳಿಗೆ, ಭೂಮಿಗಳ ನಡುವೆ ಅಗತ್ಯವಾದ ರಸ್ತೆ ನಿರ್ಮಾಣಕ್ಕೆ, ನೀರಾವರಿ ಕಾಲುವೆ ನಿರ್ಮಾಣಕ್ಕೆ, ಬೆಳೆಗೆ ಹಾನಿಯೊದಗಿ ಆದ ನಷ್ಟದ ಪರಿಹಾರಕ್ಕೆ, ಇಂಥ ಭುವಿಗಳ ಮೇಲೆ ಹೆಚ್ಚಿನ ಕರ ಸಂಗ್ರಹ ನಿಷೇಧಕ್ಕೆ ಹೀಗೆ ಹಲವು ಹೊಸ ವಿಷಯಗಳನ್ನು ನೀಡುವ ಒಂದು ಅಪರೂಪದ ಶಾಸನವಾಗಿದೆ. ಅದರಲ್ಲಿ ಇದನ್ನು 'ಸಮಯ ಪತ್ರದ ಶಾಸನ' ಎಂದೂ ಕರೆದಿದೆ.

ಚಿತ್ರದುರ್ಗ ಬಳಿಯ ಕಾಟಿಹಳ್ಳಿ ಎಂಬ ಗ್ರಾಮದ ಹೊಲ ವೊಂದರಲ್ಲಿ ದೊರೆತ ಒಂದು ಶಾಸನದಿಂದ, ಕ್ರಿ.ಶ. ೧೪ನೇ ಶತಮಾನದ ಅಂತ್ಯದಲ್ಲಿ ಚಿತ್ರದುರ್ಗವನ್ನು ಮಾದರಸ ದಣ್ಣಾಯಕ ಎಂಬ ಪ್ರಾಂತಪಾಲಕ ಆಳುತ್ತಿದ್ದನೆಂಬ ಹೊಸ ವಿಷಯವಲ್ಲದೆ, ಅವನು ಇಲ್ಲಿಯ ಹೆದ್ದಾರಿಯಲ್ಲಿದ್ದ ದೇವಯ್ಯ ಎಂಬ ಶರಣರೊಬ್ಬರು ನಡೆಸುತ್ತಿದ್ದ ಅರವಟ್ಟಿಗೆಯಲ್ಲಿ ಅಂಬಲಿಯ ಜೊತೆಗೆ ಸಿದ್ಧೌಷಧಿ ಗಳನ್ನು ಉಚಿತವಾಗಿ ನೀಡುತ್ತಿದ್ದರೆಂಬ ಅಪರೂಪದ ಸಂಗತಿಯೂ ಬರುತ್ತದೆ.

ದುರ್ಗದ ಪರಿಸರದಲ್ಲಿ ರೈಸ್ ಮತ್ತು ಕೃಷ್ಣ ಅವರಿಂದ (ಜೈನ ಸಂಬಂಧಿಯಾದ) ಕೆಲವೇ ಕೆಲವು ನಿಸದಿ ಶಾಸನಗಳು ಪ್ರಕಟಗೊಂಡಿದ್ದುವು. ನನ್ನ ಅನ್ವೇಷಣೆ ಮತ್ತೆ ಕೆಲವು ಅಂಥವೇ ನಿಸದಿ ಶಾಸನಗಳ ಜೊತೆಗೆ, ದುರ್ಗವನ್ನು ಆಳಿದವರಲ್ಲಿ ಹಿರಿಯ ಬಲ್ಲಪ್ಪ ದಣ್ಣಾಯಕ ಎಂಬ ಜೈನಧರ್ಮೀಯ ದೊರೆಯೂ ಒಬ್ಬನಿದ್ದನೆಂದೂ ಅವನು ಸಮಾಧಿ ಮರಣ ಪಡೆದನೆಂದೂ ತಿಳಿದುಬಂತು. ದುರ್ಗದ ಪರಿಸರದಲ್ಲಿ ಜೈನಧರ್ಮದ ಸ್ಥಿತಿಗತಿಗಳ ಬಗ್ಗೆ ಇನ್ನಷ್ಟು ತಿಳಿಯಲು ಸಾಧ್ಯವಾಯಿತು.

ಕ್ರಿ.ಶ. ೧೬ನೇ ಶತಮಾನದಲ್ಲಿ ವಿಜಯನಗರದ ಅರಸರಿಂದ ನಾಯಿಂದ ಜನಾಂಗದವರಿಗಿದ್ದ ತೆರಿಗೆಗಳನ್ನು ಮನ್ನಾ ಮಾಡಿಸಿದ ಆ ಜನಾಂಗದ ಪ್ರಮುಖರಾದ ತಿಮ್ಮೋಜ ಕೊಂಡೋಜ ಅವರು, ಕ್ರಿ.ಶ. ೧೮ ನೆಯ ಶತಮಾನದ ಹೊತ್ತಿಗೆ, ಆ ಜನಾಂಗದ ದೈವಗಳಾಗಿ ಪೂಜಿತರಾಗುತ್ತಿದ್ದರೆಂಬ ಅಂಶ, ದುರ್ಗದ ಚಂದ್ರವಳ್ಳಿ ಪ್ರದೇಶದ ಬಂಡೆಯೊಂದರಲ್ಲಿರುವ ಆ ವ್ಯಕ್ತಿಗಳ ಉಬ್ಬುಶಿಲ್ಪ ಹಾಗೂ ಶಾಸನ ಇವುಗಳಿಂದ ಬೆಳಕಿಗೆ ಬಂದಿದೆ.

ಚಿತ್ರದುರ್ಗದ ಪಾಳೆಯಗಾರರಿಗೆ ಸಂಬಂಧಪಟ್ಟಂತೆ, ರೈಸ್ ಅವರು ಇತರರು ಸುಮಾರು ೫೫ ಶಾಸನಗಳನ್ನು ಪ್ರಕಟಿಸಿದ್ದರು. ಆದರೆ ನನ್ನ ಅನ್ವೇಷಣೆಯಲ್ಲಿ ೪೦ಕ್ಕೂ ಹೆಚ್ಚು ಶಾಸನಗಳು ದೊರೆತಿದ್ದು, ಅವರ ವಂಶಾವಳಿಗಳಲ್ಲೂ ಹೇಳಿರದ ಕೆಲವು ಸಂಗತಿ ಗಳು, ಅವರ ಆಳ್ವಿಕೆ ಪ್ರಾರಂಭವಾದ ಕಾಲ ಇಂಥ ವಿಶೇಷ ಸಂಗತಿಗಳನ್ನು ತಿಳಿಯಲು ಸಾಧ್ಯವಾಗಿದೆ.

ಜಗಲೂರು ತಾಲ್ಲೂಕಿನ ಮಠದ ದ್ಯಾಮವ್ವನಹಳ್ಳಿಯಲ್ಲಿ ದೊರೆತ ಒಂದು ಶಿಲಾಶಾಸನ, ಕ್ರಿ.ಶ. ೧೬೧೧ ರಲ್ಲಿ ಚಿತ್ರದುರ್ಗದ ದೊರೆ ಬರಮಣ್ಣನಾಯಕನು, ಕುಂಭಕೋಣೆ (ಕುಂಭಕೋಣಂ, ಹಾಗೆಯೇ ಮಂತ್ರಾಲಯದ) ಮಠದ ಪ್ರಖ್ಯಾತ ಪೀಠಾಧೀಶರಾದ ರಾಘವೇಂದ್ರ ಸ್ವಾಮಿಗಳ ನಂತರದ ಮೂರನೆಯ ತಲೆಯ ಪೀಠಾಧೀಶರಾದ ಸುಮತೀಂದ್ರ ಸ್ವಾಮಿಗಳಿಗೆ, ಆ ಹಳ್ಳಿಯ ಭೂಮಿ ಯನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ. ಈ ಶಾಸನದಿಂದ ಕನ್ನಡದ ಖ್ಯಾತ ಭಕ್ತಕವಯಿತ್ರಿ ಹೆಳವನಕಟ್ಟೆ ಗಿರಿಯಮ್ಮನ ಕಾಲವನ್ನು ಮತ್ತಷ್ಟು ನಿರ್ದಿಷ್ಟತೆಗೆ ಒಯ್ಯಲು ಸಾಧ್ಯವಾಯಿತೆಂಬುದನ್ನು ಇಲ್ಲಿ ಹೇಳಬೇಕು.

ಚಿತ್ರದುರ್ಗಕ್ಕೆ ಸಮೀಪದಲ್ಲಿ ಭೀಮಸಮುದ್ರದ ಕೆರೆಯ ಏರಿಗೆ ಒದಗಿರುವ ಒಂದು ಶಿಲಾಶಾಸನ ಕ್ರಿ.ಶ. ೧೪ನೇ ಶತಮಾನದಲ್ಲಿ ಹೊನ್ನ ಕಲಶದ (ಭೀಮಸಮುದ್ರ)ದ ಆ ಕೆರೆಗೆ, ಜನ್ನಿಗೆಹಳ್ಳ ಎಂಬ ಹಳ್ಳವನ್ನು ತಕ್ಕೆ ಹರವು ಎಂಬಲ್ಲಿ ಅಡ್ಡಗಟ್ಟೆ ಹಾಕಿ, ದಿಕ್ಕು ಬದಲಿಸಿ ಇಲ್ಲಿಗೆ ಹರಿಯುವಂತೆ ಮಾಡಲಾಯಿತೆಂಬ ಅಪರೂಪದ ಸಂಗತಿ ಯನ್ನು ಹೇಳುತ್ತದೆ.

ಕಡೆಯದಾಗಿ, ಶಾಸನ ಕ್ಷೇತ್ರದ ಸಂಶೋಧನೆಯ ಹರವು ದಿನೇ ದಿನೇ ಹೆಚ್ಚುತ್ತಿದೆ. ಅನೇಕ ಹಿರಿಯರು ಈ ಕ್ಷೇತ್ರದಲ್ಲಿ ಈಗಲೂ ನಿರಂತರವಾಗಿ ತೊಡಗಿಸಿಕೊಂಡು ಕೆಲಸ ಮಾಡುತ್ತಿದ್ದಾರೆ. ಹಾಗೆಯೇ ಈ ಕ್ಷೇತ್ರಕ್ಕೆ ಅನೇಕ ಕಿರಿಯರ ಹೊಸಬರ ಪ್ರವೇಶವೂ ಆಗಿದೆ, ಆಗುತ್ತಿದೆ. ಅದರಿಂದ ಈ ಕ್ಷೇತ್ರದ ಸಂಶೋಧನೆ ಇನ್ನೂ ಹೆಚ್ಚಾಗಿ ನಡೆಯಲಿ; ಅದಕ್ಕೆ ಎಲ್ಲ ಅನುಕೂಲ ಅವಕಾಶಗಳು ಒದಗಿ ಬರಲಿ; ನಮ್ಮ ಇತಿಹಾಸದ ಜ್ಞಾನದ ಪರಿಧಿ ಇನ್ನಷ್ಟು ವಿಸ್ತಾರಗೊಳ್ಳಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

ಈ ಪ್ರಶಸ್ತಿ ದತ್ತಿ ಉಪನ್ಯಾಸವನ್ನು ನೀಡಲು ನನಗೆ ಅವಕಾಶ ಮಾಡಿಕೊಟ್ಟ ಕರ್ನಾಟಕ ಇತಿಹಾಸ ಅಕಾದೆಮಿಗೆ, ಇಷ್ಟು ಹೊತ್ತು ನನ್ನ ಉಪನ್ಯಾಸವನ್ನು ಸಹೃದಯತೆಯಿಂದ ಆಲಿಸಿದ ಎಲ್ಲ ಇತಿಹಾಸ ಪ್ರೇಮಿಗಳಿಗೆ ವಂದಿಸಿ ನನ್ನ ಮಾತುಗಳನ್ನು ಮುಕ್ತಾಯ ಮಾಡುತ್ತೇನೆ.

# ಡಾ. ಬಿ. ರಾಜಶೇಖರಪ್ಪನವರ ಸಂಕ್ಷಿಪ್ತ ಇತಿವೃತ್ತ

**ಹೆಸರು** : ಡಾ. ಬಿ. ರಾಜಶೇಖರಪ್ಪ

**ಹುಟ್ಟಿದ ದಿನಾಂಕ** : ೧೫.೬.೧೯೪೭

**ವಿದ್ಯಾರ್ಹತೆ** : ಬಿ.ಎಸ್ಸಿ., ಮೈಸೂರು ವಿಶ್ವವಿದ್ಯಾನಿಲಯ, ೧೯೬೮ ಎಂ.ಎ. (ಕನ್ನಡ), ಮೈ.ವಿ.ವಿ., ೧೯೭೧ ಪಿಎಚ್.ಡಿ., ಕರ್ನಾಟಕ ವಿಶ್ವವಿದ್ಯಾಲಯ, ೨೦೦೩

**ಬೋಧನೆ ಮತ್ತು ಆಡಳಿತ ಅನುಭವ** :

i. ೧೯೭೧ರಿಂದ ಚಿತ್ರದುರ್ಗ, ಹೊಸದುರ್ಗದ ಸರ್ಕಾರಿ ಪ್ರ.ದ. ಕಾಲೇಜುಗಳಲ್ಲಿ ಕನ್ನಡ ಉಪನ್ಯಾಸಕ, ಪ್ರವಾಚಕ ಮತ್ತು ಪ್ರಾಧ್ಯಾಪಕ ಆಗಿ ಬೋಧನಾನುಭವ.

ii. ೧೯೯೯ರಿಂದ ಚಿತ್ರದುರ್ಗ ಹಿರಿಯೂರಿನ ಕಾಲೇಜುಗಳಲ್ಲಿ ಪ್ರಾಂಶುಪಾಲ ಆಗಿ ಆಡಳಿತ ಅನುಭವ, ಈಗ ನಿವೃತ್ತ ಪ್ರಾಂಶುಪಾಲರು.

**ಸಂಶೋಧನೆಯ ಅನುಭವ** :

i. ೧೯೮೧ ರಿಂದ ಈವರೆಗೆ ಹಳೆಯ ಚಿತ್ರದುರ್ಗ ಜಿಲ್ಲೆಯ ಸುಮಾರು ೪೦೦ರಷ್ಟು ಸಂಖ್ಯೆಯ ಅಪ್ರಕಟಿತ ಶಿಲಾ ಹಾಗೂ ತಾಮ್ರಶಾಸನಗಳ ಶೋಧನೆ

ii. ಚಿತ್ರದುರ್ಗ ಪಾಳೆಯಗಾರರಿಗೆ ಮತ್ತು ಚಿತ್ರದುರ್ಗದ ಬೃಹನ್ಮಠಕ್ಕೆ ಸಂಬಂಧಿಸಿದ ಕನ್ನಡ ಮೋಡೀ ಲಿಪಿಯ ಐತಿಹಾಸಿಕ ದಾಖಲೆಗಳ ಮತ್ತು ಕಾಗದ ಪತ್ರಗಳ ಅಧ್ಯಯನ.

iii. ಪ್ರಾಚೀನ ಕಾಲದ ಶಿಲ್ಪ, ಚಿತ್ರಗಳ ಶೋಧನೆ.

iv. ಭಾಷಾಶಾಸ್ತ್ರ, ಗ್ರಂಥ ಸಂಪಾದನೆ, ಜನಪದ ಗೀತೆಗಳ ಸಂಗ್ರಹಣೆ, ನಾಮವಿಜ್ಞಾನ, ಇವೇ ಮುಂತಾದವುಗಳಲ್ಲಿ ಪರಿಶ್ರಮ.

**ಪ್ರಕಟಿತ ಕೃತಿಗಳು** :

೧. ತರಂಗ (ಕವನ ಸಂಕಲನ), ೧೯೭೧
೨. ದುರ್ಗ ಶೋಧನ (ಸಂಶೋಧನ ಪ್ರಬಂಧಗಳ ಸಂಕಲನ), ೨೦೦೧
೩. ಇತಿಹಾಸ ಕಥನ (ಸಂಶೋಧನ ಪ್ರಬಂಧಗಳ ಸಂಕಲನ), ೨೦೦೧
೪. ನಿರಂತರ (ಸಂಶೋಧನ ವಿಮರ್ಶನ ಪ್ರಬಂಧಗಳು), ೨೦೦೧

**ಪಿಎಚ್.ಡಿ. ಮಹಾಪ್ರಬಂಧ** : ಪ್ರಾಚೀನ ಚಿತ್ರದುರ್ಗ
(ಮಾರ್ಗದರ್ಶಕರು : ಡಾ. ಎಂ.ಎಂ. ಕಲಬುರ್ಗಿ)

**ಸಂಪಾದನೆ** :

೧. ಚಿತ್ರದುರ್ಗದ ಎಸ್.ಜೆ.ಎಂ. ವಿದ್ಯಾಪೀಠ ಪ್ರಕಟಿಸುತ್ತಿದ್ದ 'ಸತ್ಯಶುದ್ಧ ಕಾಯಕ' ತ್ರೈಮಾಸಿಕ ವಿದ್ವತ್ ಪತ್ರಿಕೆಯ ಸಂಪಾದಕ (೮ ವರ್ಷ)
೨. ದುರ್ಗಸಿರಿ (ದುರ್ಗೋತ್ಸವ ೯೮ರ ಸ್ಮರಣ ಸಂಚಿಕೆ), ೧೯೯೯
೩. ಕೊಪ್ಪಳದ ಹೆಚ್ಚಿನ ಶಾಸನಗಳು, ೧೯೯೮
೪. ರಾಷ್ಟ್ರನೇತಾರ (ಎಸ್ಸೆನ್ ಜನ್ಮಶತಾಬ್ದಿ ಸ್ಮರಣ ಸಂಪುಟ), ೨೦೦೨.

**ಪ್ರಕಟಣೆಯ ವಿವಿಧ ಹಂತದಲ್ಲಿ** :

೧. ಅವಿಭಜಿತ ಚಿತ್ರದುರ್ಗ ಜಿಲ್ಲೆಯ ಹೊಸ ಶಾಸನಗಳ ಸಂಪುಟ.
೨. ಚಿತ್ರದುರ್ಗ ಪಾಳೆಯಗಾರರ ಚಾರಿತ್ರಿಕ ದಾಖಲೆಗಳು.

೩. ಚಿತ್ರದುರ್ಗ ಬೃಹನ್ಮಠದ ಐತಿಹಾಸಿಕ ಕಾಗದ ಪತ್ರಗಳು - ಸಂಪುಟ ೧; ಸಿಂಧುರಾಜ (ಷೇಕ್ಸ್‌ಪಿಯರ್ ಮಹಾಕವಿಯ ಕಿಂಗ್‌ಲಿಯರ್ ನಾಟಕದ ರೂಪಾಂತರ - ಸರಳರಗಳೆಯಲ್ಲಿ)
೪. ಮಹಾಕವಿಗಳತ್ತ ಎರಡು ಹೆಜ್ಜೆ (ಪಂಪ ಕುವೆಂಪು ವರ್ಜಿಲ್ ಮಿಲ್ಟನ್ ಇವರ ಮಹಾಕಾವ್ಯಗಳಿಗೆ ಸಂಬಂಧಿಸಿದ ವಿಮರ್ಶೆಯ ಲೇಖನಗಳು)
೫. ಸಾಕ್ಷಾತ್ಕರಣ (ಸಾಹಿತ್ಯಿಕ ವಿಮರ್ಶನ ಲೇಖನಗಳು)
೬. ಸಂಶೋಧನೆಯ ಸುತ್ತ (ಸಂಶೋಧನೆಯ ವಿವಿಧ ಅನುಭವಗಳು)
೭. ದ್ರಾವಿಡ ಐರೋಪ್ಯ (ಭಾಷಾ ವೈಜ್ಞಾನಿಕ ಸಂಶೋಧನೆ)
೮. Studies in Onamastics and Epigraphy (Research papers presented in various seminars)
೯. ವಚನ ಬೆಡಗು (ಬೆಡಗಿನ ವಚನಗಳು ಒಂದು ಸಮೀಕ್ಷೆ)
೧೦. ಚಿತ್ರದುರ್ಗ ಪಾಳೆಯಗಾರರ ಚರಿತ್ರೆ (ಈವರೆಗೆ ದೊರೆತ ದಾಖಲೆಗಳ ಆಧಾರಿತ)

**ಇತರೆ ಪ್ರಕಟಣೆಗಳು** : ೧. ಪ್ರಜಾವಾಣಿ, ಕನ್ನಡಪ್ರಭ, ವಿಜಯ ಕರ್ನಾಟಕ, ಸಾಧನೆ, ಕರ್ನಾಟಕ ಭಾರತಿ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಕನ್ನಡ ನುಡಿ, ದಿ. ಟೈಮ್ಸ್ ಆಫ್ ಇಂಡಿಯ ಮೊದಲಾದ ಪತ್ರಿಕೆಗಳಲ್ಲಿ ಸುಮಾರು ೧೫೦ ಲೇಖನಗಳ ಪ್ರಕಟಣೆ.

**ಗೌರವ / ಪುರಸ್ಕಾರ** : ೧. ರಾಷ್ಟ್ರಕವಿ ಎಂ. ಗೋವಿಂದ ಪೈ ಸ್ಮಾರಕ ಅಖಿಲ ಕರ್ನಾಟಕ ಕನ್ನಡ ಕವಿತಾ ಸ್ಪರ್ಧೆಯಲ್ಲಿ ದ್ವಿತೀಯ ಬಹುಮಾನ - ಬೆಳ್ಳಿಯ ಪದಕ ('ವರ್ಷ-ಶರತ್' ಕವಿತೆಗೆ)
೨. 'ಇತಿಹಾಸ ಕಥನ' ಪುಸ್ತಕಕ್ಕೆ '೨೦೦೧ರ ಉತ್ತಮ ಸಂಶೋಧನ ಕೃತಿ' ಎಂದು ಕರ್ನಾಟಕ ಸಾಹಿತ್ಯ ಅಕಾಡೆಮಿ ಪುಸ್ತಕ ಬಹುಮಾನ.
೩. ೨೦೦೪ರಲ್ಲಿ ಜರುಗಿದ ಹರಿಹರ ತಾಲ್ಲೂಕು ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ.



ಡಾ॥ ಹನುಮ ನಾಯಕ*

# ಅರಸೀಕೆರೆ ತಾಲ್ಲೋಕು ಚಲುವನ ಹಳ್ಳಿಯ ಬೃಹತ್ ಶಿಲಾಯುಗದ ನೆಲೆ

*ಚಲುವನಹಳ್ಳಿಯೊಂದು ಪ್ರಾಗೈತಿಹಾಸಿಕ ನೆಲೆ. ಇಲ್ಲಿ ಕಂಡುಬಂದಿರುವ ಸಾಲು ನಿಲುವುಗಲ್ಲುಗಳು ವಿಶೇಷವೆನಿಸಿ ಸಂಸ್ಕೃತಿಯನ್ನು ಅರ್ಥೈಸುವಲ್ಲಿ ನೆರವಾಗುತ್ತವೆ. ನಿಲುವುಗಲ್ಲುಗಳು ಕಂಡುಬಂದಿರುವ ಪರಿಸರದಲ್ಲಿರುವ ಕೆರೆಗಳು ಬೇಸಾಯದ ಬದುಕಿನ ಕುರುಹನ್ನು ತೋರುತ್ತವೆ : ಹಾಗೂ ಕಲ್ಲಾಸರೆ, ಹಗೇವುಗಳು, ವೀರಗಲ್ಲುಗಳು ಇಲ್ಲಿದ್ದು ಕ್ರಿ.ಪೂ. ೧೦ ಸಾವಿರದಿಂದ ಗಂಗರ ಕಾಲದವರೆಗಿನ ಬದುಕಿನ ಅವಶೇಷಗಳಾಗಿ ಕಂಡುಬರುತ್ತವೆ.*

ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೋಕು ಪ್ರಾಗೈತಿಹಾಸಿಕ ನೆಲೆಯ ನಕ್ಷೆಯಲ್ಲಿ ಪ್ರಮುಖ ಸ್ಥಾನ ಹೊಂದಿದೆ. ಈ ತಾಲ್ಲೋಕಿನಲ್ಲಿ ಸಂಶೋಧಕರು ಕೆಲವು ಪ್ರಾಗೈತಿಹಾಸಿಕ ನೆಲೆಗಳನ್ನು ಗುರುತಿಸಿದ್ದಾರೆ.[೧] ಆದರೆ ಇನ್ನೂ ಕೆಲವು ನೆಲೆಗಳು ಸಂಶೋಧಕರ ಕಣ್ಣಿನಿಂದ ತಪ್ಪಿಸಿಕೊಂಡಂತೆ ಕಂಡುಬರುತ್ತದೆ. ಇದಕ್ಕೆ ಕಾರಣ ಬಹುಶಃ ಸಾರಿಗೆ ಸಂಪರ್ಕದ ಕೊರತೆಯಿರಬಹುದು. ಇಂತಹ ಹೊಸ ನೆಲೆಗಳಲ್ಲಿ ಚಲುವನಹಳ್ಳಿಯೂ ಒಂದಾಗಿದೆ.

ಚಲುವನಹಳ್ಳಿ ಗ್ರಾಮವು ಬೆಂಗಳೂರು ಶಿವಮೊಗ್ಗ ರಾಷ್ಟ್ರೀಯ ಹೆದ್ದಾರಿಯಲ್ಲಿ ಅರಸೀಕೆರೆ ಮತ್ತು ಬಾಣಾವರ ಮಧ್ಯೆ ಪಶ್ಚಿಮ ಭಾಗದಲ್ಲಿ ಸುಮಾರು ಒಂದು ಕಿ.ಮೀ. ದೂರದಲ್ಲಿದೆ. ಈಗ ಗಮನಿಸಲಾಗಿರುವ ನೆಲೆಯು ಗ್ರಾಮದ ದಕ್ಷಿಣ ಭಾಗದಲ್ಲಿ ಸುಮಾರು ಒಂದು ಫರ್ಲಾಂಗು ಅಂತರದಲ್ಲಿದ್ದು, ಈ ಗ್ರಾಮಕ್ಕೆ ಅಂಟಿಕೊಂಡಂತಿದೆ. ಇಲ್ಲಿ ಒಂದೇ ಸಾಲಿನಲ್ಲಿ ಐದು ನಿಲುಗಲ್ಲುಗಳು ಉತ್ತರದಿಂದ ದಕ್ಷಿಣ ದಿಕ್ಕಿನಲ್ಲಿದ್ದು, ಇವೆಲ್ಲವೂ ಪೂರ್ವಾಭಿಮುಖವಾಗಿವೆ. ಇವುಗಳಲ್ಲಿ ಮೊದಲನೆಯದು ಸ್ವಲ್ಪ ದೊಡ್ಡದಾಗಿದ್ದು ಸುಮಾರು ಮೂರುವರೆ ಅಡಿ ಎತ್ತರ ಹಾಗೂ ಮೂರು ಅಡಿ ಅಗಲ ಹಾಗೂ ಒಂದು ಅಡಿ ದಪ್ಪವಿದೆ. ಇದಕ್ಕೆ ಅಂಟಿಕೊಂಡಂತೆ ದಕ್ಷಿಣ ಭಾಗದಲ್ಲಿ ಸುಮಾರು ಒಂದೂವರೆ ಅಡಿ ಎತ್ತರ, ಎರಡು ಅಡಿ ಅಗಲ ಮತ್ತು ಮುಕ್ಕಾಲು ಅಡಿ ದಪ್ಪದ ಮತ್ತೊಂದು ನಿಲುಗಲ್ಲಿದೆ. ಇದರ ದಕ್ಷಿಣಕ್ಕೆ ಸುಮಾರು ೩೦ ಅಡಿ ಅಂತರದಲ್ಲಿ ಎರಡನೇ ನಿಲುಗಲ್ಲು ಮತ್ತು ಉಳಿದ ಮೂರು ನಿಲುಗಲ್ಲುಗಳು ಸಹ ಸುಮಾರು ೪೦ ಅಡಿ ಅಂತರದಲ್ಲಿವೆ. ಈ ಸ್ಥಳದಲ್ಲಿ ಭೂಮಿಯು ಫಲವತ್ತಾಗಿದ್ದು ಕೃಷಿ ಚಟುವಟಿಕೆಯು ನಡೆಯುತ್ತಿದೆ. ಕೃಷಿಕರು ಈ ನಿಲುಗಲ್ಲುಗಳು ತಮ್ಮ ಚಟುವಟಿಕೆಗಳಿಗೆ ಅಡ್ಡಬರುತ್ತವೆ ಎಂಬ ಕಾರಣದಿಂದ ಐದರಲ್ಲಿ ನಾಲ್ಕನ್ನು ತುಂಡು ಮಾಡಿದ್ದಾರೆ. ಇವುಗಳ ಬುಡವನ್ನು ಸೂಕ್ಷ್ಮವಾಗಿ ಗಮನಿಸಿದರೆ ಮೂಲತಃ ಇವು ಐದು ಅಡಿಗಳಿಗಿಂತ ಹೆಚ್ಚು ಎತ್ತರವಿದ್ದಂತೆ ಕಂಡುಬರುತ್ತದೆ. ಈ ನಿಲುಗಲ್ಲುಗಳ ಸುತ್ತಮುತ್ತ ಈಗಲೂ ಕಪ್ಪು ಮತ್ತು ಕಪ್ಪು ಮಿಶ್ರಿತ ಕೆಂಪು ಬಣ್ಣದ ಮಡಕೆ ಚೂರುಗಳು ಸಿಗುತ್ತವೆ. ಇಲ್ಲಿಯ ಸಂಸ್ಕೃತಿಯನ್ನು ಅರಿಯಲು ಉತ್ಖನನದ ಕೆಲಸವಾಗಬೇಕು. ಅದಾಗದೇ ನಾವು ಕೇವಲ ಹೊರಗಿನ ಲಕ್ಷಣಗಳ ಆಧಾರದ ಮೇಲೆ ಕರಾರುವಕ್ಕಾಗಿ ಏನನ್ನೂ ಹೇಳುವುದು ಅವೈಜ್ಞಾನಿಕವಾಗುತ್ತದೆ. ಅದಾಗುವವರೆಗೆ ನಾವು ಕೇವಲ ಊಹೆಗಳ ಮೂಲಕ ಇಲ್ಲಿಯ ಸಂಸ್ಕೃತಿಯನ್ನು ರಚಿಸಬಹುದು.

ಈ ಮೇಲಿನ ವಿವರಣೆಯಿಂದ ಕೆಲವು ಪ್ರಶ್ನೆಗಳು ಸಹಜವಾಗಿ ಮೂಡಿಬರುತ್ತವೆ. ಅವುಗಳೆಂದರೆ;

* ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ.

ಎಸ್. ಜಿ. ರಾಮದಾಸರೆಡ್ಡಿ*

# ಹಳೇ ದೊಡ್ಡೇರಿಯ ಪ್ರಾಕ್ಚಾರಿತ್ರಿಕ ಕುರುಹುಗಳು

*ಹಳೆ ದೊಡ್ಡೇರಿ ಇಂದಿಗೂ ಪ್ರಚಲಿತವಾದ ಹೆಸರು. ಶಿಲಾಯುಗದಿಂದ ಈತನಕದ ಜನಜೀವನದ ಬಗ್ಗೆ ಮಾಹಿತಿ ಇದೆ ಎಂದಿದೆ. ೧೬೯೦-೯೬ರ ದೊಡ್ಡೇರಿ ಕದನ ಇತಿಹಾಸ ಪ್ರಸಿದ್ಧ, ಶಿಲಾಯುಗದ ಆಯುಧಗಳ ಸಮಾಧಿಗಳು ಶಾತವಾಹನರ ಕಾಲದ ಮಡಿಕೆಗಳು ಕಮ್ಮಾರರ ಬಳಕೆಯ ಅಡಿಗಲ್ಲುಗಳು, ಒನಕೆಗಳು ಇವುಗಳು ಗತಕಾಲದ ಎಲ್ಲ ಪರಿಸರವನ್ನೂ ಕಣ್ಣಿಟ್ಟುವಂತೆ ಚಿತ್ರಿಸುತ್ತವೆ.*

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನಿಂದ ೫ ಕಿ.ಮೀ. ದೂರದಲ್ಲಿರುವ ಗ್ರಾಮ ದೊಡ್ಡೇರಿ. ಪಕ್ಕದಲ್ಲಿರುವ ಇನ್ನೊಂದು ಗ್ರಾಮ ಡಿ. ಉಪ್ಪಾರಹಟ್ಟಿ, ಈ ಎರಡು ಗ್ರಾಮಗಳ ಮಧ್ಯೆ ಇರುವ ಹಾಗೂ ಈ ಗ್ರಾಮಗಳಿರುವ ಸ್ಥಳವೇ "**ಹಳೇ ದೊಡ್ಡೇರಿ**".

ಈ ನೆಲೆಯು ಉತ್ತರದಲ್ಲಿ ಮೊಳಕಾಲ್ಮೂರು ತಾಲ್ಲೂಕು ಹಾಗೂ ಬಳ್ಳಾರಿ ಜಿಲ್ಲೆ, ದಕ್ಷಿಣದಲ್ಲಿ ಹಿರಿಯೂರು ತಾಲ್ಲೂಕು, ಪಶ್ಚಿಮದಲ್ಲಿ ಜಗಲೂರು ತಾಲ್ಲೂಕು ಮತ್ತು ಚಿತ್ರದುರ್ಗ ತಾಲ್ಲೂಕುಗಳು, ಪೂರ್ವದಲ್ಲಿ ಅನಂತಪುರ ಜಿಲ್ಲೆ ಮತ್ತು ಪಾವಗಡ ತಾಲ್ಲೂಕುಗಳಿಂದ ಆವೃತವಾಗಿರುವ, ಚಿತ್ರದುರ್ಗ ಜಿಲ್ಲೆಯ ಉಪವಿಭಾಗಕ್ಕೆ ಸೇರಿದ ತಾಲ್ಲೂಕು ಕೇಂದ್ರ ಭಾಗವಾಗಿದೆ. ಈ ತಾಲ್ಲೂಕು ಸಮುದ್ರಮಟ್ಟದಿಂದ ೬೦೦ ಮೀಟರ್ ಎತ್ತರದಲ್ಲಿದ್ದು, ಚಳಿಗಾಲದಲ್ಲಿ ಉಷ್ಣತೆ ೨೭.೯° ಸೆಂ, ಬೇಸಿಗೆಯಲ್ಲಿ ೩೬.೨° ಸೆಂ.ನಿಂದ ೪೧° ಸೆಂ.ವರೆಗೆ ಇರುತ್ತದೆ. ವಾರ್ಷಿಕ ಸರಾಸರಿ ಮಳೆ ೬೫೫ ಮಿ.ಮೀ. ಬೀಳುತ್ತದೆ.

ತಾಲ್ಲೂಕಿನಲ್ಲಿ ಕಣಶಿಲೆ, ಶಿಸ್ಟ್‌ಕಲ್ಲು, ಕ್ವಾರ್ಟ್‌ಜೈಟ್ ಸಮೂಹ ಶಿಲೆಗಳು, ಸುಣ್ಣದಕಲ್ಲು, ಕಬ್ಬಿಣಯುಕ್ತ ಶಿಲಾಪದರಗಳು ಇವೆ. ಅಲ್ಲಿ ಡಾಲರೈಟ್ ನುಗ್ಗು ಶಿಲೆಗಳು ಕಂಡುಬರುತ್ತವೆ.

ಈ ನೆಲೆಯು ಶಿಲಾಯುಗದ ಕಾಲದಿಂದ ಹಿಡಿದು ಪ್ರಸ್ತುತ ದಿನಗಳವರೆಗೆ ಹಂತ ಹಂತವಾಗಿ ಜನ ಜೀವನ ಇದ್ದ ಬಗ್ಗೆ ಮಾಹಿತಿ ಒದಗಿಸುತ್ತದೆ. ಜೊತೆಗೆ ಇತಿಹಾಸ ಪ್ರಸಿದ್ಧವಾದ '**ದೊಡ್ಡೇರಿಕದನ**' ಕ್ರಿ.ಶ. ೧೬೯೦-೧೬೯೬ರವರೆಗೆ ಮೊಗಲರಿಗೂ, ಮರಾಠೆಯರಿಗೂ ಯುದ್ಧ ನಡೆದಾಗ, ಶಿರಾದ ಖಾಸಿಂ ಖಾನ್‌ಗೂ ಮರಾಠೆಯರ ಸಂತಾಜಿ ಘೋರ್ಪಡೆಗೂ ದೊಡ್ಡೇರಿ ನೆಲದಲ್ಲಿ ಭಾರಿ ಕಾಳಗ ನಡೆದಾಗ, ಚಿತ್ರದುರ್ಗದ ಬಿಚ್ಚುಗತ್ತಿ ಭರಮಣ್ಣನಾಯಕರು ಮರಾಠೆಯರಿಗೆ ಸಹಾಯ ಮಾಡಿದಾಗ ಮೊಗಲರು ಸೋತು, ಮರಾಠೆಯರಿಗೆ ಜಯವಾಯಿತು. ಈ ಸಂದರ್ಭದಲ್ಲಿ ದೊಡ್ಡೇರಿ ಕೋಟೆಯಲ್ಲಿದ್ದ ಮೊಗಲರು ಇಲ್ಲಿ ಭಾರಿ ಕಂದಕ, ಕೋಟೆಕೊತ್ತಲಗಳನ್ನು ನಿರ್ಮಿಸಿದ್ದರಂತೆ, ಈಗಲೂ ಅವಶೇಷಗಳನ್ನು ಕಾಣಬಹುದಾಗಿದೆ. ಹಾಗೆಯೇ ೧೮೮೨ರವರೆಗೆ ದೊಡ್ಡೇರಿ ತಾಲ್ಲೂಕು ಕೇಂದ್ರವಾಗಿದ್ದು, ಈ ಸ್ಥಳದಲ್ಲಿ ಹಿಂದೆ ಕಾಗದದ ಕಾರ್ಖಾನೆ ಇದ್ದು 'ದೊಡ್ಡೇರಿ (ಕಾ) ಗಜ' ಎಂದೇ ಖ್ಯಾತಿ ಆಗಿತ್ತು ಮತ್ತು ಕಪ್ಪುಹಾಯಿಗೆ ಪ್ರಸಿದ್ಧವಾಗಿತ್ತು.

ಈ ನೆಲೆಯನ್ನು ಸ್ಥಳೀಯರು **ಹಾಳೂರು, ಬೂದಿದಿಬ್ಬದ ಹೊಲ** ಎಂದು ಕರೆಯುತ್ತಾರೆ. ಈ ನೆಲೆಯು ಸುಮಾರು ೧೫೦ ಎಕರೆ ವಿಸ್ತೀರ್ಣದಲ್ಲಿ ಹರಡಿಕೊಂಡಿದೆ ಎಂದು ಹೇಳಬಹುದು.

ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕು ಮುಖಾಂತರ ಹರಿದುಬರುವ ವೇದಾವತಿ ನದಿ ಚಿತ್ರದುರ್ಗ ಜಿಲ್ಲೆಯನ್ನು ಪ್ರವೇಶಿಸಿ

* ಹಿರಿಯ ಶ್ರೇಣಿ ಇತಿಹಾಸ ಉಪನ್ಯಾಸಕರು, ಹೆಚ್.ಪಿ.ಪಿ.ಸಿ. ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ

ದಕ್ಷಿಣ ಮತ್ತು ಪೂರ್ವ ಭಾಗದ ಎಲ್ಲೆಗೆ ಸುಮಾರು ಸಮಾನಾಂತರ ವಾಗಿ ಸಾಗುವ ಈ ನದಿ ನೈರುತ್ಯದಲ್ಲಿ ಹೊಸದುರ್ಗ ತಾಲ್ಲೂಕಿನ ಮುಖಾಂತರ ಹಿರಿಯೂರು ಮತ್ತು ಚಳ್ಳಕೆರೆ ತಾಲ್ಲೂಕುಗಳ ಮುಖಾಂತರ ಹರಿಯುತ್ತದೆ. ಸುವರ್ಣಮುಖಿ ನದಿಯು ತುಮಕೂರು ಜಿಲ್ಲೆಯಲ್ಲಿ ಹುಟ್ಟಿ ಹಿರಿಯೂರು ತಾಲ್ಲೂಕಿನ ಇಕ್ಕನೂರು ಬಳಿ ಚಿತ್ರದುರ್ಗ ಜಿಲ್ಲೆ ಪ್ರವೇಶಿಸಿ ೧೧ ಕಿ.ಮೀ. ದೂರ ಹರಿದು '**ಕೂಡ್ಲಹಳ್ಳಿ**' ಹತ್ತಿರ ವೇದಾವತಿ ನದಿಗೆ ಸೇರುತ್ತದೆ. ಮತ್ತು ಈ ನದಿಗೆ ಗರಣಿಹಳ್ಳ, ನಾಯಕನಹಟ್ಟಿ ಹಳ್ಳ ಸೇರುತ್ತವೆ. ಪಾವಗಡ ತಾಲ್ಲೂಕಿನ ಕೆಲವು ಹಳ್ಳಿಗಳನ್ನು ಬಳಸಿಕೊಂಡು ಆಂಧ್ರ ಗಡಿಯಂಚಿನ ಮುಖಾಂತರ ಪೆದ್ದವಂಕ (ದೊಡ್ಡಹಳ್ಳ) ವೇದಾವತಿ ನದಿ ಸೇರುತ್ತದೆ. ಮುಂದೆ ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲ್ಲೂಕು, ಸಿರಗುಪ್ಪ ತಾಲ್ಲೂಕಿನ ಹತ್ತಿರ '**ಸಿದ್ದರಗದ್ದೆ**' ಗ್ರಾಮದ ಬಳಿ ತುಂಗ ಭದ್ರಾ ನದಿಯನ್ನು ಸೇರುತ್ತದೆ.

**ಸೂಕ್ಷ್ಮ ಶಿಲಾಯುಗ** : ಈ ನೆಲೆಯಲ್ಲಿ ಸೂಕ್ಷ್ಮ ಶಿಲಾಯುಗಕ್ಕೆ ಸಂಬಂಧಿಸಿದ ಅವಶೇಷಗಳು ದೊರೆಕಿವೆ. ಈ ಸಂಸ್ಕೃತಿಯ ಮಾನವನು ಆಯುಧಗಳನ್ನು ತಯಾರಿಸಲು ಉಪಯೋಗಿಸುತ್ತಿದ್ದ ಕಚ್ಚಾವಸ್ತುಗಳು, ಕೋರ್‌ಗಳು ಮತ್ತು ಇನ್ನಿತರೆ ಆಯುಧಗಳು ಸಿಕ್ಕಿವೆ.

**ನೂತನ ಶಿಲಾಯುಗ** : ನೂತನ ಶಿಲಾಯುಗಕ್ಕೆ ಸಂಬಂಧಿಸಿ ದಂತೆ ಈ ನೆಲೆಯಲ್ಲಿ ಹಾಳಾದ ಬೂದಿದಿಬ್ಬಗಳು, ಬೂದುಬಣ್ಣದ ಮಡಿಕೆಯ ಕಂಠಗಳು, ಧಾನ್ಯ ಸಂಗ್ರಹಣೆಯ ಮಡಿಕೆಯ ಭಾಗಗಳು, ರಂಧ್ರವಿರುವ ಹೂಜಿಯ ಮೊನೆ, ಒರಟಾದ, ನಯಗೊಳಿಸಿದ ಬೂದುಬಣ್ಣದ ಮಡಿಕೆ ಭಾಗಗಳು, ಮಡಿಕೆಗಳ ಮೇಲೆ ತ್ರಿಕೋನಕಾರವಾಗಿ, ಚುಕ್ಕೆಗಳಿಂದ, ಎಲೆಯ ಚಿಹ್ನೆಗಳಿಂದ, ಉಬ್ಬು ಗೆರೆಗಳಿಂದ, ಹಾವಿನ ಸುರುಳಿಯಾಕಾರವಾಗಿ, ಅಲಂಕರಿಸಿದ ಮಡಿಕೆಯ ಭಾಗಗಳು ಸಿಕ್ಕಿವೆ. ಮತ್ತು ಚಿಕ್ಕ ಮಡಿಕೆ ಅರ್ಧಭಾಗ, ಕಪ್ಪು ಮಡಿಕೆ ಮೇಲೆ ಕೆಂಪು ಬಣ್ಣ ಲೇಪನ ಮಾಡಿರುವ ಮಡಿಕೆ ಭಾಗಗಳು, ಬಣ್ಣ ಹಚ್ಚಲು ಬಳಸಿದ ಕೆಂಪು ಬಣ್ಣದ ಕಲ್ಲುಗಳು, ದುಂಡನೆಯ ಬಿಲ್ಲೆಗಳು, ರಂಧ್ರವಿರುವ ದುಂಡನೆಯ ಬಿಲ್ಲೆಗಳು,


"ಹಳೇ ದೊಡ್ಡೇರಿ"ಯಲ್ಲಿ ಸಿಕ್ಕಿರುವ ಅವಶೇಷಗಳ ಚಿತ್ರ

ಕವಣೆ ಕಲ್ಲುಗಳು, ಕುಟ್ಟುವ ಕಲ್ಲುಗಳು, ಅರೆಯುವ ಕಲ್ಲುಗಳು ಸಿಕ್ಕಿವೆ.

ಬೂದು ಬಣ್ಣದ ನೀರಿನ ತೊಟ್ಟಿಯಂತೆ ಇರುವ ಮಡಿಕೆಯ ಮೊನೆ, ಹಾಳಾದ ಮನೆಗಳ ತಳಪಾಯಗಳು, ಕಲ್ಲಿನ ಕೊಡಲಿ, ಉಳಿ, ಚಾಕು (ಉದ್ದ ೧೦ ಸೆಂ.ಮೀ., ಅಗಲ ೩ ಸೆಂ.ಮೀ. ಹರಿತವಾಗಿದೆ) ಕಲ್ಲಿನ ಕೊಡಲಿಯನ್ನು ತಯಾರಿಸಲು ಬಳಸಿದ ೪ ಕಲ್ಲುಗಳು ಸಿಕ್ಕಿವೆ. ಈ ನೆಲೆಯನ್ನು ವ್ಯವಸಾಯಕ್ಕೆ ಅಳವಡಿಸಿರು ವುದರಿಂದ ಅವಶೇಷಗಳು ಹಾಳಾಗುತ್ತಿವೆ.

**ಬೃಹತ್ ಶಿಲಾಯುಗ** : ಈ ನೆಲೆಯಲ್ಲಿ ಕಪ್ಪು, ಕೆಂಪು, ಕಪ್ಪುಕೆಂಪು ಬಣ್ಣದ ಮಡಿಕೆಯ ಚೂರುಗಳು ವಿವಿಧ ನಮೂನೆಯಲ್ಲಿ ಸಿಕ್ಕಿವೆ. ಕಂಠಗಳ ಕೆಳಗೆ ಉಬ್ಬಿನ ಭಾಗದಲ್ಲಿ ಕೊರೆದ ಗೆರೆಗಳು, ತ್ರಿಕೋನಕಾರದ, ಇನ್ನಿತರೆ ಅಲಂಕಾರದ ಮಡಿಕೆಯ ಭಾಗಗಳು, ಮಡಿಕೆಯ ತಳಭಾಗಗಳು, ದಪ್ಪ ಮಡಿಕೆಯ ತುಣುಕಿನ ಮೇಲೆ ಎಲೆಯ ರೆಂಬೆ ಭಾಗ, **೪ ಟೆರಕೊಟ್ಟ ದುಂಡನೆಯ ಮಣಿಗಳು** ಈ ಮಣಿಗಳ ಮಧ್ಯೆ ೬ ಚಿಕ್ಕ ಗೆರೆಗಳನ್ನು, ಮಧ್ಯ ರಂಧ್ರವನ್ನು ಕೊರೆದಿದ್ದಾರೆ. ದುಂಡನೆಯ ಚದುರ ಬಿಲ್ಲೆಗಳು, ರಂಧ್ರವಿರುವ ದುಂಡಾದ ೧೦ ಬಿಲ್ಲೆಗಳು ಸಿಕ್ಕಿವೆ.

ಕಬ್ಬಿಣ ಕರಗಿಸಿದ ನಂತರ ಉಳಿಯುವ ಕಿಟ್ಟ, ಕಬ್ಬಿಣದ ತುಂಡು, ಚಿಕ್ಕ ಕುಡುಗೋಲು, ನೀರಿನ ಹೂಜಿಯ ಹಿಡಿ, ಹೂಜಿಯ ರಂಧ್ರದ ಮೊನೆಗಳು, ಕವಣೆಕಲ್ಲು, ಕುಟ್ಟುವ ಕಲ್ಲು, ಅರೆಯುವ ಕಲ್ಲುಗಳು ಸಿಕ್ಕಿವೆ.

**ಸಮಾಧಿಗಳು** : ಹಾಳಾದ ಸಮಾಧಿಗಳ ಕುರುಹುಗಳು ಪತ್ತೆ ಆಗಿದ್ದು, ಈ ಸ್ಥಳದಲ್ಲಿ ಹೇರಳವಾಗಿ ಮೂಳೆ ಭಾಗಗಳು, ಹಲ್ಲಿನ ಭಾಗಗಳು, ಸಮಾಧಿಗಳಲ್ಲಿ ಬಳಸುವ ದೊಡ್ಡಗಾತ್ರದ ಕೆಂಪು, ಕಪ್ಪು, ಕೆಂಪುಕಪ್ಪು ಬಣ್ಣದ ಮಡಿಕೆಯ ಭಾಗಗಳು. ಸಮಾಧಿ ಗಳಲ್ಲಿ ಬಳಸುವ ಕಲ್ಲುಗಳು, ಕಂಠದ ಭಾಗಗಳು, ಈ ಸ್ಥಳದಲ್ಲಿ ೧ ಇಂಚು ಉದ್ದ, ೨ ಸೆಂ.ಮೀ. ಅಗಲದ ಬಳಪದ ಕಲ್ಲಿನ, ಮಧ್ಯ ರಂಧ್ರವಿರುವ ೧ ಡಾಲರ್ ಸಿಕ್ಕಿದೆ.

ಈ ಸ್ಥಳದಲ್ಲಿ ಕನ್ನೇಶ್ವರ ದೇವಾಲಯವಿದ್ದು, ಈ ದೇವಾಲಯದ ಸುತ್ತಲೂ ಇತ್ತೀಚಿಗೆ ಪೌಳಿಗೋಡೆಯನ್ನು ಕಟ್ಟಿದ್ದಾರೆ. ಈ ಗೋಡೆಯನ್ನು ಕಟ್ಟಲು ಬುನಾದಿ ತೆಗೆಯುವಾಗ ಚೀಲಗಟ್ಟಲೆ ಮೂಳೆ ಭಾಗಗಳು, ಹಲ್ಲಿನ ಭಾಗಗಳು, ತಲೆಬುರುಡೆಗಳು, ಕೆಂಪು, ಕಪ್ಪು, ಕೆಂಪುಕಪ್ಪು ಮಿಶ್ರಿತ ಮಡಿಕೆಗಳ ಭಾಗಗಳು ಸಿಕ್ಕಿದ್ದವು ಎಂದು ಸ್ಥಳೀಯರು ಹೇಳುತ್ತಾರೆ. ಇಂದಿಗೂ ಗೋಡೆಯ ಪಕ್ಕದ ತಳಭಾಗದಲ್ಲಿ ಮಡಿಕೆಯ, ಮೂಳೆ ಭಾಗಗಳು ಕಂಡುಬರುತ್ತವೆ.

ಪೌಳಿಗೋಡೆಯ ಮಧ್ಯೆ ಚಚ್ಚೌಕಾರದ ಕಟ್ಟಡವಿದ್ದು, ಕಟ್ಟಡದ ಮೇಲೆ ಚಿಕ್ಕ ಗುಡಿಕಟ್ಟಿ ಬಹಳ ಆಕರ್ಷಕವಾದ ಕನ್ನೇಶ್ವರ ಎಂಬ ಲಿಂಗವನ್ನು ಪ್ರತಿಷ್ಠಾಪಿಸಿದ್ದಾರೆ. ಈ ದೇವಾಲಯದ ಭಾಗವನ್ನು

ನೋಡಿದಾಗ ಚಚ್ಚೌಕಾರವಾಗಿರುವ ಬುನಾದಿಯ ಕಟ್ಟಡದ ಭಾಗವು ಬೃಹತ್‌ಶಿಲಾಯುಗದ ಸಮಾಧಿ ಆಗಿರಬಹುದಾಗಿದೆ.



"ಹಳೇ ದೊಡ್ಡೇರಿ"ಯಲ್ಲಿ ಸಿಕ್ಕಿರುವ ಅವಶೇಷಗಳ ಚಿತ್ರ

**ಶಾತವಾಹನರು** : ಈ ನೆಲೆಯಲ್ಲಿ ಕೆಂಪು, ಕಪ್ಪು, ಕಪ್ಪುಕೆಂಪು ಬಣ್ಣದ ವಿವಿಧ ನಮೂನೆಯ ಮಡಿಕೆಗಳ ಭಾಗಗಳು ಸಿಕ್ಕಿವೆ. ಮಡಿಕೆಗಳ ಭಾಗಗಳ ಮೇಲೆ ಬಿಳಿ, ಸೀಸಬಣ್ಣಗಳಿಂದ ಅಲಂಕಾರ ಗೊಳಿಸಿದ ಕ್ಯಾವೆಲಿನ್ ಪೈಂಟೆಡ್ ರಸ್ಸೆಟ್ ಕೊಟೆಡ್ ಮಡಿಕೆ ಚೂರುಗಳು (Kaolin painted resset coated pottery piecrs) ಸಿಕ್ಕಿವೆ. ಈ ಸಂಸ್ಕೃತಿಯ ಮಾನವನು ಕಟ್ಟಿದ ಇಟ್ಟಿಗೆ ಗೋಡೆ ಪತ್ತೆ ಆಗಿದೆ. ಈ ಗೋಡೆಯಲ್ಲಿರುವ ಇಟ್ಟಿಗೆಗಳು (೧) ಉದ್ದ - ೩೩ ಸೆಂ.ಮೀ., ಅಗಲ - ೨೦ ಸೆಂ.ಮೀ., ದಪ್ಪ - ೭ ಸೆಂ.ಮೀ. ಇದೆ. (೨) ೩೦ ಸೆಂ.ಮೀ. ಉದ್ದ, ೨೦ ಸೆಂ.ಮೀ. ಅಗಲ, ೭ ಸೆಂ.ಮೀ. ದಪ್ಪ ಈ ರೀತಿ ವಿವಿಧ ಅಳತೆಗಳಲ್ಲಿ ಇಟ್ಟಿಗೆಗಳು ಇವೆ. ಈ ಗೋಡೆಯನ್ನು ನೆಲದ ಮೇಲೆ ಇಟ್ಟಿಗೆ ಇಟ್ಟು, ಇಟ್ಟಿಗೆಯ ಮೇಲೆ ತೆಳ್ಳಗೆ ಕಲೆಸಿದ ಮಣ್ಣು ಹಾಕಿ ಗೋಡೆ ಕಟ್ಟಿದ್ದಾನೆ. ಇಟ್ಟಿಗೆಗಳ ಮೇಲೆ ಬೆರಳು ಗುರುತುಗಳು ಎದ್ದು ಕಾಣುತ್ತವೆ. ಈ ಗೋಡೆಯು ಮನೆಯ, ಕೋಟೆಯ ಇಲ್ಲ ಬೇರೆ ಯಾವ ಗೋಡೆ ಎನ್ನುವುದರ ಬಗ್ಗೆ ಭೂ ಸಂಶೋಧನೆಯಿಂದ ತಿಳಿಯಬೇಕಿದೆ.

**ಈ ನೆಲೆಯಲ್ಲಿ ನೂಲಲು ಬಳಸಿದ ೩ ತಿರುಗಣಿಗಳು ಸಿಕ್ಕಿದ್ದು**, (೧) ೧೦ ಸೆಂ.ಮೀ. ಉದ್ದ, ೭ ಸೆಂ.ಮೀ. ಅಗಲ, ೧ ಅಡಿ ಸುತ್ತಳತೆ ಇದೆ. ರಂಧ್ರ - ಮುಂಭಾಗ ೫ ಸೆಂ.ಮೀ., ಹಿಂಭಾಗ - ೪ ೧/೪ ಸೆಂ.ಮೀ. ಇದೆ. (೨) ೧೦ ಸೆಂ.ಮೀ. ಉದ್ದ, ೯.೫ ಸೆಂ.ಮೀ. ಅಗಲ, ೧ ಅಡಿ ಸುತ್ತಳತೆ, ರಂಧ್ರ - ಮುಂಭಾಗ ೨ ಸೆಂ.ಮೀ., ಹಿಂಭಾಗ ೨ ಸೆಂ.ಮೀ. ಇದೆ. (೩) ಮುರಿದಿದೆ, ಈ ಕಲ್ಲುಗಳನ್ನು ಸಾಬೂನು ಕಲ್ಲಿನಲ್ಲಿ ಮಾಡಿಕೊಂಡಿದ್ದಾನೆ.

***ಕಮ್ಮಾರ ಬಳಸುವ ಅಡಿಗಲ್ಲುಗಳು ಎರಡು ಸಿಕ್ಕಿದ್ದು ಅವುಗಳಲ್ಲಿ ಒಂದು** ೨೦ ಸೆಂ.ಮೀ. ಉದ್ದ, ೧೭ ಸೆಂ.ಮೀ. ಅಗಲ ಮೇಲ್ಭಾಗದಲ್ಲಿದೆ. ಕೆಳಭಾಗದಲ್ಲಿ ೪ ಸೆಂ.ಮೀ. ಎತ್ತರ, ೧೪ ಸೆಂ.ಮೀ. ಅಗಲವಿದೆ. ಇನ್ನೊಂದು ಚಿಕ್ಕ ಅಡಿಗಲ್ಲು ಸಿಕ್ಕಿದೆ.

*ಒನಕೆಗಳು : ೪ ಸಿಕ್ಕಿದ್ದು ಮುರಿದಿವೆ, (೧) ದೊಡ್ಡ ಒನಕೆ - ೯ ಸೆಂ.ಮೀ. ಉದ್ದ, ೮ ಸೆಂ.ಮೀ. ಅಗಲ, ೨೮ ಸೆಂ.ಮೀ. ಸುತ್ತಳತೆ ಇದೆ. (೨) ೭ ಸೆಂ.ಮೀ. ಉದ್ದ, ೩ ೧/೨ ಸೆಂ.ಮೀ. ದಪ್ಪ, ೧೨ ಸೆಂ.ಮೀ. ಸುತ್ತಳತೆ ಇದೆ, ಈ ಒನಕೆಯನ್ನು ಔಷಧಿ ಇತರೆ ಚಿಕ್ಕ ಸಾಮಾನುಗಳನ್ನು ಪುಡಿಮಾಡಲು ಬಳಸಿರಬಹುದು. ಜೊತೆಗೆ ಅರ್ಧಚಂದ್ರಾಕೃತಿಯ ಕಲ್ಲುಗಳು, **ಆಯುಧಗಳನ್ನು ನಯಗೊಳಿಸಲು ಬಳಸಿದ ೩ ಕಲ್ಲುಗಳು ಸಿಕ್ಕಿವೆ** (೧) ೧೦ ಸೆಂ.ಮೀ. ಉದ್ದ, ೭ ಸೆಂ.ಮೀ. ಅಗಲ, ದಪ್ಪ ೩ ಸೆಂ.ಮೀ. ಇದ್ದು ಚಿಕ್ಕ ಆಯುಧಗಳನ್ನು ನಯಗೊಳಿಸಲು ಬಳಸಿರಬಹುದಾಗಿದೆ. (೨) ೨೪ ಸೆಂ.ಮೀ. ಉದ್ದ, ೧೭ ಸೆಂ.ಮೀ. ಅಗಲ, ೫.೫ ಸೆಂ.ಮೀ. ದಪ್ಪವಿದ್ದು ಬಿಳಿಕಲ್ಲನ್ನು ಬಳಸಿ ಆಯುಧಗಳನ್ನು ನಯಗೊಳಿಸಿಕೊಂಡಿದ್ದಾನೆ. ಹಾಗೆಯೇ ರಾಗಿ ಬೀಸುವ ಮುರಿದ ಕಲ್ಲಿನ ಭಾಗ ಸಿಕ್ಕಿದ್ದು ೧೬ ಸೆಂ.ಮೀ. ಉದ್ದ, ೧೬ ಸೆಂ.ಮೀ. ಅಗಲ, ೧೦ ಸೆಂ.ಮೀ. ದಪ್ಪವಿದೆ.

ಮುರಿದ ಕಮಲಾಕಾರದ ಅಲಂಕಾರದ ಹಿಡಿದೀಪ ಸಿಕ್ಕಿದೆ, ಬಿಳಿ ಗ್ರಾನೈಟ್ ಕಲ್ಲಿನಲ್ಲಿದೆ. ಜೊತೆಗೆ ನಯಗೊಳಿಸಿದ ಹಾಸುಗಲ್ಲುಗಳು, ನೆಲಕ್ಕೆ ಹಾಕುವ ಹಾಸು ಇಟ್ಟಿಗೆಗಳು, ಮೂಲೆ ಇಟ್ಟಿಗೆಗಳು, ವಿವಿಧ ದಪ್ಪ, ವಿವಿಧ ಆಕಾರಗಳಲ್ಲಿ (ಚಚೌಕಾರ, ತ್ರಿಕೋನ, ದೀರ್ಘಾಚತುರ್ಭುಜ, ಓರೆಯಾಕಾರ) ಅಲಂಕಾರಿಕವಾಗಿ ಮಾಡಿದ ಇಟ್ಟಿಗೆಗಳು ಸಿಕ್ಕಿವೆ.

ಅಲಂಕಾರಗೊಳಿಸಿದ ಕಲ್ಲು, ರುಬ್ಬುವ ಕಲ್ಲು, ಅಲಂಕಾರಿಕ ಮುರಿದ ಕೆಂಪು ಬಣ್ಣದ ಮುಚ್ಚಳ ಸಿಕ್ಕಿದ್ದು, ನೆಲಕ್ಕೆ ಕುಳಿತುಕೊಳ್ಳುವಂತೆ ೪ ಮೂಲೆಗಳಲ್ಲಿ ೪ ಮಣ್ಣಿನ ಗುಂಡು ಇಟ್ಟಿದ್ದಾರೆ. ಹೊರ ಭಾಗದಲ್ಲಿ ತ್ರಿಭುಜಕಾರದ ಗೆರೆಗಳು, ಮಧ್ಯದಲ್ಲಿ ಚುಕ್ಕೆ ಇಟ್ಟಿದ್ದಾರೆ. ಬಿಸಿಲಿಗೆ ತೋರಿಸಿದರೆ ಚಿನ್ನ ಲೇಪನ ಮಾಡಿದಂತೆ ಮಡಿಕೆ ಮಿಂಚುತ್ತದೆ. ಒಳಭಾಗದ ಮಧ್ಯದಲ್ಲಿ ಸ್ವಲ್ಪ ಕಪ್ಪಾಗಿದೆ. ಸುತ್ತಲೂ ಕೆಂಪಾಗಿದೆ. ಹಾಗೆಯೇ ಇನ್ನೊಂದು ಮಡಿಕೆಯ ಚೂರಿನ ಒಳಭಾಗದಲ್ಲಿ ಮಡಿಕೆಯ ತಳ ಬಿಳಿ ಬಣ್ಣದಿಂದ ಲೇಪನ ಮಾಡಿ, ಹೊರ ಭಾಗದಲ್ಲಿ ಕೆಂಪಾಗಿದೆ. ಈ ಮಡಿಕೆಗಳನ್ನು ಅಕ್ಕಸಾಲಿಗರು ಒಳಸಿರಬಹುದು ಎನಿಸುತ್ತದೆ.

ಮಣ್ಣಿನ ಚಿಕ್ಕ ಬಸವ, ಕಲ್ಲಿನ ೨ ಮಣಿಗಳು, ಕೆಂಪು ಬಣ್ಣದ ೩ ಚಿಕ್ಕೆ ಮುರಿದ ದ್ವೀಪಗಳು, ಟೆರಕೊಟ್ಟ ೨ ಮುರಿದ

ಗೊಂಬೆಗಳು, ಒಂದು ಕೆಂಪು ಬಣ್ಣದ ಬಿಳೀ ತುಂಡು, ೪ ನೀಲಿ ಬಣ್ಣದ ಗಾಜಿನ ಬಳೆ ತುಂಡುಗಳು, ೧ ದಂತದ ಮುರಿದ ಬಳೆ ತುಂಡು, ೧ ಬಿಳಿ ಮತ್ತು ಹರಿಷಿಣ ಬಣ್ಣದ ಮುರಿದ ಬಳೆ ಭಾಗ, ವಿವಿಧ ನಮೂನೆಯ ಕಪ್ಪೆಚಿಪ್ಪಿನ ಅವಶೇಷಗಳು, ಮಡಿಕೆ ಗಳಿಗೆ ಲೇಪನ ಮಾಡಲು ಬಳಸಿದ ಬಣ್ಣದ ಕಲ್ಲುಗಳು, ಚದುರಬಿಲ್ಲೆಗಳು, ರಂಧ್ರವಿರುವ ಬಿಲ್ಲೆಗಳು ಮತ್ತು ಗಡಿಕಲ್ಲುಗಳು ಇದ್ದು ಸೂರ್ಯ, ಚಂದ್ರ ಹಾಗೂ ಶಿವಲಿಂಗಗಳನ್ನು ಕೊರೆದಿರುವುದು ಇವೆಲ್ಲವೂ ಈ ನಿವೇಶನದಲ್ಲಿ ಸಿಕ್ಕಿವೆ.

ಜೊತೆಗೆ ಅಲಂಕಾರದ ಗಣೇಶನ ಕಲ್ಲಿನ ಮೂರ್ತಿ, ಅಲಂಕಾರ ಮಾಡದ ಗಣೇಶನ ಮೂರ್ತಿ, ತಾಮ್ರದ ಗಂಟೆಗಳು, ಶಂಖ, ಶಿವಲಿಂಗ, ತಾಮ್ರದ ಚಿಕ್ಕ ನಂದಿ, ವಿವಿಧ ನಮೂನೆಯ ವೀರಗಲ್ಲುಗಳು, ಮೂರ್ತಿಶಿಲ್ಪಗಳು, ಶಿವನ ಪೀಠ, ಲಿಂಗಗಳು, ಹಾಳಾದ ದೇವಾಲಯದ ಅಲಂಕಾರದ ಕಂಬಗಳು, ಶಾಸನವಿರುವ ಕಂಬಗಳು, ಶಾಸನವಿರುವ ವೀರಗಲ್ಲುಗಳು, ದೇವಾಲಯಗಳ ತಳಪಾಯಗಳು, ಬತೇರಿಗಳು, ಕಲ್ಲಿನ ಕೋಟೆ, ಮಣ್ಣಿನ ಕೋಟೆ, ಕಂದಕಗಳು, ಉಗ್ರಾಣಗಳು ಯುದ್ಧ ನಡೆದ ಸ್ಥಳ ಇನ್ನಿತರೆ ಹಲವಾರು ವಿಷಯಗಳ ಬಗ್ಗೆ ಸಮಗ್ರವಾದ ಅಧ್ಯಯನ ಮಾಡಬೇಕಾಗಿದೆ.

ಈ ನಿವೇಶನವು ಚಂದ್ರವಳ್ಳಿಯಿಂದ ೩.೫ ಕಿ.ಮೀ. ಹಾಗೂ ಬ್ರಹ್ಮಗಿರಿಯಿಂದ ೫೫ ಕಿ.ಮೀ. ದೂರದಲ್ಲಿದ್ದು, ಈ ನಿವೇಶನದಲ್ಲಿ ಬ್ರಹ್ಮಗಿರಿ, ಚಂದ್ರವಳ್ಳಿಯಲ್ಲಿ ದೊರೆತಿರುವ ಅವಶೇಷಗಳನ್ನು ಹೋಲುವ ಅವಶೇಷಗಳು ಹೆಚ್ಚಾಗಿ ಕಂಡುಬರುತ್ತಿವೆ.

ಈ ನಿವೇಶನವನ್ನು ಖುದ್ದು ಪರಿಶೀಲಿಸಿ ದೊರೆತ ಅವಶೇಷ ಗಳನ್ನು ಪರಿಶೀಲಿಸಿದ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದ ಪ್ರಾಧ್ಯಾಪಕರು ಹಾಗೂ ಯು.ಜಿ.ಸಿ. ನಿಯೋಜಿತ ಬೃಹತ್ ಸಂಶೋಧನೆಯ ಪ್ರಧಾನ ಸಂಶೋಧಕರಾದ ಡಾ. ಎನ್. ಎಸ್. ರಂಗರಾಜುರವರು ಮತ್ತು ಸಹಾಯಕರಾದ ಬೆಟ್ಟಪ್ಪನವರ್ರು 'ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ ಚಂದ್ರವಳ್ಳಿ ನಿವೇಶನಗಳಷ್ಟೇ ಪ್ರಮುಖವಾದುದು, ಆದುದರಿಂದ ಈ ನಿವೇಶನವನ್ನು ಸಂಶೋಧಿಸಿದಲ್ಲಿ ಪ್ರಮುಖ ಅವಶೇಷಗಳು ಹೊರ ಚೆಲ್ಲುವುದರಲ್ಲಿ ಸಂಶಯವಿಲ್ಲ' ಎಂದು ಅಭಿಪ್ರಾಯ ಪಟ್ಟಿದ್ದಾರೆ.

(ಈ ನಿವೇಶನದ ಭೂ ಅನ್ವೇಷಣಾ ಕಾರ್ಯದಲ್ಲಿ ಸಹಾಯಕರಾಗಿ ವೀರಭದ್ರಪ್ಪ, ಯಾದಲಗಟ್ಟಿ ಜಗನ್ನಾಥ್, ಉಪ್ಪಾರಹಟ್ಟಿ ಡಿ. ಚಿತ್ತಪ್ಪ ಇವರು ಅವಶೇಷಗಳನ್ನು ಪತ್ತೆ ಹಚ್ಚಲು ಸಹಾಯಕರಾಗಿದ್ದಾರೆ. ಹಾಗೇಯೇ ಕ್ಷೇತ್ರ ಅಧ್ಯಯನಕ್ಕೆ ಸಲಹೆ ಸೂಚನೆಗಳಿತ್ತ ಪೂಜ್ಯ ಗುರುಗಳಾದ ಡಾ. ಎನ್. ಎಸ್. ರಂಗರಾಜುರವರಿಗೆ ಮತ್ತು ಪ್ರೊ॥ ಬಿ. ಪಿ. ವೀರೇಂದ್ರ ಕುಮಾರ್ ರವರಿಗೆ ಧನ್ಯವಾದಗಳು ಹಾಗೂ ಕ್ಷೇತ್ರ ಕಾರ್ಯಕ್ಕೆ ಸಹಕರಿಸಿದ ಸಿ. ಜಗದೀಶ್, ಎಂ. ಶಿವಲಿಂಗಪ್ಪ, ಡಿ. ಉಪ್ಪಾರಹಟ್ಟಿ ಗ್ರಾಮದ ಕ್ಯಾತಣ್ಣ, ತಿಪ್ಪಣ್ಣ, ಚಿತ್ರಪ್ಪ, ತಿಪ್ಪೇಸ್ವಾಮಿ, ಭದ್ರಿ, ಈರಣ್ಣ, ರಾಜಣ್ಣ, ದೊಡ್ಡಜ್ಯಪ್ಪ ಮತ್ತು ಗ್ರಾಮಸ್ಥರಿಗೆ ಧನ್ಯವಾದಗಳು).



ಸೂಕ್ಷ್ಮನೋ, ನೂತನವೋ, ಬೃಹತ್ತೋ
ಶಿಲಾಯುಗದ ಬೀಳಲು
ಸಮಾಧಿ, ಕುಡಿಕೆ, ಬೂದಿದಿಬ್ಬ ಎಲ್ಲವಿರಲು
ಇತಿಹಾಸ ಬೆಳೆಸಿತಲ್ಲ ಮುಂದಿನಾ
ಬದುಕು ಜಿಗಿದ ಸನ್ನೆಗೋಲು





**ಕ.ಇ. ಅಕಾದೆಮಿಯ ೧೨ನೆಯ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೮)**

ಪುರಾತತ್ವದ ಮೂಲವಸ್ತುಗಳಾದರೋ ಜಡಪದಾರ್ಥಗಳು, ಅಷ್ಟೇ ಮೌನಿ. ಅವು ಏನನ್ನೂ ತಾವಾಗಿ ಹೇಳುವುದಿಲ್ಲ. ಅವುಗಳ ಸ್ವರೂಪ, ಪರಸ್ಪರ ಸಂಬಂಧಗಳು ಇತ್ಯಾದಿಗಳನ್ನು ಸಮನ್ವಯಗೊಳಿಸಿ ಪ್ರಾಕ್‌ಚರಿತ್ರೆಯ ಕಲ್ಪನೆಯನ್ನು ಮಾಡಿಕೊಳ್ಳುವುದು ಪುರಾತತ್ವದ ವಿಧಾನ. ಇತಿಹಾಸದ ಜೀವಾಳ ವಿಶ್ಲೇಷಣೆಯಾದರೆ ಪುರಾತತ್ವದ ಜೀವಾಳ ಸಂಯೋಜನೆ.

ಡಾ. ಎಸ್. ನಾಗರಾಜು
ಸಮ್ಮೇಳನಾಧ್ಯಕ್ಷರು

ಮುತ್ತುರಾಜು*

# ಮಳ್ಳಪ್ಪನಗುಡ್ಡದ ಪರಿಸರ- ನವಶಿಲಾಯುಗದಿಂದ ಈವರೆಗೆ

*ಮಳ್ಳಪ್ಪನಗುಡ್ಡವು ಭೂವೈಜ್ಞಾನಿಕ ವೈವಿಧ್ಯತೆಯಿಂದ ಕೂಡಿ ನವಶಿಲಾಯುಗದಿಂದ ಈವರೆಗಿನ ಬದುಕಿನ ಒಡನಾಡಿಯಾಗಿ ಅಸ್ತಿತ್ವವನ್ನು ಹೊಂದಿದೆ. ಅಂದಿನ ಬಳಕೆಯ ಆಯುಧಗಳು, ಬೃಹತ್ ಶಿಲಾಯುಗದ ಸಮಾಧಿಗಳು ಪ್ರಾಗೈತಿಹಾಸಿಕ ಗೂಳಿ ಸೂರ್ಯ ಚಿತ್ರ ಮಂಡಲ ವೃತ್ತ ಇತ್ಯಾದಿಗಳ ರೇಖಾಚಿತ್ರ ಹಾಗು ಇತರೆ ಅವಶೇಷಗಳು ಅಲ್ಲಿ ಕಾಣಬಂದಿವೆ. ಭೈರವಶಿಲ್ಪ ವೀರಗಲ್ಲುಗಳು ಕಾಣಬರುವುದಲ್ಲದೆ. ಸ್ಥಳೀಯ ನಿರ್ಮಾಣ ಮಾಧ್ಯಮಗಳನ್ನೂ ಬಳಸಿರುವುದು ವಿಶೇಷ.*

ಮಳ್ಳಪ್ಪನಗುಡ್ಡ ಅಥವಾ ಮಲ್ಲಪ್ಪನಗುಡ್ಡ ಎಂದು ಕರೆಯಲ್ಪಡುವ ವಿಸ್ತಾರವಾದ ಗುಡ್ಡವು ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನ ಹುಳಿಯಾರು ರಸ್ತೆಯಲ್ಲಿ ೮.೫ ಕಿ.ಮೀ. ದೂರದಲ್ಲಿದೆ. ಈ ಗುಡ್ಡವು ಹುಲಗಲಕುಂಟೆಯಿಂದ ಪ್ರಾರಂಭವಾಗಿ ಉಡುವಳ್ಳಿವರೆಗೆ ಹರಡಿಕೊಂಡಿದೆ ಅಲ್ಲದೇ ಧಾರ್ಮಿಕವಾಗಿ ಹುಲಗಲಕುಂಟೆ ಜೊತೆ ಬೆಸೆದುಕೊಂಡಿದ್ದರೆ, ಸಾಮಾಜಿಕ ಹಾಗೂ ಸಾಂಸ್ಕೃತಿಕವಾಗಿ ಉಡುವಳ್ಳಿಯೊಡನೆ ಹೊಂದಿಕೊಂಡಿದೆ.

ಗ್ರಾನೈಟ್, ಜ್ವಾಲಾಮುಖಿಯಿಂದಾದ ಗಪ್ಪಕಲ್ಲುಗಳು, ಬೆಣಚುಕಲ್ಲುಗಳು, ಕಾಗೆ ಬಂಗಾರ ಹಾಗೂ ಸುಣ್ಣದ ಕಲ್ಲುಗಳಿಂದ ಕೂಡಿರುವ ಈ ಗುಡ್ಡವು ಭೂವೈಜ್ಞಾನಿಕ ವೈವಿಧ್ಯತೆಯನ್ನು ಒಳಗೊಂಡಿದ್ದು ಪ್ರಾಗೈತಿಹಾಸಿಕ ಕಾಲವಾದ ನವಶಿಲಾಯುಗದಿಂದ ಇಂದಿನವರೆಗೂ ಜೀವಿಗಳ ಒಡನಾಡಿ ಸ್ಥಳವಾಗಿ ಆಯಕಟ್ಟಿನ ಸ್ಥಳದಲ್ಲಿದೆ. ನವಶಿಲಾಯುಗದ ಹಂತದಿಂದಲೂ ಮಾನವರು ತಮ್ಮ ಕಲೆಯ ಅಭಿವ್ಯಕ್ತಿಯನ್ನು ಇಲ್ಲಿ ಇರುವ ಹಾಸು ಮತ್ತು ನಿಲುವು ಬಂಡೆಗಳ ಮೇಲೆ ಕೆತ್ತಿದ್ದಾರೆ, ಅಲ್ಲದೇ ಕೈಕೊಡಲಿಗಳು ಉಳಿ, ಚಾಕುವಿನ ಆಯುಧಗಳನ್ನು ಇಲ್ಲಿ ಬಿಟ್ಟಿದ್ದಾರೆ. ಮುಂದಿನ ಹಂತವಾದ ಬೃಹತ್‌ಶಿಲಾಯುಗದ (ಕಾಲ ಕ್ರಿ.ಪೂ. ಸುಮಾರು ೮೦೦ ರಿಂದ ಕ್ರಿ.ಶ. ೧೦೦) ತಮ್ಮ ಮಡಿದ ಹಿರಿ-ಕಿರಿ ಜನರ ಸಮಾಧಿಗಳನ್ನು ಇಲ್ಲಿ ನಿರ್ಮಿಸಿದ್ದಾರೆ. ಈ ಗುಡ್ಡದಲ್ಲಿರುವ ಪ್ರಾಗೈತಿಹಾಸಿಕ ಕಾಲದ ರೇಖಾಚಿತ್ರ ಮತ್ತು ಅವಶೇಷಗಳ ಅಧ್ಯಯನವನ್ನು ಉಡುವಳ್ಳಿಯಿಂದ ಇರುವ ಮಾರ್ಗಗಳಲ್ಲಿ ಕೈಗೊಳ್ಳುವುದು ಸೂಕ್ತ ಇಲ್ಲಿಯೇ ವಿಪುಲವಾದ ಕೊರೆದ, ಕೆತ್ತಿದ ರೇಖಾಚಿತ್ರಗಳು ಇರುವುದು.

ಈ ಗುಡ್ಡದ ದಕ್ಷಿಣ ದಿಕ್ಕಿನ ಇಳಿಜಾರಿನ ಗಟ್ಟಿಶಿಲೆ ಬಂಡೆ ಮೇಲೆ ಬಲಭಾಗಕ್ಕೆ ಮುಖ ಬರುವಂತೆ ಮೂಡಿಸಿರುವ ಎತ್ತಿನ ಚಿತ್ರವಿದ್ದು ೩೦ ಸೆಂ.ಮೀ. ಉದ್ದವಿದೆ. ಈ ಚಿತ್ರದ ಕೆಳಭಾಗದಲ್ಲಿ ಗೂಳಿಯೊಂದರ ಚಿತ್ರವಿದ್ದು ಉದ್ದನೆಯ ಕೊಂಬುಗಳಿವೆ. ಈ ಕೊಂಬುಗಳಿಗೆ ತಾಗಿದಂತೆ ಮತ್ತೊಂದು ಗೂಳಿ ಇದ್ದು ೩೦ ಸೆಂ.ಮೀ. ಉದ್ದವಾಗಿದೆ. ಈ ಎರಡಕ್ಕೂ ಉದ್ದನೆಯ ಬಾಲ ಮತ್ತು ಕೊಂಬುಗಳಿವೆ. ಈ ಎರಡಕ್ಕೂ ಬಾಲದಲ್ಲಿ ರೋಮಗಳ ಗುಚ್ಛಗಳಿವೆ ಇದರ ಸನಿಹಕ್ಕೆ ಮತ್ತೊಂದು ಪುಟ್ಟ ಎತ್ತಿನ ಚಿತ್ರವಿದೆ.

ಇದೇ ಬಂಡೆಯ ಕೆಳಭಾಗದಲ್ಲಿ ೧೧ ಸೆಂ.ಮೀ. ವ್ಯಾಸದ ನಾಲ್ಕು ವೃತ್ತಗಳಿವೆ. ಇದರ ಮೇಲೆ ೨೬ ಸೆಂ.ಮೀ. ಉದ್ದದ ಸಣ್ಣ ಪ್ರಮಾಣ ದೇಹವುಳ್ಳ ಗೂಳಿಯ ಚಿತ್ರವಿದ್ದು ಇದರ ಬಾಲ ಲಂಬವಾಗಿದೆ, ಕೊಂಬುಗಳು ಬಲಭಾಗಕ್ಕೆ ಕಮಾನಿನಂತೆ ಬಾಗಿವೆ. ಇದರ ಕೆಳಭಾಗದಲ್ಲಿಯೇ ಆಧುನಿಕ ಕಾಲದ ಪಾದುಕೆಗಳ ಚಿತ್ರಗಳಿವೆ.

* ಕನ್ನಡ ಅಧ್ಯಾಪಕರು, ಜವಾಹರ್ ನವೋದಯ ವಿದ್ಯಾಲಯ, ಉಡುವಳ್ಳಿ, ಹಿರಿಯೂರು ತಾ., ಚಿತ್ರದುರ್ಗ ಜಿಲ್ಲೆ-೫೭೨ ೧೪೩

ಈ ಚಿತ್ರಗಳ ಕೆಳಭಾಗದಲ್ಲಿಯೇ ೨೯ ಸೆಂ.ಮೀ.ನ ಎತ್ತು ಇದ್ದು ಮುಖ ಚೂಪಾಗಿದೆ ಕೋಡುಗಳು ಬಾಗಿವೆ. ಇಲ್ಲಿಯೇ ೪೬ ಸೆಂ.ಮೀ. ಉದ್ದದ ಎತ್ತಿನಮೇಲೆ ಮನುಷ್ಯನೋರ್ವನು ಸವಾರಿ ಮಾಡುತ್ತಿರುವ ಚಿತ್ರವಿದ್ದು ಇದನ್ನು ಕಬ್ಬಿಣದ ಚೂಪಾದ ಮೊಳೆಯಂಥ ಆಯುಧದಿಂದ ಕೆತ್ತಲಾಗಿದೆ.

ಇಲ್ಲಿಯೇ ತುಸು ಕೆಳಗೆ ನೇಗಿಲನ್ನು ಹೂಡಿರುವ ಗಾಲಿಗಳ ಚಿತ್ರವಿದೆ. ಬಳಿಯಲ್ಲಿಯೇ ಉದ್ದನೆಯ ಅಸ್ಪಷ್ಟ ರೇಖಾಚಿತ್ರವಿದೆ. ಇಲ್ಲಿಂದ ಮತ್ತಷ್ಟು ಇಳಿಜಾರಿನಲ್ಲಿ ೩೦ ಸೆಂ.ಮೀ. ಉದ್ದದ ಎರಡು ಗೂಳಿಗಳ ಚಿತ್ರಗಳಿವೆ. ಬೆನ್ನಿನ ಹುಬ್ಬು ದಪ್ಪವಾಗಿದ್ದು ಎರಡನ್ನೂ ಓರ್ವನೇ ರಚಿಸಿದ್ದಾನೆ.

ಈ ಸ್ಥಳದಿಂದ ಮುನ್ನಡೆದಂತೆ ವೃತ್ತಗಳು ಗೂಳಿಗಳು ಕಂಡು ಬರುತ್ತವೆ. ಇದನ್ನು ತುಸು ಏರಿ ಪ್ರಾಕೃತಿಕವಾದ ಸಣ್ಣ ಹೊಂಡದ ಕೆಳಗೆ ಪಶ್ಚಿಮಾಭಿಮುಖ ಬಂಡೆಯ ಮೇಲೆ ಉತ್ತರ ದಿಕ್ಕಿಗೆ ಮುಖ ಮಾಡಿರುವ ಸೂರ್ಯಾರಾಧನೆಯ ಚಿತ್ರವಿದೆ. ೪೪ ಸೆಂ.ಮೀ. ಅಗಲ ೫೧ ಸೆಂ.ಮೀ. ಉದ್ದವಿದ್ದು ಮಧ್ಯೆ ೨೦ ಸೆಂ.ಮೀ. ಉದ್ದ ೨೨ ಸೆಂ.ಮೀ. ಅಗಲದ ಚೌಕಾಕಾರದ ನಡುವೆ ೧೫ ಸೆಂ.ಮೀ. ವ್ಯಾಸದ ಸೂರ್ಯನ ಕೊರೆದ ರೇಖಾಚಿತ್ರವಿದೆ. ೧೫ ಕಿರಣ ರೇಖೆಗಳನ್ನು ಸುತ್ತಲೂ ಮೂಡಿಸಲಾಗಿದೆ. ಚೌಕಾಕಾರವು ಪೀಠದ ಮೇಲೆ ಇದೆ. ಸೂರ್ಯನ ಮೇಲಿರುವ ರೇಖೆಯ ಮೇಲೆ ಕಮಾನಿನಾಕೃತಿ ಇದ್ದು ಗೆರೆಗಳಿಂದ ಅಲಂಕರಿಸಲಾಗಿದೆ. ಇದು ಒಂದು ಅಪರೂಪದ ಅಲಂಕಾರಿಕ ಚಿತ್ರವಾಗಿದೆ.

ದಕ್ಷಿಣ ದಿಕ್ಕಿನ ಮತ್ತೊಂದು ಇಳಿಜಾರು ಬಂಡೆಯ ಮೇಲೆ ೨೪ ಸೆಂ.ಮೀ. ಉದ್ದ ೧೪ ಸೆಂ.ಮೀ. ಅಗಲದ ರೇಖಾ ಚಿತ್ರವಾಗಿದ್ದು ಆಳವಾದ ಗೆರೆಯನ್ನು ಕಬ್ಬಿಣದ ಸಾಧನದಿಂದಲೇ ಕೆತ್ತಲಾಗಿದೆ. ಇದು ನಕ್ಷೆಯ ರೂಪದಲ್ಲಿದೆ. ಬಳಿಯಲ್ಲಿಯೇ ಮೂರು ಸುತ್ತುಗಳುಳ್ಳ ೬ ಸೆಂ.ಮೀ.ನ ವೃತ್ತವಿದ್ದು ಅವಕ್ಕೆ ಮೂರು ಅಡ್ಡಗೆರೆಗಳಿವೆ.

ಈ ಚಿತ್ರದ ಕೆಳಗೆ ನಾಲ್ಕು ಸುತ್ತಿನ ವೃತ್ತವಿದ್ದು, ಸೂರ್ಯನ ಹನ್ನೊಂದು ದಳಗಳು ಉಳಿದಿರುವ ಸೂರ್ಯವೃತ್ತ ಇದಾಗಿದೆ. ಇದೂ ಸಹ ೬ ಸೆಂ.ಮೀ. ವೃತ್ತ. ಇಲ್ಲಿಯೇ ೨೮ ಸೆಂ.ಮೀ. ಉದ್ದ ೧೦ ಸೆಂ.ಮೀ. ಅಗಲದ ಎಲೆಯೊಂದರ ಚಿತ್ರವಿದ್ದು ಹತ್ತು ಅಡ್ಡಗೆರೆಗಳು ಎಲೆಗಳಿಗೆ ಇವೆ.

ಇದರಿಂದ ತುಸು ಕೆಳಗೆ ಕಮಾನು ರೇಖೆಯಿಂದ ಮೂಡಿಸಿರುವ ಮರವೊಂದರ ಚಿತ್ರವಿದ್ದು ೩೧ ಸೆಂ.ಮೀ. ಉದ್ದ ೧೮ ಸೆಂ.ಮೀ. ಅಗಲವಿದೆ. ಬಲಭಾಗದಲ್ಲಿ ೫೨ ಸೆಂ.ಮೀ. ಉದ್ದದ ೬ ಗೆರೆಗಳ ಸಹಾಯದ, ಉದ್ದನೆಯ ಕೊಂಬಿನ ಪ್ರಾಣಿಯ (ಎತ್ತು?) ಚಿತ್ರವಿದೆ, ಒಡಲಿನ ಭಾಗ ಅಪೂರ್ಣವಾಗಿದೆ.

ಇದೇ ಬಂಡೆಯ ಮೇಲೆ ಹತ್ತಕ್ಕೂ ಹೆಚ್ಚು ಪಾದ (ಹೆಜ್ಜೆ)ಗಳ ರೇಖಾಚಿತ್ರಗಳಿವೆ. ಇಲ್ಲಿಯೇ ಮತ್ತೊಂದು ಬಂಡೆಯ ಮೇಲೆ ಎಂಟು ಮಂಡಲಗಳ ವೃತ್ತಗಳಿವೆ. ಇವು ನಾಲ್ಕು ಮತ್ತು ಆರು ಸುತ್ತಿನ ವೃತ್ತಗಳಾಗಿದ್ದು ೨೧ ಸೆಂ.ಮೀ. ಸುತ್ತಳತೆ ದೊಡ್ಡದಾಗಿದ್ದರೆ ೮ ಸೆಂ.ಮೀ. ಸುತ್ತಳತೆಯು ಚಿಕ್ಕದಾಗಿದೆ. ಬಳಿಯಲ್ಲಿಯೆ ೫೪ ಸೆಂ.ಮೀ. ಮತ್ತು ಪುಟ್ಟ ಇತರ ಮೂರು ಎತ್ತುಗಳ ಚಿತ್ರಗಳಿವೆ.

ಗುಡ್ಡದ ಇದೇ ದಕ್ಷಿಣ ಭಾಗದ ನೀರುಹರಿದು ಬರುವ ತಗ್ಗಿನಲ್ಲಿರುವ ಬಂಡೆಯೊಂದರ ಮೇಲೆ ೩೦ ಸೆಂ.ಮೀ. ಉದ್ದ ಮತ್ತು ೨೨ ಸೆಂ.ಮೀ. ಅಗಲದ ಮನುಷ್ಯರ ಕೊರೆದ ಚಿತ್ರಗಳಿವೆ. ನಾಲ್ಕು ಚಿತ್ರಗಳಲ್ಲಿ ಎದುರು ಬದಿರಾಗಿ ನಿಂತು ಕತ್ತಿಗುರಾಣಿ ಹಿಡಿದು ಪರಸ್ಪರ ಹೋರಾಡುವ ದೃಶ್ಯವಿದ್ದರೇ. ಮೇಲೆ ಎಕ್ಸ್ ಆಕಾರದ ಮನುಷ್ಯನೋರ್ವನು ಕತ್ತಿ ಗುರಾಣಿ ಹಿಡಿದ ಚಿತ್ರವಿದೆ. ಇದಕ್ಕೂ ಮೇಲೆ ಪುಟ್ಟಪ್ರಮಾಣದ ಮನುಷ್ಯನೋರ್ವನು ಹಾರಿ ಕಾಲುಗಳನ್ನು ಚಾಚಿ ಗಾಳಿಯಲ್ಲಿ ಕತ್ತಿ ಬೀಸುವ ಚಿತ್ರವಿದೆ. ಬಳಿಯಲ್ಲಿಯೇ ಪುಟ್ಟ ಪ್ರಮಾಣದ ಎತ್ತಿನ ಚಿತ್ರಗಳಿವೆ. ಈ ಎಲ್ಲಾ ಚಿತ್ರಗಳು ದಪ್ಪ ರೇಖೆಗಳಿಂದ ಮೂಡಿಸಿದುದಾಗಿವೆ. ಇಲ್ಲಿಯೇ ಎಕ್ಸ್ ಆಕಾರದ ಮನುಷ್ಯನ ಶರೀರದ ಭಾಗ ಚಿತ್ರಿಸಲು ಉಪಯೋಗಿಸಿರುವ ಕಲ್ಲಿನಿಂದ ಮಾಡಿಕೊಂಡಿರುವ ಉಳಿಯು ದೊರೆತಿದೆ ಇದು ಮೂರು ಸೆಂ.ಮೀ. ಉದ್ದ ಒಂದು ಸೆಂ.ಮೀ. ಅಗಲ ಮತ್ತು ಅರ್ಧ ಸೆಂ.ಮೀ. ದಪ್ಪವಿದೆ. ಉಳಿಯು ಮುರಿದು ಹೋಗಿರುವುದರಿಂದ ಇಲ್ಲಿಯೇ ಬಿಟ್ಟು ಹೋಗಿದ್ದಾರೆ. ಇದೇ ಚಿತ್ರಗಳ ಕೆಳಗೆ ಎತ್ತರದ ಕೊಂಬುಗಳುಳ್ಳ ಎತ್ತು ಒಂದರ ಚಿತ್ರ ಮಣ್ಣಿನಿಂದ ಮುಚ್ಚಿದ್ದನ್ನು ಹೊರಗೆ ತೆಗೆಯಲಾಗಿದೆ.

ಮೇಲಿನ ನಾಲ್ಕು ರೇಖಾಚಿತ್ರಗಳು ಒಂದು ಲಂಬ ರೇಖೆಗೆ ಎರಡು ತಳಭಾಗದಲ್ಲಿ ಅಡ್ಡರೇಖೆ ರಚಿಸುವಂತೆ ಮಾಡಿ ಕಾಲುಭಾಗ ಪೂರ್ಣಗೊಳಿಸಿದ್ದಾರೆ. ಶಿರದಭಾಗ ಕಮಾನಿನಿಂದ ಕೂಡಿದೆ.

ಇದೇ ಬಂಡೆಯ ಎಡಪಾರ್ಶ್ವದಲ್ಲಿ ೪೦ ಸೆಂ.ಮೀ. ಉದ್ದ ಮತ್ತು ೧೯ ಸೆಂ.ಮೀ. ಉದ್ದದ ಎರಡು ಎತ್ತುಗಳ ಚಿತ್ರಗಳಿವೆ. ಇಲ್ಲಿಯೇ ಹೆಜ್ಜೆಗಳ ಗುರುತಿನ ಚಿತ್ರಗಳಿವೆ. ಈ ಬಂಡೆಯ ಮೇಲಿನ ಬಂಡೆಯಲ್ಲಿ ತುಸು ವಿಭಿನ್ನವಾದ ಎತ್ತಿನ ಚಿತ್ರವಿದ್ದು ಕೊಂಬುಗಳು ಅರ್ಧಚಂದ್ರದ ಆಕಾರದಂತೆ ಇವೆ. ನಂತರ ಕೆಲವು ನವೀನ ಕಾಲದ ಎತ್ತುಗಳಿದ್ದು ಬಂಡೆ ಒಡೆದಿರುವುದರಿಂದ ಹಲವಾರು ಚಿತ್ರಗಳು ನಷ್ಟವಾಗಿವೆ. ಇಲ್ಲಿನ ಮತ್ತೊಂದು ಬಂಡೆಯಲ್ಲಿ ಎತ್ತುಗಳ ಸಮೂಹವಿರುವ ಚಿತ್ರಗಳಿವೆ. ಈ ಸಮೂಹಗಳ ಬಲಬದಿಗೆ ನಾಲ್ಕು ಅಡಿ ಉದ್ದದ ಕುದುರೆಯೊಂದರ ಚಿತ್ರವಿದೆ. ಆಳವಾದ ರೇಖೆಗಳು ಇಲ್ಲ. ಕಿವಿಗಳು ಸ್ಪಷ್ಟವಾಗಿವೆ. ಅರ್ಧ ಒಡಲಿನ ಮತ್ತು ಕಾಲಿನ ಭಾಗ ಅಸ್ಪಷ್ಟವಾಗಿದೆ.

ಈ ಬಂಡೆಯ ಬಲಭಾಗಕ್ಕೆ ಇರುವ ಬಂಡೆಯೊಂದರಲ್ಲಿ ಗೀರು ಚಿತ್ರಗಳಿವೆ. ಅವು ಸಹ ಎತ್ತುಗಳೇ ಆಗಿವೆ. ಅತ್ಯಂತ ತುದಿಗೆ ಹತ್ತಿರವಿರುವ ಬಂಡೆಯೊಂದರಲ್ಲಿ ಕೋಣವೊಂದರ ಪುಟ್ಟ

ಚಿತ್ರವಿದೆ. ೨೬ ಸೆಂ.ಮೀ. ಅಗಲ ೧೨ ಸೆಂ.ಮೀ. ಉದ್ದದ ಕೋಣದ ಉಬ್ಬು ಸ್ವಲ್ಪ ಉಬ್ಬಿದ್ದು ಕೋಡುಗಳು ಕವಲಾಗಿ ಲಂಬವಾಗಿವೆ. ಮೊಳೆಯ ಸಹಾಯದಿಂದ ಇದನ್ನು ಕೆತ್ತಲಾಗಿದೆ. ಬಳಿಯಲ್ಲಿಯೇ ಅಸ್ಪಷ್ಟ ಪ್ರಾಣಿಗಳ ಚಿತ್ರಗಳಿವೆ.


ಮಲ್ಲಪ್ಪನಗುಡ್ಡದ ದೂರ ನೋಟ


ನರ್ತನನಿರತ ಮಾನವ


ಗೂಳಿಗಳ ಚಿತ್ರ


ಮಲ್ಲಪ್ಪನಗುಡಿಯ ಶಿಥಿಲಾವಸ್ಥೆ


ವಿಸ್ಮಯ ನಕಾಶೆ

ನಕ್ಷೆ ಇರುವ ಬಂಡೆಯ ತುದಿಯಲ್ಲಿ ಕಳಶದ ಚಿತ್ರವಿದ್ದು ಅದು ೪೧ ಸೆಂ.ಮೀ. ಉದ್ದ ೪೩ ಸೆಂ.ಮೀ. ಅಗಲವಿದೆ. ಎಲೆಗಳು ಮೇಲೆ ಇವೆ. ಇವುಗಳನ್ನು ಗಮನಿಸಿದರೆ ಪೂಜಾಕಾರ್ಯದ ವಿಧಿಗಳು ನಡೆಯುತ್ತಿದ್ದವೆಂದು ಹೇಳಬಹುದು. ಬಳಿಯಲ್ಲಿಯೇ ಬಳ್ಳಿಯಿಂದ ಅಲಂಕರಿಸಲ್ಪಟ್ಟ ಚಿತ್ರಗಳಿವೆ.

ಇದೇ ದಕ್ಷಿಣದಿಕ್ಕಿನ ತಪ್ಪಲಿನಲ್ಲಿ ಮುಖ್ಯ ರಸ್ತೆಗೆ ಹೊಂದಿಕೊಂಡಿರುವಂತೆ ಇರುವ, ಪೂರ್ವಕ್ಕೆ ಮುಖ ಮಾಡಿನಿಂತಿರುವ ನಿಲಿಸು ಬಂಡೆ ಮೇಲೆ ಎರಡು ೨೪ ಸೆಂ.ಮೀ. ಉದ್ದದ ಎಮ್ಮೆಗಳು ಎದರು ಬದಿರಾಗಿ ಕಾದಾಡುವ ಚಿತ್ರವಿದೆ. ಕೊಂಬನ್ನು ೧೫ ಸೆಂ.ಮೀ. ಎತ್ತರಕ್ಕೆ ಕೊಂಡೊಯ್ಯಲಾಗಿದೆ. ಬದಿಯಲ್ಲಿಯೇ ಅಂತಹುದೇ ಕಾದಾಟದ ಮತ್ತೆರಡು ಗೀರು ಚಿತ್ರಗಳಿವೆ. ಆಳವಿಲ್ಲದ ಗೀರು ಚಿತ್ರಗಳಿವು. ಎರಡನೆ ಮತ್ತು ಮೂರನೆ ನಿಲಿಸು ಬಂಡೆಯ

ಮೇಲೆ ಯಾವ ಚಿತ್ರಗಳಿಲ್ಲ ನಾಲ್ಕನೇ ಬಂಡೆಯಲ್ಲಿ ಚಿತ್ರಗಳಿದ್ದು ಅವು ೬ ಗೀರು ಚಿತ್ರಗಳಾಗಿವೆ. ಬಂಡೆಯ ಬಲತುದಿಯ ನಾಲ್ಕು ಚಿತ್ರಗಳು ಎಡಬದಿಗೆ ಮುಖ ಮಾಡಿವೆ ಚಿತ್ರದಿಂದ ಚಿತ್ರಕ್ಕೆ ಅಂತರವಿದೆ. ಇವೂ ಸಹ ಎತ್ತುಗಳೇ ಆಗಿದ್ದು ಉದ್ದನೆಯ ಕಾಲ್ಗಳು ಮುಂದೆ ಮತ್ತು ಹಿಂದೆ ಬಾಗಿದ ಕೋಡುಗಳು ಇದ್ದು ಡೊಂಕಾಗಿ ಮತ್ತು ಇಳಿಬಿಟ್ಟ ಬಾಲಗಳು ಇವೆ. ಆಹಾರವನ್ನು ಅರಸಿಕೊಂಡು ಹೊರಡುವಂತೆ ಚಲನೆಯಲ್ಲಿವೆ. ಇವು ೩೨ ಸೆಂ.ಮೀ. ಉದ್ದವುಳ್ಳವಾಗಿವೆ.

೫ನೇ ನಿಲಿಸು ಬಂಡೆ ಹತ್ತು ಅಡಿ ಎತ್ತರವಾಗಿದೆ. ಇದರಲ್ಲಿ ೩೦ ಸೆಂ.ಮೀ. ಉದ್ದದ ಎತ್ತಿನ ಚಿತ್ರವಲ್ಲದೇ ಐವರು ಮಾನವರು ಕೈ ಕೈ ಹಿಡಿದು ನಿಂತಿರುವ ೧೨ ಸೆಂ.ಮೀ.ನ ಚಿತ್ರವಿದೆ. ಬಲಬದಿಯಲ್ಲಿ ೧೩ ಸೆಂ.ಮೀ. ಉದ್ದದ ಎತ್ತಿನ ಚಿತ್ರವಿದೆ. ಈ ಬಂಡೆಯಲ್ಲಿಯೇ ಮತ್ತಷ್ಟು ಮಾನವರ ಮತ್ತು ಪ್ರಾಣಿಗಳ ಅಸ್ಪಷ್ಟ ಚಿತ್ರಗಳಿವೆ.

ಈ ಬಂಡೆಯ ಮುಂಭಾಗದಲ್ಲಿ ಅನತಿದೂರದಲ್ಲಿರುವ ಮತ್ತೊಂದು ಬಂಡೆಯಲ್ಲಿ ಎಡಮುಖವಾಗಿ ಚಲಿಸುವ ಎತ್ತುಗಳ ಚಿತ್ರವಿದೆ. ಇವುಗಳ ಕೊಂಬುಗಳೆ ಅನುಕ್ರಮವಾಗಿ ೩೫ ಸೆಂ.ಮೀ., ೪೪ ಸೆಂ.ಮೀ. ಎತ್ತರವಾಗಿವೆ.

ಉಡುವಳ್ಳಿಯ ಕಡೆಯಿಂದಲೇ ಗುಡ್ಡದ ಮೇಲೆ ಏರಿ ಹೋಗುವ ಹಾದಿಯಲ್ಲಿನ ಬಂಡೆಯಲ್ಲಿ ಮುಖವಾಡದ ಚಿತ್ರ ನಾಲ್ಕು ಹಾವುಗಳ ರೇಖಾಚಿತ್ರಗಳು ಕಂಡುಬರುತ್ತವೆ. ಇಲ್ಲಿಯೇ ಇರುವ ಹಾಸುಬಂಡೆಯ ಮೇಲೆ ೩೦ ಸೆಂ.ಮೀ. ಉದ್ದದ ಮೂರು ಎತ್ತುಗಳು ಎಡಮುಖವಾಗಿ ಚಲಿಸುತ್ತಿವೆ. ಬಳಿಯಲ್ಲಿ ವೃಕ್ಷವೊಂದರ ಚಿತ್ರ ಮತ್ತು ಹೆಜ್ಜೆಗಳ ಚಿತ್ರಗಳಿವೆ.

ಈ ಬಂಡೆಯಿಂದ ಮೇಲ್ಭಾಗಕ್ಕೆ ಇರುವ ಮತ್ತೊಂದು ಇಳಿಜಾರು ಬಂಡೆಯಲ್ಲಿ ೩೫ ಸೆಂ.ಮೀ. ಉದ್ದದ ಎತ್ತಿನ ಚಿತ್ರವಿದ್ದು ಬೆನ್ನಿನ ಉಬ್ಬು ಎತ್ತರವಾಗಿದೆ. ಇದು ಎದುರಿಗಿರುವ ಪ್ರಾಣಿಯೊಂದರ ಜೊತೆ ಹೋರಾಡುತ್ತಿದೆ. ಇಲ್ಲಿಯೇ ಇಷ್ಟೇ ಗಾತ್ರದ ಮತ್ತೊಂದು ಎತ್ತಿನ ಚಿತ್ರವಿದೆ. ಕೆಲವು ಅಸ್ಪಷ್ಟ ಚಿತ್ರಗಳ ನಂತರ ೨೫ ಸೆಂ.ಮೀ. ಮತ್ತೊಂದು ಗೂಳಿಯ ಚಿತ್ರವಿದ್ದು ಇದಕ್ಕೆ ಕೋಡುಗಳು ಮುಂಬಾಗಿವೆ.

ಈ ಚಿತ್ರದ ಬಲಬದಿಗೆ ೫೫ ಸೆಂ.ಮೀ.ನ ಹುಲಿಯೊಂದರ ಚಿತ್ರವಿದ್ದು ಒಡಲಿನ ಮೇಲೆ ಪಟ್ಟೆಗಳು ಸಮಪ್ರಮಾಣದ ದೇಹ ನಿಂತ ಕಾಲುಗಳಿಂದ ಕೂಡಿದೆ. ಇದರ ಕೆಳಗೆ ಪ್ರಾಣಿಯೊಂದರ ಚಿತ್ರವಿದ್ದು ಹುಲಿ ಪ್ರಾಣಿಯನ್ನು ಅರಸಿಕೊಂಡು ಹೋಗುತ್ತಿದೆ. ಇಲ್ಲಿಯೇ ಸಸ್ಯವೊಂದರ ಚಿತ್ರವಿದೆ.

ಗುಡ್ಡದ ಪಶ್ಚಿಮಾಭಿಮುಖವಿರುವ ಬಂಡೆಯ ಮೇಲೆ ನೇಗಿಲು ಚಕ್ರಬಂಡಿಗಳಿಂದ ಕೂಡಿದ ನೇಗಿಲು, ಮತ್ತು ಎತ್ತುಗಳ ಚಿತ್ರಗಳು ಇವೆ. ನಂತರದ ನಿಲಿಸು ಬಂಡೆಗಳ ಮೇಲೆ ಸಮೂಹ ರೂಪದ ಹಲವಾರು ಎತ್ತುಗಳ ರೇಖಾಚಿತ್ರಗಳಿವೆ. ಇದೇ ಪಶ್ಚಿಮ ದಿಕ್ಕಿನ ಕಣಿವೆ ಇರುವ ಬಂಡೆಯ ಮೇಲೆ ಎತ್ತುಗಳ ರೇಖಾ ಚಿತ್ರಗಳಿದ್ದು ಆಯಕಟ್ಟಿನ ಸ್ಥಳದಲ್ಲಿ ಕೆತ್ತಲಾಗಿದೆ.

ಗುಡ್ಡದ ಮತ್ತೊಂದು ಪಾರ್ಶ್ವವಾದ ಪೂರ್ವದಿಕ್ಕಿನಲ್ಲಿನ ಇಳಿಜಾರಿನಲ್ಲಿನ ಬಂಡೆಯ ಮೇಲೆ ಮಾನವನ ೧೫ ಸೆಂ.ಮೀ. ಉದ್ದದ ಚಿತ್ರವಿದೆ. ಪಕ್ಷಿಯೊಂದರ, ಸಸ್ಯವೊಂದರ ಚಿತ್ರಗಳೇ ಅಲ್ಲದೇ ಎರಡು ಅಡಿ ಉದ್ದದ ಪಾದ ಇಲ್ಲವೇ ಹೆಜ್ಜೆಗಳ ರೇಖಾ ಚಿತ್ರಗಳಿವೆ.

ಬಂಡೆಯ ಉತ್ತರ ಭಾಗದಲ್ಲಿ ರೇಖಾಚಿತ್ರ ಬಿಡಿಸಲು ಬೇಕಾದ ಮಾಧ್ಯಮವಾದ ಕಲ್ಲುಗಳ ಕೊರತೆ ಇದ್ದು ಅಲ್ಲೇನು ರೇಖಾಚಿತ್ರಗಳಿಲ್ಲ. ಆದರೆ ಗುಡ್ಡದ ತುದಿಯಲ್ಲಿ ಅಲ್ಲಲ್ಲಿ ಎತ್ತುಗಳ ಚಿತ್ರಗಳಿವೆ, ಮತ್ತು ಮಾನವರು ಕೈಕೈ ಹಿಡಿದು ನಿಂತಿರುವ ಚಿತ್ರಗಳಿವೆ.

ಇದೇ ಗುಡ್ಡದ ಎದುರಿಗಿರುವ ಪೂರ್ವದಿಕ್ಕಿನ ಗುಡ್ಡದ ಬಂಡೆಯೊಂದರ ಇಳಿಜಾರಿನಲ್ಲಿ ಜಿಂಕೆಯ ಚಿತ್ರವಿದೆ. ೨೬ ಸೆಂ.ಮೀ. ಉದ್ದದ ಶರೀರ ಇದ್ದು ೩ ಸೆಂ.ಮೀ. ಅಗಲವಾಗಿದೆ. ಕೋಡುಗಳು ೧೩ ಸೆಂ.ಮೀ. ಉದ್ದ ಇದ್ದು ಪರಸ್ಪರ ಕಮಾನಿನಂತೆ ಎದುರು ಬದಿರಾಗಿ ಬಾಗಿವೆ. ಇದನ್ನೂ ಸಹ ಕಬ್ಬಿಣದ ಸಹಾಯದಿಂದ ಕೊರೆದು ಮೂಡಿಸಲಾಗಿದೆ.

ಇನ್ನೊಂದು ಬಂಡೆಯಲ್ಲಿ ಎರಡು ಪ್ರಾಣಿಗಳು (ಎತ್ತುಗಳು ?) ಚಲಿಸುತ್ತಿವೆ. ಕಾಲಿನ ಚಲನೆಯನ್ನು ಬಾಗಿರುವ ಕಾಲುಗಳು ತೋರಿಸುತ್ತಿವೆ. ಎರಡೂ ಪ್ರಾಣಿಗಳ ಮೇಲೂ ಮಾನವರು ಸವಾರಿ ಮಾಡುತ್ತಿದ್ದಾರೆ. ಬಳಿಯಲ್ಲಿ ಪಾದಗಳನ್ನು ಮೂಡಿಸಲಾಗಿದೆ.

ಇಲ್ಲಿಂದ ಲನತಿ ದೂರವಾದ ಚೋಳಮಡು ಎಂಬ ಊರಿಗೆ ಹೋಗುವಾಗಿನ ದಾರಿಯಲ್ಲಿ ಸಿಗುವ ಎರಡು ಜೋಡಿ ಗುಡ್ಡದಲ್ಲಿಯೂ ಸಹ ವಿರಳವಾಗಿ ಎತ್ತಿನ ಚಿತ್ರಗಳು ಕಂಡು ಬರುತ್ತವೆ.

ಮಳಪ್ಪನಗುಡ್ಡದ ಪಶ್ಚಿಮಕ್ಕೆ ತಾಲ್ಲೂಕು ಕೇಂದ್ರ ಹಿರಿಯೂರಿನಿಂದ ೯ ಕಿ.ಮೀ. ದೂರದಲ್ಲಿ ಪುಟ್ಟದೊಂದು ಗುಡ್ಡವಿದೆ. ಈ ಗುಡ್ಡದ ಪಶ್ಚಿಮಾಭಿಮುಖವಾದ ಇಳಿಜಾರು ಮತ್ತು ತಪ್ಪಲಿನಲ್ಲಿ ಅಲ್ಲಲ್ಲಿ ಗ್ರಾನೈಟ್ ಕಲ್ಲಿನ ಹಾಸು ಬಂಡೆಗಳಿವೆ ದೊಡ್ಡಘಟ್ಟ ಎಂಬ ಹಳ್ಳಿಗೆ ಹೋಗುವ ಮಾರ್ಗದಿಂದ ಬಲಕ್ಕೆ ಇರುವ ಗಪ್ಪಕಲ್ಲುಗಳ ಬಂಡೆಗಳಿಂದ ಅಧ್ಯಯನ ಸುಲಭ. ಇಲ್ಲಿನ ಎಡಭಾಗದ ನಿಲಿಸುಗಲ್ಲುಗಳ ಬದಿಯಲ್ಲಿರುವ ಹಾಸು ಚಿಕ್ಕ ಬಂಡೆ ಮೇಲೆ ಎತ್ತುಗಳ ೫ ಚಿತ್ರಗಳಿವೆ. ಇವು ೧೬ ಸೆಂ.ಮೀ. ಉದ್ದವಿದೆ. ಬಳಿಯಲ್ಲಿ ನಕ್ಷತ್ರಾಕಾರದ ಚಿತ್ರವಿದೆ. ಇಲ್ಲಿಂದ ಮುಂದೆ ಬಲಭಾಗದ ಬಂಡೆಯಲ್ಲಿ ಎರಡು ಜೊತೆ ಪಾದಗಳ ರೇಖಾಚಿತ್ರವಿದೆ. ಸ್ವಲ್ಪ ಮುಂದಿನ ಬಂಡೆಯೊಂದರಲ್ಲಿ ೫೦ ಸೆಂ.ಮೀ. ಉದ್ದದ ಎತ್ತಿನ ಚಿತ್ರವಿದೆ. ಇಲ್ಲಿಯೇ ಅಮಾನುಲ್ಲ ಎಂದು ಇತ್ತೀಚೆಗೆ ಕೆತ್ತಿರುವ ಬಂಡೆಯೊಂದರ ಮೇಲೆ ೨೦ ಸೆಂ.ಮೀ. ಉದ್ದದ ಎತ್ತಿನ ಚಿತ್ರವಿದೆ

ಕಾಲು ಭಾಗಗಳು ಉದ್ದವಾಗಿವೆ ಕೋಡುಗಳು ಲಂಬವಾಗಿವೆ. ಇದೇ ಚಿತ್ರದ ಮೇಲೆ ಮತ್ತೊಂದು ಎತ್ತಿನ ಚಿತ್ರವಿದ್ದು ೧೨ ಸೆಂ.ಮೀ. ಆಗಿದೆ. ಎತ್ತಿನ ಮುಖ ಮುಂಭಾಗಕ್ಕೆ ಬಾಗಿದೆ. ಕೋಡುಗಳು ಸಹ ಮುಂಭಾಗಕ್ಕೆ ಬಾಗಿವೆ. ಬೆನ್ನಿನ ಉಬ್ಬನ್ನು ಬಿಡಿಸಿರುವ ರೇಖೆಯು ಇಳಿಬಿಟ್ಟು ಶಿಶ್ನದವರೆಗೂ ಮುಂದುವರೆದಿದೆ. ಈ ಚಿತ್ರದ ಬಲಬದಿಗೆ ಇರುವ ಬಂಡೆ ಮೇಲೆ ೩೪ ಸೆಂ.ಮೀ. ಉದ್ದದ ಎತ್ತು ಇದೆ. ಉದ್ದನೆಯ ಕೋಡುಗಳು ಈ ಚಿತ್ರಕ್ಕಿದ್ದು ಇದರ ಮೇಲೆ ೨೦ ಸೆಂ.ಮೀ.ನ ಮತ್ತೊಂದು ಎತ್ತಿನ ಚಿತ್ರವಿದೆ. ಈ ಎರಡೂ ಎತ್ತುಗಳ ಮಧ್ಯ ಮತ್ತೆರಡು ಪುಟ್ಟ ಎತ್ತುಗಳಿವೆ. ಮುಂದುವರೆಯುತ್ತಾ ೨೫ ಸೆಂ.ಮೀ.ನ ಮತ್ತೊಂದು ಎತ್ತು ಇದೆ. ಇದೇ ಬಂಡೆಯ ಮೇಲೆ ಮತ್ತೊಂದು ಎರಡು ಜೋಡಿ ಬೆರಳುಗಳುಳ್ಳ ಹೆಜ್ಜೆಯ ರೇಖಾಚಿತ್ರದ ನಡುವೆ ೪೦ ಸೆಂ.ಮೀ.ನ ಮತ್ತೊಂದು ಎತ್ತಿನ ಚಿತ್ರವಿದೆ. ಈ ಬಂಡೆಯಿಂದ ಮೇಲಿನ ಬಂಡೆಯಲ್ಲಿ ದಕ್ಷಿಣಾಭಿಮುಖ ಮಾಡಿರುವ ೫೩ ಸೆಂ.ಮೀ.ನ ಎತ್ತು ಇದೆ. ಉದ್ದನೆಯ ಕೋಡು ಮತ್ತು ಬಾಲವಿದೆ ಇದೇ ಬಂಡೆಯ ವಿರುದ್ಧ ದಿಕ್ಕಿನಲ್ಲಿ ೩೦.ಸೆಂ.ಮೀ ನ ಮತ್ತೊಂದು ಎತ್ತಿನ ಚಿತ್ರವಿದೆ. ಆಧುನಿಕ ಕಾಲದ ಚೌಕಾಬಾರದ ನಕ್ಷೆಯನ್ನು ಕೆತ್ತಿರುವ ಬಂಡೆಯಲ್ಲಿ ೫ ಸೆಂ.ಮೀ. ವ್ಯಾಸದ ೪ ದುಂಡನೆಯ ವೃತ್ತಗಳಿವೆ. ಇಲ್ಲಿಯೂ ಪುಟ್ಟಪುಟ್ಟ ಎತ್ತಿನ ಚಿತ್ರವಿದೆ. ಇದೇ ಬಂಡೆಯ ಮೇಲುತುದಿಯಲ್ಲಿ ಮತ್ತೊಂದು ಎತ್ತಿನ ಚಿತ್ರವಿದೆ, ಮುಂದಿನ ಒಂದು ಬಂಡೆಯಲ್ಲಿ ಎರಡು ಎತ್ತುಗಳು ಪರಸ್ಪರ ಕಾದಾಡುತ್ತಿರುವ ಚಿತ್ರವಿದೆ ಇವು ಒಂದಕ್ಕಿಂತ ಒಂದು ಆಕಾರದಲ್ಲಿ ಭಿನ್ನವಾಗಿವೆ. ಎಡಭಾಗದ ಎತ್ತಿಗೆ ನಾಲ್ಕು ಉದ್ದಗೆರೆ ಸೂಚಿಸಿ ಕಾಲುಗಳನ್ನು ರಚಿಸಿದ್ದಾರೆ. ಈ ಎತ್ತುಗಳ ಬಳಿಕ ೨೮ ಸೆಂ.ಮೀ. ಉದ್ದದ ಜಿಂಕೆಯ ಚಿತ್ರವಿದೆ. ಬಳಿಕ ೧೭ ಸೆಂ.ಮೀ.ನ ಎತ್ತಿನ ಚಿತ್ರವಿದೆ. ಇದನ್ನು ಅನುಸರಿಸಿದಂತೆ ಹೆಜ್ಜೆಗಳು ಇವೆ. ಇಲ್ಲಿಂದ ಮೇಲೆ ಪುಟ್ಟಪುಟ್ಟ ದುಂಡನೆಯ ಕುಳಿಗಳಿರುವ ಸಾಲುಗಳು ಇವೆ. ನಂತರ ೩ ಪುಟ್ಟ ಪ್ರಮಾಣದ ಎತ್ತಿನ ನಂತರ ೪೪ ಸೆಂ.ಮೀ. ಉದ್ದದ ಎತ್ತಿನ ಚಿತ್ರವಿದೆ. ಗೋಣಿನ ಭಾಗ ಎತ್ತರವಾಗಿದ್ದು ಅತ್ಯಂತ ಉದ್ದನೆಯ ಕೋಡುಗಳು ಇವೆ.

ಇಲ್ಲಿಂದ ಮುಂದೆ ೩೫ ಸೆಂ.ಮೀ. ಉದ್ದ ೧೦ ಸೆಂ.ಮೀ. ಅಗಲದ ಓಡುವ ಚಲನೆ ಇರುವ ಕುದುರೆಯ ಚಿತ್ರವಿದೆ. ಕೇಶಗಳನ್ನು ಕೊರಳ ಬಳಿ ಕಾಣಬಹುದು. ಇಲ್ಲಿಯೇ ಮತ್ತೊಂದು ಬಂಡೆಯಲ್ಲಿ ೨೦ ಸೆಂ.ಮೀ. ಉದ್ದದ ಗಿಳಿ ಚಿತ್ರವಿದೆ. ಬದಿಯಲ್ಲಿ ೫೦ ಸೆಂ.ಮೀ. ಉದ್ದದ ಎತ್ತಿನ ಒಂದು ಚಿತ್ರವಿದೆ. ಈ ಎರಡರ ಮಧ್ಯೆ ಪುಟ್ಟಪ್ರಮಾಣದ ಮತ್ತೊಂದು ಎತ್ತು ಇದೆ.

ಇದರ ನಂತರದ ಬಂಡೆಯಲ್ಲಿ ೧೦ ಎತ್ತುಗಳಿರುವ ಚಿತ್ರಗಳ ಒಂದು ಸಮೂಹವಿದೆ. ಎಲ್ಲವೂ ಸಹ ದಕ್ಷಿಣಾಭಿಮುಖವಾಗಿ ಚಲಿಸುತ್ತಿವೆ. ಉದ್ದನೆಯ ಬಾಗಿದ ಕೋಡುಗಳು ಇವುಗಳಲ್ಲಿ ಮೂರಕ್ಕೆ ಇವೆ.

ಈ ಬಂಡೆಯ ಕೆಳಗಿನ ಇಳಿಜಾರಿನಲ್ಲಿ ಮೂರುಮುಕ್ಕಾಲು ಅಡಿ ಎತ್ತರ ಮತ್ತು ಒಂದು ಮುಕ್ಕಾಲು ಅಡಿ ಅಗಲದ ನರ್ತನ ರೂಪದ ಮಾನವನೊಬ್ಬನ ಚಿತ್ರವಿದೆ. ಕೈಬೆರಳುಗಳು ಸ್ಪಷ್ಟವಾಗಿ ಮೂಡಿಸಿದುವಾಗಿವೆ. ಎಡದ ಕೈಯನ್ನು ಹಿಂದೆ ಚಾಚಿ ಬಲದಕೈ ಬೆನ್ನಿನ ಹಿಂದೆ ಬಂದಿದೆ. ಇದು ರೂಪ ಮತ್ತು ಶೈಲಿಗಳಲ್ಲಿ ನೂತನವಾಗಿದ್ದು ಸುಮಾರು ಕ್ರಿ.ಶ. ೧೫ ನೇ ಶತಮಾನದ ಹಿಂದಕ್ಕೆ ಸರಿಯಲಾರದು. ಶರೀರದ ಎಲ್ಲಾ ಭಾಗಗಳನ್ನು ರೇಖೆಗಳಿಂದ ಬಿಡಿಸಲಾಗಿದೆ. ಇಡಿ ಈ ವಲಯದಲ್ಲಿಯೇ ದೊರೆತಿರುವ ಅತಿದೊಡ್ಡ ಮಾನವನ ಅಪರೂಪದ ರೇಖಾಚಿತ್ರ ಇದಾಗಿದೆ. ಇಲ್ಲಿಯೇ ೩೦ ಸೆಂ.ಮೀ. ಉದ್ದದ ಮತ್ತೊಂದು ಕುದುರೆಯ ಚಿತ್ರ ಮತ್ತು ಎತ್ತಿನ ಚಿತ್ರವಿದೆ. ಬಳಿಯಲ್ಲಿಯೇ ನಾಲ್ಕು ಗೂಳಿಗಳ ಚಿತ್ರಗಳು ಇವೆ.

ಇಳಿಜಾರಿನ ಒಂದು ಬಂಡೆಯ ಮೇಲೆ ೮ ಎತ್ತುಗಳ ಮತ್ತು ಅಲಂಕರಿಸಿದ ಒಂದು ಕುದುರೆಯ ಚಿತ್ರವಿದೆ. ಇವುಗಳಲ್ಲಿ ೪೦ ಸೆಂ.ಮೀ. ಉದ್ದನೆಯದು ಅತಿದೊಡ್ಡ ಚಿತ್ರವಾದರೇ ೧೫ ಸೆಂ.ಮೀ.ನದು ಅತಿ ಚಿಕ್ಕ ಚಿತ್ರವಾಗಿದೆ. ಈ ಬಂಡೆಯ ಮೇಲಿನ ಚಕ್ಕೆಗಳು ಎದ್ದಿದ್ದು ಬಹಳಷ್ಟು ನಷ್ಟವಾಗಿ ಹೋಗಿವೆ. ಬಂಡೆಯ ತುದಿಯಲ್ಲಿ ೩ ಪಟ್ಟಿಗಳುಳ್ಳ ಕಮಾನಿನಾಕಾರದ ಒಂದು ಚಿತ್ರವಿದೆ. ಇದರ ಪಕ್ಕದ ಬಂಡೆಯಲ್ಲಿಯೂ ಕೆಲವು ಎತ್ತುಗಳ ಚಿತ್ರಗಳಿವೆ. ಈ ಬಂಡೆಯ ಎದುರಿನ ಬಂಡೆಯಲ್ಲಿ ೫೦ ಸೆಂ.ಮೀ. ಉದ್ದದ ೮ ಸೆಂ.ಮೀ. ಹಾಗೂ ೧೫ ಸೆಂ.ಮೀ. ಉದ್ದದ ಎತ್ತುಗಳಿವೆ. ಅಲ್ಲದೆ ಆಕಾರದ ಪುಟ್ಟಚಿತ್ರ ಸೂರ್ಯಚಂದ್ರರ ಚಿತ್ರಗಳಿವೆ.

ಮನುಷ್ಯನ ರೇಖಾಚಿತ್ರವಿರುವ ಸ್ವಲ್ಪ ಮೇಲೆ ಅದೂ ಸಹ ರೇಖಾಚಿತ್ರ ಮನುಷ್ಯನದೇ ಆಗಿದ್ದು ನರ್ತನದ ಕೈ ಮಾತ್ರ ಉಳಿದಿದೆ. ಬಳಿಯಲ್ಲಿ ಪಕ್ಷಿಯೊಂದರ ಚಿತ್ರವಿದೆ.

ಮತ್ತೊಂದು ಇಲ್ಲಿನ ಬಂಡೆಯ ಮೇಲೆ ೧೧ ಎತ್ತುಗಳ ಮಾಲಿಕೆ ಚಿತ್ರವೇ ಇದೆ. ಇವು ಒಂದರ ಮೇಲೆ ಒಂದರಂತೆ ಇದು ೭ ಎತ್ತುಗಳು ಒಂದು ಕಡೆ ಇವೆ ಉಳಿದ ನಾಲ್ಕು ಇನ್ನೊಂದು ಅಂಚಿಗಿದೆ. ಇವುಗಳಲ್ಲಿ ಅತಿಪುಟ್ಟ ಎತ್ತು ೬ ಸೆಂ.ಮೀ. ಆದರೆ ಅತಿದೊಡ್ಡ ಎತ್ತು ೪೨ ಸೆಂ.ಮೀ. ಆಗಿದೆ. ಇವುಗಳ ನಡುವೆ ದುಂಡನೆಯ ಕಳಶದ ರೇಖಾಚಿತ್ರವಿದೆ. ತುದಿಯಲ್ಲಿ ಇಳಿಜಾರಿಗೆ ಬರುವಂತೆ ಮತ್ತೊಂದು ೨೦ ಸೆಂ.ಮೀ.ನ ಎತ್ತಿನ ಚಿತ್ರ. ಬಂಡೆಯ ಎಡಮಗ್ಗುಲಲ್ಲಿ ಮತ್ತೆರಡು ೨೦ ಸೆಂ.ಮೀ.ನ ಎತ್ತಿನ ಚಿತ್ರವಿದೆ. ಉಡುವಳ್ಳಿಯ ಪೂರ್ವಭಾಗದ ಬಂಡೆಯ ಮೇಲೆ ಬೆನ್ನಿನ ಕಡೆ ಮುಖ ತಿರುಗಿಸಿ ನಿಂತಿರುವ ಎತ್ತಿನ ಚಿತ್ರ ಅತಿ ವಿಶೇಷವಾಗಿ ಕಾಣುತ್ತದೆ. ಉಡುವಳ್ಳಿಗೆ ಪಶ್ಚಿಮ ದಿಕ್ಕಿನಲ್ಲಿ ಕೆರೆಯಂಗಳದ ಎಡಭಾಗದಲ್ಲಿ ಪೂರ್ವಾಭಿಮುಖವಾದ ನಿಂತ ಬಂಡೆಯಲ್ಲಿ ೩೦ ಸೆಂ.ಮೀ. ಉದ್ದದ ೬ ಎತ್ತುಗಳು ಇವೆ. ಇವುಗಳ ಕೆಳಭಾಗದಲ್ಲಿ ಆನೆಯೊಂದರ ಚಿತ್ರವಿದೆ. ಆನೆ ಮತ್ತು ೩ ಎತ್ತುಗಳು ಬಲಭಾಗಕ್ಕೆ

ಮುಖ ಮಾಡಿವೆ. ಉಳಿದ ಮೂರು ಎತ್ತುಗಳು ಎಡಭಾಗಕ್ಕೆ ಮುಖ ಮಾಡಿವೆ.

**ಆಯುಧಗಳು**

ನವಶಿಲಾಯುಗದ ಕೈಗೊಡಲಿ ಕೈಬಾಚಿ ಮತ್ತು ಚಾಕುಗಳು ಇಲ್ಲಿ ವಿಪುಲವಾಗಿ ದೊರೆಯುತ್ತವೆ. ದಕ್ಷಿಣ ದಿಕ್ಕಿನ ತಪ್ಪಲಿನಲ್ಲಿ ಬಿದ್ದಿವೆ. ಸ್ಥಳೀಯ ಲಾವಾರಸದ ಗಷ್ಪಕಲ್ಲುಗಳಿಂದಲೇ ಇವುಗಳನ್ನು ರಚಿಸಿಕೊಳ್ಳಲಾಗಿದೆ. ಇವು ತ್ರಿಕೋನಾಕಾರದ ಕೈಗೊಡಲಿ ಕೈಬಾಚಿ ಗಳಾಗಿದ್ದು ೧೩ ಸೆಂ.ಮೀ. ಉದ್ದ ೮ ಸೆಂ.ಮೀ. ಅಗಲವಾಗಿವೆ. ಕೈಗೊಡಲಿಯೊಂದಕ್ಕೆ ತ್ರಿಕೋನಾಕೃತಿಯ ಮಧ್ಯೆ ಒಂದು ರಂಧ್ರ ಮಾಡಿದ್ದು ಮರದ ಬೆಣೆಯನ್ನು ಕೂರಿಸಲು ಅನುಕೂಲ ಮಾಡಿ ಕೊಳ್ಳಲಾಗಿದೆ. ಈ ರಂಧ್ರ ನಾಲ್ಕು ಸೆಂ.ಮೀ. ವ್ಯಾಸವಿದೆ. ಚಾಕು ೨೭ ಸೆಂ.ಮೀ. ಉದ್ದ, ೧೦ ಸೆಂ.ಮೀ. ಅಗಲವಾಗಿದೆ. ಹಿಂದೆ ಹಿಡಿಕೆಗಾಗಿ ಕಲ್ಲನ್ನು ಕತ್ತರಿಸಿಕೊಳ್ಳಲಾಗಿದೆ.

ಈ ಆಯುಧಗಳು ದೊರೆಯುವ ಸ್ಥಳಗಳನ್ನು ಬಿಟ್ಟು ಪ್ರಾಕೃತಿಕ ೨೦ ಅಡಿ ಅಗಲದ ಹೊಂಡದಿಂದ ತುಸು ಮೇಲಕ್ಕೆ ೨೨ ಸೆಂ.ಮೀ. ಉದ್ದದ ಗೂಳಿಯೊಂದಿಗೆ ಕಾದಾಡುವ ಮಾನವನ ಪುಟ್ಟ ಚಿತ್ರವಿದೆ. ಈ ಗೂಳಿಗೆ ಕೋಡುಗಳು ಕಮಾನಾಕಾರವಾಗಿ ಬಾಗಿವೃ೬೫'. ಮಾನವ ಕೋಲನ್ನು ಹಿಡಿದ್ದು ಗೂಳಿಯನ್ನು ಎದುರಿಸುತ್ತಿ ದ್ದಾನೆ. ಇದರ ಬಲಬದಿಗೆ ೨೦ ಸೆಂ.ಮೀ.ನ ಮತ್ತೆ ಎರಡು ಗೂಳಿಗಳು ಇವೆ. ಇಲ್ಲಿಯೇ ನಕ್ಷತ್ರಾಕಾರದ ರಂಗೋಲಿಗಳು ನಾಲ್ಕು ಹೂವಿನ ದಳಗಳು ಮತ್ತು ಹೆಜ್ಜೆಗಳು ಇವೆ.

**ಬೃಹತ್ ಶಿಲಾಯುಗದ ಸಮಾಧಿಗಳು** : ಪ್ರಾಕೃತಿಕ ಹೊಂಡವನ್ನು ಬಿಟ್ಟು ಮೇಲೆ ಏರಿದಾಗ ಉತ್ತರಕ್ಕೆ ಶಿರಬರುವ ಹಾಗೆ ಸಮಾಧಿ ಮಾಡಿರುವ ಎರಡು ಬೃಹತ್ ಶಿಲಾಯುಗದ ಸಮಾಧಿಗಳಿವೆ. ಎರಡೂ ಒಂದರ ಹಿಂದೆ ಒಂದು ಅಂತರದಲ್ಲಿದೆ. ಒಂದು ೧೨ ಅಡಿ ಉದ್ದ ೬ ಅಡಿ ಅಗಲವಾಗಿದೆ. ಕೆಳಗೆ ಚೌಕಾಕಾರದ ರೂಪದಲ್ಲಿ ತುಂಡು ಹಲಗೆಗಳನ್ನು ಜೋಡಿಸಿದ್ದು ಮೇಲೆಲ್ಲಾ ಹಲಗೆ ಕಲ್ಲುಗಳನ್ನು ಜೋಡಿಸಲಾಗಿದೆ. ಉತ್ತರ ದಿಕ್ಕಿಗೆ ತಲೆ ಇರಿಸಿರುವುದರ ಗುರುತಾಗಿ ಸಮಾಧಿಗೆ ನಾಲ್ಕು ಅಡಿ ದೂರದಲ್ಲಿ ಒಂದು ಕಲ್ಲನ್ನು ನೆಡಲಾಗಿದೆ.

ಮತ್ತೊಂದು ೨೦ ಅಡಿ ವ್ಯಾಸದ ದುಂಡನೆಯ ಆಕಾರದ ಶವಕುಣಿ ಆಗಿದ್ದು ಇದರ ಮೇಲೆ ತುಂಡು ಹಲಗೆ ಕಲ್ಲುಗಳನ್ನು ಹಾಕಿದೆ.

ಇಂತಹುದೇ ರಚನೆಗಳು ಹುಲಗಲಕುಂಟೆ ಉಡುವಳ್ಳಿಗೆ ಮಧ್ಯದಲ್ಲಿಯೇ ಅಲ್ಲದೇ ಗುಡ್ಡದ ಪಶ್ಚಿಮಕ್ಕಿರುವ ಬಳಿಯ ಪರಮೇನ ಹಳ್ಳಿಯಲ್ಲಿ ೧೫ ಕ್ಕೂ ಹೆಚ್ಚು ದೊರೆತಿವೆ. ೨೫ ಅಡಿ ವ್ಯಾಸದ ದುಂಡು ವೃತ್ತದ ಶವಕುಣಿಗಳು. ಇವುಗಳು ಕೆಲವನ್ನು ನಾಶ ಮಾಡಲಾಗಿದೆ. ತಲೆಗಲ್ಲು ಕೆಲವು ಕಡೆ ಹಾಗೆ ಉಳಿದಿವೆ. ಮತ್ತೆ ಒಂದರ ಮೇಲೆ ಆಧುನಿಕವಾಗಿ ಗುಡಿಸಲನ್ನು ನಿರ್ಮಿಸಿಕೊಂಡಿದ್ದಾರೆ. ಸ್ಥಳೀಯ ಭಾಷೆಯಲ್ಲಿ ಇವುಗಳನ್ನು ಪಾಂಡವರ ಗುತ್ತಿಗಳು ಎಂದು ಕರೆಯುತ್ತಾರೆ.

**ಮಲ್ಲಪ್ಪ ಇಲ್ಲವೇ ಮಳ್ಳಪ್ಪನಗುಡಿ**

ಗುಡ್ಡದ ಮೇಲುಭಾಗದಲ್ಲಿ ಸುಮಾರು ೩೦೦ ಅಡಿ ಉದ್ದದ ೩೦ ಅಡಿ ಅಗಲದ ಪಾಳುದೇವಾಲಯವಿದೆ. ಸ್ಥಳೀಯ ತುಂಡು ಕಲ್ಲುಗಳ ಸಹಾಯದಿಂದಲೇ ಇದನ್ನು ರಚಿಸಲಾಗಿದೆ. ೩ ಸ್ತರಗಳಲ್ಲಿ ನಿರ್ಮಿಸಿರುವ ಈ ದೇವಾಲಯದಲ್ಲಿ ೩೨ ಕಂಬಗಳ ಆಸರೆ ಒಳಗೆ ಇದೆ. ಮುಖಮಂಟಪದಲ್ಲಿ ೩ ಅಡಿ ಎತ್ತರದ ಕಲ್ಲು ಹಲಗೆಯ ಮೇಲೆ ಸರ್ಪಗಳು ಇವೆ. ನಂತರ ಅಂಗಳ, ಸುಖನಾಸಿ, ಗರ್ಭಗುಡಿಗಳು ಇವೆ. ಗರ್ಭಗುಡಿಯಲ್ಲಿದ್ದ ಮೂರ್ತಿಯನ್ನು ಸುಖನಾಸಿಯಲ್ಲಿ ಇಡಲಾಗಿದೆ. ಮೂರ್ತಿಯ ಜೊತೆ ವೀರಗಲ್ಲು ಒಂದು ಇದೆ. ದೇವಾಲಯ ಪೂರ್ವಭಾಗಕ್ಕೆ ಮುಖಮಾಡಿದೆ.



ಭೈರವನ ಚಿತ್ರ

ಭೈರವಮೂರ್ತಿ ೪೮ ಸೆಂ.ಮೀ. ಎತ್ತರ ೩೨ ಸೆಂ.ಮೀ. ಅಗಲವಾಗಿದೆ. ಅರೆ ಸುಖಾಸನದಲ್ಲಿ ಕುಳಿತಿರುವ ಮೂರ್ತಿಗೆ ಚತುರ್ಭುಜಗಳಿವೆ ಮೇಲೆ ಇರುವ ಬಲದಕೈನಲ್ಲಿ ತ್ರಿಶೂಲ ಎಡದಕೈನಲ್ಲಿ ಡಮರು ಕೆಳಗೆ ಇರುವ ಬಲದ ಕೈನಲ್ಲಿ ಕತ್ತಿ ಮತ್ತು ಎಡಗೈನಲ್ಲಿ ಪಾಣಿಬಟ್ಟಲು ಇವೆ. ಇಳಿಬಿಟ್ಟಿರುವ ಕಾಲಿನಿಂದ ಭೈರವನು ಬ್ರಹ್ಮಶಿರವನ್ನು ಒತ್ತುತ್ತಿದ್ದಾನೆ. ಕೊರಳಲ್ಲಿ ಹಾರ ಅಲ್ಲದೆ ಏಕಾವಳಿ ಮಾಲೆ ಪಾದಗಳವರೆಗೂ ಪಸರಿಸಿದೆ. ಕರ್ಣ ಮತ್ತು ಕಾಲುಗಳಲ್ಲಿ ಆಭೂಷಣಗಳಿವೆ. ಮುಕುಟವಿದ್ದು ಶಾಂತ ಸ್ವಭಾವದ ಮುಖವಿದೆ. ಲಕ್ಷಣಗಳಿಂದ ಇದು ಭೈರವನ ಮೂರ್ತಿ ಆಗಿದ್ದು ಹುಲಗಲಕುಂಟೆ ಗ್ರಾಮಸ್ಥರು ಈ ದೇವಾಲಯ ನಿರ್ಮಿಸಿ ಪೂಜಿಸುತ್ತಿದ್ದರೆಂದು ಕ್ಷೇತ್ರ ಕಾರ್ಯದಿಂದ ತಿಳಿದುಬಂದಿದೆ. ಇಂದಿಗೂ ಸಹ ಶಿವರಾತ್ರಿಯ ಸಮಯದಲ್ಲಿ ಮತ್ತು ಮಳೆಬರದ

ಸಮಯದಲ್ಲಿ ಹುಲಗಲಕುಂಟೆಯ ಜನರು ಬಂದು ಪೂಜಿಸುವ ವಾಡಿಕೆ ಇದೆ.

ಭೈರವನ ಬಲಭಾಗದಲ್ಲಿ ವೀರಗಲ್ಲು ಒಂದು ನಾಲ್ಕು ಹಂತಗಳಲ್ಲಿವೆ. ೮೦ ಸೆಂ.ಮೀ. ಉದ್ದ ೩೯ ಸೆಂ.ಮೀ. ಅಗಲ ೮ ಸೆಂ.ಮೀ. ದಪ್ಪದ ಗ್ರಾನೈಟ್ ಶಿಲ್ಪ ಇದಾಗಿದೆ. ಸ್ತ್ರೀಯೋರ್ವಳ ಶಿಲ್ಪದ ಚಿತ್ರವು ಬಲತುದಿಗೆ ಇದೆ. ಬಲಗೈ ಇಳಿಬಿಟ್ಟು ಎಡದಕೈ ಮೇಲೆ ಎತ್ತಿ ಹಿಡಿದಿದ್ದಾಳೆ. ಅಲಂಕಾರಗೊಂಡಿದ್ದು ಸತಿ ಹೋಗಿದ್ದಾಳೆ ಎಂದು ಸುಲಭವಾಗಿ ನಿರ್ಣಯಿಸಬಹುದು. ಎಡಬದಿಯಲ್ಲಿ ಸತಿಪತಿಯರು ಅಲಂಕಾರಗೊಂಡಿದ್ದಾರೆ. ಪತಿ ತನ್ನೆರಡು ಕೈಗಳಲ್ಲೂ ಕಮಂಡಲದ ರೀತಿಯ ವಸ್ತುವನ್ನು ಕೈಯಲ್ಲಿ ಹಿಡಿದು ಹೋಗುತ್ತಿದ್ದಾನೆ. ಸತಿಯು ಅವನನ್ನು ಹಿಂಬಾಲಿಸುತ್ತಿದ್ದಾಳೆ.

ಈ ವೀರಗಲ್ಲಿನ ಪ್ರಧಾನ ಚಿತ್ರವಾದ ವೀರ ತನ್ನ ಎಡದ ಕೈನಲ್ಲಿ ಬಿಲ್ಲು ಬಲದ ಕೈನಲ್ಲಿ ಬಾಣವನ್ನು ಹಿಡಿದಿದ್ದಾನೆ. ಕೊರಳಲ್ಲಿ ಹಾರವಿದೆ. ಬೇಟೆ ಆಡುವವನ ರೀತಿಯಲ್ಲಿ ಇವನ ಚಿತ್ರಣ ಬಂದಿದೆ. ಅಂದರೆ ಈತ ಬಿಲ್ಲು ಬಾಣಗಳನ್ನು ಹಿಡಿದು ಶತ್ರುವಿನ ಜೊತೆ ಹೋರಾಡಿ ಮಡಿದಿದ್ದಾನೆ. ಮಡಿದವನು ಸ್ವರ್ಗದಲ್ಲಿ ಆಶೀರ್ವಾದ ರೂಪದಲ್ಲಿ ಕುಳಿತಿದ್ದಾನೆ. ಮೇಲುಭಾಗದಲ್ಲಿ ಶಿವಲಿಂಗ ಮತ್ತು ಬಸವ ಇದೆ. ಅಂದರೆ ಈತನು ಮಡಿದ ಮೇಲೆ ಕೆಳಗೆ ಚಿತ್ರಿಸಿರುವ ಈತನ ಸತಿ ಚಿತೆ ಏರಿ ಸಹಗಮನ ಅನುಸರಿಸಿ ದ್ದಾಳೆ.

ಮಲ್ಲಪ್ಪನಗುಡಿಯಲ್ಲಿರುವ ವೀರಮಾಸ್ತಿ ಕಲ್ಲು

ಕಾಲಮಾನದ ದೃಷ್ಟಿಯಿಂದ ಭೈರವನಮೂರ್ತಿ ಮತ್ತು ವೀರಗಲ್ಲು ಎರಡೂ ಸಹ ೧೪ನೇ ಶತಮಾನಕ್ಕೆ ಸೇರಿದ್ದು ದೇವಾಲಯವೂ ಸಹ ಆ ಸಮಕಾಲೀನ ನಿರ್ಮಾಣವೇ ಆಗಿದೆ.

ಪ್ರಾಗೈತಿಹಾಸಿಕ ಕಾಲವಾದ ನವಶಿಲಾಯುಗ (ಕಾಲ ಸು. ಕ್ರಿ.ಪೂ. ೩೦೦೦ ದಿಂದ) ದಿಂದ ಇಂದಿನವರೆಗೆ ಸತತವಾಗಿ ಮಾನವನ ಮತ್ತು ಪಶುಪಕ್ಷಿಗಳ ಕ್ರಿಯಕಲಾಪಗಳು ಈ ಗುಡ್ಡದ ಪರಿಸರದಲ್ಲಿ ನಡೆದು ಬಂದುದಾಗಿದೆ. ಮಾನವನಿಗೆ ಈ ನೆಲೆ ಸಾಮಾಜಿಕ ಧಾರ್ಮಿಕವಾಗಿ ಸಹಾಯ ಒದಗಿಸಿದೆ.

ಈ ಅಧ್ಯಯನದ ಫಲಶ್ರುತಿಯ ಅಂಶಗಳನ್ನು ಕೆಳಕಂಡಂತೆ ಹೇಳಬಹುದು:

೧. ಇಲ್ಲಿನ ಮಾನವರು ತಮಗೆ ಪರಿಚಿತವಾದ ಪ್ರಾಣಿ ಪಕ್ಷಿಗಳ ಕಲಾಭಿವ್ಯಕ್ತಿಯಲ್ಲಿ ನಿಷ್ಣಾತರಾಗಿದ್ದರು.

೨. ಸ್ಥಳೀಯ ನಿರ್ಮಾಣ ಮಾಧ್ಯಮಗಳ ಬಳಕೆಯಾಗಿದೆ.

೩. ಗುಡ್ಡದ ಪರಿಸರದಲ್ಲಿ ಮಣ್ಣಿನ ಯಾವುದೇ ಅಥವಾ ಲೋಹದ ವಸ್ತುಗಳ ಅಲಭ್ಯದ ಕಾರಣ ಇಲ್ಲಿ ವಾಸ್ತವ್ಯ ಇರಲಿಲ್ಲ ಎಂದು ನಿರ್ಣಯಿಸಬಹುದು.

೪. ಅಕ್ಕಪಕ್ಕದ ಗ್ರಾಮಗಳ ಜಾನುವಾರುಗಳಿಗೆ ಉತ್ತಮ ಮೇವಿನ ಗುಡ್ಡ.

೫. ರೇಖಾ ಚಿತ್ರಗಳು ಪ್ರಾಗೈತಿಹಾಸಿಕ ಕಾಲಕ್ಕೆ ಮಾತ್ರವೇ ಸೇರದೆ ಆಧುನಿಕ ಕಾಲದವರೆಗೂ ಮುಂದುವರೆದಿರುವಿಕೆ.

೬. ಕಲಾಭಿವ್ಯಕ್ತಿಗೆ ಲೋಹದ ಉಳಿ, ಮೊಳೆ ಮತ್ತು ಕಲ್ಲಿನ ಉಳಿಯನ್ನು ಬಳಸಿದ್ದರು.

೭. ಆರಾಧನೆಯಲ್ಲಿ ಸೂರ್ಯ, ಮಂಡಲಗಳ ನಕ್ಷೆ, ಮಂಗಳಕರವಾದ ವಸ್ತುವಾದ ಕಳಶ, ಎಲೆಗಳನ್ನು ಬಳಸುತ್ತಿದ್ದರು.

(ಈ ಸಂಶೋಧನಾ ಪ್ರಬಂಧ ರಚಿಸುವಾಗಿನ ಕ್ಷೇತ್ರಕಾರ್ಯದಲ್ಲಿ ನೆರವಾದ ನನ್ನ ಮಕ್ಕಳಾದ ಕುಮಾರಿ ರೋಹಿಣಿ. ಮತ್ತು ಕುಮಾರಿ ರೂಪಿಣಿ. ಅವರಿಗೆ ನಾನು ಋಣಿಯಾಗಿದ್ದೇನೆ.)



ಮನುಜನೆದೆಯ ಗುರುತಿನಲ್ಲಿ ಪ್ರಾಣಿಪಕ್ಷಿ
ಚಿತ್ರಾಭಿವ್ಯಕ್ತಿ ಯಾವ ಕಾಲದ್ದು ಹೇಳು!

ಇರುವ ನೆಲೆಯ ಕಣಗಳನೆ ಬಳಸಿ
ಅಕ್ಷಿಯಲ್ಲಿ ಕಂಡ ಸೂರ್ಯಮಂಡಲ
ಅವನ ಶಕ್ತಿ ಮಂಡಲದಿ ಅದೆ ಬಾಳ ಮೂಲ



ಡಾ. ಎಂ. ಕೊಟ್ರೇಶ್*

# ಕೆಂಚನಗುಡ್ಡ ಪರಿಸರ - ಒಂದು ಪರಿಶೀಲನೆ

*ಕೆಂಚನ ಗುಡ್ಡದ ಜನ ವಸತಿ ಮೂಲನೆಲೆಯಿಂದ ವಲಸೆ ಬಂದ ನೆಲೆಯಲ್ಲಿದೆ. ಇತಿಹಾಸಪೂರ್ವಕಾಲದ ಅವಶೇಷಗಳು ಮೂಲ ನೆಲೆಯಲ್ಲಿದ್ದರೂ (ಇತಿಹಾಸ ಕಾಲದ) ಶಾಸನಗಳು ಮೌರ್ಯರ ಕಾಲದಿಂದೀಚಿನ ವಾಗಿವೆ. ಶಾತವಾಹನರ, ಪಲ್ಲವರ ಆಡಳಿತ ವ್ಯಾಪ್ತಿಗೆ ಈ ಪ್ರದೇಶವಿತ್ತು, ಜನಪದೀಯ ನೆಲೆಯಲ್ಲಿ ಗ್ರಾಮಕ್ಕೆ ಕೆಂಚನಗೌಡನಿಂದಾಗಿ ಹೆಸರು ಬಂದಿದೆ. ಈ ಗುಡ್ಡವೊಂದು ಗಿರಿದುರ್ಗವಾಗಿದೆ. ದೇಗುಲ ಮಸೀದಿಗಳನ್ನು ಹೊಂದಿದೆ. ಒಂದು ಪಾಳೆಯ ಪಟ್ಟಾಗಿಯೂ ಇದ್ದುದೂ ತಿಳಿಯುತ್ತದೆ.*

ಬಳ್ಳಾರಿ ಜಿಲ್ಲೆಯ ತಾಲೂಕು ಕೇಂದ್ರವಾದ ಸಿರುಗುಪ್ಪ, ಬಳ್ಳಾರಿಯಿಂದ ಸುಮಾರು ೫೮ ಕಿ.ಮೀ. ದೂರದಲ್ಲಿದೆ. ಸಿರುಗುಪ್ಪ ದಿಂದ ನೈರುತ್ಯ ದಿಕ್ಕಿಗೆ ೬ ಕಿ.ಮೀ. ದೂರದಲ್ಲಿ ತುಂಗಭದ್ರಾ ನದಿಯ ಬಲದಂಡೆಯ ಮೇಲಿರುವುದೆ ಕೆಂಚನಗುಡ್ಡ. ಈಗ ಅಸ್ತಿತ್ವದಲ್ಲಿರುವ ಹೊಸ ಗ್ರಾಮವು ಮೂಲ ನೆಲೆಯಿಂದ ಪೂರ್ವಕ್ಕೆ ೧ ಕಿ.ಮೀ. ಅಂತರದಲ್ಲಿದೆ. ನದಿಯ ಪ್ರವಾಹದ ಏರಿಳಿತಗಳ ಕಾರಣವಾಗಿ ಮೂಲನೆಲೆಯಲ್ಲಿ ಜನವಸತಿ ಇಲ್ಲ. ಕೆಂಚನಗುಡ್ಡದ ಪರ್ವತ ಶ್ರೇಣಿಯು ದಕ್ಷಿಣಕ್ಕೆ ನಿಟ್ಟೂರು, ಉದೇಗೊಳಂ ಮೂಲಕ ತೆಕ್ಕಲಕೋಟೆ ಪರ್ವತ ಶ್ರೇಣಿಗೆ ಸೇರುತ್ತದೆ. ನಿಟ್ಟೂರಿನಲ್ಲಿ ಆದಿ ಹಳೆಯ ಶಿಲಾಯುಗದ ಸಂಸ್ಕೃತಿಯ ಉಪಕರಣಗಳು ಬಾಸೆ ನೊಮಿಡಕಸ್ (ಪ್ರಾಣಿಯ ಅಸ್ಥಿ ಅವಶೇಷ) ದೊರೆತಿವೆ. ನಿಟ್ಟೂರು ಹಾಗೂ ಹತ್ತಿರದ ಸುಕ್ರದಪ್ಪಬೆಟ್ಟಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಗೋರಿಗಳು ಪತ್ತೆಯಾಗಿವೆ. ಈ ಪರಿಸರದ ಕೊಂಚಗೇರಿ, ಕೋಟೆಕಲ್ಲು, ದುರ್ಗಹಳ್ಳಿ, ತೆಕ್ಕಲಕೋಟೆ, ನಿಟ್ಟೂರು, ಸನವಾಸಪುರಗಳಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಉಜ್ಜಿ ನಯಗೊಳಿಸಿದ ಕೊಡಲಿಗಳು, ಮಡಿಕೆಗಳು ಮತ್ತು ನೀಳಗೆರೆಗಳುಳ್ಳ ಮೂಲ ಶಿಲಾಗಚ್ಚಿಗಳು ಕಂಡುಬಂದಿವೆ. ಇನ್ನು ಇತಿಹಾಸ ಆರಂಭ ಯುಗದ ಅವಶೇಷಗಳು ನಡಿವಿ, ಉದೇಗೊಳಂ, ಬಾಗೇವಾಡಿ, ಹಚ್ಚೋಳ್ಳಿ ಮತ್ತು ಹಿರೇಕಲ್ಲುಗಳಲ್ಲಿವೆ. ಹೀಗೆ ಪ್ರಾಗಿತಿಹಾಸ ಕಾಲದ ಮಾನವನ ಬದುಕು ಈ ಪ್ರದೇಶದುದ್ದಕ್ಕೂ ಸಾಗಿ ಪ್ರಾಚೀನತೆಯ ಮಹತ್ವವನ್ನು ಹೆಚ್ಚಿಸಿದೆ.

ಈ ಪ್ರದೇಶದಲ್ಲಿ ಇತಿಹಾಸ ಪೂರ್ವ ಕಾಲದ ಅವಶೇಷ ಗಳು ವ್ಯಾಪಕವಾಗಿ ಕಂಡುಬಂದರೂ ಇತಿಹಾಸ ಕಾಲದ ಶಾಸನಗಳು ದೊರೆತದ್ದು ಮೌರ್ಯರ ಕಾಲದಿಂದೀಚೆಗೆ. ೧೯೭೭ರಲ್ಲಿ ಉದೇಗೊಳಂ ಮತ್ತು ನಿಟ್ಟೂರುಗಳಲ್ಲಿ ಬಂಡೆಗಳ ಮೇಲೆ ಬರೆದ ಅಶೋಕನ ಎರಡೆರಡು ಶಾಸನಗಳು ಬೆಳಕಿಗೆ ಬಂದವು. ಇದರೊಂದಿಗೆ ಮೌರ್ಯರ ನೇರ ಆಡಳಿತಕ್ಕೆ ಈ ಪ್ರದೇಶ ಸೇರಿತ್ತೆಂಬ ಅಂಶ ಬೆಳಕಿಗೆ ಬರುವುದು. ಈ ಪ್ರದೇಶದ ರಕ್ಷಣೆಗಾಗಿ ಅವರು ಈ ಭಾಗದಲ್ಲಿ ಆ ವೇಳೆಗಾಗಲೆ ರಕ್ಷಣಾ ಸ್ಮಾರಕಗಳನ್ನು ನಿರ್ಮಿಸಿಕೊಂಡಿರಬೇಕು. ಬಹು ದೀರ್ಘಾವಧಿ ಕಾಲದ ಅಂತರ ದಿಂದ ಅವರ ಸ್ಮಾರಕಗಳಾವುವೂ ಈಗ ಉಳಿದುಕೊಂಡಿಲ್ಲ.

ಶಾತವಾಹನರು ಮತ್ತು ಪಲ್ಲವರ ಆಡಳಿತ ವ್ಯಾಪ್ತಿಗೆ ಈ ಪ್ರದೇಶವು ಸೇರಿತ್ತು. ಆದರೆ ಅವರು ಇಲ್ಲಿ ಆಳ್ವಿಕೆ ಮಾಡಿದಂತೆ ಯಾವ ದಾಖಲೆಗಳು ಹೇಳುವುದಿಲ್ಲ. ಬಾದಾಮಿ ಚಾಳುಕ್ಯರ ಯಾವುದೇ ಶಾಸನಗಳಾಗಲಿ ಅಥವಾ ಸ್ಮಾರಕಗಳಾಗಲಿ ಇಲ್ಲಿ ಕಂಡುಬರುವುದಿಲ್ಲವಾದರೂ ಹತ್ತಿರದ ಕುರುಗೋಡಿನಲ್ಲಿ

* ಉಪನ್ಯಾಸಕರು, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸತ್ಯಾಶ್ರಯನ ಉಲ್ಲೇಖವಿರುವ ಬಾದಾಮಿ ಚಾಳುಕ್ಯರ ಶಾಸನವು ಕಂಡುಬಂದಿರುವುದರಿಂದ, ಈ ಪ್ರದೇಶವು ಬಾದಾಮಿ ಚಾಲುಕ್ಯರಿಗೆ ಸೇರಿರುವ ಅಂಶ ತಿಳಿಯುವುದು. ರಾಷ್ಟ್ರಕೂಟರ ಶಾಸನಗಳು ಹಾಗೂ ಸ್ಮಾರಕಗಳು ನೆರೆಯ ಬಳ್ಳಾರಿ ತಾಲೂಕಿನ ಕುಡುತಿನಿ ಹಾಗೂ ಕೊಳಗಲ್ಲುಗಳಲ್ಲಿ ಕಂಡುಬಂದಿವೆ. ಈ ಹಿನ್ನೆಲೆಯಲ್ಲಿ ಈ ಪರಿಸರವು ಅವರ ಆಳ್ವಿಕೆಯ ವ್ಯಾಪ್ತಿಗೆ ಒಳಪಟ್ಟಿರುವುದರಲ್ಲಿ ಸಂದೇಹವಿಲ್ಲ. ರಾಷ್ಟ್ರಕೂಟರ ಪತನಾನಂತರ ಈ ಪ್ರದೇಶವು ಕಲ್ಯಾಣ ಚಾಳುಕ್ಯರ ನೇರ ಆಡಳಿತ ವ್ಯಾಪ್ತಿಗೆ ಸೇರಿರುವುದು ಶಾಸನಾಧಾರಗಳಿಂದ ದೃಢವಾಗುತ್ತದೆ. ಹೀಗೆ ಬಹುಪ್ರಾಚೀನವಾದ ಈ ನೆಲೆ ಪ್ರಸಿದ್ಧಿಗೆ ಬಂದದ್ದು ವಿಜಯನಗರೋತ್ತರದಲ್ಲಿ. ಕ್ರಿ.ಶ. ೧೪೬೬ರ ದೇವರಾಯನ ಶಾಸನವು ಕೆಂಚನಗುಡ್ಡದ ಬಳಿಯ ತುಂಗಭದ್ರಾ ನದಿಗೆ ಆಣೆಕಟ್ಟನ್ನು ಕಟ್ಟಿದಂತೆ ಹೇಳುತ್ತದೆ. ಹಾಗಾಗಿ ವಿಜಯನಗರ ಅರಸರ ನೇರ ಆಡಳಿತಕ್ಕೆ ಈ ಪ್ರದೇಶ ಒಳಪಟ್ಟಿರುವುದು ಸ್ಪಷ್ಟವಾಗುತ್ತದೆ.

ಕನ್ನಡ ನಿಘಂಟುಗಳಲ್ಲಿ ಬರುವ ಕಾಂಚನ ಎಂಬುದರ ಶಾಬ್ದಿಕ ಅರ್ಥವು ಬಂಗಾರ, ಪ್ರಕಾಶ, ಕಾಂತಿ ಎಂಬ ಪದಗಳನ್ನು ನಿರ್ದೇಶಿಸುತ್ತಿದ್ದು ಈಗಲೂ ಕೆಂಚನಗುಡ್ಡದ ಸುತ್ತಲೂ ಕಲ್ಲುಗಳು ಪ್ರಕಾಶಮಾನವಾಗಿ ಹೊಳೆಯುವವು. ಹಾಗಾಗಿ ಇಲ್ಲಿರುವ ಬೆಟ್ಟಕ್ಕೆ ಕಾಂಚನಗುಡ್ಡ ಎಂದೂ ಕರೆದಿರಬಹುದೇ?

ಈ ಸ್ಥಳವನ್ನಾಳುತ್ತಿದ್ದ ಕೆಂಚನಗೌಡನಿಂದಾಗಿ ಇಲ್ಲಿಯ ಕೋಟೆಗೆ ಕೆಂಚನಗುಡ್ಡ ಎಂಬ ಹೆಸರು ಬಂದಿದೆ ಎಂಬ ಅಂಶವು ಗ್ಯಾಸೆಟಿಯರ್‌ನಲ್ಲಿದೆ. ಇದಕ್ಕೆ ಪೋಷಕವೆಂಬಂತೆ ಕೆಂಚನಗೌಡ ಎಂಬಾತನು ಮಂಗಾಪುರದ ಭೂಮಿಯೊಳಗೆ ಗುಡಹೊಸೂರು ದುರ್ಗವನ್ನು ನಿರ್ಮಿಸಿದಂತೆ ಕ್ರಿ.ಶ. ೧೭೦೮ರ ಶಾಸನವು ಹೇಳುತ್ತದೆ. ಮುದಕಣಗೌಡನು ಶಿರುಗುಪ್ಪ ಸೀಮೆಯ ನಾಡ ಗೌಡಿಕೆಯನ್ನು ಪಡೆದು ಅಲ್ಲಿಯ ಆಡಳಿತವನ್ನು ನೋಡಿಕೊಳ್ಳುತ್ತಿದ್ದನು. ಆಗ ಈತನ ಮಗನಾದ ಕೆಂಚನಗೌಡ ಎಂಬಾತನಿಗೆ ಮಂಗಾಪುರ ಗ್ರಾಮವನ್ನು ಉಮ್ಮಳಿಯಾಗಿ ನೀಡಲಾಗಿತ್ತು. ಆಗ ಉಮ್ಮಳಿಯಾಗಿ ದೊರೆತ ಮಂಗಾಪುರ ಮತ್ತದರ ಬೆಟ್ಟದಲ್ಲಿ ಕೆಂಚನಗೌಡನು ಕೋಟೆಯನ್ನು ಕಟ್ಟಿಕೊಂಡು ಆಳ್ವಿಕೆ ಮಾಡಿದನು. ಹಾಗಾಗಿ ಕೆಂಚನಗೌಡನ ಹೆಸರೇ ಆ ಬೆಟ್ಟಕ್ಕೂ ಹಾಗೂ ಗ್ರಾಮಕ್ಕೆ ಬಂದಿದೆ ಎಂಬ ಅಂಶ ಗಂಗಾಧರೇಶ್ವರ ದೇವಾಲಯದ ಆವರಣದಲ್ಲಿರುವ ಶಾಸನದಿಂದ ತಿಳಿದುಬರುತ್ತದೆ. ಹಾಗಾಗಿ ಕೆಂಚನಗೌಡನೆಂಬ ಪಾಳೆಯಗಾರನಿಂದಾಗಿಯೇ ಈ ಗ್ರಾಮಕ್ಕೆ ಕೆಂಚನಗುಡ್ಡ ಎಂಬ ಹೆಸರು ಬಂದಿರುವುದು ಸರಿಯಾಗಿಯೇ ಇದೆ.

ಹೈದರಾಲಿ, ಟಿಪ್ಪುವಿನ ಗಡಿ ಪ್ರದೇಶವಾಗಿ, ಮುಂದೆ ಸ್ವಾತಂತ್ರ್ಯ ಬರುವವರೆಗೂ ಬ್ರಿಟಿಷರ ಆಡಳಿತ ವ್ಯಾಪ್ತಿಗೆ ಈ ಗ್ರಾಮವು ಸೇರಿತ್ತು.

**ಕೆಂಚನಗುಡ್ಡದ ರಕ್ಷಣ ಸ್ಮಾರಕ**

ನಿಸರ್ಗದತ್ತವಾದ ಎರಡು ಬೆಟ್ಟಗಳನ್ನು ಬಳಸಿ ಸುತ್ತಲೂ ಕೋಟೆಯನ್ನು ಕಟ್ಟಲಾಗಿದೆ. ಈ ಎರಡು ಬೆಟ್ಟಗಳ ಮಧ್ಯೆ ವಿಶಾಲವಾದ ವಸತಿ ಪ್ರದೇಶವಿರುವುದು. ಇದರ ಸುತ್ತಲೂ ಕೋಟೆ ಗೋಡೆ ಇದೆ. ಹಾಗಾಗಿ ಕೆಳಗೆ ಮತ್ತು ಬೆಟ್ಟದ ಮೇಲೆ ಒಟ್ಟು ೩ ಕೋಟೆಗಳಿವೆ - ಎಂದು ಗ್ಯಾಸೆಟಿಯರ್‌ನಲ್ಲಿದೆ. ಬೆಟ್ಟದ ತುದಿಯನ್ನು ತಲುಪಲು ಒಂದೇ ಒಂದು ದಾರಿಯಿದೆ. ಈ ದಾರಿ ಇಂದಿನ ಗ್ರಾಮದಿಂದ ಪಶ್ಚಿಮಕ್ಕೆ ಸಾಗಿ ಕೋಟೆಯ ಮುಖ್ಯ ಬಾಗಿಲನ್ನು ದಾಟಿ ಬೆಟ್ಟಗಳ ಮಧ್ಯದ ಬಯಲನ್ನು ಸೇರುತ್ತದೆ. ಇಲ್ಲಿಂದ ಮುಂದೆ ದಕ್ಷಿಣ ದಿಕ್ಕಿಗೆ ಸಾಗಿ ಎರಡು ಬಾಗಿಲುಗಳನ್ನು ದಾಟಿ ಬೆಟ್ಟದ ತುದಿಯನ್ನು ತಲುಪುತ್ತದೆ. ಈ ದಾರಿಯೂ ಹಿಂದಿನಿಂದಲೂ ಬಳಕೆಯಲ್ಲಿದೆ.


ಕೆಂಚನಗುಡ್ಡದ ಪಾಳೆಯಗಾರರ ಕೋಟೆ, ಗೋಡೆ ಮತ್ತು ದ್ವಾರ

ಈ ಗಿರಿದುರ್ಗವು ಮೂರು ಸುತ್ತುಗಳನ್ನು ಒಳಗೊಂಡಿದ್ದು, ಮೊದಲ ಸುತ್ತು ಎರಡು ಬೆಟ್ಟಗಳು ಹಾಗೂ ವಸತಿ ನೆಲೆಯನ್ನು ಆವರಿಸಿದೆ. ಕೋಟೆಯ ಎರಡನೇ ಸುತ್ತಿನಲ್ಲಿ ಗಂಗಾಧರೇಶ್ವರ ದೇವಾಲಯ ಹಾಗೂ ಅರ್ಧ ಬೆಟ್ಟವು ಸೇರಿದೆ. ಗಂಗಾಧರೇಶ್ವರ ದೇವಾಲಯವಿರುವ ಬೆಟ್ಟದ ತುದಿಯಲ್ಲಿರುವ ಪಾಳು ಗ್ರಾಮವನ್ನು ಸುತ್ತುವರೆದಿರುವುದೇ ಅಂತಿಮ ಸುತ್ತು. ಕೋಟೆಯ ಹೊರಸುತ್ತಿನ ಗೋಡೆಯ ಆಗ್ನೆಯ ಭಾಗಕ್ಕೆ ಮುಖ್ಯಬಾಗಿಲಿದೆ. ಇದು ಸುಮಾರು ೨೦ ಅಡಿ ಎತ್ತರ, ೮ ಅಡಿ ಅಗಲವಾಗಿದೆ. ಬಾಗಿಲು ತೋಳುಗಳು ಸಾದಾ ಕೆತ್ತನೆಯಿಂದ ಕೂಡಿವೆ. ಇದರ ಲಲಾಟ ಬಿಂಬದ ಕೆಳಗಿನ ಎರಡೂ ಬದಿಗೆ ಇಳಿಬಿದ್ದ ಮೊಗ್ಗುಗಳಿವೆ. ಮುಖ್ಯ ಬಾಗಿಲಿನ ಬಲಭಾಗಕ್ಕೆ ಚಿಕ್ಕಬಾಗಿಲನ್ನು ರಚಿಸಲಾಗಿದೆ. ಮುಖ್ಯ ಬಾಗಿಲನ್ನು ಮುಚ್ಚಿದಾಗ ಉಪಯೋಗಿಸುವುದಕ್ಕಾಗಿಯೇ ಚಿಕ್ಕ ಬಾಗಿಲಿರುವುದು. ಈ ಎರಡು ಬಾಗಿಲುಗಳ ಮೇಲೆ ಬಂದೂಕು ಕಿಂಡಿಗಳಿವೆ. ಮುಖ್ಯ ಬಾಗಿಲಿನ ಮುಂದೆ ಸುಂದರ ಕೆತ್ತನೆಯ ಎರಡು ಶಿಲ್ಪಗಳಿವೆ. ಈ ಶಿಲ್ಪಗಳು ವೀರ ಮಹಾಸತಿ ಕಲ್ಲು ೬ ಅಡಿ ಅಗಲ, ೪ ಅಡಿ



ಕೆಂಚನಗುಡ್ಡದ ಕೋಟೆಯ ದ್ವಾರಕ್ಕೆ ಹೊಂದಿಕೊಂಡಿರುವ ವೀರಗಲ್ಲುಗಳು

ಎತ್ತರವಿದೆ. ಇದರಲ್ಲಿ ವೀರನು ಯುದ್ಧದಲ್ಲಿ ಹೋರಾಡಿ ಮಡಿದ ಸಂಕೇತವಾಗಿ ಕುದುರೆಯ ಮೇಲೆ ಆಯುಧಗಳನ್ನು ಹಿಡಿದು ಕುಳಿತಿದ್ದಾನೆ. ಹಿಂಭಾಗದಲ್ಲಿ ವೀರನ ಹೆಂಡತಿ ಸಹಗಮನ ಹೊಂದಿದಂತೆ ಸೂಚಿಸುವ ಸ್ತ್ರೀಶಿಲ್ಪವನ್ನು ಕೆತ್ತಲಾಗಿದೆ. ಕೆಂಚನಗುಡ್ಡದ ಪಾಳೆಯಗಾರನ ಶಿಲ್ಪವೇ ಇದಾಗಿರಬಹುದು. ಪಾಳೆಯಗಾರರ ಅವಧಿಯಲ್ಲಿ ಸತಿ ಸಹಗಮನ ಪದ್ಧತಿಯು ಜಾರಿಯಲ್ಲಿದ್ದುದು ಈ ಶಿಲ್ಪದಿಂದ ತಿಳಿಯುವುದು. ವೀರಗಲ್ಲು ೩ ಅಡಿ ಎತ್ತರ ೪ ಅಡಿ ಅಗಲವಾಗಿದೆ. ಇದರಲ್ಲಿ ರಾಜನ ಹೆಂಡತಿ ಕುದುರೆಯ ಮೇಲೆ ಒಂದು ಕೈಯಲ್ಲಿ ಖಡ್ಗ ಹಾಗೂ ಇನ್ನೊಂದು ಕೈಯಿಂದ ಮಗುವನ್ನು ಹಿಡಿದು ಕುಳಿತಿದ್ದಾಳೆ. ಮುಂದೆ ರಕ್ಷಕ ರಾಜನ ಹೆಂಡತಿ ಹಾಗೂ ಮಗುವನ್ನು ಯುದ್ಧ ಭೂಮಿಯಿಂದ ಕರೆದುಕೊಂಡು ಹೋಗುವಂತೆ ಚಿತ್ರಿಸಲಾಗಿದೆ.

ಆಗ್ನೇಯ ಬಾಗಿಲಿನಿಂದ ಒಂದು ದಾರಿ ಗಂಗಾಧರೇಶ್ವರ ದೇವಾಲಯಕ್ಕೆ ಹೋಗುತ್ತದೆ. ಎತ್ತರಕ್ಕೆ ಸಾಗುವ ಈ ದಾರಿ ಪೂರ್ವಕ್ಕಿರುವ ಬೆಟ್ಟದ ಮೇಲೆ ಹೋಗುತ್ತದೆ. ಇದು ಕವಲೊಡೆಯುವ ಮುಂಭಾಗದಲ್ಲಿಯೇ ಪಾಳುಗ್ರಾಮದ ಅವಶೇಷಗಳು, ಕಣಜಗಳು, ಬಾವಿಗಳು ಸಮಾಧಿಗಳು ಇತ್ಯಾದಿಗಳು ಕಂಡುಬರುತ್ತವೆ.

ಈ ಪಾಳುಗ್ರಾಮದಿಂದ ದಕ್ಷಿಣಕ್ಕೆ ಗಂಗಾಧರೇಶ್ವರ ದೇವಾಲಯವಿದೆ. ಇದರ ದಕ್ಷಿಣಕ್ಕೆ ಕೋಟೆಗೋಡೆಯಲ್ಲಿ ಮೂರನೆಯ ಬಾಗಿಲಿದೆ. ಇದು ಚಿಕ್ಕಬಾಗಿಲು. ಒಳಭಾಗದಲ್ಲಿ ಬುರುಜುಗಳು, ವೃತ್ತಾಕಾರದ ಕೊತ್ತಳಗಳು, ಮನೆಗಳು, ಅವಶೇಷಗಳು ಕಂಡುಬರುತ್ತವೆ. ಇದು ಬಹು ರಕ್ಷಿತ ಪ್ರದೇಶವಾದ್ದರಿಂದ ಪ್ರಾಯಶಃ ರಾಜಪರಿವಾದವರು ಇಲ್ಲಿದ್ದಿರಬಹುದು. ಇದರ ಪಶ್ಚಿಮಕ್ಕೆ ಚೌಕಾಕಾರದ ಕಡೆಗಾಪು (citadel) ಇದೆ. ದಕ್ಷಿಣದ ಕೋಟೆ ಗೋಡೆಯಲ್ಲಿ ಬಾಗಿಲಿದೆ. ಇದು ನೇರವಾಗಿ ನದಿಗೆ ಪ್ರವೇಶವನ್ನು ಕೊಡುತ್ತದೆ.

ಕೆಂಚನಗುಡ್ಡದ ಬೆಟ್ಟದ ತುದಿಯನ್ನು ತಲುಪಲು ಸಾಧ್ಯವಾಗದಂತೆ ಪಶ್ಚಿಮ, ದಕ್ಷಿಣ ದಿಕ್ಕುಗಳಿಗೆ ತುಂಗಭದ್ರಾ ನದಿ, ಉತ್ತರ ಮತ್ತು ಪೂರ್ವ ದಿಕ್ಕುಗಳಿಗೆ ಕೋಟೆಯ ಭದ್ರವಾದ ಅನೇಕ ಸುತ್ತುಗಳಿವೆ.

ಕೋಟೆಯನ್ನು ಮಧ್ಯಮಗಾತ್ರದ ಕಲ್ಲುಗಳಿಂದ ಕಟ್ಟಲಾಗಿದೆ. ಕೆಲವು ಕಡೆ ಗಾರೆಯನ್ನು ಬಳಸದೆ ಮಣ್ಣಿನಿಂದಲೇ ಕಟ್ಟಿರುವರು. ಕೋಟೆಗೋಡೆಯುದ್ದಕ್ಕೂ ಬಂದೂಕು ಕಿಂಡಿಗಳಿವೆ. ಕೋಟೆಯ ಆಯಕಟ್ಟಿನ ಸ್ಥಳಗಳಲ್ಲಿ ವೃತ್ತಾಕಾರ ಹಾಗೂ ಚೌಕಾಕಾರದ ಕೊತ್ತಳಗಳನ್ನು ನಿರ್ಮಿಸಲಾಗಿದೆ. ಕೆಲವು ನಿಸರ್ಗ ನಿರ್ಮಿತ ಬಂಡೆಗಳನ್ನೆ ಕೊತ್ತಳಗಳನ್ನಾಗಿ ಮಾಡಿಕೊಳ್ಳಲಾಗಿದೆ. ಇವು ಕೋಟೆ ಗೋಡೆಯ ಭದ್ರತೆಯ ಜೊತೆಗೆ ಶತ್ರುಗಳೊಡನೆ ಹೋರಾಡಲು ಅನುಕೂಲವಾಗಿದ್ದವು. ಕೋಟೆಯ ಕೆಳಭಾಗದ ಮುಂದೆ ಸಮಾಧಿ ಕಟ್ಟಡಗಳು, ತುಲಾಭಾರ ಕಂಬಗಳಿವೆ. ಅಲ್ಲಿರುವ ಸಮಾಧಿ ಕಟ್ಟಡಗಳು ಕೆಂಚನಗೌಡ ಮತ್ತು ಅವರ ಪರಿವಾರದವರವು ಎಂದು ಸ್ಥಳೀಯ ಮೂಲಗಳಿಂದ ತಿಳಿದುಬರುವ ಅಂಶ.

**ದೇವಾಲಯಗಳು**

ಕೆಂಚನಗುಡ್ಡದ ಕೋಟೆಯೊಳಗೆ ಗಂಗಾಧರೇಶ್ವರ, ಆಂಜನೇಯ ದೇವಾಲಯಗಳು, ಮಸೀದಿ ಹಾಗೂ ಮನೆಯ ಕಟ್ಟಡಾವಶೇಷಗಳಿವೆ.

**ಗಂಗಾಧರೇಶ್ವರ ದೇವಾಲಯ** : ಕೋಟೆಯ ಎರಡನೇ ಸುತ್ತಿನ ಮಧ್ಯಭಾಗದಲ್ಲಿದ್ದು, ಪೂರ್ವಾಭಿಮುಖವಾಗಿರುವ ಪಂಚಕೂಟ ದೇವಾಲಯವಿದು. ಇದು ಐದು ಗರ್ಭಗೃಹಗಳು, ಸಭಾಮಂಟಪವನ್ನು ಹೊಂದಿದೆ. ಮುಖ್ಯ ಗರ್ಭಗೃಹವು ಮಾತ್ರ ಅಂತರಾಳವನ್ನು ಹೊಂದಿದೆ. ಪ್ರಧಾನ ಗರ್ಭಗೃಹದ ಎಡಬಲ ಬದಿಗಳಲ್ಲಿರುವ ಗರ್ಭಗೃಹಗಳಲ್ಲಿ ಒಂದು ಪೂರ್ವಕ್ಕೆ ಇನ್ನೊಂದು ದಕ್ಷಿಣಕ್ಕೆ ಮುಖ ಮಾಡಿವೆ. ಪ್ರಮುಖ ಗರ್ಭಗೃಹದಲ್ಲಿ ಮಾತ್ರ ಶಿವಲಿಂಗವಿದೆ. ಉಳಿದ ಗರ್ಭಗೃಹಗಳಲ್ಲಿ ಯಾವುದೇ ವಿಗ್ರಹಗಳಿಲ್ಲ. ಈ ಗರ್ಭಗೃಹದ ಬಾಗಿಲುವಾಡದಲ್ಲಿ ಶೈವ



ಕೆಂಚನಗುಡ್ಡದ ಕೋಟೆಯೊಳಗಿರುವ ಗಂಗಾಧರೇಶ್ವರ ದೇವಾಲಯ

ದ್ವಾರಪಾಲಕರು ಹಾಗು ಅರೆಗಂಬಗಳಿದ್ದು, ಲಾಲಾಟ ಬಿಂಬದಲ್ಲಿ ಗಜಲಕ್ಷ್ಮಿಯನ್ನು ಕೆತ್ತಲಾಗಿದೆ.

ಈ ದೇವಾಲಯ ಹದಿನಾರು ಕಂಬಗಳುಳ್ಳ ವಿಶಾಲ ತೆರೆದ ಸಭಾಮಂಟಪವನ್ನು ಹೊಂದಿದೆ. ಈ ಕಂಬಗಳು ಚಚ್ಚೌಕ ಹಾಗೂ ಅಷ್ಟಮುಖಗಳನ್ನು ಹೊಂದಿವೆ. ಮಧ್ಯಭಾಗದ ಗರ್ಭಗೃಹದ ಮುಂಬದಿಯ ಎರಡು ಕಂಬಗಳು ಕೆಳಗೆ ಚಚ್ಚೌಕ ಹಾಗೂ ಮೇಲೆ ವೃತ್ತಾಕಾರದಲ್ಲಿವೆ. ದೇಗುಲದ ಐದು ಗರ್ಭಗೃಹಗಳ ಮೇಲೆಯೂ ದ್ರಾವಿಡ ಶೈಲಿಯ ಶಿಖರಗಳನ್ನು ಇಟ್ಟಿಗೆ ಹಾಗೂ ಗಾರೆಯಿಂದ ನಿರ್ಮಿಸಿರುವರು. ದೇಗುಲದ ಮಧ್ಯದ ಗರ್ಭಗೃಹಕ್ಕೆ ಪ್ರದಕ್ಷಣೆಯ ಸಲುವಾಗಿ ವಿಶಾಲ ಸ್ಥಳವನ್ನು ಬಿಟ್ಟು ಮತ್ತೊಂದು ಗೋಡೆಯನ್ನು ಸುತ್ತಲೂ ಕಟ್ಟಲಾಗಿದೆ.

ದೇವಾಲಯಕ್ಕೆ ವಿಶಾಲವಾದ ಪ್ರಾಕಾರ ಗೋಡೆಯಿದ್ದು, ಉತ್ತರಕ್ಕೆ ದ್ವಾರ ಬಾಗಿಲು ಇದೆ. ಈ ಪ್ರಾಕಾರ ಗೋಡೆಯಲ್ಲಿಯೇ ಕ್ರಿ.ಶ. ೧೭೦೮ರ ಕೆಂಚನಗೌಡನ ಶಾಸನವಿರುವುದು. ಈ ದೇವಾಲಯದ ಲಕ್ಷಣಗಳು ಸಹ ಸರಿಸುಮಾರು ಇದೆ ಅವಧಿಯನ್ನು ಹೋಲುತ್ತವೆ.

**ಆಂಜನೇಯ ದೇವಾಲಯ :** ಇದು ಕೋಟೆಯ ಮುಂಭಾಗ ದಲ್ಲಿದ್ದು ಪೂರ್ವಾಭಿಮುಖವಾಗಿದೆ. ಕಣಶಿಲೆಯನ್ನು ಬಳಸಿ ಕಟ್ಟಲಾದ ಈ ದೇಗುಲವು ಗರ್ಭಗೃಹ, ಸಭಾಮಂಟಪ, ದೀಪ ಸ್ತಂಭವನ್ನು ಹೊಂದಿದೆ. ಗರ್ಭಗೃಹದ ಸುತ್ತಲೂ ಪ್ರದಕ್ಷಣಪಥ; ಇದಕ್ಕೆ ಅನುಕೂಲವಾಗುವಂತೆ ಸ್ಥಳಾವಕಾಶವನ್ನು ಕಲ್ಪಿಸಲಾಗಿದೆ. ದೇವಾಲಯದ ಮುಂಭಾಗದಲ್ಲಿ ಹದಿನೈದು ಅಡಿ ಎತ್ತರದ ದೀಪಸ್ತಂಭವಿದೆ. ಗರ್ಭಗೃಹದಲ್ಲಿ ಎರಡುವರೆ ಅಡಿ ಎತ್ತರದ ಆಂಜನೇಯನ ಉಬ್ಬುಕೆತ್ತನೆಯಿದೆ. ಸಭಾಮಂಟಪದಲ್ಲಿ ನಾಲ್ಕು ಕಂಬಗಳನ್ನು ಆಯಾತಾಕಾರದಲ್ಲಿ ಕೆತ್ತಿರುವುದರಿಂದ ಯಾವುದೇ ಅಲಂಕರಣಗಳಿಲ್ಲ. ಈ ದೇವಾಲಯಕ್ಕೆ ಪಾಳೆಯಗಾರರ ಅವಧಿಯಲ್ಲಿ ನಿರ್ಮಾಣಗೊಂಡಿರುವ ಎಲ್ಲಾ ಲಕ್ಷಣಗಳಿವೆ.

ಒಟ್ಟಾರೆಯಾಗಿ ಕೆಂಚನಗುಡ್ಡದ ಪರಿಸರದ ಅಧ್ಯಯನದಿಂದ ಈ ನೆಲೆಯ ಪ್ರಾಚೀನತೆ, ವಿವಿಧ ಕಾಲಘಟ್ಟಗಳಲ್ಲಿ ಈ ಪ್ರದೇಶವು ಹಲವಾರು ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದ್ದು, ನಂತರ ಪಾಳೆಯಗಾರರ ಆಡಳಿತ ಕೇಂದ್ರವಾಗಿ ರೂಪುಗೊಂಡ ಬಗ್ಗೆ ಹಾಗೂ ಇತರ ವಿಷಯಗಳ ಬಗ್ಗೆ ತಿಳಿಯುತ್ತದೆ.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧ ಶೇಷಗಿರಿ ಆಚಾರ್, ಜೆ., ೧೯೯೭, **ತಿರುಗುಪ್ಪೆಯ ಸಿರಿ**, ಅಗಸನೂರು : ಉದಯ ಸರಸ್ವತಿ ಪ್ರಕಾಶನ.

೨. ಸೂರ್ಯನಾಥ ಯು. ಕಾಮತ್ (ಸಂ)., ೧೯೮೬. **ಕರ್ನಾಟಕ ಗ್ಯಾಜೆಟಿಯರ್-೩**, ಬೆಂಗಳೂರು : ಕರ್ನಾಟಕ ಗ್ಯಾಸಿಟಿಯರ್ ಇಲಾಖೆ.

೩. ದೇವರಕೊಂಡಾರೆಡ್ಡಿ ಮತ್ತು ಇತರರು ೧೯೯೮., ಕನ್ನಡ **ವಿಶ್ವವಿದ್ಯಾಲಯ ಶಾಸನ ಸಂಪುಟ-೧**, ಹಂಪಿ, ಕನ್ನಡ ವಿಶ್ವವಿದ್ಯಾಲಯ.

೪. ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಹಿರಿಯ ಮಿತ್ರ ಕೆ. ಎಲ್. ರಾಜಶೇಖರ್ ಅವರಿಗೆ ಕೃತಜ್ಞತೆಗಳು.

೫. ಸುರೇಶ್ ಕೆ. ಎಂ. ಮತ್ತು ಇತರರು., **ಕರ್ನಾಟಕ ದೇವಾಲಯ ಕೋಶ ಬಳ್ಳಾರಿ ಜಿಲ್ಲೆ** ಹಂಪಿ, ಕನ್ನಡ ವಿಶ್ವವಿದ್ಯಾಲಯ.

೬. ಕೊಟ್ರೇಶ್ ಎಂ. ೨೦೦೨., **ಕೋಟೆ-ಕೊತ್ತಲಗಳು** (ಬಳ್ಳಾರಿ ಜಿಲ್ಲೆ) ಪಿಎಚ್.ಡಿ. ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ.




### ಕ.ಇ. ಅಕಾದೆಮಿಯ ೧೮ನೇ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೨೦೦೨)

*ನಮ್ಮ ಪ್ರಾಚ್ಯಾವಶೇಷಗಳು ಸ್ವಾತಂತ್ರ್ಯೋತ್ತರ ಕಾಲದಲ್ಲಿ ಸಾಕಷ್ಟು ವಿರೂಪಗೊಂಡಿವೆ. ಸ್ಮಾರಕಗಳು ವಿರೂಪಗೊಳ್ಳಲು ನಿಸರ್ಗವೊಂದೇ ಕಾರಣವಲ್ಲ. ಈ ನಿಟ್ಟಿನಲ್ಲಿ ದುಷ್ಕರ್ಮಿಗಳ ಪಾತ್ರವೂ ಸಾಕಷ್ಟಿದೆ... ಇದಲ್ಲದೆ ವಾಸ್ತುಶಿಲ್ಪ ಶಾಸ್ತ್ರಕ್ಕೆ ವ್ಯತಿರಿಕ್ತವಾಗಿ ಕಂಡಕಂಡಲ್ಲಿ ದೇವಸ್ಥಾನ, ಇಗರ್ಜಿ ಮತ್ತು ಮಸೀದಿಗಳನ್ನು ಕಟ್ಟುವ ಕೆಲಸವೂ ಜೋರಾಗಿ ಸಾಗಿದೆ. ಪುರಾತನ ದೇವಾಲಯಗಳ ಜೀರ್ಣೋದ್ಧಾರವಾಗಬೇಕೇ ಹೊರತು ಕಂಡಕಂಡಲ್ಲಿ ವ್ಯಾಪಾರೀ ಬುದ್ಧಿಯಿಂದ ದೇವಸ್ಥಾನವನ್ನು ಕಟ್ಟುವುದಲ್ಲ.*

**ಡಾ. ಎ. ಕೆ. ಶಾಸ್ತ್ರಿ**
*ಸಮ್ಮೇಳನಾಧ್ಯಕ್ಷರು*



ಪ್ರಾಗಿತಿಹಾಸ, ಇತಿಹಾಸದವಶೇಷಗಳ
ಸಮ್ಮಿಲನದಿ ಜನಪದದ ಭಾವ
ಗಿರಿದುರ್ಗ, ಪಾಳೆಯಪಟ್ಟಾಗಿ, ಕಾಲಗಳ
ಹಾದಿಯಲಿ ನಡೆದೂ ಉಳಿಸಿಕೊಂಡಿದೆ ಪ್ರಾಚೀನ ಭಾವ

ಡಾ ಎಂ.ಎಸ್. ಕೃಷ್ಣಮೂರ್ತಿ*
ಡಾ ಎಂ.ವಿ. ಕೃಷ್ಣಪ್ಪ*

# ಕರ್ನಾಟಕದ ಬೌದ್ಧಧರ್ಮದ ಮೇಲೆ ಹೊಸಬೆಳಕು : ರಾಜಘಟ್ಟ ಉತ್ಖನನ - ಭಾಗ ೨

*ರಾಜಘಟ್ಟದ, ಚೈತ್ಯಾಲಯ ಸಂಕೀರ್ಣವು, ಬೌದ್ಧ ಧಾರ್ಮಿಕ ಕಟ್ಟಡದ ಅರ್ಥಪೂರ್ಣ ಮಾದರಿಯಾಗಿದೆ. ಗಜಪೃಷ್ಠಾಕಾರದ ಪ್ರಾರ್ಥನಾ ಮಂದಿರವಾಗಿ ವಿಶಿಷ್ಟವಾಗಿದ್ದು ಈ ಬೌದ್ಧ ಚೈತ್ಯಾಲಯದ ಸಂಕೀರ್ಣವು ಮೊತ್ತ ಮೊದಲ ಬಾರಿಗೆ ಕರ್ನಾಟಕದಲ್ಲಿ ಲಭ್ಯವಾಗಿದೆ. ರಾಜಘಟ್ಟದ ಉತ್ಖನನದಲ್ಲಿ ದಕ್ಷಿಣ ಕರ್ನಾಟಕವು ಬೌದ್ಧಧರ್ಮದ ಇತಿಹಾಸ ಪರಂಪರೆಗೆ ಕೊಟ್ಟ ಅಮೂಲ್ಯ ಕೊಡುಗೆಯ ಪ್ರಥಮ ವಿಶಿಷ್ಟ ಸಾಕ್ಷಿಯಾಗಿ ಕಂಡು ಬಂದಿರುವುದು, ಶೃಂಗ ಪ್ರಯತ್ನದ ಫಲ ಹಾಗೂ ಹಿರಿಮೆ.*

ಕರ್ನಾಟಕ ಇತಿಹಾಸ ಅಕಾದೆಮಿಯ ೧೫ನೇ ವಾರ್ಷಿಕ ಸಮ್ಮೇಳನ ೨೦೦೧ನೇ ಅಕ್ಟೋಬರ್ ತಿಂಗಳಿನಲ್ಲಿ ಉಡುಪಿಯಲ್ಲಿ ಜರುಗಿತು. ಆ ಸಮ್ಮೇಳನದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗವು ೨೦೦೧ನೇ ಸಾಲಿನಲ್ಲಿ ರಾಜಘಟ್ಟದಲ್ಲಿ ಕೈಗೊಂಡಿದ್ದ ಸಂಶೋಧನೆ ಮತ್ತು ಅದರ ಫಲಿತಾಂಶವನ್ನು ತಮ್ಮೆಲ್ಲರ ಮುಂದೆ ಪ್ರಕಟಪಡಿಸಿದ್ದೆವು. ಈ ಬಗ್ಗೆ ಸವಿಸ್ತಾರವಾದ ಒಂದು ಲೇಖನವೂ ಸಹ **ಇತಿಹಾಸ ದರ್ಶನ** ಸಂ.೧೭ ಪುಟ ೧-೧೧ರಲ್ಲಿ ಪ್ರಕಟಗೊಂಡಿದೆ. ರಾಜಘಟ್ಟದ ಉತ್ಖನನದಲ್ಲಿ ಕಂಡು ಬಂದ ಮುಖ್ಯ ವಸ್ತು ವಿಷಯಗಳೆಂದರೆ, ಇಟ್ಟಿಗೆಯಲ್ಲಿ ನಿರ್ಮಿತವಾಗಿದ್ದ ಬೌದ್ಧ ಚೈತ್ಯಾಲಯವೊಂದರ ತಳಪಾಯ ಹಾಗೂ ಅದೇ ನಿವೇಶನದ ಮತ್ತೊಂದು ಭಾಗದಲ್ಲಿ ನೂರಾರು ಸಂಖ್ಯೆಯಲ್ಲಿ ದೊರೆತಿದ್ದ ಪುಟ್ಟ ಮಣ್ಣಿನ ಹರಕೆಯ ಸ್ತೂಪಗಳ ಶೋಧನೆ. ಈ ವಸ್ತುಗಳು ಸಂಶೋಧನಕಾರರಿಗೆ ಅನೇಕ ನಿಗೂಢ ವಿಷಯಗಳ ಬಗ್ಗೆ ಸುಳಿವು ಕೊಟ್ಟಿದ್ದವು. ಆದರೆ ಕಾರಣಾಂತರಗಳಿಂದ ಸಂಶೋಧನೆಯನ್ನು ಅಷ್ಟಕ್ಕೆ ನಿಲ್ಲಿಸಲಾಗಿತ್ತು. ಈ ಸುಳಿವುಗಳನ್ನು ಹಿಂಬಾಲಿಸುತ್ತಾ ಮತ್ತೊಮ್ಮೆ ೨೦೦೪ನೇ ಸಾಲಿನಲ್ಲಿ ಸಂಶೋಧನೆಯನ್ನು ಮುಂದು ವರೆಸಲಾಯಿತು. ಪ್ರಸ್ತುತ ಉತ್ಖನನದ ಉದ್ದೇಶ ಚೈತ್ಯಾಲಯ ಕೇವಲ ಒಂಟಿ ಕಟ್ಟಡವಾಗಿ ನಿರ್ಮಾಣವಾಗಿತ್ತೇ ಅಥವಾ ಅದಕ್ಕೆ ಹೊಂದಿಕೊಂಡಂತೆ ಇನ್ನೂ ಬೇರೆ ಬೇರೆ ನಿರ್ಮಿತಿಗಳು ಇದ್ದವೇ ಎಂಬುದನ್ನು ತಿಳಿಯುವುದೇ ಆಗಿತ್ತು. ಇದರಿಂದಾಗಿ ಪ್ರಸ್ತುತ ೨೦೦೪ನೇ ಸಾಲಿನಲ್ಲಿ ಮುಂಚೆ ದೊರೆತಿದ್ದ ಚೈತ್ಯಾಲಯದ ಸುತ್ತ ಮುತ್ತಲಿನ ಭಾಗವನ್ನು ಉತ್ಖನನ ಮಾಡಲಾಯಿತು.

ಚೈತ್ಯಾಲಯ ದಕ್ಷಿಣದಿಕ್ಕಿನತ್ತ ಮುಖಮಾಡಿದ್ದ ಒಂದು ಕಟ್ಟಡ. (ತಳವಿನ್ಯಾಸದ ರೇಖಾ ಚಿತ್ರವನ್ನು ನೋಡಿ) ಈ ಸ್ಥಳದಲ್ಲಿ ಚೈತ್ಯಾಲಯದ ಮುಖಮಂಡಪಕ್ಕೆ ಸ್ವಲ್ಪ ಅಂತರ ಬಿಟ್ಟು ಸಂಪೂರ್ಣವಾಗಿ, ಸ್ವಾಭಾವಿಕ ನೆಲದವರೆಗೆ ವಸತಿನಿರ್ಮಿತ ಮಣ್ಣನ್ನು ಸಾಗಿಸಿ ಬಿಟ್ಟಿರುವುದರಿಂದ ಈ ಸ್ಥಳದಲ್ಲಿ ಯಾವುದೇ ಉತ್ಖನನ ಮಾಡಲು ಯೋಗ್ಯವಾದ ಸ್ಥಳವಿರಲಿಲ್ಲ. ಆದರೆ ಹಲವು ವರುಷಗಳಿಂದ ಭೂಮಿಯಲ್ಲಿ ಹೂತು ಹೋಗಿ ಈಗ ಸ್ವಲ್ಪ ಕಾಣಲು ಪ್ರಾರಂಭವಾಗಿದ್ದ, ಗ್ರಾನೈಟ್ ಶಿಲೆಯ ಆಯಕ ಸ್ತಂಭವೊಂದು ಈ ಚೈತ್ಯದ ಮುಂಭಾಗದಲ್ಲಿ, ಅಂದರೆ ಸುಮಾರು ೩೦ ಅಡಿ ಆಗ್ನೇಯಕ್ಕೆ ಪತ್ತೆಯಾಯಿತು. ಸ್ಥಳೀಯರ ಹೇಳಿಕೆಯ ಪ್ರಕಾರ ಈ ಸ್ಥಳದಲ್ಲಿ ಪ್ರಾಚೀನವಾಗಿ ಒಂದು ಸಣ್ಣ ಗುಡಿಯಿದ್ದು, ಅದು ಈಗ ಸಂಪೂರ್ಣ ನೆಲಸಮವಾಗಿದೆ. ಸ್ಥಳೀಯರು ಈ ಗುಡಿಯಲ್ಲಿ ಈ ಕಂಭವನ್ನು ನಿಲ್ಲಿಸಿದ್ದರು. ಅದನ್ನು 'ಮುನೇಶ್ವರ'

* ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ ಮೈಸೂರು
* ಪ್ರಾಧ್ಯಾಪಕರು ಮತ್ತು ಅಧ್ಯಕ್ಷರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು



ಮೈಸೂರು ವಿಶ್ವವಿದ್ಯಾನಿಲಯ
UNIVERSITY OF MYSORE



DEPARTMENT OF ANCIENT HISTORY AND ARCHAEOLOGY
ARCHAEOLOGICAL EXCAVATIONS AT RAJAGHATTA
BANGALORE DISTRICT, KARNATAKA, INDIA
2001 AND 2004

GROUND PLAN OF CHAITYA AND VIHARA COMPLEX




ಎಂಬ ಹೆಸರಿನಿಂದ ಪೂಜಿಸುತ್ತಿದ್ದರು ಎಂಬುದು ಅಲ್ಲಿಯ ಜನಪದ ಹೇಳಿಕೆ. 'ಮುನೇಶ್ವರ' ಎಂಬ ಹೆಸರು ಇಲ್ಲಿ ವಿಶೇಷವಾದದ್ದು. ಏಕೆಂದರೆ 'ಮುನೇಶ್ವರ' ಎಂಬ ಹೆಸರು 'ಮುನಿ' ಅಥವಾ 'ಶಾಕ್ಯಮುನಿ' ಅಂದರೆ ಭಗವಾನ್ ಬುದ್ಧನ ಹೆಸರಿನಿಂದ ಬಂದಿರಬಹುದೇ ಎಂಬ ಕುತೂಹಲ ಮೂಡಿಸುತ್ತದೆ. ಈ ಆಯಕ ಸ್ತಂಭ ಸಾಧಾರಣ ಕೆತ್ತನೆಯಿಂದ ಕೂಡಿದೆ. ಇದರ ಎತ್ತರ ೨೧/೨ ಅಡಿಗಳು, ಗಾತ್ರ ೩೦ ಸೆಂ.ಮೀ. ತಳಭಾಗ ಮತ್ತು ಮೇಲ್ಭಾಗ ಚೌಕಟ್ಟಾಗಿದೆ ಮತ್ತು ಮಧ್ಯಭಾಗ ಅಷ್ಟಮುಖದ್ದಾಗಿದೆ. ಇದರ ವಿಶೇಷತೆ ಎಂದರೆ ಕಂಭದ ನೆತ್ತಿಯ ಮೇಲೆ ಒಂದು ಗುಬುಟಿದೆ. ಈ ಗುಬುಟೇ ಈ ಕಂಭ ಯಾವುದೇ ಒಂದು ವಾಸ್ತುಭಾಗವಲ್ಲ; ಇದು ಕೇವಲ ಒಂದು ಸ್ವತಂತ್ರ ಕಂಭ ಅಥವಾ ಸ್ಮಾರಕ ಎಂಬುದನ್ನು ಸೂಚಿಸುತ್ತದೆ. ಈ ಗುಬುಟು ಬುದ್ಧನ ನೆತ್ತಿಯ ಮೇಲಿರುವ ಉಷ್ಣೀಷವನ್ನು ನಿರೂಪಿಸುತ್ತದೆ. ಆದ್ದರಿಂದ ಇದು ಒಂದು ಆಯಕ ಸ್ತಂಭ ಎಂದು ನಿರ್ಧರಿಸಬಹುದು. ಇದೇ ರೀತಿಯ ಕಂಭದ ತುಣುಕು ಭಾಗಗಳು ಚೈತ್ಯಾಲಯದ ಈಶಾನ್ಯ ಮತ್ತು ಆಗ್ನೇಯ ಭಾಗಗಳಲ್ಲಿ ಉತ್ಖನನದಲ್ಲಿ ದೊರೆತಿದ್ದು, ಚೈತ್ಯಾಲಯದ ಅಂಗಳದ ನಾಲ್ಕು ಉಪದಿಕ್ಕುಗಳಲ್ಲಿ ಈ ರೀತಿಯ ಆಯಕ ಸ್ತಂಭಗಳನ್ನು ನಿಲ್ಲಿಸಿದ್ದರು ಎಂಬ ವಿಷಯವನ್ನು ಸಾಬೀತು ಪಡಿಸುತ್ತದೆ.

ಅನುಕೂಲದ ದೃಷ್ಟಿಯಿಂದ ಹಾಗೂ ಇನ್ನಿತರ ಉದ್ದೇಶಗಳಿಂದ ಉತ್ಖನನದ ಗುಂಡಿಗಳನ್ನು ಚೈತ್ಯಾಲಯದ ಪೂರ್ವ ಮತ್ತು ಉತ್ತರದ ದಿಕ್ಕುಗಳಲ್ಲಿ ವಿಸ್ತರಿಸಲಾಯಿತು. ಚೈತ್ಯಾಲಯದ ಪೂರ್ವಭಾಗದಲ್ಲಿ ಮಣ್ಣಿನ ರಸ್ತೆಯೊಂದು ಹಾದು ಹೋಗುವುದರಿಂದ ಆ ರಸ್ತೆಯಿಂದ ಅಚೆಗೆ, ಅಂದರೆ ಪೂರ್ವಕ್ಕೆ ಉತ್ಖನನ ಗುಂಡಿಗಳನ್ನು ಗುರುತು ಮಾಡಿ ಅಗೆಯಲಾಯಿತು. ಉತ್ತರ ಹಾಗೂ ಪೂರ್ವದಿಕ್ಕಿನಲ್ಲಿ ನಡೆಸಲಾದ ಎರಡೂ ಉತ್ಖನನಗಳಲ್ಲಿ ಬಹಳ ಪ್ರಮುಖವಾದ ಕಟ್ಟಡದ ಅವಶೇಷಗಳು ಕಂಡು ಬಂದು, ಇಡೀ ಪ್ರದೇಶದಲ್ಲಿ ಪ್ರಾಚೀನ ಬೌದ್ಧ ಸಂಘವೊಂದರ ಕಟ್ಟಡ ಸಂಕೀರ್ಣವೇ ಇತ್ತೆಂದು ರುಜುವಾತಾಯಿತು. ಪೂರ್ವದಿಕ್ಕಿನಲ್ಲಿ ದೊರೆತ ಕಟ್ಟಡಗಳು ಬೌದ್ಧವಿಹಾರದ ಸಾಲು ಕೊಠಡಿಗಳು ಆಗಿದ್ದವು. ಉತ್ತರದಿಕ್ಕಿನಲ್ಲಿ ದೊರೆತ ಕಟ್ಟಡಗಳು ಚೈತ್ಯಾಲಯದ ಉತ್ತರ ಅಥವಾ ಹಿಂಭಾಗದ ಪ್ರಾಕಾರಗೋಡೆ ಮತ್ತು ಆ ದಿಕ್ಕಿನಿಂದ ಚೈತ್ಯದ ಆವರಣಕ್ಕೆ ಮಾಡಿದ್ದ ದ್ವಾರಗಳಾಗಿದ್ದವು. (ರೇಖಾ ಚಿತ್ರ ನೋಡಿ) ಈ ಕಟ್ಟಡಗಳ ಅವಶೇಷಗಳನ್ನು ಒಂದೊಂದಾಗಿ ವಿಹಾರ ಮತ್ತು ಪ್ರಾಕಾರ ಎಂಬ ಉಪಶೀರ್ಷಿಕೆಗಳಡಿಯಲ್ಲಿ ವಿವರಿಸಲಾಗಿದೆ.



ರಾಜಘಟ್ಟದ ಚೈತ್ಯದ ಅಂಕಣದ ಉತ್ತರ ಪ್ರಕಾರದ ಪೂರ್ವ ದಿಸೆಯ ನೋಟ

ದಕ್ಷಿಣದಿಂದ ರಾಜಘಟ್ಟ ವಿಹಾರದ ನೋಟ

**ವಿಹಾರ** - ಉದ್ದ ೨೪ ಮೀಟರ್ ಮತ್ತು ಅಗಲ ೪೧/೨ ಮೀಟರ್ ಇದ್ದು, ಇದು ಇನ್ನೂ ದಕ್ಷಿಣ ದಿಕ್ಕಿನತ್ತ ಮುಂದುವರೆದಿರುವ ಸೂಚನೆಗಳಿವೆ. ವಿಹಾರದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಸಾಲಾಗಿ ಏಳು ಕೊಠಡಿಗಳು ಕಂಡು ಬಂದಿವೆ. ಇವುಗಳಲ್ಲಿ ಆರು ಕೊಠಡಿಗಳನ್ನು ಸಂಪೂರ್ಣವಾಗಿ ಬಿಡಿಸಲಾಗಿದ್ದು, ಏಳನೆಯ ಕೊಠಡಿ ಅರ್ಧಭಾಗ ಮಾತ್ರ ಗೋಚರಿಸಿದೆ. ಏಳನೆಯ ಕೊಠಡಿಗೆ ಪೂರ್ವದಿಕ್ಕಿನ ಕಡೆ ಮತ್ತೊಂದು ಕೊಠಡಿ ಸೇರಿಕೊಂಡಿದ್ದು, ವಿಹಾರದ ಕಟ್ಟಡ ಪಶ್ಚಿಮದಿಂದ ಪೂರ್ವದಿಕ್ಕಿನ ಕಡೆಗೂ ಸಹ ಸಾಲುಕೊಠಡಿಗಳನ್ನು ಹೊಂದಿತ್ತೇ ಎಂಬ ಅನುಮಾನ ಮೂಡಿಸುತ್ತದೆ. ಉತ್ತರ-ದಕ್ಷಿಣ ಸಾಲಿನ ಕೊಠಡಿಗಳ ಉತ್ತರದ ತುದಿಯಲ್ಲಿ ಒಂದನೆಯ ಕೊಠಡಿಯ ಗೋಡೆಗೆ ಸೇರಿಕೊಂಡಂತೆ ಒಂದು ಸ್ನಾನದ ಮನೆಯೂ ಸಹ ಕಂಡು ಬಂದಿದೆ. ಇದರ ಹೊರ ಅಳತೆ, ಉದ್ದ ೪ ಮೀಟರ್ ಅಗಲ ೨.೪ ಮೀಟರ್ (ಮಾತ್ರ ಗೋಚರವಾಗಿದೆ). ಸ್ನಾನದ ಮನೆಯ ಉದ್ದವನ್ನೂ ಕೂಡಿಸಿದರೆ, ಉತ್ಖನನದಲ್ಲಿ ಗೋಚರವಾಗಿರುವ ವಿಹಾರದ ಒಟ್ಟು ಉದ್ದ ೨೮ ಮೀಟರ್. ವಿಹಾರದ ಗೋಡೆಯ ದಪ್ಪದಲ್ಲಿ ಸಮತೆ ಕಾಣುವುದಿಲ್ಲ. ಪೂರ್ವದ ಗೋಡೆಯು ಒಂದು ಮೀಟರ್ ದಪ್ಪವಾಗಿವೆ. ಅದಕ್ಕೆ ಸಮನಾಂತರವಾದ ಪಶ್ಚಿಮದ ಗೋಡೆ ೮೦ಸೆಂ.ಮೀ. ದಪ್ಪವಾಗಿದೆ. ಕೊಠಡಿಗಳ ಮಧ್ಯದ ಗೋಡೆಗಳೂ ಸಹ ೮೦ ಸೆಂ.ಮೀ. ದಪ್ಪವಾಗಿವೆ. ಒಂದರಿಂದ ಆರನೆಯ ಕೊಠಡಿಗಳ ಸರಾಸರಿ ವಿಸ್ತೀರ್ಣ ೨.೫ x ೨.೫ ಮೀಟರ್‌ಗಳು (ಸುಮಾರು ೮ x ೮ ಅಡಿಗಳು), ಅಂದರೆ ಒಬ್ಬರು ಅಥವಾ ಇಬ್ಬರು ಬೌದ್ಧ ಸಂನ್ಯಾಸಿಗಳು ವಾಸಿಸಲು ಅನುಕೂಲವಾಗುವಂತಹ ಕೊಠಡಿಯ ವಿಸ್ತೀರ್ಣಮಾತ್ರ ಸ್ವಲ್ಪ ದೊಡ್ಡದಾಗಿದೆ. ಉತ್ತರ -ದಕ್ಷಿಣವಾಗಿ ಇದರ ಉತ್ಖನನ ಅಪೂರ್ಣವಾಗಿದ್ದರೂ ಪೂರ್ವ-ಪಶ್ಚಿಮವಾಗಿ ಇದರ ಉದ್ದ ಸಂಪೂರ್ಣ ಗೋಚರಿಸಿದೆ, ಅಂದರೆ ಇದು ೩.೬.ಮೀ ಉದ್ದವಾಗಿದೆ.

ವಿಹಾರದ ಎಲ್ಲಾ ಕೊಠಡಿಗಳೂ ಪಶ್ಚಿಮಕ್ಕೆ ಮುಖಮಾಡಿ ನಿರ್ಮಾಣವಾಗಿವೆ. ಈ ಅಂಶವನ್ನು ಕೊಠಡಿಗಳಿಗೆ ಒದಗಿಸಿರುವ ದ್ವಾರಮುಖೇನ ನಿರ್ಧರಿಸಬಹುದು ಒಂದರಿಂದ ಮೂರರವರೆಗಿನ ಕೊಠಡಿಗಳಿಗೆ ಈ ದಿಕ್ಕಿನಲ್ಲಿ ದ್ವಾರಗಳಿದ್ದ ಸೂಚನೆ ಇದೆ. ಉಳಿದವುಗಳ ಗೋಡೆಗಳು ಹೆಚ್ಚು ಶಿಥಿಲವಾಗಿರುವುದುರಿಂದ ಈ ಸೂಚನೆ ಅಲ್ಲಿ ಕಾಣಬರುವುದಿಲ್ಲ. ಆದರೂ ಸಹ ವಾಸ್ತು ನಿರೂಪಣೆಯ ದೃಷ್ಟಿಯಿಂದ ಈ ಕೊಠಡಿಗಳಿಗೂ ಪಶ್ಚಿಮದಿಕ್ಕಿನಲ್ಲೇ ಬಾಗಿಲುಗಳಿದ್ದವೆಂದು ನಿರ್ಧರಿಸಬಹುದು. ವಿಹಾರದ ಈ ಸಾಲು ಕೊಠಡಿಗಳಿಗೆ ಮುಂಭಾಗದಲ್ಲಿ ಕೈಸಾಲೆ ಇತ್ತೇ ಇಲ್ಲವೇ ಎಂಬ ವಿಷಯ ಇನ್ನೂ ನಿರ್ಧಾರವಾಗಬೇಕಾಗಿದೆ. ಏಕೆಂದರೆ ಈ ದಿಕ್ಕಿನಲ್ಲಿ ಉತ್ಖನನ ಇನ್ನೂ ನಡೆಯಬೇಕಾಗಿದೆ[೧].

ವಿಹಾರದ ಪಶ್ಚಿಮದ ಗೋಡೆಗೂ ಚೈತ್ಯಾಲಯದ ಗೋಡೆಗೂ ನಡುವೆ ಇರುವ ಅಂತರ ಒಂಭತ್ತು ಮೀಟರ್‌ಗಳು. ಈ ಅಂತರ ಚೈತ್ಯದ ಉತ್ತರತುದಿಯಿಂದ ಹಿಡಿದು ದಕ್ಷಿಣ ತುದಿಯವರೆಗೂ ಒಂದೇ ಇದೆ. ಅಂದರೆ ಈ ಎರಡೂ ಗೋಡೆಗಳು ಸಮಾನಾಂತರವಾಗಿ ನಿರ್ಮಾಣವಾಗಿದ್ದು ಇವರಡರ ನಡುವೆ ಏನೋ ಅನನ್ಯ ಸಂಬಂಧವಿರಬೇಕು. ಅಂದರೆ ಇವೆರಡರ ನಡುವಣ ಪ್ರದೇಶ ಚೈತ್ಯಾಲಯದ ಪೂರ್ವದಿಕ್ಕಿನ ಅಂಗಳವಾಗಿದ್ದಿರಬೇಕು. ಈ ಅಂಗಳದಲ್ಲಿ ಕಲ್ಲಿನ ಕಂಭಗಳ ಅವಶೇಷಗಳು, ಆಯಕ ಸ್ತಂಭ ಮತ್ತು ಅದೇ ರೀತಿಯ ಸ್ತಂಭಗಳ ಅವಶೇಷಗಳು ದೊರಕಿವೆ. ಇದರಿಂದಾಗಿ ಚೈತ್ಯದ ಪೂರ್ವದಿಕ್ಕಿನ ವಿಶಾಲ ಅಂಗಳವನ್ನು ಎದುರು ನೋಡುತ್ತಿರುವಂತೆ ಈ ವಿಹಾರದ ಕೊಠಡಿಗಳ ಸಾಲು ನಿರ್ಮಿತ ವಾಗಿತ್ತು. ಅಂದರೆ ಈ ವಿಹಾರ ಚೈತ್ಯಕ್ಕೆ ಪೂರ್ವದಿಕ್ಕಿನ ಪ್ರಾಕಾರವೂ ಆಗಿತ್ತು. ಸಾಲಾಗಿ ನಿರ್ಮಿತವಾಗಿರುವ ವಿಹಾರದ ಕೊಠಡಿಗಳು, ಅವುಗಳ ಮುಂಭಾಗದಲ್ಲಿ ಉದ್ದನೆಯ ಕೈಸಾಲೆ ಅಥವಾ ವರಾಂಡ ಅದರ ಮುಂದೆ ವಿಶಾಲ ಅಂಗಳ ನಂತರ ಚೈತ್ಯಾಲಯ, ಇವಿಷ್ಟೂ ಕೂಡಿ ಎಷ್ಟು ಸುಂದರವಾದ ವಾತಾವರಣವನ್ನು ಸೃಷ್ಟಿಸಿರಬೇಕು ಎನಿಸುತ್ತದೆ.

ವಿಹಾರದ ಅಕ್ಕ ಪಕ್ಕದ ಕೊಠಡಿಗಳ ಬಾಗಿಲುಗಳನ್ನು ಜೊತೆ ಜೊತೆಯಾಗಿ ರೂಪಿಸಿರುವುದನ್ನು ಅಲ್ಲಿಯ ಗೋಡೆಯ ಅವಶೇಷ ಗಳು ಸೂಚಿಸುತ್ತವೆ. ಒಂದು ಮತ್ತು ಎರಡನೆಯ ಕೊಠಡಿಯ ಬಾಗಿಲುಗಳು ಒಂದರ ಪಕ್ಕದಲ್ಲಿ ಒಂದರಂತೆ, ಹಾಗೂ ಮೂರು ನಾಲ್ಕನೆಯ ಕೊಠಡಿಗಳ ಬಾಗಿಲುಗಳು ಒಂದು ಜೊತೆಯಾಗಿ ಇರುವಂತೆ, ವಿಹಾರದ ಮುಂದಿನ ಗೋಡೆಯನ್ನು ನಿರ್ಮಿಸಿ, ಅದರಲ್ಲಿ ಬಾಗಿಲಿಗಾಗಿ ತೆರವುಗಳನ್ನು ಮಾಡಲಾಗಿದೆ. ಈ ರೀತಿಯ ಗೋಡೆಯ ತೆರವುಗಳ ಅಗಲ ೪.೨೦ ಮೀಟರ್‌ಗಳು. ಇವುಗಳಲ್ಲಿ ಕೊಠಡಿಗಳನ್ನು ಪ್ರತ್ಯೇಕಿಸುವ ಗೋಡೆಗಳ ದಪ್ಪ, ಅಂದರೆ ೮೦ ಸೆಂ.ಮೀ. ಕಳೆದರೆ ಉಳಿಯುವುದು ೩.೪೦ ಮೀಟರ್. ಇದನ್ನು ಎರಡು ಬಾಗಿಲುಗಳಿಗೆ ಹಂಚಿದರೆ ಒಂದೊಂದು ಬಾಗಿಲು ೧.೭೦ ಮೀಟರ್ ಅಗಲ ಇರುವುದು. ಈ ಅಗಲದಲ್ಲಿ ದ್ವಾರದ ನಿಲುವು ಪಟ್ಟಿಗಳ ಅಗಲವನ್ನು ಅಂದರೆ ೪೫ ಸೆಂ.ಮೀ.(೧೮ ಇಂಚು)ಗಳನ್ನು ಕಳೆದರೆ ಬಾಗಿಲಿನ ಅಗಲ ಸುಮಾರು ನಾಲ್ಕು ಅಡಿಗಳು. ಇಷ್ಟು ವಿಸ್ತೀರ್ಣದ ಬಾಗಿಲುಗಳು ಈಗಲೂ ಕಾಣಬರುವ ಹಳೆಕಾಲದ, ಕೆತ್ತನೆಮಾಡಿದ, ದೊಡ್ಡ ದೊಡ್ಡ ದ್ವಾರಬಂಧಗಳಿಗೆ ಸಮ ಎನ್ನಬಹುದು. ಅಥವಾ ದ್ವಾರಗಳ ಇಕ್ಕೆಲಗಳಲ್ಲಿ ಮರದಲ್ಲೇ ಮಾಡಿದ ಜಾಲಂಧ್ರಗಳು ಇದ್ದಿದ್ದ ಪಕ್ಷದಲ್ಲಿ ಇಷ್ಟು ಅಳತೆಯಲ್ಲಿ ಗೋಡೆಯಲ್ಲಿ ತೆರವುಗಳನ್ನು ಮಾಡಿರಲೇಬೇಕಾಗುತ್ತದೆ.

ಕೊಠಡಿಗಳ ನೆಲಮಟ್ಟದ ಬಗ್ಗೆ ಹೆಚ್ಚಿನ ಮಾಹಿತಿ ದೊರೆತಿಲ್ಲ. ಕಲ್ಲಿನ ಅಥವಾ ಇಟ್ಟಿಗೆಯ ಹಾಸು ಆಗಲೀ ಅಥವಾ ಇನ್ಯಾವುದೇ ಮಾಧ್ಯಮದಲ್ಲಿ ಮಾಡಿರುವ ನೆಲದ ಸಾಕ್ಷಿಗಳು ದೊರೆತಿಲ್ಲ. ಪ್ರಾಯಶಃ ಸಾಧಾರಣ ಧಮ್ಮಸ್ಸು ಮಾಡಿ ಸಾರಿಸಿದ ನೆಲದ ಮೇಲೆ ಸಂನ್ಯಾಸಿಗಳು ವಾಸಿಸುತ್ತಿದ್ದರೆಂದು ತಿಳಿಯಬಹುದು. ನೆಲದ ಮಟ್ಟದ ಬಗ್ಗೆ ಒಂದೆರಡು ವಿಷಯಗಳು ಉತ್ಖನನದಿಂದ ನಮಗೆ ತಿಳಿದು ಬರುತ್ತವೆ. ದ್ವಾರಬಂಧವನ್ನು ಕೂಡಿಸಲು ಗೋಡೆಯಲ್ಲಿ ಮಾಡಿರುವ ತೆರವುಗಳ ನೆಲಮಟ್ಟವೇ ಕೊಠಡಿಗಳ ನೆಲಮಟ್ಟವಾಗಿತ್ತೆಂಬುದಕ್ಕೆ ಸಾಕ್ಷಿಗಳಿವೆ. ಈ ತೆರವುಗಳಿರುವ ಜಾಗದಲ್ಲಿ ಅಂದರೆ ಎರಡನೆ ಕೊಠಡಿಯ ಭಾಗದ ನೆಲಗೋಡೆಯಲ್ಲಿ ಕೊಠಡಿಯಲ್ಲಿ ಬಿದ್ದ ನೀರು ಹೊರಹೋಗಲು ಎರಡು ಸಣ್ಣದಾದ ಬಚ್ಚಲು ರೀತಿಯ ಗಾಡಿಗಳನ್ನು ಕೊರೆಯಲಾಗಿದೆ. ಈ ಗಾಡಿಗಳು ದ್ವಾರಬಂಧದ ಹೊಸ್ತಿಲಿನ ಕೆಳಭಾಗದಲ್ಲಿ ಹೋಗಿರುವುದಂತೂ ಖಚಿತ. ಹೀಗಾಗಿ ಈ ಗಾಡಿಗಳ ಕೆಳಮಟ್ಟಕ್ಕಿಂತ ಒಂದೆರಡು ಇಂಚು ಎತ್ತರದಲ್ಲಿ ಕೊಠಡಿಯ ನೆಲಮಟ್ಟವಿದ್ದಿರಬೇಕು. ಇದೇ ನೆಲಮಟ್ಟ ಇತರ ಕೊಠಡಿಗಳಿಗೂ ಇದ್ದಿರಬೇಕು. ಈ ಮಟ್ಟ ಹೆಚ್ಚೂ ಕಡಿಮೆ ಚೈತ್ಯಾಲಯದ ಅಂಗಳದ ಮಟ್ಟಕ್ಕೆ ಸರಿಹೊಂದುವಂತೆ ಕಾಣಬರುತ್ತದೆ.

ವಿಹಾರದ ಕೊಠಡಿಗಳ, ಇದುವರೆಗೆ ದೊರೆತಿರುವ ಗೋಡೆಗಳ ಎತ್ತರ ಕಡಿಮೆ ಇರುವುದರಿಂದ ಈ ಕೊಠಡಿಗಳಿಗೆ ಕಿಟಕಿಗಳು ಇದ್ದವೆ ಅಥವಾ ಗೋಡೆಗಳಲ್ಲಿ ಕಪಾಟುಗಳು ಇದ್ದವೆ ಎಂಬುದರ ಬಗ್ಗೆ ಹೇಳಲು ಸಾಕ್ಷ್ಯಾಧಾರಗಳಿಲ್ಲ. ಈ ಕೊಠಡಿಗಳಿಗೆ ಪೂರ್ವದಿಕ್ಕಿನಲ್ಲೂ ದ್ವಾರಗಳು ಇದ್ದವೇ, ಇಲ್ಲವೇ ಎಂಬುದೂ ಸಹ ದೊರೆತಿರುವ ಕಟ್ಟಡದ ಸಾಕ್ಷ್ಯಾಧಾರಗಳಿಂದ ಕಷ್ಟ ಇದ್ದಿರಬಹುದು ಎಂಬುದೂ ಒಂದು ಊಹೆ. ಇದಕ್ಕೆ ಕಾರಣ ಈ ಮುಂಚೆ ಹೇಳಿರುವ ಸ್ನಾನದ ಮನೆಯ ಬಾಗಿಲಿನ ದಿಕ್ಕು. ಈ ಸ್ನಾನದ ಮನೆಗೆ ಪೂರ್ವದಿಕ್ಕಿನಲ್ಲಿ ಬಾಗಿಲನ್ನು ಒದಗಿಸಿದ್ದಾರೆ. ಅಂದರೆ ಇದಕ್ಕೆ ವಿಹಾರದ ಹಿಂಭಾಗ/ಅಂಗಳ ಅಥವಾ ಬಯಲಿನಿಂದ ಪ್ರವೇಶ. ವಿಹಾರವಾಸಿಗಳು ಈ ಸ್ನಾನದ ಮನೆಗೆ ಬರಬೇಕಾದರೆ ಅವರ ಕೊಠಡಿಗಳಿಗೆ ಪೂರ್ವದಿಕ್ಕಿನಲ್ಲಿ ಬಾಗಿಲಿರ ಬೇಕು ಅಥವಾ ಅವರು ವಿಹಾರದ ದಕ್ಷಿಣ ಅಥವಾ ಉತ್ತರ ತುದಿಯವರೆಗೂ ಬಂದು ಮತ್ತೆ ವಿಹಾರವನ್ನು ಸುತ್ತಿ ಇನ್ನೂ ಹೆಚ್ಚು ದೂರ ಹಿಂದಕ್ಕೆ ಹೋಗಬೇಕು. ಪ್ರಾಕಾರದ ಆಗ್ನೇಯದ ಮೂಲೆಯಲ್ಲಿ ವಿಹಾರವು ಇನ್ನೂ ಪೂರ್ವಕ್ಕೆ ವಿಸ್ತರಿಸಿರುವ ಸೂಚನೆ ಇದೆ. ಇದು ನಿಜವಾದ ಪಕ್ಷದಲ್ಲಿ ಸ್ನಾನದ ಮನೆಗೆ ಹೋಗಲು ಕ್ರಮಿಸಬೇಕಾಗುತ್ತದೆ. ಈ ಕಾರಣದಿಂದಾಗಿ ವಿಹಾರದ ಎಲ್ಲಾ ಕೊಠಡಿಗಳಿಗೂ ಅಥವಾ ಯಾವುದಾದರೊಂದು ಕೊಠಡಿಗೋ ಪೂರ್ವಮುಖದಲ್ಲಿ ಒಂದು ದ್ವಾರವಿದ್ದಿರಬಹುದೆಂದು ಊಹಿಸ ಬಹುದು. ಈ ಅನುಮಾನಕ್ಕೆ ಪೂರಕವಾಗಿ ಎರಡನೆಯ ಕೊಠಡಿಯ ಪೂರ್ವಮುಖದಲ್ಲಿ ಒಂದು ದ್ವಾರವಿದ್ದಿರಬಹುದಾದ ಸೂಚನೆಗಳಿವೆ. ಪಶ್ಚಿಮದ ಬಾಗಿಲಿಗೆ ಎದುರಾಗಿ ಅದೇ ಮಟ್ಟದಲ್ಲಿ ಬಾಗಿಲಿಗಾಗಿ ತೆರೆದ ಗೋಡೆಯ ಅಲ್ಪಸ್ವಲ್ಪ ಸೂಚನೆ ಕಾಣಬರುತ್ತದೆ. ಈ ಬಾಗಿಲಿನ ಮುಂದೆ ಎಡ ಹೊರಭಾಗದಲ್ಲಿ ಕಟ್ಟಡಕ್ಕೆ ಹೊಂದಿ ಕೊಂಡಂತೆ ಗೋಡೆಯು ಒಂದು ಕಟ್ಟೆಯ ರೀತಿಯಲ್ಲಿ ಮುಂಚಾಚಿದೆ. ನೋಡುವುದಕ್ಕೆ ಒಂದು ಪೀಠರೂಪದ ಈ ಕಟ್ಟೆ ಎತ್ತರವಾಗಿ ಮೇಲೇರಿತ್ತೆನ್ನಲು ಯಾವುದೇ ಕಾರಣ ಕಾಣಬರುವುದಿಲ್ಲ. ಇದರಿಂದಾಗಿ ಇದು ಕುಳಿತುಕೊಳ್ಳುವ ಸಣ್ಣಪೀಠ ಮಾದರಿಯ ಕಟ್ಟೆಯಾಗಿದ್ದಿರಲೂಬಹುದು. ಪೂರ್ವದ್ವಾರದ ಪಕ್ಕದಲ್ಲಿ ಈ ಕಟ್ಟೆಯು ಇರುವುದು. ಪ್ರಾಯಶಃ ಇದರ ಮುಂದಿನ ವಿಶಾಲಾಂಗಳ ದಲ್ಲಿ ನೆರೆದಿರುವ ಭಕ್ತರನ್ನುದ್ದೇಶಿಸಿ ಕುಳಿತು ಅಥವಾ ನಿಂತು ಪ್ರವಚನಮಾಡುವುದಕ್ಕಾಗಿ ಮಾಡಿರುವ ಕಟ್ಟೆಯೇ ಎಂಬಂತಿದೆ. ಮೇಲಿನ ಊಹೆ ನಿಜವಾದಲ್ಲಿ ಎರಡನೆಯ ಕೊಠಡಿಯು ಪೂರ್ವ-ಪಶ್ಚಿಮ ಮುಖಗಳಲ್ಲಿ ದ್ವಾರಗಳನ್ನು ಹೊಂದಿದ್ದು, ಚೈತ್ಯಾಲಯದ ಪ್ರಾಕಾರ ಹಾಗೂ ಚೈತ್ಯದ ಹೊರಗಿನ ಪೂರ್ವಮುಖದ ಅಂಗಳಕ್ಕೂ ಸಂಬಂಧ ಕಲ್ಪಿಸುವ ಒಂದು ಅಂತರಾಳವಾಗಿತ್ತೆನ್ನಬಹುದು.

ಚೈತ್ಯಾಲಯದ ಆಗ್ನೇಯ ಮೂಲೆಯಲ್ಲಿರುವ ಏಳನೆಯ ಕೊಠಡಿಗೆ ಹೊಂದಿಕೊಂಡಂತೆ ಪೂರ್ವದಿಕ್ಕಿನತ್ತ ವಿಹಾರದ ಕೊಠಡಿಯ ಸಾಲು ಮುಂದುವರೆದಿರುವ ಸೂಚನೆ ಇದೆ ಎಂಬುದನ್ನು ನಾವು ಆಗಲೇ ಗಮನಿಸಿದ್ದೇವೆ. ವಿಹಾರದ ಕಟ್ಟಡ ಇದೇ ದಿಕ್ಕಿನಲ್ಲಿ ಮುಂದುವರೆದಿದ್ದಲ್ಲಿ ಪ್ರಾಯಶಃ ಈ ಭಾಗದಲ್ಲೂ ಸಹ

ಕೊಠಡಿಗಳಿಂದ ಸುತ್ತುವರೆದ ಪ್ರಾಂಗಣವಿತ್ತೇ ಎಂಬ ಸಂಶಯ ಮೂಡುತ್ತದೆ. (ರೇಖಾ ಚಿತ್ರ ನೋಡಿ)

**ಸ್ನಾನದ ಮನೆ :** ಈ ಕಟ್ಟಡ ವಿಹಾರದ ಉತ್ತರ ತುದಿಯಲ್ಲಿದೆ. ಇದರ ಉತ್ಖನನ ಅಪೂರ್ಣವಾಗಿದೆ. ಕಾರಣ ಈ ಕೊಠಡಿ ಪಕ್ಕದ ಮಣ್ಣಿನ ರಸ್ತೆಯೊಳಕ್ಕೆ ಚಾಚಿಕೊಂಡಿದೆ. ಇದರ ಒಳ ಉದ್ದ ೨.೫೦ ಮೀಟರ್. ಅಗಲವೂ ಪ್ರಾಯಶಃ ಅಷ್ಟೇ



ಉತ್ತರದಿಂದ ರಾಜಘಟ್ಟ ವಿಹಾರದ ಸ್ನಾನದ ಮನೆ

ಇದ್ದಿರಬಹುದು. ಉತ್ಖನನ ಮಾಡಿರುವ ಅಗಲ ೧.೮೦ ಮೀಟರ್, ಸ್ನಾನದ ಮನೆಯ ನೆಲದ ಮೇಲೆ ಒಂದು ೧.೪೦ ಮೀಟರ್ x ೮೦ ಸೆಂ.ಮೀ. ವಿಸ್ತೀರ್ಣದ, ಸ್ವಲ್ಪ ಒರಟಾದ ಹಾಗೂ ಅನೇರವಾಗಿ ಕತ್ತರಿಸಿದ ಚಪ್ಪಡಿಯನ್ನಿರಿಸಿದ್ದಾರೆ. ಇದರ ಪಾರ್ಶ್ವದಲ್ಲಿ, ಅಂದರೆ ಉತ್ತರಕ್ಕೆ ಸ್ವಲ್ಪ ಅಂತರದಲ್ಲಿ ಇನ್ನೊಂದು ಕಲ್ಲು ಚಪ್ಪಡಿಯನ್ನು (೧ಮೀಟರ್ x ೪೦ಸೆಂ.ಮೀ.) ಈಶಾನ್ಯ ಮೂಲೆಗೆ ಹೊಂದಿಕೊಂಡಂತೆ ಇಟ್ಟಿದ್ದಾರೆ. ದೊಡ್ಡ ಚಪ್ಪಡಿಯ ಈಶಾನ್ಯ ಮೂಲೆಯಲ್ಲಿ ಸುಮಾರು ೧೫ ಸೆಂ.ಮೀ. ವ್ಯಾಸದ ಒಂದು ಬಚ್ಚಲು ಬಾಯಿ ಇದೆ. ಈ ಬಚ್ಚಲನ್ನು ಇಟ್ಟಿಗೆಯಲ್ಲಿ ಮಾಡಿದ ಕಟ್ಟಡದಲ್ಲಿ ನೆಲಕ್ಕೆ ಲಂಬವಾಗಿ ಕತ್ತರಿಸಿದೆ, ಹಾಗೂ ಇದು ಸುಮಾರು ೫೦ ಸೆಂ.ಮೀ. ಆಳವಿದೆ. ಇದರ ಕೆಳಭಾಗವೂ ಸಹ ಇಟ್ಟಿಗೆಯ ನೆಲವನ್ನು ಹೊಂದಿದ್ದು ಅಲ್ಲಿಂದ ಬಚ್ಚಲು ಈಶಾನ್ಯಕ್ಕೆ ತಿರುಗುತ್ತದೆ. ಗೋಡೆಯ ಕೆಳಗಿಂದ ಹೊರಕ್ಕೆ ಬರುವ ಈ ಬಚ್ಚಲಿಗೆ ಕಟ್ಟಡದ ಹೊರಭಾಗದಲ್ಲಿ ಮೂರು ಮೀಟರ್ ಉದ್ದದ, ಇಟ್ಟಿಗೆಯಲ್ಲಿ ರೂಪಿಸಿದ ಬಚ್ಚಲನ್ನು ನಿರ್ಮಿಸಲಾಗಿದೆ. ಗೋಡೆಯಲ್ಲಿರುವ ಬಚ್ಚಲಿನ ಬಾಯಿ ಮತ್ತು ಈ ಹೊರಗಿನ ನಿರ್ಮಿತ ಬಚ್ಚಲು ಕೂಡುವ ಭಾಗವನ್ನು, ಒಂದಕ್ಕೊಂದು ಭದ್ರವಾಗಿ ಕೂಡಿಸಲು, ಇವೆರಡು ಭಾಗಕ್ಕೆ ಸೇರಿಕೊಂಡಂತೆ, ತಳಭಾಗದಲ್ಲಿ ಒಂದು ಕಲ್ಲು ಚಪ್ಪಡಿಯನ್ನು ಕೂಡಿಸಿ ಕಟ್ಟಿದ್ದಾರೆ. ಹೊರಬಚ್ಚಲಿನ ಎತ್ತರ ಸುಮಾರು ೪೦ ಸೆಂ.ಮೀ.. ಎರಡು ಸಮಾನಾಂತರ ಗೋಡೆಗಳನ್ನು ಸುಮಾರು ೨೦ ಸೆಂ.ಮೀ. ಅಂತರದಲ್ಲಿ ಕಟ್ಟಿ, ಸ್ವಲ್ಪ ಸ್ವಲ್ಪವಾಗಿ ಮೇಲಿನ ವರಿಸಗಳು ಒಳಕ್ಕೆ ಸರಿಯುವಂತೆ ನಿರ್ಮಿಸಿ, ಮೇಲ್ಭಾಗದಲ್ಲಿ ೧೦ಸೆಂ.ಮೀ. ಅಗಲವಿರುವಂತೆ ನಿರ್ಮಿಸಿದ್ದಾರೆ. ಇದರ ಮೇಲ್ಭಾಗದಲ್ಲಿ ೧.೨ ಮೀಟರ್ ಉದ್ದದ ಒಂದು ತುಂಡು ಚಪ್ಪಡಿಯನ್ನು ಕೂರಿಸಿ, ಸ್ವಲ್ಪ ಭಾಗವನ್ನು ಮಾತ್ರ ಮುಚ್ಚಿದ್ದಾರೆ. ಬಚ್ಚಲ ಪ್ರಾರಂಭದಲ್ಲಿ ಮೇಲ್ಭಾಗವನ್ನು ಒಂದೆರಡು ಇಟ್ಟಿಗೆಗಳನ್ನು ಕೂರಿಸಿ ಮುಚ್ಚಿದ್ದಾರೆ. ನಂತರ ಈ ಕಲ್ಲು ಚಪ್ಪಡಿ, ಬಚ್ಚಲಿನ ಸುಮಾರು ಅರ್ಧಭಾಗದವರೆಗೆ ಮುಚ್ಚಿದೆ. ನಂತರ ಬಚ್ಚಲಿನ ಮೇಲ್ಭಾಗ ತೆರವಾಗಿದೆ. ಕಲ್ಲು ಚಪ್ಪಡಿಯ ಇಕ್ಕೆಲಗಳಲ್ಲಿ ಉದ್ದಕ್ಕೂ ಸಣ್ಣ ಸಣ್ಣ ಇಟ್ಟಿಗೆಗಳನ್ನು ಒತ್ತಿ ಕೂರಿಸಿ ಮೇಲಿನ ಕಿಂಡಿಗಳಿಂದ ಮಣ್ಣು ಬಚ್ಚಲಿನೊಳಕ್ಕೆ ಬೀಳದಿರುವಂತೆ ಎಚ್ಚರಿಕೆ ವಹಿಸಿದ್ದಾರೆ. ಬಚ್ಚಲಿನಲ್ಲಿ ಸರಾಗವಾಗಿ ನೀರು ಹರಿಯುವುದಕ್ಕೆ ಸಾಕಷ್ಟು ಇಳಿಜಾರನ್ನೂ ಸಹ ಮಾಡಿದ್ದಾರೆ.



ರಾಜಘಟ್ಟ ವಿಹಾರದ ಸ್ನಾನದ ಮನೆ ಮತ್ತು ಚರಂಡಿ

ಸ್ನಾನದ ಮನೆಯ ನಿರ್ಮಾಣ ವಿಹಾರದ ನಿರ್ಮಾಣದ ನಂತರ ಆಗಿರುವ ಒಂದು ಆಲೋಚನೆ. ಈ ಹೇಳಿಕೆಗೆ ಸಾಕ್ಷಿ ಎಂದರೆ ಸ್ನಾನದ ಮನೆಯ ಗೋಡೆಯ ಅಧಿಷ್ಠಾನದ ಇಟ್ಟಿಗೆಗಳು ಯಾವುವೂ ಸಹ ವಿಹಾರದ ಅಧಿಷ್ಠಾನದ ಇಟ್ಟಿಗೆಯ ವರಿಸೆಗಳೊಂದಿಗೆ ಜಂಟಿಯಾಗಿಲ್ಲ. ಎರಡೂ ಕಟ್ಟಡದ ಇಟ್ಟಿಗೆಗಳು ಒಂದಕ್ಕೊಂದು ಮಾತ್ರ ನಿರ್ಮಾಣವಾಗಿದೆ. ಸ್ನಾನದ ಮನೆಯ ನಿರ್ಮಾಣದಲ್ಲಿ ಅವರು ಒಂದು ವಿಶೇಷ ತಂತ್ರವನ್ನು ಬಳಸಿದ್ದಾರೆ. ಅದೇನೆಂದರೆ ಸ್ನಾನದ ಮನೆಯನ್ನು ಸುಮಾರು ಮೂರು ಅಡಿ ಎತ್ತರವಾದ ಕಟ್ಟೆಯ ಮೇಲೆ ನಿರ್ಮಿಸಿದ್ದಾರೆ. ಕಾರಣ ಸ್ನಾನದ ಮನೆಯಲ್ಲಿ ಬಳಸಿದ ನೀರು ಸರಾಗವಾಗಿ ಬಚ್ಚಲ ಮುಖಾಂತರ

ಹಿಂದಿನ ಅಂಗಳದ ಭಾಗಕ್ಕೆ ಹರಿದು ಹೋಗಲೆಂದು. ಹೀಗಾಗಿ ಸ್ನಾನದ ಮನೆಗೆ ಪ್ರವೇಶಿಸಲು ಮೂರು ಮೆಟ್ಟಿಲುಗಳನ್ನು ಹತ್ತಬೇಕು. ಸುಮಾರು ೮೦ ಸೆಂ.ಮೀ. ಅಗಲದ ೩೦ಸೆಂ.ಮೀ. ಎತ್ತರದ ಎರಡು ಕಲ್ಲಿನ ಚಪ್ಪಡಿಯ ಮೆಟ್ಟಿಲುಗಳಿವೆ. ಮೂರನೆಯ ಮೆಟ್ಟಲು ಒಂದು ಅಗಲವಾದ ಕಲ್ಲಿನ ಚಪ್ಪಡಿ ಇದರ ವಿಸ್ತೀರ್ಣ ೮೦x೬೦ಚ. ಸೆಂ.ಮೀ. ಇದು ಸ್ನಾನದ ಮನೆಯ ನೆಲದ ಚಪ್ಪಡಿಯ ಮಟ್ಟಕ್ಕಿಂತ ಸುಮಾರು ೨೦ ಸೆಂ.ಮೀ. ಎತ್ತರದಲ್ಲಿದೆ. ಇದರಿಂದಾಗಿ ಒಳಕ್ಕೆ ಪ್ರವೇಶಿಸುವಾಗ ೨೦ ಸೆಂ.ಮೀ. ಕೆಳಕ್ಕೆ ಇಳಿಯಬೇಕು. ಹೊರಕ್ಕೆ ಬರುವಾಗ ೨೦ ಸೆಂ.ಮೀ. ಮೇಲಕ್ಕೆ ಹತ್ತಬೇಕು. ಈ ಒಂದು ವ್ಯವಸ್ಥೆಗೂ ಒಂದು ಕಾರಣವಿದೆ. ಅದೇನೆಂದರೆ ಸ್ನಾನದ ಮನೆಯಲ್ಲಿ ಸುರಿಯುವ ನೀರು ಬಾಗಿಲಿನ ಮುಖಾಂತರ ಹೊರಕ್ಕೆ ಹರಿಯದಿರಲೆಂಬ ಉದ್ದೇಶ. ಹೀಗೆ ಬಾಗಿಲಿಗೆ ಎತ್ತರವಾಗಿ ಹೊಸ್ತಿಲರೀತಿಯ ಮೆಟ್ಟಿಲನ್ನು ನಿರ್ಮಿಸುವುದರ ಮೂಲಕ ಅವರು ಈ ತೊಂದರೆಯನ್ನು ನಿವಾರಿಸಿದ್ದಾರೆ.

ಸ್ನಾನದ ಮನೆಯ ನೆಲವನ್ನು, ಕಲ್ಲು ಚಪ್ಪಡಿಗಳನ್ನು ಹೊರತುಪಡಿಸಿ, ಸಣ್ಣ ಸಣ್ಣ ಸುಣ್ಣಕಲ್ಲಿನ ಮಿಶ್ರಣದ ಗಾರೆಯಿಂದ ಧಮ್ಮಸ್ಸು ಮಾಡಿದ್ದರು. ಆದರೆ ಕಾಲಪುರುಷನ ಕಾರಣದಿಂದಾಗಿ ಸುಣ್ಣದ ಗಾರೆಯ ಶಕ್ತಿ ಕ್ಷೀಣಿಸಿ ನೆಲ ಸಂಪೂರ್ಣ ಮಣ್ಣು ತಿಂದು ಹೋಗಿದೆ. ಕೇವಲ ಸಣ್ಣಸಣ್ಣ ಸುಣ್ಣಕಲ್ಲಿನ ರೀತಿಯ ಜರುಗು ಮಣ್ಣು ಮಾತ್ರ ಉತ್ಖನನದಲ್ಲಿ ದೊರೆಯಿತು. ಸ್ನಾನದ ಮನೆಯ ಒಳಗೋಡೆಯನ್ನು ಸುಣ್ಣದ ಗಾರೆಯಿಂದ ಗಿಲಾವು ಮಾಡಿದ್ದು ಸೂಚನೆಗಳಾವುವೂ ಉತ್ಖನನದಲ್ಲಿ ಕಾಣಬಂದಿಲ್ಲವಾದರೂ ಇಲ್ಲಿಯ ಚೈತ್ಯಾಲಯದ ನಿರ್ಮಾಣದಲ್ಲಿ ಹೇರಳವಾಗಿ ಸುಣ್ಣದ ಗಾರೆ ಬಳಕೆಯಾಗಿರುವುದರಿಂದ ಸ್ನಾನದ ಮನೆಯ ಒಳಭಾಗವನ್ನೂ ಸಹ ಗಾರೆಯಿಂದ ಗಿಲಾವ್ ಮಾಡಿರಬಹುದು ಎಂದು ಹೇಳಬಹುದು. ಇಲ್ಲಿ ಒಳಗೋಡೆಯ ಭಾಗವನ್ನು ಸಂಪೂರ್ಣವಾಗಿ ಉತ್ಖನನದಲ್ಲಿ ಬಿಡಿಸಿಲ್ಲ. ಆದರೂ ಸಹ ಇದರ ಗೋಡೆಯ ನಿರ್ಮಾಣದಲ್ಲಿ ಒಂದು ವಿಶೇಷತೆಯನ್ನು ಗಮನಿಸಲಾಗಿದೆ. ಅದೇನೆಂದರೆ ಸ್ನಾನದ ಮನೆಯ ನೈಋತ್ಯ ಒಳಗೋಡೆಯ ಮೂಲೆಯಲ್ಲಿ ಇಂಗ್ಲೀಷ್ ಅಕ್ಷರ ಎಲ್ ಆಕಾರದ ಒಂದು ಇಟ್ಟಿಗೆಯನ್ನು ಬಳಸಲಾಗಿದೆ. ಪ್ರಾಯಶಃ ಈ ಭಾಗದಲ್ಲಿ ನೀರಿನ ತೊಟ್ಟಿಯೊಂದರ ನಿರ್ಮಾಣವಾಗಿದ್ದು ಅದರ ಮೂಲೆಯಲ್ಲಿ ನೀರು ಸೋರುವುದನ್ನು ತಪ್ಪಿಸಲು ಈ ರೀತಿಯ ಇಟ್ಟಿಗೆಯನ್ನು ಬಳಸುತ್ತಿದ್ದಿರಬಹುದು. ಈ ಅಂಶ ಕೇವಲ ಮುಂದಿನ ಉತ್ಖನನದಿಂದ ಮಾತ್ರ ಸಮರ್ಥಿಸಲು ಸಾಧ್ಯ.

ಸ್ನಾನದ ಮನೆ ಆ ಕಾಲದ ಬೌದ್ಧ ವಿಹಾರಗಳಲ್ಲಿ ಕಂಡುಬಂದಿರುವುದು ಇದೇ ಮೊದಲನೆಯದೇನಲ್ಲ. ಇದು ವಿಹಾರಗಳ ಸಾಮಾನ್ಯಲಕ್ಷಣ. ಆದರೆ ಕರ್ನಾಟಕದಲ್ಲಿ ಮೊದಲನೆಯದಾಗಿ ಇದು ಕಂಡು ಬಂದಿದೆ. ರಾಜಘಟ್ಟ ನದೀತೀರದ ನಿವೇಶನವಲ್ಲ. ಇಲ್ಲಿ ದೊಡ್ಡದಾದ ಒಂದು ಕೆರೆ ಇದೆ. ಅದು ಪ್ರಾಚೀನವಾದದ್ದೇನೋ ನಿಜ. ಆದರೆ ಈ ಕೆರೆ ವಿಹಾರದಿಂದ ಸುಮಾರು ೧ ಕಿ.ಮೀ. ದೂರದಲ್ಲಿದೆ. ವಿಹಾರವಾಸಿಗಳು ಸ್ನಾನಕ್ಕಾಗಿ ಕೆರೆಗೆ ಹೋಗುತ್ತಿದ್ದಿರಬಹುದು. ಆದರೆ ವಯೋವೃದ್ಧರಾದವರಿಗೆ ಮತ್ತು ಭಿಕ್ಷುಣಿಯರಿಗೆ ಸ್ನಾನಮಾಡುವುದಕ್ಕೆ ಹಾಗೂ ರಾತ್ರಿಯ ವೇಳೆಯಲ್ಲಿ ಶೌಚಕ್ಕಾಗಿ ಪ್ರಾಯಶಃ ಈ ಸ್ನಾನದ ಮನೆಯನ್ನು ಬಳಸುತ್ತಿದ್ದಿರಬೇಕು. ಈ ಅಂಶವನ್ನು ಸಮರ್ಥಿಸಲು ಬಹಳ ಸ್ವಾರಸ್ಯಕರವಾದ ಒಂದು ಸುಳಿವು ಸಿಕ್ಕಿದೆ. ಅದೇನೆಂದರೆ ವಿಹಾರದ ಒಂದನೆಯ ಕೊಠಡಿಯ ಈಶಾನ್ಯ ಮೂಲೆಯ ಹೊರಮುಖದಲ್ಲಿ, ಸ್ವಲ್ಪ ಹೊರಚಾಚಿದ ಅಧಿಷ್ಠಾನದ ಇಟ್ಟಿಗೆಯ ವರಿಸೆಯಲ್ಲಿ, ಸುಮಾರು ೨೫ಸೆಂ.ಮೀ. ಆಳ, ೧೫ ಸೆಂ.ಮೀ ಅಗಲದ ಬಾಯುಳ್ಳ ಒಂದು ಕುಳಿಯನ್ನು ಮಾಡಲಾಗಿದೆ. ಶಂಕುವಿನಾಕಾರದ ಈ ಕುಳಿಯನ್ನು ಪಂಜು ಸಿಕ್ಕಿಸುವುದಕ್ಕೇ ಮಾಡಿರುವುದಾಗಿದೆ ಎಂದು ನಿಸ್ಸಂದೇಹವಾಗಿ ಹೇಳಬಹುದು. ಕಟ್ಟಡದ ಮೂಲೆಯಲ್ಲಿ ಈ ಕುಳಿ ಇರುವುದರಿಂದ ಇಲ್ಲಿ ಸಿಕ್ಕಿಸಿದ ಪಂಜು ಸ್ನಾನದ ಮನೆಯ ಭಾಗಕ್ಕೂ ವಿಹಾರದ ಹಿಂದಿನ ಅಂಗಳಕ್ಕೂ ಬೆಳಕನ್ನು ಚೆಲ್ಲುತ್ತಿತ್ತು. ರಾತ್ರಿಯ ವೇಳೆಯಲ್ಲಿ ಸ್ನಾನದ ಮನೆಯನ್ನು ಉಪಯೋಗಿಸುವವರಿಗಾಗಿ ಈ ಬೆಳಕಿನ ವ್ಯವಸ್ಥೆಯನ್ನು ಮಾಡಿದ್ದರು ಎನ್ನಬಹುದು.

ವಿಹಾರದ ನಿರ್ಮಾಣದ ತಾಂತ್ರಿಕ ಅಂಶಗಳಿಗೆ ಬರುವುದಾದರೆ ವಿಹಾರವನ್ನು ಅಚ್ಚುಕಟ್ಟಾಗಿ ತಯಾರು ಮಾಡಿ ಚೆನ್ನಾಗಿ ಸುಟ್ಟಇಟ್ಟಿಗೆಗಳಿಂದ ನಿರ್ಮಿಸಿದ್ದಾರೆ ಎಂದು ಹೇಳಬೇಕು. ವಿಹಾರದ ಅಧಿಷ್ಠಾನದಲ್ಲಿ ಯಾವುದೇ ರೀತಿಯ ಕಲ್ಲಿನ ಬಳಕೆ ಕಾಣುವುದಿಲ್ಲ. ಸುಮಾರು ೩೦ ಸೆಂ.ಮೀ.ಪಾಯ ತೆಗೆದು ಗಟ್ಟಿನೆಲದಲ್ಲಿಯೆ ಸುಮಾರು ೧ ಮೀಟರ್‌ಗೂ ಸ್ವಲ್ಪ ಅಧಿಕ ಅಗಲವುಳ್ಳ ಇಟ್ಟಿಗೆಯ ಹಾಸನ್ನು, ಸ್ವಲ್ಪ ಬಿಡಿ ಬಿಡಿಯಾಗಿಯೇ ಹಾಸಿದ್ದಾರೆ. ಇಟ್ಟಿಗೆಗಳ ಮಧ್ಯ ಸುಮಾರು ೩ ರಿಂದ ೫ ಸೆಂ.ಮೀ ವರೆಗೂ ಅಂತರ ಕಾಣಬರುತ್ತದೆ. ಈ ಅಂತರದಲ್ಲಿ ಮಣ್ಣನ್ನು ತುಂಬಿದ್ದಾರೆ. ಇಲ್ಲಿಯ ಇಟ್ಟಿಗೆಗಳು ಅಷ್ಟೇನೂ ಅಚ್ಚುಕಟ್ಟಾಗಿಲ್ಲ. ಒಳ್ಳೆಯ ಇಟ್ಟಿಗೆಗಳ ಜೊತೆಗೆ ಮುರುಕು ಇಟ್ಟಿಗೆಗಳೂ ಕಾಣಬರುತ್ತವೆ. ಇದೇ ರೀತಿಯ ನಿರ್ಮಾಣ ಮೂರು ಅಥವಾ ನಾಲ್ಕು ವರಿಸೆಗಳಿದ್ದು ಅದರ ಮೇಲೆ ಸ್ವಲ್ಪ ಅಚ್ಚುಕಟ್ಟಾಗಿ ಒಂದು ಪದರ ಇಟ್ಟಿಗೆಯ ಹಾಸನ್ನು ಹಾಕಿದ್ದಾರೆ. ಇದರ ಮೇಲೆ ಹೊರಮುಖದಲ್ಲಿ ಸ್ವಲ್ಪ ಒಳಕ್ಕೆ ಸರಿಸಿ ಇಟ್ಟಿಗೆಯ ಕಟ್ಟಡವನ್ನು ಅಚ್ಚುಕಟ್ಟಾದ ಇಟ್ಟಿಗೆಗಳಿಂದ ನಾಜೂಕಾಗಿ ಕಟ್ಟಿದ್ದಾರೆ. ಇದು ಒಟ್ಟು ನಾಲ್ಕು ವರಿಸೆಯಲ್ಲಿದೆ. ನೆಲ ಮಟ್ಟವನ್ನು ಸರಿಯಾಗಿ ತೂಗಿಸಲು ಕೆಲವೆಡೆ ಕತ್ತರಿಸಿ ತೆಳ್ಳಗೆ ಮಾಡಿದ ಇಟ್ಟಿಗೆಗಳನ್ನು ಸಂದರ್ಭಾನುಸಾರವಾಗಿ ಬಳಸಿದ್ದಾರೆ. ಈ ಭಾಗ ನಂತರದ ಕಟ್ಟಡಗಳ ಅಧಿಷ್ಠಾನದ 'ಜಗತಿ' ದಿಂಡಿಗೆ ಸರಿಸಮಾನವೆನ್ನಬಹುದು. ಇದರ ೩೦ಸೆಂ.ಮೀಟರ್‌ಗಳು. 'ಜಗತಿ' ದಿಂಡಿನ ಮೇಲೆ ಸ್ವಲ್ಪ ಹಿಂದಕ್ಕೆ ಸರಿಸಿದಂತೆ ೫ ವರಿಸೆಗಳಲ್ಲಿ ಕಂಪಕ್ಕೆ ಸರಿಹೊಂದುವ ಭಾಗವನ್ನು ನಿರ್ಮಿಸಿದ್ದಾರೆ. ಇದು ಮಟ್ಟವಾದ

ಯಾವುದೇ ಹಿನ್-ಮುನ್ ಸರಿತವಿಲ್ಲದ ಗೋಡೆ ಇದರ ಮೇಲ್ಭಾಗ ದಲ್ಲಿ ಪ್ರಾಯಶಃ 'ಕುಮುದ' ರೀತಿಯ ದಿಂಡು ಇದ್ದಿರಬೇಕು. ಏಕೆಂದರೆ ಇದರ ತಳಭಾಗ ಮಾತ್ರ ನಮಗೆ ದೊರೆತಿದೆ.

'ಕುಮುದ' ಪಟ್ಟಿಯನ್ನು ಮೂರು ಇಟ್ಟಿಗೆಯ ವರಿಸೆಗಳನ್ನು ಕೂಡಿಸಿ ಮಾಡಿದ್ದಾರೆನ್ನಬಹುದು. ಏಕೆಂದರೆ ಈ ರೀತಿಯ 'ಕುಮುದ' ಪಟ್ಟಿ ಚೈತ್ಯದ ಪ್ರಾಕಾರ ಗೋಡೆಯ ಒಳಮುಖದಲ್ಲಿ ಸುರಕ್ಷಿತಸ್ಥಿತಿ ಯಲ್ಲಿ ಕಂಡು ಬಂದಿದೆ. 'ಕುಮುದ' ಪಟ್ಟಿಯ ಕೆಳವರಿಸೆಯಲ್ಲಿ ಮುಖಭಾಗದ ಕೆಳ ಅಂಚನ್ನು ಓರೆಯಾಗಿ ಕತ್ತರಿಸಿದ ಇಟ್ಟಿಗೆಯನ್ನು ಇಟ್ಟಿದ್ದಾರೆ. ಇದರಿಂದಾಗಿ ಕೆಳಗೋಡೆಗೂ ಈ ಇಟ್ಟಿಗೆಯ ವರಿಸೆಗೂ ಮಧ್ಯೆ ತ್ರಿಕೋನಾಕಾರದ ಗಾಡಿ ಉಂಟಾಗಿದೆ. 'ಕುಮುದ' ಪಟ್ಟಿಯ ಮಧ್ಯದ ಇಟ್ಟಿಗೆ ಸಾಧಾರಣ ಇಟ್ಟಿಗೆಯ ವರಿಸೆ. ಮತ್ತೆ ಇದರ ಮೇಲೆ ಮೇಲ್ಮೂಲೆಯನ್ನು ಓರೆಯಾಗಿ ಕತ್ತರಿಸಿದ ಇಟ್ಟಿಗೆಯನ್ನು ಇಟ್ಟಿರುವುದರಿಂದ ಮೂರು ಮುಖವುಳ್ಳ 'ಕುಮುದ' ಪಟ್ಟಿ ನಿರ್ಮಾಣವಾಗಿದೆ. ಅಧಿಷ್ಠಾನಕ್ಕೆ ಇದು ಸಾಧಾರಣ, ಸರಳ ಅಲಂಕರಣೆಯಾದರೂ ಇದರ ಗಾತ್ರ ಮತ್ತು ಆಕಾರದಿಂದಾಗಿ ಅಧಿಷ್ಠಾನದಲ್ಲಿ ಈ ಪಟ್ಟಿ ಪ್ರಧಾನವಾಗಿ ಕಾಣಿಸುತ್ತದೆ. ಒಂದು ಪಕ್ಷ ಅಧಿಷ್ಠಾನದ ಈ ಭಾಗದಲ್ಲಿ 'ಕುಮುದ' ಪಟ್ಟಿ ಇರದಿದ್ದಲ್ಲಿ ಈಗ ಉಳಿದಿರುವ ಕೆಳಭಾಗ ಓರೆಯಾಗಿ ಕತ್ತರಿಸಿರುವ ಇಟ್ಟಿಗೆಯ ಪಟ್ಟಿ ಅಧಿಷ್ಠಾನದ 'ಪ್ರತಿ' ಎಂಬ ದಿಂಡಿಗೆ ಸರಿಹೊಂದುತ್ತದೆ. 'ಪ್ರತಿ' ದಿಂಡೂ ಸಹ ಕೆಳಭಾಗದಲ್ಲಿ ಈ ರೀತಿಯಾಗಿ ಓರೆಯಾಗಿದ್ದು ಮುಂಭಾಗದಲ್ಲಿ ಮತ್ತು ಮೇಲೆ ಚಪ್ಪಟೆಯಾಗಿರುತ್ತದೆ. ಹೀಗೂ ಸಹ ಅಧಿಷ್ಠಾನದ ಅಲಂಕರಣೆ ಸರಿ ಹೊಂದುತ್ತದೆ.

ಮೇಲೆ ಹೇಳಿದ ಅಧಿಷ್ಠಾನದ ವಿವರಗಳು ವಿಹಾರದ ಒಂದನೆಯ ಕೊಠಡಿಯ ಹೊರಭಾಗದಲ್ಲಿ ಮಾತ್ರ ಕಾಣಬರುತ್ತದೆ. ಏಕೆಂದರೆ ಇಷ್ಟು ಎತ್ತರವಾಗಿ ವಿಹಾರದ ಗೋಡೆಯ ಅವಶೇಷಗಳು ಉಳಿದಿರುವುದು ಈ ಭಾಗದಲ್ಲಿ ಮಾತ್ರ. ವಿಹಾರದ ಪೂರ್ವ ಗೋಡೆಯ ಉಳಿದ ಭಾಗ ಘಾಸಿಗೊಂಡಿದೆ. ಆದ್ದರಿಂದ ಈ ಭಾಗದಲ್ಲಿ ಇದೇ ರೀತಿಯ ಅಧಿಷ್ಠಾನವಿತ್ತೋ ಅಥವಾ ಸಾಧಾರಣ ಅಧಿಷ್ಠಾನವಿತ್ತೋ ಎಂಬುದನ್ನು ನಿರ್ಧರಿಸುವುದು ಕಷ್ಟ. ಆದರೂ ಸಹ ಉಳಿದಿರುವ ಆಧಾರಗಳ ಮೇಲೆ ಈ ರೀತಿಯ ಅಲಂಕೃತ ಅಧಿಷ್ಠಾನ ಕೇವಲ ಒಂದನೆಯ ಕೊಠಡಿಗೆ ಮಾತ್ರ ಸೀಮಿತವಾಗಿತ್ತು ಎಂದು ತೋರುತ್ತದೆ. ಏಕೆಂದರೆ ಈ ಭಾಗದಲ್ಲಿ ಅಧಿಷ್ಠಾನದ ಗಾತ್ರ ಉಳಿದ ಭಾಗಗಳಿಗಿಂತ ಹೆಚ್ಚು ದಪ್ಪವಾಗಿ ಕಾಣಬರುತ್ತದೆ. (ರೇಖಾ ಚಿತ್ರ ನೋಡಿ) ಮೇಲಿನ ಊಹೆ ನಿಜವಾದ ಪಕ್ಷದಲ್ಲಿ ಒಂದನೆಯ ಕೊಠಡಿ ಒಂದು ವಿಶೇಷವಾದ ಅಥವಾ ಪ್ರತಿಷ್ಠಿತವಾದ ಕೊಠಡಿಯಾಗಿದ್ದಿರಬೇಕು. ಆದರೆ ಈ ವಿಶೇಷತೆ ಏನಿದ್ದಿರಬಹುದು ಎಂದು ಹೇಳುವುದು ಸದ್ಯದ ಪರಿಸ್ಥಿತಿಯಲ್ಲಿ ಆಗದು.

ವಿಹಾರ ಗೋಡೆಯ ನಿರ್ಮಾಣದ ವಿಧಾನಕ್ಕೆ ಬರುವು ದಾದರೆ ಗೋಡೆಯನ್ನು ಬಹಳ ಅಚ್ಚುಕಟ್ಟಾಗಿ ನಿರ್ಮಿಸಿದ್ದಾರೆ. ೪೦ ಸೆಂ.ಮೀ. ಉದ್ದ ೨೦ ಸೆಂ.ಮೀ. ಅಗಲ ೬ ರಿಂದ ೭ ಸೆಂ.ಮೀ. ದಪ್ಪವಿರುವ ಇಟ್ಟಿಗೆಗಳನ್ನು ಸಾಧಾರಣವಾಗಿ ಬಳಸ ಲಾಗಿದೆ. ಮಧ್ಯೆ ಮಧ್ಯೆ ಅವಶ್ಯಕತೆಗೆ ಅನುಗುಣವಾಗಿ ಇಟ್ಟಿಗೆಗಳನ್ನು ತುಂಡರಿಸಿ ಕಟ್ಟಲಾಗಿದೆ. ಇಟ್ಟಿಗೆಯ ಜೋಡಣೆಗೆ ಶುದ್ಧಮಾಡಿದ ಒಳ್ಳೆಯ ಜೇಡಿಮಣ್ಣನ್ನು ತೆಳುವಾಗಿ ಸವರಿ ಇಟ್ಟಿಗೆಗಳನ್ನು ಕೂಡಿಸಲಾಗಿದೆ. ಇದರಿಂದಾಗಿ ಗೋಡೆಯಲ್ಲಿ ಮಣ್ಣಿನ ಅಂಶ ಕಡಿಮೆಯಾಗಿ ಸುಟ್ಟ ಇಟ್ಟಿಗೆಯ ಅಂಶ ಜಾಸ್ತಿಯಾಗುತ್ತದೆ. ಇದು ಕಟ್ಟಡಕ್ಕೆ ಹೆಚ್ಚಿನ ಶಕ್ತಿಯನ್ನೂ, ದೃಢತೆಯನ್ನೂ ನೀಡುತ್ತದೆ. ಇಟ್ಟಿಗೆಗಳನ್ನು ವರಿಸೆಯಲ್ಲಿ ಕೂರಿಸುವಾಗ ಹೆಚ್ಚಾಗಿ ಉದ್ದಮುಖ ಹೊರಗೆ ಕಾಣುವಂತೆ ಕಟ್ಟಿದ್ದಾರೆ. ಇಟ್ಟಿಗೆಗಳನ್ನು ಅವಶ್ಯಕತೆಗಳಿಗನು ಗುಣವಾಗಿ ಅಲ್ಲಲ್ಲಿ ನಾಟಾಗಿ ಇಟ್ಟು ಗೋಡೆಯ ವರಿಸೆಗಳ ದೃಢತೆಯನ್ನು ಹೆಚ್ಚಿಸಿದ್ದಾರೆ.

**ಕಾಲ** : ವಿಹಾರ ನಿರ್ಮಾಣ ಕಾಲ ಮತ್ತು ಅದರ ಅಸ್ತಿತ್ವ ಕಾಲವನ್ನು ತಿಳಿಯಲು ನಿಖರ ಮಾಹಿತಿ ದೊರೆತಿಲ್ಲ. ಚೈತ್ಯಾಲಯದ ಕಾಲದ ಬಗ್ಗೆ ಹೇಳುವಾಗ ಅದರ ಕಾಲ ಕ್ರಿ.ಶ.೪ನೇ ಶತಮಾನದಿಂದ ೭ನೇ ಶತಮಾನದವರೆಗಿನ ಅವಧಿಯಲ್ಲಿ ಅದು ಅಸ್ತಿತ್ವದಲ್ಲಿ ಇತ್ತೆಂದು ಹೇಳಿದ್ದೇವೆ. ಇದೇ ಕಾಲಾವಧಿ ವಿಹಾರದ ಅಸ್ತಿತ್ವಕ್ಕೂ ಸಹ ಸೂಚಿಸಬಹುದಾಗಿದೆ. ಕಾರಣ ಚೈತ್ಯಾಲಯ ಮತ್ತು ಅದರ ಪ್ರಾಕಾರ ಒಂದೇ ಕಾಲದಲ್ಲಿ ನಿರ್ಮಾಣವಾಗಿರುವಂತೆ ತೋರುತ್ತದೆ. ವಿಹಾರದ ಭಾಗ ಚೈತ್ಯದ ಪೂರ್ವದಿಕ್ಕಿನ ಪ್ರಾಕಾರವೂ ಆಗಿದ್ದುದ ರಿಂದ ವಿಹಾರದ ಕಾಲವನ್ನು ಚೈತ್ಯಾಲಯದ ಅಸ್ತಿತ್ವಕಾಲದೊಂದಿಗೆ ಸಮೀಕರಿಸಬಹುದಾಗಿದೆ.

ವಿಹಾರದ ಉತ್ಖನನದಲ್ಲಿ, ವಿಹಾರದ ಎರಡನೆಯ ಕೊಠಡಿ ಯಲ್ಲಿ ಒಟ್ಟು ಮೂರು ಕುಂಭ ಸಮಾಧಿಗಳು ಕಂಡು ಬಂದವು. ಈ ಕುಂಭಗಳಲ್ಲಿ ಎರಡು, ಒಂದರ ಪಕ್ಕದಲ್ಲಿ ಒಂದರಂತೆ ಇದ್ದವು. ಮೂರನೆಯದು ಇವುಗಳಿಗೆ ಸ್ವಲ್ಪ ಅಂತರದಲ್ಲಿ ಕಂಡು ಬಂದಿತು.



ರಾಜಘಟ್ಟದ ಕುಂಭ ಸಮಾಧಿಯ ಎರಡನೆಯ ವಿಹಾರ

ಮೊದಲನೆಯ ಜೋಡಿಕುಂಭಗಳು ಎರಡನೆಯ ಕೊಠಡಿಯ ಉತ್ತರದ ಗೋಡೆಯ ವಾಯುವ್ಯಮೂಲೆಯಲ್ಲಿ ಇದ್ದರೆ,

ಎರಡನೆಯದು ದಕ್ಷಿಣಗೋಡೆಯ ನೈಋತ್ಯ ಮೂಲೆಯಲ್ಲಿ ಇತ್ತು. ಈ ಮೂರೂ ಕುಂಭಗಳ ಮೇಲ್ಮಟ್ಟ, ವಿಹಾರದ ಉಳಿದಿರುವ ಗೋಡೆಯ ಭಾಗಕ್ಕಿಂತಲೂ ಸ್ವಲ್ಪ ಎತ್ತರದಲ್ಲಿತ್ತು, ಹಾಗೂ ಮೂರನೆಯ ಕುಂಭ ಸಮಾಧಿಗೆ ಗುಂಡಿಯನ್ನು ತೋಡುವಾಗ ಎರಡನೆಯ ಕೊಠಡಿಯ ದಕ್ಷಿಣದ ಗೋಡೆಯ ಒಳಭಾಗವನ್ನು ಸ್ವಲ್ಪ ಕತ್ತರಿಸಲಾಗಿತ್ತು. ಈ ಅಂಶಗಳು ಈ ಮೂರೂ ಕುಂಭ ಸಮಾಧಿಗಳನ್ನು, ವಿಹಾರ ಸಂಪೂರ್ಣವಾಗಿ ನೆಲಸಮವಾದ ನಂತರ, ಆ ಪಾಳು ಪ್ರದೇಶದಲ್ಲಿ ಗುಂಡಿ ತೋಡಿ ಮಾಡಿದ್ದಾರೆ ಎನ್ನುವುದನ್ನು ಸಮರ್ಥಿಸುತ್ತವೆ.

ಮೂರೂ ಸಮಾಧಿಗಳ ಕುಂಭಗಳನ್ನು ಪರಿಶೀಲಿಸಿದಾಗ ಅವುಗಳ ರಚನೆ, ಆಕಾರ, ಅಲಂಕರಣೆ ಮುಂತಾದವು, ಇವು ಕ್ರಿ.ಶ.೯-೧೦ನೆಯ ಶತಮಾನಗಳ ಕಾಲದ ಕುಂಭಗಳಿರಬೇಕೆಂದು ಊಹಿಸಬಹುದು. ಏಕೆಂದರೆ ಇದೇ ರೀತಿಯ ರಚನೆಯುಳ್ಳ ಮಡಿಕೆಗಳು, ರಾಜಘಟ್ಟದ ಬೇರೆ ಉತ್ಖನನ ಗುಂಡಿಯಲ್ಲಿ ದೊರೆತಿವೆ. ಅವುಗಳ ಜೊತೆಗೆ ದೊರೆತಿರುವ ಇನ್ನಿತರ ಮಡಿಕೆಗಳು, ತಲಕಾಡಿನ ಉತ್ಖನನದಲ್ಲಿ ಸುಮಾರು ೮-೯ನೇ ಶತಮಾನದ್ದೆಂದು ಕಾಲ ನಿರ್ಣಯಗೊಂಡಿರುವ ಮಡಿಕೆಗಳ ರಚನೆ, ಆಕೃತಿಗಳಿಗೆ ಸಮನಾಗಿವೆ. ಹೀಗಾಗಿ ಈ ಕುಂಭ ಸಮಾಧಿಗಳ ಕಾಲವನ್ನು ಕ್ರಿ.ಶ. ೯-೧೦ನೇ ಶತಮಾನವೆಂದು ನಿರ್ಣಯಿಸಬಹುದಾಗಿದೆ.

ಕರ್ನಾಟಕದಲ್ಲಿ ಬೌದ್ಧಧರ್ಮದ ಇತಿಹಾಸವನ್ನು ಅಧ್ಯಯನ ಮಾಡಿದರೆ ಕ್ರಿ.ಶ. ೭ನೆ ಶತಮಾನದ ಕಾಲಕ್ಕೆ ಬೌದ್ಧಧರ್ಮ ದಕ್ಷಿಣಭಾರತದಲ್ಲಿ ಅವನತಿಯತ್ತ ಸಾಗಿತ್ತು ಎಂದು ತಿಳಿಯುತ್ತದೆ. ರಾಜಘಟ್ಟದ ಬೌದ್ಧನೆಲೆಯೂ ಸಹ ಸಮರ್ಪಕ ರಾಜಪೋಷಣೆ ಯಿಲ್ಲದಿದ್ದರಿಂದ ಹಾಗೂ ಹಿಂದೂ, ಜೈನಧರ್ಮಗಳ ಪ್ರಾಬಲ್ಯ ದಿಂದ ಅವನತಿ ಹೊಂದಿರಬೇಕು. ಬೌದ್ಧಧರ್ಮೀಯರ ಸಂಖ್ಯೆ ಇಳಿಮುಖವಾಗಿ ರಾಜಘಟ್ಟದ ಚೈತ್ಯಾಲಯ ಸಂಕೀರ್ಣ ನಿರ್ಲಕ್ಷ್ಯ ದಿಂದಾಗಿ ಜೀರ್ಣವಾಗಿ, ೮ನೇ ಶತಮಾನದಲ್ಲಿ ಸಂಪೂರ್ಣವಾಗಿ ನಾಶವಾಗಿರಬೇಕು. ಕ್ರಿ.ಶ. ೯-೧೦ನೇ ಶತಮಾನದಲ್ಲಿ ನಾಸ್ತಿಕರು, ನಿರ್ಗ್ರಂಥರು ಎನಿಸಿದ್ದ ಬೌದ್ಧರ ಚೈತ್ಯಾಲಯಸಂಕೀರ್ಣ ಪಾಳುಬಿದ್ದ ಸ್ಮಶಾನಪ್ರದೇಶವಾಗಿ ಉಪಯೋಗವಾಗಿರಬೇಕು.

**ಕೆಲವು ವಿವರಣೆಗಳು** : ವಿಹಾರದ ನಕ್ಷೆಯಲ್ಲಿ ಗಮನ ಸೆಳೆಯುವ ಕೆಲವು ಅಂಶಗಳು ಇವೆ. ಅವುಗಳ ಬಗ್ಗೆಯ ವಿವರಗಳು ಈ ರೀತಿ ಇವೆ.

ಒಂದನೆಯ ಕೊಠಡಿಯ ಉತ್ತರಗೋಡೆಯಲ್ಲಿ ಅರ್ಧ ಚಂದ್ರಾಕೃತಿಯ ಗುಂಡಿ ಕಾಣಬರುತ್ತದೆ. ಇದು ನಂತರದ ಕಾಲದಲ್ಲಿ ಆ ಸ್ಥಳದಲ್ಲಿ ಪ್ರಾಯಶಃ ಗಿಡವನ್ನು ನೆಡುವುದಕ್ಕೆ ಮಾಡಿರುವ ಗುಂಡಿ. ಈ ಗುಂಡಿಯ ಅರ್ಧಭಾಗ ಗೋಡೆಯ ಸ್ವಲ್ಪ ಭಾಗವನ್ನು ನುಂಗಿದೆ. ಇದೇ ರೀತಿ ಎರಡನೆಯ ಕೊಠಡಿಯ ಪೂರ್ವಗೋಡೆ ಯಲ್ಲಿಯೂ ಸಹ ಗೋಡೆಯ ನೆತ್ತಿಯ ಮೇಲೆ ಒಂದು ಸಂಪೂರ್ಣ ಗುಂಡಿಯನ್ನು ತೋಡಲಾಗಿದೆ. ವಿಹಾರದ ಪಶ್ಚಿಮದ ಗೋಡೆಯಿಂದ ಲಂಬವಾಗಿ ಒಂದು ಸಣ್ಣ ಇಟ್ಟಿಗೆಯ ಗೋಡೆ ರಸ್ತೆಯತ್ತ ಮುಂದುವರೆದಿದೆ. ಇದು ಕೇವಲ ಎರಡು ವರಿಸೆಗಳು ಮಾತ್ರ ಗೋಚರವಾಗಿದ್ದು ಇದರ ಉದ್ದೇಶ ಸದ್ಯದ ಪರಿಸ್ಥಿತಿಯಲ್ಲಿ ತಿಳಿಯಲು ಸಾಧ್ಯವಿಲ್ಲ.

**ಪ್ರಾಕಾರ** : ಚೈತ್ಯಾಲಯದ ಉತ್ತರಕ್ಕೆ ೬.೫ ಮೀಟರ್ ಅಂತರದಲ್ಲಿ ಚೈತ್ಯದ ಗೋಡೆಗೆ ಸಮಾನಾಂತರವಾಗಿ ಪ್ರಾಕಾರದ ಗೋಡೆಯನ್ನು ನಿರ್ಮಿಸಲಾಗಿದೆ. ಚೈತ್ಯಾಲಯ ಸಂಕೀರ್ಣದ ವಾಯುವ್ಯ ಮೂಲೆಯಲ್ಲಿ ಉತ್ಖನನ ಇನ್ನೂ ಆಗಬೇಕಾಗಿ ರುವುದರಿಂದ ಈ ಪ್ರಾಕಾರದ ಉತ್ತರಗೋಡೆಯ ಸಂಪೂರ್ಣ ಉದ್ದವನ್ನು ನಿಖರವಾಗಿ ಹೇಳುವುದು ಕಷ್ಟ. ಆದರೂ ಈಗ ಆಗಿರುವ ಉತ್ಖನನದ ಪ್ರಕಾರ ಇದರ ಉದ್ದ ೩೩ ಮೀಟರ್‌ಗಳು. ಇದರಲ್ಲಿ ಸ್ವಲ್ಪ ಭಾಗ ಮಣ್ಣಿನ ರಸ್ತೆಯ ಅಡಿಯಲ್ಲಿ ಅಡಗಿದೆ. ಇನ್ನು ಸ್ವಲ್ಪ ಭಾಗ ಉತ್ಖನನ ಗುಂಡಿಯ ಹೊರಭಾಗದಲ್ಲಿ ಅಡಗಿದೆ. ಇಷ್ಟಾದರೂ ಸಹ ಗೋಚರವಾದ ಭಾಗವನ್ನು ನೋಡಿದಾಗ ಈ ಪ್ರಾಕಾರಗೋಡೆ ಒಂದು ಬೃಹದಾಕಾರವಾದ ಹಾಗೂ ಒಳಮುಖ ದಲ್ಲಿ ಸಾಲಂಕೃತವಾದ ವಾಸ್ತು ನಿರ್ಮಾಣವಾಗಿತ್ತೆಂಬ ಅಂಶವನ್ನು ಮನವರಿಕೆ ಮಾಡಿಕೊಡುತ್ತದೆ.

ಪ್ರಾಕಾರಗೋಡೆಯ ಸಂಪೂರ್ಣ ಎತ್ತರವನ್ನು ತಿಳಿಯುವುದಕ್ಕೆ ಆಧಾರಗಳು ದೊರೆತಿಲ್ಲ. ಈ ಗೋಡೆಯ ಮಧ್ಯಭಾಗದಲ್ಲಿ ಅಂಗಳಕ್ಕೆ ಮುಂಚಾಚಿದ ಒಂದು ಪ್ರವೇಶದ್ವಾರವೂ ಸಹ ಇದ್ದುದಕ್ಕೆ ಪುರಾವೆ ಗಳು ದೊರೆತಿವೆ. ಪ್ರವೇಶದ್ವಾರದಲ್ಲಿ ಇರುವ ಸೋಪಾನ, ಚಂದ್ರಶಿಲೆ, ಕಟಾಂಜನ ಮುಂತಾದವುಗಳನ್ನು ಗಮನಿಸಿದರೆ ಪ್ರವೇಶದ್ವಾರ ಸಾಕಷ್ಟು ಪ್ರಮುಖದ್ವಾರವಾಗಿದ್ದಿರಬೇಕೆಂದು ಅನಿಸುತ್ತದೆ. ಈ ಪ್ರವೇಶದ್ವಾರಕ್ಕೆ ಒಂದು ಸಣ್ಣ ದ್ವಾರಮಂಡಪವೂ ಇದ್ದ ಸೂಚನೆಗಳು ದೊರೆತಿವೆ. ಮಂಡಪಕ್ಕೆ ಮೇಲ್ಛಾವಣಿಯೂ ಇದ್ದಿರಬೇಕು. ಇವೆಲ್ಲವನ್ನೂ ಗಮನಿಸಿದರೆ ಪ್ರಾಕಾರ ಸಾಕಷ್ಟು ಎತ್ತರವಾಗಿದ್ದಿರಬೇಕು. ಪೂರ್ವದಿಕ್ಕಿನ ಪ್ರಾಕಾರಕ್ಕೆ ಬದಲಾಗಿ ವಿಹಾರ ನಿರ್ಮಾಣವಾಗಿರುವುದರಿಂದ ಉತ್ತರಪ್ರಾಕಾರ ಗೋಡೆಯೂ ಹೆಚ್ಚೂ ಕಡಿಮೆ ವಿಹಾರದ ಗೋಡೆಯ ಮಟ್ಟದಲ್ಲೇ ಇದ್ದಿರಬೇಕು. ಪ್ರಾಕಾರಗೋಡೆಯ ದಪ್ಪ ೧.೪೦ ಮೀಟರ್‌ಗಳು. ಇಷ್ಟು ದಪ್ಪಗೋಡೆಯಿದ್ದ ಮೇಲೆ ಅದರ ಎತ್ತರವೂ ಸಹ ಸುಮಾರು ಮೂರು ಮೀಟರ್‌ಗಳಷ್ಟು ಇದ್ದಿರಬೇಕೆಂದು ಊಹಿಸಬಹುದು. ಈ ಎತ್ತರ ಸಾಮಾನ್ಯವಾಗಿ ಆ ಕಾಲದ ಎಲ್ಲಾ ದೇವಾಲಯ ಗಳಲ್ಲೂ ಕಾಣ ಬರುವ ಪ್ರಾಕಾರದ ಎತ್ತರಕ್ಕೆ ಸರಿಹೊಂದುತ್ತದೆ.

ಪ್ರಾಕಾರದ ಗೋಡೆಯನ್ನೂ ಸಹ ಬಹಳ ಶ್ರದ್ಧೆಯಿಂದ ನಿರ್ಮಿಸಿರುವುದು ಅದರ ನಿರ್ಮಾಣ ವಿಧಾನದಲ್ಲಿ ಕಾಣಬರುತ್ತದೆ. ಗೋಡೆಯ ಹೊರಮುಖ ಬಹಳ ಸರಳವಾಗಿದೆ. ಉತ್ಖನನದಲ್ಲಿ ಬಿಡಿಸಲಾದ ಗೋಡೆಯ ಈ ಮುಖದ ಒಟ್ಟು ಉದ್ದ ಎಂಟು

ಮೀಟರ್‌ಗಳು. ಸಂಕೀರ್ಣದ ಇತರ ಭಾಗಗಳನ್ನು ನಿರ್ಮಿಸಿರುವಂತೆ ಗೋಡೆಯ ನಿರ್ಮಾಣದಲ್ಲೂ ಸಹ ಅತ್ಯಂತ ಕೆಳಗಿನ ನಾಲ್ಕು ವರಿಸೆಗಳನ್ನು ಸ್ವಲ್ಪ ವಿರಳವಾಗಿ ನಿರ್ಮಿಸಿ ಅದರ ಮೇಲೆ ನೀಟಾಗಿ ಗೋಡೆಯನ್ನು ಕಟ್ಟಿದ್ದಾರೆ. ಗೋಡೆಯ ಹೊರಮುಖದಲ್ಲಿ ಒಟ್ಟು ೨೬ ವರಿಸೆಗಳು ಉತ್ಖನನದಲ್ಲಿ ಕಂಡು ಬಂದಿವೆ. ಅವುಗಳಲ್ಲಿ ನಾಲ್ಕು ಪಾಯದ ವರಿಸೆಗಳು, ಉಳಿದವು ಅಚ್ಚುಕಟ್ಟಾಗಿ ನಿರ್ಮಿಸಿದ ೧೮ ಗೋಡೆಯ ವರಿಸೆಗಳು. ಯಾವುದೋ ನಿರ್ದಿಷ್ಟ ಕಾರಣದಿಂದ ೧೬ನೆಯ ವರಿಸೆಯನ್ನು ಮಾತ್ರ ೩ ಸೆಂ.ಮೀ. ನಷ್ಟು ಹೊರ ಚಾಚುವಂತೆ ಮಾಡಿದ್ದಾರೆ. ವರಿಸೆಗಳನ್ನು ಬಹಳ ಅಚ್ಚುಕಟ್ಟಾಗಿ ಕೂರಿಸಿ ಉದ್ದಕ್ಕೂ ನೆಲಮಟ್ಟವನ್ನು ಕಾಪಾಡಿಕೊಂಡು ಬಂದಿದ್ದಾರೆ. ಒಳಮುಖ ಹಾಗೂ ಹೊರಮುಖಗಳಲ್ಲಿ ನೀಟಾದ ಇಟ್ಟಿಗೆಗಳನ್ನು ನಾಟಾಗಿ, ಪಾಟಾಗಿ ಇಟ್ಟು ಇವೆರಡರ ಮಧ್ಯಭಾಗವನ್ನು ತುಂಡು ಇಟ್ಟಿಗೆಗಳನ್ನು ಸೇರಿಸಿ ಕಟ್ಟಿದ್ದಾರೆ. ಈ ಮೂಲಕ ಗೋಡೆಯ ಭದ್ರತೆಯನ್ನು ಉಳಿಸಿ ವಿತವ್ಯಯವನ್ನು ಸಾಧಿಸಿದ್ದಾರೆ. ಇಟ್ಟಿಗೆಯ ವರಿಸೆಗಳ ನಿರ್ಮಾಣದಲ್ಲಿ ಎಲ್ಲೂ ಗಾರೆಯ ಬಳಕೆಯಾಗಿಲ್ಲ. ಕೇವಲ ಶುದ್ಧ ಜೇಡಿಮಣ್ಣನ್ನು ಬಳಸಿ ಇಟ್ಟಿಗೆಗಳನ್ನು ಕೂಡಿಸಿದ್ದಾರೆ. ಗೋಡೆಯ ಹೊರಮುಖದಲ್ಲಿ ಗಾರೆಯ ಗಿಲಾವ್ ಮಾಡಿರುವ ಸೂಚನೆ ಕಂಡು ಬಂದಿಲ್ಲ. ಕೇವಲ ಒಳಮುಖದಲ್ಲಿ ಮಾತ್ರ ಗಾರೆ ಗಿಲಾವ್ ಮಾಡಿರುವ ಸೂಚನೆಗಳು ಸಾಕಷ್ಟಿವೆ.

ಪ್ರಾಕಾರ ಗೋಡೆಯ ಒಳಮುಖ ಸಾಕಷ್ಟು ಕುತೂಹಲಕಾರಿಯಾದ ವಾಸ್ತುವಿವರಗಳನ್ನು ಒಳಗೊಂಡಿದೆ. ಗೋಡೆಯನ್ನು ನಿರ್ಮಿಸಿ ಅದಕ್ಕೆ ಅನೇಕ ರೀತಿಯ ಮುಂಬಣೆಗಳನ್ನು ಸೇರಿಸಿ ಕಟ್ಟಿದ್ದಾರೆ. ಈ ಎಲ್ಲಾ ಮುಂಬಣೆಗಳನ್ನು ಮೂಲಗೋಡೆಯ ನಿರ್ಮಾಣದ ನಂತರದಲ್ಲಿ ಗೋಡೆಗೆ ಒತ್ತಿಕೊಂಡಂತೆ ನಿರ್ಮಿಸಿದ್ದಾರೆ. ಮೂಲಗೋಡೆ ಒಳಭಾಗದಲ್ಲಿ ಹೆಚ್ಚು ಆಕರ್ಷಕವಾಗಿ ಇರುವಂತೆ ಮಾಡಿರುವುದೂ ಒಂದು ವಿಶೇಷ. ನೆಲದಿಂದ ಎಂಟು ವರಿಸೆಗಳ ಮೇಲೆ (೬೦ ಸೆಂ.ಮೀ.) ವರಿಸೆಗಳು ಸ್ವಲ್ಪ ಹಿಂದಕ್ಕೆ ಸರಿಯುತ್ತವೆ. ಇದರಿಂದಾಗಿ ಸುಮಾರು ೨೦ ಸೆಂ.ಮೀ. ನಷ್ಟು ಕಟ್ಟೆ ಗೋಡೆಯಲ್ಲಿ ಕಾಣಬರುತ್ತದೆ. ಇದರ ಮೇಲೆ ೬ ವರಿಸೆ (೪೫ ಸೆಂ.ಮೀ) ಗೋಡೆ ನೇರವಾಗಿ ನಿರ್ಮಿಸಿದ್ದಾರೆ. ಇದರ ಮೇಲೆ ಆಳವಾದ ಗಾಡಿಯಿಂದ ಪ್ರತ್ಯೇಕವಾದ 'ಕುಮುದ' ದಿಂಡು ಇದೆ. 'ಕುಮುದ' ಮೂರು ಮುಖವಾಗಿದ್ದು, ಮೂರು ವರಿಸೆಗಳಲ್ಲಿ ನಿರ್ಮಾಣವಾಗಿದೆ. ಕೆಳ ಮತ್ತು ಮೇಲಿನ ವರಿಸೆಗಳು ಮುಮ್ಮೂಲೆಯನ್ನು ಓರೆಯಾಗಿ ಕತ್ತರಿಸಿದ ಇಟ್ಟಿಗೆಗಳಿಂದ ಕಟ್ಟಲಾಗಿದೆ. ಮಧ್ಯದ ವರಿಸೆ ಸಾಧಾರಣ ರೀತಿಯ ಇಟ್ಟಿಗೆಯಿಂದಾಗಿದೆ. 'ಕುಮುದದ' ಒಟ್ಟು ದಪ್ಪ ಸುಮಾರು ೨೩ ಸೆಂ.ಮೀ ನೆಲಮಟ್ಟದಿಂದ ಸುಮಾರು ಒಂದು ಮೀಟರ್ ಎತ್ತರದಲ್ಲಿ 'ಕುಮುದ' ಪಟ್ಟಿಯ ಈ ಅಲಂಕರಣ ಗೋಡೆಯಲ್ಲಿ ಪ್ರಧಾನವಾಗಿ ಕಾಣಬರುತ್ತದೆ. 'ಕುಮುದ' ಪಟ್ಟಿಯ ಮೇಲ್ಭಾಗದ ಗೋಡೆ ದುರದೃಷ್ಟವಶಾತ್ ಸಂಪೂರ್ಣನಾಶವಾಗಿದೆ. ಉತ್ಖನನದಲ್ಲಿ ದೊರೆತಿರುವ ವಿವಿಧಾಕಾರದ, ಗಾತ್ರದ ಸುಟ್ಟಮಣ್ಣಿನ ಅಲಂಕಾರಿಕ ಡಿಜೈನುಗಳು, ಪ್ರಾಕಾರ ಗೋಡೆಯ ಮೇಲ್ಭಾಗವನ್ನು ಸುಂದರ ಸೂಕ್ಷ್ಮ ಅಲಂಕರಣಗಳಿಂದ ಕಂಗೊಳಿಸುವಂತೆ ನಿರ್ಮಿಸಿದ್ದರು ಎಂದು ಸೂಚಿಸುತ್ತದೆ.

ಗೋಡೆಯ ಒಳಮುಖದಲ್ಲಿ, ಗೋಡೆಗೆ ಒತ್ತಿಕೊಂಡಂತೆ ಕೋಷ್ಠರೀತಿಯ ಗುಡಿಗಳನ್ನು ನಿರ್ಮಿಸಿದ್ದಾರೆ. ಪ್ರಾಕಾರ ಗೋಡೆಯ ಪಶ್ಚಿಮಾರ್ಧಭಾಗದಲ್ಲಿ ಕೋಷ್ಠಗುಡಿಗಳ ನಿರ್ಮಾಣ ವಿಧಾನವನ್ನು ಪ್ರಾಯಶಃ ಪೂರ್ಣವಾಗಿ ಕಾಣಬಹುದು. ಈ ಭಾಗದಲ್ಲಿ ಎರಡು ಕೋಷ್ಠಗುಡಿಗಳಿವೆ. ಅಗಲದಲ್ಲಿ ಒಂದು ಚಿಕ್ಕದು, ಮತ್ತೊಂದು ದೊಡ್ಡದು. ಚಿಕ್ಕದರ ಅಗಲ ೧.೫೦ ಮೀಟರ್, ದೊಡ್ಡದರ ಅಗಲ ೨.೬೦ ಮೀಟರ್. ಎರಡೂ ಸಹ ಗೋಡೆಯಿಂದ ಸುಮಾರು ೬೦ ಸೆಂ.ಮೀ. ಹೊರಕ್ಕೆ ಚಾಚಿದೆ. ಆದರೆ ಯಾವುದೂ ಸಹ ಗೋಡೆಯ ಇಟ್ಟಿಗೆಯ ವರಿಸೆಯೊಳಕ್ಕೆ ಜಂಟಿಯಾಗಿಲ್ಲ. ಪ್ರಾಕಾರ ಗೋಡೆಯ ಪೂರ್ವಪಾರ್ಶ್ವ ಸಂಪೂರ್ಣವಾಗಿ ಗೋಚರವಾಗಿಲ್ಲ. ಆದ್ದರಿಂದ ಈ ಭಾಗದಲ್ಲಿ ಕೇವಲ ಒಂದು ಸಣ್ಣ ಕೋಷ್ಠಗುಡಿ ಮಾತ್ರ ಕಂಡು ಬಂದಿವೆ.

ಕೋಷ್ಠಗುಡಿಗಳ ವಿವರಣೆಗೆ ಬರುವುದಾದರೆ ಇವುಗಳಿಗೂ ಸಹ ಸರಳವಾಗಿ ಅಲಂಕರಿಸಿದ ಅಧಿಷ್ಠಾನಗಳಿವೆ. ಇಟ್ಟಿಗೆಯ ನೆಲಹಾಸಿನ ಮೇಲೆ ಸುಮಾರು ೫೦ ಸೆಂ.ಮೀ. ಎತ್ತರದ ಪೀಠದ ಮೇಲೆ ಸುತ್ತಲೂ ಸ್ವಲ್ಪ ಕಟ್ಟೆಯನ್ನು ಬಿಟ್ಟು ಕೋಷ್ಠವನ್ನು ನಿರ್ಮಿಸಲಾಗಿದೆ. ಮೂರು ವರಿಸೆ ಇಟ್ಟಿಗೆಯ ಪೀಠವನ್ನು ಕಟ್ಟಿ ಇದರ ಎರಡೂ ಪಾರ್ಶ್ವಗಳಲ್ಲಿ ಇಟ್ಟಿಗೆಯ ಗೋಡೆಯನ್ನು ಮೇಲೇರಿಸಿದ್ದಾರೆ. ೨೦ ಸೆಂ.ಮೀ. ಅಗಲದ ೬೦ ಸೆಂ.ಮೀ. ಮುಂದಕ್ಕೆ ಚಾಚಿದ ಈ ಗೋಡೆಗಳ ಮಧ್ಯದಲ್ಲಿ ಸುಮಾರು ಒಂದು ಮೀಟರ್ ಅಗಲದ ಗೂಡನ್ನು ಮಾಡಲಾಗಿದೆ. ಪಾರ್ಶ್ವಗೋಡೆಗಳ ಮೂರೇ ವರಿಸೆಗಳು ಮಾತ್ರ ದೊರಕಿರುವುದರಿಂದ ಈ ಕೋಷ್ಠದ ಎತ್ತರವನ್ನು ನಿರ್ಧರಿಸುವುದು ಕಷ್ಟ.

ಪ್ರಾಕಾರಗೋಡೆಯ ಪಶ್ಚಿಮಾರ್ಧದ ತುದಿಯಲ್ಲಿರುವ ದೊಡ್ಡಕೋಷ್ಠಗುಡಿಯು ಇದೇ ರೀತಿ ನಿರ್ಮಾಣವಾಗಿದೆ. ಆದರೆ ಇದರ ಮೇಲ್ಭಾಗ ಇನ್ನೂ ಹೆಚ್ಚು ಘಾಸಿಗೊಂಡಿರುವುದರಿಂದ ಇದರ ಸ್ವರೂಪ ಅರಿಯುವುದು ಕಷ್ಟ. ಪ್ರಾಯಶಃ ಅಗಲವಾದ ಕೋಷ್ಠವನ್ನು ಇದು ಹೊಂದಿದ್ದಿರಬೇಕು.

ಪ್ರಾಕಾರದ ಒಳಮುಖದಲ್ಲಿ ಕಂಡು ಬಂದಿರುವ ಈ ಕೋಷ್ಠ ಗುಡಿಗಳು ವಾಸ್ತುವಿನ್ಯಾಸ ದೃಷ್ಟಿಯಿಂದ ಬಹಳ ಮಹತ್ವವಾದದ್ದು. ಪ್ರಾಕಾರದ ಒಳಭಾಗದಲ್ಲಿ ಇಂತಹ ಕೋಷ್ಠಗುಡಿಗಳು ನಂತರದ ಶಿಲಾವಾಸ್ತು ನಿರ್ಮಾಣಗಳಲ್ಲಿ ಕಾಣಬರುತ್ತವೆ. ಕಂಚಿಯ ಕೈಲಾಸನಾಥ ದೇವಾಲಯ ಈ ರೀತಿಯ ಕೋಷ್ಠಗುಡಿಗಳಿಗೆ ಒಂದು ಉತ್ತಮ ನಿದರ್ಶನವಾಗಿದೆ. ಕ್ರಿ.ಶ. ಸುಮಾರು ೬೭೦ರಲ್ಲಿ

ನಿರ್ಮಾಣವಾದ ಕೈಲಾಸನಾಥ ದೇವಾಲಯದ ಪ್ರಾಕಾರದ ಒಳಮುಖದಲ್ಲಿ ಸಾಲಾಗಿ ಪಕ್ಕಪಕ್ಕ ದಲ್ಲಿ, ಅನೇಕ ಕೋಷ್ಠಗುಡಿಗಳು ಕಾಣಬರುತ್ತವೆ. ಪ್ರತಿಯೊಂದು ಕೋಷ್ಠಗಳೂ ಪ್ರಾಕಾರದ ಗೋಡೆಗೆ ಒತ್ತಿಕೊಂಡಂತಿದ್ದು, ಪ್ರತಿ ಕೋಷ್ಠಗುಡಿಗೂ ಪ್ರತ್ಯೇಕವಾದ ಒಂದು ಸಾಲಂಕೃತ ಅಧಿಷ್ಠಾನ, ಸಣ್ಣ ಸಣ್ಣ ಕಂಬಗಳನ್ನು ಮುಂದೆ ಹೊಂದಿರುವ ಕೋಷ್ಠ, ಒಳಗಡೆ ಕೋಷ್ಠಶಿಲ್ಪ ಮತ್ತು ಮೇಲ್ಭಾಗದಲ್ಲಿ ಪುಟ್ಟದಾದ ಒಂದು ಶಿಖರ ಕಾಣಬರುತ್ತವೆ.

ರಾಜಘಟ್ಟ ಚೈತ್ಯಪ್ರಾಕಾರದ ಒಳಮುಖದಲ್ಲಿರುವ ಈ ಕೋಷ್ಠಗುಡಿಗಳನ್ನು, ಇವುಗಳ ವಿವರಗಳು ಸಂಪೂರ್ಣ ಅಲಭ್ಯ ವಾಗಿದ್ದರೂ, ಕೈಲಾಸನಾಥ ದೇವಾಲಯ ಪ್ರಾಕಾರದ ಕೋಷ್ಠ ಗುಡಿಗಳ ಪೂರ್ವರೂಪಗಳೆಂದು ಪರಿಗಣಿಸಬಹುದಾಗಿದೆ. ರಾಜಘಟ್ಟ ಚೈತ್ಯಾಲಯದ ಕಾಲ ಖಂಡಿತವಾಗಿ ಕೈಲಾಸನಾಥ ದೇವಾಲಯದ ನಿರ್ಮಾಣ ಕಾಲಕ್ಕಿಂತಲೂ ಕನಿಷ್ಠಪಕ್ಷ ಒಂದು ಶತಮಾನ ಮುಂಚಿತ. ಇದರಿಂದಾಗಿ ದಕ್ಷಿಣ ಭಾರತದಲ್ಲಿ ಪುರಾತನ ಇಟ್ಟಿಗೆಯ ವಸ್ತು ಮಾದರಿಗಳು ನಂತರದ ಶಿಲಾವಾಸ್ತು ಮಾದರಿ ಗಳಿಗೆ ಪ್ರೇರಣೆಯಾದವು ಎಂದು ನಿಖರವಾಗಿ ಹೇಳಬಹುದು. ಈ ಪುರಾತನ ವಾಸ್ತು ಮಾದರಿ ಕರ್ನಾಟಕದಲ್ಲಿ ನಮಗೆ ದೊರೆತಿರುವುದು ನಮ್ಮೆಲ್ಲರಿಗೆ ಹೆಮ್ಮೆ ತರುವ ವಿಷಯವಲ್ಲವೆ!

ಪ್ರಾಕಾರಗೋಡೆಯ ಮಧ್ಯಭಾಗದಲ್ಲಿ ಸವಿಸ್ತಾರವಾಗಿ ರೂಪಿಸಿ ನಿರ್ಮಿಸಿದ ಒಂದು ಮಂಡಪವಿದ್ದಂತಿದೆ. ಈ ದ್ವಾರ ಮಂಡಪಕ್ಕಾಗಿ ಸುಮಾರು ೫.೫೦ ಮೀಟರ್. ಮೀಟರ್ ಅಗಲ ೧ ಮೀಟರ್, ಹೊರಕ್ಕೆ ಚಾಚಿರುವ ಮುಂಬಣೆ ಇದೆ. ಇದರ ಮಧ್ಯಭಾಗದಲ್ಲಿ ೨೦ ಸೆಂ.ಮೀ. (ಆಳ) x ೨.೦೦ ಮೀಟರ್ (ಉದ್ದ) x ೧೫ ಸೆಂ.ಮೀ. (ದಪ್ಪ) ಅಳತೆಯ ಎರಡು ಕಲ್ಲಿನ ಸೋಪಾನಗಳಿವೆ. ಮೂರನೆಯ ಮೆಟ್ಟಿಲ ಕಲ್ಲು ಕಾಣೆಯಾಗಿದೆ. ಈ ಮೆಟ್ಟಿಲುಗಳ ಸರಾಸರಿ ಎತ್ತರ ೨೫ ಸೆಂ.ಮೀಗಳು ಸೋಪಾನದ ಬುಡದಲ್ಲಿ ಗ್ರಾನೈಟ್ ಕಲ್ಲಿನಲ್ಲಿ ಮಾಡಿದ ಒಂದು ಚಂದ್ರಶಿಲೆ ಇದೆ. ಇದರ ಅಗಲ ೨ ಮೀಟರ್ ಮತ್ತು ತ್ರಿಜ್ಯ ೮೦ ಸೆಂ.ಮೀ., ದಪ್ಪ ೧೫ ಸೆಂ.ಮೀ.

ಈ ಸೋಪಾನಕ್ಕೆ ಇಟ್ಟಿಗೆಯಲ್ಲಿ ನಿರ್ಮಿತವಾದ ಕಟಾಂಜನ ವಿದೆ. ಕಟಾಂಜನದ ಮುಂದಿನ ತುದಿಯನ್ನು ಅಲ್ಲಿಗೆಂದೇ ವಿಶೇಷ ವಾಗಿ ರೂಪಿಸಿ ಮಾಡಲಾದ ಇಟ್ಟಿಗೆಗಳಿಂದ ನಿರ್ಮಿಸಿದ್ದಾರೆ. ಇದರಿಂದಾಗಿಯೆ ಈ ಭಾಗಕ್ಕೆ ಇಳಿಜಾರಾದ ಮುಂಭಾಗವಿದೆ. ಇದರ ಮುಂದೆ ತುದಿಯಲ್ಲಿದ್ದ ಕಟಾಂಜನದ ಭಾಗ ಬಿದ್ದುಹೋಗಿದೆ.

ಸೋಪಾನದ ಬಲಪಾರ್ಶ್ವದಲ್ಲಿ, ಸೋಪಾನದ ಮುಂಚಾಚಿದ ಭಾಗವನ್ನೂ ಸೇರಿಸಿಕೊಂಡು ಒಂದು ಸಣ್ಣ ಹರಕೆಯ ಕುಂಡವನ್ನು ನಿರ್ಮಿಸಿದ್ದಾರೆ. ಈ ಕುಂಡಕ್ಕೆ ದಕ್ಷಿಣ ಮತ್ತು ಪಶ್ಚಿಮ ಭಾಗಗಳಿಗೆ ಕಲ್ಲು ಚಪ್ಪಡಿಯಿದೆ. ಉತ್ತರ ಮತ್ತು ಪೂರ್ವಭಾಗಕ್ಕೆ ಸೋಪಾನದ ಕಟ್ಟೆಯಿದೆ. ಹರಕೆಯ ಕುಂಡದ ಆಳ ಸುಮಾರು ೩೦ ಸೆಂ.ಮೀ.ಗಳು[೨].

ದ್ವಾರದ ಉತ್ತರ ಮುಖ ಯಾವ ರೀತಿ ಇತ್ತೆಂದು ಸದ್ಯದ ಪರಿಸ್ಥಿತಿಯಲ್ಲಿ ತಿಳಿಯದಾಗಿದೆ. ಏಕೆಂದರೆ ಈ ಭಾಗದಲ್ಲಿ ಇನ್ನೂ ಉತ್ಖನನ ನಡೆಯಬೇಕಿದೆ. ಪ್ರಾಕಾರದ ಒಳಮುಖದಲ್ಲಿ ದ್ವಾರದ ಇಕ್ಕೆಲಗಳಲ್ಲಿ ಇರುವ ಮುಂಬಣೆಯನ್ನು ಪರಿಶೀಲಿಸಿದರೆ ದ್ವಾರ ಮಂಡಪವೊಂದು ಈ ಸ್ಥಳದಲ್ಲಿ ಇದ್ದಿರಬಹುದೆಂದು ಅನುಮಾನ ಮೂಡುತ್ತದೆ. ಅದರೆ ಅದನ್ನು ನಿಷ್ಕರ್ಷಿಸಲು ದ್ವಾರದ ಉತ್ತರ ಮುಖದಲ್ಲೂ ಉತ್ಖನನ ನಡೆಯಬೇಕಾಗಿದೆ.

ಪ್ರಾಕಾರದ ಒಳಭಾಗದಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ ಕಲ್ಲು ಚಪ್ಪಡಿಗಳು, ಪ್ರಾಕಾರದ ಅಂಗಳಕ್ಕೆ ಕಲ್ಲು ಚಪ್ಪಡಿಗಳ ಹಾಸು ಇತ್ತು ಎಂಬುದನ್ನು ಸೂಚಿಸುತ್ತವೆ. ಚೈತ್ಯಾಲಯವು ಅನಾಥವಾದ ನಂತರ ಅಲ್ಲಿಯ ಕಟ್ಟಡ ಸಾಮಗ್ರಿಗಳನ್ನು ಸ್ಥಳೀಯರು ಅಲ್ಲಿಂದ ಲೂಟಿಮಾಡಿರಲೂಬಹುದು. ಹೀಗಾಗಿ ಅಳಿದುಳಿದ ಅಲ್ಪಸ್ವಲ್ಪ ಭಾಗಗಳು ಮಾತ್ರ ನಮಗೆ ಲಭ್ಯವಾಗಿದೆ ಎನ್ನಬಹುದು. ಇಂತಹ ಒಂದೆರಡು ಕುತೂಹಲಕಾರಿ ವಸ್ತುಗಳು ಇಲ್ಲಿ ಉಲ್ಲೇಖನೀಯ. ಅದರಲ್ಲಿ ಮೊದಲನೆಯದೆಂದರೆ ಆಯಕ ಸ್ತಂಭದ ತುಂಡುಗಳು. ಚೈತ್ಯದ ಆಗ್ನೇಯ ಭಾಗದಲ್ಲಿ ತುಂಡು ಕಟ್ಟೆಯೊಳಕ್ಕೆ ನೆಡಲಾಗಿರುವ ಕಲ್ಲಿನ ಸ್ತಂಭದ ಕೆಳಭಾಗ ಪತ್ತೆಯಾಗಿದೆ. ಒರಟಾದ ಬುಡಭಾಗ ಅದರ ಮೇಲೆ ಸ್ವಲ್ಪಭಾಗ ಚೌಕಟ್ಟಾಗಿದ್ದು ಇದು ಆಯಕಸ್ತಂಭದ ಬುಡವೆಂದು ಹೇಳಬಹುದು. ಈ ಕಟ್ಟೆ ಆಯಕ ಕಟ್ಟೆಯ ಭಾಗ ಎಂಬುದು ಕೇವಲ ಊಹೆ ಮಾತ್ರ. ಇದೇ ರೀತಿ ಆಯಕ ಸ್ತಂಭದ ಒಂದು ತುಂಡು ಚೈತ್ಯದ ಈಶಾನ್ಯಮೂಲೆಯಲ್ಲಿ ದೊರೆತಿದೆ. ಇದು ಕಂಭದ ಮೇಲ್ಭಾಗವಾಗಿದ್ದು ಇದರ ನೆತ್ತಿಯಲ್ಲಿ ಉಷ್ಣೀಷವು (ಗುಬುಟು) ಇದೆ. ಇದೇ ರೀತಿಯ ಆಯಕ ಸ್ತಂಭದ ಮತ್ತೊಂದು ತುಂಡು ಪ್ರಾಕಾರದ ಆಗ್ನೇಯ ಮೂಲೆಯ ಹೊರಭಾಗದಲ್ಲಿ ದೊರಕಿದೆ.

**ಪ್ರಾಚ್ಯವಸ್ತುಗಳು** : ಉತ್ಖನನದಲ್ಲಿ ಹಲವಾರು ಕುತೂಹಲ ಕಾರಿಯಾದ ಪ್ರಾಚ್ಯವಸ್ತುಗಳು ದೊರೆತವು. ಇವುಗಳೆಂದರೆ ಆಕರ್ಷಕವಾಗಿ ರೂಪಿಸಿ ಸಿದ್ಧಪಡಿಸಲಾಗಿರುವ ಇಟ್ಟಿಗೆಗಳು, ಗಾರೆ ಗಚ್ಚಿನ ಶಿಲ್ಪಗಳೂ, ಲೋಹದ ವಸ್ತುಗಳು, ಕಲ್ಲಿನ ವಸ್ತುಗಳು ಇತ್ಯಾದಿ. ಇವುಗಳೆಲ್ಲದರ ಒಂದು ಸಂಕ್ಷಿಪ್ತ ವಿವರಣೆಯನ್ನು ಈ ಕೆಳಗೆ ನೀಡಲಾಗಿದೆ.

ರಾಜಘಟ್ಟ ಉತ್ಖನನದ ಬಗೆಗಿನ ಈ ಮುಂಚಿನ ಲೇಖನ ದಲ್ಲಿ ಉತ್ಖನನದಲ್ಲಿ ದೊರೆತ ಇಟ್ಟಿಗೆಗಳ ಬಗ್ಗೆ ಸಾಕಷ್ಟು ವಿವರಣೆಗಳನ್ನು ನೀಡಿದ್ದೆವು. ಅವುಗಳೆಲ್ಲವೂ ಚೈತ್ಯಾಲಯದಲ್ಲಿ ಬಳಸಿದ ಇಟ್ಟಿಗೆಗಳ ವಿವರಣೆಗಳಾಗಿವೆ. ಪ್ರಾಕಾರದ ಗೋಡೆಯ ಭಾಗವನ್ನು ಉತ್ಖನನ ಮಾಡಿದಾಗ ಅಲ್ಲಿಯೂ ಸಹ ವಿಧವಿಧವಾಗಿ ರೂಪಿಸಲ್ಪಟ್ಟ ಇಟ್ಟಿಗೆಗಳು ಇನ್ನೂ ಹೆಚ್ಚಿನ ವಿಧಗಳಲ್ಲಿ ಕಂಡು ಬಂದವು. ಇವುಗಳೆಲ್ಲವೂ ಪ್ರಾಕಾರ ಗೋಡೆಯ ಮೇಲ್ಭಾಗದಲ್ಲಿ ಕಾಣಬರುವ ತಳಿರು-ತೋರಣಗಳ ರೀತ್ಯಾ, ದಂತಪಂಕ್ತಿಯ ರೀತ್ಯಾ

ಇನ್ನಿತರ ದಿಂಡು, ಅಲಂಕರಣಗಳಿಗೆ ಸರಿಹೊಂದುವ ರೀತ್ಯಾ ಮಾಡಿದಂತಹದ್ದಾಗಿವೆ[೩]. ಉತ್ಖನನದಲ್ಲಿ ಅನೇಕ ಗಾರೆಯ ಗಚ್ಚಿನ ಶಿಲ್ಪಗಳ ತುಣುಕುಗಳೂ ಸಹ ಕಂಡು ಬಂದವು. ಕಾಲಪುರುಷನ ಪ್ರಭಾವದಿಂದಾಗಿ ಇವುಗಳು ಬಹಳಷ್ಟು ಶಿಥಿಲವಾಗಿವೆ. ಇವುಗಳಲ್ಲಿ ಬಹಳಷ್ಟು ಆಗಲೇ ವರದಿಯಾಗಿರುವ ಗಾರೆಗಚ್ಚು ಶಿಲ್ಪರೂಪಗಳಿಗೆ ಸಮವಾಗಿವೆ. ಈ ಗಾರೆ ಗಚ್ಚು ಶಿಲ್ಪ ತಯಾರಿಕೆಯಲ್ಲಿ ಅನುಸರಿಸಿರುವ ಒಂದು ಬಹಳ ಸ್ವಾರಸ್ಯಕರ ವಿಧಾನ ಉತ್ಖನನದಲ್ಲಿ ಕಂಡುಬಂದಿದೆ. ಅದೇನೆಂದರೆ ( ಬುದ್ಧನ ) ಶಿಲ್ಪಗಳಿಗೆ ತಲೆಯ ಮೇಲೆ ಛತ್ರಿಯೊಂದನ್ನು ನಾಜೂಕಾಗಿ ಹಾಗೂ ದೃಢವಾಗಿ ಗಾರೆಗಚ್ಚಿನಲ್ಲಿ ಮಾಡುವ ವಿಧಾನ. ಇದಕ್ಕಾಗಿ ಛತ್ರಿಯ ಆಕಾರದ ಕಬ್ಬಿಣದ ತಗಡಿನ ಬಾಣಲೆಯ ರೀತಿಯ ಒಂದು ವಸ್ತುಗಳನ್ನು ತಯಾರಿಸಿ, ಅದರ ಮೇಲೆ ಗಾರೆಯ ಲೇಪನ ಮಾಡಿ ಛತ್ರಿಯನ್ನು ತಯಾರಿಸುವ ವಿಧಾನ. ಈ ವಿಧಾನ ನಿಜಕ್ಕೂ ಬಹಳ ಪರಿಣಾಮಕಾರಿ ವಿಧಾನ. ಕಬ್ಬಿಣದ ಛತ್ರಿಯಷ್ಟು ದೃಢವಾಗಿರುತ್ತದೆ, ನೋಡುವುದಕ್ಕೆ ಗಾರೆಯ ಛತ್ರಿಯಂತೆ ನಾಜೂಕಾಗಿ ಕಾಣುತ್ತದೆ.

ಉತ್ಖನನದಲ್ಲಿ ತಾಮ್ರ,(ಕಂಚು) ಶಿಲ್ಪದ ಒಂದು ಬಲ ಗಾಲಿನ, (ಪಾದ) ಭಾಗ ದೊರೆಯಿತು. ಪ್ರಾಯಶಃ ನಿರಾಲಂಕೃತವಾದ ಈ ಪಾದ ನಿಂತಿರುವ ಬುದ್ಧನ ಪ್ರತಿಮೆಯ ಭಾಗವಿರಬೇಕು. ಪ್ರಾಕಾರದ ಕೋಷ್ಠಗುಡಿಯೊಂದರ ಸಮೀಪ ಇದು ದೊರಕಿರುವುದರಿಂದ ಪ್ರಾಯಶಃ ಕೋಷ್ಠಗುಡಿಯಲ್ಲಿ ಈ ಬುದ್ಧನ ವಿಗ್ರಹವನ್ನು ಸ್ಥಾಪಿಸಿದ್ದಿರಬಹುದು.

ಉತ್ಖನದಲ್ಲಿ ದೊರೆತ ಮತ್ತೊಂದು ಕುತೂಹಲಕರ ವಸ್ತುವೆಂದರೆ ಅರೆ ಅಮೂಲ್ಯ ಕಲ್ಲಿನಲ್ಲಿ (ಪ್ರಾಯಶಃ ಜೇಡ್) ಮಾಡಿರುವ ದಾರದ 'ರೀಲ್' ರೀತಿಯ ಒಂದು ವಸ್ತು. ಇದರ (ಗಾತ್ರ) ಎತ್ತರ ೫ ಸೆಂ.ಮೀ, ಅಗಲ ೩ ಸೆಂ.ಮೀ ಮಧ್ಯದಲ್ಲಿ ಮೇಲಿನಿಂದ ಕೆಳಕ್ಕೆ ಒಂದು ರಂಧ್ರವಿದೆ. ಇದು ಪ್ರಾಯಶಃ ಬೌದ್ಧಸಂನ್ಯಾಸಿಗಳು ಸದಾ ಕೈಯಲ್ಲಿ ಹಿಡಿದುಕೊಂಡು ತಿರುಗಿಸುವ 'ಧರಮ್ ಚಕ್ಕರ್' (ಧರ್ಮಚಕ್ರ) ಎಂಬ ವಸ್ತುವಿನ ಮಧ್ಯಭಾಗವಿರಬಹುದೇ ಎಂಬುದು ಕೇವಲ ಅನುಮಾನ. ಈ ರೀತಿಯ ಬಳಪದ ಕಲ್ಲಿನಲ್ಲಿ ಮಾಡಿರುವ ಕೆಲವು 'ರೀಲ್'ಗಳು ಇದೇ ನಿವೇಶನದಲ್ಲಿ ಬೇರೆಡೆ ದೊರಕಿವೆ. ತಲಕಾಡಿನ ಉತ್ಖನನದಲ್ಲೂ ಸಹ ಇದೇ ರೀತಿಯ ಕೆಲವು 'ರೀಲ್'ಗಳು ದೊರಕಿವೆ. ಇದು ಯಾವುದೇ ಮಗ್ಗದ ಬಳಕೆಯಲ್ಲಾಗಲೀ ಅಥವಾ ದಾರ ಸುತ್ತಿಡುವುದಕ್ಕಾದಕಾಗಲೀ ಮಾಡಿದ 'ರೀಲ್' ಗಳಾಗಿರುವುದಿಲ್ಲ. ಏಕೆಂದರೆ ಇದರ ಹೊರಮೈಯ ಇಕ್ಕೆಲದ ಅಂಚುಗಳು ಸ್ವಲ್ಪವೇ ಮೇಲೆದ್ದಿವೆ. ಸ್ವಲ್ಪದಾರ ಸುತ್ತಿದರೆ ಸಾಕು ದಾರ ಹೊರಕ್ಕೆ ಸರಿಯುವ ಸಾಧ್ಯತೆ ಇದೆ. ಹೀಗಾಗಿ ಇವು ದಾರ ಸುತ್ತುವ 'ರೀಲ್'ಗಳಲ್ಲ . ಇದರಲ್ಲಿ ಒಂದು ಅರೆ ಅಮೂಲ್ಯಕಲ್ಲಿನಿಂದ ಮಾಡಿರುವುದಲ್ಲದೆ ಅದರ ಮೇಲ್ಮೈ ಮೆರುಗಿನಿಂದ ಕೂಡಿದೆ. ಕೇವಲ ದಾರಸುತ್ತುವುದಕ್ಕಾಗಿ ಇಷ್ಟು ಸೊಗಸಾದ ಮೆರುಗಿನಿಂದ ಕೂಡಿದ ವಸ್ತುವನ್ನು ತಯಾರಿಸುವುದು ಕೇವಲ ಮೂಢತನವೇ ಆಗಿರುತ್ತದೆ. ಬೌದ್ಧ ಚೈತ್ಯಾಲಯದ ಆವರಣದಲ್ಲಿ ಇದು ದೊರೆತಿರುವುದರಿಂದ ಇದರ ಉಪಯೋಗ ಬೇರೆಯೇ ಆಗಿರಬೇಕು[೪]. ವಿಹಾರದ ಛಾವಣಿ ಯಾವ ಮಾಧ್ಯಮದಿಂದ ನಿರ್ಮಿಸಲ್ಪಟ್ಟಿತ್ತು ಎಂಬ ವಿಷಯದ ಬಗ್ಗೆ ಸ್ಪಷ್ಟ ತಿಳುವಳಿಕೆ ಮೂಡಿಬಂದಿಲ್ಲ. ಉತ್ಖನನದಲ್ಲಿ ಹೆಂಚಿನ ಚೂರುಗಳು ಪತ್ತೆಯಾಗಿಲ್ಲ. ಜೊತೆಗೆ ಹೆಂಚಿನ ಛಾವಣಿಯ ಮರದ ಕಟ್ಟು ನಿರ್ಮಾಣದಲ್ಲಿ ಬಳಸುವ ಕಬ್ಬಿಣದ ಮೊಳೆಗಳಾಗಲೀ, ಬೋಲ್ಟ್‌ಗಳಾಗಲೀ ಪತ್ತೆಯಾಗಿಲ್ಲ. ವಿಹಾರಕ್ಕೆ ಇಟ್ಟಿಗೆಯ ಕಮಾನಿನ ಛಾವಣಿ ನಿರ್ಮಿಸಿದ್ದರೆಂಬ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಗರಿ, ಸೋಗೆ, ಹುಲ್ಲು ಇತ್ಯಾದಿಗಳ ಛಾವಣಿ ಇತ್ತೇ ಎಂದು ಊಹಿಸುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ ಈ ರೀತಿಯ ಛಾವಣಿಗೆ ಅಗಾಧವಾದ ೮೦ ಸೆಂ.ಮೀ. ದಪ್ಪದ ಗೋಡೆ ಅವಶ್ಯಕವಿತ್ತೇ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಮರದ ಹಲಗೆಗಳಿಂದ ಮಾಡಿದ ಛಾವಣಿ ಇದ್ದರೂ ಇದ್ದಿರಬಹುದು. ಇಂತಹ ಪ್ರಸಂಗದಲ್ಲಿ ವಿಹಾರ ನಿರ್ಜನವಾಗಿ ಪಾಳುಬಿದ್ದ ನಂತರ ಅಲ್ಲಿಯ ಮರಮಟ್ಟುಗಳನ್ನು ಸ್ಥಳೀಯರು ಕಿತ್ತು ತೆಗೆದುಕೊಂಡು ಹೋಗಿದ್ದರೆ ಆ ಮರದ ಹಲಗೆ, ತೊಲೆಗಳಿಗೆ ಅಂಟಿಕೊಂಡಂತೆಯೇ ಅವುಗಳಿಗೆ ಬಳಸಿದ ಕಬ್ಬಿಣದ ವಸ್ತುಗಳೂ ಸಹ ಸ್ಥಳಪಲ್ಲಟವಾಗುತ್ತವೆ. ಈ ಕಾರಣದಿಂದಾಗಿ ಯಾವುದೇ ರೀತಿಯ ಕಬ್ಬಿಣದ ವಸ್ತುಗಳು ಉತ್ಖನನದಲ್ಲಿ ದೊರೆತಿಲ್ಲವೆಂದು ಹೇಳಬಹುದಲ್ಲವೇ ?

**ಉಪಸಂಹಾರ** : ರಾಜಘಟ್ಟ ಚೈತ್ಯಾಲಯ ಕರ್ನಾಟಕದ ಬೌದ್ಧ ವಾಸ್ತುಶಿಲ್ಪಪರಂಪರೆಯಲ್ಲೇ ಮಹತ್ವವಾದ ಒಂದು ಸ್ಮಾರಕ. ಈ ಚೈತ್ಯಾಲಯ ಸಂಕೀರ್ಣ ತನ್ನ ಸ್ವರೂಪದಿಂದಾಗಿ ವಿಸ್ತೀರ್ಣದಿಂದಾಗಿ, ವಾಸ್ತುಲಕ್ಷಣಗಳಿಂದಾಗಿ ದಕ್ಷಿಣಭಾರತದ ಬೌದ್ಧ ವಾಸ್ತುಪರಂಪರೆಯಲ್ಲೇ ವಿಶಿಷ್ಟ ಸ್ಥಾನ ಪಡೆದಿದೆ. ಉತ್ಖನನದಿಂದ ತಿಳಿದು ಬಂದಿರುವ ಇದರ ಗರಿಷ್ಠ ವಿಸ್ತೀರ್ಣ ७೮ ಣ ೩೫ ಚ ಮೀಟರ್. ಇಷ್ಟು ದೊಡ್ಡ ವಿಸ್ತೀರ್ಣವುಳ್ಳ ಏಕೈಕ ಬೌದ್ಧ ಸಂಕೀರ್ಣ ಪ್ರಾಯಶಃ ಇಡೀ ದಕ್ಷಿಣಭಾರತದಲ್ಲೇ ವಿರಳವೆನ್ನಬಹುದು. ಬೌದ್ಧ ಚೈತ್ಯಾಲಯವೆಂದು ಹೇಳಲಾಗುವ ಹಲವಾರು ಕಟ್ಟಡಗಳು ಬನವಾಸಿ, ಬ್ರಹ್ಮಗಿರಿ, ಸನ್ನತಿ ಮುಂತಾದೆಡೆ ಸಿಕ್ಕಿವೆ. ಅವುಗಳು ನಿಜಕ್ಕೂ ಬೌದ್ಧ ಚೈತ್ಯಗಳೇ ಎಂಬುದು ಹಲವೆಡೆ ಇನ್ನೂ ನಿರ್ಧಾರವಾಗಬೇಕಿದೆ. ಒಂದು ಪಕ್ಷ ಚೈತ್ಯಾಲಯವೆಂದು ರುಜುವಾತಾದರೂ ಅವುಗಳು ಒಂಟಿಯಾಗಿ ನಿರ್ಮಾಣ ವಾಗಿದ್ದವೇ ಅಥವಾ ಅವುಗಳ ಜೊತೆಗೆ ವಿಹಾರಗಳು ನಿರ್ಮಾಣಗೊಂಡಿದ್ದವೇ ಎಂಬ ಪ್ರಶ್ನೆ ಇದ್ದೇ ಇದೆ. ಈ ನಿಟ್ಟಿನಲ್ಲಿ ನೋಡಿದಾಗ ರಾಜಘಟ್ಟ ಚೈತ್ಯಾಲಯ ಸಂಕೀರ್ಣ ಕರ್ನಾಟಕದ ಬೌದ್ಧ ವಾಸ್ತುವಿನ ಸ್ವರೂಪದ ಬಗ್ಗೆ ಬಹಳ ಮಹತ್ವವಾದ ವಿವರಗಳನ್ನು ನಮಗೆ ಒದಗಿಸುತ್ತದೆ.

ರಾಜಘಟ್ಟ ಚೈತ್ಯಾಲಯ ಸಂಕೀರ್ಣವನ್ನು ಅಧ್ಯಯನ ಮಾಡಿದಾಗ ಒಂದು ಸುಸಂಪೂರ್ಣವಾದ ಬೌದ್ಧ ಧಾರ್ಮಿಕ ಕಟ್ಟಡ ಯಾವ ರೀತಿ ಇರಬೇಕು ಮತ್ತು ಇತ್ತು ಎಂಬುದರ ಅರಿವುಂಟಾಗುತ್ತದೆ.

ಈ ಚೈತ್ಯಾಲಯ ಗಜಪೃಷ್ಠಾಕಾರದ ಪ್ರಾರ್ಥನಾ ಮಂದಿರ ವಾಗಿತ್ತು. ಅದರ ಸುತ್ತ ಪ್ರದಕ್ಷಿಣ ಪಥ, ಪ್ರದಕ್ಷಿಣ ಪಥಕ್ಕೆ ಅಲ್ಲಲ್ಲಿ ಬೆಳಕಿಗಾಗಿ ಮಾಡಿದ ತೆರವುಗಳು ಅಥವಾ ಕಿಟಕಿಗಳು, ಮಧ್ಯೇ ಮಧ್ಯೇ ದೇವಕೋಷ್ಠಗಳು, ಗೋಡೆ ತೆರವಿದ್ದ ಜಾಗದಲ್ಲಿ ಕಟಾಂಜನ ಅಥವಾ ಜಾಲಂಧ್ರಗಳು, ಚೈತ್ಯಾಲಯದ ಮುಂದೆ ಪ್ರವೇಶದ್ವಾರ, ಸೋಪಾನ, ಚಂದ್ರಶಿಲೆ, ಕಟಾಂಜನ ಇತ್ಯಾದಿ. ಇವಿಷ್ಟೂ ಮೂಲ ಚೈತ್ಯಾಲಯದ ವಾಸ್ತುಲಕ್ಷಣಗಳು. ಚೈತ್ಯಾಲಯದ ಸುತ್ತಲೂ ವಿಶಾಲವಾದ ಪ್ರಾಂಗಣ, ಪ್ರಾಂಗಣದ ಸುತ್ತಲೂ ಎತ್ತರವಾದ ಪ್ರಾಕಾರ ಗೋಡೆ, ಪ್ರಾಕಾರದ ಒಳಮುಖದಲ್ಲಿ ಸಾಲಾಗಿ ನಿರ್ಮಿಸಿದ ವಿಹಾರದ ಕೊಠಡಿಗಳು, ಇಲ್ಲವೇ ಕೋಷ್ಠಗುಡಿಗಳು, ಪ್ರಾಕಾರಕ್ಕೆ ಅಲ್ಲಲ್ಲಿ ಪ್ರವೇಶದ್ವಾರಗಳು, ಪ್ರಾಂಗಣದ ವಿವಿಧ ದಿಕ್ಕುಗಳಲ್ಲಿ ಆಯಕ ಸ್ತಂಭಗಳು, ಚಪ್ಪಡಿಹಾಸಿದ ನೆಲ, ಹರಕೆ ಕುಂಡ ಹೀಗೆ ಹಲವಾರು ಲಕ್ಷಣಗಳನ್ನೂ ಅನುಕೂಲಗಳನ್ನೂ ಹೊಂದಿರುವ ಒಂದು ಬೌದ್ಧ ಚೈತ್ಯಾಲಯದ ಸಂಕೀರ್ಣ ದೊರೆತಿ ರುವುದು ಕರ್ನಾಟಕದಲ್ಲಿ ಇದೇ ಮೊತ್ತಮೊದಲಬಾರಿಗೆ ಎಂಬು ದಂತೂ ಸತ್ಯ. ಯಾವ ದಕ್ಷಿಣ ಕರ್ನಾಟಕ ಬೌದ್ಧಧರ್ಮದ ಇತಿಹಾಸಕ್ಕೆ ವಾಸ್ತುಪರಂಪರೆಗೆ ಯಾವ ಕೊಡುಗೆಯನ್ನೂ ನೀಡಿಲ್ಲವೆಂದೇ ನಿರ್ಧಾರಿತವಾಗಿದ್ದ ಕಾಲದಲ್ಲಿ ಇಷ್ಟು ಅಮೋಘ ವಾದ ಚೈತ್ಯಾಲಯ ಸಂಕೀರ್ಣ ದಕ್ಷಿಣಕರ್ನಾಟಕದ ಕೇಂದ್ರಭಾಗದಲ್ಲಿ ದೊರೆತಿರುವುದು ನಮ್ಮೆಲ್ಲರ ಹೆಮ್ಮೆಯ ವಿಷಯವಲ್ಲವೆ!*



***

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಕಾರಣ ಈ ಭಾಗದಲ್ಲಿ ಮಣ್ಣಿನದಾದರೂ ಮುಖ್ಯವಾದ, ರಸ್ತೆಯೊಂದು ಹಾದು ಹೋಗಿದೆ ಹಾಗೂ ಅದರ ಅಂಚಿನಲ್ಲಿ ನೀರಿನ ಕೊಳವೆಗಳೂ ಹಾದು ಹೋಗಿವೆ.

೨. ಉತ್ಖನನದಲ್ಲಿ ಈ ಕುಂಡದಲ್ಲಿ ಯಾವುದೇ ಸ್ವಾರಸ್ಯಕರವಾದ ವಸ್ತು ಸಿಕ್ಕಲಿಲ್ಲ.

೩. ಇವುಗಳೆಲ್ಲದರ ವಿವರಣೆ ಈ ಲೇಖನದಲ್ಲಿ ಅಸಾಧ್ಯ ಆದ ಕಾರಣ ಇವುಗಳ ವಿವರಣೆಗಳನ್ನು ಶ್ರೀಘ್ರದಲ್ಲೇ ಪ್ರಕಟಣೆ ಕಾಣುವ ವಿಸ್ತೃತ ಉತ್ಖನನ ವರದಿಯಲ್ಲಿ ಅಳವಡಿಸಲಾಗುತ್ತದೆ.

೪. ಇದು ಧರ್ಮಚಕ್ರ ಇರಬಹುದೆಂಬ ಆಲೋಚನೆಯನ್ನು ಸೂಚಿಸಿದ ಡಾ. ಟಿ. ದಯಾನಂದಪಟೇಲ್ ಅವರಿಗೆ ಧನ್ಯರಾಗಿದ್ದೇವೆ.


* i. ರಾಜಘಟ್ಟದಲ್ಲಿ ನಡೆಸಲಾದ ಈ ಉತ್ಖನನದಲ್ಲಿ ವಿಭಾಗದ ಸಿಬ್ಬಂದಿವರ್ಗಕ್ಕೆ ಸೇರಿದ ಶ್ರೀಯುತರಾದ ಡಾ. ಎಂ.ಪಿ ಮಹದೇವಯ್ಯ, ಡಾ. ಎನ್. ಹವಳಯ್ಯ (ದಿವಂಗತ), ಡಾ. ಟಿ. ದಯಾನಂದಪಟೇಲ್, ಶ್ರೀ ಕೆ. ಪ್ರಭು, ಡಾ. ಜಿ. ಕರಿಯಪ್ಪ, ಡಾ. ಎನ್. ಎಸ್. ರಂಗರಾಜು ಮತ್ತು ಶ್ರೀ ಹೆಚ್. ವಿ. ಕೃಷ್ಣ ಇವರುಗಳು ಸಕ್ರಿಯವಾಗಿ ಪಾಲ್ಗೊಂಡಿದ್ದರು.

ii. ನಿವೇಶನ ಸಹಾಯಕರುಗಳಾಗಿ ಡಾ. ಬಸವರಾಜು, ಶ್ರೀ ಸುರೇಶ್, ಶ್ರೀ ಕೃಷ್ಣಪ್ಪ, ಶ್ರೀ ಹೆಚ್. ಪಿ. ಸುನಿಲ್ ಕುಮಾರ್, ಶ್ರೀ ಸೋಮಣ್ಣ, ಶ್ರೀಶಲ್ವಪಿಳ್ಳೈ ಐಯಂಗಾರ್, ಶ್ರೀಮತಿ ಅನುರಾಧ, ಕುಮಾರಿ ಪ್ರಿಯಾ ಠಾಕೂರ್ ಹಾಗೂ ಡಾ. ಆರ್. ಹೆಚ್. ಕುಲಕರ್ಣಿ ಇವರುಗಳು ಪಾಲ್ಗೊಂಡಿದ್ದರು.

iii. ಉತ್ಖನನಕಾರ್ಯಕ್ಕೆ ಆರ್ಥಿಕ ಸಹಾಯ ಮಾಡಿದ ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ ಹಾಗೂ ಮೈಸೂರು ವಿಶ್ವ ವಿದ್ಯಾನಿಲಯ ಇವರುಗಳಿಗೆ ನಮ್ಮ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ.

iv. ಉತ್ಖನನದ ಸಮಯದಲ್ಲಿ ಎಲ್ಲ ರೀತಿಯ ಸಹಾಯ ಹಾಗೂ ಸಹಕಾರ ನೀಡಿದ ರಾಜಘಟ್ಟ ಗ್ರಾಮಪಂಚಾಯ್ತಿಯ ಸದಸ್ಯರುಗಳಿಗೂ, ಹಾಗೂ ಗ್ರಾಮದ ಎಲ್ಲ ಮಹಾಜನರಿಗೂ ಮತ್ತು ವಸತಿಗಾಗಿ ಶಾಲೆಯನ್ನು ನೀಡಿದ ಕರ್ನಾಟಕ ಸರ್ಕಾರದ ವಿದ್ಯಾಇಲಾಖೆಯ ಸಕಲ ಸಿಬ್ಬಂದಿವರ್ಗದವರಿಗೂ ನಮ್ಮ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ.




ಹಳತುಗಳಲ್ಲಿ ಹೊಸನಾದಿ, ಹೊಸ ಮಿಡಿತದಾವಿಷ್ಕಾರ
ಮೊತ್ತಗಳ ವ್ಯೂಹದಲಿ ಇತಿಹಾಸದ ಮೊತ್ತ ಮೊದಲುಗಳನು
ಚೆಲುವಾಗಿ ಎಳೆದ ರಂಗವಲ್ಲಿಯ ನೋಟ,
ಬುದ್ಧನವತಾರ ಕಂಡ ಉತ್ಖನನ ತೋರಿತ್ತು
ಇತಿಹಾಸ ವಾಸ್ತು ಪರಂಪರೆಯ ಅಪರಿಮಿತ.



ಜಯದೇವಪ್ಪ ಜೈನಕೇರಿ*

# ಮತ್ತಿಗೂಡು ಕುದುರೆಬೀರಪ್ಪ ವೃತ್ತದ ಪ್ರಾಚ್ಯಾವಶೇಷಗಳು

*ಪ್ರಾಚೀನ ಐತಿಹಾಸಿಕ ಕೇಂದ್ರವಾದ ಕುದುರೆ ಬೀರಪ್ಪನ ವೃತ್ತದಲ್ಲಿ ಅವನ ದೇಗುಲವೊಂದರಲ್ಲಿ ಗಮನಾರ್ಹ ಬೊಂಬೆಗಳಿವೆ. ಇದಲ್ಲದೆ ಅವನ ದೇಗುಲದ ಹಿಂದೆ ಶಾಸನೋಕ್ತ ವೀರಗಲ್ಲೊಂದು ಇದ್ದು, ಸೈನ್ಯಕ್ಕೆ ಬೇಕಾದ ಕುದುರೆಗಳ ವ್ಯಾಪಾರ ನಡೆಯುತ್ತಿದ್ದ ಸೂಚನೆ ಆದರಲ್ಲಿದೆ. ಶಾಸನೋಕ್ತ ವೀರಸೋಮೆನಾಯ್ಕ ವೀರಶೈವ ನಾಗಿದ್ದು, ಅರ್ಚಕರೂ ವೀರಶೈವರೆನ್ನಲಾಗಿದೆ. ಕ್ರಿ.ಶ. ೧೩೦೭ರ ಈ ಶಾಸನೋಕ್ತ ಸೊಡ್ಡಲ ದೇವನನ್ನೂ ಕುದುರೆ ಕಟ್ಟುವ ಮಾಂಡಳಿಕರಗಂಡ, ತುಳುರಾಜ್ಯ ಸಮುದ್ಧರಣ ಇತ್ಯಾದಿ ಬಿರುದುಗಳಿಂದ ಕರೆದಿರುವುದು ವಿಶೇಷ. ಈ ಪರಿಸರದ ಶಿಲ್ಪಗಳಲ್ಲಿ ಹೊಯ್ಸಳರ ಕಾಲದವೂ ಸೇರಿವೆ; ಹರಿಹರ ಸಮನ್ವಯ ಶಿಲ್ಪಗಳಂತಿವೆ.*

ಹೊಸನಗರ ತಾಲ್ಲೂಕು ಕೇಂದ್ರದಿಂದ ವಾಯುವ್ಯ ದಿಕ್ಕಿನಲ್ಲಿರುವ ಸಂಪೆಕಟ್ಟೆಯಿಂದ ೮ ಕಿ.ಮೀ. ದೂರದಲ್ಲಿರುವ ಸಣ್ಣ ಗ್ರಾಮ ಹೊಸನಾಡು ಮಾಗಣಿ ಕುದುರೆ ಬೀರಪ್ಪ ವೃತ್ತ (ಕೆ.ಬಿ. ಸರ್ಕಲ್) ಒಂದು ಪ್ರಾಚೀನ ಐತಿಹಾಸಿಕ ಕೇಂದ್ರ.

ಕೆ. ಬಿ. ಸರ್ಕಲ್‌ನಲ್ಲಿರುವ ಕುದುರೆ ಬೀರಪ್ಪ ದೇವಾಲಯದಲ್ಲಿ ಪ್ರಾಚೀನ ೨ ಮರದ ಕುದುರೆಗಳು, ಬೀರಪ್ಪ ಮತ್ತು ಮೂರು ರಾವುತರು ಹಾಗೂ ಒಂದು ಹುಲಿಯ ಗೊಂಬೆಗಳಿವೆ. ಶಿಥಿಲವಾಗಿದ್ದ ದೇವಾಲಯವನ್ನು ಕಳಚಿ ಈಗ ಪುನಃ ಕಲ್ಲು ಜಂಬಿಟ್ಟಿಗೆಗಳ ಗೋಡೆ ಹೆಂಚಿನ ಮಾಡು ಇರುವ ಕಟ್ಟಡವು ಪೂರೈಸುವ ಹಂತದಲ್ಲಿದ. ಮರದ ಹೊಸ ಗೊಂಬೆಗಳನ್ನು ಕತ್ತುವ ಕಾರ್ಯ ಸಹ ಪ್ರಗತಿ ಯಲ್ಲಿದೆ.


ಕುದುರೆ ಬೀರಪ್ಪ ಮತ್ತು ೩ ರಾವುತರು ಹಳೆಯ ಮರದ ವಿಗ್ರಹಗಳು

**ವೀರಗಲ್ಲು** : ಕುದುರೆ ಬೀರಪ್ಪ ದೇವಸ್ಥಾನದ ಹಿಂದೆ ಮೇಲ್ಭಾಗದಲ್ಲಿರುವ ಕಾನನದಲ್ಲಿ ಸುಮಾರು ೨೨೫ ಸೆಂ.ಮೀ. × ೬೦ ಸೆಂ.ಮೀ. ಅಗಲದ ಸುಂದರ ಕೆತ್ತನೆಯ ವೀರಗಲ್ಲು ಇದೆ. ಬಹುಪಾಲು ಸುಸ್ಥಿತಿಯಲ್ಲಿರುವ ವೀರಗಲ್ಲು ಆರು ಹಂತಗಳಲ್ಲಿ ಕೆತ್ತಲಾಗಿದ್ದು ಚಿತ್ರಗಳ ಕೆಳಗಿರುವ ಪಟ್ಟಿಕೆಯಲ್ಲಿರುವ ೧೮ ಸಾಲುಗಳ ಶಾಸನವು ಪ್ರಕಟವಾಗಿದೆ. ಪೂರ್ಣ ಶಾಸನದ ವಿಷಯವನ್ನು ಮುಂದೆ ಕೊಡಲಾಗಿದೆ.

ವೀರಗಲ್ಲಿನ ಕೆಳಗಿನಿಂದ ಮೊದಲ ಹಂತದಲ್ಲಿ ವೀರನನ್ನು ಪಲ್ಲಕ್ಕಿಯಲ್ಲಿ ಮೆರವಣಿಗೆಯಲ್ಲಿ ಕೊಂಡ್ಯೊಯುವ ದೃಶ್ಯವಿದ್ದು ಹಿಂದೆ ಮುಂದೆ ಸೈನಿಕರು, ಪಲ್ಲಕ್ಕಿ ಹೊತ್ತವರು, ಸೇವಕರು ಕಂಡುಬರುತ್ತಾರೆ. ಎರಡನೇ ಹಂತದಲ್ಲಿ ಯುದ್ಧದ ದೃಶ್ಯವಿದ್ದು ವೀರನ ಎದುರುಗಡೆಯಿಂದ ಕುದುರೆಯ ಕುತ್ತಿಗೆಯನ್ನು ಆಯುಧದಿಂದ ತಿವಿದಿದ್ದು ಹಲವು ಸೈನಿಕರು ಕುದುರೆ ಮತ್ತು ವೀರರ ಕಾಲಿನ ಕೆಳಗೆ ಸತ್ತು ಬಿದ್ದಿರುವ ವೀರನನ್ನು ಕರೆ ತಂದ ಪಲ್ಲಕ್ಕಿ ಕಾಲಾಳುಗಳು ಸೈನಿಕರು, ಕತ್ತಿ ಗುರಾಣಿ ಹಿಡಿದು ಯುದ್ಧ

* ೮೭, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ ೫೭೭ ೨೦೧.

ಮಾಡುತ್ತಿರುವ ಚಿತ್ರಗಳಿವೆ. ವೀರನ ಹಿಂದೆ ಛತ್ರಿಧಾರಿ ಸೇವಕನ ದೃಶ್ಯವಿದೆ. ಮೂರನೆಯ ಹಂತದಲ್ಲಿ ಕುದುರೆ ಮೇಲೆ ಕುಳಿತ ವೀರ ಕೆಳಗೆ ನೆಲದಮೇಲೆ ನಿಂತು ಹೋರಾಡುತ್ತಿರುವ ದೃಶ್ಯವಿದೆ. ಬಹುಶಃ ಕುದುರೆ ಸತ್ತು ಹೋಗಿರಬೇಕು. ಶತ್ರುವಿನ ಭರ್ಜಿ ಕುದುರೆ ವೀರನ ದೇಹದೊಳಗೆ ನಾಟಿದ ಮತ್ತು ಉಳಿದ ಸೈನಿಕರು ಕತ್ತಿ ಗುರಾಣಿ ಹಿಡಿದ ಸೈನಿಕರ ಹಾಗೆ ಹಿಂದಿನ ಸಾಲಿನಲ್ಲಿ ಕುದುರೆ ಮೇಲಿರುವ ಸೈನಿಕರ ಚಿತ್ರಗಳಿವೆ. ನಾಲ್ಕನೇ ಹಂತದಲ್ಲಿ ಕುದುರೆ ಮೇಲಿನ ವೀರ ಸತ್ತು, ಮಧ್ಯದ ಮಂಟಪದಲ್ಲಿ ಅಂಜಲೀಬದ್ಧನಾಗಿ ಕುಳಿತಿರುವ ದೃಶ್ಯವೂ ಅಕ್ಕಪಕ್ಕದಲ್ಲಿ ಚಾಮರಧಾರಿಣಿಯರೂ ಮಂಟಪ(ವಿಮಾನ)ದ ಎರಡೂ ಪಕ್ಕಗಳಲ್ಲಿ ಕೈಯಲ್ಲಿ ಹಾರ ಹಿಡಿದಿರುವ ಸುರಾಂಗನೆಯರ ಚಿತ್ರಗಳಿವೆ.

ಐದನೇ ಹಂತದಲ್ಲಿ ವಿಮಾನದ ಸ್ವರ್ಗಾರೋಹಣದಲ್ಲಿ ವಿವಿಧ ವಾದ್ಯಗಳನ್ನು ನುಡಿಸುತ್ತಿರುವ ಸ್ತ್ರೀಯರು ಮಂಟಪದ ಪಕ್ಕದಲ್ಲಿ ಚಾಮರ ಧಾರಿಣಿಯರೂ ಮತ್ತು ಸುರಾಂಗನೆಯರು ಆರನೇ ಹಂತದಲ್ಲಿ ಮೂರು ಭಾಗಗಳಿದ್ದು ಮೊದಲ ಭಾಗದಲ್ಲಿ ಯುದ್ಧದಲ್ಲಿ ಮಡಿದ ಕುದುರೆ ವೀರನು ಅಂಜಲಿ ಬದ್ಧನಾಗಿ ಕುಳಿತಿದ್ದು ಅಕ್ಕ ಪಕ್ಕ ಎಂದಿನಂತೆ ಚಾಮರಧಾರಿಣಿಯರ ಚಿತ್ರಗಳಿವೆ. ಮತ್ತು



ಕುದುರೆ ಬೀರಪ್ಪ ಸರ್ಕಲ್ ಬಳಿಯ ವೀರಗಲ್ಲು ಮೇಲ್ಭಾಗ

ಮಧ್ಯದ ಮಂಟಪದಲ್ಲಿ ಬೃಹತ್ ಶಿವಲಿಂಗವೂ ಅಕ್ಕ ಪಕ್ಕ ಇಬ್ಬರು ಪೂಜಾರಿಗಳ ಚಿತ್ರಗಳಿವೆ. ಮೂರನೇ ಮಂಟಪದಲ್ಲಿ ಬೃಹತ್ ಗಾತ್ರದ ನಂದಿ ಕೆತ್ತನೆಯು ಸುಂದರವಾಗಿದೆ. ನಂದಿಯ ಹಿಂದೆ ಒಬ್ಬ ಭಕ್ತ ನಿಂತಿದ್ದಾನೆ. ಸ್ವರ್ಗಾರೋಹಣದ ಮೇಲ್ಭಾಗದಲ್ಲಿ ಅತ್ಯಂತ ಸುಂದರವಾದ ಕೀರ್ತಿಮುಖ ಸೂರ್ಯ ಚಂದ್ರ ಶಿಲ್ಪಗಳಿವೆ. ಮಧ್ಯದಲ್ಲಿ ಎತ್ತರವಾದ ಹೊಯ್ಸಳ ಮಾದರಿಯ ಗೋಪುರದ ಎರಡೂ ಪಕ್ಕಗಳಲ್ಲಿ ಚಿಕ್ಕ ಗಾತ್ರದ ೨ ಗೋಪುರಗಳು ಇವೆ. ಶಾಸನದ ಮೇಲ್ಭಾಗ ಅತ್ಯಂತ ಕಲಾತ್ಮಕ ಪಟ್ಟಿಕೆಗಳಿಂದ ಕೂಡಿದೆ. ಸುಮಾರು ೧೩ನೇ ಶತಮಾನಕ್ಕೆ ಸೇರಿದ ಈ ವೀರಗಲ್ಲು ಕಪ್ಪು ಕಣ ಶಿಲೆಯದು. ಬಹುಪಾಲು ಸುಸ್ಥಿತಿಯಲ್ಲಿದ್ದು ಶಾಸನದ ಅಕ್ಷರಗಳೂ ಓದುವಂತಿವೆ.

**ವೀರಗಲ್ಲು ಶಾಸನ :** ಈ ವೀರಗಲ್ಲು ಶಾಸನದ ಆರು ಪಟ್ಟಿಕೆಗಳ ಮೇಲೆ ೧೮ ಸಾಲುಗಳ ಶಾಸನವಿದೆ ಎಂದು ಮೇಲೆ ಹೇಳಿದೆಯಷ್ಟೆ. ಗಣಪತಿ ಸ್ತುತಿಯಿಂದ ಪ್ರಾರಂಭವಾಗಿ ಶಿವಸ್ತುತಿ ಯಿಂದ ಮುಂದುವರೆದಿದೆ. ನಂತರದಲ್ಲಿ ಅರಸನ ಬಿರುದುಗಳು ಮಹಾಮಂಡಳೇಶ್ವರ, ಸತ್ಯರತ್ನಾಕರ, ಶರಣಾಗತ ರಕ್ಷಕ, ಅರಿ ಅಂದರೆ ಶತ್ರು ರಾಜರಿಗೆ ಗಂಡುಗತ್ತರಿ, ಕೊಂಕಣಿಗ ಬೇಟೆಗಾರ "ಹೊನ್ನ ಕೊಟ್ಟು ಕುದುರೆಯ ಕಟ್ಟುವ ಮಾಂಡಳಿಕರ ಗಂಡ" ಎಂಬ ವಿಶೇಷ ಬಿರುದುಗಳಿವೆ. ಸಮುದ್ರ ಮೂಲಕ ಬರುತ್ತಿದ್ದ ಸೈನ್ಯಕ್ಕೆ ಬೇಕಾದ ಕುದುರೆಗಳ ವ್ಯಾಪಾರ ನಡೆಸುತ್ತಿತ್ತೆಂದು ಕಾಣುವುದು. ತುಳುರಾಯ ಸಂಸ್ಥಾಪನಾಚಾರ್ಯ ಮುಂತಾದ ಹೊಗಳಿಕೆಯ ಮಾತುಗಳಿವೆ. ಮೂರನೇ ಪಟ್ಟಿಕೆಯಲ್ಲಿ ಹೊಂಬುಜದ ಬಿಲ್ಲೇಶ್ವರ ದೇವರ ದಿವ್ಯಶ್ರೀ ಪಾದ ಪದ್ಮಾರಾಧಕರಾದ ಕುಮಾರ ಬೀರರಸನ ಪಟ್ಟವಾಗಿ ಆರು ವರುಷಗಳಾಗಿದ್ದು ವಿಸು ಸಂವತ್ಸರದ ಚೈತ್ರ ಶುದ್ಧ ಆದಿತ್ಯವಾರದಂದು (೧೩೦೭) ಆ ಬೀರರಸರು ತಮ್ಮರಸರನೊಡನೆ ಹೊಸಗುಂದದಲ್ಲಿ ಯುದ್ಧ ಮಾಡಿದನು. ಆಗ ಶ್ರೀ ಕೋಟೇಶ್ವರ ದೇವರ ಭಕ್ತ ಶ್ರೀ ಪಾದಪದ್ಮಾರಾಧಕರಾದ ಸೋವಿ ದೇವರಸರು ಸಾಕಿನ ಮಗ ಎರೆಯಮನ ಸೋಮೆ ನಾಯ್ಕನು ಬೀರರಸ ನಾಯಕನಾಗಿದಲಿ ಹಲನಾಳು ಕುದುರೆಯ ತಳ್ತಿರಿದು (ಇರಿದು) ಮೆರೆದು ಸುರಲೋಕ ಪ್ರಾಪ್ತನಾದನು. ಈ ವೀರಗಲ್ಲು ಬರೆಸಿದವನು ಸೋಮೆನಾಯ್ಕನ ತಮ್ಮ ಬೊಷೆ ನಾಯಕನು, ಈ ಕಲ್ಲನ್ನು ಕೆತ್ತಿದವನು ಕಲಿಸೆಯ ರಾಮೋಜನ ಮಗ ಮದುಕಿ ಮಂಗಳ ಮಹಾಶ್ರೀ. ಈ ವೀರಗಲ್ಲು ಶಾಸನದಲ್ಲಿ ಉಲ್ಲೇಖವಾಗಿರುವ ವೀರ ಸೋಮೆನಾಯ್ಕನು ವೀರಶೈವನಾಗಿದ್ದು, ಕುದುರೆ ಬೀರಪ್ಪನ ದೇವಾಲಯದ ಅರ್ಚಕರೂ ವೀರಶೈವರಾಗಿರು ವುದು ತಿಳಿದುಬರುತ್ತದೆ.

ಇದು ಈ ವೀರಗಲ್ಲಿನಲ್ಲಿಯ ಐತಿಹಾಸಿಕ ವಿಷಯ. ೩ನೇ ಬೀರರಸನ ಕಾಲ (೧೨೭೮-೮೩) ಸೋಮೆಯನಾಯ್ಕನ ಕಾಲ (೧೨೯೦ ರಿಂದ ೧೩೨೦)ರ ವರೆಗೆ ಮಹಾಪ್ರಧಾನಿಯಾಗಿದ್ದನೆಂಬ ಉಲ್ಲೇಖವಿದೆ. ಆದ್ದರಿಂದ ಈ ವೀರಗಲ್ಲು ಮೂರನೇ ಬೊಮ್ಮರಸನ

ಇನ್ನೊಬ್ಬ ಮಗ ತಮ್ಮರಸನ ಮಗ ಸೊಡ್ಡಲ ದೇವನ ಕಾಲ (೧೨೮೮-೧೩೨೦)ಕ್ಕೆ ಸೇರಿದುದೆಂದು ಹೇಳ ಬಹುದು. ಈತನಿಗೆ "ಹೊನ್ನ ಕೊಟ್ಟು ಕುದುರೆಯ ಕಟ್ಟುವ ಮಾಂಡಳೀಕರ ಗಂಡನೆಂಬ" ಬಿರುದು ಇತ್ತೆಂದು ಈ ಶಾಸನದಲ್ಲಿ ಉಲ್ಲೇಖವಾಗಿದೆ. ಜೊತೆಗೆ ಕೊಂಕಣಿಗ ಬೇಟೆಗಾರ ತುಳುರಾಜ್ಯ ಸಮುದ್ಧರಣ ಎಂಬ ಬಿರುದುಗಳಿವೆ. ಕರಾವಳಿಗೆ (ಕರಾವಳಿ) ಗೆ ಹೊಂದಿಕೊಂಡಿರುವ ಈ ಮಲೆನಾಡ ಘಟ್ಟ ಪ್ರದೇಶವು ಮಧ್ಯ ಕಾಲದ ಅರಬರ ಕುದುರೆ ವ್ಯಾಪಾರ ಕೇಂದ್ರವಾಗಿದ್ದಿರಬಹುದು. ಸ್ವತಹ ಬೀರರಸನು ಕುದುರೆಗಳ ಪರೀಕ್ಷಕನಾಗಿದ್ದು ಕುದುರೆಗಳ ಪಡೆಯನ್ನು ಕಟ್ಟಿರಬಹುದು ಈ ಭಾಗದ ಬಹುಪಾಲು ವೀರಗಲ್ಲುಗಳಲ್ಲಿ ಕುದುರೆ ಮೇಲಿನ ವೀರ ಪ್ರಧಾನವಾಗಿ ಕಂಡು ಬರುತ್ತಾನೆ.

**ಹಿನ್ನೆಲೆ :** ಮಲೆನಾಡಿನ ದಟ್ಟ ಅರಣ್ಯದ ಕೆಲವು ಪ್ರದೇಶ ಗಳನ್ನು ಮಾಂಡಲೀಕರಾಗಿ ಸುಮಾರು ೭ನೇ ಶತಮಾನದಿಂದ ೧೭ನೇ ಶತಮಾನದವರೆಗೆ ಹೊಂಬುಜದ ಸಾಂತರರು ಆಳಿದ್ದಾರೆ. ಉತ್ತರದ ಮಥುರಾದಿಂದ ಉಗ್ರವಂಶದ ಮೂಲ ಪುರುಷರು ಹೊಂಬುಜವನ್ನು ರಾಜಧಾನಿಯನ್ನಾಗಿಸಿಕೊಂಡು ದೀರ್ಘಕಾಲ ರಾಷ್ಟ್ರಕೂಟರ, ಕಲ್ಯಾಣ ಚಾಳುಕ್ಯರ, ಹೊಯ್ಸಳರ, ವಿಜಯ ನಗರ ಅರಸರ ಸಾಮಂತರಾಗಿ ಆಡಳಿತ ನಡೆಸಿದ್ದಾರೆ. ೧೨ನೇ ಶತಮಾನದಲ್ಲಿ ಹೊಂಬುಜದ ಸಾಂತರರು ಎರಡು ಶಾಖೆಗಳಾಗಿ, ಕಳಸ ಮತ್ತು ಹೊಸಗುಂದದಿಂದ ಆಳಿದ್ದಾರೆ. ಮೂಲದಲ್ಲಿ ಜೈನರಾಗಿದ್ದ ಸಾಂತರಸರು, ಹೊಸಗುಂದದಲ್ಲಿ ಶೈವ ಆರಾಧಕ ರಾಗಿರುವುದು ಇಲ್ಲಿರುವ ಶಾಸನಗಳಿಂದ ತಿಳಿದುಬರುತ್ತದೆ. ಇವರಲ್ಲಿ ಬೀರದೇವರಸ, ಬೊಮ್ಮರಸ, ತಮ್ಮರಸ, ಸೊಡ್ಡಲದೇವ ಮುಂತಾದವರು ೧೨೫೭ ರಿಂದ ೧೩೦೨ ರ ವರೆಗೆ ಆಳಿದ್ದಾರೆ. ಪ್ರಸ್ತುತ ಕುದುರೆ ಬೀರಪ್ಪ ಸರ್ಕಲ್‌ನ ಶಾಸನ ನಿಲ್ಲಿಸಿದಾಗ ಈ ಭಾಗ ಹೊಸಗುಂದ ಅರಸರ ಅಧೀನಕ್ಕೆ ಒಳಪಟ್ಟಿತ್ತು. ಬೊಮ್ಮರಸನು ೧೨೮೦ಕ್ಕೂ ಮೊದಲೇ ನಿಧನನಾಗಿದ್ದನೆಂದು ತಿಳಿದುಬರುತ್ತದೆ. ಈತನ ೧ನೇ ಮಗ ಬೀರರಸ ಎಂಬುವನು ೧೨೮೩ರ ವರೆಗೆ ಆಳಿದ್ದಾನೆ. ನಂತರ ಈತನ ಸಹೋದರ ತಮ್ಮರಸ ಹೊಸಗುಂದ ರಾಜ್ಯವನ್ನು ೧೨೮೮ರ ವರೆಗೆ ಆಳಿದ್ದಾನೆ. ಅಳಿಯ ಬೀರರಸನು ೧೨೮೨-೮೩ ರಲ್ಲಿ ಹೊಸಗುಂದದ ಮೇಲೆ ಧಾಳಿ ಮಾಡಿದಾಗ ತಮ್ಮರಸನ ದಂಡನಾಯಕ ಕೋಟೆನಾಯಕನು ಆತನನ್ನು ಸಮರ್ಥವಾಗಿ ಎದುರಿಸಿದನು. ತಮ್ಮರಸನ ಸಹೋದರ ಬೀರರಸನು ೧೩೦೦ರ ಸುಮಾರಿಗೆ ಪುಣಜಿಯ ಬಯೇಶ್ವರ ದೇವರಿಗೆ ದಾನ ನೀಡಿದ ಶಾಸನ ಉಲ್ಲೇಖವಿದೆ. ತಮ್ಮರಸನ ಕಾಲದಲ್ಲಿ ಆತನ ಅಧಿಕಾರಿಗಳಾಗಿದ್ದ ಕೋಟೆ ನಾಯಕ (೧೨೯೦-೧೩೨೦) ಮತ್ತು ಸೋಮಯ್ಯನಾಯ್ಕ (೧೨೯೦-೧೩೨೦) ಈ ರಾಜ್ಯದ ದಂಡನಾಯಕ ಮತ್ತು ಮಹಾ ಪ್ರಧಾನರಾಗಿ ಪ್ರಬಲರಾಗಿದ್ದರು.

೧೨೮೮ರಲ್ಲಿ ತಮ್ಮರಸನ ನಂತರ ಕೋಟೆನಾಯಕ ಮತ್ತು ಸೋಮನಾಯಕರು ೧೩೨೦ರ ವರೆಗೆ ಆಳಿದ ಸೊಡ್ಡಲ ದೇವನನ್ನು ಬದಿಗೊತ್ತಿ ತಾವೇ ಹೊಸಗುಂದವನ್ನು ಆಳಿದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಕೆಳದಿ ಅರಸರು ಪ್ರಾಬಲ್ಯಕ್ಕೆ ಬಂದ ನಂತರ ಸಾಂತರ ಆಳ್ವಿಕೆ ಕೊನೆಗೊಳ್ಳುತ್ತದೆ. ಈ ಎಲ್ಲ ಕಾರಣಗಳಿಂದ ಕುದುರೆ ಬೀರಪ್ಪ ವೃತ್ತದ, ಕುದುರೆ ಬೀರಪ್ಪ ದೇವಾಲಯದ ಹಿಂದೆ ಇರುವ ವೀರಗಲ್ಲು ಶಾಸನ ಕಾಲ ಸುಮಾರು ಕ್ರಿ.ಶ. ೧೩೦೭ ಎಂದು ಹೇಳಬಹುದಾಗಿದೆ. ಎಫಿಮರ್ಸ್‌ನ ಲೆಕ್ಕದ ಪ್ರಕಾರವೂ ಇದು ತಾಳೆಯಾಗುತ್ತದೆ.

### ಇತರ ಶಿಲ್ಪಗಳು ಮತ್ತು ದೇವಾಲಯ

ಹೊಸನಾಡ ಮಜರೆ ಕುದುರೆ ಬೀರಪ್ಪ ವೃತ್ತದಿಂದ ಪೂರ್ವಕ್ಕೆ ಸುಮಾರು ೧ ಕಿ.ಮೀ. ದೂರದಲ್ಲಿ ರಸ್ತೆಯ ಬಲಭಾಗದ ಕುರುಚಲು ಕಾಡಿನ ಮಧ್ಯೆ "ಭಾವಿ ಕೈಸೂಜೆ ಬಸವಣ್ಣ" ದೇವರ ಪಾಳು ದೇವಾಲಯ ಕಂಡುಬರುತ್ತದೆ. ಜಂಬಿಟ್ಟಿಗೆಯ ಪ್ರಾಚೀನ ಗರ್ಭಗುಡಿ ವಿಶಿಷ್ಟವಾಗಿದೆ. ಗರ್ಭಗುಡಿಯಲ್ಲಿ ಸುಮಾರು ೭೫×೬೦×೬೦ ಸೆಂ.ಮೀ. ಅಳತೆಯ ಸುಂದರ ಶಿವಲಿಂಗವಿದೆ. ಕೈಸಾಲೆ ಸುತ್ತ ಮಂಟಪಗಳಿದ್ದ ಭಾಗ ಬಿದ್ದು ಹೋಗಿದೆ. ಗರ್ಭಗುಡಿಯ ದ್ವಾರದ ಬಲ ಭಾಗದಲ್ಲಿ ಸುಂದರ ಕೆತ್ತನೆಯ ಕಲಾತ್ಮಕ ಸಪ್ತಮಾತೃಕೆಯರ



**ಕುದುರೆ ಬೀರಪ್ಪ ವೃತ್ತದ ಸಪ್ತಮಾತೃಕೆಯರ ಶಿಲ್ಪ**

ಪಟ್ಟಿಕೆ ಇದೆ. ಸುಂದರ ವಿಗ್ರಹಗಳು, ಕಿರೀಟ, ಆಯುಧಗಳು, ಅವುಗಳ ವಾಹನಗಳು ಚಿತ್ರಿತವಾಗಿವೆ. ಸವ್ಯ ಲಲಿತಾಸನದಲ್ಲಿರುವ ಈ ಉಬ್ಬು ಶಿಲ್ಪಗಳು ಕ್ರಮವಾಗಿ ಅವರವರ ವಾಹನಸಹಿತ ವೀಣಾಧರ ವೀರಭದ್ರ (ನಂದಿ), ಬ್ರಾಹ್ಮಿ (ಹಂಸ), ಮಾಹೇಶ್ವರಿ (ನಂದಿ), ಕೌಮಾರಿ (ನವಿಲು), ಲಕ್ಷ್ಮೀ (ಗರುಡ), ವರಾಹೀ (ವರಾಹ), ಇಂದ್ರಾಣೀ (ಆನೆ), ಚಾಮುಂಡಾ (ನರಿ) ಮತ್ತು ಗಣೇಶ (ಇಲಿ) ಎಲ್ಲಾ ಶಕ್ತಿ ದೇವತೆಗಳ ಮುಂದಿನ ಬಲಗೈಯು ಅಭಯ ಮುದ್ರೆಯಲ್ಲಿದೆ. ಎಡಗೈಯಲ್ಲಿ ಬಹುಬೀಜ ಫಲವಿದೆ.

ಹಿಂದಿನ ಕೈಗಳಲ್ಲಿ ಆಯಾ ದೇವತೆಗಳ ಸ್ವಲ್ಪ ಹೆಚ್ಚು ಕಡಿಮೆ ನಿಗದಿತ ಆಯುಧಗಳು ಮತ್ತು ವಸ್ತುಗಳಿವೆ.



ಕುದುರೆ ಬೀರಪ್ಪ ವೃತ್ತದಲ್ಲಿರುವ ಕೆಂಜೆ ಬಸವಣ್ಣ ಶಿವಾಲಯದ ಮುಂದಿರುವ (ವಿಷ್ಣು) ಕೇಶವಮೂರ್ತಿ ಶಿಲ್ಪಿ

ಗರ್ಭಗುಡಿಯ ಬಲಭಾಗದಲ್ಲಿ ಹೊಯ್ಸಳರ ಕಾಲದ ಒಂದು ಸುಂದರ ವಿಷ್ಣುಮೂರ್ತಿ ಸುಮಾರು ೭೫ ಸೆಂ.ಮೀ. ಎತ್ತರವಾಗಿದೆ. ಸಮಭಂಗದಲ್ಲಿರುವ ಈ ಮೂರ್ತಿಯ ಮುಂದಿನ ಬಲ ಎಡಗೈಗಳಲ್ಲಿ ಪದ್ಮ ಮತ್ತು ಗದೆ, ಹಿಂದಿನ ಬಲ ಎಡಗೈಗಳಲ್ಲಿ ಚಕ್ರ ಮತ್ತು ಶಂಖಗಳಿವೆ. ಆದ್ದರಿಂದ ವಿಷ್ಣುವಿನ ೨೪ ಮಾದರಿಗಳಲ್ಲಿ ಇದು ಕೇಶವನ ವಿಗ್ರಹ. ಕಲಾತ್ಮಕವಾಗಿರುವ ಈ ವಿಗ್ರಹ ಸಕಲ ವಸ್ತ್ರಾಭರಣಗಳಿಂದ ಕೂಡಿದೆ. ಪಾದದ ಹತ್ತಿರ ಗರುಡನಿದ್ದಾನೆ. ಕೈಸಾಲೆಯ ಮಧ್ಯದಲ್ಲಿ ಒಂದು ಸುಂದರವಾದ ನಂದಿ ವಿಗ್ರಹ ಸುಮಾರು ೭೫ ಸೆಂ.ಮೀ. ಎತ್ತರ, ೯೦ ಸೆಂ.ಮೀ. ಉದ್ದ ಮುಖ ಮತ್ತು ಬಲಭಾಗ ಒಡೆದುಹೋಗಿದೆ. ಕೈಸಾಲೆಯ ಗೋಡೆ ಪಕ್ಕದಲ್ಲಿ ನೆಟ್ಟಿರುವ ಒಂದು ದಾನಶಾಸನ ಕಲ್ಲು ಸಹ ಮೂರು ಭಾಗಗಳಾಗಿದೆ. ಈ ಶಾಸನ ಶಿಲ್ಪ ಸುಮಾರು ೮೦ ಸೆಂ.ಮೀ. ಎತ್ತರ ೬೦ ಸೆಂ.ಮೀ. ಅಗಲವಿದೆ. ಅಕ್ಷರಗಳು ಹಾಳಾಗಿವೆ.

ಶಕ ವರುಷ ೧೧೬೧, ಕ್ರಿ.ಶ. ೧೨೩೯ಕ್ಕೆ ಸೇರಿದ ಈ ದಾನ ಶಾಸನವೂ ಎ.ಕ. ಸಂಪುಟ ೮, ಪುಟ ೩೪೭ರಲ್ಲಿ ನಗರ ಶಾಸನ ಸಂಖ್ಯೆ ೧೦ರಲ್ಲಿ ಪ್ರಕಟವಾಗಿದೆ. ಈ ಶಾಸನವು ಬಿಲ್ಲೇಶ್ವರ ದೇವರ ಭಕ್ತ ಸಾಂತಳಿಗೆ ಸಾಸಿರವನ್ನಾಳುತ್ತಿದ್ದ ಎರೆಯಮ್ಮನ ಮಗ ಚಂದವೆಗ್ಗಡೆಯು ಶಿವ ದೇವಾಲಯಕ್ಕೆ ಧಾರಾ ಸಹಿತವಾಗಿ, ಬಾವಿಯ ಕಯ್ಯರಿಯಿಂದು ಮೇಗಣಜ್ಜ ಗದ್ದೆ ಸಿರುಹು ಚಂದ ವಗ್ಗಡೆಯ ಹುಟ್ಟುವಳಿಯಲ್ಲಿ ಖಂಡುಗ ಧಾನ್ಯ ನೀಡಿದ ಸಂಗತಿ ಕಂಡುಬರುತ್ತದೆ. ಕೊನೆಯ ಭಾಗದಲ್ಲಿ ಸಂಪ್ರದಾಯದಂತೆ ಶಾಪಾಶಯವಿದೆ.

ಕುದುರೆ ಬೀರಪ್ಪ ವೃತ್ತದ ಸುತ್ತ ಮುತ್ತ ಇನ್ನೂ ಹಲವಾರು ಪ್ರಾಚ್ಯಾವಶೇಷಗಳು, ಶಾಸನಗಳು ವೀರಗಲ್ಲುಗಳು ಕಂಡುಬರುತ್ತವೆ. ಇವುಗಳ ಸಮಗ್ರ ಅಧ್ಯಯನ ನಡೆದರೆ ಚರಿತ್ರೆಯ ಮೇಲೆ ಹೊಸ ಬೆಳಕು ಚೆಲ್ಲಲು ಸಾಧ್ಯವಾಗಬಹುದು.

(ಸ್ಥಳೀಯ ಮಾಹಿತಿ ನೀಡಿದ ಕವಲೆದುರ್ಗ ಕೆಳದಿ ರಾಜಗುರು ಶ್ರೀ ಮಹಾಮಹತ್ತಿನಮಠದ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮೀಜಿಯವರಿಗೆ ಮತ್ತು ಶ್ರೀ ಕೆ. ವಿ. ಗೋಪಾಲಾಚಾರ್ ಕಲಗೋಡು ಅವರಿಗೆ ಕೃತಜ್ಞತೆಗಳು. ಪ್ರಬಂಧ ಮಂಡಿಸಲು ಮಾರ್ಗದರ್ಶನ ಮಾಡಿದ ಡಾ|| ಅ. ಸುಂದರ ಮತ್ತು ಡಾ|| ಜಗದೀಶ್ ಅವರಿಗೆ ಕೃತಜ್ಞತೆಗಳು.)



***

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ರೈಸ್ ಬಿ. ಎಲ್. ಎಪಿಗ್ರಾಫಿಯ ಕರ್ನಾಟಿಕ ಸಂ ೮ ಪುಟ ೩೪೫-೩೬೪ ಶಾಸನ ಸಂಖ್ಯೆ-೮, ನಗರ ತಾಲ್ಲೂಕು.
೨. ರೈಸ್ ಬಿ. ಎಲ್. ಎಪಿಗ್ರಾಫಿಯ ಕರ್ನಾಟಿಕ ಸಂ ೮ ಪುಟ ೩೪೫-೩೬೪ ಶಾಸನ ಸಂಖ್ಯೆ-೧೦.

**ಕ.ಇ. ಅಕಾದೆಮಿಯ ೫ನೇ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೧)**

*ಉತ್ತರದಲ್ಲಿ ಆರ್ಯ ಸಂಸ್ಕೃತಿಯ ಪ್ರಭಾವದಿಂದ ಔತ್ತರೇಯ ಶೈಲಿಯನ್ನು ದ್ರಾವಿಡ ಶೈಲಿಯೊಂದಿಗೆ ಮೇಳೈಸಿ ತಮ್ಮದೇ ಆದ ಶೈಲಿಯನ್ನು ರೂಪಿಸುವುದು ಕರ್ನಾಟಕ ಶಿಲ್ಪಿಗಳಿಗೆ ಸಾಧ್ಯವಾಯಿತು. ಈ ಎರಡೂ ಶೈಲಿಯ ಗುಡಿಗಳನ್ನು ನಾವು ಕರ್ನಾಟಕದಲ್ಲಿ ಕಾಣುತ್ತೇವೆ. ತಮಿಳುನಾಡಿನಲ್ಲಿ ನಾಗರ ಶೈಲಿಯ ದೇವಾಲಯಗಳು ವಿರಳ.*

**ಡಾ. ಬಾ. ರಾ. ಗೋಪಾಲ**
ಸಮ್ಮೇಳನಾಧ್ಯಕ್ಷರು

ಡಾ. ಶ್ರೀಮತಿ ಸ್ಮಿತಾ ಸುರೆಬಾನಕರ*

# ಮದಿಹಳ್ಳಿ ಮತ್ತು ಬೆಣಿವಾಡದ ಪ್ರಾಚ್ಯಾವಶೇಷಗಳು

*ಸಂಸ್ಕೃತಿಯ ತಳಹದಿ ಎನಿಸಿದ ಆಯಾ ಜೀವನ ಮೌಲ್ಯಗಳ ಚಿತ್ರಣವನ್ನು ಆಯಾ ಪ್ರದೇಶದಲ್ಲಿನ ಪ್ರಾಚ್ಯಾವಶೇಷಗಳು ಪ್ರತಿಬಿಂಬಿಸುವ ಸ್ಮಾರಕಗಳಾಗಿವೆ. ನೆನಪುಗಳು ಬರಿ ಬರಡು ವರದಿಯ ಸರಕಲ್ಲ. ಕೇವಲ ಪಳೆಯುಳಿಕೆಗಳಲ್ಲ. ಸಸ್ಯವಾಚಿ ಮೂಲದ ಹೆಸರಿನ ಮದಿಹಳ್ಳಿಯ ಪಾರ್ಶ್ವನಾಥ ಶಿಲ್ಪವು ಗಮನಾರ್ಹವಾಗಿದೆ. ಹೈನುಗಾರಿಕೆ ಮೂಲದ ಬೆಣಿವಾಡದ ಬಸದಿ-ಪಾರ್ಶ್ವನಾಥ, ಕಲ್ಮೇಶ್ವರ ದೇಗುಲದ ದ್ವಾದಶ ರಾಶಿಗಳ ಶಿಲಾಫಲಕ, ಜಿನವಿಗ್ರಹ ಹಾಗು ವೀರಗಲ್ಲುಗಳು ಇತಿಹಾಸದ ಪುಳಕಮಯ ಸಂಕೇತವಾಗಿ ಕಾಣಬರುತ್ತವೆ. ಈ ಶಿಲ್ಪಗಳ ಪ್ರಾದೇಶಿಕ ಹಿನ್ನೆಲೆಯ ಅಧ್ಯಯನ ಮತ್ತು ಜಾನಪದದ ಜೊತೆ ತೌಲನಿಕ ಅಧ್ಯಯನದಿಂದ ಜನಾಂಗೀಯ ಇತಿಹಾಸ ಮತ್ತು ಸಂಸ್ಕೃತಿಯನ್ನು ದಟ್ಟವಾಗಿ ಅರ್ಥೈಸಿಕೊಳ್ಳಲು ಅನುಕೂಲವಾಗುತ್ತದೆ.*

ಮದಿಹಳ್ಳಿ ಮತ್ತು ಬೆಣಿವಾಡ ಗ್ರಾಮಗಳು ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲ್ಲೂಕ್ ಕೇಂದ್ರದಿಂದ ಸುಮಾರು ತಲಾ ಮೂರು ಮತ್ತು ಐದು ಕಿ.ಮೀ. ದೂರದಲ್ಲಿರುವ ಅತ್ಯಂತ ಚಿಕ್ಕಹಳ್ಳಿಗಳು. ಹಿರಣ್ಯಕೇಶಿ ನದಿ ದಂಡೆಯ ಮೇಲಿರುವ ಈ ಗ್ರಾಮಗಳು ಅನೇಕ ಪುರಾತತ್ವ ಅವಶೇಷಗಳನ್ನು ಹೊಂದಿವೆ. ಈ ಬಗ್ಗೆ ಎಲ್ಲಿಯೂ ಉಕ್ತವಾಗಿಲ್ಲ (ಬೆಳಗಾವಿ ಜಿಲ್ಲಾ ಗೆಝೆಟಿಯರನಲ್ಲಾಗಲೀ ಅಥವಾ ಕರ್ನಾಟಕ ವಿಶ್ವವಿದ್ಯಾಲಯದ ಎಮ್. ಎ. ಇತಿಹಾಸದ ವಿಭಾಗದ ವಿದ್ಯಾರ್ಥಿಗಳು ಸಿದ್ಧಪಡಿಸಿದ ಪ್ರಬಂಧದಲ್ಲಾಗಲೀ ಇದರ ಉಲ್ಲೇಖವಿಲ್ಲ). ಈ ದೃಷ್ಟಿಯಿಂದ ಮದಿಹಳ್ಳಿ ಮತ್ತು ಬೆಣಿವಾಡ ಒಂದು ಕನ್ಯೆ ನೆಲ. ಇತ್ತೀಚೆಗೆ ಹುಕ್ಕೇರಿ ಪ್ರದೇಶದ ಪ್ರಾಚ್ಯಾವಶೇಷಗಳ ಅಧ್ಯಯನಕ್ಕಾಗಿ ಸುಮಾರು ೨೨ ಗ್ರಾಮಗಳ ಕ್ಷೇತ್ರಕಾರ್ಯ ಕೈಗೊಂಡಾಗ ಮೇಲ್ಕಾಣಿಸಿದ ಗ್ರಾಮಗಳಲ್ಲಿರುವ ಪ್ರಾಚ್ಯಾವಶೇಷಗಳು ಬೆಳಕಿಗೆ ಬಂದವು. ಈ ಗ್ರಾಮಗಳಲ್ಲಿರುವ ಬೃಹತ್ ಶಿಲಾಯುಗದ ದಾರಿಕೋಣೆ ಗೋರಿಗಳು ದೇವಾಲಯಗಳ ಅವಶೇಷಗಳು ಹಲವಾರು ಭಗ್ನಶಿಲ್ಪಗಳು, ಶೈವ, ಶಾಕ್ತ, ಜೈನ ಮೂರ್ತಿಶಿಲ್ಪಗಳು ಮತ್ತು ಅನೇಕ ವೀರಗಲ್ಲುಗಳು/ ಸ್ಮಾರಕಶಿಲೆಗಳು ಅಧ್ಯಯನಕ್ಕೆ ಯೋಗ್ಯವಾಗಿವೆ. ಈ ಪ್ರದೇಶದಲ್ಲಿ ದೊರೆತಿರುವ ಪುರಾತತ್ವ ಅವಶೇಷಗಳ ಸಂಯೋಜನೆಯನ್ನು ಐತಿಹಾಸಿಕ ವಿಶ್ಲೇಷಣೆಯ ಮೂಲಕ ಪ್ರಸ್ತುತಪಡಿಸುವುದು ಈ ಪ್ರಬಂಧದ ಉದ್ದೇಶ. ಈ ಗ್ರಾಮಗಳ ಬಗ್ಗೆ ಮಾಹಿತಿ ಒದಗಿಸುವ ಶಿಲಾಶಾಸನಗಳಾಗಲೀ ಅಥವಾ ಇನ್ನಾವುದೇ ದಾಖಲೆಗಳಾಗಲೀ ಲಭ್ಯವಿಲ್ಲ.

## ಮದಿಹಳ್ಳಿ

ಸ್ಥಳೀಯರ ಪ್ರಕಾರ ಈ ಪ್ರದೇಶದಲ್ಲಿ ಹೇರಳವಾಗಿ ಬೆಳೆಯುವ ಮದಿಸಸ್ಯ (ಪೊರಕೆಗಳನ್ನು ಮಾಡಲು ಉಪಯೋಗಿಸುವ ಕುರುಚಲು ಗಿಡ) ಯಿಂದ ಈ ಗ್ರಾಮಕ್ಕೆ ಮದಿಹಳ್ಳಿ ಎಂಬ ಹೆಸರು ಬಂದಿದೆ. ಬೆಳಗಾವಿ-ಹುಕ್ಕೇರಿ ಪರಿಸರದಲ್ಲಿರುವ ಈ ಪ್ರದೇಶ, ಇತಿಹಾಸ ಕಾಲದಲ್ಲಿ ಸಾಂಸ್ಕೃತಿಕ ಪರಂಪರೆ ಹೊಂದಿರುವ ಪ್ರದೇಶವಾಗಿರಬೇಕೆಂಬ ಅಂಶ ಇಲ್ಲಿ ದೊರೆತ ಪ್ರಾಚ್ಯಾವಶೇಷಗಳಿಂದ ವಿದಿತವಾಗುತ್ತದೆ.

ಮದಿಹಳ್ಳಿ ಗ್ರಾಮದ ಮಧ್ಯದಲ್ಲಿರುವ ಬೀರೇಶ್ವರ, ಲಕ್ಷ್ಮೀ, ಹನುಮಂತ ದೇವಾಲಯಗಳು ಈ ಗ್ರಾಮದ ಆರಾಧನೆಯ ಪ್ರವೃತ್ತಿಯನ್ನು ಸೂಚಿಸುವಂತಿವೆ. ಅತ್ಯಂತ ಕಡಿಮೆ ಜನವಸತಿಯಿರುವ ಈ ಊರು ಮೇಲ್ನೋಟಕ್ಕೆ ಹಾಳೂರು ಎನಿಸುತ್ತದೆ. ಅಲ್ಲಲ್ಲಿ ಸಿಗುವ ಕಟ್ಟಡಗಳ ತಳಪಾಯಗಳು, ಮಡಿಕೆ ಕುಡಿಕೆಗಳ ಚೂರು ಇಲ್ಲಿ ಪ್ರಾಚೀನ ಜನವಸತಿಯ ನೆಲೆಯಿತ್ತೆನ್ನುವುದನ್ನು ಸೂಚಿಸುತ್ತವೆ.

* ಪ್ರವಾಚಕರು, ಇತಿಹಾಸ ವಿಭಾಗ ರಾಣಿ ಪಾರ್ವತಿ ದೇವಿ ಕಾಲೇಜು, ಬೆಳಗಾವಿ.

ಮದಿಹಳ್ಳಿಯ ಬಸ್ಸು ತಂಗುದಾಣದಿಂದ ಎಡಕ್ಕೆ ಸುಮಾರು ಅರ್ಧ ಫರ್ಲಾಂಗ ದೂರವಿರುವ ಹೊಲಗೇರಿಯಲ್ಲಿ ಅನಾಥವಾಗಿ ನಿಂತಿರುವ ಪಾರ್ಶ್ವನಾಥನ ಸುಂದರ ಮೂರ್ತಿಶಿಲ್ಪವಿದೆ.



ಪಾರ್ಶ್ವನಾಥ - ಮದಿಹಳ್ಳಿ

ಬೂದುಗಪ್ಪು ಬಣ್ಣದ ಕಗ್ಗಲ್ಲಿನಲ್ಲಿ ರಚಿತವಾದ ಈ ಶಿಲ್ಪ ಒಂಭತ್ತು ಹೆಡೆ ಸರ್ಪದಡಿ ಶಾಂತಮುಖಮುದ್ರೆಯನ್ನು ಹೊತ್ತು ನಿಂತಿದೆ. ಚಪ್ಪಟೆ ಮೂಗು, ತೆರೆದ ಕಣ್‌ಗಳು, ನೀಳಬಾಹುಗಳು, ಮುಖದಲ್ಲಿಯ ನಿರ್ಲಿಪ್ತಭಾವ, ಉತ್ತಮ ಮೈಮಾಟ ಚಿತ್ತಾಕರ್ಷಕವಾಗಿವೆ. ಮೂರು ಸ್ತರದ ವಿಶಾಲ ಬೆಳ್ಗೊಡೆಯಡಿಯಿರುವ ಪಾರ್ಶ್ವನಾಥನ ಮೂರ್ತಿಶಿಲ್ಪವು ವೈರಾಗ್ಯವೇ ಮೂರ್ತಿವೆತ್ತಂತಿದೆ. ಪ್ರಭಾವಳಿ ಅಲಂಕರಣರಹಿತವಾಗಿದೆ. ಈ ಮೂರ್ತಿಶಿಲ್ಪದ ಸೌಂದರ್ಯವೆಂದರೆ ಅದರ ಅತಿಸರಳತೆ. ಕಾಲಾನುಕ್ರಮಣದಿಂದ ಪ್ರಕೃತಿ ವಿಕೋಪದ ಕಾರಣ ಸವಕಳಿ ಹೊಂದಿದ್ದರೂ, ಮೂರ್ತಿಶಿಲ್ಪ ತನ್ನ ಸೌಂದರ್ಯ ವಿನ್ಯಾಸವನ್ನು ಮಬ್ಬಾದರೂ ಕಾಯ್ದುಕೊಂಡು ಬಂದಿದೆ. ಈ ಮೂರ್ತಿಶಿಲ್ಪ ಅಲ್ಲಲ್ಲಿ ಶಿಥಿಲಗೊಂಡಿದ್ದು ವಿನಾಶದ ಅಂಚಿನಲ್ಲಿದೆ. ಇದರ ಕಾಲ ಸುಮಾರು ೧೧-೧೨ನೇ ಶತಮಾನ.

**ಹುನುಮಂತ ದೇವಾಲಯ**

ಜೀರ್ಣೋದ್ಧಾರಗೊಂಡ ಈ ದೇವಾಲಯಕ್ಕೆ ಗರ್ಭಗೃಹ ಮತ್ತು ಅಂತರಾಳಗಳಿವೆ. ಗರ್ಭಗೃಹದ ಕೇಂದ್ರದಲ್ಲಿ ಹನುಮಾನನ ಮೂರ್ತಿಶಿಲ್ಪವಿದ್ದು ಬಲಪಕ್ಕದಲ್ಲಿ ಶಿವಲಿಂಗವಿದೆ. ಪ್ರವೇಶದ್ವಾರದ ಬಲಪಕ್ಕದ ಗೋಡೆಯ ಮೇಲೆ ಮೂರು ಹಂತದ ವೀರಗಲ್ಲಿದೆ. ದೇವಾಲಯದ ವಿವಿಧ ಭಾಗಗಳಾದ ಕಂಬಗಳು, ಕಕ್ಷಾಸನಗಳು ಅಲ್ಲಲ್ಲಿ ಚದುರಿಬಿದ್ದಿವೆ.

**ಬಸವಣ್ಣ ದೇವಾಲಯ**

ಗ್ರಾಮ ಪ್ರದೇಶದ ದಾರಿಯಲ್ಲಿರುವ ಈ ದೇವಾಲಯದ ಗರ್ಭಗೃಹ ಮಾತ್ರ ಪ್ರಾಚೀನವಾಗಿದ್ದು ನವರಂಗವನ್ನು ನವೀಕರಣಗೊಳಿಸಲಾಗಿದೆ. ಗರ್ಭಗೃಹದಲ್ಲಿ ದೊಡ್ಡಗಾತ್ರದ ನಂದಿಶಿಲ್ಪವಿದೆ.

**ಬೆಣಿವಾಡ**

ಸ್ಥಳೀಯರ ಪ್ರಕಾರ ಈ ಪ್ರದೇಶದಲ್ಲಿ ಬೆಣ್ಣೆಯ ಉತ್ಪಾದನೆ ಅಧಿಕವಾಗಿದ್ದರಿಂದ ಈ ಗ್ರಾಮಕ್ಕೆ ಬೆಣ್ಣೆವಾಡ ಅಥವಾ ಬೆಣಿವಾಡ ಎಂಬ ಹೆಸರು ಬಂದಿತು. ಈ ಗ್ರಾಮನಾಮದಿಂದ ಪ್ರಾಚೀನಕಾಲದಿಂದಲೂ ಪಶುಸಂಗೋಪನೆ ಜನರ ಮುಖ್ಯ ಕಸುಬಾಗಿದ್ದಿರಬೇಕು ಎನಿಸುತ್ತದೆ. ಈ ಗ್ರಾಮದಲ್ಲಿ ಕ್ಷೇತ್ರಕಾರ್ಯ ಕೈಕೊಂಡಾಗ ಜೈನ ಬಸದಿ, ದೇವಾಲಯಗಳು, ಮೂರ್ತಿಶಿಲ್ಪಗಳು ಶಿಲಾಫಲಕಗಳು, ಶಿವಲಿಂಗಗಳು, ಹಲವಾರು ವೀರಗಲ್ಲುಗಳು, ಅಸ್ಪಷ್ಟ ಶಾಸನ ಮತ್ತು ವಿಶೇಷವಾಗಿ ಪಾರ್ಶ್ವನಾಥ ತೀರ್ಥಂಕರರ ವಿಶಿಷ್ಟ ಮೂರ್ತಿಶಿಲ್ಪ ಬೆಳಕಿಗೆ ಬಂದವು.

ಬೆಣಿವಾಡ ಗ್ರಾಮವನ್ನು ಹುಕ್ಕೇರಿಯಿಂದ ಪ್ರವೇಶಿಸುವ ದಾರಿಯಲ್ಲಿ ಬಲಕ್ಕೆ ಸುಮಾರು ಅರ್ಧ ಫರ್ಲಾಂಗ ಅಂತರದಲ್ಲಿ ಜೈನ ಬಸದಿಯಿದೆ. ಇಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪಗಳಿವೆ. ಅಂತರಾಳಕ್ಕೆ ಹೊಂದಿಕೊಂಡಿರುವ ನವರಂಗದ ಮೂಲೆಗಳಲ್ಲಿ ದ್ವಾರದ ಇಕ್ಕೆಲಗಳಲ್ಲಿ ದೇವಕೋಷ್ಠಗಳಿವೆ. ಅಂತರಾಳದ ದ್ವಾರದಲ್ಲಿ ಮೂರು ಶಾಖೆಗಳಿದ್ದು ಎಡಬಲದಲ್ಲಿ ದ್ವಾರಪಾಲಕರು ಮತ್ತು ಲಲಾಟದಲ್ಲಿ ಜಿನಬಿಂಬವಿದೆ. ಹೊಸ್ತಿಲ ಅಂಚಿನಲ್ಲಿ ಆನೆಗಳಿವೆ. ನವರಂಗದಲ್ಲಿ ನಾಲ್ಕು ಕಂಬಗಳು ಮತ್ತು ಹನ್ನೆರಡು ಅರ್ಧಗಂಬಗಳಿವೆ. ನವರಂಗದ ದ್ವಾರಪಟ್ಟಿಯಲ್ಲಿ ಮೂರು ಸರಳಶಾಖೆಗಳಿದ್ದು, ಲಲಾಟಬಿಂಬದಲ್ಲಿ ಪದ್ಮಾಸನದಲ್ಲಿ ಕುಳಿತ ತೀರ್ಥಂಕರರ ಶಿಲ್ಪವಿದೆ. ನವರಂಗದ ರಂಗಮಂಟಪದ ಕಂಬಗಳು ಕೆಳಭಾಗದಲ್ಲಿ ಚೌಕಾಕಾರವಾಗಿ ನಂತರ ಅಷ್ಟಕೋನ, ಚೌಕಾಕಾರದ ಮೇಲೆ ದುಂಡನೆಯಗಾಲಿಗಳಿದ್ದು ಮೇಲಿನ ಛತ್ತು ಚೌರಸದಲ್ಲಿ ಅರಳಿದ ಕಮಲವಿದೆ. ನವರಂಗದ ಮಂಟಪದ ನಾಲ್ಕು ಕಂಬಗಳು ಪೀಠ, ಪಟ್ಟಿಕೆ, ೮-೧೬ ಕೋನದ ಕಾಂಡ ಪಟ್ಟಿಕೆ, ಕೀರ್ತಿಮುಖವುಳ್ಳ ಗೋಲಭಾಗ, ಕೆಳಮುಖ ಮುಚ್ಚಳ ಫಲಕ, ಚೌಕಶಿಲಾಫಲಕ ಹಾಗೂ ಸಾದಾಬೋದುಗೆಯನ್ನು ಹೊಂದಿದೆ. ನವರಂಗದ ಮುಂದಿರುವ ವಿಶಾಲವಾದ ಆಯತಾಕಾರದ ಅರ್ಧಮಂಟಪದಲ್ಲಿ ಆರು ಅರ್ಧಗಂಬಗಳು ಮತ್ತು ಎರಡು ಕಂಬಗಳಿವೆ. ಬಹುಶಃ ನಂತರದ ಸೇರ್ಪಡೆಯಾಗಿರಬಹುದು. ನವರಂಗದ ಮೇಲ್ಛಾವಣಿ ಸರಳವಾಗಿದ್ದು, ಅಲ್ಲಿ ಅಲಂಕೃತ ನಕ್ಷತ್ರಾಕಾರದ ಕಮಲದ ಭುವನೇಶ್ವರವಿದೆ. ಬಸದಿಯ ಹಿಂಭಾಗ ಸರಳವಾದ ಭಿತ್ತಿಯನ್ನು ಹೊಂದಿದ್ದು. ವಿನ್ಯಾಸ ಮತ್ತು ವಾಸ್ತುಶಿಲ್ಪ ಶೈಲಿಯಿಂದ ಈ ಬಸದಿಯ ಕಾಲವನ್ನು ಸು ಕ್ರಿ.ಶ. ೧೧-೧೨ನೆಯ

ಶತಮಾನದ ಮಧ್ಯಭಾಗಕ್ಕೆ ಸೇರಿಸಬಹುದು. ಪೂರ್ವಾಭಿಮುಖವಾಗಿರುವ ಏಕಕೂಟ ಬಸದಿಯಾದ ಚಚ್ಚೌಕಾಕಾರದ ಗರ್ಭಗೃಹದಲ್ಲಿ ಸುಮಾರು ಎರಡು ಅಡಿ ಎತ್ತರದ ಪಾಣಿಪೀಠದ ಮೇಲೆ ಸುಂದರವಾದ ಪಾರ್ಶ್ವನಾಥನ ಮೂರ್ತಿಶಿಲ್ಪವಿದೆ. ಸು.೧೨ನೇ ಶತಮಾನ ಈ ಗ್ರಾಮದಲ್ಲಿ ಸದ್ಯ ಜೈನ ಧರ್ಮಿಯರೇ ಇಲ್ಲದ್ದರಿಂದ ಈ ಬಸದಿ ಹಾಳುಬಿದ್ದು ಶಿಥಿಲಾವಸ್ಥೆಯಲ್ಲಿದೆ. ಇತ್ತೀಚೆಗೆ ಬೇರೆ ಗ್ರಾಮದ ಜೈನಬಾಂಧವರು ಬಸದಿಯ ಸ್ವಚ್ಛತಾ ಕಾರ್ಯಕ್ರಮ ಕೈಗೊಂಡು ಪೂಜೆಸಲ್ಲಿಸಿದ ಸಂದರ್ಭದಲ್ಲಿ, ಬಸದಿಯ ೧೦೦ ಮೀಟರ್ ಸುತ್ತಳತೆಯ ಪ್ರದೇಶದಲ್ಲಿ ಗಂಧದ ಮಳೆ ಯಾಯಿತೆಂದು ಸ್ಥಳೀಯರು ಹೇಳುತ್ತಾರೆ.

**ಕಲ್ಮೇಶ್ವರ ದೇವಾಲಯ**

ಸುಮಾರು ಮೂರು ಅಡಿ ಎತ್ತರದ ಅಧಿಷ್ಠಾನದ ಮೇಲೆ ನಿರ್ಮಿಸಲಾದ ಕಲ್ಮೇಶ್ವರ ದೇವಾಲಯ ನವೀಕರಣಗೊಂಡ ಪ್ರಾಚೀನ ದೇವಾಲಯ, ಗರ್ಭಗೃಹ ಮತ್ತು ಆಧುನಿಕ ನವರಂಗಗಳಿವೆ. ಗರ್ಭಗೃಹದ ಪೀಠದಲ್ಲಿ ಶಿವಲಿಂಗವಿದೆ. ನಾಗಶಿಲ್ಪವಿರುವ ಗರ್ಭಗೃಹದ ದ್ವಾರ ಬದಲಾವಣೆಯನ್ನು ಹೊಂದಿದೆ. ಗರ್ಭಗೃಹದ ದ್ವಾರಕ್ಕೆ ಮೂರು ಶಾಖೆಗಳಿದ್ದು, ಅದರಲ್ಲಿ ರತ್ನಗಳು, ಅರ್ಧಗಂಬ, ಜಾಲಂಧರದಲ್ಲಿ ರತ್ನ ಅಲಂಕರಣವಿದೆ. ನವರಂಗದ ಛತ್ತಿನಲ್ಲಿ ಗೊಮ್ಮಟಾಕಾರದ ಪದ್ಮ ಅಲಂಕರಣವಿದೆ. ನವರಂಗದ ದ್ವಾರದ ಇಕ್ಕೆಲಗಳಲ್ಲಿ ಎರಡು ವೀರಗಲ್ಲುಗಳನ್ನು ಭಿತ್ತಿಯಲ್ಲಿ ಅಳವಡಿಸಲಾಗಿದ್ದು, ಮಧ್ಯದಲ್ಲಿ ಪುರಾತನ ನಂದಿಶಿಲ್ಪವಿದೆ. ದೇವಾಲಯದ ಮುಂಭಾಗದಲ್ಲಿ ಸ್ಮಾರಕಶಿಲ್ಪಗಳಾದ ಯತಿ, ದಂಪತಿಗಳು, ಹನ್ನೆರಡು ರಾಶಿಗಳ ಶಿಲ್ಪವಿರುವ ಶಿಲಾಫಲಕವಿದೆ.(೧೬-೧೭ ಶತಮಾನ) ದೇವಾಲಯದ ಬಲಭಾಗಕ್ಕೆ ೨೩' x ೨೧½' ಅಳತೆಯ ಭಿನ್ನವಾದ ಚೌಕಾಕಾರದ ಶಿಲಾಫಲಕವಿದ್ದು ಅದು ೧೫.೫ ಅಂಗುಲ ದಪ್ಪವಿದೆ. ದ್ವಾದಶರಾಶಿಗಳ ಸೂಕ್ಷ್ಮಕೆತ್ತನೆಯ ಅತ್ಯುತ್ತಮ ಶಿಲಾಫಲಕವಿದೆ. ದೇವಾಲಯದ ಎಡಭಾಗಕ್ಕೆ ಶಿವಲಿಂಗ, ನಾಗ ಮತ್ತು ಗಜಲಕ್ಷ್ಮಿ ಶಿಲ್ಪಗಳಿವೆ. (ಸುಮಾರು ೧೧ನೆಯ ಶತಮಾನ).

**ಜಿನ ವಿಗ್ರಹ**

ಮನೆಗಾಗಿ ತಳಪಾಯ ಹಾಕಲು ಅಗೆಯುತ್ತಿರುವಾಗ ಕೆಂಪುಮಿಶ್ರಿತ ಕಗ್ಗಲ್ಲಿನಲ್ಲಿ ಜಿನಬಿಂಬವಿರುವ ಶಿಲೆ ಬೆಳಕಿಗೆ ಬಂದಿತು. ಇದರಲ್ಲಿ ಪದ್ಮಾಸನದಲ್ಲಿ ಕುಳಿತು ಯೋಗಮುದ್ರೆಯಲ್ಲಿರುವ ಜಿನ ಬಿಂಬವಿದ್ದು ಇಕ್ಕೆಲಗಳಲ್ಲಿ ಸೂರ್ಯ ಚಂದ್ರರ ಕೆತ್ತನೆಯಿದೆ. ಜಿನ ಬಿಂಬದ ಬಲಭಾಗದಲ್ಲಿ ಆಕಳು ಹುಲಿಯಮರಿಗೆ ಹಾಲುಣಿಸುವ ಕೆತ್ತನೆಯಿದೆ. ಇದು ಬಹುಶಃ ಸಮಾಧಿಮರಣದ ಸಂಕೇತವಾದ ಅಪೂರ್ಣ ನಿಶಿಧಿಗಲ್ಲಾಗಿರಬಹುದು ಅಥವಾ ಶಾಸನ ಶಿಲೆಯಾಗಿರಬಹುದು.

**ಪಾರ್ಶ್ವನಾಥರ ಮೂರ್ತಿಶಿಲ್ಪ**

ಕಾಯೋತ್ಸರ್ಗ ಭಂಗಿಯಲ್ಲಿರುವ ೩½ ಅಡಿ ಎತ್ತರದ ಪಾರ್ಶ್ವನಾಥರ ಮೂರ್ತಿಶಿಲ್ಪ, ಬೆಣಿವಾಡದ ಜೈನಬಸದಿಯ ಗರ್ಭಗೃಹದಲ್ಲಿ ಸುಮಾರು ೧½ ಅಡಿ ಎತ್ತರದ ಸಿಂಹಪೀಠದ ಮೇಲಿದೆ. ತಲೆಯಹಿಂದೆ ನಾಜೂಕು ಕೆತ್ತನೆಯ ಪ್ರಭಾವಳಿಯಿದೆ. ಏಳು ಅಡಿ ಸರ್ಪದಡಿಯಲ್ಲಿ ಸ್ನಿಗ್ಧಮುಖಭಾವದ ಪಾರ್ಶ್ವನಾಥ ಶಿಲ್ಪ ಅಲಂಕರಣದಲ್ಲಿ, ಶೈಲಿಯಲ್ಲಿ ಮದಿಹಳ್ಳಿಯ ಪಾರ್ಶ್ವನಾಥರ ಮೂರ್ತಿಶಿಲ್ಪಕ್ಕಿಂತ ಶ್ರೇಷ್ಠವಾಗಿದೆ. ಎರಡುಸ್ತರದ ವಿಶಾಲ ಬೆಳ್ಗೊಡೆ ಈ ಶಿಲ್ಪದ ಸೌಂದರ್ಯವನ್ನು ಹೆಚ್ಚಿಸಿದೆ. ಸೂಕ್ಷ್ಮಕೆತ್ತನೆ, ನಾಜೂಕಾದ ಅಲಂಕರಣ, ಪ್ರಮಾಣಬದ್ಧ ಮೈಮಾಟ, ನೀಳ ಮೂಗು, ಸ್ನಿಗ್ಧಮುಖಭಾವ, ಶಾಂತಮುಖ, ವೈರಾಗ್ಯ ಸೂಸುವ ಕಂಗಳು, ಎಲ್ಲಕ್ಕೂ ಮಿಗಿಲಾಗಿ ದೈವಿಕಳೆ ಈ ಮೂರ್ತಿಶಿಲ್ಪದ ವೈಶಿಷ್ಟ್ಯವಾಗಿದೆ. ನಾಜೂಕಾದ ಸುಂದರ ಕೆತ್ತನೆಯ ಭವ್ಯ ಪ್ರಭಾವಳಿಯಿದ್ದು, ಇದು ಲತೆಯ ಅಲಂಕರಣ ಮತ್ತು ಸಿಂಹಲಲಾಟವನ್ನು ಹೊಂದಿದೆ. ಪಾದದ ಇಕ್ಕೆಲಗಳಲ್ಲಿ ಪದ್ಮಾಸನದಲ್ಲಿರುವ ಜೈನ ಉಬ್ಬುಶಿಲ್ಪಗಳು ಮತ್ತು ಭುಜದ ಎಡಬಲದಲ್ಲಿ ಜೈನಬಿಂಬಗಳಿವೆ. ದೇಹದ ಪ್ರಮಾಣಬದ್ಧತೆ ಉಬ್ಬು ತಗ್ಗುಗಳನ್ನು ಚಿತ್ರಿಸಿದ್ದನ್ನು ನೋಡಿದರೆ ಶಿಲ್ಪಿಗೆ ಇರಬಹುದಾದ ಅಂಗರಚನಾಶಾಸ್ತ್ರದ ಜ್ಞಾನದ ಅರಿವಾಗುತ್ತದೆ. ಅಲಂಕರಣಶೈಲಿ, ದೇಹರಚನೆ, ಮುಖಲಕ್ಷಣಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈ ಶಿಲ್ಪದ ಕಾಲ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಮಧ್ಯಭಾಗವೆನಿಸುತ್ತದೆ.

**ವೀರಗಲ್ಲುಗಳು**

ಮದಿಹಳ್ಳಿ ಮತ್ತು ಬೆಣಿವಾಡ ಗ್ರಾಮಗಳಲ್ಲಿ ಸುಮಾರು ೧೯ ವೀರಗಲ್ಲುಗಳನ್ನು ಕ್ಷೇತ್ರಕಾರ್ಯದ ಸಮಯದಲ್ಲಿ ಗಮನಿಸಲಾಯಿತು. ಇವುಗಳಲ್ಲಿ ಬಹುತೇಕ ವೀರಗಲ್ಲುಗಳು ಮೂರು ಪಟ್ಟಿಕೆಗಳಲ್ಲಿದ್ದು, ಇವುಗಳಲ್ಲಿಯ ಶಿಲ್ಪವು ಶಿಲ್ಪಿಯ ಕಲಾನೈಪುಣ್ಯತೆಗೆ ಮತ್ತು ಆ ಕಾಲದ ಯುದ್ಧನೀತಿಯ ಚಾಕಚಕ್ಯತೆಗೆ ಹಿಡಿದ



ಮೆಮೊರಿಯಲ್ ಸ್ಟೋನ್ - ಬೆಣಿವಾಡ

ಕನ್ನಡಿಯಂತಿವೆ. ಕುದುರೆ ಕಾಲ್ದಳಗಳ ಯುದ್ಧ, ಹೋರಾಡುತ್ತಿರುವ ಯೋಧರ ಆಟಾಟೋಪ, ವೀರರನ್ನು ದೇವತೆಗಳು ವೀರ ಸ್ವರ್ಗದತ್ತ ಕರೆದೊಯ್ಯುತ್ತಿರುವ ದೃಶ್ಯ, ಆ ಕಾಲದ ವೀರರು ಧರಿಸುತ್ತಿದ್ದ ವೇಷ ಭೂಷಣಗಳು, ಕಿವಿಯೋಲೆ, ಆಭರಣಗಳು, ಹಾಕಿದ ವೀರಗೆಚ್ಚೆ, ಹಿಡಿದ ಬಿಲ್ಲು ಬಾಣ ಭರ್ಚಿಗಳು, ಖಡ್ಗ, ಢಾಲುಗಳನ್ನು ಚಿತ್ರಿಸಿದ ಸೂಕ್ಷ್ಮ ಸುಳುಹು ಹೊಳಹುಗಳ ವಿನ್ಯಾಸಪೂರ್ಣ ಶಿಲ್ಪಗಳಾಗಿವೆ. ಈ ಶಿಲ್ಪಗಳ ಪ್ರಾದೇಶಿಕ ಹಿನ್ನೆಲೆಯ ಅಧ್ಯಯನ ಮತ್ತು ಜಾನಪದಗಳ ಜೊತೆ ತೌಲನಿಕ ಅಧ್ಯಯನದಿಂದ ಜನಾಂಗೀಯ ಇತಿಹಾಸ ಮತ್ತು ಸಂಸ್ಕೃತಿಯ ಪುನಃರಚನೆಗೆ ನೆರವಾಗುತ್ತದೆ. ಈ ವೀರಗಲ್ಲುಗಳಲ್ಲಿರುವ ವೀರರ ವೇಷ ಅವರ ಆಭರಣ, ಅವರು ನಿಂತಭಂಗಿ, ಒಳಗೊಂಡ ಸಂಕೇತಗಳು ಜಾನಪದಸೊಗಡನನ್ನು ಬಿಂಬಿಸುತ್ತವೆ.



ವೀರಗಲ್ಲು - ಬೆಣಿವಾಡ

ಒಟ್ಟಾರೆ ಹೇಳುವುದಾದರೆ ಇಲ್ಲಿ ದೊರೆತ ಪ್ರಾಚ್ಯಾವಶೇಷಗಳಲ್ಲಿ ಬೆಣಿವಾಡಗದ ಬೃಹತ್ ಶಿಲಾಯುದ ದಾರಿಕೋಣೆ ಗೋರಿ, ಜೈನಬಸದಿ ಮಹತ್ವದ್ದೆನಿಸುತ್ತವೆ. ಗ್ರಾಮಗಳ ಮೂರ್ತಿ ಶಿಲ್ಪಗಳು, ದೇವಾಲಯಗಳು ಮತ್ತು ಸ್ಮಾರಕಶಿಲೆಗಳು ಹೊರ ನೋಟಕ್ಕೆ ಶಾಸ್ತ್ರಬದ್ಧ ಶೈಲಿಯನ್ನು ಹೋಲುತ್ತವೆಯಾದರೂ ಸೂಕ್ಷ್ಮ ಪರಿಶೀಲನೆಯಿಂದ ಸ್ಥಳೀಯ ಜಾನಪದ ಪ್ರಭಾವ ಎದ್ದು ಕಾಣುತ್ತದೆ. ಪಾರ್ಶ್ವನಾಥ ಶಿಲ್ಪಗಳು, ದ್ವಾದಶರಾಶಿಗಳ ಶಿಲ್ಪವಿರುವ ಶಿಲಾಫಲಕ ಮತ್ತು ಗಜಲಕ್ಷ್ಮೀ ಶಿಲ್ಪಗಳು ಶಿಲ್ಪಶೈಲಿಯ ದೃಷ್ಟಿಯಿಂದ ಗಮನಾರ್ಹವಾಗಿವೆ.

ತಮ್ಮೊಡಲಿನಲ್ಲಿ ಇತಿಹಾಸವನ್ನಡಗಿಸಿಕೊಂಡಿರುವ ಕರ್ನಾಟಕದ ಅನೇಕ ಹಳ್ಳಿಗಳಲ್ಲಿ ಒಂದು ಎನ್ನಿಸಬಹುದಾದ ಈ ಗ್ರಾಮಗಳ ಪ್ರಚ್ಯಾವಶೇಷಗಳು ಈ ಪ್ರದೇಶದಲ್ಲಿ ಪ್ರಚಲಿತದಲ್ಲಿದ್ದ ಜೈನ, ಶೈವ, ಶಾಕ್ತ ಸಂಪ್ರದಾಯಗಳ, ಅವು ಪಡೆದ ರಾಜಾಶ್ರಯ, ಸಮಕಾಲೀನ ಸಮಾಜ ವ್ಯವಸ್ಥೆ, ಈ ಪ್ರದೇಶದ ಜನರ ಕ್ಷಾತ್ರವೀರ್ಯ, ವೀರಮರಣದ ಘನತೆ ಮತ್ತು ಜನಸಾಮಾನ್ಯರು ಅನುಭವಿಸಿದ ಅನಿಶ್ಚತತೆಯನ್ನು ಪ್ರತಿಬಿಂಬಿಸುತ್ತವೆ. ಸಂಸ್ಕೃತಿಯ ತಳಹದಿ ಎನಿಸಿದ ಆಯಾ ಜೀವನ ಮೌಲ್ಯಗಳ ಚಿತ್ರಣ ಇಂತಹ ಪ್ರಾಚ್ಯಾವಶೇಷಗಳಿಂದ ದೊರೆಯುತ್ತದೆ.

(ಕ್ಷೇತ್ರಕಾರ್ಯದಲ್ಲಿ ನನ್ನೊಂದಿಗಿದ್ದು ಸಹಕಾರ ನೀಡಿದ ನನ್ನ ವಿದ್ಯಾರ್ಥಿಗಳಾದ ಅಮರನಾಥ ಶೆಟ್ಟಿ, ರಾಕೇಶ ಭೀಮಣ್ಣ ಮತ್ತು ಡಿ.ಸಿ. ಪೂಜಾರ ಇವರಿಗೆ ಕೃತಜ್ಞತೆಗಳು)



***

## ಆಧಾರಸೂಚಿ ಮತ್ತು ಟಿಪ್ಪಣಿಗಳು

1. Percy Brown : 1971., *Indian Architecture, Bombay.*
2. Bhattachrya B.C. Lahore 1939., (*The Jaina Iconography*)
3. Settar, S., 1982 *Memorial stones*, Dharwad.
4. Settar,S.1996 *Persuing Death*, Dharwad.

೫. ಪರಶಿವಮೂರ್ತಿ ಡಿ.ವಿ., ೧೯೯೯, ಕನ್ನಡ ಶಾಸನಶಿಲ್ಪ, ಹಂಪಿ

೬. ಮದಿಹಳ್ಳಿ ಹಾಗೂ ಬೆಣಿವಾಡ ಗ್ರಾಮಗಳಲ್ಲಿ ಕೈಕೊಂಡ ಕ್ಷೇತ್ರಕಾರ್ಯ.

ಪ್ರೊ. ಕೆ. ಸಿ. ಮಲ್ಲಿಗವಾಡ*

# ಮುತ್ತಗಿಯ ಪ್ರಾಚ್ಯಾವಶೇಷಗಳು

*ಕಲ್ಯಾಣಿ ಚಾಲುಕ್ಯರು, ಗೋವಾಕದಂಬರು ಆಳಿದ ಪ್ರದೇಶ ಮುತ್ತಗಿ. ಇಲ್ಲಿಯ ಕಲ್ಮೇಶ್ವರ, ರಾಮಲಿಂಗೇಶ್ವರ, ದೇಗುಲಗಳು ಮಾರುತಿ, ಗಣೇಶ, ಬ್ರಹ್ಮದೇವರು, ನೇಮಿನಾಥ, ಪಾರ್ಶ್ವನಾಥ ಸಪ್ತಮಾತೃಕಾ ಶಿಲ್ಪಗಳು ಮುತ್ತಗಿಯ ವಿಶಿಷ್ಟ ಪ್ರಾಚ್ಯಾವ ಶೇಷಗಳೆನಿಸಿ ಇತಿಹಾಸದ ಪದರುಗಳ ಪ್ರದರ್ಶನ ಮಾಡಿಸುತ್ತವೆ. ಮುತ್ತಗಿಯು ಸರ್ವಧರ್ಮ ಸಮನ್ವಯ ಕೇಂದ್ರವಾಗಿತ್ತು. ಈ ಗ್ರಾಮವನ್ನು ಚಿನ್ನ ಮುತ್ತಿಗಿ ಹೊನ್ನು ಮುತ್ತಿಗಿ ಎಂದು ಕರೆಯುವುದುಂಟು. ಇಲ್ಲೊಂದು ಟಂಕಸಾಲೆ ಇದ್ದ ಕುರುಹೂ ಕಾಣಬರುತ್ತದೆ. ಗ್ರಾಮದೇವತೆಗಳ ಪೈಕಿ ಭರಮಪ್ಪನೂ ಇಲ್ಲಿದ್ದುದು ಗಮನಾರ್ಹ.*

ಕರ್ನಾಟಕದ ಸಹ್ಯಾದ್ರಿ ಬೆಟ್ಟದ ಸಾಲಿನಲ್ಲಿ ಸದಾ ಹಚ್ಚ ಹಸಿರಾಗಿರುವ ಪರ್ವತ ಬೆಟ್ಟಗಳ ಮಡಿಲಲ್ಲಿ ನೆಲೆ ನಿಂತ ಧಾರವಾಡ ಜಿಲ್ಲೆಯ ಕಲಘಟಗಿ ತಾಲೂಕದಲ್ಲಿದೆ ಮುತ್ತಗಿ ಗ್ರಾಮ. ಇದು ಕಲ್ಯಾಣ ಚಾಲುಕ್ಯರು, ಗೋವಾ ಕದಂಬರು ಆಳಿಕೆ ನಡೆಸಿದ ಸ್ಥಳವೆಂದು ಕರೆಯಲು ಅಲ್ಲಿರುವ ಶಾಸನಗಳು ಸಾಕ್ಷಿಯಾಗಿವೆ.

ಮುತ್ತಗಿ ಗ್ರಾಮವು ಕಲಘಟಗಿಯಿಂದ ಉತ್ತರಕ್ಕೆ ಸುಮಾರು ೧೬ ಕಿ.ಮೀ. ಇದ್ದರೆ ಧಾರವಾಡದಿಂದ ದಕ್ಷಿಣಕ್ಕೆ ಸುಮಾರು ೨೫ ಕಿ.ಮೀ. ಹುಬ್ಬಳ್ಳಿಯಿಂದ ಪಶ್ಚಿಮಕ್ಕೆ ಸುಮಾರು ೪೦ ಕಿ.ಮೀ. ಅಂತರದಲ್ಲಿದೆ. ಇದೊಂದು ೨೫೦೦ ಜನಸಂಖ್ಯೆ ಹೊಂದಿದ ಪುಟ್ಟ ಗ್ರಾಮ. ಇಲ್ಲಿ ಭತ್ತ, ಸೋಯಾ, ಅವರೆ, ಮುಖ್ಯಬೆಳೆ. ಮಲೆನಾಡಿನ ಭಾಗದಲ್ಲಿ ಭೌಗೋಳಿಕವಾಗಿ ಹೆಚ್ಚು ಮಳೆ ಬೀಳುವ ಸ್ಥಳ ಇದು. ಶಾಲ್ಮಲಾ ಅಥವಾ ಬೇಡ್ತಿ ನದಿ ದಂಡೆ ಮೇಲೆ ನೆಲೆಗೊಂಡಿದೆ.

ಮುತ್ತಗಿಯು ಶೈವ, ಜೈನ ಧರ್ಮದ ಕೇಂದ್ರಸ್ಥಾನವಾಗಿದೆ. ಸುಮಾರು ಕ್ರಿ. ಶ. ೧೧-೧೨ನೇ ಶತಮಾನದ ಪ್ರಾಚ್ಯಾವಶೇಷಗಳು ಇಲ್ಲಿವೆ. ಎಲ್ಲೆಂದರಲ್ಲಿ ಚೆಲ್ಲಾ ಪಿಲ್ಲಿಯಾಗಿಬಿದ್ದಿವೆ.

ಇಲ್ಲಿ ಪತ್ತೆ ಆದ ಪ್ರಾಚ್ಯಾವಶೇಷಗಳೆಂದರೆ ಶ್ರೀ ಕಲ್ಮೇಶ್ವರ ದೇವಾಲಯ, ಶ್ರೀ ರಾಮಲಿಂಗೇಶ್ವರ ದೇವಾಲಯ, ಶ್ರೀ ಮಾರುತಿ ದೇವಸ್ಥಾನ ಮತ್ತು ಶ್ರೀ ಬ್ರಹ್ಮದೇವರ ಮೂರ್ತಿ, ತ್ರುಟಿತ ವಿಘ್ನೇಶ್ವರ, ನಂದಿ, ಸರಸ್ವತಿ, ಬ್ರಹ್ಮದೇವರು, ಶಿವಲಿಂಗ ಮೊದಲಾದವುಗಳನ್ನು ಇದರ ಜೊತೆಗೆ ಭೂ ಉತ್ಖನನದಲ್ಲಿ ಪತ್ತೆ ಆದ ನೇಮಿನಾಥ ಪಾರ್ಶ್ವನಾಥ ವಿಗ್ರಹಗಳು ಇತ್ಯಾದಿಗಳಾಗಿವೆ. ಇವೆಲ್ಲದರ ಜೊತೆಗೆ ಗ್ರಾಮದಲ್ಲಿ ಹೂಡೆ, ಮಣ್ಣಿನ ಹಾಳು ಕೋಟೆ, ಭಾವಿ, ದ್ವಾರ ಹಾಗು ಈ ಗ್ರಾಮದ ಸಮೀಪ ಇರುವ ಹೊಲ ಒಂದರಲ್ಲಿ ಪತ್ತೆ ಆದ ಜೈನ ಪಾರ್ಶ್ವನಾಥ ವಿಗ್ರಹಗಳು ಇಲ್ಲಿನ ಮಹತ್ವದ ಐತಿಹ್ಯವನ್ನು ಸಾರುವ ಅವಶೇಷಗಳಾಗಿವೆ.

**ಶ್ರೀ ರಾಮಲಿಂಗೇಶ್ವರ ದೇವಸ್ಥಾನ :** ಇದು ಕಲ್ಯಾಣೀ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ದೇಗುಲ, ಬೃಹದಾಕಾರವಾದ ತಳಪಾಯ ಹೊಂದಿದ್ದು ಈಗ ಉಳಿದಿರುವದು ಗರ್ಭಗೃಹ ಮಾತ್ರ. ಸುಮಾರು ೫೦' ಉದ್ದ ಮತ್ತು ೨೦' ಅಗಲವಾದ ತಳಪಾಯದಲ್ಲಿ ಯಾವುದೇ ಗೋಡೆಗಳ ಅವಶೇಷಗಳು ಕಂಡು ಬಂದಿಲ್ಲ. ಇದೊಂದು ಮಹತ್ವ ಪೂರ್ಣವಾದ ದೇವಾಲಯವಾಗಿದ್ದು, ಗರ್ಭಗೃಹವು ಒಳಭಾಗದಲ್ಲಿ ೧೦' X ೧೦' ಚೌಕಾಕಾರವಾಗಿದೆ. ಗರ್ಭಗೃಹಕ್ಕೆ ಪ್ರವೇಶ ದ್ವಾರವಿದ್ದು ಯಾವುದೇ ಅಲಂಕಾರ ಹೊಂದಿಲ್ಲ. ಕಲ್ಯಾಣಿ ಚಾಲುಕ್ಯರ ಶೈಲಿಯನ್ನು ಸಾಬೀತು ಪಡಿಸುವ ಈ ಶಿಲಾಮಂಟಪ ೪ ಕಂಬಗಳ ಮಧ್ಯ ತೊಲೆ,

* ಜೆ.ಇ.ಡಿ.ಜೆ.ಕೆ ಹಿರೀಗೌಡವ ಸಂ.ಪೂ ಕಾಲೇಜು ರೊಟ್ಟಿಗವಾಡ.

ಬೋದುಗೆಗಳನ್ನು ಹೊಂದಿದೆ. ಕಂಬಗಳು ಮೆಲ್ಭಾಗದಲ್ಲಿ ಗಡಿಗೆಯಾಕಾರ ಹೊಂದಿದ್ದು ಬೋದುಗೆಗಳು ಕುದುರೆ ಮುಖದ ಆಕಾರದಲ್ಲಿ ಅಲಂಕೃತಗೊಂಡಿದೆ.

ಶ್ರೀ ರಾಮಲಿಂಗೇಶ್ವರ ದೇವಾಲಯ ಉತ್ತರಕ್ಕೆ ಮುಖ ಮಾಡಿ ನಿರ್ಮಾಣವಾಗಿದೆ. ಗರ್ಭಗೃಹದಲ್ಲಿ ಶಿವಲಿಂಗ ಪ್ರತಿಷ್ಠಾಪನೆ ಆಗಿದ್ದು. ೩೨" ಚೌಕಾಕಾರವಾಗಿ ೮" ಎತ್ತರ ೪೮" ಉದ್ದದ ಜಲಪರಿಯನ್ನು ಹೊಂದಿದೆ. ಆದರೆ ಗಮನಾರ್ಹ ಬದಲಾವಣೆ ಎಂದರ ಶಿವಲಿಂಗದ ಜಲಪರಿಯು ಬಲಭಾಗಕ್ಕೆ



ರಾಮಲಿಂಗೇಶ್ವರ ದೇವಾಲಯ

ಇದ್ದು ಪೂರ್ವದಿಕ್ಕಿಗೆ ನೀರು ಹೋಗಲು ಅನುಕೂಲವಾಗಿದೆ. ಸಾಮಾನ್ಯವಾಗಿ ಎಲ್ಲ ಶಿವಲಿಂಗಗಳ ಜಲಹರಿಗಳು ಪೀಠದ ಎಡಭಾಗಕ್ಕೆ ಕಂಡುಬರುತ್ತವೆ. ಇದೊಂದು ವೈಚಿತ್ರಮಯ ಜಲಹರಿ ಆಗಿದೆ. ಪೀಠವು ಸುಂದರವಾಗಿ ಕಂಗೊಳಿಸುತ್ತಿದೆ. ಪೀಠದ ಮೇಲ್ಭಾಗದಲ್ಲಿ (ಗರ್ಭಗೃಹ) ಅಷ್ಟಕೋನಾ ಕೃತಿಯ ಗೋಪುರ ನಿರ್ಮಿಸಿದ್ದು ಮಧ್ಯದಲ್ಲಿ ಸುಂದರವಾದ ಕಮಲ ವನ್ನು ಕೆತ್ತಲಾಗಿದೆ. ಮೇಲ್‌ಚ್ಚತ್ತವನ್ನು ಮಣ್ಣಿನಿಂದ ಮುಚ್ಚಿದ್ದಾರೆ. ಈಗ ದೂರದಿಂದ ದೇಗುಲ ನೋಡಿದರೆ ಇದೊಂದು ಮಣ್ಣಿನ ಗುಡ್ಡೆಯಂತೆ ಕಾಣುತ್ತದೆ. ಗರ್ಭಗೃಹದ ಸುತ್ತಲು ಬೃಹದಾಕಾರವಾದ ಕಲ್ಲುಗಳನ್ನು ಜೋಡಿಸಿ ಗೋಡೆಯನ್ನು ನಿರ್ಮಿಸಿದ್ದಾರೆ. ಕಲ್ಲುಗಳ ಜೋಡಣೆಗೆ ಯಾವುದೇ ಗಚ್ಚು, ಗಾರೆಯನ್ನು ಬಳಸದೆ ಅಳತೆಗೆ ತಕ್ಕಂತೆ ಕಲ್ಲನ್ನು ತುಂಡರಿಸಿ ಗೋಡೆಯನ್ನು ನಿರ್ಮಿಸಿರುವುದು ವಿದಿತ. ಪೂರ್ವದ ಗೋಡೆಯಲ್ಲಿ ಚಿಕ್ಕ ಮಾಡನ್ನು ನಿರ್ಮಿಸಲಾಗಿದೆ. ಬಹುತೇಕ ದೇವರನ್ನು ಪ್ರತಿಷ್ಠಾಪಿಸಲು ಇದಾಗಿರಬಹುದು. ದೇಗುಲದ ತೊಲೆ, ಬೋದುಗೆಗಳು, ಕಂಬಗಳು, ಭೀಮಕಾಯದಂತೆ ಗಟ್ಟಿ ಮುಟ್ಟಾಗಿ ನಿಂತಿರುವದು ವಿಶೇಷವಾಗಿದೆ.

**ಗಣಪತಿ ವಿಗ್ರಹ :** ದೇವಾಲಯದ ಹೊರಭಾಗದಲ್ಲಿ ಬಲಗೋಡೆಗೆ ಆನಿಸಿ ನಿಲ್ಲಿಸಿದ ಶ್ರೀ ವಿಘ್ನೇಶ್ವರನ ಮೂರ್ತಿ ಅದೇ ಕಾಲದ್ದಾಗಿದೆ. ಗಣೇಶನ ವಿಗ್ರಹದ ಎತ್ತರ ೪೦" ಅಗಲ ೨೪" ಆಗಿದೆ; ಕುಳಿತ ಭಂಗಿಯಲ್ಲಿದ್ದು ಚತುರ್ಭುಜಗಳನ್ನು ಹೊಂದಿದ್ದಾನೆ. ಸೊಂಡಿಲನ್ನು ಎಡಕ್ಕೆ ಹೊರಳಿಸಿ ಬಲಗಾಲನ್ನು ಮೇಲೆ ಮಾಡಿ ಎಡಗಾಲಿನ ಮೇಲೆ ಭಾರಹಾಕಿ ಬರಹಕ್ಕೆ ಸಜ್ಜಾಗಿ ಕುಳಿತ ಭಂಗಿಯಲ್ಲಿದ್ದಾನೆ. ಬಲಗೈಯಲ್ಲಿ ಲೇಖನಿ, ಮೇಲಿನ ಕೈಯಲ್ಲಿ ಕೊಡಲಿ, ಎಡಗೈಯಲ್ಲಿ ಬೆಣ್ಣೆ ಉಂಡಿ, ಮೇಲಿನ ಭುಜದಲ್ಲಿ ಅಂಕುಶ ಹಿಡಿದಿದ್ದಾನೆ. ತಲೆಯ ಹಿಂಭಾಗದಲ್ಲಿ ಸಣ್ಣ ಪ್ರಭಾವಳಿ ಇದ್ದು ಯಾವುದೇ ಅಲಂಕಾರ ಹೊಂದಿರುವುದಿಲ್ಲ.

ದೇವಾಲಯದ ಹೊರಭಾಗದ ಎಡ ಗೋಡೆಗೆ ನಿಲ್ಲಿಸಿದ ಶಾಸನದಲ್ಲಿ ೧)ಗೋವಾಕದಂಬರ ೩ನೇ ಜಯಕೇಶಿಯ ೧೨೨೩ರಲ್ಲಿ ಮುತ್ತಿಗಿಯ ಬೇತಗಾವುಂಡಾದಿಗಳು ಸುಳ್ಳೇಶ್ವರ ದೇವರಿಗೆ ಭೂದಾನ ಮಾಡಿದ್ದಿದೆ. ೨) ಕೆರೆಯ ಏರಿಯ ಮೇಲಿದ್ದ ಗೋವಾ ಕದಂಬರ ಪೆರ್ಮಾಡಿ ದೇವರ ೧೧೭೪ರ ಶಾಸನದಲ್ಲಿ ಅರಸಾವಿಗಳಿಂದ ದಾನ ಮಾಡಿದ ವಿವರಗಳಿವೆ. ಇದನ್ನು ಡಾ।। ಗುರವ ಅವರು ತಮ್ಮ ಪಿ.ಎಚ್.ಡಿ ಗ್ರಂಥದಲ್ಲಿ ಪ್ರಕಟಿಸಿದ್ದಾರೆ. ಇದೇ ಗೋಡೆಗೆ ಆನಿಸಿ ನಿಲ್ಲಿಸಿದ ಮತ್ತೊಂದು ತ್ರುಟಿತ ಕಲಾಸ್ಮಾರಕ ಬ್ರಹ್ಮ ಸರಸ್ವತಿಯರದು. ಮುಖ, ಪ್ರಭಾವಳಿಯ ಎಲ್ಲಾ ಭಾಗವು ಒಡೆದು ಹೋಗಿದ್ದರಿಂದ ನಿರ್ದಿಷ್ಟಪಡಿಸುವುದು ಕಷ್ಟವಾಗಿದೆ.

ಗರ್ಭಗೃಹದ ಮುಂಭಾಗದ ಬಯಲು ಜಾಗೆಯಲ್ಲಿ ನಂದಿ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಇದರ ಕೆಳಗೆ ಇರುವ ಪೀಠವು ಬೇರೆಯಾಗಿದ್ದು, ಭಕ್ತರು ಎಲ್ಲಿಯೋ ಇದ್ದ ಪೀಠದ ಮೇಲೆ ನಂದಿ ವಿಗ್ರಹವನ್ನು ಪ್ರತಿಷ್ಠಾಪಿಸಿದ್ದಾರೆ. ಈ ನಂದಿಯು ಆಗಿನ ಕಾಲಕ್ಕೆ ಸಂಬಂಧಿಸಿದ್ದಾಗಿದ್ದು ಸರಳಸುಂದರ ಕೆತ್ತನೆ ಹೊಂದಿದೆ. ಶ್ರೀ ರಾಮಲಿಂಗೇಶ್ವರ ದೇವಾಲಯದ ಎದುರುಗಡೆ ಬೃಹದಾಕಾರವಾದ ನೀರಿನ ಹೊಂಡವಿದ್ದು ಅಂದು ಈ ಹೊಂಡದಿಂದ ನೀರನ್ನು ತೆಗೆದುಕೊಂಡು ಬಂದು ಶ್ರೀ ದೇವರ ಅಭಿಷೇಕ ಪೂಜೆ ನಡೆಸಲಾಗುತ್ತಿತ್ತು. ಇದಲ್ಲದೆ ದೇವರ ಹೊಂಡಕ್ಕೆ ಹತ್ತಿಕೊಂಡೇ ಮತ್ತೊಂದು ಬೃಹದಾಕಾರವಾದ ಕೆರೆ ನಿರ್ಮಾಣವಾಗಿದೆ. ಇದನ್ನು ಗ್ರಾಮಸ್ಥರು ಕುಡಿಯುವ ನೀರಿಗಾಗಿ ಬಳಸುತ್ತಿದ್ದಾರೆ. ಇದೇ ದೇವಾಲಯಲ್ಲಿ ಮತ್ತೊಂದು ತ್ರುಟಿತ ಶ್ರೀ ಗಣೇಶನ ವಿಗ್ರಹವಿದ್ದು ಅದು ಕೂಡಾ ಅಷ್ಟೊಂದು ಅಲಂಕೃತ ಗೊಂಡಿಲ್ಲ.

ಈ ಗ್ರಾಮವು ಮೊದಲು ಒಂದು ಶೈಕ್ಷಣಿಕ ಧಾರ್ಮಿಕ ಕೇಂದ್ರವಾಗಿತ್ತೆಂದು ಇಲ್ಲಿ ಆಡಳಿತದ ಒಂದು ಘಟಕವು ಸಹ ಇತ್ತೆಂದು ಹೇಳಲು ಹಲವು ಸಾಕ್ಷ್ಯಾಧಾರಗಳಿವೆ.

**ತೀರ್ಥಂಕರರಾದ ಪಾರ್ಶ್ವನಾಥ, ನೇಮಿನಾಥ ವಿಗ್ರಹಗಳು:** ಮುತ್ತಗಿ ಗ್ರಾಮದಲ್ಲಿ ಸರಕಾರದಿಂದ ಮಂಜೂರಿಯಾದ ಪ್ರಾಥಮಿಕ ಆರೋಗ್ಯ ಕೇಂದ್ರದ A.N.M ದಾದಿಯರ ವಸತಿ ಗೃಹ ನಿರ್ಮಾಣ ಮಾಡಲು ಅಡಿಪಾಯ ತೆಗೆಯುವಾಗ ಎರಡು ವಿಗ್ರಹಗಳು ಪತ್ತೆ

ಆದವು. ಗ್ರಾಮಸ್ಥರು ಅವುಗಳನ್ನು ಸುರಕ್ಷಿತವಾಗಿ ಹೊರ ತೆಗೆದು ಗ್ರಾಮದ ಬಸ್‌ಸ್ಟಾಂಡ್ ಹತ್ತಿರ ದಾನಿಗಳ ಸಹಾಯದಿಂದ ಒಂದು ಬಸದಿಯನ್ನು ನಿರ್ಮಿಸಿ ಅದರಲ್ಲಿಯೇ ಎರಡು ದೇವರನ್ನು ಪ್ರತಿಷ್ಠಾಪಿಸಿದ್ದಾರೆ. ಇಲ್ಲಿ ಈಗ ಒಂದೇ ಒಂದು ವಲಸ ಬಂದ ಜೈನ ಕುಟುಂಬವಿದ್ದು ಅವರೇ ಈ ಬಸದಿಯ ಸಂಪೂರ್ಣ ಪೂಜಾ ವ್ಯವಸ್ಥೆ ಮಾಡುತ್ತಿರುವದು ಸಂತೋಷ.

**ನೇಮಿನಾಥ ವಿಗ್ರಹ :** ಭೂಮಿಯಿಂದ ಅಗೆದು ತೆಗೆಯುವಾಗ ಮುಖದ ಭಾಗ ತ್ರುಟಿತಗೊಂಡಿದ್ದು ಅದಕ್ಕೆ ಈಗ ವಜ್ರ ಲೇಪನ ಮಾಡಿ ಪೂಜೆಗೆ ಅಣಿಗೊಳಿಸಿದ್ದಾರೆ. ಇದು ನಿಂತ ಭಂಗಿಯಲ್ಲಿದ್ದು ಸುಮಾರು ೧೫ ವರ್ಷಗಳ ಹಿಂದೆ ಇವನ್ನು ಪತ್ತೆಹಚ್ಚಲಾಗಿದೆ. ಈ ವಿಗ್ರಹವು ಸಹ ೧೨ನೇ ಶತಮಾನಕ್ಕೆ ಸಂಬಂಧಿಸಿದ್ದಾಗಿದ್ದು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡಿರುವ ಸಾಧ್ಯತೆಗಳಿವೆ. ದಿಗಂಬರ ಜೈನಧರ್ಮದ ಅವತಾರಿ ಪುರುಷನ ಮೇಲ್ಭಾಗದಲ್ಲಿ ಪ್ರಭಾವಳಿ ಇದೆ. ಸ್ವಸ್ತಿಕ ಚಿಹ್ನೆ ಇದ್ದು. ಮೇಲೆ ಎಡ ಭಾಗದಲ್ಲಿ, ಬಲಭಾಗದಲ್ಲಿ ಚಾಮರ ಹಿಡಿದು ನಿಂತ ಸನ್ಯಾಸಿಯರಿದ್ದಾರೆ. ಎಡಬಲದಲ್ಲಿ ಚಕ್ರ, ಸ್ವಸ್ತಿಕ ಚಿತ್ರಗಳನ್ನು ಕೆತ್ತಲಾಗಿದೆ. ಕೆಳಭಾಗದಲ್ಲಿ ಕುಳಿತ ಭಂಗಿಯಲ್ಲಿದ್ದು ಯಕ್ಷ ಯಕ್ಷಿಣಿಯರ ವಿಗ್ರಹಗಳು ಪಾದದಡಿಯಲ್ಲಿದ್ದು ಸುಮಾರು ೧೦" ಎತ್ತರವಾಗಿದೆ. ಚತುರ್ಭುಜಗಳನ್ನು ಹೊಂದಿವೆ.



ನೇಮಿನಾಥ ವಿಗ್ರಹ

ನೇಮಿನಾಥ ವಿಗ್ರಹವು ೩೨" ಎತ್ತರ ೧೨" ಅಗಲ ಆದರೆ ಪ್ರಭಾವಳಿ ಸಮೇತ ವಿಗ್ರಹವು ಎತ್ತರ ೪೨" x ೨೫" ಅಗಲವಾಗಿದೆ.

**ಪಾರ್ಶ್ವನಾಥ ವಿಗ್ರಹ :** ಇದೂ ಸಹ ಆರೋಗ್ಯ ಇಲಾಖೆಯ ವಸತಿ ಕಟ್ಟಡ ನಿರ್ಮಾಣ ಕಾರ್ಯ ಮಾಡುವಾಗ ಅಡಿಪಾಯದಲ್ಲಿ ಪತ್ತೆ ಆಗಿದೆ. ಇದು ಪ್ರಭಾವಳಿ ಸಮೇತ ೫೪" ಎತ್ತರ ೨೪" ಅಗಲವಾಗಿದೆ. ನಿಂತ ಭಂಗಿಯಲ್ಲಿದ್ದ ವಿಗ್ರಹದ ಹಿಂದೆ ಎದ್ದುನಿಂತ ೭ ಹೆಡೆಸರ್ಪವಿದೆ.

ಇದು ಪಾರ್ಶ್ವನಾಥನಿಗೆ ಶ್ರೀ ರಕ್ಷೆ ಒದಗಿಸಲು ನಿಂತಂತೆ ಕಾಣುತ್ತದೆ. ವಿಗ್ರಹದ ಸುತ್ತಲೂ ಪ್ರಭಾವಳಿ ಇದ್ದು ಇದರಲ್ಲಿ ಸಿಂಹಗಳು ಎದ್ದು ನಿಂತಿದ್ದು ವಿಗ್ರಹದ ಪಾದದ ಹತ್ತಿರ ಯಕ್ಷ ಯಕ್ಷಿಣಿಯರ ವಿಗ್ರಹಗಳು ೮" ಎತ್ತರದಲ್ಲಿ ನಿರ್ಮಾಣಗೊಂಡಿದೆ. ಪಾರ್ಶ್ವನಾಥನದು ಗುಂಗುರಗೂದಲೂ ಸುಂದರವಾದ ಮುಖ. ಹರವಾದ ಎದೆ ನೀಳವಾದ ಕಾಲು ಆಕರ್ಷವಾದ ಪಾದಗಳಿದ್ದು. ಭಕ್ತಿ ಪ್ರಸನ್ನತೆಗೆ ಹೆಸರಾಗಿದೆ. ಪ್ರಭಾವಳಿಯಲ್ಲಿ ಚಾಮರ ಹಿಡಿದು ನಿಂತ ಯಕ್ಷಣಿಯರು ಸಿಂಹ, ಚಕ್ರ, ಮೊದಲಾದವುಗಳನ್ನು ಕೆತ್ತಲಾಗಿದ್ದು. ತಲೆಯ ಮೇಲಿದ್ದ ಸರ್ಪ ಜನರಿಗೆ ಭಯ ಹುಟ್ಟಿಸುವಂತೆ ತನ್ನ ಹೆಡೆಯನ್ನು ಬಿಚ್ಚಿಟ್ಟುಕೊಂಡು ಶ್ರೀ ದೇವರಿಗೆ ನೆರಳು ನೀಡುವ ಭಂಗಿಯಲ್ಲಿರುವದನ್ನು ನೋಡಿದರೆ ತಪಸ್ವಿ ಪಾರ್ಶ್ವನಾಥನ ಪ್ರಾಣಿದಯಾಗುಣವನ್ನು ಎತ್ತಿ ತೋರಿಸುವಂತಿದೆ.



ಪಾರ್ಶ್ವನಾಥ ವಿಗ್ರಹ

ನೇಮಿನಾಥ, ಪಾರ್ಶ್ವನಾಥ ವಿಗ್ರಹಗಳ ಪಾದದ ಕೆಳಗೆ ಇದ್ದ ಸ್ಥಳದಲ್ಲಿ ಹಳೆಗನ್ನಡ ೪ ಸಾಲಿನ ಶಾಸನಗಳಿವೆ ಇದನ್ನು ದಿ. ಡಾ|| ರಘುನಾಥ ಭಟ್‌ರವರು ಓದಿ ಇಲ್ಲೊಂದು ಯಾಪನೀಯ ಜೈನ ಮುನಿಗಳ ಸಂಘ ಪ್ರಚಲಿತವಾಗಿತ್ತು. ಅಂದರೆ ಮುತ್ತಿಗೆ ಗ್ರಾಮ ಧರ್ಮ ಪ್ರಚಾರ ಕಾರ್ಯ ಕೈಗೊಂಡು ಜೈನ ಧರ್ಮಿಯರ ಶ್ರೇಯೋಭಿವೃದ್ಧಿಗೆ ಶ್ರಮಿಸುವ ಉದ್ದೇಶ ಹೊಂದಿತ್ತೆಂದು ತಿಳಿಸಿದ್ದಾರೆ. ಹೀಗೆ ಜೈನ ಸಂಪ್ರದಾಯಕ್ಕೆ ತನ್ನ ವಿಶಾಲ ಹಸ್ತ ನೀಡಿದ ಮುತ್ತಿಗೆ ಹಲವಾರು ಐತಿಹ್ಯಗಳಿಗೆ ಹೆಸರುವಾಸಿಯಾಗಿದೆ. ಇದೊಂದು ಸರ್ವ ಧರ್ಮ ಸಮನ್ವಯ ಕೇಂದ್ರವಾಗಿತ್ತು.

**ಶ್ರೀ ಕಲ್ಮೇಶ್ವರ ದೇವಸ್ಥಾನ :** ಇದು ಈಗ ಜೀರ್ಣೋದ್ಧಾರವಾಗಿದ್ದು ಮೊದಲಿದ್ದ ದೇಗುಲ ಮಾಯವಾಗಿದೆ. ಅದೇ ಸ್ಥಳದಲ್ಲಿ ನೂತನವಾಗಿ ಸಿಮೆಂಟ ಕಟ್ಟಡ ನಿರ್ಮಿಸಿದ್ದಾರೆ. ಮೊದಲಿದ್ದ ದೇವಾಲಯಗಳು ನೆಲಕಚ್ಚಿವೆ. ವಿಶಾಲವಾದ ಬಯಲಿನಲ್ಲಿ ಚದುರಿದಂತೆ ಬಿದ್ದಿರುವ ಶ್ರೀ ಕಲ್ಮೇಶ್ವರ ದೇವಾಲಯದ ಅವಶೇಷಗಳನ್ನು ಮತ್ತೆ ಒಂದುಗೂಡಿಸಿ ಅಲ್ಲೊಂದು ದೇಗುಲ ನಿರ್ಮಿಸುವುದು ಅತ್ಯವಶ್ಯವಾಗಿದೆ. ಇವುಗಳನ್ನು ಸಂಬಂಧಿಸಿದ ಇಲಾಖೆಯವರು ರಕ್ಷಿಸಬೇಕಾದ ಅಗತ್ಯವಿದೆ.

ಶ್ರೀ ಕಲ್ಮೇಶ್ವರ ದೇವಾಲಯ : ಇದು ಕಲ್ಯಾಣಿ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದ ದೇವಾಲಯ. ಸುಮಾರು ೧೦-೧೧ನೇ ಶತಮಾನದಲ್ಲಿ ನಿರ್ಮಾಣಗೊಂಡಿದೆ. ಪ್ರವೇಶದ್ವಾರವು ಪೂರ್ವಾಭಿಮುಖವಾಗಿದೆ. ಇದು ನವರಂಗ ಸಭಾಮಂಟಪಗಳನ್ನು ಹೊಂದಿತ್ತು. ಅವೆಲ್ಲ ಕ್ಷೀಣಗೊಂಡ ಕಾರಣ ಹಳೆಯ ದೇಗುಲವನ್ನು ಬಿಚ್ಚಿ ಗ್ರಾಮಸ್ಥರು ಅದೇ ಸ್ಥಳದಲ್ಲಿ ನೂತನ ದೇವಾಲಯವನ್ನು

ನಿರ್ಮಿಸಿದ್ದಾರೆ. ದೇವಾಲಯದ ಎದುರಿಗೆ ಒಂದು ಹೊಂಡವಿದ್ದು ಅದು ದೇವರ ಪೂಜೆಗೆ ನೀರು ಪೂರೈಸಲು ಮೀಸಲಾಗಿತ್ತು. ಶ್ರೀ ಕಲ್ಮೇಶ್ವರ ದೇವಾಲಯದ ಸುತ್ತಲೂ ವಿಶಾಲವಾದ ಜಾಗೆ ಇದ್ದು ಸಂಶೋಧನೆಗೆ ತೆರೆದುಕೊಂಡಿದೆ. ನಡೆಸಿದರೆ.

ಈ ದೇವಾಲಯವ ಗರ್ಭಗೃಹದಲ್ಲಿ ಈಗ ಶಿವಲಿಂಗ ವಿದ್ದು ಅದರ ಮೇಲೆ ನೂತನ ಈಶ್ವರ ಲಿಂಗವನ್ನು ಸ್ಥಾಪಿಸಿದ್ದಾರೆ.


ಕಲ್ಮೇಶ್ವರ ದೇವಸ್ಥಾನ

ಮೊದಲಿನ ದೇವಾಲಯವು ೧೦" x ೧೦" ಅಗಲಳತೆಯ ಗರ್ಭಗೃಹ ಹೊಂದಿದ್ದು ಮೆಲ್ಭಾಗದಲ್ಲಿ ಅಷ್ಟಕೋನಾಕೃತಿಯಲ್ಲಿ ನಿರ್ಮಿಸಿದ ಗೋಪುರವಿತ್ತು. ಅದರ ಮೆಲ್ಭಾಗದಲ್ಲಿ ಸುಂದರವಾದ ಸಹಸ್ರದಳ ಕಮಲವಿದ್ದ ಕಲ್ಲು ಈಗಲೂ ಬಯಲು ಜಾಗೆಯಲ್ಲಿ ಕಂಗೊಳಿಸುತ್ತಿದೆ. ದೇವಾಲಯದ ಗರ್ಭಗೃಹದ ಪ್ರವೇಶದ್ವಾರದ ಚೌಕಟ್ಟುಗಳು ಅಚ್ಚಳಿಯದೇ ಹಾಗೆ ಹೊರಬಿದ್ದಿವೆ. ತೊಲೆಬೋವೆ ಮೇಲ್ಛತ್ತಿಗೆ ಅವಶ್ಯವಿದ್ದ ಹೊದಿಕೆ ಕಲ್ಲುಗಳ ರಾಶಿ ಅಲ್ಲಿ ಕಂಗೊಳಿಸುತ್ತಿದೆ.

ಇತ್ತೀಚಿನ ದಿನಗಳಲ್ಲಿ ಪ್ರಾಚೀನ ದೇವಾಲಯಗಳ ಜೀರ್ಣೋದ್ದಾರ ಕಾರ್ಯ ಕೈಗೆತ್ತುಕೊಂಡ ಶ್ರೀ ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ವಿರೇಂದ್ರ ಹೆಗಡೆಯವರು ಶ್ರೀ ಧರ್ಮ ಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ ರಿಜಿಸ್ಟರ್ಡ್ ಧರ್ಮಸ್ಥಳವೆಂಬ ಸಂಸ್ಥೆ ಪ್ರಾರಂಭಿಸಿ ಅದರ ಮುಖಾಂತರ ಗ್ರಾಮಾಂತರ ಪ್ರದೇಶದಲ್ಲಿದ್ದ ಪ್ರಾಚೀನ ದೇವಾಲಯಗಳ ಪುನಃ ನಿರ್ಮಾಣ ಕಾರ್ಯವನ್ನು ಕೈಗೆತ್ತಿಕೊಂಡಿರುವುದು ಗಮನಾರ್ಹ. ಈ ಕಾರಣ ಮುತ್ತಗಿಯ ಶ್ರೀ ಕಲ್ಮೇಶ್ವರ ದೇವಾಲಯದ ಪುನಃ ನಿರ್ಮಾಣ ಕಾರ್ಯವನ್ನು ಅವರು ಕೈಕೊಳ್ಳಲು ಒಂದು ಮನವಿ ಪತ್ರವನ್ನು ಸಲ್ಲಿಸಲಾಗಿದೆ. ಈ ದೇವಾಲಯದಲ್ಲಿ ಸಪ್ತಮಾತೃಕೆಯರ ೨ ಕಲ್ಲುಗಳಿವೆ. ಹೊರಭಾಗದಲ್ಲಿ ೨ ಶಾಸನಗಳಿದ್ದು ಅವು ೧) ಹೊಸ್ತಿಲಕೆಳಗೆ ಗೋವಾಕದಂಬರ ೩ನೇ ಜಯಕೇಶಿಯು


ಸಪ್ತಮಾತೃಕೆಯರು

ದೇವರಿಗೆ ೧೧೯೩ರಲ್ಲಿ ಭೂದಾನ ಮಾಡಿದ್ದು ೨) ಇನ್ನೊಂದು ಬಲಭಾಗದಲ್ಲಿ ೩ನೇ ಜಯಕೇಶಿಯ ೧೨೩೩ರ ಶಾಸನದಲ್ಲಿ ಮುತ್ತಿಗೆಯ ಬೇತಗಾವುಂಡಾದಿಗಳು ಸುಳ್ಳೇಶ್ವರ ದೇವರಿಗೆ ಭೂದಾನ ಮಾಡಿದ ಸಂಗತಿ ಇದೆ. ದೇವಾಲಯದ ಎಡ ಭಾಗದ ಲ್ಲೊಂದು ಸುಂದರವಾದ ಮಹಾಸತಿ ಕಲ್ಲು ಇದೆ. ಇದು ಸಹ ಕಲ್ಯಾಣಿ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದ್ದಾಗಿದೆ. ಇದು ೩ ಪಟ್ಟಿಕೆ ಗಳನ್ನು ಹೊಂದಿದೆ. ಕೆಳಗೆ ವೀರಾವೇಶದಿಂದ ಹೋರಾಡುವ ಮಹಿಳೆ ೩ನೇ ಪಟ್ಟಿಯಲ್ಲಿ ಸ್ವರ್ಗರೋಹಣದ ಚಿತ್ರವನ್ನು ಹಾಗು ಮಹಿಳೆಯ ಎಡ ಬಲಗಳಲ್ಲಿ ಗೋವು, ಕರು, ಈಶ್ವರ, ಸೂರ್ಯ ಚಂದ್ರರ ವಿಗ್ರಹ ಕೆತ್ತಲಾಗಿದೆ.

**ಕೋಟೆ :** ಮುತ್ತಗಿಯ ಕೋಟೆ ಬೃಹದಾಕಾರವಾದದ್ದು. ಸುಮಾರು ೮-೧೦ ಎಕರೆ ಕ್ಷೇತ್ರದಲ್ಲಿ ಮಣ್ಣು, ಕಲ್ಲುಗಳಿಂದ ನಿರ್ಮಿಸಲಾಗಿದೆ. ಕೋಟೆ, ಗೋಡೆ ಸುತ್ತಲು ಆಳವಾದ ಕಂದಕ ಕೊರೆಯಲಾಗಿದ್ದು, ಇದರಲ್ಲಿ ನೀರು ತುಂಬಿಸಿ ಅದರಲ್ಲಿ ವಿಷಜಂತುಗಳನ್ನು ಸಾಕಿ ವೈರಿಗಳು ಒಳ ಬರದಂತೆ ಮಾಡಿರುವ ಯೋಜನೆ ಇದಾಗಿದೆ. ಕೋಟೆಯು ವಿಶಾಲವಾಗಿದ್ದು. ಆಡಳಿತ ನಡೆಸಲು ಇದನ್ನು ನಿರ್ಮಿಸಲಾಗಿತ್ತು. ಒಳಭಾಗದಲ್ಲಿ ದೊಡ್ಡ ಭಾವಿ ಇದ್ದು ಕೋಟೆಗೆ ಬೃಹದಾಕಾರವಾದ ಪ್ರವೇಶದ್ವಾರವಿದೆ. ಈಗ ಇದೆಲ್ಲವು ಮುಳ್ಳಿನ ಕಂಟಿ, ಗಿಡಗಳಿಂದ ಆವೃತವಾಗಿರುವುದ ರಿಂದ ಇದನ್ನು ಸಂರಕ್ಷಿಸುವುದು ಅತ್ಯವಶ್ಯವಾಗಿದೆ. ಗ್ರಾಮದ ಜನರು ಈ ಕೋಟೆಯನ್ನು ನೆಲಸಮಗೊಳಿಸಿ ಇಲ್ಲೊಂದು ಸರಕಾರಿ ಹೈಸ್ಕೂಲ ಕಟ್ಟಿಸುವ ಹುನ್ನಾರದಲ್ಲಿದ್ದಾರೆ. ಅದನ್ನು ತಪ್ಪಿಸಿ ಹಳೆಯ ಕೋಟೆಯನ್ನು ರಕ್ಷಿಸುವ ಕಾರ್ಯವನ್ನು ಸರಕಾರ ಕೈಗೆತ್ತಿಗೊಳ್ಳುವುದು ಅತ್ಯವಶ್ಯವಾಗಿದೆ.

ಗ್ರಾಮದ ಶ್ರೀ ಹನುಮಂತ ದೇವರ ಗುಡಿ ಇದು ಸಹ ಪ್ರಾಚೀನ ದೇಗುಲವಾಗಿದ್ದು, ಕೇವಲ ಗರ್ಭಗೃಹವನ್ನು ಕಲ್ಯಾಣಿ ಚಾಲುಕ್ಯರು ನಿರ್ಮಿಸಿದ್ದು, ಅದರ ಮೇಲ್ಭಾಗದಲ್ಲಿ ಗೋಪುರ ನಿರ್ಮಿಸಿದ್ದಾರೆ. ದಕ್ಷಿಣಾಭಿಮುಖವಾಗಿ ನಿರ್ಮಾಣಗೊಂಡ ಶ್ರೀ ಹನುಮಂತ ದೇವರ ಗುಡಿ, ಪ್ರಾಚೀನ ಅವಶೇಷಗಳ ತಾಣ ಚೌಕಾಕಾರವಾದ ಶಿಲಾಮಂಟಪದಲ್ಲಿ ೪ ಕಂಬಗಳು ಮೇಲೆ ಗಡಿಗೆ, ತೊಲೆ, ಬೋದುಗೆಗಳನ್ನು ಹೊಂದಿ ರಕ್ಷಣೆ ಮಾಡಿದ್ದಾರೆ. ಸುಂದರವಾದ ದೇವಾಲಯವಾಗಿದೆ. ಅದರ ಗರ್ಭಗೃಹದ ಮೇಲೆ ಇಳಿಜಾರಾಗಿ ಮಲೆನಾಡಿನ ಹೆಂಚು ಹಾಕಿದ್ದಾರೆ.

**ಮಹಾಸತಿ ಕಲ್ಲು** : ಹನುಮಂತ ದೇವರ ಗುಡಿ ಎದುರಿನ ಬಲಭಾಗದ ಗೋಡೆಗೆ ನಿಲ್ಲಿಸಿದ ಮಹಾಸತಿ ಕಲ್ಲು ಪ್ರಾಚೀನ ಕಾಲದ್ದಾಗಿದೆ. ೩ಪಟ್ಟಿಕೆಗಳನ್ನು ಹೊಂದಿದ್ದು ಕೆಳಭಾಗದಲ್ಲಿ ಮಹಿಳೆಯ ಯುದ್ಧದ ಸನ್ನಿವೇಶ ೩ನೇ ಪಟ್ಟಿಕೆಯಲ್ಲಿ ಮಹಿಳೆಯನ್ನು ದೇವಲೋಕಕ್ಕೆ ಕರೆದೊಯ್ಯುತ್ತಿರುವದು, ಅದರ ಜೊತೆ ವಾದ್ಯಮೇಳದ ಚಿತ್ರಣವನ್ನು ಬಿಡಿಸಲಾಗಿದೆ. ೩ನೇ ಪಟ್ಟಿಕೆಯಲ್ಲಿ ಮಹಾಸತಿಯನ್ನು ಸ್ವರ್ಗದಲ್ಲಿ ಆಹ್ವಾನಿಸಲಾಗಿರುವ ಚಿತ್ರವನ್ನು ಶಿಲ್ಪಿ ಬಹಳ ಸುಂದರವಾಗಿ ಕೆತ್ತಿದ್ದಾನೆ.

ಕಲ್ಲಿನ ಮೇಲ್ಭಾಗದಲ್ಲಿ ಸೂರ್ಯಚಂದ್ರ ಆಕಳು ಹಾಗೂ ಹಸುವಿನ ಮೊಲೆ ಕುಡಿಯುತ್ತಿರುವ ಕರು, ಶಿವಲಿಂಗ ಮಹಾಸತಿ ಮೊದಲಾದವುಗಳನ್ನು ಕೆತ್ತಲಾಗಿದೆ.

ಮುತ್ತಿಗಿ ಗ್ರಾಮಕ್ಕೆ ಚಿನ್ನ ಮುತ್ತಿಗಿ, ಹೊನ್ನು ಮುತ್ತಿಗೆ ಎಂದು ಕರೆಯುವದುಂಟು ಇಲ್ಲಿ ಚಿನ್ನದ ನಾಣ್ಯ ಟಂಕಿಸುವ ಟಂಕ ಶಾಲೆ ಇದ್ದ ಚಿಹ್ನೆಗಳು ಕಂಡು ಬರುತ್ತನೆ.

ಇದೇ ಗ್ರಾಮದ ಹೊಲ ಒಂದರಲ್ಲಿ ವ್ಯವಸಾಯ ಮಾಡುವಾಗ ಶಾಂತಿನಾಥ ಹಾಗೂ ಪಾರ್ಶ್ವನಾಥರ ೨ ವಿಗ್ರಹಗಳು ಪತ್ತೆ ಆಗಿದ್ದು ಅವುಗಳನ್ನು ಈಗ ಶಿಗೀಗಟ್ಟಿ ಗ್ರಾಮದಲ್ಲಿ ಪ್ರತಿಷ್ಠಾಪಿಸಲಾಗಿದೆ.

ಮುತ್ತಗಿ ಗ್ರಾಮದಲ್ಲಿ ಕರೆಮ್ಮ, ಮರೆಮ್ಮ ಗ್ರಾಮದೇವತೆ, ಶ್ರೀ ಬಸವಣ್ಣ ದೇವಸ್ಥಾನ ಹಾಗೂ ಸ್ವತಂತ್ರವಾಗಿ ಈ ಗ್ರಾಮದ ಶ್ರೀ ಲಕ್ಕಪ್ಪನವರ ಹಿತ್ತಲದಲ್ಲಿ ಭರಮಪ್ಪನ ಅವಶೇಷಗಳು ಇಂದಿಗೂ ಕಾಣಬರುತ್ತವೆ.

(ಮುತ್ತಗಿ ಗ್ರಾಮದ ಪ್ರಾಚ್ಯಾವಶೇಷಗಳ ಸಂಶೋಧನೆ ಕಾರ್ಯ ಕೈಕೊಂಡಾಗ ಸಹಕರಿಸಿದ ಶ್ರೀ ಕಲ್ಮೇಶ್ವರ ದೇವಸ್ಥಾನದ ಟ್ರಸ್ಟ ಕಮಿಟಿ ಸದಸ್ಯ ಗ್ರಾಮದ ಪಂಚಾಯತ ಸದಸ್ಯರಾದ ಶ್ರೀ ಯಲ್ಲಪ್ಪ ನಾ. ಲಕ್ಕಪ್ಪನವರ. ಶಂಕ್ರಪ್ಪ ಬಸಪ್ಪ ಲಕ್ಕಪ್ಪನವರ ಶ್ರೀ ಅಶೋಕ ಸಾಬಣ್ಣವರ. ಗೊಳಪ್ಪಾ ಡಂಬಳ ನಾಗಪ್ಪ ಶಿವಳ್ಳಿ ಬಸಪ್ಪ ಲಕ್ಕಪ್ಪನವರ ಹಾಗೂ ರೊಟ್ಟಿಗವಾಡ ಕಾಲೇಜಿನ ಪ್ರಾಚಾರ್ಯರಾದ ಶ್ರೀ ಎ.ಎಲ್. ಪೋಲಿಸ್ ಪಾಟೀಲ ಫೋಟೋಗ್ರಾಫರ ಶ್ರೀ ಮಹಾಂತೇಶ ಪಾಟೀಲ, ಶ್ರೀಮತಿ ಪಾರ್ವತೆವ್ವ ಶಿವಳ್ಳಿ ಪಕ್ಕಿರಗೌಡ ದೊಡ್ಮನಿ ಇವರೆಲ್ಲರಿಗು ಹಾಗು ಕರಡು ಪ್ರತಿಯನ್ನು ನಿಜಪ್ರತಿಮಾಡಿದ ಕುಮಾರ ಮಾರುತಿ ಮಲ್ಲಿಗವಾಡರಿಗೆ ಅಭಿನಂದನೆಗಳು)








**ಕ.ಇ. ಅಕಾದೆಮಿಯ ೧೧ನೇ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೭)**

*ಇತಿಹಾಸವು ಸಮಾಜದ ವಿವಿಧ ಆಯಾಮಗಳನ್ನು ಒಳಗೊಳ್ಳುತ್ತದೆಯಾದ್ದರಿಂದ ಆಕರ ಸಾಮಗ್ರಿಯ ಪರಿಶೀಲನೆ, ವಿಶ್ಲೇಷಣೆ, ವಿಮರ್ಶೆಯ ಜೊತೆಗೆ ಇತಿಹಾಸಕಾರರು ಸಮಗ್ರತೆಯ ದೃಷ್ಟಿಯನ್ನು ಪಡೆದುಕೊಂಡರೆ. ದೇಶದ ಸಮಾಜದ ನಾನಾ ಸಮಸ್ಯೆಗಳಿಗೆ ಸಮರ್ಪಕ ಪರಿಹಾರಗಳನ್ನೂ ಸೂಚಿಸುವ ವೈಚಾರಿಕತೆಯನ್ನು ಕುದುರಿಸುವ ಸಾಮರ್ಥ್ಯವೂ ಅವರದಾಗಬಲ್ಲದು.*

***ಕೆ. ಅಭಿಶಂಕರ್***
*ಸಮ್ಮೇಳನಾಧ್ಯಕ್ಷರು*

ಡಾ. ಎಚ್. ಜಯಮ್ಮ ಕರಿಯಣ್ಣ*

# ವಿಪ್ರ ಗ್ರಾಮದ ಅವಶೇಷಗಳು

*ಗಂಗಾವತಿ ಸನಿಹದ ದೇವಘಾತದ ಬಳಿಯ ೧೧ನೆಯ ಶತಮಾನದ ಗ್ರಾಮ ವಿಪ್ರ, ಕಂಪಿಲಿ ನೊಳಂಬರ ನೆಲವೀಡಾಗಿದ್ದುದು ಶಾಸನೋಕ್ತ. 'ವಿಪ್ರನಾರಾಯಣದ ನೆಲವೀಡು' ಎಂಬುದು ಅದರ ಪ್ರಾಚೀನ ನಾಮ. ಇಂದು ದೇವಘಾತ ಭಾಗದಲ್ಲಿ ಉಳಿದಿರುವ ಈ ಪ್ರಾಚೀನ ಗ್ರಾಮದ ಅವಶೇಷಗಳ ಪೈಕಿ ಅಮೃತೇಶ್ವರ ದೇಗುಲ ಹಾಗು ಹಾದಿ ಬದಿಯ ದುರ್ಗೆ ಮತ್ತು ಶಂಕರಲಿಂಗ ದೇವಾಲಯಗಳು ಕಾಣಬರುತ್ತವೆ. ವಿಪ್ರದ ಶಂಕರಲಿಂಗ ದೇವಾಲಯವು ದೇವಘಾತದಿಂದ ೩ ಕಿ.ಮೀ. ದೂರದಲ್ಲಿದೆ. ಈ ದೇಗುಲದ ರಚನೆ ನೊಳಂಬ ಶೈಲಿಯದಾಗಿದೆ. ದುರ್ಗಾದೇಗುಲವು ಕಂಪಿಲಿ ನೊಳಂಬರ ಅಂತ್ಯಕಾಲದ ರಚನೆಯಾಗಿದೆ. ದೇವಘಾತದ ಅಮೃತೇಶ್ವರ ದೇಗುಲದ ಬಳಿ ಸ್ಥಳೀಯರು ಪಿತೃಗಳಿಗೆ ಎಡೆ ಇಡುವ ಸಂಪ್ರದಾಯವನ್ನು ಇಂದಿಗೂ ಪಾಲಿಸುತ್ತಿದ್ದಾರೆ.*

ಈಗಿನ ಕೊಪ್ಪಳ ಜಿಲ್ಲೆಯ ಗಂಗಾವತಿಗೆ ದಕ್ಷಿಣಕ್ಕಿರುವ ವಿಪ್ರ ಗ್ರಾಮವು ದೇವಘಾತದ ಬಳಿ ಇದೆ. ಈಗ ಇದು ಹಾಳು ಗ್ರಾಮವಾಗಿದೆ. ಈ ಪಾಳು ಗ್ರಾಮದಲ್ಲಿ ಶಂಕರಲಿಂಗನ ಗುಡಿ ಮತ್ತು ಇದರ ಸಮೀಪದ ದೇವಘಾತದಲ್ಲಿ ಅಮೃತೇಶ್ವರನ ದೇವಾಲಯವಿದೆ. ಈ ಎರಡು ದೇವಾಲಯಗಳ ನಡುವೆ ದುರ್ಗಾದೇವಿಯ ಗುಡಿಯೂ ಇದೆ.

ವಿಪ್ರವು ಕಂಪಿಲಿ ನೊಳಂಬರ ನೆಲೆವೀಡಾಗಿತ್ತೆಂಬ ಅಂಶವನ್ನು ಅಲ್ಲಿನ ಶಾಸನಗಳಲ್ಲದೆ ಬಳ್ಳಾರಿ ಜಿಲ್ಲೆಯ ಒಂದೆರಡು ಶಾಸನಗಳೂ ಸಹ ತಿಳಿಸುತ್ತವೆ. ಶಾಸನೋಕ್ತವಾಗಿ ಈ ಗ್ರಾಮದ ಹೆಸರನ್ನು 'ವಿಪ್ರನಾರಾಯಣದ ನೆಲೆವೀಡು' ಎಂದುಕರೆಯಲಾಗಿದೆ. ಈಗ 'ವಿಪ್ರ ನಾರಾಯಣ' ಎಂದು ಕರೆಯುವ ಗ್ರಾಮದ 'ನಾರಾಯಣ' ಎಂದು ಹಿಂದೆ ಕರೆಯುತ್ತಿದ್ದ ಆ ಕಾಲದ ವಿಶೇಷಣ ಕಾಣೆಯಾಗಿದೆ. ಒಂದು ಶಾಸನದಲ್ಲಿ ವಿಪ್ರದ ಸಮೀಪದಲ್ಲಿರುವ ದೇವಘಾತವು ಮೂವತ್ತುಮೂರು ದೇವತೆಗಳ ಕ್ಷೇತ್ರವಾಗಿತ್ತೆಂಬ ಅಂಶವಲ್ಲದೆ; ಕಿಷ್ಕಿಂಧೆಯ ಬಳಿ ಇದು ಇತ್ತೆಂಬ ಅಂಶವನ್ನು ತಿಳಿಸುತ್ತದೆ. ಹೀಗಾಗಿ ಈ ಗ್ರಾಮವು ಕ್ರಿ.ಶ. ಸುಮಾರು ೧೧ನೆಯ ಶತಮಾನದಲ್ಲಿಯೇ ಅಸ್ತಿತ್ವದಲ್ಲಿತ್ತು. ಹಾಗೂ ಇದು ನೊಳಂಬರ ಇನ್ನೊಂದು ನೆಲೆವೀಡಾಗಿತ್ತೆಂದು ತಿಳಿಯುತ್ತದೆ.

ಕಂಪಿಲಿ ಹಾಗೂ ವಿಪ್ರಗಳು ತುಂಗಭದ್ರಾನದಿಯ ಇಕ್ಕೆಲಗಳಲ್ಲಿ ಸಮೀಪದಲ್ಲಿಯೆ ಇವೆ. ಇಷ್ಟು ಸಮೀಪ ಎರಡು ನೆಲೆವೀಡುಗಳು ಏಕಿರಬೇಕೆಂಬ ಸಂಶಯ ಬರುತ್ತದೆ. ಬಹುಶಃ ಚೋಳರ ಧಾಳಿಯಿಂದ ತಪ್ಪಿಸಿಕೊಳ್ಳಲು ನದಿಯ ಇನ್ನೊಂದು ಬದಿ ಇರುವ ವಿಪ್ರವನ್ನು ತಾತ್ಕಾಲಿಕ ನೆಲೆವೀಡನ್ನಾಗಿ ನೊಳಂಬರು ಬಳಸಿಕೊಂಡಿರಬೇಕು.

ವಿಪ್ರಗ್ರಾಮವು ತುಂಗಭದ್ರೆಯ ಉತ್ತರ ತಡಿಯಲ್ಲಿದ್ದು ನದಿಯು ಉತ್ತರಾಭಿಮುಖವಾಗಿ ಹರಿಯುವುದರಿಂದ ಇದು ಪುಣ್ಯ ಕ್ಷೇತ್ರವಾಗಿದ್ದು, ಸತ್ತವರಿಗೆ ಇಲ್ಲಿ ಎಡೆಯಿಡುವ ಪದ್ಧತಿ ಈಗಲೂ ನಡೆಯುತ್ತಿದೆ. ಈ ಕಾರ್ಯವು ಹಿಂದಿನಿಂದಲೂ ನಡೆದುಕೊಂಡು ಬರುತ್ತಿತ್ತೆಂಬ ಅಂಶವನ್ನು ಶಾಸನವೊಂದು ಉಲ್ಲೇಖಿಸುತ್ತದೆ.

ವಿಪ್ರಗ್ರಾಮವು ಇಂದು ಅಸ್ತಿತ್ವದಲ್ಲಿ ಇಲ್ಲದಿದ್ದರೂ ಅದು ಹಿಂದೆ ಇದ್ದ ಕುರುಹಾಗಿ ಸುಟ್ಟ ಇಟ್ಟಿಗೆಯ ಅವಶೇಷಗಳು ಮತ್ತು ಪಾಳು ದೇವಾಲಯಗಳ ಅವಶೇಷಗಳು ಅಲ್ಲಲ್ಲಿ ಬಿದ್ದಿವೆ. ಈ ಅವಶೇಷಗಳಲ್ಲಿ ಈಗ ದೇವಘಾತ ಭಾಗದಲ್ಲಿ ಅಮೃತೇಶ್ವರ ದೇವಾಲಯ ಹಾಗೂ ಒಂದೆರಡು ಚಿಕ್ಕ ದೇವಾಲಯಗಳು, ದೇವಘಾತದಿಂದ ವಿಪ್ರಕ್ಕೆ ಹೋಗುವ ಮಾರ್ಗದಲ್ಲಿ ಸಿಗುವ ದುರ್ಗಾ ದೇವಾಲಯವೂ, ಅಲ್ಲಿಂದ ಮುಂದಕ್ಕೆ ಶಂಕರಲಿಂಗ ದೇವಾಲಯವು ಮಾತ್ರ ಉಳಿದಿವೆ.

* ಆಶೀರ್ವಾದ, ಸಂ. ೨೯೩೩, ೧೩ನೇ ಮುಖ್ಯರಸ್ತೆ, ವಿಜಯನಗರ ೨ನೇ ಹಂತ ಬೆಂಗಳೂರು - ೫೬೦ ೦೪೦

**ವಿಪ್ರ - ಶಂಕರಲಿಂಗ ದೇವಾಲಯ :** ದೇವಘಾತದಿಂದ ಸುಮಾರು ಮೂರೂ ಕಿಲೊ ಮೀಟರ್ ದೂರದಲ್ಲಿ ವಿಪ್ರದ ಶಂಕರಲಿಂಗ ದೇವಾಲಯವಿದೆ. ತುಂಗಭದ್ರಾ ನದಿಯು ದೇವ ಘಾತದ ಕಡೆಯಿಂದ ಉತ್ತರಾಭಿಮುಖವಾಗಿ ಹರಿಯುತ್ತಾ ಇಲ್ಲಿ ಪೂರ್ವಕ್ಕೆ ತಿರುಗಿದೆ. ತುಂಗಭದ್ರಾನದಿಯ ತೀರದಲ್ಲಿ ಈ ದೇವಾಲಯವಿದೆ. ಈ ದೇವಾಲಯುವನ್ನು ವಾಸ್ತು ರಚನಾ ವಿಶೇಷತೆಯಿಂದ ಕಂಪಲಿಯ ನೊಳಂಬರ ಕಾಲಕ್ಕೆ ಸೇರಿಸ ಬಹುದಾಗಿದೆ. ಬಳ್ಳಾರಿ ಜಿಲ್ಲೆಯ ಕಲ್ಕಂಭದ ಶಾಸನ ಹಾಗೂ ಇನ್ನೂ ಬೇರಡೆಯ ಶಾಸನಗಳಲ್ಲಿ ವಿಪ್ರವನ್ನು ಕಂಪಿಲಿಯ ನೊಳಂಬರ ಶಾಸನಗಳಲ್ಲಿ ಹೇಳಿರುವಂತೆ ವಿಪ್ರನಾರಾಯಣದ ನೆಲೆವೀಡು ಎಂದು ಕರೆದಿದ್ದಾರೆ. ಇಲ್ಲಿ ವಿಷ್ಣುವಿನ ದೇವಾಲಯವಿದ್ದ ಕುರುಹುಗಳು ಕಾಣಬರುತ್ತಿಲ್ಲ. ಹೀಗಾಗಿ ಇದನ್ನು ವಿಪ್ರನಾರಾಯಣ ಎಂದು ಏಕೆ ಕರೆದರೆಂಬುದು ಸ್ಪಷ್ಟವಾಗುತ್ತಿಲ್ಲ. ಅಥವಾ ಇನ್ನೂ ಆಧಾರಗಳು ಸಾಲವು ಎಂದೇ ತಿಳಿಯಬೇಕಾಗುತ್ತದೆ. ಈ ಗ್ರಾಮದಲ್ಲಿ ದ್ಯಾಮವ್ವನ ಗುಡಿಯ ಬಳಿ ಇನ್ನೊಂದು ಶಿವನ ದೇವಾಲಯವಿದ್ದು ಅದು ಶಿಥಿಲವಾಗಿದೆ. ಲಿಂಗವನ್ನು ಕಿತ್ತುಹಾಕಲಾಗಿದೆ. ದೇವಾಲಯದ ಎಡಬದಿಗೆ ವೀರಗಲ್ಲು ಮತ್ತು ಭಗ್ನ ಭೈರವಮೂರ್ತಿ ಶಿಲ್ಪವಿದೆ.




ಶಂಕರಲಿಂಗ ದೇವಾಲಯ



ವಿಪ್ರ ಬಳಿಯ ಶಂಕರಲಿಂಗನ ಗುಡಿ

ಶಂಕರನಾರಾಯಣ ದೇವಾಲಯವು ಚಪ್ಪಡಿಯ ಕಲ್ಲಿನ ನಿರ್ಮಾಣವಾಗಿದ್ದು ಗರ್ಭಗೃಹ, ತೆರೆದ ಅಂತರಾಳ ಹಾಗೂ ತೆರೆದ ನವರಂಗವನ್ನು ಹೊಂದಿದೆ. ದೇವಘಾತದ ಅಮೃತೇಶ್ವರ ದೇವಾಲಯದಂತೆ ಇಲ್ಲಿ ಇಟ್ಟಿಗೆಯ ರಚನೆಯಿಲ್ಲ. ಊರ್ಧ್ವ ಮುಖದಲ್ಲಿ ಅಧಿಷ್ಠಾನ, ಭಿತ್ತಿ ಮತ್ತು ಕಪೋತವನ್ನು ಹೊಂದಿದೆ. ಮೇಲೆ ಚಪ್ಪಡಿ ಕಲ್ಲು ಹಾಸಬೇಕಾದ ಭಾಗದಲ್ಲಿ ಗರ್ಭಗೃಹ ಮತ್ತು ಅಂತರಾಳದ ಮೇಲೆ ದಪ್ಪವಾದ ಗಾರೆಗಚ್ಚನ್ನು ಬಳಸಲಾಗಿದೆ. ನವರಂಗದಲ್ಲಿ ಚಪ್ಪಡಿಗಳನ್ನು ಮುಚ್ಚಿಗೆಯಾಗಿ ಬಳಸಲಾಗಿದೆ. ದೇವಾಲಯದ ರಚನೆಯಲ್ಲಿ ವೈಶಾಲ್ಯವನ್ನು ತೋರಲಾಗಿದೆ. ವಿಶಾಲವಾದ ಗರ್ಭಗೃಹ, ಅಷ್ಟೇ ವಿಶಾಲವಾದ ಅಂತರಾಳವನ್ನು ಹೊಂದಿದೆ. ಅಂತರಾಳದಲ್ಲಿ ದೇವರಿಗೆ ಎದುರಾಗಿ ನಂದಿಶಿಲ್ಪವಿದ್ದು ಬೇರೆ ಯಾವ ಶಿಲ್ಪಗಳೂ ಇಲ್ಲ. ಗರ್ಭಗೃಹಕ್ಕೂ ತೆರೆದ ಅಂತರಾಳಕ್ಕೂ ಮಧ್ಯೆ ಇರುವ ಬಾಗಿಲಿನ ತಳಭಾಗದಲ್ಲಿ ಶೈವ ದ್ವಾರಪಾಲಕದ ಶಿಲ್ಪಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದ್ದು ಉಳಿದಂತೆ ಅಪೂರ್ಣ ಕೆತ್ತನೆಯ ಪಟ್ಟಿಕೆಗಳಿವೆ.

ನವರಂಗವು ಹಿಂದೆ ಹೇಳಿದಂತೆ ವಿಶಾಲವಾಗಿದ್ದು ಸುತ್ತಲೂ ಗೋಡೆಗಳಿಲ್ಲದೆ ತೆರೆದ ರಚನೆಯಾಗಿದೆ. ಈ ನವರಂಗದಲ್ಲಿ ಅಂತರಾಳಕ್ಕೆ ಹೊಂದಿಕೊಂಡಂತೆ ಇರುವ ಭಾಗದಲ್ಲಿ ಮಾತ್ರ ಕಲ್ಲಿನ ಗೋಡೆಯಿದ್ದು ಅಂತ್ಯದ ಕಂಬಗಳು ಕಲ್ಯಾಣಿ ಚಾಲುಕ್ಯರ ಮಾದರಿಯಲ್ಲಿವೆ. ಉಳಿದ ಕಂಬಗಳು ಚೌಕ, ಅಷ್ಟಚೌಕ, ಮತ್ತು ವೃತ್ತಾಕಾರದಲ್ಲಿವೆ. ಸರಳ ಬೋದಿಗೆಯನ್ನು ಬಳಸಿರುತ್ತಾರೆ. ನವ ರಂಗದ ಮಧ್ಯದ ಕಂಬಗಳಲ್ಲಿ ಮಾಲಾಲಂಕಾರವಿಲ್ಲ. ಮುಚ್ಚಿಗೆಯಲ್ಲಿ ಕಮಲದ ಅಲಂಕಾರವಿದೆ. ಒಟ್ಟು ಹನ್ನೆರಡು ಕಂಬಗಳು ಕಾಣುವಂತಿದ್ದು ಉಳಿದ ನಾಲ್ಕು ಕಂಬಗಳು ಹಿಂಭಾಗದ ಗೋಡೆ ಯಲ್ಲಿ ಸೇರಿವೆ. ನವರಂಗದ ಗೋಡೆಗೆ ಸೇರಿಸಿದಂತೆ ಬಲಭಾಗಕ್ಕೆ ನಾಗರಶಿಲ್ಪ ಗಣಪತಿ ಶಿಲ್ಪಗಳೂ, ಎಡಭಾಗದ ಗೋಡೆಗೆ ಸೇರಿಸಿದಂತೆ ಸೂರ್ಯ ಮತ್ತು ನಾಗರ ಶಿಲ್ಪಗಳಿವೆ. ಇವುಗಳ ಕೆತ್ತನೆ ರೀತಿ ಕಲ್ಯಾಣಿ ಚಾಲುಕ್ಯರ ಇತರೆ ದೇವಾಲಯದಲ್ಲಿನ ಶಿಲ್ಪಗಳಂತಿರುವುದರಿಂದ ಇವನ್ನು ಈ ದೇವಾಲಯದ ರಚನಾ ಕಾಲಕ್ಕೆ ಸೇರಿಸಬಹುದು.

ನೊಳಂಬರ ರಚನೆಯೆಂದು ಗುರುತಿಸಲು ಇವುಗಳ ತೆರೆದ ಅಂತರಾಳದ ಕಂಬಗಳು ಸಾಕ್ಷಿಯಾಗಿವೆ. ಇಲ್ಲಿ ಮೇಲಿನ ತೊಲೆಯ ಭಾರವನ್ನು ಹೊರಲು ಅನುಕೂಲವಾಗುವಂತೆ ಅಂತರಾಳಕ್ಕೂ ನವರಂಗದ ಭಾಗಕ್ಕೂ ಮಧ್ಯೆ ಎರಡು ಕಂಬಗಳನ್ನು ನಿಲ್ಲಿಸಲಾಗಿದೆ. ಈ ಕಂಬಗಳು ಚಿಕ್ಕದಾಗಿದ್ದು ನೀಳವಾಗಿ ಅಷ್ಟಮುಖವನ್ನು ಹೊಂದಿವೆ. ಹೇಮಾವತಿ ಮತ್ತು ಅದರ ಪರಿಸರದಲ್ಲಿ ದೊರೆಯುವ

ದೇವಾಲಯದ ಕಂಬಗಳಂತೆ ಅಲಂಕಾರವಿಲ್ಲದಿದ್ದರೂ ಒಟ್ಟಾರೆ ರಚನೆಯಲ್ಲಿ ಅವನ್ನು ಹೋಲುತ್ತವೆ.

ಗರ್ಭಗೃಹದ ಲಿಂಗವು ಚೌಕಾಕಾರದ ಪಾಣಿ ಪೀಠವನ್ನು ಹೊಂದಿದ್ದು ಮಧ್ಯೆ ಎತ್ತರವಲ್ಲದ ಉದ್ಭವಲಿಂಗದಂತಹ ಲಿಂಗವಾಗಿದೆ. ದೇವಾಲಯವು ಪೂರ್ವಾಭಿಮುಖವಾಗಿದೆ.

**ದುರ್ಗಾ ದೇವಾಲಯ** : ವಿಪ್ರ ಹಾಗೂ ದೇವಘಾತದ ನಡುವಿರುವ ದುರ್ಗಾದೇವಿಯ ಗುಡಿಯು ಕಂಪಿಲಿ ನೊಳಂಬರ ಅಂತ್ಯಕಾಲದ ನಿರ್ಮಾಣವಾಗಿದೆ. ಗರ್ಭಗೃಹ, ಮುಚ್ಚಿದ ಅಂತರಾಳ ಹಾಗು ನವರಂಗವಿದೆ. ಅಂತರಾಳದ ಬಾಗಿಲವಾಡ ಕಲ್ಯಾಣಿ ಚಾಲುಕ್ಯರ ಕಾಲದ್ದಾಗಿದೆ. ಇದೂ ಶಿವದೇವಾಲಯವಾಗಿದ್ದು ಇವರ ಸಮೀಪ ದ್ಯಾಮವ್ವನ ಗುಡಿ ಇರುವುದರಿಂದ ಈ ದ[illegible] [illegible]ಯುತ್ತಾರೆ.

**ಅಮೃತೇಶ್ವರ ದೇವಾಲಯ** : ದೇವಘಾತದಲ್ಲಿರುವ ಈ ದೇವಾಲಯ ಸಂಕೀರ್ಣವು ಇನ್ನೊಂದು ದೇವಾಲಯವಾಗಿದೆ.



ಅಮೃತೇಶ್ವರ ದೇವಾಲಯ

ಈ ದೇವಾಲಯದ ಒಳರಚನೆಯು ಗರ್ಭಗೃಹ, ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ನವರಂಗದಲ್ಲಿನ ಮುಂಭಾಗ ಬಿದ್ದು ಹೋಗಿದೆ. ಈ ದೇವಾಲಯದ ನವರಂಗಕ್ಕೆ ಉತ್ತರ ದಕ್ಷಿಣವಾಗಿ ಎರಡು ಬಾಗಿಲುಗಳಿವೆ. ಗರ್ಭಗೃಹ ಲಿಂಗ ಪೀಠವು ಚೌಕಾಕಾರವಾಗಿದೆ. ತೆರೆದ ಅಂತರಾಳವಿದ್ದು ಮಧ್ಯೆ ಕಂಬಗಳಿಲ್ಲ. ಗರ್ಭಗೃಹದ ಗೋಡೆಗಳಲ್ಲಿ ಹೆಚ್ಚು ಉಬ್ಬಿದ ಕಂಬಗಳಿವೆ. ನವರಂಗದ ನಾಲ್ಕು ಕಂಬಗಳು ಬಾಗಳಿಯ ಕಲ್ಲೇಶ್ವರ ದೇವಾಲಯದ ಕಂಬಗಳಂತೆ ಇದ್ದು, ಮೇಲೆ ಸಾದಾ ಬೋದಿಗೆ ಇದೆ. ಈ ಬೋದಿಗೆ ಮಧ್ಯೆ ಚಿಕ್ಕದಾದ ಸೀಳು ಬಂದಿದೆ. ನವರಂಗದ ಮುಚ್ಚಿಕೆಯಲ್ಲಿ ಕಮಲವಿದೆ. ದೇವಾಲಯದ ಗರ್ಭಗೃಹದ ಮೇಲಿರುವ ಶಿಖರಭಾಗವು ಇಟ್ಟಿಗೆಯಿಂದ ನಿರ್ಮಾಣವಾಗಿದೆ. ಈ ಗೋಡೆ ಆಗಾಗ್ಗೆ ಜೀರ್ಣೋದ್ಧಾರವಾಗಿಪ್ಪರೂ ಮೂಲ ರಚನೆ ಹಾಗೆ ಉಳಿದು ಬಂದಿದೆ. ಎತ್ತರವಾದ ಈ ಗರ್ಭಗೃಹದ ಇಟ್ಟಿಗೆಯ ಶಿಖರವು ಎರಡು ತಳಗಳನ್ನು ಹೊಂದಿದೆ. ದೇವಕೋಷ್ಠಗಳಿಲ್ಲ. ಇಟ್ಟಿಗೆಯ ಉಬ್ಬುಕಂಬಗಳಿವೆ. ಮೇಲಿನ ಸ್ತೂಪದ ಭಾಗವು ಇತ್ತೀಚೆಗೆ ಜೀರ್ಣೋದ್ಧಾರವಾಗಿದೆ. ಮೇಲೆ ಕಲಶವಿಲ್ಲ. ಅಂತರಾಳ ಮತ್ತು ನವರಂಗದ ಗೋಡೆಗಳು ಇಟ್ಟಿಗೆ ಮತ್ತು ಗಾರೆಯದಾಗಿದ್ದು ಈಗ ಪೂರ್ಣಹಾಳಾಗಿದೆ. ಕ್ರಿ.ಶ. ೧೧ನೆಯ ಶತಮಾನ ಶಾಸನವೊಂದು ಈ ದೇವಾಲಯಕ್ಕೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.

ಇಲ್ಲಿನ ದೇವಾಲಯಗಳು ಹಾಳಾಗಲು ಮುಖ್ಯಕಾರಣ ಮಳೆ, ಬಿಸಿಲು, ಗಾಳಿಗೆ ಸಿಲುಕಿ ಸರಿಯಾದ ನಿರ್ವಹಣೆ ಇಲ್ಲದಿರುವುದು ಒಂದು ಕಾರಣವಾದರೆ, ಮತ್ತೊಂದು ದೇವಾಲಯಗಳಲ್ಲಿ ಹುದುಗಿಸಿಟ್ಟಿರಬಹುದೆಂಬ ನಿಧಿಯ ಕಲ್ಪನೆ ಮತ್ತು ಆಸೆಗೆ ದೇವಾಲಯಗಳನ್ನು ಅಗೆದು ಹಾಳುಮಾಡಿರುವುದಾಗಿದೆ.

ಇಂದಿಗೂ ದೇವಘಾತದ ಅಮೃತೇಶ್ವರ ದೇವಾಲಯದ ಬಳಿಯಲ್ಲಿಯೂ ಸ್ಥಳೀಯ ಜನರು ತಮ್ಮ ಕುಟುಂಬದ ಹಿರಿಯರಿಗೆ ಎಡೆ ಮಾಡುವ ಸಂಪ್ರದಾಯ ನಡೆದು ಬರುತ್ತಿದೆ.

ಹೀಗೆ ಈ ಮೂರು ದೇವಾಲಯಗಳ ಸುತ್ತಲೂ ಹೊಲ, ಗದ್ದೆ, ತೋಟ, ತುಡಿಕೆಗಳಿದ್ದು ಮಳೆಗಾಲದಲ್ಲಿ ಈ ಪ್ರದೇಶದಲ್ಲಿರುವ ದೇವಾಲಯಗಳಿಗೆ ಹೋಗಿ ಬರಲು ತುಂಬಾ ಕಷ್ಟವಾಗುತ್ತದೆ. ಬೇಸಿಗೆಯಲ್ಲಿ ವಿಪರೀತ ಬಿಸಿಲಿನ ತಾಪವಿದ್ದರೂ ಕ್ಷೇತ್ರಕಾರ್ಯ ಮಾಡುವವರಿಗೆ ಅಷ್ಟು ತೊಂದರೆ ಆಗುವುದಿಲ್ಲ.



ವಿಪ್ರ ದೇವಘಾತ ಮುವತ್ತ ಮೂರು ದೇವತೆಗಳ ಕ್ಷೇತ್ರ
ಕಿಷ್ಕಿಂಧೆಯ ಬಳಿ ಇತ್ತೆಂಬ ಪುರಾಣದೈತಿಹ್ಯ ಶಾಸನೋಕ್ತ
'ವಿಪ್ರ'ವೊಂದು ಕಂಪಿಲ ನೊಳಂಬರ ಆಸರೆಯ ನೆಲೆಬೀಡು
ಪ್ರಾಚೀನದ ಪುಟಗಳಲಿ 'ವಿಪ್ರನಾರಾಯಣ' ಎನಿಸಿದ ಹಳಮೆ ಹಾಡು
ಅಮೃತ, ದುರ್ಗ, ಶಂಕರ ದೇಗುಲದ ಅವಶೇಷವೆನೆ
ತಪ್ಪಿಲ್ಲ ಜನಪದದ ವರಸೆ ತಾನೆ.





ರಾಕೇಶ್ ಬಿ.ಸಿ.*

# ಕೋಣನತಲೆ ಗ್ರಾಮದ ಪ್ರಾಚ್ಯಾವಶೇಷಗಳು

*ಹೊನ್ನಾಳಿ ತಾಲೂಕಿನ ಕೊನೆಯ ಗ್ರಾಮ ಕೋಣನತಲೆ, ನದಿತೀರದಲ್ಲಿದೆ. ಎಂದಿನಂತೆ ಇಲ್ಲಿನ ಜನತೆಯ ಕಸಬು ಬೇಸಾಯ. ಚಕ್ರವರ್ತಿಗಳು ದೊರೆಗಳು, ಪಾಳೆಯಗಾರರು, ನವಾಬರು ಆಳಿದ ಪ್ರದೇಶದ ಗ್ರಾಮ ವಿದಾಗಿ, ಇತಿಹಾಸ, ಜಾನಪದ ಸಂಗತಿಗಳನ್ನೂ ಧಾರಣೆ ಮಾಡಿಕೊಂಡಿದೆ. ಈ ಕಾರಣವಾಗಿ "ಮಹಿಷಮಸ್ತಕ"ದ ಕನ್ನಡ ರೂಪದ ಹೆಸರು ಹೊತ್ತಿದೆ; ಶಾಸನ, ದೇಗುಲ, ಗುಹೆ, ಶಿಲ್ಪ, ಕೋಟೆ, ಮಾಸ್ತಿಗಲ್ಲು ಇತ್ಯಾದಿಗಳ ಪ್ರಾಚೀನ ಸಾಕ್ಷ್ಯಶರೀರಿಯಾಗಿದೆ.*

ಕೋಣನತಲೆ ಗ್ರಾಮವು ಹೊನ್ನಾಳಿ ತಾಲ್ಲೂಕಿನ ಕೊನೆಯ ಹಳ್ಳಿ. ಹೊನ್ನಾಳಿಯಿಂದ ಗೊಲ್ಲರಹಳ್ಳಿ ಮತ್ತು ಬೇಲಿ ಮಲ್ಲೂರುಗಳ ಮುಖಾಂತರ ೧೬ ಕಿ.ಮೀ. ಸಾಗಿದರೆ ಕೋಣನತಲೆ ಗ್ರಾಮವು ಸಿಗುತ್ತದೆ. ಕೋಣನತಲೆ ಗ್ರಾಮವು ತುಂಗಾಭದ್ರಾ ನದಿಯ ಬಲದಂಡೆಯ ಮೇಲೆ ಸ್ವಲ್ಪ ದೂರದಲ್ಲಿದೆ. ಗ್ರಾಮದ ಪೂರ್ವಕ್ಕೆ ಸಿದ್ದಪ್ಪನ ಗುಡ್ಡ ಪಶ್ಚಿಮಕ್ಕೆ ತುಂಗಾಭದ್ರಾ ನದಿ ಉತ್ತರಕ್ಕೆ ಹರಿಹರ ತಾಲ್ಲೂಕಿನ ಗಡಿ ದಕ್ಷಿಣಕ್ಕೆ ಹೊನ್ನಾಳಿ ತಾಲ್ಲೂಕಿನ ಹರಗನಹಳ್ಳಿ ಈ ಮೇರೆಗಳನ್ನು ಸುತ್ತಲೂ ಹೊಂದಿದೆ. ಕೋಣನತಲೆ ಗ್ರಾಮವು ಹಿರೇಗೋಣಿಗೇರಿ ಮಂಡಲ ಪಂಚಾಯತ್ ವ್ಯಾಪ್ತಿಗೆ ಬರುತ್ತದೆ. ಇಲ್ಲಿ ಸುಮಾರು ೨೬೫ ಮನೆಗಳಿದ್ದು ೧೫೦೦ ಜನರು ವಾಸವಾಗಿದ್ದಾರೆ. ಇಲ್ಲಿ ಕೃಷಿಯು ಮುಖ್ಯ ಉದ್ಯೋಗವಾಗಿದ್ದು ನೀರಾವರಿಯಲ್ಲಿ ಭತ್ತವನ್ನು ಒಣ ಭೂಮಿಯಲ್ಲಿ ಗೋವಿನ ಜೋಳ ಮತ್ತು ಜೋಳವನ್ನು ಬೆಳೆಯುತ್ತಾರೆ. ಇಲ್ಲಿನ ಭೂಮಿಯು ಮರಳು ಮಿಶ್ರಿತವಾಗಿದೆ. ಇಲ್ಲಿ ತೆಂಗು ಮತ್ತು ಅಡಿಕೆ ತೋಟಗಳು ಕಂಡು ಬರುತ್ತವೆ. ಈ ಗ್ರಾಮ ೨ ಕೆರೆಗಳನ್ನು ಹೊಂದಿದೆ.

**ಐತಿಹಾಸಿಕ ಹಿನ್ನೆಲೆ - ಗ್ರಾಮನಾಮ ವಿವೇಚನೆ**

ಈ ಪ್ರದೇಶದಲ್ಲಿ ಅನೇಕ ರಾಜಮನೆತನಗಳು ಆಳ್ವಿಕೆ ಮಾಡಿವೆ. ಅದರಲ್ಲಿ ಬನವಾಸಿ ಕದಂಬರು ಮೊದಲಿಗರು. ಇವರ ಕಾಲವು ೪-೫ನೇ ಶತಮಾನ ಆಗಿರುತ್ತದೆ. ಕ್ರಮವಾಗಿ ಬಾದಾಮಿ ಚಾಲುಕ್ಯರು ಕ್ರಿ.ಶ. ೫೦೦ ರಿಂದ ೭೫೭; ರಾಷ್ಟ್ರಕೂಟರು ಸುಮಾರು ೭ ರಿಂದ ೯ನೇ ಶತಮಾನ; ಕಲ್ಯಾಣ ಚಾಲುಕ್ಯರು ಸುಮಾರು ಕ್ರಿ.ಶ. ೯೭೩ ರಿಂದ ೧೧೯೮; ಸೇವುಣ ದೊರೆಗಳು ಹೊಯ್ಸಳರು ಕ್ರಿ.ಶ. ೧೦೦೦ ರಿಂದ ೧೩೪೬; ಪಾಂಡ್ಯರು, ಸಿಂಧರೂ, ಕ್ರಿ.ಶ. ೯೦೦ ರಿಂದ ೧೩೧೨; ವಿಜಯನಗರದ ಅರಸರು ೧೩೩೬ ರಿಂದ ೧೫೭೨; ಬೆಳಗುತ್ತಿಯ ಅರಸರು ೧೩೬೧ ರಿಂದ ೧೮೯೫; ಕೆಳದಿ ನಾಯಕರು ೧೪೯೯ ರಿಂದ ೧೭೫೭; ಮೈಸೂರಿನ ಒಡೆಯರು ೧೭೯೯ ರಿಂದ ೧೮೩೧ - ಈ ಅವಧಿಗಳವರೆಗೆ ಈ ಮನೆತನಗಳ ಆಳ್ವಿಕೆ ಪ್ರಮುಖವಾಗಿದೆ. ಇವರುಗಳ ಅಧೀನದಲ್ಲಿ ಅನೇಕ ಸಾಮಂತರು ಪಾಳೆಯಗಾರರು ಆಳ್ವಿಕೆ ಮಾಡಿದರು. ಉದಾ : ಸಂತೆಬೆನ್ನೂರು ಮತ್ತು ಬಸವಾ ಪಟ್ಟಣದ ಪಾಳೆಯಗಾರರು ಇವರುಗಳಲ್ಲದೆ, ಬಿಜಾಪುರದ ಸುಲ್ತಾನರು, ನವಾಬರು, ಹೈದರಾಲಿಯೂ ಅಧಿಕಾರ ನಡೆಸಿದರು. ನಂತರ ಬ್ರಿಟೀಷರ ಆಳ್ವಿಕೆ ಆರಂಭವಾಯಿತು. ಸ್ವಾತಂತ್ರ್ಯ ನಂತರ ಮೈಸೂರು ಸರ್ಕಾರದ ಆಳ್ವಿಕೆಗೆ ಒಳಪಟ್ಟಿತ್ತು. ಮೊದಲು ಇದು ಶಿವಮೊಗ್ಗ ಜಿಲ್ಲೆಯ ವ್ಯಾಪ್ತಿಗೆ ಸೇರಿತ್ತು. ನಂತರ ೧೯೯೭-

* ಕೋಣನತಲೆ, ಹಿರೇಗೋಣಗೆರೆ, ಹೊನ್ನಾಳಿ ತಾ, ದಾವಣಗೆರೆ ಜಿಲ್ಲೆ - ೫೭೭ ೨೧೭

೯೮ರಲ್ಲಿ ಹೊಸ ಜಿಲ್ಲೆಗಳು ರಚನೆಯಾದಾಗ ಹೊನ್ನಾಳಿಯ ತಾಲ್ಲೂಕನ್ನು ದಾವಣಗೇರಿ ಜಿಲ್ಲೆಯ ವ್ಯಾಪ್ತಿಗೆ ಸೇರಿಸಲಾಯಿತು.

ಇದರ ಮೊದಲಿನ ಹೆಸರು **ಮಹಿಷಮಸ್ತಕ** ಎಂದು ತಿಳಿದುಬರುತ್ತದೆ. ಈ ಹೆಸರು ಚಾಲ್ತಿಗೆ ಬಂದಿದ್ದಕ್ಕೆ ಒಂದು ದಂತಕಥೆ ಇದೆ. ಅದು ಹಿಂದೊಮ್ಮೆ ಇಲ್ಲೊಬ್ಬ ಎಡವಟ್ಟನಾದರೂ ಬಲಿಷ್ಠನಾದ ವ್ಯಕ್ತಿ ವಾಸವಾಗಿದ್ದ. ಇವನು ಮುಂಗೋಪಿಯು ಕೂಡ. ಒಂದು ದಿನ ಹಸಿದು ಮನೆಗೆ ಬಂದು ತಾಯಿಗೆ ಊಟಕ್ಕೆ ನೀಡಲು ಅವಸರ ಅವಸರವಾಗಿ ಹೇಳುತ್ತಾನೆ. ಅವನು ಮಾಡಿದ ಅವಸರವನ್ನು ನೋಡಿ ತಾಯಿಯು ಮಗನನ್ನು ಛೇಡಿಸಲಿಕ್ಕಾಗಿ ಏನು ಕೆಲಸ ಮಾಡಿ ಮನೆಗೆ ಬಂದಿದ್ದಾನೆ ಎನ್ನುವ ಅರ್ಥದಲ್ಲಿ "ಏನು ಹುಲುಸು ತಂದಿದ್ದೀಯಾ ಅನ್ನುವ ಹಾಗೆ ಆಡ್ತಿ? ತಾಳು ನೀಡ್ತಿನಿ" ಎಂದು ರೇಗಿದಳು. ಅಷ್ಟಕ್ಕೆ ಮುನಿಸಿಕೊಂಡ ಅವನು ಪಕ್ಕದ ಹರಿಹರ ತಾಲ್ಲೂಕಿನ ಬಗ್ಗನಹಾಳ ಗ್ರಾಮದಲ್ಲಿ ಕೋಣವನ್ನು ಬಲಿ ಕೊಡುವ ಹಬ್ಬಕ್ಕೆ ಹೋದನು. ಆ ಹಬ್ಬದಲ್ಲಿ ಕಡಿದ ಕೋಣವು ಆ ಗ್ರಾಮದ ಹುಲುಸು ಆಗಿರುತ್ತದೆ. ಅದನ್ನು ಪರಗ್ರಾಮದವರು ತೆಗೆದುಕೊಂಡು ಹೋಗುವುದಿರಲಿ ಮುಟ್ಟುವ ಹಾಗೂ ಇಲ್ಲ ಅಂದು ಪರಗ್ರಾಮದವರು ಊರಿನೊಳಗೆ ಬಾರದ ಹಾಗೇ ನಿರ್ಬಂಧ ಹಾಕಿರುತ್ತಿದ್ದರು. ಅಂತಹ ಹುಲುಸನ್ನು ಪರಗ್ರಾಮದವರು ಕದ್ದು ತೆಗೆದುಕೊಂಡು ಹೋದಲ್ಲಿ ಅವನನ್ನೇ ಕಡಿದು ಅಗಸೆಯಲ್ಲಿ ಹೂಳಲಾಗುತ್ತಿತ್ತು. ಅದನ್ನು ಲೆಕ್ಕಿಸದೆ ಪರಗ್ರಾಮದವರು ಕೊಂಡೊಯ್ದರೆ ಹೊಯ್ದಿರುವ ಗ್ರಾಮಕ್ಕೆ ಒಳ್ಳೆದಾಗುತ್ತದೆ ಎನ್ನುವ ಪ್ರತೀತಿಯೂ ಇದೆ. ಅದಕ್ಕಾಗಿ ಅವನ ತಾಯಿಯು ಚೇಷ್ಟೆಗಾಗಿ ಮಗನನ್ನು ಬಯ್ದಿದಿದ್ದಳು. ಅದನ್ನೇ ಮನಸ್ಸಿನಲ್ಲಿ ಇಟ್ಟುಕೊಂಡು ಅವನು ಅಲ್ಲಿನ ಹುಲುಸನ್ನು ಒಯ್ಯುವ ನಿರ್ಧಾರ ಮಾಡಿದ. ಕೋಣವನ್ನು ಪೂಜಿಸಿ ಅದರ ತಲೆಯನ್ನು ಕತ್ತರಿಸಿದ ಕೂಡಲೇ ಅದನ್ನು ಕಾಯುತ್ತಿದ್ದ ಅವನು ಆ ತಲೆಯನ್ನು ಎತ್ತಿಕೊಂಡು ಓಡಿ ತನ್ನ ಗಡಿಗೆ ಸೇರಿದನು. ಆ ಮಹಿಷನ (ಕೋಣ) ಮಸ್ತಕ (ತಲೆ) ವನ್ನು ತನ್ನ ಗ್ರಾಮದ ಅಗಸೆಯಲ್ಲಿ ತಂದು ಹೂಳಿದನು. ಅಂದಿನಿಂದ



ಹಳೆ ಗ್ರಾಮದ ಭಾಗಗಳು

ಈ ಗ್ರಾಮಕ್ಕೆ ಮಹಿಷಮಸ್ತಕ ಎನ್ನುವುದು ರೂಢಿಯಾಯಿತು. ಇತ್ತೀಚೆಗೆ ಇಲ್ಲಿನ ಗ್ರಾಮಸ್ಥರಿಗೆ ಕರೆಯುವುದು ಕಷ್ಟವಾಗಿ ಕನ್ನಡದಲ್ಲಿ ಕೋಣನತಲೆ ಯೆಂದು ಬದಲಾಯಿಸಿಕೊಂಡಿದ್ದಾರೆ. ಈ ಗ್ರಾಮವು ಇಂದಿನ ಸ್ಥಳದಿಂದ ಪೂರ್ವಕ್ಕೆ ಒಂದು ಕಿಲೋಮೀಟರ್ ಅಂತರ ದಲ್ಲಿ ನದಿ ದಂಡೆಯ ಹತ್ತಿರ ತಗ್ಗಿನಲ್ಲಿತ್ತು. ದಾಖಲೆಗಳ ಪ್ರಕಾರ ೧೯೦೬ರವರೆಗೆ ಇಲ್ಲೇ ಇದ್ದಿತ್ತು. ನಂತರದಲ್ಲಿ ೨೦ ಅಥವಾ ೩೦ರ ದಶಕದಲ್ಲಿ ಈಗಿದ್ದ ಸ್ಥಾನಕ್ಕೆ ಸ್ಥಳಾಂತರಗೊಂಡಿತು. ಇದಕ್ಕೆ ಕಾರಣ ತುಂಗಾಭದ್ರಾ ನದಿಯ ಪ್ರವಾಹದಿಂದ ಹಳೆ ಗ್ರಾಮದ ಭಾಗಗಳು ಮುಳಗಿದ್ದು ಸ್ಥಳಾಂತರಗೊಳ್ಳಲು ಕಾರಣವಾಗಿದೆ. ಇದನ್ನು ಹಳೆಯ ಊರು ಎಂತಲೂ ಕರೆಯುತ್ತಾರೆ. ಅಲ್ಲಿ ಹಳೆಯ ದೇವಾಲಯಗಳು, ಉಡೇವು ಕೊತ್ತಲ (ಭುರ್ಜ) ಕಂಡುಬರುತ್ತದೆ.

**ಐತಿಹಾಸಿಕ ಅವಶೇಷಗಳು**

**ಶಾಸನಗಳು** : ಕ್ರಿ.ಶ. ೧೩೯೦ರ (ಶ್ರೀ ಶಕೆ ೧೩೧೨) ಶಾಸನದ ೧೫ ನೇ ಸಾಲಿನಲ್ಲಿ ಬರುವ ಉಲ್ಲೇಖವಾದ ಕಾಣುವ ತಲೆ ಈಗಿನ ಕೋಣನ ತಲೆಯಾಗಿದೆ. ಈ ಶಾಸನವು ಕುರುವ ಗದ್ದೆಯಲ್ಲಿದೆ. ಇದು ವಿಜಯನಗರದ ಅರಸ ೨ನೇ ಹರಿಹರನ ಕಾಲಕ್ಕೆ ಸಂಬಂಧಿಸಿದ್ದು ಇದನ್ನು E.C. Vol VII ರಲ್ಲಿ ೬ನೇ ಶಾಸನವಾಗಿ ಕಂಡುಬರುತ್ತದೆ. ಇನ್ನೊಂದು ಶಾಸನವು ಮೊದಲಿದ್ದ ಹಳೆಯ ಊರಿನ ಆಂಜನೇಯ ದೇವಸ್ಥಾನದ ಮುಂದುಗಡೆಯಿದೆ. ಅದರಲ್ಲಿ ಯಾವುದೇ ಅಕ್ಷರಗಳು ಉಳಿದಿಲ್ಲ. ಆದರೆ ಮೇಲೆ ಲಿಂಗು ಮತ್ತು ಚಂದ್ರನ ಆಕೃತಿ ಸ್ವಲ್ಪ ಸ್ವಲ್ಪವಾಗಿ ಕಂಡುಬರುತ್ತದೆ.



ಅಸ್ಪಷ್ಟ ಶಾಸನ

**ದೇವಾಲಯಗಳು**

**ಆಂಜನೇಯ ದೇವಾಲಯ** : ಈ ದೇವಾಲಯವು ಮೊದಲಿದ್ದ ಹಳೆಯ ಊರಿನಲ್ಲಿದೆ. ಈ ದೇವಾಲಯವು ವಿಜಯ ನಗರೋತ್ತರ ಕಾಲಕ್ಕೆ ಸಂಬಂಧಿಸಿದ್ದು ಎಂದು ಇದರ ಲಕ್ಷಣಗಳ ಆಧಾರದ ಮೇಲೆ ಹೇಳಬಹುದು. ಈ ದೇವಾಲಯವು ದಕ್ಷಿಣಕ್ಕೆ ಮುಖ ಮಾಡಿದೆ. ಇದಕ್ಕೆ ಕಲ್ಲುಗಳನ್ನು ಬಳಸಿ ಅಗಲವಾದ ಗೋಡೆಗಳನ್ನು ನಿರ್ಮಿಸಲಾಗಿದೆ.

ಗರ್ಭಗುಡಿಯು ೪ ಅಡಿ ಅಗಲ ಮತ್ತು ೮ ಅಡಿ ಉದ್ದವಿದೆ. ಇದರಲ್ಲಿ ಮೂರು ಅಡಿ ಎತ್ತರದ ಆಂಜನೇಯನ ವಿಗ್ರಹವು ಇಂದಿನ ಎತ್ತರವಾದ ಭಾಗಕ್ಕೆ ಆನಿಗೊಂಡಿದೆ. ಇದು ಎಡಕ್ಕೆ ತಿರುಗಿದ ಮುಖವನ್ನು ಹೊಂದಿದೆ. ಸಭಾಮಂಟಪವು ೨೦ ಅಡಿ ಉದ್ದ ೧೦ ಅಡಿ ಅಗಲ; ಇದು ನಾಲ್ಕು ಕಂಬಗಳಿಂದ ಕೂಡಿದೆ. ಇದರ ಭುವನೇಶ್ವರಿಯೂ ಸಾದಾ ಕಲ್ಲುಗಳಿಂದ ನಿರ್ಮಿತವಾಗಿದೆ. ಮುಖಮಂಟಪವಿದ್ದ ಮೇಲಿನ ಭಾಗವು ಬಿದ್ದು ಹೋಗಿದೆ. ಅದರ ಪೀಠಭಾಗವು ಮಾತ್ರ ಉಳಿದುಕೊಂಡಿದೆ. ಈ ದೇವಾಲಯವು ೨ ಅಡಿ ಎತ್ತರದ ಪೀಠದ ಮೇಲೆ ನಿರ್ಮಿತವಾಗಿದೆ. ಪ್ರದಕ್ಷಿಣಾ ಪಥವು ದೇವಸ್ಥಾನದ ಪಕ್ಕದಲ್ಲಿ ತಗ್ಗಾದ ಪ್ರದೇಶವನ್ನು ಹೊಂದಿದೆ. ಈ ದೇವಾಲಯವು ಉತ್ತರದ ಪ್ರಾಂಗಣವನ್ನು ಹೊಂದಿದೆ. ಇದರ ಬಲ ಮೂಲೆಯಲ್ಲಿ ಒಂದು ಸಣ್ಣ ದೇವಾಲಯವಿದೆ ಅಲ್ಲಿ ಯಾವುದೇ ಮೂರ್ತಿಯಿಲ್ಲ. ಪ್ರಾಂಗಣ ಗೋಡೆಯ ಮುಂದೆ ದೀಪ ಕಂಬವೊಂದು. ಇದು ೧೫ ಅಡಿ ಎತ್ತರವಾಗಿದೆ.

**ಬನ್ನಿಮಹಾಕಾಳೀ ದೇವಾಲಯ** : ಇದು ಆಂಜನೇಯ ದೇವಾಲಯದ ಸ್ವಲ್ಪ ದೂರದಲ್ಲಿ ಇದೆ. ಇದು ಪೂರ್ವಕ್ಕೆ ಮುಖ ಮಾಡಿದೆ. ಇದರ ಕೆಲ ಭಾಗಗಳು ಬಿದ್ದುಹೋಗಿವೆ. ಗರ್ಭಗುಡಿಯು ನೀರಿನಿಂದ ಆವೃತವಾಗಿದೆ. ಇದರಲ್ಲಿ ಯಾವುದೇ ಮೂರ್ತಿ ಇಲ್ಲ. ಇದರ ಮುಂಭಾಗದಲ್ಲಿ ಪಾದಗುರುತುಗಳಿಂದ ಕೂಡಿದ ಪಾದ ಪೀಠವು ಇದೆ.

**ಕಲ್ಲಪ್ಪನ ದೇವಸ್ಥಾನ** : ಈ ದೇವಸ್ಥಾನವು ಈಗಿರುವ ಊರಿನಿಂದ ನದಿಯ ದಾರಿಯ ಸ್ವಲ್ಪ ದೂರದಲ್ಲಿದೆ. ಇದು ನೆಲದಿಂದ ೨ ಅಡಿ ಎತ್ತರವಾಗಿದೆ. ಇಲ್ಲಿ ದೇವಾಲಯದ ಯಾವುದೇ ಕಂಬ ಅಥವಾ ಗೋಡೆಗಳು ಉಳಿದಿಲ್ಲ; ಬಿದ್ದುಹೋಗಿವೆ. ಇಲ್ಲಿ ಮೊದಲು ಕಲ್ಲೇಶ್ವರ ಎಂಬ ದೇವಸ್ಥಾನ ಇದ್ದಿರಬಹುದು. ಇಲ್ಲಿ ಲಿಂಗವಿಲ್ಲ. ಆದರೆ ನಂದಿ ವಿಗ್ರಹವು ಮಾತ್ರ ಉಳಿದುಕೊಂಡಿದೆ. ಇದು ತನ್ನ ಮೊದಲ ಸ್ಥಾನದಿಂದ ಪಲ್ಲಟಗೊಂಡು ಪೂರ್ವಕ್ಕೆ ಮುಖ ಮಾಡಿದೆ. ಶ್ರಾವಣ ಮಾಸದಲ್ಲಿ ಕಲ್ಲಪ್ಪನ ಹಬ್ಬವೆಂದು ಈ ದೇವರಿಗೆ ಊರಿನ ಗ್ರಾಮಸ್ಥರು ಪೂಜೆಯನ್ನು ಸಲ್ಲಿಸುತ್ತಾರೆ.

**ಗುಹೆಗಳು** : ಈಗಿರುವ ಊರಿನಿಂದ ಪೂರ್ವಕ್ಕೆ ೫ ಕೀ.ಮೀಟರ್ ದೂರದಲ್ಲಿದೆ. ಇಲ್ಲಿ ನೈಸರ್ಗಿಕವಾದ ಮೂರು ಗುಹೆಗಳನ್ನು ನಾವು ನೋಡಬಹುದು. ಇವು ಸಿದ್ದಪ್ಪನ ಗುಡ್ಡದ ಮುಕ್ಕಾಲು ಭಾಗದಲ್ಲಿ ದಕ್ಷಿಣಕ್ಕೆ ಮುಖ ಮಾಡಿವೆ. ಇವುಗಳ ಪೂರ್ವದಿಂದ ಮೊದಲನೆಯದು ಮೇಲಿನ ಭಾಗದಲ್ಲಿ ಅಗಲವಾಗಿ ಚಚ್ಚೌಕವಾಗಿದೆ. ಒಳಹೋದಂತೆ ಕಿರಿದಾಗುತ್ತಾ ಹೋಗಿದೆ. ಇದು ಕೆಳಮುಖವಾಗಿ ಸಾಗಿದೆ. ಸುಮಾರು ಇದರ ಉದ್ದವು ೧೦ ಅಡಿ ಆಗಿದೆ.

ಎರಡನೆಯ ಗುಹೆಯು ಮೊದಲನೆಯ ಗುಹೆಯ ಪಕ್ಕದಲ್ಲಿದೆ. ಇದು ಮೊದಲ ಗುಹೆಯ ಎಲ್ಲಾ ಲಕ್ಷಣಗಳನ್ನು ಹೊಂದಿದೆ.

ಮೂರನೆಯ ಗುಹೆ ಮೊದಲೆರಡು ಗುಹೆಗಳಿಂದ ದಕ್ಷಿಣಕ್ಕೆ ಸ್ವಲ್ಪ ದೂರದಲ್ಲಿದೆ. ಈ ಗುಹೆಯ ಮುಂಭಾಗವು ಬಹಳ



೧ನೇ ಮತ್ತು ೨ನೇ ಗುಹೆಗಳು

ಅಗಲವಾಗಿದೆ ಸುಮಾರು ೮ ಅಡಿ ಅಗಲವಾಗಿದೆ. ೩ ಅಡಿ ಎತ್ತರವಾಗಿದೆ. ಇದು ಮೊದಲೆರಡು ಗುಹೆಗಳಿಗಿಂತ ಭಿನ್ನವಾಗಿದ್ದು ಕಡಿಮೆ ಅಗಲವನ್ನು ಹೊಂದಿದೆ.

ಮೊದಲೆರಡು ಗುಹೆಗಳ ಮುಂಭಾಗದಲ್ಲಿ ಎರಡು ಕಡೆ ಗೋಡೆಯನ್ನು ಹೊಂದಿದೆ. ಈ ಗೋಡೆಯ ಮೇಲ್‌ಛಾವಣಿ ಬಿದ್ದುಹೋಗಿದೆ. ಮೂರನೆಯ ಗುಹೆಯು ಸಣ್ಣ ಕಿರಿದಾದ ಗೋಡೆಯನ್ನು ಹೊಂದಿದೆ. ಇದನ್ನು ಗಮನಿಸಿದರೆ ಮೊದಲು ಇಲ್ಲಿ ದೇವನೆಲೆಗಳು ಇದ್ದಿರಬಹುದೆಂದು ತೋರುತ್ತದೆ. ಮೊದಲೆರಡು ಗುಹೆಗಳ ಮುಂದೆ ಸಣ್ಣ ಗುಡಿಯಿದೆ. ಈ ಗುಡಿಯಲ್ಲಿ ಸುಮಾರು ೨ ಅಡಿ ಎತ್ತರದ ಕತ್ತಿಯನ್ನು ಹಿಡಿದುಕೊಂಡ ಯೋಧನ ಶಿಲ್ಪವನ್ನು ಹೊಂದಿದೆ. ಇದರ ಪಕ್ಕದಲ್ಲಿ ಎರಡು ಜೋಡಿ ನಾಗರದ ಶಿಲ್ಪವನ್ನು ಹೊಂದಿದೆ. ಯೋಧನ ಶಿಲ್ಪವು ಪೂರ್ವಕ್ಕೆ ಮುಖ ಮಾಡಿದೆ. ಗುಹೆಗಳ ಮುಂದೆ ವಿಶಾಲವಾದ ಜಾಗವಿದೆ.

**ಹಿನ್ನೆಲೆ** : ಇಲ್ಲಿರುವ ಶಿಲ್ಪವು ೧೪ ಮತ್ತು ೧೫ ನೇ ಶತಮಾನಕ್ಕೆ ಸಂಬಂಧಿಸಿದ್ದು ಅದು ಯೋಧನ ಶಿಲ್ಪವಾಗಿದೆ. ಇದನ್ನೆಲ್ಲಾ ನೋಡಿದಾಗ ಈ ಗುಹೆಗಳ ಹತ್ತಿರ ಸಿದ್ದಪ್ಪನೆಂಬ ಯೋಧನು ವಾಸವಾಗಿದ್ದನೆಂದು ಊಹಿಸಬಹುದು. ಇಲ್ಲಿರುವ ಶಿಲ್ಪವು ಬಲಗೈಯಲ್ಲಿ ಕತ್ತಿಯನ್ನು ಎಡಗೈಯಲ್ಲಿ ಗುರಾಣಿಯನ್ನು ಹಿಡಿದು ಅದರ ಕೆಳಭಾಗದ ಪಕ್ಕದಲ್ಲಿ ೨ ಸಣ್ಣ ಶಿಲ್ಪಗಳು ಇವೆ.

ಊರಿನ ಜನರು ರೂಢಿಯಾಗಿ ಬಂದಿರುವ ನಂಬಿಕೆಯ ಪ್ರಕಾರ ಶ್ರಾವಣ ಮಾಸದ ಕೊನೆಯ ಸೋಮವಾರದಂದು ದೇವರ ಸಮೇತರಾಗಿ ಊರಿನ ಗ್ರಾಮಸ್ಥರು ಬರುತ್ತಾರೆ. ಅಲ್ಲದೇ ಹರಿಹರ ತಾಲ್ಲೂಕು ಮೂಗಿನಗೊಂದಿ ಗ್ರಾಮದಲ್ಲಿ ವಾಸವಾಗಿರುವ ಬಸಟ್ಟಿ ವಂಶಸ್ಥರು ಮತ್ತು ಊರಿನ ಜನರು ಇಲ್ಲಿಗೆ ದೇವರ ಸಮೇತರಾಗಿ ಬರುತ್ತಾರೆ. ಮೂಗಿನಗೊಂದಿಯಲ್ಲಿ ವಾಸವಾಗಿರುವ ಬಸಟ್ಟಿ ವಂಶಸ್ಥರು ಇದಕ್ಕೆ ಮೊದಲು ಹಳೆಯ ಊರಾದ ಕೋಣನತಲೆ ಗ್ರಾಮದಲ್ಲಿ ವಾಸವಾಗಿದ್ದರು. ಊರು ಸ್ಥಳಾಂತರಗೊಂಡಾಗ



ಗುಹೆಯ ಹತ್ತಿರವಿರುವ ಸಿದ್ದೇಶ್ವರ ಮೂರ್ತಿ

ಕೆಲವರು ಈಗಿನ ಮೂಗಿನಗೊಂದಿಯಲ್ಲಿ ಮತ್ತು ಕೋಣನ ತಲೆಯಲ್ಲಿ : ಎರಡು ಕಡೆ ನೆಲಸಿದರು. ಇಲ್ಲಿಗೆ ಪೂಜೆಯನ್ನು ಸಲ್ಲಿಸಲು ಊರಿನ ಪ್ರತಿಯೊಂದು ಮನೆಯಿಂದ ಬೇಳೆ ಬೆಲ್ಲವನ್ನು ತಂದು ಹಳ್ಳೇರ ಪರಮೇಶ್ವರಪ್ಪ ಇವರ ಮನೆಗೆ ಕೊಡುತ್ತಾರೆ. ಅದರ ಪ್ರಸಾದವನ್ನು ಮಾಡಿ ಸಿದ್ದಪ್ಪನಿಗೆ ಪ್ರಸಾದ (ಎಡೆ) ನೀಡುತ್ತಾರೆ. ಅಲ್ಲದೇ ತೆಂಗಿನಕಾಯಿಯನ್ನು ಪೂಜೆ ಮಾಡಲು ಮತ್ತು ಉರುಳಿ ಬಿಡಲು ಊರಿನ ಜನರು ಕೊಡುತ್ತಾರೆ. ತೆಂಗಿನ ಕಾಯಿಯನ್ನು ಗುಹೆಯಲ್ಲಿ ಉರುಳಿ ಬಿಟ್ಟರೆ ದನಕರುಗಳಿಗೆ ಕೀಟಗಳು, ಮನೆಯಲ್ಲಿ ತಗಣೆಗಳು ಆಗುವುದಿಲ್ಲವೆಂಬ ನಂಬಿಕೆ ಇದೆ.

ಇನ್ನೊಂದು ನಂಬಿಕೆಯ ಪ್ರಕಾರ ತೆಂಗಿನಕಾಯಿ ಮತ್ತು ಕೋಳಿಯನ್ನು ಬಿಟ್ಟರೇ ಅವುಗಳು ಹರಿಹರದ ಹತ್ತಿರ ತುಂಗಾಭದ್ರ ನದಿಯಲ್ಲಿ ಏಳುತ್ತವೆ ಎಂಬ ನಂಬಿಕೆಯಿತ್ತು ಎಂದು ಹೇಳುತ್ತಾರೆ.

**ಶಿಲ್ಪಗಳು** : ಹೊಳೆಗಂಗವ್ವ ಮೂರ್ತಿಯು ಮೊದಲಿದ್ದ ಹಳೆಯ ಊರಿನ ಹೊಳೆಯಲ್ಲಿ ಕಂಡುಬರುತ್ತದೆ. ಇದು ಪೂರ್ವಕ್ಕೆ ಮುಖ ಮಾಡಿದೆ. ಇದು ಮಳೆಗಾಲದಲ್ಲಿ ಮುಳುಗಿರುತ್ತದೆ. ಬೇಸಿಗೆಯಲ್ಲಿ ಅರ್ಧ ಭಾಗ ಮಾತ್ರ ಕಾಣುತ್ತದೆ. ಇದಕ್ಕೆ ಪೂಜೆಯನ್ನು ಕೂಡ ಸಲ್ಲಿಸುತ್ತಾರೆ.

**ಕೊತ್ತಳ** : ಇದು ಆಂಜನೇಯ ದೇವಸ್ಥಾನದ ಬಲಭಾಗದಲ್ಲಿದೆ. ಸುಮಾರು ೩೦ ಅಡಿ ಎತ್ತರ ೫೦ ಅಡಿ ಸುತ್ತಳತೆಯನ್ನು ಹೊಂದಿದೆ. ಇದರ ಹಿಂದಿನ ಭಾಗವು ಬಿದ್ದುಹೋಗಿದೆ. ಇದರ ಪಕ್ಕದಲ್ಲಿ ದುಂಡಾದ ಕಲ್ಲುಗಳನ್ನಿಟ್ಟು ಕೋಟೆ ಭರಮಪ್ಪನೆಂದು ಪೂಜೆ ಸಲ್ಲಿಸುತ್ತಾರೆ.

**ಮಾಸ್ತಿಗಲ್ಲು** : ಈಗಿರುವ ಊರಿನಿಂದ ಸ್ವಲ್ಪ ದೂರದ ಉತ್ತರಕ್ಕೆ ಕಂಡುಬರುತ್ತದೆ. ಇದು ಮಹಾಸತಿ ಕಲ್ಲು ಆಗಿರುತ್ತದೆ. ಇದು ಸುಮಾರು ೧೪ ಮತ್ತು ೧೫ ನೆಯ ಶತಮಾನಕ್ಕೆ ಸಂಬಂಧಿಸಿರಬಹುದು. ಈ ಮಹಾಸತಿ ಕಲ್ಲಿಗೆ ಶ್ರಾವಣ ಮಾಸದಲ್ಲಿ



ಮಾಸ್ತಿ ಕಲ್ಲು

ಊರಿನ ಜನರು ನೈವೇದ್ಯ ಮತ್ತು ಹಸಿರು ಬಳೆಯೊಂದಿಗೆ ಸಣ್ಣ ಮಡಿಕೆಯಲ್ಲಿ ಬೇವಿನ ಸೊಪ್ಪಿನೊಂದಿಗೆ ಅಲಂಕರಿಸಿದ ಆ ಮಡಿಕೆಗೆ ಕಂಕಣ ಕಟ್ಟಿಕೊಂಡು ಅದರಲ್ಲಿ ಪೈಸೆಯನ್ನಿಟ್ಟು ಅದಕ್ಕೆ ಪೂಜೆಯನ್ನು ಸಲ್ಲಿಸುತ್ತಾರೆ. ಈ ಪದ್ಧತಿಯನ್ನು ಬಹು ದಿನಗಳಿಂದ ಊರಿನ ಜನರು ಮಾಡುತ್ತಾ ಬಂದಿದ್ದಾರೆ. ಮಹಾಸತಿಯ ಕಲ್ಲಿನ ಪಕ್ಕದಲ್ಲಿ ಎರಡು ನಾಗರ ಶಿಲ್ಪಗಳಿವೆ. ಮಹಾಸತಿ ಬಲಗೈಯನ್ನು ಮೇಲೆ ಮಾಡಿದ್ದಾಳೆ. ಬಲಗೈಯಲ್ಲಿ ಹೂಜಿಯನ್ನು ಹಿಡಿದಿದ್ದಾಳೆ. ಇದು ಸುಮಾರು ೩ ಅಡಿ ಎತ್ತರವಾಗಿದೆ.





ಸಂಸ್ಕೃತದ ಮಡಿಯುಟ್ಟರೂ ಕನ್ನಡನುಡಿನಾಮದಲಿ
ಜನದ ಮನದಿಂಗಿತವ ನಲಿಸಿದ ಹಳ್ಳಿ
ಒಡಲೊಳಗೆ ಕಲ್ಬಸದಿ ಹನುಮ ಕಾಳಿ ಕಲ್ಲಪ್ಪರ ಸಲಹಿ
ಕೋಟೆ ಗುಹೆಗಳ ಉಳಿಸಿ ಬೆಳೆದಿತ್ತು ತಲೆಮಾರುಬಳ್ಳಿ



ಡಾ. ಎಸ್. ಕೆ. ಮೇಲಕಾರ*

# ಸಂಹವನ ಮಾಧ್ಯಮವಾಗಿ ಪ್ರಾಚ್ಯವಸ್ತು ಸಂಗ್ರಹಾಲಯಗಳು - ಒಂದು ಸಾಂಸ್ಕೃತಿಕ ಸಮೀಕ್ಷೆ

ವಸ್ತುಸಂಗ್ರಹಾಲಯಗಳು ಮಾನವನ ಸೃಜನಶೀಲತೆ ಮತ್ತು ಪ್ರಕೃತಿಯ ಮೇಲಣ ನಿಯಂತ್ರಣದ ಬಗ್ಗೆ ಮೂಲಭೂತ ಸಾಕ್ಷ್ಯಗಳನ್ನು ಸಾದರಪಡಿಸುವ, ದೃಶ್ಯ ಶಿಕ್ಷಣವಾಗಿ ಸಾಮಾಜಿಕ, ಸಾಂಸ್ಕೃತಿಕ, ಆಧುನಿಕ ಉತ್ಥಾನದ ಜೀವಂತ ಸಂವಹನ ಮಾಧ್ಯಮಗಳಾಗಿವೆ. ಇವಕ್ಕೆ ಪಾರಂಪರಿಕ ಗಟ್ಟಿತನವೂ ಇದೆ. ಈ ಪರಿಕಲ್ಪನೆಯನ್ನು ಸಂಶೋಧನಾತ್ಮಕವಾಗಿ ಜಾಗೃತಿಗೊಳಿಸುವ ಪ್ರಯತ್ನವಿಲ್ಲಿದೆ. ಹಿಂದೆ ಇತಿಹಾಸಕ್ಕೆ ಸಂಬಂಧಿಸಿದ ವಿಷಯಕ್ಕೆ ಮಾತ್ರ ಸೀಮಿತಗೊಂಡಿದ್ದ ಮ್ಯೂಸಿಯಂಗಳು ಇಂದು ಎಲ್ಲಾ ವಿಷಯಗಳ ಬಗ್ಗೆ ಕ್ಷೇತ್ರಗಳ ಬಗ್ಗೆ ಮಾಹಿತಿಯನ್ನು ನೀಡುತ್ತಿವೆ. ಸಾಮಾಜಿಕ ಅಭಿವೃದ್ಧಿ, ಸಾಕ್ಷರತೆಯಂತಹ ಉದ್ದೇಶಗಳು ಮ್ಯೂಸಿಯಂನಿಂದ ನೆರವೇರಲ್ಪಡುತ್ತಿವೆ.

## ಮ್ಯೂಜಿಯಂಗಳ ಅರ್ಥ ಮತ್ತು ವ್ಯಾಪ್ತಿ

'ಮ್ಯೂಜಿಯಂ' ಎಂಬ ಶಬ್ದ, ಗ್ರೀಕ್ ಕಲಾಭಿಮಾನಿ ದೇವತೆಗಳ ಗರ್ಭಗುಡಿ (Sanctuary of Muses) ಎಂಬ ಅರ್ಥವನ್ನು ಸೂಚಿಸುವ ಶಬ್ದದಿಂದ ಹುಟ್ಟಿಕೊಂಡಿದೆ. ಇದು ಅಪೂರ್ವವಾದ ಪದಾರ್ಥಗಳನ್ನು ಪ್ರದರ್ಶನಕ್ಕಾಗಿ ಸಂಗ್ರಹಿಸಿಡುವ ಜ್ಞಾನದ ಎಲ್ಲಾ ಕ್ಷೇತ್ರಗಳನ್ನು ಪ್ರತಿನಿಧಿಸುವ ಪ್ರಾಚ್ಯವಸ್ತುಗಳನ್ನು ಶಾಶ್ವತವಾಗಿ ಇಡುವಂತಹ ಸ್ಥಳವಾಗಿದೆ; ಇದು ಸಂದರ್ಶಕರ ಕುತೂಹಲವನ್ನು ಕೇವಲ ಕೆರಳಿಸುವ ತಮಾಷೆ ಬಂಗಲೆಗಳು ಆಗಿಲ್ಲ. ಬದಲು ನೋಡುವ, ಅನುಭವಿಸುವ ಮೂಲಕ ವಿದ್ವಾಂಸರು ಜ್ಞಾನದಾಹವನ್ನು ತಣಿಸುವ ಮಹತ್ವದ ತಾಣಗಳೆನಿಸಿವೆ. ಇನ್ನೊಂದೆಡೆ ಜನತೆಗೆ ಮನರಂಜನೆಯನ್ನು ಜ್ಞಾನ ಪ್ರಕಾಶವನ್ನು ನೀಡುತ್ತವೆ. ಬಳಕೆಯಿಂದ ಹೊರತಾದ ಅನುಪಯುಕ್ತ ವಸ್ತುಗಳ ಸಂಗ್ರಹವೇ ವಸ್ತು ಸಂಗ್ರಹಾಲಯವೆಂದು ನಾವೂ ಭಾವಿಸುವಂತಿಲ್ಲ. ಇವುಗಳು ನಿರ್ದಿಷ್ಟ ಪ್ರದೇಶದ ಅಥವಾ ಸಮುದಾಯದ ಕಲೆ ಮತ್ತು ಸಂಸ್ಕೃತಿಗಳನ್ನು ಉಳಿಸಿಕೊಂಡು, ಮಾನವನ ಸೃಜನ ಶೀಲತೆ ಮತ್ತು ಪ್ರಕೃತಿಯ ಮೇಲಣ ನಿಯಂತ್ರಣದ ಬಗ್ಗೆ ಮೂಲಭೂತ ಸಾಕ್ಷ್ಯಗಳನ್ನು ಸಾದರಪಡಿಸುವುದರ ಮೂಲಕ ಮಾನವತೆಯ ಸಾಮಾಜಿಕ, ಸಾಂಸ್ಕೃತಿಕ ಉತ್ಥಾನಕ್ಕೆ ನೆರವಾಗುವುದರಲ್ಲೂ ಜೀವಂತ ಸಾಕ್ಷಿಗಳಾಗಿವೆ.

ಇಂತಹ ಪ್ರಾಚ್ಯವಸ್ತುಗಳನ್ನು ಸಂರಕ್ಷಿಸಿಡುವುದೆಂದರೆ ನಮ್ಮ ಸಂಸ್ಕೃತಿಯನ್ನು ರಕ್ಷಿಸಿ ಉಳಿಸಿಕೊಂಡಂತೆ, ತಮ್ಮ ಕಥೆಯನ್ನು ತಾವೇ ಹೇಳುವಂತೆ ಅವುಗಳ ಮೂಲ ಹಿನ್ನೆಲೆಯನ್ನು ಅರಿಯಲು ಇಂದಿನ ಶೈಕ್ಷಣಿಕ ವ್ಯವಸ್ಥೆಯಲ್ಲಿ ಇವುಗಳ ಪಾತ್ರ ಮುಖ್ಯವಾಗಿದೆ. ಆದುದರಿಂದಲೇ ಪ್ರತಿಯೊಂದು ರಾಷ್ಟ್ರವು ತನ್ನ ಹೆಮ್ಮೆಯ ಸಾಧನೆಗಳಲ್ಲಿ ಒಂದೆಂಬುವಂತೆ 'ರಾಷ್ಟ್ರೀಯ ವಸ್ತು ಸಂಗ್ರಹಾಲಯ'ಗಳನ್ನು ಹೊಂದಿರುತ್ತವೆ. ಅಲೆಕ್ಸಾಂಡ್ರಿಯದ ಟಾಲೆಮಿಯ 'ಅದ್ಭುತ ಸಂಗ್ರಹ'ವನ್ನು ಅದರ ಸರ್ವವ್ಯಾಪಕ ಲಕ್ಷಣದಿಂದಾಗಿ ಒಂದು ಸಂಶೋಧನಾ ಸಂಸ್ಥೆಯೆಂದೂ ವಿಶ್ವವಿದ್ಯಾಲಯವೆಂದೂ ಕರೆಯಬಹುದಾದರೂ ಅದನ್ನು ಆಧುನಿಕ ಅರ್ಥದಲ್ಲಿ ವಸ್ತು ಸಂಗ್ರಹಾಲಯವೆಂದು ಕರೆಯುವಂತಿಲ್ಲ. ಸಾಮಾನ್ಯ ಜನತೆಯ ಪಾಲಿಗೆ 'ಅಜಾಯಬ್‌ಘರ್' ಅಥವಾ 'ಅದ್ಭುತ ಗೃಹಗಳಾಗಿವೆ' ಎನ್ನುತ್ತಾರೆ.

ಐರೋಪ್ಯ ಧನಿಕರ ಖಾಸಗಿ ಬೀರುಗಳನ್ನು ತುಂಬಿರುವ ಅಮೂಲ್ಯ ನಿಧಿ ಎನಿಸಿಕೊಂಡಿರುವ ಹಲವಾರು ಸಂಗ್ರಹಗಳಾಗಲಿ ಅಥವಾ ಮಧ್ಯಯುಗದ ಪ್ರತಿಷ್ಠಿತರು ತಮ್ಮ ಸಿರಿವಂತಿಕೆಯನ್ನು, ಜ್ಞಾನವನ್ನೂ, ಉತ್ತಮ ಕಲಾಭಿರುಚಿಯನ್ನು ತೋರಿಸಲು ಸಂಗ್ರಹಿಸಿ ತಮ್ಮ ಭವನಗಳನ್ನು ಅಲಂಕರಿಸುವ ಅತ್ಯುತ್ತಮ ಕಲಾ ಸಂಗ್ರಹಾಲಯಗಳಾಗಲಿ ಆಧುನಿಕ 'ಸಾರ್ವಜನಿಕ ವಸ್ತು

* ಮ್ಯೂಜಿಯಂ ಮೇಲ್ವಿಚಾರಕರು, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩

ಸಂಗ್ರಹಾಲಯ'ಗಳ ವರ್ಗಕ್ಕೆ ಸೇರುವುದಿಲ್ಲ. ಅವು ಅವರ ಅಂತಸ್ತು, ಸೌಂದರ್ಯಾನುಭೂತಿಯನ್ನು ತೋರಿಸುತ್ತವೆ ವಿನಹ ಸಾಮಾನ್ಯ ಜನರಿಗಾಗಿ ಇರಲಿಲ್ಲ. ನಂತರ ೧೮-೧೯ನೆಯ ಶತಮಾನಗಳಲ್ಲಿ ಗಣ್ಯರು, ಪಂಡಿತರು, ಕಲಾಭಿಜ್ಞರಿಗೆ ಸೀಮಿತವಾಗಿ ಮೊದಲನೆಯ ಜಾಗತಿಕ ಯುದ್ಧದ ಬಳಿಕ ಸಮಾಜದ ಪ್ರತಿಷ್ಠಿತ ವ್ಯಕ್ತಿಗಳು, ವಿದ್ಯಾವಂತರಿಗೆ ಮೀಸಲಾಗಿದ್ದವು. ಭಾರತದ ವಸ್ತುಸಂಗ್ರಹಾಲಯ ಗಳ ಮುನ್ಸೂಚಕಗಳಾಗಿ ಕುತೂಹಲಕರವಾದ ಖಾಸಗಿ ಸಂಗ್ರಹಗಳು ರಾಜರ ಕಲೆ ಮತ್ತು ಪುರಾತತ್ವ ವಸ್ತುಗಳ ಸಂಗ್ರಹ ಮಾತ್ರ ಇದ್ದವು. ಇವುಗಳಲ್ಲಿ ಪುರಾತತ್ವಜ್ಞರ ಸಂಘಗಳು, ಪುರಾತತ್ವ ನಿವೇಶನಗಳ ಮತ್ತು ಉತ್ಖನನಗಳ ಮಾದರಿಗಳಾಗಿ ಸಂಗ್ರಹಿಸಿದ ಪುರಾತತ್ವ ವಸ್ತುಗಳೇ ಮುಖ್ಯವಾದವು. ಮುಂದೆ ಇವುಗಳನ್ನು ಎಲ್ಲರಿಗೂ ನೋಡುವಂತಹ ಅವಕಾಶ ಒದಗಿ ಬಂದಿತು.

ಆಧುನಿಕ ಮ್ಯೂಜಿಯಂಗಳ ಬೆಳವಣಿಗೆಯ ಇತಿಹಾಸವನ್ನು ೨೦೦ವರ್ಷಗಳಷ್ಟು ಹಿಂದಿನಿಂದಷ್ಟೇ ಗುರುತಿಸಬಹುದಾಗಿದೆ. ೧೮ ಮತ್ತು ೧೯ ನೆಯ ಶತಮಾನದ ಆದಿ-ಮಧ್ಯ ಜನತಾ ವಸ್ತು ಸಂಗ್ರಹಾಲಯಗಳ ಹೊಸ ಕಲ್ಪನೆ ಐರೋಪ್ಯ ಸಮಾಜದಿಂದ ಅಸ್ತಿತ್ವಕ್ಕೆ ಬಂದಿತು. ಇದು ಎಲ್ಲಾ ಸಾಧನಗಳಿಂದಲೂ ಜನತೆಗೆ ದೃಶ್ಯ ಶಿಕ್ಷಣವನ್ನೊದಗಿಸುವ ಭಾವನೆಯನ್ನು ಉಂಟುಮಾಡಿತು; ಜ್ಞಾನೋದಯ ಯುಗದ ಸ್ಫೂರ್ತಿಯಾಯಿತು; ಅಂತೇ ಈ ದೃಶ್ಯ ಶಿಕ್ಷಣದ ಬಗ್ಗೆ ವಿಕಸಿತ ದೃಷ್ಟಿ ಮೂಡಲು ಕಾರಣವಾಯಿತು. ೧೮ನೆಯ ಶತಮಾನಕ್ಕೆ ಉಂಟಾದ ಸಾಂಸ್ಕೃತಿಕ ಅರಿವು, ಜ್ಞಾನಪಿಪಾಸೆಯೇ ಮ್ಯೂಜಿಯಂಗಳ ಬಗ್ಗೆ ಇದ್ದ ಮೂಲಭೂತ ದೃಷ್ಟಿ ಬದಲಾಗಲೂ ಕಾರಣವಾಯಿತು. ಖಾಸಗಿ ವಸ್ತುಗಳ ಸಂಗ್ರಹಗಳ ಉಪಯೋಗವು ಸಮಾಜದ ಎಲ್ಲಾ ವ್ಯಕ್ತಿಗಳಿಗೂ ಸಿಗಬೇಕೆಂಬ ಭಾವನೆ ಮೂಡಿಬಂದಿತು. ಇದರಿಂದಾಗಿ ಭಾರತ, ಪರ್ಶಿಯಾ, ಈಜಿಪ್ತ ಚೀನಾ, ಮುಂತಾದ ರಾಷ್ಟ್ರಗಳ ಭವ್ಯ ನಾಗರಿಕತೆಯ ಕುರಿತಾಗಿ ನಡೆದ ಪುರಾತತ್ವ ಸಂಶೋಧನೆಗಳು ಪುರಾತನ ವಸ್ತುಗಳ ಬಗ್ಗೆ ತಿಳಿಯುವ ನೋಡುವ ತಮ್ಮ ಪೂರ್ವಜರಲ್ಲಿ ಹುದುಗಿ ಹೋಗಿದ್ದ ಭವ್ಯತೆಯನ್ನು ಅರಿಯದ ಆದರಾಭಿರುಚಿ ಮೂಡಿತು. ಈ ಸ್ಮಾರಕ ಶಿಲಾಶಾಸನಗಳು ಉನ್ನತ ಕಲಾವಸ್ತುಗಳೂ, ಸಾಮಾನ್ಯವಾಗಿ ದೊರೆಯದ ಸಸ್ಯದ ಚಹರೆ ಯೊತ್ತುಗಳೂ, ವ್ಯಕ್ತಿಗತ ವೈಪರೀತ್ಯ ಅಥವಾ ಕುತೂಹಲಕಾರಕ ವಸ್ತುಗಳಾಗಿ ಮಾತ್ರ ಉಳಿಯಲಿಲ್ಲ. ಸಾಮಾನ್ಯ ಮಾನವನ ತಿಳು ವಳಿಕೆಯ ದೃಷ್ಟಿಯಿಂದಲೂ ಅವು ಹೊಂದಿರುವ ಪ್ರಾಮುಖ್ಯವನ್ನು ಗುರುತಿಸತೊಡಗಿದರು. ಹೀಗೆ ೧೮, ೧೯ನೆಯ ಶತಮಾನಗಳಲ್ಲಿ ಮ್ಯೂಜಿಯಂಗಳು ಜನತೆಯ ಆಸಕ್ತಿಯನ್ನು ಜಾಗೃತಗೊಳಿಸಿ ಯಾವುದೇ ಗೊತ್ತು ಗುರಿಯಿಲ್ಲದೆ ಆತ್ಮತೃಪ್ತಿಗಾಗಿ ತಮ್ಮ ಪ್ರತಿಷ್ಠೆಗಾಗಿ ಸಿಕ್ಕಿದ ವಸ್ತುಗಳನ್ನು ಕಲೆ ಹಾಕಿಡುವ ಕಾಲ ಕೊನೆಗೊಂಡು ಪುರಾತನ ಶೋಧನೆ, ಇತಿಹಾಸ, ಮಾನವಶಾಸ್ತ್ರ, ಕಲೆ ಮೊದಲಾದ ಹಲವು ವಿಧವಾದ ಪ್ರಾಚ್ಯವಸ್ತು ಸಂಗ್ರಹಾಲಯಗಳ ಸ್ಥಾಪನೆಗೆ ದಾರಿಮಾಡಿ ಕೊಟ್ಟಿತು. ಇದರಿಂದಾಗಿ ಹೊರರಾಷ್ಟ್ರಗಳಲ್ಲಿಯಂತೆ ನಮ್ಮ ದೇಶದಲ್ಲಿ ಸಾವಿರಾರು ಮ್ಯೂಜಿಯಂಗಳು ಹುಟ್ಟಿಕೊಳ್ಳಲು ಸಾಧ್ಯವಾಯಿತು. ಈ ರೀತಿ ಅಸ್ತಿತ್ವಕ್ಕೆ ಬಂದ ೨೦ನೆಯ ಶತಮಾನದ ಮ್ಯೂಜಿಯಂಗಳ ಬಗ್ಗೆ ತಿಳಿಸುತ್ತ ಡೇವಿಡ್ ಮರ್ರೆ ಎಂಬಾತನು "ಪುರಾತನ ಸ್ಮಾರಕಗಳನ್ನು ಅಥವಾ ವಿದ್ವಾಂಸರು ಮತ್ತು ವಿಜ್ಞಾನಿಗಳ ಮನಸೆಳೆವ ವಸ್ತುಗಳನ್ನು ವೈಜ್ಞಾನಿಕ ರೀತಿಯಲ್ಲಿ ಜೋಡಿಸಿ ಪ್ರದರ್ಶಿಸಿರುವುದೇ ವಸ್ತು ಸಂಗ್ರಹಾಲಯ ಎಂದು ಹೇಳುತ್ತಾನೆ.

**ಭಾರತದಲ್ಲಿ ಮ್ಯೂಜಿಯಂಗಳ ಹುಟ್ಟು ಮತ್ತು ಬೆಳವಣಿಗೆ**

ಎರಡನೆಯ ಜಾಗತಿಕ ಯುದ್ಧದ ಬಳಿಕ ವಸ್ತು ಸಂಗ್ರಹಾಲಯ ಗಳ ಅಭಿವೃದ್ಧಿಯ ಚಳುವಳಿ ತ್ವರಿತಗೊಂಡಿತು. ಜೆವಿಲ್-ಎಮ್ ಮೊರ್ಲೆ ಹೇಳುವಂತೆ, "ಸಾಮಾನ್ಯವಾಗಿ ವಸ್ತು ಸಂಗ್ರಹಾಲಯಗಳ ವಿವಿಧ ರೀತಿಯ ಕಾರ್ಯ ಚಟುವಟಿಕೆಗಳ ಪುನಶ್ಚೇತನ ಹೊಸ ದೃಷ್ಟಿಕೋನವನ್ನು ತಂದುಕೊಟ್ಟಿತು. ಈ ಉದ್ದೇಶಿತ ಗುರಿಯನ್ನು ಸಾಧಿಸಲು ವಸ್ತು ಸಂಗ್ರಹಾಲಯದ ವಾಸ್ತು ಶಿಲ್ಪ ಮತ್ತು ಪ್ರದರ್ಶನ ವ್ಯವಸ್ಥೆಯಲ್ಲಿ ವಿನೂತನ ಬದಲಾವಣೆಗಳಾಗಿ ೧೭೯೬ರಲ್ಲಿ ಬಂಗಾಳದ ಏಷಿಯಾಟಿಕ್ ಸೊಸೈಟಿಯು ತನ್ನ ವಸ್ತು ಸಂಗ್ರಹಗಳನ್ನು ಜನತೆಯ ವೀಕ್ಷಣೆಗೆ ತೆರೆಯುವ ವಿಚಾರ ಮಾಡಿತು. ಭಾರತ ಸರ್ಕಾರದಲ್ಲಿ ಅಧಿಕಾರಿಗಳಾಗಿದ್ದ ಬ್ರಿಟೀಷರು ವಸ್ತು ಸಂಗ್ರಹಾಲ ಯದ ಉಪಯೋಗವನ್ನು ತಿಳಿದುಕೊಂಡಿದ್ದರು. ಅದಕ್ಕಾಗಿಯೇ ಭಾರತ ಪ್ರಾಚ್ಯವಸ್ತು ಸರ್ವೇಕ್ಷಣೆ ಇಲಾಖೆ ಹುಟ್ಟಿಕೊಂಡಿತು. ಆ ಅಧಿಕಾರಿಗಳು ನಡೆಸಿದ ಶೋಧನೆ, ಉತ್ಖನನ ಇತ್ಯಾದಿಗಳ ಫಲವಾಗಿ ಪ್ರಾಚ್ಯವಸ್ತು ಸಂಗ್ರಹಾಲಯದ ಬೆಳವಣಿಗೆಗೆ ಗಣನೀಯವಾದ ಬಲ ಬಂದಿತು. ಶೈಕ್ಷಣಿಕ ಕ್ಷೇತ್ರದಲ್ಲಿ ಇವುಗಳ ಮಹತ್ವವನ್ನು ಅರಿತುಕೊಂಡು ಎಲ್ಲಾ ರಾಷ್ಟ್ರದವರು ವಸ್ತು ಸಂಗ್ರಹಾಲಯಗಳನ್ನು ಕಟ್ಟಲು ಶ್ರಮಿಸಿದರು. ಇವು ಆಯಾ ರಾಷ್ಟ್ರದ ಚಾರಿತ್ರಿಕ, ಧಾರ್ಮಿಕ, ಸಾಮಾಜಿಕ ಆರ್ಥಿಕ, ಕಲಾತ್ಮಕ, ವೈಜ್ಞಾನಿಕ, ತಾಂತ್ರಿಕ, ಜೀವನ ಮತ್ತು ಸಾಧನೆಗಳನ್ನು ತೋರುವ ಹೆಜ್ಜೆ ಗುರುತುಗಳಾಗಿವೆ. ಅದರ ಫಲವಾಗಿ ದೇಶದ ಕಲ್ಕತ್ತಾ, ಮದ್ರಾಸ, ಹೈದ್ರಾಬಾದ್, ಪಾಂಡಿಚೇರಿ, ಒರಿಸ್ಸಾ, ಬೆಂಗಳೂರು, ಮೈಸೂರು, ಹಂಪಿ, ಶ್ರೀರಂಗಪಟ್ಟಣ, ಬಿಜಾಪೂರ, ಧಾರವಾಡ (ಕ.ವಿ.ವಿ.ದಲ್ಲಿ), ಪುಣೆ, ಮುಂಬಯಿ, ರಾಜಸ್ತಾನ, ಗುಜರಾತ, ಉತ್ತರ ಪ್ರದೇಶ, ದೆಹಲಿ ಮುಂತಾದ ಕಡೆ ಸಾವಿರಾರು ಮ್ಯೂಜಿಯಂಗಳು ಹುಟ್ಟಿಕೊಂಡವು.

೧೮೧೪ರಲ್ಲಿ ಕಲ್ಕತ್ತಾ ನಗರದಲ್ಲಿ ಬಂಗಾಳದ ಏಷಿಯಾಟಿಕ್ ಸೊಸೈಟಿಯ ಭಾರತೀಯ ವಸ್ತು ಸಂಗ್ರಹಾಲಯ ಸ್ಥಾಪನೆಯಾಯಿತು. ಇದಕ್ಕೆ ಡಾ।। ನಾಥೆನಿಯಲ್ ವಾಲಿಚ್ ಎಂಬಾತನು ವಸ್ತು ಸಂಗ್ರಹಾಲಯಾಧಿಕಾರಿಯಾದನು. ಇದನ್ನನು

ಸರಿಸಿ ೧೮೫೧ರಲ್ಲಿ ಮದ್ರಾಸದ ಸಾಹಿತ್ಯ ಸಂಘವು ಆರ್ಥಿಕ ಭೂಗೋಳಶಾಸ್ತ್ರದ ವಸ್ತು ಸಂಗ್ರಹಾಲಯ ಸರ್ಜನ್ ಎಡ್‌ವರ್ಡ್ ಗ್ರೀನ್‌ಬಾಲ್‌ಫೂರ್‌ನ ನೇತೃತ್ವದಲ್ಲಿ ಸ್ಥಾಪಿತವಾಯಿತು. ನಂತರ ಅದೇ ವೇಳೆಗೆ ವಿಕ್ಟೋರಿಯಾ ಮ್ಯೂಜಿಯಂ (ಈಗಿನ ಪಾಕಿಸ್ತಾನದ) ವಾಯುವ್ಯ ಕರಾಚಿಯಲ್ಲಿ ೧೮೫೭ರಲ್ಲಿ, ದಕ್ಷಿಣದ ತಿರುವನಂತ ಪುರದ ಮ್ಯೂಜಿಯಂ ೧೮೫೭ ರಲ್ಲಿಯೂ ಸ್ಥಾಪನೆಯಾಯಿತು. ಸ್ವಾತಂತ್ರ್ಯ ಸಂಗ್ರಾಮ ಕಾಲಕ್ಕೆ ಸ್ವಲ್ಪ ಈ ಬೆಳವಣಿಗೆ ಕುಂಠಿತವಾಗಿ ಮತ್ತೆ ೧೮೬೩ರಲ್ಲಿ ಲಕ್ನೊ, ನಾಗಪುರಗಳಲ್ಲಿ ಎರಡು ಸಂಗ್ರಹಾಲಯಗಳು, ೧೮೬೫ರಲ್ಲಿ ಬೆಂಗಳೂರಿನಲ್ಲಿಯೂ, ೧೮೬೭ರಲ್ಲಿ ಫೈಜಾಬಾದಿನಲ್ಲಿಯೂ ೧೮೬೮ರಲ್ಲಿ ದೆಹಲಿ ಯಲ್ಲಿಯೂ (ದೆಹಲಿ ಪೌರ ವಸ್ತುಸಂಗ್ರಹಾಲಯ); ೧೮೭೨ರಲ್ಲಿ ಕಲ್ಕತ್ತಾ ನಗರದಲ್ಲಿ (ಕಲ್ಕತ್ತಾ ಎಕನಾಮಿಕ್ ಮ್ಯೂಸಿಯಮ್); ೧೮೭೪ರಲ್ಲಿ ಮಥುರೆಯಲ್ಲಿಯೂ ೧೮೭೫ರಲ್ಲಿ ರಾಯಪುರ ದಲ್ಲಿಯೂ ಪ್ರಾಚ್ಯವಸ್ತು ಸಂಗ್ರಹಾಲಯಗಳು ರಚನೆಯಾದವು. ಲಾರ್ಡಲಿಟ್ಟನ್ ವೈಸರಾಯರಾಗಿದ್ದಾಗ ೧೮೭೮ರಲ್ಲಿ ಇಂಡಿಯನ್ ಟ್ರೆಸರ್ ಟ್ರೋವ್ ಕಾಯ್ದೆ ಜಾರಿಗೆ ಬಂದು ೧೯ನೆಯ ಶತಮಾನದ ಕೊನೆಯ ವೇಳೆಗೆ ಅನೇಕ ವಸ್ತು ಸಂಗ್ರಹಾಲಯಗಳು ಹುಟ್ಟಿಕೊಂಡವು. ತಿರುಚೂರು, ಉದಯಪುರ, ಭೂಪಾಲ, ಜಯಪುರಗಳಲ್ಲಿ ೧೮೮೭ರಲ್ಲಿಯೂ, ರಾಜಕೋಟೆಯಲ್ಲಿ ೧೮೮೮ರಲ್ಲಿಯೂ ಬರೋಡ ಮತ್ತು ವಿಜಯವಾಡಗಳಲ್ಲಿ, ೧೯೮೪ರಲ್ಲಿಯೂ ಭಾವನಗರ ಮತ್ತು ತಿರುಚನಾಪಳ್ಳಿಗಳಲ್ಲಿಯೂ ೧೮೯೩ರಲ್ಲಿಯೂ ವಸ್ತುಸಂಗ್ರಹಾಲಯಗಳ ಸ್ಥಾಪನೆಯಾಯಿತು.

೨೦ನೆಯ ಶತಮಾನದ ಪ್ರಾರಂಭದಿಂದ ಸುಧಾರಣೆಗಳ ಯುಗವೆನ್ನುವಂತೆ ಪುರಾತತ್ವ ಸಂಶೋಧನಾ ಇಲಾಖೆಯ ಆಪ್ತಮಿತ್ರ, ಸುಪ್ರಸಿದ್ಧ ವೈಸರಾಯ್ ಲಾರ್ಡ್ ಕರ್ಜನ್ ಪುರಾತನ ಸಾಂಸ್ಕೃತಿಕ ವಸ್ತುಗಳ ಸಂಶೋಧನೆ ಮಾಡಲು ಹಾಗೂ ಆಯಾ ನಿವೇಶನಗಳಲ್ಲಿ ಸ್ಥಳ ಸಂಗ್ರಹಾಲಯಗಳನ್ನು ತೆರೆಯಲು ಭಾರತದ ಪ್ರಾಚ್ಯವಸ್ತು ಸರ್ವೇಕ್ಷಣ ಸಂಸ್ಥೆಗೆ ಹೆಚ್ಚಿನ ನೆರವು ನೀಡಿ ಪುನಶ್ಚೇತನ ಗೊಳಿಸಿದನು. ಇದರಿಂದಾಗಿ ಸಾರಾನಾಥ, ಪಗನ್, ತಕ್ಷಶಿಲ, ನಲಂದ, ಮಹೆಂಜೋದಾರೋ ಮತ್ತು ಹರಪ್ಪ ಚಂಚಲಪುರ, ಜೋಧಪುರ, (೧೯೦೯); ಗ್ವಾಲಿಯರ್ ಮತ್ತು ಖಜುರಾಹೊ (೧೯೧೦), ಢಾಕಾ (೧೯೧೩) ಪ್ರಾಚ್ಯಸಂಗ್ರಹಾಲಯಗಳು ಸ್ಥಾಪಿತವಾದವು (ಅದರ ಪಟ್ಟಿಯನ್ನು ಮುಂದೆ ಕೊಟ್ಟಿದೆ). ೧೯೧೧ರಲ್ಲಿ ಮದ್ರಾಸದಲ್ಲಿ ಈ ಮ್ಯೂಜಿಯಂಗಳ ಸಮ್ಮೇಳನ ಜರುಗಿ ಭಾರತದ ೩೯ ಪ್ರಾಚ್ಯ ವಸ್ತು ಸಂಗ್ರಹಾಲಯಗಳ ಕೈಪಿಡಿ ಸಿದ್ಧವಾಯಿತು. ನಂತರ ಭಾರತದ ಸರ್ವೇಕ್ಷಣಾ ಸಂಸ್ಥೆಯ ಡೈರೆಕ್ಟರ್ ಜನರಲ್ ಆಗಿದ್ದ ಹೆಚ್. ಹಾರ್ಗೀವ್ಸ್ ಎಂಬುವರು ಭಾರತದ ವಸ್ತು ಸಂಗ್ರಹಾಲಯಗಳ ವರದಿಯನ್ನು ಸಿದ್ಧಪಡಿಸಿದರು. ಆಮೇಲಿ ೧೯೪೭ರಲ್ಲಿ ದೇಶದ ವಸ್ತು ಸಂಗ್ರಹಾಲಯಗಳೆಲ್ಲ ಭಾರತದ ಸರ್ವೇಕ್ಷಣಾ ಇಲಾಖೆಯ ಆಡಳಿತಕ್ಕೆ ಒಳಪಟ್ಟವು.

೧೯೪೭ ಆಗಸ್ಟ ೧೫ರ ಭಾರತ ಸ್ವಾತಂತ್ರ್ಯದ ಬಳಿಕ ನವದೆಹಲಿಯ ರಾಷ್ಟ್ರೀಯ ಮ್ಯೂಜಿಯಂ ೧೯೪೯ರಲ್ಲಿ ರಾಷ್ಟ್ರಪತಿ ಭವನದಲ್ಲಿ ತನ್ನ ಕಾರ್ಯ ಪ್ರಾರಂಭಗೊಳಿಸಿತು. ನಂತರ ಕಲ್ಕತ್ತದಲ್ಲಿ ಇಂಡಿಯನ್ ಮ್ಯೂಸಿಯಮ್, ಮತ್ತು ಹೈದ್ರಾಬಾದಿನಲ್ಲಿ ಸಾಲಾರ್ ಜಂಗ ಮ್ಯೂಜಿಯಂಗಳು ಅಸ್ತಿತ್ವಕ್ಕೆ ಬಂದವು. ಹೀಗೆ ಭಾರತದಲ್ಲಿ ೧೮೧೪ರಿಂದ (೧೯೦ವರ್ಷದಷ್ಟು ಹಿಂದೆ) ಪ್ರಾಚ್ಯವಸ್ತು ಸಂಗ್ರಹಾಲಯಗಳ ಸ್ಥಾಪನೆಯ ಬಗ್ಗೆ ಪ್ರಜ್ಞೆ ಹುಟ್ಟಿಕೊಂಡು, ಅವುಗಳ ಬೆಳವಣಿಗೆ ನಡೆದಿರುವುದನ್ನು ಕಾಣಬಹುದು. ಬ್ರಿಟೀಷರ ಆಡಳಿತದ ಕಾಲಕ್ಕೆ ಅವುಗಳ ರಕ್ಷಣೆ, ಬೆಳವಣಿಗೆಗಾಗಿ ಹೆಚ್ಚಿನ ಪ್ರೋತ್ಸಾಹ ಸಿಕ್ಕಿತು. ಆದರೂ ಪ್ರಾಚ್ಯವಸ್ತು ಸಂಗ್ರಹಾಲಯಗಳು ಯಾವ ಸ್ಪಷ್ಟವಾದ ಕಾರ್ಯಚಟುವಟಿಕೆಗಳಿಗೂ ಅವಕಾಶವಿಲ್ಲದ ಸಂಸ್ಥೆ ಗಳಾಗಿದ್ದವು. ಜನರು ಅವುಗಳನ್ನು ಅದ್ಭುತ ಗೃಹಗಳೆಂದು, ಸರ್ಕಾರಿ ಹಾಸ್ಯ ಪರೀಕ್ಷೆಯ ಮಳಿಗೆಗಳೆಂದೂ ಸಂದರ್ಶಿಸುತ್ತಿದ್ದರು. ಗತಕಾಲದ ಇತಿಹಾಸದ ತುಣುಕುಗಳ ವೈಭವವನ್ನು ಮಾತ್ರ ನಿರೂಪಿಸುತ್ತಿದ್ದವು. ಅವುಗಳ ಬಗೆಗಿನ ಕಟ್ಟು ಕಥೆಗಳನ್ನೇ ನಿಜವೆಂದು ತಿಳಿದ ಅವಿದ್ಯಾವಂತ ಜನರು ಪ್ರಾಕೃತಿಕ ಇತಿಹಾಸ ಸಂಗ್ರಹಣೆಯಲ್ಲಿ ಎಳ್ಳಷ್ಟೂ ಆಸಕ್ತಿ ವಹಿಸದಿರುವುದು ಕಂಡು ಬರುತ್ತದೆ.

ಇತ್ತೀಚಿನ ದಶಕಗಳಲ್ಲಿ ಅದು ತನ್ನ ಸ್ಥಿತಿಯನ್ನು ಬದಲಾಯಿಸಿ ಕೊಂಡು ಆಧುನಿಕ ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಜನತೆಗೆ ದೃಶ್ಯ ಶಿಕ್ಷಣ ನೀಡುವುದರತ್ತ ಹೆಚ್ಚು ಗಮನ ನೀಡಿದೆ. ಪ್ರಗತಿಪರರಾದ ವಿಚಾರಶೀಲ ಜನರು ದೇಶದಲ್ಲಿ ಪ್ರಾಚ್ಯವಸ್ತು ಸಂಶೋಧನೆಯಿಂದ ದೊರೆತ ಪ್ರಾಚ್ಯವಸ್ತುಗಳ ಉಪಯೋಗವನ್ನು ಪಡೆಯಲು ಮುಂದೆ ಬಂದಿದ್ದಾರೆ. ಈ ಎಲ್ಲಾ ಬದಲಾವಣೆಗಳಿಂದ ಭಾರತ ದೇಶದ ವಸ್ತು ಸಂಗ್ರಹಾಲಯಗಳ ಮುಂದಿರುವ ಬೃಹತ್ ಕಾರ್ಯವೆಂದರೆ ವಸ್ತು ಪ್ರದರ್ಶನದ ಮೂಲಕ ಪರಿಶೀಲನ ದೃಷ್ಟಿಯ ಸಂದರ್ಶಕರಿಗೆ ತಮ್ಮ ಪ್ರಾಚೀನತೆಯ, ಚಿತ್ರವನ್ನು ಮೂಡಿಸುವುದಾಗಿದೆ. ಅಂದರೆ ಖನಿಜ, ಶಿಲೆ, ಸಸ್ಯವರ್ಗ, ಪ್ರಾಣಿಜೀವನ ಮೊದಲಾದ ಬೇರೆ ಬೇರೆಯ ಪ್ರಾಚೀನ ಮತ್ತು ಅರ್ವಾಚೀನ ಕಲಾ ವಸ್ತುಗಳನ್ನು ವ್ಯವಸ್ಥಿತ ರೀತಿಯಲ್ಲಿ ಜನತೆಯ ಮುಂದಿಡುವುದೇ ಆಗಿದೆ. ಹೀಗೆ ಇಂದಿನ ಸಾಂಸ್ಕೃತಿಕ ಕ್ರಾಂತಿಯಲ್ಲಿ ವಸ್ತು ಸಂಗ್ರಹಾಲಯಗಳ ಪಾತ್ರ ಸಂವಹನ ಮಾಧ್ಯಮಗಳಲ್ಲಿ ಹಿರಿದಾಗಿದೆ ಎಂಬ ಅಭಿಪ್ರಾಯವನ್ನು ಜನರಲ್ಲಿ ಮೂಡಿಸಲು, ಪ್ರಾಚ್ಯವಸ್ತು ಸಂಗ್ರಹಾಲಯಗಳ ಮಹತ್ವವನ್ನು ವಿವಿಧ ರೀತಿಯಲ್ಲಿ ಎಲ್ಲರಿಗೂ ತಿಳಿಯಪಡಿಸಬೇಕಾಗಿದೆ. ಆ ಹಿನ್ನೆಲೆಯಲ್ಲಿ ಶಿಲಾಯುಗದ ನಾಗರಿಕತೆಯಿಂದ ಮೊದಲುಗೊಂಡು ಸಂವಹನ ನಡೆದು ಬಂದ ಬಗೆ ಹೇಗೆ ಎಂಬುದನ್ನು ಈ ಸಂದರ್ಭದಲ್ಲಿ ತಿಳಿಯುವುದು ಸೂಕ್ತವೆನಿಸುತ್ತದೆ.

## ಪ್ರಾಚೀನ ಭಾರತದಲ್ಲಿ ನಡೆದುಬಂದ ಸಂವಹನ ವಿಧಾನಗಳು

ನಮ್ಮ ದೇಶ ವಿವಿಧ ಧರ್ಮ, ಸಂಸ್ಕೃತಿ, ಭಾಷೆ ಉಪ ಭಾಷೆಗಳಿಗೆ ತೊಟ್ಟಿಲಾದಂತೆ ಸಮೃದ್ಧವಾದ ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲಕ್ಕೂ ಹೆಸರಾಗಿದೆ. ಈ ನೆಲವು ಪ್ರಾಚೀನತೆಗೂ, ಅದರ ಜೊತೆ ಬೆಳೆದು ನಿಂತ ನಾಗರಿಕತೆಗೂ, ಅದರಾಚೆಗೂ ಮೀರಿನಿಂದ ಆಧುನಿಕತೆಗೂ ಮೈದೆರೆದುಕೊಂಡಿದೆ.

ಭಾರತ ಹಲವು ನಾಗರಿಕತೆಗಳಿಗೆ ನೆಲೆಯಾದಂತೆ ಪ್ರಾಚೀನ ಸಂವಹನಕ್ಕೂ (ಕಿ.ಪೂ. ೩೫೦೦ ರಿಂದ ೨೦೦೦ರ ವರೆಗೆ) ಹೆಸರಾಗಿದೆ. ಶಿಲಾಯುಗದ ಸಂಸ್ಕೃತಿಯಲ್ಲಿ ಈಟಿ, ಬರ್ಜಿ, ಶಿಲಾಕೊಡಲಿ, ಕತ್ತಿ, ಸುತ್ತಿಗೆಯಂಥ ಭೌತಿಕ ವಸ್ತುಗಳು ನಾಗರಿಕತೆಯ ಸಂಕೇತಗಳಾಗಿದ್ದವು. ಭಾಷೆ ಬರದ ಮನುಷ್ಯ ಕಾಡು ಪ್ರಾಣಿಗಳಂಥ ಕೂಗಿ ಕರೆಯುವ ಮೂಲಕ ಸಂವಹನ ನಡೆಸುತ್ತಿದ್ದ. ಕ್ರಿ.ಪೂ. ೧೨,೦೦೦ - ೫೦೦೦ದವರೆಗಿನ ಮಧ್ಯಶಿಲಾಯುಗದಲ್ಲಿ ಶಿಲಾಯುಧಗಳು, ಸರಳ ವಿನ್ಯಾಸದ ಮಡಿಕೆಗಳು, ಬೆಣಚು ಕಲ್ಲಿನ ಆಯುಧಗಳು, ಕುದುರೆ, ಜಿಂಕೆ ನಾಯಿ, ನರಿ, ತೋಳ, ಬೆಕ್ಕು, ದನ, ಕುರಿಯ ಮೂಳೆಗಳಂತಹ ಅವಶೇಷಗಳು ಆಗಿನ ಸಂಸ್ಕೃತಿಯ ಪ್ರತೀಕಗಳಾಗಿ ಕಂಡು ಬರುತ್ತವೆ. ಕ್ರಿ. ಪೂ. ೫೦೦೦ದಿಂದ ೧೦೦೦ದ ವರೆಗಿನ ನೂತನ ಶಿಲಾಯುಗದ ಸಂಸ್ಕೃತಿಯಲ್ಲಿ ಪ್ರಗತಿ ಉಂಟಾಗಿ ಬೆಂಕಿ ಶೋಧ ಗೊಂಡು ವ್ಯವಸಾಯ, ಮಡಿಕೆ, ಸಂಸ್ಕೃತಿ, ಸಂಘಜೀವನ, ಗ್ರಾಮಜೀವನ, ಕಪ್ಪು ಕಲ್ಲಿನಿಂದ ಮಾಡಿದ ನುಣಪಾದ ನಯವಾದ ಶಿಲಾಯುಧಗಳು, ಪಶುಪಾಲನೆಯ ಸಾಧನ ಸಲಕರಣೆಗಳು, ಬಟ್ಟೆ ಬರೆಯೂ ಈ ಕಾಲದಲ್ಲಿ ಬಳಕೆಗೆ ಬಂದಿವೆ. ಇವೆಲ್ಲವುಗಳನ್ನು ಇಂದು ಸಾಮಾನ್ಯವಾಗಿ ಎಲ್ಲಾ ಪ್ರಾಚ್ಯ ವಸ್ತುಸಂಗ್ರಹಾಲಯಗಳಲ್ಲಿ ಇಟ್ಟಿರುವುದನ್ನು ಕಾಣುತ್ತೇವೆ.

ಜೊತೆಗೆ ನಂಬಿಕೆ, ಆಚರಣೆ, ಸಂಪ್ರದಾಯಗಳು ಚಾಲ್ತಿಗೆ ಬಂದು ನಂತರದ ಕಾಲಘಟ್ಟದಲ್ಲಿ ಭಾಷೆಯ ಸ್ವರೂಪ ಪಡೆದುಕೊಂಡಿರುವುದಾಗಿ ಮತ್ತು ಚಿತ್ರಲಿಪಿ ಮತ್ತಿತರ ಮುದ್ರೆಗಳು ಆ ಕಾಲದ ಸಂವಹನದ ವೈಶಿಷ್ಟ್ಯಗಳೆನಿಸಿವೆ. ಇದರಿಂದಾಗಿ ವೇದಗಳ ಕಾಲದ ಸಂಸ್ಕೃತಿ (ಕ್ರಿ. ಪೂ, ೨೦೦೦ದಿಂದ ೧೦೦೦ದ ವರೆಗೆ) ನಾಗರಿಕತೆ ತ್ವರಿತಗತಿಯಲ್ಲಿ ಬೆಳೆಯಲು ಕಾರಣವಾಯಿತು. ಈ ಆರ್ಯ ಸಂಸ್ಕೃತಿಯು ಜನರಲ್ಲಿ ವಿವಿಧ ಭಾಷೆಗಳನ್ನು ಬೆಳೆಯಲು ಕಾರಣವಾಯಿತು. ಆರ್ಯ ಸಂಸ್ಕೃತಿಯ ಜನರು ವಿವಿಧ ಭಾಷೆ ಗಳನ್ನು ಬಲ್ಲವರಾಗಿದ್ದರು. ಹೀಗಾಗಿ ವೇದೋಪನಿಷತ್ತುಗಳು, ಸಂಗೀತ ನೃತ್ಯ ನಾಟಕಗಳಂತಹ ಕಲೆಗಳು, ರಥ, ಕುದುರೆ ಓಟದ ಕ್ರೀಡೆಗಳು ದೇವ ದೇವತೆಗಳ ಆರಾಧನೆ, ಸುಸಂಸ್ಕೃತ ಸಾಮಾಜಿಕ ವ್ಯವಸ್ಥೆ, ಆಡಳಿತ, ಧಾರ್ಮಿಕ, ಆರ್ಥಿಕ ಶೈಕ್ಷಣಿಕ ವ್ಯವಸ್ಥೆ ಯಂತಹ ಸಂಘ, ಜೀವನ ಹಾಗೂ ಸಂವಹನ ಜೀವನ ನಡೆದು ಬಂದಿರುವುದು ಇತಿಹಾಸದಿಂದ ತಿಳಿಯುತ್ತೇವೆ. ಹೀಗೆ ನಾಗರಿಕತೆಯ ಚಿತ್ರ ಅನಾವರಣಗೊಳ್ಳುತ್ತಿದ್ದಂತೆಯೆ ಸಂವಹನದ ಪರಿಚಲನೆಗೆ ಕಾರಣವಾಯಿತು.

ಭಾರತೀಯ ಮಹಾಕಾವ್ಯಗಳು, ಪುರಾಣೈತಿಹ್ಯಗಳು, ನಾರದಮುನಿಯಂತಹ ಒಬ್ಬ ವ್ಯಕ್ತಿ ವರದಿಗಾರನಂತೆ ಮೂರು ಲೋಕಗಳ ಸುದ್ದಿಯನ್ನು ಪ್ರಸರಣ ಮಾಡುತ್ತಿದ್ದನೆಂದು ಪುರಾಣ ಗಳಂತಹ ಸಾಹಿತ್ಯಾಕರಗಳಿಂದ ತಿಳಿಯುತ್ತದೆ.

ಅದೇ ರೀತಿ ಮಹಾಭಾರತದ ಕಾವ್ಯದಲ್ಲಿ ಉಲ್ಲೇಖವಾದ ಕೃಷ್ಣಾರ್ಜುನರ ನಡುವೆ ನಡೆದ ಮಹಾಸಂವಾದವನ್ನು ಅಂಧ ದೊರೆ ಧೃತರಾಷ್ಟ್ರನಿಗೆ ವೀಕ್ಷಕ ವಿವರಣೆಯಂತೆ ವಿದುರ ಪ್ರತ್ಯಕ್ಷ ವರದಿ ಮಾಡುತ್ತಾನೆ. ವಿದ್ಯುನ್ಮಾನ ಸಾಧನಗಳ ಗ್ರಂಥಗಾಳಿಯೂ ಇರದಿದ್ದ ಈ ಕಾಲದಲ್ಲೇ ಪಂಜಿಯು ತನ್ನ ದೂರದರ್ಶಕತ್ವ ಹಾಗೂ ಧ್ವನಿಗ್ರಹಣ ಶಕ್ತಿಯಿಂದ ಎಲ್ಲೋ ರಣರಂಗದಲ್ಲಿ ನಡೆಯುವ ಘಟನಾವಳಿಗಳನ್ನು ಅರಮನೆಯಲ್ಲಿ ಕುಳಿತು ವರ್ಣಿಸುವುದು ಅಚ್ಚರಿ ಮೂಡಿಸುವಂತಹುದಾಗಿದೆ. ಅಂದರೆ ಈ ದೃಶ್ಯ- ಶ್ರವ್ಯ ಮಾಧ್ಯಮದ ಕಲ್ಪನೆಯ ಕುರುಪಗಳನ್ನು ಮಹಾಭಾರತದ ಕಾಲಕ್ಕೆ ಕಾಣುತ್ತೇವೆ.

ರಾಮಾಯಣ ಕಾವ್ಯದ ಉಲ್ಲೇಖದಂತೆ ಆಗಿನ ಸಾಮ್ರಾಜ್ಯ ದಲ್ಲಿ ಸಂಚರಿಸಿ ಸುದ್ದಿ ತರುವ ಭಟರನ್ನು ಅಶೋಕವನದಲ್ಲಿರುವ ಸೀತೆಯನ್ನು ಕಂಡು ಬಂದ ಹನುಮಂತ ರಾಮನಿಗೆ ವರದಿ ನೀಡುವುದು ಸಾರಿಗೆಯಂತೆ ಬಳಸಿದ ಗುಹನ ದೋಣಿ, ಪುಷ್ಪಕ ವಿಮಾನ, ಆಂಜನೇಯನ ಸಮುದ್ರೋಲ್ಲಂಘನ, ವಾನರಸೇನೆ ಲಂಕೆಯವರೆಗೆ ಸಮುದ್ರದ ಮೇಲೆ ನಿರ್ಮಿಸುವ ಸಂಪರ್ಕ ಸೇತುವೆ ಇವೆಲ್ಲ ಸಂವಹನದ ಹಲವು ಮಗ್ಗಲುಗಳನ್ನು ತಿಳಿಯಲು ಸಹಾಯ ಕಾರಿಯಾಗುತ್ತವೆ.

ಸಂಸ್ಕೃತದಲ್ಲಿರುವ ಪ್ರಾಚೀನ ಗ್ರಂಥಗಳಲ್ಲೂ ಮೋಡ, ತಂಗಾಳಿಯ ಮೂಲಕ ಹಂಸ, ಪಾರಿವಾಳದಂಥ ಪಕ್ಷಿಗಳ ಮೂಲಕ ಸಂದೇಶ ರವಾನೆ ಮಾಡಿದ ಬಗ್ಗೆ ಮತ್ತು ಮೇಘಸಂದೇಶ, ಹಂಸದಮಯಂತಿ ಕಥೆ ಮುಂತಾದವುಗಳ ಬಗ್ಗೆ ಸಾಹಿತ್ಯ ಕೃತಿಗಳಲ್ಲಿ ಪ್ರಸ್ತಾಪಿಸಿದ್ದು, ಅಂತಹ ಪ್ರಾಚೀನ ಗ್ರಂಥಗಳ ಸಂಗ್ರಹ ಇಂದಿನ ಮ್ಯೂಜಿಯಂಗಳಲ್ಲಿ ಸಂಗ್ರಹಿಸಿಟ್ಟಿರುವುದು ನಾವು ಕಾಣುತ್ತೇವೆ.

ಈ ವೇದ ಪುರಾಣಗಳ ಕಾಲ ದಾಟಿದ ಬಳಿಕ ಸಂವಹನವು ವಿವಿಧ ಮಾದರಿಗಳಲ್ಲಿ ಬೆಳೆದು ಬಂದಿರುವುದು ನಮ್ಮ ಗಮನಕ್ಕೆ ಬರುವುದು. ಪ್ರಜೆಗಳ ಸುಖವೆ ಅರಸನ ಸುಖ, ಪ್ರಜೆಗಳ ಹಿತವೇ ಅವನ ಹಿತ ಎಂಬ ಹಿನ್ನೆಲೆಯಲ್ಲಿ ಅರಸನು ಛದ್ಮವೇಷದಭಟರು, ಹಾಗು ಚಾರರನ್ನು ಮಾಹಿತಿ ಸಂಗ್ರಹಿಸುವ ಕಾರ್ಯಕ್ಕೆ ಬಳಸುತ್ತಿದ್ದ. ರಾಜ್ಯದ ರಕ್ಷಣೆಗಾಗಿ ನೇಮಿಸಿದ ನೌಕರರ ದಕ್ಷತೆಯನ್ನು ತಿಳಿಯಲು ಒಳಸಂಚು, ಶತ್ರುವೈಷಮ್ಯ ಇತ್ಯಾದಿಗಳನ್ನು ತಿಳಿಯಲು ಗೂಢಚಾರ ಪಡೆ ಇತ್ತು. ಲೋಕವಾರ್ತೆಯನ್ನು ರಾಜನೂ ರಾಜವಾರ್ತೆಯನ್ನು ಪ್ರಜೆಗಳು ತಿಳಿದುಕೊಳ್ಳುವುದು ಅವಶ್ಯಕವೆಂದು ನಮ್ಮ ಪೂರ್ವಜರು,

ಕಂಡುಕೊಂಡಿದ್ದರೆಂದು ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ಸಂವಹನ ಕಲೆಯ ಕಲ್ಪನೆಯನ್ನು ಮೂಡಿಸಿದ್ದಾನೆ.

ಗ್ರೀಕ್ ವಿದ್ವಾಂಸ ಸ್ಟ್ರ್ಯಾಬೋರು ಹೇಳುವಂತೆ ಮೌರ್ಯರ ರಾಜ "ಸಾಮ್ರಾಟ ಅಶೋಕನು" ಗೂಢಚಾರರ ಮೂಲಕ ಪಡೆಯುವ ಮಾಹಿತಿ ತೃಪ್ತಿಕರವಾಗಿಲ್ಲವೆಂದು ತಾನೆ ವೇಷ ಮರೆಸಿಕೊಂಡು ಮಾಹಿತಿ ಸಂಗ್ರಹಕ್ಕೆ ಹೋಗಿದ್ದನೆಂದು, ಮತ್ತು ತಾನು ಸ್ವೀಕರಿಸಿದ ಬೌದ್ಧ ಧರ್ಮ ಪ್ರಸರಣಕ್ಕಾಗಿ ಲಿಖಿತರೂಪದ ಸಂವಹನಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿದ್ದನೆಂದು ರಾಜ್ಯಾದ್ಯಂತ ಆತನು ಹಾಕಿಸಿದ ಶಿಲಾಶಾಸನ, ಶಿಲಾಲಿಪಿ, ಲಘುಲಿಪಿ, ಸ್ತಂಭಲಿಪಿ, ಲಘುಸ್ತಂಭಲಿಪಿ, ಗವಿಶಾಸನ, ಅರಮೇಯಿಕ ಮತ್ತು ಪಾಲಿ, ಪಾಕೃತ, ಗ್ರೀಕ ಭಾಷೆಯ ಶಾಸನಗಳನ್ನು- ಬರೆಯಿಸಿದ ನೆಂದು ಚರಿತ್ರೆ ತಿಳಿಸುತ್ತದೆ. ಅವುಗಳಲ್ಲಿಯ ಕೆಲವು ಶಾಸನಗಳು ಮಾಹಿತಿಗಳು ದೇಶದ ಅನೇಕ ಮ್ಯೂಜಿಯಂಗಳಲ್ಲಿ ಸಂಗ್ರಹಿಸಿರುವು ದನ್ನು ಕಾಣುತ್ತೇವೆ. ಅವೆಲ್ಲಾ ಇಂದಿಗೂ ಪ್ರಾಮಾಣಿಕ ಪುರಾವೆ ಗಳೆನಿಸಿವೆ. ಅವು ಆತನ ಧಾರ್ಮಿಕ ವಿಚಾರಗಳನ್ನಷ್ಟೆ ಹೇಳದೆ ಸಾಮಾಜಿಕ, ರಾಜಕೀಯ ಹಾಗೂ ನೀತಿ ಪ್ರಸರಣದ ಘನ ಉದ್ದೇಶಗಳನ್ನು ಒಳಗೊಂಡಿರುವುದನ್ನು ನೋಡಿದರೆ ಪ್ರಜೆಗಳ ಹಲವು ಬಗೆಯ ಮಾಹಿತಿ ವಿಚಾರ, ಜ್ಞಾನ ಪ್ರಸರಣೆಯ ದೃಷ್ಟಿಯಿಂದ ಲಿಖಿತರೂಪದಲ್ಲಿ ಸಂವಹನ ನಡೆಯುತ್ತಿದ್ದುದಲ್ಲದೆ ಸಂಚಾರ ಧರ್ಮಯಾತ್ರೆ, ಗಂಪು ಚರ್ಚೆಯ ಮೂಲಕ ಸಂವಹನ ನಡೆಯುತ್ತಿದ್ದ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿವೆ. ದೇವಸ್ಥಾನ, ಸ್ತೂಪ, ಚೈತ್ಯಾಲಯಗಳಲ್ಲಿ ಕಂಡು ಬಂದ ಚಿತ್ರಗಳು, ಕೆತ್ತನೆಗಳು, ಭಿತ್ತಿಯ ಮೇಲೆ ಸುಲಭವಾಗಿ ತೆಗೆಯಬಹುದಾದ ಶಾಯಿ, ಅಥವಾ ಬಣ್ಣದಿಂದ ಮಾಡಿದ ಚಿತ್ರರೂಪದ ಸಂದೇಶಗಳನ್ನು ಬರೆಸಲಾಗು ತ್ತಿತ್ತು. ಹರಪ್ಪಾ ಮೊಹೆಂಜೋದಾರೋ ಸಂಸ್ಕೃತಿಯನ್ನು ಬಿಟ್ಟರೆ ಮೌರ್ಯರ ಕಾಲದಲ್ಲಿ ದೊರೆತಿರುವ ವಾಸ್ತುಶಿಲ್ಪ ಹಾಗೂ ಶಿಲ್ಪಕಲಾ ಕೆತ್ತನೆಗಳೇ ಪ್ರಮುಖವಾಗಿವೆ. ಸಾರಾನಾಥ ಶಿಲಾಸ್ತಂಭದ ಮೇಲಿರುವ ಚಕ್ರ, ತ್ರಿಮುಖ ಸಿಂಹ ಚಿಹ್ನೆಗಳು, ಭಾರತದ ರಾಷ್ಟ್ರಧ್ವಜ ಹಾಗೂ ರಾಷ್ಟ್ರ ಲಾಂಛನದಲ್ಲಿ ಬಳಕೆಯಾಗಿರುವುದು ಅಶೋಕನ ಕಾಲದ ಶಿಲ್ಪ ಕಲಾವೈಶಿಷ್ಟ್ಯಕ್ಕೆ ಸಾಕ್ಷಿಯಾಗಿದೆ. ಅಶೋಕನು ಬೌದ್ಧಧರ್ಮದ ಪ್ರಚಾರಕ್ಕೆ ಸಿರಿಯಾ, ಈಜಿಪ್ಟ್, ಮೆಸಡೋನಿಯಾ ಸಿಲೋನಗಳಿಗೆ ಕಳಿಸಿದ್ದ ಚಾರಿತ್ರಿಕ ನಿದರ್ಶನ ಗಳಿವೆ.

ಹೀಗೆ ಮೌರ್ಯರ ಕಾಲಕ್ಕೆ ಹೆಚ್ಚು ಪ್ರಾಬಲ್ಯ ಪಡೆದ ಸಂವಹನ ಕಲೆಯ ಬಳಕೆ ಮಧ್ಯಕಾಲೀನ ಭಾರತದಲ್ಲಿ ಅದು ಮೊಘಲರ ಕಾಲಕ್ಕೆ ಇನ್ನಷ್ಟು ಮಾರ್ಪಾಡುಗಳಾಗಿ ಸುದ್ದಿ ಎನ್ನುವುದಕ್ಕೆ ಒಂದು ಚೌಕಟ್ಟು ಇದೆ ಎನ್ನುವುದು ಕಲ್ಪನೆಗೆ ಸಿಕ್ಕಿದ್ದು ೧೫೬೯ರಲ್ಲಿ ಸಲೀಮನ ಜನನವಾದಾಗ. ಅವನು ಹುಟ್ಟಿದ ವಾರ್ತೆಯನ್ನು ಆಗ್ರಾದಿಂದ ಅಲಹಾಬಾದಿನವರೆಗೆ ಸು. ೫೦೦ಕಿ. ಮೀಟರ ವ್ಯಾಪ್ತಿಗೆ ಆಗ ಕೇವಲ ೨ ಗಂಟೆ ೨೦ ನಿಮಿಷಗಳಲ್ಲಿ ಬಿತ್ತರಿಸಲಾಯಿತೆನ್ನಲಾಗಿದೆ. ಅದಕ್ಕೆ ಬಳಸಿದ ತಂತ್ರವಾಗಿ ಪ್ರತಿ ಒಂದು ಮೈಲಿ ಅಂತರದಲ್ಲಿ ಒಬ್ಬ ನಗಾರಿ ಬಾರಿಸುವುದಕ್ಕೆ ನೇಮಿಸಿ ಪ್ರಸಾರಮಾಡಿದರೆನ್ನಲಾಗಿದೆ.

ಪ್ರಜೆಗಳಿಂದ ದೂರು ಸ್ವೀಕರಿಸುವದು, ದರ್ಬಾರ್ ನಡೆಸಿ ಸಾರ್ವಜನಿಕರೊಂದಿಗೆ ವ್ಯವಹರಿಸುವುದು, ರಾಯಸ, ಓಲೆ-ಸುತ್ತೋಲೆಗಳನ್ನು ಬರೆಸುವುದು, ಗುಪ್ತವಾರ್ತೆ ರವಾನೆ ಯಂತಹ ಸುದ್ದಿಗಾರಿಕೆಯ ಮೊದಲ ಹೆಜ್ಜೆ ಇರಿಸಿದ್ದೇ ಮುಸ್ಲಿಂ ಅರಸರದ್ದಾಗಿದೆ. ಔರಂಗಜೇಬನ ಆಡಳಿತಾವಧಿಯಲ್ಲಿ ಓಟಗಾರರು, ದೂತರು, ಸಂದೇಶವಾಹಕರು, ರಾಹುತರು ಸುದ್ದಿ ಸಂದೇಶಗಳನ್ನು ಒಯ್ಯುತ್ತಿದ್ದರು. ಅಲ್ಲದೆ ಆಗ ಪಾರಿವಾಳದ ಮೂಲಕವೂ ಸಂದೇಶ ರವಾನಿಸುವುದು ಚಾಲ್ತಿಯಲ್ಲಿತ್ತು.

ನಾಗರಿಕತೆ ಬೆಳೆದು ಲಿಖಿತರೂಪದ ಸಂವಹನ ಪ್ರಾರಂಭ ವಾಗುವ ಮುನ್ನ ವೇದ ಮಂತ್ರಗಳನ್ನು ಮೌಖಿಕವಾಗಿಯೇ ಸಂವಹಿಸುತ್ತಿದ್ದ ಕಾಲದಲ್ಲಿ ಬೆಟ್ಟದ ತುದಿಯಲ್ಲಿ ನಿಂತು ಕೂಗುವ, ಕೂಗಿಹೇಳುವ ಮೂಲಕವೂ ಸಂವಹನ ನಡೆಯುತ್ತಿತ್ತು. ಬುದ್ಧ, ಮಹಾವೀರ, ಶಂಕರಾಚಾರ್ಯ, ಗುರುನಾನಕ, ರಾಮದಾಸ ಗಾಂಧಿ ವಿನೋಬಾರವರು ತಮ್ಮ ಉಪದೇಶ, ತತ್ವ ಪ್ರಸಾರದ ಸಲುವಾಗಿ ಪಾದಯಾತ್ರೆಯ ಮೂಲಕ ಸಂವಹನ ನಡೆಸುತ್ತಿದ್ದದ್ದೂ ಚರಿತ್ರೆಯ ಪುಟಗಳಲ್ಲಿ ನೋಡುತ್ತೇವೆ. ಕರ್ನಾಟಕದಲ್ಲಿ ಹಲ್ಮಿಡಿ ಶಾಸನ ಮೊದಲುಗೊಂಡು ಅನೇಕ ಶಾಸನಗಳು, ಮಾಸ್ತಿ ಹಾಗೂ ವೀರಕಲ್ಲುಗಳು, ನಾಣ್ಯಗಳು ದೇವಸ್ಥಾನಗಳ ಭಿತ್ತಿಚಿತ್ರಗಳು ತಾಳೆಯೋಲೆಗಳು ಲಿಖಿತ ಮಾಧ್ಯಮಗಳಾಗಿವೆ. ಬಸವಣ್ಣ, ಅಕ್ಕಮಹಾದೇವಿ ಮತ್ತಿತರ ಶರಣ ಶರಣೆಯರು, ಕನಕ, ಪುರಂದರದಾಸರಂತಹ ವಾಗ್ಗೇಯಕಾರರು, ಕೀರ್ತನಕಾರರು, ಹರಿಕಥಾ ವಿದ್ವಾಂಸರು, ಭಾಗವತರು ಸಮಾಜಕ್ಕೆ ಸಂದೇಶಗಳನ್ನು ಸಾರುತ್ತಿದ್ದರು. ಚರ್ಚಾಕೂಟಗಳು, ಸಂವಾದಗಳು, ನಡೆಯುತ್ತಿ ದ್ದುದಕ್ಕೆ ಬಸವಣ್ಣನವರ ಕಲ್ಪನೆಯ 'ಅನುಭವ ಮಂಟಪ' ಉಲ್ಲೇಖ ನೀಯವಾಗಿದೆ. ಜಾತ್ರೆ, ಉತ್ಸವ, ಸಂತೆ, ಹಬ್ಬ ಹರಿದಿನಗಳು, ಆಚರಣೆಗಳು, ಮದುವೆ ಮುಂಜಿ, ಸಾವು-ನೋವು ಇತ್ಯಾದಿ ಗುಂಪು ಸೇರುವ ಕಡೆಯಲ್ಲಿ ಅಂತರ್ ಸಂವಹನ, ಗುಂಪು ಸಂವಹನ, ಸಮೂಹ ಸಂಹವನಕ್ಕೆ ನಡೆಯುತ್ತಿತ್ತು. ಭಾರತದ ಶೇಕಡಾ ೭೦ರಷ್ಟು ಗ್ರಾಮೀಣ ಜನ ಸಮುದಾಯ ಜಾನಪದ ಕಲಾಮಾಧ್ಯಮಗಳ ಮೂಲಕ ಸಂವಹನ ಕಾರ್ಯಕ್ರಮ ನಿರಂತರವಾಗಿ ನಡೆಯುತ್ತಿತ್ತು. ಇಲ್ಲಿಯವರೆಗೆ ಚರ್ಚಿಸಲಾದ ವಿಷಯ ಮಾಧ್ಯಮಗಳ ಕುರಿತಾದ ಪ್ರಾಚ್ಯಾವಶೇಷಗಳು ದೇಶದ ಅನೇಕ ಪ್ರಾಚ್ಯವಸ್ತು ಸಂಗ್ರಹಾಲಯದದಲ್ಲಿ ಸಂಗ್ರಹಿಸಿರುವುದರಿಂದ ಮ್ಯೂಜಿಯಂಗಳು ಸಾಂಸ್ಕೃತಿಕ ಚರಿತ್ರೆಯಲ್ಲಿ ಮಾಧ್ಯಮವಾಗಿ ಕಾಣಿಸಿಕೊಳ್ಳುತ್ತವೆ ಎಂದು ಹೇಳಬಹುದು.

**ಸಂಹವನ ಮಾಧ್ಯಮಗಳಾಗಿ ಮ್ಯೂಜಿಯಂಗಳು ನಿರ್ವಹಿಸುವ ಕಾರ್ಯವಿಧಾನ**

ಹೀಗೆ ನಾವು ಐತಿಹಾಸಿಕ ಹಿನ್ನೆಲೆಯಲ್ಲಿ ನೋಡಿದಾಗ ಇಂದಿನ ಟಿ.ವ್ಹಿ. ರೇಡಿಯೋ, ಪತ್ರಿಕೆಯಂಥ ಮಾಧ್ಯಮಗಳು ದ್ವಿತೀಯ ಮೂಲಾಧಾರವಾಗಿ ಕಾರ್ಯ ನಿರ್ವಹಿಸಿದರೆ ಅದಕ್ಕೆ ಭಿನ್ನವಾಗಿ ಕಾರ್ಯನಿರ್ವಹಿಸುವ ಮ್ಯೂಜಿಯಂಗಳು ಪ್ರಾಥಮಿಕ ಮೂಲಾಧಾರಗಳಾಗಿ ಸಂವಹನ ಮಾಧ್ಯಮವಾಗಿಯೂ ಕೆಲಸ ನಿರ್ವಹಿಸಬಲ್ಲವೆಂಬ ವಿಚಾರವನ್ನು ಪ್ರಸ್ತುತ ಪಡಿಸುವುದು ನನ್ನ ಪ್ರಬಂಧದ ಮೂಲಧ್ಯೇಯವಾಗಿರುತ್ತದೆ.

ನಮ್ಮ ಸಾಂಸ್ಕೃತಿಕ ಅಧ್ಯಯನದ ಒಂದು ಮಗ್ಗಲು ಮ್ಯೂಜಿಯಂಗಳಾದರೆ ಮತ್ತೊಂದು ಮಗ್ಗಲು ಸಂವಹನ ಮಾಧ್ಯಮಗಳಾಗಿವೆ. ಮನುಷ್ಯನ ಜ್ಞಾನದ ಫಲವೇ ವಿಜ್ಞಾನ. ಅವನು ಅಭಿವ್ಯಕ್ತಿಸುವ ಮೊದಲ ಮಾಧ್ಯಮ ಭಾಷೆಯಾದರೆ, ಅದನ್ನು ಗುರಿ ಸೇರಿಸುವ ಎರಡನೇ ಮಾಧ್ಯಮ ಮಾತ್ರ ಆಧುನಿಕ ಸಂವಹನ ಸಾಧನಗಳಾಗಿವೆ. ಶಿಲಾಯುಗದ ನಾಗರಿಕತೆ ವಿವಿಧ ಮೆಟ್ಟಿಲುಗಳನ್ನು ದಾಟಿ ಬಂದಿರುವ ಮಾನವನ ಇತಿಹಾಸ ಅರಿತಾಗ ಅದಕ್ಕೆಲ್ಲ ಒಂದಲ್ಲ ಒಂದು ರೀತಿಯ ಸಂಪರ್ಕ ಸಾಧನಗಳು ಕಾರಣವೆಂಬುದು ತಿಳಿಯುತ್ತದೆ. ಆ ಪ್ರಾಚೀನ ಕಾಲದ ಪಾರಂಪರಿಕ ಸಂವಹನ ವಿಧಾನಗಳಿಂದ ಮೊದಲುಗೊಂಡು ಇವತ್ತಿನ ವೈಜ್ಞಾನಿಕ ಯುಗದಲ್ಲಿ ಕಂಪ್ಯೂಟರ್, ತಂತಿರಹಿತ ಸಂದೇಶ (ಮೊಬೈಲ್, ರೇಡಿಯೋ) ಮುಂತಾದವುಗಳು ವಿವಿಧ ತಂತ್ರಜ್ಞಾನದ ಫಲವಾಗಿ ಆಧುನಿಕ ಸಂವಹನ ಮಾಧ್ಯಮಗಳಾಗಿ ಮೂರ್ತಗೊಂಡಿವೆ. ಇದರಿಂದಾಗಿ ಪ್ರಾಚೀನ ಕಾಲಕ್ಕಿಂತ ಇಂದಿನ ಯುಗದಲ್ಲಿ ಸಂವಹನ ಮಾಧ್ಯಮಗಳ ಪರಿಣಾಮ ಮತ್ತು ಬಳಕೆ ವಿಪುಲವೂ ಹಾಗೂ ವೈವಿಧ್ಯಮಯವೂ ಆಗಿದೆ. ಅವುಗಳಿಲ್ಲದೆ ಮಾನವನ ದೈನಂದಿನ ಚಟುವಟಿಕೆಗಳು ನಡೆಯುವುದೇ ಕಷ್ಟಕರವಾಗಿದೆ. ಇಂದು ನಾವು ಕುಳಿತಲ್ಲೇ ವಿವಿಧ ಸಾಧನಗಳ ಸಹಾಯದಿಂದ ಜಗತ್ತಿನ ಮಾಹಿತಿಯನ್ನು ಪಡೆಯಬಹುದು ಮತ್ತು ಬಿತ್ತರಿಸಬಹುದಾಗಿದೆ. ಆದರೆ ಪ್ರಾಚೀನ ಯುಗದಲ್ಲಿ ಹೀಗಿರಲಿಲ್ಲ. ಅದಕ್ಕಾಗಿ ಶಿಲಾಯುಗದ ಮಾನವನು ಚಿತ್ರಗಳ ಮೂಲಕ ಧ್ವನಿಯ ಮೂಲಕ ಸಂದೇಶ ತಿಳಿಸುತ್ತಿದ್ದ. ನಂತರ ಭೂರ್ಜಪತ್ರ, ತಾಳೆಗರಿಗಳು, ಕಡತಗಳು, ಶಿಲಾಶಾಸನಗಳು, ವೀರಗಲ್ಲು, ಮಾಸ್ತಿಗಲ್ಲು, ತಾಮ್ರಪಟ ಶಾಸನಗಳು ಮುಂತಾದವುಗಳ ಸಹಾಯದಿಂದ ಅವುಗಳಲ್ಲಿ ಅಡಗಿರಬಹುದಾದ ರಾಜ-ಮಹಾರಾಜರ ವಿಷಯಗಳು ಅಂದಿನ ಜನರ ಜೀವನ ವಿಧಾನ, ಸಂಸ್ಕೃತಿ, ದಾನ, ಸನ್ಮಾನದ ವಿವರ, ಕಾವ್ಯ ವ್ಯಾಕರಣದ ಶಿಕ್ಷಣ, ಧರ್ಮ ಭಕ್ತಿ ಕಲೆಗಳ ಸಂಕೇತವಾಗಿರುವ ದೇವಾಲಯ, ಮಠ-ಮಸೀದಿಗಳು, ಹಳೆಕಾಲದ ನಾಣ್ಯಗಳು ನಾಗರಿಕತೆಯ ತೊಟ್ಟಿಲತ್ತ ಕರೆದೊಯ್ಯುವ ಅರಮನೆ-ಗುರುಮನೆ, ಕೋಟೆ-ಕೊತ್ತಲಗಳು, ಗಡಿಗೆ ಮಡಿಕೆ, ಇಟ್ಟಗಿ ಶಿಲಾಯುಧಗಳು ಮುಂತಾದವುಗಳು ಇಂದಿನ ಸಂಶೋಧಕ, ವಿದ್ವಾಂಸರಿಗೆ ಸಂವಹವನ ಮಾಧ್ಯಮಗಳಾದವು. ಇವೆಲ್ಲವುಗಳನ್ನು ಸಂಗ್ರಹಿಸಿಡುವ ಮೂಜಿಯಂಗಳನ್ನು ನಾವು ಕಡೆಗಣಿಸಿರುವ ಇಂದಿನ ಶ್ರವ್ಯ ಮಾಧ್ಯಮಗಳಾದ ಆಕಾಶವಾಣಿ, ಸಂಕೀರ್ಣ ಮಾಧ್ಯಮವೆನಿಸಿದ ವೃತ್ತಪತ್ರಿಕೆ, ದೃಶ್ಯ ಮಾಧ್ಯಮವಾದ ದೂರದರ್ಶನ ಇವೆಲ್ಲವುಗಳಿಂದ ಧ್ವನಿ, ಲಿಪಿ, ಭಾಷೆ, ಕ್ಯಾಮರಾಗಳ ಸಹಾಯದಿಂದ ಸುದ್ದಿಯನ್ನು ಬಿತ್ತರಿಲಾಗುತ್ತಿದೆ.

ಈ ಸಂವಹನ ಮಾಧ್ಯಮಗಳ ಕ್ರಿಯಾಚಟುವಟಿಕೆಗಳ ಬುನಾದಿ ಮೇಲೆ ಮ್ಯೂಜಿಯಂಗಳನ್ನು (ಮಿಡಿಯಾ) ಮಾಧ್ಯಮವೆಂದು ಗುರುತಿಸಲಾಗಿದೆ. ದೂರದರ್ಶನದಲ್ಲಿ ವಾರ್ತೆ, ನಾಟಕ, ಸಂಗೀತ, ಕ್ರೀಡೆ, ಜಾಹಿರಾತು ಇತ್ಯಾದಿ ಮನೋರಂಜನೆಯ ಕಾರ್ಯಕ್ರಮ, ಪ್ರಕಟಣೆಗಳನ್ನು ಅಪರೋಕ್ಷವಾಗಿ ನೋಡಿದರೆ, ರೇಡಿಯೋದಲ್ಲಿ ಬಿತ್ತರಿಸುವ ಎಲ್ಲಾ ಕಾರ್ಯ ಕ್ರಮಗಳನ್ನು ಕೇವಲ ಆಲಿಸಬಹುದಾಗಿದೆ. ದೈನಂದಿನ ಪತ್ರಿಕೆಗಳಲ್ಲಿ ದಿನನಿತ್ಯದ ವಿವಿಧ ರೀತಿಯ ಸುದ್ದಿ, ಸಾಪ್ತಾಹಿಕ, ಪಾಕ್ಷಿಕ, ಮಾಸಿಕ ಪತ್ರಿಕೆಗಳ ಮೂಲಕ ಅಲ್ಲಿಯ ಭಾಷೆಯ ವೈಶಿಷ್ಟ್ಯ ವೈಚಿತ್ರ್ಯಗಳು ಪತ್ರಿಕೆಯ ಲಿಖಿತ ಬರಹ ಮೂಲಕ ಕಾಣಬಹುದು. ಹೀಗೆ ನೂರಾರು ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಸಾಂಸ್ಕೃತಿಕ ವಿಚಾರಗಳ ಜ್ಞಾನವನ್ನು ಈ ಸಂವಹನ ಮಾಧ್ಯಮಗಳ ಮೂಲಕ ಪಡೆಯಬಹುದಾಗಿದೆ. ಈ ರೀತಿ ಎಲ್ಲಾ ಮಾಧ್ಯಮಗಳು ಮಾಡುವ ಕೆಲಸವನ್ನು ಮ್ಯೂಜಿಯಂಗಳು ಸಹ ಒಂದು ಮಾಧ್ಯಮವಾಗಿ (ಮಿಡಿಯಾವಾಗಿ) ವಿಭಿನ್ನವಾದ ರೀತಿಯಲ್ಲಿ ಕಾರ್ಯ ನಿರ್ವಹಿಸಬಲ್ಲವುವೆಂಬುದನ್ನು ಇಲ್ಲಿ ತಿಳಿಯಬಹುದಾಗಿದೆ. ಉದಾಹರಣೆಗಾಗಿ : ಒಂದು ಪ್ರಾಚ್ಯವಸ್ತು ಸಂಗ್ರಹಾಲಯಕ್ಕೆ ನಾವು ಭೇಟಿಕೊಟ್ಟಾಗ ಅಲ್ಲಿ ಕಾಣುವ ಕಲಾತ್ಮಕವಾದ ಮೂರ್ತಿಶಿಲ್ಪ, ವೀರಗಲ್ಲು, ಸತಿಗಲ್ಲು, ಶಾಸನಗಳು ಪೇಂಟಿಂಗ್ಸ್‌ಗಳು ಅವುಗಳ ಮೇಲಿರುವ ಚಿತ್ರಗಳು ಒಬ್ಬ ಅನಕ್ಷರಸ್ಥನಿಗೂ ವಿದ್ವಾಂಸರಿಗೂ ಗುರ್ತಿಸಿ ಅರಿಯಲು ಸಹಾಯವಾಗುತ್ತದೆ. ಇದನ್ನೇ ಪತ್ರಕರ್ತರು ನೋಡಿ ಬರೆದರೆ, ರೇಡಿಯೋದಲ್ಲಿ ಓದಿ ಹೇಳಿದರೆ ಟಿ.ವ್ಹಿ.ಯಲ್ಲಿ ವಿಡಿಯೋ ಮಾಡಿ ತೋರಿಸುತ್ತೇವೆ. ಹೀಗೆ ಅನೇಕ ರೀತಿಯಲ್ಲಿ ಮ್ಯೂಜಿಯಂಗಳು ಭಿನ್ನವಾಗಿ ಕೆಲಸ ಮಾಡುತ್ತವೆ ಎಂಬುದನ್ನು ವಿವಿಧ ಮೂಲಗಳಿಂದ ತಿಳಿಯುತ್ತೇವೆ.

**ಸಂವಹನದ ಅರ್ಥ ಮತ್ತು ವ್ಯಾಖ್ಯೆ**

ಇಲ್ಲಿ ಪ್ರಾಚ್ಯವಸ್ತು ಸಂಗ್ರಹಾಲಯಗಳ ಕುರಿತು ಅರಿಯುವಾಗ ಸಂವಹನದ ಅರ್ಥ ವ್ಯಾಖ್ಯೆಯನ್ನು ಕೂಡಾ ನಾವೂ ತಿಳಿಯಬೇಕಾಗುತ್ತದೆ. ಮಾನವನಲ್ಲಿ ಹೃದಯಸ್ಥವಾದ ಭಾವ-ಭಾವನೆಗಳನ್ನು ಇನ್ನೊಬ್ಬರಲ್ಲಿ ಹಂಚಿಕೊಳ್ಳಬೇಕೆಂಬ ಕುತೂಹಲ, ಹಂಬಲ, ಪ್ರತಿಯೊಬ್ಬರಿಗೂ ಇರುತ್ತದೆ. ಅದು ತಾನು ಮಾಡಿದ ಸಾಹಸವಿರಬಹುದು ಅಥವಾ ತನಗೊದಗಿದ ಆಪತ್ತಿರಬಹುದು. ಇಲ್ಲವೆ ನಿಧಿ ದೊರೆತಷ್ಟು ಸಂತಸವಿರಬಹುದು ಹಾಗೂ ಬದುಕೇ ಬೇಡವೆನ್ನುವಷ್ಟು

ನೋವು ಇರಬಹುದು; ತನ್ನ ಕಿವಿಗೆ ಬಿದ್ದು ಕುತೂಹಲ ಕೆರಳಿಸುವ ಮತ್ತಾವುದೋ ಘಟನೆಯಿರಬಹುದು. ಒಟ್ಟಿನಲ್ಲಿ ಹೇಳಬೇಕೆಂದರೆ ಆತನ ಹೃದಯದಲ್ಲಿ ಅರಳಿರುವ ಕಾತುರ, ಕೌತುಕ, ಕೆರಳುವ ಆಸೆ, ಆಸಕ್ತಿ, ಅಳಲು, ಅನಿಸಿಕೆ, ಇತ್ಯಾದಿಯನ್ನು ಹೇಳಿಕೊಂಡು ಮನಸು ಹಗುರ ಮಾಡಿಕೊಳ್ಳುವ ಪ್ರವೃತ್ತಿ ಸಹ ಅಷ್ಟೇ ವೇಗದಲ್ಲಿ ಇದೆಲ್ಲವನ್ನು ಕೇಳುವ, ಹೇಳುವ ಕೆಲಸವೇ ಒಂದು ವಿಚಾರದ ಸಂವಹನದ ಸರಳಮಾರ್ಗವೆನಿಸುತ್ತದೆ. ಈ ವಿಚಾರಗಳು ಒಬ್ಬರಿಂದ ಇನ್ನೊಬ್ಬರಿಗೆ ಹರಡುತ್ತಾ ಹೋಗುತ್ತವೆ. ಹೀಗೆ ಬಾಯಿಂದ ಬಾಯಿಗೆ ಹರಿದು ಬರುವ ಈ ಜಾನಪದ ಸಂಪ್ರದಾಯದಂಥ ಪ್ರಚಾರ ಕ್ರಿಯೆಯ ಮೂಲ ಸ್ವರೂಪವೇ 'ಸಂವಹನ'.

ಮಗು ಹುಟ್ಟಿದ ಕೂಡಲೇ ಅಳುವ ಸಂವಹನ ಕ್ರಿಯೆಯೇ ಮೊದಲ ಹೆಜ್ಜೆಯಾಗಿ ಕಾಣಿಸಿಕೊಂಡರೆ, ಮನುಷ್ಯ, ಮನುಷ್ಯ ನೊಡನೆ ಹೇಳಿಕೆ ಕೇಳಿಕೆಗಳು ಒಂದು ಸೇತುಬಿಂದುವಾಗಿವೆ. ಅದಕ್ಕೆ ಸಂಪರ್ಕ ಎಂಬ ಶಬ್ದ ಸೇರಿಕೊಂಡು ಏರ್ಪಡಿಸು, ಮಿಳಿತಗೊಳಿಸು, ಸ್ಪರ್ಶಿಸು ಎನ್ನುವ ಅರ್ಥಗಳಿವೆ. ಸಂಪರ್ಕ ಇಂದು ಪದಸೀಮಿತ ವಾದ ಅರ್ಥ ಹೊಂದಿರುವುದರಿಂದ ಈಗಿನ ಹೊಸ ತಾಂತ್ರಿಕ ಸಾಧನೆಗಳ ಫಲವಾಗಿ 'ಸಂವಹನ' ಎಂಬ ಕನ್ನಡ ಶಬ್ದ ಕಮ್ಯೂನಿ ಕೇಷನ್ (Communication) ಎಂಬ ಇಂಗ್ಲಿಷ್ ಪದಕ್ಕೆ ಸಂವಾದಿಯಾಗಿ ಬಳಕೆಯಾಗಿದೆ. ಕನ್ನಡ ಶಬ್ದಕೋಶದ ಪ್ರಕಾರ ವಾಹಕ, ವಾಹನ, ಎನ್ನುವ ಪದಗಳು "ಸಾಗಿಸುವ ಸಾಧನ" ಒಯ್ಯುವ ಸಾಧನ ಎಂಬ ಅರ್ಥಗಳನ್ನು ಹೊಂದಿವೆ. ವಾಹಿನಿ= ನದಿ=ಹರಿಯುವಂಥದ್ದು ಎನ್ನುವ ಅರ್ಥ ವ್ಯಾಪ್ತಿಯಲ್ಲಿ ಒಂದೆಡೆ ಯಿಂದ ಮತ್ತೊಂದೆಡೆಗೆ ಹರಿಯುತ್ತದೆ ಎಂಬ ಅರ್ಥದ ಹಿನ್ನೆಲೆಯಲ್ಲಿ 'ಸಂವಹನ' ಎಂಬ ಶಬ್ದವು 'ಸಂಪರ್ಕ' ಎಂಬ ಪದಕ್ಕಿಂತ ಹೆಚ್ಚು ವಿಸ್ತಾರವಾದ ಅರ್ಥ ನೀಡುತ್ತಿರುವುದರಿಂದ ಅದು ವ್ಯಾಪಕವಾಗಿ ಇಂದು ಬಳಕೆಯಲ್ಲಿದೆ.

ಕಿಟೆಲ್‌ರ ಕನ್ನಡ-ಇಂಗ್ಲಿಷ ನಿಘಂಟುವಿನ ಪ್ರಕಾರ, 'ಸಂವಹನ' ಎನ್ನುವುದು ವಿವಿಧ ಮಾಧ್ಯಮ ಸಂಕೇತಗಳ ಮೂಲಕ ಒಬ್ಬರಿಂದ ಇನ್ನೊಬ್ಬರಿಗೆ ವಿಷಯಗಳನ್ನು ತಿಳಿಯಪಡಿಸುವ ಕ್ರಿಯೆ ಎನಿಸಿಕೊಳ್ಳುತ್ತದೆ. ಅಂತಹ ಸಂಕೇತದ ಕುರುಹಗಳು, ಶಿಲಾಯುಗದ ನಾಗರೀಕತೆಯ ಚಿತ್ರಗಳು ಇಂದು ಗುಡ್ಡ ಗವಿಗಳಲ್ಲಿ ಕಾಣುತ್ತಿವೆ. ಅಂತಹ ಮಾನವನ ಪೇಂಟಿಗ್ಸ್‌ಗಳ ಛಾಯಾಚಿತ್ರಗಳು, ಶಿಲಾಯುಧಗಳು ಗಡಿಗೆ ಮಡಿಕೆ ಪಾತ್ರೆಯ ವಸ್ತುಗಳು ಮೂರ್ತಿ ಶಿಲ್ಪಗಳು, ವೀರಗಲ್ಲು, ಸತಿಗಲ್ಲು, ಸ್ಮಾರಕ, ನಿಷಿಧಿ, ಶಾಸನ ಕಲ್ಲುಗಳು, ತಾಮ್ರಪಟಶಾಸನಗಳು, ಕಡತಗಳು ನಾಣ್ಯಗಳು, ಪೇಂಟಿಂಗ್ಸ್‌ಗಳು, ತಾಡೋಲೆಗಳು ಮುಂತಾದ ಪ್ರಾಚ್ಯವಸ್ತುಗಳು ದೇಶದ ನಾನಾ ಮ್ಯೂಸಿಯಂಗಳಲ್ಲಿ ಸಂಗ್ರಹಿಸಿ ಇಡಲಾಗಿದೆ. ಅವುಗಳಲ್ಲಿ ಕಂಡು ಬರುವ ಕಲೆ, ಬಳಸಿರುವ ಲಿಪಿ, ಭಾಷೆ, ಚಿತ್ರ ಇತ್ಯಾದಿ ವಿವಿಧ ಸಾಂಸ್ಕೃತಿಕ ವಿಷಯಗಳ ಸಂವಹನ ಮಾಧ್ಯಮವಾಗಿ ಉಳಿದ ಮಾಧ್ಯಮಗಳಿಗಿಂತ (ಮೀಡಿಯಾವಾಗಿ) ಅವು ವಿಭಿನ್ನವಾಗಿ ಕೆಲಸ ಮಾಡುತ್ತಿವೆ.

ಇವೆಲ್ಲವುಗಳನ್ನು ಸಂವಹನ ಸಂಕೇತವಾಗಿ ಬಳಸದ ವಿನಹ ಸಂವಹನ ಸಾಧ್ಯವಿಲ್ಲ. ಇಲ್ಲಿ ಸಂಗ್ರಹಿಸಿದ ಎಲ್ಲ ಪ್ರಾಚ್ಯವಸ್ತುಗಳಲ್ಲಿ ಕೆಲವು ಆಂಗಿಕ, ಶ್ರವ್ಯ ಸಂಕೇತಗಳಾಗಿವೆ. ಹೀಗಾಗಿ ಈ ಸಂಕೇತಗಳು ಇಲ್ಲಿ ಅಭಿವ್ಯಕ್ತಿಯ ಮಾಧ್ಯಮಗಳೆನಿಸಿಕೊಳ್ಳುತ್ತಿವೆ. ಇದನ್ನೇ (Communication is the act of Transmitting information, Ideas and attitudes from one person to another) ಅಂದರೆ ರವಾನಿಸುವ ಕ್ರಿಯೆ ಸಂಕೇತಗಳ ಮೂಲಕ ನಡೆಸಬೇಕೆಂಬ ಒಳ ಅರ್ಥವಿರುವುದರಿಂದ ರವಾನಿಸುವ ಅಥವಾ ಒಬ್ಬರಿಂದ ಮತ್ತೊಬ್ಬರಿಗೆ ಸಾಗಿಸುವ ಸಂವಹನ ಕ್ರಿಯೆಯ ಸಂದರ್ಭದಲ್ಲಿ ಬಳಕೆಗೆ ಬರುವ ಸಂಕೇತ ಅಥವಾ ಅಭಿವ್ಯಕ್ತಗೊಳಿಸುವ ಕ್ರಮಗಳನ್ನು ನಾವು ಮ್ಯೂಜಿಯಂಗಳ ಅಧ್ಯಯನದಲ್ಲಿ ಚಿತ್ರಲಿಪಿ, (Pictographic writing), ಭಾವಲಿಪಿ (Ideographic writing), ಅಕ್ಷರಲಿಪಿ (Alphabetic writing)- ಹೀಗೆ ಮೂರು ಹಂತಗಳನ್ನು ಗುರ್ತಿಸಬಹುದು.

ಶಿಲಾಯುಗದ ಪ್ರಾಚೀನ ಮಾನವನು ಮೊದಲ ಹೆಜ್ಜೆಗಳನ್ನು ಇಡುತ್ತಿರುವಾಗಲೇ ತನಗನಿಸಿದ್ದನ್ನು ತನ್ನವರೊಂದಿಗೆ ಹಂಚಿಕೊಳ್ಳಲು ನೃತ್ಯದೃಷ್ಯ, ಬೇಟೆಯದೃಷ್ಯ, ಇತ್ಯಾದಿ ಹಾವಭಾವ ಭಂಗಿಗಳಂತಹ ಆಂಗಿಕ, ಹಾಗೂ ನಿರ್ದಿಷ್ಟ ಶಬ್ದಗಳನ್ನು ಮಾಡುತ್ತಿದ್ದ, ಚಿತ್ರಗಳನ್ನು ಗವಿಬಂಡೆಗಲ್ಲುಗಳ ಮೇಲೆ ಕೆತ್ತುತ್ತಿದ್ದ. ಆ ಶಬ್ದಗಳು ಮುಂದೆ ಮಾರ್ಪಾಡುಗಳಾಗಿ ಮಾತಿನ ರೂಪ ಪಡೆದು ಅನಂತರ ಅವುಗಳಿಗೊಂದು ಆಕಾರ ಕೊಡ ಬಯಸಿ ಗೆರೆ, ಚುಕ್ಕೆ, ಚಿಹ್ನೆ ಯಂತಹ ಆಕೃತಿ ಅವುಗಳೇ ಚಿತ್ರಲಿಪಿಯ ಉಗಮಕ್ಕೆ ಕಾರಣವಾಗಿ ಮಾನವನ ಪ್ರಗತಿಗೆ ನಾಂದಿಯಾಗಿರಲು ಸಾಕೆಂದು ತಿಳಿಯುತ್ತದೆ. ಅಂತಹ ದೃಶ್ಯಗಳನ್ನು ಛಾಯಾಚಿತ್ರಗಳಲ್ಲಿ ಸೆರೆಹಿಡಿದು ಮ್ಯೂಜಿಯಂಗಳಲ್ಲಿ ಸಂಗ್ರಹಿಸಿರುವುದನ್ನು ಕಾಣುತ್ತೇವೆ. ನಮ್ಮ ನಾಗರಿಕತೆಯ ವಿಕಾಸದೊಂದಿಗೆ ಬೆಳೆದ ಭಾಷೆ ಸಂವಹನಕ್ಕೆ ಪ್ರಧಾನವಾಗಿ ಮನುಷ್ಯ ತಾನು ಅಭಿವ್ಯಕ್ತಿಸಿಕೊಳ್ಳಲು, ತನ್ನ ಅನಿಸಿಕೆ ಸಂದೇಶಗಳನ್ನು ಮುಟ್ಟಿಸಲು ಒಂದು ಸಮುದಾಯದ ಆಗುಹೋಗು ಗಳನ್ನು ಇನ್ನೊಂದೆಡೆಗೆ ರವಾನಿಸಲು ಶಾಸನಗಳನ್ನು ಬರೆಯಿಸು ವುದು, ಗುಡಿಗುಂಡಾರಗಳನ್ನು ಕಟ್ಟಿಸುವುದು, ಮೂರ್ತಿಶಿಲ್ಪಗಳನ್ನು ಕೆತ್ತಿಸುವುದು, ವೀರಗಲ್ಲುಗಳನ್ನು ನಿಲ್ಲಿಸುವುದು ಇತ್ಯಾದಿಯನ್ನು ಮಾಡಿದ; ಅದರೊಂದಿಗೆ ಭಾಷೆ, ಲಿಪಿಗಳು, ನಮ್ಮ ಸಾಮಾಜಿಕ, ಸಾಂಸ್ಕೃತಿಕ ಚರಿತ್ರೆಯನ್ನು ಉಳಿಸಿಕೊಂಡು ಹೋಗಲು ಸಾರುವ ಸಂದೇಶಕ್ಕೆ ಸಂವಹನ ಕ್ರಿಯೆಯೆ ಮಾಧ್ಯಮವಾಗಿವೆ. ಆ ಕಾರಣ ಇಂದು ನಮ್ಮ ಪ್ರಾಚ್ಯವಸ್ತು ಸಂಗ್ರಹಾಲಯಗಳನ್ನು ರಕ್ಷಿಸಿ, ಉಳಿಸಿ ಬೆಳೆಸುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ. ಅಲ್ಲದೆ ಪ್ರಾಚೀನ ಮ್ಯೂಜಿಯಂಗಳನ್ನು ನೋಡುವುದರಿಂದ ನಮ್ಮ ಪೂರ್ವಜರ

## NUMBER OF TYPES OF MUSEUMS

| S.I No. | Type of Museums | No |
|---|---|---|
| 1. | Agriculture Museum | 5 |
| 2. | Air Force Museum | 1 |
| 3. | Anthropological Museum | 12 |
| 4. | Archaeological Museum | 164 |
| 5. | Archival Museum | 2 |
| 6. | Armoury Museum | 2 |
| 7. | Army Museum | 2 |
| 8. | Art and Crafts Museums | 99 |
| 9. | Botanical Museum | 17 |
| 10. | Children Museum | 7 |
| 11. | Doll Museum | 2 |
| 12. | Educational Museum | 36 |
| 13. | Ethnographic museum | 36 |
| 14. | Folk Art Museum | 2 |
| 15. | Forest Museum | 4 |
| 16. | Geological Museum | 6 |
| 17. | Library Museum | 2 |
| 18. | Maritime Museum | 1 |
| 19. | Medical Museum | 19 |
| 20. | Memorial Museum | 1 |
| 21. | Multi -Purpose Museum | 135 |
| 22. | Musical Museum | 1 |
| 23. | Natural History Museum | 13 |
| 24. | Navy Museum | 1 |
| 25. | Open Air Museum | 1 |
| 26. | Personalia Museum | 34 |
| 27. | Photo Gallery Museum | 1 |
| 28. | Police Museum | 2 |
| 29. | Postal Museum | 1 |
| 30. | Rail Museum | 1 |
| 31. | Religious Museum | 8 |
| 32. | Science Museum | 42 |
| 33. | Specialized Museum | 4 |
| 34. | Sports Museum | 1 |
| 35. | Telecome Museum | 1 |
| 36. | Textile Museum | 3 |
| 37. | Tribal Museum | 2 |
| 38. | Utensil Museum | 1 |
| 39. | Zoological Museum | 12 |

## NUMBER OF MUSEUMS IN STATES

| S.I No. | State | No |
|---|---|---|
| 1. | Andaman and Nicobar Islands | 2 |
| 2. | Andhra Pradesh | 37 |
| 3. | Arunachal Pradesh | 13 |
| 4. | Assam | 26 |
| 5. | Bihar | 26 |
| 6. | Chandigarh | 6 |
| 7. | Chhattisgarh | 2 |
| 8. | Delhi | 28 |
| 9. | Goa | 4 |
| 10. | Gujarat | 35 |
| 11. | Haryana | 4 |
| 12. | Himachal Pradesh | 8 |
| 13. | Jammu and Kashmir | 6 |
| 14. | Jharkhand | 6 |
| 15. | Karnataka | 38 |
| 16. | Kerala | 17 |
| 17. | Madhya Pradesh | 39 |
| 18. | Maharashtra | 37 |
| 19. | Manipur | 25 |
| 20. | Meghalaya | 4 |
| 21. | Mizoram | 1 |
| 22. | Nagaland | 1 |
| 23. | Orissa | 24 |
| 24. | Pondicherry | 2 |
| 25. | Punjab | 16 |
| 26. | Rajasthan | 31 |
| 27. | Sikkim | 1 |
| 28. | Tamilnadu | 57 |
| 29. | Tripura | 1 |
| 30. | Uttar Pradesh | 84 |
| 31. | Uttranchal | 19 |
| 32. | West Bengal | 59 |

ಸಂಸ್ಕೃತಿ, ಭಾಷೆ, ಲಿಪಿ, ನಡೆ-ನುಡಿ, ಆಚಾರ-ವಿಚಾರಗಳು, ಉಡಿಗೆ, ತೊಡಿಗೆ, ಆಭರಣ, ಆರ್ಥಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ ಇತ್ಯಾದಿ ಸಾಂಸ್ಕೃತಿಕ ವಿಷಯಗಳನ್ನು ತಿಳಿದುಕೊಳ್ಳಬಹುದು. ಸಂವಹನ ಕ್ರಿಯೆಯ ಉದ್ದೇಶವೇ ಒಂದು ವಿಚಾರವನ್ನು ಗ್ರಹಿಸುವ ಅರಿಯುವ ಅಗತ್ಯವಾಗಿ ಎದ್ದು ಕಾಣುತ್ತದೆ ಎಂದು ಬೆಲ್ಬನ್ : 'ಎ.ಫೇರವೆಲ್ ಟು ಅರಿಸ್ಟಾಟಲ್' ಲೇಖನದಲ್ಲಿ ಕಂಡು ಬರುತ್ತದೆ.

ಇಂತಹ ನೂರೆಂಟು ವಿಚಾರಗಳನ್ನು ಪ್ರಾಚ್ಯವಸ್ತು ಸಂಗ್ರಹಾಲಯಗಳಲ್ಲಿ ಸಂಗ್ರಹಿಸಲ್ಪಟ್ಟಿರುವ ಸಾಹಿತ್ಯ ಗ್ರಂಥಗಳು, ನಾಣ್ಯಗಳು, ಶಾಸನಗಳು, ಸ್ಮಾರಕ ನಿಷಿಧಿ ಕಲ್ಲುಗಳು, ಮುಂತಾದ ಪ್ರಾಚ್ಯಾವಶೇಷಗಳನ್ನು ಅಧ್ಯಯನಿಸುವುದರೊಂದಿಗೆ ಸಂವಹನ ಮಾಧ್ಯಮಕ್ರಿಯೆ ನಡೆದುಬಂದ ಚರಿತ್ರೆಯನ್ನು ಅರಿಯಲು ಸಾಧ್ಯವಾಗುತ್ತಿದೆ.

**ಉಪಸಂಹಾರ**

ಇಂದಿನ ತಂತ್ರಜ್ಞಾನದ ಆರ್ಭಟದಿಂದ ವಿವಿಧ ಮಾಧ್ಯಮಗಳು ಜನರನ್ನು ಸೆಳೆಯುವ ಪ್ರಬಲವಾದ ಸ್ಪರ್ಧೆಯಲ್ಲೂ ಮ್ಯೂಸಿಯಂಗಳು ತಮ್ಮ ಅಗಾಧವಾದ ಅಸ್ತಿತ್ವ ಹಾಗೂ ಮಹತ್ವವನ್ನು ಕಾಪಾಡಿಕೊಂಡು ಬಂದಿವೆ. ವೈವಿಧ್ಯಮಯ ವಸ್ತುಗಳನ್ನು, ಸಾಮಗ್ರಿಗಳನ್ನು ಬಳಸಿಕೊಂಡು ಪ್ರಚುರ ಮಾಡುತ್ತಿರುವ ಮ್ಯೂಸಿಯಂಗಳು ಭಾಷೆಗಳ ಬಂಧನ-ನಿರ್ಬಂಧ ಇಲ್ಲದೆ ವಾಸ್ತವಿಕ ಚಿತ್ರಣಗಳಿಂದ ಸಂವಹನಿಸುತ್ತಾ ಜನರಿಗೆ ಜ್ಞಾನ, ಶಿಕ್ಷಣ, ತಿಳುವಳಿಕೆ, ಮಾಹಿತಿ-ಮನರಂಜನೆಗಳನ್ನು ಒದಗಿಸುವುದರ ಮೂಲಕ ಮಕ್ಕಳನ್ನು, ಮಹಿಳೆಯರನ್ನು ನಿರಕ್ಷರಸ್ಥರನ್ನು ಹಾಗೂ ಸುಸಂಸ್ಕೃತರನ್ನು ತನ್ನತ್ತ ವಿಪುಲವಾಗಿ ಸೆಳೆಯುವಲ್ಲಿ ಯಶಸ್ವಿಯಾಗಿವೆಯೆಂದೇ ತಿರ್ಮಾನಿಸಬಹುದಾಗಿದೆ. ಅದರಲ್ಲಿಯೂ ನಗರ ಪ್ರದೇಶಗಳಲ್ಲಿ ಹಾಗೂ ಪ್ರವಾಸಿ ಸ್ಥಳಗಳಲ್ಲಿ ಮ್ಯೂಸಿಯಂಗಳು ಹೆಚ್ಚಾಗಿರುವುದರಿಂದ ನಾಗರಿಕರ ದೈನಂದಿನ ಜೀವನದ ಪರಿಕರಗಳಲ್ಲಿ ಮ್ಯೂಸಿಯಂಗಳ ವೀಕ್ಷಣೆಯೂ ಒಂದಾಗಿ ಪರಿಣಮಿಸಿದ್ದು ಗಮನಾರ್ಹವಾದ ಅಂಶವಾಗಿದೆ.

ಒಬ್ಬ ಮುಗ್ಧನಿಗೆ, ನಿರಕ್ಷರಿಗೆ ತಿಳವಳಿಕೆ ನೀಡಿ, ಸಂಸ್ಕೃತಿ ಮತ್ತು ಜೀವನಶೈಲಿಯ ಬಗ್ಗೆ ಕಲ್ಪನೆ ಕೊಟ್ಟು ಮಾಹಿತಿಯಿಂದ ಸಂವಹನಿಸುವ ಮಹತ್ವದ ಕಾರ್ಯ ಮ್ಯೂಸಿಯಂಗಳಿಂದಾಗುತ್ತದೆ. ಹೀಗಾಗಿ ಸಾಮಾಜಿಕ, ಸಾಂಸ್ಕೃತಿಕ ಮತ್ತು ಸಾಂಘಿಕವಾದ ಕಾರ್ಯಗಳು ಬಹುಪಾಲು ಮೂಸಿಯಂಗಳಿಂದ ಆಗುತ್ತದೆ. ಆದ್ದರಿಂದ ಮ್ಯೂಸಿಯಂಗಳೂ ಸಹ ಪರಿಣಾಮಕಾರಿಯಾದ ಮಾಧ್ಯಮಗಳ ಸಾಲಿನಲ್ಲಿ ಸೇರಲ್ಪಡುತ್ತವೆ. ಎಂಬುದರಲ್ಲಿ ಸಂದೇಹವೇ ಇಲ್ಲ. ಒಂದು ರಾಷ್ಟ್ರದ ಸಂಸ್ಕೃತಿ, ನೈತಿಕತೆಯನ್ನು ರಕ್ಷಿಸುವಲ್ಲಿ, ದೇಶಾಭಿಮಾನ ಭಕ್ತಿ- ಗೌರವಗಳು ಹೆಚ್ಚಿಸುವಲ್ಲಿ ಮ್ಯೂಸಿಯಂಗಳ ಪಾತ್ರ ಮಹತ್ವದ್ದಾಗಿದೆ. ಜೊತೆಗೆ ಮ್ಯೂಸಿಯಂಗಳಿಂದ ಸಾಕಷ್ಟು ಪ್ರಮಾಣದಲ್ಲಿ ಆದಾಯ ಉತ್ಪನ್ನಗಳನ್ನು ಹಾಗೂ ಉದ್ಯೋಗಗಳ ಸೌಲಭ್ಯಗಳನ್ನು ಕಾಣಬಹುದಾಗಿದೆ.

ಒಟ್ಟಿನಲ್ಲಿ ರಾಜಕೀಯ, ಸಾಮಾಜಿಕ, ಭೌಗೋಳಿಕ, ಆರ್ಥಿಕ-ವಾಣಿಜ್ಯ ಐತಿಹಾಸಿಕ, ಧಾರ್ಮಿಕ ಶೈಕ್ಷಣಿಕ, ವೈಜ್ಞಾನಿಕ-ತಾಂತ್ರಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯಕವಾಗಿ ಮ್ಯೂಸಿಯಂಗಳ ಕಾರ್ಯ ಶ್ಲಾಘನೀಯವಾಗಿದೆ.

ಈ ಹಿಂದೆ ಕೇವಲ ಇತಿಹಾಸಕ್ಕೆ ಸಂಬಂಧಿಸಿದ ವಿಷಯಗಳನ್ನು ನೀಡುತ್ತಿದ್ದ ಮ್ಯೂಸಿಯಂಗಳು ಇಂದು ಎಲ್ಲಾ ವಿಷಯಗಳ ಬಗ್ಗೆ, ಕ್ಷೇತ್ರಗಳ ಬಗ್ಗೆ ಮಾಹಿತಿಯನ್ನು ನೀಡುತ್ತಿವೆ. ಜನಪರ ಕಾಳಜಿ, ಸಾಮಾಜಿಕ ಅಭಿವೃದ್ಧಿ, ಸಾಕ್ಷರತೆಯಂತಹ ಉದ್ದೇಶಗಳು ಮ್ಯೂಸಿಯಂಗಳಿಂದ ನೆರವೇರಲ್ಪಡುತ್ತಿವೆ. ಆದರೂ ಈ ಮಾಧ್ಯಮವನ್ನು ನಿರ್ಲಕ್ಷಿಸಲಾಗಿದೆ. ಗಂಭೀರವಾದ ಚಿಂತನೆ, ಯೋಜನೆಗಳು ಮ್ಯೂಸಿಯಂಗಳ ಬಗ್ಗೆ ಆಗಿಲ್ಲವೆಂದೇ ಹೇಳಬೇಕಾಗಿದೆ. ಅವುಗಳ ರಕ್ಷಣೆ, ಬಳಕೆ, ಮತ್ತು ಸದುಪಯೋಗಗಳ ಬಗ್ಗೆ ಇನ್ನಷ್ಟು ಹೆಚ್ಚಿನ ಗಮನ ಕೊಡಬೇಕಾದದ್ದು ಅತ್ಯವಶ್ಯವಿದೆ. ಉಳಿದ ಮಾಧ್ಯಮಗಳಿಗಿಂತ ಭಿನ್ನವಾದ ಮ್ಯೂಸಿಯಂಗಳತ್ತ ಸರ್ಕಾರಗಳು ಹೆಚ್ಚು ಕಾಳಜಿ ವಹಿಸಿ, ಮಾಹಿತಿ ಪ್ರಸಾರದಂತಹ ಕಾರ್ಯಗಳಿಗೆ ಚಾಲನೆ, ನೀಡಬೇಕಾಗಿದೆ.





*

ಪ್ರಾಚ್ಯವಸ್ತು: ಪಳೆಯುಳಿಕೆಯ ಗತಸ್ಪಂದನ ಘಟಕವಲ್ಲ
ದೃಶ್ಯ ಶಿಕ್ಷಣದಲ್ಲಿ ಮೈತುಂಬ ಸಂವಹನಕ್ಕೆ ತೆರೆದಿಟ್ಟ ಗತಿಬಿಂಬ
ಚಲನೆಗೆ ತಳಪಾಯಕಟ್ಟುವ ಸ್ಥಿತಿಬಿಂಬ,
ಸಂಸ್ಕೃತಿಯ ದೃಶ್ಯಮಾಧ್ಯಮವಾಗಿ ಅರಿವಿಗೊಂದು ಸ್ಥಾಯಿಸ್ತಂಭ



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಎಂ. ಎಲ್. ನಿಗಮ (ಮೂಲ); (ಅನುವಾದ : ಬಿ.ಎಸ್. ಸಣ್ಣಯ್ಯ) **ವಸ್ತು ಸಂಗ್ರಹಾಲಯ ಶಾಸ್ತ್ರದ ಮೂಲತತ್ವಗಳು**, ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನದ ಸಂಸ್ಥೆ.

೨. ವ.ನಂ. ಶಿವರಾಮು., **ಜಾನಪದ ವಸ್ತು ಸಂಗ್ರಹಾಲಯಗಳು**, ಕನ್ನಡ ವಿಶ್ವವಿದ್ಯಾಲಯದ ಪ್ರಸರಾಂಗ, ಹಂಪಿ.

೩. ಎ.ವಿ. ನರಸಿಂಹಮೂರ್ತಿ., ೨೦೦೩, **ಕರ್ನಾಟಕ ನಾಣ್ಯ ಪರಂಪರೆ**, ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜಪೇಟೆ, ಬೆಂಗಳೂರು.

೪. ಡಾ. ಚನ್ನಬಸಪ್ಪ ಎಸ್. ಪಾಟೀಲ., ೧೯೯೯. **ಕರ್ನಾಟಕ ಕೋಟೆಗಳು**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಡಾ. ವಿಶಾಲಾಕ್ಷಿ ಅಕ್ಕಿ., '**ಸಂವಹನ ಮಾಧ್ಯಮವಾಗಿ ಬೀದಿ ನಾಟಕ ಗ್ರಾಮೀಣರ ಮೇಲೆ ಪರಿಣಾಮ**, ೨೦೦೧-೨೦೦೨ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ಪತ್ರಿಕೋದ್ಯಮ ವಿಭಾಗಕ್ಕೆ ಸಲ್ಲಿಸಿದ ಪ್ರೌಢ ಪ್ರಬಂಧ.

೬. ವಿಲ್ಬರ್ ಸ್ಕ್ಯಾಮ್., ೧೯೭೬, **ಡೈಮೆನ್‌ಷನ್ ಆಫ್ ಕಮ್ಯೂನಿಕೇಶನ್**, ಲೂಸಿಯಾನ ಯುನಿವರ್ಸಿಟಿ.

೭. ಡಾ. ಎಚ್. ಸರ್ಕಾರ, ೧೯೮೧, **ಮ್ಯೂಜಿಯಮ್ಸ್ ಆ್ಯಂಡ್ ಪ್ರೊಟೆಕ್ಷನ್ ಆಫ್ ಮಾನೋಮೆಂಟ್ಸ ಆ್ಯಂಡ್ ಆ್ಯಂಟಿಕ್ವಿಟೀಸ್ ಇನ್ ಇಂಡಿಯಾ**, ಸಂದೀಪ ಪ್ರಕಾಶನ್, ನವದೆಹಲಿ.

೮. ಡಾ. ಎಸ್. ಎನ್. ಶಿವರುದ್ರಸ್ವಾಮಿ., **ಭಾರತದ ಇತಿಹಾಸ**, ಪು ೫೫, ಮೈಸೂರು ೨೦೦೦

೯. ಡಾ. ಕೆನ್ನೆತ್ ಹಡಸನ್., ೧೯೭೫ 'ಎ ಸೋಷಿಯಲ್ ಹಿಸ್ಟರಿ ಆಫ್ ಮ್ಯೂಜಿಯಮ್ಸ್, ಮ್ಯಾಕಮಿಲ್ಲನ ಪ್ರೆಸ್ಸ್(ಲಿ) ದುಬ್ಲಿನ್ ಮೆಲಬೋರ್ನ್ ಜೋನ್ಸಬರ್ಗ್, ಮದ್ರಾಸ.

೧೦. ಡಾ. ಡಿ.ವಿ. ಪರಮಶಿವಮೂರ್ತಿ., ೧೯೯೯, **ಕನ್ನಡ ಶಾಸನ ಶಿಲ್ಪ** ಕ.ವಿವಿ. ಹಂಪಿ

೧೧. ಡಾ. ಬಸವರಾಜ ಕಲ್ಗುಡಿ., ೧೯೮೫ **ಮಹಾಸತಿ ಆಚರಣೆ ಒಂದು ಅಧ್ಯಯನ** ಬೆಂಗಳೂರು ವಿ.ವಿ.

೧೨. ಶೇಷಶಾಸ್ತ್ರೀ ಆರ್., ೧೯೮೨, **ಕರ್ನಾಟಕ ವೀರಗಲ್ಲುಗಳು**, ಕ.ಸಾ.ಪ. ಬೆಂಗಳೂರು

೧೩. ಡಾ. ಚೆನ್ನಕ್ಕ ಪಾವಟೆ., ೧೯೯೯, **ಕರ್ನಾಟಕ ಶಾಸನಗಳಲ್ಲಿ ಸ್ತ್ರೀ ಸಮಾಜ** ಕ.ವಿ.ವಿ. ಧಾರವಾಡ

೧೪. ಉಷಾ ಅಗರವಾಲ್., ೨೦೦೩, **ಡೈರೆಕ್ಟರಿ ಆಫ್ ಮ್ಯೂಜಿಯಮ್ಸ್ ಇನ್ ಇಂಡಿಯಾ** ಸಂದೀಪ ಪ್ರಕಾಶನ ದೆಹಲಿ.


೧೫. ಪತ್ರಿಕೋದ್ಯಮದ ಸಂಶೋಧನಾ ವಿದ್ಯಾರ್ಥಿ ಮಿತ್ರ ಶ್ರೀ ಸತೀಶ ಕೆ. ಇಟಗಿ ಇವರು ನನ್ನ ಪ್ರಬಂಧ ರಚನೆಯಲ್ಲಿ ಮುಖ್ಯವಾಗಿ ಸಂವಹನ ಮಾಧ್ಯಮದ ಬಗ್ಗೆ ಮಾಹಿತಿ ನೀಡಿ ಸಹಾಯ ಮಾಡಿರುತ್ತಾರೆ.

೧೬. ಡಾ. ಎಸ್. ಕೆ. ಜೋಷಿ ರವರು, ಡಾ. ಎಚ್. ಆರ್. ರಘನಾಥ ಭಟ್ ಅವರು ಸಹ ಸಹಾಯ ಮಾಡಿದ್ದರಿಂದ ಅವರನ್ನು ಸಹ ಇಲ್ಲಿ ಸ್ಮರಿಸುವೆ.

೧೭. ಮೈಸೂರು, ಬೆಂಗಳೂರು, ಧಾರವಾಡ, ಶಿವಮೊಗ್ಗಾ, ಕೆಳದಿ, ಗುಲ್ಬರ್ಗಾ ಮುಂತಾದ ಕಡೆ ಇರುವ ಪ್ರಾಚ್ಯವಸ್ತು ಸಂಗ್ರಹಾಲಯಗಳ ಅಧಿಕಾರಿಗಳನ್ನು ಸಂದರ್ಶಿಸಿ (ಅಭಿಪ್ರಾಯ ತಿಳಿದು) ಈ ಪ್ರಬಂಧ ಸಿದ್ಧಪಡಿಸಲಾಗಿದೆ.



ಡಾ. ಚನ್ನಕ್ಕ ಪಾವಟೆ *

# ಶಿಲ್ಪಗಳಲ್ಲಿ ಜೈನ ಯಕ್ಷಿಯರು

*ಕರ್ನಾಟಕದ ವಾಸ್ತು-ಶಿಲ್ಪಗಳ ಪೈಕಿ ಕಲಾತ್ಮಕ ಆವರಣ ನಿರಾಡಂಬರ, ನಿರಾಭರಣ ನಿರ್ವಿಕಾರ ಜೈನ ತೀರ್ಥಂಕರ ಪ್ರತಿಮೆಗಳ ಧ್ಯಾನವದನ ಗಾಂಭೀರ್ಯವನ್ನು, ತನ್ಮಯತೆಯಿಂದ ಕಂಡರಿಸುವಲ್ಲಿ ಆ ಶಿಲ್ಪಿಗಳಲ್ಲಿ ಭಕ್ತಿಯು ಅಭಿವ್ಯಕ್ತಿಸಿದ ಕೇವಲ ಜ್ಞಾನದ ಪ್ರಸನ್ನತೆಯ ಬಗೆ ಅವರ ಬದುಕಿನ ಸಾರ್ಥಕ್ಯ ಕೃತಿಯಾಗಿದೆ. ಈ ನಿಟ್ಟಿನಲ್ಲಿ ಜೈನಯಕ್ಷಿಯರ ಶಿಲ್ಪಗಳು ಜನಪ್ರಿಯ ಹಾಗು ದೈವೀ ಭಾವದ ಪ್ರೇರಣೆಯ ಉಜ್ವಲ ಪ್ರತಿಮಾಕಲ್ಪಗಳಾಗಿವೆ. ಇವುಗಳ ಪರಂಪರೆ ಉಳಿದರೆ ಐತಿಹಾಸಿಕ. ಇದು ನಮ್ಮೆಲ್ಲರ ಹೊಣೆ. ಕನ್ನಡ ನಾಡಿನ ಅತ್ಯಂತ ಜನಪ್ರಿಯ ಯಕ್ಷಿಣಿಯರಲ್ಲಿ ಪದ್ಮಾವತಿ ಅಗ್ರಗಣ್ಯೆ. ಕನ್ನಡ ನಾಡಿನಲ್ಲಿ ಪದ್ಮಾವತಿ ಲಬ್ಧವರ ಪ್ರಸಾದರೆಂದು ಕರೆಸಿಕೊಂಡವರು ಹೆಚ್ಚು ಜನ.*

ಆಧುನಿಕ ಭಾರತೀಯ ಸಾಂಸ್ಕೃತಿಕ ಇತಿಹಾಸವು ವಾಸ್ತು ಮತ್ತು ಶಿಲ್ಪಗಳಿಗೆ ಸಂಬಂಧಿಸಿದ ಸಾಂಸ್ಕೃತಿಕ ಅಧ್ಯಯನದ ಪ್ರಾಮುಖ್ಯ ನೆಲೆಗಳನ್ನು ಹೊಂದಿದೆ. ಅಕ್ಷರ ಸಂಸ್ಕೃತಿಯನ್ನು ಅರ್ಥೈಸದ ಕಲಾರಾಧನೆಗೆ ಬೆಂಬಲವಿತ್ತ, ಧರ್ಮದ ಹೆಚ್ಚಳದ ಸಂದರ್ಭಗಳಲ್ಲಿ ಶಿಲ್ಪಕಲೆ, ಚಿತ್ರಕಲೆ ಹೆಚ್ಚಿನ ಆದ್ಯತೆ ಪಡೆಯುತ್ತವೆ. ಶಿಲ್ಪಗಳ ಮೂಲಕ ಚೆಲ್ಲುವರಿದ ಸಾಂಸ್ಕೃತಿಕ ಮಾಹಿತಿಯನ್ನು ಅದು ಶಾಸ್ತ್ರದ ಮುಖಾಂತರ ಪಡೆದಿರುವ ಚಾರಿತ್ರಿಕ ನೆಲೆಗಳನ್ನು ನಾವು ಗುರುತಿಸುವ ಅಗತ್ಯ ನಮ್ಮ ಜನಾಂಗದ ಆದ್ಯ ಕರ್ತವ್ಯವಾಗಿದೆ. ಶಿಲ್ಪಗಳು ಮಾನವ ಸಮುದಾಯದ ಮಾನವ ಸಂಸ್ಕೃತಿಯ ವಿನೂತನ ಸಂಕೇತಗಳು. ಧರ್ಮ ಧರ್ಮಗಳನ್ನು ಅನ್ವಯಿಸಿ ದೊರಕುವಂತಹ ವೈಭವಪೂರ್ಣ ವಿನ್ಯಾಸಪೂರ್ಣ ಶಿಲ್ಪಗಳ ಸಂರಕ್ಷಣೆ; ಮುಂದಿನ ಜನಾಂಗಕ್ಕೆ ನಮ್ಮ ಸಂಸ್ಕೃತಿಯ ಪಳೆಯುಳಿಕೆಗಳನ್ನು ಉಳಿಸಿ ಕೊಟ್ಟು ಹೋಗುವ ಜವಾಬ್ದಾರಿ ಇಂದು ನಮ್ಮ ತಲೆಯಮೇಲಿದೆ.

ಕರ್ನಾಟಕ ವಾಸ್ತು-ಶಿಲ್ಪಕ್ಕೆ ಹೆಸರಾದುದು. ಇಲ್ಲಿಯ ಕಲಾತ್ಮಕ ಆವರಣ ನಿರಾಡಂಬರ, ನಿರಾಭರಣ, ನಿರ್ವಿಕಾರ, ಜೈನ ತೀರ್ಥಂಕರ ಪ್ರತಿಮೆಗಳ ಮುಖದಲ್ಲಿ ತೋರಿಬರುವ ಗಾಢವಾದ ಧ್ಯಾನ ಮುಖಕಮಲದ ಗಾಂಭೀರ್ಯತೆಯನ್ನು ವ್ಯಕ್ತಪಡಿಸುವಲ್ಲಿ ಯಶಸ್ಸು ಕಂಡ ಕನ್ನಡನಾಡಿನ ಶಿಲ್ಪಿಗಳು ತಾವು ಕಂಡರಿಸಿದ ಪ್ರತಿಮೆಗಳಲ್ಲಿ ಧ್ಯಾನದಿಂದ ಪಡೆದ ಕೇವಲಜ್ಞಾನದ ಪ್ರಸನ್ನತೆಯನ್ನು ಅಭಿವ್ಯಕ್ತಿಗೊಳಿಸುವಲ್ಲಿ ಸಂಪೂರ್ಣ ಸಫಲತೆ ಹೊಂದಿರುತ್ತಾರೆ. ಯಕ್ಷ-ಯಕ್ಷಿಣಿಯರ ಶಿಲ್ಪಗಳಲ್ಲಿ, ದ್ವಾರಪಾಲಕ ಬಿಂಬಗಳಲ್ಲಿ, ಪ್ರಾಣಿ ಪಕ್ಷಿ ಅಷ್ಟಮಂಗಲ ಶಿಲ್ಪಗಳಲ್ಲಿ ಪ್ರಾದೇಶಿಕ ಮಟ್ಟದಲ್ಲಿ ಕಂಡು ಬರುವ ಮೂರ್ತಿಶಿಲ್ಪದಲ್ಲಿ ತಮ್ಮ ಕಲಾಪರಿಣತಿ, ಸಮಕಾಲೀನ ಶಿಲ್ಪಪ್ರಜ್ಞೆ, ನಯವಿನ್ಯಾಸ ಮತ್ತು ಶಿಲ್ಪಕಲಾ ಪ್ರಬುದ್ಧತೆಯನ್ನು ಮೆರೆದಿರುವರು.

### ಭಾವಪ್ರಚೋದಕ ಶಿಲ್ಪ

ಕನ್ನಡನಾಡಿನ ಸುಂದರವಾದ ಭಾವಪ್ರಚೋದಕ ಪ್ರಮಾಣಬದ್ಧ, ವಿನ್ಯಾಸಪೂರ್ಣ ಶಿಲ್ಪಕಲಾ ಪ್ರತಿಮೆಗಳು ಇಂದು ವಿಕೃತಿ ಮನದವರ ಕೈಚಳಕದಿಂದ ವಿಕೃತಿಗೊಂಡು ಅನಾಥ ಸ್ಥಿತಿಯಲ್ಲಿ ಅವಸಾನದತ್ತ, ಅಡಿಯಿಡುತ್ತ ಸಾಗಿವೆ. ಇಂಥ ಸುಂದರವಾದ ವಿಗ್ರಹ, ಗುಡಿಗುಂಡಾರಗಳಲ್ಲಿರುವ ಮೂರ್ತಿಶಿಲ್ಪ, ಪ್ರತಿಮೆಗಳನ್ನು, ನಮ್ಮ ಜಾತೀಯ ಕನ್ನಡಕದೊಳಗಿಂದ ನೋಡದೆ 'ಐತಿಹಾಸಿಕ ಪರಂಪರೆ ಉಳಿಸಿ' ಘೋಷಣೆಯಂತೆ ವಿಶಾಲದೃಷ್ಟಿಕೋನದಿಂದ ಅವಲೋಕಿಸುವ ಪ್ರಯತ್ನ ನಮ್ಮದಾಗಬೇಕು. ನಮ್ಮ ಪೂರ್ವಿಕರ ಉನ್ನತಿ ಸಂಸ್ಕೃತಿ, ಸಂಸ್ಕಾರಕ್ಕೆ ಮೂಲಭೂತ ಪ್ರೇರಕಶಕ್ತಿಗಳಾಗಿದ್ದ

* ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಇವುಗಳನ್ನು ಇಂದಿನವರೆಗೆ ಉಳಿಸಿಕೊಂಡು ಬಂದು ಮುಂದಿನ ಪೀಳಿಗೆಗಳಿಗೆ ಪರಿಚಯಿಸುವ ಉತ್ತರದಾಯಿತ್ವ ಇಂದು ನಮ್ಮೆಲ್ಲರ ತಲೆಮೇಲಿದೆ. ಇದನ್ನು ಎಚ್ಚರದಪ್ಪದಂತೆ ಸಂರಕ್ಷಿಸಿ, ಮುಂದಿನ ಭಾವಿಜನಾಂಗ ನಮ್ಮನ್ನು ತೆಗಳದಂತೆ ವ್ಯವಸ್ಥಿವಾಗಿ ಅವರಿಗೆ ತಲುಪಿಸಿಹೋಗಬೇಕಿದ್ದು ಇಂದಿನ ಜನಾಂಗದ ಪ್ರಮುಖ ಕರ್ತವ್ಯವಾಗಿದೆ.

ಜೈನ ತಪಸ್ವಿ ಶಲಾಕಾ ಪುರುಷರಲ್ಲಿ ೨೪ಜನ ತೀರ್ಥಂಕರರು ಪ್ರಮುಖರು. ಪ್ರತಿ ತೀರ್ಥಂಕರರಿಗೂ ಒಬ್ಬೊಬ್ಬ ಯಕ್ಷ ಯಕ್ಷಿಣಿಯರಿರುತ್ತಾರೆ. ಜೈನಧರ್ಮ ಪ್ರಾರಂಭದೆಸೆಯಲ್ಲಿ ವಿಗ್ರಹಾರಾಧನೆಗೆ ಬೆಲೆ ಕೊಟ್ಟಿರಲಿಲ್ಲ. ಈಗ ಅದೇ ವಿಶೇಷವಾಗಿದೆ.

ಜಿನಬಿಂಬಗಳನ್ನು ಪೂಜಿಸುವ ಪದ್ಧತಿ ಪ್ರಾರಂಭವಾದ ಮೇಲೆ ಯಕ್ಷ-ಯಕ್ಷಿಣಿಯರನ್ನು ಜಿನಮೂರ್ತಿಗಳ ಎಡಬಲಗಳಲ್ಲಿ ಸೇರಿಸಿ ಪೂಜಿಸುವ ಪರಿಪಾಠ ಬಳಕೆಗೆ ಬಂದಿದೆ. ಜೈನಧರ್ಮ ನಿರೀಶ್ವರಪಂಥ. ಆಸ್ತಿಕ ಪಂಥದ ದೇವರುಗಳ ಅವತಾರ, ದೈವಾನುಗ್ರಹ, ಧೋರಣೆಯನ್ನು ವಿರೋಧಿಸಲೆಂದೇ ಹುಟ್ಟಿಕೊಂಡಿದ್ದರೂ ಕ್ರಮೇಣ ಹಿಂದೂ ಸಂಪ್ರದಾಯಿಕ ಪೂಜೆ ಸ್ವಭಾವದ ಪರಿಣಾಮವಾಗಿ ಜೈನಧರ್ಮದಲ್ಲಿ ತೀರ್ಥಂಕರರ ವಿಗ್ರಹಗಳನ್ನು ಪೂಜಿಸುವ ಪ್ರತಿಷ್ಠೆ ಪ್ರಾರಂಭವಾಯಿತು. ಪ್ರತಿಯೊಬ್ಬ ತೀರ್ಥಂಕರರಿಗೂ ಒಬ್ಬೊಬ್ಬ ಯಕ್ಷ-ಯಕ್ಷಿಣಿಯರಿದ್ದು ೨೪ಜನ ತೀರ್ಥಂಕರರಿಗೆ ೪೮ಜನ ಯಕ್ಷ-ಯಕ್ಷಿಣಿಯರು ಸೇರ್ಪಡೆಯಾದರು. ಹೀಗಾಗಿ ಯಕ್ಷ-ಯಕ್ಷಿಣಿಯರ ಪರಂಪರೆ ಅನೂಚಾನವಾಗಿ ಕರ್ನಾಟಕದಲ್ಲಿ ಬೆಳೆದು ಬಂದಿದೆ.

**ರಾಜವಂಶಗಳಲ್ಲಿ ಯಕ್ಷಿಣಿಯರು**

ಕರ್ನಾಟಕದ ರಾಜವಂಶಗಳಲ್ಲಿ ಯಕ್ಷಿಣಿಯರು ಆರಾಧ್ಯರಾಗಿದ್ದು ಪದ್ಮಾವತಿ, ಕೂಷ್ಮಾಂಡಿನಿ, ಘಟಾಂತಕಿ, ಜ್ವಾಲಾಮಾಲಿನಿ, ಚಾಮುಂಡಾ ಮೊದಲಾದ ಯಕ್ಷಿಯರ ವರಪ್ರಸಾದದಿಂದ ತಮ್ಮ ವಂಶಗಳು ಕುಡಿಯಿಟ್ಟು ಪಲ್ಲವಿಸಿವೆ ಎಂದು ಅವರನ್ನು ಪೂಜಿಸುವವರ ದೃಢನಂಬಿಕೆ. ಯಾವುದೇ ಧರ್ಮಗಳು ನಿಂತಿರುವದು ಇಂದು ನಂಬಿಕೆಯ ಆಧಾರದ ಮೇಲೆ. ಕರ್ನಾಟಕದಲ್ಲಿ ಬಾಳಿಬದುಕಿದ ಚಕ್ರವರ್ತಿಗಳಲ್ಲದೆ, ಸಾಮಂತ ಮಹಾಮಂಡಲೇಶ್ವರ ಪಾಳೇಯಗಾರ, ದೇಸಾಯಿ ಮನೆತನಗಳು ಈ ಯಕ್ಷದೇವತೆಗಳನ್ನು ಗೌರವಿಸಿವೆ. ಅವರ ಕೃಪಾಕಟಾಕ್ಷವನ್ನು ಅಂಗಲಾಚಿ ಬೇಡಿಕೊಂಡಿವೆ.

'ಕಲಬುರ್ಗಿಯ ಜೈನವಿಗ್ರಹ'ಗಳು : ಸುಂದರವಾದ ನಯನ ಮನೋಹರ ಜೈನಮೂರ್ತಿಶಿಲ್ಪಗಳ ಅಪರೂಪದ ಹೊತ್ತಿಗೆ. ಇಂಥ ಅಮೂಲ್ಯ ವಿನ್ಯಾಸಪೂರ್ಣ ಶಿಲ್ಪಗಳನ್ನು ಸಂಗ್ರಹಿಸಿ ಪ್ರಕಟಿಸಿದ ಶ್ರೀ ಡಿ.ಎನ್. ಅಕ್ಕಿಯವರು ಅಭಿನಂದನಾರ್ಹರು. ಅದರಲ್ಲಿಯ ೯ ಜೈನಯಕ್ಷಿಯರ ವಿಗ್ರಹಗಳು ನನ್ನನ್ನು ಅಧ್ಯಯನದ ಆಳ ಅಗಲವನ್ನು ವಿವೇಕ್ಷಿಸಲು ಬೇಡಿದವು. ಅದರಲ್ಲಿ ೩ ಸರಸ್ವತಿ ವಿಗ್ರಹಗಳು, ೩ಕೂಷ್ಮಾಂಡಿನಿ ೩ ಪದ್ಮಾವತಿ ಯಕ್ಷಿಣಿಯರಿಗೆ ಸಂಬಂಧಿಸಿದವು. ಕಲಬುರ್ಗಿ ಜಿಲ್ಲೆಯ ಜೇವರ್ಗಿ, ಆಳಂದ, ಹುಣಸೀಹಡಗಲಿ, ಇಂಗಳಗಿ, ಸೇಡಂ ಹರಸೂರು ಬೀದರ ಹುಮನಾಬಾದಗಳಲ್ಲಿ ಈ ವಿಗ್ರಹಗಳು ಇಂದಿಗೂ ಪೂಜೆಗೊಳ್ಳುತ್ತಿವೆ.

ಯಕ್ಷಿಣಿಯರು ಮನುಷ್ಯಾತೀತವಾದ ಶಕ್ತಿಯನ್ನು ಪಡೆದವರು, ಅಘಟಿತ ಘಟನೆಗಳಿಗೆ ಕಾರಣರು, ಇಚ್ಛಾನುರೂಪ ಧಾರಣ ಸಾಮರ್ಥ್ಯ ಪಡೆದ ಯಕ್ಷರು ವೃಕ್ಷದೇವತೆ, ವನದೇವತೆ, ಯುದ್ಧದೇವತೆ, ಶಾಸನದೇವತೆಯರಾಗಿ ವಿಭಿನ್ನ ದೇವಸ್ಥಾನ ಬಸದಿಗಳಲ್ಲಿ ಆರಾಧನೆಗೊಳ್ಳುವ ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಚಿತ್ರಿತರಾಗಿರುವವರನ್ನು ಕಾಣುತ್ತೇವೆ.

**ಸರಸ್ವತಿ ವಿಗ್ರಹಗಳು**

'ಪರಮ ಜಿನೇಂದ್ರ ವಾಣಿಯೆ ಸರಸ್ವತಿ' ಎಂಬುದು ಕವಿ ಪಂಪನ ಹೇಳಿಕೆ ಸರಸ್ವತಿಗೆ ವಿದ್ಯೆ ಹಾಗೂ ಜ್ಞಾನಕ್ಕೆ ದೇವಿಸ್ವರೂಪ ಕಲ್ಪಿಸಿದವರು ಪ್ರಾಚೀನ ಜೈನರು. ಅಂತೆಯೆ ವಿದ್ಯಾಧಿ ದೇವತೆ, ಸರಸ್ವತಿ ಇಂದು ಜೈನೇತರರ ಆರಾಧ್ಯದೇವತೆಯಾಗಿ ಪೂಜೆಗೊಳ್ಳುತ್ತಿರುವಳು. ಕ್ರಿ.ಶ ೨ನೆಯ ಶತಮಾನದ ಕುಶಾನರ ಕಾಲದ ಜೈನ ಚೈತ್ಯದ ಹತ್ತಿರ ದೊರೆತ ಸರಸ್ವತಿವಿಗ್ರಹ ತುಂಬ ಪ್ರಾಚೀನವಾದುದು. ಸರಸ್ವತಿಯನ್ನು ವಿದ್ಯಾಧಿದೇವತೆ ಭಾರತಿ, ವಾಣಿ, ಶ್ರುತಿದೇವಿ ಎಂಬ ಉಲ್ಲೇಖ ತಿಲೋಯ ಪಣ್ಣತ್ತಿಯಲ್ಲಿ ದೊರಕುತ್ತಿದೆ ಎಂಬುದು ವಿದ್ವಾಂಸರ ಹೇಳಿಕೆ. ಇದೇ ರೀತಿ ಬಿಕಾನೇರ ಎಂಬಲ್ಲಿಯ, ಇನ್ನೂ ಕೆಲ ಸ್ಥಳಗಳಲ್ಲಿರುವ ಸರಸ್ವತಿ ವಿಗ್ರಹಗಳು ದೊರಕಿವೆ.

ಕಲಬುರ್ಗಿಯ ಮೂರು ಸರಸ್ವತಿ ವಿಗ್ರಹಗಳು ವಿನ್ಯಾಸ ಪೂರ್ಣವಾಗಿವೆ. ಸರಸ್ವತಿ ವಿಗ್ರಹಗಳ ಕೈಗಳಲ್ಲಿ ಅಭಯಮುದ್ರೆ, ಜ್ಞಾನಮುದ್ರೆ; ಅಕ್ಷರಮಾಲೆ ಬದಿಯಲ್ಲಿಯ ಇಬ್ಬರು ಸೇವಕರು, ಸುಂದರವಾದ ಭಂಗಿಯಲ್ಲಿದ್ದಾರೆ. ಪೀಠದಡಿಯಲ್ಲಿ ಇರುವ ಬ್ರಾಹ್ಮಿ ಶಾಸನವು 'ಜೈನಸರಸ್ವತಿ' ಎಂದು ಪರಿಚಯಿಸಿದೆ. ಈಕೆಯನ್ನು ಕುರಿತ ಕಲ್ಪಸ್ತೋತ್ರ ಸ್ತವನಗಳು ಜೈನ ಆಚಾರ್ಯರಿಂದ ರಚಿತವಾಗಿವೆ. ಶಾಂತೀಶ್ವರರು ತನ್ನ ಶಾರದಾ ಚೌಪದನದಲ್ಲಿ ಜೈನ ಧರ್ಮಾನುಸಾರ ಶಾರದಾದೇವಿಯ ರೂಪ, ಅವಯುವ, ಮತ್ತು ಮಹಿಮೆಯನ್ನು ವರ್ಣಿಸಿರುವರು. ಜೇವರ್ಗಿಯಲ್ಲಿ ದೊರೆತ ಸರಸ್ವತಿ ವಿಗ್ರಹ ನಿಂತ ನಿಲುವಿನಲ್ಲಿದ್ದು ವರದಹಸ್ತ, ಎಡಗಾಲೆಡೆಗೆ ಹಂಸಪಕ್ಷಿ, ಕಾಲುಗಳ ಎರಡೂ ಬದಿಗೆ ರಕ್ಕಸರ ಪಳೆಯುಳಿಕೆಗಳಿವೆ. ಮಂದಸ್ಮಿತವಾದ ಮುಖ ಪ್ರಮಾಣಬದ್ಧವಾದ ಶಿಲ್ಪ, ಸುಂದರವಾದ ದೇಹಸೌಷ್ಠವದಾಕೃತಿ, ಕಂಕಣ ಕಿವಿಓಲೆ, ರತ್ನಮಾಲೆಗಳಿಂದ ಶೋಭಿಸುವ ದೇವಿ ಚತುರ್ಧಾರಿಯಾಗಿದ್ದಾಳೆ. ಶ್ವೇತಾಂಬರಧಾರಿಯಾದ ಸರಸ್ವತಿ ತನ್ನ ನಾಲ್ಕು ಕೈಗಳಲ್ಲಿ ಅಭಯಹಸ್ತದ ಚಿಹ್ನೆ, ಬಲಗೈಯಲ್ಲಿ ಮಾವಿನ ಮುಗುಳು ಹಿಡಿದು ನಿಂತ ದೃಶ್ಯವಿದೆ.

ತಡಕಲ್ಲ ಪ್ರದೇಶದ ಸರಸ್ವತಿ ವಿಗ್ರಹ ಚತ್ಯಾಳೆ ಹಾಕಿ ಕುಳಿತ ನಿಲುವಿನ ದೇವಿ, ಮಂದಸ್ಮಿತ ಮುಖಮಂಡಲ ತಲೆಯ



ಸರಸ್ವತಿ ಜಿನಮಂದಿರ - ತಡಕಲ್ ತಾ। ಆಳಂದ ಜಿ. ಗುಲಬರ್ಗ

ಮೇಲೆ ಕಿರೀಟ, ಕಿವಿಯಲ್ಲಿ ದೊಡ್ಡ ಓಲೆಗಳು, ಕೊರಳಲ್ಲಿ ರತ್ನಹಾರ, ನಡುವಿಗೆ ಹಾವನ್ನು ಸುತ್ತಿಕೊಂಡಿರುವ ಎಡಗೈಯಲ್ಲಿ ಪುಸ್ತಕದ ಕಟ್ಟು, ಬಲಗೈಯಲ್ಲಿ ಅಕ್ಷರಮಾಲೆಯನ್ನು ಧರಿಸಿದವಳು. ಕಾಲಂದುಗೆ, ಪೀಠದ ಕೆಳಗೆ ಹಂಸಪಕ್ಷಿ, ಬಲಗೈಯಲ್ಲಿ ಶೂಲ ಅಭಯ ಎಡಗೈಯಲ್ಲಿ ಒಂದು ಎತ್ತರವಾದ ಆಯುಧವಿದ್ದು ಉಡಿಗೆ ತೊಡಿಗೆ ಆಭರಣಾಲಂಕಾರ ಕಿರೀಟ. ವಿಶೇಷ ಶೈಲಿಯ ಮೈಮಾಟ, ಒನಪು, ಕುಳಿತ ನಿಲುವಿನ ಶಿಲ್ಪ ತುಂಬ ಗಂಭೀರ ವಾಗಿದೆ. ದೇವಕನ್ನಿಕೆಯರಂತೆ ವೃಕ್ಷದೇವತೆಗಳಂತೆ ಕಣ್ಮನ ಸೆಳೆಯುವಷ್ಟು, ತಕ್ಷಣವೇ ಸೆರೆ ಹಿಡಿಯುವಷ್ಟು ರಮ್ಯವಾಗಿದೆ. ಜೈನಶಿಲ್ಪಕಲೆಯು ತನ್ನ ಕಲಾವೈಭವದ ವೈಶಿಷ್ಟ್ಯಪೂರ್ಣ ಮಾಹಿತಿ ತೋರಿದುದು ಕಲಬುರ್ಗಿ ನಾಡಿನಲ್ಲಿಯೆ ಎಂದರೆ ತಪ್ಪಾಗಲಿಕ್ಕಿಲ್ಲ.

**ಕೂಷ್ಮಾಂಡಿನಿ ಯಕ್ಷಿಯರು**



ಕೂಷ್ಮಾಂಡಿನಿ - ಆಳಂದ ಜಿ. ಗುಲಬರ್ಗ



ಕೂಷ್ಮಾಂಡಿನಿ - ಸೇಡಂ ಜಿ. ಗುಲಬರ್ಗ



ಕೂಷ್ಮಾಂಡಿನಿ - ಚಿತ್ತಾಪುರ ಜಿ. ಗುಲಬರ್ಗ

ಕಲಬುರ್ಗಿ ಜಿಲ್ಲೆಯ ಆಳಂದ, ಸೇಡಂ ಹಾಗೂ ಚಿತ್ತಾಪುರ ತಾಲೂಕ ಇಂಗಳಗಿಯ ಮೂರು ಕೂಷ್ಮಾಂಡಿನಿಯರ ಶಿಲ್ಪಗಳು ಅಷ್ಟೇ ಮನೋಹರವಾಗಿವೆ. ಜೈನ ಯಕ್ಷ-ಯಕ್ಷಿಣಿಯರ ಪ್ರತಿಮೆಗಳು ಶಿಲ್ಪ ರಚನೆ ಶಿಲ್ಪಗಳ ಕಲಾನೈಪುಣ್ಯದಿಂದ ಹೊಸ ಆಯಾಮ ತಂದುಕೊಟ್ಟಿವೆ. ಚಂದ್ರಗಿರಿ ಅಥವಾ ಚಿಕ್ಕಬೆಟ್ಟದ ಮೇಲೆ ಚಂದ್ರಗುತ್ತಿ ಬಸದಿಯ ಗರ್ಭಗುಡಿಯಲ್ಲಿ ಪಾರ್ಶ್ವನಾಥನ ಪಕ್ಕಗಳಲ್ಲಿ ಪದ್ಮಾವತಿ ಕೂಷ್ಮಾಂಡಿನಿಯರ ಜೋಡಿ ತುಂಬ ಅಚ್ಚುಕಟ್ಟಾಗಿದೆ. ಕೂಷ್ಮಾಂಡಿನಿ ನೇಮಿನಾಥನ (೨೨ನೆಯ ತೀರ್ಥಂಕರ) ಯಕ್ಷಿ. ಕೂಷ್ಮಾಂಡಿನಿ ಯಕ್ಷಿ, ನೇಮಿನಾಥ ತೀರ್ಥಂಕರರ ಬಗೆಗೆ ಅತ್ಯಂತ ಪುರಾತನ ದಾಖಲೆ ಎಂದರೆ 'ಬಂಧುವರ್ಮನ ಹರಿವಂಶಾಭ್ಯುದಯ' ಕೃತಿ. ಇದೊಂದು ಪ್ರಮುಖ ಜೈನಕೃತಿ.

ಪರಮತ ತಾರೆಯಂ ಖಳವಿಕಾರೆಯನೋಡಿಸಿ ಗೆಲ್ದು ಗೆಲ್ದದೊಳ್
ಪರಮಜಿನೇಂದ್ರ ಶಾಸನ ವಿಭಾಸನ ಕಾರ್ಯ ಸಮರ್ಥೆಯಾರ ಸುಂ
ದರಮುಖಿಯಕ್ಷದೇವಿ ಪರಿರಕ್ಷಿಸುಗುನ್ನತ ಜೈನಮಾರ್ಗ ಭಾ
ಸುಗುಣರಂಜನಿಯೋ ಸುವಿ[ಧೇಯ]ವಿನೇಯಿ ಜನಂಗಳೆಲ್ಲಮಂ॥

ಕೂಷ್ಮಾಂಡಿನಿಯಕ್ಷಿಗೆ ಆಮ್ರ, ಅಂಬಿಕಾ, ಅಂಬಾ, ಗೌರಿ, ವಜ್ರಾ ಹೀಗೆ ಇನ್ನೂ ಅನೇಕ ನಾಮಗಳಿವೆ. ಈಕೆ ಕರ್ನಾಟಕದಲ್ಲಿ 'ಕೂಷ್ಮಾಂಡಿ' ಎಂದೇ ಪ್ರಚಾರ ಪಡೆದಳು. ಈಕೆ ಶ್ವೇತಾಂಬರ ಮತ್ತು ದಿಗಂಬರರಲ್ಲೂ ಪೂಜೆಗೊಳ್ಳುವ ದೇವತೆ, ದ್ವಿಭುಜೆ; ಶ್ವೇತಾಂಬರರಲ್ಲಿ ಚತುರ್ಭುಜೆ, ಈ ಯಕ್ಷಿಣಿ, ಅರಿಷ್ಟನೇಮಿಪಾದ ಮೂಲದಲ್ಲಿ ಸ್ಥಿತಳಾದಾಗ ಅಷ್ಟಭುಜೆ. ಈಕೆಯ ಮೂರ್ತಿಯನ್ನು ಸಿಂಹಾಸನದ ಮೇಲೆ ಪ್ರತಿಷ್ಠಿಸುವದಾದರೆ ಚತುರ್ಭುಜೆ. ತೀರ್ಥಂಕರ ಬಿಂಬದ ಪಕ್ಕದಲ್ಲಿ ಸ್ಥಿತಳಾಗಿರುವಂತೆ ತೋರಿಸುವದಾದರೆ ದ್ವಿಭುಜೆ.

ಆಳಂದದಲ್ಲಿ ಕಂಡುಬರುವ ಮೂರು ಕೂಷ್ಮಾಂಡಿನಿ ಯಕ್ಷಿಯರು ದ್ವಿಭುಜವುಳ್ಳವರಾಗಿರುವರು. ಬಲದ ಕೈಯಲಿ ವರದಮುದ್ರೆ

ಎಡದಕೈಯಲ್ಲಿ ಫಲವಿದೆ. ಕೂಷ್ಮಾಂಡಿನಿಯ ಎರಡೂ ಕಡೆ ಇಬ್ಬರು ಮಕ್ಕಳಿದ್ದಾರೆ. ನಾಗಪಂಚಮಿ ನೋಂತಿಯ ಕಥೆಗಳಲ್ಲಿ ಕೂಷ್ಮಾಂಡಿನಿಯನ್ನು ಜಕ್ಕಣಿಯಬ್ಬೆ ಎಂದು ಕರೆದಿರುತ್ತಾರೆ. ಯಕ್ಷಿಣಿರೂಪದ ತದ್ಭವ ಜಕ್ಕಿಣಿ.

ಕಲಬುರ್ಗಿಯಲ್ಲಿ ದೊರೆತ ಅತ್ಯಂತ ನಯನಾಜೂಕಿನ ನೋಡುಗರ ಕಣ್‌ಮನಸೆಳೆವ ಅತ್ಯಂತ ಸುಂದರ ವಿಗ್ರಹ ಇಂಗಳಗಿಯ ಕೂಷ್ಮಾಂಡಿನಿದೇವಿಯರು.ಇಂಗಳಗಿ ಪರಿಸರದ ಜಾಕಲದೇವಿಯ ಜಿನಮಂದಿರದಲ್ಲಿ ಕುಳಿತ ಸ್ಥಿತಿಯಲ್ಲಿರುವ ವಿಗ್ರಹ ತಲೆಯ ಹಿಂದೆ ದ್ವಿಮುಖವಾದ ಕಿರೀಟಧರಿಸಿದಂತಿದೆ. ಕೊರಳಲ್ಲಿ ಅಕ್ಷಮಾಲೆ ಅಭಯಹಸ್ತಫಲ, ಇವುಗಳನ್ನು ಧರಿಸಿದ್ದು ಉರಹಾರ ಭುಜಗಾಭರಣ ಕಡಗ ತೋಳಬಂದಿ ಕಾಲ್ಕಡಗ ಮುಂತಾದ ವಿನ್ಯಾಸ ಪೂರ್ಣ ಆಭರಣಗಳಿಂದ ಅಲಂಕೃತವಾದ ವಿಗ್ರಹ ಕೂಷ್ಮಾಂಡಿನಿಯರು. ಈ ವಿಗ್ರಹದ ವಿವರಣೆ ಐತಿಹಾಸಿಕ ವಿಷಯಕ್ಕೆ ಸಂಬಂಧಿಸಿದೆ.

ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ಬಹುಸಂಖ್ಯೆಯ ಮಡದಿಯರಲ್ಲಿ ಇಂಗಳಿಗಿಯ ಜಾಕಲದೇವಿ ಒಬ್ಬಳು. ಕ್ರಿ.ಶ. ೧೦೯೪ಳರ ಶಾಸನವೊಂದು ಈಕೆಯ ಜೈನನಿಷ್ಠೆಯನ್ನು ಬಹು ವಿಸ್ತಾರವಾಗಿ ಪ್ರಸ್ತುತಪಡಿಸಿದೆ. ಇಂಗಳಗಿಯ ಶಾಸನದಿಂದ ಈಕೆ, 'ಅರಲ್ಮೂ ನ್ನೂರುವಿಪುಳಗಣಂಗುಣೆಯಂತ್ರಿಭೋಗ್ಯಾಭ್ಯನ್ತರಸಿದ್ಧಿ' ಯಿಂದ ಆಳುತ್ತಿರೆ, ಒಂದು ದಿವಸ ಸುಖಸಂಕಥಾ ವಿನೋದದಿಂದ ಪತಿಯ ಜೊತೆ ಒಡ್ಡೋಲಗದೊಳಿರಲು, ಒಬ್ಬ ವಡ್ಡವ್ಯವಹಾರಿ ಓಲಗಕ್ಕೆ ತಂದ ಸುಂದರವಾದ 'ಮಾಹುಮಾಣಿಕ್ಯ' ಜಿನವಿಗ್ರಹವನ್ನು ತೋರಲು ಇದನ್ನೂ ಕಂಡು ಸಂತಸಪಟ್ಟ ವಿಕ್ರಮಾದಿತ್ಯ ಹೆಂಡತಿಯನ್ನುದ್ದೇಶಿಸಿ.

ಜಿನಬಿಂಬಂ ಪ್ರತಿಬಿಂಬಯಿಲ್ಲೆನಿಪ ಚೆಲ್ವಂ ತಾಳ್ದುದೀ
ದೆಯ್ವಮುಂ
ನಿನಗೆಂತುಂ ಕುಲದೆಯ್ವಮೀ ಪ್ರತಿಮೆಯಂ
ನಿಂನಾಳ್ಪೆಯೂರೊಳ್ವಿನೇ
ಯಿನಿಕಾಯಂ ಬಗೆಗೊಳ್ವಿನಂ ನಿಲಿಸೆನಲ್ಚಾಳುಕ್ಯ ಚಕ್ರೇಶ
ಶಾ
ಸನದಿ ತಜ್ಜಿನಬಿಂಬಮಂ ನಿಲಿಸಿದಳ್ತಂಗೊಳ್ದು ನಿಲ್ವಂನೆಗಂ॥
ಮಾಡಿಸಿದಪ್ಪೆನಿಂ ಜಿನಗೃಹಂಗಳನೆಂಬಿವರೀ ಪ್ರಕಾರದಿಂ
ಮಾಡಿಪುದಿಂತಿದಲ್ತೆ ಪಡಿಚಿಂದಮಿಳಾವಳಿಯಕ್ಕೆ ನಲ್ಕೆ ನಾ
ಡಾಡಿಗಳುಂಬಮಪ್ಪ ಪರಿಶೋಭೆಗೆ ತಾಯ್ಮನೆಯಾಗೆ
ಭಕ್ತಿಯಿಂ
ಮಾಡಿಸಿದಳ್ವಯತ್ತಿಳೆ ಮನೋತ್ತರಿಪನ್ತು
ಜಿನೇಂದ್ರಗೇಹಮಂ॥

ಎಂಬಂತೆ ಜಾಕಲದೇವಿ ಇಂಗಳಿಗೆಯಲ್ಲಿ ಜೈನಮಂದಿರ ಪ್ರತಿಷ್ಠಿಸಿ ಅದನ್ನು ದ್ರಾವಿಳ ಸಂಘದ ಶ್ರೀ ಮಲ್ಲಿಸೇನ ಭಟ್ಟಾರಕರ ಪ್ರಿಯಶಿಷ್ಯ ಇಂದ್ರಸೇನ ಭಟ್ಟಾರಕರಿಗೆ ವಿನಯದಿಂದ ಕೈಮುಗಿದು.

ಎಸೆವಿನೆಗಂ ಸಮನ್ತು ಮಹುಮಾಣೀ ಜಿನೇಶ್ವರ
ಬಿಂಬಮಂ ಪ್ರತಿ
ಷ್ಠಿಸಿದೆನಿದತ್ಯಪೂರ್ವಮನೆ ತಜ್ಜಿನಗೇಹಮನರ್ತ್ತಿಯಿಂದೆ ಮಾ
ಡಿಸಿದೆನದಕ್ಕೆ ತಕ್ಕ ತಳವೃತ್ತಿಯುಮಂ ಸಮಕಟ್ಟಿದೆ ಪ್ರಸಾ
ದಿಸಿ ಮನವೊಲ್ದು ಕಯ್ಕೊಳ್ವುದೂರ್ಜಿತಮಾಗಿರೆ
ಮಾಳ್ಪುದಿನ್ತಿದಂ॥

ಎಂದು ತಿಳಿಸಿ ಅವರಿಗೆ ಹಸ್ತಾಂತರಿಸಿರುವಳು. ಇಂಗಳಗಿಯ ಕೂಷ್ಮಾಂಡಿನಿದೇವಿ, ಇದೇ ಮಾಹುಮಾಣಿಕ್ಯ ಬಸದಿಯ ಶಿಲ್ಪ. ಅಂತೆಯೆ ಶಿಲ್ಪಿ ಈ ಯಕ್ಷಿಯನ್ನು ಅಷ್ಟು ಸರ್ವಾಂಗ ಸುಂದರ ನವನವೋನ್ಮೇಷಶಾಲಿನಿಯಾಗಿ ರಚಿಸಿದ್ದು ಗಮನಾರ್ಹ.



ಪದ್ಮಾವತಿಯಕ್ಷಿ - ಹರಸೂರ ಜಿ. ಗುಲ್ಬರ್ಗ

**ಪದ್ಮಾವತಿ ಯಕ್ಷಿಯರು**

ಕಲಬುರ್ಗಿಯ ಹರಸೂರು ಹುಮನಾಬಾದಗಳಲ್ಲಿ ಎರಡು ಪದ್ಮಾವತಿ ಯಕ್ಷಿಯ ವಿಗ್ರಹಗಳಿವೆ. ಸೇಡಂದ ಪದ್ಮಾವತಿ ವಿಗ್ರಹ ವಿನ್ಯಾಸಪೂರ್ಣವಾಗಿದ್ದು ನಿಂತ ನಿಲುವಿನಲ್ಲಿದೆ. ೨೩ನೆಯ ತೀರ್ಥಂಕರ ಪಾರ್ಶ್ವನಾಥನ ಯಕ್ಷಿ ಪದ್ಮಾವತಿ. ಶ್ವೇತಾಂಬರರಲ್ಲಿ ಸಾಮಾನ್ಯವಾಗಿ ಪದ್ಮಾವತಿ ಚತುರ್ಭುಜೆ. ಬಲದ ಕೈಯಲ್ಲಿ ಅಕ್ಷಮಾಲೆ, ವರದಮುದ್ರೆ, ಎಡದ ಕೈಯಲ್ಲಿ ಅಂಕುಶ ಕಮಲ, ಅಕ್ಷಸೂತ್ರ, ವರದಮುದ್ರೆ ಈಕೆಯ ಇವರ ವಿನ್ಯಾಸಗಳು



ಪದ್ಮಾವತಿಯಕ್ಷಿ
ಮುದ್ದೇಬಿಹಾಳ ಜಿ. ವಿಜಾಪುರ



ಪದ್ಮಾವತಿಯಕ್ಷಿ
ಸೇಡಂ ಜಿ. ಗುಲಬರ್ಗ

ಕನ್ನಡನಾಡಿನ ಅತ್ಯಂತ ಜನಪ್ರಿಯ ಯಕ್ಷಿಣಿಯರಲ್ಲಿ ಪದ್ಮಾವತಿ ಅಗ್ರಗಣ್ಯೆ, ಪದ್ಮಾವತಿ ಜೈನ ಅಜೈನರಲ್ಲಿಯೂ ಪೂಜೆಗೊಳ್ಳುತ್ತ ಪ್ರಭಾವಶಾಲಿಯಾಗಿ ವರಗಳನ್ನು ಅನುಗ್ರಹಿಸುವ ಅವಳ ವರಪ್ರಸಾರದಿಂದ ಅನುಗ್ರಹಿತರಾದವರೇ ಅಧಿಕ. ಕನ್ನಡ ನಾಡಿನಲ್ಲಿ ಪದ್ಮಾವತಿ ಲಬ್ಧವರ ಪ್ರಸಾದರೆಂದು ಕರೆಸಿಕೊಂಡವರು ಹೆಚ್ಚು ಜನ.

ಇಲ್ಲಿ ಗಮನಿಸಿದ ವಿಗ್ರಹಗಳು ನೋಡುಗರ ದೃಷ್ಟಿಯಲ್ಲಿ ದೈವೀ ಮನೋಭಾವವನ್ನು ಉಜ್ವಲಗೊಳಿಸುತ್ತವೆ. ಅವರ ಬಗೆಗಿದ್ದ ಗೌರವ ಪೂಜ್ಯತೆಯನ್ನು ಇಮ್ಮಡಿಗೊಳಿಸುತ್ತಿವೆ.



*



**ಶಿಲ್ಪದ ದನಿಯಲಿ ಚಾಣದ ದನಿಉಲಿಯಲಿ**
**ಇತಿಹಾಸದ ಕಲಾತ್ಮಕ ಲಾಲಿತ್ಯದ ಸ್ವರವಿದೆ**
**ಜಿನಯಕ್ಷನ ಜಿನಯಕ್ಷಿಯ ಚೆಲುವಿನ ನಿಲುವೆಲ್ಲಲ್ಲಿ**
**ಪರಮ ಜಿನೇಂದ್ರವಾಗ್ವನಿತೆಯ ಬೆರಳಾಡಿದೆ**
**ದೈವೀಭಾವದ ಪವಿತ್ರಮಾನಸ ಸಂಚಲನವೆನಿಸಿದೆ**



*

**ಕರ್ನಾಟಕ ಇತಿಹಾಸ ಅಕಾದೆಮಿಯ ೧೭ನೆಯ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೨೦೦೩)**

*ಮೂರ್ತಿ ಶಿಲ್ಪಗಳನ್ನು ಅಭ್ಯಸಿಸುವ ಮೂಲಕವೂ ಸಹ ಗುಹಾದೇವಾಲಯಗಳ ಕಾಲ ನಿರ್ಣಯಕ್ಕೆ ಸಾಕ್ಷ್ಯಾಧಾರಗಳನ್ನು ಕಂಡುಕೊಳ್ಳಬಹುದು. ಅಂದರೆ ಮೂರ್ತಿಶಿಲ್ಪದ ಲಕ್ಷಣಗಳು ವಿಕಾಸವಾಗುತ್ತ ಪ್ರಮಾಣೀಕೃತವಾಗುವುದನ್ನು ಮತ್ತು ಮೂರ್ತಿಶಿಲ್ಪದ ಲಕ್ಷಣಗಳನ್ನು ಸೂಕ್ಷ್ಮವಾಗಿ ಅಭ್ಯಸಿಸುವ ಮೂಲಕ ಕಾಲನಿರ್ಣಯ ಮಾಡುವುದು ಸಾಧ್ಯ. ಉದಾಹರಣೆಗೆ : ಬಾದಾಮಿ ಚಲುಕ್ಯರಿಗಿಂತಲೂ ಪೂರ್ವದಲ್ಲಿ ಕದಂಬರ ಕಾಲದ ಮಹಿಷಮರ್ದಿನಿ ಉಬ್ಬುಶಿಲ್ಪಗಳಲ್ಲಿ ದೇವಿಯ ಕೋಣನ ರೂಪದ ರಾಕ್ಷಸನನ್ನು ಬಾಲದಿಂದ ಎತ್ತಿಹಿಡಿದು ತ್ರಿಶೂಲದ ಹಿಂಭಾಗದಿಂದ ಕೊಲ್ಲುವ ರೀತಿಯಲ್ಲಿ ತೋರಿಸಲಾಗಿದೆ. ಇದೇ ರೂಪದ ಮಹಿಷಮರ್ದಿನಿಯನ್ನು ಬಾದಾಮಿಯ ಮೊದಲನೆಯ (ಶೈವ) ಗುಹಾಲಯದ ಹೊರಕೋಣೆಯಲ್ಲಿ ಕಾಣುತ್ತೇವೆ. ಆದರೆ ರಾವಣಾಫಡಿಯಲ್ಲಿ ಮಹಿಷಮರ್ದಿನಿ ಉಬ್ಬುಶಿಲ್ಪದಲ್ಲಿ ದೇವಿಯ ಕೋಣನ ರೂಪದ ರಾಕ್ಷಸನ ಬೆನ್ನ ಮೇಲೆ ಎಡಗಾಲನ್ನು ಇಟ್ಟು ಅದರ ಮೂತಿಯನ್ನು ಎಡಗೈಯಿಂದ ಅದುಮಿ ಹಿಡಿದು ತ್ರಿಶೂಲದಿಂದ ಹಿಂಭಾಗದಿಂದ ತಿವಿದು ಕೊಲ್ಲುವ ರೀತಿಯಲ್ಲಿ ತೋರಿಸಲಾಗಿದೆ. ಮುಂದೆ ವಿರೂಪಾಕ್ಷ ದೇವಾಲಯ (ಕ್ರಿ.ಶ. ೭೪೦) ದಲ್ಲಿರುವ ಮಹಿಷಮರ್ದಿನಿ ರೂಪವನ್ನು ಕೆತ್ತುವಾಗ ರಾಕ್ಷಸನನ್ನು ಮಾನವ ರೂಪದಲ್ಲಿ ನಿರೂಪಿಸಲಾಗಿದೆ.*

**ಡಾ. ಸಿಂದಗಿ ರಾಜಶೇಖರ್**
ಸಮ್ಮೇಳನಾಧ್ಯಕ್ಷರು

ಜಯಮ್ಮ .ಬಿ *

# ಹುಬ್ಬಳ್ಳಿ ಮತ್ತು ಕುಂದಗೋಳ ತಾಲ್ಲೂಕುಗಳ ಅಪರೂಪದ ಗಜಲಕ್ಷ್ಮೀ ಶಿಲ್ಪಗಳು

*ಗಜಲಕ್ಷ್ಮಿಯು ವೈಷ್ಣವಿ ಎನಿಸಿ ಮಾತೃದೇವತೆಯಾಗಿ ಬಾದುಬ್ಬೆಯಾಗಿ ಗ್ರಾಮದೇವತೆಯಾಗಿ ಪೂಜಿಗೊಳ್ಳುತ್ತಾಳೆ. ೭ನೇ ಶತಮಾನದಿಂದಲೇ ಈಕೆಯ ಶಿಲ್ಪಪರಂಪರೆ ಆರಂಭಗೊಂಡು ಈವರೆಗೂ ತನ್ನದೇ ಆದ ಅಸ್ತಿತ್ವವನ್ನು ಪ್ರಕಟಿಸಿದೆ. ವಿವಿಧ ಕಡೆಗಳ ಗಜಲಕ್ಷ್ಮೀ ಶಿಲ್ಪಗಳಿದ್ದರೂ ಹುಬ್ಬಳ್ಳಿ, ಕುಂದಗೋಳ ತಾಲೂಕಿನ ಈಕೆಯ ಶಿಲ್ಪಗಳು ಬಾಮಬ್ಬೆ, ಬಾದುಮಯ್ಯ ಎಂದು ಶಿಲ್ಪನಾಮಗಳಲ್ಲಿ ವಿವಿಧ ಪಟ್ಟಿಕೆಗಳಲ್ಲಿ ತೋರಿಕೊಂಡಿರುವ ವಿಶಿಷ್ಟ ಶಿಲ್ಪಗಳಾಗಿವೆ.*

ಗಜಲಕ್ಷ್ಮಿಯು ವಿಷ್ಣುವಿನ ಪತ್ನಿ ಅಥವಾ ವೈಷ್ಣವಿ ಮಾತ್ರ ಆಗಿರದೆ ಮಾತೃದೇವತೆ, ಗ್ರಾಮದೇವತೆಯಾಗಿಯೂ ಪೂಜಿಸಲ್ಪಡುತ್ತಾಳೆ. ಗಜಲಕ್ಷ್ಮಿಯನ್ನು ಬಾದುಬ್ಬೆ[೧] ಎಂದು ಕರೆಯುವ ವಾಡಿಕೆಯಿದೆ. ಈ ದೇವತೆಯನ್ನು ಬಾದುಬ್ಬೆ ಎಂದು ಗುರುತಿಸಿರುವುದರಿಂದ ಆದಿ ಚಾಲುಕ್ಯರ ರಾಜಧಾನಿಯನ್ನು ನೆನೆಸಿ ಸ್ಪಷ್ಟಪಡಿಸಬೇಕಾಗಿದೆ. ಈಕೆಯನ್ನು ಶಿಲ್ಪದಲ್ಲಿ ತೋರಿಸುವ ಪರಂಪರೆ ಕ್ರಿ.ಶ. ೭ನೇ ಶತಮಾನದಿಂದ ಪ್ರಾರಂಭವಾಗಿದೆ. ಈ ಕಾಲದ ಶಿಲ್ಪವು ಬಾದಾಮಿಯ ಗುಹೆಯಲ್ಲಿ ಕಾಣಬಹುದು ಹಾಗೂ ಈ ಕಾಲ ಪೂರ್ವದಲ್ಲಿ ಅಂದರೆ ಆದಿಕದಂಬರ ಕಾಲದಲ್ಲಿ ಅಸ್ತಿತ್ವದಲ್ಲಿತ್ತೆಂಬುದರ ಬಗ್ಗೆ ಹೆಚ್ಚಿನ ಸಂಶೋಧನೆ ಆಗಬೇಕಾಗಿದೆ. ಗಜಲಕ್ಷ್ಮೀ ಶಿಲ್ಪಗಳ ಬಗ್ಗೆ ಈಗಾಗಲೇ ಅನೇಕ ವಿದ್ವಾಂಸರು ಅಧ್ಯಯನ ಮಾಡಿದ್ದು, ಅವರುಗಳು ಅವುಗಳನ್ನು ವಿವಿಧ ರೀತಿಯಲ್ಲಿ ಗುರುತಿಸಿದ್ದಾರೆ. ಡಾ. ಪಿ. ಬಿ. ದೇಸಾಯಿ ಅವರು ತಮ್ಮ 'ದವನದ ಹುಣ್ಣಿವೆ' ಲೇಖನದಲ್ಲಿ, 'ವಸಂತಾಂಬೆ'[೨] ಎಂದು, ಪ್ರೊ. ಡಿ. ಎಲ್. ನರಸಿಂಹಾಚಾರ್ ಅವರು ತಮ್ಮ 'ಶಬ್ದವಿಹಾರ' ಕೃತಿಯಲ್ಲಿ 'ಭದ್ರಾಂಬಾ'[೩] ಎಂಥಲೂ, ಡಾ. ಎಂ. ಚಿದಾನಂದ ಮೂರ್ತಿ ಅವರು ತಮ್ಮ 'ಸಂಶೋಧನ ತರಂಗ' ಕೃತಿಯಲ್ಲಿ 'ಬನದಬ್ಬೆ'[೪] ಎಂದೂ, ಆರ್. ಎನ್. ಗುರವ್ ಅವರು 'ಬಾಮಬ್ಬೆ'[೫] ಎಂಥಲೂ ಕರೆದಿದ್ದಾರೆ. ಇವರುಗಳಷ್ಟೇ ಅಲ್ಲದೆ ಈ ಶಿಲ್ಪಗಳ ಬಗ್ಗೆ ಡಾ. ರು.ಮ. ಷಡಕ್ಷರಯ್ಯ[೬], ಡಾ. ಎಚ್.ಆರ್. ರಘುನಾಥಭಟ್[೭], ಡಾ. ಚೂಡಾಮಣಿ ನಂದಗೋಪಾಲ[೮] ಅವರುಗಳೂ ಅಧ್ಯಯನ ಮಾಡಿದ್ದಾರೆ. ಸಾಮಾನ್ಯವಾಗಿ ಗಜಲಕ್ಷ್ಮಿ ಶಿಲ್ಪಗಳು ದೇವಾಲಯಗಳ ಬಾಗಿಲುವಾಡದ ಲಲಾಟಪಟ್ಟಿಕೆಯಲ್ಲಿರುತ್ತವೆ. ಪ್ರತ್ಯೇಕ ಪಟ್ಟಿಕೆಗಳನ್ನು ಕೆಲವೊಮ್ಮೆ ಕೆರೆಯ ತೂಬಿಗೂ, ಊರ ಅಗಸಿ ಬಾಗಿಲುಗಳಿಗೂ ಬಳಸಿರುವುದುಂಟು. ಗಜಲಕ್ಷ್ಮಿಯ ಶಿಲ್ಪಪಟ್ಟಿಕೆಗಳು ಕೆಲವೊಮ್ಮೆ ಪೀಠಶಾಸನಗಳನ್ನು ಹೊಂದಿರುವುದುಂಟು.ಅದಕ್ಕೆ ಉದಾಹರಣೆಯಾಗಿ ಹಾವೇರಿ ಜಿಲ್ಲೆಯ ಹಾನಗಲ್ ತಾಲ್ಲೂಕಿನ ಬಾಳೂರು,[೯] ಧಾರವಾಡ ಜಿಲ್ಲೆಯ ಕಲಘಟಗಿ ತಾಲ್ಲೂಕಿನ ಕಂದಲಿ,[೧೦] ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಮಂಡಸೂರು[೧೧] ಗ್ರಾಮಗಳಲ್ಲಿ ದೊರೆತ ಗಜಲಕ್ಷ್ಮಿ ಶಿಲ್ಪ ಶಾಸನಗಳನ್ನು ಹೆಸರಿಸಬಹುದು.

ಗಜಲಕ್ಷ್ಮಿ ಶಿಲ್ಪ ಪಟ್ಟಿಕೆಯಲ್ಲಿ ಹೆಚ್ಚಾಗಿ ಲಕ್ಷ್ಮಿಯು ಪದ್ಮಪೀಠದ ಮೇಲೆ ಕುಳಿತಿರುವಂತೆ, ಬದಿಗಳಲ್ಲಿ ಗಜಗಳೆರಡು ನಿಂತು ಸೊಂಡಿಲಲ್ಲಿ ಕಲಶಗಳನ್ನಿಡಿದು ಜಲಾಭಿಷೇಕ ಮಾಡುತ್ತಿರುವಂತೆ ತೋರಿಸಲಾಗಿರುತ್ತದೆ. ಕೆಲವೊಮ್ಮೆ ಈ ದೃಶ್ಯದಲ್ಲಿ ಮತ್ತೆರಡು

* ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗ, ಕ.ವಿ.ವಿ., ಧಾರವಾಡ

ಗಜಗಳು ನೀರನ್ನು ಕಲಶಗಳಲ್ಲಿ ತುಂಬಿಕೊಡುತ್ತಿರುವಂತೆ ಚಿತ್ರಿಸಲಾಗಿರುತ್ತದೆ. ಆದರೆ ಪ್ರಸ್ತುತ ಸಂಶೋಧನ ಅಧ್ಯಯನದ ಕ್ಷೇತ್ರಕಾರ್ಯದಲ್ಲಿ ಕಂಡು ಬಂದಿರುವ ಗಜಲಕ್ಷ್ಮೀ ಶಿಲ್ಪಗಳಲ್ಲಿ ಒಂದೆರಡು ಶಿಲ್ಪಗಳು ವಿಶೇಷ ಲಕ್ಷಣಗಳನ್ನು ಹೊಂದಿದ್ದು ಮಹತ್ವವೆನಿಸಿವೆ.

ಮೊದಲನೆಯ ಗಜಲಕ್ಷ್ಮೀ ಶಿಲ್ಪವು ಹುಬ್ಬಳ್ಳಿ ತಾಲ್ಲೂಕಿನ ಕೋಳಿವಾಡ ಗ್ರಾಮದಲ್ಲಿ ಕಂಡುಬಂದಿದೆ. ಕೋಳಿವಾಡವು ಹುಬ್ಬಳ್ಳಿಯಿಂದ ಪೂರ್ವಕ್ಕೆ ೨೯ ಕಿ.ಮೀ. ದೂರದಲ್ಲಿದೆ. ಇಲ್ಲಿಯ ಕಲ್ಮೇಶ್ವರ ದೇವಾಲಯದ ಆವರಣದಲ್ಲಿ ಈ ಮೊದಲು ಮಹತ್ವವಾದ ಬೌದ್ಧದೇವತೆ ತಾರಾಭಗವತಿಯ[೨] ಶಿಲ್ಪ ದೊರೆತಿದ್ದು ಈಗ ಅದು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿದೆ. ಅದೇ ದೇವಾಲಯದ ಆವರಣದಲ್ಲಿಯೇ ಈ ಗಜಲಕ್ಷ್ಮೀ ಶಿಲ್ಪವಿದೆ. ಈ ಶಿಲ್ಪಪಟ್ಟಿಕೆಯಲ್ಲಿ ಲಕ್ಷ್ಮಿಯ ಬದಲಾಗಿ ಪುರುಷನನ್ನು ತೋರಿಸಿರುವುದೇ ವಿಶೇಷವೆನಿಸಿದೆ. ಬಹುಶಃ ಇದು ಬಾದುಮಯ್ಯನ ಶಿಲ್ಪವಿರಬಹುದು. ಈ ಬಾದುಮಯ್ಯ ಶಿಲ್ಪದ ಬಗ್ಗೆ ಅಷ್ಟಾಗಿ ಅಧ್ಯಯನ ನಡೆದಂತೆ ಕಾಣುವುದಿಲ್ಲ; ಆದರೂ ಬಾದುಮಯ್ಯ ಎಂಬ ಹೆಸರು ಶಾಸನಗಳಲ್ಲಿ ಕಾಣಿಸಿದೆ. ಈ ಶಿಲ್ಪದಲ್ಲಿ ಮೂರು ದೃಶ್ಯಗಳಿದ್ದು, ಕೆಳಗಿನ ದೃಶ್ಯದಲ್ಲಿ ಪೂರ್ಣ ಕಲಶ, ಅದರೊಟ್ಟಿಗೆ ಮತ್ಸ್ಯ ಮತ್ತು ಕೂರ್ಮಗಳನ್ನು ಚಿತ್ರಿಸಲಾಗಿದೆ. ಈ ದೃಶ್ಯ ನೀರಿನ ಸಂಕೇತವಾಗಿದೆ. ಎರಡನೆಯ ದೃಶ್ಯದಲ್ಲಿ ದ್ವಿಭುಜಧಾರಿ ವ್ಯಕ್ತಿ (ಬಾದುಮಯ್ಯ)ಯು ಸುಖಾಸನದಲ್ಲಿ ಕುಳಿತಿದ್ದು, ಬಲಗೈಯಲ್ಲಿ ಕಮಲವನ್ನು ಭುಜಕ್ಕೆ ಹೊಂದಿಕೊಂಡಂತೆ ಹಿಡಿದಿದ್ದಾನೆ. ಎಡಗೈಯನ್ನು ತೊಡೆಯ ಮೇಲಿಟ್ಟಿದ್ದಾನೆ. ಈತನಿಗೆ ಇಕ್ಕೆಲಗಳಲ್ಲಿ ನಿಂತಿರುವ ಗಜಗಳೆರಡು ತಮ್ಮ ಸೊಂಡಿಲಿನಲ್ಲಿ ಹಿಡಿದ ಕಲಶಗಳಿಂದ ಜಲಾಭಿಷೇಕ ಮಾಡುತ್ತಿವೆ. ಮೂರನೆಯ ದೃಶ್ಯದಲ್ಲಿ ಸುಖಾಸನದಲ್ಲಿ ಕುಳಿತ ವ್ಯಕ್ತಿಯ ಚಿತ್ರವಿದೆ. ಈತ ಎರಡನೇ ದೃಶ್ಯದಲ್ಲಿರುವ ವ್ಯಕ್ತಿಯಂತೆಯೇ ಇದ್ದಾನೆ. ಶಿಲ್ಪದಲ್ಲಿ ಚಿತ್ರಿತ ಗೊಂಡಿರುವ ವ್ಯಕ್ತಿ ಆಭರಣಗಳಿಂದ ಅಲಂಕೃತಗೊಂಡಿದ್ದಾನೆ. ತಲೆಯ ಹಿಂಭಾಗದಲ್ಲಿ ಪ್ರಭಾಮಂಡಲವಿದೆ. ಈ ರೀತಿಯ ಶಿಲ್ಪ ಅಪರೂಪವೂ, ವಿಶೇಷವೂ ಆಗಿದೆ. ಗಜಲಕ್ಷ್ಮಿ ಶಿಲ್ಪದಲ್ಲಿ ಒಂದೇ ಪಟ್ಟಿಕೆಯಿರುವುದು ಸಾಮಾನ್ಯ. ಆದರೆ ಇಲ್ಲಿ ಮೂರು ಪಟ್ಟಿಕೆಗಳಿರುವುದು ವಿಶಿಷ್ಟವಾಗಿದೆ. ಆದರೆ ಶಿಲ್ಪದ ಬಗ್ಗೆ ಇನ್ನೂ ಅಧ್ಯಯನ ನಡೆಯಬೇಕಾಗಿದ್ದು, ಶಿಲ್ಪದ ಕಾಲ ಸು. ಕ್ರಿ.ಶ. ೧೧ನೇ ಶತಮಾನ.

ಎರಡನೆಯ ಗಜಲಕ್ಷ್ಮಿ ಶಿಲ್ಪವು *(ಛಾಯಾಚಿತ್ರ-೧)* ಮೂಲತಃ ಹುಬ್ಬಳ್ಳಿ ತಾಲ್ಲೂಕಿನ ಛಬ್ಬಿಯಲ್ಲಿ ಕಂಡುಬಂದಿದ್ದು ಈಗ ಹುಬ್ಬಳ್ಳಿಯ ಶರ್ಮ ಇನ್‌ಸ್ಟಿಟ್ಯೂಟ್‌ನಲ್ಲಿದೆ. ಈ ಶಿಲ್ಪಪಟ್ಟಿಕೆ ಯಲ್ಲಿ ಲಕ್ಷ್ಮಿಯು ಎರಡು ಸುತ್ತಿನ ಪದ್ಮಪೀಠದ ತನ್ನ ಎರಡೂ



ಚಿತ್ರ : ೧

ಕೈಗಳಲ್ಲಿ ಕಮಲವನ್ನಿಡಿದು ಪದ್ಮಾಸನದಲ್ಲಿ ಕುಳಿತಿದ್ದಾಳೆ. ಇವಳ ಇಕ್ಕೆಲಗಳಲ್ಲಿ ಇಬ್ಬರು ಚಾಮರಧಾರಿಣಿಯರು ಒಂದು ಕೈಯಲ್ಲಿ ಚೌರಿಯನ್ನಿಡಿದು ಮತ್ತೊಂದು ಕೈಯನ್ನು ಸೊಂಟದ ಮೇಲಿಟ್ಟು ಕೊಂಡು ನಿಂತಿದ್ದಾರೆ. ಈ ಶಿಲ್ಪದಲ್ಲಿ ನಾಲ್ಕು ಗಜಗಳನ್ನು ಎರಡು ಸಾಲುಗಳಲ್ಲಿ ಕೆತ್ತಲಾಗಿದೆ. ಮೇಲಿನ ಸಾಲಿನ ಗಜಗಳ ರುಂಡಭಾಗ ಮಾತ್ರ ಇದೆ. ಅವು ಲಕ್ಷ್ಮಿಗೆ ಜಲಾಭಿಷೇಕ ಮಾಡುತ್ತಿವೆ. ಇನ್ನುಳಿದ ಕೆಳಸಾಲಿನ ಎರಡು ಗಜಗಳು ತಮ್ಮ ಸೊಂಡಿಲಿನಲ್ಲಿ ಕಲಶಗಳನ್ನಿಡಿದು ನೀರನ್ನು ತುಂಬಿ ಕೊಡುತ್ತಿರುವಂತಿವೆ. ಮೇಲಿನ ಗಜಗಳ ಮೇಲ್ಭಾಗದಲ್ಲಿ ನಾಲ್ವರು ವಾದ್ಯಮೇಳ ದವರಿದ್ದಾರೆ. ಲಕ್ಷ್ಮಿಯು ಆಭರಣಗಳಿಂದ ಅಲಂಕೃತಗೊಂಡಿದ್ದಾಳೆ. ಶಿಲ್ಪದ ಮಧ್ಯಭಾಗ ವಿಸ್ತಾರವಾಗಿ ಅರ್ಧವೃತ್ತಾಕಾರವಾಗಿದೆ. ಕೆಳಸಾಲಿನ ಗಜಗಳ ಬೆನ್ನ ಹಿಂದೆ ಹೊರಮುಖ ಮಾಡಿ ಬಾಯ್ತೆರೆದ ಎರಡು ಮಕರಗಳ ಮುಖಗಳಿದ್ದು, ಶಿಲ್ಪದ ಸುತ್ತಲೂ ಮಕರ ತೋರಣದ ಅಲಂಕಾರವಿದೆ. ಈ ಶಿಲ್ಪದಲ್ಲಿ ಲಕ್ಷ್ಮಿಯು ಎರಡು ಸುತ್ತಿನ ಮೊಟ್ಟೆಯಾಕಾರದ ಪದ್ಮಪೀಠದ ಮೇಲೆ ಕುಳಿತಿರುವುದು ಮತ್ತು ಲಕ್ಷ್ಮಿಗೆ ಛತ್ರಿಯನ್ನು ತೋರಿಸಿರುವುದು ಮಹತ್ವದ್ದೆನಿಸಿದೆ. ಈ ರೀತಿಯ ನಾಲ್ಕು ಗಜಗಳುಳ್ಳ ಲಕ್ಷ್ಮೀ ಶಿಲ್ಪಗಳು ಶಿಗ್ಗಾಂವ, ಕೋಳಿವಾಡ ಇನ್ನಿತರ ಸ್ಥಳಗಳಲ್ಲಿವೆ.



ಚಿತ್ರ : ೨

ಮತ್ತೊಂದು ಗಜಲಕ್ಷ್ಮಿಯ ಶಿಲ್ಪ *(ಛಾಯಾಚಿತ್ರ-೨)*ವು ಕುಂದಗೋಳ ತಾಲ್ಲೂಕಿನ ಶಿರೂರು ಗ್ರಾಮದಲ್ಲಿದೆ. ಈ ಶಿಲ್ಪ ಪಟ್ಟಿಕೆಯಲ್ಲಿ ಗಜಲಕ್ಷ್ಮೀಯು ಪದ್ಮಪೀಠದ ಮೇಲೆ ಕುಳಿತಿದ್ದಾಳೆ.

ದ್ವಿಭುಜಧಾರಿಯಾಗಿರುವ ಇವಳು ತನ್ನ ಕೈಗಳಲ್ಲಿ ಭುಜದೆತ್ತರಕ್ಕೆ ಪದ್ಮಗಳನ್ನಿಡಿದಿದ್ದಾಳೆ. ಇವಳ ಇಕ್ಕೆಲಗಳಲ್ಲಿ ನಿಂತ ಗಜಗಳೆರಡು ಸೊಂಡಿಲಿನಲ್ಲಿ ಹಿಡಿದ ಕುಂಭಗಳಿಂದ ಜಲಾಭಿಷೇಕ ಮಾಡುತ್ತಿವೆ. ಗಜಗಳ ಕೆಳಭಾಗದಲ್ಲಿ ಅಂದರೆ ಎರಡೂ ಕಾಲುಗಳ ಮಧ್ಯ ಚಾಮರಧಾರಿಣಿಯರಿದ್ದಾರೆ. ಗಜಗಳ ಹಿಂಭಾಗದಲ್ಲಿ ಇಬ್ಬಿಬ್ಬರು ಸ್ತ್ರೀಯರು ಕುಂಭಗಳನ್ನಿಡಿದು ನಿಂತಿದ್ದಾರೆ. ಗಜಗಳ ಕಾಲುಗಳ ಕೆಳಭಾಗದಲ್ಲಿ ಲಗಾರಿ (ಡೋಲು) ಬಾರಿಸುವವರಿದ್ದಾರೆ. ಗಜಗಳ ಮೇಲ್ಭಾಗದಲ್ಲಿ ಒಟ್ಟು ಹನ್ನೆರಡು ಮಂದಿ ವಾದ್ಯಗಾರರಿದ್ದಾರೆ. ಶಿಲ್ಪಕ್ಕೆ ಸುತ್ತಲೂ ಮಕರತೋರಣವಿದೆ. ಇದರಿಂದ ಲಕ್ಷ್ಮಿಗೆ ಗಜಗಳು ಜಲಾಭಿಷೇಕ ಮಾಡುತ್ತಿರುವ ಸಮಯದಲ್ಲಿ ವಾದ್ಯ ಮೇಳಗಳು ಮೊಳಗುತ್ತಿದ್ದು, ಇದೊಂದು ಮಂಗಳಕರ ಸಮಯ ಎಂದು ಅರ್ಥೈಸಬಹುದು. ಅಲ್ಲದೆ ಇದೊಂದು ಮಂಗಳ ಫಲಕವಾಗಿದ್ದು, ಇದನ್ನು ಊರ ಅಗಸಿಬಾಗಿಲಿಗೆ ಅಳವಡಿಸಿರಬಹುದು ಅದಕ್ಕೆ ಆಧಾರವೆಂಬಂತೆ ಪಟ್ಟಿಯ ಕೆಳಭಾಗದಲ್ಲಿ ಎರಡು ಗೂಟಗಳನ್ನು ಕಂಡರಿಸಿದ್ದಾರೆ. ಶಿಲ್ಪಪಟ್ಟಿಕೆ ಯಲ್ಲಿರುವ ವಾದ್ಯಗಾರರು, ಅಪ್ಸರೆಯರು, ಚಾಮರಧಾರಿಣಿಯರು ವಿಶೇಷ ಗಮನ ಸೆಳೆಯುತ್ತಾರೆ. ಈ ಶಿಲ್ಪದ ಕಾಲ ಸುಮಾರು ೧೦ನೇ ಶತಮಾನ.

ಸಮಕಾಲೀನ ಶಿಲ್ಪಗಳು ಅನೇಕ ಕಡೆಗಳಲ್ಲಿದ್ದರೂ ಈ ಶಿಲ್ಪಗಳ ಅಂಶಗಳು ಅಪರೂಪವಾಗಿವೆ ಮತ್ತು ಮಹತ್ವವೆನಿಸಿವೆ.

(**ಕೃತಜ್ಞತೆಗಳು** : ಲೇಖನವನ್ನು ತಯಾರಿಸಲು ಪ್ರೇರಣೆ ನೀಡಿದ ಮತ್ತು ಪರಿಶೀಲಿಸಿದ ಗುರುಗಳಾದ ಡಾ. ರು.ಮ. ಷಡಕ್ಷರಯ್ಯ ಅವರಿಗೆ, ಕ್ಷೇತ್ರಕಾರ್ಯದಲ್ಲಿ ಸಹಾಯ ಮಾಡಿದ ಅಣ್ಣ ಸುರೇಶನಿಗೆ ಧನ್ಯವಾದಗಳು.)



***

**ಆಧಾರಸೂಚಿ ಮತ್ತು ಟಿಪ್ಪಣಿಗಳು**


1. Gurav R.N., *The Kadambas of Goa and their Inscriptions*, No. 3, P. 132-134
೨. ಡಾ. ಪಿ.ಬಿ. ದೇಸಾಯಿ., 'ದವನದ ಹುಣ್ಣಿವೆ', **ಪ್ರಬುದ್ಧ ಕರ್ನಾಟಕ** ೩೨-೪, ಮೈಸೂರು ವಿ.ವಿ., ಮೈಸೂರು, ಪುಟ. ೮೧-೮೨.
೩. ಪ್ರೊ. ಡಿ.ಎಲ್. ನರಸಿಂಹಾಚಾರ್, **ಶಬ್ದವಿಹಾರ**, ಪುಟ. ೮೨.
೪. ಡಾ. ಎಂ. ಚಿದಾನಂದಮೂರ್ತಿ., **ಸಂಶೋಧನ ತರಂಗ**, ಪುಟ. ೧೩೬-೧೩೯.
೫. ಆರ್.ಎನ್. ಗುರುವ., 'ಬಾದುಬ್ಬೆ', **ಕರ್ನಾಟಕ ಭಾರತಿ**, ೬-೨. ಪುಟ. ೧೩೨-೧೩೪.
೬. ಡಾ. ರು.ಮ. ಷಡಕ್ಷರಯ್ಯ., 'ಶಿಗ್ಗಾಂವಿಯ ಅಪರೂಪದ ಗಜಲಕ್ಷ್ಮಿಯ ಶಿಲ್ಪಗಳು', **ಕರ್ನಾಟಕ ಭಾರತಿ**, ಕ.ವಿ.ವಿ. ಧಾರವಾಡ.
೭. ಎಚ್.ಆರ್. ರಘುನಾಥ ಭಟ್., 'ಅಭಿಷೇಕ ಲಕ್ಷ್ಮಿ ಶಿಲ್ಪ-ಶಾಸನ ಶೋಧನೆ', **ಇತಿಹಾಸ ದರ್ಶನ**, ಸಂ. ೩ / ೧೯೮೮, ಪುಟ. ೧೪೬-೧೪೮.
೮. ಡಾ. ಚೂಡಾಮಣಿ ನಂದಗೋಪಾಲ., "ಗಜಲಕ್ಷ್ಮಿಯ ಸಾಂಕೇತಿಕ ವಿನ್ಯಾಸ-ಒಂದು ಅಧ್ಯಯನ', **ಇತಿಹಾಸ ದರ್ಶನ**, ಸಂ. ೭ / ೧೯೯೨, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು, ಪುಟ. ೪೬-೪೯.
೯. ಡಾ. ಪಿ.ಬಿ. ದೇಸಾಯಿ, ಪೂರ್ವೋಕ್ತ.
೧೦. ಅದೇ.
೧೧. ಎಚ್.ಆರ್. ರಘುನಾಥ ಭಟ್., ಪೂರ್ವೋಕ್ತ.
೧೨. **ಧಾರವಾಡ ಜಿಲ್ಲಾ ಗ್ಯಾಝೆಟಿಯರ್**, ಪುಟ. ೯೨೧.




**ಕ.ಇ. ಅಕಾದೆಮಿಯ ೧೭ನೇ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೨೦೦೩)**

*ಗುಹಾದೇವಾಲಯಗಳ ಕಾಲನಿರ್ಣಯವು ಭಿನ್ನಾಭಿಪ್ರಾಯಕ್ಕೆ ಅನುವು ಮಾಡಿದ್ದರೂ ಈ ಸೂಕ್ಷ್ಮವಾಗಿ ಅವುಗಳ ವಾಸ್ತುವಿನ ಬೇರೆ ಬೇರೆ ಅಂಶಗಳು ಮತ್ತು ಶಿಲ್ಪಗಳ ಕೆತ್ತನೆಯ ವಿವರಗಳನ್ನು ತೌಲನಿಕವಾಗಿ ವಿಶ್ಲೇಷಿಸಿದಾಗ ಈ ಗುಹಾದೇವಾಲಯಗಳ ಕಾಲಾನುಕ್ರಮಣಿಕೆಯನ್ನು ಸರಳವಾಗಿ ನಿರ್ಣಯಿಸಬಹುದು. ಈ ಹಿನ್ನೆಲೆಯಲ್ಲಿ ಬಾದಾಮಿಯಲ್ಲಿ ಮೊದಲನೆಯ ಶೈವ ಗುಹಾಲಯದಿಂದ ಆರಂಭಗೊಂಡು ಎರಡನೆಯ ಸಣ್ಣ ವೈಷ್ಣವ ಗುಹಾಲಯ ಮತ್ತು ಮೂರನೆಯ ದೊಡ್ಡ ವೈಷ್ಣವ ಗುಹಾಲಯದವರೆಗೆ ಗುಹಾದೇಗುಲಗಳ ಅಲಂಕಾರಿಕ ಕೆತ್ತನೆಯಲ್ಲಿ ಹೆಚ್ಚೆಚ್ಚು ಸೂಕ್ಷ್ಮತೆ ಮತ್ತು ಹೊಸ ಹೊಸ ಆವಿಷ್ಕಾರಗಳನ್ನು ರೂಢಿಸಿಕೊಂಡಿದ್ದು ಸ್ಪಷ್ಟವಾಗಿ ಗೋಚರಿಸುತ್ತದೆ. ಶೈವ ಗುಹಾಲಯವು ಮೊದಲು, ಎರಡನೆ ಗುಹಾಲಯವು ನಂತರ ಮತ್ತು ಮೂರನೆಯದಾಗಿ ವೈಷ್ಣವ ಗುಹಾಲಯವು ಕ್ರಿ.ಶ. ೫೭೮ರಲ್ಲಿ ಕೊರೆಯಲ್ಪಟ್ಟವು.*

*ಡಾ. ಸಿಂದಗಿ ರಾಜಶೇಖರ್*
ಸಮ್ಮೇಳನಾಧ್ಯಕ್ಷರು

ಡಾ. ಬಾಲಸುಬ್ರಮಣ್ಯ*

# ಹೊನ್ನಾಳಿ ತಾಲ್ಲೂಕಿನ ಕೆಲವು ವಿಶಿಷ್ಟ ಶಿಲ್ಪಗಳು

ವಿಜಯನಗರ ಕಾಲದಲ್ಲಿ ಎಡದೊರೆನಾಡಿನ ಪ್ರಮುಖ ಸ್ಥಳವಾಗಿದ್ದ ಹೊನ್ನಾಳಿ ಪ್ರದೇಶದ ಕೆಲವಾರು ದೇಗುಲಗಳು, ಶಿಲ್ಪಗಳು ಕನಿಷ್ಠ ೧೨-೧೩ನೇ ಶತಮಾನಕ್ಕೆ ಸೇರಿದ ವಿಶಿಷ್ಟ ಸಾಂಸ್ಕೃತಿಕ ನೆಲೆಯಲ್ಲಿವೆ. ಶಿಲ್ಪಗಳು ಕತ್ತಿಗೆ, ದಿಡಗೂರು, ಕುಂಕುವ ಕುಂದೂರು ಅಲ್ಲದೆ ಬಳ್ಳೇಶ್ವರ, ಬೆಳಗುತ್ತಿ, ತೀರ್ಥರಾಮೇಶ್ವರ ಇತ್ಯಾದಿ ಕಡೆಯ ಚಾರಿತ್ರಿಕ ಶಿಲ್ಪಗಳು, ನೆಲೆಗಳು ವಾಸ್ತು-ಶಿಲ್ಪದ ದೃಷ್ಟಿಯಿಂದ ಮಹತ್ವಪೂರ್ಣವಾಗಿವೆ. ಈ ಶಿಲ್ಪಗಳು ಶಿಲ್ಪಿಯ ಮನದಾಳ ದಿಂದ ಅಭಿವ್ಯಕ್ತಗೊಂಡು ಅರಳಿ ಅಂದಿನ ಜನರ ಬದುಕಿನ ಹಲವಾರು ವಿಚಾರಗಳ ಪ್ರತಿರೂಪಗಳಾಗಿ ಹೊರ ಹೊಮ್ಮಿವೆ.

ಹೊನ್ನಾಳಿ ತುಂಗಭದ್ರಾ ನದಿ ತಟದಲ್ಲಿದ್ದು ದಾವಣಗೆರೆ ಜಿಲ್ಲೆಯ ಮುಖ್ಯವಾದ ತಾಲ್ಲೂಕು ಕೇಂದ್ರವಾಗಿದೆ. ಈ ತಾಲ್ಲೂಕಿನ ಉದ್ದಗಲಕ್ಕೂ ಅನೇಕ ಚಾರಿತ್ರಿಕ ಕುರುಹುಗಳಿದ್ದು ಅವು ಪ್ರಾಮುಖ್ಯತೆಯನ್ನು ಪಡೆದಿವೆ. ಬನವಾಸಿ ಕದಂಬರಿಂದ ಆರಂಭ ಗೊಂಡು ವಿಜಯನಗರದ ಅರಸರವರೆವಿಗೆ ಹಾಗೆಯೆ ಬೆಳಗುತ್ತಿ, ಕೆಳದಿ ಅರಸರು ಮತ್ತು ಅನೇಕ ಪಾಳೆಯಗಾರರು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಬಗಗೆ ವಿಪುಲವಾದ ಮಾಹಿತಿ ದೊರಕುತ್ತದೆ. ಐತಿಹಾಸಿಕವಾಗಿ, ಧಾರ್ಮಿಕವಾಗಿ ಹಾಗು ಸಾಮಾಜಿಕವಾಗಿ ಈ ಪ್ರದೇಶದಲ್ಲಿ ನಡೆದ ಘಟನೆಗಳನ್ನು ನಿಖರವಾಗಿ ಗುರುತಿಸ ಬಹುದಾಗಿದೆ.

ಹೊನ್ನಾಳಿಯ ಇತಿಹಾಸವನ್ನು ಸ್ಥೂಲವಾಗಿ ಅವಲೋಕಿಸಿ ದರೆ, ವಿಜಯನಗರ ಕಾಲದಲ್ಲಿ ಈ ಪ್ರದೇಶ ಎಡದೊರೆ ನಾಡಿನ ಪ್ರಮುಖ ಸ್ಥಳವಾಗಿತ್ತು. ಈ ಪ್ರದೇಶದಲ್ಲಿ ಭದ್ರವಾದ ಕೋಟೆಯನ್ನು ಕಟ್ಟಿ ಅದನ್ನು ಸುವ್ಯವಸ್ಥಿತವಾಗಿ ಇಟ್ಟವನು ಮಾರನಾಯ್ಕ. ಕಾಲಾಂತರದಲ್ಲಿ ಹೊನ್ನಾಳಿ ಬಿಜಾಪುರ ಸುಲ್ತಾನರ ಕೈವಶ ವಾಯಿತು. ನಂತರ ರಾಣಿ ಚೆನ್ನಮ್ಮ, ಹೈದರಾಲಿ, ಟಿಪ್ಪುಸುಲ್ತಾನ ಬ್ರಿಟಿಷ್ ಹಾಗೂ ಒಡೆಯರುಗಳ ಅಧೀನದಲ್ಲಿದ್ದು ಸತತವಾಗಿ ಪ್ರಾಮುಖ್ಯತೆಯನ್ನು ನಿರಂತರವಾಗಿ ಮುಂದುವರಿಸಿಕೊಂಡು ಹೋದುದ್ದನ್ನು ಗುರುತಿಸಬಹುದಾಗಿದೆ. ಇಷ್ಟೆಲ್ಲ ರಾಜಕೀಯ ಸ್ಥಿತ್ಯಂತರಗಳ ನಡುವೆಯೂ ಕಲೆಗೆ ಪ್ರೋತ್ಸಾಹ ನೀಡಿರುವುದನ್ನು ಇಲ್ಲಿನ ದೇವಾಲಯಗಳಲ್ಲಿ, ಬಿಡಿ ಶಿಲ್ಪಗಳಲ್ಲಿ ಕಾಣಬಹುದು. ಈ ಶಿಲ್ಪಗಳು ಶಿಲ್ಪಿಯ ಮನದಾಳದಿಂದ ಅಭಿವ್ಯಕ್ತಗೊಂಡು ಅರಳಿ, ಅಂದಿನ ಜನರ ಬದುಕಿನ ಹಲವಾರು ವಿಚಾರಗಳ ಪ್ರತಿರೂಪ ಗಳಾಗಿ ಹೊರಹೊಮ್ಮಿವೆ. ಶಿಲ್ಪಗಳು ದೇವಾಲಯದ ಹೊರಭಾಗದ ಭಿತ್ತಿ, ಮುಚ್ಚಿಗೆ, ಉತ್ಸವ ಮಂಟಪ, ಕಂಬಗಳು ಹಾಗು ಸುತ್ತಲ ಆವರಣದಲ್ಲಿ ಕಂಡುಬಂದಿವೆ. ಇವು ಅಂದಿನ ಆಚರಣೆ, ಸಂಪ್ರದಾಯಗಳ ಪ್ರತೀಕವಾಗಿವೆ.

ಹೊನ್ನಾಳಿ ತಾಲ್ಲೂಕಿನ ಪೂರ್ವದಲ್ಲಿ ಕುಂದೂರು, ಕೂಲಂಬಿ ಪಶ್ಚಿಮದಲ್ಲಿ ಕ್ಯಾತಿನಕೊಪ್ಪ, ಉತ್ತರದಲ್ಲಿ ಬೇಲಿಮಲ್ಲೂರು ಅರಕೆರೆ, ಮಾಸಡಿ, ದಕ್ಷಿಣದಲ್ಲಿ ಚಿಲೂರು, ದಿಗಡೂರು ಮಾರಿಗೊಂಡನ ಹಳ್ಳಿ, ಕುಂಕುವ ಹಳ್ಳಿಗಳನ್ನು ಹೊಂದಿವೆ. ಬಳ್ಳೇಶ್ವರದಲ್ಲಿ ಹೊಯ್ಸಳರ ಕಾಲದ ಶಿಲ್ಪಗಳು, ಉಮಾಮಹೇಶ್ವರ, ಬೇತಾಳ ಶಿಲ್ಪಗಳು ಮನಮೋಹಕವಾಗಿವೆ. ಹಾಗೆಯೆ ಬೇಲಿಮಲ್ಲೂರಿನ ಷಣ್ಮುಖ, ಸೂರ್ಯ, ಗಣೇಶ, ಸಪ್ತಮಾತೃಕೆಯರು, ಅದರಂತೆ ಹಿರೆಗೋಣಿ ಗೆರೆಯ ಸಪ್ತಮಾತೃಕೆಯರ ಶಿಲ್ಪಗಳು ಕಲ್ಯಾಣ ಚಾಲುಕ್ಯ ಶೈಲಿಯನ್ನು

* ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩ ೨೭೬

ನೆನಪಿಸುತ್ತವೆ. ಒಟ್ಟಿನಲ್ಲಿ ಹೊನ್ನಾಳಿ ಪ್ರದೇಶದಲ್ಲಿ ವಿವಿಧ ಬಗೆಯ ದೇವಾಲಯಗಳು, ಶಿಲ್ಪಗಳು ಕಂಡುಬಂದರೂ, ಪ್ರಸ್ತುತ ಲೇಖನ ದಲ್ಲಿ ಈ ಕೆಳಗಿನ ಕೆಲವು ಸ್ಥಳಗಳನ್ನು ಆಯ್ಕೆ ಮಾಡಿಕೊಂಡು ಚರ್ಚಿಸಲಾಗಿದೆ.

**ಕತ್ತಿಗೆ** : ಈ ಊರು ಹೊನ್ನಾಳಿಯ ಕಲ್ಮಠಕ್ಕೆ ಕಲ್ಲನ್ನು ಪೂರೈಸಿದ ಸ್ಥಳ. ಕಲ್ಮಠಕ್ಕೆ ಬೇಕಾದ ಬಂಡೆಗಳನ್ನು ಮನುಷ್ಯರು ತಾರದೆ ಭೂತಗಳು ಹೊತ್ತು ತಂದವಂತೆ. ಕೆಲವು ಭೂತಗಳು ಅಪ್ಪಣೆ ಪಡೆದು ಕಲ್ಮಠದಲ್ಲಿ ನೆಲಸಿದರೆ ಒಂದು ಭೂತ ಕತ್ತಿಗೆ ಗುಡ್ಡದಲ್ಲಿಯೆ ನೆಲಸಿ ಕಲ್ಲನ್ನು ರಕ್ಷಿಸುತ್ತಿದೆ ಎನ್ನುವ ನಂಬಿಕೆಯಿದೆ. ಕಲ್ಮಠದಲ್ಲಿ ಉಪಯೋಗವಾಗಿರುವ ಕಂಬ, ತೊಲೆ, ವಿಶಾಲ ಅಂಕಣದ ಚಾವಣಿಗೆ ಹಾಸಿದ ಹಾಸುಗಲ್ಲು, ಮೇಲ್ಭಾಗದಲ್ಲಿ ಮಳೆ ನೀರು ಸ್ವಲ್ಪವೂ ನಿಲ್ಲದಂತೆ ಹರಿದು ಹೋಗಲು ಕಲ್ಲುಗಳನ್ನು ನಾಡಹೆಂಚಿನ ರೀತಿ ಹೊದಿಸಿ ಜಲಹರಿಗಳನ್ನು ಮಾಡಿರುವ ವಿನ್ಯಾಸ ಆಕರ್ಷಣೀಯವಾದುದು. ಇಷ್ಟೆಲ್ಲ ಕ್ರಿಯೆಗೆ ಆಗಾಧ ಪ್ರಮಾಣದ ಕಲ್ಲು ಈ ಊರಿನಿಂದಲೆ ಪೂರೈಕೆಯಾಗಿದೆ.

ಕತ್ತಿಗೆ ಊರಿನ ಮಧ್ಯೆ ಉತ್ತರ ಭಾಗಕ್ಕೆ ಹೊಂದಿಕೊಂಡಂತೆ ಎರಡು ದೇವಾಲಯಗಳಿವೆ; ಒಂದು ಹನುಮಂತ ಮತ್ತೊಂದು ಬಸವಣ್ಣ.

ಹನುಮಂತನ ಗುಡಿ ಗರ್ಭಗೃಹ ಹಾಗೂ ಮುಖ ಮಂಟಪ ವನ್ನು ಹೊಂದಿದ್ದು ದಕ್ಷಿಣಾಭಿಮುಖವಾಗಿದೆ. ಗರ್ಭಗುಡಿಯ ಹೊರಭಾಗದಲ್ಲಿ ಉಬ್ಬು ಕೆತ್ತನೆಗಳಿಂದ ಕೂಡಿದ ಶಿಲ್ಪಗಳಿವೆ. ಅವುಗಳಲ್ಲಿ ಮುಖ್ಯವಾದವು ಯೋಧನೊಬ್ಬ ಸಿಂಹದೊಡನೆ ಕಾದಾಡುತ್ತಿರುವ ದೃಶ್ಯ, ಇದು ಉತ್ತರದಲ್ಲಿದೆ. ಪೂರ್ವದಲ್ಲಿ ಗಜೇಂದ್ರಮೋಕ್ಷದ ದೃಶ್ಯವನ್ನು ಕೆತ್ತಲಾಗಿದೆ. ಸನಿಹದಲ್ಲೆ ಹಾಲುಣಿಸು ತ್ತಿರುವ ಹಸು, ನೃತ್ಯಗಾತಿಯರನ್ನು ಚಿತ್ರಿಸಲಾಗಿದೆ. ಪಶ್ಚಿಮದ ಹೊರಗೋಡೆಯ ಮೇಲೆ ನವನಾರಿ ಕುಂಜರದ ಉಬ್ಬುಶಿಲ್ಪ ಗಮನಸೆಳೆಯುತ್ತದೆ. ಇಲ್ಲಿ ಒಂಬತ್ತು ಸ್ತ್ರೀಶಿಲ್ಪಗಳಿದ್ದು ಅವುಗಳಿಂದ ಆನೆಯ ಶಿಲ್ಪವನ್ನು ರಚಿಸಲಾಗಿದೆ. ಒಟ್ಟಾರೆಯಾಗಿ ನೋಡಿದರೆ ಆನೆಯ ಉಬ್ಬುಶಿಲ್ಪವಾಗಿ ಕಂಡರೂ ಅದರಲ್ಲಿ ಒಂಬತ್ತು ಸ್ತ್ರೀ ಶಿಲ್ಪಗಳನ್ನು ಆನೆಯ ದೇಹಾಕೃತಿಗೆ ಹೊಂದಿಕೊಳ್ಳುವಂತೆ ರಚಿಸಲಾಗಿದೆ. ಈ ರೀತಿಯ ಸಂಯುಕ್ತ ಶಿಲ್ಪಗಳು ಬಾದಾಮಿ ಚಾಲುಕ್ಯ, ವಿಜಯನಗರ ಕಾಲದ ದೇವಾಲಯಗಳಲ್ಲಿ ಉಬ್ಬುಶಿಲ್ಪ ವಾಗಿ ರಚಿಸಿರುವುದನ್ನು ಕಾಣಬಹುದು. ಎರಡು ಅಥವಾ ಹೆಚ್ಚಿನ ಪ್ರಾಣಿ, ಮನುಷ್ಯರ ಶಿಲ್ಪಗಳಿಂದ ವಿವಿಧ ರೀತಿಯ ದೃಶ್ಯಗಳನ್ನು ರಚಿಸಲಾಗಿದೆ. ನಿಗದಿತ ಸ್ಥಳದಿಂದ ವೀಕ್ಷಿಸಿದರೆ ಅವು ವಿವಿಧ ಪ್ರಾಣಿ ಅಥವ ಮನುಷ್ಯರ ಶಿಲ್ಪಗಳಾಗಿರುತ್ತವೆ. ಈ ಸಾಲಿಗೆ ಆನೆ ಮತ್ತು ಗೂಳಿ, ಮರಿಕೋತಿಯೊಡನೆ ಇರುವ ದೊಡ್ಡ ಕೋತಿ, ವೃತ್ತದಲ್ಲಿರುವ ಕುಸ್ತಿಪಟುಗಳು ಮುಂತಾದವು ಸೇರುತ್ತವೆ.

ನವನಾರಿ ಕುಂಜರದ ಶಿಲ್ಪದ ಮಾದರಿಯನ್ನು ಕಾಷ್ಠ ಶಿಲ್ಪದಲ್ಲೂ ಬಿಡಿಸಿರುವುದನ್ನು ಕಾಣಬಹುದು. ಹೊನ್ನಾಳಿ ಕೋಟೆ ಪ್ರದೇಶದಲ್ಲಿರುವ ದತ್ತಾತ್ರೇಯ ಎನ್ನುವವರ ಮನೆಯಲ್ಲಿ ಸಂರಕ್ಷಿಸಿಟ್ಟಿ ರುವ ಪುರಾತನ ಬಾಗಿಲಿನಲ್ಲಿ ಈ ಶಿಲ್ಪವನ್ನು ಬಿಡಿಸಿರುವುದನ್ನು ಕಾಣಬಹುದು. ಇದೇ ರೀತಿಯ ಶಿಲ್ಪವನ್ನು ಮೂಡಬಿದಿರೆಯ ಜೈನಮಠದಲ್ಲಿ ಚಿತ್ರಿಸಿರುವುದನ್ನು ಕಾಣಬಹುದು. ಕತ್ತಿಗಿಯಲ್ಲಿರುವ ಈ ಶಿಲ್ಪ ಒಂದು ಕಾಲಘಟ್ಟದಲ್ಲಿ ಬಹಳ ಪ್ರಚಲಿತವಾದ ಶಿಲ್ಪವಾಗಿರುವುದನ್ನು ಕಾಣಬಹುದು. ಈ ಉಬ್ಬುಶಿಲ್ಪ ವಿರುವ ದೇವಾಲಯ ೧೬-೧೭ನೇ ಶತಮಾನಕ್ಕೆ ಸೇರಿದ್ದಾಗಿದೆ. ಈ ಹನುಮನ ಗುಡಿಯ ಹತ್ತಿರದಲ್ಲಿರುವ ಬಸವಣ್ಣನ ಗುಡಿಯ ಹೊರಭಾಗದ ಭಿತ್ತಿಯ ಮೇಲೆ ವಿವಿಧ ಪ್ರಾಣಿಗಳನ್ನು ಅಂದರೆ ಯಾಳಿ, ಹಂಸ, ಆನೆ, ಕಿನ್ನರ ಪುರುಷ, ಬೇಡರ ಕಣ್ಣಪ್ಪ ಹೀಗೆ ಅನೇಕ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಬಸವಣ್ಣನ ಗುಡಿಯೂ ಎಲ್ಲ ವಿಧದಲ್ಲಿಯೂ ಆಂಜನೇಯನ ಗುಡಿಯನ್ನು ಹೋಲುತ್ತದೆ ಮತ್ತು ಅದೇ ಕಾಲಮಾನಕ್ಕೆ ಸೇರಿಸಬಹುದಾಗಿದೆ. ಆದರೆ ಇತ್ತೀಚೆಗೆ ದೇವಾಲಯದ ಅನೇಕ ಭಾಗಗಳನ್ನು ಬದಲಿಸಿ ನವೀಕರಿಸಲಾಗಿದೆ.

**ದಿಡಗೂರು** : ಈ ಊರಿನಲ್ಲಿ ಆಂಜನೇಯ, ವೀರಭದ್ರನ ಗುಡಿಗಳಿವೆ. ಇತ್ತೀಚೆಗೆ ಆಂಜನೇಯನ ಗುಡಿಯನ್ನು ನವೀಕರಿಸ ಲಾಗಿದೆ. ದಕ್ಷಿಣಾಭಿಮುಖವಾದ ಈ ಗುಡಿಯ ಗರ್ಭಗುಡಿಯ ಹೊರಭಾಗದ ಭಿತ್ತಿಯ ಮೇಲೆ, ಆನೆ, ಆಂಜನೇಯ, ಯಾಳಿ ಮುಂತಾದ ಉಬ್ಬುಶಿಲ್ಪಗಳನ್ನು ಬಿಡಿಸಲಾಗಿದೆ. ಇಲ್ಲಿರುವ ಶಾಸನದಲ್ಲಿ ಉಲ್ಲೇಖಿಸಿರುವಂತೆ ಕ್ರಿ.ಶ. ೧೩೫೮ರಲ್ಲಿ ಬೇಡರ ಕನ್ನೆನಾಯಕನು ಆಳುತ್ತಿರುವಾಗ ಚೆಲುವ ರಂಗಪ್ಪನಾಯಕ ತನ್ನ ಸೈನ್ಯದೊಂದಿಗೆ ಮೊದಲು ಬಂದಿಳಿದಿದ್ದು ದಿಡಗೂರಿನಲ್ಲಿ ಅತನನ್ನು ಸೋಲಿಸಿ ೧೫೦ ವರ್ಷಗಳ ಕಾಲ ರಾಜಧಾನಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಾನೆ.

ಮೇಲೆ ತಿಳಿಸಿದ ಆಂಜನೇಯನ ಗುಡಿಯ ದಕ್ಷಿಣಕ್ಕೆ ವೀರಭದ್ರನ ಗುಡಿಯಿದೆ. ಈ ಗುಡಿ ಬಹಳಷ್ಟು ಶಿಥಿಲವಾಗಿದೆ. ಪ್ರಸ್ತುತ ಇದು ಗರ್ಭಗುಡಿ ಮತ್ತು ಅಂತರಾಳವನ್ನು ಹೊಂದಿದೆ. ಮಿಕ್ಕ ಭಾಗ ನಾಶವಾಗಿದೆ. ಗರ್ಭಗುಡಿಯಲ್ಲಿ ವೀರಭದ್ರನ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗುಡಿಯ ಬಾಗಿಲುವಾಡವು ಸರಳ ವಾಗಿದ್ದು, ಸ್ತಂಭ ಶಾಖೆಯನ್ನು ಹೊಂದಿದೆ. ಲಲಾಟದಲ್ಲಿ ಜಿನಬಿಂಬ ವಿದ್ದು ಕಾಲಾಂತರದಲ್ಲಿ ಅದನ್ನು ಒಡೆದು ತೆಗೆದಿರುವುದನ್ನು ಗುರುತಿಸ ಬಹುದು. ಇದು ಮೂಲತಃ ಜೈನಬಸದಿಯಾಗಿದ್ದು ಕಾಲಾಂತರದಲ್ಲಿ ಬಹುಶಃ ವಿಜಯನಗರ ಕಾಲದ ಮಧ್ಯಭಾಗದಲ್ಲಿ ವೀರಭದ್ರನ ಗುಡಿಯಾಗಿ ಮಾರ್ಪಾಡಾಗಿರಬೇಕು ಎಂದು ತೋರುತ್ತದೆ. ಇದೇ ಗುಡಿಯ ಗರ್ಭಗೃಹದಲ್ಲಿ ಗಣಪತಿ, ಸೂರ್ಯನ ಶಿಲ್ಪಗಳಿವೆ. ಈ ಗುಡಿಯು ಬಹುಶಃ ೧೨-೧೩ನೇ ಶತಮಾನಕ್ಕೆ ಸೇರಿದ್ದಾಗಿದೆ ಎಂದು ಗುರುತಿಸಬಹುದು.



**ಕುಂಕುವ :** ಈ ಗ್ರಾಮದ ಪ್ರಮುಖ ದೇವಾಲಯ ವೀರಭದ್ರ ದೇವಾಲಯ. ಇದು ಸಾಕಷ್ಟು ವಿಸ್ತಾರವಾಗಿದೆ. ತುಂಗಭದ್ರಾನದಿಯ ದಂಡೆಯಲ್ಲಿದೆ. ಗರ್ಭಗುಡಿಯಲ್ಲಿರುವ ವೀರಭದ್ರನ ಶಿಲ್ಪ ಸುಮಾರು ಆರು ಅಡಿಯಿದೆ. ಆಕರ್ಷಕ ಭಂಗಿಯಲ್ಲಿ ಕೆತ್ತಲಾಗಿದೆ. ನವರಂಗದ ಬಾಗಿಲುವಾಡದಲ್ಲಿ **ಶರಭ ಭೇರುಂಡನ** ಉಬ್ಬು ಶಿಲ್ಪವನ್ನು ದುಂಡು ಶಿಲ್ಪದ ರೀತಿಯಲ್ಲಿ ಎದ್ದು ಕಾಣುವಂತೆ ಬಿಡಿಸಲಾಗಿದೆ. ಶಿಲ್ಪವನ್ನು ಬಿಡಿಸಿರುವ ರೀತಿ ಮನಸೆಳೆಯುತ್ತದೆ. ವೀರಭದ್ರನ ರೀತಿಯ ಆಯುಧಗಳನ್ನು ಹೊಂದಿರುವುದನ್ನು ಕಾಣಬಹುದು. ಈ ಶಿಲ್ಪದ ಎರಡೂ ಬದಿಯಲ್ಲಿ ದಕ್ಷಬ್ರಹ್ಮ, ನರಸಿಂಹ, ಗರುಡ, ಆಂಜನೇಯ ಮುಂತಾದ ಶಿಲ್ಪಗಳನ್ನು ಬಿಡಿಸಲಾಗಿದೆ. ಈ ಶಿಲ್ಪವನ್ನು ಶರಭ ಭೇರುಂಡ ಎಂದು ಗುರುತಿಸಲಾಗಿದೆ. ಈ ದೇವಾಲಯವನ್ನು ೧೩-೧೪ನೇ ಶತಮಾನಕ್ಕೆ ಸೇರಿಸಬಹುದಾಗಿದೆ. ಈ ಊರಿನ ಕೆಲವು ಶಾಸನಗಳು ಗಮನ ಸೆಳೆಯುತ್ತವೆ. ದೇವಾಲಯದ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದಾಗ ಕುಂಕೋವದ ವಕ್ಕಲು ಮಗ ಗಾಯದೇವಣ್ಣನ ಮಗ ರಾಮಗನ ಮೇಲೆ ಕಲ್ಲು ಬಿದ್ದು ಶಿವಾಧೀನನಾದ ಸಂಬಂಧ ಭೂಮಿದಾನ ನೀಡಿದ ಬಗ್ಗೆ ಉಲ್ಲೇಖವಿದೆ. ಆಯನೂರು ಹಾಲುಸಿದ್ದಪ್ಪ ಗೌಡರು ದುಂದುಭಿ ಸಂವತ್ಸರದ ಮಾರ್ಗಶಿರ ೧೦ರಂದು ಈ ದಾನ ನೀಡಿದ ಬಗ್ಗೆ ತಿಳಿಸುತ್ತದೆ. ಈ ದೇವಾಲಯದ ಅಮೃತಪಡಿಗಾಗಿ ಭೂದಾನ ನೀಡಿದ ಬಗ್ಗೆ ಇನ್ನೊಂದು ಶಾಸನ ಉಲ್ಲೇಖಿಸುತ್ತದೆ. ಕ್ರಿ.ಶ. ೧೩೨೧ರಲ್ಲಿ ತ್ರಿಭುವನಮಲ್ಲರು ಆಳುತ್ತಿದ್ದಾಗ, ಚಟ್ನಳ್ಳಿಯ ಚೆನ್ನನಾಯಕರ ಕಲ್ಲಪ್ಪನವರು ಆಳುತ್ತಿದ್ದ ಸಂದರ್ಭದಲ್ಲಿ ಇವರ ಅಣ್ಣ ಬೈರಣ್ಣನವರು ಸ್ವರ್ಗಸ್ಥರಾದುದರಿಂದ ಈ ದಾನ ನೀಡಲಾಗಿದೆ.

ದೇವಾಲಯದ ಮುಂಭಾಗದಲ್ಲಿರುವ ಉಯ್ಯಾಲೆ, ಧ್ವಜ ಸ್ತಂಭ ಅದರ ಕೆಳಭಾಗದಲ್ಲಿ ಭಕ್ತರ ಶಿಲ್ಪಗಳನ್ನು ಪ್ರಮಾಣಬದ್ಧವಾಗಿ ಬಿಡಿಸಲಾಗಿದೆ. ಇವುಗಳಲ್ಲದೆ ಮಂಟಪದ ಭಿತ್ತಿಯ ಮೇಲೆ



ಪ್ರಸ್ತುತ ವೀರಭದ್ರನ ಗುಡಿಯ ಅಂತರಾಳದಲ್ಲಿ ಜಾಲಂಧ್ರ, ಬಾಗಿಲು ವಾಡದ ಎರಡೂ ಪಕ್ಕದಲ್ಲಿದೆ. ಈ ಗುಡಿಯ ಮುಂಭಾಗದಲ್ಲಿ ತೇರುಮನೆಯಿದೆ. ಇದರ ಮುಂಭಾಗದಲ್ಲಿ ಜೈನ ತೀರ್ಥಂಕರನ ವಿಗ್ರಹವಿದೆ. ಅದರ ಪೀಠದ ಮೇಲೆ ಶಾಸನವಿದೆ. ಬಾಲಚಂದ್ರ ದೇವರಿಗೆ ಹೆಗ್ಗಡೆ ಜಕ್ಕಯ್ಯನು ತನ್ನ ಮದುಮಗಳು ಜಕ್ಕವ್ವೆಯೆ...ದಿಡಗೂರಿನಲ್ಲಿ ಚೈತ್ಯ ದೇವಾಲಯುವನ್ನು ಸ್ಥಾಪಿಸಿ, ಪಾರ್ಶ್ವನಾಥ ದೇವರನ್ನು ಪ್ರತಿಷ್ಠಾಪಿಸಿ ದೇವರಿಗೆ, ಋಷಿಗಳಿಗೆ, ಭತ್ತ, ಎಳ್ಳು ನವಣೆ, ಅಡಿಕೆ ತೋಟವನ್ನು ದಾನ ನೀಡಿದನು ಎಂಬ ಉಲ್ಲೇಖವಿದೆ. ಮಾರಿ ಗೊಂಡನಹಳ್ಳಿಯ ವೀರಭದ್ರ ದೇವಾಲಯ ಮೊದಲು ಜೈನ ಬಸದಿಯಾಗಿದ್ದ ಬಗ್ಗೆ ಸಾಸಲು ಜೆ. ವಿಶ್ವನಾಥ ಮತ್ತು ಎಂ.ಜಿ. ಮಂಜುನಾಥ ಅವರು ಪ್ರಕಟಿಸಿರುವುದನ್ನು ಇಲ್ಲಿ ಸ್ಮರಿಸಬಹುದು.

ದಿಡಗೂರಿನ ಪ್ರಸ್ತುತ ವೀರಭದ್ರ ದೇವಾಲಯದ ಸನಿಹದಲ್ಲಿ ಈಶ್ವರನ ಗುಡಿಯಿದೆ. ಎತ್ತರವಾದ ವೇದಿಕೆಯ ಮೇಲೆ ಗುಡಿ ಕಟ್ಟಲಾಗಿದೆ. ಗರ್ಭಗುಡಿ ಅಂತರಾಳವನ್ನು ಹೊಂದಿದೆ. ಪೂರ್ವಾಭಿಮುಖದ ಈ ದೇವಾಲಯದ ಅಂತರಾಳದಲ್ಲಿ ಸಪ್ತಮಾತೃಕೆಯರ ಶಿಲ್ಪವಿದೆ. ಈ ದೇವಾಲಯವು ೧೨-೧೩ನೇ ಶತಮಾನಕ್ಕೆ ಸೇರಿದ್ದಾಗಿದೆ.

ನಾಗಶಿಲ್ಪಗಳು, ಆನೆ ಮುಂತಾದ ಉಬ್ಬುಶಿಲ್ಪಗಳನ್ನು ಬಿಡಿಸಲಾಗಿದೆ. ಸಾಕಷ್ಟು ದೊಡ್ಡದಾದ ಈ ದೇವಾಲಯ ಇಂದು ಸಹ ಜನರ ಶ್ರದ್ಧಾಕೇಂದ್ರವಾಗಿ ಮುಂದುವರೆದಿದೆ.

**ಕುಂದೂರು** : ಇಲ್ಲಿನ ಆಂಜನೇಯನ ಗುಡಿಯನ್ನು ಇತ್ತೀಚೆಗೆ ನವೀಕರಿಸಲಾಗಿದ್ದು ಸುಮಾರು ೫ ರಿಂದ ೬ ಅಡಿ ಎತ್ತರದ ಹನುಮನ ವಿಗ್ರಹವಿದೆ. ನವೀಕರಿಸುವುದಕ್ಕೂ ಮುಂಚೆ ಚಿಕ್ಕ ದೇವಾಲಯವಿದ್ದು ಇತ್ತೀಚೆಗೆ ಬೃಹತ್ ರಾಜಗೋಪುರವನ್ನು ಬಣ್ಣ ಬಣ್ಣದ ವಿಗ್ರಹಗಳಿಂದ ಅಲಂಕರಿಸಲಾಗಿದೆ. ಈ ಗುಡಿಯು ಗರ್ಭಗುಡಿ, ಮುಖಮಂಟಪವನ್ನು ಹೊಂದಿದೆ. ಗರ್ಭಗುಡಿಯಲ್ಲಿ ಪ್ರಾಚೀನವಾದ ಆಂಜನೇಯನ ವಿಗ್ರಹವಿದೆ. ಗರ್ಭಗುಡಿಯ ಶಿಖರ ಕದಂಬನಾಗರ ಶೈಲಿಯಲ್ಲಿದ್ದು ಕ್ರಿ.ಶ. ೧೧-೧೨ನೇ ಶತಮಾನಕ್ಕೆ ಸೇರಿದ್ದಾಗಿದೆ. ದೇವಾಲಯದ ಆವರಣದಲ್ಲಿ ಬನ್ನಿಮಹಾಂಕಾಳಿಯ ಗುಡಿಯಿದೆ. ಈ ಮೊದಲೆ ಪ್ರತಿಷ್ಠಾಪಿಸಿದ ಬನ್ನಿಮಹಾಂಕಾಳಿಯ ವಿಗ್ರಹ, ವಿಘ್ನೇಶ್ವರನ ವಿಗ್ರಹಗಳು ಇಲ್ಲಿವೆ. ಈ ಗುಡಿಯ ಎದುರು ಕಂಬದ ಮೇಲೆ ಮಂಗನ ಶಿಲ್ಪವಿದೆ. ಇದು ಅಪರೂಪದ ಶಿಲ್ಪವಾಗಿದೆ.

ಈ ಗುಡಿಯ ಹತ್ತಿರ ವೀರಗಲ್ಲು, ಹಾಗೆಯೆ ಮಾಸ್ತಿಕಲ್ಲುಗಳಿವೆ. ಮಾಸ್ತಿಕಲ್ಲನ್ನು ಆಕರ್ಷಣೀಯವಾಗಿ ಕೆತ್ತಲಾಗಿದೆ. ಇದು ದೇವಾಲಯದ ಹತ್ತಿರದ ಗುಡಿಸಲುಗಳ ಹತ್ತಿರದಲ್ಲಿದ್ದರೂ ಯಾರೂ ಗಮನಿಸದೆ ಮೂಲೆಗುಂಪಾಗಿದೆ.

ಐತಿಹಾಸಿಕವಾಗಿ ಈ ಸ್ಥಳ ಬಹು ಮುಖ್ಯವಾದುದು. ಬೆಳಗುತ್ತಿಯ ಸಿಂಧರ ಕಾಲದಲ್ಲಿ ಕುಂದೂರು ಸಾಕಷ್ಟು ಪ್ರಬಲವಾಗಿತ್ತು. ಸಿಂಧವಂಶದ ಹಿರಿಯ ಚಟ್ಟರಸ ಮತ್ತು ರಾಣಿ ದೊಬ್ಬರಸಿಯರ ಮಗ ಅಯ್ಯಣ ಜೋಗರಸ (ಕ್ರಿ.ಶ. ೧೦೬೦-೧೦೯೦) ಕಲ್ಯಾಣಿ ಚಾಲುಕ್ಯರ ಮಾಂಡಲಿಕನಾಗಿದ್ದ. ಈತನ ನಂತರ ಈಶ್ವರದೇವ, ಈತನ ಮಗ ಇಮ್ಮಡಿ ಈಶ್ವರದೇವ (ಕ್ರಿ.ಶ. ೧೧೫೫-೧೧೮೫) ಬೆಳಗುತ್ತಿಯ ಸಿಂಧವಂಶಿಕರಲ್ಲಿ ಅತ್ಯಂತ ಪ್ರಮುಖನಾಗಿದ್ದ. ಇವನು ಕುಂದೂರು-೭೦ರ ಪ್ರದೇಶವನ್ನು ಸಮರ್ಥವಾಗಿ ಆಳಿದ್ದ ಹಾಗೂ ಬಿಜ್ಜಳನಿಗೆ ಸಹಾಯಕನಾಗಿದ್ದ. ಧಾರವಾಡ ಜಿಲ್ಲೆಯ ಹಳ್ಳೂರನ್ನು ರಾಜಧಾನಿ ಮಾಡಿಕೊಂಡಿದ್ದ ಹೀಗೆ ಕುಂದೂರು ಪ್ರಮುಖವಾದ ಸ್ಥಳವಾಗಿತ್ತು.

**ಅರಕೆರೆ** : ಅರಕೆರೆ ಹೊನ್ನಾಳಿ ತಾಲ್ಲೂಕಿನ ಉತ್ತರದ ತುದಿಯಲ್ಲಿದೆ. ಇಲ್ಲಿಯ ನಾಗೇಶ್ವರ ದೇವಾಲಯ, ಗರ್ಭಗುಡಿ, ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ಗರ್ಭಗುಡಿಯಲ್ಲಿ ನಾಗೇಶ್ವರನನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯದ ಆವರಣದಲ್ಲಿ ಹಲವು ಶಾಸನಗಳಿವೆ. ಕ್ರಿ.ಶ. ೧೦೪೭ರಲ್ಲಿ ಅರಕೆರೆಯ ಊರೊಡೆಯ ಕೇಸಿಮಯ್ಯನು ನಾಗೇಶ್ವರ ದೇವರಿಗೆ ಭೂಮಿದಾನ ಮಾಡಿದ ಬಗ್ಗೆ ಉಲ್ಲೇಖವಿದೆ. ಚಾಳುಕ್ಯ ವಂಶದ ಶ್ರೀಮತ್ ತ್ರಿಭುವನಮಲ್ಲ ರಾಜ್ಯವಾಳುತ್ತಿದ್ದಾಗ ನನ್ನಿ ತ್ರೈಲೋಕ್ಯಮಲ್ಲ ಪಲ್ಲವ, ಕೋಗಳಿ ಐನೂರನ್ನು ಆಳುತ್ತಿದ್ದ ಬಗ್ಗೆ ತಿಳಿಸಲಾಗಿದೆ.

ಇನ್ನೊಂದು ಶಾಸನ ಕ್ರಿ.ಶ. ೧೨೦೩ರಲ್ಲಿ ನಾಗೇಶ್ವರ ದೇವರ ನೈವೇದ್ಯಕ್ಕೆ ನಂದಾದೇವಿಗೆಗೆ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಭೂಮಿಯನ್ನು ದಾನ ಮಾಡಲಾಗಿದೆ. ಈ ದಾನ ನೀಡಿದವ ಮಲ್ಲದೇವನ ದೊಳ್ಳುವೆತ್ತ ಮಹಾಪ್ರಭು ನಾಗರಸ. ಈ ಶಾಸನದ ಸನಿಹದಲ್ಲಿ (ಉಬ್ಬುಶಿಲ್ಪಗಳನ್ನು ಹೊಂದಿದ) ಐದು ವೀರಗಲ್ಲುಗಳಿವೆ. ಅವುಗಳಲ್ಲಿ ಮೂರು ನೆತ್ತರ ಕೊಡುಗೆಗಳಾಗಿವೆ. ಸಾಮಾನ್ಯವಾಗಿ ಹಳ್ಳಿಗಳಲ್ಲಿ ತುರುಮಂದೆಯನ್ನು ರಕ್ಷಿಸಲು ಹೋರಾಡುವ ವೀರರಿದ್ದರು. ಕಾದಾಡಿ ಮಡಿದಾಗ ನೆತ್ತರ ಕೊಡುಗೆ ಎಂದು ಭೂದತ್ತಿ ನೀಡಲಾಗುತಿತ್ತು. ಮೊದಲನೆಯ ವೀರಗಲ್ಲು ಮಾದೇನಾಯಕನು ಸತ್ತಾಗ ನೆತ್ತರ ಕೊಡಿಗೆ ಕೊಟ್ಟ ಬಗ್ಗೆ ತಿಳಿಸುತ್ತದೆ. ಎರಡನೆಯದು ಹೊಯ್ಸಳ ವೀರಬಲ್ಲಾಳನ ಕಾಲದಲ್ಲಿ ಮಲ್ಲನಾಯಕನು ಕಾದಿ ಸಾಯಲು ನೆತ್ತರ ಕೊಡಿಗೆ ಭೂದತ್ತಿ ಕೊಟ್ಟ ಬಗ್ಗೆ ತಿಳಿಸಿದೆ. ಮೂರನೆಯ ವೀರಗಲ್ಲಿನ ಕೆಲವು ಅಕ್ಷರಗಳು ಸವೆದಿದ್ದು ಗುರುತಿಸುವುದು ಕಷ್ಟಕರವಾಗಿದೆ. ಈ ವೀರಗಲ್ಲು ಬೊಮ್ಮೆನಾಯಕ ಹಾಗೂ ಮಾದೇನಾಯಕರಿಗೆ ಸಂಬಂಧಿಸಿದ ವೀರಗಲ್ಲಾಗಿದೆ.

ಹೊನ್ನಾಳಿ ತಾಲ್ಲೂಕಿನ ಮಾಸಡಿ,ಚಿಕ್ಕಯರೇಹಳ್ಳಿ ಹೀಗೆ ಅನೇಕ ಗ್ರಾಮಗಳು ಸಾಕಷ್ಟು ಹೆಸರುವಾಸಿಯಾಗಿಲ್ಲದಿದ್ದರೂ ಅನೇಕ ಚಾರಿತ್ರಿಕ ಮಹತ್ವದ ಶಿಲ್ಪಗಳನ್ನು ಹೊಂದಿವೆ. ಆದರೆ ಬಳ್ಳೀಶ್ವರ, ಬೆಳಗುತ್ತಿ, ತೀರ್ಥರಾಮೇಶ್ವರ ಮುಂತಾದ ಸ್ಥಳಗಳು ವಾಸ್ತುಶಿಲ್ಪ ದೃಷ್ಟಿಯಿಂದ ವಿಶಿಷ್ಟ ಸ್ಥಾನವನ್ನು ಹೊಂದಿವೆ.





ಇತಿಹಾಸ, ಶಿಲ್ಪಶರೀರದೊಳಗಾಗಿಂದು ಅಂತರ್ಯಾಮಿಯಾಗಿರೆ
ಆಘಾತಗಳ ನುಂಗಿ ಅವಶೇಷದೊಳಗೂ ಎದ್ದುಕಾಣುವ ತೆರೆ
ಗುಡಿಯ ಒಳಗೆ ಗುಡಿಯ ಬಾಗಿಲ ನೆತ್ತಿಗೆ ಇರುವ ದೇವರೆ ಬೇರೆ ಎಂದರೆ
ಭಾವದಾನುಬುಗೆಯು ಮತಾಂತರವಾಗಿರೆ ಎಲ್ಲ ಕಡೆಯು ಇದೆ ಬರೆ



ಡಾ. ಗಣಪತಿಗೌಡ. ಎಸ್.*

# ಉತ್ತರಕನ್ನಡ ಜಿಲ್ಲೆಯಲ್ಲಿ ಬೌದ್ಧ ಧರ್ಮ

*ಉತ್ತರ ಕನ್ನಡ ಜಿಲ್ಲೆಯಲ್ಲಿ ಬೌದ್ಧ ಧರ್ಮದ ಅವಶೇಷಗಳಿಗೆ ಕೊರತೆ ಇಲ್ಲ. ಅಶೋಕನಿಂದ ಧರ್ಮ ಪ್ರಚಾರಕ್ಕೆ ಕಳುಹಿಸಲ್ಪಟ್ಟವರಲ್ಲಿ ಥೇರರಕ್ಷಿತನು ಕಾರ್ತಿಕದಲ್ಲಿ ಬನವಾಸಿಗೆ ಬಂದು ಅನೇಕರನ್ನು ಬೌದ್ಧಾನುಯಾಯಿಗಳನ್ನಾಗಿ ಮಾಡಿದ. ಬೌದ್ಧ ಧರ್ಮವು ಇಲ್ಲಿ ನೆಲೆಯೂರುವಂತೆ ಮಾಡಿದ. ಬನವಾಸಿಯಲ್ಲಿ ಕ್ರಿ.ಶ. ೨ನೇ ಶತಮಾನದ ಬ್ರಾಹ್ಮಿಲಿಪಿಯ ಬೌದ್ಧ ಸಂಬಂಧೀ ಶಾಸನ, ಬನವಾಸಿ ಮಧುಕೇಶ್ವರ ದೇಗುಲದ ನಾಗಪ್ರತಿಮಾ ಶಾಸನ, ಕದಂಬ ರವಿವರ್ಮನ ಕಾಲದ ಕ್ರಿ.ಶ. ೪೮೫ರ ಹೊನ್ನಾವರ ಶಾಸನದ ಬೌದ್ಧೋಲ್ಲೇಖಗಳು, ತಾರಾಭಗವತಿ ಮೂರ್ತಿ ಇತ್ಯಾದಿಗಳಿಂದ ಬೌದ್ಧ ಧರ್ಮದ ಇಲ್ಲಿನ ಅಸ್ತಿತ್ವ ಕಾಣುತ್ತದೆ; ೧೬ನೇ ಶತಮಾನದವರೆಗೂ ಇಲ್ಲಿ ಬಾಳಿ ಕೊನೆಗೊಂಡಿತು.*

ಉತ್ತರಕನ್ನಡ ಜಿಲ್ಲೆಯ ಉದ್ದಗಲಕ್ಕೂ ಸಂಚರಿಸಿದಂತೆ ಮೂಲೆ ಮೂಲೆಗೂ ಸಿಗುವ ಹಾಳಾದ ಗುಡಿ, ಶಿಲಾಶಾಸನ, ವೀರಗಲ್ಲು, ಅಧೋಗತಿಯಲ್ಲಿರುವ ಕೋಟೆ ಕೊತ್ತಲಗಳು, ಹಿಂದೂ, ಬೌದ್ಧ ಮತ್ತು ಜೈನ ಮೂರ್ತಿ ವಾಸ್ತುಶಿಲ್ಪಗಳು ಇಲ್ಲಿನ ಗತವೈಭವಕ್ಕೆ ಜೀವಂತ ಸಾಕ್ಷಿಗಳಾಗಿವೆ. ಇಲ್ಲಿ ದೊರೆಯುವ ಬೌದ್ಧಾವಶೇಷಗಳಿಂದ ಜಿಲ್ಲೆಯಲ್ಲಿನ ಬೌದ್ಧ ಧರ್ಮದ ಬಗ್ಗೆ ಬೆಳಕು ಚೆಲ್ಲುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ.

ಈ ಜಿಲ್ಲೆಯಲ್ಲಿನ ಬೌದ್ಧಧರ್ಮದ ಪ್ರಾಚೀನತೆಯನ್ನು ಮೌರ್ಯ ಚಕ್ರವರ್ತಿ ಅಶೋಕನ ಕಾಲಕ್ಕೆ ಕೊಂಡೊಯ್ಯಬಹುದು. ಈ ವಿಚಾರದ ಕುರಿತು ಬೌದ್ಧ ಗ್ರಂಥಗಳಾದ ದೀಪವಂಶ ಮತ್ತು ಮಹಾವಂಶ ಮಾಹಿತಿ ನೀಡುತ್ತವೆ. ಅಶೋಕನ ಕಾಲದಲ್ಲಿ ಮೂರನೇ ಬೌದ್ಧ ಸಮ್ಮೇಳನವು ಪಾಟಲಿಪುತ್ರದಲ್ಲಿ ಥೇರಮೊಗ್ಗಲಿಪುತ್ರನ ನೇತೃತ್ವದಲ್ಲಿ ನಡೆಯಿತು. ಈ ಸಮ್ಮೇಳನದ ನಂತರ ಬೌದ್ಧಧರ್ಮವನ್ನು ನೆರೆಯ ದೇಶಗಳಲ್ಲಿ ಪ್ರಸಾರ ಮಾಡುವುದಕ್ಕಾಗಿ ಅಶೋಕನು ಬೌದ್ಧಭಿಕ್ಷುಗಳನ್ನು ದೇಶದ ನಾನಾ ಭಾಗಗಳಿಗೆ ಕಳುಹಿಸಿಕೊಟ್ಟನು. ಅವರಲ್ಲಿ ಥೇರ ಮಹಾದೇವ ಮತ್ತು ಥೇರ ರಕ್ಷಿತ (ರಕ್ಷಿತ)ರನ್ನು ಬೌದ್ಧ ಧರ್ಮಪ್ರಸಾರಕ್ಕಾಗಿ ಮಹಿಷಮಂಡಲ ಮತ್ತು ವನವಾಸಿಗೆ ಕಳುಹಿಸಲಾಯಿತು. ಆ ಕಾಲದಲ್ಲಿ ಇಂದಿನ ಬನವಾಸಿ, 'ವನವಾಸಿ' ಎಂದು ಪ್ರಸಿದ್ಧಿ ಪಡೆದಿತ್ತು. ಕಾರ್ತಿಕ ಮಾಸದಲ್ಲಿ ರಕ್ಷಿತ ವನವಾಸಿಗೆ ಬಂದು ಅನೇಕ ಜನರನ್ನು ಬೌದ್ಧ ಧರ್ಮಕ್ಕೆ ಮತಾಂತರಗೊಳಿಸಿ ಇಲ್ಲಿ ಬೌದ್ಧ ಧರ್ಮ ಭದ್ರವಾಗಿ ನೆಲೆಯೂರುವಂತೆ ಮಾಡಿದನೆಂದು 'ಮಹಾವಂಶ' ಸಾಬೀತು ಪಡಿಸುತ್ತದೆ.[1]

ಧರ್ಮಪ್ರಚಾರದಲ್ಲಿ ನಿರತರಾಗಿದ್ದ ಭಿಕ್ಷುಗಳು ತಮ್ಮ ಧರ್ಮಾನುಯಾಯಿಗಳನ್ನು ಹೆಚ್ಚಿಸಿಕೊಳ್ಳುವುದರಲ್ಲಿ ಕಾರ್ಯನಿರತರಾಗಿದ್ದರೆನ್ನುವುದಕ್ಕೆ ಕೆಲವು ಉದಾಹರಣೆಗಳನ್ನು ನೀಡಬಹುದು. ಇಕ್ಷ್ವಾಕು ವಂಶದ ವೀರಪುರುಷದತ್ತನ ಆಳ್ವಿಕೆಗೆ ಸೇರಿದ ಸು.ಕ್ರಿ.ಶ. ೨೭೦ರ ಕಾಲಮಾನದ ನಾಗಾರ್ಜುನಕೊಂಡದ ಶಾಸನದಲ್ಲಿ ಬೌದ್ಧಯತಿಯೋರ್ವ ವನವಾಸಿಯನ್ನೊಳಗೊಂಡಂತೆ ಹಲವು ದೇಶಗಳಲ್ಲಿನ ಜನರನ್ನು ಮತಾಂತರಗೊಳಿಸಿದನೆಂದರೆ[2], ಇಲ್ಲಿಯ ಇನ್ನೊಂದು ಚಿಕ್ಕಶಾಸನದ ಪ್ರಕಾರ (Foot print, inscription, ಸು.ಕ್ರಿ.ಶ. ೩ನೇ ಶತಮಾನದ ಪೂರ್ವಾರ್ಧಕ್ಕೆ ಸೇರಿದ್ದು) ವಿಭಜ್ಜವಾದ ಶಾಖೆಗೆ ಸೇರಿದ ಭಿಕ್ಷುವೊಬ್ಬ ವಿಜಯಪುರಿಯಲ್ಲಿ ನೆಲೆಸಿದ್ದು, ವನವಾಸವನ್ನೊಳಗೊಂಡಂತೆ ಹಲವರನ್ನು ಮತಾಂತರಗೊಳಿಸಿದನೆಂದಿದೆ.[3]

ಸಿಂಹಳದ ಚಕ್ರವರ್ತಿ ದುತ್ಥಗಾಮಿನಿ ಕ್ರಿಸ್ತಶಕದ ಆದಿಭಾಗದಲ್ಲಿ ಕಟ್ಟಿಸಿದ ಮಹಾಸ್ತೂಪದ ಆರಂಭೋತ್ಸವಕ್ಕಾಗಿ ದೇಶದ ನಾನಾ

* ಉಪನ್ಯಾಸಕರು, ಮಂಗಳೂರು ವಿಶ್ವವಿದ್ಯಾನಿಲಯ ಕಾಲೇಜು, ಮಡಿಕೇರಿ - ೫೭೧ ೨೦೧.

ಭಾಗಗಳಿಂದ ಜನರನ್ನೂ ಈತ ಆಮಂತ್ರಿಸಿದ್ದನು. ಈತ ನೀಡಿದ ಆಮಂತ್ರಣವನ್ನು ಮನ್ನಿಸಿ ಬನವಾಸಿಯಿಂದ ಥೇರಚಂದ್ರಗುಪ್ತನ ನೇತೃತ್ವದಲ್ಲಿ ೮೦,೦೦೦ ಬೌದ್ಧ ಭಿಕ್ಷುಗಳು ಸಿಂಹಳಕ್ಕೆ ಹೋಗಿದ್ದರು.[೪] ಇಲ್ಲಿ ಹೇಳಿರುವ ಬೌದ್ಧ ಭಿಕ್ಷುಗಳ ಸಂಖ್ಯೆಗೆ ಸಂಬಂಧಿಸಿದಂತೆ ಭಿನ್ನಾಭಿಪ್ರಾಯಗಳಿದ್ದರೂ ಕ್ರಿ.ಪೂ. ಮೂರನೇ ಶತಮಾನದಿಂದಲೇ ಬನವಾಸಿ ಬೌದ್ಧ ಧರ್ಮದ ಕೇಂದ್ರವಾಗಿ ಬೆಳೆದು ಬಂದಿತ್ತು ಎನ್ನುವುದನ್ನು ತಳ್ಳಿಹಾಕುವಂತಿಲ್ಲ.

ಕ್ರಿ.ಶ. ಎರಡನೇ ಶತಮಾನದ ಉತ್ತರಾರ್ಧಕ್ಕೆ ಸೇರಬಹುದಾದ ಬ್ರಾಹ್ಮಿಲಿಪಿಯಲ್ಲಿ ಬರೆದ ಪ್ರಾಕ್ತನ ಭಾಷೆಯ ಎರಡು ಸಾಲಿನ ಶಾಸನ ಬನವಾಸಿಯಲ್ಲಿ ದೊರೆತ ಶಾಸನಗಳಲ್ಲಿಯೇ ಪ್ರಾಚೀನ ಶಾಸನ. ಇದು 'ಸಿದ್ಧಂ' ಎಂಬ ಸ್ವಸ್ತಿ ಪದದಿಂದ ಆರಂಭವಾಗುವುದು. ಶಾಸನದಲ್ಲಿ ರಾಜನಾದ ವಾಸಿಠಿಪುತ್ರ ಸಿವಸಿರಿ ಪುಳುವಾವಿಯ ಸ್ಮಾರಕ ಶಿಲೆ ಎಂದು ಹೇಳಿದೆ. ಶಾಸನದ ಒಂದು ಬದಿಯಲ್ಲಿ ಉಬ್ಬುಶಿಲ್ಪದ ಚೈತ್ಯವಿನ್ಯಾಸದ ಮಾದರಿಯಿರುವುದರಿಂದ ಇದು ಇಲ್ಲಿಯ ಬೌದ್ಧ ಧರ್ಮದ ಅಸ್ತಿತ್ವಕ್ಕೆ ದೊರಕುವ ಪ್ರಾಕ್ತನ ಆಧಾರ ಎನ್ನುವುದು ವಿದ್ವಾಂಸರ ಅಭಿಪ್ರಾಯ.

ಬನವಾಸಿಯ ಮಧುಕೇಶ್ವರ ದೇವಾಲಯದ ಪ್ರಾಕಾರದೊಳಗಿರುವ ನಾಗರ ಪ್ರತಿಮೆಯ ಮೇಲೆ ಕ್ರಿ.ಶ.ಸು. ೧೫೦ರ ಕಾಲಮಾನಕ್ಕೆ ಸೇರಿದ ಬ್ರಾಹ್ಮಿಲಿಪಿ ಮತ್ತು ಪ್ರಾಕೃತ ಭಾಷೆಯಲ್ಲಿ ಬರೆದ ಶಾಸನವೊಂದಿದೆ. ಇದರ ಪ್ರಕಾರ ಹಾರಿತೀಪುತ್ರ ವಿಣ್ಹಕಡ ಚುಟುಕುಲಾನಂದ ಶಾತಕರ್ಣಿಯ ಹನ್ನೆರಡನೇ ವರ್ಷದ ಒಂದು ಶುಭದಿನ ರಾಜನ ಮಗಳು, ಮಹಾಭೋಜನ ಹೆಂಡತಿಯಾದ ಶಿವಸ್ಕಂದ ನಾಗಶ್ರೀ ಎಂಬುವಳು ರಾಜಕುಮಾರನೊಂದಿಗೆ ನಾಗ, ತಟಾಕ, ವಿಹಾರಗಳನ್ನು ಅಮಾತ್ಯನಾದ ಸ್ಕಂದಸ್ವಾತಿ (ಖಡಸತಿ)ಯ ಮೇಲ್ವಿಚಾರಣೆಯಲ್ಲಿ ನಿರ್ಮಿಸಿ ದಾನ ಮಾಡಿದಳು. ನಾಗಶಿಲ್ಪವನ್ನು ಸಂಜಯಂತಿ (ಬನವಾಸಿ) ಆಚಾರ್ಯನಾಗಿದ್ದ ದಮೋರಕನ ಶಿಷ್ಯನಾದ ನಟಕ ನಿರ್ಮಿಸಿದನೆಂದಿದೆ.[೬]

ಬನವಾಸಿಯಲ್ಲಿ ಬೌದ್ಧ ಧರ್ಮದ ಮಹೀಶಾಸಕ ಶಾಖೆ ರಾಜಾಶ್ರಯ ಪಡೆದುಕೊಂಡಿತ್ತು. ನಾಗಾರ್ಜುನಕೊಂಡದಲ್ಲಿ ದೊರೆತ ಸು.ಕ್ರಿ.ಶ. ೨೫೧ರ ಕಾಲಮಾನಕ್ಕೆ ಸೇರಬಹುದಾದ ಶಾಸನದನ್ವಯ ಇಲ್ಲಿಯ ಇಕ್ಷ್ವಾಕು ಕುಲದ ಮಹಾರಾಜ ಎಹವಲ ಚಾಂತಮೂಲನ ಭಗಿನಿ ವೀರಪುರುಷದತ್ತನ ಮಗಳು ಮತ್ತು ಬನವಾಸಿಯ ರಾಜನ ಹೆಂಡತಿ ಮಹೀಶಾಸಕ ಆಚಾರ್ಯರುಗಳಿಗಾಗಿ ನಾಗಾರ್ಜುನ ಕೊಂಡದಲ್ಲಿ ಸ್ತಂಭ ಹಾಗೂ ವಿಹಾರಗಳನ್ನು ಕಟ್ಟಿಸಿದ ಉಲ್ಲೇಖವಿದೆ.[೭] ಆದರೆ ಬನವಾಸಿಯ ರಾಜನ ಹೆಸರನ್ನು ಶಾಸನ ಪ್ರಸ್ತಾಪಿಸುವುದಿಲ್ಲ. ಈ ಕಾಲದಲ್ಲಿ ಶಾತವಾಹನರು ಇಲ್ಲಿ ಆಳ್ವಿಕೆ ಮಾಡುತ್ತಿದ್ದುದರಿಂದ ಮಹೀಶಾಸಕ ಶಾಖೆಗೆ ಪ್ರೋತ್ಸಾಹ ನೀಡುತ್ತಿದ್ದವರು ಶಾತವಾಹನ ಅರಸರು ಎಂದು ಹೇಳಬಹುದಾಗಿದೆ.

ಮಹಾಭೋಜರ ಕಾಲದ ಶಾಸನವೊಂದರ ಪ್ರಕಾರ ಬನವಾಸಿಯ ಮಹಾರಾಜ ಮಹಾಭೋಜಿಯ ಮಗಳು, ಮಹಾರಠಿಯ ಹೆಂಡತಿಯೂ, ಖಂಡನಾಗಶತಕ (ಸ್ಕಂದನಾಗಶತಕ)ನ ತಾಯಿಯೂ ಮಹಾಭೋಜ ಅಹಿಜಧೇನಸೇನನ ತಂಗಿಯೂ ಆದ ನಾಗಮೂಲಾನಿಕೆಯು ಕಾವೇರಿಯಲ್ಲಿ ಬೌದ್ಧ ಭಿಕ್ಷುಗಳಿಗಾಗಿ ಒಂದು ಗುಹಾಲಯ ನಿರ್ಮಿಸಿದ ವಿಚಾರ ತಿಳಿದುಬರುತ್ತದೆ.[೮] ಶಾಸನ ತಿಳಿಸುವಂತೆ ಬನವಾಸಿಯ ಶ್ರೇಷ್ಠಿಯಾದ ಭೂತಪಾಲನು ಕಾರ್ಲೆಯಲ್ಲಿ ನಿರ್ಮಿಸಿದ ಚೈತ್ಯಾಲಯ ಜಂಬೂದ್ವೀಪದಲ್ಲಿಯೇ ಉತ್ತಮವಾಗಿದೆ. ಇದರಿಂದ ಆ ಕಾಲದಲ್ಲಿ ಕೇವಲ ರಾಜಪರಿವಾರದವರಷ್ಟೇ ಅಲ್ಲದೇ ಜನಸಾಮಾನ್ಯರು ಬೌದ್ಧಧರ್ಮಕ್ಕೆ ಬೆಂಬಲ ಹಾಗೂ ಪ್ರೋತ್ಸಾಹ ನೀಡುತ್ತಿದ್ದರೆನ್ನುವುದನ್ನು ತಿಳಿದುಕೊಳ್ಳಬಹುದು.

ಇತ್ತೀಚೆಗೆ ಬನವಾಸಿಯಲ್ಲಿ ಉತ್ಖನನವನ್ನು ಕೈಗೊಳ್ಳಲಾಗಿದೆ. ಇಲ್ಲಿ ಗಜಪೃಷ್ಠಾಕೃತಿಯ ಕಟ್ಟಡಗಳ ಅವಶೇಷಗಳು, ಇಟ್ಟಿಗೆಯ ಎರಡು ಚೈತ್ಯಾಲಯಗಳು, ಸುಟ್ಟ ಮಣ್ಣಿನ ಗೊಂಬೆಗಳು ಮತ್ತು ಮೃತ್ಪಾತ್ರೆಗಳ ಅವಶೇಷಗಳು ದೊರೆತಿವೆ. ಆದರೆ ಸ್ತೂಪದ ಅವಶೇಷಗಳು ಕಂಡುಬಂದಿಲ್ಲ.[೯] ಇದಕ್ಕೆ ಪೂರಕವಾಗಿ ಮಧುಕೇಶ್ವರ ದೇವಾಲಯದ ಬಳಿಯಲ್ಲಿಯೇ ಮೈತ್ರೇಯ ಬುದ್ಧನ ಒಂದು ವಿಗ್ರಹ ದೊರಕಿದೆ. ಇದು ಲಂಬೋಧಕವಾಗಿದ್ದು, ನಿರಲಂಕೃತವಾಗಿದೆ. ಎಡಗೈಯಲ್ಲಿ ಕಲಶವಿದ್ದರೆ, ಬಲಗೈ, ಧರ್ಮಚಕ್ರ ಮುದ್ರೆಯಲ್ಲಿದೆ. ಇದರಿಂದಾಗಿ ಕ್ರಿ.ಶ. ಆರಂಭದ ಹೊತ್ತಿಗೆ ಬನವಾಸಿಯ ಪರಿಸರದಲ್ಲಿ ಬೌದ್ಧಧರ್ಮ ಉಚ್ಛ್ರಾಯ ಸ್ಥಿತಿಯಲ್ಲಿತ್ತೆಂಬುದು ಡಾ. ಅ. ಸುಂದರರವರ ಅಭಿಪ್ರಾಯ.

ಹೊನ್ನಾವರ ತಾಲೂಕಿನ ಹೈಗುಂದದಲ್ಲಿ ಕುಬ್ಜಯಕ್ಷನ ಎರಡು ಶಿಲ್ಪಗಳು ದೊರೆತಿವೆ.[೧೧] ಒಂದು ಶಿಲ್ಪ ಸುಮಾರು ಆರು ಅಡಿ ಎತ್ತರ ಹೊಂದಿದ್ದು ಬಲಗೈ ಮುರಿದಿದೆ. ಎಡಗೈಯನ್ನು ಸೊಂಟದ ಮೇಲಿಡಲಾಗಿದೆ. ಕುಬ್ಜನಂತೆ ಕಾಣುವ ಈ ಶಿಲ್ಪದ ದೊಡ್ಡ ಪ್ರಮಾಣ ಹೊಟ್ಟೆ, ಕಂಠಿಹಾರ, ಅಗಲವಾದ ಮುಖ, ದಪ್ಪನೆಯ ತುಟಿ ಮೊದಲಾದವು ಮೂರ್ತಿಯ ಸೌಂದರ್ಯವನ್ನು ಹೆಚ್ಚಿಸಿದೆ. ಕಾರವಾರ ತಾಲೂಕಿನ ಬಬ್ರುವಾಡದಲ್ಲಿ ದೊರೆತ ಬುದ್ಧನ ಮೂರ್ತಿಯೊಂದು ಯೋಗಮುದ್ರೆಯಲ್ಲಿದೆ. ವಿಶಾಲವಾದ ಎದೆ, ದಷ್ಟಪುಷ್ಟವಾದ ಬಾಹುಗಳು, ಅರ್ಧನಿಮೀಲಿತ ನೇತ್ರ, ನೀಳ ನಾಸಿಕ, ಗುಂಗುರು-ಗುಂಗುರು ತಲೆಕೂದಲು ಮೂರ್ತಿಯ ವೈಶಿಷ್ಟ್ಯಗಳು. ಇವುಗಳ ಜೊತೆಗೆ ಬನವಾಸಿಯಲ್ಲಿ ದೊರೆತ ಯಕ್ಷಿಯ ಮೂರ್ತಿಯೊಂದು ಸುಮಾರು ಕ್ರಿ.ಶ. ಎರಡು-ಮೂರನೇ ಶತಮಾನಕ್ಕೆ ಸೇರಿರುವುದರಿಂದ ಈ ಶತಮಾನದಲ್ಲಿನ ಬೌದ್ಧಧರ್ಮದ ಖ್ಯಾತಿಯನ್ನು ಅರಿಯಬಹುದಾಗಿದೆ.[೧೨]

ಗೋಕರ್ಣ ಸಮೀಪದ ತೊರ್ಕೆಯಲ್ಲಿ ಬೌದ್ಧ ಗುಹೆಗಳು ಇದ್ದುದರ ಬಗ್ಗೆ ಕೆ.ಜಿ. ಕುಂದಣಗಾರರು ಗಮನ ಸೆಳೆದರು.[೧೩] ಇವರ ಪ್ರಕಾರ ಪ್ರಾಚೀನ ಕಾಲದ 'ತಗರ' (ಮುಖ್ಯನಗರ) ಈಗಿನ ತೊರ್ಕೆ. ವಿದ್ವಾಂಸರು ಮುಂದುವರಿದು ಹೇಳುತ್ತಾ ಕೊಂಕಣದ ಶಿಲಾಹಾರರಿಗೆ 'ತಗರಪುರವರಾಧೀಶ್ವರ' ಎಂಬ ಬಿರುದು ಇದ್ದು

ಅವರು ತಮ್ಮನ್ನು ಜೀಮೂತವಾಹನನ ವಂಶದವರೆಂದು ಹೇಳಿಕೊಳ್ಳುತ್ತಾರೆ. ಜೀಮೂತವಾಹನನ ಕಥೆಯಲ್ಲಿ ಹೇಳಿರುವ ತಾರ್ಕ್ಯಪುರ 'ತಗರ' ಆಗಿರಬೇಕೆಂಬುದು ಅವರ ಅನಿಸಿಕೆ.

ಚುಟುಕುಲಾನಂದ ಚಕ್ರವರ್ತಿ ಶಿವಾಲನಂದನ ನಾಣ್ಯದ ಒಂದು ಮಗ್ಗುಲಲ್ಲಿ ಕಲ್ಲುಗುಡ್ಡೆ ಮತ್ತು ಇನ್ನೊಂದು ಮಗ್ಗುಲಲ್ಲಿ ಬೋಧಿವೃಕ್ಷದ ಚಿತ್ರಗಳಿವೆ. ಇವು ಖಚಿತವಾದ ಬೌದ್ಧಧರ್ಮದ ಸಂಕೇತಗಳು ಎನ್ನುವುದು ಡಾ. ರಘುನಾಥ ಭಟ್ಟರ ಅನಿಸಿಕೆ.[೧೪] ಆದುದರಿಂದ ಚುಟುಕುಲಾನಂದರ ಕಾಲದಲ್ಲಿ ಬೌದ್ಧಧರ್ಮ ರಾಜಾಶ್ರಯ ಪಡೆದ ಧರ್ಮವಾಗಿತ್ತೆನ್ನಬಹುದು.

ಬನವಾಸಿಯ ಸಮೀಪದ ಕಾಡಗೋಡು ಎಂಬಲ್ಲಿ ೧೯೭೧ರಲ್ಲಿ ಉತ್ಖನನವನ್ನು ನಡೆಸಲಾಗಿದೆ. ಈ ಉತ್ಖನನದಲ್ಲಿ ಸ್ತೂಪದ ಅವಶೇಷಗಳನ್ನು ಪತ್ತೆಹಚ್ಚಲಾಗಿದೆ. ಇಲ್ಲಿ ದೊರೆತ ಇಟ್ಟಿಗೆಯ ಆಧಾರಗಳಿಂದ ಇದರ ಕಾಲಮಾನವನ್ನು ಕ್ರಿ.ಶ. ಸು. ಎರಡು-ಮೂರನೇ ಶತಮಾನಕ್ಕೆ ಸೇರಿಸಲಾಗಿದೆ.[೧೫]

ಕದಂಬರ ಕಾಲದಲ್ಲಿಯೂ ಬೌದ್ಧಧರ್ಮ ಜಿಲ್ಲೆಯಲ್ಲಿ ತನ್ನ ಖ್ಯಾತಿಯನ್ನು ಮುಂದುವರಿಸಿಕೊಂಡು ಬಂದಿತ್ತು. ಕದಂಬ ಚಕ್ರವರ್ತಿ ರವಿವರ್ಮನ ಕಾಲದ ಕ್ರಿ.ಶ. ೪೮೫ರ ಹೊನ್ನಾವರದ ಕೇಕಯ ಚಿತ್ರಸೇನ ಮಹಾಕೆಲ್ಲನ ತಾಮ್ರ ಶಾಸನವು "ಸಿದ್ಧಂ ಜಯತ್ಸಮಿತ್ ಗುಣಭದ್ರ್ ಬುದ್ಧಸ್ಸತ್ವ ಸಮಾಶ್ರಯಃ ಶುದ್ಧೋದನ ಕುಲೋದ್ಭೂತ ಪದ್ಮಪತ್ರ ನಿಭೆಕ್ಷಣಃ ಎಂದು ಪ್ರಾರಂಭವಾಗುತ್ತದೆ. ಕದಂಬರಾಜ ರವಿವರ್ಮನು ಆಳುತ್ತಿದ್ದಾಗ ಆತನ ಆಶ್ರಿತನಾದ ಕೇಕಯ ವಂಶೀಯ ಚಿತ್ರಸೇನನು ಅಂಬುದ್ವೀಪ (ಈಗಿನ ಅಂಜದೀವ್) ಎಂಬಲ್ಲಿ ಕಣಸಪುಕೊಳ್ಳಿಯ ಹೊಲವನ್ನು ಹಾಗೂ ನಾಪಿತಹಳ್ಳಿಯ ತೋಟವನ್ನು ಆಶ್ವಯುಜ ಪೂರ್ಣಿಮೆಯಂದು ಆರ್ಯ ಸಂಘಕ್ಕೆ ದಾನ ನೀಡಿರುವ ವಿಷಯ ತಿಳಿದುಬರುತ್ತದೆ.[೧೬] ಈ ಆರ್ಯ ಸಂಘದ ಸದಸ್ಯರು ಬೌದ್ಧ ಧರ್ಮದ ಅಪರಮಹಾವನಶೈಲಿಯ ಶಾಖೆಯೊಂದಿಗೆ ಬೆರೆತಿರುವ ವಿಷಯವು ತಿಳಿದು ಬರುತ್ತದೆ. ನಾಗಾರ್ಜುನಕೊಂಡದಲ್ಲಿನ ಒಂದು ಶಾಸನದಲ್ಲಿಯೂ ಆರ್ಯ ಸಂಘಕ್ಕೆ ಸೇರಿದ್ದ ಬೌದ್ಧ ಭಿಕ್ಷು ಅಪರಮಹಾವನ ಶೈಲಿಯ ಶಾಖೆಗೆ ಸೇರಿದ ಕಟ್ಟಡವೊಂದನ್ನು ನಿರ್ಮಿಸಿದ ಉಲ್ಲೇಖವಿದೆ. ಮಹಾ ಸಾಂಘಿಕರಲ್ಲಿ ಅಪರಮಹಾವನ ಶೈಲಿಯು ಒಂದು ಶಾಖೆ ಎಂದು ಹೇಳಲಾಗಿದೆ.[೧೭]

ಕಾರವಾರ ಸಮೀಪದ ದೀಪಕ ನಾಡಿನ ಸುಂದರಿಕಾ ಎಂಬ ಹೆಸರಿನ ಗ್ರಾಮವನ್ನು ವಿಹಾರ ಮತ್ತು ಸಂಘಗಳಿಗೆ ದಾನ ನೀಡಿದ ವಿವರಗಳನ್ನು ಅಂಕೋಲಾ ತಾಲೂಕಿನ ಹಿರೇಗುತ್ತಿಯ ಭೋಜ ಅಶಂಕಿತವರ್ಮನ ಶಾಸನ ತಿಳಿಸುತ್ತಿದೆ.[೧೮] ಕಾರವಾರದ ಬಬ್ರುವಾಡ ದಲ್ಲಿರುವ ಕುಳಿತ ಬುದ್ಧನ ವಿಗ್ರಹ ಸುಮಾರು ಇದೇ ಶತಮಾನಕ್ಕೆ ಸೇರಿದ್ದಾಗಿದೆ.[೧೯]

ಕದಂಬರ ನಂತರ ಬೌದ್ಧಧರ್ಮ ಈ ಭಾಗದಲ್ಲಿ ಹೆಚ್ಚು ಉಚ್ಛ್ರಾಯ ಸ್ಥಿತಿಯಲ್ಲಿದ್ದಂತೆ ಕಂಡುಬರುವುದಿಲ್ಲ. ಅಂದಮಾತ್ರಕ್ಕೆ ತನ್ನ ಅಸ್ತಿತ್ವವನ್ನೇ ಕಳೆದುಕೊಂಡಿತ್ತು ಎನ್ನುವ ಹಾಗಿಲ್ಲ. ಕ್ರಿ.ಶ. ಆರನೇ ಶತಮಾನದ ಹೊತ್ತಿಗೆ ಕೊಂಕಣಪುರಕ್ಕೆ ಭೇಟಿ ನೀಡಿದ್ದ ಚೀನಾದ ಯಾತ್ರಿಕ ಹ್ಯೂಯೆನ್‌ತ್ಸಾಂಗ್ ಹೇಳುವ ಪ್ರಕಾರ ಇಲ್ಲಿ ೧೦೦ ಬೌದ್ಧ ಸಂಘಾರಾಮಗಳು ಮತ್ತು ೧೦,೦೦೦ಕ್ಕು ಹೆಚ್ಚು ಬೌದ್ಧ ಅನುಯಾಯಿಗಳಿದ್ದಾರೆ. ರಾಜರ ಅರಮನೆಯ ಬಳಿ ೩೦೦ ಭಿಕ್ಷುಗಳಿರುವ ದೊಡ್ಡ ಸಂಘಾರಾಮ ಇದೆ. ಇವರು ಸಾಹಿತ್ಯ ಮತ್ತು ಪ್ರತಿಭೆಗೆ ಹೆಸರಾಗಿದ್ದವರು. ಈ ವಿಹಾರದಲ್ಲಿ ಎರಡು ಅಡಿ ಎತ್ತರದ ಸಿದ್ಧಾರ್ಥನ ತಲೆಬುರುಡೆ ಇದೆ. ಇದನ್ನು ಸೊಗಸಾಗಿ ಅಲಂಕರಿಸಿದ ಕರಂಡದಲ್ಲಿಟ್ಟಿದ್ದಾರೆ. ಪ್ರತಿ ಉಪವಾಸದ ದಿನ ಇದನ್ನು ಹೊರತೆಗೆದು ಭಕ್ತಿಯಿಂದ ಪೂಜೆ ಸಲ್ಲಿಸುತ್ತಾರೆ. ನಗರದ ಬಳಿ ಇನ್ನೊಂದು ವಿಹಾರ ಇದೆ. ಅಲ್ಲಿ ಗಂಧದ ಮರದಲ್ಲಿ ಕಡೆದಿರುವ ಹತ್ತು ಅಡಿ ಎತ್ತರದ ಮೈತ್ರೇಯನ ವಿಗ್ರಹವಿದೆ. ಇದು ಆಗಾಗ್ಗ ಪ್ರಜ್ವಲಿಸುತ್ತಿರುತ್ತದೆ. ಈ ವಿಹಾರವನ್ನು ೨೦ ದಶಲಕ್ಷ ಅರ್ಹಂತರು ಕಟ್ಟಿದರು ಎಂದಿದ್ದಾನೆ.[೨೦] ಹ್ಯೂಯೆನ್‌ತ್ಸಾಂಗ್ ಭೇಟಿ ನೀಡಿದ ಕೊಂಕಣ ಪುರವನ್ನು ಬನವಾಸಿ ಎಂದು ಗುರುತಿಸಲಾಗಿದೆ. ಆದರೆ ಹ್ಯೂಯೆನ್‌ತ್ಸಾಂಗ್ ಭೇಟಿ ನೀಡಿರುವ ಕೊಂಕಣಪುರ ಕೊಂಕಣ-೯೦೦ರಲ್ಲಿನ ಒಂದು ಪ್ರಮುಖ ಪ್ರದೇಶವಾಗಿರಬೇಕು. ಇದರ ಅನ್ವೇಷಣೆಗೆ ಇನ್ನೂ ಹೆಚ್ಚಿನ ಸಂಶೋಧನೆ ಅವಶ್ಯವಿದೆ.

ಒಟ್ಟಿನಲ್ಲಿ ಕ್ರಿ.ಶ. ೮-೯ನೇ ಶತಮಾನದವರೆಗೆ ಬೌದ್ಧಧರ್ಮ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿತ್ತು. ಆ ಸಮಯಕ್ಕೆ ಅದ್ವೈತ ಸಿದ್ಧಾಂತದ ಆಗಮನ, ಜೈನಮತದ ಪ್ರಾಬಲ್ಯ, ಭಕ್ತಿಯೇ ಪ್ರಧಾನವಾದ ಕೆಲವು ಧರ್ಮಗಳ ಉದಯ ಇವೆಲ್ಲವೂ ಬೌದ್ಧ ಧರ್ಮ ಪುನಃ ತಲೆಎತ್ತದಂತೆ ನೋಡಿಕೊಳ್ಳುವಲ್ಲಿ ಪ್ರಧಾನಪಾತ್ರ ವಹಿಸಿದವು. ಅನ್ಯಧರ್ಮಗಳ ಹೊಡೆತದಿಂದ ಅಳಿವು-ಉಳಿವಿಗಾಗಿ ಬೌದ್ಧಧರ್ಮ ಹೋರಾಡಬೇಕಾಗಿ ಬಂದಾಗ ತನ್ನ ತತ್ವಗಳನ್ನು ಸರಳಗೊಳಿಸುವುದು ಮಾತ್ರವಲ್ಲದೇ ಭಕ್ತಿಪ್ರಧಾನವೂ ಆಗುವುದು ಅನಿವಾರ್ಯವಾಯಿತು. ಈ ದಿಕ್ಕಿನಲ್ಲಿ ಅದು ಪ್ರಯತ್ನಿಸಿ ಯಶಸ್ವಿಯೂ ಆಯಿತು. ಬನವಾಸಿ ಈ ಸುಧಾರಿತ ಬೌದ್ಧಮತದ ಕೇಂದ್ರವಾಗಿ ಈ ಭಾಗದಲ್ಲಿ ಹನ್ನೊಂದನೆಯ ಶತಮಾನದವರೆಗೆ ಮುಂದುವರೆಯಿತು. ಬಳ್ಳಿಗಾವೆಯ ಶಾಸನವೊಂದರಲ್ಲಿ ಕಲ್ಯಾಣಿ ಚಾಳುಕ್ಯ ಚಕ್ರವರ್ತಿ ಅಹವಮಲ್ಲನ ಮಂತ್ರಿ ರೂಪಭಟ್ಟಯ್ಯನು ಜಯಂತಿ ಪ್ರಬುದ್ಧ ವಿಹಾರವೆಂಬ ಬೌದ್ಧ ವಿಹಾರವನ್ನು ಕಟ್ಟಿಸಿದ ನೆಂದು ಹೇಳಿದಂತಿದೆ. ಇಲ್ಲಿ ಬುದ್ಧನಿಗಿಂತ ತಾರಾಭಗವತಿ ಮತ್ತು ಅವಲೋಕಿತೇಶ್ವರ ಪ್ರಧಾನ ಸ್ಥಾನ ಪಡೆದಿದ್ದುದರಿಂದ ವಜ್ರಾ ಯಾನ ಶಾಖೆಯು ಇಲ್ಲಿ ಖಚಿತರೂಪ ಪಡೆಯುವಂತಾಯಿತು.[೨೧]

ಬನವಾಸಿಯ ವಸ್ತುಸಂಗ್ರಹಾಲಯದಲ್ಲಿ ಈಗ ಇಟ್ಟಿರುವ ತಾರಾಭಗವತಿಯ ಭಗ್ನಮೂರ್ತಿಯು ವಿಶಿಷ್ಟವಾಗಿದೆ. ಕಲ್ಯಾಣಿ ಚಾಳುಕ್ಯರ ಕಾಲಕ್ಕೆ ನಿಗದಿಗೊಳಿಸಬಹುದಾದ ಈ ಮೂರ್ತಿಯ ರುಂಡವಷ್ಟೇ ಲಭ್ಯ. ಮುಕುಟ ಮಧ್ಯದಲ್ಲಿ ಧ್ಯಾನಿಬುದ್ಧನ ಆಕಾರವನ್ನು

ಕಡೆದಿರಿಸಲಾಗಿದೆ. ಇದರ ಕರ್ಣಕುಂಡಲ, ಕಂಠಹಾರ, ಕಿರೀಟದ ಎಲ್ಲಾ ಅಲಂಕಾರವೂ ಸೊಗಸಾಗಿದೆ. ಮುಖದಲ್ಲಿ ಆಧ್ಯಾತ್ಮಿಕ ತೇಜಸ್ಸಿದೆ. ಬನವಾಸಿಯಲ್ಲಿದ್ದ ವಜ್ರಯಾನ ಪರಂಪರೆಗೆ ಇದು ಸಾಕ್ಷಿ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.[೨೨]

ಅಂತಿಮವಾಗಿ ಹೇಳುವುದಾದರೆ ಬೌದ್ಧ ಧರ್ಮ ಉತ್ತರಕನ್ನಡ ಜಿಲ್ಲೆಗೆ ಮೌರ್ಯಚಕ್ರವರ್ತಿ ಅಶೋಕನ ಕಾಲದಲ್ಲಿ ಪಾದಾರ್ಪಣೆ ಮಾಡಿ ಶಾತವಾಹನ-ಚುಟುಕುಲಾನುದರ ಕಾಲದಲ್ಲಿ ರಾಜಾಶ್ರಯ ಪಡೆದ ಧರ್ಮವಾಗಿ ಬೆಳೆಯಿತು. ಕದಂಬರು, ಬಾದಾಮಿ ಚಾಳುಕ್ಯರು ಮತ್ತು ರಾಷ್ಟ್ರಕೂಟರ ಕಾಲದವರೆಗೆ ತನ್ನ ಅಸ್ತಿತ್ವವನ್ನುಳಿಸಿಕೊಂಡು ಬಂದು ಕಲ್ಯಾಣಿ ಚಾಳುಕ್ಯರು ಹಾಗೂ ಅನಂತರದ ಕಾಲದಲ್ಲಿ ತಾಂತ್ರಿಕ ಬೌದ್ಧ ಧರ್ಮಕ್ಕೆ ಪ್ರೇರಣೆ ನೀಡಿತು. ಸುಮಾರು ಹದಿಮೂರನೇ ಶತಮಾನದ ಹೊತ್ತಿಗೆ ಅನೇಕ ಬಾಹ್ಯ ಶಕ್ತಿಗಳ ಹೊಡೆತದ ವಿರುದ್ಧ ಹೋರಾಡುತ್ತಾ ಕೊನೆಗೆ ಸಂಪೂರ್ಣ ವಾಗಿ ನಾಮಾವಶೇಷಗೊಂಡಿತು.

ವಿಜಯನಗರ ಅರಸರ ಕಾಲದ ಹೊತ್ತಿಗೆ ಇದು ಹೇಳ ಹೆಸರಿಲ್ಲದಾಯಿತು. ಹಿಂದೂ ದೇವಾಲಯದಲ್ಲಿನ ದಶಾವತಾರ ಶಿಲ್ಪಗಳಲ್ಲಿ ಬುದ್ಧನನ್ನು ಒಂಬತ್ತನೇ ಅವತಾರವೆಂದು ಪರಿಗಣಿಸ ಲಾಯಿತು. ಇದಕ್ಕೆ ಉದಾಹರಣೆಯಾಗಿ ಸೋಂದಾದಲ್ಲಿನ ಹುಣಸೆಹೊಂಡದ ವೆಂಕಟೇಶ್ವರ ದೇವಾಲಯದಲ್ಲಿನ ದಶಾವತಾರ ಶಿಲ್ಪವನ್ನು ಗಮನಿಸಬಹುದು. ಈ ಜಿಲ್ಲೆಯಲ್ಲಿನ ಮುಖ್ಯ ಬೌದ್ಧ ನೆಲೆಗಳೆಂದರೆ ಬನವಾಸಿ, ಗೋಕರ್ಣ, ತೊರ್ಕೆ, ಹೈಗುಂದ, ಬಬ್ರುವಾಡ ಕಾಡಗೋಡು ಮೊದಲಾದ ಸ್ಥಳಗಳು.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. Giegerwilhem., *Mahavamsa or the Great Chronicle of Ceylon* , Colombo, Ch. XII, P. 82
೨. Krishna K.G., *Uttankita Sanskrit Vidya Aranya Epigraphs.* VOl. II, No. 185
೩. Ibid, No. 191. and EI. Vol. XXXIII, P. 247-250.
೪. ವಸಂತಕುಮಾರ್ ತಾಳ್ತಜೆ., **ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ**, ಪು. ೫೪.
೫. ರಘುನಾಥ ಭಟ್ ಎಚ್.ಆರ್., **ಕರ್ನಾಟಕ ಶಾಸನ ಕಲೆ**, ಪು. ೫-೯
೬. EI., Vol. XXXIV, PP. 239-242; Krishna K.G., *Uttankita Sanskrit Vidya Aranya Epigraphs,* Vol-11, N. 184
೭. Ibid., No. 201
೮. ವಸಂಕುಮಾರ್ ತಾಳ್ತಜೆ., **ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ**, ಪು. ೮೧.
೯. A. Sundara., "Some Note worthy Antiquities from Banavasi Area" *QJMS, Vol. LXX,* No. III, PP. 164-170.
೧೦. ಅ. ಸುಂದರ., 'ಬನವಾಸಿಯ ಕೆಲವು ಅಪೂರ್ವ ಪ್ರಾಚೀನ ಶಿಲ್ಪಗಳು', **ಕರ್ನಾಟಕ ಭಾರತಿ**, ಸಂ. XX 1/3-4, ಪು. ೧೪೯-೧೫೦.
೧೧. ಅ. ಸುಂದರ., 'ಇತ್ತೀಚಿನ ಕೆಲವು ಪುರಾತತ್ವ ಶೋಧನೆಗಳು', **ಕರ್ನಾಟಕ ಭಾರತಿ**, ಸಂ. VIII/2, ಪು. ೧೦-೨೨.
೧೨. A. Sundara., op.cit., PP. 164-170.
೧೩. ಕುಂದಣಗಾರ ಕೆ.ಜಿ., **ಸಾಹಿತ್ಯ ಪರಿಷತ್ಪತ್ರಿಕೆ**, ಸಂ. ೧೯/೩ (೧೯೩೫)
೧೪. ಡಾ. ರಘುನಾಥ ಭಟ್ ಎಚ್.ಆರ್., **ಕರ್ನಾಟಕ ಶಾಸನ ಕಲೆ** ಪು. ೫-೯
೧೫. A. Sundara, op.cit., PP 164, 170.
೧೬. Gopal B.R., **Corpus of Kadamba Inscriptions** No. I, No. 17.
೧೭. Dutt Nalinaksha, *Buddhist Sects in India*, P. 126.
೧೮. EI. Vol. XXIII, P. 70-75.
೧೯. ಅ. ಸುಂದರ., 'ಉತ್ತರ ಕನ್ನಡ ಜಿಲ್ಲೆಯ ಕೆಲವು ಅಪೂರ್ವ ಶಿಲ್ಪಗಳು', **ಮಾನವಿಕ ಭಾರತಿ**, ಸಂ. III/2, ಪು. ೧-೨
೨೦. Water Thomas, *On Yuan Chuang's Travels in India*, PP. 237-38.
೨೧. ತಾಳ್ತಜೆ ವಸಂತಕುಮಾರ., **ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ**, ಪು. ೮೮.
೨೨. Bhat Raghunath H.R., "Tarabhagavati from Banavasi and Balligave" *Journal of Karnataka University Social Science.*, Vol. XXII.


ಥೇರ ರಕ್ಷಿತ ಬಂದ ಬನವಾಸಿಗೆ ಅಶೋಕನ ಬೌದ್ಧ ಸಂದೇಶ ಹೊತ್ತು
ಸಾತಕರ್ಣಿಯರು ಮಹಾಭೋಜರಲು ಬೌದ್ಧ ಶಾಸನವಿದ್ದ ಪ್ರತಿಮಾ ಕಲೆಯ ಹೊತ್ತು
ಕದಂಬ, ಚಾಲುಕ್ಯರಾಶ್ರಯದಿ ಬೆಳೆದದ್ದು ವಿಜಯನಗರದ ಹೊತ್ತಿಗೆ ಅಸು ನೀಗಿತ್ತು.

ಡಾ. ಸಿ. ಮಹದೇವ*

# ತೊಣ್ಣೂರಿನ ಕಣ್ಮರೆಯಾದ ನಖರೇಶ್ವರ ದೇವಾಲಯ

*ತೊಣ್ಣೂರು ರಾಮಾನುಜರ ಬಹುಕಾಲದ ತಂಗುದಾಣವಾಗಿತ್ತು. ಇವರ ಪ್ರಭಾವಕ್ಕೊಳಗಾದ ಹೊಯ್ಸಳ ವಿಷ್ಣುವರ್ಧನ ಬೃಹತ್ ವೈಷ್ಣವ ದೇವಾಲಯಗಳನ್ನು ಇಲ್ಲಿ ಕಟ್ಟಿಸಿದ. ಆದರೂ ಇಲ್ಲಿ ಶಿವಾಲಯಗಳೂ ಇದ್ದುವು. ನಖರೇಶ್ವರ ದೇಗುಲದ ಅಸ್ತಿತ್ವ ಅಲ್ಲಿದ್ದ ವರ್ತಕರ ಸಮುದಾಯದ ಸೂಚನೆ ನೀಡುತ್ತದೆ. ಆದರೆ ಕಾಲಾಂತರದಲ್ಲಿ ಸ್ಥಳೀಯ ಮೂಲದ ನಖರೇಶ್ವರ ದೇಗುಲವು ಬಹುಸಂಖ್ಯಾತ ಶ್ರೀವೈಷ್ಣವರ ಕಾರಣ ನಿರ್ಲಕ್ಷಿತವಾಗಿ ಸೂಫಿ ಸಂತರ ದರ್ಗಾವು ನಖರೇಶ್ವರ ದೇಗುಲದ ಹಿಂಬದಿಯಲ್ಲಿ ನಿರ್ಮಿತವಾಯಿತು. ಈ ನಖರೇಶ್ವರ ದೇವಾಲಯದ ಇತಿಹಾಸವಂತು ತೊಣ್ಣೂರಿನ ಚರಿತ್ರೆ, ಸಂಸ್ಕೃತಿ ಮತ್ತು ಪುರಾತತ್ವದ ಮೇಲೆ ಬೆಳಕು ಚೆಲ್ಲುವಂಥದ್ದಾಗಿದೆ.*

ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕಿನ ಕೆರೆ ತೊಣ್ಣೂರು ಅಥವಾ ತೊಣ್ಣೂರು ಚರಿತ್ರೆಯಲ್ಲಿ ತೊಂಡನೂರು ಎಂದು ಗುರುತಿಸಿ ಕೊಂಡಿದೆ. ಇದು ಹೊಯ್ಸಳರ ಉಪರಾಜಧಾನಿಗಳಲ್ಲಿ ಒಂದು. ಶ್ರೀ ವೈಷ್ಣವ ಪಂಥದ ರಾಮಾನುಜಾಚಾರ್ಯರು ಇಲ್ಲಿ ಬಹುಕಾಲ ತಂಗಿದ್ದು, ನಂತರ ಮೇಲ್ಕೋಟೆಗೆ ತೆರಳಿದರೆಂದು ಪ್ರತೀತಿ. ಅವರು ತೊಣ್ಣೂರಿನಲ್ಲಿ ಬೃಹತ್ ಪ್ರಮಾಣದ ಶ್ರೀವೈಷ್ಣವ ಪಂಥದ ದೇವಾಲಯಗಳ ನಿರ್ಮಾಣಕ್ಕೆ ಕಾರಣರಾದರು. ಇವರ ಪ್ರಭಾವ ಕ್ಕೊಳಗಾದ ಹೊಯ್ಸಳ ದೊರೆ ವಿಷ್ಣುವರ್ಧನನು, ಇಲ್ಲಿ ಲಕ್ಷ್ಮಿ ನಾರಾಯಣ ದೇವಾಲಯವನ್ನು ನಿರ್ಮಿಸಿದನು. ಇದು ವಿಷ್ಣುವರ್ಧನನು ನಿರ್ಮಿಸಿದ ಪಂಚನಾರಾಯಣ ದೇವಾಲಯಗಳಲ್ಲಿ ಒಂದಾಗಿತ್ತು. ಶಾಸನಗಳಲ್ಲಿ ತೊಂಡನೂರು, ಯಾದವನಾರಾಯಣ ಚತುರ್ವೇದಿಮಂಗಲ ಎಂದು ಉಲ್ಲೇಖಗೊಂಡಿದೆ.[೧] ಹೀಗಾಗಿ ತೊಣ್ಣೂರು ಕರ್ನಾಟಕದ ಶ್ರೀವೈಷ್ಣವ ಕೇಂದ್ರಗಳಿಗೆ ಮಾತೃಸ್ಥಾನದಲ್ಲಿದೆ. ಇಲ್ಲಿನ ಇತರ ದೇವಾಲಯಗಳಲ್ಲಿ ಗೋಪಾಲಕೃಷ್ಣ, ಯೋಗಾನರಸಿಂಹ, ಕೈಲಾಸೇಶ್ವರ, ವೆಂಕಟರಮಣ (ಬೆಟ್ಟದ ಮೇಲೆ) ಮತ್ತು ಗ್ರಾಮದೇವತೆಗಳ ದೇವಾಲಯಗಳು ಪ್ರಮುಖವಾಗಿವೆ. ಹೊಯ್ಸಳರ ಮೂರನೆಯ ಬಲ್ಲಾಳನು ಮಧುರೆಯ ಮೇಲೆ ದಂಡೆತ್ತಿ ಹೋಗುವ ಮುನ್ನ ಹಾಗೂ ಕ್ರಿ.ಶ. ೧೩೨೬ರಲ್ಲಿ ದೆಹಲಿ ದಾಳಿಯಿಂದ ದ್ವಾರಸಮುದ್ರವು ಹಾಳಾದನಂತರ ತೊಣ್ಣೂರಿನಲ್ಲಿ ತಂಗಿದ್ದನೆಂದು ಚರಿತ್ರೆಯಿಂದ ತಿಳಿದುಬರುತ್ತದೆ.[೨] ಹೀಗೆ ತೊಣ್ಣೂರು ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಪ್ರಮುಖ ಕೇಂದ್ರವಾಗಿದ್ದು, ಹೊಯ್ಸಳರ ನಂತರ ಇಳಿಮುಖಗೊಂಡಿತು. ತೊಣ್ಣೂರು ತನ್ನ ವಿಶಾಲವಾದ ಕೆರೆಯಿಂದಾಗಿಯೂ ಸಹ ತನ್ನ ಪ್ರಾಶಸ್ತ್ಯವನ್ನು ಉಳಿಸಿಕೊಂಡಿದೆ. ಕೆರೆಗೆ ಲಕ್ಷ್ಮಿಸಾಗರ, ತಿರುಮಲಸಾಗರ ಎಂಬ ಹೆಸರುಗಳಿವೆ. ಹೈದರಾಬಾದಿನ ನಿಜಾಮನು ಈ ತಿಳಿನೀರಿನ ಕೆರೆಯನ್ನು ಕಂಡು ಹರ್ಷಿತನಾಗಿ ಮೋತಿತಲಾಬ್ (ಮುತ್ತಿನ ಸರೋವರ) ಎಂದು ಕರೆದಿದ್ದಾನೆ.

ಈ ಊರಿನ ಶಾಸನಗಳು ಎಪಿಗ್ರಾಫಿಯಾ ಕರ್ನಾಟಕ ಸಂಪುಟ ೬ರಲ್ಲಿ ಪ್ರಕಟಗೊಂಡಿವೆ. ಲಕ್ಷ್ಮಿನಾರಾಯಣ ದೇವಾಲಯದ ಶಾಸನವೊಂದರಲ್ಲಿ, ತೊಂಡನೂರು ಅಗ್ರಹಾರದ ಗಡಿಯಲ್ಲಿದ್ದ ನಖರೇಶ್ವರ ದೇವಾಲಯವನ್ನು ಉಲ್ಲೇಖಿಸುತ್ತದೆ.[೩] ಇಲ್ಲಿನ ಕೈಲಾಸೇಶ್ವರ ದೇವಾಲಯವನ್ನು ಹೊರತುಪಡಿಸಿ, ಮತ್ತೊಂದು ಶಿವಾಲಯವಿತ್ತೆಂಬ ಸಂಗತಿ ಈವರೆವಿಗೂ ತಿಳಿದಿರಲಿಲ್ಲ. ಈ ಮೇಲಿನ ಶಾಸನದಿಂದಾಗಿ ತೊಣ್ಣೂರಿನಲ್ಲಿ ಮತ್ತೊಂದು ಶಿವಾಲಯ ಇತ್ತೆಂಬ ಸಂಗತಿ ಸ್ಪಷ್ಟವಾಗುವುದು.

* ಪ್ರವಾಚಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ - ೫೮೩ ೨೭೬

ದೇವಾಲಯದ ಸ್ಥಾನಪತಿಯಾಗಿದ್ದ ತಪೋಧನ ಅಮೃತರಾಶಿಗೆ, ನಂದಾದೀವಿಗೆಗಾಗಿ ಮಗ್ಗದೆರೆಯನ್ನು ದತ್ತಿ ನೀಡಲಾಗಿದೆ.[೪] ಇದೇ ಶಾಸನದಲ್ಲಿ ದಣ್ಣನಾಯಕ ಅಚ್ಯುತಮಯ್ಯ ಮತ್ತು ವೀರಯ್ಯಗಳು ಯಾದಗಿರಿ ಕೋಟೆಯ ರಕ್ಷಾಪಾಳಕರಾಗಿದ್ದಾಗ, ಕ್ರಮವಾಗಿ ಅವರ ಮಕ್ಕಳಾದ ನೀಲಯ್ಯ ಮತ್ತು ಚಾಮಯ್ಯಗಳು ತಮ್ಮ ಕೋಟೆಯ ಹೋಲಗಾವ ವೃತ್ತಿಯನ್ನು ಆಳುತ್ತಿದ್ದು, ತೊಂಡನೂರು ಅಗ್ರಹಾರದ ಗಡಿಯಲ್ಲಿದ್ದ ನಖರೇಶ್ವರ ದೇವರಿಗೆ ಭೂದಾನ ಮಾಡಿದರೆಂದಿದೆ.[೫] ಹೀಗೆ ದಾನದತ್ತಿಗಳನ್ನು ಪಡೆದ ನಗರೇಶ್ವರ ದೇವಾಲಯವು ಹೊಯ್ಸಳರ ಅವನತಿಯೊಂದಿಗೆ ಕಣ್ಮರೆಯಾದದ್ದು ಗಮನಾರ್ಹ.

ಈ ದೇವಾಲಯದ ನೆಲೆಯನ್ನು ಗುರುತಿಸುವ ಪ್ರಯತ್ನವೇ ಪ್ರಸ್ತುತ ಲೇಖನದ ಉದ್ದೇಶ. ಹೊಯ್ಸಳರ ಅವನತಿಯ ನಂತರ ತೊಣ್ಣೂರಿಗೆ ಶಾಹ ಸಾಲಾರ್ ಮಸೂದ್ ಘಾಜಿ ಎಂಬ ಸೂಫಿ ಆಗಮಿಸಿದನು. ಇವನು ಇಂದ್ರಜಾಲದಲ್ಲಿ ಪ್ರವೀಣನಾಗಿದ್ದನೆಂದು ಸ್ಥಳೀಯ ಐತಿಹ್ಯವಿದೆ. ಈತನ ದರ್ಗಾ ಊರಿನ ನೈರುತ್ಯ ಭಾಗದಲ್ಲಿದೆ. ಅಲ್ಲಿರುವ ಶಾಸನ ಹಿಜಿರಿ ೭೬೦. ಅಂದರೆ ಕ್ರಿ.ಶ. ೧೩೫೮ರ ಕಾಲಕ್ಕೆ ಸೇರುತ್ತದೆ.[೬] ಅಸಂಖ್ಯಾತ ಭಕ್ತರನ್ನು ಆಕರ್ಷಿಸುವ ದರ್ಗಾವು ಎತ್ತರದ ಪ್ರದೇಶದಲ್ಲಿದೆ. ಪೂರ್ವಾಭಿಮುಖವಾಗಿರುವ ದರ್ಗಾಕ್ಕೆ ಉತ್ತರ ಭಾಗದಲ್ಲಿ ಪ್ರವೇಶದ್ವಾರ ಮಂಟಪವಿದೆ. ಇದರ ಹೊರಭಾಗದಲ್ಲಿ ಮೂರು ಮಹಾಸತಿ ಕಲ್ಲುಗಳು ನಿಂತಿವೆ. ದರ್ಗಾದ ಹಿಂಬದಿಯಲ್ಲಿ ಕೆರೆಯುಂಟು. ಇಲ್ಲಿ ಗಮನ ಸೆಳೆದದ್ದು, ದ್ವಾರಮಂಟಪದಿಂದ ಕೂಡಿದ ಪ್ರಾಕಾರ ಸಾಲುಮಂಟಪ ಮತ್ತು ಹೊರಗಿರುವ ಮಾಸ್ತಿಕಲ್ಲುಗಳು. ಈ ಆವರಣದ ಮಧ್ಯದ ಸ್ಥಳ ಸಮತಟ್ಟಾಗಿದ್ದು, ಕಟ್ಟಡವೊಂದು ಅಲ್ಲಿದ್ದ ಸೂಚನೆಗಳು ದೊರೆಯುತ್ತವೆ. ಅಂದರೆ ಇಲ್ಲಿ ಪ್ರಾಚೀನ ದೇವಾಲಯವಿತ್ತೆಂಬ ಸಂಗತಿ ದೃಢಪಡುತ್ತದೆ. ಇಲ್ಲಿದ್ದ ನಂದಿಶಿಲ್ಪವನ್ನು, ಸೂಫಿ ಸಂತನು ತನ್ನ ಎಡಗಾಲ ಹೆಬ್ಬೆರಳಿನಿಂದ ಸ್ಪರ್ಶ ಮಾಡಿದಾಗ ಅದು ಆಗ್ನೇಯಕ್ಕೆ ಎರಡು ಫರ್ಲಾಂಗ್ ದೂರದ ಹೊಲದಲ್ಲಿ ಹೋಗಿ ಬಿದ್ದಿತೆಂದು ಸ್ಥಳೀಯ ಐತಿಹ್ಯವಿದೆ.[೭] ಈ ಹೊಲ ಪ್ರಸ್ತುತ ಪಟೇಲ್ ತಿಮ್ಮೇಗೌಡರ ಹೊಲವಾಗಿದ್ದು, ಈ ನಂದಿಶಿಲ್ಪಕ್ಕೆ ಪುಟ್ಟಗುಡಿಯೊಂದನ್ನು ನಿರ್ಮಿಸಿದ್ದಾರೆ. ಎರಡನೆಯದಾಗಿ ಪ್ರವೇಶ ದ್ವಾರದ ಹೊರಗಿರುವ ಮಹಾಸತಿ ಕಲ್ಲುಗಳು. ಸಾಮಾನ್ಯವಾಗಿ ದೇವಾಲಯಗಳ ಮುಂಭಾಗದಲ್ಲಿ ವೀರಗಲ್ಲು ಮತ್ತು ಮಹಾಸತಿ ಕಲ್ಲುಗಳನ್ನು ನೆಡುವುದು ಪ್ರಾಚೀನ ಕರ್ನಾಟಕ ಪರಂಪರೆಯಲ್ಲಿ ನಡೆದುಬಂದ ಪದ್ಧತಿ. ಅದೇ ರೀತಿ ಇಲ್ಲಿರುವ ಮಹಾಸತಿಕಲ್ಲುಗಳು ದೇವಾಲಯದ ಅಸ್ತಿತ್ವವನ್ನು ಸ್ಪಷ್ಟಪಡಿಸುತ್ತವೆ. ಇನ್ನು ಮೂರನೆಯದಾಗಿ ಈ ಮೊದಲೇ ತಿಳಿಸಿದಂತೆ ಇದೇ ಊರಿನ ಲಕ್ಷ್ಮೀನಾರಾಯಣ ದೇವಾಲಯದ ಶಾಸನವು ತೊಂಡನೂರು ಅಗ್ರಹಾರದ ಗಡಿಯಲ್ಲಿನ ನಖರೇಶ್ವರ ದೇವಾಲಯವನ್ನು ಉಲ್ಲೇಖಿಸುತ್ತದೆ. ಪ್ರಸ್ತುತ ದರ್ಗಾದ ಉತ್ತರ ಭಾಗದಲ್ಲಿರುವ ಪ್ರವೇಶದ್ವಾರ ಮತ್ತು ಮಂಟಪಸಾಲುಗಳು ಊರಿನ ನೈರುತ್ಯ ಭಾಗದಲ್ಲಿ ದಾರಿಯಲ್ಲಿವೆ. ಹೀಗೆ ಸ್ಥಳೀಯ ಐತಿಹ್ಯ, ಶಾಸನಾಧಾರ ಮತ್ತು ಲಭ್ಯವಿರುವ ವಾಸ್ತು ಮತ್ತು ಶಿಲ್ಪಾವಶೇಷಗಳಿಂದ ಇಲ್ಲಿ ಶಿವಾಲಯವಿತ್ತೆಂಬುದು ಸ್ಪಷ್ಟವಾಗುವುದಲ್ಲದೆ, ಅದು ನಖರೇಶ್ವರ ಗುಡಿ ಎಂಬುದು ವಿದಿತವಾಗುವುದು. ಪ್ರವೇಶದ್ವಾರ ಮಂಟಪ ಮತ್ತು ಮಂಟಪಸಾಲು ಸರಳ ವಾಸ್ತು ರಚನೆಗಳಾಗಿದ್ದು, ನಖರೇಶ್ವರ ದೇವಾಲಯಕ್ಕೆ ಸಂಬಂಧಿಸಿದ ವಾಸ್ತು ಅವಶೇಷಗಳಾಗಿವೆ. ಈ ದೇವಾಲಯದ ಹಿಂಬದಿಯಲ್ಲಿದ್ದ ಎತ್ತರದ ಪ್ರದೇಶದಲ್ಲಿ ಸಾಲರ್ ಮಸೂದ್ ಘಾಜಿ ಸೂಫಿಸಂತನ ದರ್ಗಾವನ್ನು ನಿರ್ಮಿಸಲಾಗಿದೆ. ಅಂದರೆ ಈಗಿನ ದರ್ಗಾದ ಕೆಳಗೆ ಉತ್ತರಕ್ಕಿರುವ ಆವರಣದಲ್ಲಿ ನಖರೇಶ್ವರ ದೇವಾಲಯವಿತ್ತು. ಹೊಯ್ಸಳ ಅವನತಿಯ ನಂತರ ತೊಣ್ಣೂರು ರಾಜಕೀಯ ಮತ್ತು ಸಾಂಸ್ಕೃತಿಕವಾಗಿ ಹಿನ್ನೆಡೆಗೆ ಒಳಗಾಯಿತು. ಅಲ್ಲಿದ್ದ ವರ್ತಕ ಸಮುದಾಯಗಳು ಬೇರೆಡೆಗೆ ವಲಸೆ ಹೋದವು. ಪರಿಣಾಮವಾಗಿ ನಖರೇಶ್ವರ ದೇವಾಲಯ ಹಾಳುಬಿದ್ದಿತು. ಇಂತಹ ದೇವಾಲಯದ ಹಿಂಬದಿಯಲ್ಲಿ ಸೂಫಿ ಸಂತನ ದರ್ಗಾ ನಿರ್ಮಾಣಗೊಂಡಿತು. ಕಾಲಾಂತರದಲ್ಲಿ ನಖರೇಶ್ವರ ದೇವಾಲಯದ ಆವರಣವು ದರ್ಗಾ ವ್ಯಾಪ್ತಿಗೆ ಸೇರ್ಪಡೆಗೊಂಡಿತು. ಈಗ ಉಳಿದಿರುವ ಪ್ರಾಕಾರ ಸಾಲು ಮಂಟಪದಿಂದ ಕೂಡಿದ ಮಹಾದ್ವಾರ ಮಂಟಪವು ನಖರೇಶ್ವರ ದೇವಾಲಯಕ್ಕೆ ಸಂಬಂಧಿಸಿದೆ. ಈ ವಾಸ್ತು ಸ್ವರೂಪವನ್ನು ಗಮನಿಸಿದರೆ ನಖರೇಶ್ವರ ದೇವಾಲಯವು ಸರಳ ರಚನೆಯ ದೇವಾಲಯವಾಗಿತ್ತೆಂದು ಗ್ರಹಿಸಬಹುದು.

ನಖರೇಶ್ವರ ದೇವಾಲಯದ ಅಸ್ತಿತ್ವ ಮತ್ತು ಅವನತಿಗಳಿಂದಾಗಿ ಕೆಲವು ಸಾಮಾನ್ಯ ಗ್ರಹಿಕೆಗಳನ್ನು ಹೊಂದಬಹುದಾಗಿದೆ. ಆರಂಭದಲ್ಲಿ ಗ್ರಾಮವಾಗಿದ್ದ ತೊಂಡನೂರು, ಅಗ್ರಹಾರವಾಗಿ ನಂತರ ಪಟ್ಟಣವಾಗಿ ಬೆಳವಣಿಗೆಯಾಗಿತ್ತು. ಆದರೂ ತೊಂಡನೂರು ಅಗ್ರಹಾರವು ಪಟ್ಟಣದಿಂದ ಪ್ರತ್ಯೇಕವಾಗಿತ್ತು. ತೊಂಡನೂರು ಪಟ್ಟಣ ಈಗಿರುವ ಊರಿನ ದಕ್ಷಿಣಕ್ಕೆ ನೆಲೆಗೊಂಡಿತು. ಊರಿಂದ ದಕ್ಷಿಣಕ್ಕೆ ಪಾಂಡವಪುರಕ್ಕೆ ಸಾಗುವ ರಸ್ತೆಯಲ್ಲಿ ಹಳೆ ಊರಿಗೆ ಸಂಬಂಧಿಸಿದ ವೀರಗಲ್ಲು ಮತ್ತು ಮಾಸ್ತಿಕಲ್ಲುಗಳಿವೆ. ಇಲ್ಲಿ ಹಿಂದೆ ಕಲ್ಲುಗಳನ್ನು ಹಾಸಿದ ರಸ್ತೆ ಇತ್ತು. ಈಗ್ಗೆ ಕೆಲವು ವರ್ಷಗಳ ಹಿಂದೆ ಹೊಸ ರಸ್ತೆಯ ನಿರ್ಮಾಣದ ಸಂದರ್ಭದಲ್ಲಿ ಈ ಕಲ್ಲು ಹಾಸಿದ ರಸ್ತೆ ರೂಪಾಂತರ ಹೊಂದಿದೆ. ಹಳೆ ಊರು ಮತ್ತು ಈಗಿನ ಊರಿನ ನಡುವೆ ಹಾರುವರ ಕಟ್ಟೆ ಎಂಬ ಸಣ್ಣ ಕೆರೆ ಇತ್ತು. ಈ ಕೆರೆಯನ್ನು ಈಗ ಮುಚ್ಚಿ ಆಸ್ಪತ್ರೆ ನಿರ್ಮಿಸಿದ್ದಾರೆ. ಮೇಲೆ ಪ್ರಸ್ತಾಪಿಸಿದ ದರ್ಗಾದ ಹಿಂದಿರುವ ಕೆರೆಯ ನೀರು, ಪೂರ್ವಕ್ಕೆ ಹರಿದು ಕೆಳಗಿನ ಹಾರುವರ ಕಟ್ಟೆಯನ್ನು ಸೇರುತ್ತಿತ್ತು. ಈಗಿನ ತೊಣ್ಣೂರು, ದೇವಾಲಯಗಳನ್ನೊಳಗೊಂಡ ತೊಂಡನೂರು ಅಗ್ರಹಾರವಾಗಿದ್ದರೆ, ಹಾರುವ ಕಟ್ಟೆಯ ದಕ್ಷಿಣಕ್ಕಿದ್ದ

ಪ್ರದೇಶದಲ್ಲಿ ಪ್ರಾಚೀನ ತೊಂಡನೂರು ಪಟ್ಟಣವಿತ್ತು. ಇದರಿಂದ ಹೊಯ್ಸಳರ ಕಾಲದ ತೊಂಡನೂರಲ್ಲಿ ಅಗ್ರಹಾರ ಮತ್ತು ಪಟ್ಟಣ ಪ್ರತ್ಯೇಕವಾಗಿದ್ದವು ಎಂದು ಗ್ರಹಿಸಬಹುದಾಗಿದೆ.

ನಖರೇಶ್ವರ ದೇವಾಲಯದಿಂದಾಗಿ, ತೊಂಡನೂರು ಪಟ್ಟಣದಲ್ಲಿ ವರ್ತಕ ಸಮುದಾಯದವರು ತಮ್ಮದೇ ದೇವಾಲಯವನ್ನು ಹೊಂದುವಷ್ಟರಮಟ್ಟಿಗೆ ಸಂಖ್ಯಾಬಲದಲ್ಲಿದ್ದರೆಂದು ತಿಳಿಯಬಹುದು. ಹೊಯ್ಸಳರ ಅವನತಿಯ ನಂತರ ಇಲ್ಲಿನ ವರ್ತಕ ಸಮುದಾಯದವರು ಸಹ ಬೇರೆಡೆಗೆ ವಲಸೆ ಹೋಗಲಾಗಿ ಮೇಲೆ ತಿಳಿಸಿದ ದೇವಾಲಯ ಹಾಳುಬಿದ್ದಂತೆ ಕಾಣುತ್ತದೆ. ನಖರೇಶ್ವರ ದೇವಾಲಯದ ತಪೋಧನ ಅಮೃತರಾಶಿಯ ಉಲ್ಲೇಖದಿಂದಾಗಿ, ದೇವಾಲಯವು ಸ್ಥಳೀಯ ಪರಂಪರೆಯದು ಎಂದು ಗ್ರಹಿಸಬಹುದು. ಏಕೆಂದರೆ ಇದೇ ಊರಿನಲ್ಲಿರುವ ಕೈಲಾಸೇಶ್ವರ ದೇವಾಲಯದ ಸ್ಥಾನಪತಿಗಳು ತಮಿಳು ಮೂಲದವರಾಗಿದ್ದರು. ಅವರ ಹೆಸರುಗಳು ತಮಿಳು ಮೂಲದವು. ಆ ದೇವಾಲಯದಲ್ಲಿರುವ ಶಾಸನಗಳೆಲ್ಲ ತಮಿಳಿನಲ್ಲಿವೆ. ಹೀಗಾಗಿ ತೊಣ್ಣೂರಿನ ಶ್ರೀ ವೈಷ್ಣವ ದೇವಾಲಯಗಳು ಮತ್ತು ಕೈಲಾಸೇಶ್ವರ ದೇವಾಲಯ ತಮಿಳು ಸಂಸ್ಕೃತಿಯ ಕೇಂದ್ರಗಳಾಗಿದ್ದವು. ಒಂದು ರೀತಿಯಲ್ಲಿ ತಮಿಳು ವಸಾಹತುವಿನಂತಿದ್ದ ತೊಂಡನೂರು ಅಗ್ರಹಾರದ ಜನರು, ಸ್ಥಳೀಯ ಮೂಲದ ನಖರೇಶ್ವರ ದೇವಾಲಯದ ಬಗೆಗೆ ಆಸಕ್ತಿಯನ್ನು ವಹಿಸಿದಂತೆ ಕಂಡುಬರುವುದಿಲ್ಲ. ಹೀಗಾಗಿ ನಗರೇಶ್ವರ ದೇವಾಲಯದ ಹಿಂಬದಿಯಲ್ಲಿ ಸೂಫಿ ಸಂತನ ದರ್ಗಾ ನಿರ್ಮಾಣಗೊಂಡಿತು. ಮೇಲಾಗಿ ಶ್ರೀ ವೈಷ್ಣವರೇ ಅಧಿಕವಾಗಿದ್ದ ಈ ಊರಿನಲ್ಲಿ ಶೈವ ದೇವಾಲಯವೊಂದರ ಸಂರಕ್ಷಣೆ ಅವರಿಗೆ ಮುಖ್ಯವಾಗಿರಲಿಲ್ಲ.

ತೊಂಡನೂರು ಮುಖ್ಯವಾಗಿ ಶ್ರೀವೈಷ್ಣವ ಪಂಥದ ಕೇಂದ್ರವಾಗಿತ್ತು. ಈ ಹಿನ್ನೆಲೆಯಲ್ಲಿ ಸೂಫಿ ಸಂತನ ಆಗಮನ, ಇಸ್ಲಾಂ ಧರ್ಮದ ಪ್ರಚಾರದ ಉದ್ದೇಶವನ್ನು ಹೊಂದಿತ್ತು. ಹೀಗೆ ಕಣ್ಮರೆಯಾದ ನಖರೇಶ್ವರ ದೇವಾಲಯವು ತೊಣ್ಣೂರಿನ ಚರಿತ್ರೆ, ಸಂಸ್ಕೃತಿ ಮತ್ತು ಪುರಾತತ್ವದ ಮೇಲೆ ಇನ್ನಷ್ಟು ಬೆಳಕು ಚೆಲ್ಲುತ್ತದೆ.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಎಪಿಗ್ರಾಫಿಯಾ ಕರ್ನಾಟಕ**, ಸಂಪುಟ-೬, ತೊಣ್ಣೂರಿನ ಶಾಸನಗಳು.
೨. ಹಯವದನರಾವ್ ಸಿ., **ಮೈಸೂರು ಗ್ಯಾಸೆಟಿಯರ್**, ಸಂಪುಟ-V, ಪು. ೮೬೧.
೩. **ಎಪಿಗ್ರಾಫಿಯಾ ಕರ್ನಾಟಕ**, ಸಂಪುಟ-೬, ಪಾಂಡವಪುರ-೭೪. : ಶಾಸನದ ಸಾಲುಗಳು.
೧೯. ತೊಂಡನೂರಗ್ರಹಾರದ ಆ ಗಡಿ
೨೦. ಯ ನಖರೇಶ್ವರ ದೇವರ
೪. ಅದೇ.
೫. ಅದೇ.
೬. ಹಯವದನರಾವ್ ಸಿ., ಪೂರ್ವೋಕ್ತ.
೭. ರಹಮತ್ ತರೀಕೆರೆ., ೧೯೯೮, '**ಕರ್ನಾಟಕ ಸೂಫಿಗಳು**', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪು. ೧೨೪, (ಈ ಪುಸ್ತಕದಲ್ಲಿ, ಊರೊಳಗಿದ್ದ ನಂದಿಬಸವ ಎಂದು ದಾಖಲಿಸಲಾಗಿದೆ.)






**ಕ.ಇ. ಅಕಾದೆಮಿಯ ೪ನೇ ವಾರ್ಷಿಕ**
**ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೦)**

*ಗುಹಾಲಯ ವಾಸ್ತುಶಿಲ್ಪ ಚಾಲುಕ್ಯರ ಮೊದಲನೆಯ ಕೀರ್ತಿವರ್ಮನ ಕಾಲಕ್ಕಾಗಲೇ ಕರ್ನಾಟಕದಲ್ಲಿ ಅಸ್ತಿತ್ವಕ್ಕೆ ಬಂದು ಇದನ್ನೇ ಪಲ್ಲವ ಮಹೇಂದ್ರನು ಮಾದರಿನ್ನಾಗಿ ಮಾಡಿಕೊಂಡು ಈ ಕಲೆಯನ್ನು ತಮಿಳುನಾಡಿನಲ್ಲಿ ಪೋಷಿಸಿದ.*

ಡಾ. ಎಸ್. ಆರ್. ರಾವ್
ಸಮ್ಮೇಳನಾಧ್ಯಕ್ಷರು

ಕೆ. ವಿನೋದಮ್ಮ*

# ಕುರುವಗಡ್ಡೆ ರಾಮೇಶ್ವರ ದೇವಸ್ಥಾನದ ಸಂಕ್ಷಿಪ್ತ ಇತಿಹಾಸ

'ಕುರುವ' ಎಂದರೆ ದ್ವೀಪ, ನೀರ ನಡುಗಡ್ಡೆಯ ನೆಲೆ ಎಂದಿರುವಲ್ಲಿ 'ಕುರುವಗಡ್ಡೆ' ದ್ವಿರುಕ್ತಿ ಪದವಾಗಿ, 'ಕುರುವಗಡ್ಡೆ ರಾಮೇ'ಶ್ವರನ ನೆಲೆಯಾಗಿ ಪ್ರಸಿದ್ಧಿಗೊಂಡಿದೆ. ಕುರುವ ಕಾಳಾಮುಖರ ತವರು ಎಂಬ ಮಾತೂ ಇದೆ. ಚಾಲುಕ್ಯರ ಕಾಲದಲ್ಲಿ ಪ್ರತಿಷ್ಠಾಪನೆಗೊಂಡಿತೆನ್ನಲಾದ ಕುರುವಗಡ್ಡೆ ರಾಮೇಶ್ವರ ದೇಗುಲಕ್ಕೆ ಹೊಯ್ಸಳರು, ಸಿಂದ ಅರಸರು ದಾನ ದತ್ತಿ ನೀಡಿ. ಅದರ ಪ್ರಾಚೀನ ಹಿರಿಮೆಯನ್ನು ಪುಷ್ಟಗೊಳಿಸಿದ್ದಾರೆ. ಜಾನಪದೀಯ ಐತಿಹ್ಯದ ನೆಲೆಯಲ್ಲೂ ಈ ದೇಗುಲದ ಜನಪ್ರಿಯತೆ ಮೂಡಿ ಬಂದು ವಿಶಿಷ್ಟವೆನಿಸಿದೆ.

ಹೊನ್ನಾಳಿಯ ಆಗ್ನೇಯಕ್ಕೆ ೧೦ ಕಿ.ಮೀ. ದೂರವಿರುವ, ಹೊನ್ನಾಳಿ ಮತ್ತು ಶಿವಮೊಗ್ಗದ ಹೆದ್ದಾರಿಯ ಮಾರ್ಗದಲ್ಲಿದ್ದು, ತುಂಗಭದ್ರ ನದಿಯು ಹರಿಯುವ ಮಧ್ಯದಲ್ಲಿ ನೆಲೆಗೊಂಡಿದ್ದು ಹಾಗು ಕುರುವ ಗಡ್ಡೆ ರಾಮೇಶ್ವರವು ಮಹಿಮಾನ್ವಿತ ಸ್ಥಳವಾಗಿ, ನಿಸರ್ಗರಮ್ಯ ಚಲುವಿನ ತಾಣವಾಗಿ ಆಧ್ಯಾತ್ಮಿಕ ನೆಲೆಬೀಡಾಗಿದೆ. ತುಂಗಭದ್ರಾ ನದಿಗಳು ಮಲೆನಾಡಿನ ಮಡಿಲಲ್ಲಿ ಹುಟ್ಟಿ ಹರಿಯುತ್ತಾ ಬಂದು ಕೂಡಲಸಂಗಮ ಕ್ಷೇತ್ರದಲ್ಲಿ ಕೂಡಿ ಉತ್ತರ ನಾಮಿಯಾಗಿ ಹರಿಯುತ್ತಾ ಬಂದು ಈ ಕುರುವ ಸ್ಥಳದಲ್ಲಿ ಅಗಲುತ್ತದೆ. ಈ ದೇವಸ್ಥಾನದ ನೆಲೆಗೆ ತಿರುವು ಮಾಡಿಕೊಟ್ಟು ಪುನಃ ಹಿಂಭಾಗದಲ್ಲಿ ಕೂಡಿ ಮುಂದೆ ಸಾಗುತ್ತದೆ.

ಕುರುವ ಎಂದರೆ ದ್ವೀಪ, ಗಡ್ಡೆ, ನೀರಿನಿಂದ ಆವರಿಸಿರುವ ಪ್ರದೇಶ ಎಂದು ಅರ್ಥ. ಗಡ್ಡೆ ಎಂದರೆ ಕುರುವ ಎಂದು ಅರ್ಥ. ಹೀಗಾಗಿ ಇದು ದ್ವಿರುಕ್ತಿ ಪದವಾಗಿ "ಕುರುವ ಗಡ್ಡೆ ರಾಮೇಶ್ವರ" ಎಂದು ಹೆಸರು ಪಡೆದಿದೆ. ಈ ದೇವಸ್ಥಾನದ ಆವರಣದಲ್ಲಿ ೧೦-೧೨ ಶಾಸನಗಳಿವೆ. ಈ ಶಾಸನಗಳು ಚಾಲುಕ್ಯ, ಸೇವುಣ, ಹೊಯ್ಸಳ, ವಿಜಯನಗರ, ಕೆಳದಿ ಹಾಗೂ ಬೆಳಗುತ್ತಿ ಅರಸರ ಕಾಲದಲ್ಲಿ ಕೆತ್ತಿಸಿದ ಶಾಸನಗಳಾಗಿವೆ. ಈ ಶಾಸನಗಳ ಆಧಾರದಿಂದ ಈ ದೇವಾಲಯವು ಕ್ರಿ.ಶ. ೧೧೪೨ರ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿದ್ದು, ಹೊಯ್ಸಳ ಕಾಲದಲ್ಲಿ ಅಭಿವೃದ್ಧಿಯನ್ನು ಹೊಂದಿರುವುದೆಂದು ತಿಳಿದುಬರುತ್ತದೆ.

ಈ ಪ್ರಾಚೀನ ದೇವಾಲಯದ ಕಟ್ಟಡವು ಚಿಕ್ಕದಾದ ಸುಂದರ ವಾಸ್ತುವಿನಿಂದ ಕೂಡಿತ್ತು. ಈ ಕಲ್ಲಿನ ದೇವಾಲಯವು ಹೆಚ್ಚು ಅಲಂಕಾರವಿಲ್ಲದೆ ಸರಳ ಕಟ್ಟಡವಾಗಿತ್ತು. ಇದಕ್ಕೆ ಮೂರು ಕಡೆಗಳಿಂದ ಪ್ರವೇಶ ದ್ವಾರವಿದ್ದು, ದಕ್ಷಿಣ ದ್ವಾರದ ಎದುರು ೩೫ ಅಡಿ ಎತ್ತರದ ಬೃಹದಾಕಾರದ ಶಿಲಾದ್ವೀಪ ಸ್ತಂಭವಿದೆ.

ಗರ್ಭಗೃಹ, ಅಂತರಾಳ, ಅದರ ಮುಂದೆ ಅನೇಕ ಕಂಬಗಳಿದ್ದು, ಭಕ್ತರು ಕುಳಿತುಕೊಳ್ಳಲು ಒಂದು ತೆರದ ಆವರಣವಿದೆ. ದೇವಸ್ಥಾನದ ಮಧ್ಯ ನಾಲ್ಕು ಕಂಬಗಳ ಚೌಕ ಮಂಟಪವಿದೆ. ಈ ಮಂಟಪದ ಹಿಂದೆ ಅಂದರೆ ಪೂರ್ವಕ್ಕೆ ಒಂದು ದೊಡ್ಡ ನಂದಿ ಮಂಟಪವಿದೆ. ಉತ್ತರ ದಿಕ್ಕಿಗೆ ಭೈರವೇಶ್ವರನಗುಡಿ ಕಲಾತ್ಮಕವಾಗಿದೆ. ದಕ್ಷಿಣಕ್ಕೆ ದ್ವಾರವಿದ್ದು, ಅದರ ನೇರಕ್ಕೆ ಮುಂದೆ ದೀಪಸ್ತಂಭವಿದೆ. ಈ ಮಂಟಪದ ಮುಂದೆಯೆ ಪೂರ್ವಾಭಿಮುಖವಾಗಿ ರಾಮೇಶ್ವರನ ಗರ್ಭಗುಡಿ ಇದೆ. ಗರ್ಭಗೃಹದ ಮೇಲೆ ಚೌಕಾಕೃತಿಯ ದ್ರಾವಿಡ ಶೈಲಿಯ ಶಿಲಾಗೋಪುರ ತುದಿಯಲ್ಲಿ ಲೋಹಕಳಶವಿದೆ. ಗರ್ಭಗುಡಿಯಲ್ಲಿರುವ ರಾಮನಾಥನ ವಿಗ್ರಹವು

* ಮುಖ್ಯಸ್ಥರು, ಕನ್ನಡ ವಿಭಾಗ, ಶ್ರೀ ಮೃತ್ಯುಂಜಯ ಶಿವಾಚಾರ್ಯ ಪ್ರಥಮದರ್ಜೆ ಮಹಾವಿದ್ಯಾಲಯ
ಹಿರೇಕಲ್ಮಠ, ಹೊನ್ನಾಳಿ, ದಾವಣಗೆರೆ ಜಿಲ್ಲೆ

ಲಿಂಗುವಿನ ಆಕೃತಿ ಹೊಂದಿದೆ. ಈ ಲಿಂಗವು ಒಂದು ಮೀಟರ್‌ನಷ್ಟು ಎತ್ತರವಿದ್ದು ಮರಳುಗಲ್ಲಿನಿಂದ ಕೂಡಿದೆ. ಅಂತರಾಳದ ಮುಂಭಾಗದಲ್ಲಿ ಒಂದು ಪುಟ್ಟ ನಂದಿ ವಿಗ್ರಹವಿದೆ. ಎಡಭಾಗದಲ್ಲಿ ದುರ್ಗಮ್ಮನ ವಿಗ್ರಹ, ಅದರ ಪಕ್ಕದಲ್ಲಿ ಒಂದು ಕಲ್ಲಿನ ಲಿಂಗವಿದೆ. ಬಲಭಾಗದಲ್ಲಿ ಎಂದರೆ ಗೋಡೆಗಳಿಗೆ ಅಂಟಿಕೊಂಡಿರುವ ಮೂವರು ಋಷಿ ಮುನಿಗಳ ವಿಗ್ರಹಗಳಿದ್ದುವು. ಈಗ ದೇವಸ್ಥಾನದ ತಳಪಾಯ ಕುಸಿದು ಮೇಲ್ಛಾವಣಿ ಬಿರುಕುಬಿಟ್ಟು ಶಿಥಿಲಗೊಳ್ಳುತ್ತಿದ್ದ ಕಾರಣದಿಂದ ಕುರುವ ಗ್ರಾಮದ ಮುಖ್ಯಸ್ಥರು ಮೊದಲಿದ್ದ ದೇಗುಲ ರಚನೆಯನ್ನು ದುರಸ್ತಿ ಮಾಡಿಸುತ್ತಾ ಹೊಸದಾದ ರೀತಿಯಲ್ಲಿ ದೇವಸ್ಥಾನವನ್ನು ಕಟ್ಟಿಸುತ್ತಿದ್ದಾರೆ. ಈ ದೇವಸ್ಥಾನದಿಂದ ಮುಂದಕ್ಕೆ ಸಾಗಿದರೆ ಒಂದೂವರೆ ಕಿ.ಮೀ. ಹರಿದಾರಿಯಲ್ಲಿ ವಿಶಿಷ್ಟವಾದ ಒಂದು ಪುಟ್ಟ ಗುಡಿ ಇದೆ. ಇದನ್ನು ಹಾಲದೇವರ ಗುಡಿ ಎಂದು ಕರೆಯುತ್ತಾರೆ. ರಾಮಪುರದ ಮಠದ ಎದುರಿಗಿದ್ದು ಪೂರ್ವಾಭಿಮುಖವಾಗಿದೆ. ಈ ದೇವಾಲಯದ ದ್ವಾರ ಬಹಳ ವಿಶಿಷ್ಟತೆಯಿಂದ ಕೂಡಿದೆ. ಗರ್ಭಗುಡಿಯ ಒಳಗೆ ಹೋಗಬೇಕಾದರೆ ಮೂವತ್ತು ಅಡಿಯವರೆಗೂ ಒಬ್ಬರೇ ಅಂಬೆಗಾಲಿಕ್ಕುತ್ತಾ ನುಸುಳಿಕೊಂಡು ಹೋಗಬೇಕು. ಒಳಗಡೆ ಒಂದು ಪುಟ್ಟ ಲಿಂಗವಿದೆ. ಒಳಗೆ ಹೋದಾಗ ನಿಂತುಕೊಳ್ಳಲು ಸ್ಥಳವಿದೆ. ಒಳಗೆ ಇರುವ ಲಿಂಗದ ಮೇಲೆ ಸೂರ್ಯೋದಯದ ಸಂದರ್ಭದ ಕಿರಣಗಳು ಸ್ಪರ್ಶವಾಗುತ್ತವೆ. ಇದೇ ಈ ದೇವಾಲಯದ ವೈಶಿಷ್ಟ್ಯ. ಈ ದೇಗುಲ ಒಂದು ಗುಹೆಯಂತೆ ಇದೆ.

ಶ್ರೀ ಬಿ.ಎಸ್. ರಾಮಭಟ್ಟರವರು ಈ ದೇವಸ್ಥಾನದಲ್ಲಿರುವ ಮೂವರು ಋಷಿ ಮುನಿಗಳ ವಿಗ್ರಹದ ಕೆಳಗೆ ಇರುವ ಬರಹದ ಭಾಷೆಗಳನ್ನು ಅಧ್ಯಯನ ಮಾಡಿ ಬರೆದಿರುವ ಲೇಖನದ ಸಾರಾಂಶ ಮುಂದಿನಂತಿದೆ.

"ಕುರುವ ಕಾಳಾಮುಖರ ತವರು; ಕರ್ನಾಟಕ ಐತಿಹಾಸಿಕ ಅವಶೇಷಗಳ ತವರು. ಅದರಲ್ಲಿಯೂ ಶಿವಮೊಗ್ಗ ಜಿಲ್ಲೆಯ ಪ್ರಾಚೀನ ಪಳೆಯುಳಿಕೆಗಳ ಕಣಜವಾಗಿದೆ" ಎಂದಿದ್ದಾರೆ. ಮೂರು ಮುನಿಗಳ ಚಿತ್ರಣದಿಂದ ಈ ವಿಷಯವನ್ನು ವ್ಯಕ್ತಪಡಿಸಿದ್ದಾರೆ. ಕರ್ನಾಟಕದಲ್ಲಿಯೂ ಇಂತಹ ಶಿಲ್ಪವು ಅಪರೂಪ. ಮೇಲು ನೋಟಕ್ಕೆ ಯೋಗಿಗಳ ವಿಗ್ರಹಗಳು ಒಂದೇ ರೀತಿಯಾಗಿದ್ದು, ವೈವಿಧ್ಯತೆ ಹೊಂದಿವೆ. ಮೂವರು ಮೂರ್ತಿಗಳ ತಲೆಯಲ್ಲಿ ಪೇಟವಿದೆ. ಒಂದರಲ್ಲಿ ವೀರಶೈವದ ಅಷ್ಟಾವರಣದ ಸಂಕೇತವಿದೆ. ಗಡ್ಡವು ಭರ್ಜಿಯಂತೆ ಚೂಪಾಗಿದೆ. ಒಂದು ಮೂರ್ತಿಯಲ್ಲಿ ರುದ್ರಾಕ್ಷಿ ಸರವಿದೆ. ಮೊದಲ ಮೂರ್ತಿಯ ಪ್ರಭಾವಳಿಯಲ್ಲಿ ಸುಂದರವಾದ ಕಲಾತ್ಮಕವಾದ ಕೆತ್ತನೆ ಇದೆ. ಮೂರನೆಯದರಲ್ಲಿ ಸಿಂಹಲಲಾಟವಿದೆ. ಈ ಮೂರ್ತಿಗಳ ತಳಭಾಗದಲ್ಲಿ "ಕುರುವದ ರಾಮನಾಥ ದೇವರ ಭಕ್ತ, ಕಲ್ಯಾಣದೇವರ ಮಗ ಜಯಭರಾಸ ಲಿಂಗನು ಈ ಪ್ರತಿಮೆಗಳ ಮಾಡಿಸಿ ನಿಲ್ಲಿಸಿದನು" ಎಂದು ಉಲ್ಲೇಖಿಸಿದೆ. ಇದನ್ನು ಕೆತ್ತಿಸಿದ ಶಿಲ್ಪಿಯ ಹೆಸರು ಕೇತೋಜ ಎಂದಿದೆ. ಒಟ್ಟಿನಲ್ಲಿ ಇವರು ಕಾಳಾ ಮುಖರು ಎಂಬುದು ರಾಮಭಟ್ಟರ ಅಭಿಪ್ರಾಯ. ಇವರು ಮಹಾ ಸಾಧಕರಾಗಿದ್ದು, ಈ ದೇವಸ್ಥಾನದ ನಿರ್ಮಾಣಕ್ಕೆ ಕಾರಣೀಭೂತರಾಗಿರುವುದರಿಂದಲೇ ಇವರ ನೆನಪಿಗೆ ಈ ಮೂರು ವಿಗ್ರಹಗಳನ್ನು ರಾಜರು ಕೆತ್ತಿಸಿದ್ದಾರೆ.

ಇಲ್ಲಿರುವ ಶಾಸನಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿದಾಗ ಇನ್ನೂ ಹೊಸ ಹೊಸ ವಿಷಯಗಳು ಬೆಳಕಿಗೆ ಬರುತ್ತವೆ. ಎಲ್ಲಾ ಶಾಸನಗಳು ದಾನದತ್ತಿ ಶಾಸನಗಳಾಗಿವೆ. ಹೊಯ್ಸಳ ವೀರಬಲ್ಲಾಳ ದೇವನ ಕಾಲದಲ್ಲಿ ಸಾಮಂತ ರಾಜನಾದ ಬೆಳಗುತ್ತಿಸಿಂದ ಅರಸರು ಕೆತ್ತಿಸಿದ ಶಾಸನವಾದ VII-ಹೊನ್ನಾಳಿ ೭ ಮತ್ತು ೮ರ ಶಾಸನಗಳು ಈ ದೇವಸ್ಥಾನದ ಹಿರಿಮೆ ಮತ್ತು ಮಹಿಮೆಗಳನ್ನು ಎತ್ತಿ ಹಿಡಿಯುತ್ತವೆ. ೮ನೆಯ ಶಾಸನದ ಮಧ್ಯದ ಸಾಲುಗಳು ಈ ಕೆಳಕಂಡಂತಿವೆ:

"ಅವರ ಸಂತಾನಾಭಿವೃದ್ಧಿ॥ ದ್ರೌಪದಿಗೆ ಪತಿಯೆ ಸೀತೆಯ ಹೋಲಿಸುವಗ್ಗಳದ ಧರಣಿಬೋಯಿತಿ ಧರೆಯೊಳು ಹೊಡೆಹುಲ್ಲ ಬೀಸಿ ಪೂಡಿಸಿ ಪಡೆದಳು ತುಂಗಭದ್ರಾ ಮಧ್ಯದ ಮೋಜಿನಂ॥ ಅಂತು ಮತಂಗ ರಿಷಿಯಾಶ್ರಮವಪ್ಪ ವಟಬ್ಯದಲ್ಲಿ ವನರಾಜ ರಾಯನೆಂಬ ಬೋವನುಂ ಧರಣಿ ಬೋಯಿತಿಯುಂ ಹೊಡೆಹುಲ್ಲಕ್ಕೆ ಪಂದಲಾಡಿಪಲಂ. ರಳ್ತಿ.... ತಾ ಭಕ್ತಿಯಂ ಮಾಡಿ ಪರಿತುಷ್ಟರಾಗಿ ಕೆಲವು ಕಾಲ ಬ್ರಹ್ಮರ ಕಳಸೋತ್ಪತ್ತಿ ತುಂಗಭದ್ರೆಯಂ ಕಂಡು ಮೋಜಿನ ನಡವಿಕ್ಕಿ ಪ್ರಸೂತೆ ಅಹ ಮಹಾಸತಿಯಂ ನೋಡಿ ತುಂಗಭದ್ರೆ ಹೆಚ್ಚು ಹರಿವುದುಂ ಆ ಹೇತು ದಕ್ಷಿಣ ವಾರಣಾಸಿ ಶ್ರೀರಾಮನಾತ ದೇವರ ದಿಬ್ಯಕ್ಷೇತ್ರಮಂ" ಎಂಬ ಬರವಣಿಗೆ ಇದೆ. ಅಂದರೆ ಈ ಸ್ಥಳವು ಮತಂಗ ರಿಷಿಗಳ ಆಶ್ರಮವಾಗಿದ್ದು ಮತ್ತು ಸೀತೆ-ದ್ರೌಪತಿಯರಂತೆ ಮಹಾಸತಿಯಾದ ಒಬ್ಬ ಹೆಣ್ಣುಮಗಳ ಭಕ್ತಿಯ ಮಹಿಮೆಯಿಂದ ಪುಣ್ಯಭೂಮಿ ಎನಿಸಿಕೊಂಡಿದೆ. ಬಹು ದಿನಗಳಿಂದ ಮಕ್ಕಳಿಲ್ಲದೆ ಸಂತಾನಾಭಿವೃದ್ಧಿಯ ದೃಷ್ಟಿಯಿಂದ ಆ ನಾಡಿನ ಬೋವ-ಬೋಯಿತಿ ಎಂಬ ದಂಪತಿಗಳು ಈ ಆಶ್ರಮದಲ್ಲಿ ಶ್ರೀರಾಮನಾಥನ ಸೇವೆ ಮಾಡಿಕೊಂಡು ಇರುವಲ್ಲಿ ಅವರು ಒಂದು ದಿವಸ ಹೊಡೆ ಹುಲ್ಲ ಬೀಸಿ ಪಂದ್ಯ ಆಡಿ, ಭಕ್ತಿಯನ್ನು ಸಲ್ಲಿಸಿ ಸಂತುಷ್ಟರಾಗಿ ಕುಳಿತಿರುವಾಗ ತುಂಬು ಗರ್ಭಿಣಿಯಾದ ಬೋಯಿತಿಗೆ ಪ್ರಸವ ವೇದನೆ ಪ್ರಾರಂಭವಾಯಿತು. ಅದೇ ಸಮಯಕ್ಕೆ ತುಂಗಭದ್ರಾ ನದಿ ಉತ್ತರಗಾಮಿನಿಯಾಗಿ ತುಂಬಿ ಉಕ್ಕಿ ಉಕ್ಕಿ ಹರಿದು ಬರುತ್ತಾಳೆ. ಭಯಗೊಂಡ ಬೋಯಿತಿ ಈ ಪ್ರವಾಹದಲ್ಲಿ ನಾನು ಕೊಚ್ಚಿಕೊಂಡು ಹೋದರೂ ಚಿಂತೆಯಿಲ್ಲ, ನನ್ನ ಮಗು ಉಳಿಯಬೇಕೆಂದು ಮೋಜಿನ ನಡುವಿಕ್ಕಿ ಪ್ರಸೂತಿಯಾದಳು (ಅವಳ ಮನಸ್ಸಿನಲ್ಲಿ ಕರ್ಣನ ಚಿತ್ರಣ ಬಂದಿರಬಹುದು). ಈ ಮಹಾಸಾಧ್ವಿ ಮಣಿಗೆ ತುಂಗಭದ್ರೆಯೇ ಸೋತು ಸಂತೋಷಗೊಂಡು ಹೆಚ್ಚು ಹರಿವುದನ್ನು ನಿಲ್ಲಿಸಿದಳು. ಈ ಕಾರಣದಿಂದ ಈ ರಾಮನಾಥನ

ದಿಬ್ಬವು ದಕ್ಷಿಣ ಭಾರತದ ವಾರಣಾಸಿ ಎಂದು ಹೆಸರು ಪಡೆದಿದೆ. ಅಂದಿನಿಂದ ಈ ಪ್ರದೇಶವನ್ನು 'ಮೊಱಕುರುವ' ಎಂದು ಅನೇಕ ಶಾಸನಗಳಲ್ಲಿ ಕರೆದಿದ್ದಾರೆ. ಈ ಶಾಸನವು ಹೊಯ್ಸಳ ದೊರೆ ವೀರನರಸಿಂಹ-IIನ ಕಾಲದಲ್ಲಿ ಸಾಮಂತರಾಜನಾದ ಬೆಳಗುತ್ತಿಯ ಸಿಂದ ಕುಲಭೂಪತಿ ಈಶ್ವರದೇವನು ಕೆತ್ತಿಸಿದ ಶಾಸನವಾಗಿದೆ. ಇದೊಂದು ದಾನ-ದತ್ತಿಯ ಶಾಸನ. ಈ ಶಾಸನದಿಂದ ಈ ಪ್ರದೇಶಕ್ಕೆ ಮೊಱಕುರುವ ಎಂದು ಹೆಸರು ಇದ್ದು ಈಗ ಕುರುವ ಎಂಬ ಹೆಸರು ಮಾತ್ರ ಉಳಿದಿದೆ ಎಂದು ತಿಳಿದುಬರುತ್ತದೆ.

ಈ ದೇವಾಲಯಕ್ಕೆ ಶ್ರೀ ರಾಮನಾಥ ಎಂಬ ಹೆಸರು ಬರಲು ನಮ್ಮೂರಿನ ಜನಪದರ ಬಾಯಲ್ಲಿ ಒಂದು ದಂತ ಕಥೆ ಇದೆ. ತ್ರೇತಾಯುಗದಲ್ಲಿ ರಾಮನು ರಾವಣನನ್ನು ಸಂಹಾರ ಮಾಡಿ ಸೀತೆ, ಲಕ್ಷ್ಮಣ, ತನ್ನ ಭಂಟ ಹನುಮಂತನ ಜೊತೆಗೂಡಿ ಅಯೋಧ್ಯೆಗೆ ವಾಪಸಾಗುತ್ತಿದ್ದ ಸಮಯದಲ್ಲಿ ಯುದ್ಧದಲ್ಲಿ ಅನೇಕ ವೀರರು ಮಡಿದ ಪಾಪ ವಿಮೋಚನೆಗೋಸ್ಕರ ಅವರು ತಂಗಿದ ಸ್ಥಳದಲ್ಲಿ ಶಿವಲಿಂಗಗಳನ್ನು ಸ್ಥಾಪಿಸಿ ಹೋದರೆಂಬ ಐತಿಹ್ಯವಿದೆ. ಕಿಷ್ಕಿಂಧ ಪರ್ವತವನ್ನು ದಾಟಿ ಈ ತುಂಗಭದ್ರ ನದಿಯ ಗಡ್ಡೆ ಪ್ರದೇಶಕ್ಕೆ ಬಂದಾಗ ಅಂದು ಶಿವರಾತ್ರಿಯ ದಿನವಾಗಿದ್ದು ಪೂಜೆ ಮಾಡಲು ಅಲ್ಲಿ ಎಲ್ಲಿಯೂ ಲಿಂಗಗಳು ಸಿಗದ ಕಾರಣ ಹನುಮಂತನಿಗೆ ಕಾಶಿಯಿಂದ ಲಿಂಗವನ್ನು ತರಲು ಕಳುಹಿಸಿದರು. ಆದರೆ ಆಂಜನೇಯನು ಲಿಂಗವನ್ನು ತರುವುದು ತಡವಾದ ಕಾರಣ ತಾವೇ ಒಂದು ಮರಳು ಲಿಂಗವನ್ನು ಮಾಡಿ ಪೂಜಾನುಷ್ಠಾನಗೈದರು. ಈಗ ಅದೇ ಲಿಂಗವೇ ಗರ್ಭಗುಡಿಯಲ್ಲಿರುವುದು ಎಂಬ ನಂಬಿಕೆ ಇದೆ. ಕಾಶಿಯಿಂದ ಹನುಮಂತ ತಂದ ಲಿಂಗವು ದುರ್ಗಮ್ಮನ ಪಕ್ಕದಲ್ಲಿದೆ. ಶ್ರೀರಾಮನ ದಿವ್ಯವಾದ ದೃಷ್ಟಿ ಹಾಗೂ ಮಹಿಮೆಯಿಂದಲೋ ಏನೋ ಆ ಪ್ರದೇಶದಲ್ಲಿರುವ ಯಾವ ಕಲ್ಲನ್ನು ತೆಗೆದು ನೋಡಿದರೂ ಲಿಂಗುವಿನ ಆಕೃತಿಯಲ್ಲಿವೆ. ದೇವಸ್ಥಾನದ ಮುಂದಕ್ಕೆ ಅಂದರೆ ಒಂದು ಕಿ.ಮೀ. ದೂರವಿರುವ ನದಿ ಒಳ ಭಾಗದಲ್ಲಿ ಮರಳಿನಿಂದ ಹೂತು ಹೋಗಿರುವ ಒಂದು ಸುಂದರವಾದ ಕರಿ ಶಿಲೆಯ ದಾರಿ ಪೂರ್ವಾಭಿಮುಖವಾಗಿದ್ದು, ಆಶ್ಚರ್ಯವನ್ನು ಮೂಡಿಸುತ್ತದೆ. ಇದು ಒಂದುವರೆ ಅಡಿ ಅಗಲವಿದೆ. ಮರಳನ್ನು ತೆಗೆದು ತೆಗೆದಹಾಗೆ ಗೋಚರಿಸುತ್ತಾ ಹೋಗುತ್ತದೆ. ಆ ದಾರಿಯಲ್ಲಿ ಲಿಂಗಗಳು ಸಿಗುತ್ತವೆ. ಹಾಗೆಯೇ ಅಕ್ಕಪಕ್ಕದಲ್ಲಿ ಆನೆಯ ಹೆಜ್ಜೆಗಳು ಸಿಗುತ್ತವೆ. ಈ ದೃಶ್ಯವೂ ೨೦೦೩-೨೦೦೪ರ ಇಸವಿಯಲ್ಲಿ ಹೊಳೆ ಬತ್ತಿ ಹೋದ ಸಂದರ್ಭದಲ್ಲಿ ನಮ್ಮೂರಿನ ದನ ಕಾಯುವ ಹುಡುಗರಿಗೆ ಗೋಚರವಾಗಿದೆ. ಹೀಗೆ ಶ್ರೀ ಗಡ್ಡೆ ರಾಮೇಶ್ವರ ಸ್ಥಳವು ಐತಿಹ್ಯದಿಂದ ಕೂಡಿ ಮಹಿಮಾನ್ವಿತ ಸ್ಥಳವಾಗಿದೆ. ಸಂಶೋಧನಕಾರರಿಗೆ ತೆರೆದ ಬಾಗಿಲಾಗಿದೆ. ದೇವಸ್ಥಾನದ ಮುಂಭಾಗದಲ್ಲಿ ಒಂದು ಮಾತೆಂಗವ್ವನ ಗುಂಡಿ ಇದೆ. ಈ ಗುಂಡಿಯಲ್ಲಿ ಒಂದು ಶಾಸನ ಹುಗಿದಿರಬಹುದು ಎಂದು ನನ್ನ ಅಭಿಪ್ರಾಯವಾಗಿದೆ. ಅದನ್ನು ಶೋಧಿಸಬೇಕಿದೆ.

ಹೀಗೆ ಮೇಲ್ಕಾಣಿಸಿದ ಐತಿಹಾಸಿಕ ದಾಖಲೆಗಳಿಂದ ಈ ದೇವಸ್ಥಾನದ ಪ್ರಾಚೀನ ಇತಿಹಾಸದ ಸುಳಿವಿಗೆ ಪುಷ್ಟಿದಾಯಕವಾದ ಹೆಚ್ಚಿನ ಮಾಹಿತಿಗಳು ದೊರಕುತ್ತವೆ. ಶಿಲಾಗುಹೆಯಾದ ಹಾಲ ದೇವರ ಗುಡಿ ಇರುವ ಈ ಪ್ರದೇಶ ಮೊದಲು ಮತಂಗ ಋಷಿಗಳ ಆಶ್ರಮವಾಗಿದ್ದು, ಅವರು ತಪಸ್ಸು ಮಾಡಿರುವ ಸ್ಥಳವಾಗಿರಬಹುದು. ಅನಂತರ ಕಾಳಾಮುಖರ ಋಷಿಗಳು ಸಹ ಈ ಗುಹೆಯಲ್ಲಿ ತಪೋನುಷ್ಠಾನಗೈದಿರಬಹುದು. ಇವರೂ ಕಾಳಾಮುಖರು ಎನ್ನುವುದಕ್ಕೆ ಸಾಕ್ಷಿಯಾಗಿ ಅವರು ಆರಾಧಿಸುವ ಕಾಲಭೈರವನ ಗುಡಿ ಇದೆ. ಈಗ ಈ ಶಿಲಾಗುಹೆಯು ರಾಂಪುರದ ಮೂಲ ಗುರುಗಳಾದ ಹಾಲಸಿದ್ದೇಶ್ವರರು ತಪಸ್ಸು ಮಾಡಿ ಅಲ್ಲಿಯೇ ಮಡಿದರೆಂದು ಹಾಲದೇವರ ಗುಡಿ ಎಂದು ಹೆಸರು ಪಡೆದಿದೆ. ಇಲ್ಲಿರುವ ಹತ್ತಾರು ಶಾಸನಗಳಿಂದ ಶ್ರೀಕ್ಷೇತ್ರ ಬಹುಪ್ರಸಿದ್ಧಿಯನ್ನು ಹಿಂದೆ ಪಡೆದಿತ್ತು ಎಂದು ತಿಳಿದು ಬರುತ್ತದೆ. ಶಿವಮೊಗ್ಗ ಜಿಲ್ಲೆಯ ಗ್ರಾಮಗಳಲ್ಲಿ ಶ್ರೀರಾಮನಾಥನ ಅಸಂಖ್ಯ ಭಕ್ತರಿದ್ದಾರೆ.

ಈ ಗ್ರಾಮಗಳ ಪೈಕಿ ಅರಕೇರೆ, ಆನವೇರಿ, ಹೊಳೆ ಹೊನ್ನೂರು, ಹಾರನಹಳ್ಳಿ, ಸೌಳಂಗ, ಬೆಳಗುತ್ತಿ, ನಲವತ್ತಿ, ಬಿದರಹಳ್ಳಿ, ಹೊನ್ನಾಳಿ, ಮಾದನಬಾವಿ, ಹಿರೇಬೇಗೂರು, ಚಿಕ್ಕ ಬೇಗೂರು, ಉಜಿರೆಪುರ, ಗಿರಿಪುರ, ಸಾಸ್ವೆಹಳ್ಳಿ, ಕೋಟೆಹಾಳು, ಮರಿಗೊಂಡನಹಳ್ಳಿ, ಬೇಲೂರು, ಕಡದಕಟ್ಟೆ, ಮಳಲಿ, ಹೆಡೋನಳ್ಳಿ, ಅಯನೂರು, ರಾಮಪುರ, ಬೆನಕನಹಳ್ಳಿ, ಕಂಚುಗಾರನಹಳ್ಳಿ, ಕಂಕನಹಳ್ಳಿ, ಬಜೊಹಟ್ಟಿ, ಮಲ್ಲೂರು, ಹುಣಸೇಹಳ್ಳಿ, ಹುಣನಟ್ಟಿ, ಹೊಸೂರು, ಇದ್ದು ಇನ್ನೂ ಮುಂತಾದ ಗ್ರಾಮಗಳ ಹೆಸರು ಕೇಳಿಬರುತ್ತವೆ. ಅಲ್ಲದೆ ಈ ದೇವಾಲಯಕ್ಕೆ ನೀಡಿರುವ ಭೂಮಿಯ ವಿವರವು ಶಿವಮೊಗ್ಗ ಜಿಲ್ಲೆಯ ನೂರಾರು ಗ್ರಾಮ ಶಾಸನಗಳಲ್ಲಿ ಲಭ್ಯವಿದೆ. ಹೀಗೆ ಪ್ರಾಚೀನ ಕಾಲದಲ್ಲಿ ಪ್ರಸಿದ್ಧಿ ಪಡೆದ ಈ ಕುರುವ ಕರ್ನಾಟಕದ ಇತಿಹಾಸ ಪುಟದಲ್ಲಿ ಸೇರ್ಪಡೆಯಾಗದೆ ತುಂಗಭದ್ರೆಯ ನಡುಗಡ್ಡೆಯಲ್ಲಿಯೂ ಗೋಪ್ಯವಾಗಿ ಉಳಿದುಕೊಂಡಿರುವುದು ಪ್ರಚಾರಗೊಂಡರೆ ಇದು ಕರ್ನಾಟಕದ ಒಂದು ಪ್ರವಾಸಿ ಕೇಂದ್ರವಾಗಬಲ್ಲದು ಎನಿಸುತ್ತದೆ.

**ಹೊನ್ನಾಳಿ ತಾಲೂಕು ಕುರುವದ ರಾಮೇಶ್ವರ ದೇಗುಲ ಬಳಿಯ ಶಾಸನ (ಹೊನ್ನಾಳಿ ತಾ. ಶಾಸನ ಸಂಖ್ಯೆ.೮)**

೬ ಚೋಳರಾಜ್ಯಪ್ರತಿಷ್ಠಾಪನಾಚಾರ್ಯ್ಯಭುಜಬಳಚಕ್ರವರ್ತ್ತಿಹೊಯ್ಸಣವೀರನಾರಸಿಂಹದೇವರವಿಜಯರಾಜ್ಯಉತ್ತರೋ
೭ ತ್ತರಾಭಿವೃದ್ಧಿಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂಸಲಾತ್ತಮಿರೆಶಕವರ್ಷದ ೧೧೫೦ನೆ
೮ ಯಸರ್ವ್ವಧಾರಿಸಂವತ್ಸರದಭಾದ್ರಪದಶುದ್ಧಪಂಚಮೀಆದಿವಾರದಂದುಶ್ರೀಮತು**ಮೊಱಗುಱು**

೯ **ವದರಾಮನಾಥದೇವರನಿತ್ಯನೈವೇದ್ಯಕ್ಕಂನಂದಾದೀವಿಗೆಗೆಮದುಬಿಟ್ಟಂಮಿಱುಗುವ . .** ವೆಱ್‍ಯನಾದಂತೊ
೧೦ ಳಿಪಜಟಾಮಂಡಳಾಗ್ರದೊಳುತಳೆದಭವಂಕ**ಕುಱುವದರಾಮೇಶ್ವರ**ನಡೆವಳಿಯದೆವೊಡುತಿಕ್ಕುಪ
೧೧ ದ್ಮಶಿವನಭಿಮತಂ॥ ಯಿಂತೆನಿಸಿದಾಚಾರ್ಯ್ಯರಿಂಪೂಜಾಪಡೆದುಶ್ರೀರಾಮನಾಥಹೆಗ್ಗಡೆಹರಿಪ್ಪೆ
೧೨ ಯಸಿವ್ವೆಗೈಯ್ಯಹಿರಿಯಬೇಗೂರಪಡುವಣಎರೆಹಳ್ಳದಮೂಡತೋಟಗೊಂಡಪಡುವನಾಯಕಿತ್ತಿ
೧೩ ಯಕೆಱ್‍ಯಕೆಳಗೆಗಂಗಣಗಳೆಯಲ್ಲಿಮತ್ತ ೧ ಕಂಬ ೧೦ ಶ್ರೀರಾಮನಾಥದೇವರನಂದಾದೀವಿಗೆನ್ನೈವೇ
೧೪ ದ್ಯಕಂಬಿಟ್ಟಭುಮಿಚಂದ್ರಾರ್ಕ್ಕರುಳ್ಳಿನಂಅವರಸಂತಾನಾಭಿವ್ರಿದ್ಧಿ ॥ ದ್ರೌಪತಿಗೆಪತಿಯೆಸೀತೆಯಹೋ
೧೫ ಲಿಸುವೆಗ್ಗಳದಧರಣಿಬೋೞಿತಿಧರೆಯೊಳುಹೊಡೆಹುಲ್ಲಬೀಸಿಪೂಡಿಸಿಪಡೆದಳುತುಂಗಭದ್ರಾ
೧೬ **ಮಧ್ಯದಮೊಱನಂ** ॥ ಅಂತುಮತಂಗರಿಷಿಯಾಶ್ರಯವಪ್ಪವಟಬ್ಯದಲ್ಲಿ ವನರಾಜರಾಮನೆಂ
೧೭ ಬಬೋವನುಂಧರಣಿಮೋೞಿತಿಯುಂಹೊಡೆಹುಲ್ಲಕ್ಕೆಪಂದಲಾಡಿಪಲಂ . ರಳ್ತಿ . . ತಾಭಕ್ತಿಯಂಮಾ
೧೮ ಡಿಪರಿತುಷ್ಟರಾಗಿಕೆಲವುಕಾಲಬ್ರಹ್ಮರಕಳಸೋತ್ಪತ್ತಿತುಂಗಭದ್ರೆವುತ್ತರಗಾಮಿಯಾಗಿಬಹಸ
೧೯ ಮೆಯದನವಮಾಸಂನೆಱದುಪ್ರಸೂತಾಕಾಲದಮೇರೆದಪ್ಪಿಬಪ್ಪತುಂಗಭದ್ರೆಯಂಕಂಡುಮೊ
೨೦ **ಱನನಡವಿಕ್ಕಿ**ಪ್ರಸೂತೆಅಹಮಹಾಸತಿಯಂನೋಡಿತುಂಗಭದ್ರೆಹೆಚುಹರಿವುದುಂ
೨೧ ಆಹೇತುದಕ್ಷಿಣವಾರಣಾಸಿಶ್ರೀರಾಮನಾತದೇವರಿಬ್ಯಕ್ಷೇತ್ರಮಂಕಂಡುಕ್ರಿತಾರ್ಥ



**ಇತಿಹಾಸಕ್ಕೆ ಕೊಟ್ಟ ಜಾನಪದ ಸ್ಪರ್ಶ**
**ಭಕ್ತ ಮಾನಸಕ್ಕೊಂದು ಅರಸಿಬಂದ ಹರ್ಷ**

### ಕ.ಇ. ಅಕಾದೆಮಿಯ ೧೧ನೆಯ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೭ಶಿರಸಿ)

*ನಾವೀಗ ಭಾರತೀಯ ಮತ್ತು ಜಾಗತಿಕ ಚರಿತ್ರೆಯ ಒಂದು ನಿರ್ಣಾಯಕ ಮಹತ್ವದ ಘಟ್ಟದ ಪ್ರತ್ಯಕ್ಷದರ್ಶಿಗಳಾಗಿದ್ದೇವೆ. ಇತಿಹಾಸದ ಅರಿವನ್ನು ಗತಕಾಲದ ತಪ್ಪುಗಳಿಂದ ಉಂಟಾಗಿರುವ ಸಮಸ್ಯೆಗಳನ್ನು ಪರಿಹರಸಲೂ ಉಪಯೋಗಿಸಿಕೊಳ್ಳಬೇಕು. ಐತಿಹಾಸಿಕ ಸಂಗತಿಗಳ ಪರಿಣಾಮಗಳೇನು ಎಂಬುದನ್ನು ಎತ್ತಿ ತೋರಿಸಬೇಕು. ಅವುಗಳ ಪರಿಮಾರ್ಜನೆ ಹೇಗೆ ಎಷ್ಟು ಸಾಧ್ಯ ಎಂಬುದನ್ನು ಚರಿತ್ರಕಾರರು ಧೈರ್ಯದಿಂದ ತಿಳಿಸಬೇಕು. ಅವರು ಸಾಧ್ಯವಾದಷ್ಟು ಇತಿಹಾಸ ನಿರ್ಮಾಪಕರೂ ಆಗಲು ಪ್ರಯತ್ನಿಸಬೇಕು. ನಿರ್ದಿಷ್ಟ ಸಮಸ್ಯೆಗಳ ಬಗ್ಗೆ ಹಿಂದಕ್ಕೆ ಜಾಡು ಹಿಡಿದು ಹೋಗಿ ಅವುಗಳ ಮೂಲವನ್ನು ಶೋಧಿಸಿ ನೋಡಿ ಪರಿಹಾರವನ್ನು ಸೂಚಿಸುವುದಕ್ಕೆ ಇತಿಹಾಸದ ಅನ್ವಯಿಕ ಆಯಾಮ ಎಂದು ತ.ಿಯಬಹುದು.*

*ಕಾಲ ಚಕ್ರದಂತೆ ಇತಿಹಾಸ ಪ್ರವಹಿಸುತ್ತಲೇ ಇರುತ್ತದೆ. ಗತಕಾಲದ-ವರ್ತಮಾನ ಕಾಲ- ಭವಿಷ್ಯತ್ ಕಾಲವೆಂಬುದೆಲ್ಲ ಅವಿಚ್ಛನ್ನ. ಆದ್ದರಿಂದ ಇತಿಹಾಸಕಾರರಿಗೆ ತ್ರಿಕಾಲದೃಷ್ಟಿ ಇರಬೇಕಾದುದು ಅಪೇಕ್ಷಣೀಯ. ಐತಿಹಾಸಿಕ ಘಟನೆಗಳ ಬಗ್ಗೆ ಕುತೂಹಲವನ್ನು ಕೆರಳಿಸುವಂತೆ ಆಸಕ್ತಿಯನ್ನುಂಟುಮಾಡುವಂತೆ ರೋಚಕ ರೀತಿಯಲ್ಲಿ ನಿರೂಪಣೆ ಮಾಡುವುದು ಸಾಧ್ಯ. ಪ್ರೊ॥ ದೀಕ್ಷಿತ್ ಅವರು ನಿರೂಪಣೆಯ ಅಂಥ ಕಲೆಯನ್ನೂ ಕರಗತ ಮಾಡಿಕೊಂಡವರಲ್ಲಿ ಅಗ್ರಗಣ್ಯರು.*

**ಕೆ. ಅಭಿಶಂಕರ್**
ಸಮ್ಮೇಳನಾಧ್ಯಕ್ಷರು

**ಸಾಸಲು ಜೆ. ವಿಶ್ವನಾಥ್***

# ಮೂರು ಪ್ರಾಚೀನ ದೇವಾಲಯಗಳ ಶೋಧನೆ

*ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ಪ್ರಾಚೀನ ದೇಗುಲಗಳು, ಇತಿಹಾಸ ಹಾಗು ಕಲಾತ್ಮಕತೆಯನ್ನು ಮೈಗೂಡಿಸಿಕೊಂಡಿವೆ; ಸಾಂಸ್ಕೃತಿಕ ಪ್ರತಿಮಾ ತಾಣಗಳಾಗಿವೆ. ಈ ದಿಸೆಯಲ್ಲಿ ಸಾಸಲುವಿನ ಕೃಷ್ಣವರ್ಣದ ಶಿವಲಿಂಗ ಗಂಗರ ಕಾಲಸನ್ನಿಧಿಯನ್ನು ಹೇಳಿದರೆ, ಪಾಂಡವಪುರ, ತಾ. ಹೊಸಕೋಟೆಯ ಭೈರವೇಶ್ವರ ಕೋಟೇಶ್ವರ ದೇಗುಲಗಳು, ಹೊಯ್ಸಳರ ಅವಧಿಯನ್ನು ತೋರಿಕೊಳ್ಳುತ್ತವೆ; ರಾಜಘಟ್ಟದಲ್ಲಿ ವೈಷ್ಣವಿ ದೇಗುಲ - ಸಪ್ತಮಾತೃಕೆಯರ ದೇಗುಲದ ಅಸ್ತಿತ್ವ, ಬೌದ್ಧಸ್ತೂಪ ದೇಗುಲಗಳ ಸುತ್ತ ಬೃಹತ್ ಶಿಲಾಯುಗದ ಸಮಾಧಿಗಳ ಚೆಲ್ಲುವರಿ - ಇತ್ಯಾದಿಗಳು ನಮ್ಮ ಸಂಸ್ಕೃತಿಯ ನಿರಂತರ ವಿಕಸನ ದ್ಯೋತಕವೆನಿಸುತ್ತವೆ. ಹೊಸ ಶೋಧಗಳ ಸಾಂಸ್ಕೃತಿಕ ಪರಿಶ್ರಮವೆನಿಸುತ್ತದೆ.*

ಭಾರತೀಯ ಸಂಸ್ಕೃತಿಯನ್ನು ವಿಶ್ವ ವ್ಯವಸ್ಥೆಯಲ್ಲಿ ತಕ್ಕ ಐತಿಹಾಸಿಕ ಸಾಕ್ಷ್ಯಾಧಾರಗಳೊಡನೆ ಶಿಖರ ಪ್ರಾಯಕ್ಕೆ ತಂದು ನಿಲ್ಲಿಸಿರುವುದು ನಮ್ಮ ಪ್ರಾಚೀನ ದೇವಾಲಯ ಸಂಸ್ಕೃತಿ. ಕರ್ನಾಟಕದ ಈ ಮಾತಿಗೆ ನೂರಾರು ಹೊರತಾಗದ ದೇವಾಲಯಗಳನ್ನು ಶೋಧನೆಯ ಹಾದಿಯಲ್ಲಿ ನಮಗೆ ಹೆಜ್ಜೆ ಹೆಜ್ಜೆಗೆ ತೋರುತ್ತ ಬಂದಿದೆ. ಕಾಲಗರ್ಭ, ಭೂಗರ್ಭದಲ್ಲಿ ಹುದುಗಿವೆಯಾ! ಅವೆಲ್ಲವುಗಳನ್ನು ಹೊರತರುವ ಜವಬ್ದಾರಿ ನಮ್ಮ ಮೇಲಿದೆ. ಈ ಹಿನ್ನೆಲೆಯಲ್ಲಿ ನನ್ನ ಸಂಶೋಧನೆಯಲ್ಲಿ ದೊರೆತ ಮೂರು ಪ್ರಾಚೀನ ದೇವಾಲಯಗಳ ವಿವರ ಈ ಸಂಪ್ರಬಂಧದ ಉದ್ದೇಶ.

**ಗಂಗರ ಕಾಲದ ಪ್ರಾಚೀನ ಶಿವಾಲಯ**

ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲೂಕಿನ ಸಾಸಲು ಹೋಬಳಿಯ "ಭೈರಾಪುರ" ಗ್ರಾಮದ ಪರಿಸರದಲ್ಲಿ ಈ ದೇವಾಲಯ ದೊರಕಿದೆ. ಕಪ್ಪು ಕಲ್ಲಿನ ಶಿವಲಿಂಗ ಸುಂದರವಾಗಿದ್ದು ಪ್ರಾಚೀನ ಶೈಲಿಯ ಬ್ರಹ್ಮಸೂತ್ರವನ್ನು



ಭೈರಾಪುರ ಗ್ರಾಮದಲ್ಲಿ ದೊರೆತ ಗಂಗರ ಕಾಲದ ಶಿವಲಿಂಗ

ಒಳಗೊಂಡಿದೆ. ಭಗ್ನವಾದ ಪಾಣಿಪೀಠ ಮೇಲಿನ ಈ ಶಿವಲಿಂಗ ೨$^1/_2$ ಅಡಿ ಎತ್ತರವಿದೆ. ದೇವಾಲಯದ ಅವಶೇಷಗಳು ಭೂಮಿಯೊಳಗೆ ಚಲ್ಲಾಪಿಲ್ಲಿಯಾಗಿವೆ. ಈ ಶಿವಲಿಂಗದ ಎದುರು ೩೦ ಅಡಿ ದೂರದಲ್ಲಿ ಭಗ್ನಗೊಂಡ ನಂದಿ ವಿಗ್ರಹವಿದೆ. ಇದು ಗ್ರಾನೈಟ್ ಕಣಶಿಲೆಯಿಂದ ರೂಪುಗೊಂಡುದಾಗಿದೆ. ಪ್ರಾಚೀನ ಕಾಲದ ೨-೩ ಸಾವಿರ ದೊಡ್ಡ ದೊಡ್ಡ ಇಟ್ಟಿಗೆಗಳು ಈ ಶಿವಾಲಯದ ಪರಿಸರದಲ್ಲಿ ನಮಗೆ ದೊರೆತಿವೆ. ವಿಗ್ರಹ ಲಕ್ಷಣಗಳ ಆಧಾರದಿಂದ ಈ ಶಿವಾಲಯವನ್ನು ಗಂಗರ ಕಾಲದ್ದೆಂದು ಹೇಳಬಹುದು. ಇಲ್ಲಿ ದೊರೆತ ಇಟ್ಟಿಗೆಗಳು ಗಂಗರ ಕಾಲದವು. ಮೇಲ್ನೋಟಕ್ಕೆ ಆದಿ ಚರಿತ್ರೆ ಕಾಲದ ಇಟ್ಟಿಗೆಗಳಂತೆ ಇವು

* ಮುಖ್ಯಸ್ಥರು, ಕನ್ನಡ ವಿಭಾಗ, ಎಸ್.ಜೆ.ಆರ್ ರಾಜಾಜಿನಗರ ಮಹಾವಿದ್ಯಾಲಯ ರಾಜಾಜಿನಗರ. ಬೆಂಗಳೂರು - ೫೬೦ ೦೧೦.



ರಾಜಘಟ್ಟದ ಬಳಿಯ ಗಂಗರ ಕಾಲದ ಶಿವಲಿಂಗ

ಗೋಚರಿಸುತ್ತವೆ. ಮಣ್ಣೆಯ ಕಪಿಲೇಶ್ವರ ದೇವಾಲಯದ ಅಧಿಷ್ಠಾನದ ಇಟ್ಟಿಗೆ ಹಾಗೂ ತಲಕಾಡಿನ ಗಂಗರ ದೇವಾಲಯಗಳ ಇಟ್ಟಿಗೆಗಳನ್ನೇ ಈ ಇಟ್ಟಿಗಗಳು ಹೋಲುತ್ತವೆ. ರಾಜಘಟ್ಟದಲ್ಲೂ ಇದೇ ರೀತಿಯ ಗಂಗರ ಕಾಲಕ್ಕೆ ಸೇರಿದ ೩ ಶಿವಲಿಂಗಗಳು ನನ್ನ ಸಂಶೋಧನೆಯಲ್ಲಿ ಈಗಾಗಲೇ ದೊರೆತಿವೆ. ವಿಗ್ರಹ ಲಕ್ಷಣದಿಂದ ಇದು ಗಂಗರ ಕಾಲದ ಶಿವಾಲಯ. ಡಾ|| ಅ. ಸುಂದರ್‌ರವರು "ಗಂಗರ ಕಾಲದ ಪ್ರಾಚೀನ ಶಿವಾಲಯ ಸಿಕ್ಕಿಲ್ಲ. ಇಟ್ಟಿಗೆ ಗೋಪುರದ ಶಿವಾಲಯ ಸಹ ದೊರೆತಿಲ್ಲ. ದೊರೆತರೆ ಅದು ಅತೀ ಪ್ರಾಚೀನ ದೇವಾಲಯವಾಗಿರುತ್ತದೆಂದು ಒಮ್ಮೆ ಅವರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದರು." ಅವರ ಮಾತನ್ನು ಬೆನ್ನತ್ತಿ ಶೋಧನೆಗೆ ತೊಡಗಿದಾಗ ಬೈರಾಪುರ ಗ್ರಾಮದ ಇಟ್ಟಿಗೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, ಪ್ರಾಚೀನ ಇಟ್ಟಿಗೆ ಗೋಪುರವು ಈ ದೇವಾಲಯದಲ್ಲಿದ್ದಿರಬಹುದೆನಿಸುತ್ತದೆ. ನಿಖರವಾಗಿ ಹೇಳಲು ಅವಶೇಷಗಳ ಆಧಾರ ಸಾಲದು. ಆದರೂ ಈ ದೇವಾಲಯದ ಕಾಲವನ್ನು ಕ್ರಿ.ಶ. ೫-೬ ಶತಮಾನವೆಂದು ಅಭಿಪ್ರಾಯಪಟ್ಟು ಇದು ಗಂಗರ ಅತೀ ಪ್ರಾಚೀನ ಶಿವಾಲಯವೆಂದು ಹೇಳಬಹುದು.

ಗಂಗರ ತಾತ್ಕಾಲಿಕ ರಾಜಧಾನಿಯಾಗಿದ್ದು ಮಣ್ಣೆ (ಮಾನ್ಯಪುರ) ಈ ಬೈರಾಪುರ ಪರಿಸರಕ್ಕೆ ಹತ್ತಿರದಲ್ಲಿದೆ. ಗಂಗರ ರಾಜಧಾನಿ 'ಕುವಲಾಲಪುರ'ವನ್ನು ಕೋಲಾರವೆಂದು ತಜ್ಞರು ಗುರುತಿಸಿದ್ದರು. ಈ ಬೈರಾಪುರದ ಸೆರಗಿನಲ್ಲಿರುವ 'ಕೋಳಾಲ' ಅಂದಿನ ಕುವಲಾಲಪುರವಾಗಿರಬೇಕೆಂದು ಡಾ|| ಎಂ. ಚಿದಾನಂದ ಮೂರ್ತಿ ಹಾಗೂ ಡಾ|| ಹೆಚ್. ಎಸ್. ಗೋಪಾಲ್‌ರಾವ್ ರವರ ಊಹೆಗೆ ಸಾಕ್ಷಿ ಎನ್ನುವಂತೆ ಈ ಪರಿಸರದಲ್ಲಿ ಗಂಗರ ಕಾಲದ ಅವಶೇಷಗಳು ಶಾಸನಗಳು ವೀರಗಲ್ಲುಗಳು ಈಗ ದೊರೆತಿವೆ. ಆದುದರಿಂದ ಸಾಕಷ್ಟು ಗಂಗರ ಕಾಲದ ಅವಶೇಷಗಳು ಈ ಪರಿಸರದಲ್ಲಿ ದೊರೆತಿದ್ದು ಗಂಗರ ವೇಳೆವಾಳಿ ಶಾಸನೋಕ್ತ ವೀರಗಲ್ಲು ಈಗ ಲಭಿಸಿದೆ. ಆದ ಕಾರಣ 'ಕುವಲಾಲ' ಈ ಕೋಳಾಲವೇ ಆಗಿರಬೇಕು.

## ಭೈರವೇಶ್ವರ ಅಥವಾ ಕೋಟೇಶ್ವರ ದೇವಾಲಯ

ಮಂಡ್ಯ ಜಿಲ್ಲೆಯ ಪಾಂಡವಪುರ ತಾಲೂಕಿನ "ಹೊಸ ಕೋಟೆ" ಗ್ರಾಮದಲ್ಲಿ ಮಣ್ಣಿನಲ್ಲಿ ಮುಚ್ಚಿಹೋಗಿದ್ದ ದೇವಾಲಯ ವೊಂದು "ದೇವರಗುಡ್ಡ" ಎಂದು ಒಂದು ದಿಬ್ಬಕ್ಕೆ ಪೂಜೆಮಾಡುವ ಸಂಪ್ರದಾಯ ನನ್ನ ಗಮನಕ್ಕೆ ಬಂತು. ಕ್ಷೇತ್ರಕಾರ್ಯ ಕೈಗೊಂಡು ದಿಬ್ಬ ಅಗೆದಾಗ "ಹೊಯ್ಸಳರ" ಕಾಲದ ದೇವಾಲಯವೊಂದು ಪತ್ತೆಯಾಯಿತು. ಈ ದೇವಾಲಯದ ಕಾಲ ಸುಮಾರು ೧೩ನೇ ಶತಮಾನ. ಈ ದೇವಾಲಯದಲ್ಲಿ ೨ ವಿಗ್ರಹಗಳು ಪತ್ತೆಯಾದವು.

೧. ಭೈರವೇಶ್ವರ ೨. ಕೋಟೇಶ್ವರ

ಈ ವಿಗ್ರಹಗಳು ಕೈಯಲ್ಲಿ ತ್ರಿಶೂಲ, ಡಮರುಗ, ರುಂಡ, ಕತ್ತಿ ಓಡಿದಿದ್ದು ತಲೆಯಲ್ಲಿ ಹಾವನ್ನು ಹೊಂದಿವೆ. ವಿಗ್ರಹ ಲಕ್ಷಣಗಳ ಆಧಾರದಿಂದ ಈ ವಿಗ್ರಹಗಳು ಹೊಯ್ಸಳರ ಕಾಲಕ್ಕೆ ಸೇರುತ್ತವೆ. ಈ ದೇವಾಲಯದ ಪರಿಸರದಲ್ಲೇ ಹೊಯ್ಸಳರ ಪ್ರಸಿದ್ಧ 'ನಿಷ್ಕಾಮೇಶ್ವರ' ದೇವಾಲಯವು ಇದೆ. ಈ ದೇವಾಲಯದ ಸುತ್ತ ಬೃಹತ್ ಕೋಟೆಯಿದ್ದ ಸ್ಪಷ್ಟ ಕುರುಹುಗಳು ಅಲ್ಲಿ ಗೋಚರಿಸುತ್ತದೆ. ೧೦ಕೆ.ಜಿ ತೂಕದ ೨೫ ಕಲ್ಲಿನ ಗುಂಡುಗಳು ಈ ಪ್ರದೇಶದಲ್ಲಿ ದೊರೆತಿವೆ. ಶತ್ರುಗಳನ್ನು ತಡೆಯಲು ಈ ಗುಂಡುಗಳನ್ನು ಬಳಸುತ್ತಿದಿರಬೇಕು. ಈ ಕಲ್ಲಿನ ಗುಂಡುಗಳು ಶ್ರೀ ರಂಗಪಟ್ಟಣದ ಉತ್ಖನನ ದಲ್ಲಿ ದೊರೆತ ಗುಂಡುಗಳನ್ನು ಹೋಲುತ್ತವೆ.

ಹೊಯ್ಸಳರ ವಿಷ್ಣುವರ್ಧನನ ತಂದೆಯಾದ 'ಎರೆಯಂಗ'ನಿಗೆ 'ತುಳವಲ' ಎಂಬ ಹೆಸರಿನ ಹೆಂಡತಿ ಇದ್ದಳೆಂದು ಇತಿಹಾಸ ಪ್ರಸಿದ್ಧ ನಿಷ್ಕಾಮೇಶ್ವರ ದೇವಾಲಯದ ಶಾಸನ ಮೊದಲಿಗೆ ಹೇಳುತ್ತದೆ. ಇದೇ ದೇವಾಲಯದ ಪಕ್ಕದಲ್ಲಿ ಒಂದು ಬೃಂದಾವನ ಸಮಾಧಿ ಇದ್ದು ಹಳೆಯ ಕಾಲದ ಅವಶೇಷಗಳಂತಿರುವ ಈ ಹೊಯ್ಸಳರ ಕಾಲದ ಅವಶೇಷಗಳ ಬಗ್ಗೆ ವಿಸ್ತೃತ ಅಧ್ಯಯನಕ್ಕೆ ಉತ್ಖನನಕ್ಕೆ ಅವಕಾಶವಿದೆ ಈ ಸಮಾಧಿ ಯಾರದೆಂಬ ಜಿಜ್ಞಾಸೆಗೆ. ಉತ್ತರ ದೊರೆಯಬೇಕಿದೆ.

## ಪ್ರಾಚೀನ ವೈಷ್ಣವಿ ದೇವಾಲಯ

ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕಿನ 'ರಾಜಘಟ್ಟ' ಗ್ರಾಮದ ಕೆರೆಯ ಪರಿಸರದಲ್ಲಿ ಪ್ರಾಚೀನ ಕಾಲದ ವೈಷ್ಣವಿ ವಿಗ್ರಹವೊಂದು ದೊರೆತಿದೆ. ೩$^{೧}/_{೨}$ ಅಡಿ ಎತ್ತರ ೧$^{೧}/_{೨}$ ಅಡಿ ಅಗಲವಾಗಿದ್ದು ಈ ವಿಗ್ರಹವನ್ನು ಗ್ರಾನೈಟ್ ಶಿಲೆಯಿಂದ ಕೆತ್ತನೆ ಮಾಡಲಾಗಿದೆ. ಈ ವಿಗ್ರಹದ ಬಲಗೈ 'ಅಭಯಹಸ್ತ' ವಾಗಿದ್ದು ಎಡಗೈ ಕಟಿಹಸ್ತವಾಗಿದೆ. ಹಾಗೂ ಶಂಖ ಚಕ್ರಗಳಿಂದ ಅಲಂಕೃತವಾಗಿದೆ. ತಲೆಯ ಭಾಗದಲ್ಲಿ ಕರಂಡ

ಮಕುಟವಿದ್ದು ಕಿವಿಯಲ್ಲಿ ಕರ್ಣಕುಂಡಲವಿದೆ. ಕಟಿವಸ್ತ್ರ, ಬಳೆ, ಹಾರ ಹಾಗೂ ಹಲವು ರೀತಿಯ ಸೌಂದರ್ಯ ಚಿಹ್ನೆಗಳಿಂದ ಶಿಲ್ಪ ಅಲಂಕೃತವಾಗಿದೆ.

ಮಾತೃದೇವತಾ ಆರಾಧನೆ ಈ ಭಾಗದಲ್ಲಿ ಬಹು ಹಿಂದಿನಿಂದಲೂ ಇತ್ತು ಮತ್ತು ಸಪ್ತಮಾತೃಕೆಯರ ದೇವಾಲಯ ಇಲ್ಲಿತ್ತೆಂಬುದಕ್ಕೆ ಸಂಶೋಧನೆಯ ಸಂದರ್ಭದಲ್ಲಿ ಅನೇಕ ಮಹತ್ವದ ದಾಖಲೆಗಳು ಲಭ್ಯವಾಗಿವೆ.

ಮೂರ್ತಿಶಿಲ್ಪ ಲಕ್ಷಣಗಳ ಆಧಾರದಿಂದ ಈ ಶಿಲ್ಪ ಗಂಗರ ಕಾಲದ್ದಾಗಿರಬೇಕು ಅಥವಾ ಅದಕ್ಕೂ ಹಿಂದಿನದೆಂದು ಅಭಿಪ್ರಾಯ ಪಡಬಹುದು.

ಪ್ರಾಚೀನ ಲಕ್ಷ್ಮಿಯ ವಿಗ್ರಹಗಳು ಹಾಗೂ ದೇವಾಲಯಗಳು ನಮಗೆ ಕರ್ನಾಟಕದಲ್ಲಿ ಸಿಗುವುದು ತೀರ ಅಪರೂಪ. ಕೆಲ ದೇವಾಲಯಗಳು ಹಾಗು ವಿಗ್ರಹಗಳೆಂದರೆ

೧. ಕ್ರಿ.ಶ. ೧೧೧೬ರ ಹೊಯ್ಸಳ ವಿಷ್ಣುವರ್ಧನನ ಕಾಲದ ದೊಡಗದ್ದವಳ್ಳಿ ಲಕ್ಷ್ಮಿ ದೇವಾಲಯ.
೨. ಕ್ರಿ.ಶ ೧೦ನೇ ಶತಮಾನದ ಬೆಂಗಳೂರು ಪರಿಸರದ ಮಾಗಡಿ ಸಮೀಪದ ಕುದೂರಿನ ಲಕ್ಷ್ಮಿ ದೇವಾಲಯ.
೩. ಕೊಲ್ಲೂರಿನ ಮೂಕಾಂಬಿಕೆ.
೪. ಶೃಂಗೇರಿಯ ಶಾರದೆ.
೫. ಕೋಲಾರದ ಕೋಲಾರದಮ್ಮ.
೬. ಕೊಲ್ಲಾಪುರದ ಲಕ್ಷ್ಮಿ.

ಈ ಶಕ್ತಿ ದೇವತೆಯರ ಪರಂಪರೆಗೆ ಸೇರುವ ಹಾಗೂ ಈ ಎಲ್ಲಾ ದೇವತೆಗಳಿಗಿಂತ ಪ್ರಾಚೀನ ವಿಗ್ರಹ ಹಾಗೂ ದೇವಾಲಯ ಈಗ ಈ ಲೇಖನದಲ್ಲಿ ವ್ಯಕ್ತವಾಗಿರುವ ಈ ರಾಜಘಟ್ಟದ ವೈಷ್ಣವೀ ದೇವಾಲಯವಾಗಿದೆ.

ಕರ್ನಾಟಕದಲ್ಲಿ ಧಾರ್ಮಿಕ ಸಂಸ್ಕೃತಿಯ ಪ್ರಾಚೀನ ಲಕ್ಷ್ಮಿ ದೇವಿಯ ಪರಂಪರೆಗೆ ಇದೊಂದು ಮಹತ್ವದ ದೇವಾಲಯ ದಾಖಲೆಯಾಗಿವೆ.

ಈ ವೈಷ್ಣವೀ ವಿಗ್ರಹ ದೊರೆತ ಪರಿಸರದಲ್ಲಿ ಈ ದೇವಿಯ ದೇವಾಲಯದ ಅವಶೇಷಗಳು ದೊರಕುತ್ತವೆ. ಅಷ್ಟೇ ಅಲ್ಲ ಆದಿಚರಿತ್ರೆ ಕಾಲಕ್ಕೆ ಸೇರಿದ ಹಾಗೂ ಗಂಗರ ಕಾಲಕ್ಕೆ ಸೇರಿರುವ ಸುಟ್ಟ ಇಟ್ಟಿಗೆಗಳು ದೊರಕಿವೆ. ಈ ಪರಿಸರದಲ್ಲಿ ಶಾಸ್ತ್ರೀಯವಾಗಿ ಉತ್ಖನನ ನಡೆಸಿದರೆ ಪ್ರಾಚೀನ ಲಕ್ಷ್ಮೀ ದೇವಾಲಯದ ಸಮಸ್ತ ಅವಶೇಷಗಳು ಸಂಪೂರ್ಣವಾಗಿ ನಮಗೆ ದೊರಕಬಹುದು. ಹಾಗೆ ಒದಗಿದಲ್ಲಿ ಕರ್ನಾಟಕದ ಅತೀ ಪ್ರಾಚೀನ ದೇವಾಲಯವೊಂದು ದೊರೆತಂತೆ ಆಗುತ್ತದೆ. ಈಗಾಗಲೇ ಈ ರಾಜಘಟ್ಟ ಗ್ರಾಮ ಪರಿಸರದಲ್ಲಿ ನನ್ನ ಸಂಶೋಧನೆಗೆ ಕಳೆದ ೧೦ ವರ್ಷಗಳಿಂದ ೬ ಪ್ರಾಚೀನ ವಿವಿಧ ದೇವಾಲಯಗಳು ದೊರೆತಂತಾಗಿವೆ. ಅವುಗಳೆಂದರೆ :

೧. ಪ್ರಾಚೀನ ಕಾಲದ ಬ್ರಹ್ಮಸೂತ್ರ ಒಳಗೊಂಡ ಕ್ರಿ.ಶ. ೫ನೇ ಶತಮಾನಕ್ಕೆ ಸೇರುವ ಗಂಗರ ಕಾಲದ ೨½ ಉದ್ದದ ೩ ಶಿವಲಿಂಗಗಳು ಹಾಗೂ ಶಿವಾಲಯದ ಅವಶೇಷಗಳು.
೨. ಹರಿಹರೇಶ್ವರ ದೇವಾಲಯದ ಅವಶೇಷ ಹಾಗು ವಿಗ್ರಹ; ಮಣ್ಣು ಹಾಗೂ ಗಾರೆಗಚ್ಚಿನಿಂದ ಕೂಡಿದ ಕ್ರಿ.ಶ. ೪-೫ ಶತಮಾನದ್ದು.
೩. ಕ್ರಿ.ಶ. ೨-೩ನೇ ಶತಮಾನಕ್ಕೆ ಸೇರುವ 'ಬೌದ್ಧಸ್ತೂಪ'
೪. ಪ್ರಾಚೀನ ವೈಷ್ಣವೀ ದೇವಾಲಯ

ಈ ದೇವಾಲಯಗಳ ಸುತ್ತ ಬೃಹತ್‌ಶಿಲಾ ಸಂಸ್ಕೃತಿಯ ಸಮಾಧಿಗಳು. ಆದಿಚರಿತ್ರೆಕಾಲದ ಇಟ್ಟಿಗೆ ಅವಶೇಷಗಳು ಹಾಗೂ ಗಂಗರ ಕಾಲದ ಇಟ್ಟಿಗೆ ಶಿವಲಿಂಗಗಳು ೬೦ ಎಕರೆ ಪ್ರದೇಶದ ವಿಸ್ತೀರ್ಣದಲ್ಲಿ ನನ್ನ ಸಂಶೋಧನೆಯಲ್ಲಿ ಲಭ್ಯವಾಗಿವೆ. ಹಿರಿಯ ವಿದ್ವಾಂಸರಾದ ಎಂ.ಜಿ. ನಾಗರಾಜ್‌ರವರು ಈ ವೈಷ್ಣವೀ ದೇವತೆಯನ್ನು ನೋಡಿ ಇಲ್ಲಿ ದುರ್ಗಿಯ ವಿಗ್ರಹಾರಾಧನೆಯು ಇದ್ದಿರಬೇಕೆಂದು ಸಂಶಯ ವ್ಯಕ್ತಪಡಿಸಿದ್ದಾರೆ. ಈ ಬಗ್ಗೆ ವಿಸ್ತೃತ ಅಧ್ಯಯನಕ್ಕೆ ಅವಕಾಶವಿದೆ.







ಗಂಗರ ಕಾಲ ಸಾನ್ನಿಧ್ಯದಲ್ಲೊಂದು ಕೃಷ್ಣಶಿಲೆಯ ಶಿವಲಿಂಗ
ಹೊಯ್ಸಳ ಶೈಲಿಯುಟ್ಟ ನಿಷ್ಕಾಮೇಶ್ವರ ದೇಗುಲ
ರಾಜಘಟ್ಟದ ವೈಷ್ಣವಿಯ ನೆರೆಗೆ ಬೃಹತ್
ಶಿಲೆಗಳ ಸಮಾಧಿಗಳೆನೆ ಪ್ರಾಗಿತಿಹಾಸದ ಮೇಳ

ಡಾ. ರು.ಮ. ಷಡಕ್ಷರಯ್ಯ*

# ಹಾನಗಲ್ಲ ತಾಲ್ಲೂಕು ಕಲ್ಕೇರಿಯ ಸ್ಮಾರಕ ಶಿಲ್ಪಗಳು

*ಶೈವ ಶಾಕ್ತ ವೈಷ್ಣವ ಕೇಂದ್ರವೆನಿಸಿದ ಕಲ್ಕೇರಿಯ ಶಾಸನೋಕ್ತ ಶಿಲ್ಪಗಳ ಕಲಾದೃಷ್ಟಿಯ ಅಧ್ಯಯನವು ಅವುಗಳ ಕಲಾ ಇತಿಹಾಸದ ಅಭಿಜ್ಞತೆಗೆ ನೆರವಾಗುತ್ತದೆ. ಇವು ಸ್ಮಾರಕ ಶಿಲ್ಪಗಳಾಗಿ ವೀರಗಲ್ಲುಗಳು, ಕೋಟೆ ಕಾಳಗದ ವೀರಗಲ್ಲುಗಳು, ತುರುಗೋಳ, ಸ್ತ್ರೀ ವೀರೆಯ ಹೋರಾಟ, ಹುಲಿಬೇಟೆ, ಮಹಾಸತಿ ಕಲ್ಲುಗಳು, ನಿಸಿಧಿಗಲ್ಲು, ತ್ರಿಶೂಲ ಗಲ್ಲುಗಳ ರೂಪದಲ್ಲಿ ಕಾಣಬರುವಲ್ಲಿ ವಿಭಿನ್ನ ಸಾಂಸ್ಕೃತಿಕ ಮಾದರಿ-ಮಾಹಿತಿಗಳನ್ನು ಒದಗಿಸುತ್ತವೆ. ಕಲ್ಕೇರಿಯ ಶಾಸನೋಕ್ತ ಶಿಲ್ಪಗಳಂತು ತಮ್ಮ ಕಲಾವೈವಿಧ್ಯತೆಯಿಂದ, ಅರ್ಥವಂತಿಕೆಯಿಂದ ಕರ್ನಾಟಕ ಸ್ಮಾರಕ ಶಿಲ್ಪಗಳಲ್ಲಿ ವಿಶೇಷಸ್ಥಾನವನ್ನು ಪಡೆದಿವೆ ಎನ್ನಬಹುದು.*

ಕರ್ನಾಟಕದ ಸ್ಮಾರಕ ಶಿಲ್ಪಗಳಲ್ಲಿ ಹಾವೇರಿ ಜಿಲ್ಲೆಯ ಕಲ್ಕೇರಿ ಗ್ರಾಮದ ಶಿಲ್ಪಗಳು ವೈವಿಧ್ಯಮಯವೆನಿಸುತ್ತವೆ. ಈ ಶಿಲ್ಪಗಳು ವೀರಗಲ್ಲುಗಳು, ಸತಿಕಲ್ಲುಗಳು, ನಿಸಿಧಿಗಳು ಮತ್ತು ಸಂಕೇತ ಚಿತ್ರಗಳಾಗಿವೆ. ಅವುಗಳ ಕಾಲ ಸುಮಾರು ಕ್ರಿ.ಶ. ೧೦ನೇ ಶತಮಾನ ದಿಂದ ಸು. ಕ್ರಿ.ಶ. ೧೬ನೇ ಶತಮಾನ. ಶೈವ, ವೈಷ್ಣವ, ಶಾಕ್ತ ಕೇಂದ್ರವೆನಿಸಿದ್ದ ಈ ಸ್ಥಳದ ಶಾಸನವುಳ್ಳ ಈ ಶಿಲ್ಪಗಳ ಪರಿಚಯ ಡಾ. ನಾಗಯ್ಯ ಅವರ ಕಿರು ಕೃತಿ 'ಕಲಕೇರಿ' ಯಂಬುದರಲ್ಲಿದೆ. ಆದರೆ ಈ ಶಿಲ್ಪಗಳನ್ನು ಕಲಾ ದೃಷ್ಟಿಯಿಂದ ಅಧ್ಯಯನ ನಡೆಸಿದ್ದು ಕಾಣುವುದಿಲ್ಲ. ಹೀಗಾಗಿ ಪ್ರಸ್ತುತ ಅಧ್ಯಯನವು ಈ ಸ್ಥಳದ ಸಮಗ್ರ ಸ್ಮಾರಕ ಶಿಲ್ಪಗಳ ಕಲಾ ಇತಿಹಾಸವನ್ನು ಅಭಿವ್ಯಕ್ತಗೊಳಿಸುತ್ತದೆ.

**ವೀರಗಲ್ಲುಗಳು** : ಸ್ಥಳೀಯ ಸೋಮೇಶ್ವರ ದೇವಾಲಯದ ಬದಿಗೆ ಸುಮಾರು ಇಪ್ಪತ್ತು ವೀರಗಲ್ಲುಗಳಿವೆ. ಅವುಗಳಲ್ಲಿ ಕೋಟೆಕಾಳಗ, ಗೋಗ್ರಹಣ, ಸ್ತ್ರೀಯ ಜೊತೆ ವೀರನ ಹೋರಾಟ, ವೀರಸ್ತ್ರೀ ಸಂಗಡ ಹೋರಾಟ ಇತ್ಯಾದಿಗಳು ಮುಖ್ಯವೆನಿಸಿವೆ. ತಲಾ ಒಂದರಲ್ಲಿ ಮೂರು ದೃಶ್ಯಗಳಿವೆ. ಕೆಳಗಡೆ ಹೋರಾಟ, ಮಧ್ಯ ಮಡಿದ ವೀರ / ಮಹಿಳೆ / ಸ್ತ್ರೀಯನ್ನು ಹಿಡಿದುಕೊಂಡು ಸ್ವರ್ಗಲೋಕಕ್ಕೆ ದೇವಲೋಕದ ಅಪ್ಸರೆಯರು ಸಾಮಾನ್ಯವಾಗಿ ಆಕಾಶದಲ್ಲಿ ಹಾರುವ ಭಂಗಿಯಲ್ಲಿ ಒಯ್ಯುವುದು ಮತ್ತು ಮಡಿದ ವೀರ ತನ್ನ ಪತ್ನಿಯರ ಸಂಗಡ ದೇವರ ಸಾನಿಧ್ಯದಲ್ಲಿ ಕುಳಿತಿರುವುದನ್ನು ಚಿತ್ರಿಸಲಾಗಿದೆ.

ಮೊದಲನೇ ವೀರಗಲ್ಲಿನ ಮೊದಲನೇ ದೃಶ್ಯದಲ್ಲಿ ವೀರನೊಬ್ಬ ಒಂದು ಕೈಯಲ್ಲಿ ಈಟಿಯನ್ನು ಇನ್ನೊಂದು ಕೈಯಲ್ಲಿ ವೃತ್ತಾಕಾರದ ಗುರಾಣಿಯನ್ನು ಎತ್ತಿ ಹಿಡಿದು ವೈರಿಯ ಕಡೆಗೆ ಬೆನ್ನು ಹತ್ತಿರುವಂತೆ ನಿರೂಪಿಸಲಾಗಿದೆ. ಈ ವೀರನು ತನ್ನ ತುರುಬನ್ನು ತಲೆಯ ಹಿಂದಕ್ಕೆ ಕಟ್ಟಿ, ಸೊಂಟಕ್ಕೆ ಕಚ್ಚೆಯನ್ನು ಮತ್ತು ಕಠಾರಿಯನ್ನು ಕಟ್ಟಿಕೊಂಡಿರುವನು. ಆತನ ಎದುರಿಗೆ ಬಿಲ್ಲನ್ನು ಹಿಡಿದು ನಿಂತ ವೈರಿಯನ್ನು ಒಂದು ಗೂಡಿನಲ್ಲಿ ತೋರಿಸಿರುವುದು ವಿಶೇಷವೆನಿಸಿದೆ. ಈರ್ವರನ್ನು ಬಿಟ್ಟರೆ ಅವರ ಪರಿವಾರದವರನ್ನು ಚಿತ್ರಿಸಿರುವುದು ಗಮನೀಯ. ಎರಡನೇ ದೃಶ್ಯದಲ್ಲಿ ದೇವಲೋಕದ ಅಪ್ಸರೆಯರಿಬ್ಬರು ಒಂದು ಕೈಯಲ್ಲಿ ಮಡಿದ ವೀರರನ್ನು, ಇನ್ನೊಂದು ಕೈಯಲ್ಲಿ ಚೌರಿಯನ್ನಿಡಿದು ಹಾರುವ ಭಂಗಿಯಲ್ಲಿರುವರು. ಮೂರನೇ ದೃಶ್ಯದ ಹೆಚ್ಚಿನ ಭಾಗ ಒಡೆದು ಹೋಗಿದೆ. ಕಾಲ ಸು. ಕ್ರಿ.ಶ. ೧೧ನೇ ಶತಮಾನ.

ಈ ಗುಂಪಿನಲ್ಲಿ ಮೂರು ವೀರಗಲ್ಲುಗಳು ವಿಶೇಷ ಗಮನವನ್ನು ಸೆಳೆಯುತ್ತವೆ. ಈ ಮೂರರ ಮೊದಲನೇ ದೃಶ್ಯದಲ್ಲಿ ವೀರನು ಸೊಂಟಕ್ಕೆ ದಪ್ಪನೆಯ ಬಟ್ಟೆಯ ಕಚ್ಚೆಯನ್ನು ಮತ್ತು ಕಠಾರಿಯನ್ನು ಮತ್ತು ದೇಹಕ್ಕೆ ಕವಚವನ್ನು ಕಟ್ಟಿರುವನು. ತಲೆಯ ಬದಿಗಳಲ್ಲಿ ಕೇಶಗಳು ಕುಚ್ಚದ ರೀತಿಯಲ್ಲಿ ಹರಡಿದೆ; ತುರುಬನ್ನು

* ನಿರ್ದೇಶಕ (ಕಾ/ನಿ), ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೩

ಮೇಲೆ ಕಟ್ಟಿಕೊಂಡಿರುವನು. ಎದೆಯ ಮೇಲೆ ಯಜ್ಞೋಪವೀತವನ್ನು ಕಟ್ಟಿರುವುದರಿಂದ ಈತನು ಮೂಲತಃ ಬ್ರಾಹ್ಮಣನೆಂದು ಹೇಳಬಹುದು. ಒಂದರಲ್ಲಿ ಮಾತ್ರ ವೀರನಿಗೆ ಗಡ್ಡವಿರುವುದು, ಇನ್ನೆರಡರಲ್ಲಿ ವೀರರ ಮುಖಗಳು ಮುಕ್ಕಾಗಿವೆ. ವೀರನು ವೀರಾವೇಶದಿಂದ ಕತ್ತಿ-ಗುರಾಣಿಗಳನ್ನು ಹಿಡಿದು ನಿಂತಿರುವನು. ಒಂದರಲ್ಲಿ ಈ ರೀತಿಯಲ್ಲಿ ವಸ್ತ್ರ-ಅಸ್ತ್ರಗಳುಳ್ಳ ವೀರನ ಪರಿವಾರದಲ್ಲಿ ಕುದುರೆ ಸವಾರರಿದ್ದಾರೆ. ವೀರನ ಕುದುರೆ ಮತ್ತು ಹಿಡಿದ ಅಸ್ತ್ರಗಳು ಮುಕ್ಕಾಗಿವೆ. ಮೂರರಲ್ಲಿ ವೀರನು ವೈರಿಯ ಕಡೆ ಗುರಾಣಿಯನ್ನಿಡಿದಿದ್ದು, ಬಲಗೈಯಲ್ಲಿ ಕತ್ತಿಯನ್ನು ಎತ್ತಿ ಹಿಡಿದು ನಿಂತಿದ್ದಾನೆ. ಎದುರಿಗೆ ವೈರಿಯು ಕುದುರೆಸವಾರಿಯನ್ನು ಮಾಡುತ್ತ ಉದ್ದ ಗುರಾಣಿಯನ್ನು ವೀರನ ಕಡೆ ಎತ್ತಿಹಿಡಿದು ಹೋರಾಡುವ ರೀತಿಯಲ್ಲಿದ್ದಾನೆ. ವೀರನ ಪರಿವಾರ ಒಂದರಲ್ಲಿ ಕೇವಲ ಕುದುರೆ ಸವಾರರು, ಎರಡರಲ್ಲಿ ಕುದುರೆ ಸವಾರರು ಮತ್ತು ಕಾಲ್ದಳದವರು ಮತ್ತು ವೈರಿಯ ಪರಿವಾರದವರಲ್ಲಿ (ಮೂರರಲ್ಲಿ) ಕುದುರೆ ದಳದವರಿದ್ದಾರೆ. ಮೂರರಲ್ಲಿ ವೀರನು ಯುದ್ಧದಲ್ಲಿ ಸತ್ತು ಬಿದ್ದವರ ಮೇಲೆ ಮೆಟ್ಟಿ ನಿಂತಿರುವುದು ಗಮನೀಯ. ಒಂದರಲ್ಲಿ ವೀರನಿಗೆ ಪರಿವಾರದವನೊಬ್ಬನಿಗೆ (ಅಧಿಕಾರಿ/ರಾಜ) ಛತ್ರಿಯನ್ನು ಹಿಡಿಯಲಾಗಿದೆ.

ಈ ಮೂರು ಶಿಲ್ಪಗಳ ಎರಡನೇ ದೃಶ್ಯದಲ್ಲಿ ಮಡಿದ ವೀರನನ್ನು ತಲಾ ಒಂದು ಕಡೆ ಇಬ್ಬರಂತೆ ಅಂದರೆ ಒಟ್ಟು ನಾಲ್ವರು ಅಪ್ಸರೆಯರು ವೀರನ ಕೈಗಳನ್ನು ಒಬ್ಬರಿಗೊಬ್ಬರು ಸಾಲಾಗಿ ಹಿಡಿದುಕೊಂಡು ನಿಂತಿರುವರು. ಕೊನೆಗೆ ನಿಂತವರು ಮಾತ್ರ ಒಂದು ಕೈಯಲ್ಲಿ ಚೌರಿಯನ್ನು ಹಿಡಿದು ವೀರನ ಮುಖದ ಬದಿಗಳಲ್ಲಿ ಹಿಡಿದಿರುವರು. ಎರಡರಲ್ಲಿ ವೀರ ಮತ್ತು ಅಪ್ಸರೆಯರು ಸೊಂಟಕ್ಕೆ ಧರಿಸಿದ ವಸ್ತ್ರವು ರೆಕ್ಕೆಗಳಂತೆ ಬದಿಗಳಲ್ಲಿ ಹರಡಿರುವುದು ಗಮನೀಯ.



ಚಿತ್ರ - ೧



ಚಿತ್ರ - ೨



ಚಿತ್ರ - ೩

ಮೂರನೆಯ ದೃಶ್ಯದಲ್ಲಿ ಒಂದರ ಫಲಕ ಅಡ್ಡವಾಗಿ ಮುರಿದು ಹೋಗಿದೆ. ಕೇವಲ ಇಬ್ಬರು ಪತ್ನಿ ಸಮೇತ ಕುಳಿತಿದ್ದು ಉಳಿದಿವೆ. ಇನ್ನೊಂದರಲ್ಲಿ ಒಬ್ಬ ಪತ್ನಿ ಸಮೇತ ಕೈ ಮುಗಿದು ಶಿವಲಿಂಗದ ಬಲಕ್ಕೆ ಕುಳಿತಿರುವರು. ಶಿವಲಿಂಗದ ಎಡಕ್ಕೆ ಕುಳಿತ ನಂದಿಯಿದೆ. ಕುಳಿತ ವೀರನು ಕಿರೀಟಧಾರಿಯಾಗಿದ್ದಾನೆ. ಒಂದರಲ್ಲಿ ಶಿವಲಿಂಗ-ನಂದಿ ಚಿತ್ರಗಳು ಒಡೆದಿವೆ (ಚಿತ್ರ ೧, ೨ ಮತ್ತು ೩).

ಈ ಮೂರರಲ್ಲಿ ಕಾಣುವ ಒಂದೇ ರೀತಿಯ ವಸ್ತ್ರ-ಅಸ್ತ್ರ, ಸೈನ್ಯದ ವಿವರ, ಸ್ವರ್ಗಾರೋಹಣ ಮತ್ತು ಸ್ವರ್ಗದಲ್ಲಿರುವ

ಸನ್ನಿವೇಶಗಳಿಂದ ಇವು ಏಕಕಾಲಕ್ಕೆ ಮತ್ತು ಒಬ್ಬ ಕಲಾಕಾರನಿಂದ ತಯಾರಾದವೆಂದು ತರ್ಕಿಸಬಹುದು.

ಈ ಗುಂಪಿನಲ್ಲಿ ಎರಡು ವೀರಗಲ್ಲುಗಳಲ್ಲಿ ಯುದ್ಧ ದೃಶ್ಯ ಮತ್ತು ಸ್ವರ್ಗಾರೋಹಣದಲ್ಲಿ ಒಂದೇ ರೀತಿಯ ಅಳತೆ-ಪ್ರಮಾಣ ಬದ್ಧತೆಯನ್ನು ಗಮನಿಸಬಹುದು. ಒಂದರ ಯುದ್ಧದೃಶ್ಯದಲ್ಲಿ ವೀರನು ಎಡಗೈಯಲ್ಲಿ ಬಿಲ್ಲನ್ನು ಎತ್ತಿ ವೈರಿಯ ಕಡೆಗೆ ಹಿಡಿದಿದ್ದಾನೆ. ಬಲಗೈಯಲ್ಲಿ ಭಿನ್ನವಾಗಿರುವ ಕತ್ತಿ(?)ಯನ್ನು ಎತ್ತಿ ಹಿಡಿದಿರುವನು. ಅವನು ಕುದುರೆ ಸವಾರರ ಮಧ್ಯದಲ್ಲಿ ಎತ್ತರವಾಗಿ ನೆಲದಮೇಲೆ ಬಿದ್ದ ಶವಗಳನ್ನು ಮೆಟ್ಟಿ ನಿಂತಿರುವುದನ್ನು ಕಾಣಬಹುದು. ತಲಾ ಒಂದು ಕಡೆ ಎರಡು ಸಾಲುಗಳಲ್ಲಿ ಒಟ್ಟು ಇಬ್ಬರು ಕುದುರೆ ಸವಾರರು ಆತನ ಕಡೆ ಮುಖಮಾಡಿ ಕುದುರೆಗಳನ್ನು ಓಡಿಸುವ ಭಂಗಿಯಲ್ಲಿದ್ದಾರೆ. ಇನ್ನೊಂದರಲ್ಲಿ ಇದೇ ರೀತಿಯಲ್ಲಿ ಕುದುರೆ ಸವಾರರ ಮಧ್ಯ ವೀರನು ಕತ್ತಿ-ಗುರಾಣಿಗಳನ್ನು ಹಿಡಿದು ವೀರಾವೇಶ ದಿಂದ ನಿಂತಿದ್ದಾನೆ. ಆತನ ಬಲಗಡೆಯ ಪರಿವಾರದಲ್ಲಿ ಕುದುರೆ ಸವಾರರಿಗೆ ಛತ್ರಿಯನ್ನು ಹಿಡಿಯಲಾಗಿದೆ. ಬಹುಶಃ ಮೊದಲು ಈತನು ಕುದುರೆ ಸವಾರಿ ಮಾಡುತ್ತ ಬಂದಿರಬೇಕು. ಈ ದೃಶ್ಯದ ಮೇಲ್ಗಡೆ ಎರಡು ಕುದುರೆ ಸವಾರರ ಮಧ್ಯೆ ಒಬ್ಬ ವೀರನು ನಿಂತು ಹೋರಾಡುವ ರೀತಿಯಲ್ಲಿ ಚಿತ್ರಿಸಲಾಗಿದೆ. ಕುದುರೆ ಸವಾರರ ಜೊತೆ ಕಾಲ್ದಳದವರಿದ್ದು ಕೈಗಳಲ್ಲಿ ಈಟಿ ಮತ್ತು ಗುರಾಣಿಗಳನ್ನು ಹಿಡಿದಿರುವರು.

ಎರಡನೇ ದೃಶ್ಯದ ಒಂದರಲ್ಲಿ ನಾಲ್ವರು ಅಪ್ಸರೆಯರು ಇನ್ನೊಂದರಲ್ಲಿ ಆರು ಅಪ್ಸರೆಯರು ಮಡಿದ ವೀರನನ್ನು ಕೈಗಳಲ್ಲಿ ಹಿಡಿದು ಆಕಾಶದಲ್ಲಿ ಹಾರುವ ರೀತಿಯಲ್ಲಿದ್ದಾರೆ. ಕೊನೆಯ ಅಂಚುಗಳಲ್ಲಿ ನಿಂತ ಅಪ್ಸರೆಯರು ಉಳಿದೊಂದು ಕೈಯಲ್ಲಿ ಚೌರಿಯನ್ನು ಹಿಡಿದಿರುವರು.


ಚಿತ್ರ - ೪

ಮೂರನೇ ದೃಶ್ಯ ಒಂದರಲ್ಲಿ ಆಯತಾಕಾರದ ವಿಮಾನದ ಮಧ್ಯ ಮಡಿದ ವೀರನು ಕೈ ಮುಗಿದು ಶಿವಲಿಂಗದ ಬಲಕ್ಕೆ ಕುಳಿತಿರುವನು. ಎಡಕ್ಕೆ ನಂದಿ ಕುಳಿತಿದೆ. ಶಿವಲಿಂಗವನ್ನು ಗಡ್ಡಧಾರಿ ಯತಿ ಪೂಜೆಸುತ್ತ ನಿಂತಿರುವನು. ಶಿವಲಿಂಗದ ಮೇಲ್ಭಾಗಕ್ಕೆ ರುದ್ರಾಕ್ಷಿ ಹಾರವನ್ನು ಸುತ್ತಲಾಗಿದೆ. ವಿಮಾನವನ್ನು ಎರಡು ಅರ್ಧಗಂಭಗಳು ಹೊತ್ತು ನಿಂತಿವೆ. ಇನ್ನೊಂದರಲ್ಲಿ ವಿಮಾನವನ್ನು ಚಿತ್ರಿಸಿಲ್ಲ. (ಚಿತ್ರ ೪). ಶಿವಲಿಂಗಕ್ಕೆ ರುದ್ರಾಕ್ಷಿಹಾರವನ್ನು ಸುತ್ತಿದ ನಿದರ್ಶನಗಳು ಈ ಪ್ರದೇಶದಲ್ಲಿ ಸು. ಕ್ರಿ.ಶ. ೧೦ನೇ ಶತಮಾನದಿಂದ ಕಾಣುತ್ತವೆ. ಪ್ರಸ್ತುತ ಶಿಲ್ಪದ ಕಾಲ ಸು. ಕ್ರಿ.ಶ. ೧೨ನೇ ಶತಮಾನ.

ಒಂದು ವೀರಗಲ್ಲಿನ ಮೊದಲನೇ ದೃಶ್ಯದಲ್ಲಿ ವೀರನು ಎಡಕ್ಕೆ ವೈರಿಯ ಕಡೆ ಈಟಿಯನ್ನು ಹಿಡಿದು ಕುದುರೆ ಸವಾರಿ ಮಾಡುತ್ತಿರುವನು. ನೆಲದ ಮೇಲೆ ಶವಗಳು ಬಿದ್ದಿವೆ. ವೀರನ ಚಿತ್ರವನ್ನು ದೊಡ್ಡದಾಗಿ ಚಿತ್ರಿಸುವ ಕಾರಣಕ್ಕಾಗಿ ಆತನ ಮತ್ತು ಆತನ ಪರಿವಾರದವನ ತಲೆ ಭಾಗವನ್ನು ಮಧ್ಯ ಪಟ್ಟಿಕೆಯ ಕೆಳಭಾಗವನ್ನು ಸ್ವಲ್ಪ ಕತ್ತರಿಸಿ ಚಿತ್ರಿಸಲಾಗಿದೆ. ಎರಡನೇ ದೃಶ್ಯದಲ್ಲಿ ನಾಲ್ವರು ಅಪ್ಸರೆಯರು ಮಡಿದ ವೀರನನ್ನು ಕೈಗಳಲ್ಲಿ ಹಿಡಿದು ಹೊತ್ತುಕೊಂಡು ಆಕಾಶದಲ್ಲಿ ಹಾರುತ್ತಿರುವರು. ವೀರನ ಮುಖದ ಬದಿಗಳಲ್ಲಿ ಚೌರಿಗಳನ್ನು ಅಂಚಿನಲ್ಲಿ ನಿಂತ ಅಪ್ಸರೆಯರು ಇಲ್ಲಿಯೂ ಹಿಡಿದಿರುವರು. ಮೂರನೆಯ ದೃಶ್ಯದಲ್ಲಿ ಬಹುಭಾಗ ಒಡೆದಿದ್ದು ಅಲ್ಲಿ ಶಾಸನ ಭಾಗ, ಕುಳಿತ ವೀರ, ಶಿವಲಿಂಗ ಮತ್ತು ನಂದಿ ಭಾಗ ಕಾಣುತ್ತವೆ. ಕಾಲ ಸು. ಕ್ರಿ.ಶ. ೧೨ನೇ ಶತಮಾನ. (ಚಿತ್ರ : ೫)


ಚಿತ್ರ - ೫

ಒಂದರ ವೀರಗಲ್ಲಿನಲ್ಲಿ ಯುದ್ಧದ ದೃಶ್ಯ: ವೀರನು ವೈರಿಗೆ ಕತ್ತಿಯಿಂದ ಇರಿಯುತ್ತ ನಿಂತಿದ್ದಾನೆ. ಈರ್ವರು ನಿಂತಿದ್ದು ವೀರನನ್ನು ಮಾತ್ರ ಸ್ವಲ್ಪ ದೊಡ್ಡದಾಗಿ ಚಿತ್ರಿಸಲಾಗಿದೆ. ವೀರನ ಪರಿವಾರದಲ್ಲಿ ಒಬ್ಬನು ಬಿಲ್ಲನ್ನು ಹಿಡಿದು ನಿಂತಿದ್ದರೆ ವೈರಿಯ ಪರಿವಾರದಲ್ಲಿ ಇಬ್ಬರು ಎರಡು ಸಾಲಿನಲ್ಲಿ ನಿಂತಿದ್ದಾರೆ. ಒಬ್ಬನು ವೀರನ ಕಡೆಗೆ ಬಿಲ್ಲಿನಿಂದ ಬಾಣವನ್ನು ಬಿಡುವ ರೀತಿಯಲ್ಲಿ ನಿಂತಿದ್ದಾನೆ. ಎರಡನೆಯ ದೃಶ್ಯದಲ್ಲಿ ವೀರನನ್ನು ಇಬ್ಬರು ಅಪ್ಸರೆಯರು ಆತನ ಕೈಗಳನ್ನು ಹಿಡಿದುಕೊಂಡು ನಿಂತಿದ್ದಾರೆ. ಮೂರನೇ ದೃಶ್ಯದಲ್ಲಿ ಮಡಿದ ವೀರ ಕುಳಿತಿದ್ದಾನೆ. ಯತಿ ಶಿವಲಿಂಗವನ್ನು ಪೂಜಿಸುತ್ತ ನಿಂತಿದ್ದಾನೆ. ಬದಿಗೆ ಕುಳಿತ ನಂದಿಯಿದೆ. ಮೇಲ್ಭಾಗ ತ್ರಿಕೋನಾ ಕಾರದಲ್ಲಿದೆ. ಕಾಲ ಸು. ಕ್ರಿ.ಶ. ೧೨ನೇ ಶತಮಾನ.

ಅಲ್ಲಿಯ ಸೋಮೇಶ್ವರ ದೇವಾಲಯದ ಗೋಡೆಗೆ ಆನಿಸಿ ನಿಲ್ಲಿಸಿದ ಮೂರು ಶಿಲ್ಪಗಳು ಬದಿಯಲ್ಲಿರುವ ಎರಡು ಶಿಲ್ಪಗಳಲ್ಲಿ

ಎರಡನೇ ದೃಶ್ಯದಲ್ಲಿ ಇಬ್ಬರು ಅಥವಾ ನಾಲ್ವರು ಅಪ್ಸರೆಯರು ಮಡಿದ ವೀರನನ್ನು ವಿಮಾನದಲ್ಲಿ ಕೂಡಿಸಿ ಒಯ್ಯುವುದನ್ನು ತೋರಿಸಲಾಗಿದೆ. ಮಡಿದ ವೀರನು ಎರಡರಲ್ಲಿ ಪದ್ಮಾಸನ ಮತ್ತು ಯೋಗಮುದ್ರೆಯಲ್ಲಿರುವನು. ಮೂರರಲ್ಲಿ ಕೈಮುಗಿದು ಪದ್ಮಾಸನ ದಲ್ಲಿ ಕುಳಿತಿರುವನು. ಒಂದರ ವಿಮಾನದ ಅರ್ಧಗಂಭಗಳಿಗೆ ಬಾಳೆಯ ಗಿಡಗಳನ್ನು ಕಟ್ಟಿ ಅಲಂಕರಿಸಲಾಗಿದೆ. ನಾಲ್ವರು ಅಪ್ಸರೆ ಯರಿದ್ದರೆ ಇಬ್ಬರು ತಮ್ಮ ತಲಾ ಒಂದು ಕೈಯಲ್ಲಿ ವಿಮಾನವನ್ನು ಇನ್ನೊಂದು ಕೈಯಲ್ಲಿ ಚೌರಿಯನ್ನು ಹಿಡಿದು ಹಾರುತ್ತಿರುವರು. ಉಳಿದಿಬ್ಬರೂ ಚೌರಿಯನ್ನು ಹಿಡಿದು ನಿಂತಿರುವರು. ಇಬ್ಬರು ವಿಮಾನವನ್ನು ಹಿಡಿದು ಒಂದು ಕಾಲನ್ನು ಮುಂದಕ್ಕೆ ಇನ್ನೊಂದನ್ನು ಹಿಂದಕ್ಕೆ ಬಗ್ಗಿಸಿ ಹಾರುತ್ತಿರುವರು.

ಈ ಮೂರರ ಯುದ್ಧದ ದೃಶ್ಯದಲ್ಲಿ ಅನೇಕ ಕಾಲ್ದಳದವರಲ್ಲಿ ವೀರನನ್ನು ಗಾತ್ರದಲ್ಲಿ ದೊಡ್ಡದಾಗಿ ಚಿತ್ರಿಸಲಾಗಿದೆ. ವೀರ-ವೈರಿಗಳ ಪರಿವಾರದವರು ಈಟಿ-ಗುರಾಣಿ ಅಥವಾ ಕತ್ತಿ-ಗುರಾಣಿಗಳನ್ನು ಹಿಡಿದು ಯುದ್ಧ ಮಾಡುತ್ತಿರುವರು. ಒಂದರಲ್ಲಿ ಮಾತ್ರ ವೀರನ (ರಾಜ) ತಲೆಯ ಮೇಲೆ ಛತ್ರಿಯಿದೆ. ಅಲ್ಲಿಯ ಒಂದು ವೀರಗಲ್ಲಿನಲ್ಲಿ ಯುದ್ಧದ ದೃಶ್ಯದಲ್ಲಿ ಒಂದು ಕಡೆ ಗಡ್ಡಧಾರಿ ವೀರ ನೆಲದ ಮೇಲೆ ಬಿದ್ದ ಶವದ ಮೇಲೆ ನಿಂತಿದ್ದಾನೆ. ಆತನ ಎಡಕ್ಕೆ ತಲೆಕೆಳಗಾಗಿ ಬಿದ್ದವನು ನಿಂತ ರೀತಿಯಲ್ಲಿದ್ದು, ಆತನ ತಲೆಯನ್ನು ಕತ್ತರಿಸಲಾಗಿದೆ. ಈತನನ್ನು ಒಂದು ಗೂಡಿನಲ್ಲಿ ತೋರಿಸಲಾಗಿದೆ. ಇದು ಅಪರೂಪದ ದೃಶ್ಯ. ಉಳಿದ ದೃಶ್ಯಗಳಲ್ಲಿ ಕ್ರಮವಾಗಿ ನಾಲ್ವರು ಅಪ್ಸರೆಯರು ವೀರನನ್ನು ಒಯ್ಯುತ್ತಿರುವರು ಮತ್ತು ಶಿವಲಿಂಗದ ಎದುರಿಗೆ ಧ್ಯಾನ ಮಾಡುತ್ತ ಕುಳಿತಿರುವನು. ಬದಿಗಳಲ್ಲಿ ಯತಿ, ನಂದಿ ಇವೆ. ಕಾಲ ಸು. ಕ್ರಿ.ಶ. ೧೨ನೇ ಶತಮಾನ.

ಅಲ್ಲಿಯ ಇನ್ನೊಂದು ವೀರಗಲ್ಲಿನಲ್ಲಿ ವೀರನ ಸುತ್ತಲೂ ಮೋಡಗಳಿಂದ ಆವೃತ್ತಗೊಳಿಸಲಾಗಿದೆ. ಎದುರಿಗೆ ವೈರಿಯಿದ್ದಾನೆ. ನಂತರ ನಾಲ್ವರು ಅಪ್ಸರೆಯರು ಆತನನ್ನು ಒಯ್ಯುತ್ತಿರುವರು. ಮೇಲೆ ಶಿವಲಿಂಗದ ಬದಿಗಳಲ್ಲಿ ವೀರ, ಯತಿ, ನಂದಿಗಳಿವೆ. ಕಾಲ ಸು. ಕ್ರಿ.ಶ. ೧೨ನೇ ಶತಮಾನದ. ಮೋಡದಿಂದ ಆವೃತ್ತ ಗೊಳಿಸುವ ಪರಂಪರೆ ರಾಷ್ಟ್ರಕೂಟರ ಕಾಲದಲ್ಲಿ ಸಾಮಾನ್ಯವಾಗಿತ್ತು. ಈ ಲಕ್ಷಣ ಈ ಭಾಗದಲ್ಲಿ ಸು. ಕ್ರಿ.ಶ. ೧೨ನೇ ಶತಮಾನದ ವೀರಗಲ್ಲುಗಳಲ್ಲಿ ಮುಂದುವರಿದಿರುವುದು ಗಮನೀಯ.

ಅಲ್ಲಿಯ ಕೆರೆ ದಂಡೆಯಲ್ಲಿ ಒಂದು ವೀರಗಲ್ಲಿನ ಕೆಳಭಾಗ ಹುಗಿದಿದೆ. ಉಳಿದ ಭಾಗದಲ್ಲಿ ವೀರನೊಬ್ಬನನ್ನು ಇಬ್ಬರು ಅಪ್ಸರೆ ಯರು ಒಯ್ಯುವ ದೃಶ್ಯವಿದೆ. ಮೇಲ್ಗಡೆ ಕಮಲಗಳನ್ನು ಹಿಡಿದು ಸಮಭಂಗಿಯಲ್ಲಿ ಸೂರ್ಯನ ಎದುರಿಗೆ ವೀರನು ನಿಂತಿದ್ದಾನೆ. ಕಾಲ ಸುಮಾರು ಕ್ರಿ.ಶ. ೧೧ನೇ ಶತಮಾನ. ಈ ರೀತಿ ಮಡಿದ ವೀರನು ದೇವರ ಸಾನಿಧ್ಯದಲ್ಲಿ ನಿಂತಿರುವ ಶಿಲ್ಪ ರಾಷ್ಟ್ರಕೂಟರ ಕೆಲವು ಶಿಲ್ಪಗಳಲ್ಲಿ ಈ ಭಾಗದಲ್ಲಿ ಕಾಣಿಸಿವೆ. (ಉದಾಹರಣೆಯಾಗಿ ದೇವೀಹೊಸೂರಿನ ಬನಶಂಕರಿ ದೇವಾಲಯ ಬದಿಗಿನ ವೀರ ಗಲ್ಲನ್ನು ಕೊಡಬಹುದು.) ಒಂದರಲ್ಲಿ ಮಾತ್ರ ಕೇವಲ ವೀರನು ವೈರಿಯ ಸಂಗಡ ಬಿಲ್ಲನ್ನು ವೈರಿಗೆ ಎದುರಾಗಿ ಹಿಡಿದು ಕತ್ತಿಯಿಂದ ಯುದ್ಧ ಮಾಡುತ್ತಿರುವನು. ಆದರೆ ವೈರಿಯು ಕತ್ತಿ-ಗುರಾಣಿಗಳನ್ನು ಹಿಡಿದು ಯುದ್ಧ ಮಾಡುತ್ತಿರುವನು. ವೈರಿಗೆ ಬಿಲ್ಲಿನಿಂದ ಬಿಟ್ಟ ಬಾಣಗಳು ನೆಟ್ಟಿರುವುದನ್ನು ಚಿತ್ರಿಸಿರುವುದು ಗಮನೀಯ. ಏಕೆಂದರೆ ಮಡಿದ ವೀರನಿಗೆ ಬಾಣಗಳು ನೆಟ್ಟಿರುವುದನ್ನು ಸಾಮಾನ್ಯವಾಗಿ ವೀರಗಲ್ಲುಗಳ ಕಲಾ ಇತಿಹಾಸದಲ್ಲಿ ಕಂಡುಬರುತ್ತದೆ.

ಮೂರನೆಯ ದೃಶ್ಯದಲ್ಲಿ ವೀರನು ಯತಿಯು ಆರಾಧಿಸುವ ಶಿವಲಿಂಗದ ಬಲಗಡೆ ಕುಳಿತಿರುವುದನ್ನು ತೋರಿಸಲಾಗಿದೆ. ಆದರೆ ಒಂದರಲ್ಲಿ ವೀರನು ಶಿವಲಿಂಗದ ಎದುರಿಗೆ ಪೀಠದ ಮೇಲೆ ಕುಳಿತಿರುವುದು ಗಮನೀಯ. ಇನ್ನೊಂದರಲ್ಲಿ ವೀರನು ಶಿವಲಿಂಗದ ಎಡಗಡೆ ಕುಳಿತಿರುವುದು ಗಮನೀಯ. ಶಿವಲಿಂಗದ ಎಡಗಡೆ ವೀರನು ಕುಳಿತಿರುವ ನಿದರ್ಶನಗಳು ವಿರಳ. ಇನ್ನುಳಿದವುಗಳಂತೆ ಅಲ್ಲಿ ಕುಳಿತ ನಂದಿ ಇರುವುದಿಲ್ಲ. ಕಾಲ ಸು. ಕ್ರಿ.ಶ. ೧೧ ರಿಂದ ೧೨ನೇ ಶತಮಾನ. (ಚಿತ್ರ : ೬)



ಚಿತ್ರ - ೬

ಅಲ್ಲಿಯ ಇನ್ನೂ ಕೆಲವು ಶಿಲ್ಪಗಳನ್ನು ಈ ಕೆಳಗಿನಂತೆ ವರ್ಗೀಕರಿಸಿ ಅಧ್ಯಯನ ಮಾಡಬಹುದು.

**ಕೋಟೆ ಕಾಳಗ** : ಅಲ್ಲಿ ಎರಡು ಕೋಟೆಕಾಳಗದ ವೀರಗಲ್ಲುಗಳಿವೆ. ತಲಾ ಒಂದೊಂದರಲ್ಲೂ ಮೂರು ದೃಶ್ಯಗಳಿವೆ. ಒಂದರಲ್ಲಿ ಕುದುರೆ, ನಿಶಾನೆ ಹಿಡಿದು ನಿಂತ ಸೇವಕ ಮತ್ತು ವೀರನು ದಿಟ್ಟತನದಿಂದ ಒಂದು ಕಾಲನ್ನು ನೆಲದ ಮೇಲೆ ಬಿದ್ದವನ ಮೇಲೆ ಇನ್ನೊಂದು ಕಾಲನ್ನು ಕೋಟೆಯ ಗೋಡೆಗೆ ಇಟ್ಟು

ನಿಂತಿರುವುದು ವಿಶೇಷ ಗಮನವನ್ನು ಸೆಳೆಯುತ್ತದೆ. ಬಲಗೈಯಲ್ಲಿ ಕತ್ತಿಯನ್ನು ಎತ್ತಿ ಹಿಡಿದಿದ್ದು, ಎಡಗೈಯಲ್ಲಿ ವೃತ್ತಾಕಾರದ ಗುರಾಣಿಯನ್ನು ಕೋಟೆ ಮೇಲೆ ನಿಂತ ವೈರಿಗಳ ವಿರುದ್ಧ ಹಿಡಿದಿರುವನು. ಎಡಗಡೆ ಕೋಟೆ ಗೋಡೆಯ ಬುಡದಲ್ಲಿ ಒಬ್ಬನು ಈಟಿ-ಗುರಾಣಿ ಹಿಡಿದು ನಿಂತಿದ್ದರೆ ಕೋಟೆ ಗೋಡೆಯ ಮೇಲೆ ನಿಂತ ವೈರಿಗಳು ಕೋಟೆ ಗೋಡೆಯನ್ನು ಹತ್ತಿದವನನ್ನು ಕೆಳಗಡೆ ದೂಡಿರುವುದನ್ನು ಚಿತ್ರಿಸಲಾಗಿದೆ.

ಎರಡನೇ ದೃಶ್ಯದಲ್ಲಿ ನಾಲ್ವರು ಅಪ್ಸರೆಯರು ಮಡಿದ ವೀರನ ಕೈಗಳನ್ನು ಹಿಡಿದು ಸಾಲಾಗಿ ಹಾರುವ ರೀತಿಯಲ್ಲಿ ತೋರಿಸಲಾಗಿದೆ. ಕೊನೆಯವಳ ಒಂದು ಕೈಯಲ್ಲಿ ಚೌರಿಯಿದೆ. ಮೂರನೆಯ ದೃಶ್ಯದಲ್ಲಿ ವೀರನು ಕೈಮುಗಿದು ಶಿವಲಿಂಗದ ಬಲಕ್ಕೆ ಕುಳಿತಿದ್ದು ಯತಿಯು ನಿಂತು ಆರಾಧಿಸುತ್ತಿದ್ದಾನೆ. ಎಡಕ್ಕೆ ಕುಳಿತ ನಂದಿಯಿದೆ. ಮೇಲ್ಭಾಗ ತ್ರಿಕೋನಾಕಾರದಲ್ಲಿದೆ. ಕಾಲ ಸು. ಕ್ರಿ.ಶ. ೧೨ನೇ ಶತಮಾನ. (ಚಿತ್ರ : ೭)



ಚಿತ್ರ - ೭

ಮತ್ತೊಂದರಲ್ಲಿ ವೀರನು ಮತ್ತು ಆತನ ಕಾಲ್ದಳ ಮತ್ತು ಕುದುರೆಗಳ ಸಹಿತವಾಗಿ ಕೋಟೆಯ ಮೇಲೆ ಯುದ್ಧ ಮಾಡುತ್ತಿರುವುದನ್ನು ಚಿತ್ರಿಸಲಾಗಿದೆ. ವೀರನು ಕಠಾರಿ ಮತ್ತು ಗುರಾಣಿ ಹಿಡಿದು ಕುದುರೆಯನ್ನೇರಿದ ವೈರಿಯ ಕಡೆಗೆ ಏರಿ ಹೋಗಿ ಕಠಾರಿಯಿಂದ ಕುದುರೆಗೆ ತಿವಿದಿದ್ದಾನೆ. ಕೋಟೆಯ ಗೋಡೆಯ ಮೇಲೆ ತೆನೆಗಳ ಹಿಂದೆ ವೈರಿಯ ಸೇವಕರು ಈಟಿಯನ್ನಿಡಿದು ನಿಂತಿರುವರು. ಎರಡನೇ ದೃಶ್ಯದಲ್ಲಿ ವೀರನು ಇಬ್ಬರು ಅಪ್ಸರೆಯರ ಭುಜಗಳ ಮೇಲೆ ತನ್ನ ಕೈಗಳನ್ನಿಟ್ಟಿದ್ದು, ಅಪ್ಸರೆಯರು ತಲಾ ಒಂದು ಕೈಯಲ್ಲಿ ವೀರನನ್ನು ಹಿಡಿದು ಹಾರುತ್ತಿರುವರು. ಇನ್ನೊಂದು ಕೈಯಲ್ಲಿ ಚೌರಿಯನ್ನು ಹಿಡಿದಿರುವುದು ಮೂರನೇ ದೃಶ್ಯದಲ್ಲಿ ಒಂದೇ ಸಾಲಿನಲ್ಲಿ ಮೂರು ಗೂಡುಗಳಲ್ಲಿ ಕ್ರಮವಾಗಿ ವೀರ, ಯತಿ-ಆರಾಧಿಸುವ ಶಿವಲಿಂಗ ಮತ್ತು ಕುಳಿತ ನಂದಿಗಳಿವೆ. ಮೇಲಿನ ಭಾಗ ತ್ರಿಕೋನಾಕಾರದಲ್ಲಿದೆ. ಕಾಲ ಸು. ಕ್ರಿ.ಶ. ೧೨ನೇ ಶತಮಾನ. ಈ ಕಾಲದ ಕೋಟೆಕಾಳಗದ ಮತ್ತೊಂದು ಶಿಲ್ಪವು ಲಕ್ಷ್ಮೇಶ್ವರದ ಸೋಮೇಶ್ವರ ದೇವಾಲಯದ ಪ್ರವೇಶದಲ್ಲಿದೆ.

**ಗೋಗ್ರಹಣ** : ಕಳ್ಳರಿಂದ ಗೋವುಗಳನ್ನು ಬಿಡಿಸಲು ಹೋರಾಡಿ ಮಡಿದ ಮೂವರು ವೀರರ ದೃಶ್ಯ ಮನಮೋಹಕವಾಗಿದೆ. ಮೊದಲ ದೃಶ್ಯದಲ್ಲಿ ಕೆಳಗಡೆ ಒಂದೇ ಸಾಲಿನಲ್ಲಿ ಆಕಳುಗಳು ಎಡಗಡೆಗೆ ಹೋಗುತ್ತಿರುವುದನ್ನು ಚಿತ್ರಿಸಲಾಗಿದೆ. ಅವುಗಳ ಮೇಲ್ಭಾಗದಲ್ಲಿ ಮೂವರು ವೈರಿಗಳ (ಕಳ್ಳರ) ವಿರುದ್ಧ ಹೋರಾಡಲು ಮುನ್ನುಗ್ಗುತ್ತಿರುವ ದೃಶ್ಯವಿದೆ. ಈ ಮೂವರನ್ನು ಗಾತ್ರದಲ್ಲಿ ಒಂದೇ ಎತ್ತರದಲ್ಲಿ ಚಿತ್ರಿಸಲಾಗಿದೆ. ತಲಾ ಒಬ್ಬರು ಕೈಗಳಲ್ಲಿ ಕತ್ತಿ-ಗುರಾಣಿಗಳನ್ನು ಹಿಡಿದಿದ್ದರೆ ಮುಂದೆ ನಿಂತವನು ಕತ್ತಿಯಿಂದ ಕೊಲ್ಲುತ್ತಿರುವುದನ್ನು ಚಿತ್ರಿಸಲಾಗಿದೆ. ವೈರಿಪರಿವಾರದವನ ತಲೆಯನ್ನು ಕತ್ತರಿಸಲಾಗಿದೆ. ಈ ಮೂವರಲ್ಲಿ ಇಬ್ಬರು ವೀರರೆಂದು ಉಳಿದೊಬ್ಬರು



ಚಿತ್ರ - ೮

ಮಹಿಳೆಯೆಂದು ಅವರ ದೇಹಾಂಗದ ಲಕ್ಷಣಗಳಿಂದ ತಿಳಿದು ಬರುತ್ತದೆ. ಎರಡನೇ ಸ್ವರ್ಗಾರೋಹಣ ದೃಶ್ಯದಲ್ಲಿ ಅಪ್ಸರೆಯರಿಬ್ಬರು ನೃತ್ಯ ಮಾಡುತ್ತ ಈ ಮೂವರನ್ನು ಹೊತ್ತೊಯ್ಯುವಂತೆ ಚಿತ್ರಿಸಲಾಗಿದೆ. ಮೂರನೇ ಸ್ವರ್ಗ ಸ್ಥಳದಲ್ಲಿ ಈ ಮೂವರು ಶಿವಲಿಂಗದ ಕಡೆ ಮುಖ-ದೇಹ ಮಾಡಿ ಕೈಮುಗಿದುಕೊಂಡು ಕುಳಿತಿರುವರು. ಮೇಲಿನ ಭಾಗ ತ್ರಿಕೋನಾಕಾರದಲ್ಲಿದೆ; ಕಾಲ ಸು. ಕ್ರಿ.ಶ. ೧೨ನೇ ಶತಮಾನ. (ಚಿತ್ರ : ೮)

**ಸ್ತ್ರೀ ಹೋರಾಟ** : ಕೇವಲ ಒಬ್ಬ ಮಹಿಳೆಯು ಒಬ್ಬ ವೀರನ ಸಂಗಡ ಹೋರಾಡುತ್ತಿರುವಳು. ಆಕೆಯು ಎಡಗೈಯಲ್ಲಿ

ಗುರಾಣಿ ಹಿಡಿದು ಅದನ್ನು ವೈರಿಗೆ ಇರಿಯುತ್ತ ನಿಂತಿರುವ ದೃಶ್ಯ ಅಪರೂಪದ್ದೆನಿಸಿದೆ. ಎರಡನೇ ದೃಶ್ಯದಲ್ಲಿ ಸ್ತ್ರೀಯು ತನ್ನ ಪತಿ ಸಮೇತ ಇಬ್ಬರು ಅಪ್ಸರೆಯರು ಹೊತ್ತು ಒಯ್ಯುವುದನ್ನು ಚಿತ್ರಿಸಲಾಗಿದೆ. ಇನ್ನೊಂದರ ಕೈಯಲ್ಲಿ ಚೌರಿಯನ್ನು ಅವರು ಹಿಡಿದಿರುವರು. ಮೂರನೇ ದೃಶ್ಯದಲ್ಲಿ ದಂಪತಿಗಳು ಯತಿಯು ಆರಾಧಿಸುವ ಶಿವಲಿಂಗದ ಬಲಕ್ಕೆ ಕೈಮುಗಿದು ಕುಳಿತಿರುವರು. ಬದಿಗೆ ಕುಳಿತ ನಂದಿಯಿದೆ. ಶಿವಲಿಂಗಕ್ಕೆ ಇಲ್ಲಿಯೂ ರುದ್ರಾಕ್ಷಿ ಸರವನ್ನು ಕಟ್ಟಲಾಗಿದೆ. (ಚಿತ್ರ : ೯) ಕಾಲ ಸು. ಕ್ರಿ.ಶ. ೧೨ನೇ ಶತಮಾನ.



ಚಿತ್ರ - ೯

**ವೀರನು ಮಹಿಳೆಯನ್ನು ಕೊಲ್ಲುವುದು :** ಮೊದಲನೇ ದೃಶ್ಯದಲ್ಲಿ ವೀರನೊಬ್ಬ ಮಹಿಳೆಯೊಬ್ಬಳ ಒಂದು ಕೈಯನ್ನು ಬಿಗಿಯಾಗಿ ಹಿಡಿದು ಇನ್ನೊಂದು ಕೈಯಲ್ಲಿ ಕತ್ತಿಯನ್ನು ಹಿಡಿದು ಅವಳಿಗೆ ಇರಿಯಲು ಹವಣಿಸಿ ನಿಂತಿರುವನು. ಈ ಯುದ್ಧದಲ್ಲಿ ಮಡಿದ ವೀರನನ್ನು ಇಬ್ಬರು ಅಪ್ಸರೆಯರು ಹೊತ್ತು ಒಯ್ಯುವುದನ್ನು ಚಿತ್ರಿಸಲಾಗಿದೆ. ಮೂರನೆಯ ದೃಶ್ಯದಲ್ಲಿ ವೀರನು ಶಿವಲಿಂಗವನ್ನು ಆರಾಧಿಸುತ್ತ ಕುಳಿತಿರುವುದು ಗಮನೀಯ; ಕಾಲ ಸು. ಕ್ರಿ.ಶ. ೧೨ನೇ ಶತಮಾನ. (ಚಿತ್ರ : ೧೦)

**ಹುಲಿಬೇಟೆ :** ಕಲ್ಕೇರಿ ಗ್ರಾಮದಲ್ಲಿ ಹುಲಿಬೇಟೆಯ ಎರಡು ವೀರಗಲ್ಲುಗಳಿವೆ. ಅವು ಸೋಮೇಶ್ವರ ದೇವಾಲಯದ ಹತ್ತಿರ ಕೆರೆಯ ಪಾವಟಿ ದಾರಿಯಲ್ಲಿವೆ ಮತ್ತು ಹುಲಿಯು ವ್ಯಕ್ತಿಯ ಮೇಲೆ ಜಿಗಿದಿದ್ದು ಅದನ್ನು ಆತನು ಕೈಗಳಿಂದ ಬಗ್ಗಿಸಲು ಹೋರಾಡುತ್ತಿರುವುದನ್ನು ಚಿತ್ರಿಸಲಾಗಿದೆ. ನಂತರ ಆತನನ್ನು ಅಪ್ಸರೆಯರಿಬ್ಬರು ಹಿಡಿದುಕೊಂಡು ಹಾರುತ್ತಿರುವರು. ಮೇಲ್ಗಡೆ ಶಿವಲಿಂಗದ ಬಲಕ್ಕೆ



ಚಿತ್ರ - ೧೦

ಆತ ಕುಳಿತಿದ್ದಾನೆ. ಎಡಕ್ಕೆ ಆಕಳಿದೆ.(?); ಕಾಲ ಸು. ಕ್ರಿ.ಶ. ೧೧ನೇ ಶತಮಾನ.

**೧೦ನೇ ಶತಮಾನದ ವೀರಗಲ್ಲು :** ಸ್ಥಳೀಯ ಪೂಜಾರ ಎಂಬವರ ಮನೆ ಬದಿಗೆ ಶಾಸನವುಳ್ಳ ಈ ವೀರಗಲ್ಲಿದೆ.

**ಭಾಗ-೧**

೧. ...ಮಸಕಲ್ಕೆಜೆಯ ನಾಪ್ರಭು...
೨. ಣಗರೆ ವ್ಯದಿವಿ...
೩. ...ಉಕುಲೆಯ

**ಭಾಗ-೨**

೪. ವೀರಳಪವಟವನಾಡಲ್ಲಿಯಲರಿಬರುದರ
೫. ದ ಸುರಲೋಕ ಕೋದ (1*)

ಅದರ ಮೊದಲ ದೃಶ್ಯದಲ್ಲಿ ಕತ್ತಿ-ಗುರಾಣಿ ಹಿಡಿದು ವೈರಿ ಸಂಗಡ ಹೋರಾಡುತ್ತಿರುವುದಿದೆ; ಅವರ ಪರಿವಾರದವರು ಬದಿಗಳಲ್ಲಿರುವರು. ಎರಡನೇ ದೃಶ್ಯದಲ್ಲಿ ನಾಲ್ವರು ಅಪ್ಸರೆಯರು ಮಡಿದ ವೀರನನ್ನು ಒಯ್ಯುತ್ತಿರುವರು. ಮೂರನೇ ದೃಶ್ಯದಲ್ಲಿ ವೀರನು ಶಿವಲಿಂಗ ಆರಾಧಿಸುವ ಯತಿಯ ಬಲಕ್ಕೆ ಕುಳಿತಿರುವನು. ಕಾಲ ಸು. ಕ್ರಿ.ಶ. ೧೦ನೇ ಶತಮಾನ ಕೊನೆಯ ಭಾಗ.

**ಮಹಾಸತಿ ಕಲ್ಲುಗಳು :** ಕಲ್ಕೆರೆಯ ಕೆರೆ ಬದಿಗಳಲ್ಲಿ ಒಟ್ಟು ಮೂರು ಮಹಾಸತಿ ಕಲ್ಲುಗಳಿವೆ. ಒಂದರಲ್ಲಿ ಮಾತ್ರ ಮಹಾಸತಿಯ ಮಾನವಾಕಾರದ ಚಿತ್ರಗಳಿವೆ. ಇನ್ನೊಂದರಲ್ಲಿ ನಿಂತ ಕಂಬಕ್ಕೆ ಎತ್ತಿದ ಬಲಕೈಯನ್ನು ಜೋಡಿಸಲಾಗಿದೆ.

ಮಾನವರೂಪದ ಸತಿಗಲ್ಲಿನಲ್ಲಿ ಕೆಳಗಡೆ ವೀರನು ತನ್ನ ಪರಿವಾರದೊಂದಿಗೆ ವೈರಿ ಸಂಗಡ ಯುದ್ಧ ಮಾಡುತ್ತಿರುವನು. ವೈರಿ ತನ್ನೆರಡು ಕೈಗಳನ್ನು ಮೇಲೆತ್ತಿ ನಿಂತಿದ್ದಾನೆ. ಎರಡನೇ ದೃಶ್ಯದ ಸ್ಥಳವು ಬಹು ವಿಸ್ತಾರದ್ದಾಗಿದೆ ಮತ್ತು ದೊಡ್ಡದಾಗಿದೆ. ಅಲ್ಲಿ ವೀರನು ಬಿಲ್ಲನ್ನು ಎಡಕ್ಕೆ ಹಿಡಿದು ನಿಂತಿದ್ದಾನೆ. ಎಡಕ್ಕೆ ಆತನ ಪತ್ನಿ ಸತಿ

ಹೋದವಳು ಬಲಕೈಯನ್ನು ಎತ್ತಿ ಹಿಡಿದು ಎಡಗೈಯನ್ನು ಕೆಳಗಡೆ ಇಳಿಬಿಟ್ಟು ನಿಂತಿರುವಳು. ಬಲಗೈಯಲ್ಲಿ ನಿಂಬೆ ಹಣ್ಣಿದೆ. ಕುಚಗಳ ನಡುವಣ ಕೊರಳ ಹಾರ, ಬಳೆ, ಓಲೆಗಳನ್ನು ಧರಿಸಿರುವಳು. ಉದ್ದವಾದ ನೆರಿಗೆಯುಳ್ಳ ಲಂಗವನ್ನು ಪಾದದವರೆಗೆ ಇಳಿಬಿಟ್ಟು ಸೊಂಟಕ್ಕೆ ಕಟ್ಟಿರುವಳು. ಕೇಶದ ತುರುಬನ್ನು ಬಲಕ್ಕೆ ಕಟ್ಟಿರುವಳು.



ಚಿತ್ರ - ೧೧

ಮೇಲ್ಗಡೆ ಕಿರಿದಾಗಿ ಯತಿ ಶಿವಲಿಂಗವನ್ನು ಆರಾಧಿಸುತ್ತಿರುವುದನ್ನು ಮತ್ತು ಬದಿಗೆ ಕುಳಿತ ನಂದಿಯನ್ನು ಚಿತ್ರಿಸಲಾಗಿದೆ. ದೃಶ್ಯಗಳ ಪಟ್ಟಿಕೆಗಳು ವಿಭಿನ್ನ ಗಾತ್ರದಲ್ಲಿ ಸೊಟ್ಟವಾಗಿ ಕೊರೆಯಲಾಗಿದೆ. ಕಾಲ ಸು. ಕ್ರಿ.ಶ. ೧೬ನೇ ಶತಮಾನ. (ಚಿತ್ರ : ೧೧)

ಇನ್ನೊಂದು ನಮೂನೆಯ ಎರಡು ಸತಿಕಲ್ಲುಗಳಲ್ಲಿ ಒಂದು ಮಣ್ಣಲ್ಲಿ ಹೂತಿದೆ. ಅದರ ಮೇಲಿನ ಭಾಗದಲ್ಲಿ ಕೇವಲ ಎತ್ತಿದ



ಚಿತ್ರ - ೧೨

ಬಲಗೈ ಮತ್ತು ಕಂಬದ ಮೇಲಿನ ಭಾಗವಿದೆ. ಇನ್ನೊಂದರಲ್ಲಿ ನಿಂತ ಅಲಂಕೃತ ಅರ್ಧಭಾಗಕ್ಕೆ ಎತ್ತಿದ ಬಲಗೈಯನ್ನು ಜೋಡಿಸಲಾಗಿದೆ. ತೋಳಿನ ಕೆಳಭಾಗದಲ್ಲಿ ವೀರನು ಬಿಲ್ಲನ್ನು ಹಿಡಿದು ನಿಂತಿದ್ದಾನೆ. ಅದು ಅಲ್ಲಲ್ಲಿ ಒಡೆದಿದೆ (ಚಿತ್ರ ೧೨); ಕಾಲ ಸು. ಕ್ರಿ.ಶ. ೧೬ನೇ ಶತಮಾನ.

**ನಿಸಿಧಿ** : ಅಲ್ಲಿಯ ಕೆರೆ ಬದಿಗೆ ಒಂದು ನಿಸಿಧಿ ಕಲ್ಲಿದೆ. ಕುತೂಹಲವೆಂದರೆ ಗುರುವಿನ ಉಪದೇಶ ಪಡೆಯುತ್ತ ಸಲ್ಲೇಖನ ವ್ರತವನ್ನು ಆಚರಿಸುವ ವ್ಯಕ್ತಿಯ ದೃಶ್ಯವನ್ನು ಈ ಶಿಲ್ಪದ ಮಧ್ಯ ಭಾಗದಲ್ಲಿ ಚಿತ್ರಿಸಲಾಗಿದೆ. ಮೊದಲನೇ ದೃಶ್ಯದಲ್ಲಿ ಮಡಿದವನನ್ನು ಇಬ್ಬರು ಅಪ್ಸರೆಯರು ವಿಮಾನದಲ್ಲಿ ಕೂಡಿಸಿಕೊಂಡು ಒಯ್ಯುವ ದೃಶ್ಯವಿದೆ. ಮೇಲ್ಗಡೆ ಮಡಿದವನು ಕೈಮುಗಿದು ಜಿನನ ಕಡೆ ಮುಖ-ದೇಹ ಮಾಡಿ ಕುಳಿತಿರುವನು. ಅದೇ ರೀತಿ ಜೈನ ಆಚಾರ್ಯ ಜಿನನಕಡೆ ಮುಖಮಾಡಿ ಕುಳಿತಿದ್ದಾನೆ. ಆತನ ಎಡಬಲಗಳಲ್ಲಿ ಚೌರಿಯಿದೆ. ಒಂದು ಕೈಯಲ್ಲಿ ಗಂಟೆ ಮತ್ತೊಂದು ಕೈಯಲ್ಲಿ ಆರತಿ ಹಿಡಿದಂತೆ ತೋರಿಸಿರುವುದು ಅಪರೂಪವೆನಿಸಿದೆ. ಕಾಲ ಸು. ಕ್ರಿ.ಶ. ೧೨ನೇ ಶತಮಾನ (ಚಿತ್ರ : ೧೩)



ಚಿತ್ರ - ೧೩

**ಚಿಹ್ನೆ ಸ್ಮಾರಕ (?)** : ಅಲ್ಲಿಯ ಶ್ರೀ ಗುರುಪಾದಪ್ಪ ಸಿದ್ದಪ್ಪ ವಳ್ಳೂರು ಎಂಬವರ ಮನೆ ಮುಂದೆ ಚಿತ್ರ ಚಿಹ್ನೆಯುಳ್ಳ ಕಂಬವಿದೆ. ಅದರ ಮೇಲ್ಗಡೆ ತ್ರಿಶೂಲ ಮಾದರಿ ಮತ್ತು ಅದಕ್ಕೆ ಜೋಡಿಸಿದ ವಕ್ರಗೆರೆಗಳ ಚಿಹ್ನೆಯಿದೆ. ಕಾಲ ಸು. ಕ್ರಿ.ಶ. ೧೭ನೇ ಶತಮಾನ. ಈ ಕಾಲದ ಅನೇಕ ಶಿಲ್ಪಗಳಲ್ಲಿ ಈ ಭಾಗದಲ್ಲಿ ತ್ರಿಶೂಲಗಳನ್ನು ಚಿತ್ರಿಸಿರುವುದನ್ನು ಇಲ್ಲಿ ಸ್ಮರಿಸಬಹುದು.

**ಕಲ್ಕೇರಿ ಶಾಸನವುಳ್ಳ ವೀರಗಲ್ಲುಗಳ ಸ್ಥೂಲ ವಿವರ** :

೧. ತುರುಗಾಳದ ಈ ಮೇಲೆ ವಿವರಿಸಿದ ಶಿಲ್ಪ-ಶಾಸನದಲ್ಲಿ ದೇವಂಗೇರಿಯ ತೈಲಹದೇವನು ದನಗಳನ್ನು ಕದಿಯಲು ಕಲಕೇರಿಗೆ

ಸೈನ್ಯದೊಂದಿಗೆ ಬಂದು ನಾಳ್ಪಭು ಮಾದಿಸೆಟ್ಟಿ ವಿರುದ್ಧ ಕ್ರಿ.ಶ. ೧೧೮೫, ಡಿಸೆಂಬರ್ ೨ರಂದು ಯುದ್ಧ ಮಾಡಿದನು. ಈ ಯುದ್ಧದಲ್ಲಿ ಮಾದಿಸೆಟ್ಟಿಯ ಬಂಟನಾದ ಸೆಟ್ಟಿಮೆನಾಯ್ಕನು ಮರಣವನ್ನು ಹೊಂದಿದನು ಎಂದು ಈ ಶಾಸನ ಹೇಳಿದೆ. ಹಾಗೂ ಈ ಕಾಳಗದಲ್ಲಿ ಬೋತ್ಯಣನೆಂಬವನು ಹೋರಾಡಿ ಜಯ ಗಳಿಸಿ ಸಾವನ್ನಪ್ಪಿದನೆನ್ನಲಾಗಿದೆ.

೨. ಅಲ್ಲಿಯ ಇನ್ನೊಂದು ಶಾಸಸಶಿಲ್ಪದಲ್ಲಿ ಕಲಕೇರಿಯ ಬಸವ ಎಂಬುವನು ಬಳ್ವರಬೀಡು ಗ್ರಾಮದ ಮತ್ತು ಅಲ್ಲಿಯ ಹೆಣ್ಣುಮಕ್ಕಳ ಮಾನರಕ್ಷಣೆಗಾಗಿ ಹೋರಾಡಿ ಮಡಿದನೆನ್ನಲಾಗಿದೆ. ಅಲ್ಲಿಯ ಪ್ರಜೆಗಳು ಈತನ ಮಗ ಕಳಿಗ, ಬಮ್ಮಗೌಡರಿಗೆ ೨೦ ಕಮ್ಮ ಭೂಮಿಯನ್ನು ದತ್ತಿ ನೀಡಿದರೆನ್ನಲಾಗಿದೆ.

೩. ಕ್ರಿ.ಶ. ೧೧೪೬ ಜುಲೈ ೬ರ ಶಾಸನ-ಶಿಲ್ಪದಲ್ಲಿ ಕಲಕೇರಿಯ ನಾಳ್ಪಭು ಕೇತಿಸೆಟ್ಟಿಯು ಕಾಗಿನೆಲೆಯರೊಡನೆ ಸಿರಿವೊಳಲು ಎಂಬ ಸ್ಥಳ(ಗ್ರಾಮ)ದಲ್ಲಿ ಯುದ್ಧ ಮಾಡಿ ಸತ್ತನೆನ್ನಲಾಗಿದೆ. (ಎಸ್.ಐಐ. ೨೦, ೧೧೩)

೪. ಅಲ್ಲಿಯ ಇನ್ನೊಂದು ವೀರಗಲ್ಲು ಶಾಸನದಲ್ಲಿ (ಎಸ್.ಐಐ. ೨೦, ೧೧೪) ಸೇಣಿಗಜಕೆಯ ಮಗ ಕೇತಿಸೆಟ್ಟಿ ಯುದ್ಧದಲ್ಲಿ ಸಾವನ್ನಪ್ಪಿದ್ದು ತಿಳಿಯುತ್ತದೆ. ಇಲ್ಲಿ ಸೇಣಿಗ ಎಂಬುದು ಮನೆತನದ ಹೆಸರಾಗಿದೆ.

೫. ಕ್ರಿ.ಶ. ೧೧೮೩ರ ಶಾಸನ-ಶಿಲ್ಪದಲ್ಲಿ ಮಾದಿಸೆಟ್ಟಿಯು ತನ್ನ ಸೈನ್ಯದೊಂದಿಗೆ ರಟ್ಟಿಹಳ್ಳಿಯ ಮೇಲೆ ಯುದ್ಧ ಮಾಡಿದನು. ಆತನ ರಾಹುತ ಬಮ್ಮ ಈ ಯುದ್ಧದಲ್ಲಿ ಹೋರಾಡಿ ಶತ್ರುಗಳನ್ನು ಕೊಂದು ತಾನು ಮರಣವನ್ನು ಅಪ್ಪಿದನು.

೬. ಮತ್ತೊಂದು ಕೋಟೆ ಕಾಳಗ ಚಿತ್ರವುಳ್ಳ ಶಾಸನ-ಶಿಲ್ಪದಲ್ಲಿ (ಕ್ರಿ.ಶ. ೧೧೮೬, ಮಾರ್ಚ್ ೩೦) ಕಲಕೇರಿಯ ಮಾದಿಸೆಟ್ಟಿ ಎಂಬುವನು ಕುಂದಗೋಳ ಕೋಟೆಗೆ ಲಗ್ಗೆಯಿಟ್ಟನೆಂದು, ಆತನ ಮಗ ಸಂಕಯ ಸಾಹಣಿ ಎಂಬುವನು ಈ ಯುದ್ಧದಲ್ಲಿ ಹೋರಾಡಿ ಸತ್ತನೆನ್ನಲಾಗಿದೆ. (ಎಸ್ಐಐ ೨೦, ೧೨೬) ಈ ಶಾಸನದಲ್ಲಿ ಕುಂದಗೋಳ ಜನರು ಕೋಟೆ ಹತ್ತುವ ಜನರ ಮೇಲೆ ವಿವಿಧ ಶಿಲೆಗಳನ್ನು, ಚಕ್ಕಡಿಯ ಚಕ್ರಗಳನ್ನು, ಸುಡುವ ಎಣ್ಣೆ, ಉಸುಕನ್ನು ಸುರಿದರೆನ್ನಲಾಗಿದೆ. ಹೀಗಿದ್ದರೂ ಸಾಹಣಿ ಸಂಕ, ಗಿಳಿಯು ತೆನೆಯನ್ನು ಹತ್ತಿಕಾಳನ್ನು ತಿನ್ನುವಂತೆ (ಕಬಳಿಸುವಂತೆ) ಆ ಕೋಟೆಯನ್ನು ಹತ್ತಿ ಅನೇಕರನ್ನು ಸೀಳಿ ವೈರಿಗಳ ವಿರುದ್ಧ ಹೋರಾಡಿ ತಾನು ಸತ್ತನೆನ್ನಲಾಗಿದೆ. ಈ ಕೋಟೆ ಕಾಳಗ ವೀರಗಲ್ಲಿನಲ್ಲಿ (ಈ ಮೇಲೆ ವಿವರಿಸಿದಂತೆ) ಯುದ್ಧ ದೃಶ್ಯದಲ್ಲಿ ಕುದುರೆ ನಿಂತಿದೆ. ಆಳು ಆತನ ಧ್ವಜ ಹಿಡಿದಿದ್ದಾನೆ. ಈತ ಕೋಟೆಯನ್ನು ಮೆಟ್ಟಿ ನಿಂತಿದ್ದಾನೆ.

೭. ಇನ್ನೊಂದು ಅಲ್ಲಿಯ ಕ್ರಿ.ಶ. ೧೨-೧೩ನೇ ಶತಮಾನದ ಎರಡು ಶಾಸನ ಶಿಲ್ಪಗಳಲ್ಲಿ ನಾಳ್ಪಭು ಸೋಯಸೆಟ್ಟಿಯ ಮಗ ಹಿರಿಯನಾಗಯ್ಯ (ಎಸ್.ಐಐ. ೨೦, ೩೧೬) ಮತ್ತು ಕಿರಿಯ ನಾಗಯ್ಯ (ಎನ್.ಐಐ. ೨೦,೩೧೭) ಯುದ್ಧ ಮಾಡಿ ಸತ್ತರೆನ್ನ ಲಾಗಿದೆ.

೮. ಅಲ್ಲಿಯ ಕ್ರಿ.ಶ. ೧೨೭೮ರ ಶಾಸನ-ಶಿಲ್ಪದಲ್ಲಿ ಮಹಾ ಮಂಡಳೇಶ್ವರ ಶಾಳುವೆಯ ಬಲ್ಲುಗಿದೇವರಾಯನ ಮನೆಯ ಅಧಿಕಾರಿ ಕಲಕೇರಿಯ ಗೋಯನಾಯಕನ ಮಗ ಚಿಕ್ಕನೆಂಬುವನು ಯುದ್ಧ ಮಾಡಿ ಸತ್ತ ನಿಮಿತ್ತ ಅವನ ನೆನಪಿಗೆ ಈ ವೀರಗಲ್ಲನ್ನು ನಡೆಯಿತೆನ್ನಲಾಗಿದೆ. (ಎಸ್.ಐಐ. ೨೦, ೩೩೦).

**ನಿಸಿಧಿ ಶಾಸನ** : ಕಲಕೇರಿಯ ಈ ಮೇಲೆ ವಿವರಿಸಿದ ಒಂದು ನಿಸಿಧಿ ಶಾಸನ (ಕ್ರಿ.ಶ. ೧೨೮೯)ರಲ್ಲಿ ಸಮಂತಭದ್ರರ ಶಿಷ್ಯ ಹಾಗೂ ಮೂಲಸಂಘದ ಸಾಯಿಸೆಟ್ಟಿ ಮತ್ತು ಮಾದವ್ವೆಯರ ಪುತ್ರ ಮಾದಯ್ಯನು ವ್ರತದಿಂದ ಮರಣ ಹೊಂದಿದ ನಿಮಿತ್ತ ಈ ನಿಸಿದಿ ಕಲ್ಲನ್ನು ನಿಲ್ಲಿಸಲಾಯಿತೆನ್ನಲಾಗಿದೆ. (ಎಸ್.ಐಐ. ೨೦,೨೨೩)

ಒಟ್ಟಾರೆ ಈ ಸ್ಥಳದ ಅನೇಕ ಶಾಸನಗಳುಳ್ಳ ವೀರಗಲ್ಲುಗಳ ವಿಭಿನ್ನ ಸಾಂಸ್ಕೃತಿಕ ಮಾಹಿತಿಗಳನ್ನು ಒದಗಿಸಿವೆ. ಅಲ್ಲಿಯ ಈ ಎಲ್ಲಾ ಶಿಲ್ಪಗಳ ಕಲಾ ಇತಿಹಾಸ, ಕರ್ನಾಟಕ ಸ್ಮಾರಕ ಶಿಲ್ಪಗಳಲ್ಲಿ ವಿಶೇಷತೆಯನ್ನು ಪಡೆದಿವೆ ಎಂದು ಹೇಳಬಹುದು. ಸ್ಥಳೀಯ ಅನೇಕ ವೀರಗಲ್ಲುಗಳ ಎರಡನೇ ದೃಶ್ಯದಲ್ಲಿ ಮಡಿದ ವೀರನನ್ನು ಅಪ್ಸರೆಯರು ಕೈಯಲ್ಲಿ ಹಿಡಿದು ಹೊತ್ತೊಯ್ಯುವ ಸು. ಕ್ರಿ.ಶ. ೧೨ನೇ ಶತಮಾನದವರೆಗಿನ ಈ ಲಕ್ಷಣವು ಇಲ್ಲಿಯವರೆಗೆ ಸು. ಕ್ರಿ.ಶ. ೧೦ನೇ ಶತಮಾನದವರೆಗೆ ಮಾತ್ರ ಹೆಚ್ಚಾಗಿ ಮುಂದುವರಿ ದಿತ್ತೆಂದು ಭಾವಿಸಿದ್ದು, ಆದರೆ ಈ ಲಕ್ಷಣವು ಬಹುತೇಕ ಈ ಭಾಗದಲ್ಲಿ ಸು. ಕ್ರಿ.ಶ. ೧೨ನೇ ಶತಮಾನದವರೆಗೆ ಮುಂದುವರಿ ದಿರುವುದು ತಿಳಿದುಬರುತ್ತದೆ. ಮತ್ತು ವಿಮಾನದಲ್ಲಿ ಮಡಿದ ವೀರನನ್ನು ಕೂಡಿಸುವ ಪದ್ಧತಿ ಈ ಭಾಗದಲ್ಲಿ ಕ್ರಿ.ಶ. ೧೨-೧೩ನೇ ಶತಮಾನದಲ್ಲಿ ಅಸ್ತಿತ್ವದಲ್ಲಿತ್ತೆಂದು ತಿಳಿಯುವುದು.

(**ಕೃತಜ್ಞತೆಗಳು** : ಶಿಲ್ಪಗಳ ಬಗ್ಗೆ ಅಧ್ಯಯನ ನಡೆಸಲು ಮೊದಲು ನನ್ನ ಗಮನವನ್ನು ಸೆಳೆದ ಮಿತ್ರರಾದ ಶ್ರೀ ಎಂ.ಎನ್. ಜೋಶಿ, ಉಪ ನಿರ್ದೇಶಕ, ಕರ್ನಾಟಕ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ, ಧಾರವಾಡ ಇವರಿಗೆ ನನ್ನ ಧನ್ಯವಾದಗಳು.)



ಡಾ. ಜಿ.ವಿ. ಕಲ್ಲಾಪುರ*

# ಕೆಳದಿ ಪಾರ್ವತೀ ದೇವಾಲಯದ ಕಾಷ್ಠಶಿಲ್ಪಗಳು - ಮುಂದುವರಿದ ಅಧ್ಯಯನ

*ಕಾಷ್ಠಶಿಲ್ಪ ಮರದ ಮಾಧ್ಯಮದಲ್ಲಿ ರೂಪುಗೊಳ್ಳುವ ಕಲಾತ್ಮಕ ಪ್ರಕಾರ. ಇದರ ಉಗಮ ಆದಿಮಾನವನ ಕಾಲದ್ದೆನ್ನಲಾಗಿದೆ. ಶಿಲ್ಪಶಾಸ್ತ್ರ ಗ್ರಂಥಗಳಲ್ಲಿಯ ಪ್ರತಿಮಾ ಲಕ್ಷಣಗಳ ಆಧಾರದ ಮೇಲೆ ಶಿಲ್ಪಿಗಳು ಕಾಷ್ಠಶಿಲ್ಪಗಳನ್ನು ರಚಿಸಿರಬಹುದೆನ್ನಲಾಗಿದೆ. ಕೆಳದಿಯ ಪಾರ್ವತೀ ದೇಗುಲದ ಕಾಷ್ಠಶಿಲ್ಪಗಳಲ್ಲಿ ಗಣೇಶ, ರಾಮಲಕ್ಷ್ಮಣ ಸೀತೆ, ಕಾಳಿಂಗಮರ್ದನ ಕೃಷ್ಣ ಇತ್ಯಾದಿ ಶಿಲ್ಪಗಳು ಗಮನಾರ್ಹವಾಗಿವೆ. ಪೌರಾಣಿಕ ಕಥೆಗಳನ್ನೂ ಆಧರಿಸಿರುವ ಹಲವಾರು ಶಿಲ್ಪಗಳೂ ಇಲ್ಲಿವೆ. ವೆಂಕಟೇಶನು ಕೊರವಂಜಿ ವೇಷಧರಿಸಿ, ಸಪ್ತಗಿರಿಯಲ್ಲಿದ್ದ ಆಕಾಶರಾಜನ ಮನೆಗೆ ಹೋಗಿ ಉಳಿದುಕೊಂಡಿರುವ ಕತೆ ಹಾಗು ಪದ್ಮಾವತಿಗೆ ಸರಿಯಾದ ವರ ಎನ್ನುವ ಕಥಾಮಾಲಿಕೆ ಇಲ್ಲಿ ಶಿಲ್ಪಗೊಂಡಿದೆ.*

ಈ ವಿಷಯಕ್ಕೆ ಸಂಬಂಧಿಸಿದಂತೆ ಬಾದಾಮಿಯಲ್ಲಿ ನಡೆದ ಸಮ್ಮೇಳನದಲ್ಲಿ ಶಿವನ ವಿವಿಧ ಕಾಷ್ಠಶಿಲ್ಪಗಳನ್ನು ಹಾಗೂ ಶಿಲ್ಪಿಗಳ ಸಂಕ್ಷಿಪ್ತ ಇತಿಹಾಸವನ್ನು ವಿವರಿಸಲಾಗಿದೆ.[೧] ಇದು ಅದರ ಮುಂದುವರೆದ ಅಧ್ಯಯನವಾಗಿದೆ.

ಕಟ್ಟಡ ನಿರ್ಮಾಣದ ಕಲೆಯೇ ವಾಸ್ತುಶಿಲ್ಪ, ಮರದಿಂದ ಕಟ್ಟಡಗಳ ನಿರ್ಮಾಣ ಕಲೆಗೆ "ಕಾಷ್ಠವಾಸ್ತುಶಿಲ್ಪ" ಎನ್ನುವಂತೆ ಶಿಲೆಗಳಿಂದ ರಚಿಸಲ್ಪಡುವ ಮೂರ್ತಿಗಳ ಕೆತ್ತನೆ, ಅಲಂಕರಣ ವಸ್ತುಗಳ ರಚನೆಗೆ ಶಿಲ್ಪಶಾಸ್ತ್ರವೆಂದು ಕರೆದಂತೆ, ಕಾಷ್ಠ ಅಥವಾ ಮರದಿಂದ ಕೆತ್ತಲ್ಪಡುವ ಮೂರ್ತಿ ಇತ್ಯಾದಿ ರಚನೆಗಳಿಗೆ 'ಕಾಷ್ಠಶಿಲ್ಪ' ಎನ್ನಬಹುದು.

ಮರದಿಂದ ರಥ, ನೌಕೆ, ವಿಗ್ರಹ ಹಾಗೂ ಕಟ್ಟಡಗಳನ್ನು ನಿರ್ಮಿಸಬಹುದು. ಕಾಷ್ಠಶಿಲ್ಪದ ಉಗಮವನ್ನು ಆದಿಮಾನವನ ಕಾಲದಿಂದಲೂ ಗುರುತಿಸಬಹುದಾಗಿದೆ. ಮಾನವನ ಆರ್ಥಿಕ ಚಟುವಟಿಕೆಗಳ ಬೆಳವಣಿಗೆಯೊಂದಿಗೆ ಅಂದರೆ ಬೇಸಾಯ ಪದ್ಧತಿಯೊಂದಿಗೆ ವಾಸ್ತುಶಿಲ್ಪದ ಇತಿಹಾಸ ಪ್ರಾರಂಭವಾಗುತ್ತದೆ. ಆರಂಭಿಕ ಹಂತದಲ್ಲಿ ಗುಹೆಗಳಲ್ಲಿ ವಾಸಿಸುತ್ತಿದ್ದ ಮಾನವನು ತಾನು ಕೆಲಸ ನಿರ್ವಹಿಸುವ ಸ್ಥಳದಲ್ಲಿಯೇ ವಸತಿಯಿದ್ದರೆ ಹೆಚ್ಚು ಉಪಯುಕ್ತ ಎಂಬುದನ್ನು ಮನಗಂಡು ನೈಸರ್ಗಿಕ ಸಂಪನ್ಮೂಲಗಳ ಸಹಾಯದಿಂದ ಗುಹೆಗಳನ್ನು ಆಶ್ರಯಿಸಿದ. ನಾಗರಿಕತೆ ಬೆಳೆದಂತೆಲ್ಲಾ ಕ್ರಮೇಣ ತಮ್ಮ ಅಗತ್ಯಗಳಿಗೆ, ಅಭಿರುಚಿಗೆ ಅನುಗುಣವಾಗಿ ವಿಶಾಲವಾದ, ಅಲಂಕೃತ ದೇವಾಲಯ, ಅರಮನೆ, ಮನೆ ಮುಂತಾದ ಕಟ್ಟಡಗಳನ್ನು ನಿರ್ಮಿಸಿಕೊಂಡ. ಆರಂಭದ ಇಂಥ ಕಟ್ಟಡಗಳು ಮರದಿಂದ ನಿರ್ಮಿತವಾಗಿದ್ದವು ಎನ್ನುವುದರಲ್ಲಿ ಸಂಶಯವಿಲ್ಲ. ಕೆಳದಿ ಅರಸರ ಕಾಲದಲ್ಲಿ ಕಾಷ್ಠಶಿಲ್ಪಿಗಳಿಗೆ ಪ್ರಾತಿನಿಧ್ಯವಿದ್ದುದು ತಿಳಿದುಬರುತ್ತದೆ.[೨]

ಕಾಷ್ಠಶಿಲ್ಪಗಳ ರಚನೆಗೆ ಸಂಬಂಧಿಸಿದಂತೆ ಯಾವುದೇ ರೀತಿಯ ಶಾಸ್ತ್ರಗ್ರಂಥಗಳು ಉಪಲಬ್ಧವಿರದಿದ್ದರೂ, ಶಿಲ್ಪಶಾಸ್ತ್ರ ಗ್ರಂಥಗಳಾದ-"ಅಂಶುಮದ್ಭೇದಾಗಮ, ಉತ್ತರಕಾಮಿಕಾಗಮ, ವೈಖಾನಸಾಗಮ, ಸುಪ್ರಭೇದಾಗಮ, ಬೃಹತ್ಸಂಹಿತಾ, ಹೇಮಾದ್ರಿ ಖಂಡ, ರೂಪಮಂಡನ, ಶಿಲ್ಪರತ್ನ, ಕಾಶ್ಯಪ ಶಿಲ್ಪಶಾಸ್ತ್ರಂ, ಕ್ರಿಯಾ ಕ್ರಮದ್ಯೋತಾ, ಶ್ರೀಮನ್ಮಂತ್ರಮಹಾರ್ಣವ, ಮಂತ್ರಮಹೋದಧಿ, ಮುಂತಾದ ಕೃತಿಗಳಲ್ಲಿ ಪ್ರತಿಮಾ ಲಕ್ಷಣಗಳನ್ನು ವಿವರಿಸಿದ್ದು, ಅವುಗಳ ಆಧಾರದ ಮೇಲೆ ಶಿಲ್ಪಿಗಳು ಕಾಷ್ಠಶಿಲ್ಪಗಳನ್ನು ರಚಿಸಿರಬಹುದೆಂದು ಹೇಳಬಹುದು. ಪ್ರಸ್ತುತ ಅಧ್ಯಯನದಲ್ಲಿ ಈ ಮೇಲಿನ ಕೃತಿಗಳಲ್ಲಿನ ಪ್ರತಿಮಾ ಲಕ್ಷಣಗಳಿಗೆ ಅನ್ವಯಿಸಿ ಕೆಳದಿ ಪಾರ್ವತೀ ದೇವಾಲಯದ ಕಾಷ್ಠಶಿಲ್ಪಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

* ಕೆಳದಿ ವಸ್ತುಸಂಗ್ರಹಾಲಯ, ಕೆಳದಿ

**ಗಣೇಶ**[೬]

ದಂತಂ ಚ ಪರಶುಂ ಪದ್ಮಂ ಮೋದಕಾಂಶ್ಚ ಗಜಾನನಃ।
ಗಣೇಶೋ ಮೂಷಕಾರೂಢೋ ಬಿಬಾಣಸ್ಸರ್ವಕಾಮದಃ॥
(ರೂಪಮಂಡನೇ)

ಸ್ಥಾನಕಂ ವಾಸನಂ ವಾಪಿ ಪದ್ಮಪೀಠೇ ವಿಶೇಷತಃ।
ಸ್ವದಂತಂ ದಕ್ಷಿಣೇ ಹಸ್ತೇ ವಾಮಹಸ್ತೇ ಕಪಿತ್ಥಕಂ॥

ಗಣೇಶಮೂರ್ತಿಯನ್ನು ನಿಂತಭಂಗಿ ಅಥವಾ ಕುಳಿತ ಭಂಗಿಗಳಲ್ಲಿ ರಚಿಸಬಹುದು. ಪದ್ಮಪೀಠವನ್ನು ವಿಶೇಷವಾಗಿ ಬಳಸಬೇಕು. ಬಲ ಕೆಳ ಹಸ್ತದಲ್ಲಿ ತನ್ನದೇ ಮುರಿದ ದಂತವನ್ನು, ಎಡಗೈಯಲ್ಲಿ ಬೇಲದಕಾಯಿಯನ್ನು, ಮೇಲಿನ ಬಲಗೈಯಲ್ಲಿ ಅಂಕುಶವನ್ನು, ಎಡಗೈಯಲ್ಲಿ ಪಾಶವನ್ನು ಅಥವಾ ನಾಗವನ್ನು ಹಿಡಿದಿರುವಂತೆ ಅಥವಾ ಜಪಮಾಲೆಯನ್ನು ಹಿಡಿದಿರುವಂತೆ ಹಾಗೂ ಸೊಂಡಿಲಲ್ಲಿ ಮೋದಕವನ್ನು ಹಿಡಿದಿರುವಂತೆ ರಚಿಸ ಬೇಕು.

ಗಣೇಶಮೂರ್ತಿಯೂ ಮುಕ್ಕಣ್ಣನಾಗಿದ್ದು, ಬಂಗಾರದ ಮೈಕಾಂತಿಯುಳ್ಳವನಾಗಿದ್ದು, ದುಕೂಲಾದಿ ವಸ್ತ್ರಗಳಿಂದ ಅನೇಕ ಆಭರಣಗಳಿಂದ ಅಲಂಕೃತವಾದಂತೆ ರಚಿಸಬೇಕು. ನಿಂತ ಮೂರ್ತಿಯಾದರೆ ಅಭಂಗವಾಗಿಯೋ ಅಥವಾ ಸಮಭಂಗ ವಾಗಿಯೋ ಇರಬೇಕು. ಕುಳಿತ ಮೂರ್ತಿಯಾದರೆ ಅಥವಾ ನಿಂತಮೂರ್ತಿಯಾಗಿದ್ದರೂ ಎಡಗಾಲು ಸ್ವಲ್ಪ ಮಡಚಿರು ವಂತೆಯೂ, ಬಲಗಾಲಿನ ಹಿಮ್ಮಡಿ ಸ್ವಲ್ಪ ಮೇಲೆತ್ತಿರುವಂತೆಯೂ ರಚಿಸಬೇಕು. ನಾಗ ಯಜ್ಞೋಪವೀತ, ಕಿರೀಟ, ಕರಂಡ ಅಥವಾ ಜಟಾಮುಕುಟವನ್ನು ಹೊಂದಿರಬೇಕು. ಸ್ಥೂಲ ಶರೀರ ಹಾಗೂ ದೊಡ್ಡದಾದ ಹೊಟ್ಟೆ ಇರುವಂತೆ ರಚಿಸಬೇಕು ಹಾಗೂ ಇಲಿ ವಾಹನಾರೂಢನಾಗಿರಬಹುದು.

ಕೆಳದಿ ಕಾಷ್ಠಶಿಲ್ಪವು ಕುಳಿತ ಭಂಗಿಯದ್ದಾಗಿದ್ದು ಮೇಲೆ ವಿವರಿಸಿದ ಲಕ್ಷಣಗಳನ್ನೊಳಗೊಂಡಿದ್ದು ಇಲಿಗೆ ವಿಶೇಷವಾದ ಅಲಂಕಾರ ಮಾಡಲಾಗಿದೆ. (ಚಿತ್ರ-೧ ನೋಡಿ).

**ಲಕ್ಷ್ಮಣ-ರಾಮ-ಸೀತೆ**[೭] : ರಾಮನ ಶಿಲ್ಪವು ಸಾಮಾನ್ಯ ವಾಗಿ ದ್ವಿಭುಜ ಸ್ಥಾನಕ ಭಂಗಿಯಲ್ಲಿ, ಮಧ್ಯದಶತಾಳ ಹಾಗೂ ತ್ರಿಭಂಗದಲ್ಲಿರುತ್ತದೆ. ಧನುರ್ಧಾರಿಯಾಗಿದ್ದು ಪಕ್ಕಗಳಲ್ಲಿ ಸೀತಾ ಲಕ್ಷ್ಮಣ ಹಾಗೂ ಸಮೀಪದಲ್ಲಿ ಹನುಮಂತನಿರುವಂತೆ ರಚಿಸಬೇಕು. ಸೀತೆಯನ್ನು ರಾಮನ ಬಲ ಅಥವಾ ಎಡ ಭಾಗದಲ್ಲಿ ನವಾರ್ಧತಾಳ ಪ್ರಮಾಣದಲ್ಲಿ ರಚಿಸಬೇಕು, ಅಂದರೆ ರಾಮನ ಭುಜಕ್ಕೆ ಸೀತೆ ಬರಬೇಕು. ಎಡ ಅಥವಾ ಬಲ ಭಾಗದಲ್ಲಿ ದಶತಾಳ ಪ್ರಮಾಣದಲ್ಲಿ ರುವಂತೆ ಲಕ್ಷ್ಮಣನನ್ನು ರಚಿಸಬೇಕು, ಅಂದರೆ ರಾಮನ ಕಿವಿಯ ವರೆಗೆ ಲಕ್ಷ್ಮಣನ ಎತ್ತರವಿರಬೇಕು. ಹನುಮಂತನು ಅಂಜಲಿ ಬದ್ಧನಾಗಿ ಅಥವಾ ನಮ್ರತೆಯನ್ನು ಸೂಚಿಸಲು ಬಾಯಿಯನ್ನು ಬಲಗೈಯಿಂದ ಅಡ್ಡಹಿಡಿದಿರುವಂತೆ ರಚಿಸಬೇಕು. ರಾಮ-ಲಕ್ಷ್ಮಣರಿಗೆ ಕಿರೀಟಮುಕುಟ ಹಾಗೂ ಸೀತಾ- ಹನುಮಂತರಿಗೆ ಕರಂಡಮುಕುಟ ಇರುವಂತೆ ರಚಿಸಬೇಕು.

ಕೆಳದಿ ಪಾರ್ವತೀ ದೇವಾಲಯದ ಕಾಷ್ಠಶಿಲ್ಪದಲ್ಲಿ ಕರಂಡಮುಕುಟ ಇರುವಂತೆ ರಚಿಸಬೇಕು.

ಕೆಳದಿ ಪಾರ್ವತೀ ದೇವಾಲಯದ ಕಾಷ್ಠಶಿಲ್ಪದಲ್ಲಿ ಮೇಲಿನ ಎಲ್ಲ ಲಕ್ಷಣಗಳ ಜೊತೆಗೆ ರಾಮನು ಸೀತೆಯನ್ನು ಆಲಿಂಗಿಸಿ ಕೊಂಡಿರುವಂತೆ ಸುಂದರವಾಗಿ ಚಿತ್ರಿಸಲಾಗಿದೆ. (ಚಿತ್ರ ೨ ನೋಡಿ)

**ಕಾಳಿಗಂ ಮರ್ದನ**[೮] : ಕೃಷ್ಣನನ್ನು ಮಧ್ಯಮ ದಶತಾಳದಲ್ಲಿ ರಚಿಸಬೇಕೆಂದು ವಿಧಿ. ದ್ವಿಭುಜ, ಚತುರ್ಭುಜ, ಸ್ಥಾನಕ ಅಥವಾ ಆಸನ ಭಂಗಿಗಳಲ್ಲಿರುವಂತೆ ರಚಿಸಬೇಕು. ಭಾಗವತ ಪುರಾಣದಲ್ಲಿ ವಿವರಿಸಿರುವಂತೆ ಕಾಳಿಂಗಮರ್ದನನಾಗಿ, ಗೋಪಾಲಕೃಷ್ಣನಾಗಿ, ಮುರಳೀಧರನಾಗಿ, ಬಾಲಕೃಷ್ಣನಾಗಿ, ರುಕ್ಮಿಣಿವಲ್ಲಭನಾಗಿ, ಕೈಯಲ್ಲಿ ಬೆಣ್ಣೆ ಹಿಡಿದು ಅಂಬೆಗಾಲಿಡುವ ಕೃಷ್ಣನಾಗಿ, ಬಲಗೈಯಲ್ಲಿ ಬೆಣ್ಣೆ ಹಿಡಿದು ಎಡಗೈಯನ್ನು ಅಡ್ಡಲಾಗಿ ಚಾಚಿ ಎಡಗಾಲಮೇಲೆ ನಿಂತಿರುವಂತೆ ನವನೀತ ನೃತ್ಯಮೂರ್ತಿಯಾಗಿ, ಅಷ್ಟಭುಜದ ವೇಣುಗೋಪಾಲ ಮೂರ್ತಿಯಾಗಿ ಇತ್ಯಾದಿ ರಚಿಸಬಹುದು.

ಕೆಳದಿ ಕಾಷ್ಠಶಿಲ್ಪ ಕಾಳಿಂಗಮರ್ದನ ಮೂರ್ತಿಯಾಗಿದ್ದು, ಶಿಲ್ಪಶಾಸ್ತ್ರದಲ್ಲಿ ಹೇಳಿರುವಂತೆ ಕಾಳಿಂಗನ ಹೆಡೆ ಮತ್ತು ದೇಹದ ಮೇಲೆ ನೃತ್ಯ ಮಾಡುತ್ತಾ ಇರುವಂತೆ, ಎಡಗೈಯಲ್ಲಿ ಕಾಳಿಂಗನ ಬಾಲವನ್ನು ಎತ್ತಿಹಿಡಿದಿದ್ದು, ಬಲಗೈಯಲ್ಲಿ ಕಾಳಿಂಗನ ವಿಷವನ್ನು ನಿಗ್ರಹಿಸುತ್ತಿರುವಂತೆ ರಚಿಸಲಾಗಿದೆ. ಸರ್ವಾಭರಣಭೂಷಿತನಾದ ಬಾಲಕೃಷ್ಣನ ಮೂರ್ತಿಯಾಗಿದೆ. (ಚಿತ್ರ ೩ ನೋಡಿ).

ಶಿಲ್ಪಶಾಸ್ತ್ರದಲ್ಲಿ ಸಂಬಂಧಿಸಿದ ಗ್ರಂಥಗಳಲ್ಲಿ ಪ್ರತಿಮಾಲಕ್ಷಣದ ಜೊತೆಗೆ ವೈಷ್ಣವ ಧ್ರುವಭೇರ ಮುಂತಾದ ವಿವರಗಳಿದ್ದು ಅದರಲ್ಲಿ ಯೋಗಸ್ಥಾನಕ, ಭೋಗಸ್ಥಾನಕ, ವೀರಸ್ಥಾನಕ, ಅಭಿಚಾರಿಕ ಸ್ಥಾನಕಮೂರ್ತಿಗಳ ಲಕ್ಷಣಗಳನ್ನು ವಿವರಿಸಲಾಗಿದೆ.[೯] ಅದರಂತೆ ಭೋಗಸ್ಥಾನಕಮೂರ್ತಿ ಲಕ್ಷಣಗಳ ವಿವರಣೆಯಲ್ಲಿರುವಂತೆ ಕೆಳದಿ ಪಾರ್ವತೀ ದೇವಾಲಯದಲ್ಲಿನ ಕಾಷ್ಠಶಿಲ್ಪಗಳಲ್ಲಿ ತುಂಬುರು-ನಾರದರ ಶಿಲ್ಪವನ್ನು ಅಳವಡಿಸಲಾಗಿದೆ. (ಚಿತ್ರ ೪ ನೋಡಿ).

"ತುಂಬುರುನಾರದಾಭ್ಯಾಂ ಯಕ್ಷವಿದ್ಯಾಧರಾಭ್ಯಾಂ ಹೀನಂ ಮಧ್ಯಮಂ"

ಭೋಗಶಯನಮೂರ್ತಿ ವಿವರಣೆಯಲ್ಲೂ ತುಂಬುರ ನಾರದರ ವಿವರಣೆಯಿದೆ.

"ತುಂಬುರುನಾರದಾಭ್ಯಾಂ ಲೋಕಪಾಲೈಶ್ಚ ವಿನಾಮಧ್ಯ ಮಮಂ"

ಪೌರಾಣಿಕ ಕಥೆಗಳನ್ನು ಆಧರಿಸಿರುವ ಕೆಲವು ಶಿಲ್ಪಗಳನ್ನು ಇಲ್ಲಿ ಅಳವಡಿಸಿರುವುದು ಗಮನಾರ್ಹವಾದುದಾಗಿದೆ. ಉದಾಹರಣೆಗೆ-ವೆಂಕಟೇಶ ಕಲ್ಯಾಣ ಕೃತಿಯಲ್ಲಿ[೧೦] ಬರುವಂತೆ, ಶ್ರೀ ವೆಂಕಟೇಶ್ವರನು ಕೊರವಂಜಿ ವೇಷವನ್ನು ಧಾರಣೆ ಮಾಡಿ ಸಪ್ತಗಿರಿಯಲ್ಲಿ ವಾಸವಾಗಿದ್ದ ಆಕಾಶರಾಜನ ಮನೆಗೆ ಹೋಗಿ

ಇದೇ ಬೆಟ್ಟದಲ್ಲಿ ವೆಂಕಟೇಶನು ನೆಲಸಿದ್ದಾನೆ; ಅವನೇ ನಿನ್ನ ಮಗಳಾದ ಪದ್ಮಾವತಿಗೆ ಸರಿಯಾದ ವರ ಅವನನ್ನೇ ಅಳಿಯನನ್ನಾಗಿ ಮಾಡಿಕೊ ಎಂದು ಹೇಳುವ ಕಥೆಯನ್ನು ನೆನಪಿಸುವ ಎರಡು ಶಿಲ್ಪಗಳನ್ನು ಅಳವಡಿಸಲಾಗಿದೆ. ಅವುಗಳೆಂದರೆ ಶ್ರೀ ವೆಂಕಟೇಶ್ವರ (ಚಿತ್ರ ೫ ನೋಡಿ) ಹಾಗೂ ಕೊರವಂಜಿ ಶಿಲ್ಪ (ಚಿತ್ರ ೬ ನೋಡಿ).

ಈ ಮೇಲಿನ ಕಾಷ್ಠಶಿಲ್ಪಗಳ ಜೊತೆಗೆ ಇನ್ನು ಹಲವಾರು ಶಿಲ್ಪಗಳನ್ನು ಅಳವಡಿಸಲಾಗಿದ್ದು ಅವುಗಳೆಂದರೆ ಚತುರ್ಮುಖ ಬ್ರಹ್ಮ, ಸದಾಶಿವ, ನಂದಿ, ಅಪ್ಸರ ಸ್ತ್ರೀಯರು, ಅಷ್ಟದಿಕ್ಪಾಲಕರು, ದರ್ಪಣ ಸುಂದರಿ ಹಾಗೂ ವಾದ್ಯವೃಂದದವರು. ವಾದ್ಯವೃಂದದಲ್ಲಿ ಪಿಟೀಲುವಾದಕ (ಚಿತ್ರ ೭), ತಂಬೂರಿವಾದಕ (ಚಿತ್ರ ೮), ಮೃದಂಗವಾದಕ, ತಾಳವಾದಕ, ವೀಣಾವಾದಕ ಮುಂತಾದವು ವಿಶೇಷ ಗಮನ ಸೆಳೆಯುತ್ತವೆ. ಈ ಶಿಲ್ಪಗಳ ಪಟ್ಟಿಕೆಯ ಮೇಲ್ಭಾಗ ಮತ್ತು ಕೆಳಭಾಗದಲ್ಲಿ ಹೂಬಳ್ಳಿಗಳ ಸುಂದರವಾದ ಕೆತ್ತನೆ ಮಾಡಲಾಗಿದೆ.

ಈ ಎಲ್ಲಾ ಶಿಲ್ಪಗಳನ್ನು ಶಿಲ್ಪಶಾಸ್ತ್ರಕ್ಕೆ ಅನುಗುಣವಾಗಿ ರಚಿಸಲ್ಪಟ್ಟಿರುವುದು ಇಲ್ಲಿನ ವೈಶಿಷ್ಟ್ಯವಾಗಿದೆ.

(ಈ ಲೇಖನ ರಚನೆಗೆ ಸಹಕರಿಸಿದ ಆಗಮ ವಿದ್ವಾನ್ ಶ್ರೀ ಜಗದೀಶ್‌ರವರಿಗೆ ಭಾರತೀಯ ಸರ್ವೇಕ್ಷಣ ಇಲಾಖೆಗೆ, ಪ್ರಬಂಧ ಮಂಡಿಸಲು ಅವಕಾಶ ಕಲ್ಪಿಸಿದ ಇತಿಹಾಸ ಅಕಾದೆಮಿಗೆ, ಕೆಳದಿ ವಸ್ತುಸಂಗ್ರಹಾಲಯಕ್ಕೆ ನನ್ನ ಕೃತಜ್ಞತೆಗಳು.)





ಗಣೇಶ



ಲಕ್ಷ್ಮಣ, ಸೀತಾ, ರಾಮ



ಕಾಳಿಂಗ ಮರ್ದನ ಕೃಷ್ಣ



ತುಂಬುರ ನಾರದ



ವೆಂಕಟೇಶ್ವರ



ಕೊರವಂಜಿ



ಪಿಟೀಲು ವಾದಕ



ತಂಬೂರಿ ವಾದಕ


## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. **ಇತಿಹಾಸ ದರ್ಶನ.,** ಸಂ. ೧೯ / ೨೦೦೪. ಪು. ೧೩೫-೧೩೯.
೨. ಅದೇ.
೩. **ಮಯಮತಂ.,** ೨೦೦೦, ಪುಟ ೮೪೫-೫೫, IGMCA, ನವದೆಹಲಿ; **ಶ್ರೀ ಕಾಶ್ಯಪಶಿಲ್ಪಶಾಸ್ತ್ರಂ.,** ೧೯೯೮. ಪು. ೩೯-೪೬, ಕರ್ನಾಟಕ ಶಿಲ್ಪಕಲಾ ಅಕಾಡೆಮಿ.
೪. ಎಸ್.ಕೆ. ರಾಮಚಂದ್ರರಾವ್., **ಮೂರ್ತಿಶಿಲ್ಪ ನೆಲೆ-ಹಿನ್ನೆಲೆ,** ಬೆಂಗಳೂರು ವಿ.ವಿ.
೫. **ದ ಎಲಿಮೆಂಟ್ಸ್ ಆಫ್ ಹಿಂದೂ ಐಕನೊಗ್ರಫಿ,** ಸಂ-೧, ಭಾಗ-೧., ೧೯೯೭. ಪು. ೨೧೨-೨೧೩. ಮೋತಿಲಾಲ್ ಬನಾರಸಿದಾಸ್, ದೆಹಲಿ.
೬. **ದ ಎಲಿಮೆಂಟ್ಸ್ ಆಫ್ ಹಿಂದೂ ಐಕನೊಗ್ರಫಿ, ಸಂ. ೧, ಭಾಗ-೨,** ಪ್ರತಿಮಾಲಕ್ಷಣಾನಿ. ಪು. ೧೯-೨೪.
೭. **ವೆಂಕಟೇಶಪಾರಿಜಾತ,** ೧೮೯೧. ಪು. ೩೦-೩೧, ಪಾವಂಜಿ ಗುರುರಾವ್ ಎಂಡ್ ಸನ್ಸ್, ಉಡುಪಿ.




### ಕ. ಇತಿಹಾಸ ಅಕಾದೆಮಿಯ ೧೫ನೆಯ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೨೦೦೧)

*ಸಾಮಾಜಿಕ ಇತಿಹಾಸದ ಅಧ್ಯಯನದಲ್ಲಿ ಕರ್ನಾಟಕದ ಉದ್ದಗಲಕ್ಕೂ ಹರಡಿಕೊಂಡ ಪುರಾತನ ದೇವಾಲಯಗಳ ಹೊರಾಂಗಣ ಶಿಲ್ಪಗಳಲ್ಲಿ ಸಾಕಷ್ಟು ಮಾಹಿತಿ ದೊರೆಯುವ ಸಾಧ್ಯತೆ ಇದೆ. ಒಂದು ಉದಾ : ಭಟ್ಕಳದ ಖೇತಪೈ ನಾರಾಯಣ ದೇವಾಲಯ ಜನಸಾಮಾನ್ಯರ ಜೀವನವನ್ನು ಚಿತ್ರಿಸಿರುವ ಅಪೂರ್ವ ಸ್ಥಳವಾಗಿದೆ. ಸಾಮಾಜಿಕ ಇತಿಹಾಸವು ಜೀವಂತ ಇತಿಹಾಸವಾಗಿ ಮುಂದುವರಿಯಬೇಕಿದ್ದರೆ, ಜ್ವಲಂತ ಸಮಸ್ಯೆಗಳನ್ನು ಚರಿತ್ರಕಾರರು ಜನತೆಯ ಗಮನಕ್ಕೆ ಆಗಾಗ ತರುತ್ತಲೇ ಇರಬೇಕಾಗುತ್ತದೆ. ಸಂಶೋಧಕನ ಅದೂ ಜನಜೀವನ ಚರಿತ್ರೆಯ ಸಂಶೋಧಕನ ವ್ಯಾಸಂಗದ ಹರಹು ವಿಸ್ತಾರವಾಗಿರಬೇಕು; ಸಾಮಯಿಕವಿರಬೇಕು.*

**ಡಾ. ಜ್ಯೋತ್ಸ್ನಾ ಕಾಮತ್**
ಸಮ್ಮೇಳನಾಧ್ಯಕ್ಷರು

ಜಯಶ್ರೀ ಬಿ. ದೇಶಮಾನ್ಯೆ*

# ಹಿರೇಗುತ್ತಿಯ ಹೊಸ ಶಾಸನ - ಶಿಲ್ಪಗಳು

*ಹಿರೇಗುತ್ತಿಯ ಕಾಡು-ಗದ್ದೆಗಳ ನಡುವೆ ಇದ್ದ ಬಸದಿಯೊಂದರ ಅವಶೇಷದ ಬಳಿ ಶಾಸನೋಕ್ತ ಜಿನಮೂರ್ತಿಯೊಂದು ಕಲಾತ್ಮಕವಾಗಿದೆ; ಇತಿಹಾಸದ ಪೋಷಕತೆಯನ್ನು ಮೂರ್ತಿಯ ಪೀಠ ಶಾಸನವು ಸ್ಪಷ್ಟಗೊಳಿಸುತ್ತದೆ. ಯೋಗಮುದ್ರೆಯ ಈ ತೀರ್ಥಂಕರ ಮೂರ್ತಿ ಆದಿನಾಥಸ್ವಾಮಿ ಎಂದು ಶಾಸನೋಕ್ತವಾಗಿದ್ದು ೧೨ನೆಯ ಶತಮಾನದ ಶೈಲಿಯದಾಗಿದೆ ಎನ್ನಬಹುದು. ಇದಲ್ಲದೆ ವೀರಸತಿಗಲ್ಲೂ ಸಹ ಜೈನ ಬಸದಿಗೆ ಹಾದು ಹೋಗುವ ಹಾದಿಯಲ್ಲಿದ್ದು ಕುತೂಹಲಕರವಾಗಿದೆ. ಏಳು ಜನ ಸತಿಯರು ಏಕಕಾಲಕ್ಕೆ ಸತಿಹೋಗುವ ದೃಶ್ಯ ಗಮನಾರ್ಹವಾಗಿದೆ.*

ಉತ್ತರ ಕನ್ನಡ ಜಿಲ್ಲೆಯ ಕುಮಟಾ ತಾಲ್ಲೂಕಿನ ಹಿರೇಗುತ್ತಿ ಗ್ರಾಮದ ಸುಮಾರು ಒಂದು ಕಿ.ಮೀ. ದೂರದಲ್ಲಿರುವ ಹಾಳುಬಿದ್ದ ಸ್ಥಳದಲ್ಲಿ ಒಂದು ಜಿನ ವಿಗ್ರಹವಿದ್ದು, ಈ ಸ್ಥಳವನ್ನು ಸ್ಥಳೀಕರು ಜೈನ ಬಸದಿಯೆಂದು ಕರೆಯುತ್ತಾರೆ. ಅದಕ್ಕೆ ಪೂರಕವೆಂಬಂತೆ



ಬಸದಿಯ ಅಧಿಷ್ಠಾನದ ಭಾಗವೂ ಅಲ್ಲಿದೆ. ಈ ಸ್ಥಳದಲ್ಲಿ ತೀರ್ಥಂಕರನ ಉಬ್ಬುಶಿಲ್ಪವಿದೆ. ತೀರ್ಥಂಕರನು ಪದ್ಮಾಸನದಲ್ಲಿ ಕುಳಿತಿದ್ದು, ಕೈಗಳು ಯೋಗಮುದ್ರೆಯಲ್ಲಿವೆ. ಸಂಪೂರ್ಣ ನಗ್ನನಾಗಿರುವ ಈತ ನಿರಾಭರಣನಾಗಿದ್ದಾನೆ. ಶಿರದ ಹಿಂಭಾಗದಲ್ಲಿ ಪ್ರಭಾವಲಯವಿದೆ. ತೀರ್ಥಂಕರನ ಇಕ್ಕೆಲಗಳಲ್ಲಿ ಚಾಮರಧಾರಿಗಳು ನಿಂತಿರುವರು. ದ್ವಿಭುಜಧಾರಿಗಳಾಗಿರುವ ಇವರು ಒಂದು ಕೈಯಲ್ಲಿ ಚಾಮರವನ್ನು ಹಿಡಿದಿದ್ದು, ಆಭರಣಗಳಿಂದ ಭೂಷಿತರಾಗಿದ್ದಾರೆ.



* ಸಂಶೋಧನಾ ವಿದ್ಯಾರ್ಥಿನಿ, ಭಾರತೀಯ ಪ್ರಾಚೀನ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗ, ಕ.ವಿ.ವಿ. ಧಾರವಾಡ-೩

ಈ ಶಿಲ್ಪದ ಪೀಠದ ಮೇಲೆ ಶಾಸನವನ್ನು ಕೆತ್ತಲಾಗಿದೆ. ಶಾಸನದ ಪಾಠ ಈ ಕೆಳಗಿನಂತಿದೆ:

**ಶಾಸನದ ಪಾಠ:**

೧. ಶ್ರೀ ಮ. ಸಯ್ಯ..... ಸೆಟ್ಟಿಯರುಂ ಸುಪುತ್ರ
೨. ಬಮ್ಮಿ ಸೆಟ್ಟಿಯರು ಮುಖ್ಯವಾಗಿ ಸಮಸ್ತ ನಗರಂಗಳು
೩. ಶ್ರೀ ಮೂಲಸಂಘದ ಕಾಣೂರ್ಗಣದ ಯಾದಿನಾಥ ಸ್ವಾಮಿ
೪. ಯ ಪ್ರತಿಮೆಯಂ ಮಾಡಿಸಿ ಕೃತಾರ್ಥರಾದರು
೫. ಮಂಗಳ ಮಹಾಶ್ರೀ [II]

**ಸಾರಾಂಶ** : ಬಮ್ಮಿ ಸೆಟ್ಟಿ, ಸಮಸ್ತ ನಗರಗಳು ಶ್ರೀ ಮೂಲ ಸಂಘದ ಕಾಣೂರ್ಗಣದ ಆದಿನಾಥ ಸ್ವಾಮಿಯ ಪ್ರತಿಮೆಯನ್ನು ಮಾಡಿಸಿ ಕೃತಾರ್ಥರಾದರೆಂದು ಈ ಶಾಸನ ತಿಳಿಸುತ್ತದೆ.

ಈ ಶಾಸನದ ಅಕ್ಷರಗಳ ಶೈಲಿಯು ಸುಮಾರು ಕ್ರಿ.ಶ. ೧೨ನೇ ಶತಮಾನದ್ದೆಂದು ತರ್ಕಿಸಬಹುದು. ಈ ಶಿಲ್ಪದ ದೇಹಾಂಗದ ಅಂಗಾಂಗಗಳನ್ನು ಪ್ರಮಾಣಬದ್ಧವಾಗಿ ಮತ್ತು ಸುಂದರವಾಗಿ ನಿರ್ಮಿಸಿರುವುದು ಗಮನೀಯ. ತಲೆಯ ಹಿಂಬದಿಗೆ ಇರುವ ಅರ್ಧವೃತ್ತಾಕಾರದ ಪ್ರಭಾಮಂಡಲದಲ್ಲಿ ಅಲಂಕರಣವನ್ನು ಕಾಣಬಹುದು. ಈ ಸ್ಥಳದಲ್ಲಿ ಜಿನ ಶಿಲ್ಪವಲ್ಲದೇ ಜೈನ ಬಸದಿಗೆ ಹೋಗುವ ದಾರಿಯಲ್ಲಿ ವಿಜಯನಗರ ಕಾಲದ ವೀರಗಲ್ಲುಗಳಿವೆ. ಇವುಗಳಲ್ಲಿ ಎರಡು ವೀರ ಸತಿಗಲ್ಲು, ಒಂದು ವೀರಗಲ್ಲು ಕಂಡು ಬರುತ್ತವೆ. ಒಂದನೆಯ ಸತಿಗಲ್ಲಿನಲ್ಲಿ ಸದ್ಯಕ್ಕೆ ಮೂರು ಪಟ್ಟಿಕೆಗಳಷ್ಟೇ ಕಂಡುಬರುತ್ತವೆ. ಕೆಳಗಿನ ಪಟ್ಟಿಕೆಯಲ್ಲಿ ವಾದ್ಯವೃಂದದವರಿದ್ದು, ಇವರೆಲ್ಲ ಸೀರೆಯನ್ನು ಧರಿಸಿದ್ದಾರೆ. ಮೇಲಿನ ಪಟ್ಟಿಕೆಯಲ್ಲಿ ಕೆಳಗಡೆ ಮೂರು ಜನ ವೀರರು ಕೈಮುಗಿದು ಕುಳಿತಿದ್ದಾರೆ. ಅವರ ಮೇಲ್ಭಾಗದಲ್ಲಿ ಶಿವಲಿಂಗಕ್ಕೆ ಪೂಜಿಸುತ್ತಿರುವ ವ್ಯಕ್ತಿ ಶಿವಲಿಂಗದ ಎಡಕ್ಕೆ ಕುಳಿತ ನಂದಿ ಚಿತ್ರಗಳಿವೆ.



ಈ ವೀರಸತಿಗಲ್ಲಿನಲ್ಲಿ ಬಹುಶಃ ಕೆಳಗಡೆ ಇನ್ನೊಂದು ಪಟ್ಟಿಕೆಯಿದ್ದು, ಅದರಲ್ಲಿ ವೀರರು ಹೋರಾಡುತ್ತಿರುವ ದೃಶ್ಯವಿರ ಬಹುದು. ಏಕೆಂದರೆ ಮೇಲಿನ ಪಟ್ಟಿಕೆಯಲ್ಲಿ ಮೂವರು ವೀರರನ್ನು ತೋರಿಸಿದ್ದು ಒಟ್ಟಾರೆ ಈ ವೀರಗಲ್ಲಿನಿಂದ ಆ ವೀರರು ಯುದ್ಧದಲ್ಲಿ ಮರಣ ಹೊಂದಿದ್ದು, ಅವರ ಮಡದಿಯರು ಸತಿ ಹೋದ ಬಗ್ಗೆ ಇದು ತಿಳಿಸುತ್ತದೆ.

ಎರಡನೆಯ ವೀರ-ಸತಿಗಲ್ಲಿನಲ್ಲಿಯೂ ಈ ನಾಲ್ಕು ಭಾಗವು ಮಾತ್ರ ಕಂಡುಬರುತ್ತದೆ. ಕೆಳಗಿನ ದೃಶ್ಯದಲ್ಲಿ ವಾದ್ಯವೃಂದದವರು ಕಂಡುಬರುತ್ತಾರೆ. ಈ ದೃಶ್ಯವೂ ಮಣ್ಣಿನಲ್ಲಿ ಹೂತುಹೋಗಿದೆ. ಎರಡನೆಯ ಪಟ್ಟಿಕೆಯಲ್ಲಿ ಮೂರು ಜನ ವೀರರು ಮತ್ತು ಒಬ್ಬ ಸತಿಯನ್ನು ತೋರಿಸಲಾಗಿದೆ. ಸತಿಯು ಕೈಮುಗಿದು ನಿಂತಿದ್ದಾಳೆ. ಮಧ್ಯದಲ್ಲಿ ವೀರ ಕುಳಿತಿದ್ದು, ಬದಿಗಳಲ್ಲಿ ಮತ್ತಿಬ್ಬರು ವೀರರು ಕೈಮುಗಿದು ನಿಂತಿದ್ದಾರೆ.

ಮೂರನೆಯ ದೃಶ್ಯದಲ್ಲಿ ಏಳು ಜನ ಸ್ತ್ರೀಯರು ತಮ್ಮ ಕೈಗಳನ್ನು ಹೊಟ್ಟೆಯ ಸಮಭಾಗಕ್ಕೆ ಹಿಡಿದು ನಿಂತಿದ್ದಾರೆ. ಮೇಲಿನ ದೃಶ್ಯದಲ್ಲಿ ಶಿವಲಿಂಗಕ್ಕೆ ನಿಂತು ಪೂಜಿಸುತ್ತಿರುವ ವ್ಯಕ್ತಿ, ಶಿವಲಿಂಗದ ಎಡಗಡೆ ನಿಂತ ನಂದಿ, ಮೇಲೆ ಸೂರ್ಯಚಂದ್ರರ ಚಿತ್ರಗಳಿವೆ.

ಒಟ್ಟಾರೆ ಈ ವೀರಸತಿಗಲ್ಲಿನಲ್ಲಿ ಮೂವರು ವೀರರು ಯುದ್ಧದಲ್ಲಿ ಮರಣ ಹೊಂದಿದ್ದು, ಅವರ ಏಳು ಜನ ಮಡದಿಯರು ಸತಿ ಹೋಗಿದ್ದಾರೆಂದು ತಿಳಿಯಬಹುದು. ಈ ವೀರ-ಸತಿಗಲ್ಲಿನಲ್ಲಿ ಮೊದಲಿಗೆ ವೀರರನ್ನು ನಂತರ ಸತಿಯರನ್ನು ತೋರಿಸಿರುವುದು ಮತ್ತು ವಾದ್ಯವೃಂದದವರನ್ನು ಪ್ರತ್ಯೇಕ ಪಟ್ಟಿಕೆಯಲ್ಲಿ ತೋರಿಸಿರುವುದು ವಿಶೇಷವೆನಿಸಿದೆ.

ಈ ಎರಡು ವೀರಸತಿಗಲ್ಲುಗಳು ಪರಸ್ಪರ ತುಸು ಹೋಲಿಕೆಯನ್ನು ಹೊಂದಿವೆ. ಅಂದರೆ ಎರಡರಲ್ಲೂ ಮೂವರು ವೀರರನ್ನು, ಏಳು ಜನ ಸತಿಯರನ್ನು ತೋರಿಸಲಾಗಿದೆ. ಈ ಎರಡು ಶಿಲ್ಪಗಳ ಕಾಲ ಸು. ಕ್ರಿ.ಶ. ೧೩-೧೪ನೇ ಶತಮಾನವಿರಬಹುದು.

ಈ ರೀತಿಯಾಗಿ ಏಳು ಜನ ಸತಿಯರು ಒಂದೇ ಬಾರಿ ಸತಿ ಹೋದ ಬಗ್ಗೆ ತಿಳಿಸುವುದು ತುಂಬಾ ಅಪರೂಪವಾಗಿದೆ. ಆದ್ದರಿಂದ ಈ ವೀರ-ಸತಿಗಲ್ಲುಗಳು ಮಹತ್ವವೆನಿಸಿವೆ.

**ವೀರಗಲ್ಲು** : ವೀರಗಲ್ಲಿನಲ್ಲಿ ನಾಲ್ಕು ದೃಶ್ಯಗಳಿವೆ. ಕೆಳಗಿನ ದೃಶ್ಯವು ಮಣ್ಣಿನಲ್ಲಿ ಹೂತು ಹೋಗಿದ್ದು, ಅಲ್ಲಿ ಸ್ವಲ್ಪ ಮಾತ್ರ ಯುದ್ಧದ ಚಿತ್ರಣ ಕಂಡುಬರುತ್ತದೆ. ಎರಡನೇ ದೃಶ್ಯದಲ್ಲಿ ವಾದ್ಯ ವೃಂದದವರನ್ನು, ಮೂರನೆಯ ಪಟ್ಟಿಕೆಯಲ್ಲಿ ವಿಮಾನದಲ್ಲಿ ಕುಳಿತ ವೀರರನ್ನು ನಾಲ್ವರು ಅಪ್ಸರೆಯರು ದೇವಲೋಕಕ್ಕೆ ಕೊಂಡೊಯ್ಯುವ ಶಿಲ್ಪ ಹಾಗೂ ಮೇಲಿನ ಪಟ್ಟಿಕೆ ದೇವಲೋಕದ ಚಿತ್ರಣವಾಗಿದ್ದು, ಅಲ್ಲಿ ಮಂಟಪದಲ್ಲಿ ಶಿವಲಿಂಗವಿದೆ. ಅದರ ಬಲಕ್ಕೆ ನಂದಿ, ಎಡಭಾಗದಲ್ಲಿ ಕೈಮುಗಿದು ಕುಳಿತ ವೀರನಿದ್ದಾನೆ. ಈ ಮೇಲಿನ ಪಟ್ಟಿಕೆಗೆ ಮಾತ್ರ ಮಕರತೋರಣವಿದೆ. ಒಟ್ಟಾರೆ ಯುದ್ಧದಲ್ಲಿ ವೀರನು ಮರಣ ಹೊಂದಿದ್ದು, ಆತನಿಗೆ ಸ್ವರ್ಗ ಪ್ರಾಪ್ತಿಯಾದ ಬಗ್ಗೆ ಈ ಶಿಲ್ಪ ತಿಳಿಸುತ್ತದೆ. ಈ ವೀರಗಲ್ಲಿನ ಕಾಲಮಾನ ಸು.ಕ್ರಿ.ಶ. ೧೩-೧೪ನೇ ಶತಮಾನ.

(**ಕೃತಜ್ಞತೆಗಳು** : ಶಾಸನದ ಪಾಠ ಓದಲು ಸಹಾಯ ಮಾಡಿದ ನನ್ನ ಗುರುಗಳಾದ ಡಾ. ರು.ಮ. ಷಡಕ್ಷರಯ್ಯ ಹಾಗೂ ಶ್ರೀನಿವಾಸ ಪಾಡಿಗಾರರವರಿಗೂ ಹಾಗೂ ಅಧ್ಯಯನಕ್ಕೆ ಸಹಾಯ ಮಾಡಿದ ಸ್ನೇಹಿತ ಜಯಮ್ಮ, ಸಹೋದರ ಲಿಂಗರಾಜರವರಿಗೆ ಕೃತಜ್ಞತೆಗಳು.)



ಡಾ. ಡಿ. ವಿ. ಪರಮಶಿವಮೂರ್ತಿ*

# ದಾನಚಿಂತಾಮಣಿ ಅತ್ತಿಮಬ್ಬೆಯ ಪ್ರಾಚೀನ ಶಾಸನ (ಕ್ರಿ.ಶ. ೯೮೭)

ಮುಂಡರಗಿ ತಾಲೂಕು ಜಂತ್ಲಿ ಶಿರೂರು, ದಾನ ಚಿಂತಾಮಣಿ ಅತ್ತಿಮಬ್ಬೆಯ ಬಹಳ ಪ್ರಾಚೀನ ಶಾಸನ ವೊಂದನ್ನು ನೆಲದ ಮಡಿಲನಿಂದ ಎತ್ತಿಕೊಟ್ಟಿದೆ. ಆಕೆಯ ಜೀವನ ಚರಿತ್ರೆಯ ಅರಿವಿಗೆ ಕಾವ್ಯಗಳನ್ನು ಹೆಚ್ಚು ಆಧರಿಸ ಬೇಕಿರುವಲ್ಲಿ ಪ್ರಸ್ತುತ ಶಾಸನ ಶಾಸನವಲಯಕ್ಕೆ ಹೆಚ್ಚು ಪುಷ್ಟಿ ತಂದುಕೊಟ್ಟಿದೆ. ಕಲ್ಯಾಣಿ ಚಾಲುಕ್ಯರ ಕ್ರಿ.ಶ. ೯೮೭ರ ಕಾಲದ ಈ ಶಾಸನವು ಆಕೆಯ ಪ್ರಭಾವದ ಕಲ್ಪನೆ ನೀಡುತ್ತದೆ. ಅಲ್ಲದೆ ರನ್ನಕೃತ ಶಾಸನವೆಂಬ ಸೂಚನೆ ಯನ್ನು ಅಜಿತಪುರಾಣಕ್ಕೆ ತನ್ನ ಸಾಲುಗಳನ್ನು ನೀಡಿದೆ. ಅಂದರೆ ಶಾಸನದ ಪದ್ಯವನ್ನು ಕಾವ್ಯದಲ್ಲಿ ಬಳಸಲಾಗಿದೆ ಯೆಂದು ಹೇಳಬಹುದು. ಶಾಸನವನ್ನು ರಚಿಸಿದ ಏಳು ವರ್ಷಗಳ ನಂತರ ರನ್ನನು ಕಾವ್ಯವನ್ನು ರಚಿಸಿದಾಗ ಅದರಲ್ಲಿ ಈ ಶಾಸನ ಪದ್ಯವನ್ನೂ ಬಳಸಿಕೊಂಡಿದ್ದಾನೆ.

ಗದಗು ಜಿಲ್ಲೆಯ ಮುಂಡರಗಿ ತಾಲೂಕಿನ ಜಂತ್ಲಿ ಶಿರೂರು ಎಂಬ ಗ್ರಾಮದಲ್ಲಿನ ಶಾಸನಗಳ ಪರಿಶೀಲನೆಯ ಸಂದರ್ಭದಲ್ಲಿ ಗ್ರಾಮದ ಹಿರಿಯರೊಬ್ಬರು ಊರಿನ ಹೊರಭಾಗದ ವೇಣು ಗೋಪಾಲ ಗುಡಿಯ ಹಿಂಭಾಗದ ತಿಪ್ಪೆಗುಂಡಿಯಲ್ಲಿ ಬಿದ್ದಿದ್ದ ಕರಿಕಲ್ಲಿನತ್ತ ನಮ್ಮ ಗಮನವನ್ನು ಸೆಳೆದರು. ಅದನ್ನು ಗ್ರಾಮಸ್ಥರ ಸಹಾಯದಿಂದ ಮೇಲೆತ್ತಿ ಸ್ವಚ್ಛಗೊಳಿಸಿ ನೋಡಿದಾಗ ಅದು ಕರ್ನಾಟಕದ ದಾನಸಂಸ್ಕೃತಿಯಲ್ಲಿ ಹೆಸರಾಂತ ಮಹಿಳೆಯಾದ ದಾನಚಿಂತಾಮಣಿ ಅತ್ತಿಮಬ್ಬೆಯ ಶಾಸನವೆಂದು ತಿಳಿಯಿತು.

ಇದು ಅಪ್ರಕಟಿತವಾಗಿದ್ದು, ಇದುವರೆಗಿನ ಅತ್ತಿಮಬ್ಬೆಯ ಶಾಸನಗಳಿಗಿಂತ ಬಹಳ ಪ್ರಾಚೀನವಾದ ಶಾಸನವಾಗಿದೆ. ಶಾಸನವು ಐದು ಅಡಿ ಎತ್ತರ ಮತ್ತು ಎರಡೂವರೆ ಅಡಿ ಅಗಲವಿದ್ದು, ಲಿಪಿಯು ಬಹಳ ಸುಂದರವಾಗಿ ಸ್ಫುಟವಾಗಿದೆ. ಶಾಸನದ ಲಲಾಟ ಮತ್ತು ಮೇಲ್ಭಾಗದ ಎಡಮೂಲೆ ಒಡೆದುಹೋಗಿದೆ. ಇದರಿಂದ ಶಾಸನದ ಆರಂಭದ ಪಾಠ ನಷ್ಟವಾಗಿದೆ. ಒಟ್ಟು ಇಪ್ಪತ್ತೊಂಬತ್ತು ಸಾಲುಗಳಿದ್ದು ಶಾಸನವು ಸರಳವಾದ ಭಾಷೆ ಮತ್ತು ನಿರೂಪಣೆ ಯಿಂದ ಕೂಡಿದೆ.

ಈವರೆಗೆ ಅತ್ತಿಮಬ್ಬೆಯನ್ನು ಕುರಿತಂತೆ ಲಕ್ಕುಂಡಿಯ ಎರಡು ಮತ್ತು ಕೊಪ್ಪಳ ಬಳಿಯ ಗುಡ್ಡಾನೂರಿನ ಒಂದು ಹೀಗೆ ಒಟ್ಟು ಮೂರು ಶಾಸನಗಳು ದೊರಕಿದ್ದವು. ಇವಳ ಜೀವನ ಚರಿತ್ರೆ ಅರಿಯಲು ಶಾಸನಗಳಿಗಿಂತ ಕಾವ್ಯಗಳನ್ನು ಹೆಚ್ಚು ಆಧರಿಸಬೇಕಾಗಿದೆ. ಪೊನ್ನ, ರನ್ನ ಮತ್ತು ಬ್ರಹ್ಮಶಿವರು ಇವಳ ಬಗೆಗೆ ಮಾಹಿತಿ ನೀಡಿರುವರು. ಈಗ ಪ್ರಸ್ತುತ ಶಿರೂರಿನ ಶಾಸನ ದೊರಕಿರುವುದ ರಿಂದ ಶಾಸನ-ಆಕರಗಳಿಗೆ ಮತ್ತಷ್ಟು ಬಲಬಂದಂತಾಗಿದೆ.

ಶಿರೂರಿನ ಶಾಸನವು ಕಲ್ಯಾಣಚಾಲುಕ್ಯ ವಂಶದ ಸ್ಥಾಪಕ ಚಕ್ರವರ್ತಿ ಇಮ್ಮಡಿ ತೈಲಪ ಅಥವಾ ಆಹವಮಲ್ಲನ ಅವಧಿಯ ದಾಗಿದೆ. ಇವನ ಕೈಕೆಳಗಿನ ಅಧಿಕಾರಿಯಾಗಿ ಮಾಸೆಯವಾಡಿ (ಮಾಸೆವಾಡಿ) ನಾಡನ್ನು ಅತ್ತಿಮಬ್ಬೆಯ ಮಗ ಅಣ್ಣಿಗದೇವ (ತೈಲ)ನು ಆಳುತ್ತಿರುತ್ತಾನೆ. ಈ ಅವಧಿಯಲ್ಲಿ ಜಿನಧರ್ಮ ಪತಾಕೆ, ಕಟಕ ಪವಿತ್ರೆ, ದಾನಚಿಂತಾಮಣಿ ಎನಿಸಿದ್ದ ಅತ್ತಿಮಬ್ಬೆಯು ಈವರೆಗಿನ ಬಸದಿಗಳಿಗಿಂತ ಸುಂದರವಾದ ಬಸದಿಯನ್ನು ನಿರ್ಮಿಸಿ ಅದರ ಜೀರ್ಣೋದ್ಧಾರ ಮತ್ತು ಪೂಜಾಕಾರ್ಯಗಳಿಗೆ ಮಾಸೆಯವಾಡಿಯ ನಾಡಿನಲ್ಲಿದ್ದ ಗಾವುಂಡಿಗನಪಳ್ಳಿ ಎಂಬ ಗ್ರಾಮವನ್ನು, ರಾಜಮಾನ ದಲ್ಲಿ ಇನ್ನೂರು ಮತ್ತರು ತಳವೃತ್ತಿಯನ್ನು ಸರ್ವಬಾಧಾಪರಿಹಾರ ವಾಗಿ ದಾನವಾಗಿ ನೀಡುವಳು. ಈ ಭೂಮಿಯ ಸೀಮೆಯಾಗಿ ನೈರುತ್ಯಕ್ಕೆ ಪಾಲ್ವಳ್ಳ, ಇದರ ದಕ್ಷಿಣಕ್ಕೆ ಪುಲ್ಗಿಲ...., ವಾಯುವ್ಯಕ್ಕೆ ಪನ್ನಿರ್ಚಲ್ಚಿಕ್ಕೋಲು, ಇದರ ಪೂರ್ವಕ್ಕೆ ಬೆಲೆಗುಡ್ಡೆ, ಇದಕ್ಕೆ ದಕ್ಷಿಣ

* ಅಧ್ಯಾಪಕರು, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೫೮೩ ೨೭೬.

ಕವಿಲೆವಾಡ - ಲೊಕ್ಕಿಗುಂಡಿಯ ದಾರಿ. ಇದರ ದಕ್ಷಿಣಕ್ಕೆ ನಿರ್ವ್ವರಿ. ಇದರ ಪೂರ್ವಕ್ಕೆ ಸಿರಿಪುರದ ಹೊಲದಗಡಿ, ಉತ್ತರಕ್ಕೆ ಪಾಲ್ವಳ್ಳದ ಮೇರೆ. ತಳವೃತ್ತಿಯಾಗಿ ನೀಡಿದ ಭೂಮಿಯ ಸೀಮೆಯು ದಕ್ಷಿಣಕ್ಕೆ ಸರಿಯಪಳ್ಳ, ಪೂರ್ವಕ್ಕೆ ಬರಿಯಪಳ್ಳ, ಪಶ್ಚಿಮಕ್ಕೆ ಕಾಯಿಗೇಶ್ವರದ ಹೊಲ. ಈ ದಾನವನ್ನು ಶಕ ೯೦೮, ಸರ್ವಜಿತು ಸಂವತ್ಸರ, ಪಾಲ್ಗುಣಮಾಸ, ನಂದೀಶ್ವರದ ಅಷ್ಟಮಿ, ಆದಿತ್ಯವಾರದಂದು ಬಸದಿಯ ಗುರುಗಳಾದ ಇಂದ್ರಕೀರ್ತಿ ದೇವರ ಪಾದತೊಳೆದು ದಾನವನ್ನು ಬಿಡಲಾಗಿದೆ. ಈ ಕಾಲವು ಕ್ರಿ.ಶ. ೯೮೭, ಜನವರಿ ೧೫ಕ್ಕೆ ಸರಿಹೊಂದುತ್ತದೆ. ಶಾಸನದ ಕೊನೆಯ ಭಾಗದಲ್ಲಿ ಸಾಮಾನ್ಯವಾದ ಶಾಪಾಶಯವಿದೆ.

ಲಕ್ಕುಂಡಿಯಲ್ಲಿ ದೊರೆತಿರುವ ಎರಡೂ ಶಾಸನಗಳು ಕ್ರಿ.ಶ. ೧೦೦೭ಕ್ಕೆ ಸೇರಿದ್ದು, ಗುಡ್ಡಾನೂರಿನ ಶಾಸನವು ಕ್ರಿ.ಶ. ೯೮೮ಕ್ಕೆ ಸೇರುತ್ತದೆ. ಈ ನಮ್ಮ ಶಾಸನವು ಕ್ರಿ.ಶ. ೯೮೭ರ ಅವಧಿಯದಾದ್ದರಿಂದ ಸದ್ಯಕ್ಕೆ ಅತ್ತಿಮಬ್ಬೆಯ ಪ್ರಾಚೀನ ಶಾಸನವೆಂಬ ಹೆಗ್ಗಳಿಕೆಗೆ ಪಾತ್ರವಾಗುತ್ತದೆ. ಈ ಶಾಸನದಲ್ಲಿ ಅತ್ತಿಮಬ್ಬೆಯು ಯಾವ ಬಸದಿಗೆ ದಾನ ನೀಡಿದಳೆಂಬ ವಿಷಯವಿಲ್ಲ. ಈಗಿನ ಶಿರೂರನ್ನು ಶಾಸನದಲ್ಲಿ ಸಿರಿವುರ ಎಂದು ಕರೆದಿದೆ. ಈ ಊರಿನಲ್ಲಿ ಈಗ ಯಾವುದೇ ಜೈನ ಕುರುಹುಗಳಿಲ್ಲ. ಅತ್ತಿಮಬ್ಬೆಯು ಲಕ್ಕುಂಡಿಯಲ್ಲಷ್ಟೇ ಅಲ್ಲದೆ ಬೇರೆ ಬೇರೆ ಕಡೆಯೂ ಬಸದಿಗಳನ್ನು ನಿರ್ಮಿಸಿ ಅವುಗಳಿಗೆ ದಾನ-ದತ್ತಿಗಳನ್ನು ನೀಡಿದ್ದಳೆಂದು ಈ ಶಾಸನದಿಂದ ತಿಳಿಯಬಹುದು. ಅಲ್ಲದೆ ಶಾಸನದ ಕಾಲವನ್ನು ಗಮನಿಸಿದರೆ ಕಲ್ಯಾಣ ಚಾಳುಕ್ಯರ ಆರಂಭ ಕಾಲದಿಂದಲೂ ಅತ್ತಿಮಬ್ಬೆ ಪ್ರಭಾವಿ ಮಹಿಳೆಯಾಗಿ ಹೆಸರುಗಳಿಸಿದ್ದಳೆಂದು ತಿಳಿದುಬರುತ್ತದೆ.

ಈ ಶಾಸನದ ಮತ್ತೊಂದು ಮಹತ್ವವೆಂದರೆ ಈ ಶಾಸನವನ್ನು ಮಹಾಕವಿ ರನ್ನನು ರಚಿಸಿರಬೇಕೆಂಬ ಅಭಿಪ್ರಾಯಕ್ಕೆ ಅವಕಾಶವಿರುವುದು. ಶಾಸನದ ೧೩ ರಿಂದ ೧೫ನೇ ಸಾಲಿನ ಪದ್ಯವು ರನ್ನನ ಅಜಿತಪುರಾಣದಲ್ಲಿ ಬಳಕೆಯಾಗಿರುವ ಪದ್ಯವಾಗಿದೆ. ರನ್ನನೇ ತಿಳಿಸಿರುವಂತೆ ಅಜಿತಪುರಾಣದ ರಚನಾಕಾಲ ಕ್ರಿ.ಶ. ೯೯೩, ಆದರೆ ಶಾಸನದ ಕಾಲ ಇದಕ್ಕಿಂತ ಏಳು ವರ್ಷಗಳಷ್ಟು ಹಿಂದೆ, ಅಂದರೆ ಕ್ರಿ.ಶ. ೯೮೭. ಈ ಕಾರಣದಿಂದ ಅಜಿತಪುರಾಣದ ಪದ್ಯವನ್ನು ಇಲ್ಲಿ ಬಳಸಲಾಗಿದೆಯೆಂದು ಹೇಳಲಾಗುವುದಿಲ್ಲ. ಆದರೆ ಶಾಸನದ ಪದ್ಯವನ್ನು ಕಾವ್ಯದಲ್ಲಿ ಬಳಸಲಾಗಿದೆಯೆಂದು ಹೇಳಬಹುದು. ಇದರಿಂದಾಗಿ ಈ ಶಾಸನವನ್ನು ರನ್ನನೇ ರಚಿಸಿದ್ದು, ಶಾಸನವನ್ನು ರಚಿಸಿದ ಏಳು ವರ್ಷಗಳ ನಂತರ ಕಾವ್ಯವನ್ನು ರಚಿಸಿದಾಗ ಅದರಲ್ಲಿ ಈ ಶಾಸನದ ಪದ್ಯವನ್ನೂ ಬಳಸಿಕೊಂಡಿದ್ದಾನೆ.

**ಶಾಸನದ ಪದ್ಯ (ಚಂಪಕಮಾಲಾ ವೃತ್ತ)**

. . . . . . . . . . . ತನೆಪಂ ನೆಗಱ್ತೆಯನಾನ್ತ ಮಲ್ಲಪ
ಯ್ಯನ ನೆಗಟ್ದಪ್ಪ . . . . . . . . . . . . . ದಲ್ಲಪ
ಯ್ಯನ ಸೊಸೆ ನಾಗದೇವನ ಕುಳಾಂಗನೆ ತೈಳನ ತಾಯ್ಜಸಕ್ಕೆ.
. . . . . . . . . . . . ಶಾಸನಮಂ ಬೆಳಗುತ್ತ ಮಿಟ್ಟಿಪಳ್

**ಅಜಿತ ಪುರಾಣದ ಪದ್ಯ (ಚಂಪಕಮಾಲಾ ವೃತ್ತ)**

ಜನಪದ ಪಂಕಜಭ್ರಮರನೆಂಬ ನೆಗಱ್ತೆಯನಾಂತ ಮಲ್ಲಪ
ಯ್ಯನ ನೆಗಟ್ದಪ್ಪಕಬ್ಬೆಯ ಮಗಳ್ ಸಚಿವೋತ್ತಮನಪ್ಪ ಧಲ್ಲಪ
ಯ್ಯನ ಸೊಸೆ ನಾಗದೇವನ ಕುಲಾಂಗನೆ ತೈಲನ ತಾಯ್ಜಸಕ್ಕೆ ಭಾ
ಜನಮೆನಿಪತ್ತಿಮಬ್ಬೆ ಜಿನಶಾಸನಮಂ ಬೆಳಗುತ್ತಮಿರ್ದಪಳ್
(೧/೬೮)

ಈ ಮೇಲಿನ ಪದ್ಯಗಳನ್ನು (ವೃತ್ತಗಳನ್ನು) ಗಮನಿಸಿದಾಗ ಎರಡೂ ರನ್ನನಿಂದಲೇ ರಚನೆಯಾಗಿವೆಯೆಂದು ಹೇಳಬಹುದು. ಶಾಸನವೊಂದರ ವೃತ್ತವು ಕಾವ್ಯದಲ್ಲಿ ಬಳಕೆಯಾಗಿರುವ ಉದಾಹರಣೆಗೆ ಇದೇ ಮೊದಲನೆಯದಾಗುತ್ತದೆ. ರನ್ನಕವಿಯು ಅತ್ತಿಮಬ್ಬೆಯ ಆಶ್ರಯಕ್ಕೆ ಬಂದಮೇಲೆ ಶಾಸನ ಕವಿಯಾಗಿದ್ದು, ಆನಂತರ ತನ್ನ ಕವಿತ್ವಶಕ್ತಿ ಗಟ್ಟಿಗೊಂಡ ಬಳಿಕ ಕಾವ್ಯರಚನೆ ಮಾಡಿರಬೇಕೆಂದು ತೋರುತ್ತದೆ. ಈ ಕಾರಣದಿಂದ ಶಾಸನಗಳ ರಚನೆ ಕಾವ್ಯ ರಚನೆಗೆ ಮೊದಲ ವೇದಿಕೆಯಾಗುತ್ತಿತ್ತೆಂದು ತೋರುತ್ತದೆ. ಈ ಕಾರಣಗಳಿಂದ ಪ್ರಸ್ತುತ ಶಾಸನವು ಅತ್ತಿಮಬ್ಬೆ, ರನ್ನಕವಿ ಮತ್ತು ಕನ್ನಡ ಸಾಹಿತ್ಯ ಚರಿತ್ರೆ ಈ ಮೂರೂ ದೃಷ್ಟಿಯಿಂದ ಮಹತ್ವ ಪಡೆಯುತ್ತದೆ.

**ಶಾಸನ ಪಾಠ**

೧ ಸ್ವಸ್ತಿ ಸಮ(ಸ್ತ). . . . . . . . . . . . . .
೨ ಪರಮಭಟ್ಟಾರಕ ಸತ್ಯಾ. . . . . . . . . . . .
೩ ರಾಜ್ಯಮುತ್ತರೋತ್ತರಾಭಿವೃ. . . . . . . . . . . . . .
೪ ಮಹಾಮಂತ್ರಾಕ್ಷ ಪಟ. . . . . . . . . . . . . .
೫ ಕನ್ದ ॥ ಆಹವಮಲ್ಲನ ಚರ. . . . . . . . . . . . .
೬ ದಿಂ ಸನ್ದ ನಾಗದೇವನ ಮಗ. . . . . . . . . . . .
೭ ಸಿದ ನಾಗದೇವನ ಮಗಂ ॥ . . . . . . . . . . . .
೮ ಧರ್ಮ್ಮಂ ಜನಕನಂಕದ ಧಲ್ಲನ ನನ್ದನ. . . . . . . .
೯ ಗುಣದಂಕಕಾರ್ತ್ತಿ ಮಿಕ್ಕತ್ತಿಮಬ್ಬೆಯ. . . . . . . . . .
೧೦ ಸ್ದನ್ದನಲ್ತೆ । ಇನ್ತು ಸಮಸ್ತರಾಜ್ಯ. . . . . . . . . . .
೧೧ ದ ಕಪ್ಪೂರ ವರ್ಷ ಚತುರ ಚತುರಾನನ. . . . . . . .
೧೨ ಪಾಡಿ ನೂಱ ನಾಲ್ವತ್ತು ವಟೆತ ವೃತ್ತಿಯಿನ್ದಾಳುತ್ತ. . . .
೧೩ ತನೆಪಂ ನೆಗಱ್ತೆಯನಾನ್ತ ಮಲ್ಲಪಯ್ಯನ ನೆಗಟ್ದಪ್ಪ. . . .
೧೪ ಪಯ್ಯನ ಸೊಸೆ ನಾಗದೇವನ ಕುಳಾಂಗನೆ ತೈಳನ ತಾಯ್ಜಸಕ್ಕೆ.
೧೫ ಶಾಸನಮಂ ಬೆಳಗುತ್ತಮಿಟ್ಟಿಪಳ್ ॥ ಇನ್ತು ಜಿನಧರ್ಮ್ಮ
ಪತಾಕೆಯುಂ ಕಟಕ. . . . .
೧೬ ದಾನಚಿನ್ತಾಮಣಿಯುಂಮೆನಿಸಿದ ಶ್ರೀಮದತ್ತಿಯಬ್ಬರಸಿ ।
ಕನ್ದಂ । ಧ . . . . . . . .

೧೭ ಮ ಜಿನನಿಳಯನಿವಹಕೆಲ್ಲಂ ಮುನ್ನಂ ಕರುವೆನೆ ಮಾಡಿಸಿದಳ್ ಸಿರಿವುರದೊ. . . . . .

೧೮ ಇನ್ತು ತನ್ನ ಮಾಡಿಸಿದ ಬಸದಿಯ ಖಣ್ಡಸ್ಫುಟಿತ ನವಕರ್ಮ್ಮ ವರಪೂಜೆಹಾರದ ..ನಾರ್ತ್ಥ. . . . .

೧೯ ಶ್ರೀ ಮದಾಹವಮಲ್ಲದೇವಂಗೆ ಬಿನ್ನಪಂಗೆಯ್ದು ನಮಶ್ಯಂ ಬಡೆದು । ಸಕನೃಪಕಾಳಾತೀತ ಸಂವತ್ಸರ ಶತಂಗಳ್

೨೦ ೯೦೮ ನೆಯ ಸರ್ವ್ವಜಿತ್ಸಂವತ್ಸರದ ಫಾಲ್ಗುಣಮಾಸದ ನನ್ದೀಶ್ವರಾಷ್ಟಮಿಯಾದಿತ್ಯವಾರದನ್ದು ಶೀಮದಿನ್ದ್ರಕೀರ್ತಿ ದೇವರ

೨೧ ಕಾಲಂಕಚ್ಚಿ ಮಾಸಿಯವಾಡಿ ನಾಡೊಳಗಣ ಗಾವುಣ್ಡಗನ ಪಳ್ಳಿಯುಮಂ ರಾಜಮಾನದೊಳಿನ್ನೂಱು ಮತ್ತರ್ತ್ತಳವೃ(ತ್ತಿ)

೨೨ ಯುಮಂ ಸರ್ವ್ವಬಾಧಾಪರಿಹಾರಂ ನಮಶ್ಯಮಾಗೆ ಬಿಟ್ಟರ್ ॥ ಗಾವುಣ್ಡಗನಪಳ್ಳಿಗಂ ತಳವೃತ್ತಿಂಗ ಸರ್ವ್ವಾಯ ವೃದ್ಧಿ

೨೩ ಅರುವಣಂ ಗದ್ಯಾಣಂ ಪನ್ನೆರಡಲಱ ಸೀಮೆ ನೈರಿತಿಯ ದೆಸೆಯೊಳ್ಪಾಲ್ವಳ್ಳಂ ಪಾಲ್ವಳ್ಳದಿಂ ಬಡಗ

೨೪ ಪುಲ್ಗಿಲ. . . । ವಾಯುವ್ಯದ ದೆಸೆಯೊಳ್ಪನ್ನಿರ್ಹುಲ್ಚಿಕ್ಕೋಲಲ್ಲಿಂನ್ದ ಮೂಡ ಬೆಲೆಗುಡ್ಡೆ ಅದಕ್ಕೆ ಬಡಗ ಕವಿಲೆವಾಡ

೨೫ ದ ಲೊಕ್ಕಿಗುಣ್ಡಿಯ ಬಟ್ಟೆ ಬಡಗ ನಿರ್ವ್ವರಿ ಮೂಡ ಸಿರಿವುರದ ಪೊಲದಮೇರೆ ತೆಂಕ ಪಾಲ್ವಳ್ಳಮೇ ಮೇರೆ । ತಳವೃತ್ತಿಯ

೨೬ ಸೀಮೆ । ಬಡಗನರಿಯ ಪಳ್ಳಂ ಮೂಡ ಬರಿಯಪಳ್ಳಂ ತೆಂಕ ಆ. . . ಲದಮೇರೆ ಪಡುವಲ್ಕಾಯಿಗೇಶ್ವರದ ಪೊಲ

೨೭ ದ ಮೇರೆ ॥ ಸಿರಿವುರದಲಿನ್ತು ತೋಟಂ ಸ್ವದತ್ತಂ ಪರ. . . . ಹರೇತಿ ವಸುನ್ಧರಾ ಷಷ್ಟಿರ್ವ್ವರ್ಷಸಹ

೨೮ ಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ॥ ಬಹುವಿರ್ವ್ವಸು . . . . . . . ಗರಾದಿ. .ಯಸ್ಯಯ

೨೯ ಸ್ಯ ಯದಾ ಭೂಮಿಸ್ತ[ಸ್ಯ] ತಸ್ಯ ತದಾ ಫಳ. . . .ಯ. . . ಮಂಗಳ ಮಹಾ ಶ್ರೀ.

(ಶಾಸನ ಶಿಲೆಯು ಮೇಲ್ಭಾಗದಲ್ಲಿ ಒಡೆದುಹೋಗಿರುವುದರಿಂದ ಶಾಸನದ ಆರಂಭದ ಸಾಲುಗಳು ಹಾಳಾಗಿವೆ.)

(ಶಾಸನ ಶೋಧನೆಯಲ್ಲಿ ಸಹಕರಿಸಿದ ವಿದ್ಯಾರ್ಥಿ ಮಿತ್ರರಾದ, ಶಿಕ್ಷಕ ಶ್ರೀ ಕೊಟ್ರೂರಯ್ಯ ಮತ್ತು ಶಿರೂರಿನ ಗ್ರಾಮಸ್ಥರಿಗೆ ನನ್ನ ಕೃತಜ್ಞತೆಗಳು)



✳

ತನ್ನ ನೆಲದ ಗುಪ್ಪೆಯಲ್ಲಿ ಬಿದ್ದಿದ್ದ
ಕರಿಕಲ್ಲು ಹೊತ್ತಿತ್ತು ಕಲ್ಬರೆಹ
ಅತ್ತಿಮಬ್ಬೆಯು ಬಸದಿಗಿತ್ತಿದ್ದ ದಾನದತ್ತಿಯ
ಪ್ರಾಚೀನ ಕುರುಹಾಗಿ ಮೈದೋರಿತ್ತು ಈ ಬರೆಹ

✳

**ಕ.ಇತಿಹಾಸ ಅಕಾದೆಮಿಯ ತೃತೀಯ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೮೯)**

*ಬೇರೆ ರಾಜ್ಯಗಳಿಗಿಂತ ಕರ್ನಾಟಕದಲ್ಲಿ Epigraphy consciousness ಹೆಚ್ಚಿಗೆ ಇದೆ. ನಮ್ಮಲ್ಲಿ ನಡೆಯುವ ಬಹುಪಾಲು ಸಂಶೋಧನೆಗಳು ೧೪-೧೫ನೇ ಶತಮಾನಕ್ಕೆ ಸೀಮಿತವಾಗಿರುತ್ತದೆ. ಆದರೆ ಕರ್ನಾಟಕದ ಇತಿಹಾಸ ಅದರಾಚೆಗೂ ಇದೆಯಲ್ಲ. ಭಾಷಾಂತರ ಅಥವಾ ಇನ್ನಿತರ ಎರವಲು ಸರಕಿನ ಮೇಲೆ ನಡೆಸುವ ಸಂಶೋಧನೆಯ ಥಳುಕೇ ಬೇರೆ. ಮೊದಲು ಆಯಾ ಭಾಷೆಗಳಲ್ಲಿ ಸೂಕ್ತ ತರಬೇತಿ ಬೇಕು, ನಂತರ ಸಂಶೋಧನೆ. ಇತಿಹಾಸ ಒಂದು ನಿರಂತರ ಪ್ರಕ್ರಿಯೆ. ಕಾಲ ಉರುಳಿದಂತೆ ಘಟನೆಗಳು ನಡೆಯುತ್ತಲೇ ಇರುತ್ತವೆ. ಗಮನಾರ್ಹವಾದವುಗಳನ್ನು ಎತ್ತಿಕೊಂಡು ಅವುಗಳನ್ನು ವಿವರಿಸಿ, ಅವು ಸಮಾಜದ ಮುನ್ನಡೆಗೆ ಪ್ರಯೋಜನಕಾರಿಯಾಗುವಂತೆ ಮಾಡುವುದೇ ಇತಿಹಾಸಕಾರನ ಕೆಲಸ.*

ಡಾ. ಶ್ರೀನಿವಾಸರಿತ್ತಿ
ಸಮ್ಮೇಳನಾಧ್ಯಕ್ಷರು

ಚನ್ನಬಸಪ್ಪ ಬಿ.*

# ಅಪ್ರಕಟಿತ ಬಳಗಾನೂರು ಶಾಸನ

*ಬಳಗಾನೂರು ಸೇವುಣವಂಶದ ದೊರೆಗಳ ಆಳ್ವಿಕೆಗೆ ಸೇರಿದ್ದ ಪ್ರದೇಶ. ಇಲ್ಲಿನ ಎಲ್ಲಮ್ಮ ದೇವತೆಗೆ ಪಾಳೆಯಗಾರ ಪರಿಸರದ ಶ್ರೀಮನ್ಮಹಾನಾಯಚಾರ್ಯ, ಅಜರತ್ ಆಲಿ ಸಾಹೇಬರು ದತ್ತಿ ಬಿಟ್ಟ ಬಗ್ಗೆ ಶಾಸನವು ಹೇಳುವಲ್ಲಿ ಭಾವೈಕ್ಯತೆಯ ಧರ್ಮಸಾಮರಸ್ಯದ ಕುರುಹಾಗಿ ಕಾಣುತ್ತದೆ. ಅಲ್ಲದೆ ಎಲ್ಲಮ್ಮ ದೇವತೆಯ ಕುರಿತಾಗಿ ಸದ್ಯದ ಶಾಸನ ಈ ರಾಯಚೂರು ಜಿಲ್ಲೆಯಲ್ಲಿ ಬಳಗಾನೂರು ಗ್ರಾಮದ ಪ್ರಪ್ರಥಮ ಶಾಸನವೆನಿಸಿದೆ.*

ರಾಯಚೂರು ಜಿಲ್ಲೆಯ ಶಾಸನಗಳನ್ನು ಕ್ರಿ.ಶ. ೧೯೧೫ ರಿಂದ ಇಂದಿನ ದಿನಗಳವರೆಗೆ ಹಲವು ವಿದ್ವಾಂಸರು ಪತ್ತೆ ಹಚ್ಚಿ ಪ್ರಕಟಿಸಿದ್ದಾರೆ. ಹಾಗೆಯೇ ಕ್ರಿ.ಶ. ೨೦೦೩ರಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯಿಂದ ಪ್ರಕಟವಾದ ಕನ್ನಡ ವಿಶ್ವವಿದ್ಯಾಲಯ **ಶಾಸನ ಸಂಪುಟ-೭, ರಾಯಚೂರು ಜಿಲ್ಲೆ** ಈ ಸಂಪುಟದಲ್ಲಿ ರಾಯಚೂರು ಜಿಲ್ಲೆಯ ಬಹಳಷ್ಟು ಶಾಸನಗಳು ಪ್ರಕಟಗೊಂಡಿವೆ. ಅದರಲ್ಲಿ ಪ್ರಕಟಗೊಳ್ಳದೇ ಇರುವ ಸಿಂಧನೂರು ತಾಲ್ಲೂಕು ಬಳಗಾನೂರು ಗ್ರಾಮದ ಊರ ಹೊರಗಡೆ ಎಲ್ಲಮ್ಮ ದೇವಾಲಯದ ಮುಂದೆ





ಇರುವ ಶಾಸನ ಕರಿಯ ಕಲ್ಲಿನದಾಗಿದ್ದು, ಇದರ ಮೇಲ್ಭಾಗ ಸೂರ್ಯ, ಚಂದ್ರ, ಈಶ್ವರಲಿಂಗ, ಖಡ್ಗ, ಹಸು ಶಿಲ್ಪಗಳಿಂದ ಕೂಡಿದೆ. ಇದರಲ್ಲಿ ಎರಡು ಶಾಸನಗಳಿದ್ದು, ಅವು ಬೇರೆ ಬೇರೆ

* ಸಂಶೋಧನ ವಿದ್ಯಾರ್ಥಿ, ಇತಿಹಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೫೬೦ ೦೫೬

ಕಾಲಕ್ಕೆ ಸೇರಿದವುಗಳಾಗಿವೆ. ಮೊದಲನೇ ಶಾಸನ ದೇವಗಿರಿ ಸೇವುಣ ವಂಶದ ಕನ್ನರದೇವನ ಕ್ರಿ.ಶ. ೧೨೬೮ರ ಶಾಸನದಲ್ಲಿ, ಕೇವಲ ಅರಸನ ಉಲ್ಲೇಖದೊಂದಿಗೆ ಶಾಸನ ಹಾಕಿಸಿದ ಕಾಲದ ಉಲ್ಲೇಖವಿದೆ. ಹಾಗೆಯೇ ಇನ್ನೊಂದು ಶಾಸನ ಕ್ರಿ.ಶ. ೧೫೭೯ ರಲ್ಲಿ ಹಾಕಿಸಲ್ಪಟ್ಟಿದೆ. ಆ ವೇಳೆಯಲ್ಲಿ ವಿಜಯನಗರದರಸರು ತಾಳಿಕೋಟೆ ಕಾಳಗದಲ್ಲಿ ಪತನಗೊಂಡ ನಂತರ ಈ ಭಾಗದಲ್ಲಿ ಮುಸ್ಲಿಂ ಸುಲ್ತಾನರ ಪ್ರಭಾವ ಹೆಚ್ಚಾಗುವುದರೊಂದಿಗೆ, ರಾಯಚೂರು ಜಿಲ್ಲೆಯೂ ಆ ಮುಸ್ಲಿಂ ಸುಲ್ತಾನರ ಅಂಕೆಗೊಳಗಾಯಿತು. ಈ ಸಮಯದಲ್ಲಿ ಈ ಜಿಲ್ಲೆಯನ್ನು ಹಲವು ನಾಯಕ ಪಾಳೇಗಾರರು ಚಿಕ್ಕ ಪುಟ್ಟ ಸಂಸ್ಥಾನಗಳನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡುತ್ತಿದ್ದರು. ಅಂತಹ ಮಾನ್ಯತೆ ಪಡೆದುಕೊಳ್ಳದೇ ಇರುವ ಸಾಮಾನ್ಯ ವ್ಯಕ್ತಿಯಾದ ಶ್ರೀಮನ್ಮಹಾನಾಯಕಾಚಾರ್ಯ, ಅವರ ಬಂಧುಗಳು ಮತ್ತು ವಂಳಖಾನ ಅಜರತ್ ಅಲಿ ಸಾಹೇಬರು ಮುಂತಾದವರು ಬಳಗಾನೂರು ಸ್ಥಳದ ಎಲ್ಲಮ್ಮ ದೇವತೆಗೆ ದೂಪ-ದೀಪಕ್ಕೆ ಯರೆಹೊಲವನ್ನು ದತ್ತಿ ಬಿಟ್ಟ ಬಗ್ಗೆ ಈ ಶಾಸನ ದಾಖಲಿಸುತ್ತದೆ.

ರಾಯಚೂರು ಜಿಲ್ಲೆಯ ಕುರಕುಂದಾ, ನೀರಮಾನ್ವಿ [ಮಾನ್ವಿ ತಾಲ್ಲೂಕು] ದೇವಸೂಗೂರು [ರಾಯಚೂರು ತಾಲ್ಲೂಕು], ಮಾತಪಳ್ಳಿ, ಗಾಣದಾಳ [ದೇವದುರ್ಗ ತಾಲ್ಲೂಕು], ಮೊದಲಾದ ಗ್ರಾಮಗಳಲ್ಲಿ ಎಲ್ಲಮ್ಮ ದೇವಾಲಯಗಳು ಪ್ರಸಿದ್ಧವಾಗಿದ್ದು, ಅವುಗಳ ಬಗ್ಗೆ ಶಾಸನಗಳಿರುವುದಿಲ್ಲ. ಆದುದರಿಂದ ಎಲ್ಲಮ್ಮ ದೇವತೆಯ ಬಗ್ಗೆ ಉಲ್ಲೇಖಿಸುವ ರಾಯಚೂರು ಜಿಲ್ಲೆಯ ಬಳಗಾನೂರು ಗ್ರಾಮದ ಶಾಸನ ಪ್ರಪ್ರಥಮವಾಗಿದೆ.

ಈ ದೇವಾಲಯವು ಪೂರ್ವಕ್ಕೆ ಮುಖವಿದ್ದು, ಗರ್ಭ ಗೃಹದಲ್ಲಿ ನಾಗರಯಲ್ಲಮ್ಮ [ನಾಗಿಣಿ] ಮೂರ್ತಿಶಿಲ್ಪವಿದ್ದು, ಇವಳ ಎಡ, ಬಲ ಬದಿಯಲ್ಲಿ ನಾಗರ ಶಿಲ್ಪಗಳಿವೆ. ಈ ಗರ್ಭ ಗೃಹಕ್ಕೆ ಗೋಪುರವಿದ್ದು, ಅದು ಅರ್ಧಭಾಗ ಶಿಥಿಲವಾಗಿದೆ. ಇದರ ಮೇಲೆ ಕಳಸವನ್ನು ಅಳವಡಿಸಲಾಗಿದೆ.

೧ ಶ್ರೀ ನಮಃಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೈಲೋ.

೨ ಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ಸ್ವಸ್ತಿ ಶ್ರೀಮತು

೩ ಯಾದವರಾಯ ನಾರಾಯಣ ಪ್ರತಾಪ ಚಕ್ರವರ್ತಿ ಕಂನ್ನರ [ದೇವ]

೪ ನ ವಿಜಯರಾಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವೃದ್ಧಮಾನ ಚಂದ್ರಾರ್ಕ ತಾರಂಬರಂ

೫ ಸಲುತ್ತಮಿರಲು ಸಕವರುಷದ ೧೧೯೦ ರೆನೆಯ [ಪಿಂ]ಗಳ ಸಂವತ್ಸರದ ಮಾ

೬ ರ್ಗ್ಗಸಿರದ ಅಮವಾಸೆ ಸುಕ್ರವಾರದಂದು

೭ ನಮಃಸ್ತುಂಗ ಸಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೈಲೋಕ್ಯ

೮ ನಗರಾರಂಭ ಮೂಲಸ್ತಂಬಾಯ ಶಂಭವೇ ಸ್ವಸ್ತಿ ಶ್ರೀಮತು ವಿಜಯಾ

೯ ಭ್ಯುದಯ ಸಾಲಿವಾಹನ ಶಕವರುಷ ೧೪೯೧ನೇ ಶುಕ್ಲ ಸಂವತ್ಸರದ

೧೦ ವೈಶಾಖ ಸುದ್ಧ೧೧ಲು ಬಳಗಾರನೂರ ಸ್ಥಳದ ಯಲ್ಲಂಮ ದೇವತಿಗೆ ಶ್ರೀ

೧೧ ಮಂನ್ಮಹಾನಾಯಕಾಚಾರ್ಯ ಲೋಕದೆಸೆ . ಭಿನಾಯಕರ ಪುತ್ರಯಿಂಮ

೧೨ ಡಿ . ಬಿಭಿನಾಯಕರೂ ಬರದುಕೊಟ್ಟ ಭೂದಾನದ ಕ್ರಮವಂತೆಂದರೆ ಕಾಧಯೆ

೧೩ ವಂಳಖಾನ . ಜಯಲ್ಲಿ ಸ್ಯಾನೂರಖಾನ ಸಾಹೇಬಾರು ನಮಸ್ಯಮಾಶಾ ಯಾ

೧೪ ಮೌಲ್ಯಧ ಬಳಗಾನೂರ ಸಮ್ಮತ್ತಿನ ವಳಗಣ ಕಸಬೆ ಬಳಗಾನೂರಲ್ಲಿ ಯ



ಎಲ್ಲಮ್ಮ ದೇವಾಲಯದ ಮುಂದೆ ಇರುವ ಶಾಸನ

೧೫ ಲ್ಲಂಮ ದೇವರ ಗಂಧೋಚ್ಯು ಬದಿಯಲ್ಲಿ ಯರೆಹೊಲ
ಕೈಯಲ್ಲೀ ೦ ll ೦ ಯಂ

೧೬ ಟ್ಟು ಮಾನದ ನೂನಯಹು . ದು ಭುದಿ ಪಾರಂಧನಗೆ
ಆಸ್ತಿ ತಾ

೧೭ ತನ ನಂಮತಂದೆ . ಬಿ ನಾಯಕಕೆ ತಾಯಿಲಕ್ಷ್ಮಮಂ

೧೮ ಗೆ ಮಾನ್ಯವಾಗಬೇಕು ಯಂಧು ಕೊಟ್ಟ ಭೂದಾನದ ಪಟ್ಟೆ

೧೯ ಊಸತಂ ಕಾಲ ಪುಣ್ಯಊ

ಈ ಗರ್ಭಗೃಹದ ಮುಂದಿನ ಭಾಗದಲ್ಲಿ ನವರಂಗವಿದ್ದು, ಇಲ್ಲಿ ೪ ಸ್ತಂಭಗಳ ಹೊರತಾಗಿ ಗೋಡೆ ಇರುವದಿಲ್ಲ. ಇವು ಪೀಠ, ಚೌಕು ೧೬, ೮, ೧೬, ಚೌಕು. ಕಂಠ ಭಾಗದಲ್ಲಿ ವೃತ್ತಾಕಾರದ ಮುಚ್ಚಳದ ಮೇಲೆ ಚೌಕಕಾರದ ಹಲಗೆಯೊಂದಿಗೆ ಸಾದಾಬೋದುಗಗಳನ್ನು ಅಳವಡಿಸಲಾಗಿದೆ. ಈ ದೇವಾಲಯವನ್ನು ಇತ್ತೀಚೆಗೆ ಜೀರ್ಣೋದ್ಧಾರಗೊಳಿಸಲಾಗಿದೆ.



ಈ ನವರಂಗದ ಮುಂದಿನ ಭಾಗದ ಬಲ ಬದಿಯಲ್ಲಿ ನಾಗಶಿಲ್ಪಗಳು, ವೀಣಾಧರ ವೀರಭದ್ರ, ಗಣೇಶರ ಸಹಿತವಾಗಿ ಸಪ್ತಮಾತೃಕೆಯರ ಶಿಲ್ಪಗಳು ಕಂಡುಬರುತ್ತವೆ.







ಎಲ್ಲಮ್ಮ ದೇವತೆಗೆ ಧೂಪ ದೀಪಕ್ಕೆ
ಬಿಟ್ಟ ಎರೆಹೊಲದ ದತ್ತಿ
ನಾಯಕರು, ಸಾಹೇಬರು ಅರ್ಪಿಸಿದ ಸಾಮರಸ್ಯಕ್ಕೆ
ಕುರುಹು ಭಾವೈಕ್ಯದ ಬುತ್ತಿ





### ಕ.ಇ. ಅಕಾದೆಮಿಯ ೧೨ನೆಯ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೮)

ಇಂದು ನಾವು ಇತಿಹಾಸ ಮತ್ತು ಪುರಾತತ್ತ್ವ ಎಂಬ ಪದಪುಂಜವನ್ನು ಸರ್ವೇಸಾಮಾನ್ಯವಾಗಿ ಒಂದೇ ಶಾಸ್ತ್ರವೇನೋ ಎನ್ನುವಂತೆ ಬಳಸುತ್ತಿದ್ದೇವೆಯಾದರೂ, ಸ್ವಲ್ಪ ವಿಮರ್ಶಿಸಿ ನೋಡಿದರೆ ಇವೆರಡೂ ವಿಭಿನ್ನ ಸ್ವರೂಪದ ಶಾಸ್ತ್ರಗಳು. ಇತಿಹಾಸ ರಚನೆಗೆ ಉಪಯೋಗಿಸುವ ಮೂಲ ಸಾಮಗ್ರಿಗಳು ಅಂದರೆ ದಾಖಲೆಗಳು ಬರಹಗಳು ಇತ್ಯಾದಿಗಳೆಲ್ಲಾ ಶಾಬ್ದಿಕ, ಬಹು ವಾಚಾಳಿ. ಅವು ಹೇಳುವ ವಿಷಯಗಳೂ ಅಪಾರ. ಅವುಗಳನ್ನು ತಾರ್ಕಿಕ ಮೂಸೆಯಲ್ಲಿ ಕರಗಿಸಿ ಶೋಧಿಸಿ, ವ್ಯಕ್ತಿನಿಷ್ಠ ಅಭಿಪ್ರಾಯಗಳು, ಸ್ವಪ್ರಶಂಸೆ, ಆಡಂಬರ ಇತ್ಯಾದಿ ಅಸತ್ಯದ ಕಿಟ್ಟವನ್ನು ಬೇರ್ಪಡಿಸಿ ಸತ್ಯಾಂಶವೆನ್ನಬಹುದಾದುದನ್ನು ಹೊರತೆಗೆದು ಉಪಯೋಗಿಸಿಕೊಳ್ಳುವುದು ಇತಿಹಾಸಕಾರನ ವಿಧಾನ. ಆ ರೀತಿ ಪುನಾರಚಿತವಾದ ಇತಿಹಾಸದ ಜಯಾಪಜಯಗಳೆಲ್ಲಾ ಇತಿಹಾಸಕಾರನ ವಿಶ್ಲೇಷಣಾ ಶಕ್ತಿಯನ್ನು ಅವಲಂಬಿಸಿರುತ್ತದೆ.

**ಡಾ. ಎಸ್. ನಾಗರಾಜು**
ಸಮ್ಮೇಳನಾಧ್ಯಕ್ಷರು

ಎಂ. ಜಿ. ನಾಗರಾಜ್*

ಕೊಡಗು ಜಿಲ್ಲೆ, ಬೆಂಗಳೂರು ಜಿಲ್ಲೆ, ತುಮಕೂರು ಜಿಲ್ಲೆಯ

# ಕೆಲವು ಅಪ್ರಕಟಿತ ಶಾಸನಗಳು

*ಸದ್ಯದ ಅಪ್ರಕಟಿತ ಶಾಸನಗಳಲ್ಲಿ ದೊಡ್ಡಮಳತೆಯ ಶಾಸನವು ಕೊಂಗಾಳ್ವ-ಕದಂಬರ ಹೊಂದಾಣಿಕೆ, ಚಂಗಾಳ್ವರೊಡನೆಯ ಯುದ್ಧದ ಸೂಚನೆ, ಹಾಗು ಜನಪದೀಯ ಆಚರಣೆಯ ಸೂಚನೆಯನ್ನು ನೀಡುತ್ತದೆ. ಹೀಗೆಯೇ ಚೌಡ್ಲು ಕುಸಬೂರಿನ ಶಾಸನಗಳು ಕೊಂಗಾಳ್ವರ ರಾಜಕೀಯ ಚರಿತ್ರೆಯ ಮೇಲೆ ಬೆಳಕು ಚೆಲ್ಲುತ್ತವೆ. ಚನ್ನಪಟ್ಟಣ ತಾ. ಶಾಸನಗಳು, ಧಾರ್ಮಿಕ ಹಾಗು ಚಾರಿತ್ರಿಕ ವಲಸೆಯ ಸಂಗತಿಯ ಸೂಚನೆಯಾಗಿವೆ. ಹುಣಸವಾಡಿ ಶಾಸನವು ಕೂಟಶಾಸನವೆಂದರೂ ಮಹಾನಾಡ ಪ್ರಭುಗಳ ಆಳ್ವಿಕೆಯ ಸಾಂಸ್ಕೃತಿಕ ಚೆಲುವುಗಳನ್ನು ತಿಳಿಸುವಂತಿದೆ. ಕೂಟ ಶಾಸನವೂ ತನ್ನ ಕಾಲದ ಚಾರಿತ್ರಿಕ ಸಂಗತಿಯನ್ನು ಸೇರಿಸಿ ಹೇಳುವ ಕಾರಣ, ವಿಶ್ಲೇಷಣೆಗೆ ಆವಕಾಶವಾಗುತ್ತದೆ. ಒಟ್ಟಾರೆ ಈ ಶಾಸನಗಳಿಂದ ಗತ ಇತಿಹಾಸದ ಚಲನ ಗತಿಯು ಆಯಾ ವರ್ತಮಾನಗಳ ಆವಸರಗಳನ್ನು ಲಕ್ಷಿಸಿ ಸಾಗಿರುವುದು ಕಾಣುತ್ತದೆ.*

**ಕೊಡಗು ಜಿಲ್ಲೆ**

**ದೊಡ್ಡ ಮಳತೆಯ ಹೊನ್ನಮ್ಮ ಕೆರೆ ಬಳಿಯ ಶಾಸನ:** ಕೊಡಗಿನ ಸೋಮವಾರಪೇಟೆ ತಾಲೂಕಿನ ದೊಡ್ಡಮಳತೆ ಗ್ರಾಮ ವೊಂದು ಪ್ರಾಗೈತಿಹಾಸಿಕ ನೆಲೆ. ಅಲ್ಲಿಯ ಹೊನ್ನಮ್ಮ ಕೆರೆ ಜನಪದೀಯವಾಗಿ ಪ್ರಸಿದ್ಧವಾಗಿರುವ ಸೋಮವಾರಪೇಟೆ ತಾಲೂಕಿನ ಕೆರೆ. ಕೆರೆಯ ಪಶ್ಚಿಮ ದಂಡೆಯಲ್ಲಿ ಹೊನ್ನಮ್ಮನ ದೇಗುಲವೂ ಇದೆ. ಈ ದೇಗುಲದ ಬಲಬದಿಗೆ ಭಿನ್ನಗೊಂಡಿರುವ ಶಾಸನ ಶಿಲೆಯು ಮೂರು ಸಾಲಿನ ಅಪೂರ್ಣ ಶಾಸನವನ್ನೊಳಗೊಂಡ ತುಂಡು ಚಪ್ಪಟೆಗಲ್ಲಾಗಿದೆ. ೧೧ನೇ ಶತಮಾನದ ಶಾಸನಗಲ್ಲು ಆಗಿದೆ. ಅಕ್ಷರಗಳನ್ನು ಆಳವಾಗಿ ಕೊರೆದಿದ್ದರೂ ಕೆಲವಾರು ಅಕ್ಷರಗಳು ತ್ರುಟಿತಗೊಂಡಿವೆ.

ಈ ಶಾಸನಾಕ್ಷರಗಳು ಅರ್ಧ ಸೆಂ.ಮೀ. ನಿಂದ ಹಿಡಿದು ಒಂದು ಸೆಂ.ಮೀ.ವರೆಗೆ ಉದ್ದ ಹಾಗೂ ಅಗಲಗಳಲ್ಲಿ ತಮ್ಮ ವಿಸ್ತಾರವನ್ನು ತೋರಿಕೊಂಡಿವೆ. ಅಂದವಾದ ಕೆತ್ತನೆ ಎನಿಸದಿದ್ದರೂ ಸಾಲುಗಳು ಏರುಪೇರುಗಳಲ್ಲಿದ್ದರೂ ಶಾಸನ ಪಾಠದ ಓದಿಗೆ ಕೆಲವೆಡೆ ಅಸ್ಪಷ್ಟವೆನ್ನಬಹುದಾದ ಅಕ್ಷರಗಳಿಂದ ತೊಡಕೆನಿಸಿದರೂ, ಸಾರಾಂಶ ತಿಳಿಯಲು ಹಾಗು ವಿವೇಚನೆಗೆ ಅಡ್ಡಿಯಾಗಿಲ್ಲ. ಶಾಸನವು, ಒಡೆದಿರುವ ತುಂಡು ಶಿಲಾಫಲಕವಾಗಿರುವ ಕಾರಣ ಕೆಲವಕ್ಷರಗಳು ಅಪೂರ್ಣವಾಗಿಯೆ ಕಾಣಬರುತ್ತವೆ.

ತೇದಿಕಾಣದ ಈ ಶಾಸನದ ಲಿಪಿ, ಕ್ರಿ.ಶ. ೧೦೯೫ರ ಯಡೂರು ಶಾಸನ (ಸೋ.ಪೇ. ೬೨), ಮುಳ್ಳೂರಿನ ಕ್ರಿ.ಶ. ೧೧೦೬ರ (ಸೋ.ಪೇ. ೭೧) ಬಸದಿ ಶಾಸನ, ಕ್ರಿ.ಶ. ೧೧೯೫ರ ಮುಳ್ಳೂರಿನ ಶಾಸನಗಳ (ಸೋ.ಪೇ. ೭೨) ಲಿಪಿಯನ್ನು ಸ್ಪಷ್ಟವಾಗಿ ಹೋಲುತ್ತದೆ.[೧] ಅಲ್ಲದೆ ಸೋಮವಾರಪೇಟೆ ತಾಲೂಕಿನಲ್ಲಿಯೇ ಈ ಶಾಸನ ದೊರೆತಿದೆ. ಹೀಗಾಗಿ ೧೧ನೇ ಶತಮಾನಕ್ಕೆ ಈ ಶಾಸನವನ್ನು ಲಿಪಿ ಲಕ್ಷಣದ ಹಿನ್ನೆಲೆಯಲ್ಲೂ ಸೇರಿಸಬಹುದು. ಅದಕ್ಕೆ ಪೂರಕವಾದ ಇತಿಹಾಸದ ಸಾಕ್ಷ್ಯಗಳನ್ನೂ ಹೆಕ್ಕಬಹುದಾಗಿದೆ.

ಈ ಶಾಸನದ ಕ, ಗ, ದ, ನ, ಷ, ಬ, ರ, ಲ, ವ, ಹ, ಕ್ಷ ಹಾಗು ಱ ಅಕ್ಷರಗಳು ಕ್ರಿ.ಶ. ೧೧೦೬ರ ಮುಳ್ಳೂರು ಶಾಸನ ಹಾಗು ೧೦೯೫ರ ಯಡೂರು ಶಾಸನವನ್ನು ದಟ್ಟವಾಗಿ ಹೋಲುವ ಕಾರಣ, ಹಾಗು 'ಗ' ಕಾರದ ಕಾಗುಣಿತದ 'ಗೆ' ಅಕ್ಷರದ ಸ್ವರೂಪದ ಹಿನ್ನೆಲೆಯಲ್ಲಿ ಶಾಸನದ ಕಾಲವನ್ನು ೧೧ನೇ ಶತಮಾನದ ಉತ್ತರಾರ್ಧದ ನಂತರಕ್ಕೆ ನಿಗದಿಗೊಳಿಸಬಹುದು. ಶಾಸನ ಪಾಠದ ಶಬ್ದಗಳನ್ನು ಗಮನಿಸಿದರೆ ಚಂಗಾಳ್ವರ ಹಾಗು ಹಾನುಗಲ್ಲು ಕದಂಬ ಶಾಖೆಯಾದ ಕೊಡಗಿನ ಕದಂಬರ (ಯಡೂರು ಶಾಸನದ ದುದ್ಧರಸ) ನಡುವಣ ಒಂದು ಯುದ್ಧವೊಂದರ ಸಂದರ್ಭದಲ್ಲಿ ವೀರ ಮರಣವನ್ನಪ್ಪಿದ ವೀರನೊಬ್ಬನ ವೀರಗಲ್ಲು ನಿಲ್ಲಿಸಿದ ಪ್ರಸ್ತಾಪ

* ಅನರ್ಘ್ಯ ಶ್ರೀ ಜಚನಿ ಕೃಪ, ೨೨೧, ೬ಲನೇ ಅಡ್ಡರಸ್ತೆ, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦.

ಕಾಣಬರುತ್ತದೆ. ಹೀಗಾಗಿ ಕ್ರಿ.ಶ. ೧೦೯೦-೧೦೯೫ರ ನಡುವೆ ರೂಪುಗೊಂಡ ಶಾಸನವಿದೆನ್ನಬಹುದು. ಜಾನಪದ ಸಂಗತಿಯೊಂದು ಈ ಶಾಸನದಲ್ಲಿ ಅಡಕವಿರುವುದು ಗಮನಾರ್ಹ. ಇದಕ್ಕೆ ಪೂರಕವಾಗಿ ದೊಡ್ಡ ಮಳತೆಯ ಹೊನ್ನಮ್ಮ ಕೆರೆಯ ಪ್ರದೇಶದ ಬೆಟ್ಟಗಳ (ಮೋರೆಬೆಟ್ಟ < ಮೌರಿ ಯರಬೆಟ್ಟ) ಸುತ್ತುವರಿಯಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳೂ ಕಂಡುಬರುವುದು ಗಮನಾರ್ಹ. ಪ್ರಾಗೈತಿಹಾಸಿಕ ಪರಂಪರೆಯೊಂದು ಜನಪದದಲ್ಲಿ ಮಿಳಿತವಾಗಿ ಶಾಸನದಲ್ಲಿಯೂ ಅದು ಚಾಚಿಕೊಂಡಿರುವುದು ವಿಶೇಷ.

**ಶಾಸನದ ಪಾಠ**

೧ [ದು]ಧನಕಗೆ [ಪೆ]ದ್ದೇವರ ಬೀವೋ

೨ ಗಿಹ ಕಲ್ಲನಿಱಿಸಿದ ಗೋವರಸ

೩ ಪರೋಕ್ಷವಿನಯಂ ಗೆ[ಯ್ದು]



**ಹೊನ್ನಮ್ಮಕೆರೆ ಬಳಿ ಶಾಸನದ ದ್ವಿಪ್ರತಿಗಳು**

ದುದ್ದನಾಯಕ ಎಂಬ ಅಧೀನನಾಯಕನೊಬ್ಬ ಬಹುಶಃ ಹಾನುಗಲ್ಲು ಕದಂಬ ಶಾಖೆಯ ಕೊಡಗಿನ ಕದಂಬರ ದುದ್ದರಸನ ಪರವಾಗಿ ಚೆಂಗಾಳ್ವರ ವಿರುದ್ಧ ನಡೆದ ಯುದ್ಧವೊಂದರಲ್ಲಿ ಹೋರಾಡಿ ಸತ್ತ ವೀರನಾಗಿರುವಂತಿದೆ. ಅಂಥವನಿಗಾಗಿ ಪರೋಕ್ಷ ವಿನಯದಲ್ಲಿ, ಪುಣ್ಯವಾಗಲೆಂದು ದುದ್ದರಸನ ಬಂಧು (ಇನ್ನೊಬ್ಬ ಸೋದರ!) ಗೋವರಸನು ದೊಡ್ಡಮಳತೆ ಪ್ರದೇಶದಲ್ಲಿ ಆಳುತ್ತಿದ್ದು, ವೀರಗಲ್ಲು ನಿಲಿಸಿದ ವಿಷಯವಿದೆನ್ನಬೇಕು. 'ಪೆದ್ದೇವರ ಬೋ(ಬಿ)ವೋಗಿಹ ಕಲ್ಲು' ಎಂದರೆ ಕೊಡಗಿನ ಪ್ರಾಗೈತಿಹಾಸಿಕ ಹಿನ್ನೆಲೆಯ ಜಾನಪದ ಆಚರಣೆಯೊಂದು ಅನ್ವಯವಾಗಿರುವ ವಿಷಯವೆನ್ನುವಂತಾಗುತ್ತದೆ. ಪೆದ್ದೇವರು > ಹೆದ್ದೇವರು ಅರ್ಥಾತ್ 'ಹುತ್ತದ ದೇವರು' ಕೊಡಗಿನ ದೇವರಕಾಡಿಗೆ ಮೀಸಲಾದ ದೇವರು. ಅದಾಗಿ ಹೆದ್ದೇವರ ಕಾಡು ಕೊಡಗಿನ ಶಾಂತಳ್ಳಿ, ತಲ್ತರೆ ಶೆಟ್ಟಳ್ಳಿ ಹೆರೂರು (ಸಕಲೇಶಪುರ ತಾ.) ಮುಂತಾದ ಕಡೆ ಕಾಣಬರುತ್ತದೆ. ಇದು ಸಣ್ಣ ಹುತ್ತಗಳ ಸಮೂಹ ಸಂಕೇತವಾಗಿಯೂ ಇರುತ್ತದೆ. ವಿಶೇಷತಃ ಚೌಡ್ಲು ಗ್ರಾಮದ ಹೆದ್ದೇವರು, ಪ್ರಾಗೈತಿಹಾಸಿಕ ಸಪ್ತಶಿಲಾವೃತ್ತಗಳ ನಡುವೆ ನಿಲ್ಲಿಸಿದ ಸ್ತಂಭರೂಪದ ಪ್ರತೀಕದಂತಿವೆ. ಹೆರೂರಿನಲ್ಲಿ ಮರದ ಕೆಳಗೆ ಅವು ಸಿಲಿಂಡರಾಕೃತಿಯ ತುದಿಗೆ ಶಂಕುವಿನಾಕೃತಿ ಜೋಡಿಸಿದ ಮಣ್ಣಿನ ಸ್ತಂಭಾಕೃತಿಗಳಂತಿವೆ. ಹೆದ್ದೇವರು ಅಲ್ಲಿ ಹುತ್ತದ ಪ್ರತೀಕವೆ. ದಕ್ಷಿಣ ಕೊಡಗಿನ 'ನಾತ' (ನಾಗ) ಪೂಜೆ ಹುತ್ತ ಪೂಜೆಯ ಪ್ರತೀಕ. ಉತ್ತರ ಕೊಡಗಿನಲ್ಲಿ ವಾರ್ಷಿಕ ಬೆಳೆ ಕುಯ್ಯುವ ಮುನ್ನ ಶುಕ್ಲಪಕ್ಷದ ಪೂರ್ಣಿಮೆಯಂದು ಈ 'ಹುತ್ತ'ಗಳಿಗೆ ಹಾಲು ಎರೆದು ಗೌಡ ಜನಾಂಗದವರು ಹುತ್ತರಿಯ ಹೊಸಕದಿರಿಟ್ಟು ಪೂಜಿಸುತ್ತಾರೆ.[೨] ಸುಗ್ಗಿಗೆ ಮುಂಚೆ ೧೫ ದಿನಗಳ ಕಾಲ ಈ ದೇವರಿಗೆ ಪೂಜೆ ಉಂಟು. ಸುಗ್ಗಿಕಟ್ಟೆ ಹಬ್ಬದಲ್ಲಿ ಈ ಹೆದ್ದೇವರ ಪೂಜೆ ನಡೆಯುತ್ತದೆ. ಸುಗ್ಗಿಕಟ್ಟೆ ಹಬ್ಬವು ಸಬತಾಯಿ (ಸಪ್ತಮಾತೃಕೆಯರು) ಆರಾಧನೆಯಲ್ಲಿ ನಾಗಪೂಜೆಯ ಸಂಕೇತವಾಗಿ ನಡೆಯುತ್ತದೆ. ಅಂದರೆ ಸಪ್ತಮಾತೃಕೆಯರ ಪೂಜೆ, ಹಾಗು ನಾಗ ಪೂಜೆ ಪ್ರಾಗೈತಿಹಾಸಿಕ ಹಿನ್ನೆಲೆಯ ಸೂಚನೆಯಾಗಿ ಕಂಡುಬರುತ್ತದೆ. ದೊಡ್ಡಮಳತೆಯೊಂದು ಪ್ರಸಿದ್ಧ ಪ್ರಾಗೈತಿಹಾಸಿಕ ನೆಲೆಯೂ ಹೌದು. ಹೀಗಾಗಿ ಗೋವರಸ ಅಂಥ ಪ್ರಾಚೀನ ಪದ್ಧತಿಯ ಸ್ಮರಣೆಯಾಗಿ ದುದ್ದನಾಯಕ(!)ನಿಗೆ ಹೆದ್ದೇವರ ಬನದಲ್ಲಿ ವೀರಗಲ್ಲು ಹಾಕಿಸಿರುವಂತಿದೆ. ಕೊಡಗಿನಲ್ಲಿ ಹಿರಿಯರ ಸ್ಮಾರಕ ಕಟ್ಟಡವಾದ ಕೈಮಠಗಳಿಗೆ (ಕೈಮಡಗಳಿಗೆ) ಆ ಕಾರೋಣನ ಹೆಸರಿನಲ್ಲಿ ಕೈಮಠ ಯಾ ಕಾರೋಣ ಕಾಡು ಇದ್ದು ದೈವೀಕರಣಗೊಂಡಿದೆ. ಹಾಗೆಯೆ, ಇಲ್ಲಿ 'ವೀರವನ' ಕಾಡಾಗಿ ಹೆದ್ದೇವರ ಬನವನ್ನು ರೂಪಿಸಿರುವಂತಿದೆ. ಹಾಗಿದ್ದರೆ ಅದೊಂದು ವಿಶಿಷ್ಟ ಉದಾ. ಆಗುತ್ತದೆ. ಕೊಳತ್ತೋಡು ಬೈಗೋಡು ವಿನ ನಿಲುವುಗಲ್ಲು ಕಾಡುಗಳು ಇದ್ದಂತೆ ದೊಡ್ಡಮಳತೆಯಲ್ಲೂ ರೂಪುಗೊಂಡದ್ದಕ್ಕೆ ಒಂದು ಐತಿಹಾಸಿಕ ಸಾಕ್ಷಿ ಇದಾಗುತ್ತದೆ. ಈ ಶಾಸನದ ಪ್ರದೇಶವು ಹೊನ್ನಮ್ಮ ಕೆರೆಯ ಪಶ್ಚಿಮಬದಿಗೆ ಪ್ರಾಗೈತಿಹಾಸಿಕ ಗೋರಿಗಳು, ಸಮಾಧಿಗಳಿರುವ ನೆಲೆಯಾದ, ಪಾಂಡವರ ಬೆಟ್ಟ (ಮೋರಿಯರ ಬೆಟ್ಟ) ಪ್ರದೇಶವಾಗಿ ಜಲಾನಯನ ಪ್ರದೇಶವೂ ಆಗಿದೆ. ಈ ಹೆದ್ದೇವರಬನವು, ದೇವರ ಕಾಡು (ಬೀರವನ ಕಾಡು) ಆಗಿರುವಲ್ಲಿ; ಕೊಡಗಿನ ದೇವರ ಕಾಡುಗಳ ಚತುರ್ವ್ಯೂಹ ಸಂಕೀರ್ಣದಲ್ಲಿ, ಕೆರೆ, ಕೊಳ, ಗುಂಡಿ, ತೋಡು ಇವುಗಳಲ್ಲಿ ಯಾವುದಾದರೊಂದು ಅವಿಭಾಜ್ಯ ಅಂಗವಾಗಿರುವಲ್ಲಿ, ಹೊನ್ನಮ್ಮ ಕೆರೆಯ ಅಸ್ತಿತ್ವವನ್ನೂ ಐತಿಹಾಸಿಕವಾಗಿ ೧೧ನೇ ಶತಮಾನಕ್ಕೆ ಒಯ್ಯಲು ಸದ್ಯದ ಶಾಸನ ಸೂಚನೆ ನೀಡುವಂತಿದೆ. ೧೫ನೇ ಶತಮಾನದಲ್ಲಿ ಬಹುಶಃ ಚಂಗಾಳ್ವ ವಂಶಿಕನಾದ ಅನ್ನದಾನಿ ಅರಸನು ಈ ಕೆರೆಗೆ ತೂಬು ಕಟ್ಟಿಸಿದ ಬಗ್ಗೆ ಶಾಸನೋಕ್ತವಿದೆ (ಎ.ಕ. ಸಂ. ೧; ಸೋ. ಪೇಟೆ ೮೮). ಅಂದರೆ ಹೊನ್ನಮ್ಮ ಕೆರೆಯ ಜನಪದ ಕತೆ ೧೮ನೇ ಶತಮಾನದಲ್ಲಿ ಹುಟ್ಟುವ ಮೊದಲೇ

ಈ ಕೆರೆಯ ಅಸ್ತಿತ್ವದ ಹಳಮೆ ಸಾವಿರ ವರುಷದ ಹಿಂದಕ್ಕೆ ಸರಿಯುವ ಸಂಗತಿಗೆ ಸದ್ಯದ ಶಾಸನದಿಂದ ಸೂಚನೆಯಾಗುವಂತಿದೆ.

ಹೊನ್ನಮ್ಮ ಕೆರೆಗೆ ಗೌರಿಹಬ್ಬದಲ್ಲಿ ಅಭಿಜಿತ್ ಲಗ್ನದಲ್ಲಿ ಗೌರಿಬಾಗಿಣ ಅರ್ಪಿಸುತ್ತಾರೆ. ತಾಯಿಯ ರಥೋತ್ಸವ ಅಂದು ನಡೆಯುತ್ತದೆ. ಈ ಶಿಲಾಶಾಸನಗಲ್ಲನ್ನು **ಸತ್ಯದಕಲ್ಲು, ಬಂಗಾರದ ಕಲ್ಲು** ಎಂದು ಕರೆಯುತ್ತಾರೆ. ಈ ಕಲ್ಲಿನ ಮುಂದೆ ನಿಂತು ನಮಿದು ಪೂಜಿಸಿ ಕೋರಿಕೆ ಇಡುವುದು ರೂಢಿಗಿದೆ. ಹೆದ್ದೇವರು : ಸಂತಾನ ಫಲ ಈಡೇರಿಕೆಯ ಸರ್ಪದ ಪ್ರತೀಕವೂ ಆಗಿದೆ. ಈ ಜಾನಪದ ನಂಬಿಕೆ ಇತಿಹಾಸದ ಮೂಲದಿಂದ ಉಗಮವಾಗಿರುವುದು ವಿಶಿಷ್ಟ ಗಮನಾರ್ಹ. ಇದಲ್ಲದೆ ಕನ್ನಡ-ಕನ್ನಡ ನಿಘಂಟುವಿನಲ್ಲಿ ಬೀವು (ಬೀರ್ವು) 'ಶಬ್ದಕ್ಕೆ' ಕಟ್ಟುಕಟ್ಟಳೆ, 'ಪರ್ವ' ಮಾಡುವಲ್ಲಿ ಉಪವಾಸವೂ ನಿಯಮವಾಗಿ ಇರುವ ಸಂದರ್ಭ 'ಬೀರ್ವು' ಶಬ್ದದ ಎಂಬ ಪ್ರಯೋಗವನ್ನು ನೀಡಲಾಗಿದೆ. ಉಪವಾಸವನ್ನು ಶುದ್ಧವಾಗಿ ಆಚರಿಸುವುದು ಹೆದ್ದೇವರ ಪೂಜೆಯಲ್ಲಿ ಸಾಮಾನ್ಯ. ಅಂದು ಗೌಡಜನಾಂಗದಲ್ಲಿ ಇದು 'ಶುದ್ಧ'ವಾಗಿರುವಿಕೆ; ಎಂದಿರುತ್ತದೆ. 'ಪರ' (ಪರ್ವ) ಸಂದರ್ಭದಲ್ಲಿಯೂ ಇದು ಸಾಮಾನ್ಯವಾಗಿ ಸಾರ್ವತ್ರಿಕ ಆಚರಣೆ ಆಗಿರುತ್ತದೆ. ಕೊಡವರು ದೇವತಾ ಹಬ್ಬದಲ್ಲಿ ಮಾಡುವ ಉಪವಾಸವನ್ನು 'ಪಟ್ಟಣಿ' ಎನ್ನುತ್ತಾರೆ. ಕೊಡಗಿನ ಈ ಸಾಂಸ್ಕೃತಿಕ ಆಚರಣೆಗಳ ಹಿನ್ನೆಲೆಯಲ್ಲಿ; 'ಹೆದ್ದೇವರ ಬೀವೋಗಿಹ' ಅಂದರೆ 'ಪರ' ಮಾಡುವ ಹೆದ್ದೇವರ ಕಾಡಿನಲ್ಲಿ; ಬಹುಶಃ ದೇವತಕ್ಕ ದೇವಾಚಾರಗಳ ನಿರ್ವಹಣೆಕಾರ ಅರ್ಥಾತ್ (ಗೌಡ ಜನಾಂಗದಲ್ಲಿ ಪ್ರಚಲಿತವಾದ) 'ವಡೆಕಾರ'ನೂ ಆಗಿದ್ದು ಯುದ್ಧದಲ್ಲಿ ಮಡಿದ ದುದ್ದನಾಯಕನಿಗೆ ಪರೋಕ್ಷ ವಿನಯದಲ್ಲಿ (ಪುಣ್ಯಪ್ರಾಪ್ತಿಯ ಪವಿತ್ರ ಕಾರಣವಾಗಿ) ವೀರವನವನ್ನಾಗಿಯೂ ಪರಿಗಣಿಸಿ ವೀರಗಲ್ಲು ನೆಡಿಸಿರುವಂತಿದೆ. ಶಾಸನದಲ್ಲಿ 'ಗೋವರಸ'ನು ಪರೋಕ್ಷ ವಿನಯದಲ್ಲಿ ಕಲ್ಲು ಹಾಕಿಸಿರುವ ಕಾರಣ ದುದ್ದನಾಯಕನ ಸಂಬಂಧಿಯಾಗಿರಬಹುದೇ? ಎನಿಸುತ್ತದೆ. ಅಲ್ಲದೆ 'ವಡೆಕಾರ' ತನ ಗೌಡೇತರ ಜನಾಂಗದವರಲ್ಲಿಯೂ ಆ ಕಾಲಕ್ಕೆ ಇತ್ತು ಎಂಬ ಸೂಚನೆಯೂ ಒದಗುತ್ತದೆ.

ಸಾಮಾನ್ಯವಾಗಿ 'ಪರೋಕ್ಷ ವಿನಯ'ವನ್ನು ಹೋರಾಟದಲ್ಲಿ ಮಡಿದ ವ್ಯಕ್ತಿಗೆ ಗೆಯ್ದು ವೀರಗಲ್ಲು ಹಾಕಿಸುವವರು ಆ ವ್ಯಕ್ತಿಯ ಸಂಬಂಧಿಗಳೇ ಆಗಿರುವುದು ಶಿವಮೊಗ್ಗ ಜಿಲ್ಲೆ (ಸೊರಬ ೫೨೫, ಕ್ರಿ.ಶ. ೧೧೫೨; ಸೊರಬ ೧೭೬, ಕ್ರಿ.ಶ. ೧೧೫೬;) ಬೆಂಗಳೂರು ಜಿಲ್ಲೆಯ (ಚನ್ನಪಟ್ಟಣ ೪೬, ಕ್ರಿ.ಶ. ೧೧೫೫) ಅನೇಕ ಶಾಸನಗಳಲ್ಲಿ ಕಂಡುಬರುತ್ತದೆ. ಇಲ್ಲಿ ನೇರ ಸಂಬಂಧಿಗಳೇ, ಇತರ ಸಂಬಂಧಿಗಳಿಗಿಂತ ಹೆಚ್ಚು ಕಾಣಬರುತ್ತಾರೆ. ಒಟ್ಟಾರೆ ವ್ಯಕ್ತಿ ಹೋರಾಟದಲ್ಲಿ ಮಡಿದರೆ ವೀರಗಲ್ಲನ್ನು ಸಂಬಂಧಿಗಳು (ಉಪಕೃತರೂ ಸೇರಿದಂತೆ) ಹಾಕುತ್ತಾರೆ. ಅದು ಅವರ ಕರ್ತವ್ಯ ಹಾಗು ಮಡಿದ ವೀರನಿಗೆ ಸಂಬಂಧಿಗಳು ತೋರುವ **ಪರೋಕ್ಷ ವಿನಯ**[೨]

ಹೀಗಾಗಿ ದುದ್ದನಾಯಕ ಗೋವರಸನ ದೂರದ ಸಂಬಂಧಿಯಾಗಿದ್ದಿರಲೂ ಬಹುದೆನಿಸುತ್ತದೆ.

ದುದ್ದನಾಯಕನು 'ದೊಡ್ಡ ಮೊಳತೆ' ಪ್ರದೇಶದ ಒಂದು ಊರಿನ ನಾಯಕನೂ ಆಗಿದ್ದಿರಲು ಸಾಕು. ಇದಕ್ಕೆ ಯಡೂರಿನ ಶಾಸನೋಕ್ತ ಸನ್ಧಿವಿಗ್ರಹಿ ಮೊಳತೆಯ ದುದ್ಧಮಲ್ಲನ ಸಂಗತಿಯಿಂದ, 'ದುದ್ಧ' ಎಂಬ ಹೆಸರಿನ ಪ್ರಾಮುಖ್ಯತೆ ಈ ಪ್ರದೇಶದಲ್ಲಿ ಕಾಣಬರುತ್ತದೆ. ಹಾನುಗಲ್ಲು ಕದಂಬರ ಮಹಾಮಂಡಲೇಶ್ವರ ದುದ್ದರಸ, ಇವನ ಮಂತ್ರಿ ದುದ್ದಮಲ್ಲ (ಯಡೂರು ಶಾಸನ), ಕ್ರಿ.ಶ. ೧೧೭೫ರ ನಂದಿಗುಂದ ಶಾಸನದಲ್ಲಿ (ಸೋ.ಪೇ ೮೭) ಉಕ್ತವಾಗಿರುವ ತೋಳೂರ ದುದ್ದರಸ, ಹಾನುಗಲ್ಲು ಬಿಳಿಗೇರಿ - ತಾಕೇರಿ ಗ್ರಾಮಗಳ ಹಾದಿಯಲ್ಲಿರುವ 'ದುದ್ದಗಲ್ಲು' ಗ್ರಾಮ (ದುದ್ದಗಲ್ಲು ದೇವರ ಕಾಡು) ಇತ್ಯಾದಿಗಳೆಲ್ಲ ಹಾನುಗಲ್ಲು ಕದಂಬ ಶಾಖೆಯಾದ ಕೊಡಗಿನ ಕದಂಬರ ಸಂಬಂಧಿಯಾಗಿ ಕಾಣಬರುತ್ತವೆ. ಇದಲ್ಲದೆ ಸದ್ಯದ ಶಾಸನದಿಂದ ದುದ್ದರಸನಿಗೆ ಜೂಜರಸನಲ್ಲದೆ ಗೋವರಸ ಎಂಬ ಸೋದರನೂ ಇದ್ದಿರುವ ಸೂಚನೆಯಾಗುತ್ತದೆ.

ದುದ್ದನಾಯಕ (ಶಾಸನದ 'ದುಧನಕ') ಎಂಬ ಹೆಸರನ್ನು ಗಮನಿಸಿದರೆ, ಅವನು ಮನೆಮಗನಂತೆ, ಅಥವಾ ಕೊಡಗಿನ ಕದಂಬರ ಪೈಕಿಯ ಲೆಂಕವಾಳಿಯಾಗಿದ್ದಿರುವಂತಿದೆ. ಯಡೂರು ಶಾಸನದಲ್ಲಿಯೆ ಲೆಂಕರ ಪ್ರಸ್ತಾಪವಿದೆ. ಯಡೂರು ಶಾಸನದ ಮಹಾಮಾಂಡಲೇಶ್ವರ ದುದ್ದರಸನಿಗೆ ಅವನ ಸೋದರ ಜೂಜರಸನು ಪರೋಕ್ಷವಿನಯದಿಂದ ವೀರಶಾಸನ ನಿಲ್ಲಿಸಿದ [ಕ್ರಿ.ಶ. ೧೧೯೫ರ ಈ ಶಾಸನ ಇಂದಿಗೂ ಯಡೂರಿನ ಸುಗ್ಗಿಕಟ್ಟೆ ಬಳಿ ಇದೆ. ಮೊದಲು ಅಬ್ಬಿಮಠದ ಹಾದಿಯಲ್ಲಿ ಅಬ್ಬಿ ಮಲ್ಲಿಕಾರ್ಜುನ ಗುಡಿಗೆ ಅಭಿಮುಖವಾಗಿದ್ದ ಈ ಸುಗ್ಗಿಕಟ್ಟೆಯ ನೆಲೆಯನ್ನು ಸ್ತಂಭಗಳ ಸಹಿತವಾಗಿ ಹಾಲೇರಿ ಅರಸರ(!) ಕಾಲದ 'ಅರಮನೆ ಬರಿ'ಯ ಬದಿಗೆ ಕಾಲಾಂತರದಲ್ಲಿ ಬದಲಾಯಿಸಲಾಗಿದೆ]. ಮೊಳತೆಯ ದುದ್ದಮಲ್ಲ (ಮಂತ್ರಿ) ವೀರಶಾಸನವನ್ನು ಸೇನಬೋವ ರಾಜಿಮಯ್ಯನ ಮಗ ಬಮ್ಮದೇವನಿಂದ ಬರೆಸಿದ; ಇದು ಯಡೂರಿನ ವಿಷಯವಾದರೆ, ಅತ್ತ (ದೊಡ್ಡ) ಮಳತೆಯಲ್ಲಿ, ಗೋವರಸ, ದುದ್ದನಾಯಕನಿಗೆ ಪರೋಕ್ಷ ವಿನಯದಲ್ಲಿ ಕಲ್ಲನ್ನಿರಿಸಿದ. ಇವೆರಡೂ ಘಟನೆಗಳನ್ನು ತಾಳೆ ಹಾಕಿದರೆ ಕ್ರಿ.ಶ. ೧೧೯೫ರ ಸುಮಾರಿಗೆ ನಡೆದ ಯುದ್ಧವೊಂದರಲ್ಲಿ, ಮಹಾಮಂಡಲೇಶ್ವರ ದುದ್ಧರಸ ಹಾಗು, ಮೊಳತೆಯ ದುದ್ದನಾಯಕನು ಬಹುಶಃ ಚಂಗಾಳ್ವರೆದುರು, ಹೋರಾಡಿ ವೀರಮರಣವನ್ನಪ್ಪಿರಬೇಕು.

'ಮಳತೆ', 'ದೊಡ್ಡಮಳತೆ' ಎಂಬ ಸ್ಥಳನಾಮಗಳನ್ನು ಗಮನಿಸಿದರೆ, 'ಸಣ್ಣ ಮಳತೆ', 'ದೊಡ್ಡ ಮಳತೆ' ಎಂದು ಎರಡು ಭಾಗಗಳಾಗಿಯೇ ವಿಂಗಡನೆಯಾಗಿರ ಬೇಕು. ಅಥವಾ ವಲಸೆ ಗೊಂಡ ತತ್ಕಾಲದ ನೆರೆಯ ಗ್ರಾಮಕ್ಕೆ ಸಣ್ಣಮೊಳತೆ ಯಾ 'ಸುಳು ಮೊಳತೆ' ಎಂಬ ಹೆಸರು ಬಂದಿರಬೇಕು. ಹಾಲೇರಿ ಅರಸರ

ಕಾಲದ ಕೊಡಗಿನ ೧೮೩೪ರ ಹಾಗು ಆಂಗ್ಲರ ಕಾಲದ ಗ್ರಾಮಗಳ ಪಟ್ಟಿಯಲ್ಲಿ ದೊಡ್ಡಮೊಳತೆ, ಸುಳುಮೊಳತೆ, ಎಂಬ ಪ್ರತ್ಯೇಕ ಗ್ರಾಮಗಳಿರುವಲ್ಲಿ ಸಣ್ಣ ಮೊಳತೆಯೆ ತಾತ್ಕಾಲಿಕ ಗ್ರಾಮವಾಗಿದ್ದ ಸುಳುಮೊಳತೆ ಎನಿಸಿ ಅಲ್ಲಿಯೂ ಮುಂದೆ ಜನವಾಸ್ತವ್ಯ ಮುಂದುವರಿದಿರುವಂತಿದೆ. ಮೊಳತೆ, ತೋಳೂರು, ಯಡೂರು, ಹಾನುಗಲ್ಲು, ತೋಳೂರು ಶೆಟ್ಟಿಹಳ್ಳಿ ದುದ್ದಗಲ್ಲು ಇವೆಲ್ಲ ಸೋಮವಾರಪೇಟೆ ತಾಲೂಕಿನಲ್ಲಿ ಇರುವ ಗ್ರಾಮೀಣ ಪ್ರದೇಶಗಳೇ ಆಗಿವೆ. ಅಂತಾಗಿ ದುದ್ದರಸನ ಸೋದರ ಜೂಜರಸ ಇದ್ದಂತೆ ಬಹುಶಃ ಕುಮಾರವೃತ್ತಿಯಿಂದ ಆಳುತ್ತಿದ್ದ 'ಗೋವರಸ'ನೂ ದೊಡ್ಡಮೊಳತೆಯಲ್ಲಿದ್ದಿರುವ ಸೂಚನೆಯನ್ನು ಸದ್ಯದ ಹೊಸ ಶಾಸನದಿಂದ ಹೆಕ್ಕಬಹುದಾಗಿದೆ. ಈ ಮೊಳತೆಯ ದುದ್ದಮಲ್ಲನು, ದುದ್ದರಸನಲ್ಲಿ ಮಂತ್ರಿಯಾಗಿರುವಲ್ಲಿ, ಅವನು ಕೊಡಗು ಕದಂಬ ವಂಶಿಕನಿದ್ದಿರಬಹುದೆನಿಸುತ್ತದೆ, ಅಥವಾ ಕೊಂಗಾಳ್ವರ - ಕೊಡಗು ಕದಂಬರ ಸಮನ್ವಯ ಬಾಂಧವ್ಯದ ಪ್ರತಿನಿಧಿಯಾಗಿಯೋ ಇದ್ದಿರಬೇಕು. ಅಂದರೆ ಹಾನುಗಲ್ಲು ಕದಂಬ ಶಾಖೆಯ ಕೊಡಗು ಕದಂಬರ ಆಳ್ವಿಕೆಯ ಪ್ರದೇಶದ ವಿಸ್ತಾರವೂ ತಿಳಿಯುತ್ತದೆ.

ಇನ್ನು ಕೊಡಗಿನ ಕದಂಬರು ಮತ್ತು ಕೊಂಗಾಳ್ವರು ಚೆಂಗಾಳ್ವರ ಎದುರು ಮಾಡಿದ ಯುದ್ಧದ ಕಾಲವನ್ನು ಗಮನಿಸಬಹುದು.

ಕಲ್ಯಾಣಿ ಚಾಲುಕ್ಯರ ಆರನೇ ವಿಕ್ರಮಾದಿತ್ಯನು ತನ್ನ ತಂದೆಯ ಜೀವಿತ ಕಾಲದಲ್ಲಿ ಅಂದರೆ ಕ್ರಿ.ಶ. ೧೦೫೫-೫೬ರ ಸಮಯದಲ್ಲಿ ಗಂಗವಾಡಿ ೯೬೦೦೦ ಮತ್ತು ಬನವಾಸಿ ೧೨೦೦೦ ಗಳ ಒಡೆತನವನ್ನು ಹಾನುಗಲ್ಲು ಕದಂಬವಂಶದ ಹರಿಕೇಸರಿ ಎಂಬ ಮಾಂಡಲೇಶ್ವರನೊಂದಿಗೆ ನಿರ್ವಹಿಸಿದ್ದ[೩]. ಗೋವೆಯ ಕದಂಬರ ೧ನೇ ಜಯಕೇಶಿ ಕ್ರಿ.ಶ. ೧೦೫೦ರಲ್ಲಿ ದೊರೆಯಾದ ಮೇಲೆ ಪಾಂಡ್ಯ, ಚೋಳ, ಪರಮಾರ ಕಿಷ್ಕಿಂಧ ಪರ್ವತವಾಸಿಗಳನ್ನು ಸೋಲಿಸಿ ಕದಂಬರನ್ನು ಸಂಘಟಿಸಿದ;[೪] ಈ ಕಾರಣವೆ ವಿಜಯನಗರ ರಾಜ್ಯ ತಲೆ ಎತ್ತುವವರಿವಿಗೂ ಮೊದಲಿನ ಕದಂಬ ಶಾಖೆಯ ಪ್ರತಿನಿಧಿಗಳು ಇದ್ದೇ ಇದ್ದರು.[೫] ಪ್ರಸ್ತುತ ಯಡೂರು ಶಾಸನೋಕ್ತ ದುದ್ದರಸ, ಕದಂಬ ಹರಿಕೇಸರಿಯ ಕಾಲದಲ್ಲಿ ಕದಂಬ ಪ್ರತಿನಿಧಿಯಾಗಿ ಕೊಡಗಿನ ಭಾಗಗಳಲ್ಲಿ ಇದ್ದು, ಜಯಕೇಶಿಯ ಕಾಲದಲ್ಲಿ ಸಂಘಟನೆಗೆ ಒಳಪಟ್ಟು, ನಂತರ ಮಹಾಮಂಡಲೇಶ್ವರನಾಗಿರಬೇಕು.[೬] ಇವನು ಹಾನುಗಲ್ಲು ಕದಂಬ ಶಾಖೆಯವನೇ ವಿನಾ ಬಾಣವಂಶಿಕನಲ್ಲ.[೭] ಅದಾಗಿ ಯಡೂರು, ದೊಡ್ಡಮಳತೆ, ತೋಳೂರು, ಹಾನುಗಲ್ಲು, ದುದ್ದಗಲ್ಲು ಪ್ರದೇಶವೆಲ್ಲ ಇವನ ಆಳ್ವಿಕೆಗಿದ್ದಿರಬೇಕು. ಇವನ ಬಳಿ ಇದ್ದ ಹಾಗು ವೀರಶಾಸನ ಬರೆಸಿದ ಮಂತ್ರಿ ದುದ್ದಮಲ್ಲ ಕೊಂಗಾಳ್ವರ ಪೈಕಿಯವನೆ? ಚಂಗಾಳ್ವರ ಪೈಕಿಯವನೆ? ಅಥವಾ ಕದಂಬ ವಂಶಿಕನೆ? ಎಂಬುದನ್ನು ಇನ್ನಷ್ಟು ಪೂರಕ ಸಾಕ್ಷ್ಯಗಳಿಂದ ವಿವೇಚಿಸಬೇಕು.

ಕ್ರಿ.ಶ. ೧೧೭೧ರ ಮೂಡಲಹಿಪ್ಪೆ ಶಾಸನದಲ್ಲಿ[೮] ಮಹಾಮಂಡಳೇಶ್ವರ ವೀರದುದ್ದ ಕೊಂಗಾಳ್ವನು ಮೊಳತೆಯ ಬೀಡು (ಹಾಸನ ಜಿಲ್ಲೆ) ವಿನಲ್ಲಿ ರಾಜ್ಯವಾಳುತ್ತಿರುವಲ್ಲಿ ಹೊಯ್ಸಳ ಒಂದನೇ ನರಸಿಂಹನ ಸೈನ್ಯವು ಆಕ್ರಮಣ ಮಾಡಿದ ಸಂದರ್ಭ. ಆಗ ವೀರ ಸಮುದ್ರನೆನಿಸಿದ ತಮ್ಮಡಿರುದ್ರನು ಕೊಂಗಾಳ್ವನ ಬೆಸದಿಂದ ವೈರಿಗಳಿದುರು ಹೋರಾಡಿ ಜಯತಂದುಕೊಟ್ಟು ಮಡಿಯುತ್ತಾನೆ. ಬಹುಶಃ ಇವನಿಗೆ ಕಾಮರದತ್ತಿ (ವೀರದತ್ತಿ!) ಯಾಗಿ ಕೊಟ್ಟ ಕೋಟೆಹಾಳು ಭೂಮಿಯನ್ನು ಇವನ ಸುಪುತ್ರರು, ಪಡೆದು 'ಪರೋಕ್ಷ ವಿನಯ' ವಾಗಿ ವೀರಗಲ್ಲು ನಿಲಿಸಿದಂತಿದೆ (ಇವರನ್ನು 'ಮಲೆಯ ನಾಯಕ' ನ ಸುಪುತ್ರರು ಎಂದು ಪರಿಗಣಿಸಲು ಕಷ್ಟ. ಕಾರಣ ಅದು, ಶಾಸನದಲ್ಲಿ ಅಸ್ಪಷ್ಟ); ಮೂಡಲಹಿಪ್ಪೆಯ ಈಶ್ವರ ದೇಗುಲದ ಇನ್ನೊಂದು ಶಾಸನವೂ (ಕ್ರಿ.ಶ. ೧೧೭೭)[೯] ವೀರದುದ್ದ ಕೊಂಗಾಳ್ವನನ್ನು ಪ್ರಸ್ತಾಪಿಸುತ್ತದೆ. ಇವೆರಡೂ ಶಿವಪರವಾದ ಶಾಸನಗಳಾಗಿದ್ದು, ಈ ಹೊತ್ತಿಗೆ ಕೊಂಗಾಳ್ವ ಶಾಖೆಯ ಜೈನ-ಶೈವ ಸಮನ್ವಯ ಸೂಚಿಯಾಗಿ ಈ ಶಾಸನ ಶಿಲ್ಪಗಳು ಇಲ್ಲಿ ಕಾಣುತ್ತವೆ. ಅರ್ಥಾತ್ ಅದೊಂದು ಎಕ್ಕೋಟಿ ಜಿನ ಸಮಯದ ಪ್ರಭಾವವೂ ಇರಬಹುದು. ಕೊಡಗಿನಲ್ಲಿ ಕ್ರಿ.ಶ. ೧೧೭೫ರ ವೇಳೆಗೆ ಕೊಂಗಾಳ್ವರ ಅಸ್ತಿತ್ವ ಮುಗಿಯಿತೆನ್ನಲಾಗಿರುವಲ್ಲಿ ಹಾಸನ ಪ್ರದೇಶದಲ್ಲಿ ಅವರ ವಲಸೆ ಅಥವಾ ಅಸ್ತಿತ್ವ ಮುಂದುವರಿದುದು ಕಾಣುತ್ತದೆ. ಇದಲ್ಲದೆ ಹೊಳೆನರಸೀಪುರ ತಾ. ಅಂಕನಾಥಪುರದ ಅಂಕನಾಥ ದೇಗುಲ ಶಾಸನದಲ್ಲಿ 'ದುದ್ದಮಲ್ಲರಸ' ಎಂಬ ನಾಯಕನೊಬ್ಬ ಜಿನಾಲಯ ಜೀರ್ಣೋದ್ಧಾರಕ್ಕೆ ಅಯ್ಯವಳ್ಳಿ ಗ್ರಾಮವನ್ನು ನೀಡಿದ ವಿಷಯವಿದೆ.[೧೦] ಅರಕಲಗೂಡು ತಾ, ಸುಳಗೋಡು ಸೋಮವಾರ ಗ್ರಾಮದ ೧೧ನೇ ಶ.ದ ಸುಮಾರಿನ ಶಾಸನದಲ್ಲಿ 'ದುದ್ದಮಲ್ಲದೇವ'ನ ಬಾಣಸಿಗನೊಬ್ಬ ಜಿನಾಲಯ ಕಟ್ಟಿಸಿದ ಬಗ್ಗೆ ಹೇಳಿದೆ.[೧೧] ಎರಡೂ ಸಂದರ್ಭಗಳು ಜಿನಾಲಯಕ್ಕೆ ದಾನ ಅಥವಾ ನೆರವಿನ ಸಂಬಂಧಿಯಾಗಿದ್ದು, 'ದುದ್ದಮಲ್ಲರಸ - ದುದ್ದಮಲ್ಲದೇವ' ಎಂಬ ಹೆಸರನ್ನು 'ಕೊಂಗಾಳ್ವ' ಉಪಾಧಿ ಇಲ್ಲದಿದ್ದರೂ, ಶಾಸನ ಸಂಪುಟವು ಕೊಂಗಾಳ್ವ ವಂಶಿಕದ ಪಟ್ಟಿಯಲ್ಲಿ ಸೇರಿಸಿದೆ.[೧೨] ಯಡೂರು ಶಾಸನದ (ಕ್ರಿ.ಶ. ೧೦೯೫) ಹಾನುಗಲ್ಲು ಕದಂಬ ವಂಶಿಕ 'ದುದ್ದರಸ'ನ ಮಂತ್ರಿ 'ದುದ್ದಮಲ್ಲ'ನು ಶಿವಸಮಯದವನೆಂದು ಸೂಚನೆ ಇರುವಲ್ಲಿ, ಈ ಮೂರು ಹೆಸರುಗಳು ಏಕಕಾಲದಲ್ಲಿದ್ದ ವಿಭಿನ್ನ ವ್ಯಕ್ತಿಗಳ ಹೆಸರಾಗಿವೆಯೆ? ಎಂಬುದು ಸ್ಪಷ್ಟವಿಲ್ಲ. ಆದರೂ ಕೊಂಗಾಳ್ವ ವಂಶಿಕನೆಂದು ಭಾವಿಸಿದರೆ, ಕೊಡಗಿನ ಹಾನುಗಲ್ಲು ಕದಂಬ ವಂಶಿಕರೊಡನೆ ಕೊಂಗಾಳ್ವರ ಸಂಬಂಧ ಸುಮಧುರವಾಗಿತ್ತೆನಿಸುತ್ತದೆ. 'ದುದ್ಧರಸ'ನಲ್ಲಿ ಸನ್ಧಿವಿಗ್ರಹಿಯಾಗಿದ್ದ ದುದ್ದಮಲ್ಲನು, ಬಹುಶಃ ಮುಂದೆ ಹಾಸನ ಜಿಲ್ಲೆಗೆ ಹೋದ ಕೊಂಗಾಳ್ವರಲ್ಲಿಯ ಮಾಂಡಲೇಶ್ವರನಾಗಿ ದುದ್ದಮಲ್ಲರಸ, ದುದ್ದಮಲ್ಲದೇವ ಎಂಬ ರಾಜನಾಮವಾಚಿಯಾಗಿ ಶಾಸನೋಕ್ತಗೊಂಡಿರಬಹುದು. ಕೃಷ್ಣರಾಜಪೇಟೆ ಶಾಸನದ ರೀತ್ಯಾ ರಾಜೇಂದ್ರ ಪ್ರಥ್ವಿಕೊಂಗಾಳ್ವನ ಮಗಳು ಚಂದಲದೇವಿ (ವಿಷ್ಣುವರ್ಧನನ ಪಿರಿಯರಸಿ); ಆಕೆಗೆ

ತಮ್ಮ 'ದುದ್ದಮಲ್ಲದೇವ' ಇದ್ದ [ಎ.ಕ. ೬ (ಹೊಸತು), ಕೃ.ಪೇ. ೨೧] ಎಂದರೆ ಮೇಲಿನ ಮಾತಿಗೆ ಪೋಷಕವೆ.

೧೧ನೇ ಶತಮಾನದ ಜೋಡಿಕುಪ್ಪೆ ಶಾಸನದಲ್ಲಿ[೧೩] ಚಂಗಾಳ್ವರನ್ನು ಕೊಂಗಾಳ್ವರು ಸೋಲಿಸಿದ ವಿಷಯವಿದೆ. ೧೧-೧೨ನೇ ಶತಮಾನದ ಅಂಕನಾಥಪುರ ಶಾಸನದಲ್ಲಿ[೧೪] 'ಕದಂಬ ಕುಲಾನ್ತಕ ತೆಂಜಙ್ಗಾಟ್ವಿ' ಎಂದಿದೆ. ಶಾಸನ ಸಂಪುಟವು ಪದಸೂಚಿಯಲ್ಲಿ (ಪು. ೭೪೧) 'ತೆಂಜಙ್ಗಾಟ್ವಿ=ಕೊಂಗಾಳ್ವ?' ಎಂದು ಪ್ರಶ್ನೆಯಿಟ್ಟು ಸೂಚಿಸಿದೆ. ಈ 'ತೆಂಜಙ್ಗಾಟ್ವಿ' ಯಾರು? ಎಂಬುದು ನಿರ್ದಿಷ್ಟವಿಲ್ಲ. ಆದರೂ ಇವನು 'ಚಂಗಾಳ್ವ' ದೊರೆಯೊಬ್ಬನೆಂದು ಕೊಂಗಾಳ್ವ ಹಾಗು ಕೊಡಗಿನ (ಹಾನುಗಲ್) ಕದಂಬರಿಗಿದ್ದ ಸುಮಧುರ ಬಾಂಧವ್ಯದ ಹಿನ್ನೆಲೆಯಲ್ಲಿ ಪರಿಭಾವಿಸುವುದು ಸೂಕ್ತವೆನಿಸುತ್ತದೆ. ಈ 'ತೆಂಜಙ್ಗಾಟ್ವಿ'ನು ಉದಯಾದಿತ್ಯ ಚಂಗಾಳ್ವ ರಾಜೇಂದ್ರ ಚೋಳ ಆಗಿರುವಂತಿದೆ. ಡಿ.ಎನ್. ಕೃಷ್ಣಯ್ಯನವರಲ್ಲಿ ಮಾದೇವ ಚಂಗಾಳ್ವನಿಗೆ (ಕ್ರಿ.ಶ. ೧೦೯೦) ಇದು ಅನ್ವಯವಾಗುವುದು ಎಂದು, ಗರಗಂದೂರಿನ ವೀರಗಲ್ ಶಾಸನಕ್ಕೆ ಅನ್ವಯಿಸಿ ಹೇಳಿದಂತಿದೆ.[೧೫] ಆದರೆ ಶಾಸನ ಸಂಪುಟವು (ಸೋ.ಪೇ. ೯೧) ಈ ಶಾಸನವನ್ನು[೧೬] ೧೨ನೇ ಶತಮಾನದ್ದೆಂದು ಹೇಳಿದ್ದರೂ ಶಾಸನದಲ್ಲಿ ಬರುವ 'ಮಹಾಮಣ್ಡಲೇಶ್ವರ, ತ್ರಿಭುವನಮಲ್ಲ ವೀರ... ಮತು **ಚಂಗಾ....** ಮಹಾಮ... **ದಿತ್ಯದೇವಗೆ** ......, ಎಂದಿರುವಲ್ಲಿ 'ಉದಯಾದಿತ್ಯ ಚೆಂಗಾಳ್ವ ರಾಜೇಂದ್ರ ಚೋಳ'ನಿಗೆ 'ತೆಂಜಙ್ಗಾಟ್ವಿ' ಶಬ್ದ ಅನ್ವಯ ಸೂಚಕವೆನಿಸುತ್ತದೆ. ಪಿರಿಯಾಪಟ್ಟಣ ಶಾಸನದಲ್ಲಿ[೧೭] 'ಶ್ರೀಮನ್ಮಹಾಮಂಡಳೇಶ್ವರ ಕುಲೋತುಂಗ ಚೋಳ ಚಂಗಾಟ್ವಿ ಒಡೆಯಾತ್ಯ ದೇವರು' ಎಂದಿದ್ದು, ಶಾಸನದ ಕಾಲ ಕ್ರಿ.ಶ. ೧೦೯೭ ಆಗಿದೆ. 'ಒಡೆಯಾತ್ಯ ದೇವರು' ಇಲ್ಲಿ 'ಒಡೆಯಾ[ದಿ]ತ್ಯ ದೇವರು', ಎಂಬುದರ ಅಪಲಿಖಿತವಾಗಿದೆ. ಅಲ್ಲದೆ 'ತೆಂಜಙ್ಗಾಟ್ವಿ' ಎಂಬಲ್ಲಿ 'ಟ್ವಿ' ಅಕ್ಷರವು ಪಿರಿಯಾಪಟ್ಟಣದ ಶಾಸನಾಕ್ಷರವನ್ನು ಹೋಲುವುದು ಗಮನಾರ್ಹ. ಈ ಹಿನ್ನೆಲೆಯಲ್ಲಿ ಮಾದೇವ ಚಂಗಾಳ್ವನ ಕಾಲ (ಕ್ರಿ.ಶ. ೧೦೯೦-೯೪) ಎಂದಾಗಿ (ಒಡೆಯಾದಿತ್ಯ) ಉದಯಾದಿತ್ಯ ಚೆಂಗಾಳ್ವ ರಾಜೇಂದ್ರ ಚೋಳನ ಕಾಲ ಕ್ರಿ.ಶ. ೧೦೯೪ರಿಂದಲೇ ಆರಂಭಿಸಲು ಸಾಧ್ಯವಾಗುತ್ತದೆ. ಇವನ ಕಾಲ ಕ್ರಿ.ಶ.೧೦೯೭ರಲ್ಲೂ ಮುಂದುವರಿಯಿತೆಂದರೆ, ಕೊಂಗಾಳ್ವರು, ಚಂಗಾಳ್ವರನ್ನು ಜೋಡಿಕುಪ್ಪೆ ಶಾಸನ ರೀತ್ಯಾ ಸೋಲಿಸಿದ ಸಂದರ್ಭದಲ್ಲಿ (ಬಹುಶಃ ಕ್ರಿ.ಶ. ೧೦೯೫) ಕೊಡಗಿನ ಕದಂಬರ ದುದ್ದರಸ ಹಾಗು ಸನ್ನಿಧಿಗ್ರಹಿ ಮೊಳತೆಯ ದುದ್ದಮಲ್ಲನೂ ಚಂಗಾಳ್ವರೆದುರು ಸಂಯುಕ್ತವಾಗಿ ಕಾದಿರಬಹುದು. ದೊಡ್ಡಮೊಳತೆಯ 'ದುಧನಕ'ನೂ (ದುದ್ದನಾಯಕ) ಈ ಕಾಳಗದಲ್ಲಿ ಮಡಿದಿರಬೇಕು. ಅಂತೇ ಯಡೂರು ಶಾಸನದಲ್ಲಿ 'ದುದ್ದರಸ ಶಿವಲೋಕ ಪ್ರಾಪ್ತನಾಗಲ್ ಪರೋಕ್ಷವಿನೆಯಂ ಗೆಯ್ದು ವೀರಶಾಸನ' ಬರೆಸಲು ಜೂಜರಸ ಹಾಗು ದುದ್ದಮಲ್ಲರು ಮುಂದಾದರೆನ್ನಬೇಕು. ಅತ್ತ ದೊಡ್ಡಮಳತೆಯಲ್ಲಿ 'ದುಧನಕ'ಗೆ ಗೋವರಸನು ಪರೋಕ್ಷವಿನಯವನ್ನು ಗೆಯ್ದು, (ವೀರವನ) ಕಲ್ಲು ನಿಲ್ಲಿಸಿರಬೇಕು. ಅದಾಗಿ ಪ್ರಸ್ತುತ ದೊಡ್ಡ ಮಳತೆಯ ಹೊಸ ಶಾಸನದ ಕಾಲವೂ ಕ್ರಿ.ಶ. ೧೦೯೫ರ ಸುಮಾರಿನದೇ ಆಗುತ್ತದೆ.

ಕೊಂಗಾಳ್ವರು, ಚಂಗಾಳ್ವರ ಮೇಲೆ ವಿಜಯ ಸಾಧಿಸಿದರೂ ಉದಯಾದಿತ್ಯ ಚೆಂಗಾಳ್ವನಿಂದ 'ದುದ್ದರಸ'ನು ಹೋರಾಟದಲ್ಲಿ ವೀರ ಮರಣವನ್ನಪ್ಪಿರಬಹುದು ಅಥವಾ ಕಾಲಾಂತರದಲ್ಲಿ ಸೋಲಿನ ಸೇಡನ್ನು ಉದಯಾದಿತ್ಯನು ಕದಂಬ ವಂಶಿಕರನ್ನು ನಾಶ ಮಾಡುವ ಮೂಲಕ ತೀರಿಸಿಕೊಂಡು, 'ಕದಂಬ ಕುಲಾನ್ತಕ ತೆಂಜಙ್ಗಾಟ್ವಿ' ಎಂಬ ಬಿರುದು ಧರಿಸಿರಲು ಸಾಕು. ಆದರೂ ಗಮನಾರ್ಹವಾಗಿ, ಕ್ರಿ.ಶ. ೧೧೭೫ರ ನಂದಿಗುಂದ ಶಾಸನದ ರೀತ್ಯಾ[೧೮] ಹೊಯ್ಸಳರ ಇಮ್ಮಡಿ ಬಲ್ಲಾಳನಲ್ಲಿ ಮಹಾಮಂಡಲೇಶ್ವರನಾಗಿ ವೀರ ಚೋಳ ಕೊಂಗಾಳುವ ದೇವನು ತಾಯಿ ಪದುಮಲದೇವಿ ಸೋಮಲದೇವಿ ತೋಳೂರ ದುದ್ದರಸ ಮುಂತಾದವರ ಸಮಕ್ಷಮದಲ್ಲಿ ಮುಳ್ಳೂರು - ೨೦ ಪ್ರದೇಶದ ಸುಂಕ ಪಡೆದುಕೊಳ್ಳಲು **ಅಣ್ಣತ್ತಮ್ಮನ** ಮಕ್ಕಳ ಮಕ್ಕಳಿಗೆ ಅವಕಾಶ ಮಾಡಿದ ವಿಷಯವಿದೆ. ಅಂದರೆ ಇಲ್ಲಿ ಬರುವ 'ತೋಳೂರ ದುದ್ದರಸ'ನು ಕೊಡಗಿನ ಕದಂಬರ ಪೈಕಿಯ ವಂಶಿಕನೆಂದು ತೋರುವಲ್ಲಿ, ನಾಮ ಸಾಮ್ಯವೂ ಇರುವಲ್ಲಿ ೧೨ನೇ ಶತಮಾನದಲ್ಲಿ ಕೊಂಗಾಳ್ವರಲ್ಲಿಯ ಪ್ರಾದೇಶಿಕ ನಾಯಕರಾಗಿ ಈ ಕದಂಬ ವಂಶಿಕರು ಮುಂದುವರಿದಿದ್ದರೆಂಬ ಸೂಚನೆ ಆಗುತ್ತದೆ. ತ್ರಿಭುವನಮಲ್ಲ 'ವೀರದುದ್ದ ಕೊಂಗಾಳ್ವ' ಎಂಬ ಹೆಸರು ಕೊಂಗಾಳ್ವರಲ್ಲಿ ಒಬ್ಬ ದೊರೆಗಿರುವುದು, ಕದಂಬ-ಕೊಂಗಾಳ್ವ ಸಂಬಂಧ ಸೂಚಿ ಎನಿಸುತ್ತದೆ. ಅಲ್ಲದೆ 'ತೆಂಜಙ್ಗಾಟ್ವಿ' ಎಂಬಲ್ಲಿ ಆದ್ಯಕ್ಷರದಲ್ಲಿ 'ಎ' ಕಾರವಿದೆ, 'ಒ' ಕಾರ ಇಲ್ಲ. ಅದಾಗಿ ತೆಂಜಙ್ಗಾಟ್ವಿ ಶಬ್ದವು, ಚೆಂಗಾಳ್ವ ಶಬ್ದಕ್ಕೆ ಸನಿಹವಾಗುವಷ್ಟು ಕೊಂಗಾಳ್ವ ಶಬ್ದಕ್ಕೆ ಆಗುವುದಿಲ್ಲ. ಅಲ್ಲದೆ 'ಚ' ಕಾರವು ದ್ರಾವಿಡ ಭಾಷೆಗಳಲ್ಲಿ ಸಕಾರ, ತಕಾರವಾಗಿ ಹಾಗೂ ಸ್ವರವಾಗಿ ಮಾರ್ಪಡುತ್ತದೆ ಎಂಬ ಅಂಶವನ್ನೂ ಇಲ್ಲಿ ಗಮನಿಸಬಹುದು. ವಿಲೋಮ ಪ್ರಕ್ರಿಯೆಯೂ ಇದೆ ಎಂದರೆ ವಲಸೆ ಕಲ್ಲು > ವಳಚೆ ಕಲ್ಲು ಎಂದು ಗ್ರಾಮ ರೂಢಿಯಲ್ಲಿ (ರಾಮನಗರ ತಾ.) ಕಾಣಬರುವುದು ಗಮನಾರ್ಹ. ಅದಾಗಿ ಈ ಮಾರ್ಪಾಟು 'ಚಂಗಾಳ್ವ' ಶಬ್ದಕ್ಕೆ ಅನ್ವಯವೆನ್ನಬೇಕು.

ಡಿ.ಎನ್. ಕೃಷ್ಣಯ್ಯನವರು, ಕೊಂಗಾಳ್ವರು, ಕ್ರಿ.ಶ. ೧೧೦೬ರ ಸುಮಾರಿನಲ್ಲಿ ಹೊಯ್ಸಳರಿಂದ ಸೋಲಿಸಲ್ಪಟ್ಟಿದ್ದರೂ ತಿರುಗಿ ಪ್ರಬಲರಾಗಿ ತಮ್ಮ ಉತ್ತರದಲ್ಲಿದ್ದ ಮಂಜರಾಬಾದಿನ ಕದಂಬರನ್ನು ಆಕ್ರಮಿಸುತ್ತ ಹೊಯ್ಸಳ ರಾಜ್ಯಕ್ಕೆ ಸಮೀಪಿಸುತ್ತಿದ್ದುದು ಕಂಡುಬರುತ್ತದೆ ಎಂದಿದ್ದಾರೆ.[೧೯] ಆದರೆ ಕೊಂಗಾಳ್ವರಿಗೂ, ಈ ಕದಂಬರಿಗೂ ಮಧುರ ಸಂಬಂಧವಿದ್ದ ಸಂದರ್ಭಗಳು ಕಾಣಬರುವುದರಿಂದ, ಚೆಂಗಾಳ್ವರು ಕದಂಬರ ರಾಜ್ಯವನ್ನು ಆಕ್ರಮಿಸಿದ್ದು, 'ಕದಂಬ ಕುಲಾನ್ತಕ ತೆಂಜಙ್ಗಾಟ್ವಿ' ಎಂಬ ಬಿರುದಿನ ಘಟನೆಯ ಹಿನ್ನೆಲೆಯಲ್ಲಿ ಪರಿಭಾವಿಸುವುದು ಸೂಕ್ತ ಎನಿಸುತ್ತದೆ. ಕಾರಣ ಚಂಗಾಳ್ವರ,

ಕೊಂಗಾಳ್ವರ ನಡುವಣ ಯುದ್ಧದಲ್ಲಿ ಈ ಕದಂಬರು ಕೊಂಗಾಳ್ವರ ಪರವೇ ಇದ್ದರು. ಇದಲ್ಲದೆ ಈಗಾಗಲೇ ಹೇಳಿದಂತೆ (ಕೃ.ಪೇ. ೨೧) 'ದುದ್ದಮಲ್ಲದೇವ'ನು ರಾಜೇಂದ್ರ ಪೃಥ್ವಿ ಕೊಂಗಾಳ್ವನ ಮಗಳು, ಹೊಯ್ಸಳ ವಿಷ್ಣುವರ್ಧನನ ಪಿರಿಯರಸಿ ಚಂದಲಾ ದೇವಿಯ ತಮ್ಮ ಎಂಬುದು ಶಾಸನೋಕ್ತವಾಗಿದ್ದು ಹೊಯ್ಸಳರ ಮುನ್ನ ಕೊಡಗಿನ ಕದಂಬರು ಹಾಗು ಕೊಂಗಾಳ್ವರ ನಡುವಣ ಮಧುರ ಸಂಬಂಧವೂ ರಾಜಕೀಯವಾಗಿಯೂ ಇತ್ತು ಎಂಬುದಕ್ಕೆ ಸಾಕ್ಷಿ ಆಗುತ್ತದೆ. 'ಮೊಳತೆಯ ದುದ್ದಮಲ್ಲ'ನೆ ಕದಂಬರಲ್ಲಿ ಸನ್ಧಿವಿಗ್ರಹಿ ಯಾಗಿದ್ದವ, ಈಗಾಗಲೇ ಹೇಳಿದಂತೆ ಮುಂದೆ ಹೊಯ್ಸಳ ವಿಷ್ಣುವರ್ಧನನಲ್ಲಿ ಮಾಂಡಲೇಶ್ವರನಾಗಿ 'ದುದ್ದಮಲ್ಲದೇವ' ಎಂಬ ಹೆಚ್ಚು ಗೌರವಯುತ ಸಂಬೋಧನೆ ಯನ್ನು ಹೊಂದಿರುವಂತಿದೆ.

ಇನ್ನು ರೈಸರು ಈ ಶಾಸನದ 'ಅಣ್ಣತ್ತಮ್ಮನ' ಎಂಬುದನ್ನು ಅಣ್ಣ ತಮ್ಮಂದಿರು ಎಂದು ರೂಢಿವಾಚಿಯಾಗಿ ಸಹಜವಾಗಿ ಅರ್ಥೈಸಿರುವಂತಿದೆ. ಕೊಡಗಿನ 'ಅಮ್ಮಕೊಡವರ' ಮನೆ ಹೆಸರು ಗಳಲ್ಲಿ (ಮನೆಪೆದಗಳು), 'ಅಮ್ಮ' ಅಥವಾ 'ಅಮ್ಮನ' ಎಂಬ ಶಬ್ದವು ಮನೆ ಹೆಸರಿಗೆ ಸೇರಿಕೊಂಡು : ಊರಳಮ್ಮನ, ಪಾಡಿ ಯಮ್ಮನ, ಬಾಚಮ್ಮಂಡ ಇತ್ಯಾದಿಗಳು ಕಾಣಬರುತ್ತವೆ. ೧೧ನೇ ಶತಮಾನದ ಮೂಲವ್ವಿ ಶಾಸನದಲ್ಲಿಯೂ 'ಗಾವುಣ್ಡ ರಾಚಮ್ಮನ ಸಾಕ್ಷಿ' ಎಂದಿರುವುದನ್ನು ಈ ಹಿನ್ನೆಲೆಗಳಲ್ಲಿ ಗಮನಿಸಿದರೆ ಕೊಂಗಾಳ್ವರ ಕಾಲಕ್ಕೆಯೆ ಅಮ್ಮಕೊಡವರ ಗೌಡ ಜನಾಂಗದವರ ಮನೆಪೆದಗಳಿದ್ದುವು ಎಂಬ ಊಹೆಗೆ ಅವಕಾಶವಾಗುತ್ತದೆ. ಈ ಎರಡೂ ಶಾಸನಗಳಲ್ಲಿಯ ಸೂಚಿತ 'ಅಣ್ಣತ್ತಮ್ಮನ; ರಾಚಮ್ಮನ' ಶಬ್ದಾಂತ್ಯಗಳನ್ನು ಷಷ್ಠಿಪ್ರತ್ಯಯ ಲಕ್ಷಣವನ್ನು ಮೀರಿ ನೋಡುವು ದಾದರೆ ಕೊಡಗಿನ ಅಮ್ಮಕೊಡವ, ಹಾಗು ಗೌಡರ ಮನೆಪೆದಗಳ ಪ್ರಾಚೀನತೆಗೆ ಒಂದು ಆಯಾಮ ದೊರಕಬಹುದಾಗಿದೆ. ಅದೇ ಯಡೂರು ಶಾಸನದಲ್ಲಿ ಬರುವ 'ಅಯ್ಯನಂಕಕಾರ, ಶಿವಪಾದ ಶೇಖರ ದುದ್ದರಸನು', 'ಬ್ರಾಹ್ಮಣರ್ಗೆ ಚತ್ರಮಂ' ನಿಲಿಸಿರುವಲ್ಲಿ, ಆ ಶಾಸನದ ಕಾಲಕ್ಕೆ ಯಡೂರಿನ ಅಬ್ಬಿಮಠದ ವೀರಶೈವ ಗುರುವಿನ ಅಸ್ತಿತ್ವ ಹಾಗು ಬ್ರಾಹ್ಮಣರ ಅಸ್ತಿತ್ವದ ಸೂಚನೆಯೂ ದೊರಕು ವಂತಿದೆ. ದೊಡ್ಡಮಳತೆಯ ಶಾಸನಗಳಲ್ಲಿಯ ಉಕ್ತ ಸಂದರ್ಭಗಳು ಜಾನಪದ ಕಥಾ ಸಂದರ್ಭಗಳೂ ಈ ಅಂಶಗಳಿಗೆ ಅವುಗಳ ಭವಿಷ್ಯದ ಒತ್ತಾಸೆಯಂತೆ ಕಂಡುಬರುತ್ತವೆ. ದೊಡ್ಡಮಳತೆಯ ಹೊಸ ಶಾಸನವು ಹೀಗೆ ಕ್ರಿ.ಶ. ೧೧೯೫ರ ಸುಮಾರಿನದಾಗಿ ಇತಿಹಾಸ, ಜಾನಪದ, ಸಾಂಸ್ಕೃತಿಕ ಚಿಂತನೆಗಳಿಗೆ, ಪೂರಕ ವಿವೇಚನೆಗೆ ಅವಕಾಶ ಮಾಡುವುದು ವಿಶೇಷವೆನಿಸುವಂತಿದೆ. ಪೂರ್ಣಶಾಸನ ಶಿಲೆಯ ಉಳಿದ ಭಾಗ ದೊರಕಿದರೆ ಮತ್ತಷ್ಟು ವಿಷಯಗಳು ಲಭ್ಯವಾದೀತು.

**ಕುಸಬೂರು ಗದ್ದೆ ಏರಿ ಶಾಸನ**

ಬೇಳೂರು ಮತ್ತು ಸೋಮವಾರಪೇಟೆಯ ನಡುವಣ ಸೋಮವಾರಪೇಟೆ ತಾಲೂಕಿನ ಗ್ರಾಮ ಕುಸಬೂರು. ಬೇಳೂರಿನಿಂದ ಪಶ್ಚಿಮಕ್ಕೆ ಕಾಡುದಾರಿಯಲ್ಲಿ ಸಾಗಿ, ಬೇಳೂರು ಮಠದ ಗದ್ದೆ ಬದಿಯ ಏರಿಯಲ್ಲಿ ನೋಡಿದರೆ ಈ ಶಾಸನ ಕಾಣುತ್ತದೆ. ಅನೇಕ ಅಕ್ಷರಗಳು ಮಸಕಾಗಿ, ಪಾಠ ನಿರ್ಣಯಕ್ಕೆ ತೊಡಕಾಗುತ್ತದೆ. ೨೧(?) ಸಾಲಿನ ಈ ಶಾಸನವು ಒಂದು ವೀರಶಾಸನವಾಗಿ ಕೊಂಗಾಳ್ವರ ಕಾಲದ ಕಾಳಗವೊಂದನ್ನು ನಿರ್ದೇಶಿಸುತ್ತದೆ. ಶಾಸನದ ಮೇಲಿನ ಹಂತದ ಶಿಲ್ಪದ ಮೂಲಕ ಕವಿಲೆಯ ಕುರಿತಾದ ಶಾಪಾಶಯ ಸಂಕೇತವನ್ನು ಕರು ಮತ್ತು ಹಸುವಿನಿಂದ ಸೂಚಿಸ ಲಾಗಿದೆ. ಕೆಳಗಿನ ಹಂತದ ಶಿಲ್ಪದಲ್ಲಿ ಕದನದ ಉಗ್ರತೆಯನ್ನು ತೋರಲಾಗಿದೆ. ಕೊಂಗಾಳ್ವ ವೀರನೊಬ್ಬನ ಶಿಲ್ಪಮಾದರಿಯನ್ನು ಇದು ತೋರುತ್ತದೆ. ಅಕ್ಷರಗಳ ಗಾತ್ರವು, ಸುಮಾರು ೫ ಸೆಂ.ಮೀ. ಅಗಲ ೪ ಸೆಂ.ಮೀ. ಎತ್ತರವಾಗಿದ್ದು ಸುಮಾರು ೪$^{1}/_{3}$ ಅಡಿ ಎತ್ತರದ ಶಿಲೆಯ ಮೇಲೆ ಶಾಸನವನ್ನು ಕೆತ್ತಲಾಗಿದೆ. ತುಸು ಸಾಹಿತ್ಯಕ ಸ್ಪರ್ಶದೊಡನೆ ರಣರಂಗವನ್ನು ವಿವರಿಸಲಾಗಿದೆ. 'ರಳಕೋಲಾಹಲ', 'ರಣಾವರ್ಗೇಳಿಯುಂ ಕಲ್ ಕಳಯುಮುಂ' : ಅಂದರೆ 'ಕಲ್‌ಬೆಟ್ಟಗಳ ನಡುವಣ ರಣರಂಗವನ್ನು 'ಕೇಳಿ'ಯಾಗಿ ಭಾವಿಸುವ ವೀರ ಎಂಬ ಭಾವವಿರುವಂತಿದೆ. ಈ ಶಾಸನ ಪ್ರದೇಶವೂ ಹಾಗೆಯೇ ಇದೆ. ಆದರೆ ಕೆಲವೆಡೆ ಪಾಠ ಅಸ್ಪಷ್ಟವಾಗಿ, ಹಲವು ಶಬ್ದಗಳಿಗೆ ಅರ್ಥವನ್ನು ನಿಖರವಾಗಿ ಹೇಳಲು ಸಾಧ್ಯವಾಗಿಲ್ಲ.

ಶಾಸನದ ಮೇಲ್ಭಾಗದಲ್ಲಿ 'ವಿಜಯ' ಸಂವತ್ಸರ ಎಂಬ ಕಾಲ ಸೂಚನೆ ತೋರಿಬರುವಲ್ಲಿ ವೀರಚೋಳ ಕೊಂಗಾಳ್ವನ ಆಳ್ವಿಕೆಯನ್ನು ಹೇಳಿರುವಲ್ಲಿ, ಶಾಸನದ ಕಾಲವನ್ನು ಕ್ರಿ.ಶ. ೧೧೭೩ ಎಂದು ತತ್ಕಾಲಕ್ಕೆ ನಿರ್ಧರಿಸಬೇಕಾಗುತ್ತದೆ. ಕೊಡಗು ಜಿಲ್ಲೆಯ ಶಾಸನ ಸಂಪುಟವು ಸೋ.ಪೇ. ೮೭ನೇ (ನಂದಿಗುಂದ) ಶಾಸನದ ಹಾಗು ಸೋ.ಪೇ. ೫೩ನೇ (ಗಣಗೂರು) ಶಾಸನದ ಸಂವತ್ಸರದ ಆಧಾರದ ಮೇಲೆ ಮನ್ಮಥ ಸಂವತ್ಸರ ಇತ್ಯಾದಿ ಉಕ್ತ ಕಾಲಮಾನ ವನ್ನು ಗಮನದಲ್ಲಿರಿಸಿಕೊಂಡು ವೀರಚೋಳ ಚಂಗಾಳ್ವದೇವನ ಕಾಲವನ್ನು ಕ್ರಿ.ಶ. ೧೧೭೫ ಎಂದು ನಿರ್ಧರಿಸಿದೆ.[೨೦] ಈ ಹಿನ್ನೆಲೆಯ ಕಾರಣ, ವಿಜಯ ಸಂವತ್ಸರವು ಕ್ರಿ.ಶ. ೧೧೭೩ ರಲ್ಲಿ ಬರುವಲ್ಲಿ ಕೊಡಗಿನಲ್ಲಿ ಅವನ ಆಳ್ವಿಕೆಯ ಆರಂಭವನ್ನು ಕ್ರಿ.ಶ. ೧೧೭೫ರ ಕಾಲದಿಂದ ಸೂಚಿಸುವ ಬದಲು ಎರಡು ವರ್ಷ ಮುಂಚಿತ ವಾಗಿಯೇ ಸೂಚಿಸಲು ಸದ್ಯದ ಶಾಸನವು ನೆರವಾಗಿದೆ.

**ಶಾಸನದ ಸಾರಾಂಶ**

ಅಸಹಾಯ(!)ಶೂರ, ಭುವನವೀರನೆನಿಸಿದ (ಕೊಡಗಿನಲ್ಲಿ ಕೊನೆಯ ಸಾಮಂತನಾಗಿ ಆಳಿದ ಕೊಂಗಾಳ್ವರ ದೊರೆ ಎಂದಿರು ವಲ್ಲಿ) ವೀರಚೋಳ ಕೊಂಗಾಳ್ವದೇವನ ಆಳ್ವಿಕೆಯು ನಡೆದಿದ್ದ ಸಮಯ. ಅವನ ಅಧೀನ ಅರಸನಾಗಿ ರಳಕೋಲಾಹಳ ಕೊಂಗನೆ ನಿಸಿದ್ದ ನಿಜಮಾನಯನು ವಿಗಬಾಬ್ಬಿ (ವಿಗಡಾಬ್ಬಿ!) ಚೋಳ ಕೊಂಗಾಳ್ವನ ಬೆಸದಿಂದ ಬಹುಶಃ ಆಕ್ರಮಣಕ್ಕೆ ಬಂದ ಕೇರಳನಾಡಿನ ಇಮದ್ದೇಯರಸ ಕುಂಞ ಎಂಬುವನೊಡನೆ ಯುದ್ಧ ಮಾಡಿದ

ಸಂದರ್ಭದಲ್ಲಿ ನಿಜಮಾನಯನು ಅವನನ್ನು ಇರಿದು ಕೊಂದ. ಆ ಸಂದರ್ಭದಲ್ಲಿ ಕೊಂಗಾಳ್ವರ ಸೈನಿಕ ಶೂರ ಮಣ್ಣರನೂ ಶತ್ರು ವೀರನನೊಬ್ಬನನ್ನು ಕೊಂದ. ಆಕ್ರಮಿತವಾಗಿದ್ದ ಯರೆಯಘ (=ಯರೆಘಯ= ಯಳಿಘಟಿ(!) =ಉಲುಗುಲಿ) ಎಂಬ ಊರನ್ನು ನಿಜಮಾನಯನು ಮರುವಶ ಮಾಡಿಕೊಂಡ. ಈ ಸಂದರ್ಭದಲ್ಲಿಯೆ ಮಣ್ಣರನಿಗೆ ವೀರಭೂದತ್ತಿಯನ್ನು ನೀಡಿರುವಂತಿದೆ.

ಶಿಲ್ಪದ ದೃಷ್ಟಿಯಿಂದ, ಶತ್ರುವಿನ ರುಂಡವನ್ನು ಹಿಡಿದಿರುವವನು ನಿಜಮಾನಯನಾಗಿದ್ದು, ಅವನ ರಣಕೋಲಾಹಲದ, ರಣಕೇಳಿಯು ಚಿತ್ರಿತವಾಗಿದೆ. ಶಾಸನ ಸಂಪುಟವು (ಎ.ಕ. ಸಂ.೯) ವೀರಚೋಳ ಕೊಂಗಾಳ್ವನ ಕಾಲವನ್ನು ಕ್ರಿ.ಶ. ೧೧೭೫ಕ್ಕೆ ನಿರ್ಧರಿಸಿದ್ದರೂ, ಈ ಪ್ರಬಂಧದಲ್ಲಿ ಮುಂದೆ ತಿಳಿಸಿರುವ ಅಪ್ರಕಟಿತ ಚೌಡ್ಲು ಶಾಸನದಿಂದ (ಚೌಡ್ಲಯ್ಯನ ಕಲ್ಲು) ಅವನ ಕಾಲವನ್ನು ಕ್ರಿ.ಶ. ೧೧೮೬ರ ವರೆಗೂ ಸಾಗಿಸಿ ಸೂಚಿಸಬಹುದಾಗಿದೆ. ಕಳೆದ ವರ್ಷ ಪತ್ರಿಕೆಯಲ್ಲಿ ಕೊಂಗಾಳ್ವ ವಂಶದ ನಿಜ ಅರಸ ಎಂಬುವನ ಹಾಗು ಅವನ ವೀರಭಟರು ರಾಜ್ಯ ರಕ್ಷಣೆಗೆ ಹೋರಾಡಿ ಮಡಿದ ಕುರಿತಾದ ಶಾಸನವೂ ಸೋ.ಪೇ. ತಾಲೂಕು ಚಿಕ್ಕತೋಳೂರಿನ ಬಸದಿಯಲ್ಲಿ ಪತ್ತೆಯಾದ ಬಗ್ಗೆ ಪ್ರಕಟನೆ ಬಂದಿದೆ.[೨೧] ಬಹುಶಃ ನಿಜಮಾನಯನಿಗೆ 'ನಿಜ ಅರಸದೇವ' ಎಂಬ ಹೆಸರಿದ್ದು ಚಿಕ್ಕತೋಳೂರನ್ನು ಆಳುತ್ತಿದ್ದವನಿರಬೇಕು. ಕುಸಬೂರು ಪ್ರದೇಶವು ಅದಕ್ಕಿಂತ ದೊಡ್ಡದಿದ್ದು ವಿಗಚಾಬ್ಬಿ (ವಿಗಡಾಬ್ಬಿ!) ಚೋಳಕೊಂಗಾಳ್ವನು ಅಲ್ಲಿ ಆಳುತ್ತಿದ್ದು, ನಿಜಮಾನಯ ಅವನಿಂದ ಆದೇಶಿತನಾಗಿ ಇಮ್ಮದ್ದೇಸಯರಸ ಕುಂಞಯೊಡನೆ ಕಾದು ಜಯ ತಂದಿರಬೇಕು. ಈ ಶಾಸನದಿಂದ ವೀರ ಚಂಗಾಳ್ವ ದೇವನ ಹೆಚ್ಚಿನ ಅವಧಿಯ ಆಳ್ವಿಕೆಯ ಮಾಹಿತಿ, ಬಹುಶಃ ಅವನ ಮಗನೋ ಅಥವಾ ಸೋದರನೋ ಆದ (ಅಥವಾ ವಿಗಡಾಬ್ಬ=ವೀರ ಎಂದು ಅವನಿಗೇ ಅನ್ವಯವಾಗಿಯೋ!) ವಿಗಚಾಬ್ಬಿ ಚೋಳ ಕೊಂಗಾಳ್ವನ ಆಳ್ವಿಕೆಯ ವಿಷಯವೂ ತಿಳಿಯುತ್ತದೆ. ಇಂದಿನ ಉಲುಗುಲಿಗೆ ಕ್ರಿ.ಶ. ೯೧೧ರ ಕೊಡಗಿನ ಗುಡಗೂರು ಶಾಸನದಲ್ಲಿ 'ಯಳಿಘಟಿ' ಎಂಬ ಸ್ಥಳನಾಮ ವಿದ್ದದ್ದು[೨೧೪] ೧೨ನೇ ಶತಮಾನದಲ್ಲಿ ಯರೆಘಯ ಎಂಬ ಹೆಸರಾಗಿ ಜನಪದ ಮಾರ್ಪಾಟೂ ಆಗಿರಬಹುದೆ? ಕೊಡಗಿನ ಕೊಂಗಾಳ್ವ ಭಟರ ಶೌರ್ಯದ ಚಿತ್ರವೂ ಇಲ್ಲಿ ದೊರಕುತ್ತದೆ.

**ಶಾಸನದ ಪಾಠ**

೧ ಸ್ವಸ್ತಿ . . . . . ವಿಜಯ [ಸಂವತ್ಸರದ] . . . . . .
೨ ಕೊಂಗಾ . [ಚಂದ್ರ ಸೂರ್ಯ] ಮಸಮ . ಸ
೩ ಹಾಯ[ಣ] [ಚಿತ್ರ] ಳ ಶೂರ ತಾ[ಗಿ]
೪ ಭುವನ[ವೀರ] [ಕರು ಮತ್ತು ಗೋವು] ವೀರ ಚೋಳ
೫ ಕೊಂಗಾಳ್ವದೇವರು ಪ್ರಥ್ವೀರಾಜ್ಯಂಗೆಯ್ಯುತಿ
೬ ರೆಲು ರ[ಳ] ಕೋಳಾಹಳಯ ಕೊಂಗ ಕಟಿನಿಯ ಬೂ
೭ ರ ನಿಜಮಾನಯ ಪಸತಿಪ ವಿಗಚಾಬ್ಬಿ ಚೋಳ ಕೊಂಗಾ
೮ [ಳ್ವ] ದೇವಪನ ರಣಾವರ್ಗ್ಗೇಳಿಯುಂ ಕಲ್ಕ[ಳ]ಯುಮು[ಂ] ಕೊ
೯ ಲ್[ಿ] ನಿ ಪ್ಪ ನಿಜಮಾನಯ ಹತ ಇಮದ್ದೇಸಯರಸ ಕುಂ[ಞ/ನ್ನಿ!]
೧೦ . ಗವ ಮಣಯ ಮದಕರಳರ ಕಲಿಮತಿವರಾಜ ತನಯದಳ
೧೧ [ವೈರಿ ರುಂಡವನ್ನು] ವಿಣಯಲಿ ನಿಜಮಾ
೧೨ [ಹಿಡಿದ ವೀರ] ನಯ ಕಾದಿಜ಼ುದ
೧೩ ಕೊಂಗಾಳುವ ಬಟ
೧೪ ಹ[ಳ]ರ ಮಣ್ಣರ ಬ
೧೫ [ಹತರಾಗಿರುವ ಕೆಳಗೆ ಬಿದ್ದಿರುವ ಶತ್ರುಗಳು] [ಂ]ಟು ಭುಸಾನವರ ಎ
೧೬ ಸಳ್ವ ಕವಿತ್ತಿಯ ಕೊ[ನ್ದ]
೧೭ ....ಕಮಾನೆ ಯರೆಯಘ ಗಸಿದ . ನೃಪ [ಸವಿ] .
೧೮ . . . [ಬ] ಣಾಸಿಯು ಮು . . ಮ[ಂ]ತಾಗಿಪ್ಪ ಸವಿಪ ಮಣ್ಣರ
೧೯ . . . ಜ . . . . . . . .
೨೦ . . . ನಿ . . . . . . . .
೨೧ (ಮುಂದೆ ಇರುವ ಅಂಚಿನ ಕೊನೆ ಸಾಲಿನ ಅಕ್ಷರಗಳು ಸ್ಪಷ್ಟವಾಗಿ ಕಾಣುವುದಿಲ್ಲ)



## ಚೌಡ್ಲುವಿನ ವೀರಗಲ್ ಶಾಸನ (ಚೌಡ್ಲಯ್ಯನ ಕಲ್ಲು)

ಚೌಡ್ಲು, ಸೋಮವಾರಪೇಟೆಯಿಂದ ಸುಮಾರು ಒಂದುವರೆ ಕಿ.ಮೀ. ವಾಯುವ್ಯಕ್ಕಿರುವ ಪ್ರಾಚೀನ ಗ್ರಾಮ. ಶಾಸನೋಕ್ತವಾಗಿ ಚೆಂಗಾಳ್ವ ಮತ್ತು ಕೊಂಗಾಳ್ವರ ಕಾಲದಿಂದಲೂ ಪ್ರಸಿದ್ಧಿಗೊಂಡಿರುವ ಗ್ರಾಮ; ಪ್ರಾಗೈತಿಹಾಸಿಕ ಆಚರಣೆಗಳನ್ನು ಉಳಿಸಿಕೊಂಡಿರುವ ಗ್ರಾಮ.

ಮೂರು ಹಂತಗಳ ಶಾಸನಶಿಲ್ಪದಲ್ಲಿ ಶೂಲದೊಡನೆ ವೀರನ ಹೋರಾಟದ ಚಿತ್ರ, ಅಪ್ಸರಾಯಾನ ಹಾಗು ಕೈಲಾಸ ಸೂಚಿತ ಚಿತ್ರವಿದೆ. ಮೂರು ಪಟ್ಟಿಕೆಗಳಲ್ಲಿ ಶಾಸನ ಲಿಖಿತವಿದ್ದು ಮೇಲಿನ ಎರಡು ಪಟ್ಟಿಕೆಗಳ ಅರೆಭಾಗದಲ್ಲಿ ಅಕ್ಷರಗಳು ತೀರ ಅಸ್ಪಷ್ಟವಾಗಿವೆ. ಶಾಸನದ ನಿಖರ ಕಾಲವನ್ನು ಅಕ್ಷರಗಳ ಅಸ್ಪಷ್ಟತೆಯಿಂದಾಗಿ ಅನುಮಾನದಿಂದ ಸೂಚಿಸಲಾಗಿದೆ. ಮೊದಲಪಟ್ಟಿಕೆಯ ಎರಡನೆಯ ಸಾಲಿನಲ್ಲಿ 'ಪ್ರಭವ' ಅಥವಾ 'ಪರಾಭವ' ಸಂವಂತ್ಸರವೇ? ಹಾಗು 'ಪಸತಿ' ಎಂಬ ಶಬ್ದವನ್ನು ನಿರ್ಧರಿಸಲು ಕಷ್ಟವಾಗಿದೆ. ಶಾಸನದಲ್ಲಿ ವೀರ ಕೊಂಗಾಳ್ವ ದೇವನ ಹೆಸರು ಬರುವಲ್ಲಿ 'ಪ್ರಭವ' ಸಂವತ್ಸರವು ಕ್ರಿ.ಶ. ೧೧೪೭ ಅಥವಾ ಕ್ರಿ.ಶ. ೧೨೦೭ ಆಗುವಲ್ಲಿ ಅವನ ಕಾಲಕ್ಕೆ ಹೊಂದಾಣಿಕೆ ಆಗುವುದು ಕಷ್ಟ. ಕೊಡಗಿನಲ್ಲಿ ಸದ್ಯ ತಿಳಿದಿರುವ ಕೊಂಗಾಳ್ವರ ಕಾಲ ಕ್ರಿ.ಶ. ೧೧೭೫, ಈ ಹೊಸ ಶಾಸನದಿಂದ ಹೆಚ್ಚೆಂದರೆ ಕ್ರಿ.ಶ. ೧೧೮೬ರ ವರೆಗೆ ಕೊಂಗಾಳ್ವರ ಆಳ್ವಿಕೆಯನ್ನು ಗಮನಿಸಬಹುದು. ನಂತರ ಹಾಸನ ಜಿಲ್ಲೆಯ ಮೊಳತೆಯಬೀಡಿಗೆ ಮಾಲಂಬಿಯಿಂದ ರಾಜಧಾನಿ ಬದಲಾಯಿಸಿದ ವಿಷಯವಿದೆ.[೨೨] ಹೀಗಾಗಿ ಸದ್ಯದ ಚೌಡ್ಲುವಿನ ಶಾಸನದ ಕಾಲನ್ನು 'ಪರಾಭವ' ಸಂವತ್ಸರಕ್ಕೆ ತೆಗೆದುಕೊಂಡರ ಶಾಸನೋಕ್ತ 'ವೀರ ಕೊಂಗಾಳ್ವ ದೇವ'ನ ಕಾಲಕ್ಕೆ ಸಮಂಜಸವಾಗುತ್ತದೆ.



**ಶಾಸನದ ಪಾಠ**

೧ ಶ್ರೀ ಸ್ವಸ್ತಿ ಸಕವರಿ . . . . . ಕೊಂ . . . .

೨ ಪ[ರ]ಬವ ಸಂವ . ರದ[?] . . . .

೩ ಂಡ ಕೊಂಗಾ[ಳ್ವ] . . . . . . . .

೪ . ರ ವಾಗಿ ವಿ . ಬ . . . ಗ . . . ಗ

೫ ರಳವೀರ ಕೊಂಗಾಳುವ [ಬಸತಿ] . . .

೬ ಂಗಳ್ವದೇವರಸರೂ . . . . . .

೭ ಣ್ಣ ಭೂಮಿಗೆ ಕೊ [ಙ್ಗ] ರ . . . .

೮ ಣ್ಣ ಭೂಮಿಗೆ ಕೊಟ ಗದ್ಯಾಣ ೧೨

೯ ಕಿಣ್ಣಸಿಳ ಹೊನ್ನು ಗದ್ಯಾಣ ೬೦ ಕ್ಯೆಸಿ [ದ] . . .

೧೦ . ಮಬನ್ನಿಕಣ್ಣುಗ ಕಟನಿ ಕೊ ಗ೧೨ಕೆ ಸಾ [ಕ್ಷಿ]

ಇದು ವೀರ ಕೊಂಗಾಳ್ವನ ಆಳ್ವಿಕೆಯಲ್ಲಿ ವೀರನೊಬ್ಬನಿಗೆ ದಾನಕೊಟ್ಟ ವಿಷಯವನ್ನು ಹೇಳುತ್ತದೆ. ಆ ಕಾಲದ ಆರ್ಥಿಕ ಮಾನವನ್ನು ಸೂಚಿಸುತ್ತದೆ.

ಶಾಸನದಲ್ಲಿ ಕೈಲಾಸ ದೃಶ್ಯವಿರುವಲ್ಲಿ ಮಡಿದ ವೀರ ಶಿವಧರ್ಮಿಯಾಗಿದ್ದುದರ ಸೂಚನೆಯಾಗುತ್ತದೆ. ಶಾಸನದಲ್ಲಿ 'ಬಸತಿ' ಎಂಬ ಶಬ್ದವನ್ನು ಊಹಿಸುವಲ್ಲಿ ಅದಕ್ಕೆ ಕೊಟ್ಟ ದಾನವಿರಬಹುದು ಎಂದರೆ ಯಕ್ಕೋಟಿ ಜಿನಾಲಯದ ಸಂದರ್ಭವಿರಬಹುದೆಂದಾಗುತ್ತದೆ. ಅಥವಾ ಕೊಂಗಾಳ್ವರು, ಈ ಹೊತ್ತಿಗೆ ಶಿವಧರ್ಮವನ್ನನುಸರಿಸಿದವರಾಗಿ, ತಮ್ಮ ಶಿವಾರಾಧನೆಯ ಸೂಚಕವಾಗಿ, ಶಿಲ್ಪವಿಡಿಸಿ, ಜಿನಧರ್ಮಿಯಾದ ವೀರನು ಮಡಿದ ಕಾರಣ ಬಸದಿಗೆ ದಾನ ಕೊಟ್ಟಿರಬಹುದಾದ ಸಂದರ್ಭವೂ ಆಗಬಹುದು. ಜನಪದೀಯ ವಾಗಿ ಈ ಶಾಸನವನ್ನು **ಚೌಡ್ಲಯ್ಯನ ಕಲ್ಲು** ಎಂದು ಕರೆದು ವರ್ಷ ಬಿಟ್ಟು ವರ್ಷದಲ್ಲಿ 'ಹರಿಸೇವೆ'ಯನ್ನು ಇಲ್ಲಿ ಇಂದಿಗೂ ಆಚರಿಸಲಾಗುತ್ತಿದೆ. ಕುಸಬೂರು ಹಾಗು ಚೌಡ್ಲು ಶಾಸನದ ವೀರರ ಶಿಲ್ಪಗಳಲ್ಲಿ ಕಾಲಾನುಗುಣ ವೇಷಭೂಷಗಳೂ ಬದಲಾವಣೆ ಕಾಣುತ್ತವೆ.

## ಬೆಂಗಳೂರು ಜಿಲ್ಲೆ ಹುಚ್ಚೀರಯ್ಯನ ದೊಡ್ಡಿ ಶಾಸನಗಳು[೨೩]

ಚನ್ನಪಟ್ಟಣ ತಾಲೂಕಿನ ಹುಚ್ಚೀರಯ್ಯನ ದೊಡ್ಡಿಯು ರಾಮನಗರ-ಚೆನ್ನಮಾನಹಳ್ಳಿ-ಬನ್ನಿಕಪ್ಪೆಯಿಂದ ಚನ್ನಪಟ್ಟಣಕ್ಕೆ ಹೋಗುವ ದಾರಿಯಲ್ಲಿದೆ. ಈ ದೊಡ್ಡಿಯ ಮಾಳದಲ್ಲಿ, ತ್ರಿಶೂಲ ಸಂಕೇತವಿರುವ ಶಾಸನೋಕ್ತ ಶಿಲೆಯಿದೆ; ಹಾಗೆಯೇ ಶಾಸನೋಕ್ತ ಕುದುರೆಯ ಶಿಲ್ಪ, ದೇವಶಿಲ್ಪಗಳು, ಮಾಸ್ತಿಗಲ್ಲು ಹಾಗು ಮಾನವ ರೇಖಾ ಶಿಲ್ಪಗಳೂ ಇಲ್ಲಿ ಕಾಣಬರುತ್ತವೆ. ಚನ್ನಪಟ್ಟಣ, ಮದ್ದೂರು, ಮಾಗಡಿ, ಬನ್ನೂರು (ಡೊಳ್ಳಿನಮ್ಮಗುಡಿ) ಕಡೆಯ ಗುಡಿಗಳಿಂದ ಈ ಶಿಲ್ಪಗಳನ್ನು ತಂದಿಡಲಾಗಿದೆ ಎಂದು ಸ್ಥಳೀಯರು ಪರಂಪರೆಯ ಸಂಗತಿಯನ್ನು ಹೇಳುತ್ತಾರೆ. ಹಾಗೆ ತಂದವರು ಮಳವಯ್ಯ ಮತ್ತು ಅಣ್ಣೇಗೌಡ ಎಂಬುವರಂತೆ. ಅಂದರೆ ಈ ಪ್ರದೇಶದಿಂದ ವಲಸೆ ಬಂದವರು ಇದಕ್ಕೆ ಕಾರಣರಾಗಿದ್ದಾರೆ. ಕುರುಬ ಜನಾಂಗದವರು ಇಲ್ಲಿ ವಿಶೇಷವಾಗಿ ಇದ್ದಾರೆ.

ತ್ರಿಶೂಲ ಹಾಗು ವೃತ್ತಗಳ ರೇಖಾಶಿಲ್ಪವಿರುವ ಗ್ರಾನೈಟ್ ಶಿಲೆಯೊಂದು ಇಲ್ಲಿ ನಿಂತಿದ್ದು ಶಾಸನದ ಸಾಲನ್ನು ಹೊಂದಿದೆ. ೧೬-೧೭ನೇ ಶತಮಾನದ ಲಿಪಿಯಲ್ಲಿ ಕಡೆದಿರುವ ಈ ಸಾಲಿನ ಅಕ್ಷರಗಳು ವಿಜಯನಗರದ ಅಂತ್ಯಕಾಲದ ಅಗಲವಾದ ಲಿಪಿಶೈಲಿಯನ್ನು ಹೋಲುವಂತಿವೆ. ಅಕ್ಷರಗಳು ೭೧/೨ ಸೆಂ.ಮೀ. ಅಗಲ, ೫ ಸೆಂ. ಎತ್ತರ ೦.೨ ಮಿ.ಮೀ. ಆಳವಾಗಿ ಕೆತ್ತಲ್ಪಟ್ಟು ಎದ್ದು ಕಾಣುತ್ತವೆ. ತ್ರಿಶೂಲದ ಕೆಳಗಿರುವ ಸಾಲಿನ ಪಾಠ ಹೀಗಿದೆ.

ತ್ರಿಶೂಲ ಚಿತ್ರದ ಶಾಸನದ ಪಾಠ :

ಶ್ರೀ ಯಿಶ್ವರೇಶ್ವರ



ತ್ರಿಶೂಲ ಚಿಹ್ನೆಯು, ಶಿವಗಣಗಳ ಅಥವಾ ಶಿವನ ಅಂಶಾಯುಧ ಅವತಾರ ಸಂಕೇತವಾಗಿದೆ. ಇದು ಕುರುಬ ಜನಾಂಗದ ಆರಾಧನೆಯ ಕಾರಣ ಭೈರವನು ಶಿವಗಣದವನಾಗಿ ಸಂಕೇತಗೊಂಡಿರುವಂತಿದೆ. ಬಹುಶಃ ಮದ್ದೂರಿನಿಂದ ವಲಸೆ ಬಂದ ಕುರುಬ ಜನಾಂಗದವರು ಅಲ್ಲಿಯ ಬೀರೇದೇವರ ಸಂಕೇತ ವನ್ನು ಬೀರೇಶ್ವರ ಎಂಬ ಭಾವದಲ್ಲಿ ಇಲ್ಲಿ ಪೂಜಿಸುತ್ತಿರುವಂತಿದೆ. 'ಯಿಶ್ವರೇಶ್ವ'ರ ಎನ್ನುವಲ್ಲಿ ಜಗದೊಡೆಯ ಈಶ್ವರ ಎಂಬ ಆರೋಪ ದಲ್ಲಿ ಆರಾಧಿಸುತ್ತಿರಬೇಕು. ಈ ಶಾಸನ ಶಿಲಾಸ್ತಂಭವು ತಾಂತ್ರಿಕ ವೃತ್ತ, ಚೌಕ ಆಕೃತಿಯ ರೇಖಾಗೆತ್ತನೆಯನ್ನು ಹೊಂದಿರುವ ಕಾರಣ, ಈ ಪ್ರದೇಶದ ತಾಂತ್ರಿಕ ಆರಾಧನೆಯ ಸೂಚನೆಯಾಗಿಯೂ ಇದು ಕಾಣುತ್ತದೆ. ರಾಮನಗರದ ಜಿಗೇನಹಳ್ಳಿ (ಈಗ ವಿವೇಕಾನಂದ ನಗರ)ಯಲ್ಲಿ ಸುಮಾರು ೪ ಅಡಿ ಎತ್ತರದ ತ್ರಿಶೂಲ ರೇಖಾಶಿಲ್ಪ ಗೆತ್ತನೆಯ ಶಿಲಾಸ್ತಂಭವಿದ್ದು, ಗಡಿ ಗುರುತಿನ ಸಂಕೇತವಾಗಿದ್ದಂತೆ, ಸುಗ್ಗನಹಳ್ಳಿಯ (ರಾಮನಗರ ತಾ) ಕಾಡುಗಳಲ್ಲಿ 'ಮಹಾ ಮಂಡಳೇಸ್ವರ ವೀರ ನಾರಣದೇವ ಒಡೆ[ಯ]' ಎಂಬ ನಾಮವಾಚಿ ಶಾಸನವಿರುವ ಕೆಳಗಣ ದೊಡ್ಡಿಬೆಟ್ಟದ ಹಾದಿಯಲ್ಲಿ ತ್ರಿಶೂಲ ರೇಖಾ ಶಿಲ್ಪಗಳು ಗಡಿಗುರುತುಗಳಾಗಿ ಕಾಣಬರುತ್ತವೆ. ರಾಮನಗರ ದಲ್ಲಿಯೆ ತಾಂತ್ರಿಕ ಆರಾಧನೆಯ ಸಂಕೇತವಾಗಿ ತ್ರಿಶೂಲದ ಮೇಲೆ ನಿಂತ ಹಾಗು ತ್ರಿಶೂಲ ಬಂಧಿತನಾದ ವ್ಯಕ್ತಿಯ ರೇಖಾಶಿಲ್ಪವೂ ಇದ್ದು ತಾಂತ್ರಿಕ ವಲಯದ ನೆಲೆಯಾಗಿ ಚನ್ನಪಟ್ಟಣ ಹಾಗು ರಾಮ ನಗರ ತಾಲೂಕಿನ ಈ ಪ್ರದೇಶಗಳು ಕಾಣಬರುತ್ತವೆ. ಇದಕ್ಕೆ ಪೂರಕವಾಗಿ ಕಲ್ಲೇಶ್ವರ ದೇಗುಲಗಳು ಈ ಪ್ರದೇಶದಲ್ಲಿ ಕಾಣಿಸಿಕೊಂಡು ವಿಜಯನಗರ ಪೂರ್ವದಲ್ಲಿಯೇ ಶಾಸನೋಕ್ತವಾಗಿ ತಮ್ಮ ಅಸ್ತಿತ್ವವನ್ನು ತೋರಿವೆ. ಅದಾಗಿ ಕೇವಲ ಗಡಿ ಗುರುತುಗಳಾಗಿಯೇ ಈ ತ್ರಿಶೂಲ ಶಿಲೆಗಳಿದ್ದುವು ಎನ್ನುವುದಕ್ಕಿಂತ, ತಾಂತ್ರಿಕವೂ ಆಗಿ ಲಿಂಗಮುದ್ರೆಯ ಸಂಕೇತಗಳಾಗಿ ವೀರಶೈವದ ಪ್ರಭಾವ ಸೂಚಿ ಯಾಗಿಯೂ ಕಂಡು ಬರುವಂತಿವೆ.

**ಕುದುರೆ ಚಿತ್ರದ ಶಾಸನದ ಪಾಠ**

೧ ಶ್ರೀ ಅಂಣ ಮಲಿನಾ

೨ ಥ ಎ[ಗ |೧|]ಂಬ ನಿಲಿಕುದುರೆ [ಮೆ]

೩ ರೆ ದ . . .

೪ ಜ . . . .

(ಒಂದೇ ಶಾಸನದ ಪಡಿಯಚ್ಚಿನ ಭಾಗಗಳನ್ನು ಎರಡು ಬಾರಿ ಮತ್ತೆ ಸ್ಪಷ್ಟತೆಗಾಗಿ ಕೆಳಗೆ ತೋರಿಸಿದೆ)

ಇಲ್ಲಿ ಹೊಕ್ಕಳು ಇರುವ 'ಥ' ಮತ್ತು 'ಣ' ಹಾಗು 'ಲ' ಕಾರ ಎರಡು ರೀತಿಯಲ್ಲಿ ದುಂಡಾಗಿ ಬಂದು ವಿಜಯನಗರ ಅಂತ್ಯಕಾಲದ ಲಿಪಿಶೈಲಿ ಎನ್ನುವುದಕ್ಕೆ ಪೂರಕವಾಗಿವೆ.



ಇಲ್ಲಿನ ಕುದುರೆಯು ಶಿಲ್ಪವು ದೊಡ್ಡಸ್ತಂಭದ ಮೇಲೆ ಕಡೆದ ನಿಲಿ ಕುದುರೆಯ ಪ್ರತೀಕ ವಾದ ಕಾರಣ ಹೆಗ್ಗಂಬ ನಿಲಿ ಕುದುರೆ ಎಂದು ಶಾಸನೋಕ್ತವಾಗಿರ ಬೇಕು. 'ಹೆಗ್ಗಂಬ' ಎಂಬುದರ ಅಪಲಿಖಿ ತವಾಗಿ 'ಎಗ್ಗಂಬ' ಎಂಬ ಗ್ರಾಮೀಣ ಸ್ಖಾಲಿತ್ಯ ಶಬ್ದವಾಗಿ ಕಂಡರಣೆಯಾದಂತಿದೆ. 'ಗ' ಮತ್ತು ಅದರ ಒತ್ತಕ್ಷರ '೧' 'ಎ' ಅಕ್ಷರದ ನಂತರ ೨ನೇ ಸಾಲಿನ ಮೇಲೆ ಇವೆ. ಅಂಣ (=ಅಣ್ಣ) ಎಂಬ ಶಬ್ದಕ್ಕೆ 'ಪೂರ್ವಜ'; ಅಣ್ಣದೇವ ಎಂಬ ಶಬ್ದಕ್ಕೆ Mr.Elder brother, ಎಂಬ ಅರ್ಥವನ್ನು ಕಿಟಲ್ ನಿಘಂಟು ನೀಡಿದೆ; ಹಾಗೆಯೇ 'ಅಣ್ಣ' ಎಂದರೆ A respectful compellation for an elder male, affectionate mode of addressing ಎಂದೂ ಹೇಳಿದೆ.

ಈ ಅರ್ಥಗಳ ಹಿನ್ನೆಲೆಯಲ್ಲಿ ನೋಡುವಾಗ 'ಮಲಿನಾಥ', ಅಂಣನಂತೆ ಪೂರ್ವದಿಂದ ಬಂದ ವಂಶಿಕ ಸಂಕೇತ : ದೇವ ರಂಥವ, ಆತ್ಮೀಯ ಎಂದೆಲ್ಲ ಗಮನಿಸಬೇಕಾಗುತ್ತದೆ. ಮಲಿನಾಥ (=ಮಲ್ಲಿನಾಥ), ಬೇಡ ನಾಯಕ ಜನಾಂಗವಾದ ಶ್ರೀ ಶೈಲದ ವೇಕರಿಚುಂಚರ (ಗಿರಿಜನ) ಶ್ರೀ ಶೈಲದ ಮಲ್ಲಿಕಾರ್ಜುನ ಅಂದರೆ

'ಮಲ್ಲಯ್ಯ'ನ ಸಂಕೇತವೂ ಆಗಿರಬಹುದು. ಕುರುಬರ 'ಮಲ್ಲಯ್ಯ', ಕುಮಾರರಾಮನಾಗಿ 'ಬೊಲ್ಲ' ಕುದುರೆಯು ಈ ಹೆಸರಿನಲ್ಲಿ ಸಂಕೇತಗೊಂಡಂತಿದೆ. ವೇಕರಿ ಚುಂಚರ 'ಇರೋಳ್ಳು' ಗುಂಪಿನವರು ಶಿವಪರದೇವತೆಗಳನ್ನು ಪೂಜಿಸುತ್ತಾರೆ. ಈ ಗುಂಪಿನವರಾಗಿ ಕರ್ನಾಟಕದ ಅನೇಕ ಕಡೆ ೧೧ನೇ ಶತಮಾನದಿಂದಲೇ ನೆಲೆಸಿ ನಾಯಕರೆನಿಸಿದ್ದಾರೆ. ಇವರಲ್ಲದೆ ಬಹುಶಃ ಕಂಪಿಲ-ಆನೆಗೊಂದಿ ಕುಮಾರರಾಮನ ಪಡೆಯಲ್ಲಿದ್ದ ಕುರುಬ ಸೈನಿಕ ನಾಯಕರು ಅಲ್ಲಿನ ಮಲ್ಲಾಪುರದಿಂದ ಮಾಗಡಿ ಪ್ರಾಂತಕ್ಕೆ ವಲಸೆ ಬಂದಾಗ ಮಲ್ಲಾಪುರ ದಲ್ಲಿದ್ದ ತಮ್ಮ ಪೂರ್ವಜ ಕುಲದೈವ ಮಲ್ಲಿನಾಥನವಾಹನ ಸಂಕೇತ ವಾಗಿ ಕಡೆದ ಶಿಲ್ಪವನ್ನು ಪೂಜಿಸತೊಡಗಿರಬೇಕು. ನಂತರ ವಂಶಿಕರು ಆ ಶಿಲ್ಪವನ್ನು ಜತನವಾಗಿ ತಂದು ವಲಸೆ ಹೋದ ಕಡೆಯಲ್ಲಿ ಇಟ್ಟು ಪೂಜಿಸುತ್ತಿರುವಂತಿದೆ. ಪಾಳುಗಂಬಗಳಲ್ಲಿ ಕೆತ್ತಿ ನಿಲ್ಲಿಸಿರುವ ಕುದುರೆಯ ಶಿಲ್ಪಗಳು ಹಿರಿಯ ಮಲ್ಲಿನಾಥದೇವರಿಗೆ ನಿಲ್ಲಿಸಿದ ಹರಕೆಯ ಶಿಲ್ಪಗಳಿರುವಂತೆ ತೋರುತ್ತದೆ. ಜೊತೆಗೆ ವಲಸೆ ಬಂದ ವರು ತಾವಿದ್ದ ಕಡೆಯಿಂದ ಈ ಶಿಲ್ಪಗಳನ್ನೂ ಸಾಗಿಸಿ ತಂದಿರು ವಂತಿದೆ.

ಕುಮಾರರಾಮನ ಸಂಬಂಧದಲ್ಲಿ ಅವನ ಕುದುರೆಯಾದ 'ಬೊಲ್ಲ'ನ ಶಿಲ್ಪವನ್ನೂ ಚಪ್ಪಡಿಯ ಮೇಲೆ ಬಿಡಿಸುತ್ತಾರೆ; ಬೇಡ ಜನಾಂಗವು ಅವನನ್ನು ತಮ್ಮ ಕುಲದೇವತೆಯನ್ನಾಗಿಯೇ ಸ್ವೀಕರಿಸಿದೆ. ಕಮ್ಮಟದುರ್ಗದಲ್ಲಿಯ, ಕುಮಾರರಾಮ ದೇಗುಲದ ಮುಂದೆ ಶಿಲಾಫಲಕದ ಮೇಲೆ, ಕುದುರೆ ಚಿತ್ರವಿದ್ದು, 'ಬೊಲ್ಲ'ನದೇ ಆಗಿದೆ.[೨೩] ಕುಮ್ಮಟ ದುರ್ಗದಲ್ಲಿ ಕುಮಾರರಾಮನ ರಾಮೇಶ್ವರನು (ಅವನ ಮನೆ ದೇವರು ಜಟ್ಟಂಗಿಯ ರಾಮೇಶ್ವರ) 'ರಾಮಸ್ವಾಮಿ' ಎಂಬ ಹೆಸರಿನಲ್ಲಿ ಕುರುಬರಿಗೆ ಆರಾಧ್ಯ ದೈವವಾಗಿದ್ದಾನೆ. ಇದು ಕುಮಾರ ರಾಮನ ಮೇಲಿನ ಭಕ್ತಿಯ, ಮೆಚ್ಚುಗೆಯ ಪ್ರತೀಕವೂ ಆಗಿದೆ. ಇದಲ್ಲದೆ ಕುಮಾರರಾಮನ ಆರಾಧನೆಯು 'ಕುರುಬರು, ಬೇಡರು, ಬೆಸ್ತರು, ದೀವರು, ಉಪ್ಪಾರರು ಇತ್ಯಾದಿ ದುಡಿವ ವರ್ಗದ ಜನರಲ್ಲಿ ನಡೆಯುತ್ತ ಬಂದಿದೆ. ಇಲ್ಲಿ ದೊಡ್ಡಿಯ ಮಲಿನಾಥ ಕುದುರೆಯ ಸಂದರ್ಭಕ್ಕೆ ಇದನ್ನು ಹೋಲಿಸಿದರೆ, ಜಟ್ಟಿಂಗ ರಾಮೇಶ್ವರ, ಅಥವಾ ರಾಮಸ್ವಾಮಿ ಹೆಸರಿನ ಬದಲು 'ಮಲಿನಾಥ' ಎಂಬ ಹೆಸರೊಡನೆ ಇಲ್ಲಿ ಕುರುಬರು ಹಾಗು ಇತರರಿಂದ ಆರಾಧನೆ ನಡೆಯುವುದೇಕೆ? ಎನಿಸುತ್ತದೆ. ಇದಕ್ಕೆ ಶ್ರೀಶೈಲದ ಕಡೆಯಿಂದ ವಲಸೆ ಬಂದವರ ಆರಾಧನೆಯ ಪ್ರಭಾವದಿಂದ ಅಥವಾ ಆ ಕತೆಯ ಕೇಳ್ಮೆಯ ಪ್ರಭಾವದಿಂದ ಈ ದೊಡ್ಡಿಯ ಎಲ್ಲ ಜನರೂ ಪೂಜಿಸುತ್ತಿರುವಂತಿದೆ. ಇಲ್ಲಿ ಬರುವ ಅಂಣ ಮಲಿನಾಥ, ವೀರ ದೇವಸ್ವರೂಪನಾದ ಕುಮಾರ ರಾಮನನ್ನೂ ಪ್ರತಿನಿಧಿಸಬಹುದು; 'ಮಲ್ಲಯ್ಯ' ನೊಡನೆಯೂ ಸಮೀಕರಿಸಿರಬಹುದು. ಅಥವಾ ಸಾಂಕೇತಿಕ ವಾಗಿ ಕುದುರೆಗೆ ಆ ಹೆಸರು ನೀಡಿರಬಹುದು. ಮಲ್ಲಿನಾಥನು ಏರಿ ಮೆರೆದ ಕುದುರೆ ಸಂಕೇತ ಆಗಿರಬಹುದು.

**ಚಕ್ಕಲೂರು ಜಗಲಿ ಶಾಸನ**[೨೪]

ಚನ್ನಪಟ್ಟಣ ತಾಲೂಕಿನ ಮುದುಗೆರೆಯ ಹೋಬಳಿಯ ಗ್ರಾಮ ಚಕ್ಕಲೂರು. ಇಲ್ಲಿನ ಸೋಮೇಶ್ವರ ದೇಗುಲದ ಮಠದ ತೋಪಿನಲ್ಲಿ ಅರಳಿಕಟ್ಟೆಯ ಜಗತಿ ಮುಖದಲ್ಲಿ ನಾಲ್ಕು ಸಾಲಿನ ಲಿಪಿಗಳು ೧೮-೧೯ನೇ ಶತಮಾನದ ಶಾಸನವೆಂದು ಸೂಚಿಸುತ್ತವೆ. ಅಕ್ಷರಗಳು ಅಗಲವಾಗಿ ಬಿಡಿಬಿಡಿಯಾಗಿ ಕೆತ್ತನಗೊಂಡಿವೆ. ಭಾಷೆ ಹಾಗು ಶಬ್ದ ಸ್ಖಾಲಿತ್ಯವೂ ಕೆಲಮಟ್ಟಿಗೆ ಇದೆ.



**ಶಾಸನದ ಪಾಠ**

೧ ರಾಮಸಿಂಗೆ ಮಠದ ೨೧ನೆ ಇಸ್ವಿ ಸಂವತ್ಸರ ಈ[ಪ್ಪ]
೨ [ರ]ತಾ [ರೀ] ಖು ೨೦ರಲ್ಲಿ ಈಷ್ಪರ ದೇವಸ್ತಾನದ ಬಳಿ ಈ
೩ ಜೆಗಲಿ ಗುರು ಭೂಪಾದೇವ ಮರಿ ಶಿಷ್ಯ ಭಾ [ಕ್ರಿ]
೪ ಪೂರ್ವಕವಾಗಿ ಇರಿಸಿ [ದು]

ಈ ಗ್ರಾಮದ ಬಸವನ ಗುಡಿಯ ಬಳಿ ಕ್ರಿ.ಶ. ೧೪೭೮ರಲ್ಲಿ ಅಮರನಾಯಕ ಪಾಳೆಪಟ್ಟು ಹೊಂದಿದ್ದ ವರದರಾಜದೇವರು ಎಂಬ ನಾಯಕನು ತನ್ನ ಆಳ್ವಿಕೆಯಲ್ಲಿ ಚಾವಡಿಗೆ ಸೇರಿದ ಚಕ್ಕಲೂರು ಗ್ರಾಮವನ್ನು ಗೌಡಹಳ್ಳಿ ಮುದಿರಾಜ ವೊಡೆಯರ ಮಕ್ಕಳು ದೊಡ್ಡಯ್ಯ ವೊಡೆಯರಿಗೆ 'ಪುರಮಠವಾಗಿ' ಪುರಧರ್ಮ್ಮ ಸಾಧನ ವಾಗಿ ಸಾಳುವ ನರಸಿಂಹನಿಗೆ ಧರ್ಮ್ಮ(ಪುಣ್ಯ) ವಾಗಬೇಕೆಂದು ಸರ್ವಮಾನ್ಯವಾಗಿ ಕೊಟ್ಟುದುದಾಗಿದೆ. ಈ ಸಂಬಂಧದ ದಾನಾಪ ಹರಣಕ್ಕೆ ಶಾಪಾಶಯವು 'ವಿಭೂತಿ ರುದ್ರಾಕ್ಷಿ ಪಾದತೀರ್ಥ ಪ್ರಸಾದ ಪಂಚಾಕ್ಷರಿ ಹೊಱಗು ಆಱುದರುಶನ ಹದಿನೆಂಟು ಸಮಯಕ್ಕೆ ಹೊಱಗು' ಎಂದೂ ಕೂಡ (ಚಂ.ಪ.೧೫೮) ಇದೆ.[೨೫] ಇದು ವೀರಶೈವ ಸಂಬಂಧಿಯಾದ ಅಷ್ಟಾವರಣದೊಳಗಣ - 'ವಿಭೂತಿ, ರುದ್ರಾಕ್ಷಿ ಪಾದೋದಕ, ಪ್ರಸಾದ, ಗುರು(ಉಪದೇಶ) ಮಂತ್ರ' ಇವುಗಳ ಹಾಗು ೧೮ ಫಣಕಟ್ಟುಗಳ ಸೂಚನೆಯಾ ಕಾಣಬರುತ್ತದೆ. ಪುರಮಠ - ಪುರಧರ್ಮವಾಗಿ ಒಡೆಯರಿಗೆ ಕೊಟ್ಟಿರುವಲ್ಲಿ ಚಕ್ಕಲೂರಿನಲ್ಲಿ ವೀರಶೈವ ಮಠದ ಅಸ್ತಿತ್ವವು ಇಲ್ಲಿನ ಗುಡಿ ಪಕ್ಕದಲ್ಲಿದ್ದ ಸೂಚನೆಯನ್ನು ನೀಡುತ್ತದೆ. ಸದ್ಯದ ಶಾಸನವೂ ಈಶ್ವರದೇವರ ಗುಡಿ ಬಳಿ ಇರುವಲ್ಲಿ, ಅದು ರಾಮೇಶ್ವರಗುಡಿ ಎನಿಸಿದ್ದುದು, ರಾಮಸಿಂಗೇಶ್ವರ (ರಾಮ ಲಿಂಗೇಶ್ವರ!) ಮಠವನ್ನು ದೇಗುಲಕ್ಕೆ ಅಂಟಿದ್ದಂತೆ ಹೊಂದಿದ್ದುದರ

ಸೂಚನೆಯನ್ನು ನೀಡುತ್ತದೆ. ಈ ಮಠದ ಗುರು ಭೂಪಾ (ಬೊಪ್ಪಾ!) ದೇವರ ಮರಿಶಿಷ್ಯನಾದ ಅರ್ಥಾತ್ ಕಿರಿ ಶಿಷ್ಯನೊಬ್ಬ ಜಗತಿ ಕಟ್ಟಿಸಿದ ವಿಷಯವಿಲ್ಲಿದೆ. ಬಹುಶಃ ಆ ಮಠಕ್ಕೆ ನಡೆದು ಕೊಳ್ಳುತ್ತಿದ್ದ ಕುಟುಂಬದ ಬಾಲಕನೊಬ್ಬನ ಒಳತಿಗಾಗಿ ಹರಕೆಯಾಗಿಯೂ ಈ ಕಾರ್ಯ ನಡೆಸಿರಬಹುದು. ಗುರುವಿನ 'ಮರಿಶಿಷ್ಯ' ಎಂಬುದು ಗುರುಕರಕಮಲ ಸಂಜಾತ-ದೀಕ್ಷಿತನಾದ 'ಮರಿದೇವರು' ಎಂದು ಪರಿಗಣಿಸುವುದಾದರೆ ಮಠ ಕಟ್ಟುವ ಕಾರ್ಯದಲ್ಲಿ 'ಮರಿದೇವರ' ಮಣಿಹದ ಸೂಚನೆ ಇದಾಗಲೂಬಹುದು. ಅಲ್ಲದೆ ಮೊದಲು ದೊಡ್ಡಯ್ಯ ವೊಡೆಯರು ಸ್ಥಾಪಿಸಿದ್ದ ಮಠದ ಸೋಮೇಶ್ವರ ಗುಡಿಯು ಶಿಥಿಲವಾದಾಗ ರಾಮಸಿಂಗೇಶ್ವರ (ರಾಮಲಿಂಗೇಶ್ವರ!) ಮಠವನ್ನು ಸ್ಥಾಪಿಸಿ ರಾಮೇಶ್ವರ ಗುಡಿ ಎಂದು ಕರೆಯ ತೊಡಗಿರಬೇಕು. ಹೊಸ ಮಠವನ್ನೂ ಸ್ಥಾಪಿಸಿ ೨೧ನೇ ವರ್ಷದಲ್ಲಿ ಗುರುವಿಗೆ ಜಗತಿಯನ್ನು ಈಶ್ವರ ಸಂವತ್ಸರದಲ್ಲಿ ಕಟ್ಟಿಕೊಟ್ಟಂತಿದೆ. ಈಶ್ವರ ಸಂವತ್ಸರ ೧೯ನೇ ಶತಮಾನದಲ್ಲಿ ಕ್ರಿ.ಶ. ೧೮೧೭ರಲ್ಲಿ ಹಾಗೂ ೧೮೭೭ರಲ್ಲಿ ಬರುವಲ್ಲಿ ಲಿಪಿದೃಷ್ಟಿಯಿಂದ ಕ್ರಿ.ಶ. ೧೮೧೭ಕ್ಕೆ ಶಾಸನವು ಸೇರುತ್ತದೆನ್ನಬೇಕು ಅಂದರೆ ಮೊದಲಿನ ಮಠವು ೧೭೯೬ ರ ಸುಮಾರಿನಲ್ಲಿ (ಸುಮಾರು ೨೧ ವರ್ಷಗಳ ಹಿಂದೆ) ಜೀರ್ಣೋದ್ಧಾರಗೊಂಡು ಪ್ರತಿನಾಮಧೇಯವನ್ನು ಪಡೆದಿರುವಂತಿದೆ. ಆದರೆ ಜನಪದದಲ್ಲಿ ಗುಡಿಯ ಹಳೆಯ ಹೆಸರೇ ಪ್ರಚಲಿತವಾಗಿ ನಡೆದು ಬಂದಿದೆ.

**ಚನ್ನಪಟ್ಟಣದ ಕಮಠೇಶ್ವರ ದೇಗುಲ ಶಾಸನ**[೨೬]

ಹಳೆ ಕಮಠೇಶ್ವರ ಗುಡಿಯು ಚನ್ನಪಟ್ಟಣದ ಹಳೆಊರು ಭಾಗದಲ್ಲಿದೆ. ಗುಡಿಯು ಹೊರ ಆವರಣ ವಿಜಯನಗರ ಶೈಲಿಯನ್ನು ಹೋಲುತ್ತದೆ. ವಿಜಯನಗರ ಮಾದರಿಯ ಆಸೀನ ಸಿಂಹ ಶಿಲ್ಪಗಳೂ ಸ್ತಂಭಗಳಲ್ಲಿ ಕಾಣಬರುತ್ತವೆ. ವಿಮಾನ ಗೋಪುರವೂ ಕಲಾತ್ಮಕ ವಾಗಿದ್ದು ಕೆಳ ಮೊದಲ ಹಂತದ ನಾಲ್ಕೂಮೂಲೆಗಳಲ್ಲಿ ಏಕಮುಖಿ ದ್ವಿದೇಹಿ ವೃಷಭ ಶಿಲ್ಪಗಳಿವೆ. ಶಿಥಿಲವಾಗಿರುವ ಈ ಪಾಳು ಗುಡಿಯ ಒಳ ಪ್ರವೇಶ ದ್ವಾರದ ಬಲಬದಿ ಶಿಲಾಸ್ತಂಭದ ಮೇಲೆ ಒಂದು ಸಾಲಿನ ಶಾಸನವಿದೆ. ಇದು ವಿಜಯನಗರೋತ್ತರ ಕಾಲದ ಶಾಸನವಾಗಿದೆ.

**ಶಾಸನ ಪಾಠ**

**ನಾಗಂಣ ಕೊಮಾರ್ತಿ ಕೆಂಪಮ್ಮ**

ಈ ಶಾಸನ ಪಾಠದ ಕೆಳಗೆ ಒರಟುಗೆತ್ತನೆಯ ಸ್ತ್ರೀ ಶಿಲ್ಪವಿದ್ದು, ಮೊಗಮಾತ್ರ ಅಂದವಾಗಿ ಕೆತ್ತಲ್ಪಟ್ಟು ಕರ್ಣಕುಂಡಲವನ್ನು ಹೊಂದಿರುವ ಕಲಾತ್ಮಕ ಕೆತ್ತನೆ ಎನಿಸುತ್ತದೆ. ಆದರೆ ಉಳಿದ ಮುಂಡ ಭಾಗ ರೂಹುಶರೀರವಾಗಿದ್ದು ಕೆತ್ತನೆ ಅಸ್ಪಷ್ಟ ಅಥವಾ ಅಪೂರ್ಣವೆನಿಸುವಂತಿದೆ. ಗರ್ಭಗೃಹ, ಸುತ್ತು ಪ್ರದಕ್ಷಿಣೆಯ ಮಂಟಪ ಪ್ರಾಕಾರವೂ ಇದೆ. ಬಹುಶಃ ಈ ಕಮಠೇಶ್ವರನ ಭಕ್ತೆ



ಯಾಗಿದ್ದ ಕೆಂಪಮ್ಮನು ಕಟ್ಟಿಸಿದ ದೇವಾಲಯವೋ ಅರ್ಥಾತ್ ತಂದೆಗೆ ಪುಣ್ಯವಾಗಲಿ ಎಂದು ನಿರ್ಮಿಸಿದ್ದ ದೇಗುಲವಾಗಿ, ಆಕೆಯನ್ನು ಪ್ರಣಾಮ ಭಂಗಿಯಲ್ಲಿ ನಿಲ್ಲಿಸಿ ಕಡವ ಶಿಲ್ಪಪ್ರಯತ್ನ ವಾಗಿರುವಂತಿದೆ. ಒಳಗಿನ ಹಾಗು ಹೊರಗಿನ ಬ್ರಹ್ಮಕಾಂತ ಸ್ತಂಭಗಳ ಮಧ್ಯದ ಕಡಚಲು ಚೌಕ ಮುಖಗಳಲ್ಲಿ, ಅರಳು ಕಮಲ, ಶಿವಲಿಂಗದ ಉಬ್ಬುಶಿಲ್ಪಗಳನ್ನು ಬಿಡಿಸಲಾಗಿದೆ.

**ರಾಮನಗರ ತಾ. ಕೆಂಪೇಗೌಡನ ದೊಡ್ಡಿ ಕೇತೋಹಳ್ಳಿ ರೈಲ್ವೆ ಗೇಟ್ ಸನಿಹದ ಶಾಸನ**

೧೯-೨೦ನೇ ಶತಮಾನದ ಶಾಸನವಿದಾಗಿದ್ದು, ಲಿಪಿ ಲಕ್ಷಣವನ್ನು ಹಾಗೆಯೇ ತೋರಿರುವ ಒಂದು ಬಗೆ ಗ್ರಾಮೀಣ ಶಾಸನ. ಗ್ರಾಮದ ಪಟೇಲರು ಕಟ್ಟಿಸಿದ ಕೆರೆಯನ್ನು ಕಟ್ಟಿಸಿ ತೂಬು ಇಟ್ಟ ಬಗ್ಗೆ ಹೇಳಿದೆ. ಗ್ರಾಮದ ಪಟೇಲರು ಲಿಂಗೇಗೌಡರು, ಶಾಸನದ ಗೆತ್ತನೆಯಲ್ಲಿ ಕೆತ್ತನೆಯ ಕಾಲವಾದ ಕ್ರಿ.ಶ. ೧೮೦೬ರಲ್ಲಿ ಕೆರೆಕಟ್ಟಿದ್ದು ಎಂದು ಅಭಿಪ್ರಾಯ ಬರುತ್ತದೆ. ಇಲ್ಲಿ 'ಪ್ರರಾಭವ ಸಂವತ್ಸರ ಭಾದ್ರಪದ' ಎಂಬ ಹಿಂದೂ ಸಂವತ್ಸರದ ಜೊತೆಗೆ ಮೇಲಿನ ಇಸ್ವಿ ಸಂಖ್ಯೆಯನ್ನು ನೀಡಲಾಗಿದೆ. ಇಲ್ಲಿನ ಸಂವತ್ಸರದ ಶಬ್ದ ತಪ್ಪಾಗಿ ಕಂಡರಣೆ ಆಗಿದೆ. ಕಾರಣ ಪ್ರಭವ ಸಂವತ್ಸರ ಕ್ರಿ.ಶ. ೧೮೦೬ಕ್ಕೆ ಹೊಂದಿಕೊಳ್ಳುತ್ತದೆ. ಆದರೆ ಕೆತ್ತುವಲ್ಲಿ 'ಪ್ರರಾಭವ' ಎಂದು, ಅನಗತ್ಯವಾಗಿ'ರಾ' ಅಕ್ಷರವನ್ನು ಕೆತ್ತಲಾಗಿದೆ.

ಇಸವಿ ಹಾಗು ಸಂವತ್ಸರ ಎರಡರ ಬಳಿಕ ಮೈಸೂರು ಆಂಗ್ಲರ ಆಡಳಿತಕ್ಕೆ ಬಂದ ಮೇಲೆ ಹೆಚ್ಚು ಕಾಣಬರುತ್ತದೆ. ರಾಮಗಿರಿಯು ಕ್ರಿ.ಶ. ೧೭೯೯(ಸಿದ್ಧಾರ್ಥಿ ಸಂವತ್ಸರ)ರಲ್ಲಿ ಕರ್ನಲ್ ಕ್ಲೋಸ್‌ನ ಹೆಸರಿನಲ್ಲಿ (ಕೂಲೂಸಪೇಟೆ) ಕ್ಲೋಸ್‌ಪೇಟೆ ಎಂದು ಪ್ರತಿಷ್ಠಾಪನೆಗೊಂಡು (ಎ.ಕ. ಸಂ.೯; ಚನ್ನಪಟ್ಟಣ.೫) ಭಕ್ಷಿ ಬಾಲಾಜಿ ರಾಯರು ಆಡಳಿತ ನಿರ್ವಹಣೆಗೆ ನೇಮ್ಪು ಗೊಂಡರು. ದಿವಾನ್ ಪೂರ್ಣಯ್ಯನವರ ನಂತರ ಇವರು ಮೈಸೂರಿನ ಪ್ರಧಾನಿಯಾದರೆಂದು ತಿಳಿಯುತ್ತದೆ. ಇವರ ಹೆಸರಿನಲ್ಲಿ ಭಕ್ಷಿ ಕೆರೆಯೂ ಈ ಸುತ್ತಿನಲ್ಲಿ ಇದೆ. ಆದರೆ ಪಟೇಲ ಲಿಂಗೇಗೌಡರೂ ಕೆರೆ ಕಟ್ಟಿಸಿದ ವಿಷಯವಾಗಿರುವಲ್ಲಿ ಈ ಶಾಸನದ ಕಾಲವಾದ ೧೮೦೬ರಲ್ಲಿ ಭಕ್ಷಿಯವರ ಪ್ರೇರಣೆಯಂತೆ ಆ ಕೆಲಸ ಮಾಡಿರು ವಂತಿದೆ. ಈ ಕೆರೆ ಕೇತೋಹಳ್ಳಿ ಕೆರೆಯೇ ಅಥವಾ ಬೇರೊಂದು ಕೆರೆಯೇ ಎಂಬುದು ಶಾಸನದಿಂದ ಸ್ಪಷ್ಟವಾಗುವುದಿಲ್ಲ. ಕೆರೆಕಟ್ಟಿ, ತೂಬು ಇಟ್ಟದ್ದು ದಾಖಲಾಗಿದೆ. (ಬಹುಶಃ ಪಟೇಲರ ವಾಸ್ತವ್ಯ ಕೆಂಪೇಗೌಡನ ದೊಡ್ಡಿಯಲ್ಲಿದ್ದಿರಬೇಕು.) ಸರ್ ಮಿರ್ಜಾ ಇಸ್ಮಾಯಿಲ್ ಅವರು ಕೇತೋಹಳ್ಳಿ ಕೆರೆ ಬಳಿ ದೇಗುಲವೊಂದರ ಜೀರ್ಣೋದ್ಧಾರ ಮಾಡಿಸಿದರೆಂದು ಜನಪದ ಹೇಳಿಕೆ ಕೇತೋಹಳ್ಳಿ ಯಲ್ಲಿ ಕೇಳಿ ಬರುತ್ತದೆ. ಬಹುಶಃ ಕೇತೋಹಳ್ಳಿ ಸನಿಹದಲ್ಲಿ ಪಟೇಲ ಲಿಂಗೇಗೌಡರು ಕೆರೆ ಕಟ್ಟಿರುವಂತಿದೆ. ಇದಕ್ಕೆ ಹಿನ್ನೆಲೆಯೂ ಹೀಗಿರುವಂತಿದೆ :

ಕ್ರಿ.ಶ. ೧೭೯೯ರಿಂದ ೧೮೧೨ರ ವರೆಗೆ ದಿವಾನರಾಗಿದ್ದ ಪೂರ್ಣಯ್ಯನವರು ಮೈಸೂರಿನ ಪ್ರಪ್ರಥಮ ರೆಸಿಡೆಂಟ್ ಈ ಬ್ಯಾರಿ ಕ್ಲೋಸ್‌ನ ಆದೇಶದ ಮೇರೆಗೆ ವಿಲ್ಕ್ಸ್‌ಮಾರ್ಕ್‌ನ ಮೈಸೂರು ಒಳಾಡಳಿತ ಕುರಿತ ವರದಿ ರೀತ್ಯಾ ರಾಜ್ಯ ಸರ್ಕಾರದ ಹಣದಿಂದ ಕಾಲುವೆಗಳು ಹಾಗು ಕೆರೆಗಳನ್ನು ದುರಸ್ತಿ ಮಾಡುವುದೆಂದಿತ್ತು. ಕೆರೆ ನೀರಾವರಿಯನ್ನು ಸುಸ್ಥಿತಿಯಲ್ಲಿಡಲು ಸರ್ಕಾರ ಯಾವ ಕ್ರಮ ಕೈಗೊಳ್ಳಬೇಕು ಎಂಬುದನ್ನು ಕ್ರಿ.ಶ. ೧೮೭೮ರ ಮೈಸೂರ್ ಟ್ಯಾಂಕ್ ಕೊಡ್ ಎತ್ತಿ ತೋರುತ್ತದೆ. ಕ್ರಿ.ಶ. ೧೭೯೯ರ ಮುಂಚೆ ಸರ್ಕಾರಿ ಮತ್ತು ಕೊಡಗಿ ಕೆರೆಗಳು ಎಂಬ ವಿಂಗಡನೆ ಇರದೆ, ಅವುಗಳನ್ನು ವಿವಿಧ ಗ್ರಾಮೀಣ ಸಮುದಾಯಗಳು ನೋಡಿಕೊಳ್ಳುತ್ತಿದ್ದುವು. ಗ್ರಾಮೀಣ ಕೆರೆಗಳ ದುರಸ್ತಿಯನ್ನು ರೈತರೇ ಕೊಡಗಿ, ಇನಾಂಗಳ ಸಹಾಯದಿಂದ ಮಾಡಿಕೊಳ್ಳಬೇಕಾಗಿತ್ತು.[೬೪] ಬಹುಶಃ ಈ ಹಿನ್ನೆಲೆ ಯಲ್ಲಿ ಪಟೇಲ ಲಿಂಗೇಗೌಡರು ಕೆರೆ ಕಟ್ಟಿಸಿ, ತೂಬು ಇಡುವ ಕಾರ್ಯ ನಡೆದಿರುವಂತಿದೆ. ಅಂದರೆ ಗ್ರಾಮೀಣ ಅಧಿಕಾರಿಯ ಹೊಣೆ ಹಾಗು ಅಂದಿನ ಗ್ರಾಮೀಣರೇ ಕೆರೆ ಪಂಚಾಯಿತಿ ವ್ಯವಸ್ಥೆಯ ಹೊಣೆ ಹೊರುತ್ತಿದ್ದುದರ ಚಿತ್ರವೂ ಇಲ್ಲಿ ಸಿಗುತ್ತದೆ.

ಈ ಶಾಸನದ ಅಕ್ಷರಗಳು ಒರಟು ಗ್ರಾನೈಟ್ ಶಿಲೆಯ ಮೇಲೆ ಆಳವಾಗಿ, ಅಂದವಿಲ್ಲದೆ ಕೆತ್ತಲ್ಪಟ್ಟಿವೆ. ಅಕ್ಷರಗಳು ಅಗಲವಾಗಿವೆ ಹಾಗು ಉದ್ದವಾಗಿವೆ.

**ಶಾಸನ ಪಾಠ**



೧ ಪಟೇಲ್ ಲಿಂಗೇ
೨ ಗವುಡರು ಕೆರೆ
೩ [ಕ] ಟಿದು ಪ್ರರಾಭ
೪ ವ ಸಂ॥ಭಾದ್ರ
೫ ಪದ 1806 ನೆ
೬ ಇಸ್ವಿ ಶಹ ಬೆಲೆ [ಉ]
೭ ಹಾ[ಕಿ]ಯಿೂ ತೂಬು

**ತುಮಕೂರು ಜಿಲ್ಲೆಯ ಹುಣಸವಾಡಿ ತಾಮ್ರಶಾಸನ**

ಮಹಾನಾಡಪ್ರಭುಗಳ ಮೊದಲ ರಾಜಧಾನಿ ಮುಮ್ಮಡಿ ಪಟ್ಟಣ (ಕ್ರಿ.ಶ. ೧೩೯೯)ವಿದ್ದ ನೆರೆಯ (ಸು. ೨ ಕಿ.ಮೀ. ದೂರದ) ನೆಲೆ ಎನ್ನಲಾದ ಗ್ರಾಮವು ಸ್ಥಳೀಯ ಜನರಾಡಿಕೆಯಲ್ಲಿ ಕೊಂಡವಾಡಿ ಎನಿಸಿದೆ. ಗೌರಿಬಿದನೂರು-ಕೊರಟಗೆರೆಯ ಹಾದಿಯ ಒಳಗ್ರಾಮ, ಮಧುಗಿರಿ ತಾಲೂಕಿಗೆ ಸೇರಿದೆ. ಈ ಗ್ರಾಮದ ನೆರೆಗೆ ಹುಣಸವಾಡಿ ಗ್ರಾಮವೂ ಇದೆ. ಹುಣಸವಾಡಿಯ ಸದ್ಯದ ತಾಮ್ರ ಶಾಸನವು ತೆಲುಗು ಲಿಪಿ ಹಾಗು ಭಾಷೆಯಲ್ಲಿ ದಾನದ ಕುರಿತು ಹೇಳುವ ಶಾಸನವಾಗಿದೆ. ಶಾಸನದಲ್ಲಿ ಕಾಲವು ಶಕ ೧೨೧೨ ಎಂದಿದ್ದು, ವಿಜಯನಗರದರಸರಾದ ಬುಕ್ಕ, ದೇವರಾಯ, ಮುಂತಾದವರ ಹೆಸರನ್ನೂ ಹೇಳಲಾಗಿದೆ. ಲಿಪಿಯಲ್ಲಿ ೧೬-೧೭ನೇ ಶತಮಾನದ ಲಿಪಿಲಕ್ಷಣಗಳ ಬೇರೆ ಬೇರೆ ಅಕ್ಷರಗಳು ಕಾಣಬಂದು ಕುತೂಹಲ ಕಾರಿ ಎನಿಸುತ್ತದೆ. ಉದಾ : ಮ.ಪ.ಕ.ಟ.ನ.ಸ ಇತ್ಯಾದಿಗಳು ಸಮಾನವಾಗಿ ಒಂದೇ ಕಾಲದ ಬಳಕೆಯವು ಎನ್ನುವಂತಿಲ್ಲ. ಅವು ಮುಂದಿನ ಶತಮಾನಗಳ ಲಿಪಿಗಳ ಮೇಲೆ ಬೀರಿದ ಪ್ರಭಾವವೂ ಇರಬಹುದು. ಈ ಹಿನ್ನೆಲೆಯಲ್ಲಿ ಇತಿಹಾಸ ಪ್ರತಿಕೂಲತೆ ಎಂದು ಸದ್ಯದ ಶಾಸನವನ್ನು ಕೂಟಶಾಸನವೆನ್ನಬಹುದಾದರೂ, ಬೇರೆ ಆಯಾಮಗಳಿಂದಲೂ ನೋಡಬೇಕಾಗುತ್ತದೆ. ಈ ಪ್ರದೇಶವು ಸ್ಥಳೀಯಪರಂಪರೆಯಲ್ಲಿ ಹೊಯ್ಸಳರಾಳ್ವಿಕೆಯೊಳಗೂ ಇದ್ದ ಕಾರಣ ಅದನ್ನು ವಿದ್ಯಾವಂತ ಸ್ಥಳೀಯರು, ತಿಳಿದುಕೊಂಡಿದ್ದಾರೆ. ಶಾಸನವು ಸ್ಪಷ್ಟವಾಗಿ ವಿಜಯನಗರ ಆಡಳಿತದ ದೊರೆಗಳನ್ನು ಸ್ಮರಿಸಿರು ವುದೂ ಗಮನಾರ್ಹ.

೫೫ ಸಾಲುಗಳ ಈ ಶಾಸನದಲ್ಲಿ ಸಂಸ್ಕೃತದ ೬ ಸಾಲಿನ ಪಾಠ (೧-೬); ನಂತರ ತೆಲುಗಿನ ಎರಡುಸಾಲು (೭-೮), ಕಾಲಸೂಚಿ ಸಹಿತವಾಗಿ (ಶಕ ೧೨೧೨ ಭಾವನಾಮ ಸಂವತ್ಸರ) ೧೦೨ ಸಾಲುಗಳ ಪಾವುಗಡ ತಾ. ರಾಜವಂತಿ ಶಾಸನದ ಅಂಶ ಗಳನ್ನು ಕೆಲಮಟ್ಟಿಗೆ ಹೋಲುತ್ತವೆ. ಉಳಿದ ಭಾಗ ಸಂಪೂರ್ಣವಾಗಿ ಬೇರೆ ಬೇರೆ ವ್ಯಕ್ತಿ ಹಾಗು ಗ್ರಾಮನಾಮಗಳಿಂದ, ದಾನದ ವಿಷಯ ಇತ್ಯಾದಿಗಳಿಂದ ಕೂಡಿದೆ. ಮಧುಗಿರಿ ತಾ. ಶ್ರಾವಂಡಹಳ್ಳಿ ತಾಮ್ರ

ಶಾಸನದ ವ್ಯಕ್ತಿ ನಾಮಗಳಾದ ಮಲ್ಲನಗವುಡು, ಕೊಂಡಮ ನಾಯಿಡು ಹಾಗು ಸ್ಥಳನಾಮಗಳಾದ ಘನಗಿರಿ, ದೇವಗಿರಿ ಇತ್ಯಾದಿ ಪಟ್ಟಣಗಳ ಹೆಸರುಗಳೂ ಈ ಶಾಸನದಲ್ಲಿದೆ. ಆದರೆ ಮನೆತನದ ಗೋತ್ರೋಲ್ಲೇಖಗಳಲ್ಲಿ ವ್ಯತ್ಯಾಸವಿದೆ.

ಈ ಶಾಸನದಲ್ಲಿ ಬರುವ ರಾಮಲಿಂಗನಗೌಡು ಕೊಳದ ಮಲೆಗೌಡು ಇತ್ಯಾದಿ ಬಡವನೊರು ಕುಲದ ಏಳು ಶಿವಾಚಾರದ ಕುಂಚಟಿಗರ ಮನೆತನದವರ ಅಸ್ತಿತ್ವ ಇಂದಿಗೂ ಇಲ್ಲಿದೆ. ಬಿಸಲು ಮಲ್ಲೇಶ್ವರ ಹಾಗು ಕೊಳದ ಮಲ್ಲೇಶ್ವರ ಗುಡಿಗಳು ಇದ್ದು ಶಿಥಿಲ ವಾಗಿವೆ. ವೀರಶೈವ ಪ್ರಣೀತವಾದ ಜಂಗಮಾರ್ಚನ (ನಿಡುಮಾಮಿಡಿ ಶ್ರೀ ಶೈಲ ಪೀಠದ ಶಾಖೆಯಾಗಿ ಸಿದ್ದೇಶ್ವರ ಗುರುಮಠವೂ ಇಲ್ಲಿತ್ತೆಂದು ಹೇಳುವ ಆ ಮಠದ ಶಿಷ್ಯರು ಕೊಂಡವಾಡಿಯಲ್ಲಿದ್ದಾರೆ). ಹಂಪೆ ವಿರೂಪಾಕ್ಷನಿಗೆ ಹರಕೆ ದ್ರವ್ಯ, ಇತ್ಯಾದಿಗಳು ಇಂದಿಗೂ ನಡೆದುಬಂದಿವೆ. ಮುಂದೆ ಈ ಬಗೆಗೆಲ್ಲ ಹೆಚ್ಚಿಗೆಯಾಗಿ ವಿವರಿಸಲಾಗಿದೆ.

ಸಾರಾಂಶವಾಗಿ ಹೇಳಿದರೆ, ಬ್ರಹ್ಮಮಾನ್ಯ, ದೇವಮಾನ್ಯ, ಭಟಮಾನ್ಯ, ಅಯಿಗಾಂಡ್ಲುಕು ತಾವು ಮಾನ್ಯ. (ವೀರಶೈವಮಠ) ಹೀಗೆ ನಾಲ್ಕು ಮಾನ್ಯಗಳನ್ನು ಕೊಡುವಲ್ಲಿ ಅಯಿಗಾಂಡ್ಲು ಮಾನ್ಯಕ್ಕೆ ಲಿಂಗಮುದ್ರೆ ಹಾಕಿ ಕೊಳದ ಮಲೆಗೌಡನಿಗೆ (ಕೊಳದ ಮಲ್ಲೇಶ್ವರ ಗುಡಿ ಸ್ಥಾನಿಕ!) ಪಾರಂಪರ್ಯವಾಗಿ ಶಾಸನೋಕ್ತ ದಾನವನ್ನು ನೀಡ ಲಾಗಿದೆ. ಈ ಶಾಸನದ ಅಕ್ಷರಗಳ ಸ್ವರೂಪವನ್ನು ಗಮನಿಸಿ ಹೇಳಿದರೆ ಹಿಂದಿನ ಶಾಸನದ ವಿಷಯವನ್ನು ವಿಜಯನಗರೋತ್ತರ ಕಾಲದಲ್ಲಿ ನಕಲು ಮಾಡುವಲ್ಲಿ ಬರೆದ ಕಾಲದ ವಿಷಯಗಳನ್ನೆಲ್ಲ ಸೇರಿಸಿಬಿಟ್ಟು ತಥ್ಯ ಮಿಥ್ಯಾಂಶಗಳ ಕೂಟ ಈ ಶಾಸನದಲ್ಲಿದೆ ಎನ್ನಬೇಕು.

**ಶಾಸನ ಪಾಠ**

ಚಂದ್ರ ಚಿಹ್ನೆ  ಶಿವಲಿಂಗ  ಸೂರ್ಯ ಚಿಹ್ನೆ

| ಮೊಹರ್ರಾ<br>ರಾಯಲ ಶಕ<br>ಮು ಶ್ರೀ |  | ಕೊಳದ ಮ<br>ಲೆ ಗೌಡಗೆ<br>ಶಿ[ವ] ಚ॥ [ರ] |
|---|---|---|

೧ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರಃ। ತ್ರೈಲೋಕ್ಯ ನಗರಾರಂಭ ಮುಲ
೨ ಸ್ತಂಭಯ ತ್ರಂಭವೇ। ಅಕ್ಷರಾಂನವೋ ಮೂಲಾ ಪಾಪಗ ಮುಕ್ತಯ ನಂತ್ತ ಮಂ।ಜನ ಲೋ
೩ ಕೇಶಯಾ ಸಾರಾಮಾದಿಕೇ ನರ ಶಾಶ್ವಿತಃ! ನಯಮಧಂ ಅನನಂ ನ್ಯಾಸಂ ಸಂತತ್ಯೇವ ಸಮುದ್ಭವಾ॥
೪ ನಧಂ ಮೋದಧಿನಂ ಸಾಸ್ಯಸತ್ತಂ ತಗ ಸಮುದ್ಭವಃ। ಶ್ರೀ ಭುತು ಭುಪತಿ
೫ ತ್ರಯೋರಣೆ ತವಜ ಮಾಯಾತ ಸಿಂಧು ಭೂಯತ್ತುಧಾರಃ। ಬಿವಕ ಬಾಗರದಂತ ನಿರಾರಂಭಾ ಹಿ
೬ ನರುಣೆ ವಸುರ ದಶಣಜಗೌರಾಜ ಕಚಂ ನೇರ ಅನಯೋರ್ಧೇವಾರಾಯಚ ಪುತ್ರೇಚು ಸಲ್ವಯಾ ರಮಾ
೭ ಸ್ವಸ್ತಿಶ್ರೀ ವಿಜಯಾಭ್ಯುಧಯ ಶಾಲಿವಾಹನ ಶಾಕವರುಷಂಬುಲು ೧೨೧೨ ನೆಯ। ಬಾವನಾಮ ಸಂವ
೮ ತ್ಸರಂ ಚೈತ್ರ ಶುಧ ೫ ಭುಧವಾರಂ ಶ್ರೀ ವೀರ ಪ್ರತಾಪ ವೀರ ಭುಕ ಭೂಪತಿ ರಾಯಲವಾರು। ಶ್ರೀ ಶಂಕರ ರಾ
೯ ಯಲವಾರು। ದೇವರಾಯಲವಾರು। ಗುಂಡಮರಾಯಲವಾರು॥ **ಭಡುವಲವಾಡಿಚದುವಲರಾಯ।**
೧೦ ವಾನಿ ಕೊಡುಕುಲು ಯೇಡು ಗುರ। ಪ್ಯದ ಕೊಡುಕು ವೀರು ರಾಮಲಿಂಗನಗೌಡು। ರಂಗನ ಗೌಡು। ಚಿಕನ
೧೧ ಗೌಡು। ಭಸವನ ಗೌಡು।ಯೊರನಗೌಡು॥ ಮಲ್ಲೇಗೌಡು ಕೊಳದ ಮಲೆಗೌಡು॥ ವಾರು **ಶಿವಾಚಾರಂ॥ ವಾರಿಕು**
೧೨ **ಲಂ ಬಡವನೊರು। ಕುಲಂ ಕುಂಚಿಟಿಗವಾರು।**ವಾರ್ರಿ ವಿಯೇಡು ಬಂಡ್ಲು ಮಿಂದ ಚಕಬಂ
೧೩ ಡಿ ಮಿಂದ ದ್ರವ್ಯಂ ಅರುಭಂಡ್ಲುಮಿಂದ ಗೋಪ ಪರುಗುಕೋನಿ ಬಡುವಲ ಸೀಮ ಯಿಡಚಿ **ಯಿ**
೧೪ **ಜಯನಾಗ್ರಂ** ಪಟ್ನನಿಕಿ ವಚಿ ರಾಯಲವಾರ್ರಿ ಬೇಟಿ ಚೇಸುಕೋನಿ ವುದಾರಣ ಚೈಸಿರ್ರಿ ಯೇಡು ಬಂಡ್ಲು
೧೫ ವಪಗಿಂಚಿರಿ। ಅಂಟೆ ವಿರುಪಾಕ್ಷಿ ನಲ್ಲ ನಿಲಪುರಾಯಿಕಿ ಶಾಸನಂ। ರಾಯದರ್ತ್ತಂ। ರಾಯಲು ರಾಮ।
೧೬ ಲ್ಲಿಂಗನಗಾನಿಕಿಯಿನಿ ನದಿನಿಂದ ವುಡಗುರು ಗುರುಂ। ಸುರುಟಿ। ಚಾರಿಲ್ಲು। ಯಿಚಿರ್ರಿ।ನಾರಮಯರಮಲ
೧೭ ಕಂ ಪೊಂಮನಿ ಅಪಣ ಯಿಚಿರ್ರಿ। ಪ ೧೨ ವೇಲು ಬಳಗಂ। ಯೇಡುಗುಳ್ಳ ಅವುಲು। ರಾಮಲ್ಲಿಂಗುಡು। ಬಿಸುಲು ಮ
೧೮ ಲ್ಲೇಶ್ವರುಡು। ಕೊಳದ ಮಲ್ಲೇಶ್ವರುಡು। ಕಲ್ಯಣಪಟನಿಕಿ ಪೋಯಿ **ಭಂನಮಲ್ಲ ಸ್ವಮುಲ**ವಾರ್ರಿಕಿ ದಂಥಂ ಬೆಟ್ಟತಿ
೧೯ ವಾರ್ರಿಕಿಯೆಂದಿ ಅ ಬಗೆಲು ಯೇಡು ಯಿಚಿರ್ರಿ। ರವಕಂ ಭಿಪಿ। ಯಿರವೈ ವರಹಾಲು ಪಾದಕಾಣಿಕೆ। ಅಡವಕು
೨೦ ವಂ ಚೇಸಿನುಕು **ಜಂಗಮಾರ್ಚನಕು** ದಾನಂ ಯಿಚಿರ್ರಿ। ಕೊಳಧ ಮಲೆಗೌಡುವಾನಿ ಕೊಡಕು ಕಂಬಿ ಮಲ್ಲೇಗೌ
೨೧ ಡು ಕೊಂಡಮನಾಯಿಡು ಅಂಕೆ ದೊರವಾನಿ ವುದಿಮಿಲೋ ರಾಮಲ್ಲಿಂಗಂ ಗುಡಿ೧ ಕೊಂಡಮನಾಯಿಡು ರಟ

೨೨ ಕಿಂದ ಅರು ಗುರ್ರುರಾ ಚಿಂನವಾಡು ಕೊಳದ ಮಲ್ಲೆಗೌಡುಂದಿ ಯೇಡು ಗುಳ್ಳು ಅವಲು ರೊಪಂ। ತೊದೆ ವಿನಿ ಪುಜ। ಚೆಸುಕೊ
೨೩ ನಿ ವುಂಡಿ ಅರುಗುರು ಅಂನಗಾರ್‍ರಿನಿ ಪಿಲುವನಂ ಪಿಚ್ಚದುಕು ವಾಳ್ಳು ಪಂಚಿರ್ರಿ॥ ಪಾಲಿವಕ ಯಿಂಟಕಿ ಯೇಡು ಕಾಡಾಯಿ
೨೪ ಲು ದ್ರವ್ಯ ಬಮು[ಂ]ಡು ಸಳ್ಳು ಅವಲು। ತಂಮುನಿಕಿ ಅಂಗಗಾರು ಯಿಚಿ ರ್‍ರಿ। ಅಡಸ.ರೆನಿ ಮಲ ತೋನಿಲ ಬಿಮಲ ಕೊಟ ಹ
೨೫ ಪಂಪಿನಿ ಕೊಳದ ಮಲೆಗೌಡು ಶಿರನಾಡಿ ಧೇಶಂಕರಣಂ ಸಕನ್ರಘ। ಪಂಚಾ[ಂ]ಗಂ ಸುಭಭಟ್ಲು। ತೌಲಾರ್‍ರಾಕದು ಪುಲ ಕಟು ಹ
೨೬ ಚಜಗೆ ಮಲ್ಲಘ। ಮಂಗಪಲ್ಲಿಂ ಗುಡು। ಕುಂಭಕ ರಾಯುಡು। ಚ್ಯಕಲ ಬಿಸುಡು। ಮಾಧಿಗ ಮದಡು॥ ಚಲವಾಧಿ ಯಿರುಡು
೨೭ ಗ ಗನಗಿರಿ ದೇವಗಿರ್‍ರಿ ದೇವರಾಯಲು ದೆಗಿರ ಕೊಳದ ಮಲೆಗೌಡು ಅಪಣ ತೀಸುಕೋನಿ। ವಡಗರಗನ ಬೋಯಿಡು।
೨೮ ॥ ॥ ಯಂಗಟನ ಬೋಯಿಡು। ಭಂಡ್ಲು ೪೦ ಮಲಕೂಟ ಶಾಂತಿ ಚೇಸಿರ್‍ರಿ। ಕೊಟ [ಇ] ರುಲು[೯] ಮೀದಿ೯ ಮೀಧಿ
೨೯ ।ಅರಲು ಕೂಟ ವಗಟಿ। ಅದ ಅರಲು ಕೊಟ ವಗಟಿ। ಚರುವುಲುಮುಡು। ಸಾಲ್ಗು ದೇಶಲು ರಾಯಲು
೩೦ ನಿ ಊಡುಕೋನಿ ವಚಿ **ಮುಂಮುಡಿಚಿಕಪಗಾನಿ** ತೋಡುಕೋನಿ ವಚಿರ್‍ಯ ಸರುಘಟ್ಲ ಮುಚಂಗಾರು ಬೋಜ
೩೧ ಚವುಡುಗೌಡುನಿ ಊಡುಕೋನಿ ವಚಿ। ಅನುದಪಿ ಪ್ಯದಕೆಂಟಗೌನಿ ಕೊಡುಕೋನಿ ವಚಿ ಬಾನಪುರ್‍ರಿ ಕಾಮ
೩೨ ನ ಗೌನಿ ಊಡುಕೋನಿ ವಚಿ। ಲೆರ ಮಾಳಿಗೆಕು ಮಾಯಿಲೆರಮಳಬಾಕ್ಯಲುಗಿ ಕೊಡುಕೋನಿ ವಚಿ ಸಿಂಹ್ಮ
೩೩ ಗಂನಿ ಭಯಂ ಚೇಸಿ **ವೂ।ಣಿಸಿವಾಡಿ** ಅನೆ ಎಕು ಎಸ ಎಟರ್‍ರಿ। **ಆ ಸುರಾಯುನಿ ಗುಡಿ೧** ಕಟಕಿಂದ **ಕೊ**ಳದ
೩೪ **ಮ[ಲ್ಲೇಶ್ವ]ರುನಿ ಗುಡಿ** ೧ ಪೂರ್‍ರಿಕಿ ಮುಟುವಳಿ ಕೊಳಗದ ಮಲ್ಲೆಗೌಡು ಯಿಚಿಂಧಿ ರಾಮಟಂಕಿ ವರಹಾಲು
೩೫ ಸ [ಪ್ರಿ] ಯಾಬೈಲಕ್ಷ್ಮಿಪತಿಲು ನುಟಲಾಕ ವೃಮತಲಿ ಕಾಸುಲು ನುಸ। ಪಂನೆಂಡು ಅಯಿಗಾಂಡ್ಲಕು ವುಡಗರ
೩೬ ತುರ್ಪದಿಕುನ ಪಲುಮ್ಯಾರ ರಾಯಿ೧ ಧಕ್ಷಿಣ ಮಂದು೧ ಪುಡಮಟ೧ ವುತರಮಂದು೧ ಭಿದುಕುಲ ಕು
೩೭ ಲರಾಳ್ಳು। ಗಾನಿ ಮಾನ್ಯಂ ಚೆನಿ ಚದುವುಲೋ ಶಾಸನಂ ರಾಯಿ೧ ಪಂನೆಂಡು ಅಯಿಗಾಂಡ್ಲಕು ಮಾನ್ಯಂ। ಚದಿ
೩೮ ಪಿ [ಲ] ಲು [ಯೋ]ಗವಾಡುಕು ಪಬಿರೆಗೌಡು ಚಲ್ಲಿಚಲ್ಲಿನವಾಡು ಮಧಡು ಬೋ[ೞ]ನದ ಕಡವ ಕೊಳದ ಮ[ಲೆ] ಗಾನಿಧಿ।
೩೯ ವಾನಿ ಕೊಡಕು ಕಂಚಿ[ಬಿ] ಮಲೆಗೌಡು ವಿರ್‍ರಿ ತಾವುಕು ಚಚಿ ಪಿಲು।ರುಕೋನಿ೧೨ ಅಯಿಗಾಂಡ್ಲ [ಅ?] [ರ] ಡ ಮಾ
೪೦ ಯಿಲೋನಿ [ರ್‍ರಿ] ಗಟ ಅಗಿ ವೀರು ಪಿಟರ್‍ರಿ। ಮುಟುವಳಿ ರಾಮಟಂಕಿಲು ವೆಯಿ ವರಹಾಲು। ಲಕ್ಷ್ಮಿಪತುಲು ಗುರು
೪೧ ಮಲ [ವಿ] ಕಾಸುಲು ಗುಟ ಯಗ ಬ್ಯೆ ಕೊಟ ಲೌ ರಾನಿಕಿ ಯೇಸಿವುಂಡಿದಿ ಶಾಸನಂ ರಾಳ್ಳುಳಿಗಾನಿ ನಸರುಲೋನ ಪಾತ
೪೨ ರಲೊ ವುಂಡೆ ದ್ರವ್ಯಂ ಅಯಿದು ಕಡಾಯಿಲು ಕಂಬಿ ಗುಂಡ್ಲು। ಕಂಚು ಕೊರಮುಟು ಯೇಡು ಚೊರುವು। ತುರ್ಪುದಿಕು
೪೩ ರ ಪಲುಮ್ಯರರಾಯಿ ೧ ದಕ್ಷಣಂ ವಗಟ। ಪಡಮಟ ೧ ವುತರಮಂದು ೧ ಭಿದು ಕುಲಲೋ ನಾಲ್ಗು ರಾಳ್ಳು। ಭಲಿ ಚೆಲ್ಲಿ
೪೪ ಬೋಸಪ ಕಡವ ಕಂಬಿ ಮಲಗೌ[ನಿ]ಧಿ। ವಾನಿ ತಂಮುಡು ಬಿಸಲ ಮಲೆಗೌಡು ವಿರ್‍ರಿನಿ ಪಿಲುಚುಕೋನಿ ಮೋ ಯಿ
೪೫ ಅವುಕು ವೀರು ಬಿಸಲಪಲ್ಲಿ ಅನೆ ಎಸಟರ್‍ರಿ ಮುಟುವಳಿ ರಾಮಟಂಕಿಲುನುಕು। ಲಕ್ಷ್ಮಿಪಲು ಯಾಬೈ। ಪುಲೆಲಿ ಕಾ
೪೬ ಸುಲು ಸರು। ಪಲುಮ್ಯರರಾಯಿ ತುರ್ಪದಿಕುನ೧ ದಕ್ಷಿಣ ೧ ಪಡಮಟ೧ ವುತರಂ ೧ [ಚಿ]ದುಕು
೪೭ ಲ ಲೋನಲು ರಾಳ್ಳು ಕೊಟತಾರನಿಕಿ ಯಸಿವುಂಡಿ ದಿ ಶಾಸನಂ ರಾಳ್ಳು ನಾಲ್ಗು ಬ್ರಹ್ಮಮಾಂನ್ಯಂ
೪೮ ದೇವಮಾನ್ಯಂ। ಬಟುಮಾನ್ಯಂ ಅಯಿಗಾಂಡ್ಲುಕು ಮುಡುವುಕುಲು ತಾವುಮಾನ್ಯಂ। **ಅಯಿಗಾಂಡ್ಲು**
೪೯ **ವಪಿತಮು** ಪಲುಮ್ಯರ ರಾಳ್ಳು **ಲ್ಲಿಂಗಮುದ್ರೆ।** ಬಡಗ [ಲ] ಗಾಡಿ ಯಿರಬಾರ್‍ರಿ ರಾಯಲ ಅಪಣ ಬಾವಗು
೫೦ ತಾಂಬ್ರಶಾಸನಂ ವ್ರಾಯಿಂಚಿ ಕೊಳದ ಮಲೆಗೌನಿಕಿ ಯಿಚಿರ್‍ರಿ। ಪುತ್ರ ಪೌವಿತ್ರ
೫೧ [ಮಂದು] ತಳ [ಪ್ರ] ದುಲು[ಂ] ಸನಮತಂಗಾನು ಅನುಭವಿಂಚುಕೋನಿ ಸುಕಗವುಂಡುಮುನಿ ಚಪಿರ್‍ರಿ।
೫೨ [ಯಿಂದು] ತಪಿತೆ ಕಾಸಿಲೂ ಗೋಹತ್ಯಂ ಸಿಸು ಅತ್ಯಂ ಬ್ರಂಅತ್ಯಂ ಚೇಸಿನ ಪಾಪಗ ಮಾಡುಮು ಹರ್‍ರಿಹರ
೫೩ ಮಲು ಸಾಕ್ಷಿ ಪಶಮುಕಿಟಾಂ [ಹಾ] ವಲು ಪವಿತ್ರಮು ಅಲಗ್ರ ಕೊಂಡಮಗಾಯುನಿ ಚ
೫೪ ದಿಕಿ ಯಿಚಿರ್‍ರಿ ಹುಬಿದಾಪಿ ಅಂಪಿಗಮುನಿ ಗುಡಿ ಹ ಯಿ
೫೫ ಚಿರ್‍ರಿ॥

(ವಿ.ಸೂ. : ಈ ಶಾಸನವನ್ನು ಹುಣಸವಾಡಿ ಶ್ರೀ ಮಲ್ಲಪ್ಪ ಎಂಬವರಿಂದ ಪಡೆದು ರಾಮನಗರದ ಶಿಕ್ಷಕ ಶ್ರೀ ಪಿ.ಆರ್. ರುದ್ರಪ್ಪನವರು ನನಗೆ ತೋರಿದ್ದರು. ಇದು ತೆಲುಗು ಶಾಸನವಾಗಿದ್ದು, ಪಾಠವನ್ನು ಓದಿದ ಮೇಲೆ ಇಲ್ಲಿ ಬರುವ ತೆಲುಗು ಶಬ್ದಗಳಿಗೆ ಅರ್ಥವನ್ನು ಸರ್ವಶ್ರೀ ಸಿ.ಟಿ.ಎಂ. ಕೊಟ್ರಯ್ಯ, ಕೊಂಡವಾಡಿ ಕೃಷ್ಣಮೂರ್ತಿ, ಜಿ.ಎಸ್. ಕುಮಾರಸ್ವಾಮಿ ಅವರಿಂದ ತಿಳಿದುಕೊಂಡಿದ್ದೇನೆ. ಹಾಗು ಕೊಂಡವಾಡಿಯ ಕ್ಷೇತ್ರಕಾರ್ಯದಲ್ಲಿ ಇವರಲ್ಲದೆ (ನಿ.) ಕಂದಾಯ ಇನ್ಸ್‌ಪೆಕ್ಟರ್ ಶ್ರೀ ರೇವಣಸಿದ್ದಯ್ಯ, ಹಾಗು ಕೊಂಡವಾಡಿ ಶಂಕರಪ್ಪನವರೂ ನೆರವಾಗಿದ್ದಾರೆ. ಇವರೆಲ್ಲರಿಗೂ ಕೃತಜ್ಞತೆಗಳು)

ಈ ಶಾಸನದಲ್ಲಿ, ಕೆಲವು ಸ್ಖಾಲಿತ್ಯ ಶಬ್ದಗಳ ಉದಾಹರಣೆ ಎಂದರೆ : ಮೂಲ (ಮುಲ), ಕೊಳದ (ಕೊಳಧ), ಸ್ತಂಭಾಯ (ಸ್ತಂಭಯ), ಶಂಭವೇ (ತ್ರಂಭವೆ), ಬುಕ್ಕ (ಭುತು), ಭಾವ (ಬಾವ), ಬುದವಾರ (ಭುಧವಾರ), ಆರು (ಅರು), ಆವುಲು (ಅವುಲು), ದೇಶಂಕರಣ (ಧೇಶಂಕರಣ), ನೃಪ (ನೃಫ), ಮಲ್ಲಪ (ಮಲ್ಲಫ), ಗೌಡು (ಗುಡು), ಚಿದುಕುಲ (ಛಿದುಕುಲ), ಬಿಸಲ (ಭಿಸಲ), ವಾಡಿ (ನಾಡಿ), ವಿಜಯನಗರ (ಯಿಜಯನಾಗ್ರಂ)!, ಪೆದ್ದ (ಪ್ಯದ) - ಇತ್ಯಾದಿ ಶಬ್ದಗಳು ಸ್ಖಾಲಿತ್ಯಗೊಂಡಿವೆ.

ಇದು ಕೂಟಶಾಸನವಾದರೂ ಇಲ್ಲಿ ಬಂದಿರುವ ಬಿಸಲು ಮಲ್ಲೇಶ್ವರ ಗುಡಿ, ಕೊಳದ ಮಲ್ಲೇಶ್ವರ ಗುಡಿ ಬಿಸಲುಪಲ್ಲಿಯಲ್ಲಿದ್ದ ಗುಡಿಗಳಾಗಿ, ಕೊಂಡವಾಡಿ ಕೆರೆ ಕೆಳಗೆ ಅಚ್ಚುಕಟ್ಟಿನಲ್ಲಿ ಇಂದಿಗೂ ಇವೆ. ಆದರೆ ಪಾಳುಬಿದ್ದು, ಜಲಹರಿರಹಿತ ಭಿನ್ನ ಶಿವಲಿಂಗ, ಶಿರ ಶಿವಲಿಂಗ ಹಾಗು ಪ್ರಸ್ತರದ ನಾಲ್ತುದಿಯಲ್ಲಿನ ದ್ವಿದೇಹಿ, ಏಕಮುಖದ ವೃಷಭ ವಿಗ್ರಹಗಳ ಅವಶೇಷಗಳೂ ಕಾಣಬರುತ್ತವೆ.


ಕೊಂಡವಾಡಿ ಕೆರೆ ಬಳಿಯ ಮಠಾಂತರ್ಗತ ಬಿಸಲು ಮಲ್ಲೇಶ್ವರಗುಡಿ


ಶಿರ ಭಿನ್ನಗೊಂಡ ಬಿಸಿಲು ಮಲ್ಲೇಶ್ವರಲಿಂಗ ಮತ್ತು ಕೊಳದ ಮಲ್ಲೇಶ್ವರಲಿಂಗ(!)

ಇನ್ನು ಕೆಲವು ಚರಿತ್ರೆಯ ಕೃತಿಗಳ ರೀತ್ಯಾ ಹೆಂಜೇರುವಿನ ನೊಳಂಬ ಪಲ್ಲವ ಮನೆತನದ ಮಾರೇಗೌಡನು ಹಾಗು ಅವನ ಸೋದರರು, ಸೊನ್ನಲಾಪುರದ ಸಿದ್ದರಾಮೇಶ್ವರನಿಂದ ಅನುಗ್ರಹಿತ ರಾಗಿ 'ನಾಗಮುರಿ' ಎಂಬ ಆಯುಧ ಪಡೆದರು. ಮಾರೇಗೌಡ ಅವರೊಡನೆ ವಿಜಯನಗರದ ಹರಿಹರನಲ್ಲಿ ಹೋದಾಗ ಮಹಮದೀಯ ಶತ್ರುಗಳೊಡನೆ ಕಾಯಲು ಆದೇಶಿತನಾಗಿ, ಹೋಗಿ ಗೆಲುವು ತಂದುಕೊಟ್ಟ. ಆಗ ಹರಿಹರನು ಊರು ಸ್ಥಾಪಿಸಿದರೆ 'ಮಹಾನಾಡ ಪ್ರಭುಗಳು' ಎಂದು ಅಧಿಕಾರ ಕೊಡುವುದಾಗಿ ಹೇಳಲು, ಅದರಂತೆ ಯೋಗ್ಯಸ್ಥಳ ಹುಡುಕಿ ಜಯಮಂಗಲಿ ನದಿ ತೀರಕ್ಕೆ ಬಂದು ಕ್ರಿ.ಶ. ೧೩೯೯ರಲ್ಲಿ, ನೊಣಬೇಶ್ವರ ದೇಗುಲಕಟ್ಟಿ, ದೇವಪ್ರತಿಷ್ಠೆ ಮಾಡಿ ಮಾರೇಗೌಡ ಆ ಸ್ಥಳಕ್ಕೆ 'ಮುಮ್ಮಡಿ ಪಟ್ಟಣ'ವೆಂದು ಹೆಸರಿಟ್ಟ. ಪಟ್ಟಣದ ಸುತ್ತ ಕೋಟೆ ಕಟ್ಟಿಸಿ ೧೮ ಮೈಲು ವಿಸ್ತೀರ್ಣವುಳ್ಳ ಈ ಪಟ್ಟಣ ಕೋಡಲಾಪುರ, ಪುರವರ, ಗೊಂದಿಹಳ್ಳಿ, ದೊಡ್ಡ ಹೊಸಳ್ಳಿ, ಕೋಡಗದಾಲ ಮತ್ತು ಇಮ್ಮಡ ನಗಹಳ್ಳಿಯನ್ನು ಒಳಗೊಂಡ ಪ್ರದೇಶವಾಗಿತ್ತು[೨೭] ಎಂದಿದೆ.

ಈ ಹಿನ್ನೆಲೆಯನ್ನು ಗಮನಿಸಿದರೆ, ಶಾಸನದಲ್ಲಿ 'ಯಿಜಯ ನಾಗ್ರಪಟ್ನ' ಎಂದಿರುವ ಹೆಸರಿಗೂ ಕೊಂಡವಾಡಿ ಪ್ರದೇಶದ ಜನರು ಪುರವರ ಹೋಬಳಿಯ ಕೊಂಡವಾಡಿಯ ನೆರೆಗಿರುವ ಮುಮ್ಮಡಿ ಪಟ್ಟಣವೇ 'ಜಯನಾಗರ ಪಟ್ನ' ಎಂದು ಹೆಸರಾಗಿತ್ತು ಎಂದು ಹೇಳುವಲ್ಲಿ ಸಂಬಂಧ ಕಾಣುವಂತಿದೆ. ಕಾರಣ ಇಂದಿನ





ಮುಮ್ಮಡಿ ಪಟ್ಟಣದ ಕೋಟೆಯ ಅವಶೇಷ

ಮುಮ್ಮಡಿ ಪಟ್ಟಣದ ಅವಶೇಷದ ನೆಲೆಗೆ ಸು. ೧/೨ ಕಿ.ಮೀ. ದೂರದಲ್ಲಿನ ಗಿಡ್ಡಯ್ಯನಪಾಳ್ಯದ ಬದಿಗೇ ಜಯಮಂಗಲಿ ನದಿಯೂ ಇದೆ. ಆ ಸುತ್ತಲೇ, ಮೇಲ್ಲೂಚಿತ ಗ್ರಾಮಗಳೂ ಇಂದಿಗೂ ಇವೆ. ಮುಮ್ಮಡಿ ಪಟ್ಟಣದ ಕೋಟೆ ಅವಶೇಷವೂ ತೀರ ನೆಲಕಚ್ಚಿ, ಹೋಗಿರುವುದಾಗಿದೆ. ಇದಕ್ಕೆ ಪೂರಕ ತಾರ್ಕಣೆಯಾಗಿ, ಸಿದ್ದರಾಮೇಶ್ವರ ಅನುಗ್ರಹಿತ ಬಹುಶಃ 'ನಾಗಮುರಿ' ಬಳಸಿ ಜಯ ಒದಗಿದ ಕಾರಣ 'ಜಯ' ಹಾಗು 'ನಾಗ' ಶಬ್ದ ಸೇರಿಸಿಕೊಂಡು 'ಜಯನಾಗ್ರಪಟ್ಟಣ' ಕಟ್ಟಿ ಅದು ಬಹುಶಃ ಮೂರುಬಾರಿ ಜೀರ್ಣೋದ್ಧಾರವಾದ ಕಾರಣವೂ ಸೇರಿ ಕಾಲಾಂತರದಲ್ಲಿ ಮುಮ್ಮಡಿ ಪಟ್ಟಣವೆಂದು ಐತಿಹಾಸಿಕವಾಗಿ ರೂಢಿಗೆ ಬಂದಿರುವಂತಿದೆ. ಜೊತೆಗೆ ಬಿಸಿಲು ಮಲ್ಲೇಶ್ವರ ಗುಡಿ ಬಳಿಯೆ ಸಿದ್ಧೇಶ್ವರ ಮಠವೂ ಇತ್ತೆಂದು ಹಿರಿಯ ಮತ್ತು ಗ್ರಾಮೀಣರು ತಿಳಿಸುತ್ತಾರೆ. ಹೀಗಾಗಿ, ಶಾಸನದಲ್ಲಿ ಬಂದಿರುವ ವ್ಯಕ್ತಿಗಳು ಮತ್ತು 'ಬಿಸಲುಪಲ್ಲಿ' ಇತ್ಯಾದಿ ಪಟ್ಟಣಗಳು ಐತಿಹಾಸಿಕ ವ್ಯಕ್ತಿಗಳೇ ಹಾಗು ನೆಲೆಗಳೇ ಆಗಿರುವಂತಿವೆ. ಜೊತೆಗೆ ದೇವದಾನ, ಬ್ರಹ್ಮದಾನ, ಆಯಿಗಾಂಡ್ಲು ದಾನ ಹಾಗು ಯೇಡು ಬಂಡ್ಲಿ ದ್ರವ್ಯ ಇವೆಲ್ಲಕ್ಕೂ ಜನಪದ ಆಚರಣೆಯ ಹಾಗೆ ಆಚರಿಸುವ ಸಾಕ್ಷ್ಯವಿದೆ. ಆ ಹಳೆಯ ಮನೆತನಗಳೂ ಉಳಿದಿವೆ.

ಈ ಶಾಸನವನ್ನು ಮತ್ತಷ್ಟು ಪರಿಶೀಲಿಸುವಲ್ಲಿ ಇತಿಹಾಸದ ಪದರುಗಳೂ ಹಣಿಕುವಂತಿವೆ. ಅದನ್ನು ಈ ಪ್ರದೇಶದ ಕೆಲವು ತಾಮ್ರ ಶಾಸನಗಳ ಪಾಠಗಳೊಡನೆ ಹೋಲಿಸಿದರೆ, ಯಾವ ಶಾಸನ ಹೇಗೆ, ಯಾವಾಗ ಸೃಷ್ಟಿಯಾಯಿತು? ಎಂದು ತಿಳಿಯಲೂ ಅನುಕೂಲಿಸುವಂತಿದೆ.

### I. ಸದ್ಯದ ಶಾಸನದ ವಿಷಯುಗಳು

೧ ಪ್ರಸ್ತುತ ಶಾಸನದಲ್ಲಿ ಆರಂಭವು ಶಿವಪರವಾದ 'ನಮಸ್ತುಂಗ . .' ಶ್ಲೋಕದಿಂದ ಆರಂಭವಾಗಿ ೬ನೇ ಸಾಲಿನವರೆಗೆ ಇರುವ ಸಂಸ್ಕೃತ ಭಾಷೆಯು ಸ್ಖಾಲಿತ್ಯಗಳೊಡನೆ ಹರಿದಿದೆ.

೨ **ಶಾಸನದಲ್ಲಿ ಬರುವ ರಾಯರು** (ಚಕ್ರವರ್ತಿ ಯಾ ದೊರೆಗಳು): ವೀರ ಪ್ರತಾಪ ಬುಕ್ಕ ಭೂಪತಿರಾಯಲವಾರು, ಶಂಕರ ರಾಯಲವಾರು, ದೇವರಾಯಲವಾರು ಗುಂಡಮರಾಯಲ ವಾರು; **ನಾಯಕರು** : ಭಡುವಲವಾಡಿ ಚದುವಲರಾಯ, ಅವನ ಮಕ್ಕಳು ರಾಮಲಿಂಗನಗೌಡು, ರಂಗನಗೌಡು, ಚಿಕ್ಕನ ಗೌಡು, ಬಸವನಗೌಡು, ಯಿೂರನಗೌಡು ಮಲ್ಲೇಗೌಡು, ಕೊಳದ ಮಲ್ಲೆಗೌಡು (ಒಟ್ಟು ಏಳು), ಇವರಲ್ಲದೆ ಕೊಳದ ಮಲ್ಲೇಗೌಡನ ಮಗ ಕಂಬಿ(ಚಿ!) ಮಲ್ಲೇಗೌಡು ಹಾಗು ಕೊಂಡಮನಾಯಿಡು, ಮುಂಮಡಿ ಚಿಕಪಗೌಡ

೩ **ನಾಯಕರ ಧರ್ಮಾನುಸರಣೆ ಹಾಗು ಕುಲಗೋತ್ರದ ವಿವರ** : ಏಳು ಗೌಡುಗಳು ಶಿವಾಚಾರದವರಾಗಿ **ಬಡವನೊರು** ಬೆಡಗಿನವರಾಗಿದ್ದು ಕುಂಚಟಿಗ ವೀರಶೈವರೆನಿಸಿದ್ದರು; ಜಂಗಮಾರಾಧಕರಾಗಿದ್ದರು.

೪ **ಆರಾಧನಾ ದೈವಗಳು** : ರಾಮಲಿಂಗುಡು (ರಾಮಲಿಂಗೇಶ್ವರ), ಬಿಸಿಲು ಮಲ್ಲೇಶ್ವರ, ಕೊಳದ ಮಲ್ಲೇಶ್ವರ, ಚನ್ನಮಲ್ಲಸ್ವಮುಲ (ಶ್ರೀಶೈಲ ಮಲ್ಲಿಕಾರ್ಜುನ!) (ಹಂಪಿ) ವಿರೂಪಾಕ್ಷ, ಅಸುರಾಯಿನಿ ಇತ್ಯಾದಿ. ಈ ದೇವರಿಗೆ ವರಹದಾನ, ಸುಂಕ ಹಾಗು ಜಂಗಮಾರ್ಚನೆಗೆ ಪಾದಕಾಣಿಕೆ, ಅರ್ಪಿಸುವುದಿತ್ತು. ಆದರೆ ಈ ಶಾಸನದಲ್ಲಿ ನೊಣಬೇಶ್ವರ ದೇವರ ಪ್ರಸ್ತಾಪವಿಲ್ಲ. 'ಆ ಸುರಾಯುನಿ (ಅಥವಾ ಅಸುರಾಯಿನಿ) ಗುಡಿ ಕಟಕಿಂದ ಕೊಳದ ಮಲ್ಲೇಶ್ವರುನಿ ಗುಡಿ' ಎಂದಿರುವಲ್ಲಿ (ಕೊಂಡವಾಡಿ ಕೆರೆ ಕೆಳಗಿನ ಗುಡಿಯಾಗಿರುವಲ್ಲಿ) ಚವುಡಮ್ಮ ದೇವತೆಗೆ (ಬನಶಂಕರಿ) ಅನ್ವಯವೇ? ಎಂಬುದರ ಪರಿಶೀಲನೆಯಾಗಬೇಕಿದೆ.

೫ **ಬರುವ ಊರಿನ ಹೆಸರು** : ಯಿಜಯನಾಗ್ರ ಪಟ್ಟಣ (ವಿಜಯನಗರ/ಮುಮ್ಮಡಿ ಪಟ್ಟಣ), ಬಡುವಲ ಸೀಮೆ, ಗನಗಿರಿ (ಪೆನುಗೊಂಡೆ), ದೇವಗಿರಿ, ಬಿಸಲಪಲ್ಲಿ, ಮಂಗಪಲ್ಲಿ ವೂಣಿಸಿವಾಡಿ, ಸರುಪಟ್ಣ(!)

೬ **ಊರಿನ ಜನಾಂಗಗಳು ಹಾಗು ಕಾಯಕ** : ಬಡವನೊರು ಕುಂಚಟಿಗ ಶಿವಾಚಾರಸ್ಥರು, ಗೌಡಿಕೆ ಪಟೇಲರು, ದೇಶಕರಣ ಶಾನುಭೋಗ ಭಟ್ಟರು, ಬಡಗಿ, ಗಾರೆಕೆಲಸಿಗರು, ಕುಂಬಾರ, ಅಗಸ, ತಳವಾರ, ಬೋಯಿ, ಮಾದಿಗ, ಛಲವಾದಿ ಇತ್ಯಾದಿ ೧೮ ಫಣ ಕಟ್ಟಿನವರು.

೭ **ಅರ್ಪಿಸಿದ ರಾಜಧನ** (ಪೂಗದಿ), ದಾನಕ್ಕೆ ಬಳಸಿದ ಧನ ಹಾಗು ದಾನದ ಬಗೆ : ರಾಮಟಂಕಿ ವರಹಗಳು, ಕಾಸುಗಳು, ಬಂಡಿ ದ್ರವ್ಯಗಳು, ಕಡಾಯಿ ದ್ರವ್ಯಗಳು; ಲಕ್ಷ್ಮೀಪತಿ ವರಹಗಳು (ಗದ್ಯಾಣ); ಬ್ರಹ್ಮಮಾನ್ಯ, ದೇವಮಾನ್ಯ, ಭಟಮಾನ್ಯ, ಆಯಗಾಂಡ್ಲು ಆಯ ಇತ್ಯಾದಿ ಅಲ್ಲದೆ, ದಾನ ಶಾಸನದ ಸಾಂಪ್ರದಾಯಿಕ ಐದು ಲಕ್ಷಣಗಳು : ದೇವಸ್ತುತಿ, ವಂಶವಿವರ, ದಾನ, ದಾನಿತ ವಿವರ, ಫಲಶ್ರುತಿ ಕೂಡ ಈ ಶಾಸನದಲ್ಲಿದೆ ಆದರೆ ಸ್ವಹಸ್ತ ಮುದ್ರೆ ಕಾಣುವುದಿಲ್ಲ.

೮ **ಶಾಸನದ ಘಟನೆಗಳು** : ವಿಜಯನಗರದ ಬುಕ್ಕರಾಯನಲ್ಲಿಗೆ ಶಿವಾಚಾರದ ಬಡವನೊರು ಕುಂಚಟಿಗ ಕುಲದ ರಾಮಲಿಂಗನ ಗೌಡ ಹಾಗು ಸೋದರರು ಹೋಗಿ ಆರು ಬಂಡಿದ್ರವ್ಯವನ್ನು (ಬಹುಶಃ ಸೀಮೆಯೊಂದರಿಂದ ವಶಪಡಿಸಿಕೊಂಡದ್ದು ಅಂದರೆ ಬಹುಶಃ ಕಾಳಗದಲ್ಲಿ ಗೆದ್ದು) ವಿರೂಪಾಕ್ಷ ಸಾಕ್ಷಿಯಾಗಿ ಅರ್ಪಿಸಿದ್ದು; ಆ ಚಕ್ರವರ್ತಿಯ ಅಪ್ಪಣೆ ಪಡೆದು, ಕಲ್ಯಾಣ ಪಟ್ಟಣಕ್ಕೆ ಹೋಗಿ, ದೇವದಾನ ಹಾಗು ಜಂಗಮ ಪಾದಕಾಣಿಕೆ ಕೊಟ್ಟು ಕೊಂಡ ಮನಾಯಿಡು ಅಂಕೆಗಿದ್ದ ಪ್ರದೇಶದಲ್ಲಿ ಪಟ್ಟಣ ಸ್ಥಾಪಿಸುವ ಬಗ್ಗೆ ಘನಗಿರಿ (ಪೆನುಗೊಂಡೆಯ) ವಿಜಯನಗರ ದೊರೆಯಿಂದ ಆದೇಶ ಪಡೆದು ಮುಂಮಡಿ ಚಿಕ್ಕಪ್ಪಗೌಡನು ಆರು ಬಂಡಿಗಳಲ್ಲಿ ಪರಿವಾರ ಸಮೇತ ಜಾನುವಾರು ಸಹಿತ ಹುಣಿಸವಾಡಿಯ ಪಕ್ಕ ಮುಮ್ಮಡಿಪಟ್ಟಣವನ್ನು ಸ್ಥಾಪಿಸಿದ. ಕೊಳದ ಮಲ್ಲೇಶ್ವರ ಹಾಗು ಇತರ ಗುಡಿಗಳನ್ನು ಆ ಪ್ರದೇಶದಲ್ಲಿ ಸ್ಥಾಪಿಸಲಾಯಿತು; ೧೮ ಫಣಕಟ್ಟಿನ ಜನರೂ ಅಲ್ಲಿ ನೆಲೆಗೊಂಡರು, ಮಠವೂ ಸ್ಥಾಪನೆ ಆಯಿತು. ಸರ್ವರ ಸಮಕ್ಷಮದಲ್ಲಿ ದಾನಾದಿಗಳು ನಡೆದು ಸಮ್ಮತಗೊಂಡು ಲಿಂಗ ಮುದ್ರೆ ಸಹಿತವಾಗಿ ಮಾನ್ಯಗಳ ಗಡಿಗುರ್ತಿಸಿ ನೀಡಲಾಯಿತು.

ಬಹುಶಃ ದೇಗುಲದ ಸ್ಥಾನಿಕನಾಗಿದ್ದ ಕೊಳದ ಮಲ್ಲೇಗೌಡನಿಂದ ಹಿಡಿದು ಅವನ ವಂಶ ಪರಂಪರೆಯವರು ಅನುಭವಿಸುವಂತೆ ಅವನಿಗೆ ಮಾನ್ಯ ನೀಡಲಾಯಿತು. ಜನವಾಡಿಕೆಯಲ್ಲಿ ವಿಜಯ ನಗರದರಸರಿಂದ ಆದೇಶಿತವಾಗಿ ದತ್ತವಾದ, (ನಾಗಮುರಿ ಆಯುಧಶೌರ್ಯದ ಕಾರಣ!) ಪಟ್ಟಣವಾದ ಕಾರಣ ಯಿಜಯ ನಾಗ್ರ ಪಟ್ಟಣವೆಂದೂ ಮುಮ್ಮಡಿ ಪಟ್ಟಣಕ್ಕೆ ಜನವಾಡಿಕೆಯಾದ ಸೂಚನೆಯೂ ಇದೆ.

೬ **ಉಕ್ತ ಶಾಸನ ಕಾಲ** : ಶಕ ೧೨೧೨ನೆ ಭಾವನಾಮ ಸಂವಂತ್ಸರ

**II. ಹೋಲುವ ಅನ್ಯಶಾಸನೋಕ್ತಗಳು**

i. ಮಧುಗಿರಿ ತಾ. ಶ್ರಾವಂಡನ ಹಳ್ಳಿ ಪಟೇಲ್ ಮಲ್ಲೇಗೌಡನಲ್ಲಿದ್ದ ತಾಮ್ರ ಶಾಸನದಲ್ಲಿ [ಎ.ಕ.೧೨, ಮಧು. ೭೪; ಕ್ರಿ.ಶ. ೧೩೭೦(?) ರೈಸರು ಇಟ್ಟ ಪ್ರಶ್ನೆ ಚಿಹ್ನೆ], **ಬುಕ್ಕ ಭೂಪತಿ ರಾಯಲವಾರು**, ಪೆನ್ನಗುಂಡು ಗುಂಚಿಯ ರಾಯಲವಾರು (ಪೆನುಗೊಂಡೆ-ಗುತ್ತಿಯ ಹರಿಹರನೆ!) ಔಬಲಿರಾಯಲುವಾರು **ಶಕ ೧೦೦೪ ಅಗುನೆಟಿ ಸಾಧಾರಣ ಸಂವತ್ಸರ. . ಲಿಂಗ ಧಾರಣ** ಚೇಸಿನ ಶ್ರಾವಂಡವಾಂಡ್ಲು ಮಲ್ಲನಗವುಡು... (.. ನಾಗರಕಟ್ಟ . ವೆಕ್ಕಲರಾಯಡು ಸಹ ವಿಜಯನಗರಂ ವಿರೂ ಪಾಕ್ಷ ಗುಡಿ ಲೋನ ಶಾಸನ ಕಂಚಿ ವರದರಾಯನಿಗವೀ ಮುಂದರ ಶಾಸನಂ... **ಕೊಂಡಮನಾಯಡು** ಯಿ ಪಂನೆಂಡು ಆಯಿಗಾಂಡ್ಲು .... (Penagonda Gunciya Raya and Aubhali Raya ruling a number of Rayas, Gowdas... made a grant of land..) ಎಂದೆಲ್ಲ ಇದೆ.

ii. ಪಾವುಗಡ ತಾ. ರಾಜವಂತಿ ಗ್ರಾಮದ ಪಟೇಲ್ ಮೈಲಾರ ಗೌಡನಲ್ಲಿದ್ದ ತಾಮ್ರಶಾಸನದಲ್ಲಿ (ಪಾವುಗಡ ತಾ. ೧೮, ರಾಜವಂತಿ; ಕ್ರಿ.ಶ. ೧೩೬೬ (?) ರೈಸರದು ಪ್ರಶ್ನೆ ಚಿಹ್ನೆ) **'ಶ್ರೀ ರಾಮಾಯನಮಃ .... ನಮಸ್ತುಂಗ** ಶಿರಃ ಶಾಂಬಿತ... ನರಾರಂಭಮುಲ.... ಶಕವರುಷಂಬುಲು **೧೨೧೨ ಅಗುನೆಟ ಭಾವನಾಮ ಸಂವತ್ಸರ..** ವಿಜಯಾನಗರದ **ಶ್ರೀ ಬುಕ ಭೂಪತಿ ರಾಯಲವಾರು** ಶಂಕರರಾಯಲವಾರು ಗುಡಂ ರಾಯುಲವಾರು ಅಂಬೋಜರಾಯಲವಾರು **ಗೊಲ್ಲಗಿರಿ** ಪೆಟ್ಲಂಗವುಡು ಹೊಂನಕಳಸರಾಯುಡು ಯಿಯ್ಯನ ಕೊಮಾ ರುಡುರಾಜು ದೇವೇಗವುಡು..... **ಬಂಗಾರುಗೋತ್ರಂ**...ವೀರು ಯೇಡು ಗುರುಯೇಡು ಅಂಡಳಾಲವಾರು ವೀರು ಗೊಲಗಿರಿ ಪಟ್ಣಂ ವಿಡಿಚಿ ವಿಜಾನಗರಾನಿಕಿ ವಚಿರಿ ವೀರಿ ಕರಣಂ... ಬೇಟಿ ಆಯಿರಿ ರಾಯಲವಾರು ವೀರು ದಂಡು ಮಾರ್ಬಲಂ ಚೂಚಿ ಬಹು ಸಂತೋಷ ಪಡಿರಿ ವೀರಿಕಿ ಯಿಚಿನ ಬಿರುದುಲು... **ಪಟ್ಲಕು ಗೋತ್ರಂ.. ನೆಲ್ಲೂ ಗೋತ್ರಂ...ಕಾಸಿ ಗೋತ್ರಂ.. ಮಟಲಿಗೋತ್ರಂ**.... ವಿಜಾನಗರಂ ವಿಡಿಚಿ **ಮಯಿ ಲಾರಪಟ್ನಾ** ನಕು ವಚಿರಿ.. **ವೋರಗಲು** ಪಟ್ಟಾನಕು ವಚಿರಿ.. ಪ್ರತಾಪರುದ್ರನಿ ಬೇಟಿ ಆಯಿರಿ..ಅಪಣ ತೀಸುಕೋನಿ..ವಚಿರಿ **ನಾಗಪುರಿ** ಪಟ್ನಾನಕು ದಿಗಿರಿ.. ಅಂಬೋಜರಾಯಲವಾರು ವಚಿರಿ ಹರಿರಾಮುಡು.... ವೀರಿಕುಲಂ ವುಪಿನಿ ಕೊಳಗಂವಾರು ಶಿರೆಟಿಕಾಂನ ಗವುಡು **ಲಿಂಗವಂತುಡು** ವೀರು..... ರಾಜರಾಜ ಜಗದೇಕವೀರ ಹರಿಹರ ವರಪ್ರಸಾದ ಶ್ರೀ **ಭದ್ರಕಾಳಿಕಾ ಪೂಜಾ ವಿಧೇಯ** ಸಾರ್ವಭೌಮ ಶ್ರೀ ಬುಕ ಭೂಪತಿರಾಯ', ಎಂದೆಲ್ಲ ಉಕ್ತವಿದೆ.

iii. ಮಧುಗಿರಿ ತಾ. ಮಿಡಿಗೇಶಿ ಹೋಬಳಿ ಶಾನುಭೋಗ ನಾಗೇಶ ರಾಯರಲ್ಲಿದ್ದ ತಾಮ್ರಶಾಸನದಲ್ಲಿ (ಎ.ಕ. ೧೬-ಅನುಬಂಧ ಸಂಪುಟ-ಮಧುಗಿರಿ ೧೧೭; ಮಿಡಿಗೇಶಿ, ಕ್ರಿ.ಶ. ೧೬೧೨) 'ಶ್ರೀಮಲ್ಲೇಶ್ವರ ಸ್ವಾಮಿ ವರಪ್ರಸಾದಕರಾದಂಥಾ ವಿಕ್ರಮಶಕೆ ೧೪೦೦ ವರುಷ ಪರ್‍ವಿಧಾವಿ ನಾಮಸಂವತ್ಸರ....ಬುಡ 1ಕೊನೆ3ವುಳ್ಳ ವಂಶಸ್ಥರು ಶೆಟ್ಟಿನೋರು ದೊಡ್ಡಮಲ್ಲ ಶೆಟ್ಟಿ... ಮುತ್ತಿನ ವ್ಯಾಪಾರ.. ಆಗ್ಯೆ ಶ್ರೀ **ಮಿಡಿಗೇಶಿ ಮಲ್ಲೇಶ್ವರ ವರದಿಂದ ಉತ್ಪನ್ನರಾದ** ನಮ್ಮ ಹಿರಿಯರು 'ಮಿಡಿಗೇಸಿಯಲ್ಲಿ ಈ ಮಲ್ಲೇಶ್ವರ ಸ್ವಾಮಿ ದೇವಸ್ಥಾನ ಸ್ಥಾಪಿಸಿದ್ದು... ನಮ್ಮ ಹೆಣ್ಣುಮಗಳು ಚಿಕ್ಕ ಮಲ್ಲಕ್ಕನು ಈ ದೇವಸ್ಥಾನದ ಮುಂದೆ ಅಗ್ನಿಪ್ರವೇಶ ಹೊಂದಿದಳು... ಈ ದೇವಸ್ಥಾನ ಅರ್ಧಾಂತಕ ವಾಗಿ ಗರ್ಭಗುಡಿ ಒಂದೇ ನಮ್ಮ ಹಿರಿಯರು ಸ್ಥಾಪಿಸಿದ್ದು... ಆನೆಗೊಂದಿ ಸ್ಥಾನದವರೇ ಮೂಲ ಗುರುಗಳು ಈ ದೇವರೇ ವಂಶಪಾರಂಪರ್ಯ ಬಂದದ್ದು....' ಎಂಬ ಮಾತುಗಳಿವೆ.

iv. ಮಧುಗಿರಿಯ ಗುರಮ್ಮನ ಮಠದ ಬಳಿಯ ಬೆಟ್ಟದ ಗವಿಯ ಚಾವಣಿ **ಬಂಡೆ ಶಾಸನದಲ್ಲಿ** (ಎ.ಕ. ೧೬. ಮಧುಗಿರಿ ೧೧೧; ಕ್ರಿ.ಶ. ೧೬೦೬) **'ಶ್ರೀ ವೃಷಭೇಶ್ವರಾಯನಮಃ** ಪರಾಭವ ಸಂವತ್ಸರದ।... ಶ್ರೀಮನ್ಮಹಾನಾಡ ಪ್ರಭು ಬಿಜಾ।ವರದ ಮುಂಮಡಿ ಚಿಕ್ಕಪಗೌಡನ ಪುಣ್ಯ ಸ್ತ್ರೀ ಹಿರಿ।ಯಂಮನು ಭಕ್ತಿಯಿಂದ ಶಿವಧರ್ಮವಾಗಿ ಕಟ್ಟಿಸಿದ ವಿರಕ್ತ।ಮಠದ ಗುರು ವಿರಕ್ತಮೂರ್ತಿಗಳಿಗೆ... ಗದಿಗೆ... ಶ್ರೀಶ್ರೀಶ್ರೀ' - ಎಂಬ ಸಾಲುಗಳಿವೆ.

**III. ಇತಿಹಾಸದ ಕೆಲವು ಅನ್ಯ ಆಕರಗಳು** : 'ಮಧುಗಿರಿ ಚರಿತ್ರೆ', 'ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ' ಇತ್ಯಾದಿ ಕೃತಿಗಳು ಕೆಲವು ಸಂಗತಿಗಳನ್ನು ಪರಿಚಯ ಮಾಡಿಕೊಡುತ್ತವೆ.[೨೫] ಕ್ರಿ.ಶ. ೧೪೯೯ರ ಮೊದಲ ಸ್ಥಾಪಕ **ಮಾರೇಗೌಡನ** ನಂತರ ಅವನ ಮಗ ವೀರೇಗೌಡ **ಮುಮ್ಮಡಿ ಪಟ್ಟಣ**ವನ್ನು ಅಭಿವೃದ್ಧಿ ಗೊಳಿಸಿದ. ಮುಂದೆ ಪಟ್ಟಕ್ಕೆ ಬಂದ ಅವನ ಮಗ ದೊಡ್ಡೇ ಗೌಡನು ಯುದ್ಧದಲ್ಲಿ ವಿಜಾಪುರದ ಆದಿಲ್‌ಶಹನಿಂದ ಹತನಾದ : ಆ ದೊಡ್ಡೇಗೌಡನ ಮಗ ಹಿರೇ ಚಿಕ್ಕಪಗೌಡನು (ಮಧುಗಿರಿ ಬಳಿಯ) ತುಂಗವಟಿ ಗೌಡರಲ್ಲಿದ್ದು ಬೆಳೆದು ದೊಡ್ಡವನಾಗಿ ಮುಮ್ಮಡಿಪಟ್ಟಣವನ್ನು ಜೀರ್ಣೋದ್ಧಾರ ಮಾಡಿದ. ಬಿಜ್ಜ ಮಹಾದೇವಿ ಆದೇಶದಂತೆ ವಿಜಯನಗರದ ಕೃಷ್ಣದೇವರಾಯನ ಅಪ್ಪಣೆ ಪಡೆದು ಕ್ರಿ.ಶ. ಸು. ೧೫೨೪ರಲ್ಲಿ ಮುಮ್ಮಡಿ ಪಟ್ಟಣದಿಂದ (ಪಶ್ಚಿಮಕ್ಕೆ) ಬಿಜ್ಜಾವರ ಗ್ರಾಮವನ್ನು ಕಟ್ಟಿ ರಾಜಧಾನಿಯನ್ನು ಅಲ್ಲಿಗೆ ಬದಲಾಯಿಸಿ ವೀರಭದ್ರ ಸ್ವಾಮಿಯ ಪ್ರತಿಷ್ಠೆ ಮಾಡಿದ. ಕ್ರಿ.ಶ. ೧೫೭೭ರಲ್ಲಿ ಪೆನುಗೊಂಡೆಯನ್ನು ಮುಸಲ್ಮಾನರು ಮುತ್ತಿದಾಗ ಅಂದಿನ ದೊರೆ ಶ್ರೀರಂಗರಾಯನ ನೆರವಿಗೆ ಹಿರೇಚಿಕ್ಕಪ್ಪಗೌಡನ ಮಗ ಕರಿತಿಮ್ಮ ಚಿಕ್ಕಪ್ಪಗೌಡ ಬಿಜ್ಜಾವರದ ಪ್ರಭುವಾಗಿದ್ದವ ಹೋಗಿ ಶತ್ರುಗಳನ್ನೂ

ಹಿಮ್ಮೆಟ್ಟಿಸಿದ ಕಾರಣ ವೀರ ಸನ್ಮಾನಿತನಾದ. ಇವನಿಗೆ ರಾಣಿ ಸೋಮಾಂಬೆಯಲ್ಲಿ ತೋಂಟದ ಸಿದ್ಧಲಿಂಗ ಶಿವಯೋಗಿಯ ಆಶೀರ್ವಾದದಿಂದ ಇಮ್ಮಡಿ ಚಿಕ್ಕಭೂಪಾಲ (ಇವನ ಹೆಸರಿನಲ್ಲಿ 'ಸಾಂಗತ್ಯ' ಕಾವ್ಯವೂ ಇದೆ) ಜನಿಸಿದ. ಇವನು ಬಿಜ್ಜಾವರ ಮನೆತನದ ಬಹು ಪರಾಕ್ರಮಶಾಲಿಯಾಗಿ, ಮಧುಗಿರಿಯನ್ನು ಸ್ಥಾಪಿಸಿ ವಿಸ್ತರಿಸಿದ. ಇಮ್ಮಡಿ ಚಿಕ್ಕಭೂಪಾಲನ ನಂತರ ಮಗ ಸಿಪ್ಪೇಗೌಡನಿಗೆ ರಾಜಗುರು **ಚೋಳಬಸವೇಶ್ವರರು**, ಪಟ್ಟಾಭಿಷೇಕ ಮಾಡಿ ಮುಮ್ಮಡಿ ಚಿಕ್ಕಪ್ಪಗೌಡನೆಂದು ಅಭಿಧಾನವಿರಿಸಿದರು. ಇವನು ರಾಜಧಾನಿಯನ್ನು ಬಿಜ್ಜಾವರದಿಂದ ಮದ್ದಗಿರಿಗೆ ಕ್ರಿ.ಶ. ೧೫೫೮ರಲ್ಲಿ ವರ್ಗಾಯಿಸಿದ. ಮುಮ್ಮಡಿ ಪಟ್ಟಣದ ನೊಳಂಬೇಶ್ವರ ದೇಗುಲವನ್ನು ಹಿಂದೆ ಮುಸಲ್ಮಾನರು ಹಾಳುಗೆಡವಿದ್ದ ಕಾರಣ ಅಲ್ಲಿನ ಕಂಬಗಳು, ವಿಗ್ರಹಗಳನ್ನು ತಂದು ಕ್ರಿ.ಶ. ೧೬೪೬ರಲ್ಲಿ ಮಧುಗಿರಿವೆಂಕಟರಮಣಸ್ವಾಮಿ ಮತ್ತು ಶ್ರೀ ಮಲ್ಲೇಶ್ವರಸ್ವಾಮಿ ದೇಗುಲಗಳನ್ನು ಕಟ್ಟಿ ಅಲ್ಲಿಗೆ ಬಳಸಿದ.

**IV.** ಕೊಂಡವಾಡಿ ಕೃಷ್ಣಮೂರ್ತಿಯವರು ತಮ್ಮ ಒಂದು ಲೇಖನದಲ್ಲಿ; ಜಯಮಂಗಲಿ ನದಿ ಮತ್ತು ಕೊಂಡವಾಡಿ ಮಧ್ಯದಲ್ಲಿ ಮಧುಗಿರಿ ಮಹಾನಾಡ ಪ್ರಭುಗಳ ಮೊದಲ ರಾಜಧಾನಿ ಇತ್ತು. ಕೊಂಡವಾಡಿ ಚಿಕ್ಕಪ್ಪಗೌಡನ ಮಕ್ಕಳೇ ಮಾರೇಗೌಡ ಸಹಿತವಾಗಿ ಏಳು ಜನರಿದ್ದು ಕೊಂಡವಾಡಿ ಕೋಟೆ ಕಟ್ಟಿದರು ಎಂದಿದ್ದಾರೆ. ಜಯಮಂಗಲಿ ನದಿ ಸನಿಹ **ಎತ್ತರವಾದ ಸಮತಟ್ಟು** ಪ್ರದೇಶದಲ್ಲಿ ಮುಮ್ಮಡಿಪಟ್ಟಣ ನಿರ್ಮಿಸಿದರೆಂದಿದ್ದಾರೆ (ಆ ಪ್ರದೇಶವು ಇಂದಿಗೂ ಗಮನಿಸಿದರೆ ಹಾಗೆಯೇ ಇದೆ). ಈ ಅರಸು ಪರಿವಾರದವರು ಶಕ ೧೫೯೪ (ಕ್ರಿ.ಶ. ೧೫೭೨)ರಲ್ಲಿ ಮುಮ್ಮಡಿ ಪಟ್ಟಣದ ಗುರುಗಳಿಂದ ಶಿವದೀಕ್ಷೆ ಪಡೆದರು. ಸಿದ್ಧಯ್ಯದೇವರು ಎಂಬ ಆ ಗುರುಗಳು, ಶೈವಸಂಪ್ರದಾಯದಂತೆ ಬನಶಂಕರಿ ದೇವಿ (ಚೌಡೇಶ್ವರಿ)ಯನ್ನು ಅಗಳಿ ಸಾಹುಕಾರ ಶರಣ ಬನಪ್ಪಶೆಟ್ಟರು, ಕುಂಚಟಿಗ ಬಡವನೋರು ಗೋತ್ರದ ಮನೆತನದವರ ಸಮಕ್ಷಮ ಪ್ರತಿಷ್ಠಾಪಿಸಿದರು. ನಂತರ ರಾಮಲಿಂಗೇಶ್ವರಸ್ವಾಮಿ, ವೀರಭದ್ರಸ್ವಾಮಿಯ ಪ್ರತಿಷ್ಠಾಪನೆ ಮಾಡಿ ಕೊಂಡವಾಡಿ ಕೆರೆ ಹಿಂಬದಿಯಲ್ಲಿ ಬಿಸಿಲು ಮಲ್ಲೇಶ್ವರ ವಿಗ್ರಹ ಪ್ರತಿಷ್ಠಾಪನೆ ಮಾಡಿದರು[೨೯]. ಇದಕ್ಕೆಲ್ಲ ತಮ್ಮಲ್ಲಿಯ ತಾಳೆಗರಿ ಪ್ರತಿಯೆ ಆಧಾರವೆಂದಿದ್ದಾರೆ.

**V.** '**ಕಾಮಕುಲ ಉದ್ಭವ ಪುರಾಣ**'ದ ರೀತ್ಯಾ ಕುಂಚಟಿಗರ ಇತಿಹಾಸ ಹೇಳುವಲ್ಲಿ, ಕಾಮಧೇನು ಕ್ಷೀರ ಜನಿತರು, ಲಿಂಗದಿಂದ ಸಂರಕ್ಷಿತರು ಆಗಿದ್ದು ೪೮ ಬೆಡಗುಗಳನ್ನು ಕುಂಚಟಿಗರು ಹೊಂದಿದ್ದಾರೆ; ನಂದಿಯು ತಿಳಿಸಿರುವಂತೆ ಹುಂಡೇನವರು, ಜಾನಕಲ್ಲಿನವರು ಹರಿಷಿನವರು (ಅರಸಿನವರು) ಮುಂತಾದ ಪ್ರಾಚೀನ ಕುಳಗಳಿಂದ ಹಿಡಿದು ತಬ್ಬಕ್ಕಿಯವರೆಗೆ ಇರುವ ೪೮ ಬೆಡಗು ಗಳಲ್ಲಿ ಬಡವನವರು ಕೂಡ ಬರುತ್ತಾರೆ,[೩೦] ಎಂದಿದೆ.

- ಇವಿಷ್ಟನ್ನು ವಿವೇಚಿಸುವಲ್ಲಿ ಗಮನಕ್ಕೆ ಬರುವ ಅಂಶಗಳೆಂದರೆ :

೧. ನೊಳಂಬ ಪಲ್ಲವ ಮನೆತನದಿಂದ ಉದಿಸಿದ ಮುಮ್ಮಡಿಪಟ್ಟಣದ ಸ್ಥಾಪಕರು ಮೊದಲಿಗೆ ಸೊನ್ನಲಿಗೆ ಸಿದ್ಧರಾಮನ ವಂಶಪಾರಂಪರ್ಯ ಭಕ್ತರು. ೨. ವಿಜಯನಗರದ ಇಮ್ಮಡಿ ಹರಿಹರನಿಂದ, ತಮ್ಮ ಶೌರ್ಯಕ್ಕಾಗಿ ಮಾನಿತರಾಗಿ ಮುಮ್ಮಡಿ ಪಟ್ಟಣವನ್ನು ಜಯಮಂಗಲಿ ನದಿ ಮತ್ತು ಕೊಂಡವಾಡಿ ನಡುವೆ ಕಟ್ಟಿದರು. ಆದರೆ ವಿಜಯನಗರದ ೧ನೇ ಬುಕ್ಕನೊಡನೆ ಭೇಟಿ ಮಾಡಿದರೆಂದು ಹೇಳಲಾಗಿದೆ. ೩. ವಿಜಯನಗರ ಸಾಮಂತರಾಗಿ ಯಿಜಯನಾಗರ ಪಟ್ಟಣವೆಂದೂ ಮುಮ್ಮಡಿಪಟ್ಟಣವನ್ನು ಕರೆದುಕೊಂಡಂತೆ ತೋರುತ್ತದೆ. **ಜಯಮಂಗಲಿ** ಹೆಸರಿನ ನದಿ ತೀರ ಹಾಗು **ನಾಗಮುರಿ** ಆಯುಧ ಬಳಸಿ ಬಂದ ಜಯದ ಕಾರಣ ಆ ಹೆಸರು ಬಳಸಿರುವಂತಿದೆ. ೪. ಮುಮ್ಮಡಿಪಟ್ಟಣವು ಮೂರು ಬಾರಿ ಜೀರ್ಣೋದ್ಧಾರಗೊಂಡ ಕಾರಣವೂ ಆ ಹೆಸರಿಗೆ ಕಾರಣವಾಗಿರಬಹುದು ಹಾಗು ಮುಂದೆ ಬಂದ ವಂಶಿಕ ದೊರೆಗಳ ಹೆಸರುಗಳ ಪುನರಾವರ್ತನೆಯ ಕಾರಣ ಸೂಚಿಸುವ ಸಂಖ್ಯಾ ಉಪಾಧಿಯು (ಇಮ್ಮಡಿ, ಮುಮ್ಮಡಿ ಇತ್ಯಾದಿ) ಇದರಲ್ಲಿ ಶ್ಲೇಷಾನ್ವಯವಾಗಿರಲೂಬಹುದು. ೫. ಇವರೆಲ್ಲ ಶಿವಪರವಾದ ಶಿವಾಚಾರಸ್ಥರಾಗಿ ವೀರಶೈವವನ್ನು ಅನುಸರಿಸುತ್ತಿದ್ದು ಕಾಲಾಂತರದಲ್ಲಿ ವೈಷ್ಣವ ಪರಂಪರೆಯಲ್ಲೂ ವಿಂಗಡನೆಗೊಂಡರು. ೬. ಮೊದಲು ಮುಮ್ಮಡಿ ಪಟ್ಟಣದ ೧೪ ಮೈಲಿ ವಿಸ್ತಾರದಲ್ಲಿದ್ದ ಗ್ರಾಮವಾದ ಬಿಸಿಲಪಲ್ಲಿಯಲ್ಲಿ ಬಿಸಿಲು ಮಲ್ಲೇಶ್ವರ, ಕೊಳದ ಮಲ್ಲೇಶ್ವರ (ಚನ್ನಮಲ್ಲೇಶ್ವರ!) ಗುಡಿಗೆ ಅಂಟಿದಂತೆ ವೀರಶೈವ ಮಠಕ್ಕೆ ನಡೆದುಕೊಳ್ಳುತ್ತಿದ್ದರು. ಕೊಂಡವಾಡಿಯಲ್ಲಿ ರಾಮಲಿಂಗೇಶ್ವರ ಗುಡಿಯಲ್ಲದೆ ಬನಶಂಕರಿ - ಚವುಡಮ್ಮ - ಚೌಡೇಶ್ವರೀ ಗುಡಿ ಮೊದಲಿಗೆ ಮುಮ್ಮಡಿ ಪಟ್ಟಣದಲ್ಲಿದ್ದು, ಕ್ರಿ.ಶ. ೧೭೬೯ರಲ್ಲಿ ಕೊಂಡವಾಡಿಗೆ ಬದಲಾವಣೆ ಗೊಂಡಿರುವಂತಿದೆ. ಕಾರಣ ಕ್ರಿ.ಶ. ೧೬೯೧ರ ವಿರೋಧಿ ಸಂವತ್ಸರದ (ಕ್ರಿ.ಶ. ೧೭೬೯) ಬಹುಶಃ ದೇವದಾನದ ಶಾಸನವು ಗುಡಿಯ ಮುಂಬಲಬದಿಯಲ್ಲಿದೆ.[೩೧] (ಮಧುಗಿರಿ ೫೫; ಕೊಂಡವಾಡಿ ೩೧). ಕೊಂಡವಾಡಿ ಕೃಷ್ಣಮೂರ್ತಿಯವರು ತಮ್ಮ ಲೇಖನದಲ್ಲಿ ಕ್ರಿ.ಶ. ೧೫೭೨ರಲ್ಲಿ ಚೌಡೇಶ್ವರಿ ಪ್ರತಿಷ್ಠೆಯಾಯಿತು ಎಂದಿರುವುದಕ್ಕೆ ಈ ಹಿನ್ನೆಲೆಯಲ್ಲಿ ತಾರ್ಕಣೆ ಒದಗದು. ಅದಾಗಿ ಮುಮ್ಮಡಿ ಪಟ್ಟಣದಲ್ಲಿ ಬಹುಶಃ ಕ್ರಿ.ಶ. ೧೪೭೨ರಲ್ಲಿ ಪ್ರತಿಷ್ಠಾಪನೆಗೊಂಡದ್ದು, ಕ್ರಿ.ಶ. ೧೭೬೯ರ ವೇಳೆಗೆ ಕೊಂಡವಾಡಿಗೆ ದೇವಿಯ ಪ್ರತೀಕವಾಗಿ ಲಿಂಗಶಿರ ಹಾಗು ಉತ್ಸವ ಮೂರ್ತಿ ತಂದು ಪ್ರತಿಷ್ಠಾಪಿಸಿರುವಂತಿದೆ. ಬಹುಶಃ ಈ ವೇಳೆಗೆ ರಕ್ಷಣೆ ಅಥವಾ ಬರಗಾಲದ ಕಾರಣ ಹಾಳುಬಿದ್ದ ಮುಮ್ಮಡಿ ಪಟ್ಟಣದಲ್ಲಿದ್ದವರೆಲ್ಲ ಕೊಂಡವಾಡಿಗೆ ಬಂದಿರಬೇಕು. (ಬೇರೆಡೆ ಇರುವಂತೆ ಕೊಂಡವಾಡಿ ಕೆರೆಯ ಮೇಲೂ ಮೊದಲಿಗೆ ಈಕೆಯ ಗುಡ್ಡಿ ಇದ್ದಿರಬೇಕು.) ಅಲ್ಲದೆ 'ಚೌಡೇಶ್ವರಿ ಮಹಿಮೆ' ಕೃತಿಯು ಹೇಳುವಂತೆ (ಮುನ್ನುಡಿ ಪು. ೩), ದೇವಿಯನ್ನು ಪೂಜಿಸುವ ಲಾಗಾಯ್ತಿನಿಂದ ಈ ಬಡವನೊರು ಕುಲದವರು ಶಿವಲಿಂಗವನ್ನು ಕೊರಳಲ್ಲಿ ಧರಿಸುತ್ತ ಬಂದವರಿದ್ದು ಒಮ್ಮೆ ವಿಪರೀತ ಬರಗಾಲ ಬಂದ ಸಮಯದಲ್ಲಿ ಲಿಂಗವನ್ನು ಸರಿಯಾಗಿ ಪೂಜಿಸಲು ಸಾಧ್ಯವಾಗದಿದ್ದುದಕ್ಕೆ ಲಿಂಗವನ್ನು ತಂಗಡಿಗಿಡಕ್ಕೆ ಕಟ್ಟಿಬಿಟ್ಟರಂತೆ. ಬಹುಶಃ ವೈಷ್ಣವಕ್ಕೆ ಕೆಲವರು ಮತಾಂತರವಾದ ಸೂಚನೆಯ ಕತೆ ಇದೆನಿಸುತ್ತದೆ. ಆದರೆ ಕೆಲವೊಂದು ಊರುಗಳಲ್ಲಿ ಈ ಕುಲದವರು ಈಗಲೂ ಲಿಂಗಧಾರಿಗಳಾಗಿಯೇ ಉಳಿದಿದ್ದಾರೆ. ಒಟ್ಟಾರೆ 'ಮುಮ್ಮಡಿ ಪಟ್ಟಣ' ಪ್ರದೇಶದ ಎಲ್ಲ ಕುಂಚಟಿಗ ಗೋತ್ರದವರು ಆಳಿದ ಅರಸುವಂಶಿಕರು ಎಂದೂ ಅಭಿಪ್ರಾಯವಿದೆ.

ಇನ್ನು ಪ್ರಸ್ತುತ ವಿವೇಚನೆಯ ಹುಣಸವಾಡಿ ತಾಮ್ರಶಾಸನವನ್ನು ಮಧುಗಿರಿಯ ಹಾಗು ಪಾವಗಡದ ತಾಮ್ರಶಾಸನಗಳೊಡನೆ ಹಾಗು ಮಧುಗಿರಿಯ ಬಂಡೆ ಶಾಸನದೊಡನೆ ಹೋಲಿಸಿದರೆ, ಒಟ್ಟು ನಾಲ್ಕು ಶಾಸನಗಳು ಶಿವಧರ್ಮ ಪರವಾಗಿ, ಇನ್ನೊಂದು ವೈಷ್ಣವ ಪರವಾದ ಶಾಸನವಾಗಿ ಕಾಣಬರುತ್ತವೆ. ನಾಲ್ಕು ಶಾಸನಗಳಲ್ಲೂ ಹರಿಹರ ಸಮನ್ವಯವಿದೆ. ಬುಕ್ಕರಾಯನ ಹೆಸರಿದೆ. ಆದರೆ ಸಂಗಮಪುತ್ರರ ಉಳಿದ ನಾಲ್ಕು ಪುತ್ರರ ಹೆಸರನ್ನು ತಮ್ಮ ಧಾರ್ಮಿಕ ಪರಂಪರೆಗೆ ಅನುಗುಣವಾಗಿ ಬದಲಾಯಿಸಿಕೊಂಡು ಹೇಳಲಾಗಿದೆ. ಕಾಕತೀಯ ಪ್ರತಾಪ ರುದ್ರ, ತಿರುಪತಿ, ಪೆನುಗೊಂಡೆ ದೊರೆಗಳ ಸಂಬಂಧ ಹೇಳಿಕೊಳ್ಳಲಾಗಿದೆ. ತಮ್ಮ ಪಟ್ಟಣ ಸ್ಥಾಪನೆ ಬಗ್ಗೆ ಹೇಳಲಾಗಿದೆ. ಗೋತ್ರದ ವಿಷಯದಲ್ಲಿ, ಕಾಮಕುಲ ಪುರಾಣದಲ್ಲಿಲ್ಲದ ಗೋತ್ರಗಳು ಶಾಸನಗಳಲ್ಲಿ ವ್ಯಕ್ತವಾಗಿವೆ. **ಮಲ್ಲೇಶ್ವರ ವರಪ್ರಸಾದ ಜನಿತರು** ಎಂದುಕೊಂಡಿರುವುದಲ್ಲದೆ, ವೃಷಭ ಸ್ಮರಣೆ, ವಿರಕ್ತಮಠ ನಿರ್ಮಾಣವೂ ಕಂಡುಬರುವಲ್ಲಿ, ತೋಂಟದ ಸಿದ್ಧಲಿಂಗರ ಬೋಳಬಸವೇಶ್ವರರ ಭಕ್ತರಾಗಿ ಕಾಣಬರುವುದು ೧೬ನೆಯ ಶತಮಾನದಲ್ಲಿಯೆ. ಅದಕ್ಕೆ ಮುನ್ನ ಪೆನುಗೊಂಡೆ ಪ್ರದೇಶದಲ್ಲಿ ಪ್ರಭಾವಶಾಲಿ ಮಠವಾದ ಹಾಗು ಸನಿಹವೂ ಆದ ಶ್ರೀಶೈಲ ನಿಡುಮಾಮಿಡಿ ಮಹಾಸಂಸ್ಥಾನ ಪೀಠದ ಶಾಖೆಯಾದ ನಿಡುಮಾಮಿಡಿ ಮಠಕ್ಕೆ ಮುಮ್ಮಡಿ ಪಟ್ಟಣ ಜನ ನಡೆದುಕೊಳ್ಳುತ್ತಿದ್ದರೆಂದು ಕಾಣುತ್ತದೆ. ಬಡವನೂರು ವಂಶೀಕರು ಆ ಪೀಠದ ಡಾ. ಶ್ರೀ ಜಚನಿಯವರನ್ನು ಕೊಂಡವಾಡಿಗೆ ಕರೆಸುತ್ತಿದ್ದ ಬಗ್ಗೆ ಸ್ಥಳೀಯ ಹಿರಿಯರು ಹೇಳುತ್ತಾರೆ. ವೀರಭದ್ರ ಸ್ವಾಮಿ ಪ್ರತಿಷ್ಠೆ ಆ ಪೀಠದ ಪರಂಪರೆಯದಾದ್ದರಿಂದ ಕೊಂಡವಾಡಿಯಲ್ಲಿಯೂ ವೀರಭದ್ರ ಪ್ರತಿಷ್ಠೆಗೊಂಡನೆನ್ನಬೇಕು. ಅದು ಒಟ್ಟಾರೆ ಗುರು-ವಿರಕ್ತಮಠಗಳನ್ನು ಈ ಜನತೆ ಮಾನಿಸಿದ ಕುರುಹಾಗಿದೆ. ನಿಡುಮಾಮಿಡಿ ಪೀಠದ ಗೋತ್ರಪುರುಷ **ವೃಷಭೇಶ್ವರನನ್ನು** ನೆನೆಯುತ್ತ ವಿರಕ್ತ ಮಠವನ್ನು ರಾಣಿ ಹಿರಿಯಮ್ಮ ಮಧುಗಿರಿಯಲ್ಲಿ ಕಟ್ಟಿಸಿದ ಬಗ್ಗೆ ತಿಳಿಸಿರುವ ಕ್ರಿ.ಶ. ೧೬೦೬ರ ಗುರುಮ್ಮನ ಮಠದ ಶಾಸನದಿಂದ ಇದು ಸ್ಪಷ್ಟವಾಗಿ ವಿದಿತವಾಗುತ್ತದೆ. ಹುಣಸವಾಡಿ ಶಾಸನವು ಇವೆಲ್ಲಕ್ಕೂ ಸಾಕ್ಷಿಯಾಗಿ ನಿಲ್ಲುತ್ತದೆ. ಉಳಿದ ಶಾಸನಗಳಲ್ಲಿ ಬರದ **ಕಲ್ಯಾಣಪಟ್ಟಣದ** ಹಾಗು **ಚೆಂನಮಲ್ಲ** ಸ್ವಾಮಿಯ ಪ್ರಸ್ತಾಪ ಹುಣಸವಾಡಿ ಶಾಸನದಲ್ಲಿ ಕಂಡುಬರುತ್ತದೆ. ಅಂದರೆ ಈ ಪ್ರದೇಶದ ಜನತೆ ಶೈವ, ವೈಷ್ಣವ ಪರಂಪರೆಯಲ್ಲಿ ಪ್ರತ್ಯೇಕವಾಗಿ ಗುರುತಿಸಿಕೊಳ್ಳುವ ಸಂದರ್ಭವಾದಾಗ ಅಂದರೆ ಶಿವಾಚಾರದಿಂದ ವೈಷ್ಣವಾಚಾರಕ್ಕೆ ಬದಲಾದಾಗ ಎರಡು ಪರಂಪರೆಯ ಕೂಟ ಶಾಸನಗಳು ನಿರ್ಮಿತವಾದಂತಿವೆ. ತಾವು ಕೇಳಿಬಂದ ಇತಿಹಾಸವನ್ನು ಕಾಲ ವ್ಯತ್ಯಾಸವನ್ನು (ಇತಿಹಾಸ ಪ್ರತಿಕೂಲತೆ) ಗಣನೆಗೆ ತಾರದೆ, ತಮ್ಮ ಕಾಲಕ್ಕೆ ಅವನ್ನೆಲ್ಲ ನಮೂದಿಸಿಕೊಂಡಿವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಹುಣಸವಾಡಿ ಶಾಸನವು ೧೬-೧೭ನೇ ಶತಮಾನದಲ್ಲಿ, ಉಳಿದ ತಾಮ್ರಶಾಸನ ಗಳಂತೆ, ಶಕ ೧೨೧೨ ನೆಯ ಭಾವನಾಮ ಸಂವತ್ಸರ ಎಂದ ಇವುಗಳಲ್ಲಿ ಹಳಮೆಗಾಗಿ ಸೇರಿಸಿಕೊಂಡಿರುವಂತೆ ಇಲ್ಲಿಯೂ ಸೇರಿಸಿ ಕ್ರಿ.ಶ. ೧೫೫೮-೧೬೦೦ರ ಸುಮಾರಿನಲ್ಲಿ ರಚಿತವಾಯಿತೆನ್ನಬೇಕು. ಬಹುಶಃ ಕ್ರಿ.ಶ. ಸು. ೧೬೦೦ರಲ್ಲಿ ರಚಿತವಾದ ಕೂಟ ಶಾಸನವೆಂದರೂ ಐತಿಹಾಸಿಕ ಮಗ್ಗುಲುಗಳನ್ನೂ ಈ ಶಾಸನ ಪಡೆದುಕೊಂಡೇ ಬಂದಿದೆ. ಶಾಸನದ ಉಕ್ತ ಸಂಗತಿಗಳು ಬಹುತೇಕ ಕೊಂಡವಾಡಿ ಪ್ರದೇಶದಲ್ಲಿರುವ ದೇಗುಲ ನೆಲೆಗಳಿಗೆ ಸಂಬಂಧಿಸಿವೆ. ಅದಾಗಿ ಬಹುಶಃ ವಲಸೆ ಬಂದಮೇಲೆ ಈ ಶಾಸನವನ್ನು ಬರೆಸಲಾಯಿತೇ?, ನಕಲು ಮಾಡಿದ ಶಾಸನವೆ? ಎಂಬ ಅನುಮಾನಕ್ಕೂ ಕಾರಣವಾಗುತ್ತದೆ.

ಇಂದಿಗೆ ಬನಶಂಕರಿ ಎನಿಸಿರುವ ಚೌಡೇಶ್ವರಿಗೆ ಏಳು ದೇವರ ಬಂಡಿಯಲ್ಲಿ ಮೆರವಣಿಗೆ ವಿಗ್ರಹಗಳನ್ನು ಅಂದರೆ ರಾಮಲಿಂಗೇಶ್ವರ ದೇವರ ಬಂಡಿ, ಯಲ್ಲೂರು ಬಂಡಿ, ಗೌಡೇಟ್ಟಿ ಬಂಡಿ, ಅರಳಿ ಮರದ ಬಂಡಿ, ರಂಗಾಪುರ ಬಂಡಿ, ತಿಪ್ಪನಹಳ್ಳಿ ಬಂಡಿ, ಹೊಸ ಕೋಟೆ ರಂಗಾಪುರದ ಬಂಡಿಗಳಲ್ಲಿ ಕೊಂಡವಾಡಿಗೆ ಬಂದು ಪೂಜಿಸುತ್ತಾರೆ.[೩೨] ಮುಮ್ಮಡಿ ಪಟ್ಟಣದಲ್ಲಿದ್ದವರು ಶತ್ರುಗಳ ಆಕ್ರಮಣದ ಕಾರಣ ಕೊಂಡವಾಡಿ, ಹುಣಸವಾಡಿಗೆ ವಲಸೆ ಬಂದುದೇ ಇದಕ್ಕೆ ಕಾರಣವೆನ್ನುವಂತಿದೆ. (ಕೊಂಡವಾಡಿಯೆ ಚೌಡೇಶ್ವರಿಯ ಮೂಲನೆಲೆಯಾಗಿದ್ದು, ವಂಶಿಕ ಭಕ್ತರು ಬೇರೆಡೆ ವಲಸೆ ಹೋದರು ಎಂಬ ಸೂಚನೆಯೂ ಇಲ್ಲಿದೆ.) ಹೀಗಾಗಿ, ಶಾಸನದಲ್ಲಿ ಬರುವ ಸಂಗತಿಗಳಲ್ಲಿ, ರಾಮಲಿಂಗೇಶ್ವರ ಗುಡಿ, ಹಾಗು ಇತರೇ ವಿಷಯಗಳು ವರ್ತಮಾನದ ಸಂದರ್ಭದಲ್ಲಿಯೂ ಅನ್ವಯವಾಗುವಲ್ಲಿ, ಸದ್ಯದ ಶಾಸನ ಕೂಟಶಾಸನವಾದರೂ, ಇದನ್ನು ಬರೆದ ವ್ಯಕ್ತಿ ತನ್ನ ಕಾಲದ ಸಂಗತಿಗಳನ್ನೆಲ್ಲ ಸೇರಿಸಿ ಹಿಂದೆ ಕೇಳಿದ್ದ ಇತಿಹಾಸದ ವಿಷಯವನ್ನು ಕಾಲ ಸರಿಯಾಗಿ ತಿಳಿಯದೆ ತಾನು ಯೋಚಿಸಿದಂತೆ ಸೇರಿಸಿ ರೂಪಿಸಿರುವ ಶಾಸನವಿದಾಗಿದೆ. ಆದರೆ ಈ ಪ್ರದೇಶದ ಸಾಂಸ್ಕೃತಿಕ ರಾಜಕೀಯ ಆರ್ಥಿಕ ಸಂಗತಿಗಳನ್ನು ಒಳಗೊಂಡು ಗತ ಇತಿಹಾಸದ ಗತಿಯನ್ನು ತಿಳಿಯುವಲ್ಲಿ ನೆರವಾಗುತ್ತದೆ. ಈ ಮೇಲಿನ ಶಾಸನಗಳಲ್ಲಿ ಪರಿಶೀಲನೆಗೆ ಮತ್ತೂ ಅವಕಾಶವಿರಬಹುದು.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಎ.ಕ.ಸಂ ೧ (ಹೊಸತು), ೧೯೭೬, ಕೊಡಗು ಜಿಲ್ಲೆ, ಸೋ. ಪೇಟೆ. ೬೬ (ಯಡೂರು ; ಕ್ರಿ.ಶ. ೧೦೬೫) ಸೋ.ಪೇ. ೭೧( ಮುಳ್ಳೂರು : ಕ್ರಿ.ಶ. ೧೦೬೪); ಸೋ.ಪೇ.೨೬ (ಮುಳೂರು ; ಕ್ರಿ.ಶ. ೧೦೫೯)

೨. ಎಂ. ಜಿ. ನಾಗರಾಜ್, ೧೯೮೯, **ಕೊಡಗು ಜಿಲ್ಲೆಯ ಸುಗ್ಗಿಕಟ್ಟೆಗಳು**, ಶ್ರೀ ಗೌರೀಗಂಗಾ ಪ್ರಕಾಶನ, ರಾಜಾಜಿನಗರ, ಬೆಂಗಳೂರು, ಪು ೧೯.೬೦

೨೮. ಡಾ. ಆರ್. ಶೇಷಶಾಸ್ತ್ರೀ., ೧೯೮೨, **ಕರ್ನಾಟಕದ ವೀರಗಲ್ಲುಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು ೩೪೫

೩. ಡಾ. ಎಸ್. ಸಿ. ನಂದಿಮಠ., 'ಕಲ್ಯಾಣದ ಚಾಲುಕ್ಯರು', **ಕರ್ನಾಟಕ ಪರಂಪರೆ**, ಪು -೩೩೦

೪. ಡಾ.ಎಸ್. ಶ್ರೀ ಕಂಠಶಾಸ್ತ್ರೀ., 'ಸಣ್ಣಪುಟ್ಟರಾಜವಂಶಗಳು', **ಕರ್ನಾಟಕ ಪರಂಪರೆ**, ಪು. ೩೫೪

೫. ಡಾ. ಬಿ.ಎ. ಸಾಲತ್ತೊರೆ, ಡಾ.ದೇಸಾಯಿ ಪಾಂಡುರಂಗರಾಯರು., ೧೯೮೩, **ಕನ್ನಡ ನಾಡಿನ ಚರಿತ್ರೆ**, ಭಾಗ ೧, ಬೆಂಗಳೂರು, ಪು ೨೬

೬. ಎಂ. ಜಿ. ನಾಗರಾಜ್., 'ಕೊಡಗಿನ ಕೊಲೆಕಲ್ಲುಗಳು', **ಹರತಿಸಿರಿ**, ೧೯೮೯, (ಸಂ) ಲಕ್ಷ್ಮಣ್ ತೆಲಗಾವಿ, ಹರ್ತಿಕೋಟೆ, ಪು/ ೭೧೫-೧೬

೭. ಅದೇ, ಪು. ೭೧೬

೮. **ಎ.ಕ. ಸಂ.೮** (ಹೊಸತು)., ಹಾಸನಜಿಲ್ಲೆ, ಹೊಳೆನರಸೀಪುರ ೧೦೮ (ಮೂಡಲಹಿಪ್ಪೆ; ಕ್ರಿ.ಶ. ೧೧೭೧)

೯. ಎ.ಖ. ಸಂ. ೮ (ಹೊಸತು)., ಅದೇ, ಹೊಳೆನರಸೀಪುರ ೧೦೯ (ಮೂಡಲಹಿಪ್ಪೆ)

೧೦. ಅದೇ, ಹೊ.ನ. ೫೬ (ಅಂಕನಾಥಪುರ; ೧೧-೧೨ನೇ ಶತಮಾನ.)

೧೧. ಅದೇ., ಅ.ಗೂ.೧೩೯ ( ಸೂಳಗೋಡು ಸೋಮವಾರ; ೧೧ನೇ ಶತಮಾನ)

೧೨. ಅದೇ ಶಾಸನ ಸಂಪುಟದ ಪ್ರಸ್ತಾವನೆ ಪು. xxix; ೧೨ ಅ.ಎ.ಕ.ಸಂ. ೬(೧೯೭೭), ಮೈ.ಜಿಲ್ಲೆ. ಕೃ.ಪೇ ೨೧

೧೩. ಅದೇ, ಎ.ಕ. **ಸಂ.೮**, ಹೊ.ನ.೧೨೫ (ಜೋಡಿಕುಪ್ಪೆ; ೧೧ನೇ ಶತಮಾನ)

೧೪. ಅದೇ, ಹೊ.ನ.೫೯ ( ಅಂಕನಾಥಪುರ; ೧೧-೧೨ನೇ ಶತಮಾನ)

೧೫. ಡಿ. ಎನ್.ಕೃಷ್ಣಯ್ಯ., ೧೯೭೪, **ಕೊಡಗಿನ ಇತಿಹಾಸ**, ಮೈ.ವಿ.ವಿದ್ಯಾಲಯ ಪು- ೪೦

೧೬. **ಎ.ಕ.ಸಂ.೧ (ಹೊಸತು)**., ಅದೇ, ಸೋ.ಪೆ ೯೧ (ಗರಗಂದೂರು; ೧೨ನೇ ಶತಮಾನ)

೧೭. **ಎ.ಕ.ಸಂ.೪ (ಹೊಸತು)**., ೧೯೬೫, ಮೈಸೂರು ಜಿಲ್ಲೆ, ಪಿರಿಯಾಪಟ್ಟಣ ೧೩೭ (ಸಂಗರಸೆಟ್ಟಿಹಳ್ಳಿ; ಕ್ರಿ.ಶ. ೧೦೯೭) ಮೈ.ವಿ.ವಿದ್ಯಾಲಯ

೧೮. **ಎ.ಕ.ಸಂ. ೧(ಹೊಸತು)**., ಅದೇ, ಸೋ.ಪೇ. ೮೩ (ನಂದಿಗುಂದ; ಕ್ರಿ.ಶ. ೧೧೭೫)

೧೯. ಡಿ.ಎನ್. ಕೃಷ್ಣಯ್ಯ., ಅದೇ, ಪು.೪೧

೨೦. **ಎ.ಕ.ಸಂ.೧** (ಹೊಸತು)., ಅದೇ, ಸೋ.ಪೇಟೆ ೭(ನಂದಿಗುಂದ; ಕ್ರಿ.ಶ ೧೧೭೫); ಸೋಪೇ ೫೩ (ಗಣಗೂರು) ಪ್ರಸ್ತಾವನೆ, ಪು. xxxiii

೨೧. **ಕನ್ನಡ ಪ್ರಭ**., ದಿನಾಂಕ ೯.೭.೨೦೦೩ (ಡಾ.ಎನ್. ಹವಳಯ್ಯ ಮತ್ತು ಎಚ್.ಎಂ. ನಾಗರಾಜರಾವ್ ಅವರ ಪ್ರಕಟನೆ)

೨೧ಅ. ಎಂ.ಜಿ. ನಾಗರಾಜ್., 'ಕೊಡಗಿನ ಕೊಲೆಕಲ್ಲುಗಳು', ಅದೇ., ಪು. ೭೩೨ ಹಾಗು ಎ.ಕ. ಸಂ ೧ (ಹೊಸತು) ಕೊಡಗು ೯೫ (ಸೋ.ಪೇಟೆ; ಕ್ರಿ.ಶ. ೧೨೬೪ ನೋಡಿ)

೨೨. ;; ಎಂ.ಜಿ.ನಾಗರಾಜ್., 'ಕೊಡಗಿನ ಕೊಂಗಾಳ್ವರು ಮತ್ತು ಜೈನಧರ್ಮ, **ಇತಿಹಾಸ ದರ್ಶನ**, ಸಂ ೧೮/೨೦೦೩, ಪು.೧೭೫

೨೨ಅ. ಚನ್ನಪಟ್ಟಣದ ಶ್ರೀ ಕುವೆಂಪು ಮಹಾವಿದ್ಯಾಲಯದ ಸ್ನಾತಕೋತ್ತರ ಕೇಂದ್ರದ ೨೦೦೦-೦೧ನೇ ಸಾಲಿನ ಅಂತಿಮ ಎಂ.ಎ. ತರಗತಿಯ ನನ್ನ ಶಾಸನ ತರಗತಿ ವಿದ್ಯಾರ್ಥಿಗಳಾದ ಎಂ. ಅಪ್ಪಾಜಿ, ಕು|| ಕೆ. ಆರ್. ಇಂದ್ರಮ್ಮ, ಹೊಂಬಯ್ಯ ಮುಂತಾದವರು ಕ್ಷೇತ್ರಕಾರ್ಯದಲ್ಲಿ ನೆರವಾಗಿದ್ದಾರೆ; ಈ ಮಹಾವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥ ಪ್ರೊ|| ಎಸ್. ಬಸವರಾಜು ಅವರೂ ಈ ದಿಸೆಯಲ್ಲಿ ಸಹಕರಿಸಿದ್ದಾರೆ.

೨೨ಅ. ೧೯೯೯-೨೦೦೦ನೇ ಸಾಲಿನ ವಿದ್ಯಾರ್ಥಿಗಳಾದ ಚಕ್ಕಲೂರಿನ ಚನ್ನರಾಮಯ್ಯ ಹಾಗು ಎಂ. ಮಲ್ಲೇಗೌಡ ಮುಂತಾದವರು ಕ್ಷೇತ್ರಕಾರ್ಯದಲ್ಲಿ ನೆರವಾಗಿದ್ದಾರೆ.

೨೩. ಡಾ. ರಾ. ಶೇಷಶಾಸ್ತ್ರಿ., ೧೯೮೨, **ಕರ್ನಾಟಕದ ವೀರಗಲ್ಲುಗಳು**, ಕನ್ನಡ ಸಾಹಿತ್ಯ ಪರಿಷತ್ತು, ಪು.೧೦, ೬೯,೩೧೭

೨೪. ಡಾ. ಸಿ. ಮಹದೇವ., 'ವಿಜಯನಗರ ಮತ್ತು ಕುಮಾರರಾಮ', **ವಿಜಯನಗರ ಅಧ್ಯಯನ ಸಂಪುಟ - ೭**., ೨೦೦೩. (ಸಂ) ಕೆ.ಆರ್. ರಾಮಕೃಷ್ಣ, ಟಿ. ಎಸ್. ಗಂಗಾಧರ, ಟಿ.ಎಂ. ಮಂಜುನಾಥಯ್ಯ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ ಪು. ೭೫

೨೫. **ಎ.ಕ. ಸಂ. ೯** (ರೈಸ್)., ಬೆಂಗಳೂರು ಜಿಲ್ಲೆ, ಚನ್ನಪಟ್ಟಣ ೧೫೮ (ಚಕ್ಕಲೂರು; ಕ್ರಿ.ಶ. ೧೪೭೮)

೨೬. ಚನ್ನಪಟ್ಟಣದ ಸ್ನಾತಕೋತ್ತರ ಕೇಂದ್ರದ ನನ್ನ ಶಾಸನ ತರಗತಿಯ ವಿದ್ಯಾರ್ಥಿನಿ (೨೦೦೨-೦೩) ಕು|| ಜ್ಞಾನೇಶ್ವರಿ ಅವರು ಈ ಶಾಸನವನ್ನು ನೋಡಿ ನನ್ನ ಗಮನ ಸೆಳೆದವರಾಗಿದ್ದಾರೆ.

೨೬ಅ. ಡಾ. ಆರ್. ರಾಮಕೃಷ್ಣನ್., 'ಮೈಸೂರು ಟ್ಯಾಂಕ್ ಕೋಡ್ : 'ಮೈಸೂರು ರಾಜ್ಯದ ಕೆರೆಗಳ ವ್ಯವಸ್ಥೆಯ ಬಗ್ಗೆ ವಸಾಹತುಶಾಹಿಯ ನಿಲುವು' : ಒಂದು ಸಮೀಕ್ಷೆ (೧೭೯೯-೧೮೭೮)', **ಇತಿಹಾಸದರ್ಶನ**, ಸಂ. ೭/೧೯೯೨, ಪು. ೧೯೫.

೨೭. ಡಾ. ಚೆನ್ನಕ್ಕಪಾವಟೆ., 'ಮಹಾನಾಡಪ್ರಭುಗಳು', **ಸಾರಂಗಶ್ರೀ**, ೧೯೯೪, (ಸಂ) ಡಾ. ಎಂ.ಎಂ. ಕಲಬುರ್ಗಿ, ಸಾರಂಗಮಠ, ಸಿಂದಗಿ, ಪು. ೧೩೬-೩೭.

೨೮. ಡಾ. ಚೆನ್ನಕ್ಕ ಪಾವಟೆ., ಅದೇ, ಪು. ೧೩೭-೧೪೭.

೨೯. ಕೊಂಡವಾಡಿ ಡಿ. ಕೃಷ್ಣಮೂರ್ತಿ., 'ಮಧುಗಿರಿ ನಾಡಿನ ಮಹಾನಾಡ ಪ್ರಭುಗಳು', **ಕುಂಚಿಟಿಗರ ಸಂದೇಶ**, (ಮಾಸಿಕ), (ಪ್ರ.ಸಂ.) ವೀರಕ್ಯಾತಯ್ಯ, ಸಂ. ೯, ಜನವರಿ ೨೦೦೫, ಬೆಂಗಳೂರು, ಪು. ೭.

೩೦. ವೀರಕ್ಯಾತಯ್ಯ., 'ಕಾಮಕುಲ ಉದ್ಭವ ಪುರಾಣ'ದ ಅನುವಾದ, **ಕುಂಚಿಟಿಗರ ಸಂದೇಶ**, ಅದೇ, ಸಂ. ೯, ಸಂ. ೩, ಮಾರ್ಚಿ ೨೦೦೫, ಬೆಂಗಳೂರು, ಪು. ೭೮.

೩೧. ಆದರೆ ಶಾಸನದ ಸಕಲನ್ನು ತೆಗೆದು ನೋಡಿದಾಗ, ರೈಸರ ಓದು ಸರಿಯಿದ್ದರೂ, ೨ನೇ ಸಾಲಿನ ಕೊನೆಗೆ ೩ನೇ ಸಾಲಿನ ಮೊದಲಕ್ಷರ 'ಯ'ವನ್ನು ಸೇರಿಸಲಾಗಿದೆ; ೪ನೇ ಸಾಲಿನಲ್ಲಿರುವ ೨ನೇ ಅಕ್ಷರ 'ಷ'ವನ್ನು 'ಸ' ಎಂದು ಅಲ್ಪಪ್ರಾಣವಾಗಿ ಓದಲಾಗಿದೆ ಎಂದು ಗಮನಕ್ಕೆ ಬಂದಿತು.

೩೨. **ಶ್ರೀ ಚೌಡೇಶ್ವರಿ ಮಹಿಮೆ**, ಧರ್ಮದರ್ಶಿ ಸಮಿತಿ, ಕೊಂಡವಾಡಿ, ಮಧುಗಿರಿ ತಾ. ತುಮಕೂರು ಜಿಲ್ಲೆ, ಮುನ್ನುಡಿ ಪು. ೩.

ಡಾ|| ಕೆ. ರವೀಂದ್ರನಾಥ*

# ಚೆಂಡೂರ ಗ್ರಾಮದ ನಿರೂಪ : ಅಪ್ರಕಟಿತ ತಾಮ್ರಶಾಸನ

*ಕಾತರಕಿವೇಂಟೆಗೆ ಸೇರಿದ್ದ ಕೊಪ್ಪಳ ಸೀಮೆಯಲ್ಲಿ ಅಶೋಕನಿಂದ ಹಿಡಿದು ವಿಜಯನಗರದವರೆಗಿನ ಶಾಸನಗಳು ಅದರ ಸಾಂಸ್ಕೃತಿಕ ಇತಿಹಾಸವನ್ನೆ ತೆರೆದಿಟ್ಟಿವೆ. ಹಾಗೆಯೇ ಚೆಂಡೂರು ಗ್ರಾಮದ ನಿರೂಪವು ದೇಶಿಯ ಸಂಸ್ಥಾನಿಕರ ಆಡಳಿತ ಕ್ರಮವನ್ನು ಹೇಳುತ್ತ ಅಂದಿನ ಜನಜೀವನ, ಆರ್ಥಿಕ ಸಾಮಾಜಿಕ ಧಾರ್ಮಿಕ ವಿಷಯಗಳ ಮಂಡನೆಯ ಮೂಲಕ ಸ್ಥಳೀಯ ಇತಿಹಾಸವನ್ನು ಕಟ್ಟಿಕೊಟ್ಟಿದೆ.*

ಐತಿಹಾಸಿಕವಾಗಿ ಬಹುಸುದೀರ್ಘ ಚರಿತ್ರೆ ಹೊಂದಿರುವ ಕೊಪ್ಪಳ ಸೀಮೆ ಒಂದು ಕಾಲಕ್ಕೆ ಕಾತರಿಕಿ ವೇಂಟೆಗೆ ಸೇರಿತ್ತು. ಅಶೋಕನ ಧರ್ಮ ಲಿಪಿಯಿಂದ ಹಿಡಿದು ವಿಜಯನಗರದ ಅರಸರವರೆಗೆ ಈ ಸೀಮೆಯಲ್ಲಿ ದಾನ-ದತ್ತಿ; ವೀರತನ, ತ್ಯಾಗ, ಶಿಕ್ಷಣ, ಆಡಳಿತ, ಗೌಡಕಿ, ಶಾನುಭೋಗಕಿ, ಇತ್ಯಾದಿ ಕುರಿತು ಸಾವಿರಾರು ಶಾಸನಗಳು ಲಭ್ಯವಿವೆ. ಅವುಗಳ ಸಾಲಿಗೆ ತಾಮ್ರ ಶಾಸನದಲ್ಲಿ ಹಾಕಿಸಿಕೊಟ್ಟ ಚೆಂಡೂರು ಗ್ರಾಮದ ನಿರೂಪವು ಸೇರುತ್ತದೆ. ಕೊಪ್ಪಳ ಜಿಲ್ಲೆಯಲಬುರ್ಗಾ ತಾಲೂಕಿನ ಚೆಂಡೂರು ಒಂದು ಸಣ್ಣ ಹಳ್ಳಿ. ಅಲ್ಲಿಯ ಗೌಡಕಿಯನ್ನು ವಂಶಪಾರಂಪರ್ಯವಾಗಿ ಹಾಕಿಸಿಕೊಟ್ಟಿರುವುದು ಈ ನಿರೂಪದ ವಸ್ತು. ಕ್ರಿ.ಶ. ೧೬ನೆಯ ಶತಮಾನಕ್ಕೆ ಸೇರಿರುವ ತಾಮ್ರ ಶಾಸನ ೧೩"ಉದ್ದ X ೪" ಅಗಲವಿದೆ. ೧೨ ಸಾಲುಗಳಿಂದ (ಒಂದು ಕಡೆ ೭ ಸಾಲು ಇನ್ನೊಂದು ಕಡೆ ೫ ಸಾಲು) ಕೂಡಿದೆ.

ದಾಖಲೆಗಳ ಗುಂಪಿಗೆ ಸೇರುವ ನಿರೂಪಗಳು ದೇಶೀಯ ಸಂಸ್ಥಾನಿಕರ ಆಡಳಿತ ಕ್ರಮ, ಆರ್ಥಿಕ ಮೌಲ್ಯ, ಕೃಷಿ ನಿರ್ವಹಣೆ, ರೈತ ಹಿತರಕ್ಷಣೆ, ಜನಭಾಷೆ, ಬದುಕು, ಧಾರ್ಮಿಕ ಸಾಮರಸ್ಯಗಳ ಸಾಂಸ್ಕೃತಿಕ ಸಂಚಯವೆನಿಸಿವೆ. ನಿರೂಪ ಎಂದರೆ ಅಪ್ಪಣೆ, ಆಜ್ಞಾಪತ್ರ, ಎಂಬ ಅರ್ಥಗಳಿವೆ. ಪ್ರಾಚೀನ ಕಾವ್ಯ-ನಿಘಂಟು-ಶಾಸನಗಳಿಂದ ನಿರೂಪಕ್ಕೆ ಈ ಮೇಲಿನ ಅರ್ಥಗಳಿರುವುದನ್ನು ನೋಡಬಹುದು. ಉದಾಹರಣೆ

> "ಹಿಂದೆ ಬರುತಿಹ ಸುತನನುರವಣಿಸಿ ಘನಭುಜಂಗಂ
> ಕಚ್ಚಲೊಡನೊಯ್ಯನೆ ನಗುತ್ತ
> ಶಿವನ ನಿರೂಪವಿದೆನುತ"[೧]
> "ಕೋಪಿಸುತ ತನ್ನಯ ತೇರನಿಳಿದನು ಪಾರ್ಥನಸುರಾರಿಯ
> ನಿರೂಪದಲಿ"[೨]
> "ನೀಲಧ್ವಜಂ ಮನೆಯೊಳಾ ಜ್ವಾಲೆಯ ನಿರೂಪಮಂ
> ತಲೆಯೊಳಾಂತು ಸಲ್ಲಲಿತ
> ವಾಜಿಯಂ ಬಿಡನೆನ್ನೊಡನೆಕಾದಿದಲ್ಲದೆಂದಾ ಕಿರೀಟಗೆ
> ಪೇಳಿಸಿದಂ"[೩]
> "ಅಪ್ಪಣೆಯಂತೆ ನಿರೂಪವನು ಬರೆದು ಆ ನಿರೂಪಕ್ಕೆ
> ದೊರೆಗಳವರ ದಸ್ಕತ್ತು
> ಮೊಹರು ಮಾಡಿಸಿ ಆಯಾ ಜನಗಳಿಗೆ ಕಳುಹಿಸಿಕೊಡುವಂತೆ
> ನಿಬಂಧನೆ ಮಾಡಿದರು"[೪]

ಇಲ್ಲೆಲ್ಲ ನಿರೂಪವೆಂಬುದಕ್ಕೆ ಬರಹದ ರೂಪದಲ್ಲಿ ಕೊಟ್ಟ ಆಜ್ಞೆ, ಆದೇಶ ಎಂಬರ್ಥಗಳಿವೆ. ಮೈಸೂರು ಸಂಸ್ಥಾನದ ಚಿಕದೇವರಾಜ ಒಡೆಯರು ೮೪ ಜಿಲ್ಲೆಗಳ ಪೂರ್ಣವಾದ ರಾಜಾಜ್ಞೆಯನ್ನು ಸಿದ್ಧಪಡಿಸುತ್ತಿದ್ದ ಇಲಾಖೆಯಾಗಿ ನಿರೂಪದ ಚಾವಡಿಗಳನ್ನು ನಿರ್ಮಿಸಿದ್ದುದನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು. ಇಲ್ಲಿ ರಾಯಸದವರು ಗಡಿ ಮುಂತಾದ ಅಧಿಕಾರ ಸ್ಥಾನಗಳಿಂದ ಯಾರಾದರೂ ಅರ್ಜಿಗಳನ್ನು ಬಿನ್ನವಿಸಿಕೊಂಡರೆ

* ಹಿರಿಯ ಉಪನ್ಯಾಸಕರು, ಹಸ್ತಪ್ರತಿ ಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೫೮೩ ೨೭೬

ಅದನ್ನು ಪರಿಶೀಲಿಸಿ ಅಪ್ಪಣೆಯಂತೆ ನಿರೂಪ ಬರೆದು ಅದರ ಒಂದು ನಕಲು ಪ್ರತಿಯನ್ನು ತಮ್ಮಲ್ಲಿಟ್ಟುಕೊಂಡು ಆ ನಿರೂಪಕ್ಕೆ ಅರಸರ ಸಹಿ ಮತ್ತು ಮೊಹರು (ಮುದ್ರೆ) ಮಾಡಿಸಿ ಜನರಿಗೆ ರವಾನಿಸುತ್ತಿದ್ದರು. ಇಂತಹ ನಿರೂಪಗಳ ನೆಲೆಗಳು ನಾಡಿನ ಮಠ-ಮಾನ್ಯಗಳಲ್ಲಿ, ಅರಸು ಭಂಡಾರಗಳಲ್ಲಿ ಹಾಗು ವ್ಯಕ್ತಿ ಒಡೆತನಗಳಲ್ಲಿದ್ದವು. ನಿರೂಪಗಳಲ್ಲಿ ದಾನನಿರೂಪ, ಉಪಾಧಿ-ನಿರೂಪ, ಮತ್ತು ಆದೇಶಿತ ನಿರೂಪಗಳೆಂದು ಮೂರು ತೆರನಾಗಿರುತ್ತವೆ. ದೇವಸ್ಥಾನದ ಪೂಜಾರಿಯ ಸಲ್ಲಿಸಬೇಕಾದ ಸೇವೆಗೆ ಸಂಬಂಧಿಸಿದ ವಿವರಗಳಾದ ನಿತ್ಯಪೂಜೆ, ನೈವೇದ್ಯ, ಇತ್ಯಾದಿಯಾಗಿ ಉಪಾಧಿಗೆ ಸಂಬಂಧಿಸಿದವುಗಳನ್ನು ಹೊರತು ಪಡಿಸಿದರೆ ದಾನ ಹಾಗೂ ಆದೇಶಿತ ನಿರೂಪಗಳು ಸ್ಥೂಲವಾಗಿ ಒಂದೆಯೆಂದು ಹೇಳಬಹುದು.

ಪ್ರಸ್ತುತ ಚೆಂಡೂರು ಗ್ರಾಮದ ನಿರೂಪ ಆದೇಶಿತ ನಿರೂಪ ವಾಗಿದೆ. ಬಸವರೆಡ್ಡಿ ಲಿಂಗಾರೆಡ್ಡಿ ಇವರಿಗೆ ಕೃಷ್ಣರಾಯರು ಎಂಬ ವ್ಯಕ್ತಿ ತಮ್ಮ ವಂಶ ಪರಂಪರೆಯಿಂದ ಬಂದ ಪಿತ್ರಾರ್ಜಿತ ಆಸ್ತಿಯನ್ನು ನೀಡಿ ಚೆಂಡೂರ ಗೌಡಕಿಯನ್ನು ಪಾಲಿಸಿಕೊಂಡು ಹೋಗಲು ಬರೆದುಕೊಟ್ಟ ಆದೇಶಿತ ನಿರೂಪ ಇದಾಗಿದೆ. ಇದರ ಪ್ರಕಾರ ಹೊರಹೊಲ, ಮೊಸಬು(ಮಸಾರಿ ಹೊಲ), ಮಾದೆ (ಮಡೇಹೊಲ) ನೀರಾವರಿ, ಗದ್ದೆ, ತೋಟಪಟ್ಟಿ, ಕಟ್ಟವಾಣ. ಹೊರೆಯಲ್ಲು, 'ದೊರೆಭತ್ತೆ' (ರಾಜರಿಂದ ಬರುವ ವಾರ್ಷಿಕ ಆದಾಯ, 'ದಿನಭತ್ತೆ'ಯಂತೆ) ಕೊಟ್ಟು ಸೂರ್ಯ ಚಂದ್ರರಿರುವ ವರೆಗೂ ಉಂಡುಕೊಂಡು ಸುಖದಲ್ಲಿ ಇರುವುದು ಎಂದು ನಿರೂಪ ಹಾಕಿಸಲಾಗಿದೆ. ಈ ಭೂಮಿಯಲ್ಲಿ ಕುರುಬರಿಗೆ ೧ ೧/೨ ಗದ್ಯಾಣು, ಜಾಡರಿಗೆ (ನೇಕಾರರಿಗೆ) ೩/೪ ಗದ್ಯಾಣು, ಕಾಜಿಗಾರರಿಗೆ (ಸಿಂಪಿಗರಿಗೆ) ೩/೪ ಗದ್ಯಾಣು ಭೂಮಿ ನೀಡಿದ ಉಲ್ಲೇಖವಿದೆ.

ಒಂದು ನಾಡಿನ ಜನಜೀವನದ ಜೊತೆಗೆ ಆರ್ಥಿಕ, ಸಾಮಾಜಿಕ, ಧಾರ್ಮಿಕ ಅಂಶಗಳನ್ನು ತಿಳಿಯಬಹುದಾಗಿದೆ; ಇಂತಹ ನಿರೂಪಗಳಿಂದ ಭಾಷಾಶಾಸ್ತ್ರದ ದೃಷ್ಟಿಯಿಂದಲೂ ನಿರೂಪಗಳಿಗೆ ಮಹತ್ವವಿದೆ. ಆಡಳಿತ ಭಾಷೆಯ ಸೊಗಡಿನ ಜೊತೆಗೆ ಆಡುಭಾಷೆಯುನ್ನು ಇಲ್ಲಿ ನೋಡಬಹುದು ಉದಾ :- ಮಡೇಹೊಲ, ತೋಟಪಟ್ಟಿ, ಸವಸಿಗೆ, ಬಂಡೆ-ಬದುಕು, ಸಾಗಹಾಕು, ಕಾಣಾಚಿ (ವಂಶಪರಂಪರೆಯಾಗಿ ಬಂದ ಸ್ವಾನುಭೋಗದ ಆಸ್ತಿ) ಸೀಮೆ, ಕಟ್ಟವಾಣ ಇತ್ಯಾದಿ ನೋಡಬಹುದು. ಹೀಗಾಗಿ ಈ ಅಪ್ರಕಟಿತ ನಿರೂಪದಿಂದ ಯಲಬುರ್ಗಾ ತಾಲೂಕಿನ ಚೆಂಡೂರಿನಂತಹ ಒಂದು ಕುಗ್ರಾಮದ ಸ್ಥಳೀಯ ಇತಿಹಾಸವನ್ನು ಕಟ್ಟಿಕೊಡಲಿಕ್ಕೆ ಸಾಧ್ಯವಾಗುತ್ತದೆ.

**ಶಾಸನ ಪಠ್ಯಭಾಗ**

೧ ಶ್ರೀ ಮಂನ ಮಾಹರಾಜೆಧಿರಾಜ ಪರಮೇಶ್ವರ ಶ್ರೀ ವಿರುಪಕ್ಷ ಕರುಣ ಖಟ್ಟಕ್ಷ ಪಳವಿದ್ಯ ಆರುಂಣಾಮೂನಿ ಆರ್ಶವಾದ ಸಂಪಂ

೨ ನ ಸೂರ ಬಸೂರ ವಿತ್ತಪ ಹರಿಗೆ ಸಿಕ್ಷೆದಾರಕರು। ಧರ್ಮ ಸ್ವಿಹಸನರೂಡರು। ಹರಿಹರರಾಯರ ಸ್ವಸ್ವೋದರಣೆರಾದ। ಸಾಕಲ ಕಲಾ

೩ ಪ್ರವಿಣ ಬೂಜಿಬಾಲ ಪ್ರತಾಪ ಶ್ರೀವಸವಂತ್ತ। ಬುಪತ್ತಿ ರಾಯರಪ್ಪ ಸೋಧರಣೆರಾದ ಕುಷ್ಷಣರಾಯರು ಪಾಲಿಸಿದ ನಿರುಪಲು

೪ ಅದರೆ। ನಂಮ ಗಂಗದೇವಿ ಧಿಂಡಿಯ। ಹ।। ಸಿರೊಗರ ಬಸವರಾಡಿ। ಲಿಂಗರಾಡಿಗೆ ಕೊಟ್ಟ ಕಾಣಚಿಯ ಸ್ವಸ್ತಿ ಹೆಂಗಡಿತನ

೫ ಆದಿಕರಪ್ಪವನು ನಿಂಮಗೆ ।ಕ। ಕೆವೆಟ್ಟಿಕೆ । ಸಲುವ ಕೊಪಣದ ಸಿಮೆಯವಳಗೆ। ಚೆಂಡುರ। ಗೌಡಕೆ ಕಾಣಚಿನು ಪಲ್ಲಿಸಿಕೊ

೬ ಟ್ಟುಯಿದೆಉ। ಸ್ವಹಸನದ ಬಂಡೆ ಬದಕು ಸಗಹಕಿ ಕಾಣಚಿ ಸ್ವಸ್ತಿಗೆ ಬಿಟ್ಟ ಆಮಾರ। ಹೊರ ಹೊಲಾ ಮಾಸಬು। ಮಾದೆ।

೭ ನಿರಾವರಿ। ಗದೆ ತೋಟ್ಟಪಟ್ಟ।ಕಟ್ಟವಾಣ। ಹೊರಹುಲ್ಲು। ದೊರೆಬತ್ತ ಸಹ ಸಲ್ಲಿಸಿ ಕೊಟುಯಿಧೇವೆ। ಸುರ್ರಯ ಚಂ

೮ ದ್ರೆ ನಿರುವತ್ತನಕ್ಕೆ ಉಂಡು ಕೊಂಡು ಸುಕದಲ್ಲಿಯಿವ ಹೊದ . ಂದು। ಪಲ್ಲಿಸದ ನಿರುಪಲು

೯ ಅದಕ್ಕೆ ಸವಸಿಗೆ ಸಲುವ ಅಮಾರದ ಹೊಲ ಮಾನಬು ತೋಟ ೮೨ ಯೆರೆ ೮೧ ಮಾಡೆ ೮೦।। ೧ ತೋಟಪಟ್ಟಿ

೧೦ ೮೦।೦।।೦ ಕಟ್ಟವಣ ಕುರಬರ ಮಂಗಕ್ಕೆ S೧।।೦ ಜಿಡರಿಗೆ S೦।।।೦ ಕಾಜಿಗಾರಿಗೆ S೦।।।೦ ವಿಗೆ ಪಾಲಿ

೧೧ ಸಿಯಿಧೆವೆ ಸುಕದಲ್ಲಿ ಬದಕ ಮಾಡಿಕೊಂಡು [ವು]ಂಬದೂ ಯೆಂದು ಪಾಲ್ಲಿಸಿದ ನಿರೂ

೧೨ ಪಲು ಶ್ರೀ ಶ್ರೀ.

***

**ಆಧಾರಸೂಚಿ ಮತ್ತು ಟಿಪ್ಪಣಿಗಳು**


೧. ಬಸವ ಪುರಾಣ., : ಪುಟ ೪೮-೮
೨. ಕುಮಾರವ್ಯಾಸ ಭಾರತ., ದ್ರೋಣ ಪರ್ವ ೮-೧೨
೩. ಕನ್ನಡ ಜೈಮಿನಿ ಭಾರತ., ಪುಟ ೯-೧೨
೪. ಕನ್ನಡ ನಿಘಂಟು ಸಂಪುಟ -೫ ಪುಟ ೪೯೯೯ ಕ.ಸಾ.ಪ, ಬೆಂಗಳೂರು.


**ಚೆಂದದ ಊರು ಚೆಂಡೂರು ಬೈತಿಟ್ಟದ್ದ**
**ಶಾಸನವ ಕಂದು ಹಿಡಿದು ನೋಡೆ**
**ದೇಸಿ ಇತಿಹಾಸದ ಯಾವ ಮಗ್ಗುಲನು ಬಿಡದಿದ್ದ**
**ಅದರ ಪರಿ ತೆರೆದಿತ್ತು ಅಚ್ಚರಿಯ ಮೂಡೆ**

ಡಾ. ವೈ. ಉಮಾನಾಥ ಶೆಣೈ*

# ಸೇನಬೋೕಯತ್ತಿಯ ಕಂಚಿನ ಶಾಸನ

*ಸೇನ ಬೋವರಲ್ಲಿಯೂ ಗ್ರಾಮ, ಸ್ಥಳ, ಮಾಗಣೆ, ಮನೆ ಸೇನೆಬೋವರುಗಳಿರುತ್ತಿದ್ದರು. ಭೂಸಂಬಂಧದ ವ್ಯವಹಾರಗಳ ಎಲ್ಲ ವಿವರಗಳು ಇವರಲ್ಲಿರುತ್ತಿತ್ತು. ಇಂಥವರಲ್ಲಿ ಕಾವ್ಯ ರಚನೆ ಮಾಡುವ ಕವಿಗಳಿದ್ದರು. ಭೂಮಿ ಮತ್ತು ಕಂದಾಯಕ್ಕೆ ಸಂಬಂಧಿಸಿದ ಹೊಣೆಗಾರಿಕೆಯ ಸೇನಬೋವಿಕೆಯ ಕೆಲಸವನ್ನು ನಿರ್ವಹಿಸುತ್ತಿದ್ದ ಸ್ತ್ರೀಯರು ಸೇನಬೋಯತ್ತಿ ಅಥವಾ ಸೇನಬೋವತ್ತಿ ಎನಿಸಿದ್ದರು. ೧೫ನೇ ಶತಮಾನದಲ್ಲಿ ದೇವಕಸೆಟ್ಟಿತಿ ಎಂಬ ಸೇನಬೋಯತ್ತಿ ಇದ್ದಳು.*

ಸೇನಬೋೕಯ, ಸೇನಬೋವ, ಸೇನಬವ, ಸೇನುಬಾಗ, ಶಾನುಬಾಗ, ಶ್ಯಾನುಭಾಗ ಇತ್ಯಾದಿ ಹೆಸರುಗಳು ಗ್ರಾಮದ ಲೆಕ್ಕಪತ್ರಗಳನ್ನು ಬರೆದಿಡುವ ಅಧಿಕಾರಿಯ ಹೆಸರು. ಕೆಲವೊಮ್ಮೆ ಬೃಹತ್ ಪ್ರಮಾಣದ ಆರ್ಥಿಕ ವ್ಯವಹಾರಗಳನ್ನು ನಡೆಸುವ ಸಂಸ್ಥೆಗಳು ಅಥವಾ ಮನೆಗಳಿಗೂ ಒಬ್ಬೊಬ್ಬ ಶ್ಯಾನುಭಾಗರು ಇರುತ್ತಿದ್ದರು. ಸರಕಾರದ ಆಡಳಿತ ನಿರ್ವಹಣೆಯಲ್ಲಿ ಗ್ರಾಮದ ಸೇನಬೋವ, ಹಲವು ಗ್ರಾಮಗಳಿಗಾಗಿ ಸ್ಥಳದ ಸೇನಬೋವ, ಮಾಗಣೆಗಾಗಿ ಮಾಗಣೆ ಸೇನಬೋವರು ಇರುತ್ತಿದ್ದರು. ಸಾಮಾನ್ಯವಾಗಿ ಇವರೆಲ್ಲರೂ ಭೂಸಂಬಂಧ ದಾಖಲೆಗಳು, ನಕಾಶೆಗಳು, ಭೂಕಂದಾಯದ ವಿವರಗಳು, ಖರೀದಿ- ಪರಾಭಾರೆಯ ವಿವರಗಳು, ಆಯ-ವ್ಯಯದ ವಿವರಗಳು - ಇತ್ಯಾದಿಗಳನ್ನು ಇಟ್ಟುಕೊಳ್ಳುತ್ತಿದ್ದರು.

ಸೇನಬೋವರ ಉಲ್ಲೇಖಗಳಿರುವ ಶಾಸನಗಳು ನಮಗೆ ಸಾಕಷ್ಟು ಸಂಖ್ಯೆಯಲ್ಲಿ ದೊರೆಯುತ್ತವೆ. ಸೇನಬೋವರು ಹೆಚ್ಚಾಗಿ ವಿದ್ಯಾವಂತರಾಗಿ ಉತ್ತಮವಾದ ಕೈಬರಹವನ್ನು ಹೊಂದಿರುತ್ತಿದ್ದರು. ಕೆಲವರು ಕಾವ್ಯರಚನೆ ಮಾಡುವಷ್ಟು ಶಕ್ತರಾಗಿದ್ದರು. ಅಂತಹ ಒಂದು ಉದಾಹರಣೆಯನ್ನು ನಾವು ದಕ್ಷಿಣ ಕನ್ನಡ ಜಿಲ್ಲೆಯ ಮೂಡುಬಿದಿರೆಯಲ್ಲಿ ಕಾಣಬಹುದು. ಅಲ್ಲಿಯ ಸಾವಿರ ಕಂಬದ ಬಸದಿಯ ಗದ್ದಿಗೆ ಮಂಟಪದ ಉತ್ತರಭಾಗದ ಗೋಡೆಯಲ್ಲಿರುವ ಕ್ರಿ.ಶ. ೧೪೭೧ರ ಶಾಸವನ್ನು ವಿಜಯನಗರದ ಚಕ್ರವರ್ತಿ ವಿರೂಪಾಕ್ಷನ ಆಜ್ಞೆಯ ಮೇರೆಗೆ ವಿಟ್ಠರಸನು ಮಂಗಳೂರು ರಾಜ್ಯವನ್ನು ಆಳುತ್ತಿದ್ದಾಗ ಈ ಶಾಸನವನ್ನು ಬರೆಸಿ ಕೊನೆಯಲ್ಲಿ "ಯಿಂತೀ ಶಾಸನದ ವಕ್ಷಣೆಯು ಅಂಣ ಸಾಮಂತ ಹೆಗ್ಗಡೆಯರ ಸೇನಬವ ದೇವರಸರ ಬರಹ" - ಎಂದು ತಿಳಿಸಲಾಗಿದೆ.

ಭೂಮಿ ಮತ್ತು ಕಂದಾಯಕ್ಕೆ ಸಂಬಂಧಿಸಿದ ಜವಾಬ್ದಾರಿಯುಳ್ಳ ಈ ಸೇನಬೋವಿಕೆಯ ಕೆಲಸವನ್ನು ಸ್ತ್ರೀಯರು ನಿರ್ವಹಿಸುತ್ತಿದ್ದ ಸೇನಬೋಯತ್ತಿ ಅಥವಾ ಸೇನಬೋವತ್ತಿಯರ ಉದಾಹರಣೆಗಳು ನಮಗೆ ಸಿಗುವುದು ಬಹಳ ಅಪರೂಪ. ಆದರೆ ಅಂತಹ ಒಂದು ಸೇನಬೋಯತ್ತಿಯ ಉದಾಹರಣೆಯು ದಕ್ಷಿಣ ಕನ್ನಡ ಜಿಲ್ಲೆಯ ಪೂರ್ವ ಭಾಗವನ್ನು ಆಳುತ್ತಿದ್ದ ಬಂಗ ಅರಸರ ರಾಜಧಾನಿಯಾಗಿದ್ದ ಬಂಗಾಡಿಯಲ್ಲಿ ದೊರೆತಿದೆ. ಬಂಗಾಡಿ ಅಥವಾ ಬಂಗವಾಡಿಯು, ಈ ಅರಸುಮನೆತನದ ಮೂಲ ಮತ್ತು ಮುಖ್ಯ ರಾಜಧಾನಿಯಾಗಿತ್ತು. ಇವರಿಗೆ ಮಂಗಳೂರು, ನಂದಾವರ ಮತ್ತು ಬೆಳ್ತಂಗಡಿಗಳಲ್ಲಿ ಉಪರಾಜಧಾನಿಗಳಿದ್ದುವು. ಆದರೆ, ಇವರ ಆಶ್ರಯದಲ್ಲಿ ಬರೆಯಲ್ಪಟ್ಟ ಎಲ್ಲಾ ಸಂಸ್ಕೃತ ಮತ್ತು ಕನ್ನಡ ಕಾವ್ಯಗಳು ಹಾಗೂ ಶಾಸನಗಳು ಬಂಗ ಅರಸರ ಬಂಗವಾಡಿಯಲ್ಲೇ ವಾಸ್ತವ್ಯವಿದ್ದುದನ್ನು ಸೂಚಿಸುತ್ತವೆ.

* ಪ್ರಾಧ್ಯಾಪಕ ಮತ್ತು ಮುಖ್ಯಸ್ಥ ಇತಿಹಾಸ ವಿಭಾಗ, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ ೫೭೪ ೨೪೦.

ಕವಿಗಳ ವರ್ಣನೆಗಳ ಹೊರತಾಗಿಯೂ, ಇತಿಹಾಸ ಕಾಲದಲ್ಲಿ ಬಂಗವಾಡಿ ಒಂದು ದೊಡ್ಡ ಪಟ್ಟಣವಾಗಿ ಬೆಳೆದಿದ್ದಿತ್ತು. ಇದರ ಆಡಳಿತವನ್ನು ಹಲರು ಎಂಬ ಒಂದು ನಗರಾಡಳಿತ ಸಂಸ್ಥೆಯೇ ನಡೆಸುತ್ತಿತ್ತು. ಈ ಪಟ್ಟಣದ ಬಳಿಯಲ್ಲಿ ಕ್ರಿ.ಶ. ೧೫ನೇ ಶತಮಾನದ ಮಧ್ಯಭಾಗದಲ್ಲಿ ದೇವಕ್ಕಸೆಟ್ಟಿತಿ ಎಂಬ ಸೇನಬೋಯತ್ತಿ ಕಾರ್ಯ ನಿರ್ವಹಿಸುತ್ತಿದ್ದಳು. ಈಕೆಯ ಕೊಡುಗೆಯನ್ನು ತಿಳಿಸುವ ಒಂದು ಶಾಸನವು ಇದೇ ಊರಿನಲ್ಲಿರುವ ಶ್ರೀ ಶಾಂತಿನಾಥ ಬಸದಿಯಲ್ಲಿ ಸಿಕ್ಕಿರುತ್ತದೆ. ಈ ಬಸದಿಯು ಇತ್ತೀಚೆಗಷ್ಟೇ ಜೀರ್ಣೋದ್ಧಾರಗೊಂಡಿದೆ. ಇಲ್ಲಿ ಲಭ್ಯವಿದ್ದ ಕಂಚಿನ ಹಲವು ದೇವತಾಬಿಂಬಗಳ ಪೈಕಿ ಒಂದು ಅಡಿ ಎತ್ತರದ ಒಂದು ಕಂಚಿನ ಬಿಂಬವೂ ಒಂದು. ನಿರಂತರ ಅರ್ಚನೆಗೊಳಗಾಗಿ ತುಂಬಾ ಸವೆದು ಹೋಗಿದ್ದರೂ ಇದರ ಬೆನ್ನಿಗೆ ಅಭೇದ್ಯವಾಗಿ ಜೋಡಿಸಲ್ಪಟ್ಟಿರುವ ಫಲಕದ ಮೇಲೆ ಕನ್ನಡ ಭಾಷೆಯಲ್ಲಿರುವ ಒಂದು ಶಾಸನವು ಕಂಡುಬಂದಿದೆ. ಇದರ ಪ್ರಾರಂಭದ ೯ ಪಂಕ್ತಿಗಳು ಈ ಕಂಚಿನ ಫಲಕದ ಮೇಲೆಯೂ, ಅನಂತರದ ೧೨ ಪಂಕ್ತಿಗಳು ಇದೇ ಫಲಕದ ಮೇಲೆ, ಮೂರ್ತಿಯ ಎದುರುಗಡೆ ಮತ್ತು ಎಡಬಲ ಪಾರ್ಶ್ವಗಳಲ್ಲಿ ಕಂಡುಬರುತ್ತವೆ. ಇದರ ಕಾಲವನ್ನು "ಸ್ವಸ್ತಿಶ್ರೀ ವಿಜಯಾಭ್ಯುದಯ ಶಕವರ್ಷ ೧೩೮೮ನೆಯ ವ್ಯಯ ಸಂವತ್ಸರದ ಜೇಷ್ಠ ಬ ೫ ಗುರುವಾರದಲು" - ಎಂದು ನಮೂದಿಸಲಾಗಿದೆ. ಅಂದರೆ ಕ್ರಿ.ಶ. ೧೪೬೬ನೇ ಇಸವಿ ಜೂನ್ ತಿಂಗಳ ೧೨ನೇ ತಾರೀಕು, ಗುರುವಾರ.

ಈ ಶಾಸನದಲ್ಲಿ ಸೂಚಿಸಿರುವಂತೆ, ಆ ಸಮಯದಲ್ಲಿ ಬಂಗವಾಡಿಯಲ್ಲಿ ಕಾಮಿರಾಯ ಬಂಗ ಎಂಬ ಅರಸನು ಆಳುತ್ತಿದ್ದ. ಡಾ|| ಗಣಪತಿರಾವ್ ಐಗಳ್ ಅವರು ತನ್ನ "ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ" ದಲ್ಲಿ ಈ ಕಾಮಿರಾಯನು ಕ್ರಿ.ಶ. ೧೪೯೧ರಲ್ಲಿ ಪಟ್ಟವೇರಿದ್ದನೆಂದು ಹೇಳಿದ್ದರೂ, ಆತ ಕ್ರಿ.ಶ. ೧೪೬೬ ರಿಂದಲೇ ಆಡಳಿತ ನಡೆಸುತ್ತಿದ್ದಿರಬಹುದು ಎನ್ನಬಹುದು. ಈ ಶಾಸನದಲ್ಲಿ ಕಾಲನಿರೂಪಣೆ ಸ್ಪಷ್ಟವಾಗಿದ್ದು, ಅಭಿನವ ಲಲಿತ ಕೀರ್ತಿಯವರ ಹೆಸರೂ, ಕಾಮಿರಾಯ ಬಂಗರಸನ ಹೆಸರೂ ಸ್ಪಷ್ಟವಾಗಿ ಬಂದಿರುವುದರಿಂದ ಇಲ್ಲಿ ಕೊಟ್ಟಿರುವ ಇತರ ವಿವರಗಳೂ ಸರಿಯಾಗಿರಬಹುದೆಂದು ತಿಳಿಯಬಹುದು.

ಈ ಶಾಸನದ ಒಕ್ಕಣೆಯ ಪ್ರಕಾರ ಬಂಗವಾಡಿಯಿಂದ ಕಾಮಿರಾಯ ಬಂಗರಸನು ಆಳುತ್ತಿದ್ದಾಗ, ಅಭಿನವ ಲಲಿತ ಕೀರ್ತಿ ದೇವರ ಸನ್ನಿಧಿಯಲ್ಲಿ ಬಂಗವಾಡಿಯ ಹಲರ ಬಸದಿಗೆ ಆ ಪಟ್ಟಣದ ಬಳಿಯಿದ್ದ ಸೇನಬೋಯತ್ತಿ ದೇವಕ್ಕ ಸೆಟ್ಟಿತಿಯು ತನ್ನ ಮಗ ಗುಮ್ಮಟ ಸೆಟ್ಟಿಯ ನಿಮಿತ್ತವಾಗಿ ಬಾಹುಬಲಿ ಸ್ವಾಮಿಯ ಈ ಕಂಚಿನ ಮೂರ್ತಿಯನ್ನು ಮಾಡಿಸಿಕೊಟ್ಟಿದ್ದಳು. ಇಲ್ಲಿ ಹೇಳಿರುವಂತೆ, ಈ ಗುಂಮಟನಾಥನ ದೇಹಾರ (ಪೂಜೆ)ಕ್ಕೆ ಒಂದು ತೊಲೆಯನ್ನು ಕೊಟ್ಟಿದ್ದಳು. ಆದರೆ ಈ ಒಂದು ತೊಲೆ ಏನೆಂಬುದನ್ನು ಇಲ್ಲಿ ತಿಳಿಸಿಲ್ಲ. ಪ್ರಾಯಶಃ ಈ ತೊಲೆಯು ಒಂದು ತೊಲೆ ಚಿನ್ನವನ್ನು ಸಂಬಂಧಿಸಿ ಹೇಳಿರಬೇಕು. ಯಾಕೆಂದರೆ, ಒಂದು ತೊಲೆ ತೂಕದ ಯಾವ ವಸ್ತುವಿನಿಂದಲೂ ಇಲ್ಲಿ ಹೇಳಿರುವ ಯಾವ ಧರ್ಮವನ್ನೂ ನಿರಂತರವಾಗಿ ನಡೆಸಲು ಸಾಧ್ಯವಾಗಲಾರದು. ಆದರೆ ಆ ಧರ್ಮವು ನಿರಂತರವಾಗಿ ನಡೆಯಬೇಕೆಂದೂ ಅದನ್ನು ಗುಂಮಟ ಸೆಟ್ಟಿಯ ತಮ್ಮ ಬಿರುಮಂಣಸೆಟ್ಟಿ ನಡೆಸಿಕೊಂಡು ಬರಬೇಕೆಂದು ತಿಳಿಸಲಾಗಿದೆ. ಕೊನೆಯಲ್ಲಿ, ಈ ಧರ್ಮವನ್ನು ನಡೆಸದಿದ್ದರೆ ಉಂಟಾಗುವ ದೋಷಗಳನ್ನಾಗಲೀ, ನಡೆಸುವುದರಿಂದ ಉಂಟಾಗುವ ಸತ್ಫಲಗಳನ್ನಾಗಲೀ ಇಲ್ಲಿ ಹೇಳಿಲ್ಲ. ಮಂಗಲ ಮಹಾಶ್ರೀ ಎಂದು ಮಾತ್ರಾ ಹೇಳಲಾಗಿದೆ.

ಆದುದರಿಂದ ಇದೊಂದು ಕುಟುಂಬದ ಸದಸ್ಯರಿಗೆ ಸಂಬಂಧಿಸಿದ ದಾನ ಶಾಸನವೆಂದು ಹೇಳಬೇಕಾಗುತ್ತದೆ. ಇದೊಂದು ಅಪ್ರಕಟಿತ ಶಾಸನ. ಕ್ರಿ.ಶ. ೧೪೯೧ರ ಬದಲಾಗಿ ಕ್ರಿ.ಶ. ೧೪೬೬ ರಿಂದಲೇ ಇಲ್ಲಿ ಉಲ್ಲೇಖಿಸಲ್ಪಟ್ಟಿರುವ ಕಾಮಿರಾಯ ಬಂಗರಸನು ತನ್ನ ಆಳ್ವಿಕೆಯನ್ನು ಪ್ರಾರಂಭಿಸಿರಬಹುದೆಂದೂ ಈ ಶಾಸನದ ಆಧಾರದಿಂದ ಹೇಳಬಹುದು. ಅಂದು ಗುಂಮಟಸೆಟ್ಟಿ, ಗುಂಮಟ ನಾಥ ಎಂಬ ಸರಳ ಹೆಸರುಗಳು ಬಳಕೆಯಲ್ಲಿದ್ದುದನ್ನು ಇದು ತಿಳಿಸುತ್ತದೆ. ಈ ಶಾಸನವು ಸ್ತ್ರೀಯೊಬ್ಬಳು ಸೇನಬೋವತಿಕೆಯ ಕಾರ್ಯ ನಿರ್ವಹಿಸುತ್ತಿದ್ದುದಕ್ಕೆ ಒಂದು ಅಮೂಲ್ಯ ಐತಿಹಾಸಿಕ ಪುರಾವೆಯಾಗಿ ನಿಲ್ಲುತ್ತದೆ.

**ಈ ಶಾಸನದ ಪೂರ್ಣ ಪಾಠವು ಕೆಳಗೆ ಇದೆ**

ಎದುರು ೧ : ಲರ ಬಸ್ತಿಗೆ ಪಟ್ಟಣ ಬ
ಎಡಬದಿ : ಳಿಯ ಸೇನಬೋಯ
ಹಿಂಬದಿ : ತ್ತಿ ದೇವಕ್ಕಸೆಟ್ಟಿತ್ತಿಯು
ಬಲಬದಿ : ತಂನ್ನ ಮಗು ಗುಂಮ
ಎದುರು ೨ : ಟ ಸೆಟ್ಟಿಗೆ ಮಾಡಿಸಿದ
ಎಡಬದಿ : ಗುಂಮಟನಾಥನ ದೇಹಾ
ಹಿಂಬದಿ : ರಕ್ಕೆ ತೊಲೆ ೧ ಯಿ ದೇಹಾ
ಬಲಬದಿ : ರಕ್ಕೆ ಏನುಂಟಾದ ಧರ್ಮ್ಮ
ಎದುರು ೩ : ವನೂ ಆತನ ತಂಮ ಸೇನಬೋ
ಎಡಬದಿ : ವತ್ತಿಯ ಬಿರುಮಂಣ
ಹಿಂಬದಿ : ಸೆಟ್ಟಿ ನಡೆದು ಬಹನು ಮಂ
ಬಲಬದಿ : ಗಲ ಮಹಾ ಶ್ರೀ ಶ್ರೀ

೧ ಸ್ವಸ್ತಿಶ್ರೀ ವಿಜಯಾಭ್ಯುದಯ
೨ ಶಕ ವರ್ಷ ೧೩೮೮ ನೆಯ
೩ ವ್ಯಯ ಸಂವತ್ಸರದ ಜೇ

೪ ಷ್ಣ ಬ ೫ ಗುರುವಾರದ
೫ ಲು ಅಭಿನವ ಲಲಿತ
೬ ಕೀರ್ತಿ ದೇವರ ಸಂನಿಧಿಯ
೭ ಲ್ಲಿ ಕಾಮಿರಾಯರಸ ರಾ
೮ ದ ಬಂಗರ ಕಾಲದಲ್ಲಿ
೯ ಬಂಗವಾಡಿಯ ಹ





**ಕರ್ನಾಟಕ ಇತಿಹಾಸ ಅಕಾದೆಮಿಯ ೪ನೇ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣ (೧೯೯೦)ದಿಂದ**

*ಇತಿಹಾಸವೆಂದರೆ ಆಳಿದ ರಾಜಮನೆತನಗಳ ಕಾಲಾನುಕ್ರಮಣಿಕೆ ಹೇಳುವ ರಾಜಕೀಯ ಪಟ್ಟಿಯಲ್ಲ. ಒಂದು ನಾಡಿನ ಧರ್ಮ, ಸಂಸ್ಕೃತಿ ಸಾಹಿತ್ಯ, ಕಲೆ, ಜನಜೀವನ, ವಿಜ್ಞಾನ, ನಂಬಿಕೆ, ಮೌಲ್ಯಗಳು ಇತ್ಯಾದಿಗಳ ಅಧ್ಯಯನ ದಾಖಲೆ ವಿಶಾಲಾರ್ಥದಲ್ಲಿ ಇತಿಹಾಸವಾಗುತ್ತದೆ ಈ ಎಲ್ಲಾ ವಿಷಯಗಳ ಕೂಲಂಕಷ ಅಧ್ಯಯನಕ್ಕೆ ನೆರವಾಗುವ ಅಂಶಗಳು ನಮಗೆ ಶಾಸನ, ಕಡತ, ತಾಡವೋಲೆ, ತಾಮ್ರಪತ್ರ, ಆ ಕಾಲದ ಸಾಹಿತ್ಯ ಕೃತಿಗಳಲ್ಲಿ ದೊರೆಯುತ್ತವೆ.*

**ಡಾ. ಎಸ್.ಆರ್. ರಾವ್**
ಸಮ್ಮೇಳನಾಧ್ಯಕ್ಷರು



**ಕರ್ನಾಟಕ ಇತಿಹಾಸ ಅಕಾದೆಮಿಯ ೯ನೆಯ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೫)**

*ಇತಿಹಾಸ ರಚನಾಕ್ಷೇತ್ರದಲ್ಲಿ 'ಇಜಂ'ಗಳ ಹಾವಳಿ ಜಾಸ್ತಿ ಆಗುತ್ತಿದೆ. ದೃಷ್ಟಿಕೋನಗಳ ಪ್ರಕಾರ ಇತಿಹಾಸವನ್ನು ಬರೆಯುವ ಪ್ರವೃತ್ತಿ ಹೆಚ್ಚುತ್ತಿದೆ. ಇತಿಹಾಸ ಎಂಬ ಪದದ ಅರ್ಥವನ್ನೆ ತಲೆಕೆಳಗು ಮಾಡಿ ಘಟನಾವಳಿಗಳ ವ್ಯಾಖ್ಯೆಯನ್ನು ದೃಷ್ಟಿಕೋನಗಳಿಗೆ ಸರಿಹೊಂದುವಂತೆ ಬದಲಾಯಿಸಲಾಗುತ್ತಿದೆ. ಇತಿಹಾಸ ರಚನೆಯ ಮೂಲತತ್ವವಾದಿ ವಿಷಯವು ಪವಿತ್ರವಾದುದು ವ್ಯಾಖ್ಯೆಯು ವೈಯುಕ್ತಿಕವಾದುದು ಎಂಬುದನ್ನು ಗಾಳಿಗೆ ತೂರಿದಂತೆ ಕಾಣುತ್ತದೆ. ವ್ಯಾಖ್ಯೆಯನ್ನೆ ವಿಷಯವನ್ನಾಗಿ ಪರಿವರ್ತಿಸುವ, ನಂಬಿಸುವ ಪ್ರಯತ್ನಗಳಿಂದಾಗಿ ಸಾಮಾನ್ಯ ಓದುಗನಿಗೆ ಗಾಬರಿ ಆಗುತ್ತಿದೆ. ಇದೇ ಪ್ರವೃತ್ತಿ ಮುಂದುವರಿದರೆ ಇತಿಹಾಸಕಾರ ಮಧ್ಯಯುಗೀನ ಹೊಗಳುಭಟ್ಟನಾಗಿ ತನ್ನ ಮೌಲ್ಯವನ್ನು ಸಂಪೂರ್ಣ ಕಳೆದುಕೊಳ್ಳಬೇಕಾಗುತ್ತದೆ. ಈ ಕಾಲ ಬರದಂತೆ ಕಾಪಾಡಿಕೊಳ್ಳುವುದು ಎಲ್ಲ ಇತಿಹಾಸಕಾರರ ಕರ್ತವ್ಯ.*

**ಡಾ. ಎ. ವಿ. ನರಸಿಂಹಮೂರ್ತಿ**
ಸಮ್ಮೇಳನಾಧ್ಯಕ್ಷರು

ಡಾ. ಎಚ್.ಎಸ್. ಗೋಪಾಲ ರಾವ್*

# ಕಪ್ಪೆ ಅರಭಟ್ಟನನ್ನು ಗುರುತಿಸುವ ಒಂದು ಪ್ರಯತ್ನ

*ಪ್ರಸಿದ್ಧ ಬಾದಾಮಿಯ ತಟ್ಟುಕೋಟೆಯ ಬಂಡೆಯ ಮೇಲಿನ ಕಪ್ಪೆ ಅರಭಟ್ಟನ ಶಾಸನವು ವಿವಿಧ ವಿದ್ವಾಂಸರ ವಿವೇಚನೆಗೆ ತೆರೆದುಕೊಂಡಂಥದು. ಕಪ್ಪೆ ಅರಭಟ್ಟ ಒಬ್ಬ ಸಮರ್ಥ ಯೋಧ; ಕಪ್ಪೆ ಎಂಬ ವಿಶೇಷಣವುಳ್ಳ ಅರಸುಭಟ್ಟ; ಮನೆತನ ಸೂಚಿಯಾದ ಕಪ್ಪೆಯರ ಭಟ್ಟನು ಕಪ್ಪಡಿಗಳ ವರ್ಗದ ಅರಸುಭಟ್ಟ; ಅವನೊಬ್ಬ ವಿಶ್ವಬ್ರಾಹ್ಮಣ ವರ್ಗದವ; ಇಮ್ಮಡಿ ಪೊಲೆಕೇಶಿಯ ಕಾಲದ ದುರ್ಗಾಧಿಪತಿ ಕೋಷ್ಠರಾಯ ನೆನಿಸಿದವ; ಚಾಲುಕ್ಯರ ಕೀರ್ತಿವರ್ಮನೇ ಕಪ್ಪೆ ಅರಭಟ್ಟ ಎಂದೆಲ್ಲ ಹೇಳಲಾಗಿದೆ. ೧೯೬೦ರಲ್ಲಿ ಪ್ರಕಟವಾದ ಬಾದಾಮಿಯ ಶಾಸನವೊಂದರಲ್ಲಿ ಸತ್ಯಾಶ್ರಯ, ರಣಕೇಸರಿ ಎಂಬ ಬಿರುದುಗಳೊಡನೆ ಮಹಾರಾಜನನ್ನು ಉಕ್ತ ಮಾಡಿದೆ. ಶ್ರೀ ಹರ್ಷನನ್ನು ಸೋಲಿಸಿದ್ದ ಪೊಲೆಕೇಶಿಗೆ ಪಲ್ಲವ ನರಸಿಂಹವರ್ಮನು ಬಾದಾಮಿಯನ್ನು ಆಕ್ರಮಿಸಿದಾಗ ಅವನಿಗೆ ಆದ ಮಾನಭಂಗದಿಂದ ಜರ್ಜರಿತನಾಗಿ ಅಜ್ಞಾತನಾಗಿ ಗುಹೆಯಲ್ಲಿ ವಾಸಿಸುತ್ತಿದ್ದ. ಎನ್ನಲಾಗಿದೆ. ಕಪ್ಪೆ ಅರಭಟ್ಟನಿಗೆ ಅನ್ವಯವಾದ ಎಲ್ಲ ಗುಣಗಳೂ ಸದ್ಯದ ಪೊಲೆಕೇಶಿಗೆ ಅನ್ವಯವಾಗುವ ಕಾರಣ ಹಾಗೂ ಉಳಿದ ಹಿನ್ನೆಲೆಗಳಲ್ಲಿ ಕಪ್ಪೆ ಅರಭಟ್ಟನೇ ಪೊಲೆಕೇಶಿ ಆಗಿರುವ ಪ್ರಮೇಯವನ್ನು ಮುಂದಿಡಲಾಗಿದೆ.*

ಬಾದಾಮಿಯ ತಟ್ಟುಕೋಟೆಯ ಬಂಡೆಬಂಡರ ಮೇಲೆ, ಕಪ್ಪೆ ಅರಭಟ್ಟನ ಉಲ್ಲೇಖ ಇರುವ ಕನ್ನಡ ಶಾಸನವು ಕನ್ನಡ ಸಾಹಿತ್ಯ ಮತ್ತು ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ವಿಶೇಷ ಮಹತ್ವ ಪಡೆದಿದೆ. ಇದನ್ನು ಮೊದಲು ಬೆಳಕಿಗೆ ತಂದವರು ಡಾ|| ಜೆ.ಎಫ್. ಫ್ಲೀಟ್.[1] ಅಂದಿನಿಂದಲೂ ಸಂಶೋಧಕರಿಗೆ ಸವಾಲಾಗಿಯೇ ಇರುವ ಈ ಶಾಸನದ ಕಪ್ಪೆ ಅರಭಟ್ಟನನ್ನು ಗುರುತಿಸುವ ಪ್ರಯತ್ನಗಳು ನಿರಂತರವಾಗಿಯೇ ನಡೆದಿವೆ. ಡಾ|| ಜೆ.ಎಫ್. ಫ್ಲೀಟ್ ಅವರ ಪ್ರಕಾರ ಈ ಸ್ಮಾರಕ ಶಾಸನವು ಆ ಭಾಗದಲ್ಲಿದ್ದ ಪ್ರಭಾವಶಾಲಿ ಯಾಗಿದ್ದ ಸಂತನೊಬ್ಬನನ್ನು ಕುರಿತುದಾಗಿರಬೇಕು. ಆದರೆ, ಅವರೇ ಪೂರ್ವೋಲ್ಲೇಖಿತ ಲೇಖನದಲ್ಲಿ ಪ್ರಸ್ತಾಪಿಸಿರುವಂತೆ, ಶ್ರೀ ವೆಂಕಟ ರಂಗೋಕಟ್ಟಿಯವರ ಅಭಿಪ್ರಾಯದಲ್ಲಿ ಅದು ಯಾರೋ ಒಬ್ಬ ಪ್ರಮುಖ ವ್ಯಕ್ತಿಯ ಬಿರುದಾವಳಿಗಳು ಅಥವಾ ಸಾಧನೆ ಮತ್ತು ವಿಶಿಷ್ಟ ಗುಣಗಳ ಸಂಗ್ರಾಹ್ಯ ಅಂಶಗಳಾಗಿರಬೇಕು. ಡಾ|| ಟಿ.ವಿ. ವೆಂಕಟಾಚಲ ಶಾಸ್ತ್ರಿಗಳು ೧೯೭೬ರಲ್ಲಿ ಬಾದಾಮಿ ಶಾಸನದ ಅರ್ಥವನ್ನು ಕುರಿತು ವಿವರವಾಗಿಯೇ ಪ್ರಸ್ತಾಪಿಸಿದ್ದಾರೆ.[2] ಅವರ ಪ್ರಕಾರ 'ಕಪ್ಪೆ ಅರಭಟ್ಟ ಪ್ರಾಯಶಃ ಹುಟ್ಟಿನಿಂದ ಬ್ರಾಹ್ಮಣನಾಗಿದ್ದ ಒಬ್ಬ ಸಮರ್ಥ ಯೋಧ. ತನ್ನ ಒಳ್ಳೆಯ ನಡೆವಳಿಕೆಯಿಂದ ಆತ 'ಕಲಿಯುಗದ ವಿಪರೀತನ್' ಎಂದು ಹೆಸರಾಗಿದ್ದ. ಹೀಗಿದ್ದುದರಿಂದ ಸಹಜವಾಗಿ ಒಳ್ಳೆಯ ಜನ ಅವನನ್ನು ತಮ್ಮವನೆಂದು ಆದರಿಸು ತ್ತಿದ್ದರು. ದುಷ್ಟರು ಆತನ ಹತ್ತಿರ ಸೇರುತ್ತಿರಲಿಲ್ಲ. ಮಾನವಂತನಾಗಿ ಬಾಳಬೇಕು, ಮಾನಭಂಗವನ್ನು ಸಹಿಸುವುದಕ್ಕಿಂತ ಸಾಯುವುದೇ ಲೇಸು ಎಂಬುದು ಆತನ ನಂಬುಗೆಯಾಗಿತ್ತು. ಒಳ್ಳೆಯವರ ವಿಷಯ ದಲ್ಲಿ ಆತ ಎಂದೂ ಒಳ್ಳೆಯವನೇ. ರಾಜನೈತಿಕವಿರಬಹುದು, ಸೈನ್ಯಕೀಯವಿರಬಹುದು-ಯಾವುದೇ ದೊಡ್ಡ ಜವಾಬ್ದಾರಿಯನ್ನು ದಕ್ಷತೆಯಿಂದ ನಿರ್ವಹಿಸಬಲ್ಲ ಧುರೀಣ ಆತ. ತನಗೆ ಎದುರುಬಿದ್ದ ಶೂರರನ್ನು ರಾಕ್ಷಸರನ್ನು ಅಡಗಿಸುವ ಮಹಾವಿಷ್ಣುವಿನಂತೆ ಆತ ನಿಗ್ರಹಿಸಬಲ್ಲವನಾಗಿದ್ದ. ಮನಸ್ಸು ಮಾಡಿದರೆ ಒಳ್ಳೆಯದನ್ನೂ ಮಾಡಬಲ್ಲ, ಕೆಟ್ಟದ್ದನ್ನೂ ಮಾಡಬಲ್ಲ; ಎಂದರೆ ಒಳ್ಳೆಯವರಿಗೆ ಒಳ್ಳೆಯವನು, ಕೆಟ್ಟವರಿಗೆ ಕೆಟ್ಟವನು. ಶಿಷ್ಟರ ರಕ್ಷಣೆ, ದುಷ್ಟರ ವಿನಾಶ ಎಂಬುದು ಆತನ ಸಂಕಲ್ಪ. ಅದರಲ್ಲಿ ಆತ ಸಮರ್ಥ. ಆತನನ್ನು ಎದುರುಹಾಕಿಕೊಂಡವರು ಹಾಳಾಗುವುದು ಖಂಡಿತ.' ಡಾ|| ಟಿ. ವಿ. ವಿ. ಅವರ ಅಭಿಪ್ರಾಯದಂತೆ, 'ಸಜ್ಜನಿಕೆ, ಗಾಂಭೀರ್ಯ, ಶೌರ್ಯ ಇವು ಮುಪ್ಪುರಿಗೊಂಡಿದ್ದ ಕನ್ನಡಿಗ ವೀರನೊಬ್ಬನ ವ್ಯಕ್ತಿಚಿತ್ರವನ್ನು ಪ್ರಸ್ತುತ ಶಾಸನ ನಮ್ಮ ಕಣ್ಣೆದುರು ಕಟ್ಟಿ ನಿಲ್ಲಿಸಲು ಸಮರ್ಥವಾಗಿದೆ. ಕರ್ತೃ ಮಾತ್ರ ಅಜ್ಞಾತದಲ್ಲಿ ಸೇರಿದ್ದಾನೆ.

* ಸ್ವಸ್ತಿಶ್ರೀ ಸ್ಕಂದ, ಅರಸಿನಕುಂಟೆ, ನೆಲಮಂಗಲ ತಾಲ್ಲೂಕು - ೫೬೨ ೧೨೩ ಬೆಂಗಳೂರು (ಗ್ರಾ) ಜಿಲ್ಲೆ.

ಕಪ್ಪೆ ಅರಭಟ್ಟ ಎಂಬುದನ್ನು ಕಪ್ಪೆ ಅರ+ಭಟ್ಟ ಎಂದು ಪದ ಅನ್ವಯ ಮಾಡಿ ಕಪ್ಪೆ ಎಂಬ ವಿಶೇಷಣವುಳ್ಳ ಅರಸು ಭಟ್ಟ ಎಂದರೆ, ಅರಸನನ್ನು ಹೊಗಳುವ ಭಟ್ಟ ಎಂದು ವೆಂಕಟಾಚಲ ಶಾಸ್ತ್ರಿಗಳು ಅರ್ಥೈಸಿದ್ದಾರೆ. ಡಾ|| ಟಿ.ವಿ. ವೆಂಕಟಾಚಲ ಶಾಸ್ತ್ರಿಗಳು ಪೂರ್ವೋಕ್ತ ವಿಷಯದ ಬಗ್ಗೆ ಬರೆಯುತ್ತಾ ಶಾಸನದ ಅರ್ಥವನ್ನು ಸ್ಪಷ್ಟಪಡಿಸುವ ಪ್ರಯತ್ನದಲ್ಲಿ ಸತ್ಯಕ್ಕೆ ಹೆಚ್ಚು ಸಮೀಪ ಇದ್ದಾರೆ ಎಂದು ಸ್ಪಷ್ಟವಾಗುತ್ತದೆ. ಅವರು ನೀಡಿರುವ ಶಾಸನದ ಅರ್ಥ ಈ ಕೆಳಕಂಡಂತಿದೆ.

'ಕಲಿಯುಗ ವಿಪರೀತನು ಎಂದು ಖ್ಯಾತನಾದ ಕಪ್ಪೆ ಅರಭಟ್ಟನು ಒಳ್ಳೆಯ ಜನರಿಗೆ ಬೇಕಾದವನು, ಕೆಟ್ಟ ಜನರಿಗೆ ಬೇಡವಾದವನು (೧). ತೇಜಸ್ವಿಯಾದವನಿಗೆ (ತನಗೆ) ಸಾಯುವುದು ಲೇಸು, ಆದರೆ ಮಾನಭಂಗವಲ್ಲ; ಸಾವಿನ ದುಃಖ ಆ ಕ್ಷಣದ್ದು. ಮಾನಭಂಗದ ದುಃಖ ಪ್ರತಿದಿನದ್ದು (ಎಂದು ಆತ ತಿಳಿದಿದ್ದ). (೨). ಸಾಧುವಾದವನ ವಿಷಯದಲ್ಲಿ ತಾನೂ ಸಾಧುವಾದವನು; ಕಾರ್ಯನಿರ್ವಹಣೆಯ ಸಾಮರ್ಥ್ಯವನ್ನುಳ್ಳ ಅಧಿಕನ ವಿಷಯದಲ್ಲಿ ತಾನೂ ಕಾರ್ಯನಿರ್ವಹಣೆಯ ಸಾಮರ್ಥ್ಯವನ್ನುಳ್ಳ ಅಧಿಕನು ಅಥವಾ ಪ್ರಮುಖರ ನಡುವೆ ತಾನೂ ಪ್ರಮುಖ. ತೊಂದರೆ ಕೊಡಬಲ್ಲ ಶೂರನಿಗೆ, ಕಲಿಯುಗ ವಿಪರೀತನೆನಿಸಿದ ಕಪ್ಪೆ ಅರಭಟ್ಟ ಸಾಕ್ಷಾತ್ ವಿಷ್ಣು, ಬೇರೆಯಲ್ಲ (೩). ಈತನ ಹಾಗೆ ಒಳ್ಳೆಯದನ್ನು ಮಾಡುವವರು ಯಾರು? ಹಾಗೆಯೇ ಕೆಟ್ಟದ್ದು ಮಾಡುವುದರಲ್ಲಿ ಕೂಡ ಈತ ಗಟ್ಟಿಗ. ಈತ ಕಲಿಯುಗ ವಿಪರೀತ! ಅವರವರು ಹಿಂದೆ ಮಾಡಿದ ಒಳ್ಳೆಯದು ಕೆಟ್ಟದ್ದು ಏನುಂಟು, ಅದಕ್ಕೆ ತಕ್ಕ ಫಲ ಈತನ ಕೈಯಲ್ಲಿ ಅವರಿಗೆ ಸಿಕ್ಕುತ್ತದೆ. (೪). ನಮಗೆ ಇದರಿಂದ ಕೆಡುಕೇನು?- ಎಂದು ಕಟ್ಟಿಹಾಕಿದ ಸಿಂಹವನ್ನು ಕಟ್ಟು ಕಳಚಿ ಬಿಟ್ಟ ಹಾಗೆ, ಕಲಿಯುಗ ವಿಪರೀತನಿಗೆ ಎದುರುಬಿದ್ದು ಆತನ ಶತ್ರುಗಳು ತಮ್ಮ ಅವಿವೇಕದಿಂದ ಹಾಳಾದರು, ಸತ್ತರು (೫)-'[೩]

ಡಾ|| ಎಂ.ಎಂ. ಕಲಬುರ್ಗಿ ಅವರು ಕಪ್ಪೆ ಅರಭಟ್ಟನ್ ಬಗ್ಗೆ ಬರೆಯುತ್ತಾ, ಕಪ್ಪೆ ಎನ್ನುವುದು ಒಂದು ಮನೆತನವನ್ನು ಸೂಚಿಸುತ್ತಿರಬೇಕು ಎಂದು ತಿಳಿಸಿದ್ದಾರೆ. ಡಾ|| ಎಂ. ಚಿದಾನಂದ ಮೂರ್ತಿಯವರು ಸೂಚಿಸಿರುವ ಪ್ರೊ|| ತೀ.ನಂ.ಶ್ರೀ. ಅವರ ಅಭಿಪ್ರಾಯದಂತೆ ಕಪ್ಪೆ ಅರಭಟ್ಟ ಎನ್ನುವ ಹೆಸರು ಕಪ್ಪೆ+ಅರಭಟ್ಟ ಅಲ್ಲ. ಕಪ್ಪೆಯರ+ಭಟ್ಟ ಈ ಅಭಿಪ್ರಾಯದ ಹಿನ್ನೆಲೆಯಲ್ಲಿ, ಡಾ|| ಎಂ.ಎಂ. ಕಲಬುರ್ಗಿ ಅವರು 'ಕಪ್ಪೆಯರ' ಎಂಬ ಶಾಸನೋಕ್ತ ಉಲ್ಲೇಖಗಳನ್ನು ಗಮನಿಸಿ. ಕಪ್ಪೆ ಅರಭಟ್ಟನು ಕಪ್ಪೆ ಅಥವಾ ಕಪ್ಪಡಿಗಳ ವರ್ಗಕ್ಕೆ ಸಂಬಂಧಿಸಿದ ಅರಸುಭಟ್ಟನಾಗಿರ ಬಹುದು. ಆದರೆ, ಈ ಅರಸುಭಟ್ಟ (ಅರಭಟ್ಟ) ಎಂಬುದು ಅಂಕಿತ ನಾಮವೋ, ಅನ್ವರ್ಥಕನಾಮವೋ ಎಂಬುದು ಮಾತ್ರ ಚಿಂತನೀಯ ಎಂದಿದ್ದಾರೆ.[೪]

ಶ್ರೀ ರಾಜಶೇಖರ ಬಡಿಗೇರ ಅವರು 'ಸತ್ಯ ಸಂಚಯ' ಎಂಬ ಗ್ರಂಥದಲ್ಲಿ ಪ್ರಕಟಿಸಿರುವ 'ಕಪ್ಪೆ ಅರ ಭಟ್ಟನ್ : ಒಂದು ಪುನರ್ಪರಿಶೀಲನೆ' ಎಂಬ ಲೇಖನದಲ್ಲಿ ಕಪ್ಪೆಯು ಜಲಚರ ಪ್ರಾಣಿ. ಜಲಚರ ಪ್ರಾಣಿಗಳಿಗೆ ಕಶ್ಯಪ ಎಂಬ ಅರ್ಥವೂ ಇದೆ. ಕಶ್ಯಪ ಎಂಬುದು ಒಬ್ಬ ಶ್ರೇಷ್ಠ ಋಷಿಯ ಹೆಸರಾಗಿದೆ. ವಿಶ್ವ ಬ್ರಾಹ್ಮಣರಲ್ಲಿ ಕಶ್ಯಪ ಇಲ್ಲವೆ ಕಾಶ್ಯಪ ಎಂಬ ಹೆಸರಿಗೆ ಎಲ್ಲಿಲ್ಲದ ಮಹತ್ವವಿದೆ... ಇತ್ಯಾದಿ ವಿವರಣೆಗಳನ್ನು ನೀಡುತ್ತಾ, ಕಪ್ಪೆಯ್ಯ ಎಂದರೆ ಕಾಶ್ಯಪಯ್ಯ ಎಂಬ ವ್ಯಕ್ತಿನಾಮದ ಕಲ್ಪನೆಗೆ ಬರುತ್ತದೆ ಎಂದು ತಿಳಿಸಿದ್ದಾರೆ. ಮುಂದುವರಿದು, ಕರ್ಪ ಎಂದರೆ ಕಪ್ಪ ಎಂದು ಅರ್ಥ. ಅದಕ್ಕೆ ಕನ್ನಡ ಶಬ್ದ 'ಎರೆ' ಯೆಂದು ಬೇಕಾದರೆ ತೆಗೆದುಕೊಳ್ಳಬಹುದು. ಇತ್ಯಾದಿ ವಿವರಣೆಗಳನ್ನು ನೀಡುತ್ತಾ, ಕಪ್ಪ ಇಲ್ಲವೆ ಎರೆಯೆಂಬುದು ಕಮ್ಮಾರಿಕೆಗೆ ಸಂಬಂಧವಿರುವಂತೆ ತೋರುತ್ತದೆ ಎಂದು ಸ್ಪಷ್ಟನೆ ನೀಡಿ ಕೊನೆಗೆ 'ಒಟ್ಟಿನಲ್ಲಿ ಕಪ್ಪೆಅರಭಟ್ಟನ್' ಎಂಬುದರ ನಿಜವಾದ ರೂಪ 'ಕಪ್ಪೆಯರ ಭಟ್ಟನ್' ಎಂದಿರಬೇಕಾಗಿತ್ತು. 'ಕಪ್ಪೆಯರ ಭಟ್ಟನ್' ಎಂದರೆ 'ಕಪ್ಪೆಯರ ಮಗನಾದ ಭಟ್ಟನ್' ಎಂದು ಅರ್ಥ ಮಾಡಬಹುದು. ಇಲ್ಲವೆ 'ಕಾಶ್ಯಪ ಗೋತ್ರದ ಭಟ್ಟನ್' ಎಂದು ಅರ್ಥೈಸಬಹುದು. 'ಕಪ್ಪಯ್ಯರ ಭಟ್ಟನ್' ಎಂದೂ ಅರ್ಥ ಮಾಡಲು ಸಾಧ್ಯವಿದೆ. ಕಪ್ಪಯ್ಯನ ಮಗನಾದ ಭಟ್ಟನ್ ಎಂದು ಅರ್ಥೈಸಲೂ ಬರುತ್ತದೆ. ಈ ಹೆಸರುಗಳು ವಿಶ್ವಬ್ರಾಹ್ಮಣರಲ್ಲಿಯೇ ವಿಶೇಷವಾಗಿರುವುದು ಕಂಡುಬಂದಿದೆ. 'ಕಪ್ಪೆಯರ ಭಟ್ಟನ್' ಒಬ್ಬ ವಿಶ್ವ ಬ್ರಾಹ್ಮಣನಾಗಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[೫]

ಶ್ರೀ ಎಂ.ಜೆ. ಶರ್ಮ ಅವರು ತಮ್ಮ ಒಂದು ಲೇಖನದಲ್ಲಿ ಕಪ್ಪೆ ಅರಭಟ್ಟನನ್ನು ಪ್ರಸಿದ್ಧ ಖಗೋಳ ಶಾಸ್ತ್ರಜ್ಞನಾದ ಆರ್ಯಭಟನಿಗೆ ಸಮೀಕರಿಸುವ ಪ್ರಯತ್ನ ಮಾಡಿದ್ದಾರೆ.[೬] ಸಂಸ್ಕೃತದ ಕಲ್ಪವು ಪ್ರಕೃತದಲ್ಲಿ ಕಪ್ಪ ಆಗುತ್ತದೆ ಎಂಬ ಅಭಿಪ್ರಾಯದ ಹಿನ್ನೆಲೆಯಲ್ಲಿ ಆರ್ಯಭಟನು ಕಲಿಯುಗಕ್ಕೆ ವಿಪರೀತನಾದವನು ಎಂದು ಸ್ಪಷ್ಟನೆ ನೀಡುತ್ತಾ, ಅವನ ಅಭಿಪ್ರಾಯಗಳನ್ನು ಆಗಲೂ ಕೆಲವರು ಒಪ್ಪದೆ, ವಿರೋಧಿಸಿದ ಕಾರಣದಿಂದ ಅವನಿಗೆ ಅವಮಾನ ಆಗಿರಬೇಕು; ಆದ್ದರಿಂದ ಅವನು ಆತ್ಮಹತ್ಯೆ ಮಾಡಿಕೊಂಡಿರುವ ಸಾಧ್ಯತೆಗಳು ಹೆಚ್ಚು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿ, ಈ ಆರ್ಯಭಟನು ಐಹೊಳೆ, ಬಾದಾಮಿಯ ಪ್ರದೇಶದವನಾಗಿರಬೇಕು ಎಂದು ಭಾವಿಸಿ, ಐದನೆಯ ಶತಮಾನದ ಅವನ ನೆನಪಿಗೆ ೮ನೆಯ ಶತಮಾನದಲ್ಲಿ ಈ ಸ್ಮಾರಕ ಶಾಸನವನ್ನು ಹಾಕಿಸಿರುವ ಸಾಧ್ಯತೆಗಳಿವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಪ್ರೊ. ಪಾಂಡುರಂಗ ದೇಸಾಯಿ ಅವರು 'ಕಸ್ತೂರಿ' ಮಾಸ ಪತ್ರಿಕೆಯಲ್ಲಿ ಪ್ರಕಟಿಸಿರುವ ಜನಪ್ರಿಯಲೇಖನವೊಂದರಲ್ಲಿ[೭] ತಮ್ಮ ವಿದ್ವತ್‌ನ ಜೊತೆಗೆ ಕಲ್ಪನೆಯನ್ನು ಹೆಣೆದು, ಬಾದಾಮಿಯ ಕೋಷ್ಟರಾಯ ಮತ್ತು ಕಪ್ಪೆ ಅರಭಟ್ಟರನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಒಂದು ಸ್ತರದಲ್ಲಿ ಅದನ್ನು ಒಪ್ಪಬಹುದು ಎನಿಸುತ್ತದೆ. ಅದೇ ಅಭಿಪ್ರಾಯವನ್ನು ಡಾ. ಪಿ.ಬಿ. ದೇಸಾಯಿ ಅವರು ವಿದ್ವತ್

ಲೇಖನವೊಂದರ ಮೂಲಕ ಮಂಡನೆ ಮಾಡಿದ್ದಿದ್ದರೆ, ಆ ಬಗ್ಗೆ ಹೆಚ್ಚಿನ ಪ್ರಯೋಜನ ಪಡೆಯಬಹುದಾಗಿತ್ತು. ಲೇಖನವು ಜನಪ್ರಿಯ ಲೇಖನದ ಸ್ವರೂಪದಲ್ಲಿದ್ದರೂ, ಬರೆದಿರುವವರು ಪ್ರಖ್ಯಾತ ಶಾಸನ ಮತ್ತು ಇತಿತಹಾಸ ತಜ್ಞರಾದ್ದರಿಂದ, ಅವರ ಅಭಿಪ್ರಾಯಗಳನ್ನು ಸುಲಭವಾಗಿ ತಳ್ಳಿಹಾಕುವಂತಿಲ್ಲ. ಡಾ. ದೇಸಾಯಿ ಅವರ ಪ್ರಕಾರ ಬಾದಾಮಿಯ ಕೋಷ್ವರಾಯನು ಪುಲಕೇಶಿಯ ಆಳಿಕೆಯ ಕಾಲದಲ್ಲಿ ವಾತಾಪಿ ನಗರದ ದುರ್ಗಾಧಿಪತಿ ಆಗಿದ್ದವನು. ಕೋಷ್ಠ ಎಂದರೆ ಕೋಟೆ, ಕುಷ್ಠವೆಂಬುದು ರೋಗ. ಕೋಷ್ಠಪತಿ ಎಂದರೆ ಕೋಟೆಯ ಸಂರಕ್ಷಣಾಧಿಕಾರಿ. ಕೋಷ್ಠಪತಿಯನ್ನು ಕೋಷ್ಠರಾಜ, ಕೋಷ್ಠರಾಜ ಎಂದೂ ಕರೆಯಬಹುದು. ಆದ್ದರಿಂದ ದುರ್ಗಾಧಿಪತಿಯಾಗಿದ್ದವನು ಜನರ ಬಾಯಿಯಲ್ಲಿ ಕೋಷ್ಠರಾಯ ಆಗಿ ಉಳಿದಿರುವ ಸಾಧ್ಯತೆಗಳು ಹೆಚ್ಚು ಎಂಬುದು ಡಾ. ಪಿ.ಬಿ. ದೇಸಾಯಿ ಅವರ ಅಭಿಪ್ರಾಯ. ಮುಂದುವರಿದು, ಅದೇ ಲೇಖನದಲ್ಲಿ ಡಾ. ಪಿ.ಬಿ. ದೇಸಾಯಿ ಅವರು ಕಪ್ಪೆ ಅರಭಟ್ಟನ ಬಗೆಗೂ ಪ್ರಸ್ತಾಪಿಸಿದ್ದಾರೆ. ಶಾಸನದಲ್ಲಿನ **'ವರಂತೇಜಸ್ವಿನೋ ಮೃತ್ಯುಃ ನತು ಮಾನಾವಖಂಡನಮ್'** ಮತ್ತು **'ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್ ಮಾಧವನೀತನ್ ಪೆಱನಲ್ಲ'** ಎಂಬ ಭಾಗಗಳನ್ನು ವಿಶ್ಲೇಷಿಸುತ್ತಾ, ಮಂಡೂಕ ಋಷಿಯ ಸಂತತಿಯ ಧರ್ಮರಾಜ ಎಂಬುವವನೇ ಕಪ್ಪೆ ಅರಭಟ್ಟ ಎಂಬ ಅಭಿಪ್ರಾಯವನ್ನು ನೀಡಿದ್ದಾರೆ. ಜನತೆಯ ಬಾಯಿಯಲ್ಲಿ ಕಪ್ಪೆ ಅರಭಟ್ಟ ಎಂಬ ಹೆಸರಿನಿಂದಲೇ ಉಳಿದ ಧರ್ಮರಾಜನು, ಇಮ್ಮಡಿ ಪೊಲೆಕೇಶಿಯ ಗಣ್ಯ ಅಧಿಕಾರಿಗಳಲ್ಲಿ ಒಬ್ಬನಾಗಿದ್ದ. ಪಲ್ಲವರ ಒಳಸಂಚಿನಿಂದ ವಾತಾಪಿಯ ಕೋಟೆಯು ಶತ್ರುಗಳ ವಶವಾಯಿತು. ಧರ್ಮರಾಜನ ಮೇಲೆ ವಿಶ್ವಾಸಘಾತದ ಆರೋಪ ವನ್ನು ಹೊರಿಸಲಾಯಿತು. ಡಾ. ದೇಸಾಯಿ ಅವರು ತಮ್ಮ ಕಾಲ್ಪನಿಕ ಪಾತ್ರವಾದ ಧರ್ಮರಾಜನ ಮೂಲಕ ತಿಳಿಯುವಂತೆ 'ಪಲ್ಲವರ ವಾತಾಪಿ ಪ್ರವೇಶದ ವಾರ್ತೆಯನ್ನು ಕೇಳಲು ಪುಲಕೇಶಿ ಮಹಾರಾಜರು ಅಲ್ಲಿ ಇರಲಿಲ್ಲ. ಅವರು ಎಲ್ಲೋ ಕಣ್‌ಮರೆಯಾಗಿ ಹೋಗಿದ್ದರಂತೆ.' ಅವರು ಕೊನೆಗೆ ಕೋಷ್ವರಾಯ ಮತ್ತು ಕಪ್ಪೆ ಅರಭಟ್ಟನನ್ನು ಎಂದು ಹೇಳಿ ಸಮೀಕರಿಸಲು ಪ್ರಯತ್ನಿಸಿದ್ದಾರೆ. ಬಹುಶಃ ಇದು ಡಾ. ದೇಸಾಯಿ ಅವರ ಪ್ರಕಾರ ಒಂದು ಐತಿಹಾಸಿಕ ಹಗಲುಗನಸಾದರೂ, ಸತ್ಯಕ್ಕೆ ಹತ್ತಿರ ಆಗಬಹುದಾದ ಕನಸು. ಡಾ. ದೇಸಾಯಿ ಅವರ ಪ್ರಕಾರ ಕೋಷ್ವರಾಯ/ಕಪ್ಪೆ ಅರಭಟ್ಟ ಇಮ್ಮಡಿ ಪೊಲೆಕೇಶಿಯ ಕಾಲದ ದುರ್ಗಾಧಿಪತಿ.

ಡಾ|| ಬಾ.ರಾ. ಗೋಪಾಲ್ ಅವರು ಕಪ್ಪೆ ಅರಭಟ್ಟನನ್ನು ಕೀರ್ತಿವರ್ಮನಿಗೆ ಸಮೀಕರಿಸಿದ್ದಾರೆ.[೮] ಡಾ|| ಬಾ.ರಾ. ಗೋಪಾಲ್ ಅವರ ಪ್ರಕಾರ 'ಇದೊಂದು ರಾಜಕೀಯ ಹಿನ್ನೆಲೆ ಇರುವ ಶಾಸನ'. ಬಾದಾಮಿಯ ಮೂರನೆಯ ಗುಹೆಯಲ್ಲಿರುವ ಮಂಗಲೀಶನ ಶಾಸನದ ಪ್ರಕಾರ ಮಂಗಳೀಶನು ವಿಷ್ಣುಗೃಹವನ್ನು ಕಟ್ಟಿಸಿದ ನಂತರ, ನಾರಾಯಣ ಬಲಿಯನ್ನು ನೀಡಿ, ಸತ್ರದಲ್ಲಿ ೧೬ ಬ್ರಾಹ್ಮಣರ ಊಟಕ್ಕೆಂದು ಲಂಜೀಶ್ವರ ಗ್ರಾಮವನ್ನು ದತ್ತಿಯಾಗಿ ಬಿಟ್ಟ ವಿಷಯ ದಾಖಲಾಗಿದೆ. ನಾರಾಯಣ ಬಲಿಯನ್ನು ಕುರಿತಂತೆಯೇ ಡಾ|| ಬಾ.ರಾ. ಗೋಪಾಲ್ ಅವರು ಲೇಖನವೊಂದನ್ನು ಪ್ರಕಟಿಸಿದ್ದಾರೆ. ಡಾ|| ಬಾ.ರಾ. ಗೋಪಾಲ್ ಅವರ ಪ್ರಕಾರ ನಾರಾಯಣ ಬಲಿಯು ಪರಿವ್ರಾಜಕ ವ್ಯಕ್ತಿಯ ಸಾವಿಗೆ ಸಂಬಂಧಿಸಿದ ಅಪರ ಕ್ರಿಯೆ. ವ್ಯಕ್ತಿಯ ಸಾವಿನ ಸುದ್ದಿ ಮಾತ್ರ ತಿಳಿದು, ಶವ ದೊರೆಯದ ಸಂದರ್ಭದಲ್ಲಿ, ಮಡಿದನೆಂದು ತಿಳಿಯಲಾದ ವ್ಯಕ್ತಿಗೆ ಮಾಡಲಾಗುವ ಅಪರ ಕ್ರಿಯೆ. ಯಾವುದೇ ರೀತಿಯ ಅಸಹಜ ಸಾವಿನ ಸಂದರ್ಭದಲ್ಲೂ ಸತ್ತವನಿಗೆ ನಾರಾಯಣ ಬಲಿಯ ಕರ್ಮಾಚರಣೆ ಮಾಡಲಾಗುತ್ತದೆ. ಈ ಹಿನ್ನೆಲೆಯಲ್ಲಿ ಕೀರ್ತಿ ವರ್ಮನ ಸಾವು ಅಸಹಜವಾಗಿದ್ದ ಕಾರಣದಿಂದ, ಮಂಗಲೀಶನು ಕೀರ್ತಿವರ್ಮನ ಹೆಸರಿನಲ್ಲಿ ನಾರಾಯಣ ಬಲಿಯನ್ನು ಮಾಡಿದ್ದ ಎಂದು ತಿಳಿಯಲಾಗಿದೆ. ಬಾದಾಮಿಯ ಕೋಷ್ವರಾಯನ ವಿಗ್ರಹವು ಕೀರ್ತಿವರ್ಮನದಿರಬಹುದು ಎಂಬ ಅಭಿಪ್ರಾಯ ಡಾ|| ಬಾ.ರಾ. ಗೋಪಾಲ್ ಅವರದು. ಕೀರ್ತಿವರ್ಮನಿಗೆ ಕುಷ್ಠ ರೋಗ ಇತ್ತು, ಅವನು ಎಷ್ಟೇ ಪರಾಕ್ರಮಿಯಾದರೂ, ಆ ರೋಗವು ಅವನಿಗೆ ನೋವು ತಂದಿತ್ತು. ಆ ನೋವಿನಿಂದಾದ ದುಃಖದ ಕಾರಣದಿಂದ ಕೀರ್ತಿವರ್ಮ ಆತ್ಮಹತ್ಯೆ ಮಾಡಿಕೊಂಡಿರಬೇಕೆಂಬ ಅನುಮಾನಗಳಿವೆ. ಈ ಎಲ್ಲ ಗುಮಾನಿಗಳ ಹಿನ್ನೆಲೆಯಲ್ಲಿ ಡಾ|| ಬಾ.ರಾ. ಗೋಪಾಲ್ ಅವರು ಕಪ್ಪೆ ಅರಭಟ್ಟ ಎಂದು ಸೂಚ್ಯವಾಗಿ ಸಂಬೋಧಿಸಲಾಗಿರುವ ವ್ಯಕ್ತಿಯು ಬೇರಾರೂ ಅಲ್ಲದೆ ಕೀರ್ತಿವರ್ಮನೇ ಆಗಿರಬೇಕು ಎಂಬ ತೀರ್ಮಾನ ಡಾ|| ಬಾ.ರಾ. ಗೋಪಾಲ್ ಅವರದು. ಬಾದಾಮಿಯಲ್ಲಿನ ಸ್ನೇಹಿತರಾದ ಡಾ|| ಶೀಲಾಕಾಂತ ಪತ್ತಾರ ಅವರು ತಿಳಿಸಿದಂತೆ, ಬಾದಾಮಿಯ ಪ್ರದೇಶದಲ್ಲಿ ಕುಷ್ಠ ರೋಗಕ್ಕೆ ಕಪ್ಪೆ ರೋಗ ಎಂಬ ಹೆಸರೂ ಇದೆ. ಆದ್ದರಿಂದ ಡಾ|| ಬಾ.ರಾ. ಗೋಪಾಲ್ ಅವರ ಅಭಿಪ್ರಾಯವು ಸಮರ್ಥನೀಯವಾಗುತ್ತದೆ. ಆದರೆ, ಕೀರ್ತಿವರ್ಮನು ಕಲಿಯುಗಕ್ಕೆ ವಿಪರೀತ ಅಂದರೆ, ವಿಶೇಷ ಎನಿಸುವ ಯಾವುದೇ ಕಾರ್ಯವನ್ನು ಸಾಧಿಸಿದವನಲ್ಲ. ಅಲ್ಲದೆ, ಕಪ್ಪೆ ಅರಭಟ್ಟನ ಶಾಸನದ ಕಾಲವನ್ನು ಕ್ರಿ.ಶ.ಸು. ೭೫೦ ಎಂದು ಭಾವಿಸಲಾಗಿದೆ. ಕೀರ್ತಿವರ್ಮನ ಮರಣದ ಸುಮಾರು ಒಂದು ನೂರು ವರ್ಷಗಳ ನಂತರ ಈ ಶಾಸನವನ್ನು ಹಾಕಿಸಲಾಗಿದೆ ಎಂದು ತಿಳಿಯಬೇಕಾಗುತ್ತದೆ. ಇದು ಅಸಂಭವ. ಹಾಗಾದರೆ, ಕಪ್ಪೆ ಅರಭಟ್ಟ ಎಂದು ಸಂಬೋಧಿಸಲ್ಪಟ್ಟ ವ್ಯಕ್ತಿಯು ಕೀರ್ತಿವರ್ಮನಲ್ಲದೆ ಬೇರೆ ಯಾರೋ ಆಗಿರಬೇಕು. ಅವನನ್ನು ಪತ್ತೆ ಮಾಡುವ ಪ್ರಯತ್ನ ನನ್ನದು.

ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರಿ ಅವರು ಕಪ್ಪೆ ಅರಭಟ್ಟನ ಶಾಸನದ ಅರ್ಥವನ್ನು ಸ್ಪಷ್ಟಪಡಿಸಲಷ್ಟೇ ತಮ್ಮ ಪರಿಶೀಲನೆಯನ್ನು ಸೀಮಿತಗೊಳಿಸಿದ್ದಾರೆ. ಡಾ. ಎಂ.ಎಂ. ಕಲಬುರ್ಗಿ ಅವರು ಕಪ್ಪೆ

ಅರಭಟ್ಟನನ್ನು ಕಪ್ಪಡಿಗಳ ವರ್ಗದ ಅರಸು ಭಟ್ಟ ಇರಬೇಕು ಎಂದು ಅಭಿಪ್ರಾಯಪಡುತ್ತಾರೆ. ಶ್ರೀ ರಾಜಶೇಖರ ಬಡಿಗೇರ ಅವರ ಪ್ರಕಾರ ಕಪ್ಪೆ ಅರಭಟ್ಟನು ವಿಶ್ವಕರ್ಮ ಬ್ರಾಹ್ಮಣ ಜನಾಂಗಕ್ಕೆ ಸೇರಿದವನು. ಶ್ರೀ ಎಂ.ಜೆ. ಶರ್ಮರ ಪ್ರಕಾರ ಕಪ್ಪೆ ಅರಭಟ್ಟನು ಪ್ರಸಿದ್ಧ ಖಗೋಳ ಶಾಸ್ತ್ರಜ್ಞ ಆರ್ಯಭಟ. ಡಾ. ದೇಸಾಯಿ ಅವರ ಪ್ರಕಾರ ಕಪ್ಪೆ ಅರಭಟ್ಟನೇ ಕೋಷ್ಟರಾಯ ಮತ್ತು ಅವನೇ ಇಮ್ಮಡಿ ಪೊಲೆಕೇಶಿಯ ಕಾಲದಲ್ಲಿ ವಾತಾಪಿ/ಬಾದಾಮಿಯಾ ದುರ್ಗಾಧಿಪತಿ ಆಗಿದ್ದವನು. ಡಾ. ಬಾ.ರಾ. ಗೋಪಾಲ್ ಅವರ ಪ್ರಕಾರ ಕಪ್ಪೆ ಅರಭಟ್ಟನೇ ಕೀರ್ತಿವರ್ಮ ಮತ್ತು ಅವನೇ ಕೋಷ್ಟರಾಯ.

ಐತಿಹಾಸಿಕ ಅಂಶಗಳನ್ನು ಗಮನಿಸಿದರೆ, ಡಾ. ದೇಸಾಯಿ ಮತ್ತು ಅವರ ಅಭಿಪ್ರಾಯಗಳನ್ನು ಪರಿಶೀಲಿಸುವುದು ಅಗತ್ಯ ಎನಿಸುತ್ತದೆ. ಡಾ. ದೇಸಾಯಿ ಅವರ ಪ್ರಕಾರ 'ಕೋಷ್ಟ ಎಂದರೆ ಕೋಟೆ, ಕುಷ್ಟವೆಂಬುದು ರೋಗ'. 'ಕೋಷ್ಠ' ಶಬ್ದಕ್ಕೆ ಮೋನಿಯರ್ ವಿಲಿಯಂಸ್‌ನ ಸಂಸ್ಕೃತ ನಿಘಂಟುವಿನಲ್ಲಿ ಕೊಟ್ಟಿರುವ ಅರ್ಥಗಳಲ್ಲಿ 'ಕೋಟೆ' ಎಂಬ ಅರ್ಥ ಇಲ್ಲ. ಅಲ್ಲಿ ನೀಡಲಾಗಿರುವ ಹಲವು ಅರ್ಥಗಳ ಪೈಕಿ, ಕಪ್ಪೆ ಅರಭಟ್ಟನ ಶಾಸನಕ್ಕೆ ಸಂವಾದಿ ಆಗಬಹುದು ಎನಿಸುವ ಅರ್ಥಗಳಲ್ಲಿ, ಧಾನ್ಯ ಸಂಗ್ರಹಣಾ ಕೊಠಡಿ, ಕೋಶ, ಭಂಡಾರ, ಬೊಕ್ಕಸ, ಖಜಾನೆ ಇತ್ಯಾದಿಗಳು ಗಮನ ಸೆಳೆಯುತ್ತವೆ.[೯] ಕೋಷ್ಠ ಎಂದರೆ ಕೋಟೆ ಅಥವಾ ದುರ್ಗ ಎಂಬ ಅರ್ಥ ಸಂಸ್ಕೃತದ ನಿಘಂಟಿನಲ್ಲಿ ಎಲ್ಲಿಯೂ ಕಾಣುವುದಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟುವಿನ ಎರಡನೆಯ ಸಂಪುಟದಲ್ಲಿ ಕಪ್ಪ, ಕಪ್ಪೆ ಎರಡೂ ಪದಗಳನ್ನು ಸಮಾನಾರ್ಥಕವಾಗಿ ಪರಿಗಣಿಸಿ, ಚೀಲ ಹಾಗೂ ಅಲಮಾರು ಮೊದಲಾದವುಗಳ ಗೂಡು ಎಂದು ಅರ್ಥೈಸಲಾಗಿದೆ.[೧೦] ಅದೇ ಸಂಪುಟದಲ್ಲಿ ಕಪ್ಪಡಿ, ಕಪ್ಪಟಿ ಶಬ್ದಗಳಿಗೆ ಚಿಂದಿ ಬಟ್ಟೆಯನ್ನು ತೊಟ್ಟವನು-ತಿರುಕ, ಎಂಬ ಅರ್ಥವನ್ನೂ[೧೧], ಕಪ್ಪೆ ಶಬ್ದಕ್ಕೆ ಬೀಗ; ಕೀಲಿ ಎಂಬ ಅರ್ಥವನ್ನೂ[೧೨] ನೀಡಲಾಗಿದೆ. ಈ ಯಾವ ಅರ್ಥಗಳೂ ನಮ್ಮ ಕಪ್ಪೆ ಅರಭಟ್ಟನಿಗೆ ಅನ್ವಯಿಸುವಂತಿಲ್ಲ. ಡಾ. ದೇಸಾಯಿ ಅವರು ತಮ್ಮ ಐತಿಹಾಸಿಕ ಹಗಲುಗನಸಿನಲ್ಲಿ ಸೂಚಿಸಿರುವ ಒಂದು ಮಾತನ್ನು ಎಳೆಯಾಗಿ ಇಟ್ಟುಕೊಂಡು, ಮುಂದಿನ ಚರ್ಚೆಗೆ ತೊಡಗುವುದು ಸೂಕ್ತ. ಕನಸು ಕಾಣುತ್ತಿರುವ ವ್ಯಕ್ತಿಯು (ಡಾ. ದೇಸಾಯಿ), ಕನಸಿನಲ್ಲಿ ಕಂಡ ಕೋಷ್ಠರಾಯ / ಕಪ್ಪೆ ಅರಭಟ್ಟನನ್ನು ಕೇಳುತ್ತಾರೆ. 'ಅತ್ತ ವಾತಾಪಿಯ ವರ್ತಮಾನ ವೇನು?' ಆ ಪ್ರಶ್ನೆಗೆ ಆ ಕಾಲ್ಪನಿಕ ವ್ಯಕ್ತಿಯು ಕೊಟ್ಟ ಎಂದು ಡಾ. ದೇಸಾಯಿ ಅವರು ದಾಖಲಿಸಿರುವ ಉತ್ತರದಿಂದಲೇ, ನಮ್ಮ ಕಪ್ಪೆ ಅರಭಟ್ಟನನ್ನು ಗುರುತಿಸುವ ಪ್ರಯತ್ನ ಮಾಡಬಹುದು. ಡಾ. ದೇಸಾಯಿ ಅವರು ತಮ್ಮ ಕಲ್ಪನೆಯ ವ್ಯಕ್ತಿಯ ಮೂಲಕ ಪಡೆದ ಉತ್ತರ ಹೀಗಿದೆ :

*'ಎಲ್ಲವೂ ಹಾಳಾಯಿತು. ದುರ್ಭೇದ್ಯವಾಗಿದ್ದ ಆ ಮಹಾ ರಾಜಧಾನಿ ಶತ್ರುಗಳ ವಶವಾಯಿತು. ತನ್ನ ಅಜೇಯವಾದ ಪ್ರಭು-ಮಂತ್ರ-ಉತ್ಸಾಹ ಶಕ್ತಿಗಳಿಂದ ಸಮಸ್ತ ಭಾರತವನ್ನು ಪಾದಾಕ್ರಾಂತ ಮಾಡಿ, ಅಪೂರ್ವ ಸಾಮ್ರಾಜ್ಯವನ್ನು ನಿರ್ಮಿಸಿದ ಆ ಮಹಾನುಭಾವ ಚಲುಕ್ಯ ಚಕ್ರೇಶ್ವರನಿಗೆ ವಿಪನ್ನಾವಸ್ಥೆ ಒದಗಿತು'* ದೇಸಾಯಿ ಅವರು ಮುಂದುವರಿದು **'ಪಲ್ಲವರು ವಾತಾಪಿಯನ್ನು ವಶಪಡಿಸಿಕೊಂಡ ಬಳಿಕ ಮಹಾರಾಜ ಪುಲಕೇಶಿಯ ಮುಂದಿನ ವೃತ್ತಾಂತವನ್ನು ತಿಳಿದುಕೊಳ್ಳಲು ನಾನು ಆತ್ಯಾತುರನಾಗಿದ್ದೇನೆ'** ಎಂದು ಕೇಳಿದ್ದಕ್ಕೆ, ಆ ವ್ಯಕ್ತಿಯು ನೀಡಿದ ಉತ್ತರವು ನಮ್ಮ ಅನುಮಾನಗಳಿಗೆ ಉತ್ತರ ಕಂಡುಕೊಳ್ಳಲು ಸಹಾಯಕವಾಗಿದೆ ಎಂದು ಭಾವಿಸಲಾಗಿದೆ. ಆ ಮಾತುಗಳು ಹೀಗಿವೆ: *'ಈ ನಿನ್ನ ಆಸೆಯನ್ನು ಪೂರೈಸುವುದು ಯಾರಿಗೂ ಸಾಧ್ಯವಿಲ್ಲ, ನಾನಾದರೂ ಹೇಗೆ ಹೇಳಬಲ್ಲೆ? ಅನೇಕ ವರ್ಷಗಳು ಗತಿಸಿದ ಬಳಿಕ ಒಬ್ಬ ಪ್ರವಾಸಿ ನನ್ನ ಆಶ್ರಮಕ್ಕೆ ಬಂದಿದ್ದನು. ಆತನು ವಾತಾಪಿಯ ಕಥೆಯನ್ನು ಸ್ವಲ್ಪ ಸ್ವಲ್ಪವಾಗಿ ವಿವರಿಸಿದನು. ಪಲ್ಲವರ ವಾತಾಪಿ ಪ್ರವೇಶದ ವಾರ್ತೆಯನ್ನು ಕೇಳಲು ಪುಲಕೇಶಿ ಮಹಾರಾಜರು ಅಲ್ಲಿ ಇರಲಿಲ್ಲವಂತೆ. ಅವರು ಎಲ್ಲಿಯೋ ಕಣ್‌ಮರೆಯಾಗಿ ಹೋಗಿದ್ದರಂತೆ. ವಾತಾಪಿಯಲ್ಲಿ ಮಾತ್ರ ಕೆಲಕಾಲ ಪಲ್ಲವರು ಧ್ವಜ ಊರಿದರು. ಅವರನ್ನು ಹೊರದೂಡಲು ಚಲುಕ್ಯ ಪಕ್ಷದವರು ಶಕ್ತರಾಗಲಿಲ್ಲ. ಚಲುಕ್ಯ ರಾಜ್ಯದಲ್ಲಿ ಅನಾಯಕತೆ ಉಂಟಾಯಿತು. ರಾಜಕುಮಾರರು, ಸಾಮಂತರು, ಮಂಡಲೇಶ್ವರರು, ಇವರಲ್ಲಿ ಅನೈಕ್ಯತೆ ಹಬ್ಬಿತು; ಸ್ವಾರ್ಥಪರತೆ ಹೆಚ್ಚಿತು. ಹೀಗೆ ಸುಮಾರು ಹದಿಮೂರು ವರ್ಷ ಉರುಳಿದವು. ಅನಂತರ ಪುಲಕೇಶಿ ಮಹಾರಾಜರ ಸಮರ್ಥ ಕುಮಾರನಾದ ವಿಕ್ರಮಾದಿತ್ಯನು ಅನಾಯಕತ್ವ ವನ್ನು ಹೊಡೆದೋಡಿಸಿ ಚಲುಕ್ಯ ರಾಜ್ಯದಲ್ಲಿ ಎಂದಿನಂತೆ ಶಾಂತತೆ ಮತ್ತು ಸುವ್ಯವಸ್ಥೆಯನ್ನು ನೆಲೆಗೊಳಿಸಿದನು'.*[೧೩]

ಸಾಮಾನ್ಯವಾಗಿ ಇತಿಹಾಸದಲ್ಲಿ ಕಲ್ಪನೆಗೆ ಅವಕಾಶ ಇಲ್ಲವಾದರೂ, ಡಾ. ದೇಸಾಯಿ ಅವರು ಇತಿಹಾಸಕಾರರೇ ಆದ್ದರಿಂದ ಪಲ್ಲವರು ವಾತಾಪಿಯನ್ನು ವಶಪಡಿಸಿಕೊಂಡಾಗ, ಪೊಲಕೇಶಿಯು ಕಣ್‌ಮರೆಯಾಗಿದ್ದ ಎಂಬ ಅವರ ಮಾತುಗಳನ್ನು ಗೌಣ ಎಂದು ಪರಿಗಣಿಸುವಂತಿಲ್ಲ. ಅವರು ಭಾವಿಸಿರುವಂತೆ, ಕೋಷ್ಠರಾಯ ಮತ್ತು ಕಪ್ಪೆ ಅರಭಟ್ಟರು ಅಭಿನ್ನರು ಮತ್ತು ಕೋಷ್ಠರಾಯ/ಕಪ್ಪೆ ಅರಭಟ್ಟ ಪೊಲೆಕೇಶಿಯ ಕಾಲದಲ್ಲೇ ವಾತಾಪಿಯ ದುರ್ಗಾಧಿಪತಿಯಾಗಿದ್ದವನು. ದುರ್ಗಾಧಿಪತಿ ಅಲ್ಲವಾದರೂ, ಕೋಶಾಧಿಪತಿಯಂತೂ ಆಗಿದ್ದವನು.

ಕಪ್ಪೆ ಅರಭಟ್ಟನು ಶಾಸನದಲ್ಲಿ ಪರಿಚಿತನಾಗಿರುವಂತೆಯೇ, ಶಿಷ್ಟರಿಗೆ ಪ್ರಿಯನಾದವನು, ಕೆಟ್ಟವರಿಗೆ ಬೇಡವಾದವನು ಮತ್ತು ಕಲಿಯುಗಕ್ಕೆ ವಿಪರೀತನಾದವನು. ಅವನು ಸಾಧು ಸ್ವಭಾವದವರಿಗೆ ಸಾಧು, ಪರಾಕ್ರಮಿಗಳಿಗೆ ಪರಾಕ್ರಮಿ ಮತ್ತು ತೊಂದರೆ ಕೊಡುವ ವೀರನಿಗೆ ಕಲಿಯುಗಕ್ಕೆ ವಿಪರೀತನಾದ ಮಾಧವನಲ್ಲದೆ, ಬೇರೆಯಲ್ಲ. ಒಳ್ಳೆಯದನ್ನು ಮಾಡಬಲ್ಲವರು ಕೆಟ್ಟದ್ದನ್ನೂ ಮಾಡಬಲ್ಲರು. ವೀರನಾದವನಿಗೆ ಪುರಾಕೃತವು ವಿಪರೀತವಾಗಿ ಬಂದು ಸಂದಿದೆ. ನಮಗೆ ಏನು ಕೆಟ್ಟದ್ದಾದೀತು ಎಂಬ ಧೋರಣೆಯಿಂದ ಕಟ್ಟಿದ

ಸಿಂಹವನ್ನು ಬಿಟ್ಟ ಹಾಗೆ, ತೊಂದರೆಯಲ್ಲಿರುವ ವೀರನಿಗೆ ಅಹಿತರು ಮತ್ತು ಸತ್ತವರ ವಿಚಾರ. ತೇಜಸ್ವಿಯಾದವನಿಗೆ ಮಾನಹಾನಿಗಿಂತ ಮೃತ್ಯುವೇ ಹೆಚ್ಚು ವರಪ್ರದ. ಮೃತ್ಯುವಿನಿಂದ ಬರುವ ದುಃಖಕ್ಕಿಂತ ಮಾನಭಂಗದಿಂದ ಹೆಚ್ಚು ದುಃಖ ಆಗುತ್ತದೆ. ಶಾಸನದ ಬಹುತೇಕ ಅರ್ಥವು ಇಷ್ಟಕ್ಕೆ ಸೀಮಿತ. ಈ ಹಿನ್ನೆಲೆಯಲ್ಲಿ, ಕ್ರಿ.ಶ. ಸು. ೭ ನೆಯ ಶತಮಾನದ ಅಂತ್ಯ ಮತ್ತು ೮ನೆಯ ಶತಮಾನದ ಆದಿ ಭಾಗದಲ್ಲಿದ್ದ ಕಪ್ಪೆ ಅರಭಟ್ಟನಂತಹ ಒಬ್ಬ ವ್ಯಕ್ತಿಯನ್ನು ಹುಡುಕುವ ಪ್ರಯತ್ನ ನನ್ನದು.

ನಾನು ಈಗ ಪ್ರಸ್ತಾಪಿಸಿದ ಕಾಲದಲ್ಲಿ ಸಾಧುಗೆ ಸಾಧುವಾಗಿದ್ದವನು ಮತ್ತು ಪರಾಕ್ರಮಶಾಲಿಗಳಿಗೆ ಪರಾಕ್ರಮಶಾಲಿಯಾಗಿದ್ದವನು ಪೊಲೆಕೇಶಿ. ತನ್ನ ತಮ್ಮನಿಗೆ ಅಧಿಕಾರವನ್ನೂ ನೀಡಿ ಉತ್ತಮವಾಗಿ ನಡೆದುಕೊಂಡವನು ಪೊಲೆಕೇಶಿ. ಕಲಿಯುಗದಲ್ಲಿ ವಿಶೇಷ ಗುಣಗಳನ್ನು ಹೊಂದಿದ್ದವನು ಪೊಲೆಕೇಶಿ. ಮಹಾ ಪರಾಕ್ರಮಶಾಲಿ ಎಂದು ಹೆಸರು ಪಡೆದಿದ್ದ ಉತ್ತರಾಪಥೇಶ್ವರ ಶ್ರೀಹರ್ಷನನ್ನು ಸೋಲಿಸಿ, ಅವನ ಮುಖದ ಹರ್ಷವನ್ನು ಕಳೆದಿದ್ದ ಪೊಲೆಕೇಶಿಯು, ಹಲವು ಯುದ್ಧಗಳನ್ನು ಮಾಡಿ, ಬಹುತೇಕ ಎಲ್ಲ ಯುದ್ಧಗಳಲ್ಲಿ ಗೆದ್ದರೂ, ಒಮ್ಮೆ ಮಾತ್ರವಲ್ಲದೆ, ಎರಡು ಬಾರಿ ಪಲ್ಲವರೊಡನೆ ಯುದ್ಧದಲ್ಲಿ ಗೆಲುವು ಪಡೆದಿದ್ದರೂ, ಪಲ್ಲವರೊಡನೆ ಪರಿಯಾಲ ಮತ್ತು ಮಣಿಮಂಗಲಗಳಲ್ಲಿ ನಡೆದ ಯುದ್ಧಗಳಲ್ಲಿ ಸೋಲಬೇಕಾಯಿತು; ಮಾತ್ರವಲ್ಲದೆ, ಪಲ್ಲವರ ಶಾಸನಗಳಿಂದ ತಿಳಿದಿರುವಂತೆ, ಪಲ್ಲವ ನರಸಿಂಹವರ್ಮನು ಪೊಲೆಕೇಶಿಯ ಬೆನ್ನಮೇಲೆ 'ವಿಜಯ' ಎಂದು ಬರೆಸಿ ಅವಮಾನಗೊಳಿಸಿದ. ಈ ಅವಮಾನವನ್ನು ಸಹಿಸಿಕೊಳ್ಳುವ ಶಕ್ತಿ ಪೊಲೆಕೇಶಿಗಿರಲಿಲ್ಲ ಎಂದು ಒಪ್ಪಿಕೊಳ್ಳಲೇಬೇಕಾಗುತ್ತದೆ.

ಕ್ರಿ.ಶ. ೬೪೨ರಲ್ಲಿ ಪಲ್ಲವ ನರಸಿಂಹವರ್ಮನು ಬಾದಾಮಿಯನ್ನು ಗೆದ್ದಾಗ, ಬಾದಾಮಿಯ ಕೋಟೆಯ ನಿರ್ಮಾಣದ ಉಲ್ಲೇಖವಿದ್ದ ಬಂಡೆಗಲ್ಲು ಶಾಸನವನ್ನು ಅಳಿಸಿಹಾಕಿ, ಅದರ ಮೇಲೆ ತನ್ನ ವಿಜಯದ ಶಾಸವನ್ನು ಹಾಕಿಸಿಕೊಂಡಿದ್ದಾನೆ. ಈ ಯುದ್ಧದ ನಂತರ ಪೊಲೆಕೇಶಿಯ ಉಲ್ಲೇಖ ದೊರೆಯುವುದಿಲ್ಲ. ಆದ್ದರಿಂದ ಬಹುತೇಕ ವಿದ್ವಾಂಸರು, ಅವನು ಯುದ್ಧದಲ್ಲಿ ಮಡಿದನೆಂದು ನಿರ್ಧರಿಸಿರುವಂತಿದೆ. ಅಕಸ್ಮಾತ್ ಅವನು ಮಡಿದಿದ್ದರೆ, ಅದನ್ನು ಪಲ್ಲವರು ಸಂಭ್ರಮದಿಂದ ದಾಖಲಿಸಬೇಕಾಗಿತ್ತು. ಸಾಯಿಸದೆ, ಸೆರೆ ಹಿಡಿದಿದ್ದರೂ, ಪಲ್ಲವರು ಪೊಲೆಕೇಶಿಯ ಸೆರೆಯನ್ನು ವೈಭವೀಕರಿಸಿಯೇ ದಾಖಲಿಸಬೇಕಾಗಿತ್ತು. ಈ ಎರಡೂ ಆಗಿಲ್ಲ. ಆದ್ದರಿಂದ ಪೊಲೆಕೇಶಿಯನ್ನು ಪಲ್ಲವ ನರಸಿಂಹವರ್ಮನು ಸೋಲಿಸಿದರೂ, ಸೆರೆ ಹಿಡಿಯಲಾಗಿಲ್ಲ ಎಂದಾದಮೇಲೆ ಕೊಲ್ಲುವ ಮಾತಂತೂ ದೂರವೇ ಉಳಿಯಿತು. ಹಾಗಾದರೆ, ಸೋತ ಪೊಲೆಕೇಶಿ ಏನಾದ ಎಂಬ ಪ್ರಶ್ನೆ ಉಳಿಯುತ್ತದೆ. ಬಹುತೇಕ ಹಾಗೆ ಉಳಿದ ವ್ಯಕ್ತಿಯೇ ಅರಭಟ್ಟ; ಅರಸು ಭಟ್ಟ.

ಈಗಾಗಲೇ ಪ್ರಸ್ತಾಪಿಸಿರುವ ಡಾ. ದೇಸಾಯಿ ಅವರ ಅಭಿಪ್ರಾಯದಂತೆ, ಪಲ್ಲವರು ವಾತಾಪಿಯನ್ನು ಪ್ರವೇಶಿಸಿದಾಗ ಪೊಲೆಕೇಶಿಯು ಕಣ್‌ಮರೆಯಾಗಿದ್ದ. ಅವನು ಸೆರೆ ಸಿಕ್ಕಿಲ್ಲ ಅಥವಾ ಸತ್ತಿಲ್ಲ. ವಿಜಯಾಭಿಲಾಷಿಯಾದ ಅವನು ಹೋರಾಟಕ್ಕೆ ಸೂಕ್ತವಾದ ಸಮಯಕ್ಕಾಗಿ ನಿರೀಕ್ಷಿಸುತ್ತಾ, ಅಜ್ಞಾತವಾಗಿ ಉಳಿದಿರುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ. ಹಾಗೆ ಅಜ್ಞಾತನಾಗಿ ಉಳಿದ ಪೊಲೆಕೇಶಿಗೆ ವಾತಾಪಿಯಲ್ಲಿದ್ದ ನಿಷ್ಠರಾದ ಜನತೆ ನೆರವು ನೀಡಿರುವ ಸಾಧ್ಯತೆಗಳಿವೆ.

೧೯೬೦ರಲ್ಲಿ ಪ್ರಕಟಗೊಂಡಿರುವ ಬಾದಾಮಿಯ ಒಂದು ಶಾಸನವು ಈ ಬಗ್ಗೆ ಮಹತ್ವದ ಸುಳಿವು ನೀಡುತ್ತದೆ[೧೪]. ಬಾದಾಮಿಯಲ್ಲಿ ಮಾಲೆಗಿತ್ತಿ ಶಿವಾಲಯದ ಪೂರ್ವಕ್ಕೆ ಪೂರ್ವ-ಪಶ್ಚಿಮವಾಗಿ ಹಬ್ಬಿರುವ ಮರಳುಗಲ್ಲಿನ ಬಂಡೆಗಲ್ಲುಗಳ ನಡುವೆ ಒಂದು ಗುಹೆ ಇದೆ. ಇದು ಕಪ್ಪೆ ಅರಭಟ್ಟನ ಶಾಸನ ಇರುವ ಬಂಡೆಯ ಹಿಂಭಾಗದ ಕಣಿವೆಗೆ ಹೊಂದಿಕೊಂಡಿರುವ ಬಂಡೆ ಸಾಲೂ ಹೌದು. ಇಲ್ಲಿರುವ ಎರಡು ಸಣ್ಣ ಸಣ್ಣ ಗುಹೆಗಳಲ್ಲಿ ಒಂದು ಮತ್ತೊಂದಕ್ಕಿಂತ ಸ್ವಲ್ಪ ಹೆಚ್ಚು ವಿಶಾಲವಾಗಿದೆ. ಈ ಗುಹೆಯು ಈಗಿರುವ ಸ್ಥಿತಿಯಲ್ಲಿ ಯಾರಾದರೂ ತೆವಳಿಕೊಂಡು ಪ್ರವೇಶಿಸಬಹುದು ಮತ್ತು ಒಳಗೆ ಬಗ್ಗಿ ಕುಳಿತುಕೊಳ್ಳಬಹುದು. ಮಲಗಿ ವಿಶ್ರಾಂತಿ ಪಡೆಯಲು ಹೇಳಿ ಮಾಡಿಸಿದಂತಹ ಜಾಗ. ಇಂತಹ ಗುಹೆಯ ಪ್ರವೇಶದ ಬಂಡೆಯ ಮೇಲೆ ಎರಡು ಸಾಲಿನ ಶಾಸನ ಇದ್ದು, ಇದು ಅತ್ಯಂತ ಕುತೂಹಲಕಾರಿಯಾದ ವಿಷಯವನ್ನು ಬಹಿರಂಗಗೊಳಿಸಿದೆ. ಶಾಸನದ ಪಾಠವು ಕನ್ನಡವೇ ಆಗಿದೆ. ಲಿಪಿಯೂ ಕನ್ನಡವೇ. ಲಿಪಿ ಸ್ವರೂಪವು ಕ್ರಿ.ಶ. ೭ನೆಯ ಶತಮಾನದ ಮಧ್ಯ ಭಾಗಕ್ಕೆ ಅನ್ವಯವಾಗುತ್ತದೆ. ಶಾಸನದ ಪಾಠವು ಈ ಕೆಳಕಂಡಂತಿದೆ.

೧ *ಸ್ವಸ್ತಿ ಸತ್ಯಾಶ್ರಯ ಮಹಾರಾಜ[ರಾಪ್ರಾ] ಸಾದಂ[I*] ಕೆಯ್ದೊರ್*

೨ *ಮಹಾಜನಮುಂಮೀ ಬಲಮಾನ್ ರಣಕೇಸ[ಱ] ಯರ್ಕೆ[ii*]*



ಸತ್ಯಾಶ್ರಯ ಎಂಬ ಹೆಸರನ್ನು ಮೊಟ್ಟಮೊದಲು ಬಳಸಿದ ಬಾದಾಮಿ ಚಲುಕ್ಯ ದೊರೆಯೇ ಪೊಲಕೇಶಿ. ಸತ್ಯಾಶ್ರಯ ಎಂದರೆ, ಧರ್ಮರಾಯ ಎಂದೂ ಅರ್ಥೈಸಲು ಸಾಧ್ಯವಿದೆ. ಧರ್ಮರಾಯನೇ ಅಱಭಟ್ಟನಾಗಿರಬಹುದು ಎಂದು ಭಾವಿಸಲೂ ಅವಕಾಶಗಳಿವೆ. ಇವನಿಗೆ ಎಱೆಯತಿಯಡಿಗಳ್, ರಣಕೇಸಱೆ, ರಣವಿಕ್ರಮ ಇತ್ಯಾದಿ ಬಿರುದುಗಳಿದ್ದ ವಿಷಯ ಇತಿಹಾಸ ಬಲ್ಲ ಎಲ್ಲರಿಗೂ ತಿಳಿದಿದೆ. ಪೊಲಕೇಶಿಯ ಹುಟ್ಟು ಹೆಸರೇ ಎಱೆಯ. ಎಱೆ ಎಂಬ ಶಬ್ದಕ್ಕೆ ಕಪ್ಪು ಬಣ್ಣ, ಕಪ್ಪು ಬಣ್ಣದ ಎರೆ ಮಣ್ಣು ಎಂಬ ಅರ್ಥಗಳೂ ಇರುವುದರಿಂದ, ಪೊಲಕೇಶಿಗೆ ಮಾಧವ, ಎಂದರೆ, ಕೃಷ್ಣನ ಹೆಸರು ಅನ್ವರ್ಥಕವಾಗಿತ್ತು ಎಂದು ತಿಳಿಯಬಹುದಾಗಿದೆ.

ಡಾ. ದೇಸಾಯಿ ಅವರು ಊಹಿಸಿರುವಂತೆ, ಪಲ್ಲವರು ವಾತಾಪಿಯನ್ನು ಪ್ರವೇಶಿಸಿದಾಗ ಕಣ್ಮರೆಯಾಗಿದ್ದ ಪೊಲಕೇಶಿಯು ಬಹುತೇಕ ಉಲ್ಲೇಖಿತ ಗುಹೆಯಲ್ಲಿ ಅಜ್ಞಾತವಾಗಿ ಕಾಲ ಕಳೆದಿರುವ ಸಾಧ್ಯತೆಗಳಿವೆ. ಅವನು ಅಲ್ಲಿ ಇದ್ದುದನ್ನು ತಿಳಿದಿದ್ದ ವಾತಾಪಿಯ ಜನ ಅವನು ಇದ್ದ ಗುಹೆಯನ್ನು ಅವನ ಸ್ಮಾರಕವಾಗಿ ಉಳಿಸಿ ಕೊಂಡಿದ್ದಾರೆ ಎಂದು ಭಾವಿಸಿದರೆ ತಪ್ಪಾಗಲಾರದು. ಮಹಾಜನರು ಪೊಲಕೇಶಿಗೆ ಪ್ರಾಸಾದವನ್ನು ಮಾಡಿದರೂ ಸಹ, ಅದನ್ನು ರಣಕೇಸಱೆಯ ಬಿಲ ಎಂದು ಸಂಬೋಧಿಸಿರುವುದು ಕುತೂಹಲ ಕಾರಿಯಾದ ಅಂಶ. ಸತ್ಯಾಶ್ರಯನ ಪ್ರಾಸಾದವು ರಣಕೇಸಱೆಯ ಬಿಲವಾಗಿ ಹೆಸರು ಪಡೆದಿದೆ. ಡಾ. ದೇಸಾಯಿ ಅವರು ಊಹಿಸಿರುವಂತೆ, ಪಲ್ಲವರು ವಾತಾಪಿಯನ್ನು ಆಕ್ರಮಿಸಿದಾಗ ಕಣ್ಮರೆಯಾದ ಪೊಲಕೇಶಿಯು, ವೇಷ ಮರೆಸಿಕೊಂಡು, ವಾತಾಪಿಯ ಜನರ ನೆರಳಿನಲ್ಲಿ ಅಜ್ಞಾತನಾಗಿ, ಜೆ.ಎಫ್. ಫ್ಲೀಟ್ ಅವರು ಮೊದಲು ಅನುಮಾನಪಟ್ಟಿರುವಂತೆ, ಆ ಭಾಗದ ಸಂತನ ಹಾಗೆ ಬದುಕಿರುವ ಸಾಧ್ಯತೆಗಳಿವೆ. ಆಶ್ರಯ ನೀಡಿದ್ದ ಜನರಿಗೆ ಸತ್ಯಾಶ್ರಯ ಮಹಾರಾಜ ತಿಳಿದಿದ್ದ. ಅವನ ಅಜ್ಞಾತವಾಸದ ಕಾರಣದಿಂದ, ಗುಹೆಯೇ ಅವನ ಪ್ರಾಸಾದವಾಗಿತ್ತು; ಮಾತ್ರವಲ್ಲದೆ, ಹುದುಗಿಕೊಳ್ಳುವ ಬಿಲವೂ ಆಗಿತ್ತು. ಬಿಲದಲ್ಲಿ ಅಡಗುವ ಹಲವು ಪ್ರಾಣಿಗಳ ಪೈಕಿ, ದ್ವಿಚರ ಪ್ರಾಣಿಯಾದ ಕಪ್ಪೆಯು ಪೊಲಕೇಶಿಯ ಹೆಸರಿನ ಜೊತೆಗೆ ಅನ್ವರ್ಥಕವಾಗಿ ಸೇರ್ಪಡೆ ಆಗಿರುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಗುಹೆಯಲ್ಲಿ ಅಜ್ಞಾತನಾಗಿ ವಾಸಿಸುತ್ತಿದ್ದ ಧರ್ಮಾತ್ಮನಾದ ವ್ಯಕ್ತಿಯನ್ನು ಜನರು ಕಪ್ಪೆ ಅರಭಟ್ಟ ಎಂದು ಸಂಬೋಧಿಸಿ, ಗೌರವ ಸಲ್ಲಿಸಿದ್ದಾರೆ ಎಂದು ಭಾವಿಸ ಬಹುದು.



ಕಪ್ಪೆ ಅರಭಟ್ಟನ ಶಾಸನ

ಪೊಲೆಕೇಶಿ ಎಂದರೆ ಕೃಷ್ಣ ಎಂದು ಶ್ರೀ ನೆಲಮಂಗಲ ಲಕ್ಷ್ಮೀನಾರಾಯಣ ರಾಯರು ಸ್ಪಷ್ಟಪಡಿಸಿದ್ದಾರೆ[೧೫]. ಮಾಧವ ನೀತನ್ ಪೆಜಿನಲ್ಲ ಎಂದರೆ ಅವನು ಪೊಲೆಕೇಶಿ ಎಂದು ಒಪ್ಪಿಕೊಳ್ಳಬಹುದು. ಶ್ರೀಹರ್ಷನಂತಹ ಪರಾಕ್ರಮಿಯನ್ನು ಸೋಲಿಸಿದ್ದ ಪೊಲೆಕೇಶಿಗೆ ನರಸಿಂಹವರ್ಮನಿಂದ ಆಗಿದ್ದ ಮಾನಭಂಗ ಅಸಹನೀಯವಾಗಿತ್ತು ಎಂದು ಖಚಿತವಾಗಿಯೇ ತಿಳಿಯಬಹುದು. ಕಟ್ಟಿದ ಸಿಂಘಮನ್ ಕೆಟ್ಟೊಡೇನ್ ಎಂಬ ಭಾಗದಲ್ಲಿ, ಎರಡು ಬಾರಿ ಸೋಲಿಸಿದ್ದ ನರಸಿಂಹ (ಸಿಂಘ)ನನ್ನು ಕಟ್ಟಿಯೇ ಹಾಕಬೇಕಾಗಿತ್ತು. ಬಿಟ್ಟರೆ ನಮಗೇನು ಎಂದು ಉಪೇಕ್ಷೆ ಮಾಡಿದ್ದರೆ ಫಲವೇ ಅವಮಾನ ಎಂದು ಶಾಸನ ಕವಿ ಭಾವಿಸಿದಂತಿದೆ. ಈ ಎಲ್ಲ ಧ್ವನಿಗಳ ಹಿನ್ನೆಲೆಯಲ್ಲಿ, ಹೊಲೆಮನೆಯಿಂದಲೂ ಮಾಧವ / ಕೃಷ್ಣನಂತೆ ಪರಾಕ್ರಮಿಯಾಗಿದ್ದ ಪೊಲೆಕೇಶಿ, ಯುದ್ಧಾನಂತರ ಎಱೆಯ/ಸತ್ಯಾಶ್ರಯನ ಬದಲು ಅರಭಟ್ಟನೆಂಬ ಹೆಸರಿನಲ್ಲಿ ಅಜ್ಞಾತನಾಗಿ ಬದುಕಿದ್ದು, ಗೆಲುವಿಗೆ ಪ್ರಯತ್ನಗಳನ್ನು ಮುಂದುವರಿಸಿದ್ದ ಎಂದು ಭಾವಿಸಿದರೆ ತಪ್ಪಾಗಲಾರದು.

ಕಪ್ಪೆ ಅರಭಟ್ಟನ ಶಾಸನದಲ್ಲಿ ಹೇಳಲಾಗಿರುವ ಎಲ್ಲ ಗುಣಗಳನ್ನೂ ಒಬ್ಬನೇ ವ್ಯಕ್ತಿಯಲ್ಲಿ ಕಾಣಬಹುದು ಎಂದರೆ, ಆ ವ್ಯಕ್ತಿಯು ಮತ್ತಾರೂ ಆಗಿರದೆ ಪೊಲೆಕೇಶಿಯೇ ಆಗುತ್ತಾನೆ. ಪೊಲೆಕೇಶಿ ತೀರಿಕೊಂಡ ಆಸುಪಾಸಿನಲ್ಲಿ ಅಂದರೆ, ಕ್ರಿ.ಶ.ಸು. ೬೫೦ ರಿಂದ ಕ್ರಿ.ಶ. ೭೦೦ರ ಸುಮಾರಿನಲ್ಲಿ ಈ ಶಾಸನವನ್ನು ಪೊಲೆಕೇಶಿಯ ಸ್ಮರಣೆಗೆಂದೇ, ಕಾವ್ಯ ಲಕ್ಷಣಗಳ ಸಹಿತ ಹಾಕಿಸಲಾಗಿದೆ ಎಂದು ತಿಳಿಯಬಹುದು.



ಕಪ್ಪೆ ಅರಭಟ್ಟನ ಶಾಸನವನ್ನು ಬಂಡೆಯ ಮೇಲ್ಮೈಯನ್ನು ನಯಗೊಳಿಸಿ, ಪದ್ಮ ಸಹಿತ ಚಕ್ರದ ಪೀಠದ ಮೇಲೆ ಕೆತ್ತಲಾಗಿದೆ. ಅಕ್ಷರಗಳು ಸ್ಫುಟವಾಗಿವೆ. ಅಂದವಾಗಿವೆ. ಕಪ್ಪೆ ಅರಭಟ್ಟನ ಶಾಸನವೂ ಒಂದು ಸ್ಮಾರಕ ಶಾಸನ. ಪೊಲೆಕೇಶಿಯ ಸ್ಮಾರಕ ಗುಹೆಯ ಮೇಲಿನ ಶಾಸನವು ಅದೇ ಕಾಲದ್ದಾದರೂ, ಲಿಪಿ ಸ್ವರೂಪ ಒಂದೇ ಆಗಿದ್ದರೂ, ಬಂಡೆಯ ಒರಟು ಮೇಲ್ಮೈನ ಮೇಲೆ ಕೆತ್ತಲಾಗಿರುವುದರಿಂದ ಅಂದವಾಗಿಲ್ಲ. ಬಹುತೇಕ ಎರಡೂ ಶಾಸನಗಳ ಕೆತ್ತನೆಯ ನಡುವೆ ಕಾಲದ ಅಂತರ ಹೆಚ್ಚಾಗಿಲ್ಲ. ವಿಕ್ರಮಾದಿತ್ಯನು ಅಧಿಕಾರಕ್ಕೆ ಬರುವ ಮೊದಲೇ, ಅಂದರೆ, ಪಲ್ಲವರ ಅಧಿಕಾರಿಗಳು ಮತ್ತು ಸೈನ್ಯ ಇನ್ನೂ ವಾತಾಪಿಯಲ್ಲಿರುವಾಗಲೇ, ಅಜ್ಞಾತವಾಸಿಯಾಗಿದ್ದ ಪೊಲೆಕೇಶಿಯು ಮೃತನಾಗಿರುವ ಸಾಧ್ಯತೆಗಳು ಹೆಚ್ಚು. ಆದ್ದರಿಂದ ಕಪ್ಪೆ ಅರಭಟ್ಟನ ಹೆಸರಿನಲ್ಲಿ, ಪೊಲೆಕೇಶಿಯ ಸ್ಮಾರಕ ಶಾಸನವೂ, ನಂತರ ಪೊಲೆಕೇಶಿ ಅಜ್ಞಾತನಾಗಿ ವಾಸಿಸಿದ್ದ ಗುಹೆಯನ್ನು ಸ್ಮಾರಕವೆಂದು ಪರಿಗಣಿಸಿ, ಶಾಸನವನ್ನು ಹಾಕಿಸಿರುವ ಸಾಧ್ಯತೆಗಳಿವೆ.

ಕಪ್ಪೆ ಅರಭಟ್ಟನು ಒಬ್ಬ ಸಾಮಾನ್ಯ ವ್ಯಕ್ತಿಯಾಗಿದ್ದು, ಅವನನ್ನು ಪೊಲೆಕೇಶಿಗೆ ಸಮೀಕರಿಸಿದರೆ ಆಗುವ ಅನ್ಯಾಯವನ್ನು ಪರಿಗಣಿಸಿ, ಕಪ್ಪೆ ಅರಭಟ್ಟನನ್ನು ಸ್ಪಷ್ಟವಾಗಿ ಗುರುತಿಸುವ ಪ್ರಯತ್ನಕ್ಕೆ ಇನ್ನೂ ಅವಕಾಶಗಳಿವೆ ಎಂದು ಒಪ್ಪಿಕೊಳ್ಳುತ್ತಾ, ಅರಭಟ್ಟನ ಹೆಸರಿನ ಜೊತೆಗೆ ಅಂಟಿಕೊಂಡಿರುವ ಕಪ್ಪೆಗೆ ಇನ್ನೂ ಹೆಚ್ಚಿನ ಅರ್ಥವನ್ನು ಯಾರಾದರೂ ಒದಗಿಸಿದರೆ ಅದನ್ನು ಸ್ವಾಗತಿಸುತ್ತಾ, ನಂತರ ಸೂಕ್ತವಾಗಿ ನನ್ನ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳಲು ಅವಕಾಶ ಇಟ್ಟುಕೊಂಡು, ಸದ್ಯಕ್ಕೆ ಲಭ್ಯವಿರುವ ಮಾಹಿತಿಗಳು ಮತ್ತು ಆಗಿರುವ ಚರ್ಚೆಗಳ ಹಿನ್ನೆಲೆಯಲ್ಲಿ ಕಪ್ಪೆ ಅರಭಟ್ಟನೇ ಇಮ್ಮಡಿ ಪೊಲೆಕೇಶಿ ಎಂಬ ಪ್ರಮೇಯವೊಂದನ್ನು ಚರ್ಚೆಗೆ ಅಣಿಗೊಳಿಸಿದ್ದೇನೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧ ಇಂಡಿಯನ್ ಆಂಟಿಕ್ವೆರಿ, ಸಂ. X, ಪು. ೬೧.

೨. ಡಾ|| ಟಿ.ವಿ. ವೆಂಕಟಾಚಲ ಶಾಸ್ತ್ರಿ., ೧೯೯೧, **ಹಳೆಯ ಹೊನ್ನು**, ಬೆಂಗಳೂರು, ಪು. ೧-೧೪.

೩. ಪೂರ್ವೋಕ್ತ, ಪು. ೧೩.

೪. ಡಾ|| ಎಂ.ಎಂ. ಕಲಬುರ್ಗಿ., ೧೯೯೧, **ಐತಿಹಾಸಿಕ**, ಬೆಂಗಳೂರು, ಪು. ೬-೮.

೫. ರಾಜಶೇಖರ ಬಡಿಗೇರ., ೧೯೯೯, **ಸತ್ಯ ಸಂಚಯ**, ಅಕ್ಕಲಕೋಟೆ, ಪು. ೧೮-೨೧.

೬. M.J. Sharma, J.O.E.S.I., 1984, pp. 76-81.

೭. ಪ್ರೊ. ಪಾಂಡುರಂಗರಾವ ದೇಸಾಯಿ, **ಕಸ್ತೂರಿ**, ಆಂ. ಪು. ೮೦-೮೫

೮. ಡಾ|| ಬಾ. ರಾ. ಗೋಪಾಲ್, ಪ್ರೊ|| ಎಚ್ಚೆಸ್ಕೆ ಅಭಿನಂದನಾ ಗ್ರಂಥ (೭೫), (ಸಂ.) ವಿದ್ವಾನ್ ಎಂ. ಶಿವಕುಮಾರ ಸ್ವಾಮಿ, ಮೈಸೂರು, ೧೯೯೬, ಪು. ೫೬೧-೫೬೬.

೯. Sir Monier Willams., 1993, *A Sanskrit English Dictionary*, Dehli, pp. 314.

೧೦. **ಕಸಾಪ ಕನಿ.**, **ಸಂ. ೨**, ೧೯೭೬, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ಪು. ೧೫೦೧.

೧೧. ಅದೇ, ಪು. ೧೫೦೨.

೧೨. ಅದೇ, ಪು. ೧೫೦೬

೧೩. ಪೂರ್ವೋಕ್ತ, ಪ್ರೊ. ಪಾಂಡುರಂಗರಾವ ದೇಸಾಯಿ, **ಕಸ್ತೂರಿ**, ಆಂ., ಪು. ೮೦-೮೫

೧೪. Shrinivas V. Padigar., *Indian History and Epigraphy*, (*Dr. G.S. Gai Felicitation Volume*) Ed., K.V. Ramesh etc., New Dehli, 1990, pp. 227-228.

೧೫. ಎನ್. ಲಕ್ಷ್ಮೀನಾರಾಯಣ ರಾವ್., **ಶ್ರೀಕಂಠತೀರ್ಥ** (ತೀ.ನಂ.ಶ್ರೀ. ಸಂಭಾವನ ಗ್ರಂಥ), ೧೯೭೬, ಸಂ. ಎಂ. ಚಿದಾನಂದಮೂರ್ತಿ ಮತ್ತು ಇತರರು, ಬೆಂಗಳೂರು, ಪು. ೬೨೦-೬೨೩.




### ಕ. ಇ. ಅಕಾದೆಮಿಯ ೧೬ನೇ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೨೦೦೨)

*ಚರಿತ್ರೆಯನ್ನು ವಸ್ತುನಿಷ್ಠವಾಗಿ ಬರೆಯಲು ನಾವಿನ್ನೂ ಯಶಸ್ವಿಯಾಗಿಲ್ಲ. ಅನೇಕ ಕಾರಣಗಳಿಂದಾಗಿ ಪರಂಪರಾಗತವಾಗಿ ಬಂದ ಭಟ್ಟಂಗಿಗಳ ಪದ್ಧತಿಗೆ ಇಂದೂ ನಾವು ಜೋತುಬಿದ್ದಿದ್ದೇವೆ. ೧೨ನೆಯ ಶತಮಾನದ ಶ್ರೇಷ್ಠಕವಿ ಮತ್ತು ಇತಿಹಾಸ ತಜ್ಞ ಕಲ್ಹಣ 'ರಾಜತರಂಗಿಣೀ' ಎಂಬ ಚಾರಿತ್ರಿಕ ಕಾವ್ಯದಲ್ಲಿ.* ***ಶ್ಲಾಘಸ್ಯ ಏವ ಗುಣವಾನ್ ರಾಗದ್ವೇಷ ಬಹಿಷ್ಕೃತಾ, ಭೂತಾರ್ಥ ಕಥನೇಯಸ್ಯ ಸ್ಥೇಯಸ್ಯೇವ ಸರಸ್ವತೀ*** *- ನಡೆದು ಹೋದ ಸತ್ಯಸಂಗತಿಯನ್ನು ನಿರ್ದಾಕ್ಷಿಣ್ಯವಾಗಿ ಹೇಳುವಲ್ಲಿ ಯಾವನ ಮಾತು ರಾಗದ್ವೇಷಗಳಿಂದ ಮುಕ್ತವಾಗಿ ಖಚಿತ ಸ್ಥಿತಿಯಲ್ಲಿರುವುದೋ ಅಂತಹ ಗುಣಸಂಪನ್ನನೇ ಸ್ತುತ್ಯ - ಎಂದು ಬಹು ಮಾರ್ಮಿಕವಾಗಿ ಹೇಳಿದ್ದಾನೆ. ಕಲ್ಹಣನ ಹೇಳಿಕೆ ಇತಿಹಾಸ ಸಂಶೋಧಕರಿಗೆ ಇಂದಿಗೂ ಪ್ರಸ್ತುತ. ಆದರೆ ಸತ್ಯವನ್ನು ಇದ್ದಂತೆ ಹೇಳುವುದರಲ್ಲಿಯೂ ಒಂದು ಕ್ರಮವಿದೆ. ಹೇಳುವುದರಲ್ಲಿ ಹೆಚ್ಚು-ಕಡಿಮೆ ಆದರೆ ನಮ್ಮ ಕಾಲಿಗೇ ಕೊಡಲಿಪೆಟ್ಟು ಬಿದ್ದು ಸಮಾಜದಲ್ಲಿ ಗೊಂದಲವುಂಟಾಗುತ್ತದೆ. ಅಂತಾಗಿಯೇ ಮನು: 'ಸತ್ಯಂಭ್ರೂಯಾತ್ ಪ್ರಿಯಂ ಭ್ರೂಯಾತ್। ನಭ್ರೂಯಾತ್ ಸತ್ಯಮಪ್ರಿಯಂ॥ ಪ್ರಿಯಂ ಚ ನಾನೃತಂ ಭ್ರೂಯಾತ್। ಏಷ ಧರ್ಮಃ ಸನಾತನಃ॥' ಅಂದರೆ ಸತ್ಯವಾದುದನ್ನು ಹೇಳತಕ್ಕದ್ದು; ಪ್ರಿಯವಲ್ಲದ ಸತ್ಯವನ್ನು ಹೆಳತಕ್ಕದ್ದಲ್ಲ; ಸತ್ಯವಲ್ಲದ ಪ್ರಿಯವನ್ನು ಹೇಳತಕ್ಕದ್ದಲ್ಲ, ಎಂದು ನುಡಿದಿದ್ದಾನೆ. ಒಟ್ಟಿನಲ್ಲಿ ಸತ್ಯವನ್ನು ಜಾಣ್ಮೆಯಿಂದ ಜಾಗರೂಕತೆಯಿಂದ ನುಡಿಯಬೇಕಾಗುತ್ತದೆ.... ಸಂಶೋಧನಾ ಕಾರ್ಯದಲ್ಲಿ ತೊಡಗಿದಾಗ ತಾಳ್ಮೆ, ಪರಿಶ್ರಮ, ಪ್ರಾಮಾಣಿಕತೆ, ವಸ್ತುನಿಷ್ಠ ದೃಷ್ಟಿಕೋನ, ಅಧ್ಯಯನ, ನಿರ್ದಿಷ್ಟಗುರಿ, ಸುಂದರ ನಿರೂಪಣಾಶೈಲಿ ಮುಂತಾದ ಗುಣಗಳನ್ನು ಅಳವಡಿಸಿಕೊಂಡಲ್ಲಿ ಒಬ್ಬ ವ್ಯಕ್ತಿ ಉತ್ತಮ ಇತಿಹಾಸ ಸಂಶೋಧಕನಾಗಬಲ್ಲ.*

**ಡಾ. ಎ. ಕೆ. ಶಾಸ್ತ್ರಿ**
ಸಮ್ಮೇಳನಾಧ್ಯಕ್ಷರು

ಡಾ. ಬಿ. ಜಗದೀಶ ಶೆಟ್ಟಿ*

# ಕನ್ಯಾನದ ಶಾಸನ - ಒಂದು ಅಧ್ಯಯನ

*ಪ್ರೌಢದೇವರಾಯನು ಕ್ರಿ.ಶ. ೧೪೪೬ರಲ್ಲಿ ತೀರಿದ್ದನೆಂದಿದ್ದರೂ ಕ್ರಿ.ಶ. ೧೪೪೯ರ ಶಾಸನಗಳಲ್ಲಿ ಉಲ್ಲೇಖ ಬಂದಿರುವುದು ಅವನಿಗೆ ಸಂಬಂಧಿಸಿದ್ದೆ? ಎಂಬ ಪ್ರಶ್ನೆಯನ್ನು ಎತ್ತಿಕೊಂಡು ಕನ್ಯಾನದ ಈ ಅಪ್ರಕಟಿತ ಶಾಸನದ ಹಿನ್ನೆಲೆಯಲ್ಲಿ ಉತ್ತರಿಸಲಾಗಿದೆ. ಕ್ರಿ.ಶ. ೧೪೫೭ರ ಕನ್ಯಾನದ ಶಾಸನದಲ್ಲಿಯೂ ವೀರ ಪ್ರಉಡ ದೇವರಾಯ ಮಹಾರಾಯರು ಎಂದಿದೆ. ಅಂದರೆ ಕ್ರಿ.ಶ. ೧೪೪೬ರ ನಂತರದ ಕರಾವಳಿ ಕರ್ನಾಟಕದ ಶಾಸನಗಳಲ್ಲಿ ಬರುವ ಈ ರೀತಿಯ ಉಲ್ಲೇಖ ಮಲ್ಲಿಕಾರ್ಜುನನದೇ ವಿನಹ ಎರಡನೇ ದೇವರಾಯನದ್ದಲ್ಲ. ಕಾರಣ ದೇವರಾಯ, ಪ್ರೌಢ ಯಿಂಮಡಿ ದೇವರಾಯ ಎಂಬ ಬಿರುದು ಮಲ್ಲಿಕಾರ್ಜುನನಿಗೂ ಇದ್ದುವು, ಎಂಬುದು ವಿದ್ವಾಂಸರ ಕೃತಿಗಳಲ್ಲೂ ನಮೂದುಗೊಂಡಿದೆ. ಅಂತಾಗಿ ಕನ್ಯಾನದ ಶಾಸನವು ಮಲ್ಲಿಕಾರ್ಜುನನಿಗೆ ಸಂಬಂಧಿಸಿದ್ದುದಾಗಿದೆ. ಈ ಶಾಸನದಲ್ಲಿ ಪ್ರಸ್ತಾಪಿತವಾಗಿರುವ ಕುಳ, ಉಪಚಾರ ಎಂಬ ತೆರಿಗೆಗಳು, ಭೂಮಾಲಕ ವರ್ಗವಾದ ಜನನಿಗಳು, ಹೊರಹಿನ ಹೆಗ್ಗಡೆಗಳು ಹಾಗು ಜಗತ್ತು, ಇವರುಗಳ ಪಾತ್ರ ಸ್ಥಳೀಯ ಆಡಳಿತದಲ್ಲಿ ಇದ್ದ ಬಗೆಯು ಇಲ್ಲಿ ಗಮನಾರ್ಹವಾಗಿ ಮಂಡಿತವಾಗಿದೆ.*

ಇದೊಂದು ಪ್ರಕಟಿತ ಶಾಸನ[1]. ಇದರ ಕಾಲ ಶಕ ವರುಷ ೧೩೭೯. ಅಂದರೆ ಕ್ರಿ.ಶ. ೧೪೫೭. ಇದು ವಿಜಯನಗರದ ದೊರೆ ವೀರಪ್ರತಾಪ ಪ್ರಉಡ ದೇವರಾಯ ಮಹಾರಾಯನ ಶಾಸನ. ಇಲ್ಲಿರುವ ಮುಖ್ಯ ಪ್ರಶ್ನೆ ಈ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿರುವ ರಾಜ ಎರಡನೇ ದೇವರಾಯನೇ? ಅಥವಾ ಮಲ್ಲಿಕಾರ್ಜುನನೇ ಎಂಬುದು. ಇದುವರೆಗೆ ತಿಳಿದಿರುವಂತೆ ಎರಡನೇ ದೇವರಾಯ ೧೪೪೬ರಲ್ಲಿ ತೀರಿಕೊಂಡ. ಅವನ ಮರಣಾನಂತರ ಪ್ರತಾಪದೇವ ಅಥವಾ ಎರಡನೇ ವಿಜಯರಾಯನು ಅಧಿಕಾರ ಗ್ರಹಣಕ್ಕೆ ಯತ್ನಿಸಿದರೂ ಮಲ್ಲಿಕಾರ್ಜುನ ಅಧಿಕಾರಕ್ಕೆ ಬಂದು ಕ್ರಿ.ಶ. ೧೪೬೫ ರವರೆಗೆ ರಾಜ್ಯವಾಳಿದ. ಆದರೆ ಮಲ್ಲಿಕಾರ್ಜುನನು ೧೪೪೬ರಲ್ಲಿ ಅಧಿಕಾರಕ್ಕೆ ಬಂದಿದ್ದರೂ ಕ್ರಿ.ಶ. ೧೪೪೯ರ ಶಾಸನಗಳಲ್ಲಿಯೂ ಪ್ರೌಢದೇವರಾಯನ ಉಲ್ಲೇಖ ಬಂದಿರುವುದು ಯಾಕೆ? ಎಂಬುದು ಒಂದು ಪ್ರಶ್ನೆಯಾಗಿದೆ. ಡಾ. ಕೆ.ವಿ. ರಮೇಶರವರು ಈ ಬಗ್ಗೆ ತಮ್ಮದೇ ಆದ ನಿರ್ಧಾರಕ್ಕೆ ಬಂದಿದ್ದಾರೆ.[2] ಎರಡನೇ ದೇವರಾಯ ಕ್ರಿ.ಶ. ೧೪೪೬ರ ನಂತರವೂ ಬದುಕುಳಿದಿದ್ದ. ಆದರೆ ಅಧಿಕಾರ ಅವನ ಕೈಯಲ್ಲಿರಲಿಲ್ಲ. ಡಾ. ಕೆ.ವಿ. ರಮೇಶ ಅವರು ಮುಂದುವರಿದು ಕ್ರಿ.ಶ. ೧೪೪೩ರಲ್ಲಿ ದೇವರಾಯನ ಕೊಲೆಗೆ ನಡೆದ ಯತ್ನವನ್ನು ಉಲ್ಲೇಖಿಸುತ್ತಾ ಆ ಘಟನೆಯಲ್ಲಿ ಅವನು ಬದುಕುಳಿದರೂ ಅವನು ಅಧಿಕಾರ ನಿರ್ವಹಿಸುವ ಸ್ಥಿತಿಯಲ್ಲಿರಲಿಲ್ಲ. ಹಾಗಾಗಿ ಅವನ ಹೆಸರು ಶಾಸನಗಳಲ್ಲಿ ಉಲ್ಲೇಖವಾಗಿದೆ ಎಂದಿದ್ದಾರೆ. ಅವರು ೧೪೪೬ರ ನಂತರದ ಶಾಸನಗಳಲ್ಲಿ ಬರುವ ಉಲ್ಲೇಖಗಳನ್ನು ೧೪೪೩ರ ಘಟನೆಯೊಂದಿಗೆ ಸಮೀಕರಿಸುತ್ತಾರೆ.

ಡಾ. ಬಿ. ವಸಂತ ಶೆಟ್ಟಿಯವರು ತಮ್ಮ ಪಿಎಚ್.ಡಿ. ಪ್ರಬಂಧದಲ್ಲಿ ಕುಂದಾಪುರ ತಾಲೂಕಿನ ಕಡವಸೆ ಸುಬ್ರಹ್ಮಣ್ಯ ದೇವಸ್ಥಾನದ ಶಾಸನದಲ್ಲಿ[3] (೧೪೪೯)ನ ವಿವರವನ್ನು ಉಲ್ಲೇಖಿಸುತ್ತಾ ಬಾರಕೂರಿನ ರಾಜ್ಯಪಾಲ ರೂಸಣ್ಣ ಒಡೆಯ ರಾಜನ (ದೇವರಾಯನ) ಖಾಯಿಲೆ ಮಾಯವಾಗಿ ಅವನು ನೂರು ವರ್ಷ ಬಾಳಬೇಕೆಂದು ದಾನ ನೀಡಿದ್ದಾಗಿ ತಿಳಿಸುತ್ತಾರೆ.[4] ಅವರು ಇದಕ್ಕೆ ಟಿಪ್ಪಣಿ ಬರೆಯುತ್ತಾ ಈ ಶಾಸನದ ಪ್ರಕಾರ ದೇವರಾಯನಿಗೆ ಆರೋಗ್ಯದ ತೊಂದರೆ ಇರಬೇಕೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅದೇ ವರ್ಷದ ಬಾರಕೂರಿನ ಇನ್ನೊಂದು ಶಾಸನವೂ ದೇವರಾಯನಿಗೆ ಎದುರಾದ ಸಮಸ್ಯೆಯ ನಿವಾರಣೆಗಾಗಿ ಬಾರಕೂರಿನ ರಾಜ್ಯಪಾಲ ರಾಯರಸ ಒಡೆಯ ಪಶ್ಚಿಮ ಸಮುದ್ರದ ತಡಿಗೆ ಹೋಗಿ ೬೦ ಕಾಟಿಗದ್ಯಾಣಗಳನ್ನು ದಾನ ನೀಡಿದ್ದನ್ನು ತಿಳಿಸುತ್ತದೆ.[5] ಹೊಸದಾಗಿ ಶೋಧಿಸಿರುವ ಚಿಂತಾರು ಮತ್ತು ವಾರಂಬಳ್ಳಿ ಶಾಸನಗಳು[6] ಕ್ರಿ.ಶ. ೧೪೪೬ರ ನಂತರ ಮಲ್ಲಿಕಾರ್ಜುನ ರಾಜ ಎಂಬ

* ಮುಖ್ಯಸ್ಥರು, ಇತಿಹಾಸ ವಿಭಾಗ, ಪೂರ್ಣಪ್ರಜ್ಞ ಕಾಲೇಜು, ಉಡುಪಿ.

ವಿವರವನ್ನು ನೀಡಿದರೂ ಮೇಲೆ ಹೇಳಿದ ಕೆಲವು ಶಾಸನಗಳು ಎರಡನೇ ದೇವರಾಯ ರಾಜ ಎಂದು ಹೇಳಿರುವುದರಿಂದ ಡಾ. ವಸಂತ ಶೆಟ್ಟಿಯವರು ಡಾ. ರಮೇಶರವರ ಹೇಳಿಕೆಯಲ್ಲಿ ಸತ್ಯ ಇರಬೇಕು. ದೇವರಾಯ ಅನಾರೋಗ್ಯದಿಂದ ಬಳಲುತ್ತಿದ್ದುದರಿಂದ ಮಲ್ಲಿಕಾರ್ಜುನ ಆಡಳಿತ ನಡೆಸುತ್ತಿರದ್ದಿರಬೇಕು ಎನ್ನುತ್ತಾರೆ.[೭]

ಆದರೆ ಡಾ. ಕೆ.ವಿ. ರಮೇಶ ಮತ್ತು ಡಾ. ಬಿ. ವಸಂತ ಶೆಟ್ಟಿಯವರ ಅಭಿಪ್ರಾಯ ಸರಿ ಕಾಣುವುದಿಲ್ಲ. ಮೇಲೆ ಹೇಳಿದ ಕ್ರಿ.ಶ. ೧೪೪೬ರ ನಂತರದ ಶಾಸನಗಳಲ್ಲದೆ ಈಗ ಅಧ್ಯಯನಕ್ಕೆ ಆರಿಸಿಕೊಂಡಿರುವ ಕನ್ಯಾನದ ಶಾಸನದಲ್ಲಿಯೂ (ಕ್ರಿ.ಶ. ೧೪೫೭) ರಾಜನನ್ನು ವೀರಪ್ರತಾಪ ಪ್ರಉಡ ದೇವರಾಯ ಮಹಾರಾಯರು ಎಂದಿದೆ.[೮] ಅಂದರೆ ಕ್ರಿ.ಶ. ೧೪೪೬ರ ನಂತರದ ಕರಾವಳಿ ಕರ್ನಾಟಕದ ಶಾಸನಗಳಲ್ಲಿ ಬರುವ ಉಲ್ಲೇಖ ಮಲ್ಲಿಕಾರ್ಜುನನದ್ದೇ ವಿನಃ ಎರಡನೇ ದೇವರಾಯನದ್ದಲ್ಲ. ಯಾಕೆಂದರೆ ಮಲ್ಲಿಕಾರ್ಜುನ ನಿಗೂ ದೇವರಾಯನಿಗಿದ್ದ ದೇವರಾಯ, ಪ್ರೌಢ ಯಿಂಮಡಿ ದೇವರಾಯ ಎಂಬ ಬಿರುದುಗಳಿದ್ದವು. ಡಾ. ಪಿ.ಬಿ. ದೇಸಾಯಿ ಮತ್ತು ಇತರ ವಿದ್ವಾಂಸರ ಕೃತಿಗಳಲ್ಲಿಯೂ ಅವುಗಳ ಉಲ್ಲೇಖ ವಿದೆ.[೯] ತುಳುನಾಡಿನ ಶಾಸನಗಳಲ್ಲಿಯೂ ಇದು ಸ್ಪಷ್ಟವಿದೆ. ಉದಾ: ಬಸ್ರೂರು ಶಾಸನ: ೧೪೬೫ ಕ್ರಿ.ಶ.[೧೦] ಶ್ರೀ ವೀರಪ್ರತಾಪ ಪ್ರಉಡ ಯಿಂಮಡಿ ದೇವರಾಯ ಮಲ್ಲಿಕಾರ್ಜುನ ಮಹಾರಾಯರು. ಪೊಳಲಿ ಶಾಸನ, ೧೪೬೫ ಕ್ರಿ.ಶ.[೧೧] ಶ್ರೀ ವೀರಪ್ರತಾಪ ಪ್ರಉಡ ಮಲ್ಲಿಕಾರ್ಜುನ ದೇವರಾಯ (ಮ)ಹಾರಾಯರು ಈ ಎರಡೂ ಶಾಸನಗಳಲ್ಲಿ ಮಲ್ಲಿಕಾರ್ಜುನನ ಹೆಸರಿನ ಮೊದಲು ದೇವರಾಯ ಬಿರುದುಗಳೂ ಉಲ್ಲೇಖಿಸಲ್ಪಟ್ಟಿರುವುದರಿಂದ ಈ ಅಂಶ ಸ್ಪಷ್ಟವಾಗುತ್ತದೆ. ಈ ಅಂಶವನ್ನು ಡಾ. ಕೆ.ವಿ. ರಮೇಶರೇ ಒಪ್ಪಿ ಕೊಳ್ಳುತ್ತಾರೆ.[೧೨] ಅಂದರೆ ಅವರ ತೀರ್ಮಾನಗಳೇ ಒಂದಕ್ಕೊಂದು ವಿರುದ್ಧವಾಗಿವೆ. ಆದುದರಿಂದ ಕನ್ಯಾನದ ಶಾಸನ (೧೪೫೭-ಕ್ರಿ.ಶ) ಮಲ್ಲಿಕಾರ್ಜುನನದ್ದೇ ವಿನಃ ಎರಡನೇ ದೇವರಾಯನದ್ದು ಅಲ್ಲ.

ಮಲ್ಲಿಕಾರ್ಜುನ ವಿಜಯನಗರಿಯನ್ನು ಆಳುತ್ತಿದ್ದಾಗ ೧೪೫೭ರಲ್ಲಿ ಬಾರಕೂರಿನ ರಾಜ್ಯಪಾಲನಾಗಿದ್ದವನು ಬಾನಪ್ಪ ಒಡೆಯ. ಈ ಶಾಸನ ಬಾನಪ್ಪ ಒಡೆಯನ ಬಗ್ಗೆ ಉಲ್ಲೇಖಿಸುವ ಕೆಲವೇ ಶಾಸನಗಳಲ್ಲಿ ಒಂದು. ಕ್ರಿ.ಶ. ೧೪೫೧ರಲ್ಲಿ ಬಾನಪ್ಪ ಒಡೆಯ ಬಾರಕೂರಿನ ರಾಜ್ಯಪಾಲನಾಗಿದ್ದ ಬಗ್ಗೆ ಉಲ್ಲೇಖ ಗಳಿವೆ.[೧೩] ಅನಂತರದ ಉಲ್ಲೇಖವೆಂದರೆ ಈ ಕನ್ಯಾನದ ಶಾಸನ (ಕ್ರಿ.ಶ. ೧೪೫೭) ಅಂದರೆ ೧೪೫೧ರಲ್ಲಿ ಒಮ್ಮೆ ರಾಜ್ಯಪಾಲ ನಾಗಿದ್ದ ಬಾನಪ್ಪ ಒಡೆಯ ಪುನಃ ೧೪೫೭ರಲ್ಲಿ ಸ್ವಲ್ಪ ಸಮಯದ ಮಟ್ಟಿಗೆ ಬಾರಕೂರಿನ ರಾಜ್ಯಪಾಲನಾಗಿರಬೇಕು. ಈ ಶಾಸನದ ಪ್ರಕಾರ ರಾಜ ಮಲ್ಲಿಕಾರ್ಜುನ ಮಹಾರಾಯರು ವರ್ಣಾಶ್ರಮ ಧರ್ಮಂಗಳನ್ನು ಪ್ರತಿಪಾಲಿಸುತ್ತಾ ವಿಜಯನಗರವನ್ನು ಆಳುವ ಕಾಲದಲ್ಲಿ, ಬಾರಕೂರು ರಾಜ್ಯವನ್ನು ಆಳುತ್ತಿದ್ದವನು ಬಾನಪ್ಪ ಒಡೆಯ. ರಾಜನು ತನ್ನ ಹುಟ್ಟಿದ ವರ್ಧಂತಿಯ ಪುಣ್ಯ ಕಾಲದಲು ಹಿರಿಯ ಅರಮನೆಯ ಕಾಮವಟ್ಟ ವಲ್ಲಭ ದೇವಗಳಿಗೆ ನೀಡಿದ ದಾನವನ್ನು ಈ ಶಾಸನ ಉಲ್ಲೇಖಿಸುತ್ತದೆ. ದಾನ ಕೊಟ್ಟ ಜಾಗ ಹಾರುನಾಡ ಒಳಗಣ ರಾಜಾಡಿಯೆಂಬ ಕಂನ್ಯನದ ಊರು. ಈ ದಾನಕ್ಕೆ ಒಪ್ಪಿಗೆ ನೀಡಿದವರೆಂದರೆ ಊರಿನ ಹಂನೆರಡು ಮಂದಿ ಜನನಿಗಳು, ಯಿಬ್ಬರು ಹೊರಹಿನ ಹೆಗ್ಗಡೆಯರು, ಅಯಿವತ್ತೆರಡು ಮಂದಿ ಜಗತ್ತು. ಕಂನ್ಯನದ ಊರಿನಿಂದ ಅರಮನೆಗೆ ಬರುತ್ತಿದ್ದ ಒಟ್ಟು ಆದಾಯ ೭೪೦ ಕುಳ ಕಾಟಿ ಗದ್ಯಾಣ. ಹಾಗೂ ೧೦೦ ಉಪಚಾರ ಕಾಟಿ ಗದ್ಯಾಣ. ಒಟ್ಟು ೮೪೦ ಗದ್ಯಾಣ. ಇದರಲ್ಲಿ ವಲ್ಲಭದೇವರಸರು ಹಂನೆರಡು ಮಂದಿ ಜನನಿಗಳು, ಯಿಬ್ಬರು ಹೊರಹಿನ ಹೆಗ್ಗಡೆಯವರಿಗೆ ಕೊಡಬೇಕಾದ ಕಾಟಿ ಗದ್ಯಾಣ ೮೦ನ್ನು ಕಳೆದು, ೭೪೦ನ್ನು ವಂಶ ಪಾರಂಪರ್ಯವಾಗಿ ಆಚಂದ್ರಾರ್ಕ ಸ್ಥಾಯಿಯಾಗಿ ಅರಮನೆಗೆ ತೆತ್ತು ಬಹರು ಎಂದು ಶಾಸನ ದಾಖಲಿಸುತ್ತದೆ. ಅಲ್ಲದೆ ಊರಿನ ಹರಕೆಗಾಗಿ ೫೦ ಹೊಂನನ್ನು ಸಂಗ್ರಹಿಸಿ ಪತ್ರವನ್ನೂ ನೀಡುವ ಜವಾಬ್ದಾರಿಯೂ ವಲ್ಲಭ ದೇವರಸರಿಗಿತ್ತು. ಹಣ ಕೊಡುವ ಬಗ್ಗೆ ಯಾರಾದರೂ ಸಂವಾದ ಮಾಡಿದರೆ ನಾವು ಜನನಿಗಳು ಮಧ್ಯಪ್ರವೇಶಿಸಿ ತೆರುವಂತೆ ಮಾಡುವೆವು. ಹಾಗೆ ಮಾಡದೆ ಕೊಟ್ಟ ಮಾತಿಗೆ ತಪ್ಪಿದರೆ ತಮಗೆ ಸಿಕ್ಕಿದ ಹಣದಲ್ಲಿ ನಾವು ತೆತ್ತು ಬರುವೆವು.

ಹೀಗೆಂದು ಕೋಟಿ ತಂಮಿಸೆಟ್ಟಿಯವರ ಅಳಿಯಂದಿರು ನಾಲ್ವರು ತಾಯ ಮಕ್ಕಳು, ಸಹ ಹಂನೆರಡು ಮಂದಿ ಜನನಿಗಳು, ಯಿಬ್ಬರು ಹೊರಹಿನ ಹೆಗ್ಗಡೆಯರು, ೫೨ ಮಂದಿ ಜಗತ್ತು ಒಟ್ಟಿಗೆ ಸೇರಿ ತಮ್ಮ ಒಪ್ಪಿಗೆಯಿಂದ ಬರೆಸಿದ ಶಿಲಾಶಾಸನ, ಇದರಲ್ಲಿ ಊರ ೧೨ ಮಂದಿ ಜನನಿಗಳು, ಯಿಬ್ಬರು ಹೊರಹಿನ ಹೆಗ್ಗಡೆಗಳು, ಆರೊಬ್ಬರು ತಪ್ಪಿದರೂ ವಾಸುದೇವರಿಗೆ ೨೪ ಹೊಂನ ತೆತ್ತು ಬರುವರು. ೫೨ ಮಂದಿ ಜಗತ್ತಿನವೊಳಗೆ ಆರೊಬ್ಬರು ತಪ್ಪಿದರೂ ವಾಸುದೇವರಿಗೆ ೧೨ ಹೊಂನ ತೆತ್ತು ಬರುವರು. ತಪ್ಪು ತೆರುವಲ್ಲಿ, ಶಾಪವಾಕ್ಯದಲ್ಲಿ ಗುಬ್ಬಿಗೋಣ ಶ್ರೀ ವಾಸುದೇವರ ಉಲ್ಲೇಖ ಕಂಡುಬರುತ್ತದೆ. ಆ ವಾಸುದೇವ ದೇವಸ್ಥಾನವನ್ನು ಈಗಲೂ ಗುರುತಿಸಬಹುದು. ಅದು ಹೆಮ್ಮಾಡಿ, ವಂಡ್ಸೆ ರಸ್ತೆಯಿಂದ ಕೊಂಕಣ ರೈಲ್ವೆ ಸೇತುವೆಯ ದಕ್ಷಿಣಕ್ಕೆ ೨ ಕಿ.ಮೀ. ದೂರದಲ್ಲಿದೆ. ಆದರೆ ಊರಿನ ಹೆಸರು ಸ್ವಲ್ಪ ಮಟ್ಟಿನ ಬದಲಾವಣೆ ಹೊಂದಿ ಗುಬ್ಬಕೋಣ ಎಂದಾಗಿದೆ.[೧೪]

ಈ ಶಾಸನದಲ್ಲಿ ಮುಖ್ಯವಾಗಿ ಗಮನಿಸಬೇಕಾದ ಕೆಲವು ಅಂಶಗಳಿವೆ. ಇಲ್ಲಿ ಪ್ರಸ್ತಾಪವಾಗಿರುವ ಕುಳ ಮತ್ತು ಉಪಚಾರ ಎಂಬ ಎರಡು ತೆರಿಗೆಗಳು. ಕುಳ ಎನ್ನುವುದು ವಿಜಯನಗರ ಕಾಲದಲ್ಲಿ ಬಹಳ ಪ್ರಚಾರದಲ್ಲಿದ್ದ ತೆರಿಗೆ, ಇದು ಇಡೀ ಗ್ರಾಮದ ಮೇಲೆ ವಿಧಿಸುತ್ತಿದ್ದ ತೆರಿಗೆ.[೧೫] ಉಪಚಾರ ಭೂಮಿಯ ಮೇಲೆ ವಿಧಿಸುತ್ತಿದ್ದ ತೆರಿಗೆ, ಹೆಚ್ಚಾಗಿ ಇದು ಕುಳದೊಂದಿಗೆ ಉಲ್ಲೇಖಿ ಸಲ್ಪಟ್ಟಿದೆ. ಆದರೆ ಪ್ರತ್ಯೇಕವಾಗಿಯೂ ಕಂಡುಬರುತ್ತದೆ. ಉಪಚಾರ

ಯಾವ ರೀತಿಯ ತೆರಿಗೆ ಎಂಬುದಾಗಿ ಸ್ಪಷ್ಟವಾಗಿ ಹೇಳಲಾಗದಿದ್ದರೂ ಇತರ ತೆರಿಗೆಗಳೊಂದಿಗೆ ವಿಧಿಸುತ್ತಿದ್ದ ಹೆಚ್ಚಿನ ತೆರಿಗೆ ಎಂಬುದಾಗಿ ಹೇಳಬಹುದು.[೧೬] ಇಲ್ಲಿ ನೀಡಿರುವ ದಾನಕ್ಕೆ ಸಾಕ್ಷಿಗಳಾಗಿ ಉಲ್ಲೇಖಿಸಲ್ಪಟ್ಟಿರುವ ವ್ಯಕ್ತಿಗಳು. ಉದಾ: ಜನನಿಗಳು, ಭೂಮಾಲಕರ ವರ್ಗವಾಗಿ ವಿಜಯನಗರ ಕಾಲದಲ್ಲಿ ಕಂಡು ಬರುತ್ತಾರೆ.[೧೭] ಜನನದ (ಭೂಮಿಯ) ಮಾಲಕರು, ಹೊರಹಿನ ಹೆಗ್ಗಡೆಯವರು ಎಂದರೆ ಊರಿಗೆ ಸಂಬಂಧಪಡದವರು. ಹೆಗ್ಗಡೆ ವಿಜಯನಗರ ಕಾಲದಲ್ಲಿ ಕರಾವಳಿ ಕರ್ನಾಟಕದಲ್ಲಿ ಸ್ಥಳೀಯ ಆಡಳಿತದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಅವರು ಭೂಮಾಲಕರಾಗಿ ಸ್ಥಳೀಯ ಆಡಳಿತದಲ್ಲಿ ಭಾಗವಹಿಸುತ್ತಿದ್ದರು.[೧೮] ಇನ್ನು ಜಗತ್ತು: ಇದು ಸಹ ಸ್ಥಳೀಯ ಆಡಳಿತದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದ ಭೂಮಾಲಕರ ಗುಂಪು ಎಂಬುದಾಗಿ ಡಾ. ಕೆ.ವಿ. ರಮೇಶರವರು ಅಭಿಪ್ರಾಯ ಪಡುತ್ತಾರೆ.[೧೯] ಅಲ್ಲದೆ ಈ ಶಾಸನದಲ್ಲಿ ಬರುವ ಎರಡು ಉಲ್ಲೇಖಗಳು ಬಹಳ ಮುಖ್ಯವಾಗುತ್ತವೆ. ಉದಾ: (೧) ಕೋಟಿ ತಂಮಿಸೆಟ್ಟಿಯರ ಅಳಿಯಂದಿರು (೨) ವಲ್ಲಭದೇವ ಅರಸರು ತಮ್ಮ ಮಕ್ಕಳು ಅಳಿಯಂದಿರು. ಕಾರಣ ಈ ಎರಡು ಉಲ್ಲೇಖಗಳು ಈ ಭಾಗದಲ್ಲಿ ವಿಶೇಷವಾಗಿ ಕಂಡುಬರುವ ಅಳಿಯ ಸಂತಾನ ಪದ್ಧತಿಯ ಬಗ್ಗೆ ತಿಳಿಸುತ್ತವೆ. ಆಸ್ತಿಯಲ್ಲಿ ಈ ಪದ್ಧತಿಯ ಪ್ರಕಾರ ಗಂಡುಗಳಿಗೆ ಯಾವ ಅಧಿಕಾರವೂ ಇಲ್ಲ. ಹೆಣ್ಣುಗಳು ಆಸ್ತಿಯ ಹಕ್ಕುದಾರರಾಗಿರುತ್ತಾರೆ.[೨೦] ಒಟ್ಟಿನಲ್ಲಿ ಈ ಶಾಸನ ವಿಜಯನಗರ ಕಾಲದ ಆರ್ಥಿಕ ಇತಿಹಾಸದ ಕುರಿತು ಅಧ್ಯಯನ ಮಾಡಲು ನಮಗಿರುವ ಉಪಯುಕ್ತ ದಾಖಲೆಗಳಲ್ಲಿ ಒಂದಾಗಿದೆ.

**ಕನ್ಯಾನದ ಶಾಸನದ ಪಾಠ**

೧. ಶ್ರೀ ಗಣಾಧಿಪತಯೇ ನಮಃ (೧) ಶ್ರೀ ಸರಸ್ವತ್ಯೈ ನಮಃ (೧) ಶ್ರೀ ವಾಸುದೇವಾಯ ನಮಃ (೧) ನಿರ್ವಿಘ್ನ ಮಸ್ತು। ನಮಸ್ತುಂಗ ಶಿರಶ್ಚು

೨. ೦ಬಿ ಚುಂದ್ರ ಚಾಮರಚಾರವೇ । ತ್ರಯಿಲೋಕ್ಯ ನಗರಾರಂಭ ಮುಲ ಸ್ತಂಭಾಯ ಶಂಭವೇ । ಹರೇರ್ಲೀಲಾವರಾಹಸ್ಯ

೩. ದಂಷ್ಟ್ರಾದಂಡ (ಸ್ಸ) ಪಾತುವ (ಃ) ಹೇಮಾದ್ರಿ ಕಲಸಾಯತ್ರ, ಧಾತ್ರೀಚ್ಛತ್ರ ಶ್ರಿಯಂ ರಥಉ । ಸ್ವಸ್ತಿ ಶ್ರೀ ಜಯಾಭ್ಯುದಯ ಶಕವ

೪. ರುಷ ೧೩೭೬ನೆಯ ವರ್ತಮಾನ ಧಾತು ಸಂವತ್ಸರದ ಮಾಘ ಶು ೫ ಗು ಲೂ ಶ್ರೀ ಮಂನ್ಮಹಾರಾಜಾಧಿರಾಜ (ರಾ)ಜ

೫. ಪರಮೇಶ್ವರ ಪೂವ್ವ (೯) ದಕ್ಷಿಣ ಪಶ್ಚಿಮ ಸಮುದ್ರಾಧೀಶ್ವರ ಶ್ರೀ ಮಂನ್ಮಹಾವೀರ ಪ್ರತಾಪ ಪ್ರಉಡ ದೇವರಾಯ

೬. ಮಹಾರಾಯರು ವಿಜಯನಗರಿಯ ಸಿಹ್ವಾಸನದಲು ಸುಖ ಸಂಕಥಾ ವಿನೋದದಿಂದಿದ್ದು ಸಕಲ ಸಾ

೭. ೦ಬ್ರಾಜ್ಯವ ಆಳುವಲ್ಲಿ ವನ್ನಾ ಶ್ರೀ (ಶ್ರ) ಮ ಧಂರ್ಮ್ಮಂಗಳನು ಪ್ರತಿಪಾಲಿಸುತ್ತ ತಂನ್ನಿರೂಪದಿಂ ಭಾನಪ್ಪವೊಡೆಯ

೮. ರು ಬಾರಕೂರ ರಾಜ್ಯವನು ಆಳುವ ಕಾಲದಲು ಆ ಪ್ರಉಡ ದೇವರಾಯ ಮಹಾರಾಯರು ತಂಮ ಪು

೯. ಟ್ಟಿದ ವ (ರ್ದ್ಧ)ಂತ್ತಿ ಪುಂಣ್ಯ ಕಾಲದಲು ಹಿರಿಯ ಅರಮನೆಯ ಕಾಮವಟ್ಟದ ವಲ್ಲಭದೇವಗಳಿಗೆ ದಾನ

೧೦. (ಧಾ)ರ ಪೂರ್ವ್ವಕವಾಗಿ ಕೊಟ್ಟ ಉರು . ಹಾರುನಾಡವೊಳಗಣ ರಾಜಾಡಿಯೆಂಬ ಕಂನ್ಯನದ ಉರು ಹಂನೆರಡು

೧೧. ಮಂದಿ ಕೋಟಿ ತಂಮಿಸೆಟ್ಟಿಯ ಅಳಿಯಂದಿರು ನಾಲ್ವರು ತಾಯ ಮಕ್ಕಳು ಸಹ ಹಂನೆರಡು ಮಂದಿ ಜನ

೧೨. ನಿಗಳು. ಯಿಬ್ಬರು ಹೊರಹಿನ ಹೆಗ್ಗಡೆಯರು ಆಯಿವತ್ತ ಯೆರಡು ಮಂದಿ ಜಗತ್ತು ತಂಮೊಳು ಯೇಕವಾ

೧೩. ಕ್ಯವಾಗಿ ಭಾನಪ್ಪ ಒಡೆಯರ ನಿರೂಪದಿಂ ವಲ್ಲಭದೇವ ಅರಸರಿಗೆ ತಂಮ್ಮ ಉರ ಉಂಬಳಿಗೆ ಒಡಂಬ

೧೪. ಟ್ಟು ಆ ವಲ್ಲಭದೇವ ಅರಸರು ಕಂನ್ಯಾನದ ಉರು ಒಡಂಬಟ್ಟು ಬರಸಿದ ಶಿಲಾ ಶಾಸನದ ಕ್ರಮವೆಂ

೧೫. ತೆಂದರೆ ಆ ರಾಜಾಡಿಯ ಉರು ವರುಷ ೧ ಕಂ ಕುಳ ಕಾಟಿ ಗ ೭೪೦ ಉಪಚಾರ ಕಾಟಿ ಗ ೧೦೦ ಉ

೧೬. ಭಯಂ ಕಾಟಿಗ ೮೪೦ ಜಿ ಒಳಗೆ ಆ ವಲ್ಲಭದೇವ ಅರಸರೂ ಉರು ಹಂನೆರಡು ಮಂದಿ ಜನನಿಗ

೧೭. ಳು ಯಿಬ್ಬರು ಹೊರ್ಹನ ಹೆಗ್ಗಡೆಗಳಿಗೆ ಯಿಳಿಹಿ ಬಹ ಉಡುಗೊಱು ಉತ್ತಾರ ಕಾಟಿಗ ೮೦ ಅಕ್ಷರ

೧೮. ದಲು ಯೆಂಭತ್ತು ಹೊಂನನುಳಿಯೆ ಶುದ್ಧ ವಲ್ಲಭದೇವ ಅರಸರಿಗೆ ವರುಷಂಪ್ರತಿ ತೆತ್ತು ಬಹ ಕಾಟಿ ಗ ೨೬೦ ಅ

೧೯. ಕ್ಷರದಲು ಯೆಳು ನೂಱ ಅಱುವತ್ತು ಹೊಂನನು ಆ ವಲ್ಲಭದೇವ ಅರಸರ ಮಕ್ಕಳು ಪಾರಂಪರೆಯ

೨೦. ಆಚಂದ್ರಾರ್ಕಸ್ತಾಯಿಯಾಗಿ ಯಿಾ ಹೊಂನನು ತೆತ್ತು ಬಹೆಉ ಮತ್ತಂ ಉರು ವರುಷಂ ಪ್ರ

೨೧. ತಿ ತಾಉ ಹರಿಕೆಗೆ ಹಾಯಿಕ್ಕಿ ಮಡಿದುಕೊಂಡ ಕಾ ಟಿ ಗ ೫೦ ಆ ಆಯಿವತ್ತು ಹೊಂನನೂ ತಾ

೨೨. ವೆ ಮಡಿದು ಕೊಂಬರು. ಆ ವಲ್ಲಭದೇವ ಅರಸರು ತಂಮ್ಮ ಮಕ್ಕಳು ಅಳಿಯಂದಿರು ಬುದ್ಧಿವಂತ್ತ ಮ

೨೩. ನುಷ್ಯರು ಆರನುಂ . ರ ಮೇಲೆ ಯಿರಿಸಿದರು. ಅವರ ಪಾದದೋಪಾದಿಯಾಗಿ ಕಂಡು ಅವರು

೨೪. ಹೇಳಿದ ರೀತಿಯಲಿ ವರುಷಂಪ್ರತಿ ತಪ್ಪದೆ ಹದಿಕೆಯ ಮಾಡಿ ಪತ್ರವ ಕೊಟ್ಟು ಹೊಂನನೆತ್ತಿಸಿ ಕೊಡುತ್ತ ಬಹೆಉ ಆ

೨೫. ಹೊಸ ಹದಿಕೆಯ ಮಾಡಿ ಒಕ್ಕಲ ಮೇಲೆ ಅಪ್ಪಯಿಸಿ ಕೊಟ್ಟು ಹೊಲವನೆತ್ತಿಸಿ ಕೊಡುತ್ತ ಬಹೆಉ ಆ

೨೬. ರೊಬ್ಬರು ಅಪ್ಪಯಿಸಿದ ಠಾವಿನಲು ಹೊಂನು ಉಂಟು ಯಿಲ್ಲ ಯೆಂದು ಸಂವಾಜ

೨೭. ಸ. ಜನ ಮಾಡಿದರೆ ನಾಲು ಜನನಿಗಳು ನುಡಿದ ಹೊಜು' ಸಿಗೆಯದು ಸಾಧಿಸಿ ಕೊಡುವೆಲು ಕೊ

೨೮. ಡಲಜು'ಯದೆ ಯಿದ್ದರೆ ಸಿಕ್ಕಿದ ಹೊಂನ್ನ ಜನನಿಗಳು ನಾವು ತೆತ್ತು ಕೊಡುವೆಲು ಯೆಂದು ರಾಜಾಡಿ

೨೯. ಯ ಉರು ಕೋಟಿ ತಂಮ್ಮಸೆಟ್ಟಿಯರ ಅಳಿಯಂದಿರು ನಾಲ್ವರು ತಾಯ ಮಕ್ಕಳು ಸಹ ಹಂನೆರ

೩೦. ಡು ಮಂದಿ ಜನನಿಗಳು ಯಿಬ್ಬರು ಹೊರಹಿನ ಹೆಗ್ಗಡೆಯರು ಅಯಿವತ್ತಯೆರಡು ಮಂದಿ ಜ

೩೧. ಗತ್ತು ತಂಮ್ಮ ಸ್ವರೂಚಿಯಿಂ ಒಡಂಬಟ್ಟು ಬರಸಿದ ಶಿಲಾಶಾಸನ ಪ್ರಮಾಣಿನಲು

೩೨. ನಡಯಿಸಿ ಉರ ಜನನಿಗಳು ಹಂನೆರಡು ಮಂದಿ ಯಿಬ್ಬರು ಹೊರಹಿನ ಹೆಗ್ಗಡೆಗಳು ಆರೊ

೩೩. ಬ್ಬರು ತಪ್ಪಿದರೆ ವಾಸುದೇವರಿಗೆ ಯಿಪ್ಪತ್ತು ನಾಲ್ಕು ಹೊಂನ ತಪ್ಪ ತೆತ್ತು ಯಿ ಬರದ ಶಾಸನ ಪ್ರಮಾ

೩೪. ಣಿಗೆ....ಅಯಿವತ್ತಯೆರಡು ಮಂದಿ ಜಗತ್ತಿನೊಳಗೆ ಆರೊಬ್ಬರು ತಪ್ಪಿದರೂ ವಾಸುದೇ

೩೫. ವರಿಗೆ (ಹಂ) ನೆರಡು ಹೊಂನ ತಪ್ಪ ತೆತ್ತು ಯಿ ಶಾಸನ ಪ್ರಮಾಣಿಗೆ ನಿಲುವೆವೆಂದು ಯಿಂತೀ ನಿಲಿಸಿ.....

೩೬. ...ಟ್ಟು ಬರಸಿದ ಶಿಲಾಶಾಸನ ಯಿ ಶಾಸನಕ್ಕೆ ಅಳು (ಪಿ) ನಡದವರು ವಾರಣಾಸಿಯ

೩೭. ಲು....ಕಪಿಲೆಯ ವಿಧಿಸಿದ ದೋಷಕ್ಕೆ ಹೋಹರು (ಗು) ಬ್ಬಿಗೋಣ ವಾಸುದೇವ ಮೂರ್ತಿಯ

೩೮. ...ಪಾಪಕ್ಕೆ ಹೋಹರು ಭಾನ್ವ ಒಡೆಯರ ಸು ಹಸ್ತದ ಒಪ್ಪ ಶ್ರೀ ತ್ರಿಯಂಬಕ ಅ ಉರ ಜ

೩೯. (ನನಿ) ಗಳು ಹಂನೆರಡು ಮಂದಿ ಯಿಬ್ಬರು ಹೊರಹಿನ ಹೆಗ್ಗಡೆಯವರು ಅಯಿವತ್ತಯೆರಡು

೪೦. ಮಂದಿ ಜಗತ್ತಿನವರ. (ಗು) ಬ್ಬಿ ಗೋಣ ಶ್ರೀ ವಾಸುದೇವರು ದಾನ ಪಾಲನ ಯೋ

೪೧. (ರ್ಮ)ಧ್ಯೇ ದಾನಾಛ್ರೇಯೋನು ಪಾಲನಂ (।) ದಾನೇಸ್ವರ್ಗ ಮವಾಪ್ನೋತಿ ಪಾಲನಾದಚ್ಯು ತಂ ಪದಂ (॥) ಸ್ವದತ್ತಾ

೪೨. ೦ ಪರದತ್ತಾಂ ವಾಯೋ ಹರೇ ತು ವಸುಂಧರಾ (।) ಶ ಷ್ಟಿ ವರುಷ ಸಹಪ್ರಾಣಿ. ವಿಷ್ಟಾಯಾಂ ಜಾಯತೇ

೪೩. ಕ್ರಿಮಿ(॥) ಶುಭಮಸ್ತು ಮಂಗಳ ಮಹಾ ಶ್ರೀ ಶ್ರೀ ಶ್ರೀ

(ಈ ಶಾಸನದ ಅಧ್ಯಯನದಲ್ಲಿ ಸಹಕರಿಸಿದ ಹಿರಿಯ ಸಂಶೋಧಕರಾದ ಡಾ. ಪಿ.ಎನ್. ನರಸಿಂಹಮೂರ್ತಿ, ನಿವೃತ್ತ ಪ್ರಾಂಶುಪಾಲರು ಎಂ.ಜಿ.ಎಂ. ಕಾಲೇಜು, ಉಡುಪಿ ಅವರಿಗೆ ಕೃತಜ್ಞತೆಗಳು.)



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. *SII.* Vol. XXVII. No. 135.

೨. ರಮೇಶ ಕೆ.ವಿ.,1970, *A History of South Kanara (Dharwar)*, P. 167.

೩. ಬಿ. ವಸಂತ ಶೆಟ್ಟಿ Barakuru, (A Metropolitan city of Antiquity - Its History and Culture) Unpublished Ph. D. Thesis, Mysore, 1984, P. 197.

೪. *ಪೂರ್ವೋಕ್ತ*, P-198.

೫. *SII.* Vol. VII, No. 337.

೬. ಬಿ. ವಸಂತ ಶೆಟ್ಟಿ., ೧೯೮೮, **ಬ್ರಹ್ಮಾವರದ ಇತಿಹಾಸ**, ಬ್ರಹ್ಮಾವರ, ಪು. 14-52.

೭. ಬಿ. ವಸಂತ ಶೆಟ್ಟಿ., **ಪಿ.ಎಚ್.ಡಿ. ಮಹಾಪ್ರಬಂಧ**, ಪು. ೨೦೦.

೮. *ARISIE*-1930-31. No. 358.

೯. ಪಿ.ಬಿ. ದೇಸಾಯಿ., *History of Karnataka.* Dharwar. ಪು. ೩೬೭.

೧೦. *SII. Vol.* II Pt. II. No. 459.

೧೧. *Ibid., No.* 460.

೧೨. ರಮೇಶ್ ಕೆ.ವಿ. ಪೂರ್ವೋಕ್ತ-ಪುಟಗಳು ೧೭೬, ೧೭೭.

೧೩. *ARSIE.*, 1929-30.551. *SII.* Vol. IX Pt. II No. 456.

೧೪. ಉಪ್ಪುಂದ ಚಂದ್ರಶೇಖರ ಹೊಳ್ಳ., ೨೦೦೧. **ಕುಂದನಾಡು ದೇವಾಲಯ ಹಾಗೂ ಶ್ರದ್ಧಾ ಕೇಂದ್ರಗಳು, ಒಂದು ಸಾಂಸ್ಕೃತಿಕ ಪರಿಚಯ.** ಉಪ್ಪುಂದ. ಪು. ೪೩೩.

೧೫. ಬಿ. ಜಗದೀಶ ಶೆಟ್ಟಿ, *The Agro-Economic Relations and Social Structure in Dakshina Kannada A.D. 1000-1600.* (Mangalore University)-1992 P. 150.

೧೬. ಪೂರ್ವೋಕ್ತ . ಪು. ೧೫೧.

೧೭. ಪೂರ್ವೋಕ್ತ ಪು. ೧೦೧.

೧೮. ಪೂರ್ವೋಕ್ತ ಪು. ೧೦೬.

೧೯. ರಮೇಶ್ ಕೆ.ವಿ. ಪೂರ್ವೋಕ್ತ ಪು. ೨೬೩.

೨೦. ಬಿ. ವಸಂತ ಶೆಟ್ಟಿ, ಪಿ.ಎಚ್.ಡಿ. ಪ್ರಬಂಧ, ಪೂರ್ವೋಕ್ತ ಪು. ೪೦೭.

ಡಾ. ಪಿ.ವಿ. ಕೃಷ್ಣಮೂರ್ತಿ*

# ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರುಪೂರ್ವ ತಾಲೂಕು ಒಂದು ಅಧ್ಯಯನ

*ಬೆಂಗಳೂರುಪೂರ್ವ ತಾಲೂಕು ಹೊಸದಾಗಿ ರೂಪಿಸಿದ ತಾಲೂಕೆನಿಸಿದೆ, ಶಾಸನಗಳ ಹಿನ್ನೆಲೆಯಲ್ಲಿ ಆ ತಾಲೂಕಿನ ಸಾಂಸ್ಕೃತಿಕ ವೈವಿಧ್ಯವು ವಿಸ್ತಾರಗೊಂಡಿರುವುದು ಕಾಣುತ್ತದೆ. ಆಳಿದ ಗಂಗರು, ಚೋಳರು, ಹೊಯ್ಸಳರು, ವಿಜಯನಗರದರಸರು, ಮೈಸೂರರಸರು, ಆಡಳಿತದ ದಕ್ಷ ಚೌಕಟ್ಟನ್ನೂ, ಆರ್ಥಿಕ ಸಂಪನ್ಮೂಲಗಳ ಕ್ರೋಡೀಕರಣವನ್ನು ಭೌಗೋಳಿಕ ನೆಲೆಗಳ ಚೌಕಟ್ಟನ್ನು ನಿಖರಗೊಳಿಸಿದ ಕೀರ್ತಿ ಈ ರಾಜವಂಶಗಳಿಗೆ ಸೇರಬೇಕು. ನಾಡುಗಳ ಹೆಸರು ಅರ್ಥಪೂರ್ಣ ನಿಸರ್ಗವಾಚಿಗಳಾಗಿ ವಾರ್ಗಿಕ ವೈವಿಧ್ಯವನ್ನು ತೋರುತ್ತದೆ. ಪ್ರಾಚೀನದಿಂದ ಇಲ್ಲಿನ ಜನಜೀವನ ಸಾಂಸ್ಕೃತಿಕ ಜತನದಲ್ಲಿ ವಿಕಸನಗೊಂಡು ಅರ್ವಾಚೀನದಲ್ಲಿಯೂ ವರ್ತಮಾನ ಸಂವೇದನೆಯನ್ನು ತೋರುವಂಥ ಮನೋಧರ್ಮ ಬೆಳೆದುಬಂದಿದೆ. ವಿಶೇಷತಃ ಕೃಷಿ ಮೂಲದ ಮುಖ್ಯ ಮಾಧ್ಯಮವಾದ ಕೆರೆಕಟ್ಟೆಗಳ ನಿರ್ಮಾಣ, ಅಂತರ್ಜಲದ ಸಂಪತ್ತಿಗೆ ಕಾರಣವಾಗಿತ್ತು. ಶಾಕ್ತ ದೇವತೆಗಳ ಪ್ರತಿಷ್ಠಾಪನೆಗಳೂ ಈ ಕೆರೆಕಟ್ಟೆಗಳ ಬಳಿ ನಡೆಯುತ್ತಿದ್ದುದು, ಜಲ ಪಾವಿತ್ರ್ಯ ನಿರ್ವಹಣೆಯ ಸಂಸ್ಕೃತಿಗೂ ಪೂರಕವಾಗಿದ್ದುದು ಕಾಣುತ್ತದೆ. ಹೀಗಾಗಿ ಒಂದು ತಾಲೂಕಿನ ನಿರ್ಮಾಣ ಹೇಗೆ, ಜನಬದುಕಿಗೆ ಸಂವೇದಿಸುತ್ತದೆ ಎಂಬುದಕ್ಕೆ ಈ ತಾಲೂಕಿನ ಪರಿಶೋಧ ಒಂದು ಸಾಕ್ಷಿ ಆಗಿದೆ.*

ಹೊಸದಾಗಿ ರೂಪುಗೊಂಡಿರುವ ಬೆಂಗಳೂರುಪೂರ್ವ ತಾಲೂಕು ಪ್ರದೇಶವು ಉತ್ತರ-ದಕ್ಷಿಣವಾಗಿ ಸುಮಾರು ೨೨ ಕಿ.ಮೀ. ಪೂರ್ವ-ಪಶ್ಚಿಮವಾಗಿ ಸುಮಾರು ೧೬ ಕಿ.ಮೀ. ವ್ಯಾಪ್ತಿಯನ್ನು ಪಡೆದುಕೊಂಡಿದೆ. ಪೂರ್ವಕ್ಕೆ ಹೊಸಕೋಟೆ, ದಕ್ಷಿಣಕ್ಕೆ ಆನೇಕಲ್, ಪಶ್ಚಿಮದಲ್ಲಿ ಬೆಂಗಳೂರು ನಗರ, ಉತ್ತರಕ್ಕೆ ದೇವನಹಳ್ಳಿ ತಾಲೂಕುಗಳು ಮೇರೆಗಳಾಗಿವೆ. ಈ ತಾಲೂಕು ಪ್ರದೇಶದಲ್ಲಿನ ಶಾಸನಗಳ ಹಿನ್ನೆಲೆಯಲ್ಲಿ ಈ ಪ್ರದೇಶದ ಚಾರಿತ್ರಿಕ, ಭೌಗೋಳಿಕ ಹಾಗೂ ಸಾಂಸ್ಕೃತಿಕ ಮಹತ್ವವನ್ನು ಗ್ರಹಿಸುವ ಪ್ರಯತ್ನ ಈ ಪ್ರಬಂಧದ ಆಶಯವಾಗಿದೆ.

ಟಿಪ್ಪು ಪತನದ ಅನಂತರ ಕ್ರಿ.ಶ. ೧೭೯೯ ರಲ್ಲಿ ಏರ್ಪಟ್ಟ **ಮೈಸೂರು ಸಂಸ್ಥಾನದ** ಆಡಳಿತದಲ್ಲಿ ಇಂದಿನ ಕೋಲಾರ ಮತ್ತು ಬೆಂಗಳೂರು ಜಿಲ್ಲಾ ಪ್ರದೇಶಗಳನ್ನೊಳಗೊಂಡಂತೆ '**ಬೆಂಗಳೂರು ಫೌಜುದಾರಿ**'ಯನ್ನು ರೂಪಿಸಲಾಗಿತ್ತು. ಅನಂತರ ೧೮೬೩ರಲ್ಲಿ ಕಮಿಷನರ್‌ಗಳ ಆಳ್ವಿಕೆಯಲ್ಲಿ ಹೊಸದಾಗಿ **ಬೆಂಗಳೂರು ಜಿಲ್ಲೆ**ಯನ್ನು ರೂಪಿಸಲಾಯಿತು. ಕಾಲಾಂತರದಲ್ಲಿ ಈ ಜಿಲ್ಲಾ ಪ್ರದೇಶವು ಅನೇಕ ಬದಲಾವಣೆಗಳನ್ನು ಕಂಡಿತು. ಹಲವಾರು ತಾಲೂಕುಗಳು ಹೋಬಳಿಗಳಾಗಿ ಮಾರ್ಪಾಟಾದವು ಹಾಗೇ ಹೋಬಳಿ ಕೇಂದ್ರವಾಗಿದ್ದವು ತಾಲೂಕು ಕೇಂದ್ರವಾಗಿ ಪರಿವರ್ತಿತವಾದದ್ದು ಉಂಟು. ವಿಶಾಲವಾಗಿದ್ದ ಚನ್ನಪಟ್ಟಣ ತಾಲೂಕನ್ನು ಕ್ರಿ.ಶ. ೧೯೨೮ರಲ್ಲಿ ಚನ್ನಪಟ್ಟಣ ಮತ್ತು ಕ್ಲೋಸ್‌ಪೇಟೆ ಎಂಬ ಎರಡು ತಾಲೂಕುಗಳನ್ನಾಗಿ ವಿಂಗಡಿಸಲಾಯಿತು. ೧೯೪೯ರಲ್ಲಿ ಕಾನಕಾನಹಳ್ಳಿ ಮತ್ತು ಕ್ಲೋಸ್‌ಪೇಟೆಗಳನ್ನು ಕ್ರಮವಾಗಿ ಕನಕಪುರ ಮತ್ತು ರಾಮನಗರಂಗಳೆಂದು ನಾಮಕರಣ ಮಾಡಲಾಯಿತು. ಈ ಮಧ್ಯೆ ಒಂದು ಆಯಕಟ್ಟಿನ ಆದರ್ಶ ಸ್ಥಳದಲ್ಲಿ ನೆಲೆಗೊಂಡಿರುವ **ಬೆಂಗಳೂರು ನಗರ** ವೇಗವಾಗಿ ಬೆಳೆಯತೊಡಗಿತ್ತು. (ಅದು ಇಂದು ವಿಶ್ವದಲ್ಲೇ ಅತಿವೇಗವಾಗಿ ಬೆಳೆಯುತ್ತಿರುವ ನಗರಗಳಲ್ಲಿ ಒಂದೆಂದು ಪರಿಗಣಿಸಲಾಗಿದೆ). ಹಿಂದೆ ಈ ನಗರದ ಸುತ್ತಮುತ್ತಲ ಪ್ರದೇಶಗಳನ್ನೊಳಗೊಂಡಂತೆ ಕಸಬ ತಾಲೂಕು ಅಂದರೆ ಬೆಂಗಳೂರು ತಾಲೂಕು ಎಂಬುದು ರೂಪುಗೊಂಡಿತ್ತು. ಆದರೆ ಮುಂದೆ ೧೯೩೯ರಲ್ಲಿ ಆಡಳಿತದ ಅನುಕೂಲಕ್ಕಾಗಿ ಅದನ್ನು ಬೆಂಗಳೂರು ಉತ್ತರ ಮತ್ತು ದಕ್ಷಿಣ ತಾಲೂಕುಗಳೆಂದು ವಿಭಾಗಿಸಲಾಯಿತು. ಬೆಂಗಳೂರು ನಗರ ಬೆಳೆದಂತೆ ಅದನ್ನು **ಬೆಂಗಳೂರು ನಗರ** ಮತ್ತು **ಗ್ರಾಮಾಂತರ** ಜಿಲ್ಲೆಗಳೆಂದು ವಿಭಾಗಿಸುವ ಕ್ರಿಯೆ ೧೯೪೮ರಲ್ಲಿ ಒಮ್ಮೆ, ೧೯೬೨ರಲ್ಲಿ ಮತ್ತೊಮ್ಮೆ ಆದದ್ದುಂಟು. ೧೯೬೬ರಲ್ಲಿ ಮರಳಿ ಒಂದುಗೂಡಿಸಿದ್ದ* ಜಿಲ್ಲೆಯನ್ನು ಅಂತಿಮವಾಗಿ ೧೯೮೬ರಲ್ಲಿ,

* ೩೭, 'ಶ್ರೀಕೃಷ್ಣಕೃಪ', ೩ನೇ ಕ್ರಾಸ್, ಸುಬ್ಬಣ್ಣ ಲೇಔಟ್, ಹರಿನಗರ ಕ್ರಾಸ್, ಬೆಂಗಳೂರು - ೫೬೦ ೦೬೨.

# ಬೆಂಗಳೂರುಪೂರ್ವ ತಾಲೂಕು ನಕ್ಷೆ

77° 30'
40'
50'
78° 00'
13° 20'
13° 10'
13° 00'
12° 50'
12° 40'

ಜಾಲ ಹೋಬಳಿ
ದೇವನಹಳ್ಳಿ
ಮಿಟ್ಟಗಾನಹಳ್ಳಿ
ಜ್ಯೋತಿಪುರ
ಯಲಹಂಕ ಹೋಬಳಿ
ಸಣ್ಣೂರು
ಗುಂಡೂರು
ಮಂಡೂರು
ಹೊಸಕೋಟೆಗೆ
ಹೊಸಕೋಟೆ ತಾಲೂಕು
ದೊಡ್ಡಗುಬ್ಬಿ
ಬಿದರಹಳ್ಳಿ
ದಾಸರಹಳ್ಳಿ
ಚನ್ನಸಂದ್ರ
ಆವಲಹಳ್ಳಿ
ಬೆಂಗಳೂರು ಕಸಬ ಹೋಬಳಿ
ಹೊರಮಾವು
ಕನ್ನಮಂಗಲ
ಕೃಷ್ಣರಾಜಪುರ
ದೇವಸಂದ್ರ
ಬೈಯಪ್ಪನಹಳ್ಳಿ
ಬೆಂಗಳೂರಿನಿಂದ
ಬೆನ್ನಮಂಗಲ
ದೊಡ್ಡನೆಕ್ಕುಂದಿ
ನಾಗೊಂಡಹಳ್ಳಿ
ವೈಟ್‌ಫೀಲ್ಡ್
ತಿಪ್ಪಸಂದ್ರ
ಬೆಂಗಳೂರಿನಿಂದ
ಮಾರತ್ತಹಳ್ಳಿ
ಕೋನೇನಅಗ್ರಹಾರ
ಸೊರಹುಣಸೆ
ಮುನ್ನೆಕೊಳಾಲ
ಚಳ್ಳಘಟ್ಟ
ಬೆಳ್ಳಂದೂರು
ವರ್ತೂರು
ಬೇಗೂರು ಹೋಬಳಿ
ಬೆಂಗಳೂರಿನಿಂದ
ದೊಡ್ಡಕನ್ನೆಲ್ಲಿ
ಸರ್ಜಾಪುರಕ್ಕೆ
ಸರ್ಜಾಪುರಕ್ಕೆ
ಕೊಡತಿ
ಆನೇಕಲ್ ತಾಲೂಕು



ಬೆಂಗಳೂರು ಗ್ರಾಮಾಂತರ ಮತ್ತು ಬೆಂಗಳೂರು ಜಿಲ್ಲೆಗಳೆಂದು ಮತ್ತೆ ವಿಭಾಗಿಸಲಾಯಿತು. ಬೆಂಗಳೂರು ಜಿಲ್ಲೆಯಲ್ಲಿ ಬೆಂಗಳೂರು ನಗರ, ಬೆಂಗಳೂರು ಉತ್ತರ, ದಕ್ಷಿಣ ಮತ್ತು ಆನೇಕಲ್ ತಾಲೂಕು ಪ್ರದೇಶಗಳು ಸೇರ್ಪಡೆಯಾದವು. ಆಗ ಹೊಸಕೋಟೆ ತಾಲೂಕಿನ ಬಿದರಹಳ್ಳಿ ಮತ್ತು ಮಾಗಡಿ ತಾಲೂಕಿನ ತಾವರೆಕೆರೆ ಹೋಬಳಿಗಳನ್ನು ಬೆಂಗಳೂರು ದಕ್ಷಿಣ ತಾಲೂಕಿನಲ್ಲೂ; ದೇವನಹಳ್ಳಿ ತಾಲೂಕಿನ ಜಾಲ ಮತ್ತು ನೆಲಮಂಗಲ ತಾಲೂಕಿನ ದಾಸನಪುರ ಹೋಬಳಿಗಳನ್ನು ಬೆಂಗಳೂರು ಉತ್ತರ ತಾಲೂಕಿನಲ್ಲೂ ಸಮಾವೇಶಗೊಳಿಸಲಾಯಿತು.

ಬೆಂಗಳೂರು ಜಿಲ್ಲೆಯು ವಿಶೇಷವಾಗಿ ನಗರ ಪ್ರದೇಶವನ್ನು ಒಳಗೊಂಡಿರುವುದರಿಂದ ಆಡಳಿತಾತ್ಮಕವಾಗಿ ಬಹಳ ಒತ್ತಡ ವೇರ್ಪಟ್ಟ ಕಾರಣ, ಬೆಂಗಳೂರು ನಗರದ ಪೂರ್ವಗಡಿಗೆ ಹೊಂದಿಕೊಂಡಂತಿರುವ ಬೆಂಗಳೂರು ದಕ್ಷಿಣ ತಾಲೂಕಿನ ವರ್ತೂರು, ಕೃಷ್ಣರಾಜಪುರ ಮತ್ತು ಬಿದರಹಳ್ಳಿ ಹೋಬಳಿ ಪ್ರದೇಶಗಳನ್ನು ಒಳಗೊಂಡಂತೆ **'ಬೆಂಗಳೂರುಪೂರ್ವ ತಾಲೂಕು'** ಎಂಬ ಹೆಸರಿನ ಒಂದು ಹೊಸ ತಾಲೂಕು ೨೦೦೧ನೇ ಡಿಸೆಂಬರ್ ೧೨ನೇ ತಾರೀಖಿನಂದು ಉದಯವಾಯಿತು. ಈ ತಾಲೂಕಿಗೆ ಸೇರಿರುವ ಬಿದರಹಳ್ಳಿ ಹೋಬಳಿ ೧೯೮೬ ಕ್ಕಿಂತ ಹಿಂದೆ ಹೊಸಕೋಟೆ ತಾಲೂಕಿನ ಭಾಗವಾಗಿದ್ದಿತು. ಈಗ ಬೆಂಗಳೂರು ಜಿಲ್ಲೆಯಲ್ಲಿ ಬೆಂಗಳೂರು ನಗರ, ಉತ್ತರ, ದಕ್ಷಿಣ ಮತ್ತು ಪೂರ್ವ ಹಾಗೂ ಆನೇಕಲ್ ತಾಲೂಕುಗಳು ಅಂತರ್ಗತವಾಗಿವೆ.

ಹೊಸದಾಗಿ ರೂಪುಗೊಂಡಿರುವ ಈ ತಾಲೂಕಿನ ಕೇಂದ್ರ ಸ್ಥಳ **ಕೃಷ್ಣರಾಜಪುರ**ವಾಗಿದೆ. ಇದು ಬೆಂಗಳೂರು ಹಳೇ ಮದ್ರಾಸ್ (ಎನ್.ಎಚ್-೪) ರಾಷ್ಟ್ರೀಯ ಹೆದ್ದಾರಿಯಲ್ಲಿದೆ.

ಸಮುದ್ರಮಟ್ಟದಿಂದ ಸರಾಸರಿ ೯೧೦ ಮೀಟರ್ ಎತ್ತರದಲ್ಲಿರುವ ಈ ಪ್ರದೇಶವು ದಕ್ಷಿಣ ಪಿನಾಕಿನಿ ನದಿಗೆ ನೀರುಣಿಸುವ ಸಪಾಟಾದ ಕಣಿವೆ ಪ್ರದೇಶ ಹಾಗೂ ಅನೇಕ ಕೆರೆಗಳಿಂದ ಕೂಡಿದೆ. ಈ ಪ್ರದೇಶದಲ್ಲಿ ಯಾವುದೇ ಗಮನಾರ್ಹ ಬೆಟ್ಟಗುಡ್ಡಗಳಿಲ್ಲ.

ಈ ಪ್ರದೇಶವು ಬಹು ಪ್ರಾಚೀನ ಕಾಲದಿಂದಲೇ ಜನವಸತಿಯ ನೆಲೆಯಾಗಿದ್ದಿತು. ಈ ಪ್ರದೇಶದಲ್ಲಿ ಅಂತರಗತವಾಗಿರುವ ಬೆಳ್ಳಂದೂರಿನ ಪರಿಸರದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಗೋರಿ ನೆಲೆ, ಕಿಂಡಿ-ಕೋಣೆಗೋರಿಗಳು ಕಂಡುಬಂದಿದೆ. ಹಾಗೇ ಈ ಪ್ರದೇಶದ ನೈರುತ್ಯದ ಗಡಿಯಲ್ಲಿರುವ ಕೋರಮಂಗಲದಲ್ಲಿ ಕ್ರಿಸ್ತಪೂರ್ವ ಸುಮಾರು ೧೫೦೦ ವರ್ಷಗಳಷ್ಟು ಹಿಂದಿನ ಬೃಹತ್ ಶಿಲಾಯುಗದ ಗೋರಿಗಳ ನೆಲೆ, ಶಿಲಾವೃತ್ತಗಳು ಕಂಡುಬಂದಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಕ್ರಿ.ಶ. ೧೯೪೫ರಲ್ಲಿ ಡಿ. ಆರ್. ಗೋರ್ಡನ್ ಎಂಬುವರು ಎಚ್.ಎ.ಎಲ್. ಸಮೀಪದಲ್ಲಿ ಸೂಕ್ಷ್ಮ ಶಿಲಾಯುಗಕ್ಕೆ ಸೇರಿದ ಶಿಲಾಯುಧಗಳನ್ನು ಶೋಧಿಸಿದ್ದರು. ಅಲ್ಲದೆ ಆ ಪ್ರದೇಶದಲ್ಲಿ ರೋಮನ್ ನಾಣ್ಯಗಳು ಲಭ್ಯವಾಗಿದ್ದವು. ಈ ತಾಲೂಕಿನ ಉತ್ತರದ ಗಡಿಯಲ್ಲಿರುವ ಚಿಕ್ಕಜಾಲ, ಕೊಯಿರಾ, ಸ್ಥಳಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ಗೋರಿನೆಲೆಗಳು, ಶವಕುಣಿಯ ಶಿಲಾವೃತ್ತಗಳು, ನಿಲಿಸುಗಲ್ಲುಗಳು, ಕಿಂಡಿಕೋಣೆ ಸಮಾಧಿಗಳು ಲಭ್ಯವಾಗಿವೆ. ಹಾಗೇ ಇದೇ ತಾಲೂಕಿನ ಬಿದರಹಳ್ಳಿ ಹೋಬಳಿಗೆ ಸೇರಿದ ಜ್ಯೋತಿಪುರದಲ್ಲಿ ಬೃಹತ್ ಶಿಲಾ ಸಂಸ್ಕೃತಿಯ ಗೋರಿ ನೆಲೆ ಇದ್ದು, ಶಿಲಾ ಸಮಾಧಿಗಳಿವೆ. ಹಾಗೆಯೇ ಕೃಷ್ಣರಾಜಪುರ ಹೋಬಳಿಯ ಸೋಮಪ್ಪನಹಳ್ಳಿಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಗೋರಿ ನೆಲೆ, ಕಿಂಡಿಕೋಣೆ ಗೋರಿಗಳಿರುವುದನ್ನು ೧೯೫೬ ರಲ್ಲೇ ಡಾ. ಎಂ. ಶೇಷಾದ್ರಿ ಅವರು ಗುರುತಿಸಿದ್ದಾರೆ. ಹೀಗೆ ಪ್ರಾಗೈತಿಹಾಸಿಕವಾಗಿಯೂ ಈ ತಾಲೂಕು ಪ್ರದೇಶ ಅನೇಕ ಅವಶೇಷಗಳನ್ನು ಉಳಿಸಿಕೊಂಡಿದೆ. ಅಂದರೆ ಬಹಳ ಹಿಂದಿನಿಂದಲೇ ಜನವಸತಿಯ ನೆಲೆಯಾಗಿ ಈ ಪ್ರದೇಶ ಗುರುತಿಸಲ್ಪಟ್ಟಿದ್ದಿತೆಂಬುದು ಸರಿಯಷ್ಟೆ.

ಕ್ರಿಸ್ತಶಕ ನಾಲ್ಕು, ಐದನೇ ಶತಮಾನದವರೆಗೆ ಈ ಬೆಂಗಳೂರು ಪೂರ್ವ ತಾಲೂಕು ಪ್ರದೇಶದ ಸ್ಪಷ್ಟ ಇತಿಹಾಸ ತಿಳಿಯುವುದಿಲ್ಲ. ಗಂಗರು ಮೊದಲಿಗೆ ಪಲ್ಲವರ ಮಾಂಡಲಿಕರಾಗಿ ಕೊವಳಾಲವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ತಮ್ಮ ಆಳ್ವಿಕೆಯನ್ನು ಕ್ರಿ.ಶ. ಸು. ೩೫೦ರಲ್ಲಿ ಆರಂಭಿಸಿದ್ದರು. ಆಗ ದಕ್ಷಿಣ ಕರ್ನಾಟಕದ ಬಹು ಭಾಗಗಳನ್ನು ಒಳಗೊಂಡಂತೆ ಇಂದಿನ ತಮಿಳುನಾಡಿನ ಕೃಷ್ಣಗಿರಿ, ಧರ್ಮಪುರಿ, ಸೇಲಂ, ಈರೋಡ್, ಕೊಯಮತ್ತೂರು ಜಿಲ್ಲಾ ಪ್ರದೇಶಗಳೂ ಅವರ ಆಳ್ವಿಕೆಗೆ ಒಳಪಟ್ಟಿದ್ದವು. ಗಂಗರ ಶಿಲಾಶಾಸನಗಳು ಕ್ರಿ.ಶ. ೭೫೦ರ ನಂತರ ಅಂದರೆ ಗಂಗರಸ ಶ್ರೀಪುರುಷನ ಕಾಲದಿಂದ ವಿಶೇಷವಾಗಿ ಕಂಡುಬರುತ್ತವೆ. ಅಂತೆಯೇ ಗಂಗರಸ ಶ್ರೀಪುರುಷನ ಶಿಲಾಶಾಸನವೊಂದು[1] ಈ ತಾಲೂಕಿನ ಕೇಂದ್ರ ಸ್ಥಳವಾದ ಕೃಷ್ಣರಾಜಪುರದಲ್ಲಿ ಲಭ್ಯವಾಗಿದ್ದು ಅದೊಂದು ವೀರನ ಸ್ಮಾರಕವಾಗಿದೆ. ಮುಂದೆ ಸುಮಾರು ಕ್ರಿ.ಶ. ೮೨೦ಕ್ಕೆ ಸೇರಿದ ವರ್ತೂರು ಕೆರೆ ಕೋಡಿ ಶಾಸನ[2] ಮೊರಸು ನಾಡನ್ನು ಆಳುತ್ತಿದ್ದ ಶಿವಮಾರನು ಮಹಾಬಲಿ ವಂಶದ ನಿಜಪನ ಮಗ ಅಣ್ಣಿಗನೂ ತ್ರೈಲೋಕ್ಯವೀರ ಎಂಬುವನಿಗೆ ಎರೆಯಪಮಂಗಲದ ಮಹಾಜನರ ಸಾಕ್ಷಿಯಲ್ಲಿ ಭೂದಾನ ನೀಡಿದ್ದನ್ನು ದಾಖಲಿಸಿದೆ. ಸುಮಾರು ಇದೇ ಕಾಲಕ್ಕೆ ಸೇರಿದ ಗಂಗ ರಾಚಮಲ್ಲನ ಶಾಸನ[3] ವೈಟ್‌ಫೀಲ್ಡ್ ಸಮೀಪದ ನಾಗೊಂಡನಹಳ್ಳಿಯಲ್ಲಿದ್ದು ೯೨ ಜನ (ಮಹಾಜನರು) ಶಿವಭೀಮ ಪ್ರತಿಷ್ಠೆಯ ಸಂದರ್ಭದಲ್ಲಿ ಹನ್ನೆರಡು ಕೊಳಗ ಗದ್ದೆಭೂಮಿ, ಒಂದು ಖಂಡುಗ ಹೊಲವನ್ನು ದತ್ತಿಬಿಟ್ಟ ಸಂಗತಿಯನ್ನು ದಾಖಲಿಸಿದೆ. ಮೇಡಿಹಳ್ಳಿ ಸಮೀಪದ ಎಲೆಮಲ್ಲಪ್ಪಶೆಟ್ಟಿಯಕೆರೆಯ ಪರಿಸರದಲ್ಲಿರುವ ಗಂಗರ ವೀರಗಲ್ಲು ಶಾಸನಗಳಲ್ಲಿ[4] ಗಂಗ ಮತ್ತು ನೊಳಂಬರ ಮಧ್ಯೆ ನಡೆದ, ಕಾಳಗಗಳು ಗಂಗ ರಾಚಮಲ್ಲನ

ಕಾಲದಲ್ಲಿ ನಡೆದು 'ಎರೆಯಪಮಂಗಲ' ಎಂಬ ಗ್ರಾಮದ ಊರಳಿವಿನ ಹೋರಾಟಗಳ ಪ್ರಸ್ತಾಪ ಬಂದಿದೆ. ಗಂಗರ ಈ ಶಾಸನಗಳ ಹಿನ್ನೆಲೆಯಲ್ಲಿ ಪ್ರಸ್ತುತ ಪ್ರದೇಶವು ಗಂಗರ ಕಾಲದ **ದಡಿಗಾವಳಿ** ಮತ್ತು **ಮೊರಸುನಾಡಿನ**ಲ್ಲಿ ಅಂತರ್ಗತವಾಗಿದ್ದಿತೆಂದು ಹೇಳಬಹುದಲ್ಲದೆ, ವೀರ ಪರಂಪರೆ ಆ ಕಾಲದಲ್ಲಿ ನಿಚ್ಚಳವಾಗಿದ್ದುದನ್ನು ತಿಳಿಯಬಹುದಾಗಿದೆ. ಅಗ್ರಹಾರ, ಮಹಾಜನ ಮತ್ತು ದೇವರ ಪ್ರತಿಷ್ಠಾಪನೆ ಮುಂತಾದ ವಿವರಗಳು ಈ ಪ್ರದೇಶದ ಸಾಂಸ್ಕೃತಿಕ ಔನ್ನತ್ಯವನ್ನು ಬಿಂಬಿಸುತ್ತವೆ. ಮುಂದೆ ಕ್ರಿ.ಶಕ ೧೦ನೇ ಶತಮಾನದ ಕೊನೆಯ ವೇಳೆಗೆ ಈ ಪ್ರದೇಶವು ಚೋಳರ ಆಕ್ರಮಣಕ್ಕೆ ಈಡಾಯಿತು - ಎಂಬುದರ ಒಂದು ಸ್ಪಷ್ಟ ಕುರುಹು ಇದೇ ತಾಲೂಕಿನ ಬಿದರಹಳ್ಳಿ ಹೋಬಳಿಯ ಕಮ್ಮಸಂದ್ರ ಗ್ರಾಮದ ಕ್ರಿ.ಶ. ೯೯೭ರ ಚೋಳ ರಾಜರಾಜದೇವನ ಶಾಸನದಿಂದ ಅರಿಯಬಹುದು[೫]. ಆ ಶಾಸನದಲ್ಲಿ ನೊಳಂಬ ವಂಶೀಯನಾದ ಅಯ್ಯಪದೇವನ ಮಗ ಗನ್ನರಸ ಎಂಬುವನು ದಳಿಗವಾಡಿಯ ಕುಱುಕ್ಷನ್ದಟ್ಚಿ ಪ್ರದೇಶವನ್ನು ಆಳುತ್ತಿದ್ದಂತೆ ತಿಳಿಸುತ್ತದೆ. ಅವನ ದಂಡನಾಯಕನೂ, ನಾಳ್ಗಾವುಂಡನೂ ಆದ ಸಿನ್ದಗಾವುಣ್ಡನೇ ಮುಂತಾದವರು ಸೇರಿ ಚಾವಣ್ಡಯ ಎಂಬುವನಿಗೆ ದತ್ತಿ ಬಿಟ್ಟಿರುವ ವಿವರ ದಾಖಲಾಗಿದೆ. ಇಲ್ಲಿ ನೊಳಂಬ ವಂಶೀಯನಾದ ಗನ್ನರಸನು ಚೋಳ ರಾಜರಾಜದೇವನ ಸಾಮಂತನಾಗಿ ಕೆಲಸ ನಿರ್ವಹಿಸುತ್ತಿರುವುದನ್ನು ಗಮನಿಸಬಹುದಾಗಿದೆ. ಕ್ರಿ.ಶ. ೧೦೪೩ರ ಕಾಡುಗೋಡಿ ಶಾಸನವು[೬] ಚೋಳ ದೊರೆ ರಾಜೇಂದ್ರ ಚೋಳನದಾಗಿದ್ದು, ವಿಕ್ರಮಚೋಳಮಂಡಲದ ದಡಿಗೈವಳಿಯ ಸಣ್ಣೆನಾಡಿನ ಗಾಮುಂಡನಾದ ಪೆರ್ಮಾಡಿಗಾಮುಂಡನ ಮಗ ರಾಜರಾಜವೇಳಾನ್ ಎಂಬುವನು ಪಟ್ಟಂದೂರು ಕೆರೆಯನ್ನು ಕಟ್ಟಿಸಿ, ಮೂರು ತೂಬುಗಳನ್ನು ಇಡಿಸಿ, ದುರ್ಗಾ, ಕ್ಷೇತ್ರಪಾಲ ಮತ್ತು ಗಣಪತಿ ದೇವರುಗಳನ್ನು ಸ್ಥಾಪಿಸಿದ ವಿವರದೊಂದಿಗೆ ಭೂದಾನವನ್ನು ಪ್ರಸ್ತಾಪಿಸುತ್ತದೆ. ಚೋಳರಿಗೆ ಸಂಬಂಧಿಸಿದಂತೆ, ಈ ಎರಡು ಶಾಸನಗಳಷ್ಟೇ ಈ ಪ್ರದೇಶದಲ್ಲಿ ಕಂಡುಬಂದಿದ್ದು ಮೊದಲನೆಯದು ಕನ್ನಡದಲ್ಲೂ ಎರಡನೆಯದು ತಮಿಳು ಭಾಷೆಯಲ್ಲಿರುವುದನ್ನು ಗಮನಿಸಬಹುದಾಗಿದೆ. ಸ್ಥಳೀಯ ಗಾಮುಂಡರು ಚೋಳರ ಅಧೀನರಾಗಿ ಮುಂದುವರಿದಿರುವುದರೊಂದಿಗೆ ಕೃಷಿಗೆ ಯೋಗ್ಯವಾದ ಕೆರೆಕಟ್ಟೆಗಳ ನಿರ್ಮಾಣ ಹಾಗೂ ಕೆರೆಗಳ ನಿರ್ಮಾಣ ಸಂದರ್ಭದಲ್ಲಿ ದುರ್ಗಾ, ಗಣೇಶ, ಕ್ಷೇತ್ರಪಾಲದೇವರುಗಳನ್ನು ಕೆರೆಗಳ ಬಳಿ ಸ್ಥಾಪಿಸುವ ಸಂಪ್ರದಾಯದ ಸ್ಪಷ್ಟ ಆಧಾರಗಳನ್ನು ಒದಗಿಸುತ್ತಿದೆ.[೬ಅ] ಈ ಸಂಪ್ರದಾಯ ಗಂಗರ ಕಾಲದಲ್ಲೇ ಅಸ್ತಿತ್ವದಲ್ಲಿದ್ದಿತೆಂಬುದನ್ನು ಗಮನಿಸಬಹುದಾಗಿದೆ.

ಮುಂದೆ ಕ್ರಿ.ಶ. ೧೧೧೨ರ ವೇಳೆಗೆ ಹೊಯ್ಸಳರು ಪ್ರಬಲರಾಗಿ ಚೋಳರನ್ನು ಕರ್ನಾಟಕ ಪ್ರದೇಶದಿಂದ ಹಿಮ್ಮೆಟ್ಟಿಸಿದರು. ಆದರೂ ಈ ಪ್ರದೇಶದಲ್ಲಿ ಶಾಸನಗಳಿಗಾಗಿ ತಮಿಳು ಭಾಷೆಯನ್ನು ಬಳಸುವ ಸಂಪ್ರದಾಯವನ್ನು ಹೊಯ್ಸಳರು ಮುಂದೆ ಮುಮ್ಮಡಿ ಬಲ್ಲಾಳನ ಕಾಲದವರೆಗೂ ಮುಂದುವರಿಸಿರುವುದು ಸೋಜಿಗದ ಸಂಗತಿಯಾಗಿದೆ. ಚೋಳರ ಸ್ಪಷ್ಟ ಪ್ರಭಾವವನ್ನು ಬಿಂಬಿಸುವ ಹಲವು ಶಾಸನಗಳು[೭] ಕಾಡುಗೋಡಿಯಲ್ಲಿರುವ ಗಂಗರ ಕಾಲದ ಈಶ್ವರ ದೇವಾಲಯದಲ್ಲಿದ್ದು ಹೊಯ್ಸಳ ಮಾಂಡಲಿಕರಾದ ಚೋಳ ಬ್ರಹ್ಮಮಾರಾಯನ್, ಶಿವಬ್ರಾಹ್ಮಣರ ಸ್ಪಷ್ಟ ಉಲ್ಲೇಖಗಳೊಂದಿಗೆ *ರಾಜರಾಜ ಬಂಗೀಶ್ವರಂ ಉಡೈಯಾರ್ ಮಹಾದೇವರು* ಎಂದು ದೇವರನ್ನು ಕರೆದಿರುವುದು ಕಂಡುಬರುತ್ತದೆ. ಅಂದರೆ ಚೋಳ ರಾಜರಾಜನ ಕಾಲದಲ್ಲಿ ಈ ದೇವಾಲಯವು ಜೀರ್ಣೋದ್ಧಾರಗೊಂಡಿರಬಹುದಾದ ಸೂಚನೆಯನ್ನು ಇಲ್ಲಿನ ಶಾಸನಗಳು ನೀಡುತ್ತವೆ.

ಈ ಪ್ರದೇಶದಲ್ಲಿ ಕ್ರಿ.ಶ. ೧೨೦೦ ರಿಂದ ಹೊಯ್ಸಳರ ಪ್ರಸ್ತಾಪವನ್ನು ನೇರವಾಗಿ ಮಾಡುವ ಶಾಸನಗಳು ಕಂಡುಬರುತ್ತವೆ. ಇಮ್ಮಡಿ ವೀರಬಲ್ಲಾಳ, ವೀರರಾಮನಾಥ, ಮುಮ್ಮಡಿ ವೀರಬಲ್ಲಾಳರ ಆಳ್ವಿಕೆಗೆ ಸೇರಿದ ಅನೇಕ ಶಾಸನಗಳು ಪಟ್ಟಂದೂರು, ಹಗ್ಗದೂರು, ಗುಂಡೂರು, ಗುಂಜೂರು, ದೊಡ್ಡನೆಕ್ಕುಂದಿ ಮಂಡೂರು, ಬೈರತ್ತಿ, ಹೂಡಿ, ಇಮ್ಮಡಿಹಳ್ಳಿ ಮತ್ತು ಸಾದರ ಮಂಗಲ ಸ್ಥಳಗಳಲ್ಲಿ ಲಭ್ಯವಾಗಿದ್ದು ಸಾಮಂತರಾದ ರಾಜರಾಜ ಕಙ್ಗಡ ಮಾರಾಯರ್ ಗಂಗಪೆರುಯಾಳ್, ಚೊಕ್ಕನಾಯನ್, ವಿಲ್ಲಗಾಮುಂಡ, ಮಹಾಪ್ರಧಾನ ಪೊನ್ನಣ್ಣ ಮುಂತಾದವರ ಉಲ್ಲೇಖಗಳೊಂದಿಗೆ, ಎಲಹಂಕನಾಡು, ಮಾಸಂದಿನಾಡು, ತೊರವಳಿನಾಡುಗಳು ಉಲ್ಲೇಖಗೊಂಡಿವೆ. ಇವುಗಳಲ್ಲಿ ಕ್ರಿ.ಶ. ೧೩೩೨ರ ಹೂಡಿ ಶಾಸನವು[೮] ತೊರವಳಿನಾಡ ಸಮಸ್ತ ಪ್ರಭು ಗಾವುಂಡರು ತೊಳವಂಡಿಯ ಬೊಮ್ಮಿಸೆಟ್ಟಿಯ ಮಗ ಬಯಿರಿಸೆಟ್ಟಿ, ಸೋದರ ಮುಕಿತಿಸೆಟ್ಟಿಯನ್ನು ಚಿಕ್ಕಹೂಡಿಯ ಪಟ್ಟಣಸ್ವಾಮಿಯಾಗಿ ಸಂತೆಯ ಕಟ್ಟುವುದಕ್ಕೆ ಚೋಳ ಮಹಾರಾಜ ರಾಜರ ಆದೇಶದಂತೆ ಕೊಡುಗೆ ಕೊಟ್ಟ ವಿವರ ಬಂದಿದೆ. ಇದೇ ಹೂಡಿಯ ಕ್ರಿ.ಶ. ೧೩೩೨ರ ಶಾಸನವು[೯] ಹೊಯಿಸಣೇಶ್ವರ ಶ್ರೀ ವೀರಬಲ್ಲಾಳದೇವರ ಬೆಸದಿ ಬೆಳಗಂಚಿ ಮಾಯಿನಾಯ್ಕರು ಮಾಚಿಗೌಡನೆಂಬುವವನಿಗೆ ಕೆಱೆಕಟ್ಟು ಕೊಡಗೆಯನ್ನು ಉಲ್ಲೇಖಿಸುತ್ತದೆ.

ಹೀಗೆ ಕೃಷಿ ಮತ್ತು ವಾಣಿಜ್ಯ ಕಾರ್ಯಗಳಿಗೆ ಹೊಯ್ಸಳರ ಕಾಲದಲ್ಲಿ ಸಾಕಷ್ಟು ಪ್ರೋತ್ಸಾಹವಿದ್ದಿತೆಂಬುದು ತಿಳಿಯುತ್ತದೆ.

ಇವುಗಳಲ್ಲಿ ಕ್ರಿ.ಶ. ೧೩೦೪ರ ಹೊಯ್ಸಳ ವೀರಬಲ್ಲಾಳನ ಶಾಸನವು[೧೦] ಗಮನಾರ್ಹವಾದುದುದಾಗಿದೆ. ವೀರಬಲ್ಲಾಳದೇವ ನಾಡಿನ ನಾಯಕತನ ಮಾಡುವ ವಿಲ್ಲಗಾವುಂಡನು ಮತ್ತು ಮಾಸಂದಿನಾಡ ನಿವಾಸಿಗಳು ಸೇರಿ ಶಿವಗಂಗೆಯ ದೇವರಿಗೆ ನೆರ್ಗುಂದಿ (ನೆಕ್ಕುಂದಿ) ಮತ್ತು ಎರಮುರ್ಕಂಡಹಳ್ಳಿ ಗ್ರಾಮಗಳನ್ನು ದೇವರ ಪೂಜಾ ಕೈಂಕರ್ಯಗಳಿಗೆ ದತ್ತಿ ಬಿಟ್ಟ ವಿವರ ಬಂದಿದೆ.

ಈ ಶಾಸನದ ಶಿವಗಂಗೆದೇವರು ಯಾವುದು ಎಂಬುದು ವಿಚಾರಾರ್ಹ.[೧೦]

ಕ್ರಿ.ಶ. ೧೩೦೭ರ ಶಾಸನ[೧೧] ಇಲ್ಲಿಗೆ ಸಮೀಪದ ವಿಭೂತಿಪುರ ಗ್ರಾಮದಲ್ಲಿದ್ದು ಮಹಾಸಾಮಂತ ನಿನ್ರಾನ್ ಎಂಬುವನು ಮಾಸಂದಿನಾಡಿನ ಪಶ್ಚಿಮ ಭಾಗದ ಅಧಿಕಾರಿಯಾಗಿದ್ದ ವಿವರ ನೀಡುತ್ತದೆ. ಸೆಂಬಿದೇವ, ವಿಲ್ಲಗಾಮುಂಡ ಮೊದಲಾದ ಗೌಡ ಪ್ರಜೆಗಳು ಮತ್ತು ಇತರರು ಪೆರುಎರಮೂರಿಗೆ ಹೊಂದಿಕೊಂಡಂತಿರುವ ಕಾಡನ್ನು ಕಡಿದು ನೆಲವನ್ನು ಮಟ್ಟ ಮಾಡಿ ಊರೊಂದನ್ನು ಕಟ್ಟಿ ಮರಳನ್ನು ತೆಗೆದು ಕೆರೆಯನ್ನು ಕಟ್ಟಿ ಊರಿಗೆ **ವಾಚ್ಚದೇವಪುರ**ವೆಂದು ಹೆಸರಿಟ್ಟು ಆ ಊರಿನ ಹೊಲ, ಗದ್ದೆ ಕೆರೆ ಮುಂತಾದವುಗಳನ್ನು ವಾಚ್ಚಿದೇವರು ಎಂಬುವ ಮಠಪತಿಗೆ **ಮಡಪುರದತ್ತಿ**ಯಾಗಿ ನೀಡಿರುವ ವಿವರ ಬಂದಿದೆ. ೧೪ನೇ ಶತಮಾನಕ್ಕಾಗಲೇ ಶೈವಮಠವೊಂದು ವಿಭೂತಿಪುರದೊಂದಿಗೆ ಹುಟ್ಟಿಕೊಂಡಿದ್ದ ಸಂಗತಿಯನ್ನು ಈ ಶಾಸನ ದೃಢಪಡಿಸುತ್ತದೆ. ಈ ಶಾಸನವಲ್ಲದೆ ಈ ಪ್ರದೇಶದ ಹೊಯ್ಸಳರ ಕಾಲದ ಇತರ ಶಾಸನಗಳನ್ನು ಗಮನಿಸಿದರೆ ಹೊಯ್ಸಳ ವೀರ ಬಲ್ಲಾಳನ ಕಾಲದಲ್ಲಿ ವಿಲ್ಲಗಾವುಂಡನು **ವೀರಬಲ್ಲಾಳದೇವನಾಡಿನ** ನಾಯಕನಾಗಿದ್ದ ಅಂಶ ಖಚಿತವಾಗುತ್ತದೆ. ಅಲ್ಲದೆ ಅವನ ಹೆಸರಿನಲ್ಲಿ ಊರೊಂದು ಇದ್ದು ಆ ಊರಿನಲ್ಲಿ ವಿಲ್ಲೀಶ್ವರ ದೇವರ ದೇವಾಲಯವಿದ್ದ ಬಗ್ಗೆ ಹಾಗೂ ಆ ದೇವಾಲಯಕ್ಕೆ ಎರುಮರೆನಾಡಿನ ಕಟ್ಟೆದೇವನಹಳ್ಳಿ ಗ್ರಾಮದ ಕೆರೆಯ ಕೆಳಗಿನ ಗದ್ದೆ ಭೂಮಿ ಹಾಗೂ ಹೊಲಗಳನ್ನು ಸರ್ವಮಾನ್ಯವಾಗಿ ದತ್ತಿ ನೀಡಿರುವುದನ್ನು ಕ್ರಿ.ಶ. ೧೩೦೬ರ ಕೆಂಪಾಪುರ ಗ್ರಾಮದ ಶಾಸನವೊಂದರಿಂದ[೧೨] ತಿಳಿದುಬರುತ್ತದೆ. ಈ ಶಾಸನದಲ್ಲಿ ಉಕ್ತವಾಗಿರುವ **ವಿಲ್ಲಿಗಾಮುಂಡನಹಳ್ಳಿ** ಎಂಬುದು ಪ್ರಾಯಶಃ ಆನೇಕಲ್ ತಾಲೂಕಿನ ಸರ್ಜಾಪುರವೇ ಆಗಿದೆ. **ಎರುಮರೆ** ಎಂಬುದು ಸರ್ಜಾಪುರದ ಸಮೀಪದ **ಯಮರೆ** ಗ್ರಾಮವೇ ಆಗಿದ್ದು ಅದು ಮಾಸಂದಿನಾಡಿಗೆ ಸೇರಿದ **ಎರುಮರೆ ನಾಡಿನ ಕೇಂದ್ರ** ಸ್ಥಳವಾಗಿದ್ದಿತು.

ಗುಂಜೂರಿನ ಸೋಮೇಶ್ವರ ದೇವಾಲಯದಲ್ಲಿನ ಕ್ರಿ.ಶ. ೧೩೦೧ರ ಹೊಯ್ಸಳ ವೀರಬಲ್ಲಾಳನ ಶಾಸನವು[೧೩] **ಹೆಸರ್ ಕುಂದಾಣಿ** ರಾಜ್ಯದ ಮಠ ಮತ್ತು ಸ್ಥಾನಿಕರಿಗೆ ಅವರ ಆಳ್ವಿಕೆಗೆ ಒಳಪಟ್ಟ ಅನೇಕ ನಾಡುಗಳಲ್ಲಿನ ನೆಯ್ಗೆ ಮತ್ತು ಚಿನಿವಾರರಿಗೆ ಸಂಬಂಧಿಸಿದ ತೆರಿಗೆಗಳನ್ನು ಗುಂಜೂರಿನ ಸೋಮೇಶ್ವರ ದೇವಾಲಯಕ್ಕೆ ಸೇರಿದ ಸೂರಕಟ್ಟೆ (ಸೂಲಕುಂಟೆ) ಸಿಂಗಮನ ಕುಟ್ಟೆ, ಕೋವಸಮುತ್ತಿರ (ಗೋಪಸಂದ್ರ) ಮುಂತಾದ ಗ್ರಾಮಗಳನ್ನು ದತ್ತಿಬಿಟ್ಟು ವಿವರಗಳನ್ನು ನೀಡುತ್ತದೆ.

ಎನ್.ಎ.ಎಲ್. ವ್ಯಾಪ್ತಿಗೆ ಸೇರಿ ಈಗ ಬೇಚಿರಾಕ್ ಆಗಿ ಹೋಗಿರುವ ಬೇಲೂರಿನಲ್ಲಿ ಹಿಂದೆ ಅನೇಕ ದೇವಾಲಯಗಳಿದ್ದವು. ಅಲ್ಲಿನ ಸೋಮೇಶ್ವರ ದೇವಾಲಯ, ಬಸವಣ್ಣನಗುಡಿ, ವೀರಣ್ಣನ ಗುಡಿಗಳ ಮುಂದೆ ಶಾಸನಗಳಿದ್ದವು. ಹೊಯ್ಸಳರ ಕಾಲಕ್ಕೆ ಸೇರಿದ ಆ ಶಾಸನಗಳಲ್ಲಿ ಪೆರಿಯನಾಡು, ವೀರಬಲ್ಲಾಳದೇವನಾಡು, ತೊರೆವಳಿನಾಡು ಮುಂತಾದ ವಿಭಾಗಗಳ ಉಲ್ಲೇಖಗಳು ಬಂದಿವೆ. ಸೆಂಬಿದೇವ, ವಿಲ್ಲಗಾಮುಂಡ, ಪಮ್ಮಭಟ್ಟ, ಶಂಭುಭಟ್ಟ ಮುಂತಾದ ವ್ಯಕ್ತಿನಾಮಗಳು ಶಾಸನೋಕ್ತವಾಗಿವೆ. ವೇಲೂರು (ಬೇಲೂರು) ತೊರೆವಳಿನಾಡಿನ ಗ್ರಾಮವೆಂದು ಶಾಸನವೊಂದರಿಂದ ತಿಳಿಯುತ್ತದೆ. ಕೃಷ್ಣರಾಜಪುರ ಹೋಬಳಿ ಕಲ್ಲುಕೆರೆ ಗ್ರಾಮದ ಶಾಸನ ಹೊಯ್ಸಳ ವೀರಬಲ್ಲಾಳ ಕಾಲಕ್ಕೆ ಸೇರಿದ್ದು, ಅತಿವೃಷ್ಟಿಯಾಗಿ ಕಲಕೆರೆ ಮತ್ತು ಕೆರಳಬೆನಹಳ್ಳಿಯಕೆರೆ ಒಡೆದುಹೋದಾಗ ದಂಡನಾಯಕರು, ನಾಡಸಮಸ್ತ ಪ್ರಜೆಗೌಡುಗಳು ಸಮ್ಮುಖದಲ್ಲಿ ಕಲುಕೆಜಿ'ಯ ದಾಮೋದರಸೆಟ್ಟಿ ಆ ಎರಡು ಕೆರೆಗಳ ವಡವನ್ನು ಕಟ್ಟಿದುದಕ್ಕೆ ಕಟ್ಟುಗೊಡಗೆಯಾಗಿ ಹೊಲಗದ್ದೆಗಳನ್ನು ಸರ್ವಮಾನ್ಯನಾಗಿ ದತ್ತಿ ಬಿಟ್ಟ ವಿವರ ನೀಡುತ್ತದೆ. (ಬೆಂಗಳೂರು ೧೬೬) ಹೊಯ್ಸಳರ ಕಾಲದಲ್ಲಿ ಈ ಪ್ರದೇಶವು ಸಾಂಸ್ಕೃತಿಕವಾಗಿ ಹಾಗೂ ಕೃಷಿ, ವಾಣಿಜ್ಯ ವಿಷಯಗಳಲ್ಲಿ ಬಹಳ ಮುಂಚೂಣಿಯಲ್ಲಿದ್ದ ಸಂಗತಿ ಮೇಲಿನ ಶಾಸನಗಳ ವಿವರಗಳಿಂದ ಮನಗಾಣಬಹುದಾಗಿದೆ. ಪ್ರಧಾನವಾಗಿ ಈ ಕಾಲದ **ಮಾಸಂದಿನಾಡಿ**ನಲ್ಲಿ ತೊರೆವಳಿನಾಡು, ಎಮರೆನಾಡು, ಪೆರಿಯನಾಡುಗಳು, ಸಮಾವೇಶವಾಗಿದ್ದವು. ವಾಸ್ತವವಾಗಿ ಈ ಪ್ರದೇಶದ ಆಳ್ವಿಕೆ ಆಗ ಹೊಯ್ಸಳ ಮಹಾಮಂಡಳೇಶ್ವರರಾಗಿದ್ದ **ಪೂರ್ವಾದಿರಾಯರು** ಮತ್ತು **ಕಳ್ಕಡ ಮಹಾರಾಯರ** ನೇತೃತ್ವದಲ್ಲಿ ನಡೆಯುತ್ತಿತೆಂಬ ಸಂಗತಿ ಹೊಯ್ಸಳರ ಇತರ ಶಾಸನಗಳಿಂದ ತಿಳಿಯಬಹುದಾಗಿದೆ[೧೪]. ಹೊಯ್ಸಳರ ಕಾಲದಲ್ಲಿ ಪೂರ್ವಾದಿರಾಯರು ಈ ಪ್ರದೇಶದಲ್ಲಿ ಹೆಚ್ಚು ಸ್ವಾಯತ್ತತೆಯುಳ್ಳವರಾಗಿದ್ದರು. ಅವರೇ ಬನ್ನೇರುಘಟ್ಟದ ದಾಮೋದರ ದೇವರ ದೇವಾಲಯದ ಕರ್ತೃಗಳು. ಅವರ ಕಾಲದಲ್ಲೇ ಹೊಸೂರಿನ ಬೆಟ್ಟದ ಮೇಲಿನ ದೇವಾಲಯ, ಜಿಗಣಿ, ಹಾರಗದ್ದೆ, ಬೇರಿಕೆ, ಮಾಸ್ತಿ ಮೊದಲಾದ ಸ್ಥಳಗಳಲ್ಲಿನ ದೇವಾಲಯಗಳು ನಿರ್ಮಾಣ, ಪೂಜಾ ಕೈಂಕರ್ಯಗಳ ವ್ಯವಸ್ಥೆ ಏರ್ಪಟ್ಟಿತು. ಪೂರ್ವಾದಿರಾಯರು ಪ್ರಾಚೀನ ಗಂಗವಾಡಿ ಪ್ರದೇಶದ ಮೊರಸುನಾಡು ಮತ್ತು ಚೋಳರ ಕಾಲದ ಮಾಸಂದಿನಾಡು ಪ್ರದೇಶಗಳಲ್ಲಿ ಕ್ರಿ.ಶ. ೧೨ ರಿಂದ ೧೪ನೇ ಶತಮಾನದ ಅವಧಿಯಲ್ಲಿ ಹೆಚ್ಚು ಸ್ವಾಯತ್ತತೆಯನ್ನು ಪಡೆದ ಮಹಾಮಂಡಳೇಶ್ವರರಾಗಿ ಸಾಕಷ್ಟು ಲೋಕೋಪಯೋಗಿ ಕಾರ್ಯಗಳನ್ನು ನಿರ್ವಹಿಸಿದ್ದರು.

ಈ ಪ್ರದೇಶದಲ್ಲಿ ವಿಜಯನಗರದ ಅರಸರ ಶಾಸನಗಳು ಕ್ರಿ.ಶ. ೧೩೪೬ ರಿಂದ ೧೬೧೦ರ ವರೆಗೂ ಕಂಡುಬರುತ್ತವೆ. ಅವು ಸಾದರಮಂಗಲ, ಬೇಚಿರಾಕ್ ಬೇಲೂರು, ದೊಡ್ಡಕನ್ನೆಲ್ಲಿ, ಕ್ಯಾಲಸನಹಳ್ಳಿ, ಕಿತಿಗನೂರು, ಚಿಕ್ಕಬನಹಳ್ಳಿ, ಕಾಡುಗೋಡಿ, ಗುಬ್ಬಿ, ಬೆಳತೂರು, ಮುಳ್ಳೂರು, ಜ್ಯೋತಿಪುರ, ಮಾರತ್ತಹಳ್ಳಿ, ಕಸವನಹಳ್ಳಿ, ದ್ಯಾವಸಂದ್ರ, ಬಿದರಹಳ್ಳಿ, ರಾಮಪುರ, ದಾಸರಹಳ್ಳಿ,

ಬೊಮ್ಮೇನಹಳ್ಳಿ ಗ್ರಾಮಗಳಲ್ಲಿದ್ದು ಹರಿಯಪ್ಪ ಒಡೆಯ, ಬುಕ್ಕಣ್ಣ ಒಡೆಯ, ಹರಿಹರರಾಯ (ಹರಿಹರ II), ದೇವರಾಯ ಒಡೆಯ, ಕಟಾರಿ ಸಾಳುವ ಇಮ್ಮಡಿ ನರಸಿಂಗಮಹಾರಾಯ, ಅಚ್ಯುತರಾಯ, ವೆಂಟಪತಿರಾಯ ಮೊದಲಾದ ವಿಜಯನಗರ ಸಾಮ್ರಾಟರನ್ನು ಉಲ್ಲೇಖಿಸುತ್ತವೆ.

ಚೋಳ, ಹೊಯ್ಸಳರ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಪ್ರಾದೇಶಿಕ ವಿಭಾಗಗಳು ವಿಜಯನಗರ ಕಾಲದಲ್ಲೂ ಮುಂದುವರೆದಿರುವುದನ್ನು ಕಾಣಬಹುದು. ಕ್ರಿ.ಶ. ೧೩೪೬ರ ಸಾದರಮಂಗಲದ ಶಾಸನದಲ್ಲಿ[೧೫] 'ನಿಗರಿಲಿ ಚೋಳಮಂಡಲದ ರಾಜೇಂದ್ರ ಚೋಳ ವಳನಾಡಿನ ಸಣ್ಣೆನಾಡಿನ ದಕ್ಷಿಣದ ತುರ್ರೈವಟಿನಾಡು' ಎಂಬ ಪ್ರಸ್ತಾಪ ಬಂದಿವೆ. ಚಿಕ್ಕಬನಹಳ್ಳಿಯ ಕ್ರಿ.ಶ. ೧೩೮೨ರ ಶಾಸನದಲ್ಲಿ[೧೬] 'ಜಯಗೊಂಡ ಚೋಳಮಂಡಲದ ತೊಱವಳಿನಾಡ ಬನಹಳಿಯ ಮೂಡಣದೆಸೆಯ ಪೆಂಮಸಮುದ್ರದಸೀಮೆ' ಎಂಬ ಉಲ್ಲೇಖವಿದೆ. 'ಸಣ್ಣೈನಾಡಿನ ದಕ್ಷಿಣ ವಿಭಾಗದಲ್ಲಿಯ ಕಿತ್ತೈಗನೂರು' ಎಂಬ ಉಲ್ಲೇಖ ಕ್ರಿ.ಶ. ೧೪೦೧ರ ಕಿತ್ತಿಗನೂರು ಶಾಸನದಲ್ಲಿ[೧೭] ಬಂದಿದೆ. ಇದೇ ಸ್ಥಳದ ಕ್ರಿ.ಶ. ೧೩೬೭ರ ಶಾಸನದಲ್ಲಿ[೧೮] ಎಲಹಂಕನಾಡ ಪ್ರಭುಗಳ ಪ್ರಸ್ತಾಪವೂ ಬಂದಿದೆ. ಚಿಕ್ಕಬನಹಳ್ಳಿಯ ಶಾಸನದಲ್ಲಿ[೧೯] ತೊಱವಳಿ ನಾಡಪ್ರಭುಗಳ, ಗಲುಡಪ್ರಭುಗಳ ಹಾಗೂ ಬೇಲೂರು ಮತ್ತು ಕಾಡುಗೋಡಿಯ ಗಲುಡಪ್ರಭುಗಳ ಪ್ರಸ್ತಾಪವಿದೆ.

ಕ್ರಿ.ಶ. ೧೩೭೬ರ ದ್ಯಾವಸಂದ್ರ ಶಾಸನವು ಬುಕ್ಕಣ್ಣ ಒಡೆಯನದಾಗಿದ್ದು, ಎಲಹಕ್ಕನಾಡಿನ ದೇವಸಮುದ್ರದಲ್ಲಿ ಬೇರೆ ಬೇರೆ ಗೋತ್ರದ ಅನೇಕ ಜನ ಬ್ರಾಹ್ಮಣರಿಗೆ ದತ್ತಿಬಿಟ್ಟ ಸಂಗತಿಯನ್ನು ತಿಳಿಸುತ್ತದೆ. ಕ್ರಿ.ಶ. ೧೩೮೧ರ ಬೇಚಿರಾಕ್ ಬೇಲೂರು ಗ್ರಾಮದ ಶಾಸನದಲ್ಲಿ ಹರಿಯಪ್ಪ ಒಡೆಯನ ಉಲ್ಲೇಖ ಬಂದಿದ್ದು ತೊರೆವಳಿ ನಾಡಿನ ವೇಲೂರು ಗ್ರಾಮದ ಶಿವನೇಶ್ವರ ದೇವರಿಗೆ ಭೂದತ್ತಿಯನ್ನು ನೀಡಿದ ಉಲ್ಲೇಖವಿದೆ.

ದೇವಸ್ಥಾನಗಳಲ್ಲಿ ದೇವರ ಪೂಜಾ ಕೈಂಕರ್ಯಗಳಿಗೆ ಅನೇಕ ದಾನ ದತ್ತಿಗಳನ್ನು ನೀಡಿರುವ ವಿಷಯ ಈ ಕಾಲದ ಶಾಸನಗಳಲ್ಲಿ ಕಂಡುಬರುತ್ತದೆ. ಕ್ರಿ.ಶ. ೧೪೦೭ರಲ್ಲಿ ಕಾಡುಗೋಡಿಯಲ್ಲಿ ದೇವಿಸೆಟ್ಟಿಯ ಮಗ ಮಲ್ಲಿಸೆಟ್ಟಿ ಹನುಮಂತದೇವರನ್ನು ಪ್ರತಿಷ್ಠೆ ಮಾಡಿಸಿ ದೀಪಮಾಲೆ ಕಂಬವನ್ನು ಮಾಡಿಸಿದನು[೨೦]. ಹಾಗೇ ಗುಬ್ಬಿ ಗ್ರಾಮದ ಸೋಮೇಶ್ವರ ದೇವಾಲಯದ ಮುಂದೆ ಗರುಡಗಂಬವನ್ನು ಪಿರಿಯಸೆಟ್ಟಿಯ ಕುಮಾರ ಪೋಲಿಸೆಟ್ಟಿ ನಿಲ್ಲಿಸಿದ-ವಿವರ ಕ್ರಿ.ಶ. ೧೪೨೬ರ ಶಾಸನದಲ್ಲಿ[೨೧] ಬಂದಿದೆ. ಕ್ರಿ.ಶ. ೧೪೩೫ರ ಬೆಳತೂರ ಗೋಪಾಲಸ್ವಾಮಿ ದೇವಾಲಯದ ಮುಂದಿರುವ ಗರುಡಗಂಬವನ್ನು ತೊಱವಳಿನಾಡ ಪ್ರಭು ಮಾಚಿದೇವನ ಮಗ ಚೋಕಿಜೀಯ ಅವನ ಮಗ ದೇವಿಜೀಯ ಅವರುಗಳು (ದೀಪಮಾಲೆದೇವರ ಸೇವೆಗೆ) ಮಾಡಿಸಿದ ಸಂಗತಿ ಅಲ್ಲಿನ ಶಾಸನದಿಂದ[೨೨] ವ್ಯಕ್ತವಾಗುತ್ತದೆ. ಜ್ಯೋತಿಪುರದ ಜ್ಯೋತೀಶ್ವರ ದೇವಾಲಯಕ್ಕೆ, ಕಸವನಹಳ್ಳಿಯ ಆಂಜನೇಯ ದೇವಸ್ಥಾನಕ್ಕೆ, ದಾಸರಹಳ್ಳಿಯ ಚೌಡೇಶ್ವರಿ ದೇವಸ್ಥಾನ, ಗುಬ್ಬಿಯ ಸೋಮೇಶ್ವರ ದೇವಾಲಯಗಳಿಗೆ ದಾನ ದತ್ತಿಗಳನ್ನು ನೀಡಿರುವ ವಿವರಗಳುಳ್ಳ ಶಾಸನಗಳು[೨೩] ಲಭ್ಯವಾಗಿವೆ.

ಕ್ರಿ.ಶ. ೧೫೦೪ರ ವೀರನರಸಿಂಹರಾಯ ಮಹಾರಾಯನ ಉಲ್ಲೇಖದ ಶಾಸನವೊಂದು ಮಾರತ್ತಳ್ಳಿಯಲ್ಲಿದ್ದಿತು. ತೇದಿಯ ವಿವರಗಳಿಲ್ಲದ ನೆಕ್ಕುಂದಿ ಗ್ರಾಮದ ಶಾಸನವು ಪುರಧರ್ಮವನ್ನು ಪ್ರಸ್ತಾಪಿಸುತ್ತದೆ. ವಿಜಯನಗರ ಕಾಲದ ಈ ಶಾಸನಗಳಲ್ಲಿ ಉಕ್ತವಾಗಿರುವ ವಿವರಗಳಿಂದ ದೇವಾಲಯಗಳಲ್ಲಿನ ಪೂಜಾ ಕೈಂಕರ್ಯಗಳಿಗೆ ನಾಡಿನ ಅಧಿಕಾರಿಗಳು, ಗಾವುಂಡರು ಮಾತ್ರವಲ್ಲದೆ ಸಾಮಾನ್ಯರು ಕೂಡ ಅನೇಕ ವಿಧವಾದ ದಾನದತ್ತಿಗಳನ್ನು ಅನುಚಾನವಾಗಿ ನೀಡುತ್ತಾ ಬಂದಿರುವುದನ್ನು ಗಮನಿಸಬಹುದಾಗಿದೆ. ಹಾಗಾಗಿ ದಕ್ಷಿಣ ಭಾರತದ ಇತರ ಪ್ರದೇಶಗಳಲ್ಲಿದ್ದಂತೆ ಈ ಪ್ರದೇಶವೂ ವಿಜಯನಗರ ಕಾಲದಲ್ಲಿ ತನ್ನ ಸಾಂಸ್ಕೃತಿಕ ಪರಂಪರೆಯನ್ನು ಉನ್ನತಮಟ್ಟದಲ್ಲೇ ಉಳಿಸಿಕೊಂಡಿತ್ತು.

ಕ್ರಿ.ಶ. ೧೬೧೦ ನಂತರದ ಶಾಸನಗಳಲ್ಲಿ ವಿಜಯನಗರದ ಅರಸರ ಪ್ರಸ್ತಾಪ ಕಂಡುಬರುವುದಿಲ್ಲ. ಆದರೆ ಸ್ಥಳೀಯ ಮುಖಂಡರ ಹೆಸರುಗಳು ಕಂಡುಬರುತ್ತವೆ. ಕ್ರಿ.ಶ. ೧೬೧೮ರ ದೊಡ್ಡಬನಹಳ್ಳಿ ಶಾಸನದಲ್ಲಿ ಮುಂಮಡಿ ತಿಂಮಯಗಲುಡ, ೧೬೪೪ರ ಶಾಸನದಲ್ಲಿ ನಂಜೇಗೌಡನ ಕೋಮಾರ ಕಪಂಣ ಎಂಬುವನು ಗುಬ್ಬಿ ಹೊಸಹಳ್ಳಿ ಕೆರೆ ಕಟ್ಟಿಸಿದ ವಿವರ ಬಂದಿದೆ. ಅದೇ ಸ್ಥಳದ ಇನ್ನೊಂದು ಶಾಸನದಲ್ಲಿ ಆತನಿಗೆ ಅದಕ್ಕಾಗಿ ೧೦ ಖಂಡುಗ ಪ್ರಮಾಣದ ಹೊಲವನ್ನು ದತ್ತಿನೀಡಿರುವ ಸಂಗತಿಯನ್ನು ತಿಳಿಸುತ್ತದೆ. ತೇದಿ ವಿವರವಿಲ್ಲದ ಜ್ಯೋತಿಪುರ ಗ್ರಾಮದ ಶಾಸನವೊಂದು ಅಲ್ಲಿನ ಕೆರೆಗೆ ಕಟ್ಟುಕೊಡಿಗೆ ದತ್ತಿಯನ್ನು ಪ್ರಸ್ತಾಪಿಸುತ್ತದೆ. ಹೀಗೆ ವಿಜಯನಗರ ಅರಸರ ಆಡಳಿತದ ಕೊನೆಯ ಅವಧಿಯಲ್ಲಿ ಸ್ಥಳೀಯ ಮುಖಂಡರು ತಲೆಯೆತ್ತಿ ಕೆರೆಕಟ್ಟೆಗಳ ರಚನೆ ಮುಂತಾದ ಕೃಷಿ-ವಾಣಿಜ್ಯಕ್ಕೆ ಪೂರಕವಾದ ಕಾರ್ಯಗಳಲ್ಲಿ ತೊಡಗಿಕೊಂಡ ವಿವರ ವ್ಯಕ್ತವಾಗುತ್ತದೆ. ಅಲ್ಲದೆ ಎಲಹಂಕನಾಡ ಪ್ರಭು ಕೆಂಪೇಗೌಡನ ಆಡಳಿತ ಈ ಪ್ರದೇಶದ ಮೇಲೆ ನಡೆದಿದೆ. ಮರಾಠರ ಷಹಜಿ, ಮೈಸೂರಿನ ಹೈದರ್, ಟಿಪ್ಪು ಅವರ ಆಳ್ವಿಕೆಗೂ ಈ ಪ್ರದೇಶ ಒಳಪಟ್ಟಿತ್ತು.

ಪ್ರಸ್ತುತ ಈ ತಾಲೂಕು ಪ್ರದೇಶದಲ್ಲಿ ಸತ್ಯಸಾಯಿಬಾಬರವರ ಆಶ್ರಮ, ದೂರವಾಣಿ ಕಾರ್ಖಾನೆ ಎನ್ಜಿಯಿಯಫ್, ಅಂತರ ರಾಷ್ಟ್ರೀಯ ಮಾಹಿತಿ ತಂತ್ರಜ್ಞಾನ ಉದ್ಯಾನ, ಎಚ್.ಎ.ಎಲ್. ಸಂಸ್ಥೆಯ ಬೆಂಗಳೂರು ಮತ್ತು ವಿನ್ಯಾಸ ಸಮುಚ್ಚಯಗಳಿಗೆ ಸೇರಿದ ಏರ್‌ಕ್ರಾಫ್ಟ್, ದುರಸ್ತಿ, ಎರಕ-ಕುಲುಮೆ, ಹೆಲಿಕಾಪ್ಟರ್, ಏರೋ ಇಂಜಿನ್ಸ್, ಏರೋಸ್ಪೇಸ್ ಮೊದಲಾದ ಕಾರ್ಖಾನೆಗಳು. ಬಿಇಎಂಎಲ್ ಕಾರ್ಖಾನೆ ಹಾಗೂ ಜಿಟಿಆರ್‌ಇ, ಎಡಿಎ,

ಎನ್‌ಎಎಲ್, ಇಸ್ರೊ ಮೊದಲಾದ ಕೇಂದ್ರ ಸರ್ಕಾರದ ರಕ್ಷಣಾ ಮತ್ತು ಸಂಶೋಧನಾಲಯಗಳ ಆಗರವಾಗಿದೆ. ಅಂದರೆ ಈ ತಾಲೂಕು ಪ್ರದೇಶ ಕೇವಲ ತನ್ನ ಪ್ರಾಚೀನ ಪರಂಪರೆಗಷ್ಟೆ ಸೀಮಿತವಾಗಿರದೆ ಇಂದಿನ ಅತ್ಯಾಧುನಿಕ ಸಂಗತಿಗಳಾದ ವೈಮಾಂತರಿಕ್ಷಾ ಬಾಹ್ಯಾಕಾಶ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನಗಳಿಗೆ ಸಂಬಂಧಿಸಿದ ವಿಶಿಷ್ಟ ಸಂಸ್ಥೆಗಳನ್ನೊಳಗೊಂಡಿರುವಂಥ ಪ್ರದೇಶ ವಾಗಿದ್ದು ಈ ತಾಲ್ಲೂಕು ಪ್ರದೇಶವು ಬೆಂಗಳೂರು ನಗರದ ಕೀರ್ತಿಗೆ ಕಿರೀಟಪ್ರಾಯ ಸ್ಥಾನದಲ್ಲಿದೆ.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು

* ಆದರೆ ಅನಧಿಕೃತವಾಗಿ ಬೆಂಗಳೂರು ನಗರ ಮತ್ತು ಗ್ರಾಮಾಂತರ ಎಂಬುವ ಜಿಲ್ಲೆಗಳು ಒಂದು ರೀತಿಯಲ್ಲಿ ಅಸ್ತಿತ್ವದಲ್ಲಿದ್ದವು.

೧. **ಎಪಿಗ್ರಾಫಿಯಾ ಕರ್ನಾಟಿಕ**, ಸಂ. IX, ಬೆಂಗಳೂರು ೫೫.

೨. ಅದೇ ೪೦.

೩. ಅದೇ ೪೨.

೪. Two Herostone Inscriptions of Deserted Village of Ereyapamangala ***QJMS***, Vol. LXXI -1,2 (1990).

೫. **ಎಪಿಗ್ರಾಫಿಯಾ ಕರ್ನಾಟಿಕ**, ಸಂ. IX, ಹೊಸಕೋಟೆ ೧೧೧.

೬. ಅದೇ ೧೪೨.

೬ಅ. *'ಹೆಬ್ಬಾಳದ ದುರ್ಗಿಕಲ್ಲು ಶಾಸನ'*, **ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ**, ಸಂ. ೭೩-೧, ೧೯೮೮.

೭. ಅದೇ ೧೪೪, ೧೪೫, ೧೪೩, ೧೪೩೨.

೮. ಅದೇ ಬೆಂಗಳೂರು ೬೧.

೯ಅ. ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ತಾಲೂಕಿನ ಪ್ರಸಿದ್ಧ ಶಿವಗಂಗಾ ಕ್ಷೇತ್ರವೇ ಇದಾಗಿರಬೇಕು.

೯. ಅದೇ ೬೩.

೧೦. ಅದೇ ೫೩.

೧೧. *'ವಿಭೂತಿಪುರದ ವೀರಸಿಂಹಾಸನ ಮಠದ ಪ್ರಾಚೀನ ಶಾಸನ'*, **ಚಿತ್ಕಳೆ**, ಸಂ. ಡಾ. ಬಿ. ನಂಜುಂಡಸ್ವಾಮಿ., ಪ್ರ : ಶ್ರೀ ಅಕ್ಕಮಹಾದೇವಿ ಸಮಾಜ ತುಮಕೂರು, ೨೦೦೩, ಪು. ೧೧೪.

೧೨. ಅದೇ, ೭೬.

೧೩. ಅದೇ, ೫೧. ಹೆಸರ್ ಕುಂದಾಣಿ ರಾಜ್ಯದ ವಿವರಕ್ಕೆ ನೋಡಿ; *'ಹೆಸರ್ ಕುಂದಾಣಿ ರಾಜ್ಯದ ನಾಡುಗಳು'*, **ಇತಿಹಾಸದರ್ಶನ** ಸಂ. ೧೫ (೨೦೦೦), ಪು. ೧೯೨.

೧೪. *'ಹೊಯ್ಸಳ ಮಹಾಮಂಡಳೇಶ್ವರ ಪೂರ್ವಾದಿ ರಾಯರು'*, **ಇತಿಹಾಸ ದರ್ಶನ**, ಸಂ. ೧೬ (೨೦೦೧) ಪು. ೨೩೮-೪೩.

೧೫. **ಎಪಿಗ್ರಾಫಿಯಾ ಕರ್ನಾಟಿಕ**, ಸಂ. IX, ಬೆಂಗಳೂರು ೫೯.

೧೬. ಅದೇ ಹೊಸಕೋಟೆ ೧೫೪.

೧೭. ಅದೇ ೧೧೮.

೧೮. ಅದೇ ೧೧೭.

೧೯. ಅದೇ ೧೫೪.

೨೦. ಅದೇ ೧೪೧.

೨೧. ಅದೇ ೧೧೪.

೨೨. ಅದೇ ೧೫೫.

೨೩. ಅದೇ ೧೨೧, ೧೨೨, ೧೧೫, ಬೆಂಗಳೂರು ೪೮, ೪೯, ೫೭.

ಸಂತೇಬೆನ್ನೂರು ಸುಮತೀಂದ್ರ ನಾಡಿಗ್*

ಭಾರತೀಯ ಇತಿಹಾಸ ಸಂಶೋಧನಾ ಮಂಡಳಿಯಲ್ಲಿರುವ

# ಸಂತೇಬೆನ್ನೂರು ನಾಯಕರ ಒಂದು ತಾಮ್ರಶಾಸನ

*ಸುಮಾರು ಮೂರು ಶತಮಾನಗಳ ಕಾಲ ಆಳಿದ ದೊರೆಗಳು ಸಂತೆಬೆನ್ನೂರು ನಾಯಕರು. ಅವರಿಗೆ ಸಂಬಂಧಿಸಿದಂತೆ ೫೦ಕ್ಕೂ ಮೀರಿದ ಶಾಸನಗಳು ಲಭ್ಯವಾಗಿವೆ. ಸದ್ಯ ಭಾರತೀಯ ಇತಿಹಾಸ ಸಂಶೋಧನ ಮಂಡಳಿಯಲ್ಲಿ ದಾನದ ವಿಷಯದ ನೈಜ ತಾಮ್ರಶಾಸನ ಲಭ್ಯವಾಗಿದೆ. ಈ ದೊರೆವಂಶದ ಚಿಕ್ಕಹನುಮಪ್ಪ ನಾಯಕರಿಗೆ ಹುಲಿಹೋರಾಟದ ಶೌರ್ಯದ ಕಾರಣ ಬಿಜಾಪುರ ಸುಲ್ತಾನರು ಕೊಟ್ಟ 'ಶರ್ಜಾ' ಎಂಬ ಬಿರುದು ಶಾಸನೋಕ್ತವಾಗಿ ಮನೆತನಕ್ಕೆ ಲಭ್ಯವಾಗಿದೆ. ವಾಲ್ಮೀಕಿ ಗೋತ್ರದ ಬೇಡ ಜನಾಂಗದವರೆನ್ನಬಹುದಾದ ಈ ದೊರೆಗಳ ಪೈಕಿ ಸೀತಾರಾಮಪ್ಪ ನಾಯಕರು ರಾಮಾಪುರ ಗ್ರಾಮವನ್ನು ಅಗ್ರಹಾರ ಮಾಡಿಕೊಂಡಿರಲು ವೆಂಕಣ್ಣ ಭಟ್ಟರಿಗೆ ದತ್ತಿಕೊಟ್ಟ ಬಗ್ಗೆ ಸದ್ಯ ಶಾಸನೋಕ್ತವಾಗಿದೆ.*

ಈಗಿನ ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲೂಕಿನ ಸಂತೇಬೆನ್ನೂರನ್ನು ಆಡಳಿತ ಕೇಂದ್ರವಾಗಿಟ್ಟುಕೊಂಡು ೧೬ನೇ ಶತಮಾನದ ಆದಿಭಾಗದಲ್ಲಿ ಕರ್ನಾಟಕದ ಈಗಿನ ಏಳು ಜಿಲ್ಲೆಗಳ ವ್ಯಾಪ್ತಿಯಲ್ಲಿ ಸುಮಾರು ಮೂರು ಶತಮಾನಗಳ ಕಾಲ ಆಳಿದ ಒಂದು ರಾಜವಂಶ ಸಂತೇಬೆನ್ನೂರು ನಾಯಕರದು. ಈ ವಂಶದ ೨೫ ನಾಯಕರು ಆಡಳಿತ ನಡೆಸಿರುವುದಾಗಿ ಲಭ್ಯವಿರುವ ಆ ವಂಶದವರು ಬರೆಯಿಸಿದ ಶಾಸನಗಳು, ಕೈಫಿಯತ್ತು ಮತ್ತಿತರ ದಾಖಲೆಗಳಿಂದ ತಿಳಿದುಬರುತ್ತದೆ.

ಈವರೆಗೆ ಈ ನಾಯಕರಿಗೆ ಸಂಬಂಧಿಸಿದಂತೆ ೫೦ಕ್ಕೂ ಹೆಚ್ಚು ಶಾಸನಗಳು ದೊರೆತಿದ್ದು, ಪೂನಾದಲ್ಲಿರುವ ಭಾರತೀಯ ಇತಿಹಾಸ ಸಂಶೋಧನಾ ಮಂಡಳಿಯಲ್ಲಿ ಈ ವಂಶದ ಸೀತಾರಾಮಪ್ಪ ನಾಯಕ ಬರೆಸಿಕೊಟ್ಟ ಒಂದು ತಾಮ್ರ ಶಾಸನ ಇರುವುದನ್ನು ಸಂಶೋಧಕ ಕೆಳದಿ ಗುಂಡಾಜೋಯಿಸರು ನನ್ನ ಗಮನಕ್ಕೆ ತಂದರು.

ಈ ಶಾಸನ ಕುರಿತು ಸ್ಥಳೀಯ ತಾಲೂಕು ಮಟ್ಟದ ದಿನಪತ್ರಿಕೆಯೊಂದರಲ್ಲಿ ೧೯೮೮ರಲ್ಲಿ, ಅವರು ಪ್ರಕಟಿಸಿದ್ದರೂ, ಬಹುಜನರ ವಿದ್ವಾಂಸರ, ಶಾಸನತಜ್ಞರ ಗಮನಕ್ಕೆ ಅದು ಹೋಗಿಲ್ಲ. ಈ ಶಾಸನದ ಮರಾಠಿ ಪಾಠಾಂತರವನ್ನು ಪೂನಾದ ಭಾರತೀಯ ಇತಿಹಾಸ ಸಂಶೋಧನಾ ಮಂಡಳಿ ತನ್ನ ಅಕ್ಟೋಬರ್ ೧೯೩೭ರ ತ್ರೈಮಾಸಿಕದಲ್ಲಿ ಪ್ರಕಟಿಸಿದೆ. ಕನ್ನಡದ ಪಾಠ ಈವರೆಗೂ ಯಾವ ಶಾಸನ ಸಂಪುಟಗಳಲ್ಲಾಗಲೀ, ಇತರೆ ಯಾವ ಅಧಿಕೃತ ವರದಿಗಳಲ್ಲಾಗಲೀ ಪ್ರಕಟವಾಗಿಲ್ಲದಿರುವುದು ನನ್ನ ಗಮನಕ್ಕೆ ಬಂದಿದ್ದು, ಶಾಸನದ ಕನ್ನಡದ ಪಾಠದೊಂದಿಗೆ, ಸಂತೇಬೆನ್ನೂರು ನಾಯಕರ ಕುರಿತು ಈ ಶಾಸನದಲ್ಲಿ ಲಭ್ಯವಾಗಿರುವ ಹೆಚ್ಚಿನ ಮಾಹಿತಿಯನ್ನು ಇಲ್ಲಿ ಮಾಡಿಕೊಡಲಾಗಿದೆ.

**ಉಪಲಬ್ಧ :** ಈ ತಾಮ್ರ ಶಾಸನವು ಒಂದು ದಾನಶಾಸನವಾಗಿದ್ದು, ಸಾಂಗಲಿ ಸಂಸ್ಥಾನದ ಅಪ್ಪಾ ಸಾಹೇಬ ದೇಸಾಯಿಯವರಲ್ಲಿ ಈ ಶಾಸನ : ದ.ವಿ. ಆಪ್ಟೆ ಅವರ ಮೂಲಕ ಭಾರತೀಯ ಇತಿಹಾಸ ಸಂಶೋಧನಾ ಮಂಡಳಿಗೆ ದೊರೆತಿರುವುದಾಗಿ ಸಂಶೋಧಕ ಗ. ಹ. ಖರೆ ತಿಳುಹಿಸಿದ್ದಾರೆ,

೧. ಈ ದಾನ ಶಾಸನದ ಒಂದು ಹಲಗೆ ಮಾತ್ರ ಲಭ್ಯವಾಗಿದ್ದು ಇದೊಂದು ಅಪೂರ್ಣ ಶಾಸನವಾಗಿದೆ. ಆದರೂ ಶಾಸನದ ಮುಖ್ಯ ವಿಚಾರ ತಿಳಿದುಕೊಳ್ಳಲು ತೊಂದರೆಯಾಗಿಲ್ಲ.
೨. ಈ ತಾಮ್ರ ಶಾಸನದ ಅಳತೆ ೧೧$\frac{೩}{೪}$" ಅಗಲ, ೭$\frac{೧}{೨}$" ಉದ್ದವಿದ್ದು ಎಡಭಾಗದಲ್ಲಿ ಸೂರ್ಯ ಚಿಹ್ನೆ, ಮಧ್ಯದಲ್ಲಿ ಶುಭಮಸ್ತು ಎಂಬ ಕನ್ನಡ ಬರಹ, ಬಲಭಾಗದಲ್ಲಿ ಚಂದ್ರನ

* ಪತ್ರಿಕಾ ವರದಿಗಾರ, ಸಂತೇಬೆನ್ನೂರು - ೫೭೭ ೫೫೨ (ದಾವಣಗೆರೆ ಜಿಲ್ಲೆ)

ಗುರುತು ಇದ್ದು ಇದರ ಕೆಳಗೆ ೨೪ ಸಾಲುಗಳ ಶಾಸನ ಮಾತ್ರ ಇದೆ.

೩. ಈ ಶಾಸನ ೧೭ನೇ ಶತಮಾನದ ಕನ್ನಡ ಲಿಪಿ ಮತ್ತು ಭಾಷೆಯಲ್ಲಿದ್ದು, ಆರಂಭದ ಎರಡು ಶ್ಲೋಕಗಳು ಸಂಸ್ಕೃತ ಭಾಷೆಯ ಪ್ರಖ್ಯಾತ 'ನಮಸ್ತುಂಗ ಶಿರಶ್ಚುಂಬಿ....' ಶ್ಲೋಕಗಳನ್ನೊಳಗೊಂಡಿದ್ದು, ಅನಂತರದ ಶಾಸನ ಪಾಠವು ಕನ್ನಡ ಭಾಷೆಯಲ್ಲಿದೆ.

೪. ಈ ಶಾಸನದಂತೆ ಸಂತೇಬೆನ್ನೂರು ರಾಮಚಂದ್ರಸ್ವಾಮಿ ಪಾದಪದ್ಮಾರಾಧಕರಾದ ಹನುಮಂತ ದೇವರ ನಿಜಭಕ್ತ ರಾದ, ಪೂವ್ವಲಾನ್ವಯದ ನಿಚ್ಚಮದುವಣಿಗ ಹನುಮಪ್ಪ ನಾಯಕರ ಪೌತ್ರರಾದ ಶರ್ಜಾ ಹನುಮಪ್ಪನಾಯಕರ ಪುತ್ರ ಸೀತಾರಾಮಪ್ಪ ನಾಯಕರು ಕಾಶ್ಯಪ ಗೋತ್ರದ ಕಾತ್ಯಾಯನ ಸೂತ್ರದ ಪ್ರಥಮ ಶಾಖೆಯ ಸೇನಂಭಟ್ಟರ ಪೌತ್ರರಾದ ಅಶ್ವಥಭಟ್ಟರ ಪುತ್ರರಾದ ವೆಂಕಣ್ಣ ಭಟ್ಟರಿಗೆ ಶಾಸನ ಬರೆದು ಕೊಟ್ಟಿರುತ್ತಾರೆ.

೫. ಈ ಹಿಂದೆ ತಮ್ಮ ತಂದೆ ಶರ್ಜಾ ಹನುಮಪ್ಪ ನಾಯಕರು ಶಾ.ಶ. ೧೫೮೪ನೇ ಶುಭಕೃತು ಸಂವತ್ಸರದ ಆಷಾಢ ಶುದ್ಧ ೧೨ರಲ್ಲಿ ಅವರಿಗೆ ರಾಮಾರ್ಪಣ ಮಾಡಿ ಕಾತೂರು ಸೀಮೆ ಒಳಗಣ, ಚಿಕ್ಕ ಕಾತೂರು ಸ್ಥಳದ ರಾಮಾಪುರ ಗ್ರಾಮವನ್ನು ದಾನವಾಗಿ ಕೊಟ್ಟಿದ್ದು, ಆ ದಾನ ಪತ್ರ ನಶಿಸಿದ ಕಾರಣವೋ, ಏನೋ ಪುನಃ ಶಕ ೧೬೦೪ನೇ ದುಂದುಭಿ ಸಂವತ್ಸರದ ಮಾಘ ಶುದ್ಧ ೭ರಲ್ಲಿ ತಮ್ಮ ಮಾತಾಪಿತೃಗಳಿಗೆ ಧರ್ಮವಾಗಲಿ ಎಂದು ಈ ತಾಮ್ರಶಾಸನವನ್ನು ಮತ್ತೆ ಬರೆದುಕೊಟ್ಟಿರುತ್ತಾರೆ.

೬. ಎಪಿಮರೀಸ್ ದಾಖಲೆಗಳಂತೆ ಈ ಶಾಸನ ೧೬೬೨ನೇ ಜೂನ್ ೧೨ರಲ್ಲಿ ಮೊದಲು ಶರ್ಜಾ ಹನುಮಪ್ಪ ನಾಯಕ ಬರೆದುಕೊಟ್ಟಿದ್ದು, ನಂತರ ೧೬೮೩ನೇ ಜನವರಿ ೨೪ರಲ್ಲಿ ಅದೇ ಶರ್ಜಾ ಹನುಮಪ್ಪ ನಾಯಕರ ಪುತ್ರ ಸೀತಾರಾಮಪ್ಪ ನಾಯಕ ಮತ್ತೆ ಬರೆದುಕೊಟ್ಟಿದ್ದಾಗಿ ಡಾ|| ಜಿ. ಹೆಚ್. ಖರೆ ಅಭಿಪ್ರಾಯಪಟ್ಟಿದ್ದಾರೆ.

೭. ಈ ಶಾಸನದಂತೆ ರಾಮಾಪುರ ಗ್ರಾಮವನ್ನು ಅಗ್ರಹಾರ ಮಾಡಿಕೊಂಡು ಇರಲು ವೆಂಕಣ್ಣಭಟ್ಟರು ಬಯಸಿದ್ದು, ಅದರಂತೆ ಸೀತಾರಾಮಪ್ಪ ನಾಯಕರು ಈ ಗ್ರಾಮವನ್ನು ಪುನಃ, ಅವರ ಹೇಳಿಕೆಯನ್ನು ಒಪ್ಪಿ, ಅವರಿಗೆ ಈ ಗ್ರಾಮ ದತ್ತಿ ಕೊಟ್ಟಿರುವುದನ್ನು ತಿಳಿಸುತ್ತದೆ. ಶಾಸನದ ಅಪೂರ್ಣ ಪಾಠ ಮಾತ್ರ ಲಭ್ಯವಿರುವ ಕಾರಣ ದತ್ತಿ ಗ್ರಾಮ ರಾಮಾಪುರದ ಗಡಿರೇಖೆ ಅರ್ಧಮಾತ್ರ ಉಲ್ಲೇಖವಾಗಿರು ವುದರಿಂದ, ಈ ಗ್ರಾಮ ಯಾವುದೆಂದು ನಿಖರವಾಗಿ ಗುರುತಿಸಲು ಅಸಾಧ್ಯವಾಗಿದೆ.

೮. ಈ ರಾಮಾಪುರ ಗ್ರಾಮ ಈಗಿನ ತರಿಕೆರೆ ತಾಲೂಕಿನಲ್ಲಿರುವ ರಾಮಾಪುರವೋ, ಬೇರೆಯೋ ಅಥವಾ ಹೊನ್ನಾಳಿ ತಾಲ್ಲೂಕಿನಲ್ಲಿರುವ ರಾಮಾಪುರವೋ ಇನ್ನಷ್ಟು ಪರಿಶೀಲನೆ ಯಿಂದ ತಿಳಿಯಬೇಕಾಗಿದೆ.

೯. ಈ ಶಾಸನ ಬರೆಯಿಸಿಕೊಟ್ಟ ಸೀತಾರಾಮಪ್ಪ ನಾಯಕರ ಇದೂ ಸೇರಿ ಒಟ್ಟು ೮ ಶಾಸನಗಳು ಈವರೆಗೆ ಲಭ್ಯ ವಾಗಿದ್ದು, ಅವುಗಳಲ್ಲಿ ಇದು ಆತ ಬರೆಯಿಸಿ ಕೊಟ್ಟ ಮೂರನೇ ತಾಮ್ರಶಾಸನವಾಗಿದೆ. ಉಳಿದಂತೆ ಆತ ಎರಡು ಶಿಲಾಶಾಸನಗಳು, ಮೂರು ಲೇಖನಗಳು ಬರೆಯಿಸಿ ಕೊಟ್ಟಿದ್ದು, ಸೀತಾರಾಮಪ್ಪ ನಾಯಕನೇ ಅವರ ವಂಶದಲ್ಲಿ ಅತಿಹೆಚ್ಚು ಶಾಸನ ಬರೆಯಿಸಿಕೊಟ್ಟ ನಾಯಕನಾಗಿದ್ದಾನೆ.

೧೦. ಈ ಶಾಸನದಲ್ಲಿ ನಮೂದಿಸಿದ ಕಾಲ, ವಂಶಾವಳಿ, ಭಾಷೆ ಇತರ ಇವನ ಶಾಸನಗಳಿಗೂ ಹೊಂದಾಣಿಕೆ ಆಗುವುದ ರಿಂದ ಈ ಶಾಸನ ನೈಜ ಶಾಸನ ಎಂಬುದರಲ್ಲಿ ಸಂಶಯ ವಿಲ್ಲ.

೧೧. ಈ ಸಂತೇಬೆನ್ನೂರು ನಾಯಕರು ವಿಜಯನಗರ ಅರಸರ ಅಧೀನರಾಗಿದ್ದುಕೊಂಡು ಪ್ರಾರಂಭದಲ್ಲಿ ಈಗಿನ ದಾವಣಗೆರೆ ಜಿಲ್ಲೆ ಬಸವಾಪಟ್ಟಣ, ನಂತರ ಸಂತೇಬೆನ್ನೂರು ಅನಂತರ ಚಿಕ್ಕಮಗಳೂರು ಜಿಲ್ಲೆ ತರಿಕೆರೆಯನ್ನು ರಾಜಧಾನಿಯಾಗಿಟ್ಟು ಕೊಂಡು ಆಡಳಿತ ನಡೆಸುತ್ತಿದ್ದುದಾಗಿ ಅವರ ವಂಶದ ಕೈಫಿಯತ್ತುಗಳು, ಇತಿಹಾಸದ ದಾಖಲೆಗಳು ತಿಳಿಸುತ್ತವೆ. ಈ ಶಾಸನ ಬರೆಯಿಸಿಕೊಟ್ಟ ಸೀತಾರಾಮಪ್ಪ ನಾಯಕ, ಈ ಶಾಸನ ಬರೆಸಿಕೊಟ್ಟ ಕಾಲದಲ್ಲಿ ತರಿಕೆರೆ ರಾಜಧಾನಿ ಯಾಗಿ ಮಾಡಿಕೊಂಡು ಆಡಳಿತ ನಡೆಸುತ್ತಿದ್ದುದಾಗಿ ತಿಳಿದುಬಂದಿದ್ದರೂ, ಅವನ ಈ ಶಾಸನದಲ್ಲಿ ರಾಜಧಾನಿ ತರಿಕೆರೆಯ ಉಲ್ಲೇಖ ಇಲ್ಲದಿರುವುದು ಅಚ್ಚರಿ ತರುತ್ತದೆ.

೧೨. ಈಚಿನ ಗ್ಯಾಸೆಟಿಯರ್, ವಿಶ್ವಕೋಶ ಮತ್ತು ಇತರೆ ಇವರ ಇತಿಹಾಸ ಕುರಿತ ಬರೆಹಗಳಲ್ಲಿ ಇವರನ್ನು ಬಸವಾಪಟ್ಟಣ ನಾಯಕ ರೆಂದು ಕರೆಯಲ್ಪಟ್ಟಿದ್ದರೂ, ಈವರೆಗೆ ಇದು ಸೇರಿ ಲಭ್ಯ ಇರುವ ಯಾವ ಶಾಸನದಲ್ಲಿಯೂ ಬಸವಾಪಟ್ಟಣ ವನ್ನು ಉಲ್ಲೇಖಿಸಿಲ್ಲದಿರುವುದು ಗಮನಾರ್ಹ.

೧೩. ಈ ಶಾಸನ ಪೂನಾದಲ್ಲಿ ದೊರೆತಿರುವ ಕಾರಣವೆಂದರೆ ಬಹುಶಃ ಪರಶುರಾಂ ಭಾವು ಕಾಲದಲ್ಲಿ ಈ ಪ್ರಾಂತ್ಯ ಮರಾಠಿಗಳ ಕೈವಶವಾದಾಗ, ಈ ಶಾಸನ ಸಾಂಗ್ಲಿ ಸಂಸ್ಥಾನ ದವರ ಕಡೆ ಸೇರಿರಬಹುದೆಂದು ಊಹಿಸಬಹುದಾಗಿದೆ.

೧೪. ಈ ಶಾಸನದಲ್ಲಿ ಉಕ್ತವಾಗಿರುವ ರಾಮಚಂದ್ರಸ್ವಾಮಿ ದೇವಸ್ಥಾನದ ಬಗ್ಗೆ ಹೇಳಬಹುದಾದರೆ, ಈಗ ಸಂತೇ ಬೆನ್ನೂರಲ್ಲಿ ಇವರ ಕಾಲದ ಮನೆದೈವ ರಾಮಚಂದ್ರ ಸ್ವಾಮಿ

ದೇವಾಲಯವಿಲ್ಲ. ಈಗ ಅಲ್ಲಿರುವ ಶ್ರೀರಾಮಚಂದ್ರ ಸ್ವಾಮಿ ದೇವಾಲಯ ೧೯೩೩ರಲ್ಲಿ ಕಟ್ಟಿಸಿದ್ದು. ಈ ವಂಶದವರು ಕಟ್ಟಿಸಿದ್ದರೆನ್ನಲಾದ ಶ್ರೀರಾಮಚಂದ್ರ ದೇವಸ್ಥಾನವನ್ನು ಬಿಜಾಪುರದ ದಂಡನಾಯಕ ರಣದುಲ್ಲಾಖಾನನು ಕೆಡವಿ, ಆ ಸ್ಥಳದಲ್ಲಿ ಮಸೀದಿಯೊಂದನ್ನು ನಿರ್ಮಿಸಿದನೆಂದು ದಾಖಲೆಗಳು ತಿಳಿಸುತ್ತವೆ. ಪೂರ್ವದಲ್ಲಿ ಈ ವಂಶದ ನಾಯಕರು ನಿರ್ಮಿಸಿದ ರಾಮಚಂದ್ರ ದೇವಸ್ಥಾನದ ಎದುರಿಗೆ ಕಟ್ಟಲ್ಪಟ್ಟಿರುವ ಶ್ರೀರಾಮತೀರ್ಥ ಎಂಬ ಪುಷ್ಕರಿಣಿ ಇಂದಿಗೂ ಅಳಿಯದೆ ಇದ್ದು, ಇದು ದಕ್ಷಿಣ ಭಾರತದಲ್ಲೇ ಅತಿ ಸುಂದರವೂ, ವಿಶಿಷ್ಟವಾದುದೆಂದು ಸಂಶೋಧಕ ಡಾ॥ ಎಂ. ಚಿದಾನಂದಮೂರ್ತಿ ಅಭಿಪ್ರಾಯ ಪಟ್ಟಿದ್ದಾರೆ.

೧೫. ಈ ಶಾಸನದಲ್ಲಿ ಉಲ್ಲೇಖವಾಗಿರುವ 'ಪೂವ್ವಲಾನ್ವಯ' ಎಂಬ ವಂಶದ ಬಗ್ಗೆ ಹೇಳಬಹುದಾದರೆ, ಅದು ಈ ವಂಶದ ಬೆಡಗು, ಗೋತ್ರ ಎಂತಲೂ, ಪೂವ್ವಲ ಎಂದರೆ ಸೂರ್ಯ ಎಂಬ ಅರ್ಥ ಬರುವುದರಿಂದ, ಸೂರ್ಯ ವಂಶಕ್ಕೆ ಸೇರಿದವರೆಂದು, ಈ ವಂಶದ ಬಗ್ಗೆ ಒಂದು ಕಾವ್ಯ ಬರೆದ ಕೃಷ್ಣಶರ್ಮ ಅಭಿಪ್ರಾಯಪಡುತ್ತಾನೆ. ಪೂವ್ವಲ ತದ್ಭವ ಮಾವಲ ಎಂಬ ಅರ್ಥ ಬರುವುದರಿಂದ ಮಾವಲ ದೇಶದಿಂದ ಬಂದವರೆಂದೂ ಕೆಲವರು ಅರ್ಥೈಯಿಸುತ್ತಾರೆ. ಈ ಬೆಡಗಿನಿಂದ ಇವರು ವಾಲ್ಮೀಕಿ ಗೋತ್ರದ, ಬೇಟೆಯಾಡುವ ವೃತ್ತಿಯಿಂದ ಬಂದ ಬೇಡ ಜನಾಂಗಕ್ಕೆ ಸೇರಿದವರೆಂದು ತಿಳಿಯಬಹುದಾಗಿದೆ.

೧೬. ಈ ವಂಶದ ಬೇರೆ ನಾಯಕರ ತಾಮ್ರಶಾಸನಗಳಿಗೆ ಹೋಲಿಸಿದರೆ ಈ ಶಾಸನದ ಲಿಪಿ, ಭಾಷೆಯಲ್ಲಿ ಬಹಳಷ್ಟು ದೋಷಗಳು, ದ್ವಂದ್ವಾರ್ಥಗಳು ಕಾಣಬರುತ್ತವೆ. ಹ್ರಸ್ವ, ದೀರ್ಘ ಅಕ್ಷರಗಳಿಗೆ ಭೇದಗಳು ಇರುವುದಿಲ್ಲ. ಬಹುಶಃ ಇದು ಲಿಪಿಕಾರನ ದೋಷ ಇರಬೇಕು.

೧೭. ಈ ಶಾಸನದಲ್ಲಿ ಶರ್ಜಾ ಹನುಮಪ್ಪ ನಾಯಕರ ಪುತ್ರರಾದ ಸೀತಾರಾಮಪ್ಪ ನಾಯಕರು ಬರೆದು ಕೊಟ್ಟ ಶಾಸನವೆಂದು ಸ್ಪಷ್ಟವಾಗಿ ಬರೆಯಲ್ಪಟ್ಟಿದೆ. ಈ ಶರ್ಜಾ ಎಂಬುದು ಈ ಮನೆತನದ ಒಂದು ಬಿರುದು. ಇದನ್ನು ಬಿಜಾಪುರದ ಸುಲ್ತಾನರು ಈ ವಂಶದ ಚಿಕ್ಕಹನುಮಪ್ಪನಾಯಕರಿಗೆ ಆತ ಹುಲಿಯೊಡನೆ ಹೋರಾಡಿ, ಶೌರ್ಯ ಪ್ರತಾಪ ತೋರಿಸಿದ್ದಕ್ಕಾಗಿ ಕೊಟ್ಟ ಬಿರುದು ಎಂದು ತಿಳಿದುಬರುತ್ತದೆ. 'ಶರ್ಜಾ' ಎಂಬ ಬಿರುದು ಹೈದರಾಲಿ ಈ ವಂಶಕ್ಕೆ ಕೊಟ್ಟ ಬಿರುದು ಎಂದು ಸರ್ಕಾರಿ ಗ್ಯಾಸೆಟಿಯರ್, ವಿಶ್ವಕೋಶದಲ್ಲಿ ತಪ್ಪಾಗಿ ತೋರಿಸಲ್ಪಟ್ಟಿದೆ ಎಂದು, ಈ ಶಾಸನದಲ್ಲಿ ನಮೂದಾದ ಕಾಲದ ಪರಿಶೀಲನೆಯಿಂದ ಸ್ಪಷ್ಟವಾಗುತ್ತದೆ.

ಈ ಶಾಸನದಿಂದ ಕರ್ನಾಟಕ ಇತಿಹಾಸದಲ್ಲಿ ಕೆಲಕಾಲ ಬೆಳಗಿದ ಸಂತೇಬೆನ್ನೂರು ನಾಯಕರ ಆಡಳಿತಕ್ಕೆ ಇನ್ನಷ್ಟು ಹೊಸ ಸಂಗತಿಗಳು ಸೇರ್ಪಡೆಯಾಗುತ್ತಿದ್ದು ಈ ವಂಶದ ಆಡಳಿತ ವ್ಯವಹಾರ ಇತ್ಯಾದಿಗಳ ಸಂಶೋಧನೆಗೆ ದಾರಿ ಮಾಡಿಕೊಟ್ಟಿದೆ.

**ಶಾಸನದ ಪಾಠ**

೧ (ಸೂರ್ಯ) ಶುಭಮಸ್ತು (ಚಂದ್ರ)

೨ ನಮಸ್ತುಂಗ ಶಿರಶ್ಚುಂಬಿ ಚುಂದ್ರ ಚಾಮರಚಾರವೆ । ತ್ರೈಲೋಕ್ಯ

೩ ನಗರಾರಂಭ ಮೂಲಸ್ತಂಭಾಯ ಶಂಭವೆ ॥೧॥ ಹರೇರ್ಲೀಲಾವ

೪ ರಾಹಸ್ಯ ದಂಷ್ಟ್ರ ದಂಡಸ್ಯ ಪಾತುವಃ । ಹೇಮಾದ್ರಿ ಶಿಖರಾಯ

೫ ತ್ರಧಾತ್ರೀವ (ಧ) ತ್ರಶ್ರಿಯಂ ದಧೌ ॥೨॥ ಸ್ವಸ್ತಿಶ್ರೀ ಜೆಯಾಭ್ಯುದಯ

೬ ಯ ಶಾಲಿವಾಹನ ಶಕ ವರುಷ ಸಾ (ಶಾ) ೧೬೦೪ನೆಯ ದುಂ

೭ ದುಭಿ ಸಂವತ್ಸರದ ಮಾಘ ಶು ೭ ಲೂ ಶ್ರೀ ಮತ್ಸಂ

೮ ಥೆ (ತೆ) ಬೆಂನೂರ ರಾಮಚೆಂದ್ರಸ್ವಾಮಿ ಪಾದಪದ್ಮ ರಾಧಕರಾ

೯ ದ ಹನುಮಂತ್ತದೇವರ ನಿಜಭಕ್ತರಾದ ಪೂವ್ವಲಾಂನ್ವಯ

೧೦ ದ ನಿಚ್ಚಮದವಣೆಗ ಹನುಮಪ್ಪ ನಾಯಕರ ಪೌತ್ರರಾ

೧೧ ದ ಶರ್ಜಾ ಹನುಮಪ್ಪ ನಾಯಕರ ಪುತ್ರರಾದ ಸೀತಾರಾ

೧೨ ಮಪ್ಪ ನಾಯಕರೂ । ಕಾಶ್ಯಪ ಗೋತ್ರದ ಕಾತ್ಯಾಯನ ಸೂತ್ರದ

೧೩ ಪ್ರಥಮ ಶಾಖೆಯ ಸೇನಾಭಟ್ಟರ ಪೌತ್ರರಾದ ಅಶ್ವಥಭಟ್ಟ

೧೪ ರ ಪುತ್ರರಾದ ವೆಂಕಣಭಟ್ಟರಿಗೆ ಬರೆಸಿಕೊಟ್ಟ ತಾಂಬ್ರ ಶಾ

೧೫ ಸನದ ಕ್ರಮವೆಂತ್ತೆಂದರೆ । ಪ್ರಾಕ್ ಶುಭಕೃತ ಸಂವತ್ಸರದ।

೧೬ ಆಷಾಢ ಶು ೧೨ ಲ್ಲೂ ನಂಮ್ಮ [ಅಯ್ಯ] ಶರ್ಜಾ ಹನುಮಪ್ಪ

೧೭ ನಾಯಕರೂ ಕಾತೂರ ಸೀಮೆಯೊಳಗಣ ಚಿಕ್ಕಾತೂರ ಸ್ಥಳದ

೧೮ ರಾಮಪುರದ ಗ್ರಾಮವನೂ ಪ್ರಥಮ ದ್ವಾದಶೀ ಪುಂಣ್ಯಕಾಲ

೧೯ ದಲ್ಲಿ ನಿಮಗೆ ರಾಮಾರ್ಪ್ಪಣವ ಮಾಡಿ ದಾನಪಟ್ಟಿ ಬರೆಸಿಕೊ

೨೦ ಟ್ಟಿದ್ದಲ್ಲಿ ತದಾರಭ್ಯಾ ಭೋಗಿಸಿಕೊಂಡು ಬರುತ್ತಿದ್ದಿತೆ ಮುಂದೆ

೨೧ ಯೊ ಧರ್ಮ ಅಭಿವೃದ್ಧಿಯಾಗಬೇಕೆಂದು ಅಗ್ರಹಾರ ಮಾಡು

೨೨ ಥೆಗೆ ಆ ರೀತಿಗೆ ಶಾಸನ ಬರೆಸಿಕೊಡಬೇಕೆಂದು ನೀಉ ಹೇಳಿದ

೨೩ ಸಂಮಂಧ ನಂಮ ಮಾತಾಪಿತ್ರುಗಳಿಗೆ ಅನೇಕ ಧರ್ಮ ವಾಗಲಿ

೨೪ ಯೆಂದು ಬರೆಸಿಕೊಟ್ಟ ಶಾಸನದ ವಿವರ । ಆ ರಾಮಪು

೨೫ ರಂ ದ ಗ್ರಾಮ ೧ ವಂದಕ್ಕೆ ಪ್ರಾಕ್ ರೇಖೆ ಹಣವಿಗೆ ಉತ್ತಾರ

(ಈ ತಾಮ್ರ ಶಾಸನದ ಇರುವಿಕೆಯನ್ನು ತಿಳುಹಿಸಿ ಅದರ ಕನ್ನಡ ಪಾಠ ಒದಗಿಸಿದ ಸಂಶೋಧಕ ಕೆಳದಿ ಗುಂಡಾಜೋಯಿಸರಿಗೂ, ಹಾಗೂ ಭಾರತೀಯ ಇತಿಹಾಸ ಸಂಶೋಧನಾ ಮಂಡಳಿಯ ಮರಾಠಿ ವರದಿ ಒದಗಿಸಿಕೊಟ್ಟ ಸೋದರಳಿಯ ಬಿ. ರಘುರವರಿಗೂ, ಅದರ ಕನ್ನಡ ಭಾಷಾಂತರ ಮಾಡಿಕೊಟ್ಟ ದಾವಣಗೆರೆಯ ಗುಜ್ಜರ್ ರೂಪಾ ಗಣಪತಿ, ಸಿ. ಕೆ. ಆನಂದ ತೀರ್ಥಾಚಾರ್‌ರವರಿಗೂ ಧನ್ಯವಾದಗಳು!)



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧ **ಕರ್ನಾಟಕ ಶಾಸನ ಸಂಪುಟ** (ರೈಸ್ ಆವೃತ್ತಿ) ಸಂಪುಟಗಳು ೬, ೭, ೧೧, ೧೨.
೨. ಮೈಸೂರು ಪುರಾತತ್ವ ಇಲಾಖೆ ವಾರ್ಷಿಕ ವರದಿಗಳು ೧೯೨೫-೧೯೨೭.
೩. **ದಕ್ಷಿಣ ಭಾರತದ ಶಾಸನ** ಸಂಪುಟ-೧೮.
೪. **ಶ್ರೀ ಕೂಡ್ಲಿ-ಶೃಂಗೇರಿ ಸಂಸ್ಥಾನದ ಪ್ರಾಚೀನ ಶಾಸನ ಲೇಖನ ಸಂಗ್ರಹ** ಸಂ-೧ (೧೯೬೫).
೫. **ಇತಿಹಾಸ ದರ್ಶನ** ಸಂ. ೧೩, ೧೪, ೧೫, ೧೬, ೧೮.
೬. ಭಾರತೀಯ ಇತಿಹಾಸ ಸಂಶೋಧನಾ ಮಂಡಳಿ, ತ್ರೈಮಾಸಿಕ ವರದಿ, ಪೂನಾ, ಅಕ್ಟೋಬರ್ ೧೯೩೭.
೭. ಸಂತೇಬೆನ್ನೂರು **ಗ್ರಾಮೀಣ ವಾಣಿ** (ಮಾಸಿಕ) ದಿನಾಂಕ ೧೫.೫.೧೯೮೮.
೮. **ಕರ್ನಾಟಕದ ಕೈಫಿಯತ್ತುಗಳು**., (೧೯೯೪), ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.
೯. **ಸರಜಾ ಹನುಮೇಂದ್ರ ಯಶೋ ವಿಲಾಸಂ**., (೧೯೯೬), (ಸಂ) ವೈ. ಸಿ. ಭಾನುಮತಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
೧೦. **ಕನ್ನಡ ವಿಷಯ ವಿಶ್ವಕೋಶ**., (೧೯೭೯), ಮೈಸೂರು ವಿಶ್ವವಿದ್ಯಾಲಯ, ಮೈಸೂರು.
೧೧. *Mysore Gazetteers*., (Ed) B. L. Rice & C. Hayavadana Rao.
೧೨. **ಕರ್ನಾಟಕ ರಾಜ್ಯ ಗ್ಯಾಸೆಟಿಯರ್**., (೧೯೮೪), (ಸಂ) ಸೂರ್ಯನಾಥ ಕಾಮತ್, ಬೆಂಗಳೂರು.
೧೩. **ಮಲೆ ಕರ್ನಾಟಕದ ಅರಸು ಮನೆತನಗಳು**., (೨೦೦೧) ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.
೧೪. ಅಬ್ದುಲ್ ಸತ್ತಾರ್., (೧೯೯೭), **ತರೀಕೆರೆ ಪಾಳೆಯಗಾರರು**.
೧೫. *Selections from the Records of the Sringere Mutt*, Vol. I (1927).
೧೬. **ಕೆಳದಿನೃಪ ವಿಜಯಂ**., (೧೯೭೩), (ಸಂ) ಆರ್. ಶಾಮಾಶಾಸ್ತ್ರೀ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
೧೭. **ಕರ್ನಾಟಕ ಇತಿಹಾಸ ದರ್ಶನ**., (೧೯೭೦), ಎಂ. ವಿ. ಕೃಷ್ಣರಾವ್, ಎಂ. ಕೇಶವ ಭಟ್ಟ.
೧೮. **ಕನ್ನಡ ವಿಶ್ವಕೋಶ** - ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
೧೯. **District Gazetteers** Shimoga, Chikkamagalur, Tumkur (1969).
೨೦. **ಹರತಿಸಿರಿ** (ಸ್ಮರಣ ಸಂಪುಟ)., (೧೯೮೭), (ಸಂ.) ಲಕ್ಷ್ಮಣ ತೆಲಗಾವಿ - ಹರತೀಕೋಟೆ.
೨೧. **ಹೊನ್ನ ಬಿತ್ತೆವು ಹೊಲಕೆಲ್ಲಾ** (ಸ್ಮರಣ ಸಂಚಿಕೆ)., ೧೯೬೭, ತರಿಕೆರೆ.
೨೨. **ವಿಜಯಶಿಲ್ಪಿ** (ಸ್ಮರಣ ಸಂಚಿಕೆ)., (೨೦೦೪), ಸಂತೇಬೆನ್ನೂರು.


**ಕ.ಇ. ಅಕಾದೆಮಿಯ ಪ್ರಥಮ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೮೭)**

*ಕರ್ನಾಟಕ ಚರಿತ್ರೆಯನ್ನು ಬರೆಯುವವರು ಶಾಸನ ತಾಮ್ರಪಟ, ಕಾಗದದ ದಾಖಲೆಗಳಂತೆಯೇ ಹಸ್ತಪ್ರತಿಗಳ ಲಿಪಿಕಾರರು ಹೇಳಿಕೊಂಡಿರುವ ಎಷ್ಟೋ ಅಮೂಲ್ಯ ವಿಷಯಗಳತ್ತ ಗಮನ ಕೊಡುವುದು ಅಗತ್ಯ.*

* * * * *

*ಇತಿಹಾಸ ಸಾಮಗ್ರಿ ಸಂಗ್ರಹಣೆ ನಡೆದಷ್ಟು ಅವನ್ನು ಬಳಸಿಕೊಂಡು ಮಾಡಬೇಕಾದ ವ್ಯಾಖ್ಯಾನ, ವಿಮರ್ಶೆ, ಪುನರ್‌ರಚನೆಗಳ ಕಾರ್ಯ ನಡೆದಿಲ್ಲ. ಪ್ರತ್ಯೇಕ ರಾಜಮನೆತನಗಳು, ಚಿಕ್ಕ ಚಿಕ್ಕ ರಾಜಮನೆತನಗಳು, ಸಾಂಸ್ಕೃತಿಕ ಕೇಂದ್ರಗಳು ಇವುಗಳ ವರ್ಣನಾತ್ಮಕ ಸಮೀಕ್ಷೆಗಳು ನಡೆದಿಲ್ಲ. ಕರ್ನಾಟಕದ ಚರಿತ್ರೆಯೇನೋ ಸಂಶೋಧಕರಿಗೆ ಸ್ವರ್ಗ; ಶ್ರಮ-ವ್ಯವಸ್ಥಿತ ಶ್ರಮಕ್ಕೆ ನಾವು ಸಿದ್ಧರಾಗುವುದೊಂದೇ ಇತಿಹಾಸ ಸಂಶೋಧಕರಾಗಲು ಏಕೈಕ ಮಾರ್ಗ.*

**ಡಾ. ಎಂ. ಚಿದಾನಂದಮೂರ್ತಿ**
*ಸಮ್ಮೇಳನಾಧ್ಯಕ್ಷರು*



**ಅಳಿದುಳಿದ ಶಾಸನ, ಕೈಫಿಯತ್ತುಗಳಲ್ಲಿ**
**ಪಡೆದ ರೂಪ ಇತಿಹಾಸ**
**ಪೂರ್ವಲಾನ್ವಯದ ಬೆಡಗಲ್ಲಿ ಬಾಳಿ**
**ಬಂದವರು ಸಂತೆಬೆನ್ನೂರು ನಾಯಕರು**
**ಹುಲಿಯೆದುರು ಕೊಟ್ಟ ಕಾಳಗಕೆ**
**ಪಡೆದ ಬಿರುದು ಬುತ್ತಿ**
**'ಶರ್ಜಾ' ಸುಲ್ತಾನರಿಟ್ಟ ಶಾಶ್ವತ**
**ಬಿರುದುದುತ್ತಿ**
**ಈ ನಾಯಕರು ಅಗ್ರಹಾರಕ್ಕಿಟ್ಟರಲ್ಲ**
**ಶಾಸನೋಕ್ತ ಗ್ರಾಮದುತ್ತಿ**

ಡಾ॥ ಎಸ್.ಜಿ. ಸಾಮಕ್*

# ಹೊನ್ನಾಳಿ ತಾಲ್ಲೂಕು ಕುಂದೂರಿನ ಅಪ್ರಕಟಿತ ತಾಮ್ರಶಾಸನ

*ಸಂತೆಬೆನ್ನೂರಿನ ನಾಯಕರ ಶಾಸನವೆನ್ನಬಹುದಾದ ಈ ಕುಂದೂರು ಶಾಸನದಲ್ಲಿ ನಾಯಕರ ವಂಶಾವಳಿಯ ಹೆಸರುಗಳಲ್ಲಿ ಬಸಪ್ಪನಾಯಕನಿಗೆ ಪರ್ಯಾಯ ನಾಮ ವೊಂದಿರುವಂತೆ ತೋರುತ್ತದೆ. ಕ್ರಿ.ಶ. ೧೫೭೭ರ ಈ ಶಾಸನದಲ್ಲಿ ಉಕ್ತ ಸ್ಥಳನಾಮಗಳನ್ನೂ ಇಂದಿಗೂ ಗುರುತಿಸ ಬಹುದಾಗಿದೆ. ಕಾಳಗದಲ್ಲಿ ಸೋತು ಬಂದವರಿಗೆ ಸಮಾಜವು ತೋರುವ ವರ್ತನೆಗೆ ಈ ಶಾಸನ ಒಂದು ಸಾಕ್ಷಿ: ಊರಿಗೆ ಅವಮಾನ, ಕುಂದುತರುವಂತೆ ನಡೆದು ಕೊಂಡನೆಂದು ಬಿರುದು ಬಾವಲಿ ಕಸಿದುಕೊಂಡು ಕುರಿಗ್ರಾಹಿ ಬದುಕು ಮಾಡಬೇಕೆಂದು ವಿಧಿಸಲಾಯಿತು. ದಂಡವನ್ನೂ ವಸೂಲಿ ಮಾಡಲಾಯಿತು. ವೀರಪಟ್ಟ ಕಳೆದುಕೊಂಡ ಹೇಡಿಗೆ ಒದಗುತಿದ್ದ ಸಾಮಾಜಿಕ ಅನಾದರವಿದು.*

ದಾವಣಗೆರೆ ಜಿಲ್ಲೆಯ, ಹೊನ್ನಾಳಿ ತಾಲ್ಲೂಕಿನ ಕುಂದೂರಿನ ಇತಿಹಾಸ ಪ್ರಸಿದ್ಧ ಆಂಜನೇಯ ದೇವಾಲಯದ ಆಡಳಿತ ಮಂಡಳಿಯ ಬಳಿಯಲ್ಲಿದ್ದ ತಾಮ್ರ ಶಾಸನವನ್ನು ನನ್ನ ಮಿತ್ರರಾದ ಶ್ರೀ ಕೆ. ಪರಮೇಶ್ವರ್ ಅವರು ೨೦೦೨ರಲ್ಲಿ ಅಧ್ಯಯನಕ್ಕೆ ನನಗೆ ನೀಡಿದ್ದರು. ಸದ್ಯದ ಸಂದರ್ಭದಲ್ಲಿ ಅದನ್ನು ಇಲ್ಲಿ ಪ್ರಸ್ತುತಪಡಿಸುತ್ತಿದ್ದೇನೆ.

ಶಾ.ಶಕ ೧೪೯೯ರ ಈ ಶಾಸನ ೩೨ಸೆ.ಮೀ. ಎತ್ತರ, ೨೨ಸೆ.ಮೀ. ಅಗಲವಿದ್ದು ಸುಮಾರು ೨೫೦ ಗ್ರಾಂ ತೂಕವಿದೆ. ಇದರ ದಪ್ಪ ೦.೫ ಮಿ.ಮೀ. ತಾಮ್ರಪಟದ ಎರಡು ಬದಿಯಲ್ಲಿ ಶಾಸನವನ್ನು ರಚಿಸಲಾಗಿದ್ದು ಒಟ್ಟು ೫೮ ಸಾಲುಗಳಿವೆ. ಮುಂಭಾಗದಲ್ಲಿ ೨೯ ಸಾಲುಗಳಿದ್ದು ಹಿಂಭಾಗದಲ್ಲಿ ಉಳಿದ ಸಾಲುಗಳನ್ನು ರಚಿಸಲಾಗಿದೆ. ಪಟದ ಅಂಚಿನ ಸುತ್ತಲೂ ಅರ್ಧ ಮಿ.ಮೀ. ಅಗಲದ ಗೆರೆಯನ್ನು ಹಾಕಲಾಗಿದ್ದು ಮೇಲ್ಭಾಗದಲ್ಲಿ ಸೂರ್ಯ ಹಾಗೂ ಚಂದ್ರರ ಚಿತ್ರವಿದೆ.

ಪಾಳೇಗಾರರ ವಂಶಾವಳಿಯೊಂದಿಗೆ ಈ ಶಾಸನ ಪ್ರಾರಂಭಿಸಲಾಗಿದ್ದು ಆದ ಪಾಠ ಈ ಕೆಳಗಿನಂತಿದೆ.

**ಹಲಗೆ ಮುಂಭಾಗ**

೧ ೦॥ ರಾಜೆ ಶ್ರೀ ಬಸವನಯಕನ ಕೊಮಾರ.

೨ ಲ ಹನುಮಾಪನಯಕನ ಕೊಮಾರ ಯಿಂಮಾಡಿ

೩ ಹನುಮಪನಯನಕ ಕೊಮಾರ ಕೆಂಗಪನಯಾಕನು ॥ ಚೆಂದ್ರಚಮರವೆ

೪ ನಮಾಸ್ತುಂಗ ಸಿರ ಸುಂಬಿ ತ್ರೈಲೋಕವೇ ನಾಗರಂಬವೆ ಮೂಲಸ್ತಂಬವೆ ಶ್ರೀ ಮಾ

೫ ೦ನು ಮಾತುರಪ ಸೋ..ಶ್ರೀ ಶಲಿವಹನ ಶಖಕ ವರುಸ ೧೪೯೯ ॥ ಸೋಬನು ಸಂ ॥

೬ ಚರದ ಪಲ್ಗುಣ ಬ ॥ ೧೨ ॥ ಆದಿತೆವರದಲು ತೆವಣಿಗಿ ಗೌಡ ಸಿದನಯಕ ಹೋಂ

೭ ನ ನಾಯಕನ ಕರಿಸಿ ನಿಲು ಬಂಕಪುರಕೆ ಹೋಗ ಬೆಕು ಯಂದು ಹೆಳಿದಲಿ ದೆವರು

೮ ಹೆಳಿದ ಮಾತಯರಡನೆ ಮಾಡಬೆಡಯೆದು ಅಪಣೆ ತೆಗೆದುಕೊಂಡು ಬಂದು ತ

೯ ಉತಂ ಮಾನ್ಯಿಕೆ ಯಳುನೂರು ಮಂದಿನು ಮಾಡಿಕೊಂಡು ಬಂಕಪುರಕೆ ಹೊದಾ

೧೦ ರು ॥ ಲಾಲಿ ಕಟಿದ ದಿನಯ ಯಪತು ದಿನ ಯಿರುತ್ತಿದಲಿ ರಾಣದುಲಕನು ಹಿಮಾ

೧೧ ತ ಬರುಕತನ ದಂಡು ಬಂದು ಮುತಿದ ಕರಣ ಯೇಳುದಿನ ತನಕ ಕೋಟಿವಳಗೆ

* ''ಸುಮಿತ್ರ'', ಪ್ರಿಯದರ್ಶಿನಿ ಬಡಾವಣೆ, ವಿನೋಬಾನಗರ, ಶಿವಮೊಗ್ಗ - ೫೭೭ ೨೦೪

೧೨ ಯಿದು ಯೇಳು ದಿನದ ಮೇಲೆ ಬಿಟುವ್ರೋಡಿ ಬಂದರ ಅನು ದಿಸುರಾ ॥ ಗ
೧೩ ಳು ಕೆಳೆ ಯಿತರನು ಹಿಡ ತರಸಿ ನೀಉ ನಮಾಗೆ ಕುಂದ ತಂದಿರಿಯೆಂದು ಅ
೧೪ ನರ ಬಿರದು ಬವಲ್ಲಿ ಕುದಂ (ವ) ಉಭಬಾನಪ್ರೂರತ ಮಯಿಂತಿಯಿಟ್ಟ
೧೫ ನು ಕಸುಕೊಂಡು ಅವರಿಗೆ ದನ ಮಾರಿ ಕುರಿ ಹೊಡನ ಹಸೂನಿ ಬದಕುನ
೧೬ (ಹಾ.)ಲಿಸಿದರು ಯಿದರ ಹೊರತು ದಂಡ ಗ ೯೦೦೦ ವರಹಾನು ತೆಕೊಂಡರು ಮಾರಿ
೧೭ ದೆ ಗ ೮೦೦ ॥ ಯೆಟ ತರಿನ ವೀರ ವರಹಾನು ಕೊಟರು ಗ ೫೦೦ ವರಹಕೆ ಗತಿ ಯಿ
೧೮ ಲದ ಕರಣ ಕಾಡಿ ಹಳಿಹೊ ಮಾರಡಿ ಬಸಪಗೆ ತಂಮಾನ್ವೀ. ಮಾನಿಯ ಅನು
೧೯ ನಹ ಆತಗೆ ಕೊಟೆಉಯೆಂದು ಹೇಳಿ ನಂಮಾಗೆ ಗ ೫೦೦ ವರಹಾನು ಕೊಡು ಯೆ
೨೦ ಂದು ಕೇಳಿದಲಿ ನನು ಕೊಟೆನು ಸರಿ ಯೀಗ ನಿಂಮಾ ಸಂಗಟಕೆ ಕೆಳುತಿರಿ ಯಿ ಮಾತು
೨೧ ನಳೆ ದಾಣೆರ ಕಿವಿಗೆ ಮುಟಿದರೆ ಅವರ ಮಾತು ಕೇಳಿ ಕೊಟೆಉ ಯಿಲದಿ
೨೨ ದರೆ ಕೊಡಲಿಕೆ ಬರದುಯೆಂದು ಹೇಳಿದರೆ ವಳಿತು ದಣೇರ ಮೊಕ್ತ ಹೇಳಿಸೆ
೨೩ ಉಯಂದು ಹೊಂ ಮಾರಡಿ ಬಸಪ್ಪನು ದಾಣೇರ ಬಳಿಗೆ ಕರಕೊಂಡು ಹೋಗಿದೆ
೨೪ ತರುವ. ಗುಯಿಲ ಸಿರಿಯತ್ರಕೊಟೆ ಉಯಿಂನು ಗ ೫೦೦ ವರಹಾಕೆ ಗ
೨೫ ಯಿಲಉ ಹೊಮಾರಡಿ ಬಸಪಗೆ ನಂಮಾನ್ವಾತಿನು ಯಿತಗೆ ಕ್ರಯಕೆ ನೂರು
೨೬ ತಯಿದೆ (ನೈ) ಯಿದಕೆ ದೆವರು ಅಪಣೆ ಪಲಿಸಿದರೆ ಉಳಿದ ಗಂಟು ನು
೨೭ ನಹಿ ಮಾಡೆಉಯೆಂದು ಕೆಳಿಕೊಂಡಲಿ ಹಾಗೆ ಆಗಲಿ ಯೆಂದು ಹೇ
೨೮ ಳಿದರು ಆಮಾತಿಗೆ ಬಸಪಗೆ ಹೇಳಿ ನಮಾಗೆ ಹಣನ ಕೊಡು
೨೯ ಯೆಂದು ಕೇಳಿದರು

**ಹಲಗೆ ಹಿಂಭಾಗ**

೩೦ ಬಾರದು ನಿಂಮ ಹೆಸರುಉ ಪತ್ರವಂನು ಬರಕೊಟರೆ ಯಿವಂದಕೆ ಬು
೩೨ ದಿವಂತರ ಸಾಕ್ಷಿನು ಹಾಕಿಸಿ ಬರಸಿ ಕೊಟರೆ ಕೊಟೆ ಉಯೆಂದು
೩೩ ಹೇಳಿದನು ಯಿಮಾತ ನುಮಾಗೆ ವಡಂಬಡಿಕೆ ಸರಿಯಂದು ತಮಾನು
೩೪ ನ್ನ ಮಾತದಿಂದ ಬರಸಿ ಕೊಟರು ನಂನು ಹೊಲದ ವಿವರವಂನು ಕ
೩೫ ರೆಸಿ ಬರಕೊಡಬೆಕು ಅವರು ಮಾಂನೆದ ಕೊ (ಳ/ಕ) ಹಳದ ಹೊಲ
೩೬ ದ ಜ್ವರಿ ಗ ೧೨ ಅದರ (ತು) ರು ೪ ಅಕಡಿ ೨೦೦ ಬಿಜವರಿ ಬತ ಉ
೩೭ ಖಂ। ೨ ನವಗೆ ಮಾಂನೆದ ಹೊಲ ಉರ ಮುಂದಲ ಹೊಲ ಅಕಡಿಗಳು
೩೮ ಮಾರುತಿ ಬೀಜ ರಾಗಿ ೮೨ ನು ತೆವಣಗೆ ವಳಗಿನ ಹಳಿನ (ಹಚ್ಚಿ) ದ
೩೯ (ಬಿ*)ರಿಜ್ವಗ ೫೦೦ ಯಿಂತಿ ಯಿಟನು ಗ್ರಾಮದವುರು ಪತ್ರವಂನು
೪೦ ಬರಕೊಟ ನಮುಗು ಮುಂದೆ ಕುಟುಂಬಕೆ ಆಂನವಿಲದನ ಸತೆಉ ದನ
೪೧ ನಿನು ಕೊಡಬೆಕು ಯಂದು ಕೇಳಿದಲಿ ಯೆಟು ಕಂಡುಗ ಬೆಕು ಹೆಳಿರಿ
೪೨ ಅಂದರೆ ಖ ೭ ನು ಯೆನಕೊಂಡರು ಅಕ್ಷರದಲು ಯೇಳು ಕಂಡುಗನ
೪೩ ಹಿ ಯಿಂತಿವರನನುಮತದಿಂದ ಬರದ (ತ/ಕ) ಡಿಗರ ಭಿಂದಪನ ಮೊ
೪೪ ಹನ ಬರಹಾಉನಲು ಕುದರಿ ಗೌ॥ ಅದಪನ ಕೊಲ ಕೆಂಡ ದೆವರು
೪೫ ಸಾಕ್ಷೆ ಕಗ್ಗತೂರ ಬಸಪ ಗೌಉಡನ ಕೊಲ ಪಲಗೊಂಡೆಲೂರು ಸಾ
೪೬ ಕ್ಷಿ ಹರಹಳಿ ಗೌ॥ ಸಿವಪನ ಕೊಲ ಸೆವಂತಲೂರು ಸಾಕ್ಷಿ ತೆವಣೆಗೆ
೪೭ ಆಯಗರಾ ವಿನರ ಬಡಿಗೆರ ಲಿಂಗಂಣನ ಸಾಕ್ಷಿ ಕಂಮಾರ ಉಜಪನ
೪೮ ಸಾಕ್ಷಿ ವಿರಭದ್ರ ದೆವರ ಪುಜರಿ ವಿರಂಣನ ಸಾಕ್ಷಿ ಅಗಸರ ಹು
೪೯ ಚ ವಿರನ ಸಾಕ್ಷಿ ಕಯಿಕದ ನೂಲಯನ ಸಾಕ್ಷಿ ತಳವರ ಹನಮಾ
೫೦ ಂತನ ಸಾಕ್ಷಿ ಯಿ ಗ್ರಾಮವಂನು ಭೂಮಿ ಚಿಂದ್ರಮ ಉಳನಕ ಅನು

೫೧ ಬವಿಸಬೆಕು ಯಿದಕೆ ನಂಮವ ಉನ ಅರಸಿ ಇಲಿ ಯಂತ್ರದಲು
೫೨ ತಪಿದರೆ ದೆವರ ಪಾದಕೆ ತಪಿದಹಾಗೆ ॥ ಬಸವಪಟಣದ ಗೌ ॥ ವಿರಂ
೫೩ ಣನ ಕೊಲ ನೆಗಲೂರು ಸಾಕ್ಷಿ ಮಲೆಬೆಂನೂರ ಗೌಡ ಬರಮಂಣನ ಕೊ
೫೪ ಲ ಗೌಉಡ ಲೂರ ಸಾಕ್ಷಿ ಕುಂದುರ ಕೂಲಂಬಿ ಗೌ॥ ಉಜಪನ ಕುಲ ಬೆ
೫೫ ಳಲೂರ ಸಾಕ್ಷಿ ಕತ್ತಲಗೆರಿ ಗಉಡ ಸಿವಂಣನ ಕೊಲ ಅಕೆಲೊಳ
೫೬ ಸಾಕ್ಷಿ ಸಲುರ ಗೌ॥ ಸಿವಂಣನ ಕೊಲ ಅಕೆಲೂರನ ಸಾಕ್ಷಿ ಸಂತೆಬೆಂ
೫೭ ನೂರ ಸಿದಮನ ಕೊಲ ಚೆಲೆವನೊರ ಸಾಕ್ಷಿ ಯೆಲುಉರ ಹೇಳಸಿ
೫೮ ಕರಭನ ಕೊಲದ ಮಾಂದನಂಗೌಡನಹಳಿ ಗೌ॥ ಬಸಪನ ಕೊಲ
೫೯ ಸುಪತೆಗೆ ಲೂರ ಸಾಕ್ಷಿ.

**ಶಾಸನದ ಸಾರಾಂಶ ಇಂತಿದೆ :**

ಕೆಂಗಪ್ಪನಾಯಕನ (ಬಸವಪ್ಪ ನಾಯಕ, ಹನುಮಪ್ಪ ನಾಯಕ, ಯಿಮ್ಮಡಿ ಹನುಮಪ್ಪ ನಾಯಕ) ಆಳ್ವಿಕೆಯ ಕಾಲದಲ್ಲಿ ಶಾಲಿವಾಹನ ಶಕ ವರುಷ ೧೪೯೯ರ (ಕ್ರಿ.ಶ. ೧೫೭೭) ಫಾಲ್ಗುಣ ಮಾಸ, ಸುಭಾನು ಸಂವತ್ಸರದ ಭಾನುವಾರ (ಆದಿತ್ಯವಾರ) ತ್ಯಾವಣಗಿಯ ಸಿದ್ದನಾಯಕನು, ಹೊನ್ನ ನಾಯಕನನ್ನು ಕರೆಸಿ ನೀವು ಬಂಕಾಪುರಕ್ಕೆ ಕೋಟೆಯನ್ನು ರಕ್ಷಿಸಬೇಕೆಂದು ಹೇಳಿದಾಗ, ಹೊನ್ನನಾಯಕನು ಅವನ ಅಪ್ಪಣೆ ಪಡೆದು ಉತ್ತಮರಾದ ೭೦೦ ಜನ ಸೈನಿಕರನ್ನು ಕೂಡಿಕೊಂಡು ಬಂಕಾಪುರಕ್ಕೆ ಹೋಗಿ ೭೦ ದಿನ ಕಳೆಯುತ್ತಿರುವಾಗ ರಣದುಲ್ಲಾ ಖಾನನ ಸೈನ್ಯ ಕೋಟೆ ಮುತ್ತಿಗೆ ಹಾಕಿತು. ೭ ದಿನ ಕೋಟೆಯೊಳಗೆ ಇದ್ದ ಹೊನ್ನನಾಯಕನು ಸೋತು ಓಡಿಬರುತ್ತಾನೆ. ಇದರಿಂದ ಅವಮಾನಿತನಾದ ಸಿದ್ದ ನಾಯಕನು ಹೊನ್ನನಾಯಕನಿಗೆ ನೀನು ನನಗೆ ಅವಮಾನ ಮಾಡಿದ್ದೀಯೆಂದು ಅವನ ಬಿರುದು ಬಾವಲಿಗಳನ್ನು ಹಿಂದಕ್ಕೆ ಪಡೆದು ೯೦೦೦ ವರಹ ದಂಡ ವಿಧಿಸುತ್ತಾನೆ. ತನ್ನಲ್ಲಿದ್ದ ದನ, ಕುರಿ ಮುಂತಾದ ಪ್ರಾಣಿಗಳನ್ನು ಮಾರಿದರೂ ೫೦೦ ವರಹ ಸಿಗದಿದ್ದಾಗ ಉಳಿದ ಹಣದ ವ್ಯವಸ್ಥೆಗೆ ಮಾರಡಿಬಸಪ್ಪನ ಬಳಿ ಹೋಗಿ ಸಹಾಯ ಕೇಳಿದಾಗ ಆತ ಹಲವು ಹತ್ತೂರ ಪ್ರಮುಖರ (ಬುದ್ದಿವಂತರ) ಸಾಕ್ಷಿಯೊಂದಿಗೆ ಪತ್ರವನ್ನು ಬರೆದುಕೊಬೇಕೆಂದು ಕಗ್ಗತ್ತೂರ ಬಸಪ್ಪಗೌಡ, ಹರಹಳ್ಳಿ ಗೌಡ ಸಿವಪ್ಪ, ತ್ಯವಣಗಿ ಬಡಿಗೇರ ಲಿಂಗಣ್ಣ, ವೀರಭದ್ರ ದೇವರ ಪೂಜಾರಿ ವೀರಣ್ಣ, ಅಗಸರ ಹುಚ್ಚವೀರ, ಕಾಯಕದ ನೂಲಯ್ಯ, ತಳವಾರ ಹನಮಂತ, ಬಸವಪಟ್ಟಣದ ಗೌಡ ವೀರಣ್ಣ, ಮಲೆಬೆನ್ನೂರಿನ ಬರಮಣ್ಣ ಗೌಡ, ಕುಂದೂರು ಕೂಲಂಬಿಯ ಗೌಡ ಉಜ್ಜಪ್ಪ, ಕತ್ತಲಗೇರೆ ಗೌಡ ಸಿವಣ್ಣ, ಸಂತೆಬೆನ್ನೂರಿನ ಸಿದ್ದಮ್ಮ, ಮಂದಗೌಡನಹಳ್ಳಿಯ ಬಸಪ್ಪ ಮುಂತಾದವರನ್ನು ಸಾಕ್ಷಿಯನ್ನಾಗಿಸಿಕೊಂಡು ಹೊನ್ನನಾಯಕ ತನಗೆ ಬೇಕಾದ ಸಹಾಯ ಪಡೆದು ತನ್ನ ದಣಿಯ ಋಣ ತೀರಿಸಿದ ವಿಷಯದ ವಿವರ ಈ ಶಾಸನದಲ್ಲಿದೆ.

ಪ್ರಸ್ತುತ ಶಾಸನ ಹಲವಾರು ನ್ಯೂನತೆಗಳನ್ನು ಹೊಂದಿದೆ.

* ಪ್ರಾರಂಭದಲ್ಲಿ ಉಲ್ಲೇಖಿತವಾಗಿರುವ ವಂಶಾವಳಿ ಸಂತೆಬೆನ್ನೂರಿನ ನಾಯಕರ ವಂಶಾವಳಿಯನ್ನು ಹೋಲುತ್ತಿದೆ. ಆದ್ದರಿಂದ ಈ ಶಾಸನವನ್ನು ಸಂತೆಬೆನ್ನೂರಿನ ನಾಯಕರ ಕುಂದೂರಿನ ತಾಮ್ರ ಶಾಸನವೆಂದು ಕರೆಯಬಹುದಾಗಿದೆ.

* ಈವರೆಗೆ ೫೦ಕ್ಕೂ ಹೆಚ್ಚು ಶಾಸನಗಳು ಸಂತೆಬೆನ್ನೂರಿನ ನಾಯಕರ ಇತಿಹಾಸ ರಚನೆಗೆ ಲಭ್ಯವಿದ್ದು ಅವರ ತಾಮ್ರಶಾಸನಗಳು, ಶಿಲಾಶಾಸನಗಳಿಗಿಂತ ಹೆಚ್ಚು ಸ್ಪಷ್ಟವಾಗಿ, ವಿವರವಾಗಿ ಬರೆಯಲ್ಪಟ್ಟಿವೆ. ಆದರೆ ಈ ಶಾಸನ ತುಂಬಾ ಗ್ರಾಮ್ಯಭಾಷೆಯಲ್ಲಿ ಬರೆಯಲ್ಪಟ್ಟಿರುವುದು ವಿಶೇಷ. ಇದರಲ್ಲಿ ವಂಶಾವಳಿ ನೀಡಿದ್ದರೂ ಕೂಡ ಉಳಿದ ಅವರ ತಾಮ್ರಶಾಸನಗಳಲ್ಲಿರುವಂತೆ ಲಾಂಛನವಾಗಲೀ, "ಶ್ರೀರಾಮ" ಎಂಬ ಅಂಕಿತವಾಗಲೀ ಇಲ್ಲ.

* ಈ ಶಾಸನ ಬರೆಸಿರುವ ಕಾಲ ಕೆಂಗಪ್ಪ ನಾಯಕನ ಆಳ್ವಿಕೆಯ ಸಮಯ. ಈತನನ್ನು ಇಮ್ಮಡಿಹನುಮಪ್ಪ ನಾಯಕನ ಮಗ, ಹನುಮಪ್ಪ ನಾಯಕನ ಮೊಮ್ಮಗ ಹಾಗೂ ಬಸವಪ್ಪ ನಾಯಕನ ಮರಿಮಗನೆಂದು ಗುರುತಿಸಲಾಗಿದೆ. ಈವರೆಗೆ ಪ್ರಕಟಗೊಂಡಿರುವ ಸಂತೆಬೆನ್ನೂರಿನ ನಾಯಕರ ವಂಶಾವಳಿಯಲ್ಲಿ ಬಸಪ್ಪನಾಯಕನ ಉಲ್ಲೇಖವಿಲ್ಲ. ಈತ ಹಾಗೂ ಅವನ ಮಗ ಹನುಮಪ್ಪನಾಯಕ ಕೆಂಗಪ್ಪ ನಾಯಕನ ನಂತರ ಆಳ್ವಿಕೆ ನಡೆಸಿರಬೇಕು ಅಥವಾ ಕೆಂಗಪ್ಪ ನಾಯಕನ ಸಹೋದರ ಬಿಲ್ಲಪ್ಪ ನಾಯಕನೇ ಬಸ್ಸಪನಾಯಕನಾಗಿರಬೇಕು.

* ಸಂತೆಬೆನ್ನೂರಿನ ನಾಯಕರ ಇತಿಹಾಸದಲ್ಲಿ ಹಿರೇ ಕೆಂಗಾ ಹನುಮಪ್ಪ ನಾಯಕನ (೧೫೮೧-೧೬೩೮) ಕಾಲದಲ್ಲಿ ರಣದುಲ್ಲಾಖಾನನು ಬಾರಿದಂಡಿನೊಡನೆ ಬಂದು ಸಂತೆಬೆನ್ನೂರು, ಬಸವಾ ಪಟ್ಟಣ ಮುಂತಾದ ಕೋಟೆಗಳನ್ನು ಗೆದ್ದ ವಿಷಯ ತಿಳಿದುಬರುತ್ತದೆ. ಕುಂದೂರು ಶಾಸನದ ಕೆಂಗಪ್ಪನಾಯಕ, ಹಿರೇ ಕೆಂಗಾ ಹನುಮಪ್ಪ ನಾಯಕನಿಗಿಂತ ಮುಂಚೆ ಆಳ್ವಿಕೆ ನಡೆಸಿರಬೇಕು ಅಥವಾ ಇಬ್ಬರೂ ಒಬ್ಬ ವ್ಯಕ್ತಿಯೇ ಆಗಿರಬೇಕು. ಮತ್ತು ರಣದುಲ್ಲಾ ಖಾನನು ತನ್ನ ದಂಡಯಾತ್ರೆಯ ಪ್ರಾರಂಭಿಕ ಹಂತದಲ್ಲಿದ್ದಿರಬೇಕು.

ಕುಂದೂರಿನ ಶಾಸನದಲ್ಲಿ ಉಲ್ಲೇಖಿತವಾಗಿರುವ ಹಲವಾರು ಸ್ಥಳನಾಮಗಳು ಇಂದಿಗೂ ಅತ್ಯಲ್ಪ ಬದಲಾವಣೆ

ಗಳೊಂದಿಗೆ ಮುಂದುವರೆದುಕೊಂಡು ಬಂದಿವೆ ಹಾಗೂ ಅವೆಲ್ಲವನ್ನು ಇಂದಿಗೂ ಗುರುತಿಸಬಹುದು. ಉದಾಹರಣೆಗೆ: ತೆವಣಗಿ= ತ್ಯಾವಣಗಿ, ಹೊಂಮಾರಡಿ=ಮರಡಿ, ಕಗ್ಗತೂರ= ಕಗ್ಗತೂರು, ಬಸವಪಟಣ=ಬಸವಾಪಟ್ಟಣ, ಕೋಲನಘಲೂರು= ಕೊಳ್ಳಗನ ಘಟ್ಟ, ಮಲೆಬೆಂನೂರ=ಮಲೆಬೆನ್ನೂರು, ಕುಂದರ= ಕುಂದೂರು, ಬೆಳಲೂರ=ಬೆಳಲಗೆರೆ, ಕತಲಗೇರಿ=ಕತ್ತಲಗೆರೆ, ಸಂತೆಬೆಂನೂರ= ಸಂತೆಬೆನ್ನೂರು, ಚಲೆವನೂರು=ಬೆಳೆವನೂರು ಮುಂತಾದವು. ಇಲ್ಲಿ ಬಸವಾಪಟ್ಟಣದ ಹೆಸರು ಮೊಟ್ಟ ಮೊದಲ ಬಾರಿಗೆ ಉಲ್ಲೇಖಿತವಾಗಿರುವುದು ವಿಶೇಷ.

* ಹಿಂದೆ ಯುದ್ಧಗಳಲ್ಲಿ ಗೆದ್ದು ಬಂದವನಿಗೆ ಬಿರುದು, ಬಾವಲಿ, ಉಂಬಳಿಗಳನ್ನು ನೀಡಿ ಗೌರವಿಸುತ್ತಿದ್ದದ್ದು ಸರ್ವೇ ಸಾಮಾನ್ಯ. ಆದರೆ ಸೋತು ಬಂದವನನ್ನು ಯಾವ ರೀತಿ ಸಮಾಜದಲ್ಲಿ ಕಂಡು ನಡೆಸಿಕೊಳ್ಳುತ್ತಿದ್ದರು ಎಂಬುದಕ್ಕೆ ಈ ಶಾಸನ ಉತ್ತಮ ಉದಾಹರಣೆಯಾಗಿದೆ.

**ಸಂತೆ ಬೆನ್ನೂರಿನ ನಾಯಕರ ವಂಶಾವಳಿ**

| ಸಂತೆಬೆನ್ನೂರು ನಾಯಕರು | ಕುಂದೂರು ಶಾಸನ |
|---|---|
| ಇಮ್ಮಡಿ ಹನುಮಪ್ಪ ನಾಯಕ (೧೫೬೬-೧೫೭೦) | ಬಸಪ ನಾಯಕ |
| ↓ | ↓ |
| ನಿಚ್ಚ ಮದುವಣಿಗ ಹನುಮಪ್ಪ ನಾಯಕ (೧೫೭೦-೧೫೮೦) | ಹನುಮಪ ನಾಯಕ |
| ↓ | ↓ |
| | ಇಮ್ಮಡಿ ಹನುಮಪ |
| ಕೆಂಗಾಹನುಮಪ ನಾಯಕ (೧೫೮೧-೧೬೩೮) | ↓ |
| ↓ | ಕೆಂಗಪ ನಾಯಕ (೧೫೭೭)* |

(**ಕೃತಜ್ಞತೆಗಳು** : ಈ ಶಾಸನವನ್ನು ಸಂತೆಬೆನ್ನೂರು ಸುಮತೀಂದ್ರ ನಾಡಿಗ್ ಅವರು ಪರಾಂಬರಿಸಿ ಸೂಕ್ತ ಸಲಹೆ ನೀಡಿದ್ದಾರೆ ಹಾಗೂ ನನ್ನ ಮಿತ್ರ ಡಾ|| ಜಗದೀಶ್ ತಪ್ಪು ಒಪ್ಪುಗಳನ್ನು ತಿದ್ದಿದ್ದಾರೆ. ಅವರಿಗೆ ನನ್ನ ಧನ್ಯವಾದಗಳು.)

(**ಗ್ರಂಥ ಋಣ : ಮಲೆ ಕರ್ನಾಟಕದ ಅರಸು ಮನೆತನಗಳು, ಸಂತೆಬೆನ್ನೂರು ನಾಯಕರು.**)





**ಕ.ಇತಿಹಾಸ ಅಕಾದೆಮಿಯ ೧೧ನೆಯ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೭)**

*ಮಯೂರನಿಂದ ಕದಂಬರಾಜ್ಯ ಸ್ಥಾಪನೆಯಾದದ್ದೂ ಮೌಲ್ಯಾಧಾರಿತವಾಗಿತ್ತೆಂದು ಹೇಳಬಹುದು. ಪಲ್ಲವರ ಗರ್ವದಿಂದ ಅವಮಾನಿತನಾದ ತಾಳಗುಂದದ ಈ ಶರ್ಮ ಖಡ್ಗಧಾರಿ ಆದ. ಸ್ವಾಭಿಮಾನದಿಂದ ಹೋರಾಡಿದ. ಕರ್ನಾಟಕದ ಪ್ರಥಮ ಸ್ವತಂತ್ರ ರಾಜ್ಯವನ್ನು ಕಟ್ಟಿದ. ಪ್ರವೃತ್ತಿಗೆ ಅನುಸಾರವಾದ ವೃತ್ತಿ ಎಂದು ಬ್ರಾಹ್ಮಣ್ಯವನ್ನು ತ್ಯಜಿಸಿ ರಾಜವರ್ಮನಾದ.*

**ಕೆ. ಅಭಿಶಂಕರ್**
ಸಮ್ಮೇಳನಾಧ್ಯಕ್ಷರು





ತುರುಗೋಳೊಳ್ ಪೆಣ್ಬುಯಲೊಳ್ ಎಚಿಚೆಸದೊಳ್
ನೆಂಡನೆಡರೊಳ್ ಊರಳಿವಿನೊಳಂ
ತೆಱೆಸಂದು ಗಂಡುತನಮೆನೆ
ನೆರಪದಮಂ ಗಂಡನಲ್ಲನೆಂತುಂ ಷಂಡಂ

ರನ್ನನ 'ಗದಾಯುದ್ಧ'



ಜಿ. ಕೆ. ದೇವರಾಜಸ್ವಾಮಿ*

# ಮೈಸೂರು ರಾಜಒಡೆಯರ ಕಾಲದ ಮೊದಲ ಶಾಸನ

ಮೈಸೂರು ರಾಜ ಒಡೆಯರಿಗೆ ಸಂಬಂಧಿಸಿದಂತೆ ಈವರೆಗೆ ಎರಡು ಅತೀ ಚಿಕ್ಕ ಶಾಸನಗಳಿದ್ದು ಈಗ ನನಗೆ ದೊರೆತಿರುವುದು ಮೂರನೆಯ ಹಾಗೂ ದೊಡ್ಡ ಶಾಸನ ಎನ್ನಬಹುದು. ಈ ತಾಮ್ರಪಟವು ಮೂರು ಪಟಗಳನ್ನು ಹೊಂದಿದ್ದು ೧೩.೫ ಇಂಚು ಉದ್ದ ಹಾಗೂ ೮.೫ ಇಂಚು ಅಗಲ ಉಳ್ಳದ್ದಾಗಿದೆ. ಇದು ಒಟ್ಟು ೨ ಕೆ.ಜಿ. ೪೫೦ ಗ್ರಾಂ ತೂಕವಿದೆ.

ಮೊದಲ ಪಟದ ಹಿಂಭಾಗ ಎರಡನೇ ಪಟದ ಎರಡೂ ಕಡೆ ಹಾಗೂ ಮೂರನೆ ಪಟದ ಮುಂಭಾಗ ಶಾಸನವಿದ್ದು ಒಟ್ಟು ೮೨ ಸಾಲುಗಳನ್ನು ಹೊಂದಿದ ದಾನಶಾಸನವಾಗಿದೆ. ಈ ಶಾಸನದಲ್ಲಿ ಪ್ರಾರ್ಥನೆ, ರಾಜವಂಶ ಬಿರುದಾವಳಿ, ದಾನದ ವಿವರ, ಕೊನೆಯಲ್ಲಿ ಶಾಪಾಶಯ ನಂತರ ರಾಜರ ಸ್ವಹಸ್ತಾಕ್ಷರವೊಪ್ಪವಿದೆ. ಶಾಸನೋಕ್ತ ಕಾಲವಾದ ಶಾ.ಶ. ೧೫೩೭, ಆನಂದ ಸಂ॥ರ. ವೈಶಾಖ ಶುದ್ಧ ೨ ಎಂಬುದು ಕ್ರಿ.ಶ. ದಿನಾಂಕ ೧.೪.೧೬೧೪ಕ್ಕೆ ಸರಿ ಹೊಂದುತ್ತದೆ. ಇದು ಮೈಸೂರು ಸಿಂಹಾಸನಾರೂಢ ರಾಜ ಒಡೆಯರ (ಕ್ರಿ.ಶ. ೧೫೭೮-೧೬೧೭) ಕಾಲದ ಶಾಸನವಾಗಿದೆ.

ಶಾಸನದಲ್ಲಿ ರಾಜಒಡೆಯರ ವಿಶಿಷ್ಟ ಬಿರುದುಗಳನ್ನು ಮೊದಲಬಾರಿಗೆ ಹೇಳಿದೆ ಹಾಗು ಶ್ರೀರಂಗಪಟ್ಟಣದಲ್ಲಿ ಸಿಂಹಾಸನಸ್ಥರಾದ ವಿಷಯ ತಿಳಿಸಿದೆ. ಬ್ರಾಹ್ಮಣರಿಗೆ ಸೀಳನೆರೆ ಗ್ರಾಮವನ್ನೂ ಕೊಟ್ಟಾಗ ಇದ್ದ ಗಡಿ ಊರುಗಳು ಹಾಗು ದಾನಪಡೆದ ಕುಟುಂಬಗಳ ವಂಶಿಕರು ಇಂದಿಗೂ ಇದ್ದಾರೆ. ವಿಶೇಷವೆಂದರೆ ಮೈಸೂರು ರಾಜವಂಶದ ಕ್ರಿ.ಶ. ೧೬೧೪ರ ಮೊದಲ ಶಾಸನವಿದಾಗಿದೆ. ದಾನ ಪಡೆದ ಈ ಕುಟುಂಬದವರಲ್ಲಿ ಹಲವಾರು ಕವಿ ಸಾಹಿತಿಗಳಿದ್ದರೆನ್ನಲಾಗಿದೆ.

ಈ ಶಾಸನದ ಮುಖ್ಯಾಂಶಗಳೇನೆಂದರೆ ಶಾಸನದಲ್ಲಿ ರಾಜ ಒಡೆಯರ ಬಿರುದಾದ 'ಶ್ರೀಮದ್ರಾಜಾಧಿರಾಜ', 'ರಾಜಾಪರಮೇಶ್ವರ', 'ಬಿರುದಂತೆಂಬರಗಂಡ' ಎಂಬ ಬಿರುದುಗಳು ಶಾಸನದಲ್ಲಿ ಮೊದಲ ಬಾರಿಗೆ ಹೇಳಲ್ಪಟ್ಟಿವೆ. ಶ್ರೀರಾಜ ಒಡೆಯರು ಶ್ರೀರಂಗಪಟ್ಟಣದಲ್ಲಿ 'ಪೃಥ್ವೀ ಸಾಂಬ್ರಾಜ್ಯಂಗಯಿಉತ' ಅಂದರೆ ಸಿಂಹಾಸನಸ್ಥರಾದ ವಿಷಯ ಈ ಶಾಸನದಿಂದ ತಿಳಿಯುತ್ತದೆ. ಶಾಸನನೋಕ್ತ ದಿನಾಂಕ ೧.೪.೧೬೧೪ ರಂದು ಮೇಲುಕೋಟೆಯ ಸ್ವಾಮಿಯ ಸನ್ನಿಧಿಯಲ್ಲಿ ವಡೆಯರು ಹದಿನಾಲ್ಕು ಜನ ಬ್ರಾಹ್ಮಣರಿಗೆ ಸೀಳನೆರೆ ಗ್ರಾಮವನ್ನು ಸ್ವತಃ ಸಹಿರಂಣ್ಯೋದಕವಾಗಿ ಧಾರೆಯ ನೆರೆದು ಕೊಟ್ಟಿದ್ದಾರೆ.

ಹದಿನಾಲ್ಕು ಜನರ ಹೆಸರು, ಸೀಳನೆರೆ ಗ್ರಾಮಕ್ಕೆ ಗಡಿ ವಿವರಗಳಿದ್ದ ಹೆಸರಿನ ಊರುಗಳು ಇಂದಿಗೂ ಇವೆ. ಹಾಗೂ ದಾನ ಪಡೆದ ಕುಟುಂಬಗಳೂ ಅದೇ ಹೆಸರಿನಲ್ಲಿ ಇಂದಿಗೂ ಇವೆ. ರಾಜ ಒಡೆಯರ ಕಾಲದ ಎರಡು ಶಾಸನಗಳು ಈವರೆಗೆ ಸಿಕ್ಕಿವೆ. ಒಂದು ರಾಜವಡೆಯರು ಮೇಲುಕೋಟೆ ಚಲುವ ನಾರಾಯಣಸ್ವಾಮಿಗೆ ಕ್ರಿ.ಶ. ೧೬೧೪ (ದಿನಾಂಕ ೧.೭.೧೬೧೪) ರಲ್ಲಿ ರತ್ನಖಚಿತ ರಾಜಮುಡಿ ಅರ್ಪಿಸಿರುವ ಸಂಬಂಧದ್ದು. ಮತ್ತೊಂದು ಕ್ರಿ.ಶ. ೧೬೧೭ (ದಿನಾಂಕ ೫.೨.೧೬೧೭) ಕರಿಘಟ್ಟ ಶ್ರೀನಿವಾಸ ದೇವಾಲಯದ ಭಿತ್ತಿಯ ಶಾಸನವಾಗಿದೆ. ಪ್ರಸ್ತುತ ಶಾಸನವು ರಾಜವಡೆಯರ ಕಾಲದ ದೃಷ್ಟಿಯಿಂದ ಮೊದಲನೆಯ ಶಾಸನವಾಗಿದೆ (ದಿನಾಂಕ

* ೩೯೩೬, ೨ನೇ ಅಡ್ಡರಸ್ತೆ, ೨ನೇ ಹಂತ, 'ಬಿ' ಬ್ಲಾಕ್, ಗಾಯತ್ರಿನಗರ, ಬೆಂಗಳೂರು - ೫೬೦ ೦೨೧.

೧.೪.೧೬೧೪) ಹಾಗೂ ಮೈಸೂರು ರಾಜವಂಶದ ಮೊದಲ ಶಾಸನವೆನ್ನಬಹುದು. ಉಳಿದೆರಡು ಶಾಸನಗಳು ದಿನಾಂಕ ೧.೭.೧೬೧೪ ಮತ್ತು ೫.೨.೧೬೧೭ರ ಕಾಲದ್ದಾಗಿವೆ. ಇನ್ನೊಂದು ಮುಖ್ಯವಾದ ವಿಷಯ : ಉಳಿದೆರಡರಲ್ಲಿ ಮೈಸೂರು 'ರಾಜುವ ಸೇವೆ', 'ರಾಜವಡೇರ ಸೇವೆ' ಎಂದು ವಾಕ್ಯದಲ್ಲಿದೆ. ಈ ಶಾಸನದಲ್ಲಿ ರಾಜ ವಡೆಯರ ಸ್ವಹಸ್ತಾಕ್ಷರ ವೊಪ್ಪ 'ಶ್ರೀರಾಜ' ಎಂದಿದೆ.

ಶಾಸನೋಕ್ತ ಸ್ಥಳನಾಮಗಳು ಹಾಗೂ ದಾನ ಪಡೆದ ಹದಿನಾಲ್ಕು ಕುಟುಂಬದ ಹೆಸರುಗಳು ಈಗಲೂ ಹಾಗೆಯೇ ಮುಂದುವರೆದುಕೊಂಡು ಬಂದಿವೆ. (ಅಲ್ಲಿ ಬರುವ ಕೊಂಗನಹಳಿ, ಚೆಂನಂ, ತಿರುವಾಯಮುಳಿ ಈ ಹೆಸರು ತಮಿಳು ನಾಡಿನಿಂದ ಬಂದವರ ಹೆಸರೆಂದು ಊಹಿಸಬಹುದು.) ಹಾಗೂ ಶಾಸನೋಕ್ತ ಸೀಳನೆರೆ ಗ್ರಾಮ (ನಾರಾಯಣಪುರ/ಸಮುದ್ರ) ಮತ್ತು ಗಡಿಯಾದ ಗಡುಗನಹಳಿ, ಚಿಕ್ಕನಹಳಿ, ಚಟ್ಟಿನಹಳಿ, ಕೊಂಗನಹಳಿ ಇವು ಈಗಲೂ ಅದೇ ಹೆಸರಿನಲ್ಲಿ ಮುಂದುವರಿದಿವೆ.

ಈ ತಾಮ್ರಪಟವನ್ನು ನನ್ನ ಮಿತ್ರರಾದ ಎಂ. ಡಿ. ಪಾರ್ಥ ಸಾರಥಿಯವರ ಮಗ ರಾಮಾನುಜಮ್‌ರವರು ಇತರೆ ಹಲವಾರು ಹಳೇ ಕಾಲದ ವಸ್ತುಗಳೊಂದಿಗೆ ನನಗೆ ಕೊಟ್ಟಿದ್ದಾರೆ. ಇವರು ದೇವಶಿಖಾಮಣಿ ಅಳಸಿಂಗಾಚಾರ್ಯರ ಕುಟುಂಬದವರಾಗಿದ್ದಾರೆ.

**ಶ್ರೀರಂಗ ಮಹಾತ್ಮೆ ಹಾಗೂ ಶಾಸನೋಕ್ತ ಸಿಂಗರೈಯಂಗಾರ್**

ರಾಜ ಒಡೆಯರ ಕಾಲದಲ್ಲಿ ಕ್ರಿ.ಶ. ಸುಮಾರು ೧೬೧೦ ರಲ್ಲಿ ಶ್ರೀರಂಗ ಮಹಾತ್ಮೆಯನ್ನು ಬರೆಸಿದರು ಎಂಬ ವಿಷಯ ಕರ್ನಾಟಕ ಗ್ಯಾಜೆಟಿಯರ್ ಹಾಗೂ ಇತರೆ ದಾಖಲೆಗಳಿಂದ ತಿಳಿಯುತ್ತದೆ. ಈ ಶಾಸನದಲ್ಲಿ ಒಡೆಯರಿಂದ ದಾನ ಪಡೆದ ಎರಡನೇ ಸ್ವಾಂಮ್ಯ ದೊಡ್ಡ ಅಂಣಾಜೈಯನವರ ಮಕ್ಕಳು ಸಿಂಗರೈಯಂಗಾರ್ ಎಂದಿದೆ. ಈ ಕುಟುಂಬದವರು ಮೇಲುಕೋಟೆ ಯಲ್ಲಿ ಇದ್ದು ಅವರನ್ನು ಪೆರಿ ಅಂಣಾಜೈಯನವರ ಕುಟುಂಬದ ವರೆಂದು ಈಗಲೂ ಗುರ್ತಿಸುತ್ತಾರೆ.

ಈ ಕುಟುಂಬದಲ್ಲೇ ಮೊದಲು ಈ ಶಾಸನವಿದ್ದುದ್ದಾಗಿದೆ. ಈ ಕುಟುಂಬ ಹಾಗೂ ದೇವಶಿಖಾಮಣಿ ಅಳಸಿಂಗಾಚಾರ್ಯ ಕುಟುಂಬದವರು ದಾಯಾದಿಗಳು. ಈ ಕುಟುಂಬದಲ್ಲಿ ಹಲವಾರು ಕವಿಗಳಿದ್ದು ಗ್ರಂಥ ರಚನೆಯನ್ನು ಮಾಡಿದ ಬಗ್ಗೆ ಈಗಲೂ ಸ್ಮರಿಸುತ್ತಾರೆ. ತಮ್ಮವರೇ ಆದ ಸಿಂಗರೈಯಂಗಾರರು ಶ್ರೀರಂಗ ಮಹಾತ್ಮೆಯನ್ನು ರಾಜ ಒಡೆಯರ ಅಪ್ಪಣೆಯಂತೆ ರಚಿಸಿದ್ದರು ಎಂಬುದಾಗಿ ತಿಳಿಸುತ್ತಾರೆ.

ಈ ಹಿನ್ನೆಲೆಯಲ್ಲಿ ಶಾಸನೋಕ್ತ ಸಿಂಗರೈಯಂಗಾರರು ರಾಜವಡೆಯರ ಸಮಕಾಲೀನರು ಹಾಗೂ ದಾನದ ಎರಡನೇ ಸ್ವಾಂಮ್ಯವನ್ನು ಪಡೆದವರು. ಪ್ರಸ್ತುತವೂ ಪ್ರತಿಭಾವಂತರನ್ನು ಹೊಂದಿದ, ಈ ಕುಟುಂಬದವರೇ ಆದ ಸಿಂಗರೈಯಂಗಾರ್‌ರವರು ರಾಜರಪ್ಪಣೆಯಿಂದ ಶ್ರೀರಂಗ ಮಹಾತ್ಮೆಯನ್ನು ಆ ಕಾಲದಲ್ಲಿ ರಚಿಸಿರಬಹುದು. ಆ ನಂತರ ಇತ್ತೀಚಿನ ರಾಮಾಯಣದ ಅಳಸಿಂಗ ರಂತೂ ನಮಗೆ ತಿಳಿದೇ ಇದೆ. ಮಹಾರಾಜರಿಂದ ಈ ಕುಟುಂಬ ದವರು **ದೇವಶಿಖಾಮಣಿ** ಎಂಬ ಬಿರುದು ಪಡೆದಿದ್ದಾರೆ. ನನಗೆ ಈ ಶಾಸನವು ದೇವಶಿಖಾಮಣಿ ಅಳಸಿಂಗಾಚಾರ್ಯರ ಕುಟುಂಬ ದಲ್ಲಿ ದೊರೆತಿರುವುದನ್ನು ಸ್ಮರಿಸಬಹುದು. ಶ್ರೀರಂಗ ಮಹಾತ್ಮೆ ಗ್ರಂಥವನ್ನು ಈ ಕೆಳಗಿನಂತೆ ಹಲವಾರು ಕವಿಗಳು ರಚಿಸಿರುವುದು ಕಾಣುತ್ತೇವೆ.

| | | |
|---|---|---|
| ೧. | ಸಿಂಗರಾಚಾರ್ಯ | ಕ್ರಿ.ಶ. ೧೫೭೦ |
| ೨. | ಸಿಂಗರೈಯಂಗಾರ್ | ಕ್ರಿ.ಶ. ೧೬೧೦ |
| ೩. | ಮಲ್ಲಿಕಾರ್ಜುನ | ಕ್ರಿ.ಶ. ೧೬೭೮ |
| ೪. | ಚಿಕ್ಕುಪಾಧ್ಯಾಯ | ಕ್ರಿ.ಶ. ೧೬೮೦ (ಪ್ರಕಟವಾಗಿದೆ) |
| ೫. | ಸಿಂಗರಾರ್ಯ | ಕ್ರಿ.ಶ. ೧೬೮೦ |
| ೬. | ಅಪ್ಪಲಾಚಾರ್ಯ | ೧೯ನೇ ಶತಮಾನ |
| ೭. | ಯುಗ್ಗಮ್ಮ | ೧೯ನೇ ಶತಮಾನ |

ಈ ಹಿನ್ನೆಲೆಯಿಂದ ಶಾಸನೋಕ್ತ ಸಿಂಗರೈಯಂಗಾರರು ರಾಜ ಒಡೆಯರ ಕಾಲದಲ್ಲಿ ಶ್ರೀರಂಗ ಮಹಾತ್ಮೆಯನ್ನು ರಚಿಸಿರ ಬಹುದೆಂದು ಹೇಳಬಹುದು.

ಕಾಲ : ಶಾಲಿವಾಹನಶಕ ೧೫೩೭

ದಿನಾಂಕ : ೦೧-೦೪-೧೬೧೪ ಶುಕ್ರವಾರ

***ಶಾಸನಪಾಠ***

ಮೊದಲನೆ ಹಲಗೆಯ ಹಿಂಭಾಗ

೧ ಶುಭಮಸ್ತು ಹರೇರ್ಲೀಲಾವರಾಹಸ್ಯದಂಷ್ಟ್ರಾದಂಡಸ ಪಾತುವಃ ಹೇಮಾದ್ರಿಕಲಶಾಯ

೨ ತ್ರಧಾತ್ರೀಛತ್ರ ಶ್ರೀಯಂದಧೌ।ಕಲ್ಯಾಣಗುಣಪೂರ್ನಸ್ಯ ಕಮಲಾಗೃಹಮೇಧಿನಃ

೩ ನಾಭಿನಾಳಿಕತೋಜ ಜ್ಞೇಬ್ರಹ್ಮಾಲೋಕಪಿತಾಮಹಃ। ಪಿತಾಮಹಾದತ್ರಿರತ್ರೇರಿಂದುರಿಂದೋ

೪ ರ್ಬಧೋಬುಧಾತ್।ಪುರೂರವಾಸ್ತಿತಶ್ಚಾಯುರಾಯು ಷೋನಹುಷೋಜನಜೀ(ನೀ) ಯಯಾತಿರ್ನ

೫ ಹುಷಾದಾಸಿದ್ಯಯಾತೇರ್ಯದು ಭವತಿಃ।ದ್ವಾರಕಾನಗರೋ ಪಾಂತೇಸಂತತಾತಸ್ಯಸಂತತಿಃ।ತ

೬ ಸ್ಯಾಂ ಕೃತಾವತಾರಾಃಕತಿಚನ ಕರ್ನ್ನಾಟದೇಶಮಾಜನ್ಮುಃ। ಯೆದುಗಿರಿಶಿಖರಾಭರಣಂ

೭ ನಾರಾಯಣಮೀಕ್ಷಿತುಂ ರಮಾರಮಣಂ।ರಾಮಾಣೀಯಕ ಮಾಲೋಕ್ಯದೇಶಸ್ಯಾಸ್ಯ

೮ ಸಮುತ್ಸುಕಾಃ।ತತ್ರೈವವಸತಿಂಚಕ್ರುರ್ಮಹೀಶೂರಪುರೇ ವರೇ।ತೇಷ್ವಾಸೀದರಿಗೋಧೂಮ

೯ ಘರಟ್ಟೋಬೆಟ್ಟಚಾಮರಾಟ್।ಪ್ರಾಪಾಂತೆಂಬರಗಂಡಾ ಖ್ಯಂಪ್ರಾಜ್ಯಂಬಿರುದಮೂರ್ಜಿ

೧೦ ತಂ। ಆಸೀದಸ್ಯಕುಮಾರಾಶ್ಯಾಮನೃಪಸ್ಸರ್ವ್ವಸದ್ಗುಣಗರೀ ಯಾನ್‌ರೆಮಟೀವಂಗಟಮಾಜಾವಜ

೧೧ ಯದ್ಯೋರಾಮರಾಜಸೇನಾನ್ಯಂ।ತಸ್ಯಾತ್ಮಜೋರಾಜಧ ರಾಧಿರಾಜಸ್ಸಂಗ್ರಾಮಭೂಮೌ

೧೨ ಕಿಲಸಂಪ್ರತಿಜ್ಞಂ।ಗರ್ವ್ವೋದ್ಧತಂ ಕಾರುಗಹಳಿನಾಥಮಪೋ ಧಯದ್ವಾಜಿಕ ಪಾಭಿಘಾತೈಃ।

೧೩ ಜಿತ್ವಾತಿರುಮಲರಾಜಂ ಹೃತ್ವಾಶ್ರೀರಂಗಪತಣಮಿಹಾಸೌ। ಸಿಂಹಾಸನಮಧಿತಿಷ್ಠನ್ನ

೧೪ ಭವತ್ಸಾರ್ವಭೌಮಸಾಂಮ್ರಾಜ್ಯಂ।ಜೀಯಾತ್ಸಶ್ರೀಮರಂಗ ನಾಥನಗರಸಿಂಹಾಸನಾ

೧೫ ಧೀಶ್ವರಃ।ಶ್ರೀನಾರಾಯಣಪಾದಪಂಕಜಯುನಿವಿನ್ಯಸ್ತವಿಷ್ಟ ಗ್ಧರಃಪ್ರತ್ಯರ್ದಿಕ್ಷಿತೀ

೧೬ ಪಾಲರತ್ನಮುಕುಟನಿರಾಜತಾಂಘ್ರಿಶ್ಶೀರಂದೇವಬ್ರಾಹ್ಮಣ ರಕ್ಷಣಾಯ ಪೃಥಿ

೧೭ ವೀಸಾಂಬ್ರಾಜ್ಯಾಧೀಕ್ಷಾವರ್ಹ।ಸ್ವಸ್ತಿಶ್ರೀವಿಜಯಾಭ್ಯುದಯ ಶಾಲಿವಾಹನಶಕವರುಷ

೧೮ ೧೫೩೭ ಸಂದವರ್ತಮಾನವಾದ ಆನಂದ ಸಂವತ್ಸರದ ವೈಶಾಖಶುಧ ೨ಯಲೂ ಆತ್ರೇ

೧೯ ಯಗೋತ್ರದಆಶ್ವಲಾಯನಸೂತ್ರದ ರುಕುಶಾಖೆಯ ಮಹಿಶೂರ ನಗರದ ಬೆಟದ

೨೦ ಚಾಮರಸೊಡೆಯ ರೈಯನವರ ಪೌತ್ರರಾದ ಚಾಮರ ಸೋಡೆಯರವರ ಪುತ್ರರಾದ ಶ್ರೀ

೨೧ ಮದ್ರಾಜಾಧಿರಾಜ ರಾಜಾಪರಮೇಶ್ವರ ಬಿರುದೆಂತೆಂಬರ ಗಂಡ ಮಹಿಶೂ

೨೨ ರ ರಾಜ ಒಡೆಯರವರು ಶ್ರೀರಂಗಪಟ್ಟಣದಲ್ಲಿ ಪೃಥ್ವೀ ಸಾಂಬ್ರಾಜ್ಯ

೨೩ ಂಗಯಿಲುತ ನಾನಾಗೋತ್ರದ ನಾನಾಸೂತ್ರದ ನಾನಾ

**ಎರಡನೇ ಹಲಗೆಯ ಮುಂಭಾಗ**

೨೪ ಶಾಖೆಯ ಸ್ವಾಮಿಯವರ ಸಂನಿಧಿಯ ಮೊದಲುಸ್ವಾಂಮ್ಯದ ಅಂಣಾಜ್ಯೆಯನವರ ಮಕ್ಕಳು ಆನಾ

೨೫ ವಡೇರು ಯರಡನೆ ಸ್ವಾಂಮ್ಯದ ದೊಡ್ಡಂಣಾಜ್ಯೆಯನವರ ಮಕ್ಕಳು ಸಿಂಗರೈಯಂಗಾರು।ಮೂರನೆ

೨೬ ಸ್ವಾಂಮ್ಯದಚಿಕಂಣಾಜ್ಯೆಯನವರ ಮಕ್ಕಳುತಿರುವೆಂಗಡೈಯ ನವರು ನಾಲ್ಕನೆ ಸಾಂಮ್ಯದಸಿತೆ

೨೭ ಚಿಲಪಿಳೆರಾಯರಮಕ್ಕಳು ಸಿಂಗರೈಯನವರು।ಯಿೂ ನಾಲ್ಕೆನೆ ಸ್ವಾಂಮ್ಯದ ಚೆಂನಂಮನ ಸಿಂಗರೈಯ

೨೮ ಂಗಾರು ತಿರುವಾಯಮುಳಿಯಾಚಾರ್ಯ್ಯರ ಚಿಲ್ಲಪಿಳೆ ರಾಯರ ಮಕ್ಕಳು ಸಿಂಗರೈಯಂಗಾ

೨೯ ರು।ಕುಣಿಗಿಲಸಿಂಗಪೆರುಮಾಳು ಮಕ್ಕಳು ವರದೈಯಂಗಾರು। ಕುಣಿಗಿಲ ಅಂಣಾಜ್ಯೆ

೩೦ ಯನವರ ಮಕ್ಕಳು ಸಿಂಗರೈಯಂಗಾರು।ನಿಲಾತಹಳಿ ಸಿಂಹಾದ್ರೈಯಂಗಾರಮಕ್ಕಳು ಸಿಂ

೩೧ ಗರೈಯಂಗಾರು।ಪಿಳಾರೈಯಂಗಾರಮಕ್ಕಳು ಸಿಂಗರೈ ಯಂಗಾರು । ಅಗರದ ಚಿಂತಾ

೩೨ ಮಣಿ ತಿರುಮಲ ಭಟ್ಟರಮಕ್ಕಳು ತಿರುವೆಂಗಡೈಯ। ದೇವನೂರರಾಮಾಂಜ್ಯೆಯಂಗಾರ

೩೩ ಮಕ್ಕಳು ತಿರುಮಲೈಯಂಗಾರು। ಚೆಂನಣ್ಣೆಯಂಗಾರ ಅಳಗಸಿಂಗರ ಮಕ್ಕಳು ತಿರು

೩೪ ವೆಂಗಡೈಯ। ಚಿಂತಾಮಣಿ ಪಂಡಿತರ ಮಕ್ಕಳು ತಿರುಮಲೈ ಯನವರು।ಅಂತ್ತೂಯೀ

೩೫ ಹದಿನಾಲ್ಕು ಮಂದಿ ಮಹಾಜನಂಗಳಿಗೆ ಕೊಟ್ಟ ದಾನ ಶಾಸನದ ಕ್ರಮವೆಂತೆಂದರೆ।ನಮಗೆಪಿ

೩೬ ತಮಾರ್ಜಿತವಾಗಿ ಬಂದ ಸಿಂಧು ಘಟ್ಟಸ್ಥಳದ **ಸೀಳನೆರೆ ಯಂಬ ಗ್ರಾಮಕೆ ಪ್ರತಿನಾಮ**

೩೭ **ಧೇಯವಾದನಾರಾಯಣಸಮುದ್ರದ** ಗ್ರಾಮವಂನ್ನು ಮೇಲು ಗೋಟೆಯಲ್ಲಿ ನಿತ್ಯವಾ

೩೮ ಸವಮಾಡಿಕೊಂಡುಯಿರುವ ನಿಮಿತ್ತವಾಗಿ ಸಹಿರಂಣ್ಯೋ ದಕ ದಾನಧಾರಾಪೂರ್ವ್ವಕ

೩೯ ವಾಗಿ ನಾಲು **ನಿಮಗೆ ಕೊಟ್ಟೆವಾಗಿ ಯಿೂಗ್ರಾಮದವ್ರಿತ್ತಿ। ೨೪ಕೆ ಗಣಸಂಖೆವಿವರಾ।।**

೪೦ ಆನಾವಡೇರಿಗೆ ವ್ರಿತ್ತಿ ೧ ವಂದು ದೊಡಂಣಾಜ್ಯೆಯನ ಸಿಂಗರೈಯಂಗಾರ್ರಿಗೆ ವ್ರಿತ್ತಿ ೧ ವಂ

೪೧ ದು ಚಿಕಂಣಾಜ್ಯೆತಿರುವೆಂ(ಗ)ಡೈಯನವರಿಗೆ ವ್ರಿತ್ತಿ ೧ ವಂದು। ಸಿತೆ ಚಿಲಪಿಳೆರಾಯರ ಸಿಂ

೪೨ ಗರೈಯಂಗಾರ್ರಿಗೆ ವ್ರಿತ್ತಿ ೧ ವಂದು।ಚೆಂನಂಮನಸಿಂಗರೈಯಂ ಗಾರಿಗೆ ವ್ರಿತ್ತಿ ೧ ವಂದು

೪೩ ತಿರುವಾಯಿ ಮುಳಿಯಾಚಾರ್ಯ್ಯರ ಚಿಲ್ಲಪಿಳೆರಾಯರಿಗೆ ವ್ರಿತ್ತಿ ೨ ಯರುಡು। ಸಿಂಗಪೆರು

೪೪ ಮಾಳುವರದೈಯಂಗಾರ್ರಿಗೆ ವ್ರಿತ್ತಿ ೨ ಯರಡು। ಅಂಣಾ ಜ್ಯೆಯನ ಸಿಂಗರೈಯಂಗಾರ್ರಿ

೪೫ ಗೆ ವ್ರಿತ್ತಿ ೨ ಯರಡು।ನಿಲಾತಹಳಿಸಿಂಹಾದ್ರೈಯಂಗಾರ ಸಿಂಗರೈಯಂಗಾರ್ರಿಗೆ ವ್ರಿತ್ತಿ ೩

೪೬ ಮೂರು ಪಿಳಾರೈಯಂಗಾರ ಸಿಂಗರೈಯಂಗಾರ್ರಿಗೆ ವ್ರಿತ್ತಿ ೨ ಯರಡು। ಅಗರದ ತಿರು

೪೭ ಮಲಭಟ್ಟರ ತಿರುವೆಂಗಡ್ಡೈಯಗೆ ವ್ರಿತ್ತಿ ೨ ಯರಡು। ದೇವನೂರ ರಾಮಾನುಜೈ

೪೮ ಯನತಿರುಮಲೈಯಂಗಾರಿಗೆ ವ್ರಿತ್ತಿ ೨ ಯರಡು।ಚಿಂನಣ್ಣೈಯನ ಅಳಗ

೪೯ ಸಿಂಗರತಿರವೆಂಗಡ್ಡೈಗೆ ವ್ರಿತ್ತಿ ೨ ಯರಡು ಚಿಂತಾಮಣಿ ಪಂಡಿತ ತಿರುಮ

**ಎರಡನೇ ಹಲಗೆಯ ಹಿಂಭಾಗ**

೫೦ ಲೆಗೆ ವ್ರಿತ್ತಿ ೨ ಯರುಡು।ಅಂತೂ ವ್ರಿತ್ತಿ ೨೪ರ ಗಣಸಂಖೆ ಮೇರೆಯಲ್ಲಿ

೫೧ ಯಿಗ್ರಾಮಕೆ ಸಲುವಗದ್ದೆ ಬೆದ್ದ(ಟ್ಟ)ಲು ತೋಟ ತುಡಿಕೆ ಕಾಣಿಕೆ ಬೆಡಿಗೆ ಸುಂಕ

೫೨ ಸುವರ್ನ್ನಾದಾಯ ಮಗ್ಗ ಮನೆವಣ ಮೊದಲಾದ ಆ ಸಕಲ ಸ್ವಾಂಮ್ಯವಂನ್ನು

೫೩ ನೀಉ ಹದಿನಾಲ್ಕು ಮಂದಿಯು ಅನುಭವಿಸಿಕೊಂಡು ಬರುವಿರಿ ಯಿಗ್ರಾ

೫೪ ಮದ ಚತುಸ್ಸೀಮೆಯ ವಿವರ। ಗುಡಗನಹಳಿಯಯೆಲ್ಲೆ ಯಿಂದಂ ಪ

೫೫ ಡುವಲು ಕೊಂಗನಹಳಿಯ ಯೆಲ್ಲೆಯಿಂದಂ ಬಡಗಲು ಚಿಕ್ಕನಹಳಿ

೫೬ ಯ ಯಲ್ಲೆಯಿಂದಂ ಮೂಡಲು ಚಟ್ಟನಹಳಿಯ ಯಲ್ಲೆ ಯಿಂಧಂ ತೆಂಕ

೫೭ ಲು ಇಂತೀಚತುಸೀಮೆಯೊಳಗುಳ್ಳ ನಿಧಿನಿಕ್ಷೇಪ ಜಲ ಪಾಷಾಣ ಅಕ್ಷೀಣಿ ಆ

೫೮ ಗಾಮಿ ಸಿದ್ಧ ಸಾಧ್ಯಂಗಳೆಂಬ ಅಷ್ಟಭೋಗ ತೇಜಸ್ವಾಂಮ್ಯ ಗಳು ಪುತ್ರಪೌತ್ರಪಾ

೫೯ ರಂಪರ್ಯ್ಯವಾಗಿ ಆಚೆಂದ್ರಾರ್ಕವಾಗಿ ನಿಮಗೆ ಸಲುವದು ಯೆಂದು ನಾನಾ

೬೦ ಗೋತ್ರದ ನಾನಾಸೂತ್ರದ ನಾನಾ ಶಾಖೆಯ ಮೇಲು ಗೋಟೆಯ ಸ್ಥಾನದ ಅಂ

೬೧ ಣಾಜೈಯನ ಆನಾವಡೇರು ದೊಡಂನಾಜೈಯನ ಸಿಂಗರೈ ಯಂಗಾರು

೬೨ ಚಿಕಂಣಾಜೈಯನ ತಿರವೆಂಗಡ್ಡೈಯ। ಸಿತೆ ಚೆಲಪಿಳೆರಾಯರ ಸಿಂಗರೈ

೬೩ ಯಂಗಾರು ಚೆನಂಮನ ಸಿಂಗರೈಯಂಗಾರು ತಿರುವಾಯಿ ಮುಳಿಯಾಚಾ

೬೪ ರ್ಯ್ಯರ ಚೆಲಪಿಳೆರಾಯರ ಸಿಂಗರೈಯರಂಗಾರು ಕುಣಿಗಿಲ ಸಿಂಗ ಪೆರುಮಾಳವ

೬೫ ರದೈಯಂಗಾರು ಕುಣಿಗಿಲಅಂಣಾಜೈಯನ ಸಿಂಗರೈ ಯಂಗಾರು ನಿಲಾತ

೬೬ ಹಳಿ ಸಿಂಹಾದ್ರೈಯಂಗಾರ ಸಿಂಗರೈಯಂಗಾರು ಪಿಳಾರೈ ಯಂಗಾರ

೬೭ ಸಿಂಗರೈಯಂಗಾರು ಅಗರದ ತಿರುಮಲ ಭಟ್ಟರ ತಿರುವೆಂ ಗಡ್ಡೈಯ ದೇವನೂ

೬೮ ರ ರಾಮಾಂಜೈಯಂಗಾರ ತಿರುಮಲೈಯಂಗಾರು ಚಿಂನಣ್ಣೈ ಯಂಗಾರ

೬೯ ಅಳಗ ಸಿಂಗರ ತಿರುವೆಂಗಡ್ಡೈಯ ಚಿಂತಾಮಣಿ ಪಂಡಿತರ ತಿರುಮಲೈಯ

೭೦ ।ಅಂತೂ ಯಿ ಹದಿನಾಲ್ಕು ಮಂದಿ ಮಹಾಜನಂಗಳಿಗೆ ಆತ್ರೇಯಗೋತ್ರ

೭೧. ಆಶ್ವಲಾಯನ ಸೂತ್ರದ ರುಕು ಶಾಖೆಯ ಮಹಿಶೂರ ನಗರದ ಬೆಟ್ಟ

**ಮೂರನೆ ಹಲಗೆಯ ಮುಂಭಾಗ**

೭೨ ದ ಚಾಮರಸೊಡೆಯರವರ ಪೌತ್ರರಾದ ಚಾಮರಸೊಡೆಯ

೭೩ ರವರ ಪುತ್ರರಾದ ಶ್ರೀಮದ್ರಾಜಾಧಿರಾಜರಾಜಪರಮೇಶ್ವ ರ ಬಿರು

೭೪ ದಂತೆಂಬರ ಗಂಡ ಮಹಿಶೂರರಾಜವಡೆಯರವರು ನಾಉ

೭೫ ನಂಮತ್ರಿಕರಣ ಪೂರ್ವ್ವಕವಾಗಿ ಚೆಲ್ವರಾಯಸ್ವಾಮಿಯವರ

೭೬ ಸಂನ್ನಿಧಿಯಲ್ಲಿ ಸಹಿರಂಣ್ಯೋದಕ ದಾನಧಾರಾಪೂರ್ವ್ವಕವಾ

೭೭ ಗಿ ಧಾರೆಯನೆರದು ಕೊಟ್ಟ ಸೀಳನೆರೆಯ ಗ್ರಾಮದ ದಾನ ಶಾಸ

೭೮ ನ।।ಯೇಕೈವಭಗಿನಿಲೋಕೇ ಸರ್ವ್ವೇಷಾಮೇವ ಭೂ ಭುಜಾಂ।।

೭೯ ನ ಭೋಜ್ಯಾನಕರ ಗ್ರಾಹ್ಯಾವಿಪ್ರದತ್ತಾ ವಸುಂಧರಾ।।ದಾನ

೮೦ ಪಾಲನ ಯೋರ್ಮ್ಮದ್ಧ್ಯೇದಾನಚ್ಛ್ರೇಯೋನು ಪಾಲನಂ। ದಾ

೮೧ ನಾ ತ್ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂಪದಂ।।

ಶ್ರೀರಾಜ

(ಕೃತಜ್ಞತೆಗಳು : ಈ ತಾಮ್ರ ಪಟವನ್ನು ನೀಡಿದ ಮಂಡೆಯಂ ದೇವಶಿಖಾಮಣಿ ಪಾರ್ಥಸಾರಥಿ ಅಯ್ಯಂಗಾರ್ ಮಲ್ಲೇಶ್ವರಂ, ಬೆಂಗಳೂರು ಅವರಿಗೆ ವಂದನೆಗಳು.)

ಶ್ರೀರಾಜ ಒಡೆಯರು ದಿನಾಂಕ : ೦೧-೦೪-೧೬೧೪ರ ಶುಕ್ರವಾರದಂದು ಮೇಲುಕೋಟೆಯ ಸೀಳನೆರೆ ಗ್ರಾಮ (ನಾರಾಯಣಪುರ)ದಲ್ಲಿ ೨೪ ವ್ರಿತ್ತಿ ಅಳತೆಯ ಭೂಮಿಯನ್ನು ದಾನಕೊಟ್ಟ ವಿವರಗಳಿವೆ. ತಾಮ್ರಶಾಸನದ ಎರಡನೆ ಹಲಗೆಯ

ಮುಂಭಾಗದ ೧೬ನೇ ಸಾಲಿನಿಂದ ೨೬ ಹಾಗೂ ಹಿಂಭಾಗದ ೧ನೇ ಸಾಲಿನಲ್ಲಿರುವ ಈ ವಿವರಗಳನ್ನು ಅಂದರೆ ದಾನ ಪಡೆದವರ ವಿವರ ಮತ್ತು ಅಳತೆ (ವ್ರಿತ್ತಿಯಲ್ಲಿ) ಯನ್ನು ಗಮನಿಸಬಹುದು.

**ಶಾಸನೋಕ್ತ ಸೀಳನೆರೆ ಗ್ರಾಮದ (ನಾರಾಯಣಪುರ) ಭೂಮಿಯ ಗಡಿ**




**ಶಾಸನೋಕ್ತ ಸ್ಥಳನಾಮಗಳು**

೧. ಸೀಳ್‌ನೆರೆ (ನಾರಾಯಣಪುರ - ಶಾಸನೋಕ್ತ ಪ್ರತಿ ನಾಮ ಧೇಯ ನಾರಾಯಣಸಮುದ್ರ. ಈಗ ಕೆ. ಆರ್. ಪೇಟೆ ತಾಲೂಕಿನ ಒಂದು ಹೋಬಳಿಯಾಗಿದೆ.)

೨. ಗುಡುಗನಹಳಿ : ಈಗ ದಡುಗಹಳ್ಳಿಯಾಗಿ ಸೀಳ್‌ನೆರೆ ಸಮೀಪವಿದೆ.

೩. ಸಿಂಧುಘಟ್ಟ : ಈ ಹೆಸರು ಈಗಲೂ ಉಳಿದುಕೊಂಡಿದೆ.

೪. ಚಿಕ್ಕನ ಹಳಿ : — " —

೫. ಚಟ್ಟಿನ ಹಳಿ (ಚಿಟ್ಟಂಪಳ್ಳಿ, ಚಿಟ್ಟಿನಹಳ್ಳಿ) : — " —

೬. ಅಗರ : ಈ ಹೆಸರು ಈಗಲೂ ಉಳಿದುಕೊಂಡಿದೆ.

೭. ದೇವನೂರು : — " —

೮. ಚಿಂತಾಮಣಿ : — " —

೯. ಕುಣಿಗಿಲ : — " —

೧೦. ನಿಲಾತಹಳಿ : — " —

೧೧. ಕೊಂಗನಹಳಿ : — " —

**ಶಾಸನೋಕ್ತ ಕುಟುಂಬಗಳು** : ಶಾಸನದಲ್ಲಿ ೧೪ ಕುಟುಂಬದ ಹೆಸರನ್ನು ಪ್ರಸ್ತಾಪಿಸಲಾಗಿದೆ. ಅದರಲ್ಲಿ ಈ ಕೆಳಗಿನ ಕುಟುಂಬಗಳು ಈಗಲೂ ಮೇಲುಕೋಟೆಯಲ್ಲಿದ್ದಾರೆ. ಉಳಿದವು ಗಳನ್ನು ಹುಡುಕಬೇಕಾಗಿದೆ.

೧. ಅಂಣಾಜ್ಯೆಯನವರು; ೨. ದೊಡ್ಡ ಅಂಣಾಜ್ಯೆಯ- (ಈಗ ಪೆರಿ ಅಂಣಾಜ್ಯೆಯ ಎಂದೂ ಕರೆಯುತ್ತಾರೆ; ತಾಮ್ರಪಟವು ಮೊದಲಿದ್ದ ಕುಟುಂಬವಾಗಿದೆ.); ೩. ನೀಲಾತಂಪಳ್ಳಿಯವರು; ೪. ತಿರುವಾಯ ಮುಳಿಯಾಚಾರ್ಯರು; ೫. ಚಿಲಬಳೆಯವರು; ೬. ಕುಣಿಗಿಲ ಅಂಣಾಜ್ಯೆಯನವರು

**ಶ್ರೀರಾಜ ಒಡೆಯರ ಸಂಬಂಧದ ಪ್ರಕಟಿತ ಎರಡು ಶಾಸನಗಳು**

**೯೩ (ರಿ. ೧೯೪೦-೩೮) ಮೈಸೂರು**

ಅರಮನೆಯಲ್ಲಿರುವ ಮೇಲುಕೋಟೆ ಶ್ರೀರಾಜ ಮುಡಿಯ ರತ್ನದ ಪದ್ಮಪೀಠದ ಹಿಂಭಾಗದಲ್ಲಿ :

೧. ಶ್ರೀ ಶಾಲಿವಾಹನ ಶಖವರುಷ ಸಾ ೧೫೩೬ ಸಂದ ವರ್ತಮಾನ ಆನಂದ ಸಂವತ್ಸರದ ಆಷಾಡ

೨. ಶು ೫ ಶುಕ್ರವಾರದಲು ಚೆಳಪಿಳೆರಾಯ ಸ್ವಾಮಿಯ ಶ್ರೀಪಾದಕ್ಕೆ ಪದ್ಮಪೀಠ । ರತ್ನ ಪಡಿಸಹ

೩. ತೂಕವರಹ ಪಡ್ದಿಲಾಗ ೧೪೪'೧ ತೂಕ ಮೈಸೂರ ರಾಜುವ ಸೇವೆ

**೯೫ (೧೧೧ ಶ್ರೀಪ ೧೫೦) ಕರಿಘಟ್ಟ**

ಶ್ರೀನಿವಾಸದೇವಸ್ಥಾನದ ಅಡಿಗೆ ಮನೆಬಾಗಿಲಿಗೆ ಉತ್ತರ ಕಡೆ ಹೊರಭಿತ್ತಿಯಲ್ಲಿ

೧. ನಳಸಂವತ್ಸರದ ಮಾ

೨. ಘ ಶು೧೦ ಲು ಮಯಿ

೩. ಸೂರ ರಾಜವಡೇರ ಸೇವೆ

**ರಾಜ ಒಡೆಯರು (ಕ್ರಿ.ಶ. ೧೫೭೮-೧೬೧೭)**

ವಿಜಯನಗರ ಅರಸರ ಕಾಲದಿಂದ ಮೈಸೂರಿನ ರಾಜರು, ಶ್ರೀರಂಗಪಟ್ಟಣದ ಮಂಡಲಾಧಿಪತಿಗೆ ಅಧೀನರಾಗಿದ್ದರು. ಮೈಸೂರಿನಲ್ಲಿ ಯಾದವ ವಂಶವನ್ನು ಯದುರಾಯರು (೧೩೯೯-೧೪೨೩) ಸ್ಥಾಪಿಸಿದರು. ತದನಂತರ ಹಿರಿಯ ಬೆಟ್ಟದ ಚಾಮರಾಜ ಒಡೆಯರು (೧೪೨೩-೧೪೫೮), ತಿಮ್ಮರಾಜಒಡೆಯರು ಹೀಗೆ ಮುಂದುವರೆದು ಬೆಟ್ಟದ ಚಾಮರಾಜ ಒಡೆಯರ ಸಹೋದರ ರಾಜಒಡೆಯರನ್ನು ಕ್ರಿ.ಶ. ೧೫೭೮ರಲ್ಲಿ ಆಳುವ ಪ್ರಭುವನ್ನಾಗಿ ಹಿರಿಯರು ಅಂಗೀಕರಿಸಿದರು.

"ಮೈಸೂರು ಅರಸರು ತಾವು ವಿಜಯನಗರದ ಸಾಮಂತ ರೆಂದು ಕೆಲವು ಶಾಸನಗಳಲ್ಲಿ ಮುಂದೆಯೂ ಹೇಳಿದ್ದರೂ ಕೂಡ, ಸ್ವತಂತ್ರ ಮೈಸೂರಿನ ಉದಯ ೧೬೧೦ರಲ್ಲಿ ಅಂದರೆ ರಾಜ ಒಡೆಯರು ಶ್ರೀರಂಗಪಟ್ಟಣದ ಸಿಂಹಾಸನವನ್ನು ಪಡೆದಾಗ, ಆಯಿತೆಂದು ಹೇಳಬಹುದು."[೧] (ಕರ್ನಾಟಕ ಚರಿತ್ರೆ ಎಂ.ವಿ. ಕೃಷ್ಣರಾವ್ - ೧೯೫೫ ಪುಟ ೧೩೦, ಮತ್ತು ಕರ್ನಾಟಕ ಪರಂಪರೆ ಸಂಪುಟ ೨, ೧೯೯೨).

**ಟಿಪ್ಪಣಿ**

೧. ಮೈಸೂರು ೯೩ರ ಶಾಸನದ ೨ನೇ ಸಾಲಿನಲ್ಲಿ 'ರತ್ನಪಡಿ ಸಹ' ಎಂಬಲ್ಲಿ 'ಪ' ಬದಲಿಗೆ ಮು ಇರಬಹುದೆ?

೨. ಕರಿಘಟ್ಟ ಶಾಸನೋಕ್ತ ಸಂ॥ರದ ಕಾಲವು ಶಾಲಿವಾಹನ ಶಕ ೧೫೩೯ ಅಂದರೆ ದಿನಾಂಕ ೦೫.೦೨.೧೬೧೭ಕ್ಕೆ ಸರಿಹೊಂದುತ್ತದೆ.

ಕ್ರಿ.ಶ. ೧೫೬೫-೧೬೧೦ರ ಅವಧಿಯಲ್ಲಿ ಮೈಸೂರು, ಶ್ರೀರಂಗಪಟ್ಟಣದಲ್ಲಿದ್ದ ಆ ಸಾಮ್ರಾಜ್ಯದ ಮಹಾಮಂಡಲೇಶ್ವರನ ಮೂಲಕ ವಿಜಯನಗರದ ಸಾಮ್ರಾಜ್ಯಕ್ಕೆ ಅಧೀನವಾಗಿ ಸಣ್ಣ ಪಾಳೆಪಟ್ಟಾಗಿದ್ದಿತು. ಮೈಸೂರು ಹಲವು ಹಳ್ಳಿಗಳು ಸೇರಿದ ಒಂದು ಸೀಮೆ ಅಥವಾ ಘಟಕ ಎಂದಾಗಿತ್ತು. ಮಹಾಮಂಡಲೇಶ್ವರನಿಗೆ ಮೈಸೂರು ಅರಸರೂ ನಿಷ್ಠೆಯಿಂದಿರಬೇಕಾಗಿತ್ತು. ಇವರು ಕಪ್ಪವನ್ನು ಕೊಡದೆ ಸ್ವಾತಂತ್ರ್ಯವನ್ನು ಸ್ಥಾಪಿಸಲು ಪ್ರಯತ್ನಿಸುತ್ತಿದ್ದರು. ಸಮೀಪದ ಪ್ರದೇಶವನ್ನು ವತ್ತರಿಸಿಕೊಂಡು ಕೋಟೆಗಳನ್ನು ಕಟ್ಟಿದರು.

ಕ್ರಿ.ಶ. ಸುಮಾರು ೧೬೦೦ಲರ ಹೊತ್ತಿಗೆ ರಾಜ ಒಡೆಯರು ೨೫,೦೦೦ ವರಹ ವರಮಾನವುಳ್ಳ ೩೩ ಗ್ರಾಮವನ್ನು ಒಳಗೊಂಡ ಪಾಳೆಯಪಟ್ಟಿಗೆ ಪ್ರಭುವಾದರು. ಹಾಗೂ ೩೦೦ ಸಿಪಾಯಿಗಳ ಸೇನೆಯನ್ನು ಹೊಂದಿದ್ದರು.

ವಿಜಯನಗರದ ೨ನೇ ವೆಂಕಟಪತಿರಾಯನ ಸಹೋದರನ ಪುತ್ರ ತಿರುಮಲರಾಯನು ಶ್ರೀರಂಗಪಟ್ಟಣದಲ್ಲಿ ರಾಜ ಪ್ರತಿನಿಧಿಯಾಗಿದ್ದನು. ಚಕ್ರವರ್ತಿಗೂ ಪ್ರತಿನಿಧಿಗೂ ಸೌಹಾರ್ದ ವಿರಲಿಲ್ಲ. ಇದನ್ನು ರಾಜ ಒಡೆಯರು ಚೆನ್ನಾಗಿ ಉಪಯೋಗಿಸಿ ಕೊಂಡು ತಿರುಮಲರಾಯನನ್ನು ೧೬೧೦ರಲ್ಲಿ ಓಡಿಸಿದರು. ವೆಂಕಟಪತಿರಾಯನು ಈ ಆಕ್ರಮಣಕ್ಕೆ ಸಮ್ಮತಿಯನ್ನಿತ್ತು ಶ್ರೀರಂಗಪಟ್ಟಣ ಮತ್ತು ಉಮ್ಮತ್ತೂರು ರಾಜ್ಯಗಳಿಗೆ ಅವರೇ ಒಡೆಯರೆಂದು ಒಪ್ಪಿದನು. ಇದರ ಹಕ್ಕನ್ನು ಒಂದು ಸನ್ನದು ಮೂಲಕ ಒಡೆಯರು ಪಡೆದರು.

ಮೈಸೂರು ದೊರೆಗಳೇ ಕರ್ನಾಟಕದ ಅರಸರಾಗುವುದಕ್ಕೆ ಅರ್ಹರೆಂದು ಅವನ ಅಭಿಪ್ರಾಯವಾಗಿತ್ತೆಂದು ನಂಜನಗೂಡಿನ ಒಂದು ಶಾಸನದಿಂದ ತಿಳಿಯುತ್ತದೆ, ಎಂದು ಎಂ.ವಿ. ಕೃಷ್ಣರಾವ್ ಅವರು ಅಭಿಪ್ರಾಯಪಡುತ್ತಾರೆ.

ರಾಜಒಡೆಯರು ಕ್ರಿ. ಶ. ೧೬೧೦ರಲ್ಲಿ ಶ್ರೀರಂಗ ಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರತ್ನಖಚಿತ ಸಿಂಹಾಸನವನ್ನು ಏರಿದರು. ಇಲ್ಲಿಂದ ಮೈಸೂರು ರಾಜರ ಆಡಳಿತ ಪ್ರಾರಂಭವಾಯಿತು ಎನ್ನಬಹುದು. ದಳವಾಯಿ ಮತ್ತು ಸರ್ವಾಧಿಕಾರಿ ಎಂಬ ಆಡಳಿತದ ಮುಖ್ಯಾಧಿಕಾರಿಯನ್ನಾಗಿ ಅವರ ಸೋದರ ಪುತ್ರ, ಬೆಟ್ಟದ ಅರಸು ಎಂಬುವರನ್ನು ನೇಮಕಮಾಡಿ, ಮೇಲ್ವಿಚಾರಣೆ, ರಕ್ಷಣೆ, ಕಂದಾಯ ವಸೂಲಿಗಳಿಗಾಗಿ ಅಧಿಕಾರಿ ಗಳನ್ನು ನೇಮಿಸಲಾಯಿತು.

ರಾಜಒಡೆಯರು ಶ್ರೀರಂಗಪಟ್ಟಣ, ಮೈಸೂರು, ಮೇಲು ಕೋಟೆ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿ ದಾನ-ದತ್ತಿಗಳನ್ನು ಸ್ಥಾಪಿಸಿದರು; ಕ್ರಿ.ಶ. ೧೬೧೦ರಲ್ಲಿ ಶ್ರೀರಂಗ ಪಟ್ಟಣದಲ್ಲಿ ದಸರಾ ಉತ್ಸವ ಪ್ರಾರಂಭಿಸಿದರು. ಇದು ರಾಜತ್ವದ ಪ್ರಭೆಯನ್ನು ಅಧಿಕಗೊಳಿಸಿತು; ಕ್ರಿ.ಶ. ೧೬೧೪ (ದಿನಾಂಕ ೦೧.೦೪.೧೬೧೪) ರಲ್ಲಿ ಪ್ರಸ್ತುತ ಶಾಸನೋಕ್ತ ಬ್ರಾಹ್ಮಣರಿಗೆ ದಾನದತ್ತಿ ನೀಡಿದರು; ಕ್ರಿ.ಶ. ೧೬೧೪ (ದಿನಾಂಕ ೦೧.೦೭.೧೬೧೪) ರಲ್ಲಿ ಮೇಲುಕೋಟೆ ಚಲುವರಾಯ ಸ್ವಾಮಿಗೆ ರತ್ನಖಚಿತ ರಾಜಮುಡಿ ಅರ್ಪಿಸಿದರು; ಕ್ರಿ.ಶ. ೧೬೧೪ (೦೫.೦೨.೧೬೧೭) ರಲ್ಲಿ ಶ್ರೀರಂಗಪಟ್ಟಣದ ಶ್ರೀನಿವಾಸ ದೇವಾಲಯ (ಕರಿಘಟ್ಟ) ಜೀರ್ಣೋದ್ಧಾರ ಮಾಡಿರುವ ಸಾಧ್ಯತೆಯು ಶಾಸನದಿಂದ ತಿಳಿಯುತ್ತದೆ; ಕ್ರಿ.ಶ. ೧೬೧೭ರಲ್ಲಿ ಮೇಲುಕೋಟೆಗೆ ಹೋಗಿದ್ದಾಗ ಅಲ್ಲಿ ಕಾಲವಶವಾದರು.





**ಕ. ಇ.ಅಕಾದೆಮಿಯ ೩ನೇ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೮೯)**

*ಇತಿಹಾಸದ ಅಭ್ಯಾಸ ಮತ್ತು ಶಿಕ್ಷಣ; ಇತಿಹಾಸದ ಸಂಶೋಧನೆ ಇತಿಹಾಸದ ಗ್ರಂಥರಚನೆ - ಇವು ಅನ್ಯೋನ್ಯ ಸಂಬಂಧವುಳ್ಳವುಗಳು. ಇತಿಹಾಸದ ಮುಖ್ಯ ಪ್ರಯೋಜನವೆಂದರೆ ಅದು ನಮ್ಮ ಜೀವನದ ಮೌಲ್ಯಗಳನ್ನು ರೂಪಿಸಿಕೊಳ್ಳುವ ಜೀವನವನ್ನು ಸುಧಾರಿಸಿಕೊಳ್ಳುವ ಒಂದು ಸಾಧನ. ನಮ್ಮ ಜೀವನದ ಮೇಲೆ ಪ್ರಭಾವ ಬೀರುವಂಥ ಘಟನೆಗಳ ವಿವರಗಳೇ ಇತಿಹಾಸ ಪುರಾವೃತ್ತ. ಅಂಥ ಘಟನೆಗಳು ಇಂದಿಗೆ ನಮಗೆ ಪ್ರಯೋಜನವಾಗುವಂತೆ ಅರ್ಥಮಾಡಿಕೊಳ್ಳಬೇಕು. ಇಲ್ಲವಾದರೆ ಇತಿಹಾಸ ಬರೇ ಹೆಸರುಗಳ ತಾರೀಖುಗಳ ಸರಮಾಲೆ ಆಗುತ್ತದೆ. ಇದಲ್ಲದೆ ಘಟನೆಗಳ ಹಿಂದಿರಬಹುದಾದ ಪರಿಣಾಮಗಳನ್ನು ಸೂಚ್ಯವಾಗಿ ವಿವರಿಸಿದರೆ ಅಧ್ಯಯನ ರೋಚಕವಾಗುತ್ತದೆ, ಪ್ರಯೋಜನಕಾರಿ ಆಗುತ್ತದೆ.*

**ಡಾ. ಶ್ರೀನಿವಾಸರಿತ್ತಿ**
*ಸಮ್ಮೇಳನಾಧ್ಯಕ್ಷರು*

ಬಿ.ಎಸ್. ರಾಮಭಟ್ಟ*

# ಮಳವಳ್ಳಿಯ ಸ್ತಂಭಶಾಸನ - ಒಂದು ವಿಶ್ಲೇಷಣೆ

*ಭಾಗಶಃ ಅಥವಾ ಪೂರ್ಣವಾಗಿ ಕರ್ನಾಟಕ ವನ್ನಾಳಿದವರಲ್ಲಿ ಶಾತವಾಹನರು, ಪಲ್ಲವರು, ಕದಂಬರು ಮೊದಲಾಗಿ ಇದ್ದಾರೆ. ಇವರ ಕಾಲದಲ್ಲಿ ಪ್ರಾಕೃತದ ಬಳಕೆ ತಪ್ಪಿರಲಿಲ್ಲ, ಎಂಬುದಕ್ಕೆ ಶಾಸನಗಳೇ ಸಾಕ್ಷಿ. ಶಾತವಾಹನರು ಬೌದ್ಧಧರ್ಮೀಯರಂತೆ ಮಾತೃಪ್ರಧಾನ ನಾಮವಿಶೇಷಣ ವನ್ನು (ಉದಾ : ಹಾರಿತಿಪುತ್ರ) ಹೊಂದಿದ್ದವರು. ಕದಂಬರ ನಂತರ ದೊರೆಗಳಲ್ಲಿಯ ಈ ಬಗೆಯ ನಾಮವಿಶೇಷಣದ ಬಳಕೆ ತಪ್ಪಿಹೋಯಿತು. ಮಳವಳ್ಳಿಯ ಸ್ತಂಭಶಾಸನವು, ಭೂಮಾಲಿಕರು, ಬೇಸಾಯದ ರೈತರ ಕುರಿತ ವಿಷಯ ಗಳನ್ನೂ ಸೂಚಿಸಿದೆ.*

ಮಳವಳ್ಳಿಯು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಒಂದು ಗ್ರಾಮ. ಇಲ್ಲಿಯ ಶಿಲಾಸ್ತಂಭ ಶಾಸನವು ಐತಿಹಾಸಿಕವಾಗಿ ಪ್ರಾಮುಖ್ಯತೆ ಪಡೆದಿದೆ.[೧] ತಳಭಾಗದ ಶಿಲಾವೇದಿಕೆಯ ಮೇಲೆ ನಿಲ್ಲಿಸಿರುವ ಕಪ್ಪು ಬಣ್ಣದ ನುಣುಪಾದ ಶಿಲಾಸ್ತಂಭವು ಸು. ೬ ಅಡಿಗಿಂತ ಹೆಚ್ಚು ಎತ್ತರವಾಗಿದ್ದು ಇದಕ್ಕೆ ಆರು ಮೈಗಳಿವೆ. ಇದು ಗುಹಾಮಾದರಿಯ ದೀಪಸ್ತಂಭದಂತಿದೆ ಎಂದು ಆರ್. ನರಸಿಂಹಾ ಚಾರ್‌ರವರು ಉಲ್ಲೇಖಿಸಿದ್ದಾರೆ.[೨]

ಈ ಸ್ತಂಭದಲ್ಲಿರುವ ಎರಡು ಶಾಸನಗಳು ಪ್ರಾಕೃತ ಭಾಷೆಯಲ್ಲಿವೆ. ಮೊದಲ ಶಾಸನವು 'ಸಿದ್ಧಮ್। ಜಯತಿ ಭಗವಾನ್ ಮಳವಳ್ಳಿ ದೇವೋ' ಎಂದು ಆರಂಭವಾಗಿ, 'ಪಕ್ಕಂ ಪಡಮದಿವಸಂ ಪಡಮಸಂ ಮಚ್ಚರಮ್....ನ್ದಿಣ್ಣಂ....॥' ಎಂದು ಪೂರ್ಣ ಗೊಂಡಿದೆ. ಇದರಲ್ಲಿ ಆರು ಸಾಲುಗಳಿವೆ. ಎರಡನೆಯ ಶಾಸನವೂ ಸಹ ಮೊದಲಿನಂತೆ ಆರಂಭವಾಗಿ ಗೊಬ್ಬಮ್ಹಾಣ ಸಿದ್ಧಿರಸ್ತು ಎಂದರೆ ಗೋಬ್ರಾಹ್ಮಣರಿಗೆ ಶುಭವಾಗಲಿ ಎಂದು ಕೊನೆಗೊಂಡಿದೆ. ಇದರಲ್ಲಿ ಹತ್ತು ಸಾಲುಗಳಿವೆ. ಈ ಶಾಸನದಲ್ಲಿ ಮಳವಳ್ಳಿಗೆ ಮಟಪಟ್ಟಿ ಎಂದು ಕರೆದಿದೆ. ಇದರಲ್ಲಿ ದೇವಾಲಯದ ಪ್ರಸ್ತಾಪವಿದೆ. ಈಗ ಈ ಸ್ತಂಭದ ಬಳಿಯಲ್ಲಿ ಕಲ್ಲೇಶ್ವರ ದೇವಾಲಯವಿದ್ದು ಆಗಾಗ ಜೀರ್ಣೋದ್ಧಾರಗೊಂಡಿದೆ. ಇದನ್ನು ಆಧುನಿಕ ವಿನ್ಯಾಸದಲ್ಲಿ ಪುನಃ ಕಟ್ಟಲಾಗಿದೆ. ಶಾಸನದಲ್ಲಿ 'ಭಗವಾನ್ ಮಟಪಟ್ಟಿ ದೇವೋ ಭವ' ಎಂದಷ್ಟೇ ಹೇಳಿದ್ದು ಇದು ಶೈವ ದೇವಾಲಯವಾಗಿತ್ತೆ? ಅಥವಾ ವೈಷ್ಣವ ದೇವಾಲಯವಾಗಿತ್ತೆ? ಎಂಬುದು ಸ್ಪಷ್ಟವಾಗಿ ತಿಳಿಯುವು ದಿಲ್ಲ. ಪ್ರಾಯಶಃ ಶಾಸನೋಕ್ತ ದೇವಾಲಯ ಇದೇ ಆಗಿರಬಹುದು.

ಬನವಾಸಿಯಲ್ಲಿ ಆಳುತ್ತಿದ್ದ ಮಾನವ್ಯಗೋತ್ರದ ಹಾರಿತಿಪುತ್ರ ಮಿಣ್ಹುಕಡ್ಡ ಚುಟುಕುಲಾನಂದ ಸಾತಕಣ್ಣಿಯು ಸರ್ವ ಬಾಧಾ ಪರಿಹಾರಾರ್ಥವಾಗಿ ದೇವರ ಹೆಸರಿನಲ್ಲಿ ಸಹಲಾಟವಿ ಎಂಬ ಗ್ರಾಮವನ್ನು ಮಟಪಟ್ಟಿಯ ಕೌಂಡಿನ್ಯಗೋತ್ರದ ತಕಂಚಿಯ ಮಗನಾದ ಕೌಂಡಿನ್ಯ ಗೋತ್ರದ ಹಾರಿತಿ ಪುತ್ರನಾದ ಕೊಂಡಮಾನ ಎಂಬ ಬ್ರಾಹ್ಮಣನಿಗೆ "ಬ್ರಹ್ಮದೆಜ್ಜಂ" ಎಂದರೆ ಬ್ರಹ್ಮಾದೇಯ ರೂಪದಲ್ಲಿ ಈ ಗ್ರಾಮವನ್ನು ನೀಡಿದ್ದಾನೆ. ಈ ಶಾಸನದ ಕಾಲವು ಕ್ರಿ.ಶ. ೧೫೯ ಎಂದು ಸಾಲೆತೊರೆಯವರು ಹೇಳಿದ್ದಾರೆ.[೩] ಕ್ರಿ.ಶ. ೧೮೮೦ ರಲ್ಲಿ ಬನವಾಸಿಯಲ್ಲಿ ಪತ್ತೆಯಾದ ಶಾಸನದಲ್ಲಿ 'ರಾಣೆ ಹಾರಿತಿ ಪುತಸವಿಣ್ಹುಕಡ ಚುಟುಕುಲಾನಂದ ಸಾತಕರ್ಣಿ' ಎಂದು ಹೇಳಿದೆ.

ಶಾತವಾಹನರು ಆಂಧ್ರದವರು. ಗೋದಾವರಿ ತೀರದ ಪ್ರತಿಷ್ಠಾನ ಮತ್ತು ಕೃಷ್ಣತಟಾಕದ ಅಮರಾವತಿಯು ಇವರ ರಾಜಧಾನಿಗಳಾಗಿದ್ದುವು. ಚುಟುಕುಲದವರು ಶಾತವಾಹನರ ಒಂದು

* (೧) ಉಪನ್ಯಾಸಕ : "ಪದ್ಮಶ್ರೀ" ೧೩೯, ೨ ೩ನೇ ಕ್ರಾಸ್, ಗೋಪಾಲಗೌಡ ಬಡಾವಣೆ, ಗೋಪಾಳ : ಶಿವಮೊಗ್ಗ-೪.

ಶಾಖೆಯವರು. ಶಾತವಾಹನರ ಚಕ್ರಾಧಿಪತ್ಯವು ಒಡೆದುಹೋಗುವ ಸಂದರ್ಭದಲ್ಲಿ ಚುಟುಗಳು ಬನವಾಸಿಯಲ್ಲಿ ತಲೆ ಎತ್ತಿದರು. ಒಂದು ರೀತಿಯಲ್ಲಿ ಕರ್ನಾಟಕದ ರಾಜಕೀಯಕ್ಕೆ ಹೊಸ ಜೀವ ತುಂಬಿದರು. ಈ ಶಾಸನ ಬರೆಯುವ ಕಾಲಕ್ಕೆ ಚುಟುಕುಲಾನಂದನು ಸ್ವತಂತ್ರ ರಾಜನೆಂದು ಘೋಷಿಸಿಕೊಂಡಂತೆ ತಿಳಿಯುತ್ತದೆ.

ದಾನವನ್ನು ಪಡೆದಕೊಂಡ ಮಾನ ಎಂಬ ಬ್ರಾಹ್ಮಣನ ಹೆಸರಿನೊಂದಿಗೆ 'ಹಾರಿತಿಪುತ್ರ' ಎಂದು ಸೇರಿಕೊಂಡಿದೆ ಇದು ಬೌದ್ಧಧರ್ಮೀಯರಂತೆ ಮಾತೃ ಪ್ರದಾನ ಕುಟುಂಬದ ಸಂಕೇತ ವಾಗಿದೆ. ಚುಟುಕುಲಾನಂದನು ಬೌದ್ಧ ಧರ್ಮೀಯನಾಗಿದ್ದಾನೆ. ದಾನ ನೀಡಿಕೆಯಲ್ಲಿ ಅಶೋಕನ ಶಾಸನಗಳಲ್ಲಿ "ದೇವನಾಂಪ್ರಿಯನು ಆಜ್ಞೆ ಮಾಡುತ್ತಾನೆ" ಎಂದು ಉಲ್ಲೇಖಿಸಿದೆ. ಚುಟುಕುಲಾನಂದನೂ ಸಹ ಇದರಂತೆಯೇ ಅಣಪಯತಿ ಮಹಾವಲ್ಲಭಮ್ ರಜ್ಜುಕಮ್ ಎಂದು ಆರಂಭಿಸಿದ್ದಾನೆ. ಇದರಂತೆ ಚುಟುಕುಲಾನಂದನು ಸ್ವತಃ ಮಟಪಟ್ಟಿಗೆ ಬಂದು ದೇವರ ಹೆಸರಿನಲ್ಲಿ ಬ್ರಾಹ್ಮಣನಿಗೆ ಗ್ರಾಮದಾನ ನೀಡಿಲ್ಲ. ಮೇಲಿನಂತೆ ತನ್ನ ಅಧಿಕಾರಿಗೆ ದಾನ ನೀಡಲು ಅಪ್ಪಣೆ ಕೊಟ್ಟಿದ್ದಾನೆ. ರಜ್ಜುಕಮ್ ಎಂದರೆ ಭೂಮಾಪನ ಮಾಡುವ ಅಥವಾ ಕಂದಾಯದ ಅಧಿಕಾರಿಯಾಗಿರಬಹುದು. ಮಹಾ ವಲ್ಲಭಮ್ ಎಂಬುದು ಅಧಿಕಾರಿಯ ಹೆಸರೋ ಅಥವಾ ಪದನಾಮವೋ ತಿಳಿದಿಲ್ಲ. ದಾನವನ್ನು ನೀಡಿದ ಸಹಲಾಟವಿ ಗ್ರಾಮವು ಆರು ಗ್ರಾಮಗಳಿಗೆ ಮುಖ್ಯಸ್ಥವಾಗಿದೆ ಎಂದು ಶಾಸನದಲ್ಲಿದೆ.



ಶಾಸನದಲ್ಲಿರುವಂತೆ ದಾನ ಮಾಡಿದ ಕಾಲವನ್ನು ಹಯವದನರಾಯರ ಗ್ಯಾಜೆಟಿಯರಿನಲ್ಲಿ It is dated in the second fortnight of the hot season the first day of the first year" ಎಂದು ನಿರೂಪಿಸಿದ್ದಾರೆ[೪] ಮೇಲೆ ಹೇಳಿದಂತೆ ಇದು ಕ್ರಿ.ಶ. ೧೫೯ ಆಗಿರಬಹುದು.

ಮಳವಳ್ಳಿಯ ದೇವಾಲಯ ಮತ್ತು ಬ್ರಾಹ್ಮಣನಿಗೆ ಗ್ರಾಮ ದಾನ ನೀಡಿದ ಸಮಯದಲ್ಲಿಯೇ ಚುಟುಕುಲಾನಂದ ಸಾತಕರ್ಣಿಯ ೧೨ನೆಯ ವರ್ಷದ ಹೇಮಂತ ಋತುವಿನಲ್ಲಿ ಮಹಾಭುವಿ ವಂಶದ ಮಹಾರಾಜನ ಬಾಲಿಕೆಯಾದ ಸಿವಖಡನಾಗಸಿರಿ ಎಂಬುವಳು ಬನವಾಸಿಯಲ್ಲಿ ನಾಗ ಪ್ರತಿಮೆ ಕೆರೆ ಹಾಗೂ ಒಂದು ವಿಹಾರವನ್ನು ಧರ್ಮಾರ್ಥವಾಗಿ ಕಟ್ಟಿಸಿದಳು.[೫] ಬನವಾಸಿಯಲ್ಲಿ ಸಿಕ್ಕಿದ ಪ್ರಾಕೃತ ಶಾಸನದಲ್ಲಿ "ದಮೊರಕಸ ಸಿಸೇನ ಣಟಕೇನ ನಾಗೋ ಕತೊ" ಎಂದರೆ ಈ ನಾಗಪ್ರತಿಮೆಯನ್ನು ಮಾಡಿದವನು ಆಚಾರಿಯಾದ ದಮೋರಕನ ಶಿಷ್ಯ ಣಟಕ ಎಂದು ಹೇಳಿದೆ. ಚುಟುಕುಲಾನಂದನು ಕ್ರಿ.ಶ. ೧೨೪ರಲ್ಲಿ ಬನವಾಸಿಯಲ್ಲಿ ಆಡಳಿತ ನಡೆಸುತ್ತಿದ್ದನೆಂದು ಇವನ ನಾಣ್ಯಗಳಿಂದ ತಿಳಿಯುತ್ತದೆ.[೬]

**ಎರಡನೆಯ ಶಾಸನ :** ಮಳವಳ್ಳಿಯ ಇದೇ ಸ್ತಂಭದಲ್ಲಿ 'ಸಿದ್ದಮ್ ಜಯತಿ ಭಗವಾನ್ ಮಟವಟ್ಟಿ ವೈಜಯನ್ತಿ ದೇವೋ' ಎಂದು ಆರಂಭವಾಗಿ "ಗೊಬ್ಬಮ್ಹಾಣ ಸಿದ್ಧಿರಸ್ತು" ಎಂದು ಕೊನೆಗೊಂಡಿದೆ. ಇದರಲ್ಲಿ ಹಲವಾರು ವಿಷಯಗಳು ಚರ್ಚಾಸ್ಪದ ವಾಗಿದೆ. ಶಾತವಾಹನರ ಚುಟುಕುಲಾನನ ನಂತರ ಪಲ್ಲವರ ಶಿವಸ್ಕಂದವರ್ಮನು ಕ್ರಿ.ಶ. ೩೪೦ ರಿಂದ ೩೫೨ರವರೆಗೆ ೧೨ ವರ್ಷ ಬನವಾಸಿಯನ್ನು ಆಳಿದ್ದಾನೆ. ಆದರೆ ಶಾಮಾಶಾಸ್ತ್ರಿಯವರು ವಿಷ್ಣುಕುಡ ಚುಟುಕುಲಾನನ ನಂತರ ಕ್ರಿ.ಶ. ೧೮೦ರಲ್ಲಿಯೇ ಕದಂಬರ ಆಡಳಿತ ಆರಂಭವಾಯಿತೆಂದು ಉಲ್ಲೇಖಿಸಿದ್ದಾರೆ.[೭] ಇನ್ನೊಂದು ಆಧಾರದಂತೆ ಪಲ್ಲವರ ಶಿವಸ್ಕಂದವರ್ಮನನ್ನು ಸೋಲಿಸಿ ಕದಂಬರ ಮಯೂರವರ್ಮನು ಬನವಾಸಿಯನ್ನು ಕೈವಶ ಮಾಡಿಕೊಂಡನೆಂದು ಹೇಳಲಾಗಿದೆ: Prof Rapson thinks two inscriptions from Chutu dynasty state the regime of Kadambas immediately after the reign of Shivaskanadavarman. It took place in the half of the 3rd century AD. ಹೀಗೆ ಕ್ರಿ.ಶ. ಮೂರನೆಯ ಶತಮಾನದಲ್ಲಿ ಬನವಾಸಿಯ ಕದಂಬರ ಆಡಳಿತಕ್ಕೆ ಸೇರಿತು ಎಂದು ಪ್ರೊ. ರ್‍ಯಾಪ್‌ಸನ್‌ರ ಮಾತು.

ಶಾತವಾಹನರ ನಂತರ ಪಲ್ಲವರು ಇವರ ರಾಜ್ಯವನ್ನು ವಶಪಡಿಸಿಕೊಂಡರೆಂದು ಬಿ.ಆರ್. ಗೋಪಾಲ್‌ರವರ ಅಭಿಪ್ರಾಯವಾಗಿದೆ.[೮] Early pallavas were the successors of Satavahanas.[೯] ಕದಂಬರು ಬನವಾಸಿಯಲ್ಲಿ ಕ್ರಿ.ಶ. ಮೂರನೆ ಶತಮಾನದ ಮಧ್ಯದಲ್ಲಿ ಆಳುತ್ತಿದ್ದರೆಂದು ಡಾ. ಸಾಲೆತೊರೆಯವರು ಹೇಳಿದ್ದಾರೆ[೧೦] ಒಟ್ಟಿನಲ್ಲಿ ಕದಂಬರ

ಮಯೂರವರ್ಮನು ಕ್ರಿ.ಶ. ೪ನೆಯ ಶತಮಾನದಲ್ಲಿ ಪಲ್ಲವರ ಶಿವಸ್ಕಂದವರ್ಮನನ್ನು ಪರಾಜಯಗೊಳಿಸಿ ಬನವಾಸಿಯಿಂದ ಆಡಳಿತ ನಡೆಸಲು ಆರಂಭಿಸಿದನು. ಚುಟುಗಳು ಮತ್ತು ಕದಂಬರು ವೈಜಯನ್ತೀ ಪುರವರಾ ಧೀಶ್ವರರು ಮತ್ತು ಮಾನವ್ಯ ಗೋತ್ರದ ಹಾರಿತಿ ಪುತ್ರರೆಂದು ಹೇಳಿಕೊಂಡಿದ್ದಾರೆ.

ಇದೇ ಶಾಸನದಲ್ಲಿ ಹೇಳಿರುವಂತೆ[೧೧] ಶಿವಸ್ಕಂದವರ್ಮನು ಈ ಮೊದಲು ಚುಟುಕುಲಾನಂದನು ನೀಡಿದ್ದ ಗ್ರಾಮವನ್ನು ದಾನಕ್ಕೆ ಮುಂದುವರಿಸಿದ್ದಾನೆ. ಅಲ್ಲದೆ ಸಹಲಾಟವಿ ಗ್ರಾಮದೊಂದಿಗೆ ಸೋಮವಟ್ಟೆ, ಕೊಂಜಿನಗರಂ, ಮರಿಯಸಾಕಂ, ಪೆಂದೂಲಾಪುರ, ಮುಚ್ಚುಂಡಿ, ಕುಂದಮುಚ್ಚುಂಡಿ, ಕಪ್ಪೆನ್ನೆಲ, ಕುಂಡತಪುರಂ, ವೆಟ್ಟಕ್ಕಿ, ವೇಗೂರು, ಕುಂದತಪುರಂ, ಎಕ್ಕದ್ದಾಹಾರಂ ಎಂಬ ಹನ್ನೆರಡು ಗ್ರಾಮಗಳನ್ನು ಹೊಸದಾಗಿ ಸೇರ್ಪಡೆಮಾಡಿ ದಾನ ಮಾಡಿದ್ದಾನೆ. ಈ ಗ್ರಾಮಗಳ ಕೆಲವು ಹೆಸರುಗಳನ್ನು ಈಗಲೂ ಗುರುತಿಸಬಹುದು. ಈ ಶಾಸನದಲ್ಲಿ ಮೊದಲು ದಾನ ಪಡೆದ ಬ್ರಾಹ್ಮಣನ ಹೆಸರಿಲ್ಲ. ಕಾರಣ ತಿಳಿಯುವುದಿಲ್ಲ. ಒಟ್ಟು ಹದಿಮೂರು ಗ್ರಾಮಗಳನ್ನು ಮಟಪಟ್ಟಿಯ ದೇವರ ಹೆಸರಿನಲ್ಲಿ ಕೌಂಡಿನ್ಯಗೋತ್ರದ ಕೋಸಕಿಯ ಮಗನಾದ ಕೊಣ್ಡಮಾಣಕುಲಪತಿಲಕನಾದ ಸಿರಿನಾಗದತ್ತ ಎಂಬ ಬ್ರಾಹ್ಮಣನಿಗೆ ನೀಡಲಾಗಿದೆ.

ಮಟಪಟಿಯಲ್ಲಿದ್ದ ಅಧಿಕಾರಿ ನಾಗದತ್ತನು ಈ ಗ್ರಾಮಗಳನ್ನು ಬ್ರಾಹ್ಮಣ ಸಿರಿನಾಗದತ್ತನಿಗೆ ರಾಜಾಜ್ಞೆಯಂತೆ ವ್ಯವಸ್ಥಿತವಾಗಿ ವಹಿಸಿಕೊಟ್ಟು ಮಟಪಟ್ಟಿಯ ಶಿಲಾಸ್ತಂಭದ ಅನುಕೂಲಕರವಾದ ಸ್ಥಳದಲ್ಲಿ ಪ್ರಾಕೃತದಲ್ಲಿ ಶಾಸನ ಬರೆಸುವಂತೆ ಆದೇಶಿಸಿದ್ದಾನೆ. ಮಟಪಟ್ಟಿಯ ದೇವರ ಹೆಸರಿನಲ್ಲಿ ಈ ದಾನವಿದೆ. ಅಲ್ಲದೆ ಕಷ್ಟಗಳ ಪರಿಹಾರ ಮತ್ತು ಆಯುಸ್ಸಿನ ವೃದ್ಧಿಗಾಗಿ ಈ ಗ್ರಾಮಗಳನ್ನು ನೀಡಿದೆ ಎಂಬ ಉದ್ದೇಶವನ್ನು ಇದರಲ್ಲಿ ಹೇಳಿದೆ.

ಈ ಶಾಸನದಲ್ಲಿ ಶಿವಸ್ಕಂದವರ್ಮನನ್ನು ಕದಮ್ಬಾಣಂ ಎಂದರೆ ಕದಂಬರ ದೊರೆ ಎಂಬ ಅರ್ಥದಲ್ಲಿ ನಮೂದಿಸಿದೆ. ಆದರೆ ಕದಂಬರ ವಂಶದಲ್ಲಿ ಶಿವಸ್ಕಂದವರ್ಮ ಎಂಬ ಹೆಸರಿನ ಯಾವ ರಾಜನೂ ಆಡಳಿತ ನಡೆಸಿಲ್ಲ. ಇವನು ಪಲ್ಲವರ ದೊರೆಯೇ ಆಗಿದ್ದಾನೆ. ಆಂಧ್ರದಲ್ಲಿ ಕ್ರಿ.ಶ. ಮೂರು ಅಥವಾ ನಾಲ್ಕನೆಯ ಶತಮಾನದಲ್ಲಿ ಆಳುತ್ತಿದ್ದ ಶಿವಸ್ಕಂದವರ್ಮನು ಬೊಪ್ಪದೇವನ ಮಗ. ಇವನು ಈ ದಾನವನ್ನು ಕೊಟ್ಟವನಲ್ಲ. ಇದನ್ನು ಕುರಿತು Shivaskanda Varman an Andhra King son of Boppa Deva. First dynasty 3-4 century Capital was Kanchi.[೧೨] He is Said to have performed Agnistoma, Ashvamedha sacrifices[೧೩]. ತಮಿಳು ನಾಡಿನ ಕಂಚಿಯಲ್ಲಿ ಆಳುತ್ತಿದ್ದ ಶಿವಸ್ಕಂದವರ್ಮನು ಅಗ್ನಿಷ್ಟೋಮ ಮತ್ತು ಅಶ್ವಮೇಧಯಾಗವನ್ನು ಮಾಡಿದ್ದಾನೆ. ಮಟವಟ್ಟಿ ಶಾಸನದಲ್ಲಿ ಹೇಳಿರುವ ಈ ದೊರೆಯೇ ಗ್ರಾಮ ದಾನವನ್ನು ನೀಡಿದವನು. ಆದರೆ ಇವನು ಕದಂಬ ವಂಶದವನಲ್ಲ ಎಂದು ಮೇಲೆ ಹೇಳಿದೆ. ಹಾಗಾದರೆ ಈ ಗ್ರಾಮಗಳನ್ನು ದಾನ ಮಾಡಿದ ನಿಜವಾದ ದೊರೆ ಯಾರು? ಎಂಬ ಸಂದೇಹವಿದೆ.

ಇನ್ನೊಂದು ಆಧಾರದಂತೆ : It is more by way of appropriation that Mayuravarma took the name of pallava ruler. He is also betook the imperial title of Dharma maharaja adhiraja[೧೪] after the fashion of pallava shivaskandavarman.

ಕದಂಬರ ಮಯೂರವರ್ಮನು ಪಲ್ಲವರ ದೊರೆ ಶಿವಸ್ಕಂದವರ್ಮನನ್ನು ಶಿವ-ಕಡ-ವರ್ಮ ಎಂದು ಹೆಸರಿಸಿ ತಾನೇ ಶಿವಸ್ಕಂದವರ್ಮನ ಹೆಸರಿನಲ್ಲಿ ಹನ್ನೆರಡು ಗ್ರಾಮಗಳನ್ನು ದಾನವಾಗಿ ನೀಡಿದ್ದಾನೆ. ಅಲ್ಲದೆ ಪಲ್ಲವ ದೊರೆಯ ಧರ್ಮಮಹಾ ರಾಜಾಧಿರಾಜ ಎಂಬ ಬಿರುದನ್ನು ಪಡೆದುಕೊಂಡನೆಂದು ಕೆ.ವಿ. ರಮೇಶ್‌ರವರು ಹೇಳಿದ್ದಾರೆ. ಮಯೂರವರ್ಮನು ಸ್ವತಂತ್ರ ಸಾರ್ವಭೌಮ ಕದಂಬ ರಾಜ್ಯಸ್ಥಾಪಕ. ಇವನು ಯಾರ ಮಾಂಡಲಿಕನೂ ಅಲ್ಲ. ಇವನಿಗೂ ಶಿವಸ್ಕಂದವರ್ಮನಿಗೂ ಯಾವ ಸಂಬಂಧವಿಲ್ಲ. ಹೀಗಿರುವಾಗ ಅವನ ಹೆಸರಿನಲ್ಲಿ ಗ್ರಾಮಗಳ ದಾನ ನೀಡಿರುವ ಔಚಿತ್ಯವೇನು? ಇದನ್ನು ಒಪ್ಪಬಹುದೆ? ಪ್ರಾಯಶಃ ಹಿಂದೆ ಶಿವಸ್ಕಂದವರ್ಮನು ನೀಡಿದ ಹನ್ನೆರಡು ಗ್ರಾಮಗಳೂ ಸೇರಿ ಒಟ್ಟು ಹದಿಮೂರು ಗ್ರಾಮಗಳ ದಾನವನ್ನು ಸ್ಥಿರೀಕರಿಸಿ ಕದಂಬರ ದೊರೆಯೊಬ್ಬನು ಮುಂದುವರೆಸಿದಂತೆ ತಿಳಿಯುತ್ತದೆ. ಶಾಸನದಲ್ಲಿ ಕದಂಬ ಎಂದು ಮಾತ್ರ ಹೇಳಿದೆ. ರಾಜನ ಹೆಸರನ್ನು ಹೇಳಿಲ್ಲ. ಒಟ್ಟಿನಲ್ಲಿ ಈ ದಾನವನ್ನು ಯಾರು ನೀಡಿದರೆಂಬುದು ವಿವಾದಾಸ್ಪದವಾಗಿದೆ.

ಮೊದಲ ಬಾರಿ ಒಬ್ಬ ಬ್ರಾಹ್ಮಣನಿಗೆ ಹದಿಮೂರು ಗ್ರಾಮಗಳನ್ನು ದಾನವಾಗಿ ನೀಡಿರುವುದು ಅಪರೂಪವೆನಿಸುತ್ತದೆ. ಕ್ರಿ.ಶ. ನಾಲ್ಕರಿಂದ ಏಳನೆಯ ಶತಮಾನದವರೆಗೆ ಬ್ರಹ್ಮಾದಾಯ ಪದ್ಧತಿ ಇತ್ತೆಂದು ತಿಳಿಯುತ್ತದೆ. ಅಲ್ಲದೆ ಶಾತವಾಹನರ ಕಾಲದಲ್ಲಿ All the four varnas mentioned in the satavahana inscriptions were not well established in the dominion. ಬ್ರಾಹ್ಮಣರ ಮೇಲೆ ಬೌದ್ಧ ಧರ್ಮದ ಪ್ರಭಾವವು ಹೆಚ್ಚಾಗಿತ್ತು ಎಂದು ಇತಿಹಾಸಕಾರರಾದ ಸಾಕಿಯವರು ಹೇಳಿದ್ದಾರೆ.[೧೫]

ದಾನ ನೀಡಿರುವ ಹದಿಮೂರು ಗ್ರಾಮಗಳು ಒಂದೇ ಘಟಕದಂತಿತ್ತು. ಈ ಗ್ರಾಮಗಳ ನೂರಾರು ಎಕರೆಗಳ ವ್ಯವಸಾಯದ ಭೂಮಿಯನ್ನು ಸಾಗುವಳಿ ಮಾಡಲು ಸುಲಭವಾಗಿರಲಿಲ್ಲ. ಇದರಿಂದ ಭೂಮಿಯನ್ನು ವಿಂಗಡಿಸಿ ಸಾಗುವಳಿಗೆಂದು ವ್ಯವಸಾಯ ಗಾರರಿಗೆ ನೀಡಿರಬಹುದು. ಇದರಿಂದ ಗೇಣಿಪದ್ಧತಿಯು ಆರಂಭ ವಾಗಿರಬೇಕು. ಅಲ್ಲದೆ ಸುಧಾರಿತ ನೇಗಿಲಿನ ಬಳಕೆ, ಬಿತ್ತನೆ ಉತ್ತಮ ತಳಿಯ ಬೀಜ ಮತ್ತು ಗೊಬ್ಬರ ಬಳಕೆ ಜಮೀನಿನಲ್ಲಿ ಬೇರೆ ಬೇರೆ ಬೆಳೆಗಳನ್ನು ಬೆಳೆಸುವುದು ಮುಂತಾದ ಮಾದರಿ ಬೇಸಾಯ

ಪದ್ಧತಿಯನ್ನು ಅಳವಡಿಸಿರಬಹುದು. ರೈತರು ಇದನ್ನು ಅನುಸರಿಸಲು ಸಹಕಾರಿಯಾಯಿತು! ಎಂದು ಸಾಕಿಯವರು ಹೇಳಿದ್ದಾರೆ.[೧೬] ಸಾಕಿಯವರು ಬಳಸಿದ **ಸಂಘ** ಪದಕ್ಕೆ ವಿಶೇಷವಾದ ಅರ್ಥವಿದೆ. ಇಲ್ಲಿ ಸಂಘ ಎಂದರೆ ಸುಸಂಘಟಿತ ಸಾಮಾಜಿಕ ಸಂಸ್ಥೆ ಎಂದಾಗುತ್ತದೆ. ಇದು ಒಂದೊಂದು ಜಾತಿ, ಕುಲ, ಮತ್ತು ಪಂಗಡಗಳ ಸಂಪ್ರದಾಯವನ್ನು ಕಟ್ಟಿ ಬೆಳೆಸಿತ್ತು. ಇನ್ನೊಂದು ಅರ್ಥದಲ್ಲಿ ಜಾತೀಯ ಸಂಘಗಳಿಗೆ 'ಕೂಟ' ಎಂಬ ಹೆಸರಿತ್ತು. ಇದರಲ್ಲಿ ಬ್ರಾಹ್ಮಣ ಪಂಗಡವೂ ಸೇರ್ಪಡೆಯಾಗಿತ್ತು. ಮುಂದೆ ಇದೇ ಗ್ರಾಮಪಂಚಾಯಿತಿಯು ಹುಟ್ಟಿಕೊಳ್ಳಲು ಆಧಾರವಾಯಿತೆಂದು ಸಾಲೆತೊರೆ ಮತ್ತು ದೇಸಾಯಿಯರು ಹೇಳಿದ್ದಾರೆ.[೧೭]

ಮಟವಟ್ಟಿಯ ಸ್ತಂಭಶಾಸನದಂತೆ ಒಬ್ಬ ಶ್ರೀಮಂತ ಭೂಮಾಲೀಕನನ್ನು ಸೃಷ್ಟಿಸಿದಂತಾಗಿತ್ತು. ಬ್ರಹ್ಮಾದಾಯದ ಕಾರಣ ಸರಕಾರಕ್ಕೆ ಈ ಗ್ರಾಮಘಟಕಗಳ ಮೇಲೆ ವಿಶೇಷವಾದ ಆಡಳಿತದ ಅಧಿಕಾರವಿರಲಿಲ್ಲವೆಂದು ತಿಳಿದುಬಂದಿದೆ. ಹದಿಮೂರು ಗ್ರಾಮಗಳ ದಾನವನ್ನು ಪಡೆದ ಸಿರಿನಾಗದತ್ತನು ಗ್ರಾಮಗಳ ರಕ್ಷಣೆ ಮತ್ತು ಆಡಳಿತದಂತಹ ಗುರುತರವಾದ ಕಾರ್ಯಗಳನ್ನು ನಿರ್ವಹಿಸಬೇಕಾಯಿತು. ಸ್ಥಳೀಯ ನಾಯಕರು, ವ್ಯವಸಾಯಗಾರರು ಮತ್ತು ವ್ಯಾಪಾರಿಗಳು ಇವನೊಂದಿಗೆ ಸೇರಿಕೊಂಡಿರಬಹುದು. ಇದನ್ನೇ ಸಾಕಿಯವರು ಒಂದು ಸಂಘ ಎಂದು ಕರೆದಿರಬೇಕು. ಗ್ರಾಮಗಳ ಉತ್ಪನ್ನವನ್ನು ದೇವಾಲಯದ ನಿರ್ವಹಣೆ ಹಾಗೂ ಗ್ರಾಮಗಳ ರಕ್ಷಣೆಗೂ ವಿನಿಯೋಗಿಸಬೇಕಾಯಿತು. ಆದರೆ ಭೂಕಂದಾಯ, ತೆರಿಗೆ ಇತ್ಯಾದಿ ಯಾವ ವಿವರಗಳೂ ಶಾಸನದಲ್ಲಿಲ್ಲ. ಈ ಎಲ್ಲ ಗ್ರಾಮಗಳಲ್ಲಿ ಬೇಸಾಯ ಮಾಡುತ್ತಿದ್ದ ರೈತರು ಭೂಮಾಲೀಕರ ಅಧೀನಕ್ಕೆ ಒಳಪಟ್ಟಿರಬೇಕು.

ಜಯತಿ ಭಗವಾನ್ ಮಟಪಟ್ಟಿದೇವ ಎಂದು ಶಾಸನದಲ್ಲಿ ಹೇಳಿರುವಂತೆ ಮಟವಟ್ಟಿಯ ದೇವಾಲಯವು ಪ್ರಸಿದ್ಧಿ ಪಡೆದಿತ್ತು. ಕ್ರಿ.ಶ. ಸು. ಎರಡನೆಯ ಶತಮಾನದಲ್ಲಿಯೇ ಮಟಪಟ್ಟಿಯು ಅಭಿವೃದ್ಧಿ ಹೊಂದಿದ ಒಂದು ಪುರವೋ ಅಥವಾ ಪಟ್ಟಣವಾಗಿದ್ದ ಸಾಧ್ಯತೆ ಇದೆ. ಇದು ಚುಟುಕುಲದವರ ಒಂದು ಆಡಳಿತ ಸ್ಥಳವಾಗಿರಬಹುದು.

ಕ್ರಿ.ಶ. ಸು. ೧೮೦೦ ವರ್ಷಗಳಿಂದ ನಿಂತಿರುವ ಮಳವಳ್ಳಿಯ ಸ್ತಂಭ ಶಿಲಾಶಾಸನದಿಂದ ಹೀಗೆ ತಿಳಯಬಹುದು :

೧. *ಶಾತವಾಹನರು ಪಲ್ಲವರು ಮತ್ತು ಆದಿಕದಂಬರ ಕಾಲದಲ್ಲಿ ಪ್ರಾಕೃತ ಭಾಷೆಯು ಇನ್ನೂ ಬಳಕೆಯಲ್ಲಿತ್ತು.*

೨. *ಈ ಶಾಸನದ ಕಾಲದ ನಂತರ ಮಯೂರವರ್ಮನು ಅಹಿಛತ್ರದಿಂದ ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರ ಕುಟುಂಬಗಳನ್ನು ಕರೆತರಿಸಿ ಅಗ್ರಹಾರಗಳಲ್ಲಿ ನೆಲೆಗೊಳಿಸಿದನು.*

೩. *ಕದಂಬರ ನಂತರ ಬ್ರಾಹ್ಮಣರ ಹೆಸರಿನ ಹಿಂದೆ ಹಾರಿತಿಪುತ್ರ ಇತ್ಯಾದಿ ಬೌದ್ಧ ಪರ ಅಂಕಿತದ ಬಳಕೆ ನಿಂತು ಹೋಯಿತು ಎಂದು ತಿಳಿದುಬಂದಿದೆ.*

ಮಳವಳ್ಳಿಯ ಶಿಲಾಸ್ತಂಭವು ಪ್ರಾಚೀನವಷ್ಟೇ ಅಲ್ಲದೆ ಹಲವಾರು ಅಪರೂಪದ ಐತಿಹಾಸಿಕ ವಿಷಯಗಳನ್ನು ತಿಳಿಸುತ್ತದೆ.



***

**ಆಧಾರಸೂಚಿ ಮತ್ತು ಟಿಪ್ಪಣಿಗಳು**


೧. ಎ.ಕ.ಸಂ ೮, ಶಿಕಾರಿಪುರ ೨೬೩ (ಮಳವಳ್ಳಿ; ಕ್ರಿ.ಶ. ೧೫೯).

೨. A sort of bracket for a light has been fixed on the lower end a pillar in this form - R. Narasimhachar in Mysore Gazetteer P. 69.

೩. **ಕನ್ನಡ ನಾಡಿನ ಚರಿತ್ರೆ** ೧೯೭೩ ಡಾ. ಸಾಲೆತೊರೆ, ಪಿ.ಬಿ. ದೇಸಾಯಿ, ಸಂ. ಪು. ೧೮.

೪. *Hayavadana Rao Mysore Cazetter*. ಸಂ. P. 69.

೫. ಹೆಚ್. ಆರ್. ರಘುನಾಥಭಟ್ಟ., **ಬನವಾಸಿ ಸಮಗ್ರ ಪರಿಚಯ**, ಪು. ३२.

೬. ಕ್ರ.ಸಂ. ೫ ರಂತೆ.

೭. ಕ್ರ.ಸಂ. ೪ ರಂತೆ ಪುಟ ೪೯೪.

೮. B.R. Gopal; *Corpus of Kadamba inscriptions* Vol I.

೯. ಕ್ರ.ಸಂ. ೮ರಂತೆ ಪು. ೫೨೫.

೧೦. ಕ್ರ.ಸಂ. ३ರಂತೆ ಪು. ೨೪.

೧೧. ಎ.ಕ.ಸಂ.೭ ಶಿಕಾರಿಪುರ ೨೬೪ ಮಳವಳ್ಳಿ.

೧೨. ಕ್ರ.ಸಂ. ೪ರಂತೆ ಪುಟ ೫೨೩-೫೨೪.

೧೩. ಕ್ರ.ಸಂ. ೮ರಂತೆ ಪುಟ ೫೨೫.

೧೪. Dr. K.V. Ramesh., *Kadamba-Pallava-Ganga relationship and kadambas, their History and culture* page 38.

೧೫. Saki., *Making of History* page 121.

೧೬. ಕ್ರ.ಸಂ. ೧೫ರಂತೆ ಪು. ೧೨೧.

೧೭. ಕ್ರ.ಸಂ. ३ರಂತೆ ಪುಟ ೯೬.

ಪ್ರೊ. ಕ. ವೆಂ. ರಾಜಗೋಪಾಲ*

# ಹಲ್ಮಿಡಿ ಶಾಸನ ಒಂದು ಅಧ್ಯಯನ

*ಶಾಸನಗಳು ಜನಜೀವನದ ನೇರಸಂಪರ್ಕಕ್ಕಾಗಿ ರಚಿತವಾಗಿವೆ; ಅವುಗಳ ಅಧ್ಯಯನ ಬಹೂಪಯೋಗಿ ಯಾಗಿದೆ. ಹೀಗಾಗಿ ಪ್ರತಿ ಶಾಸನವನ್ನೂ ಅದಕ್ಕೆ ನ್ಯಾಯವಾದ ಸಾಂಸ್ಕೃತಿಕ ನ್ಯಾಯಕ್ಕೆ ಅರ್ಥೈಸುವುದು ಮುಖ್ಯವಾಗಿದೆ. ಈ ಹಿನ್ನೆಲೆಯಲ್ಲಿ 'ವಿರಚನೆ' ಎಂಬ ಸಾಹಿತ್ಯ ಪರಿಶೀಲನೆಯ ಆಧುನಿಕ ತಂತ್ರವನ್ನು ಬಳಸಿ ಹಲ್ಮಿಡಿ ಹಾಗು ಇತರ ಶಾಸನಗಳನ್ನು ಪರಿಶೀಲಿಸಬೇಕಿದೆ.*

ಶಾಸನಗಳ ಅಧ್ಯಯನದಿಂದ ನಮ್ಮ ಇತಿಹಾಸವನ್ನು ವಿಮರ್ಶಿಸಬಹುದು. ಮತ್ತು ಅದಕ್ಕೆ ಸೇರಬೇಕಾದ ಸತ್ಯಾಂಶಗಳನ್ನು ಕಂಡುಕೊಳ್ಳಬಹುದು. ವಾಸ್ತವವಾಗಿ ಶಾಸನಗಳನ್ನು ನಮ್ಮ ಸಾಂಸ್ಕೃತಿಕ ಇತಿಹಾಸದ ಪುನಾರಚನೆಗೆ ನೇರವಾಗಿ ಸೇರಿಸಬಹುದು. ಇಂಥ ಪ್ರಯತ್ನದಲ್ಲಿ ಮೊದಲಿಗೆ ಭಾಷೆಯ ಲಿಪಿರೂಪದ ಮೂಲಕ ವಿಕಾಸವನ್ನೂ ಗುರುತಿಸಬಹುದು. ನಂತರ ಅಂದಂದಿನ ಸಾಮಾಜಿಕ ಲಕ್ಷಣಗಳನ್ನು ಗುರುತಿಸಬಹುದಾಗಿದೆ. ಶಾಸನಗಳು ಜನಜೀವನದ ನೇರ ಸಂಪರ್ಕಕ್ಕಾಗಿ ರಚಿತವಾಗಿರುವುದರಿಂದ ಬಹುಮುಖ್ಯವಾದ ನಮ್ಮ ದಾಖಲಾತಿಗೆ ಅದನ್ನು ಸೇರಿಸಬೇಕಾಗುತ್ತದೆ. ಭಾಷೆಯದಾಗಲಿ ಬದುಕಿನದ್ದಾಗಲಿ ಸ್ಥಿತಿಗತಿಯು ವಿಕಾಸದ ಏರುಪೇರುಗಳಲ್ಲಿರುವುದರಿಂದ ಅದರ ಕಾಲದ ಒಕ್ಕಣೆಯೂ ಅತ್ಯವಶ್ಯ ದಾಖಲೆಯಾಗುತ್ತದೆ. ಅಲ್ಲದೆ ಅದರ ಶಿಲ್ಪ ಸ್ವರೂಪವೂ ಬಹಳ ಉಪಯುಕ್ತ ಸಾಧನವಾಗುತ್ತದೆ. ಹೀಗೆ ಶಾಸನದ ಅಧ್ಯಯನವು ಬಹೂಪಯೋಗಿಯಾಗಿದೆ. ಅಲ್ಲದೆ ಪ್ರತಿ ಶಾಸನವನ್ನೂ ಅದಕ್ಕೆ ನ್ಯಾಯವಾದ Cultural justification ಸಾಂಸ್ಕೃತಿಕ ನ್ಯಾಯಕ್ಕೆ ಅರ್ಥೈಸುವುದು ಮುಖ್ಯ ಹಾಗೂ ಕರ್ತವ್ಯವೆನ್ನಬಹುದು. ಈ ಬಗೆಯಲ್ಲಿ ಇಂದು ಹಲ್ಮಿಡಿ ಮತ್ತು ಅದರ ಹಿಂದುಮುಂದಿನ ಶಾಸನಗಳನ್ನು ಇಲ್ಲಿ ಪರಿಶೀಲಿಸಲಾಗಿದೆ. ಇದಕ್ಕಾಗಿ ವಿರಚನೆ ಅಂದರೆ Deconstruction (of the text) ಎಂಬ ಸಾಹಿತ್ಯ ಪರಿಶೀಲನೆಯ ಆಧುನಿಕ ತಂತ್ರವನ್ನು ಬಳಸಬಹುದಾಗಿದೆ. ಇದಕ್ಕಾಗಿ ಈಗ ದೊರೆಯುತ್ತಿರುವ ತ್ರುಟಿತಾವಸ್ಥೆಯಲ್ಲಿರುವ ಕೃತಿಗಳಿಂದ ಆಯ್ದ ಪ್ರತಿಯನ್ನು ಕಂಪ್ಯೂಟರ್ ನೆರವಿನಿಂದ ಅಥವಾ ಡಿಜಿಟಲ್ ಕ್ಯಾಮರಾ ಬಳಸಿ ಪರಿಶೀಲಿಸಬಹುದು. ಹೀಗೆ ಮಾಡಿದಲ್ಲಿ ಶಾಸನದ ಪ್ರತಿ ಅಕ್ಷರ ಚಿಹ್ನೆಯನ್ನೂ ಎಚ್ಚರಿಕೆಯಿಂದ ಗುರುತಿಸಬಹುದು.

ಹಲ್ಮಿಡಿಯ ಶಾಸನವನ್ನು (ಕನ್ನಡದ ಮೊಟ್ಟಮೊದಲ) ತೆಗೆದುಕೊಂಡಾಗ ಈವರೆಗೂ ಅಂದರೆ ಡಾ|| ಎಂ.ಎಚ್. ಕೃಷ್ಣ (೧೯೩೬) ರಿಂದ ಮೊದಲು ಮಾಡಿ ಅನೇಕ ವಿದ್ವಾಂಸರು ಅದರ 'ಪಾಠ'ವನ್ನು ಓದಿ ಅರ್ಥೈಸಿರುವ ಪ್ರತಿಯೊಂದನ್ನೂ ಪುನರ್ವಿಮರ್ಶೆಗೆ ಒಳಪಡಿಸಬಹುದಾಗಿದೆ. ಈ ವಿಷಯದಲ್ಲಿ ಶಾಸನಪಾಠ (ರೈಸ್ ಸಾಹೇಬರು)ಗಳನ್ನು ಸೂಕ್ಷ್ಮವಾಗಿ ಓದಿ ವಿಮರ್ಶಿಸಬೇಕಾಗಿದೆ ಎಂಬ ಅನುಮಾನವನ್ನು ಆಧರಿಸಿ ಈ ವಿರಚನೆಯನ್ನು ಮಾಡಲಾಗಿದೆ.

ಎಂ.ಎಚ್. ಕೃಷ್ಣರು ತೆಗೆದ ಪಡಿಯಚ್ಚು ಕನ್ನಡ ಲಿಪಿಯಲ್ಲದೆ, ವಿಚಾರದಲ್ಲಿ ಕೂಡ ಕೆಲವು ಸೂಕ್ಷ್ಮ ಪ್ರಶ್ನೆಗಳನ್ನು ಎತ್ತಿವೆ ಎಂಬುದನ್ನು ಈಚಿನ ವಿದ್ವಾಂಸರು ಉತ್ತರಗಳನ್ನು ಹುಡುಕಿ ತೋರಿಸಲು

* ಕೆಂಗೇರಿ, ಬೆಂಗಳೂರು ಜಿಲ್ಲೆ.

ಪ್ರಯತ್ನಿಸಿದ್ದಾರೆ. ಇಂಥವು ಶಾಸನ ಸಂಪುಟಗಳಲ್ಲಿವೆ ಹಾಗೂ ಪಿಎಚ್.ಡಿ ಪದವಿಗಳಿಗೂ ಆಧಾರವಾಗಿವೆ. ಆದುದರಿಂದ ಈ ವಿರಚನೆಯು ಅವಶ್ಯವಾಗಿ ಕಂಡುಬಂದಿದೆ.

*

ಹಲ್ಮಿಡಿ ಶಾಸನದ ವಿರಚನೆಯನ್ನು ನಿರ್ಧರಿಸುವಲ್ಲಿ ಅದರ ಸಮೀಪದ (ಕಾಲದ) ತಮಟಕಲ್ಲು ಶಾಸನ ಮತ್ತು ಬದಾಮಿಯ ಕಪ್ಪೆ ಅರಭಟ್ಟನ ಶಾಸನ- ಇವುಗಳೂ ಆಧಾರವಾಗಿವೆ.

೧. ಕಪ್ಪೆ ಅರಭಟ್ಟನ ಶಾಸನದ ಪಡಿಯಚ್ಚು ಅಚ್ಚುಕಟ್ಟಾಗಿ ಕಂಡುಬರುತ್ತದೆ. ಆದರೆ ಅದನ್ನು ಅಚ್ಚಿಗೆ ಸಿದ್ಧಪಡಿಸುವಲ್ಲಿ ಬ್ರಷ್‌ನಲ್ಲಿ ತಿದ್ದಿ ಬರೆದಿರಬಹುದಾದ ಸಾಧ್ಯತೆಯಿದೆ. ಅದರ ಮೊದಲ ಪದವಾದ ಕಪ್ಪೆ ಅರಭಟ್ಟನ್ - ಎಂಬ ಪದದಲ್ಲಿ 'ಕಪ್ಪೆ' ಪ್ರಯೋಗವು ಭಾಷೆಯ ಇತಿಹಾಸದ ದೃಷ್ಟಿಯಿಂದ ನಡುಗನ್ನಡದ ಕಾಲಕ್ಕೆ ಸೇರಬಹುದು. ಸು. ಕ್ರಿ.ಶ. ೭೦೦ರ (ನಂತರವೂ ಇರಬಹುದು) ಸಮಯಕ್ಕೆ ಹೊಂದುವಂಥದು ಅಂದರೆ ಅದು 'ಕಟ್ಪೆ' ಎಂದಿರಲೇಬೇಕಾದುದು, ಸಹಜ; ಅಲ್ಲದೆ ಕಪ್ಪೆರಾಯ-ಕಪ್ಪಣ್ಣ ಎಂಬ ಪ್ರಯೋಗಗಳು ಮನೆ ಮಾತಿನಲ್ಲಿರುವುದರಿಂದ ಕಟ್ಪೆಯೂ ಕಟಿಪೆ ಎಂಬ ರೂಪಗಳಲ್ಲಿ ವಿಘ್ನೇಶ್ವರದ ಕನ್ನಡ ರೂಪವಾಗಿರಬೇಕು. ಆದುದರಿಂದ ಕಪ್ಪೆಅರಭಟ್ಟ-ಎಂಬಲ್ಲಿ ಕಟ್ಪೆ ಅರಭಟ್ಟ - ಪ್ರಯೋಗವೂ ಸಾಧುವಾಗುತ್ತದೆ. ಇಲ್ಲಿ ಪಡಿಯಚ್ಚಿನ ದೋಷವು ಗಮನ ಸೆಳೆಯುತ್ತದೆ. ಆದರೆ ವಿದ್ವಾಂಸರು ಯಾರೂ ಈ ವಿಚಾರವನ್ನು ಎತ್ತದೆ ಸುಮ್ಮನಿರುವುದು ಆಶ್ಚರ್ಯವನ್ನುಂಟು ಮಾಡಿದೆ.

೨. ಇನ್ನು ತಮಟಕಲ್ಲಿನ ಶಾಸನದ ಬಗ್ಗೆಯೂ : ಪಡಿಯಚ್ಚನ್ನು ಓದಿದವರು ಮೇಲಿನ ಸಂಸ್ಕೃತ ಮತ್ತು ಕೆಳಗಿನ ಕನ್ನಡ ಬರಹಗಳ ನಡುವೆ ಮೂವರು ಬಿಲ್ಲುಗಾರರ ರೇಖಾ ಚಿತ್ರಗಳಿವೆ. ಇದನ್ನು ಗುಣಮಧುರನ ಶಾಸನ ಎಂದು ಕರೆಯುವಲ್ಲಿ ಅನುಮಾನಗಳಿಗೆ ಅವಕಾಶವಾಗಿದೆ.

ಮೇಲೆ ಹೇಳಿರುವ ಎರಡೂ ಶಾಸನಗಳ ಪಡಿಯಚ್ಚಿಂದು ವಿದ್ವಾಂಸರು ಶಾಸನ ಸಂಪುಟಗಳಲ್ಲೂ ಸಾಹಿತ್ಯ ಚರಿತ್ರೆಗಳಲ್ಲು ಕಂಡುಬಂದಿರುವುದರಿಂದ ಪುನರಾಲೋಚನೆಯ ಹಾಗೂ ವಿರಚನೆಯ ಅವಶ್ಯಕತೆಯುಂಟಾಗಿದೆ. ಆದುದರಿಂದ ಹಲ್ಮಿಡಿಯ ಶಾಸನದ ನ್ಯಾಯವಾದ ಪಡಿಯಚ್ಚಿನ ವಿರಚನೆಯನ್ನು ಮುಖ್ಯ ಮಾಡಲಾಗಿದೆ.

*

೩. ಈ ವಿರಚನೆಯನ್ನು ಈವರೆಗೂ ರೂಢಿಗೆ ತಂದಿರುವ ವಿದ್ವಾಂಸರ ರೀತಿನೀತಿಗಳನ್ನು (ಅಲ್ಲಗಳೆಯದೇ) ಆಧುನೀಕರಣಗೊಳಿಸುವಲ್ಲಿ ಕಂಪ್ಯೂಟರ್ ಸಾಧನವನ್ನು ಬಳಸಿ ಶಾಸನದ ಮೂಲ ಪಾಠವನ್ನು ಎಲ್ಲರ ಗಮನಕ್ಕೂ ತರಬೇಕಾಗಿದೆ.

ದಿವಂಗತ ಪ್ರೊ. ಎಂ.ಎಚ್. ಕೃಷ್ಣ ಅವರ ಟಿಪ್ಪಣಿ ಸಮೇತ ಪ್ರಬುದ್ಧ ಕರ್ನಾಟಕ (ಸಂ. ೩೦)ರಲ್ಲಿ ಅಚ್ಚಾಗಿರುವುದೇ ಹಳೆಯ ಪ್ರತಿಯಾಗಿದ್ದು, ಅದರ ಪರಿಶೀಲನೆಯನ್ನು ಮಾಡಿದಾಗ-

೧. ನಮ್ಮ ವಿದ್ವಾಂಸರು ಒಬ್ಬೊಬ್ಬರೂ ಶಾಸನಗಳ ಪ್ರತಿಯನ್ನು ಪಠ್ಯಪುಸ್ತಕವನ್ನಾಗಿಸುವಲ್ಲಿ 'ತಿದ್ದಿರುವುದೂ' ಕಂಡುಬರುತ್ತಿದೆ.

೨. ಅವರು ತಮ್ಮ ತಿದ್ದುಪಡಿಗಳು 'ಅಧಿಕೃತ'ವೆಂಬಂತೆಯೇ ನಡೆದುಕೊಂಡಿರುತ್ತಾರೆ. ಅಲ್ಲದೆ ಕಾರಣಗಳನ್ನು ಕೊಟ್ಟಿರುವುದಿಲ್ಲ. ಆದುದರಿಂದ ಮೂಲಪಾಠಕ್ಕೆ (ಮೊದಲ ಪಡಿಯಚ್ಚಿಗೆ) ಪ್ರತಿಪಾಠಗಳನ್ನು ಸೃಷ್ಟಿಸಿದಂತಾಗಿದೆ.

೩. ನಮ್ಮ ವಿದ್ವಾಂಸರು ಹೀಗೆ ವರ್ತಿಸುತ್ತಾ ಬಂದಿರುವುದರಿಂದ ಇಂದಿನ ವಿದ್ಯಾರ್ಥಿಗಳಿಗಲ್ಲದೆ, ಹೊಸಬರಿಗೆ ಕೂಡ ಗೊಂದಲ ಉಂಟಾದಂತಾಗಿದೆ.

೪. ಭಾಷಿಕ ಅಧ್ಯಯನ-ಹಲ್ಮಿಡಿ ಶಾಸನ ಎಂಬಲ್ಲಿ ಮೂಲ ಪಠ್ಯವಾಗಿ ಪ್ರೊ॥ ಕ............ ಅವರ ಅಧಿಕೃತ ಪ್ರತಿಯನ್ನು ಅಧ್ಯಯನಕ್ಕೆ ಬಳಸಿಕೊಂಡಿರುವುದರಿಂದ ಈ ಗ್ರಂಥವು ಅಪ್ರಯೋಜಕವಾಗಿದೆ.

i. ಶಾಸನದ ಕನ್ನಡ ಭಾಗದಲ್ಲಿ ವಾಕ್ಯರಚನೆಯನ್ನು ಆಂಗ್ಲ ಭಾಷೆಯನ್ನು ನೆನಪಿಸುವಂತೆ ವಿಶ್ಲೇಷಿಸಿದ್ದಾರೆ. ಉದಾ: ಹಲ್ಮಿಡಿ ಶಾಸನದ ಕೊನೆಯ ಅಂದರೆ ಮುಖ್ಯ ಭಾಗದ ಬಲಗಡೆಯಲ್ಲಿ ಮೇಲಿಂದ ಕೆಳಕ್ಕೆ (ಅಡ್ಡಲಾಗಿ ಬರೆದಿರುವ) "ಭಟ್ಟರ್ಗ್ಗೀಗಟ್ದಿ ಒಡ್ಡಲಿ ಅಪತ್ತೊನ್ದಿ ವಿಟ್ಟಾರ್ ಅಕರ" ಎಂದು ಪರಿಶೀಲಿಸಿರುವುದನ್ನು ನೋಡಬಹುದು. (ಮೂಲಪಡಿಯಚ್ಚಿಂದ)- ಆಪತ್ತೊನ್ದಿವಿಟ್ಟಾ ಅಕರ- ಎಂಬುದು ಸ್ಪಷ್ಟವಿದ್ದರೂ ತಿದ್ದಲಾಗಿದೆ- ಆಪತ್ತೊನ್ದಿ ವಿಟಾರಕರ-ಎಂಬ ಪಾಠವನ್ನು ಬಳಸಿರುವುದಂತೂ ಸರಿಯಾಗಿರಲಾರದು. ಏಕೆಂದರೆ 'ಅರ್' ಪ್ರತ್ಯಯವನ್ನು ಅಧಿಕೃತವಾದುದೆಂದು ಸ್ವೀಕರಿಸುವುದಾಗಿದೆ.

ii. ಮಾದಕ್ಷಿಣಾಪಥ ಬಹು ಶತುಹವನಾಹವದು (ಳ್) ಎಂಬಲ್ಲಿ ಕೂಡ 'ಮಾ.........' ತಿದ್ದಿದ ರೂಪವಾಗಿದೆ. ಇಲ್ಲಿ 'ಆಳಪಗಣಪಶುಪತಿಯಾ' ಎಂಬಲ್ಲಿ ಯಾ=ಮಾ ಎಂದು ತಿದ್ದಿರುವುದಾಗಿದೆ. ಇದರಿಂದ ಶಾಸನದಲ್ಲಿ ಮೇಲುಸ್ವರಗಳ ಪ್ರಯೋಗವನ್ನು ತಪ್ಪಾಗಿಸಿದಂತಾಗಿದೆ. ವಾಸ್ತವದಲ್ಲಿ ಮೇಲುಸ್ವರಗಳ ಬಳಕೆಯು ಈ ಶಾಸನದ ಒಂದು ವಿಶಿಷ್ಟ ಲಕ್ಷಣವಾಗಿದೆ.

iii. ಹೀಗೆಯೇ ಈ ಶಾಸನದಲ್ಲಿ ವಾಕ್ಯ ರಚನೆಯನ್ನು ಹುಡುಕುವ ಪ್ರಯತ್ನ ಮಾಡಿದಂತಾಗಿದೆ. ಆದುದರಿಂದ ಈ 'ಭಾಷಿಕ ಅಧ್ಯಯನ'ವನ್ನು ವೈಜ್ಞಾನಿಕವಾಗಿದೆಯೆಂದು ಹೇಳಲು ಸಾಧ್ಯವಿಲ್ಲ.

iv. ಈ ಶಾಸನವನ್ನು ನಮ್ಮ ವಿದ್ವಾಂಸರು ಮತ್ತೆ ಮತ್ತೆ ಓದುತ್ತಾ ತಿದ್ದುತ್ತಾ ಬಂದಿದ್ದಾರೆ-ಎನ್ನುವುದಕ್ಕೆ ಎ.ಕ.ಸಂ. ೯, ಕನ್ನಡ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ-

೧೯೯೦. ಇದರಲ್ಲಿ (೨೩೬-ರಿ ೧೯೩೬-೧೬) ಹಲ್ಮಿಡಿ ವೀರಭದ್ರ ದೇವಾಲಯದ ಮುಂದೆ ನೆಟ್ಟಿದ್ದ ಕಲ್ಲು-ಟಿಪ್ಪಣಿಯನ್ನು ಇಂಗ್ಲಿಷ್‌ನಲ್ಲಿ ಕೊಡಲಾಗಿದೆ. ನಮಗೆ ಕಾಲದ ಪ್ರಶ್ನೆಗಿಂತ ಮುಂಚೆ ಶಾಸನದ 'ಅಚ್ಚು' ಮುಖ್ಯವಾಗಿದೆ. ಆದುದರಿಂದ ಹೀಗೆ-

**ಮುಂಭಾಗ**

೧ ಜಯತಿಶ್ರೀ ಪರಿಷ್ವಙ್ಗ ಶ್ಯಾರ್ಙ್ಗ [ವ್ಯಾ]ನತಿರಚ್ಯುತಃ ದಾನವಾಕ್ಷ್ಣೋರ್ಯುಗಾನ್ತಾಗ್ನಿ: [ಶಿಷ್ಟಾನಾನ್ತು] ಸುದರ್ಶನಃ
೨ ನಮಃ ಶ್ರೀಮತ್ಕದಂಬಪನ್ತ್ಯಾಗಸಂಪನ್ನನ್ಕಲಭೋರ[ನಾ] ಅರಿಕ
೩ ಕುಸ್ಥ ಭಟ್ಟೋರ ನಾಳೆ ನರಿದಾವಿಳೆ ನಾಡುಳ್ ಮೃಗೇಶ ನಾ
೪ ಗೇನ್ದ್ರಾಭೀಳರ್ಭ್ಬಟಹರಪ್ಪೋರ್ ಶ್ರೀ ಮೃಗೇಶನಾಗಾಹ್ವಯ
೫ ರಿರ್ವ್ವರಾ ಬಟರಿ ಕುಲಾಮಲ ವ್ಯೋಮತಾರಾಧಿನಾತನ್ನಳಪ
೬. ಗಣಪಶುಪತಿ ಮಾ ದಕ್ಷಿಣಾಪಥ ಬಹುಶತಹವನಾ
೭. ಹವದು[ಳ್] ಪಶುಪ್ರದಾನ ಶೌರ್ಯೋದ್ಯಮಭರಿತೋ [ನ್ದಾನ]ಪ
೮. ಶು ಪತಿಯೆನ್ದು ಪೊಗಟಿ'ಪ್ಪೊಟ್ಟಣ ಪಶುಪತಿ
೯. ನಾಮಧೇಯನಾ ಸರಕ್ಕೆಲ್ಲ ಭಟರಿಯಾ ಪ್ರೇಮಾಲಯ
೧೦. ಸುತನ್ಗೆ ಸೇನ್ದ್ರಕ ಬಣೋಭಯ ದೇಶದಾ ವೀರ ಪುರುಷ ಸಮಕ್ಷ
೧೧ ದೆ ಕೇಕಯ ಪಲ್ಲವರಂ ಕಾದೆಱ'ದು ಪೆತ್ತಜಯನಾ ವಿಜ
೧೨ ಅರಸನ್ಗೆ ಬಾಳ್ಗಚ್ಚು ಪಲ್ಮಡಿಉಂ ಮೂಟಿ'ವಳ್ಳಿಯುಂ ಕೊ
೧೩ ಟ್ಟಾರ್ ಬಟಾರಿಕುಲದೊನಳಕದಮ್ಬನ್ಕಳ್ದೋನ್ ಮಹಾಪಾತಕನ್
೧೪ ಇರ್ವ್ವರುಂ ಸಬ್ಬಿಙ್ಗದರ್ ವಿಜಾರಸರುಂ ಪಲ್ಮಡಿಗೆ ಕುಱು
೧೫ ಮ್ಬಿಡಿ ವಿಟ್ಟಾರ್ ಅದಾನಳಿವೊನ್ಗೆ ಮಹಾಪಾತಕಮ್ ಸ್ವಸ್ತಿ

**ಎಡಪಕ್ಕ**

೧೬ ಭಟ್ಟರ್ಗ್ಗೀಗಟ್ಟಿ ಒಡ್ಡಲಿ ಆಪತ್ತೊನ್ದಿ ವಿಟ್ಟಾರಕರ.

ಇದರ ಅನುವಾದವು ಇಂಗ್ಲಿಷ್‌ನಲ್ಲಿ ಉಂಟಾಗಿರಬಹುದಾದ ತೊಂದರೆಗಳನ್ನು ಗಮನಿಸಬಹುದು:

Victorious is ಅಚ್ಯುತ, Who is embraced by ಶ್ರೀ but has the bow ಶಾರಂಗ bent (ready for use) and who is a fire accuring at the end of the ಯುಗಾಸ್ (Cycle of Time) in the eyes of the ದಾನವಾಸ್ (demons), but looks pleasing (is a defensive discus) to the good people. Obeisance; while the illustrious ಕದಂಬ king an accomplished bestower (of gifts) and an enemy of (the king) ಕಲಭೋರ, ಕಕುಸ್ಥ-ಭಟ್ಟಾರ was ruling in the ನರಿದಾವಿಳೆ-ನಾಡು the two formidable warriors who were terrible like ಮೃಗೇಶ and ನಾಗೇನ್ದ್ರ exhibited their prowess in the battle fought by ಅಲಪ-ಗಣ ಪಶುಪತಿ, a moon in the ಭಟಾರಿ family, in the ದಕ್ಷಿಣಾಪಥ ಬಹುಶತಹವನ (ಬಹುಶತಹವನಾಹವದುಳ್?) ಪಶುಪತಿ by his valour and generosity was known as ಪಶುಪತಿ (cord ಶಿವ) in making gifts and exhibiting valour which was extolled by the people of the city (ಪೊಗಟು' ಪ್ಪೊಟ್ಟಣ) to aid him the battle, ವಿಜರಸ, The beloved son of ಎಲ್ಲ ಭಟಾರಿ, fought against ಕೇಕಯಸ್ and ಪಲ್ಲವಾಸ್ in the presence of the valient men of the two armies of ಸೇನ್ದ್ರಕ and ಬಾಣ and achieved the victory. To that ವಿಜಅರಸ the villages of ಪಲ್ಮಡಿ and ಮೂಟಿವಳ್ಳಿ were granted as ಬಾಳ್ಗಚ್ಚು (an honour in the form of fief for washing the sword of the hero, who exhibited the heroism in the battle.)

Either the members of the ಭಟಾರಿ family or the members of the ruling ಕದಂಬ (family) whoever rejects the enjoyment of the grant is guilty of ಸಬ್ಬಿಂಗ (ಷಟ್+ಪಂಗ) and ವಿಜ-ಅರಸ together remitted the ಕುಱುಮ್ಬಿಡಿ (Petty Taxas) to the village ಪಲ್ಮಡಿ. Those who abolish it will incur the great sin. Be it well. In the gross produce of the wet land ಪತ್ತೊನ್ದಿ (<ದಹ-ಬಂಧ) the royal share of the gross produce as revenue is granted to the ಭಟ್ಟಾಸ್ (leamed man) free of inposts.

ಟಿಪ್ಪಣಿಯಲ್ಲಿ ಸಮಸ್ಯಾತ್ಮಕ ಪದಗಳನ್ನು ಗುರುತಿಸಲಾಗಿದೆಯಷ್ಟೆ.

೧. ಬಹುಶತಹವನಾಹದುಳ್
೨. ಪೊಗಟು'ಪ್ಪೊಟ್ಟಣ
೩. ಸಬ್ಬಿಂಗ (<ಷಟ್+ಪಂಗ)
೪. ಪತ್ತೊನ್ದಿ (<ದಹ ಬಂಧ)
೫. ಕುಱುಮ್ಬಿಡಿ (Petty Taxes)

ಮುಖ್ಯವಾಗಿ ಈ ವಿಷಯಗಳನ್ನು ನಮ್ಮ ವಿದ್ವಾಂಸರು ಚರ್ಚಿಸುತ್ತಾ ಬಂದಿದ್ದಾರೆ. ೩, ೪ ಮತ್ತು ೫ನೇ ಅಂಶಗಳು ಇಂದಿಗೂ ಸಮಸ್ಯೆಗಳಾಗಿವೆ. ಅನುವಾದದಲ್ಲಿ ವಾಕ್ಯಗಳನ್ನು ಗುರುತು ಮಾಡಿರುವುದೂ ಆಗಿದೆಯಷ್ಟೆ-ಜೊತೆಗೆ ಲಿಪಿಕಾರನ ತಪ್ಪುಗಳಿವೆ ಎಂಬ ಅರ್ಧಸತ್ಯವನ್ನೂ ಶಾಸನಗಳ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಆದುದರಿಂದ ಶಾಸನದ ಮೂಲಪಾಠವನ್ನು ಪುನಃ ಪರಿಶೀಲಿಸದೆ ತಿದ್ದುಪಡಿಗಳನ್ನು ಮಾಡಲಾಗುತ್ತಿರಬೇಕೆನ್ನಿಸುವಷ್ಟು ದೂರಹೋಗಬೇಕಾಗಿದೆ. ಆದುದರಿಂದ 'ವಿರಚನೆ'ಯು ಅತ್ಯವಶ್ಯವಾಗಿ ಕಂಡುಬರುತ್ತಿದೆ.

ಇಂತಹ ಸ್ಥಿತಿಯಲ್ಲಿ ಆಧುನಿಕ ಸಲಕರಣೆಗಳಲ್ಲಿ ಮುಖ್ಯವಾಗಿರುವ ಕಂಪ್ಯೂಟರ್ ಬಳಸುವಲ್ಲಿ ಪ್ರಯೋಜನಗಳಿವೆ. ಈಗಿನ ತುರ್ತಿನಲ್ಲಿ ಎ.ಕ.ದ ಸಂಸ್ಕರಣದಲ್ಲಾಗಲಿ ಸಾಹಿತ್ಯ ಚರಿತ್ರೆಗಳ ಸಂಸ್ಕರಣ ಯಾ ಪರಿಶೀಲನೆಗಳಲ್ಲಾಗಲಿ ತಲೆದೋರ ಬಹುದಾದ (ಕಾಣಿಸಿಕೊಂಡಿರುವ) ಪಾಠಾಂತರಗಳನ್ನು ನಿವಾರಿಸಬಹುದಾಗಿದೆ.

*

ತಿದ್ದುಪಡಿಯ ಪಾಠಾಂತರಗಳು ಬರುತ್ತಲೇ ಇದೆಯಾಗಿ-

ಡಾ|| ಎಂ.ಬಿ. ನೇಗಿನಹಾಳ: ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ-ಪುಟ ೫. ಇದರಲ್ಲಿ [ಅಂದರೆ ಶಾಸನ (ಹಲ್ಮಿಡಿ)ದಲ್ಲಿ] ಒಟ್ಟು ಆರು ವಾಕ್ಯಗಳಿವೆ. ಇತ್ಯಾದಿ (ವ್ಯಾಕರಣದ ನಿಯಮಗಳನ್ನು ಅನುಸರಿಸಿ ಪರಿಶೀಲಿಸಲಾಗಿದೆ.)

"-ಪಶುಪತಿಯನ್ನು ಹಲ್ಮಿಡಿ ಶಾಸನವು ಅಳಪಗಣ ಪಶುಪತಿ ಮಾದಕ್ಷಿಣಾಪಥ ಬಹುಶತಹವನಾಹವದುಳ್ ಪಶುಪ್ರದಾನ ಶೌರ್ಯೋದ್ಯಮ ಭರಿತೋನ್, ದಾನಪಶುಪತಿಯೆನ್ದು ಪೊಗಟಿಪ್ಪೊಟ್ಟಣ"- ಎಂದು ವರ್ಣಿಸಿದರೆ (ಎಂದು ತಾಳಗುಂದ ಶಾಸನದ ಸಂಬಂಧವನ್ನು ಪರಿಶೀಲಿಸಿದ್ದಾರೆ) ಇದರಿಂದ ಇವೆರಡು ಶಾಸನಗಳ ಪಶುಪತಿ ಒಬ್ಬನೇ ಎಂದು ಕಂಡುಬರುತ್ತದೆ ಎಂದು ತಿಳಿಸಿದ್ದಾರೆ. ಕೂಡ. ಮತ್ತೆ "ಕಲಭೋರನೆಂದರೆ ಯಾರೆಂದು ತಿಳಿದಿಲ್ಲ. ಅದೇ ರೀತಿ 'ಸರಕ್ಕೆಲ್ಲ ಭಟ್ಟಾರಿ'ಯಾದ ವಿಜಅರಸನ ಬಗೆಗೂ ಹೆಚ್ಚಿನ ಸಂಗತಿಗಳು ಗೊತ್ತಾಗುವುದಿಲ್ಲ. ಡಾ|| ಕೃಷ್ಣರು (ಎಂ.ಎಚ್. ಕೃಷ್ಣ?) ಭಾವಿಸಿರುವಂತೆ ಮೈ ೧೯೩೬ ಪುಟ. ೮೦: ಇಲ್ಲಿ ಮೃಗೇಶನೆಂಬುವನು ಕಾಕುಸ್ಥವರ್ಮನ ಮೊಮ್ಮಗನಾಗಿರುವುದು ಅಸಂಭವ. ಮೃಗೇಶನಾಗರು ಕದಂಬ ದೊರೆಯ ಮಾಂಡಲಿಕನಾದ ಪಶುಪತಿಯ ಕೈಕೆಳಗಿನ ಅಧಿಕಾರಿಗಳೆಂದು ಹೇಳಬಹುದು. ಸೇಟಿಜ್ಗದರ್-ಎಂದರೆ ಸವಳಂಗ-ಎಂಬ ಊರಿನವರೆಂದು ಹೇಳುವುದು ಆತ್ಯಂತಿಕ ಅಭಿಪ್ರಾಯವಾಗಿರಲಾರದು. ಒಟ್ಟು ಕಲಭೋರ, ನರಿದಾವಿಳೆನಾಡು, ವಿಜಅರಸ ಸೇಟಿಜ್ಗದರ್- ಈ ಪದಗಳು ಬೇರೆಡೆ ಕಂಡುಬರುವುದಿಲ್ಲ (ಹಲ್ಮಿಡಿ ಶಾಸನದ ಹೊರತು) ಎಂದಿದ್ದಾರೆ.

ಮಾದಕ್ಷಿಣಾಪಥ-ಎಂಬಲ್ಲಿ ತಿದ್ದಿರುವುದೇ ಆಗಿ ಪಾಠಾಂತರವಾಗಿದೆ. ವಿವರಗಳಿಲ್ಲ.

ಟಿಪ್ಪಣಿ-(ಕವೆಂ) ಮೂಲ ಶಾಸನದ ಅಧ್ಯಯನಕ್ಕೆ ಬದಲು ಆಧಾರರಹಿತ ತಿದ್ದುಪಡಿಗಳನ್ನು ಬಳಸಿಕೊಂಡಿರುವುದರಿಂದ ಇರುವಷ್ಟು ಗೊಂದಲಕ್ಕೆ ಸೇರಿಸಿದಂತಾಗಿದೆ.

ಬಾ.ರಾ. ಗೋಪಾಲರು, ಬನವಾಸಿ ಕದಂಬರು-ಎಂಬ ಗ್ರಂಥದಲ್ಲಿ ಹಲ್ಮಿಡಿ ಶಾಸನದ ಒಂದು ಪಠ್ಯವನ್ನು ಕೊಟ್ಟಿದ್ದಾರೆ. ಸಾಲು ೬ ಗಣಪಶುಪತಿಯಾ ದಕ್ಷಿಣಾಪಥ ಬಹು ಶತವಹನಾ

೭ ಹವದುಳ್....

:

೧೪ ಇರ್ವ್ವರುಂ ಸಟ್ಬಿಜ್ಗದರ್ ವಿಜಾರಸರುಂ ಪಲ್ಮಡಿಗೆ
ಕುಱು

೧೫ ಬ್ಬಿಡಿ ವಿಟ್ಟಾರ್...

ಸಾರಾಂಶ(ದಲ್ಲಿ) ಕಲ್ಲಿನ ಮೇಲ್ಭಾಗವನ್ನು ಕಮಾನಿನಂತೆ ಕಡೆದು ಆ ಕಮಾನಿನ ಸುತ್ತಲೂ ವಿಷ್ಣುವಿನ ಆಯುಧವಾದ ಸುದರ್ಶನವನ್ನು ಸ್ತುತಿಸುವ ಶ್ಲೋಕವೊಂದನ್ನು ಕೊರೆಯಲಾಗಿದೆ. ಮಧ್ಯದಲ್ಲಿ ಸುದರ್ಶನ ಚಕ್ರದ ಚಿತ್ರವನ್ನು ಬಿಡಿಸಲಾಗಿದೆ. ಈ ಶ್ಲೋಕ ಮಾತ್ರ ಸಂಸ್ಕೃತದಲ್ಲಿದ್ದು, ಶಾಸನದ ಉಳಿದ ಭಾಗ ಹಳಗನ್ನಡ ಭಾಷೆಯಲ್ಲಿದೆ. ಕನ್ನಡದ ಅತಿಪ್ರಾಚೀನ ಶಾಸನವೆನಿಸಿದ ಇದರ ಕಾಲ ಸುಮಾರು ಕ್ರಿ.ಶ. ೪೫೦ ಎಂದು ಭಾವಿಸಲಾಗಿದೆ. [ಸ್ಥೂಲವಾಗಿ] . . ಪಲ್ಲವ ಮತ್ತು ಕೇಕೆಯರಿಗೂ ಕದಂಬ- ಸೇಂದ್ರಕ-ಬಾಣರಿಗೂ ನಡೆದ ಕದನದಲ್ಲಿ ತೀವ್ರವಾಗಿ ಹೋರಾಡಿ ಪಲ್ಲವರನ್ನು ಸೋಲಿಸಿದ ಎಲ್ಲ ಭಟರಿಯಮಗ ವಿಜಅರಸನಿಗೆ ಭಟರಿ ಕುಲದ ಅಳಕದಂಬನ ಒಪ್ಪಿಗೆಯಿಂದ, ನರಿದಾವಿಳೆನಾಡಿನ ಅಧಿಕಾರಿಗಳಾದ ಮೃಗೇಶ ಮತ್ತು ನಾಗರು ಪಲ್ಮಡಿ ಮತ್ತು ಮೂಟವಳ್ಳಿ ಗ್ರಾಮಗಳನ್ನು ಬಾಳ್ಗಟ್ಟಾಗಿ ದಾನ ಮಾಡಿದರು. ಮೈಸೂರು ಪುರಾತತ್ವ ಇಲಾಖೆಯ ೧೯೩೬ನೆಯ ವರ್ಷದ ವರದಿಯಲ್ಲಿ ಎಂ.ಎಚ್. ಕೃಷ್ಣ ಅವರು ಇದನ್ನು ಪ್ರಕಟಿಸಿದರು.

ಟಿಪ್ಪಣಿ (ಕವೆಂ), ಇಲ್ಲಿಯ ಪಾಠಾಂತರ ಗಳನ್ನು ಗುರುತಿಸಬಹುದು. ಆದರೆ ಡಾ. ನೇಗಿನ ಹಾಳರಂತೆಯೆ ಈ ವಿವರವೂ ಮೂಲಪಠ್ಯವನ್ನು ಶೋಧಿಸಿ ನೋಡಬೇಕಾದ ಅಗತ್ಯವನ್ನು ಹೇಳುತ್ತದೆ.

ಪ್ರೊ. ಟಿ.ವಿ. ವೆಂಕಟಾಚಲಶಾಸ್ತ್ರಿಗಳು 'ಹಲ್ಮಿಡಿ ಶಾಸನದ ಅರ್ಥ' (೧೯೭೨) ಎಂಬ ಪರಿಶೀಲನೆಯಲ್ಲಿ ವಿಸ್ತಾರವಾಗಿ ಚರ್ಚಿಸಿದ್ದಾರೆ.

ಡಾ|| ಕೃಷ್ಣರ ಇಂಗ್ಲಿಷ್, ಕನ್ನಡ ಅನುವಾದಗಳು ಒಟ್ಟಿನಲ್ಲಿ ಶಾಬ್ದಿಕ ಅನುವಾದ... ಇದನ್ನು ಪರಿಶೀಲಿಸಿದಾಗ ನಮಗೆ ಪೂರ್ತಿಯಾಗಿ ತೃಪ್ತಿಯನ್ನು ಕೊಡುವುದಿಲ್ಲ.

-ಡಾ|| ಕೃಷ್ಣರು ಕೊಡುವ ಶಾಸನ ಪಾಠ (ಪ್ರ.ಕ.)- ಈ ರೀತಿ ಇದೆ:

ಜಯತಿ ಶ್ರೀ ಪರಿಶ್ವಜ್ಗಶ್ಯಾರ್ಜೆ: [ಮ್ಯಾನತಿ] ರಚ್ಯುತಃ
ದಾನವಾಕ್ಷ್ಣೋಯ್ರ್ಯುಗಾನ್ತಾಗ್ಗಿ: [ಶಿಷ್ಟಾನಾನ್ತು] ಸುದರ್ಶನಃ
ನಮಃ ಶ್ರೀಮತ್ಕದಂಬಪನ್ತ್ಯಾಗ ಸಂಪನ್ನನ್ಕಲಭೋರ[ನಾ] ಅರಿಕ
ಕುಸ್ಥ ಭಟ್ಟೋರನಾಳೆ ನರಿದಾವಿ[ಳೆ]ನಾಡುಳ್ ಮೃಗೇಶ ನಾ
ಗೇನ್ದ್ರಾಭೀಳಭ್ರ್ಯಟಹರಪ್ಪೋರ್ ಶ್ರೀ ಮೃಗೇಶ ನಾಗಾಹ್ವಯ
ರಿರ್ವ್ವರಾ ಬಟರಿ ಕುಲಾಮಲವ್ಯೋಮತಾರಾಧಿನಾಥನ್ನಳಪ
ಗಣಪಶುಪತಿಯಾ ದಕ್ಷಿಣಾಪಥ ಬಹುಶತಹವನಾ
ಹವದು [ಳ್] ಪಶುಪ್ರದಾನ ಶೌರ್ಯ್ಯೋದ್ಯಮ ಭರಿತೋ[ನ್ದಾನ] ಪ
ಶುಪತಿಯೆನ್ದು ಪೊಗಟಿಪ್ಪೊಟ್ಟಣ ಪಶುಪತಿ
ನಾಮದೇಯನಾಸರಕ್ಕೆಲ್ಲ ಭಟರಿಯಾ ಪ್ರೇಮಾಲಯ
ಸುತನ್ಗೆ ಸೇನ್ದ್ರಕ ಬಣೋಭಯದೇಶದಾ ವೀರಾಪುರುಷ ಸಮಕ್ಷ

ದೆ ಕೇಕಯ ಪಲ್ಲವರಂ ಕಾದೆಱೆ್ದು ಪೆತ್ತಜಯನಾ ವಿಜ
ಅರಸನ್ಗೆ ಬಾಳ್ಗಚ್ಚು ಪಲ್ಮಡಿಉಂ ಮೂಱೆವಳ್ಳಿಉಂ ಕೊ
ಟ್ಟಾರ್ ಬಟಾರಿ ಕುಲದೊನಳಕದಮ್ಬನ್ಕಳ್ದೋನ್ ಮಹಾಪಾತಕನ್
ಇರ್ವ್ವರುಂ ಸಟ್ಬಿಙ್ಗದರ್ ವಿಜಾರಸರುಂ ಪಲ್ಮಡಿಗೆ ಕುಱು
ಮ್ಬಿಡಿ ವಿಟ್ಟಾರ್ ಅದಾನಱೆವೊನ್ಗೆ ಮಹಾಪಾತಕಮ್ ಸ್ವಸ್ತಿ

**ಎಡಪಕ್ಕದಲ್ಲಿ**

ಭಟ್ಟರ್ಗ್ಗೀಗಟ್ಟು ಒಡ್ಡಲಿ ಆಪತ್ತೊನ್ದಿವಿಟ್ಟಾರಕರ

ಟಿಪ್ಪಣಿ (ಕವೆಂ)- ಶಾಸನದ ಪರಿಷ್ಕೃತ ರೂಪವನ್ನು ಶಾಸ್ತ್ರಿಗಳು ಚರ್ಚಿಸಿದ್ದಾರೆ. ಅರ್ಥದಲ್ಲಿ ಮೊದಲ ಶ್ಲೋಕವು ಹೀಗಿದೆ : ಲಕ್ಷ್ಮಿಯಿಂದ ಆಲಿಂಗಿತನಾದವನೂ ಚೆನ್ನಾಗಿ ಬಗ್ಗಿಸಿ ಹಿಡಿದಿರುವ ಶಾರ್ಙ್ಗವೆಂಬ ಧನುಸ್ಸುಳ್ಳವನೂ ಅಚ್ಯುತನೂ ಅಸುರರ ಕಣ್ಣುಗಳಿಗೆ ಪ್ರಲಯಕಾಲದ ಬೆಂಕಿಯಾಗಿರುವವನೂ ಸತ್ಪುರುಷರಿಗಾದರೋ ಒಳ್ಳೆಯ ನೋಟ (ಸುದರ್ಶನ ಚಕ್ರ)ವಾಗಿರುವವನೂ (ಆದವನು) ಗೆಲ್ಲುತ್ತಾನೆ. (Gopinatha Rao, TA: Anote on the world Balgalchchu. Indian Antiquary Vol 40; March 1911). ಇನ್ನು ಶಾಸನ ಗದ್ಯದ ವಿವೇಚನೆಯಲ್ಲಿ-ನಮಃ ಆದ ಮೇಲೆ-ಕಕುಸ್ಥ ಭಟ್ಟೋರನಾಳೆ, ಎನ್ನುವವರೆಗೆ ಅರ್ಥದ ತೊಡಕೇನಿಲ್ಲ...

ನರಿದಾವಿ [ಳೆ]ನಾಡುಳ್....: ನಾಗಾಹ್ವಯ ರಿರ್ವ್ವರ್- ಮುಂದಿನ ಭಾಗ: ಮೈಆರಿ. ಯ ಮುದ್ರಣದಲ್ಲಿ; ಪ್ರ.ಕ.ದಲ್ಲಿ 'ರಪ್ಪೊರ್'ಗೆ 'ರಪ್ಪೋರ್' ಎಂದಿದೆ. ಮೂಲವನ್ನು ಈ ಯೆರಡು ರೀತಿಯಲ್ಲಿಯೂ ಓದುವ ಸಾಧ್ಯತೆ ಇದೆ.

ಬಟರಿ ಕುಲಾಮಲವ್ಯೋಮತಾರಾದಿನಾಥನ್ನಳಪಗಣ ಪಶುಪತಿ" ಎಂಬುದರಲ್ಲಿ ಮೈಆರಿ ಯಲ್ಲಿ 'ಪಶುಪತಿಮಾ' ಎಂದಿರುವುದನ್ನು ಪ್ರ.ಕ.ದಲ್ಲಿ 'ಪಶುಪತಿಯಾ' ಎಂದಾಗಿದೆ. ಇಲ್ಲಿ ತಾರಾಧಿನಾಥನ್ನಳಪಗಣ-ಎಂಬಲ್ಲಿ ತಾರಾಧಿನಾಥನ್+ನಳಪಗಣ- ಎಂದು ಒಡೆಯಬೇಕು,-Pasupathi and Kakustha are mentioned as taking great interest in the performances of yagas and in bestowing gifts respectively ಎಂಬುದಕ್ಕೆ ಶಾಸನದಲ್ಲಿ ಆಧಾರವಿಲ್ಲ. "ನೂರಾರು ಯಜ್ಞಗಳೆಂಬ ಯುದ್ಧಗಳಲ್ಲಿ" ಎಂಬ ಪದಶಃ ಅರ್ಥ ಸರಿ... ಡಾ|| ಕೃಷ್ಣರು ತಮ್ಮ ಕನ್ನಡ ಅನುವಾದದಲ್ಲಿ ಎಲ್ಲ ವಿಶೇಷಣಗಳನ್ನೂ ಷಷ್ಠ್ಯರ್ಥವಾಗಿ ಮಾಡಿದ್ದಾರೆ. ಆದರೆ ಎಲ್ಲ ವಿಶೇಷಣಗಳನ್ನೂ ಪ್ರಥಮಾರ್ಥಕವಾಗಿ ಮಾಡಿಕೊಂಡು- 'ಪೊಗೞೆಪ್ಪೊಟ್ಟಣ' ಎಂಬುದು ನನಗೆ ಒಪ್ಪಿಗೆಯಾದ್ದು. ೮-೯ನೆ ಸಾಲಿನ 'ಪಶುಪತಿ ನಾಮಧೇಯನಾಸರಕ್ಕೆ' ಭಾಗವನ್ನು ಮೂರು ವಿಧದಲ್ಲಿ ಬಿಡಿಸಿ ನೋಡಬಹುದು. ಈ ಅರ್ಥ [ಗಳು] ಸಾಂದರ್ಭಿಕವಾಗಿ ಊಹಿಸಿದ ಅರ್ಥವಾಗಿರುವುದರಿಂದ ಸಮಾಧಾನ ದೊರೆಯುವುದಿಲ್ಲ. .......ಇಲ್ಲಿ 'ಕೇಕಯ ಪಲ್ಲವರಂ ಕಾದೆಱೆದು ಪೆತ್ತಜಯನ್' ಎಂಬುದನ್ನು ಪೂರ್ತಿಯಾಗಿ 'ವಿಜಅರಸನ್ಗೆ' ಎನ್ನುವುದರ ವಿಶೇಷಣವನ್ನಾಗಿ ಗ್ರಹಿಸಬೇಕು. ಮಿತ್ರಪಕ್ಷದ ಸೇನ್ಯಕ ಮತ್ತು ಬಾಣ ಈ ಎರಡೂ ದೇಶಗಳ ವೀರಪುರುಷರ ಸಮಕ್ಷಮದಲ್ಲಿ ವೀರನೊಬ್ಬನನ್ನು ಸನ್ಮಾನಿಸಿದ್ದು ಸಹಜವಾಗಿಯೇ ಇದೆ. ಸಟ್ಬಿಙ್ಗದರ್, ಕುಱುಮ್ಬಿಡಿ, ಒಡ್ಡಲಿ- ಈ ಪದಗಳ ರೂಪಗಳೂ ಅರ್ಥವೂ ಸ್ಪಷ್ಟವಾಗಿಲ್ಲದೆ ವಿದ್ವಾಂಸರ ಜಿಜ್ಞಾಸೆಗೆ ಕಾರಣವಾಗಿದೆ. ಪ್ರ.ಕ.ದಲ್ಲಿ 'ಅಳಕದಮ್ಬನ್'-ಎಂದು ತಿದ್ದಿದೆ. ಇದು ಶಾಸನ ಪಾಠದ ಪುನಃ ಪರಿಶೀಲನೆಯ ಫಲವಿರಬಹುದು. ೫ನೆಯ ಸಾಲಿನ ಕೊನೆಗೆ 'ಅಳಪ' ಎಂದಿರುವುದಕ್ಕೆ ಇದು ಹೊಂದುತ್ತದೆ- 'ಸಟ್ಬಿಙ್ಗದರ್' ಬಗೆಗೆ, ಇದರ ಅರ್ಥ ನಿರ್ಣಯ ಸದ್ಯದಲ್ಲಿ ಸಾಧ್ಯವಿಲ್ಲ.... ಪ್ರಸ್ತುತ 'ಇಬ್ಬರೂ ಸಟ್ಬಿಂಗ (ಎಂಬ ಸ್ಥಳ)ದವರಾದ ವಿಜಾರಸರೂ' ಎಂದು ಓದುವ ಮನಸ್ಸಾಗುತ್ತದೆ.

ಕುಱುಮ್ಬಿಡಿ ಮತ್ತು ಒಡ್ಡಲಿ-ಎಂಬ ಪದಗಳ ಅರ್ಥ ನಿಷ್ಪತ್ತಿಗಳೂ ನಮಗೆ ಸರಿಯಾಗಿ ತಿಳಿಯವು.

ಟಿಪ್ಪಣಿ: (ಕವೆಂ) ಹೀಗೆ ಶಾಸ್ತ್ರಿಗಳ ನಿರ್ಣಯವೂ ಅಪೂರ್ಣವಾಗಿ ಉಳಿಯುವುದಲ್ಲದೆ ಪಾಠಾಂತರಗಳಿಗೂ ಅನುಮಾನಗಳನ್ನು ಕೂಡಿಸುತ್ತದೆ. ಅಲ್ಲದೆ 'ಆಪತ್ತೊಂನ್ದಿ ವಿಟ್ಟಾರಕರ' ಎಂಬುದೂ ಪಾಠಾಂತರವಾಗಿ [ಮೂಲದಲ್ಲಿ 'ಆಪತ್ತೊನ್ದಿವಿಟ್ಟಾ ಅಕರ'- ಎಂದಿದೆ (ಕವೆಂ)ರುವುದನ್ನು, ಕಂಪ್ಯೂಟರ್‌ಗೆ ಒಪ್ಪಿಸಿ ನೋಡಿದಾಗ ಖಚಿತವಾಗುತ್ತಿದೆ-ಆಪತ್ತೊನ್ದಿ-ಎಂಬುದು ಕೂಡ 'ಆಪತ್ತು-ಒನ್ದಿ' ಎಂದಿದೆ.

*

ಶಾಸನದ ಅಧ್ಯಯನದಲ್ಲಿ ಲಿಪಿಶಾಸ್ತ್ರವು ಮುಖ್ಯಭಾಗವಾಗಿದೆಯಷ್ಟೆ. ಅದರ ಮೊದಲ ಹೆಜ್ಜೆಯಾಗಿ ವಿರಚನೆಯ ಅವಶ್ಯಕತೆಯಿದೆ. ಇದರಲ್ಲಿ ವ್ಯಾಕರಣದ ಶೋಧಕ್ಕೂ ಮುಂಚಿನ ಹಂತವನ್ನಾಗಿ ನೋಡಿದಲ್ಲಿ ಲಿಪಿಸ್ವರೂಪವು ತಳಪಾಯದಂತೆ ವಿನ್ಯಾಸದಿಂದ ಕೂಡಿರುತ್ತದೆ. ಆದುದರಿಂದ ವಿರಚನೆಗೆ ಒಳಗಾಗುವ ಲಿಪಿಯ ರೂಪದಲ್ಲಿ ಬರವಣಿಗೆಯ ರೀತಿಯನ್ನು ಗಮನಿಸಬಹುದು. ಪ್ರತಿಯೊಂದು ಪದವೂ ಹಲವು ಅಂಗಗಳಿಂದ ಕೂಡಿರುವುದಲ್ಲದೆ ನಿಶ್ಚಿತವೆನ್ನಬಹುದಾದ ರೀತಿಯಲ್ಲಿ ಬಳಕೆಗೆ ಬಂದಿರುತ್ತದೆ. ಆದುದರಿಂದ ಈ ವಿರಚನೆಯು ಅರ್ಥವನ್ನು ವ್ಯಾಕರಣದ ಅನ್ವಯಕ್ಕೆ ಹೊರತುಪಡಿಸಿಯೇ ಸಕ್ರಿಯವಾಗುತ್ತದೆ. ಉದಾ. 'ಈ' ಎಂಬ ಅಕ್ಷರ-ಪದವನ್ನು ಗಮನಿಸಬಹುದು. [ಪ್ರತಿಯೊಂದು ಪದವೂ ಹೀಗೆಯೇ] ಇದರಲ್ಲಿ ತಳಸ್ತರದ 'ಇ'ಗೂ ಮೇಲುಸ್ತರದ 'ಈ' ಧ್ವನಿ=ಪದಕ್ಕೂ ಸ್ವರೂಪವಲ್ಲದೆ ರಚನಾ ವಿಧಾನವೂ ಬೇರೆಯಾಗಿದೆ. ಬ್ರಾಹ್ಮೀ ಲಿಪಿಯಲ್ಲಿ ⁘(ಮೂರು ಚುಕ್ಕೆಗಳು) ಒಂದು ಚುಕ್ಕೆಯಿಂದ ಎರಡು ಮತ್ತು ಮೂರನೆಯ ಚುಕ್ಕೆಗಳನ್ನು ಒಂದೇ ರೂಪದಲ್ಲಿ ಗುರುತಿಸಬೇಕಾಗುತ್ತದೆ. ಆಧುನಿಕ ಲೇಖಣಿಯಲ್ಲಿ 'ಶಾಯಿ' (ಬಣ್ಣಗಳೂ ಆಗಬಹುದು) ದ್ರವವಾಗಿ ಸರಾಗವಾಗಿ ಹರಿಯುವುದರಿಂದ ಮೂರೂ ಚುಕ್ಕೆಗಳನ್ನು ಕೂಡಿಸುವ ರೀತಿ ಬಂದಿದೆಯಷ್ಟೆ- 'ಈ' ಎಂಬುದು ಮೇಲುಸ್ತರದ ಧ್ವನಿಯಾಗಿ ಸ್ವರವೂ ಆಗಿ ಎರಡು ಬಾರಿಯಾದರೂ ಈಗ ಬರೆಯುತ್ತಿರುವುದನ್ನು ಬ್ರಾಹ್ಮೀಲಿಪಿಯಲ್ಲಿ ಒಂದು (ಅಂದರೆ ಮೊದಲ ಭಾಗವಾದ 'ಂ' ಸೊನ್ನೆಯಿಂದ=

ಚುಕ್ಕೆಯಿಂದ) ರೀತಿಯಲ್ಲಿ ಗುರುತಿಸಲಾಗುತ್ತಿತ್ತು. ಈ ಬಗೆಯ ಅಂತರವು ಬೇರೆಯ ಅಂದರೆ ಅ-ಆ, (ಇ-ಈ), ಉ-ಊ, ಎ-ಏ, ಒ-ಓ (ಅಂ-ಅಃ)ಗಳಲ್ಲಿಯೂ ಗಮನಿಸಬಹುದು. ಒಟ್ಟಿನಲ್ಲಿ ವಿರಚನೆಯ ಮೊದಲ ಪಾಠವಾಗಿ ನಮ್ಮ ಲಿಪಿಯ 'ಸ್ವರ'ಗಳಲ್ಲಿ ಗುರುತಿಸಬಹುದು. ಇವುಗಳಲ್ಲಿ (೫ ಸ್ವರಗಳು) ಮೇಲುಸ್ತರದ ಒಂದೊಂದೂ 'ಪದ'ವಾಗಿ ಬಳಕೆಯಾಗಬಲ್ಲದು. ಅಂದರೆ 'ಲಿಪಿ'ಯ ಅಧಿಕಾರವನ್ನು ಪಡೆಯಬಲ್ಲವಾಗಿದೆ. ಆದುದರಿಂದ 'ಲಿಪಿ' (=ಪದ)ಯ ಪರಿಶೀಲನೆಗೆ 'ವಿರಚನೆ'ಯ ಮುಖ್ಯ ಕಾರ್ಯ ಸಲ್ಲುತ್ತದೆ.

ಹಲ್ಮಿಡಿ ಶಾಸನದಲ್ಲಿ ಈ ರೀತಿ-ನೀತಿಯ ವಿರಚನೆಯನ್ನು ಸಹಜವಾಗಿಸಿಕೊಳ್ಳಬಹುದು. ಹೀಗೆ ವಿಚರನೆಯಲ್ಲಿ 'ಲಿಪಿ'ಯ ಮೂಲರೂಪಗಳಿಗೆ ನಿಯಮಗಳನ್ನು ಗುರುತಿಸಬಹುದು. ಇದರಿಂದಾಗಿ ಲಿಪಿಯ ವಿನ್ಯಾಸವು ಒಂದು ಗಂಭೀರ ಅಧ್ಯಯನಕ್ಕೆ ಸೇರುತ್ತದೆ. ಈಗ ಸ್ವರಗಳ ಏರಿಳಿತಗಳಲ್ಲಿಯೇ ಪದಗಳನ್ನು ಕಾಣಲು ಸಾಧ್ಯವಿರುವುದರಿಂದ ಶಾಸನದ ಅಧ್ಯಯನಕ್ಕೆ (ಲಿಪಿಯ ಅಧ್ಯಯನಕ್ಕೆ) ಗಂಭೀರತೆಯ ಅವಶ್ಯತೆಯನ್ನು ಗಮನಿಸಬೇಕಾಗುತ್ತದೆ. ಇದೇ ಬಗೆಯು 'ವಿರಚನೆ'ಯ ಹೊಣೆಗಾರಿಕೆಯಾಗಿರುತ್ತದೆ.

ವ್ಯಾಕರಣದ ಅನ್ವಯವು ಅರ್ಥಸಾರ್ಥಕತೆಯಿಂದ ಉಂಟಾಗುವುದರಿಂದ ಅದರ ಶಾಸ್ತ್ರವು ಲಿಪಿಶೋಧಕ್ಕಿಂತ ಭಿನ್ನವಾಗುತ್ತದೆ. ಆದುದರಿಂದ 'ಲಿಪಿ'ಯ ವಿರಚನೆಯು ವ್ಯಾಕರಣಕ್ಕೆ ಉಪಯುಕ್ತವಾಗಿಯೂ ಪ್ರಯೋಜನಕಾರಿಯಾಗಿದೆ. ಅಂದರೆ ಒಂದು ವಾಕ್ಯದ ಅಂಗಗಳನ್ನು ಪರಿಶೀಲಿಸಬಹುದು.

ಉದಾ: ಭಟ್ಟರ್ಗ್ಗೀ ಗಟ್ಟಿ್ದೊಡ್ಡಲಿ ಆಪತ್ತೊನ್ದಿವಿಟ್ಟಾ ಅಕರ-[ಇದನ್ನು ಅರ್ಥದ ಆಧಾರದಿಂದ ಪರಿಶೀಲಿಸಿದ ಡಾ|| ಎಂ.ಎಚ್. ಕೃಷ್ಣ ಮೊದಲಾದವರು 'ಪತ್ತೊನ್ದಿವಿಟ್ಟಾರಕರ' ಎಂಬ ಪಾಠಾಂತರವನ್ನು ಬಳಕೆಗೆ ತಂದಿದ್ದಾರೆ.] ಇದರ ಲಿಪಿಯು ಸ್ಪಷ್ಟವಾಗಿರುವುದಲ್ಲದೆ ಸ್ವರವಿನ್ಯಾಸ ಮತ್ತು ಈಗ ಸಾಮಾನ್ಯವಾಗಿ ಬಳಕೆಯಲ್ಲಿರುವ ಅನುಸ್ವಾರದ (-ಂ ಮತ್ತು ನ್) ಬದಲು 'ನ್'ವನ್ನು ವಾಕ್ಯ ಮಧ್ಯದಲ್ಲಿ ಬಳಸಿ ಅಂತ್ಯದಲ್ಲಿ ಂ=ಮ್, ಅನ್ನು ಬಳಸಿರುವುದು ಕಂಡುಬರುತ್ತದೆ.

ಶಾಸನದಲ್ಲಿ (ಹಲ್ಮಿಡಿ) 'ಲಿಪಿಸ್ವಾಮ್ಯ'ವಲ್ಲದೆ ಪದಸ್ವರೂಪ ಸಾಮ್ಯತೆಯೂ ಕಂಡುಬರುತ್ತದೆ. ಆದುದರಿಂದ ವಿರಚನೆಯಲ್ಲಿ ಲಿಪಿ ಮತ್ತು ಪದ ಸ್ವರೂಪಗಳನ್ನು ಸಮಾನರೂಪಕ್ಕಾಗಿಯೇ ಗುರುತಿಸಲು ಸಾಧ್ಯವಿದೆ.

ಉದಾ. ೧. ಪರಿಷ್ವಜ್ಗ ೨. ಸುತನ್ಗೆ ೩. -ಭೀಳರ್ಭ್ಬಟ
ಸಟ್ಟಿಜ್ಗ ಪತ್ತೊನ್ದಿ -ಳೆಪ್ಪೊಟ್ಟಣ
೪. ಪಲ್ಮಡಿಉಂ
ಮೂಟುವಳ್ಳಿಉಂ (ಇತ್ಯಾದಿ)

**ಸೂಚನೆ:** ಈ ಬಗೆಯ ಪರಿಶೀಲನೆಗೆ ಕಂಪ್ಯೂಟರ್ ತುಂಬ ಪ್ರಯೋಜನಕಾರಿಯಾಗುತ್ತದೆ.

*

ಸೊಂಡೆಕೊಪ್ಪ ಶ್ರೀಕಂಠಶಾಸ್ತ್ರಿಗಳು (ಈ ಹಲ್ಮಿಡಿ) ಶಾಸನದ ಪಠ್ಯವನ್ನು ಸ್ವೀಕರಿಸಿದ ಬಗೆಯನ್ನು ಇಲ್ಲಿ ಗಮನಿಸಬಹುದು.

जयति श्रीपरिष्वबवङग सार्ङ्गम्यानतिरच्युत:
दानवाक्षणेर्मुगांताग्रि शिष्टानांतु सुदशनि: ।।

ನಮಃ ಶ್ರೀಮತ್ಕದಂಬಪನ್ ತ್ಯಾಗಸಂಪನ್ನ ಕಲಭೋರನಾ ಅರಿ ಕಕುಸ್ಥ ಭಟೋರನಾಳೆ ನರಿದಾವಿಳೆ ನಾಡುಳ್ ಮೃಗೇಶ ನಾಗೇನ್ದ್ರಾಭೀಳರ್ ಭಟಹರಪ್ಪೋರ್ ಶ್ರೀ ಮೃಗೇಶ ನಾಗಾಹ್ವಯರಿರ್ವರಾ ಭಟರಿಕುಲಾಮಲವ್ಯೋಮ ತಾರಾಧಿನಾಥನ್ ಅಳಪಗಣಪಶುಪತಿಯಾ ದಕ್ಷಿಣಾಪಥ ಬಹುಶತಹವನಾಹವದುಳ್ ಪಶುಪ್ರದಾನ ಶೌರ್ಯೋದ್ಯಮ ಭರಿತೋನ್ ದಾನ ಪಶುಪತಿಯೆನ್ದು ಪೊಗಳೆಪ್ಪೊಟ್ಟಣ ಪಶುಪತಿ ನಾಮದೇಯನಾ ಸರಕ್ಕೆಲ್ಲ ಭಟರಿಯಾ ಪ್ರೇಮಾಲಯ ಸುತನ್ಗೆ ಸೇನ್ದ್ರಕ ಬಣೋಭಯ ದೇಶದಾ ವೀರಾಪುರುಷ ಸಮಕ್ಷದೆ ಕೇಕಯ ಪಲ್ಲವರಂ ಕಾದಿಜೆದು ಪೆತ್ತಜಯನಾ ವಿಜಅರಸನ್ಗೆ ಬಾಟ್ಗಿಟ್ಟು ಪಲ್ಮಡಿಉಂ ಮೂಟಿವಳ್ಳಿಉಂ ಕೊಟ್ಟಾರ್ ಬಟಾರಿ ಕುಲದೊನಳುಕದಮ್ಬನ್ ಕಳ್ದೋನ್ ಮಹಾಪಾತಕನ್ ಇರ್ವ್ವರುಂ ಸಟ್ಟಿಜ್ಗದರ್ ವಿಜಾರಸರುಂ ಪಲ್ಮಡಿಗೆ ಕುರುಮ್ಬಿಡಿ ವಿಟ್ಟಾರ್ ಅದಾನಳಿವೊನ್ಗೆ ಮಹಾಪಾತಕಮ್ ಸ್ವಸ್ತಿ ಭಟ್ಟರ್ಗ್ಗೀಗಟ್ಟಿ್ದ ಒಡ್ಡಲಿ ಆಪತ್ತೊನ್ದಿ ವಿಟ್ಟಾರಕರ||

This inscription (MAR 1936, No. 16) is of great importance because it is the earliest datable record in the kannada language of the fifth century. It says under Kakustha, who was the enemy of Kalabhora, Mṛgēsa and Nâga were governing Naridāvile Nādu they gave the villages Palmadi and Mūlivalli to Vija Arasa (the son of Ella Bhatari), who in the presence of sēndraka and Bâna fought with Kēkaya and Pallava at the command of paśupathi of Bhatarikula. Paśupati was the lord of Alapagaṇās and has won many victories in Dakshina Patha.

The Talagunda door inscription (MAR. 1911, P. 33) mentions pasupati who was identified with Kakustha by R. Narasimhachar; But it is probable that Aluva Pasupati was the son-in-law of Kakustha and had a son Bhatari Kakustha of the Āluva dynastry, who signed that grant. This inscription is assigned to e. 450 A.D. and is therefore earlier than the Aṇaji inscription of Sivanandivarman (Ec., XI og 101) which also refers to a fight with the Pallava. The Pallavas was probably Simha Varman, mentioned in the Lokavibhaga (MAR, 1909, p. 31)- 436-58 A.D. Palmadi grama in Sendraka Vishaya is also mentioned in the Beṇṇur Grant of Krishna Varman (E.C, V. BL. 245).

(-Ref: Sources of Karnataka History Vol-I. by S. Srikantha Sastry,).

ಇದಕ್ಕೆ ಸಂವಾದಿಯಾಗಿ ಇಮ್ಮಡಿ ಕೃಷ್ಣವರ್ಮನ ಬೆಣ್ಣೂರು ತಾಮ್ರಶಾಸನವನ್ನು (ಬನವಾಸಿ ಕದಂಬರು-ಬಾ.ರಾ. ಗೋಪಾಲ್, ಫೆಬ್ರವರಿ-೧೯೮೩) ಗುರುತಿಸಬಹುದು. ಇದರ ಎರಡನೆಯ ಹಲಗೆಯ ಹಿಂಭಾಗದ ೧೪-೧೫ ನೇ ಸಾಲುಗಳಲ್ಲಿ "ಪ್ರೆಂಗಾಯ ಹಾರಿತಸ ಗೋತ್ರಾಯ ಭವ ಸ್ವಾಮಿನೇ ಸೇನ್ದ್ರಕ ವಿಷಯಾ[ನ್ತರ್ಗ್ಗತ ಪಲ್ಮಡಿ ಗ್ರಾಮೇ ರಾಜಭಾಗ ದಶಬನ್ಧಂ ತಥೈವ ಷಣ್ನಿವರ್ತ್ತ] [ಮೂರನೆಯ ಹಲಗೆಯ ಮುಂಭಾಗ-೧೬] ನಂಚ ಪ್ರದತ್ತವಾನ್ ಯಸ್ತದ ಪವರ್ತ್ತಾಸ ಪಂಚಮಹಾಪಾತಕ-೧೭ ಸಂಯುಕ್ತೋ ಭವತಿ ಉಕ್ತಿಞ್ಚ ||

ಇದರ ಟಿಪ್ಪಣಿಯಲ್ಲಿ ಬಾ.ರಾ. ಗೋಪಾಲರು "ಹಾಸನ ಜಿಲ್ಲೆಯ ಬೆಣ್ಣೂರಿನಲ್ಲಿ ಲಭಿಸಿದ ಮೂರು ಹಲಗೆಗಳ ಈ ತಾಮ್ರ ಶಾಸನದ ಮುದ್ರಿಕೆಯಲ್ಲಿ ಸಿಂಹದ ಚಿತ್ರವಿದೆ. ಇಮ್ಮಡಿ ಕೃಷ್ಣ ವರ್ಮನ ವಂಶಾವಳಿಯನ್ನು ರಾಜರಾಜನೆನಿಸಿದ ಕೃಷ್ಣವರ್ಮನಿಂದ ಹೀಗೆ ಕೊಟ್ಟಿದೆ: ಕೃಷ್ಣವರ್ಮ (ಮೊದಲನೆಯ)- ವಿಷ್ಣುದಾಸ-ಸಿಂಹವರ್ಮ-ಕೃಷ್ಣವರ್ಮ (ಇಮ್ಮಡಿ); ಈತನ ತಾತನ ಹೆಸರು ವಿಷ್ಣುದಾಸ ಎಂದಿರುವುದನ್ನು ಗಮನಿಸಬೇಕು. ವಿಜಯ ಶಿವಕೃಷ್ಣ ವರ್ಮನೆಂದು ಹೆಸರಿಸಲಾದ ಅರಸನು ಕದಂಬರ ಪಂಚಮ (ಐದನೆಯ) ಲೋಕಪಾಲಕನೆಂದು ವಿವರಿಸಿರುವುದನ್ನು ನೋಡಿದರೆ ಕದಂಬ ಅರಸರನ್ನು ಕಾಕುಸ್ಥವರ್ಮನಿಂದ ಗಣನೆ ಮಾಡಲಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಅರಸ ವೈಜಯಂತಿಯ ವಿಜಯ ಯಾತ್ರೆಗೆ ಹೊರಟಿದ್ದಾಗ ಪುಷ್ಯ ಮಾಸದ ಶುಕ್ಲ ಪ್ರತಿಪದೆಯಂದು ಇಜ್ಜುಣ ಗ್ರಾಮದ ಮಹಾದೇವನ ದೇವಾಲಯದ ಮುಂದೆ ಹಾರಿತ ಗೋತ್ರದ ಛಂದೋಗ ಪಾರಂಗತನೂ ಬ್ರಹ್ಮಯಜ್ಞಪರಾಯಣನೂ ಆದ ಭವಸ್ವಾಮಿ ಎಂಬ ಬ್ರಾಹ್ಮಣನಿಗೆ ಸೇಂದ್ರಕ ವಿಷಯಕ್ಕೆ ಸೇರಿದ ಪಲ್ಮಡಿ ಗ್ರಾಮದ ರಾಜಭಾಗದಲ್ಲಿ ದಶವಂದ (ಹತ್ತರಲ್ಲೊಂದು ಭಾಗ)ವನ್ನೂ ಆರು ನಿವರ್ತನ ಭೂಮಿಯನ್ನೂ ದಾನ ಮಾಡಿದನು. ಶಾಸನದ ಕೊನೆಯಲ್ಲಿ ಅರಸನನ್ನು ದೋಷರಾಶಿ ವರ್ಮನೆಂದು ಕರೆದಿದೆ. ಶಾಸನವನ್ನು ರೈಸ್ ಅವರ EC, V (ರೈಸ್ ಸಂಪಾದಿತ BL. ೨೪೫)ರಲ್ಲಿ ಪ್ರಕಟಿಸಿದ್ದಾರೆ.

-ಹೀಗಿರುವಾಗ ಪಲ್ಮಡಿ ಶಾಸನದ ರಾಚನಿಕತೆಯಲ್ಲಿ ಕೆಲವು ವಿಷಯಗಳನ್ನು ಮಾತ್ರ ಗುರುತಿಸುತ್ತಿದ್ದೇನೆ.

ಒಂದು: ಹಲ್ಮಿಡಿ ಶಾಸನದಲ್ಲಿ ನಾಲ್ಕು ಭಾಗಗಳನ್ನು ಗುರುತಿಸಬಹುದು.

೧. ವಿಷ್ಣುವಿನ ಪ್ರಾರ್ಥನೆಯಲ್ಲಿ ಪ್ರಾಕೃತ (ಬೌದ್ಧ ಮತ್ತು ಜೈನ) ಸಂಪ್ರದಾಯಗಳಲ್ಲಿನ 'ಗಾಹೆ'ಯಂಥ ರಚನೆಯನ್ನು ಕಾಣುತ್ತೇವೆ. ಇದರಲ್ಲಿ ಒಂದು, ಸಂದರ್ಭವನ್ನು ಸೂಚಿಸಲಾಗಿದೆ. 'ಭಾಗವತ'ದ ವಲಯದ್ದಿರಬಹುದು. ಬೌದ್ಧ ಗುಹಾಂತರ ದೇವಾಲಯಗಳ ದ್ವಾರದ ವಿನ್ಯಾಸವನ್ನು ಹೋಲುವ ಚಕ್ರ-ಚಿತ್ರಣವಿದೆ. ಇದು ವಿಷ್ಣುವಿಗೆ (ನೃಸಿಂಹನಿಗೆ) ಸಂಬಂಧಿಸಿದ ಘಟನೆಯೊಂದನ್ನು ತೋರಿಸುವಂತಿದೆ. ಅಲ್ಲದೆ ಈ ಚಕ್ರವು ಬೌದ್ಧ ಮಂಡಲಗಳಲ್ಲಿರುವ 'ಕಾಲಚಕ್ರ'ದ ನೆನಪನ್ನುಂಟುಮಾಡುತ್ತದೆ.

ಅಲ್ಲದೆ ಈ ರಚನೆಯು ಅನುಷ್ಟುಪ್ ಶ್ಲೋಕದ ಛಂದಸ್ಸಿನಲ್ಲಿ ಕಂಡುಬರುತ್ತದೆ. ಸಂಸ್ಕೃತ ಭಾಷೆಯಲ್ಲಿದೆ.

೨. ಎರಡನೆಯದಾಗಿ ಶಾಸನದ ರಚನೆಯನ್ನು ಗಮನಿಸಿದಾಗ ಕೇವಲ 'ಲ'ಕಾರವನ್ನು 'ಪ್ರೇಮಾಯಾ' ಎಂಬುವಲ್ಲಿ ಕೆಳಗಡೆಯಿಂದ ಕೂಡಿಸಲಾಗಿದೆ. ಇದರ ಫಲವಾಗಿ 'ಪ್ರೇಮ್ಮಾ್ಲಯ' ಎನ್ನುವಂತೆ ಆಗಿ 'ಪ್ರೇಮಾಲಯ' ಎಂಬ ಪಾಠಾಂತರವು ಮೊದಲ ಬಾರಿಗೆ ಸೃಷ್ಟಿಯಾಗಿದೆ. ಇಲ್ಲಿ 'ಲ' ಅನ್ನು ಬಿಟ್ಟಲ್ಲಿ 'ಪ್ರೇಮಾಯ' ಎಂದಾಗುವುದರಿಂದ ಶಾಸನವನ್ನು (ಕೊನೆಯ ಭಾಗವು ಕೊಂಚ ಕತ್ತರಿಸಿ ಹೋಗಿರುವುದರಿಂದ) ಸರಿಯಾಗಿ ಓದುವಲ್ಲಿ ಪ್ರೇಮಾರ್ಯಾ ಸುತನ್ಗೆ' ಎಂದು ಓದಿಕೊಳ್ಳಬೇಕಾಗುತ್ತದೆ. ಈಗ ವಿದ್ವಾಂಸರು ಓದುತ್ತಿರುವಂತೆ 'ಪ್ರೇಮಾಲಯೆ ಸುತನ್ಗೆ' ಎಂಬುದು ಸರಿಯಾದುದಲ್ಲ.

ಈ ಬಗೆಯ ತಿದ್ದುಪಡಿನಿಂದಾಗಿ ಶಾಸನದ ಒಪ್ಪದಲ್ಲಿ ಬರುವ ಅಳಕದಮ್ಬನ್ಕಳ್ದೋನ್ ಮಹಾಪಾತಕನ್-ಎಂಬಲ್ಲಿ ಕೂಡ ತಿದ್ದಲಾಗಿದೆ. ಇಲ್ಲಿ ಸ್ಪಷ್ಟವಾಗಿ, ಶಾಸನದ ಕೊನೆಯ ಎರಡು ಸಾಲುಗಳು ಎರಡನೆಯ ತಿದ್ದುಪಡಿಯಾಗಿರುವಂತಿದೆ. ಈ ಭಾಗವು ಪಲ್ಮಡಿಯನ್ನು 'ಪರಭಾರೆ' ಮಾಡಿದುದಾಗಿದೆ. ಹಾಗೂ ಪೂರಕವಾಗುವಂತೆ 'ಶಾಪ'ವನ್ನು ಸೇರಿಸಲಾಗಿದೆ.

-ಮೂರನೆಯದಾಗಿ ಶಾಸನದ ಬಲಭಾಗದಲ್ಲಿ ಮೇಲಿಂದ ಕೆಳಕ್ಕೆ ಬರೆದಂತೆ ಇರುವ ಭಟ್ಟರ ವಿಷಯ. ಆದರೆ ಇದು ವಾಸ್ತವದಲ್ಲಿ ನಾಲ್ಕನೆಯ ವಿಷಯವಾಗಿದೆ. ಅಲ್ಲದೆ ಈ ಭಾಗವು ಜಮೀನಿನ ಹಸ್ತಾಂತರವನ್ನು ಅನುಭೋಗಿಗಳಿಂದ ಸಾಧಿಸಿದಂತಿದೆ.

ಒಟ್ಟಿನಲ್ಲಿ ಹಲ್ಮಿಡಿ ಶಾಸನವು ಒಂದೇ ಬಾರಿಗೆ ರಚಿಸಿದುದಾಗಿ, ಇದು ಕ್ರಮೇಣ ಜಮೀನಿನ ವ್ಯವಹಾರವಾಗಿರುವ ಶಾಸನವಾಗಿದೆ.



**ಕ.ಇ. ಅಕಾದೆಮಿಯ ದ್ವಿತೀಯ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೮೮)**

*ಭಾರತೀಯ ಇತಿಹಾಸದ ಅಧ್ಯಯನಕ್ಕೆ ಏಕೈಕ ಪ್ರಮುಖ ಮಾರ್ಗದರ್ಶಿ ಎಂದರೆ ಶಾಸನಗಳು. ಸಮಕಾಲೀನ ಇತಿಹಾಸದ ಬಗ್ಗೆ ಸಪ್ರಮಾಣ ಬರಹಗಳು ದೊರೆಯಲಾರಂಭವಾದದ್ದು ಮುಸಲ್ಮಾನರ ಆಡಳಿತದ ನಂತರವೇ. ತರುಣ ಇತಿಹಾಸಜ್ಞರು ಸತ್ಯಾನ್ವೇಷಣೆಯನ್ನೇ ಗುರಿಯಾಗಿರಿಸಿಕೊಂಡು ತಮ್ಮ ಇತಿಹಾಸದ ಅಧ್ಯಯನವನ್ನು ನಡೆಸಿ ಯಾವುದೇ ಪೂರ್ವಾಗ್ರಹವಿಲ್ಲದೆ ಸತ್ಯವನ್ನು ದಿಟ್ಟವಾಗಿ ಮಹಾಜನತೆಯ ಮುಂದಿಡಬೇಕು.*

*ಡಾ. ಜೆ. ಎಸ್. ಗಾಯಿ*
*ಸಮ್ಮೇಳನಾಧ್ಯಕ್ಷರು*

ಡಾ|| ಜಗದೀಶ*

# ಹೊನ್ನಾಳಿ ಹಿರೇಕಲ್ಮಠದ ಶಾಸನೋಲ್ಲೇಖ - ಒಂದು ಟಿಪ್ಪಣಿ

*ಹೊನ್ನಾಳಿ ಹಿರೇಕಲ್ಮಠದ ಗುರುಪರಂಪರೆಯಲ್ಲಿ ೬ನೆಯವರಾದ ಗುರು ಚೆನ್ನಬಸವ ಸ್ವಾಮಿಗಳದು ವಿಶಿಷ್ಟ ವ್ಯಕ್ತಿತ್ವ. ಬಹುಶಃ ರಾಜಗುರುಗಳೂ ಆಗಿದ್ದುದರಿಂದ 'ಚೆನ್ನಬಸವರಸ' ಎಂದೂ ಅಭಿಧಾನವಿತ್ತನ್ನಬೇಕು. ಕೆಳದಿ ಅರಸರ ಕಾಲದಲ್ಲಿ ಕುಡಿ ಗ್ರಾಮವನ್ನು ಪುರವಾಗಿಸಿ 'ಬಸವರಾಜಪುರ' ಎಂಬ ಪ್ರತಿನಾಮಧೇಯವನ್ನು (ಬಹುಶಃ ಗುರು ಹೆಸರಿನಲ್ಲಿದ್ದ 'ಬಸವ' ಶಬ್ದವನ್ನು ಬಳಸಿ) ಉಂಬಳಿಬಿಟ್ಟದ್ದು ಶಾಸನೋಕ್ತ.*

ಹೊನ್ನಾಳಿ ಬೃಹಚ್ಛಿಲಾಮಠದ ಶ್ರೀ ಚೆನ್ನಮಲ್ಲಿಕಾರ್ಜುನ ಸ್ವಾಮಿ ಪುರಾಣ ಕೃತಿಯಲ್ಲಿ ಮಠ ಗುರು ಪರಂಪರೆಯ ಉಲ್ಲೇಖವಿದೆ. ಗುರು ಚೆನ್ನಬಸವಸ್ವಾಮಿಗಳು ಆರನೆಯ ಗುರುವಾಗಿ ಕಂಡು ಬರುತ್ತಾರೆ. ಹಿಂದೆ ಲಭ್ಯವಿದ್ದ ದಾಖಲೆಯನ್ನು ಅನುಸರಿಸಿ ಗುರು ಪರಂಪರೆಯನ್ನು ಉಲ್ಲೇಖಿಸಲಾಗಿದೆ. ಹೊನ್ನಾಳಿಯ ಸಮೀಪದ ವಡೆಯರ ಹತ್ತೂರು ಗ್ರಾಮವನ್ನು ಮಠಕ್ಕೆ ನೀಡಲಾಗಿತ್ತು ಮತ್ತು ಕೆಳದಿ ಅರಸ ಕಿರಿಯ ಬಸಪ್ಪನಾಯಕರ ರಾಜಾಶ್ರಯ ಮಠಕ್ಕೆ ಇತ್ತೆಂದು ಉಲ್ಲೇಖವಿದೆ.

ಶಿವಮೊಗ್ಗ ತಾಲ್ಲೂಕಿನ, ಆಯನೂರು ಹೋಬಳಿ ತಮ್ಮಡಿ ಹಳ್ಳಿ ಪಂಚಾಯತಿಯಲ್ಲಿನ ಕುಡಿ ಗ್ರಾಮದ ಶಾಸನವೊಂದು ಎಂ.ಎ.ಆರ್. ನಲ್ಲಿ ವರದಿಯಾಗಿದೆ. ಇದು ಆಯನೂರಿನಿಂದ ೧೦ ಕಿ.ಮೀ. ದೂರ ಇದೆ. ಗ್ರಾಮದ ಹಾಳೂರು ಭಾಗದಲ್ಲಿನ ಕತ್ತಿಮಣ್ಣನವರ ಹೊಲದಲ್ಲಿ ಶಾಸನ ಇದೆ.[೧] ಹೊನ್ನಾಳಿಯ ಮಠಕ್ಕೆ ದಾನ ನೀಡಿದ ವಿಷಯ ತಿಳಿಸುವ ಶಾಸನವು ೬-೨-೧೬೯೯ಕ್ಕೆ ಸೇರಿದೆ. ಗುರು ಚೆನ್ನಬಸವರಸರಿಗೆ ಕುಡಿ ಗ್ರಾಮವನ್ನು ಬಸವರಾಜ ಪುರವೆಂದು ನಾಮಕರಣ ಮಾಡಿ ಕೆಂಚಪ್ಪನಾಯಕರು ಉಂಬಳಿ ಬಿಟ್ಟ ವಿವರವಿದೆ. ಮಠದ ಗುರುಗಳನ್ನು ಚೆನ್ನ ಎಂಬ ಹೆಸರಿನೊಂದಿಗೆ ಶಾಸನದಲ್ಲಿ ಗುರ್ತಿಸಲಾಗಿದೆ. ಆದ್ದರಿಂದ ಈ ದಾಖಲೆಯು ಹೊನ್ನಾಳಿಯ ಹಿರೇಕಲ್ಮಠಕ್ಕೆ ಸೇರಿಸಬಹುದಾಗಿದೆ.

ಚೆನ್ನಮಲ್ಲಿಕಾರ್ಜುನಸ್ವಾಮಿ ಪುರಾಣ ಕೃತಿಯಲ್ಲಿ ಶ್ರೀ ಗುರುಬಸವ ಸ್ವಾಮಿಗಳು ಆರನೆಯ ಪಟ್ಟದ ಗುರುವಾಗಿ ಕ್ರಿ.ಶ. ೧೭೨೭ ರಿಂದ ೧೭೪೮ ಅವಧಿಯಲ್ಲಿ ಕಂಡುಬರುತ್ತಾರೆ.[೨] ಮಠಕ್ಕೆ ಸಂಬಂಧಿಸಿದಂತೆ ಕಿರಿಯ ಬಸಪ್ಪನಾಯಕರ ಕ್ರಿ.ಶ. ೧೭೪೭ ಅವಧಿಯ ಕಾಲದ ಶಾಸನದ ಕಾಗದ ಪ್ರತಿಯಲ್ಲಿ ಶ್ರೀ ಮಠದ ದೇಶ ಸಂಚಾರಕ್ಕೆ ಸಂಬಂಧಿಸಿದಂತೆ ಹೊರಡಿಸಿದ ಆದೇಶವಿದೆ.[೩]

ಕುಡಿ ಶಾಸನವು ಕ್ರಿ.ಶ. ೧೬೯೯ಕ್ಕೆ ಸೇರಿದ್ದು ಪಟ್ಟಾಧಿಕಾರಿ ಇದಕ್ಕೂ ಮೊದಲು ನಡೆದಿರಬೇಕು. ಈ ಅವಧಿಯಲ್ಲಿ ಕೆಳದಿ ಹಿರಿಯ ಬಸಪ್ಪನಾಯಕರು (ಕ್ರಿ.ಶ. ೧೬೯೮-೧೭೧೫) ಆಳುತ್ತಿದ್ದ ಅನವಟ್ಟಿ, ಜಡೆ, ಹೊನ್ನಾಳಿ, ಮಿಡಿಜೆ ಕೋಟೆಗಳನ್ನು ಮರು ವಶ ಪಡೆದ ಬಗ್ಗೆ ಕೆಳದಿ ನೃಪವಿಜಯ ಉಲ್ಲೇಖಿಸಿದೆ.[೪]

ಮೇಲಿನ ಶಾಸನ ಮತ್ತು ಕೆಳದಿ ನೃಪವಿಜಯ ಆಧಾರದಿಂದ ಗುರು ಚೆನ್ನಬಸವರಸರ ಪಟ್ಟಾಧಿಕಾರವು ಕ್ರಿ.ಶ. ೧೬೯೯ ಮೊದಲು ಆಗಿದೆ. ಮೇಲಿನ ಎರಡು ಶಾಸನಗಳಿಂದ ಮೂವರು ಕೆಳದಿ ಅರಸರಾದ ಹಿರಿಯ ಬಸಪ್ಪನಾಯಕರು (ಕ್ರಿ.ಶ. ೧೬೯೮-

* ನಂ. ೬೬, ಹೊಸಮನೆ ಬಡಾವಣೆ, ಶಿವಮೊಗ್ಗ - ೫೭೨೦೧

೧೭೧೫), ಸೋಮಶೇಖರನಾಯಕ (ಕ್ರಿ.ಶ. ೧೬೧೪-೧೭೩೯) ಮತ್ತು ಕಿರಿಯ ಬಸಪ್ಪನಾಯಕರ (ಕ್ರಿ.ಶ. ೧೬೩೯-೧೭೫೪) ಆಳ್ವಿಕೆಯ ಅವಧಿಯಲ್ಲಿ ಚೆನ್ನಬಸವರಾಜ ದೇವರು ಮಠದ ಅಧಿಕಾರಿಗಳು ಆಗಿದ್ದಾರೆ. ಕುಡಿ ಗ್ರಾಮ ಪುರವಾಗಿ ಪರಿವರ್ತನೆ ಹೊಂದಿ ಬಸವರಾಜಪುರ ಎಂದು ಹೆಸರು ಪಡೆದಿರುವುದು ಆ ಗ್ರಾಮದ ಪ್ರಗತಿಯ ಸಂಕೇತವಾಗಿದೆ.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಎಂ.ಎ.ಆರ್. ೧೯೨೩, ನಂ. ೬೩, ಪುಟ ೭೪. ಶಿವಮೊಗ್ಗ ತಾಲ್ಲೂಕಿನ, ಆಯನೂರು ಹೋಬಳಿಯ ಕುಡಿ ಗ್ರಾಮದ (ಹಾಳೂರು ಗ್ರಾಮ) ಶಾಸನ

| | | | |
|---|---|---|---|
| ೧ | ಶಾಲಿವಾಹನ ಶಕ ವರುಷ | ೭ | ದ ಪ್ರತಿ ನಾಮ ಬಸವರಾ |
| ೨ | ೧೬೨೧ ನೆಯ ಬಹುಧಾನ್ಯ | ೮ | ಜ ಪುರವನು ಶಿವಾರ್ಪಿ |
| ೩ | ಸಂವತ್ಸರದ ಮಾಘ ಶು ೨ ಲು | ೯ | ತವಾಗಿ ಕೆಂಚಪ ನಾಯ |
| ೪ | ಹೊನ್ನಾಳಿಯ ಮಠದ ಪಟ್ಟ | ೧೦ | ಕರು ಪುರವರ್ಗ ಉತ್ತಾರ |
| ೫ | ದ ಚನ್ನಬಸವರಾಜ | ೧೧ | ವಾಗಿ ಬಿಡಿಸಿ ಕೊಟ್ಟ ಉಂ |
| ೬ | ದೇವರಿಗೆ ಕುಡಿ ಗ್ರಾಮ | ೧೨ | ಬಳಿ |

೨. **ಹೊನ್ನಾಳಿ ಬೃಹಚ್ಚಿಲಾಮಠದ ಶ್ರೀ ಚೆನ್ನಮಲ್ಲಿಕಾರ್ಜುನಸ್ವಾಮಿ ಪುರಾಣ.**, ೧೯೮೯, ಪುಟ. ೧೧೦-೧೧೧.

೩. ನಾ. ಕೊಟ್ರೇಶ್, ಉತ್ತಂಗಿ, ೨೦೦೪., **ಹೊನ್ನೆಲೆಗಳು**, ಹೊನ್ನಾಳಿ, ಪುಟ ೫೨೪.

೪. **ಕೆಳದಿ ನೃಪವಿಜಯ.**, ೧೯೭೬, (ಗದ್ಯಾನುವಾದ) ಕೆಳದಿ ಗುಂಡಾ ಜೋಯಿಸ್, ಕನ್ನಡ ಸಾಹಿತ್ಯ ಪರಿಷತ್ತು, ಪುಟ ೨೫೦.



### ಕ. ಇತಿಹಾಸ ಅಕಾದೆಮಿಯ ೧೪ನೇ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೨೦೦೦)

*ಹಂಪೆ-ವಿಜಯನಗರ ಕ್ಷೇತ್ರದ ಪುರಾತತ್ತ್ವ ಅಧ್ಯಯನಕ್ಕೆ ಸಮಕಾಲೀನ ಸಾಹಿತ್ಯಾಭ್ಯಾಸವೂ ಉಪಯುಕ್ತ ಮತ್ತು ಅವಶ್ಯಕ. ಹಂಪೆ-ವಿಜಯನಗರಕ್ಕೆ ಸಮನಾಗಬಲ್ಲ ವಿಶಾಲವಾದ ಹಾಗು ಪುರಾತತ್ತ್ವ ಕುರುಹುಗಳಿಂದ ಸಮೃದ್ಧವಾಗಿರುವ ಮಧ್ಯಕಾಲೀನ ನಿವೇಶನವು ಬಹುಶಃ ದಕ್ಷಿಣ ಭಾರತದಲ್ಲಿ ಮತ್ತೆಲ್ಲಿಯೂ ಕಾಣಸಿಗದು. ಆದರೆ ವಿಜಯನಗರ ಪುರಾತತ್ತ್ವ ಅಧ್ಯಯನದ ಹಲವಾರು ಆಯಾಮಗಳು - ಹೊಸ ವಿಚಾರಗಳು, ತತ್ತ್ವಗಳು, ಧ್ಯೇಯಗಳು ಗಣನೀಯ ಪ್ರಮಾಣದಲ್ಲಿ ವ್ಯಕ್ತವಾಗಿದ್ದರೂ, ಜಾನಪದ ಸೊಗಡು ಅದರಲ್ಲಿದ್ದರೂ, ಇನ್ನೂ ಸಮಗ್ರವಾಗಿ, ಸಂಪೂರ್ಣ ಅರ್ಥವತ್ತಾಗಿ ಸರ್ವಸಮ್ಮತವಾಗುವಂತೆ ಜರುಗಬೇಕಾಗಿದೆ. ಅದಕ್ಕೆ ಪೂರಕವಾಗಿ ಸಮಕಾಲೀನ ಸಾಹಿತ್ಯ ಕೃತಿಗಳ ಅದರಲ್ಲೂ ಕನ್ನಡ ಸಾಹಿತ್ಯದಲ್ಲಿ ಮುಖ್ಯವಾಗಿ ವರ್ಣಕ ಜೀವನ ಚರಿತ್ರೆ ನಿರೂಪಕ ಅಥವಾ ಪುರಾಣ ಕಥಾರೂಪದ ವಿಷಯವನ್ನೊಳಗೊಂಡ ಸಾಹಿತ್ಯ ಕೃತಿಗಳ ಅಧ್ಯಯನ ಬಹುಮುಖ್ಯ. ಆ ಸಾಹಿತ್ಯವೋ ಆ ಕಾಲದಲ್ಲಿ ಪ್ರಚಲಿತವಿದ್ದ ಆಚರಣೆ ಸಂಪ್ರದಾಯಗಳಿಗನುಗುಣವಾಗಿ ರಚಿತವಾದ ಕಾವ್ಯ ಸಾಹಿತ್ಯವಾಗಿದೆ. ಅವುಗಳಲ್ಲಿ ಅನೇಕ ಬಾರಿ ಪುರಾತತ್ತ್ವ ಸಂಶೋಧಕರಿಗೆ ಉಪಯುಕ್ತವಾದ ಚಾರಿತ್ರಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ವಿಷಯಗಳೂ ಅಡಕವಾಗಿ ಸಮಕಾಲೀನ ಸಮಾಜ ಜನಜೀವನದಲ್ಲಿ ಪ್ರಚಲಿತದಲ್ಲಿದ್ದ ವಿಚಾರಗಳು, ನಂಬಿಕೆಗಳು, ಆಚಾರಗಳು, ಸಂಪ್ರದಾಯಗಳು ಅವುಗಳಲ್ಲಿ ಹಾಸುಹೊಕ್ಕಾಗಿರುವುದು ಕಾಣಬರುತ್ತವೆ.*

**ಸಿ. ಟಿ. ಎಂ. ಕೊಟ್ರಯ್ಯ**
ಸಮ್ಮೇಳನಾಧ್ಯಕ್ಷರು

ಎಸ್. ಎಸ್. ಭಗವತಿ*
ಎಚ್. ಎಸ್. ಮೇಲಿನಮನಿ**

# ಕೃಷ್ಣದೇವರಾಯನ ಕಾಲದ ಕನ್ನಡ ಶಾಸನಗಳ ಭಾಷೆ

(ಹಂಪಿ ಶಾಸನ ಸಂಪುಟ : ೩)*

*ಕನ್ನಡ ಭಾಷೆಯ ಬೆಳವಣಿಗೆಯನ್ನು ಗುರುತಿಸಲು ಶಾಸನಗಳು ನೆರವಾಗಿರುವಂತೆ ಕೃಷ್ಣದೇವರಾಯನ ಕಾಲದ ಶಾಸನಗಳೂ ಈ ದಿಸೆಯಲ್ಲಿ ಸಾಕ್ಷ್ಯಗಳನ್ನು ತೋರುವಂತಿವೆ. ಕನ್ನಡ ಶಾಸನಗಳ ಗದ್ಯಭಾಗದ ಭಾಷೆಯು ಪ್ರಾದೇಶಿಕ ಸೊಗಡನ್ನು ವೈಶಿಷ್ಟ್ಯವನ್ನು ಆಯಾ ವರ್ತಮಾನದ ಸಂವೇದನೆಯೊಡನೆ ತುಂಬಿ ತೋರುತ್ತದೆ. ಜೀವಂತ ಭಾಷೆಯಲ್ಲಿ ಬದಲಾವಣೆಗಳ ಆಯಾಮಗಳು ವಿಪುಲವಾಗಿರುತ್ತವೆ. ಕೃಷ್ಣದೇವರಾಯನ ಕಾಲದಲ್ಲಿ ಬಹು ಭಾಷಿಕ ಜನರ ಬದುಕು ಮೇಳಗೊಂಡಿತ್ತು. ಹೀಗಾಗಿ ಆ ಕಾಲದ ಶಾಸನಗಳು ಆಡುಮಾತಿಗೆ ಹತ್ತಿರವಾದ ಗದ್ಯ ರಚನೆಗಳನ್ನು ಹೊಂದಿವೆ.*

ಭಾಷಾ ಚರಿತ್ರೆಯ ದೃಷ್ಟಿಯಿಂದ ಕನ್ನಡ ಶಾಸನಗಳ ಶಾಸ್ತ್ರೀಯ ಅಧ್ಯಯನಗಳು ಅಲ್ಪಮಟ್ಟಿಗೆ ನಡೆದಿವೆ. ಡಾ. ಎ. ಎನ್. ನರಸಿಂಹಯ್ಯನವರು A Grammer of the oldest Kanareese Inscriptions, (೧೯೪೧) ಎಂಬ ಗ್ರಂಥದಲ್ಲಿ ಕ್ರಿ.ಶ. ೮ನೆಯ ಶತಮಾನದವರೆಗಿನ ಕನ್ನಡ ಶಾಸನಗಳ (೬೮ ಶಾಸನಗಳು) ಅಧ್ಯಯನವನ್ನು., ಡಾ. ಜಿ.ಎಸ್. ಗಾಯಿ ಅವರು Historical Grammer of old Kannada (೧೯೪೬) ಎಂಬ ಗ್ರಂಥದಲ್ಲಿ ಕ್ರಿ.ಶ. ೮ನೆಯ ಶತಮಾನದ ಆರಂಭದಿಂದ ೧೦ನೆಯ ಶತಮಾನದ ಕೊನೆಯವರೆಗಿನ ಕನ್ನಡ ಶಾಸನಗಳ (೧೦೯ ಶಾಸನಗಳು) ಅಧ್ಯಯನವನ್ನು., ಡಾ. ಕೆ. ಕುಶಾಲಪ್ಪನವರು A Grammer of Kannada (೧೯೭೨) ಎಂಬ ಗ್ರಂಥದಲ್ಲಿ ಕ್ರಿ.ಶ. ೧೦೦೦ ದಿಂದ ೧೪೦೦ರ ವರೆಗಿನ ನಾಲ್ಕು ಶತಮಾನಗಳ (೧೬೦ ಶಾಸನಗಳು) ಕನ್ನಡ ಶಾಸನಗಳ ಅಧ್ಯಯನವನ್ನು., ಡಾ. ಎಂ.ಬಿ. ನೇಗಿನಹಾಳ ಅವರು 'ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ' (೧೯೮೨) ಎಂಬ ಗ್ರಂಥದಲ್ಲಿ ಕ್ರಿ.ಶ. ೪೫೦ ರಿಂದ ಕ್ರಿ.ಶ. ೮೫೦ರ ವರೆಗಿನ ಕನ್ನಡ ಶಾಸನಗಳನ್ನು ಅಧ್ಯಯನ ಮಾಡಿದ್ದಾರೆ. ತದನಂತರದ ಕನ್ನಡ ಶಾಸನಗಳ ಭಾಷಿಕ ಅಧ್ಯಯನ ಲೇಖನ ರೂಪದಲ್ಲಿದ್ದರೂ ಸಂಪೂರ್ಣವಾಗಿ ಶಾಸನಗಳ ಭಾಷಿಕ ಅಧ್ಯಯನ ಆಗಬೇಕಾಗಿದೆ. ಇದನ್ನು ಗಮನದಲ್ಲಿಟ್ಟುಕೊಂಡು ಕೇವಲ ಕೃಷ್ಣದೇವರಾಯನ ಕಾಲದ ಕನ್ನಡ ಶಾಸನಗಳ ಭಾಷೆಯನ್ನು ಅಧ್ಯಯನಕ್ಕೆ ಒಳಪಡಿಸಿದ್ದೇವೆ.

ಈ ಶಾಸನಗಳ ಗದ್ಯಭಾಗದ ಭಾಷೆಯು ಆಯಾ ಪ್ರಾಂತದ ಆಡುನುಡಿಯ ಪ್ರಾದೇಶಿಕ ಹಾಗೂ ಸಮಕಾಲೀನ ವೈಶಿಷ್ಟ್ಯಗಳನ್ನು ಹೆಚ್ಚಿನ ಮಟ್ಟಿಗೆ ತೋರಿಸುತ್ತವೆ.

ಜೀವಂತ ಭಾಷೆಯಲ್ಲಿ ಧ್ವನಿವ್ಯತ್ಯಾಸ, ವರ್ಣವ್ಯತ್ಯಾಸ, ನಾನಾ ರೀತಿಯ ಅಕ್ಷರ ವಿಪರ್ಯಾಸಗಳು ತೋರಿಬರುತ್ತಿವೆ. ಗ್ರಾಂಥಿಕ ಭಾಷೆ, ಆಯಾ ಕಾಲದ ಶಿಷ್ಟ ಭಾಷೆ, ಜನಸಾಮಾನ್ಯರ ಆಡುನುಡಿ, ಗ್ರಾಮ್ಯ ಭಾಷೆ ಇವೆಲ್ಲದರ ಪ್ರಭಾವವನ್ನು ನಾವು ಶಾಸನಗಳಲ್ಲಿ ಕಾಣುತ್ತೇವೆ. ಕನ್ನಡ ಭಾಷೆಯ ಬೆಳವಣಿಗೆಯನ್ನು ಗುರುತಿಸುವುದಕ್ಕೆ ಶಾಸನಗಳು ಸಾಕ್ಷ್ಯ ಒದಗಿಸುತ್ತವೆ.

ಕೃಷ್ಣದೇವರಾಯನ ಕಾಲದ ಶಾಸನಗಳು ಗದ್ಯದಲ್ಲಿದ್ದು, ಆಡು ಮಾತಿಗೆ ಬಹಳ ಹತ್ತಿರವಾಗಿವೆ.

ಈ ಕಾಲದ ಕನ್ನಡ ಶಾಸನಗಳಲ್ಲಿ ಬಳಕೆಯಾದ ಭಾಷೆಯನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

* ಸಂಶೋಧನ ವಿದ್ಯಾರ್ಥಿಗಳು, ಡಾ. ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧. ಧ್ವನಿಮಾ ವ್ಯತ್ಯಾಸಗಳು:

* ವ್ಯಂಜನಕ್ಕೆ ಬದಲಾಗಿ ಸ್ವರವನ್ನು ಬಳಸಿರುವುದಕ್ಕೆ ಉದಾಹರಣೆ :

ಪದಾದಿ : ಯಾರು-ಆರು (ಹಂ.ಶಾ.ಸಂ. ೨೩೫. ಕ್ರಿ.ಶ. ೧೫೧೩.)

ಯಾರೊಬರು-ಆರೊಬರು (ಹಂ.ಶಾ.ಸಂ. ೨೫೦ ಕ್ರಿ.ಶ. ೧೫೧೩)

ಯಾರು ತಪ್ಪಿದವರು-ಆರು ತಪ್ಪಿದವರು (ಹಂ.ಶಾ.ಸಂ. ೧೮೧ ಕ್ರಿ.ಶ. ೧೫೧೩)

ಯಾರೊಬರು ಅಳುಪಿದರೆ-ಆರೊಬರು ಅಳುಪಿದರೆ (ಹಂ.ಶಾ.ಸಂ. ೩೯೭. ಕ್ರಿ.ಶ. ೧೫೧೦)

ಪದಾಂತ್ಯ : ತಾಯಿ-ತಾಇ (ಹಂ.ಶಾ.ಸಂ. ೨೫೭ ಕ್ರಿ.ಶ. ೧೫೨೧)

ನಂಮತಾಯಿ-ನಂಮ ತಾಇ (ಹಂ.ಶಾ.ಸಂ. ೨೦೮ ಕ್ರಿ.ಶ. ೧೫೧೩)

ನಾವು-ನಾಉ (ಹಂ.ಶಾ.ಸಂ. ೨೫೭. ಕ್ರಿ.ಶ. ೧೫೨೧)

ಮೆವು-ಮೆಉ (ಹಂ.ಶಾ.ಸಂ. ೨೫೭. ಕ್ರಿ. ೧೫೨೧)

ಹಸುವು-ಹಸುಉ (ಹಂ.ಶಾ.ಸಂ. ೧೮೧ ಕ್ರಿ.ಶ. ೧೫೧೩)

* ಸ್ವರಕ್ಕೆ ಬದಲಾಗಿ ವ್ಯಂಜನ ಬಳಸಿರುವುದಕ್ಕೆ ಉದಾಹರಣೆ.

ಪದಾದಿ : ಇರಲಾಗಿ-ಯಿರಲಾಗಿ (ಹಂ.ಶಂ.ಸಂ. ೩೨೧ ಕ್ರಿ.ಶ. ೧೫೨೩)

ಈ ಧಮ್ಮಕೆ-ಯೀ ಧಮ್ಮಕೆ (ಹಂ.ಶಾ.ಸಂ. ೧೮೧. ಕ್ರಿ.ಶ. ೧೫೧೩)

ಈ ಗ್ರಾಮದಲೂ-ಯೀ ಗ್ರಾಮದಲೂ (ಹಂ.ಶಾ.ಸಂ. ೨೩೫. ಕ್ರಿ.ಶ. ೧೫೧೩.)

ಎಲೆ-ಯಲೆ (ಹಂ.ಶಾ.ಸಂ. ೨೫೭. ಕ್ರಿ.ಶ. ೧೫೨೧.)

ಏರುವ-ಯೇರುವ (ಹಂ.ಶಾ.ಸಂ. ೨೫೭. ಕ್ರಿ.ಶ. ೧೫೨೧.)

ಒಂದು-ವೊಂದು (ಹಂ.ಶಾ.ಸಂ. ೨೫೭. ಕ್ರಿ.ಶ. ೧೫೨೧.)

ಒಳಗಾದ-ವೊಳಗಾದ (ಹಂ.ಶಾ.ಸಂ. ೩೨೦. ಕ್ರಿ.ಶ. ೧೫೧೮.)

* ದೀರ್ಘಸ್ವರಗಳಿಗೆ ಬದಲಾಗಿ ಹ್ರಸ್ವಸ್ವರಗಳನ್ನು ಬಳಸಿರುವುದು:

ಪದಾದಿ: ಈ ಧರ್ಮ್ಮಕೆ-ಇ ಧರ್ಮ್ಮಕೆ (ಹಂ.ಶಾ.ಸಂ. ೧೮೧. ಕ್ರಿ.ಶ. ೧೫೧೩.)

ಈ ಗ್ರಾಮಗಳಿಗೆ-ಇ ಗ್ರಾಮಗಳಿಗೆ (ಹಂ.ಶಾ.ಸಂ. ೨೦೮. ಕ್ರಿ.ಶ. ೧೫೧೩.)

*ಐ।ಔ। ಸಂಯುಕ್ತಾಕ್ಷರಗಳನ್ನು ಸ್ವರ ಸಹಾಯದಿಂದ।। ಪ್ರಯೋಗಿಸಿರುವುದು.

।ಐ। → ಅಯಿ.

ಉದಾ:

ಅಂಗರಂಗವೈಭೋಗ-ಅಂಗರಂಗವಯಿಭೋಗ (ಹಂ.ಶಾ.ಸಂ. ೩೩.)

ಅಂಗರಂಗವೈಭವ-ಅಂಗರಂಗವಇಭವ (ಹಂ.ಶಾ.ಸಂ. ೨೦೮)

ಚೈತ್ರಮಾಸದ-ಚಯಿತ್ರಮಾಸದ (ಹಂ.ಶಾ.ಸಂ. ೩೩)

ಚೈತ್ರ ಶುಹಿಲೂ-ಚಇತ್ರಶುಹಿಲೂ (ಹಂ.ಶಾ.ಸಂ. ೨೦೮)

ದೇವರ ನೈವೇದ್ಯ-ದೇವರ ನಯಿವೇದ್ಯ (ಹಂ.ಶಾ.ಸಂ. ೧೮೧)

ನೈವೇದ್ಯಕೆ-ನಇವೇದ್ಯಕೆ (ಹಂ.ಶಾ.ಸಂ. ೨೫೭)

ವೈಶಾಖಶುಹಿಲು-ವಯಿಶಾಶುಹಿಲು (ಹಂ.ಶಾ.ಸಂ. ೭೯)

ಮಹಾನೈವೇದ್ಯಕು-ಮಹಾನಯಿವೇದ್ಯಕು (ಹಂ.ಶಾ.ಸಂ. ೩೯೭)

ಭೈರವದೇವನಹಳಿಯಗ್ರಾಮ-ಭಯಿರವದೇವನಹಳಿಯಗ್ರಾಮ (ಹಂ.ಶಾ.ಸಂ. ೩೩)

| | |
|---|---|
| * ಅಂಗರಂಗವೈಭೋಗ | * ಚೈತ್ರಮಾಸದ |
| । | । |
| ಅಂಗರಂಗವಯಿಭೋಗ | ಚಯಿತ್ರಮಾಸದ |
| । | । |
| ಅಂಗರಂಗವಇಭವ | ಚಇತ್ರ ಶುಹಿಲೂ |
| * ನೈವೇದ್ಯ | * ವೈಶಾಖ |
| । | । |
| ನಯಿವೇದ್ಯ | ವಯಿಶಾಖ |
| । | । |
| ನಇವೇದ್ಯ | |

।ಔ। → ಅವು

ಉದಾ :

ಚೌಡಲಾಪುರದ ಕಾಲುವೆ-ಚಉಡಲಾಪುರದ ಕಾಲುವೆ (ಹಂ.ಶಾ.ಸಂ. ೨೦೮)

ಔಭಳದೇವರ-ಅಉಭಳದೇವರ (ಹಂ.ಶಾ.ಸಂ. ೨೬೫.)

| | |
|---|---|
| * ಔಡಲಾಪುರದ ಕಾಲುವೆ | * ಔಭಳದೇವರ |
| । | । |
| ಚವುಡಲಾಪುರದ ಕಾಲುವೆ | ಅವುಭಳದೇವರ |
| । | । |
| ಚಉಡಲಾಪುರದ ಕಾಲುವೆ | ಅಉಭಳದೇವರ |

*ಅಲ್ಪಪ್ರಾಣಗಳು ಮಹಾಪ್ರಾಣವಾಗಿರುವುದು.

ಉದಾ :

ಶಕವರುಶ-ಶಖವರುಶ (ಹಂ.ಶಾ.ಸಂ. ೭೯.)

ಮಹಾಪ್ರಾಣಗಳು ಅಲ್ಪಪ್ರಾಣವಾಗಿರುವುದು.

ಉದಾ :

ಪುಷ್ಯಶುದ್ಧಹಿಲೂ-ಪುಶ್ಯಶುದ್ಧಹಿಲೂ (ಹಂ.ಶಾ.ಸಂ. ೨೦೮)

ಸ್ಥಾನಪ್ರಾಪ್ತಿಪಾಲು-ಸ್ತಾನಪ್ರಾಪ್ತಿಪಾಲು (ಹಂ.ಶಾ.ಸಂ. ೨೦೮)

ಸ್ಥಳದ ಸುಂಕ-ಸ್ತಳದಸುಂಕ (ಹಂ.ಶಾ.ಸಂ. ೨೫೦)

ಸ್ಥಿರರಾಜ್ಯವನಾಳುತ-ಸ್ತಿರರಾಜ್ಯವನಾಳುತ (ಹಂ.ಶಾ.ಸಂ. ೩೨೧)

ತಾಲವ್ಯಗಳು ಮೂರ್ಧನ್ಯಗಳಾಗಿ, ಮೂರ್ಧನ್ಯಗಳು ತಾಲವ್ಯಗಳಾಗಿರುವುದು.

ಉದಾ : ಶಕವರುಷಂಗಳು-ಷಕವರುಷಂಗಳು (ಹಂ.ಶಾ.ಸಂ. ೨೫೩)
ಶಖವರುಷ-ಶಖವರುಶ (ಹಂ.ಶಾ.ಸಂ.೭೯)

**ದ್ವಿತ್ವಾಕ್ಷರಗಳು ಅದ್ವಿತ್ವವಾಗಿರುವುದು.**

ಉದಾ : ।ಕಕ। ಕ।
ಇ ಧರ್ಮಕ್ಕೆ - ಇ ಧರ್ಮಕೆ (ಹಂ.ಶಾ.ಸಂ. ೨೦೮)
ಯೀ ಧರ್ಮಕ್ಕೆ - ಯೀ ಧರ್ಮಕೆ (ಹಂ.ಶಾ.ಸಂ. ೨೫೦)
ತಳವಾಜೆಕೆಯರೊಕ್ಕ - ತಳವಾಜೆಕೆಯರೊಕ (ಹಂ.ಶಾ.ಸಂ. ೨೫೦)
।ಖಖ। ।ಖ।
ಲೆಖ್ಖದಲ್ಲೂ - ಲೆಖದಲೂ
।ಟಟ। ।ಟ।
ಗೋಪಿಸೆಟ್ಟಿಯಹಳಿಯ ಗ್ರಾಮ - ಗೋಪಿಸೆಟಿಯಹಳಿಯ ಗ್ರಾಮ (ಹಂ.ಶಾ.ಸಂ. ೧೮೧)
ಕಾಳಗಟ್ಟೆಯ ಹೊಳೆ - ಕಾಳಗಟೆಯಹೊಳೆ (ಹಂ.ಶಾ.ಸಂ.೨೦೮)
ವಿಜಯನಾಗರ ಪಟ್ಟಣ - ವಿಜಯನಾಗರಪಟಣ (ಹಂ.ಶಾ.ಸಂ. ೩೨೧)
।ಡಡ। ।ಡ।
ಗುಡ್ಡದ ಸೀಮೇಲೂ - ಗುಡದಸೀಮೇಲೂ (ಹಂ.ಶಾ.ಸಂ.೨೦೮)
ದುಡ್ಡು - ದುಡು (ಹಂ.ಶಾ.ಸಂ. ೨೦೮)
।ತತ। ।ತ।
ಎತ್ತುವ - ಎತುವ (ಹಂ.ಶಾ.ಸಂ. ೨೦೮)
ಭತ್ತ ಆದಾಯ - ಭತ ಆದಾಯ (ಹಂ.ಶಾ.ಸಂ. ೨೩೫)
ಸ್ತಿರರಾಜ್ಯವನಾಳುತ್ತ - ಸ್ತಿರರಾಜ್ಯವನಾಳುತ (ಹಂ.ಶಾ.ಸಂ. ೩೨೧)
।ದದ। ।ದ।
ಚಯಿತ್ರ ಶುದ್ಧ ಪಂಚಮಿ - ಚಯಿತ್ರಶುಧಪಂಚಮಿ (ಹಂ.ಶಾ.ಸಂ. ೧೮೧)
।ನನ। ।ನ।
ಕುಳಪಾಲನ್ನು - ಕುಳಪಾಲನು (ಹಂ.ಶಾ.ಸಂ. ೨೫೭)
ಧರ್ಮವನ್ನು - ಧರ್ಮವನು (ಹಂ.ಶಾ.ಸಂ. ೨೫೭)
।ಪಪ। ।ಪ।
ಆರೋಬರು ತಪ್ಪಿದರೆ - ಆರೋಬರು ತಪಿದರೆ (ಹಂ.ಶಾ.ಸಂ.೩೩)
ತುಪ್ಪ - ತುಪ (ಹಂ.ಶಾ.ಸಂ. ೨೫೭)
।ಬಬ। ।ಬ।
ಆರೊಬ್ಬರು ತಪ್ಪಿದರೆ - ಆರೊಬರು ತಪಿದರೆ (ಹಂ.ಶಾ.ಸಂ. ೩೩)
।ಲಲ। ।ಲ।
ಪಾಪದಲ್ಲಿ - ಪಾಪದಲಿ (ಹಂ.ಶಾ.ಸಂ. ೩೨೦)
ತುಂಗಭದ್ರಾತೀರದಲ್ಲಿ - ತುಂಗಭದ್ರಾತೀರದಲಿ (ಹಂ.ಶಾ.ಸಂ. ೩೨೧)
।ಳಳ। ।ಳ।
ಗೋಪಿಸೆಟಿಯ ಹಳ್ಳಿಯ ಗ್ರಾಮ - ಗೋಪಿಸೆಟಿಯಹಳಿಯ ಗ್ರಾಮ (ಹಂ.ಶಾ.ಸಂ. ೧೮೧)

**ಸಂಧಿಯಾಗಿರುವುದು**

ಉದಾ :
ಸಂವಛರ+ಉಛ್ಹಾಹ=ಸಂವಛರೋಛ್ಹಾಹ (ಹಂ.ಶಾ.ಸಂ. ೧೮೧)
ನಿತ್ಯ+ಉತ್ಸವ=ನಿತ್ಯೋತ್ಸವ (ಹಂ.ಶಾ.ಸಂ. ೨೦೮)
ಸುವರ್ಣ+ಆದಾಯ=ಸುವರ್ಣಾದಾಯ (ಹಂ.ಶಾ.ಸಂ. ೨೬೫)

**ನಾಮ ಆಕೃತಿಮಾ+ಬಿಂದು+ಬಹುವಚನ ಪ್ರತ್ಯಯವಿರುವುದು.**

ಉದಾ :
ಶಕವರುಷಂಗಳು (ಹಂ.ಶಾ.ಸಂ. ೨೫೭)
ಷಕವರುಷಂಗಳು (ಹಂ.ಶಾ.ಸಂ. ೨೫೩)
ಅಂಗರಂಗವೈಭೋಗಂಗಳಿಗೆ (ಹಂ.ಶಾ.ಸಂ. ೩೨೦)

**ತತ್ಸಮ ತದ್ಭವ ರೂಪಗಳಾಗಿರುವುದು.**

ಸಂಸ್ಕೃತದಲ್ಲಿ ಶ,ಷಗಳನ್ನು ಹೊಂದಿರುವ ಶಬ್ದಗಳು ಕನ್ನಡದಲ್ಲಿ ಸಕಾರವಾಗಿರುವುದು.

ಉದಾ :
ಭಾಷೆಗೆ-ಭಾಸಿಗಿ (ಹಂ.ಶಾ.ಸಂ. ೩೨೧)
ಮಾಘಶುದ್ಧ ೧೪ಲು - ಮಾಘಸುಧ ೧೪ಲು (ಹಂ.ಶಾ.ಸಂ. ೩೯೭)
ಶಾಲಿವಾಹನ ಶಕವರುಷ - ಶಾಲಿವಾಹನ ಸಕವರುಷ (ಹಂ.ಶಾ.ಸಂ. ೨೩೦)
ಶುಕ್ಲಸಂವತ್ಸರ - ಸುಕ್ಲಸಂವತ್ಸರ (ಹಂ.ಶಾ.ಸಂ.೩೯೭)
ಶಾಲಿವಾಹನ ಶಕವರುಷ - ಸಾಲಿವಾಹನ ಶಕವರುಷ (ಹಂ.ಶಾ.ಸಂ. ೩೯೭)

**ವಿಭಕ್ತಿ ರೂಪಗಳು**

* ದ್ವಿತೀಯಾ ವಿಭಕ್ತಿ : **ಅನು**
ಯೀ ಆರತಿಗಳನು (ಹಂ.ಶಾ.ಸಂ. ೩೩)
ತೇಜಸ್ವಾಮ್ಯವನು (ಹಂ.ಶಾ.ಸಂ. ೩೨೧)
ಫಲವನು (ಹಂ.ಶಾ.ಸಂ. ೨೫೭)
ಧರ್ಮವನು (ಹಂ.ಶಾ.ಸಂ. ೨೫೭)
ಪುರುಷಾಮ್ರುಗದ ಆರತಿಯನು (ಹಂ.ಶಾ.ಸಂ. ೧೮೧)

* ಚತುರ್ಥಿ ವಿಭಕ್ತಿ : **ಕೆ** (ನಪುಂಸಕ) ಗೆ (ಪುಲ್ಲಿಂಗ)
ಶ್ರೀ ವಿರೂಪಾಕ್ಷದೇವರಿಗೆ (ಹಂ.ಶಾ.ಸಂ. ೩೩)
ನರಸಣನಾಯಕವೊಡೆಯರಿಗೂ (ಹಂ.ಶಾ.ಸಂ. ೧೮೧)
ರಾಜಪಾಲಿಗೆ (ಹಂ.ಶಾ.ಸಂ. ೨೫೭)
ಅಂಗರಂಗಭೋಗಕೆ (ಹಂ.ಶಾ.ಸಂ. ೩೨೧)
ವ್ಯಾಸರಾಯರಿಗೆ (ಹಂ.ಶಾ.ಸಂ. ೨೦೮)

* ಷಷ್ಠಿ ವಿಭಕ್ತಿ : **ಅ**
ಶ್ರೀಮುಖಸಂವಛರದ (ಹಂ.ಶಾ.ಸಂ. ೩೩)
ಫಾಲ್ಗುಣಮಾಸದ (ಹಂ.ಶಾ.ಸಂ. ೧೮೧)

* ಸಪ್ತಮಿ ವಿಭಕ್ತಿ : ಅಲು

| | |
|---|---|
| ಆಷಾಢ ಶುದ್ಧ ೫ಲೂ | (ಹಂ.ಶಾ.ಸಂ. ೩೩) |
| ಮಾಘ ಬ. ೧೪ ಲೂ | (ಹಂ.ಶಾ.ಸಂ. ೨೫೩) |
| ಪುಣ್ಯತಿಥಿಗಳಲೂ | (ಹಂ.ಶಾ.ಸಂ. ೨೬೫) |
| ತಮ್ಮಪಟ್ಟಾಭಿಷೇಕದಲಿ | (ಹಂ.ಶಾ.ಸಂ. ೩೯೭) |
| ರಾಮಾಪುರದಲೂ | (ಹಂ.ಶಾ.ಸಂ. ೨೫೦) |
| ವಾರಣಾಸಿಯಲು | (ಹಂ.ಶಾ.ಸಂ. ೩೯೭) |

ಅನುಸ್ವಾರದಿಂದ ಕೂಡಿದ ಶಬ್ದಗಳು

| | |
|---|---|
| ಪುಣ್ಯ - ಪುಂಣ್ಯ | (ಹಂ.ಶಾ.ಸಂ. ೩೩) |
| ಹೊನ್ನಾಪುರದ ಗ್ರಾಮ - ಹೊಂನಾಪುರದ ಗ್ರಾಮ | (ಹಂ.ಶಾ.ಸಂ.೩೩) |
| ಶ್ರೀಮನ್ ಮಹಾರಾಜಾಧಿರಾಜ - ಶ್ರೀಮಂನ್‌ಮಹಾರಾಜಾಧಿರಾಜ | (ಹಂ.ಶಾ.ಸಂ. ೨೦೭) |
| ನಮ್ಮ ತಾಇ - ನಂಮ ತಾಇ | (ಹಂ.ಶಾ.ಸಂ. ೨೦೮) |
| ಚಿಕ್ಕತಿಮ್ಮದೇವ - ಚಿಕ್ಕತಿಂಮದೇವ | (ಹಂ.ಶಾ.ಸಂ. ೨೫೭) |
| ನಿಮ್ಮ - ನಿಂಮ | (ಹಂ.ಶಾ.ಸಂ. ೨೦೮) |
| ಅಮ್ಮನವರಿಗೆಲು - ಅಂಮ್ಮನವರಿಗೆಲು | (ಹಂ.ಶಾ.ಸಂ. ೧೮೧) |

* ದ್ವಿತ್ವಗಳ ಅಧಿಕತೆ

| | |
|---|---|
| ಯೀ ಧರ್ಮಕೆ - ಯೀ ಧರ್ಮ್ಮಕೆ | (ಹಂ.ಶಾ.ಸಂ. ೩೩) |
| ಸರ್ವಮಾನ್ಯವಾಗಿ - ಸರ್ವ್ವಮಾನ್ಯವಾಗಿ | (ಹಂ.ಶಾ.ಸಂ. ೨೬೫) |
| ಸೂರ್ಯಗ್ರಹಣ - ಸೂರ್ಯ್ಯಗ್ರಹಣ | (ಹಂ.ಶಾ.ಸಂ. ೩೩) |

ಇಲ್ಲಿ ಬಳಸಲಾದ ಸಂವತ್ಸರ ಮತ್ತು ರಥೋತ್ಸವದ ವಿವಿಧ ಪ್ರಯೋಗಗಳು.

| | |
|---|---|
| * ಶ್ರೀಮುಖ ಸಂವಛರದ | (ಹಂ.ಶಾ.ಸಂ. ೨೬೫) |
| ಸರ್ವಜಿತು ಸಂವತ್ಸರ | (ಹಂ.ಶಾ.ಸಂ. ೨೫೩) |
| ತಛವತ್ಸರದ | (ಹಂ.ಶಾ.ಸಂ. ೨೦೮) |
| * ಉಛ್ವವಗಳು | (ಹಂ.ಶಾ.ಸಂ. ೨೫೭) |
| ರಥೋತ್ಸವ | (ಹಂ.ಶಾ.ಸಂ. ೩೩) |
| ರಥಉಛ್ಚಾಹ | (ಹಂ.ಶಾ.ಸಂ. ೧೮೧) |
| ರಥಉಚ್ಛಾಹ | (ಹಂ.ಶಾ.ಸಂ. ೩೯೭) |
| ಮಾಸ ಉಛವ | (ಹಂ.ಶಾ.ಸಂ. ೨೦೮) |
| ನಿತ್ಯೋತ್ಸವ | (ಹಂ.ಶಾ.ಸಂ. ೨೦೮) |

ಹೀಗೆ ಕೃಷ್ಣದೇವರಾಯನ ಕಾಲದ ಶಾಸನಗಳಲ್ಲಿ "ಯ" ಕಾರ "ಆ"ಕಾರವಾಗಿ "ಯ" ಕಾರ "ಇ" ಕಾರವಾಗಿ ಬಳಕೆ ಯಾದಂತಹ ಧ್ವನಿಮಾ ವ್ಯತ್ಯಾಸಗಳು ಶಾಸನಗಳ ಪ್ರಾರಂಭಿಕ ಹಂತದಲ್ಲಿ ಕಂಡುಬಂದರೆ, ಐ, ಔ ಸಂಯುಕ್ತಾಕ್ಷರಗಳು ಸ್ವರ ಸಹಾಯದಿಂದ ಇನ್ನೊಂದು ಹಂತದಲ್ಲಿ ಕಂಡಬರುತ್ತವೆ. ಅಲ್ಪ ಪ್ರಾಣಗಳು ಮಹಾಪ್ರಾಣಗಳಾಗಿ, ಮಹಾಪ್ರಾಣಗಳು ಅಲ್ಪಪ್ರಾಣ ಗಳಾಗಿ, ತಾಲವ್ಯಗಳು ಮೂರ್ಧನ್ಯಗಳಾಗಿ, ಮೂರ್ಧನ್ಯಗಳು ತಾಲವ್ಯಗಳಾಗಿಯೂ ಬಳಕೆಗೊಂಡಿವೆ. ದ್ವಿತ್ವಾಕ್ಷರಗಳು ಅದ್ವಿತ್ವ ವಾಗಿರುವುದನ್ನು ಸಾಕಷ್ಟು ಪ್ರಮಾಣದಲ್ಲಿ ಕಾಣುತ್ತೇವೆ. ತತ್ಸಮ ತದ್ಭವರೂಪಗಳು, ವಿಭಕ್ತಿ ರೂಪಗಳು, ಅಲ್ಲಲ್ಲಿ ಕಂಡುಬಂದರೆ, ಅನುಸ್ವಾರದಿಂದ ಕೂಡಿದ ಶಬ್ದಗಳು, ದ್ವಿತ್ವಗಳ ಅಧಿಕತೆಯನ್ನು ಶಾಸನಗಳಲ್ಲಿ ಕಾಣಬಹುದು. ಅಲ್ಲದೆ ಕೆಲವು ಶಾಸನಗಳಲ್ಲಿ ಸಂವತ್ಸರ ಮತ್ತು ರಥೋತ್ಸವಗಳು ಭಾಷೆಯ ದೃಷ್ಟಿಯಿಂದ ವಿಶೇಷ ವಾಗಿ ತೋರುತ್ತವೆ.

ಬಹು ಭಾಷೆಯ ಜನ ಕೃಷ್ಣದೇವರಾಯನ ಆಡಳಿತದಲ್ಲಿ ಬದುಕುತ್ತಿದ್ದುದರಿಂದ ಅಂದಿನ ಕಾಲದ ಬಹುತೇಕ ಶಾಸನಗಳು ಜನರ ಭಾಷೆಗೆ ಹತ್ತಿರವಾಗಿಯೇ ರಚಿತಗೊಂಡಿವೆ. ಕೆಲವು ಶಾಸನಗಳು ಪಂಡಿತರಿಗಾಗಿ ನಿರ್ಮಿತವಾದರೂ ಅವು ಜನರ ಭಾಷೆಗೆ ಹೊರತಾಗಿ ರಚನೆಗೊಂಡಿಲ್ಲ. ಹೀಗಾಗಿ ಕೃಷ್ಣದೇವಾರಯನ ಕಾಲದ ಶಾಸನಗಳು ಆಡು ಮಾತಿಗೆ ಹೆಚ್ಚು ಹತ್ತಿರವಾಗಿದ್ದು, ಗದ್ಯದಲ್ಲಿ ರಚನೆಗೊಂಡಿವೆ.



---

* ಡಾ. ದೇವರಕೊಂಡಾರೆಡ್ಡಿ ಹಾಗು ಇತರರು ಸಂಪಾದಿಸಿದ ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಪಡಿಸಿದ ಹಂಪಿ ಶಾಸನ ಸಂಪುಟ:೩ಅನ್ನು ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.



ಹರಿಹರ ಶ್ರೀನಿವಾಸರಾವ್*

# ಹರಿಹರದ ಶಾಸನಗಳಲ್ಲಿ ಗಿಡ, ಮರ, ಭೂಮಿ, ನೀರು, ಸುಂಕ ಇತ್ಯಾದಿ - ಒಂದು ವೈಜ್ಞಾನಿಕ ನೋಟ

*ನಮ್ಮ ಪ್ರಾಕೃತಿಕ ಪಂಚಭೂತಗಳ ಅಸ್ತಿತ್ವವನ್ನು, ಸಾಂಪ್ರದಾಯಿಕ, ಪೌರಾಣಿಕ ಹಿನ್ನೆಲೆಯಲ್ಲಿ 'ಪರಂಪರೆ' ಎಂಬಂತೆ ಗಮನಿಸಲಾಗಿದೆ. ಆದಕ್ಕೆ ಸಾಂಸ್ಕೃತಿಕ ಆಯಾಮಗಳಿರುವುದನ್ನು ಗಮನಿಸಿದರೆ, ಇರುವ ನೆಲ, ಜಲ, ಬಾನು ನಮ್ಮ ಬದುಕಿನ ಅವಿಭಾಜ್ಯ ಅಂಗವಾಗಿ ರಲು ಕಾರಣವೇನು? ಅದರಿಂದ ದೈನಂದಿನ ಬದುಕಿನ ನಿರ್ವಹಣೆಯ ಆಗಿರುವುದೇ ಕಾರಣವಾಗಿದೆ. ಆದರೆ ಇವುಗಳ ಸಲ್ಲಕ್ಷಣಗಳನ್ನು ವೈಜ್ಞಾನಿಕ ನಿಟ್ಟಿನಿಂದ ಗಮನಿಸಿ ದರೆ, ಉಪಯೋಗಿ ಹಿನ್ನೆಲೆಯ ಕಾರಣ ತಿಳಿಯುತ್ತದೆ. ನಮ್ಮಲ್ಲಿಯ ಶಾಸನಗಳು ಇದನ್ನು ದಾನ, ದತ್ತಿ ಹಾಗು ಸಂಕ್ಷಿಪ್ತ ಕಾವ್ಯಮಯ ವರ್ಣನೆಯಿಂದಲೂ ಈ ಉಪ ಯೋಗದ ಸಂಗತಿಯನ್ನು ಮನಸ್ಸಿಗೆ ಪುಳಕವಾಗಿ ತಟ್ಟುವು ದುಂಟು.*

ಮಕರ ವ್ರಾತಾಭಿ ಘಾತೋಚ್ಛಳಿತ ಕಮಠ ಸಂಘಟ್ಟ ಸಂಸ್ಪರ್ಧಿ ಮೀನ
ಪ್ರಕರ ಪ್ರಕ್ಷೋಭಿತೋದ್ಯತ್ತರಳ ತರಂಕೋತ್ಕರಂ ಕ್ಷಿಪ್ತ ಮುಕ್ತಾ
ನಿಕರಂ ಕಣ್ಗೆಯ್ದೆ ಚೆಲ್ವಂ ಪಡೆದುದ ವಿರಳೋತ್ತಾಳ ಕಲ್ಲೋಲ ಮಾಳಾ
ಧಿಕ ಸಂಘರ್ಷ ಪ್ರಜಾತ ಪ್ರಬಳ ಘನಘನಧ್ವಾನ ರೌದ್ರಂ ಸಮುದ್ರ[ಂ]

[ಎಪಿಗ್ರಾಫಿಯಾ ಕರ್ನಾಟಿಕಾ (ಚಿತ್ರದುರ್ಗ ಜಿಲ್ಲೆ) ಭಾಗ. ೬, ಶಾ.ಸಂ. ೪೧. ಕ್ರಿ.ಶ. ೧೧೪೮.]

ಸಮಸ್ತ ವಸ್ತು ಗುಣಗಳಿಂದ ಹೊಗಳಿಸಿಕೊಂಡವನೂ, ನಮಸ್ಕರಿಸಿದ ದೇವತೆಗಳ ತಲೆಗಳು ಇಡಲ್ಪಟ್ಟ ಪಾದಕಮಲ ವುಳ್ಳವನೂ, ಮೂರು ಲೋಕಗಳ ಉತ್ಪತ್ತಿಗೆ ಮೂಲ ಕಾರಣನೂ ಆದ ಪರಮೇಶ್ವರನು (ಭವ) ಬ್ರಹ್ಮಾಂಡದಲ್ಲಿ ವಿಸ್ತಾರವಾಗಿ ನಿರ್ಮಿಸಿದ ಚರಾಚರ ರೂಪವಾದ ಭೂಮಿಯನ್ನು ಸುತ್ತಲೂ ಚೆನ್ನಾಗಿ ಆವರಿಸಿ, ಗುರುತರವೂ ಎತ್ತರವೂ ಆದ ಅಲೆಗಳಿಂದ ಕೂಡಿ, ಮೊಸಳೆಗಳ ಸಮೂಹಗಳ ಹೊಡೆತದಿಂದ ಮೇಲೆದ್ದ ಆಮೆಗಳ ಹೊಡೆತದೊಂದಿಗೆ ಸ್ಪರ್ಧಿಸುವ, ಮೀನುಗಳ ಗುಂಪಿನಿಂದ ಪ್ರಕ್ಷುಬ್ಧಗೊಂಡು ಮೇಲೇಳುತ್ತಿರುವ ಚಂಚಲವಾದ ಅಲೆಗಳ ಸಮೂಹ, ಮೇಲೆರಚುತ್ತಿರುವ ಮುತ್ತುಗಳ ರಾಶಿ, ಎಡಬಿಡದೆ ಎತ್ತರವಾದ ಅಲೆಗಳ ಸಮೂಹದ ತಾಕುವಿಕೆಯಿಂದ ಹುಟ್ಟಿದ ಅತಿಶಯವಾದ ಗುಡುಗಿನ ಶಬ್ದದಂತೆ ಭಯಂಕರವಾದ ಶಬ್ದ ಇವುಗಳಿಂದ ಕೂಡಿದ ಸಮುದ್ರವು ಕಣ್ಣಿಗೆ ಅತಿಶಯವಾಗಿ ಸೊಗಸನ್ನು ಉಂಟುಮಾಡುತ್ತದೆ. ನಾನಾ ವಿಧವಾದ ಮೊಸಳೆಗಳ ಚಲನದಿಂದ, ನೀರಾನೆ ತಿಮಿಂಗಿಲಗಳ ನುಗ್ಗುವಿಕೆಯಿಂದ ಮೇಲೆದ್ದು ಬಿದ್ದೇಳುವ ಮೀನುಗಳು ಬಾಲಗಳ ಹೊಡೆತದಿಂದ ಅಚಲವೆ ನಿಸಿದರೂ ಚಲಿಸುವ ಪರ್ವತಗಳಿಂದ ಕೂಡಿ, ಮೇಲೇಳುತ್ತಿದ್ದ ಅಲೆಗಳೆಂಬ ಮಿಂಚಿನಿಂದ ಕೂಡಿದ ಮೇಘದಂತಿದ್ದ ಸಮುದ್ರ ಅದರ ಬಣ್ಣಗಳಿಂದ ನೋಡುವವರ ಕಣ್ಣುಗಳಿಗೆ ಹವಳದಂತೆ ಕಾಣುತ್ತಿತ್ತು.

ಮಹಾಸ್ರಗ್ಧರಾ ವೃತ್ತದಲ್ಲಿ ರಚಿತವಾಗಿರುವ ಮೇಲಿನ ಶ್ಲೋಕದಲ್ಲಿ ಬಂದಿರುವ ಕಮಲ, ಭೂಮಿ, ಅಲೆಗಳು, ಮೊಸಳೆ ಗಳು, ಎತ್ತರವಾದ ಅಲೆಗಳ ಸಮೂಹದ ತಾಗುವಿಕೆಯಿಂದ ಹುಟ್ಟಿದ ಶಬ್ದವು ಗುಡುಗಿನಂತೆ ಎನ್ನುವುದು ವೈಜ್ಞಾನಿಕ ರೀತಿಯಲ್ಲಿ ಉತ್ತಮ ನೀರಿನಲ್ಲಿ ಮಾತ್ರ ಕಮಲ ಹುಟ್ಟುವುದು, ನೀರನ್ನು ಶುದ್ಧೀಕರಿಸುವ ನೈಸರ್ಗಿಕ ಯಂತ್ರಗಳು, ಆಮೆ, ಮೊಸಳೆ, ತಿಮಿಂಗಿಲ, ನಿರಾನೆ

* 'ಸಮರ್ಥ', ೭೫/೧೫, ವಿಕಾಸ್ ಹೈಸ್ಕೂಲ್ ಎದುರು, ೫ನೇ ಬ್ಲಾಕ್, ೩ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು - ೮೫.

ಎನ್ನುವುದನ್ನು ಬೇರೆ ಹೇಳಬೇಕಾಗಿಲ್ಲ. ಮೇಘದಂತಿದ್ದ ಸಮುದ್ರ ನೀರಿನ ಸಾಂದ್ರತೆಗೂ ಚರಾಚರ ರೂಪವಾದ 'ಭೂಮಿ' ಎನ್ನುವುದು 'ಭೂ'ತತ್ವವನ್ನು ಸೂಚ್ಯವಾಗಿಸುತ್ತಾ ಸದ್ಯ ಪ್ರಸ್ತಾಪಿಸಲಾಗಿದೆ.

'The most elaborale inscriptions are perhaps those setup around the Harihara Temple' ಎನ್ನುವ ರೈಸ್‌ರವರ ಹೇಳಿಕೆಯ ಜಾಡನ್ನು ಹಿಡಿದು ಭೂಮಿ, ನೀರು, ಬೆಳೆಗಳು, ಸುಂಕ ಇತ್ಯಾದಿಗಳನ್ನು ತಕ್ಕಮಟ್ಟಿನ ವಿವರಗಳೊಂದಿಗೆ ಇಲ್ಲಿ ಹೇಳಲಾಗಿದೆ.

ಮಣ್ಣು : ಹೊಳೆಯಮಣ್ಣು,[೧] ಎರೆಹಟ್ಟಿ,[೨] ಕಜಲಕಟ್ಟಿ,[೩] ಕೆಂಗಾಡು,[೪] ಒಕ್ಕಳ[೫] (ಎರೆಭೂಮಿ, ಫಲವತ್ತಾದ ಕಪ್ಪು ಭೂಮಿ).

**೧) ಹೊಳೆ ಮಣ್ಣು** : ಹೊಳೆಯ ಮಣ್ಣು ಫಲವತ್ತತೆಯ ಪ್ರತೀಕವೆಂದು ನಮ್ಮಲ್ಲಿ ಸಾಂಪ್ರದಾಯಿಕ ಬೆಳೆಗಳಾದ ಕಲ್ಲಂಗಡಿ, ಕರಬೂಜ, ಬದನೆಕಾಯಿ, (ಗಂಧಶಾಲಿ) ಭತ್ತ, ತೆಂಗು ಇತ್ಯಾದಿಗಳನ್ನು ನಿರಂತರವಾಗಿ ಬೆಳೆಯುತ್ತಾ ಬರುತ್ತಿದ್ದೇವೆ. ಇವುಗಳ ಜೊತೆಗೆ ಇತ್ತೀಚೆಗೆ ಹೊರರಾಷ್ಟ್ರಗಳಲ್ಲೂ ಬೇಡಿಕೆ ಇರುವ ಮಿಡಿಸೌತೆ (ಘರ್ಕಿನ್), ಉಪ್ಪಾಗೆ, ಟರ್ನಿಪ್‌ಗಳನ್ನೂ ಇಲ್ಲಿ ಬೆಳೆಯಬಹುದು ಎನ್ನುವುದನ್ನೀಗ ನೋಡೋಣ.

**ಮಿಡಿ ಉಪ್ಪಿನಕಾಯಿ ಸೌತೆ (ಘರ್ಕಿನ್)** : ಘರ್ಕಿನ್ (ಕುಕುಮಿಸ್ ಅಂಗೂರಿಯಾ) ಒಂದು ಜಾತಿಯ ಸೌತೆಕಾಯಿ ಯಾಗಿದ್ದು ಇದರ ಅತೀ ಎಳೆಯ ಕಾಯಿಗಳನ್ನು ಬಹುತೇಕವಾಗಿ ಉಪ್ಪಿನಕಾಯಿಗಾಗಿ ಬಳಸುತ್ತಾರೆ. ಇದನ್ನು ರಫ್ತು ಮಾಡಲು ವಾಣಿಜ್ಯ ಬೆಳೆಯಾಗಿಯೇ ಬೆಳೆಯಲಾಗುತ್ತದೆ. ಇದರ ಕಾಯಿಗಳು ಸೌತೆಕಾಯಿಗಿಂತ ಹೆಚ್ಚಿನ 'ಉ' ಮತ್ತು 'ಸಿ' ಅನ್ನಾಂಗಗಳನ್ನು ಹೊಂದಿದೆ.

**ಮಣ್ಣು ಮತ್ತು ಹವಾಗುಣ** : ಮರಳು ಮಿಶ್ರಿತ ಜೇಡಿಮಣ್ಣು ಈ ಬೆಳೆಗೆ ತುಂಬಾ ಸೂಕ್ತವಾಗಿದ್ದು ಚೆನ್ನಾಗಿ ನೀರು ಬಸಿದು ಹೋಗುವಂತಹ ಜೇಡಿಮಣ್ಣಿನಲ್ಲಿಯೂ ಇದನ್ನು ಬೆಳೆಯಬಹುದು. ಇದು ಮುಖ್ಯವಾಗಿ ಉಷ್ಣವಲಯದ ತರಕಾರಿಯಾಗಿದ್ದು ಬೇಸಿಗೆ ಕಾಲದಲ್ಲಿ ಚೆನ್ನಾಗಿ ಬೆಳೆಯಬಹುದು. ಜನವರಿ-ಫೆಬ್ರವರಿ ತಿಂಗಳು ಗಳಲ್ಲಿ ಈ ಬೆಳೆ ಪ್ರಾರಂಭಿಸಲು ಸೂಕ್ತವಾಗಿದ್ದು ಮುಂಗಾರಿನಲ್ಲೂ ಬೆಳೆಯಬಹುದಾಗಿದೆ.

**ತಳಿಗಳು** : ವಿದೇಶಿ ತಳಿಗಳಾದ ಕ್ಯಾಲಿಪ್ಸೋ, ವೆನ್ಲೋ ಪಿಕ್ಲಿಂಗ್ ಎನ್.ಸಿ.ಎ:ಎಚ್-೩೨, ಎನ್.ಸಿ.ವಿ.ಎಚ್- ೩೫ ಮತ್ತು ಎನ್.ಸಿ.ವಿ. ಎಚ್-೪೧ ಪ್ರಚಲಿತದಲ್ಲಿವೆ.

**ಉಪ್ಪಾಗೆ (ಗಾರ್ಸಿನಿಯಾ ಕಾಂಬೋಜಿಯಾ)** : ಸದಾ ಹಸಿರಾಗಿರುವ ಮಧ್ಯಮದಿಂದ ಎತ್ತರಕ್ಕೆ ಬೆಳೆಯುವ ಮರವಾಗಿದ್ದು, ಸಾಮಾನ್ಯವಾಗಿ ಪಶ್ಚಿಮ ಘಟ್ಟ ಪ್ರದೇಶ ಹಾಗೂ ಕರಾವಳಿಗಳಲ್ಲಿ ಹೆಚ್ಚಾಗಿ ಬೆಳೆಯುತ್ತದಾದರೂ ಕಣಿವೆ ಹಾಗೂ ನದಿದಂಡೆ ಪ್ರದೇಶಗಳಲ್ಲಿ ಚೆನ್ನಾಗಿ ಬೆಳೆಯಬಲ್ಲ ಉಪ್ಪಾಗೆ ಹಣ್ಣಿನ ಆಮ್ಲಯುಕ್ತ, ಹುಳಿಸಿಪ್ಪೆಯನ್ನು ಅಡುಗೆಯಲ್ಲಿ ಸಾಂಬಾರು ಪದಾರ್ಥವಾಗಿ ಹಾಗೂ ಬೀಜದಿಂದ ಹೊರಡಿಸಿದ ಕೊಬ್ಬನ್ನು ಖಾದ್ಯ ತೈಲವಾಗಿ ಬಳಸ ಲಾಗುವುದು. ಹಣ್ಣಿನ ಸಿಪ್ಪೆಯಿಂದ ಬೇರ್ಪಡಿಸಿದ ಹೈಡ್ರಾಕ್ಸಿ ಸಿಟ್ರಿಕ್ ಆಮ್ಲವು ವಿವಿಧ ಔಷಧಿ ತಯಾರಿಕೆಯಲ್ಲಿ ತಿಂಡಿ ತಿನಿಸುಗಳಲ್ಲಿ ಉಪಯೋಗಿಸಲ್ಪಡುವುದರ ಜೊತೆಗೆ ಅಂತರರಾಷ್ಟ್ರೀಯ ಮಾರು ಕಟ್ಟೆಯ ಬೇಡಿಕೆಯನ್ನು ಸಹ ಪಡೆದಿದೆ.

**ಮಣ್ಣು** : ಹೆಚ್ಚು ಸಾವಯವ ಪದಾರ್ಥಗಳಿಂದ ಕೂಡಿದ ನದಿ ತೀರದ ಜೇಡಿಗೋಡು, ಮರಳುಗೋಡು ಅಥವಾ ಕೆಂಪು ಜಂಬಿಟ್ಟಿಗೆ ಮಣ್ಣು ಸೂಕ್ತವಾದುದು.

**ನಾಟಿಕಾಲ** : ಜೂನ್-ಜುಲೈ ತಿಂಗಳುಗಳು ನಾಟಿ ಮಾಡಲು ಸರಿಯಾದ ಸಮಯ.

**ಕೊಯ್ಲು ಮತ್ತು ಇಳುವರಿ** : ಹಣ್ಣುಗಳು ಜೂನ್-ಜುಲೈ ತಿಂಗಳಲ್ಲಿ ಕೊಯ್ಲಿಗೆ ಬರುವುವು. ಚೆನ್ನಾಗಿ ಮಾಗಿದ ಹಣ್ಣುಗಳನ್ನು ಕೊಯ್ಲು ಮಾಡಿ ತಕ್ಷಣ ಬೀಜ ಮತ್ತು ಸಿಪ್ಪೆಯನ್ನು ಬೇರ್ಪಡಿಸಬೇಕು. ಅಟ್ಟಣಿಗೆಯ ಮೇಲೆ ಬೀಜ ಮತ್ತು ಸಿಪ್ಪೆಯನ್ನು ಹರಡಿ ಕೆಳಗಡೆಯಿಂದ ಬೆಂಕಿಯನ್ನು ಉರಿಸಿ ಹೊರಡುವ ಶಾಖದಿಂದ ಒಣಗಿಸಬೇಕು. ಹೀಗೆ ಒಣಗಿಸಿದ ಸಿಪ್ಪೆಯ ಇಳುವರಿಯು ಪ್ರತಿ ಹೆಕ್ಟೇರಿಗೆ ೨೫-೩೦ ಕ್ವಿಂಟಲ್ ಹಾಗೂ ಬೀಜದ ಇಳುವರಿ ೬-೮ ಕ್ವಿಂಟಲ್ ಬರುವುದು.

**ಟರ್ನಿಪ್** : ಈ ಬೆಳೆಯನ್ನು ಸಾಧಾರಣವಾಗಿ ಇದರ ದೊಡ್ಡ ಬೇರಿನ ಗಡ್ಡೆಯ ತರಕಾರಿಗೋಸ್ಕರ ಬೆಳೆಯುತ್ತಾರೆ. ಇದರಿಂದ ಉಪ್ಪಿನಕಾಯಿಗಳನ್ನು ತಯಾರಿಸಬಹುದು. ಇದರ ಎಲೆಗಳು 'ಉ' ಮತ್ತು 'ಸಿ' ಅನ್ನಾಂಗಗಳನ್ನು ಹೇರಳವಾಗಿ ಹೊಂದಿದ್ದು, ಸುಣ್ಣ ಮತ್ತು ಕಬ್ಬಿಣದ ಅಂಶಗಳನ್ನು ಹೊಂದಿರುತ್ತದೆ.

**ಮಣ್ಣು** : ಈ ಬೆಳೆಗೆ ಮರಳು ಮಿಶ್ರಿತ ಗೋಡುಮಣ್ಣು ಸೂಕ್ತವಾದುದು.

**ಕಾಲ** : ಇದು ಚಳಿಗಾಲದ ಬೆಳೆಯಾಗಿದ್ದರೂ ಸಹ ವರ್ಷದ ಎಲ್ಲ ಕಾಲಗಳಲ್ಲಿ ಬೆಳೆಯಬಹುದಾಗಿದೆ ಒಳ್ಳೆಯ ಗುಣಮಟ್ಟದ ಗಡ್ಡೆಗಳನ್ನು ಚಳಿಗಾಲದ ಬೆಳೆಯಿಂದ ಪಡೆಯಬಹುದಾಗಿದೆ. ಸಾಧಾರಣವಾಗಿ ಈ ಬೆಳೆಯನ್ನು ಜೂನ್-ಜುಲೈ, ಅಕ್ಟೋಬರ್-ನವೆಂಬರ್ ಮತ್ತು ಜನವರಿ-ಫೆಬ್ರವರಿ ತಿಂಗಳುಗಳಲ್ಲಿ ಬೆಳೆಯ ಬಹುದಾಗಿದೆ.

**ತಳಿಗಳು** : ಸ್ನೋಬಾಲ್, ಗೋಲ್ಡನ್ ಬಾಲ್, ಅರ್ಲಿ ಮಿಲನ್, ಪೂಸಾಕಾಂಚನ್. ಪೂಸಾಕಾಂಚನ್ ಗಡ್ಡೆಗಳು ಗುಂಡಗೆ ಇದ್ದು, ತೆಳುಹಳದಿ ಬಣ್ಣದ ತಿರುಳನ್ನು ಹೊಂದಿರುತ್ತವೆ. ಇದರ ಗಡ್ಡೆಗಳು ಸುಮಧುರ ವಾಸನೆ ಹೊಂದಿದ್ದು ರುಚಿಯಾಗಿರುತ್ತವೆ. ತಳಿಗಳಿಗೆ ಅನುಸಾರವಾಗಿ ಪ್ರತಿ ಹೆಕ್ಟೇರಿಗೆ ೧೫,೦೦೦-೨೦,೦೦೦ ಕಿ.ಗ್ರಾಂ. ಗಡ್ಡೆಗಳನ್ನು ಪಡೆಯಬಹುದು.

**ಕಲ್ಲಂಗಡಿ :** ಇದನ್ನು ಕಲ್ಲಂಗಡಿ, ಬಚ್ಚಲಗಾಯಿ, ವಾಟರ್ ಮೆಲಾನ್ ಎಂಬ ವಿವಿಧ ಹೆಸರುಗಳಿಂದ ಕರೆಯುವುದು ವಾಡಿಕೆ.

**ಮಣ್ಣು :** ಕಲ್ಲಂಗಡಿಗೆ ಮುಖ್ಯವಾಗಿ ನೆಲದಲ್ಲಿ ಬಳ್ಳಿಯಂತೆ ಹಬ್ಬುವುದು, ಆದ್ದರಿಂದ ನೀರು ಬಸಿದು ಹೋಗುವ ಮರಳು ಮಿಶ್ರಿತ ಜೇಡಿಮಣ್ಣು ತುಂಬಾ ಉತ್ತಮವಾಗಿದೆ. ಹೆಚ್ಚು ಹುಳಿ ಮತ್ತು ಕ್ಷಾರ ಹೊಂದಿರುವ ಮಣ್ಣಿನಲ್ಲಿ ಇದನ್ನು ಬೆಳೆಯುವುದು ಸೂಕ್ತವಲ್ಲ. ನದಿ ತೀರದ ಭೂಪ್ರದೇಶದಲ್ಲಿ ಹೆಚ್ಚಿನ ಇಳುವರಿ ಪಡೆಯಬಹುದು.

**ತಳಿಗಳು :** ಆಶಾಹಿಯಮಾಟೊ, ಶುಗರ್‌ಬೇಬಿ, ಆರ್ಕಾ ಮಾಣಿಕ್, ಅರ್ಕಾಜ್ಯೋತಿ.

**ಬೇಸಾಯ ಕ್ರಮದಲ್ಲಿ ಅನುಸರಿಸಬೇಕಾದ ಕೆಲ ಮುಖ್ಯಾಂಶಗಳು :** ಬೀಜ ಹಾಕಿದ ಒಂದು ತಿಂಗಳ ನಂತರ ಮುಖ್ಯ ಕುಡಿಗಳನ್ನು ಐದು ಅಥವಾ ಆರು ಗಿಣ್ಣಿಗೆ ಚಿವುಟುವುದ ರಿಂದ ಹೆಚ್ಚು ಮಗ್ಗಲು ಕವಲುಗಳನ್ನು ಬಿಡುವುದು. ಬಳ್ಳಿಯಲ್ಲಿ ೩-೪ ಕಾಯಿಗಳನ್ನು ಬಿಟ್ಟು ಉಳಿದ ಕಾಯಿಗಳನ್ನು ತೆಗೆಯುವುದ ರಿಂದ ಉತ್ತಮ ಗಾತ್ರದ ಹಣ್ಣುಗಳನ್ನು ಪಡೆಯಬಹುದು. ಕಲ್ಲಂಗಡಿ ಮಿಡಿನಿಂಬೆ ಹಣ್ಣಿನ ಗಾತ್ರದಷ್ಟಿರುವಾಗ ೨೦ ಪಿ.ಪಿ.ಎಂ. ಬಿಬ್ರ್ಯಾಲಿಕ್ ಆಮ್ಲದ್ರಾವಣದಲ್ಲಿ (೨೦ ಮಿ.ಗ್ರಾಂ. ಬೆಬ್ರಾಲಿಕ್ ಆಮ್ಲ ೧ ಲೀಟರ್ ನೀರಿನಲ್ಲಿ ಮಿಶ್ರ ಮಾಡಿ) ಅದ್ದುವುದರಿಂದ ಹಣ್ಣಿನ ಗಾತ್ರ ಮತ್ತು ಗುಣಮಟ್ಟ ಹೆಚ್ಚುವುದು. **ಎಕರೆಗೆ ಒಂದು ಜೇನುಪೆಟ್ಟಿಗೆ ಇಡುವುದರಿಂದ ಕಲ್ಲಂಗಡಿ ಇಳುವರಿ ಹೆಚ್ಚಿಸಬಹುದಾಗಿದೆ.**

**ಕರಬೂಜ :** ಇದು ಬೇಸಿಗೆಯ ಬೆಳೆಯಾಗಿದ್ದು, ರುಚಿಕರ ತಿರುಳಿಗಾಗಿ ಜನಪ್ರಿಯವಾಗಿದೆ ಹಾಗೂ 'ಉ' ಮತ್ತು 'ಸಿ' ಅನ್ನಾಂಗ, ರಂಜಕ ಹಾಗೂ ಪೊಟ್ಯಾಷ್ ಖನಿಜಾಂಶಗಳನ್ನು ಒದಗಿಸುತ್ತದೆ.

**ಮಣ್ಣು :** ಆಳವಾದ ಚೆನ್ನಾಗಿ ನೀರು ಬಸಿದು ಹೋಗುವ ಮರಳು ಮಿಶ್ರಿತ ಗೋಡುಮಣ್ಣು ಅಥವಾ ರೇವೆ ಮಣ್ಣುಗಳಲ್ಲಿ ಇದನ್ನು ಬೆಳೆಯಬಹುದು.

**ತಳಿಗಳು :** ಅರ್ಕಾರಾಜಹಂಸ, ಆರ್ಕಾಜೀತ್, ಪೂಸಾ ಶರಬತಿ, ಹರಮಧು.

**ಎರೆಹಟ್ಟಿ, ಒಕ್ಕುಳ, ಎರೆಹೊಲ :** ಶಾಸನ ಸಂಖ್ಯೆ(೩೧) ಒಕ್ಕುಳದ ಎರೆಹೊಲ ಎರಡೂ ಕಪ್ಪು ಮಣ್ಣಿನ ಭೂಮಿಯನ್ನು ಸೂಚಿಸುತ್ತವೆ ಎನ್ನಲು ಇದೇ ಶಾಸನದಲ್ಲಿ ಅಮೃತಪಡಿ ನೈವೇದ್ಯ ಕ್ಕೆಂದು ಸಾವಿತ್ರಭಟ್ಟರಿಗೆ ಹಾಗೂ ಅಕ್ಕಸಾಲೆ ವೀರವೀರೋಜನ ಮಗ ಕರಿಯ ತಿಪ್ಪೋಜನು ಈ ಶಾಸನವನ್ನು ತಿದ್ದಿದ್ದಕ್ಕೆ (ಬರೆದಿದ್ದಕ್ಕೆ) ಎಂದು ಸ್ಪಷ್ಟವಾಗಿದೆ. ಇವು ಕಪ್ಪುಮಣ್ಣಿನ ಭೂಮಿಯನ್ನು ಸೂಚಿಸುತ್ತವೆ. ಈ ಮಣ್ಣಿನಲ್ಲಿ ಎಲೆಕೋಸು, ಕೊತ್ತಂಬರಿ, ದಾಳಿಂಬೆ, ನುಗ್ಗೆ ಇತ್ಯಾದಿಗಳನ್ನು ಬೆಳೆಯಲು ಸೂಕ್ತವಾಗಿದೆ. ಇವುಗಳಲ್ಲಿರುವ ಪೌಷ್ಠಿಕಾಂಶಗಳು ಹೀಗಿವೆ.

**ಎಲೆಕೋಸು :** ಇದು 'ಎ' ಮತ್ತು 'ಸಿ' ಅನ್ನಾಂಗಗಳನ್ನು ದೇಹಕ್ಕೆ ಒದಗಿಸುತ್ತದೆ. ನೀರು ಬಸಿದುಹೋಗುವ ಮಧ್ಯಮ ಕಪ್ಪು ಮತ್ತು ಮರಳು ಮಿಶ್ರಿತ ಕೆಂಪು ಮಣ್ಣು ಈ ಬೆಳೆಗೆ ಅತಿ ಸೂಕ್ತವಾದವುಗಳು. ಚೌಗುಪ್ರದೇಶ ಹಾಗೂ ಹುಳಿ ಮಣ್ಣಿರುವ ಪ್ರದೇಶ ಈ ಬೆಳೆಗೆ ಸೂಕ್ತವಲ್ಲ. ಇದು ಚಳಿಗಾಲದ ಬೆಳೆಯಾಗಿದ್ದು, ತಂಪಾದ ವಾತಾವರಣ ಸೂಕ್ತ. ಹೆಚ್ಚು ಉಷ್ಣಾಂಶವಿರುವ ಒಣ ಹವೆ ಪ್ರದೇಶದಲ್ಲಿ ಇದರ ಗುಣಮಟ್ಟ ಕಡಿಮೆಯಾಗಿ ಸುಮಧುರ ವಾಸನೆ ಕಳೆದುಕೊಳ್ಳುತ್ತದೆ.

**ಕೋತಂಬರಿ :** ಇದು ಪ್ರಮುಖ ಮಸಾಲೆ ಪದಾರ್ಥಗಳಲ್ಲಿ ಒಂದು. ಕಪ್ಪು ಮಣ್ಣಿನ ಪ್ರದೇಶದಲ್ಲಿ ಮುಖ್ಯವಾದ ಖುಷ್ಕಿ ಬೆಳೆ. ಇದನ್ನು ಮುಂಗಾರು ಹಿಂಗಾರು ಮತ್ತು ಮಿಶ್ರ ಬೆಳೆಯನ್ನಾಗಿಯೂ ಬೆಳೆಯುತ್ತಾರೆ. ಬಿತ್ತನೆ ಮಾಡುವ ಮುನ್ನ ಕಪ್ಪು ಮಣ್ಣಿನ (ಒಕ್ಕುಳ ಶಾ.ಸಂ. ೩೧) ಭೂಮಿಯಲ್ಲಿ ಎರಡು ಬಾರಿ ಹರಗಿ ಭೂಮಿಯನ್ನು ಸಿದ್ಧಪಡಿಸಬೇಕು. ಕೆಂಪು ಮಣ್ಣಿನ (ಕೆಂಗಾಡು ಶಾಸನೋಕ್ತ ಸಂಖ್ಯೆ ೬೧) ಪ್ರದೇಶವಾದಲ್ಲಿ ಒಂದೆರಡು ಬಾರಿ ರಂಟೆ ಹೊಡೆಯ ಬೇಕಾಗುತ್ತದೆ. ಬಿತ್ತನೆಗೆ ಮೊದಲು ಬೀಜವನ್ನು ಎರಡು ಹೋಳಾಗಿ ಮಾಡಬೇಕು. ಒಂದು ದುಂಡಾಗಿರುವ ಮರದ ತುಂಡನ್ನು ಬೀಜಗಳ ಮೇಲೆ ಉಜ್ಜುವುದರಿಂದ ಈ ರೀತಿಯ ಹೋಳುಗಳನ್ನು ಮಾಡಬಹುದು. ಇದರಿಂದ ಬಿತ್ತನೆ ಬೀಜದಲ್ಲಿ ಉಳಿತಾಯವಾಗುವು ದಲ್ಲದೆ ಸರಿಯಾಗಿ ಮೊಳಕೆ ಬರಲು ಸಾಧ್ಯವಾಗುತ್ತದೆ. ಹೀಗೆಯೇ ಹೆಚ್ಚು ಮಳೆ ಬಾರದ ಮರಳು ಮಿಶ್ರಿತ ಗೋಡುಮಣ್ಣಿನಿಂದ ಹಿಡಿದು ಆಳವಾದ ಕಪ್ಪು ಭೂಮಿ (ಎರೆಹಟ್ಟಿ, ಒಕ್ಕುಳ)ಯಲ್ಲಿ ದಾಳಿಂಬೆ ಮತ್ತು ನುಗ್ಗೆ ಇತ್ಯಾದಿಗಳನ್ನು ಬೆಳೆಯಬಹುದು. ನುಗ್ಗೆ ಸೊಪ್ಪಿನಲ್ಲಿ ಹೇರಳವಾದ 'ಸಿ' ಅನಾಂಗ, ಕ್ಯಾರೋಟಿನ ಇದ್ದು ಕಬ್ಬಿಣ, ರಂಜಕ, ಸುಣ್ಣದ ಅಂಶಗಳು ಸಾಕಷ್ಟು ಪ್ರಮಾಣದಲ್ಲಿ ಇವೆ.

**ಗಿಡ, ಮರ, ಬಳ್ಳಿಗಳಿಗೆ ಸಂಬಂಧಿಸಿದ ಶಾಸನೋಕ್ತ ಹೆಸರುಗಳು :** ಎಲೆವಳ್ಳಿ (ಶಾ.ಸ. ೨೫), ಗುಹಾರಣ್ಯ (೨೫), ತಾವರೆಯಹಳ್ಳಿ (೬೧), ನೇರಲ್ಗೆರೆ (೬೬), ಬನ್ನಿಕೋಡು (೨೨), ಬೇರಲ (೨೫), ಬಸರುಗಟ್ಟ (೬೭), ಶ್ರೀಗಂಧ (೪೧).

ಶ್ರೀಯುತ ಪ್ರೊಫೆಸರ್ ಹೆಚ್.ಎಂ. ಶಂಕರನಾರಾಯಣ ರಾವ್ ಅವರಿಂದ ಶೋಧಿಸಲ್ಪಟ್ಟು ಡಾ|| ಬಿ.ಆರ್. ಗೋಪಾಲ ಅವರಿಂದ ಓದಲಾದ ಒಂದು ಶಾಸನದ ಸಾಲುಗಳು : ಶ್ರೀ ಏಕನಾಥ ದೇವಿಗೆ ಶ್ರೀ ವೀರ.....ದೇವತೆಯ ಪೂಜೆಗೆ ಶಂಕರ ದೇವರಿಂ ಬಡಗಲು ಹಳ್ಳದಿಂ ತೆಂಕಸಲುವ ಅಮೃತ ಪಡಿಯ ವಿವರ ಪ್ರತಿ ಮಾಸವೊಂದಕ್ಕಂವೆಲ್ಲುಯೆ....ದಿನವೊಂದೆಕ್ಕಂ ವೀಳೆ ಮೂಱು, ಮಹಾನವಮಿಯ ಪರ್ವದ ದಿನಕ್ಕೆ....ಮೂಱು ತುಪ್ಪ, ಗದ್ದಾನ ಎಣ್ಣೆ, ಅದ್ದನ ಪಂಚಪರ್ವಂಗಳಲ್ಲಿ ಪ್ರತಿ ದಿನಂ ನಡೆಸುವ ವೀಳೆಯ ಒಂದು ಮಗ ಧರಣೋಜ (ಕಾಲ ಕ್ರಿ.ಶ. ೧೩೮೨). ದಾವಣಗೆರೆ ೨೩ನೇ ನಂಬರಿನ ಶಾಸನ (ಕ್ರಿ.ಶ. ೧೪೧೦) ತುಂಗಭದ್ರೆ ಮತ್ತು ಹರಿದ್ರೆಯ ನದಿಗಳ ಕಾಲುವೆಯ ಕೆಳಗೆ ಬೆಳೆವ

ಹೂವು, ಬಾಳೆ, ವೀಳ್ಯ ಎಲೆ, ಲತಾಮಂಟಪಗಳಿಂದ ತುಂಬಿದ್ದ ರಿಂದ ಉಂಟಾದ ದುಂಬಿಗಳು ಹರಿಹರೇಶ್ವರನ ಪಾದದಲ್ಲಿ ರಾರಾಜಿಸುತ್ತಿವೆ ಎಂದು ಉಲ್ಲೇಖಿಸುತ್ತಿದೆ. ಈ ಶಾಸನಗಳಲ್ಲಲ್ಲದೇ ಇನ್ನು ಹಲವು ಕಡೆಗಳಲ್ಲಿ ವೀಳ್ಯದ ಎಲೆಯ ಪೂಜೆ ಆಂಜನೇಯನಿಗೆ, ದೇವತೆಯರಾದ ದುರ್ಗೆ, ಊರಮ್ಮ ಇತ್ಯಾದಿ ದೇವತೆಗಳಿಗೆ 'ಎಲೆ ಪೂಜೆ' ಕಟ್ಟಿಸುವುದು ಚಿತ್ರದುರ್ಗ, ಬಳ್ಳಾರಿ, ದಾವಣಗೆರೆ (ಕರ್ನಾಟಕದ ಇತರ ಭಾಗಗಳಲ್ಲೂ) ಕಡೆಗಳಲ್ಲಿ ಇನ್ನೂ ಜೀವಂತ ವಾಗಿರುವ ವಿಶಿಷ್ಟ ಆಚರಣೆಗಳಲ್ಲಿ ಒಂದಾಗಿದ್ದರೂ ಹರಿಹರ (ವಿಷ್ಣು-ಈಶ್ವರ) ರಿಗೆ ಸಂಬಂಧಿಸಿದಂತೆ ಇಂಥ ಪದ್ಧತಿಯು ಬಹಳ ಕಡಿಮೆಯೆಂದೇ ತಿಳಿದರೂ ಇದನ್ನು ದಾಖಲಿಸಿರುವುದು ಶಾಸನಗಳ ವಿಶೇಷವೆಂದೆನ್ನಬಹುದಾಗಿದೆ. ಹರಿದ್ರೆಯ ದಡದಲ್ಲಿ ಬೆಳೆವ ವೀಳ್ಯದ ಎಲೆಯೂ ಉತ್ತಮ ಮಟ್ಟದ್ದಾಗಿದ್ದು ಇಂದಿಗೂ ಕೊಲ್ಲಿ ರಾಷ್ಟ್ರಗಳಿಂದ ಹಿಡಿದು ನಮ್ಮ ದೇಶದ ಕಾಶ್ಮೀರದವರೆಗೂ ರಫ್ತಾಗುತ್ತಿವೆ. ಇದನ್ನು ಬೆಳೆಯಲು ಫಲವತ್ತಾದ ಮಣ್ಣು ಬೇಕು. ಜೇಡಿಗೋಡು ಮಣ್ಣು ಉತ್ತಮ. ಆಳವಾದ, ಸಾವಯವ ಯುಕ್ತ, ನೀರು ಬಸಿದು ಹೋಗುವ ಮಣ್ಣು ಅತ್ಯಂತ ಸೂಕ್ತವಾದದ್ದು. ವೀಳ್ಯದೆಲೆಯು ಮಾನವ ದೇಹಕ್ಕೆ ಸುಣ್ಣದ ಅಂಶ ಮತ್ತು ಕ್ಯಾರೋಟಿನ್ ಅಂಶವನ್ನು ಒದಗಿಸುತ್ತದೆ. ಇಂತಹ ಎಲೆಯನ್ನು ಉಪಯೋಗಿಸುತ್ತಿದ್ದ

| ಕ್ರಮಸಂಖ್ಯೆ | ಉದ್ದೇಶ | ನಿಗದಿತ ವೆಚ್ಚ | ಇಂದಿನ ಅಳತೆಗಳು |
|---|---|---|---|
| ೧. | ಅಕ್ಕಿ | → ೨ ಆಢಕ (೧ ಆಢಕ = ೧೯೨ ತೊಲ) | ೫೭೬ ತೊಲ |
| ೨. | ಹೆಸರುಬೇಳೆ | → ೧ ಪ್ರಸ್ಥ (೧೯೨ ತೊಲ) | ೧೯೨ |
| ೩. | ಪಾಯಸಕ್ಕೆ ಉಪಯೋಗಿಸುವ ಹಸಿ ಗೋಧಿ ಹಿಟ್ಟು | → ೩ (....) | |
| ೪. | ಹಣ್ಣು ತರಕಾರಿ | → ೪ (....) | |
| ೫. | ದೊಡ್ಡದೀಪದ ಎಣ್ಣೆ | → ೧/೪ ಪ್ರಸ್ಥ | ೪೮ ತೊಲ |
| ೬. | ಮೆಣಸಿನಕಾಯಿ ೧೬ ಅಡಕೆ, ೨೦ ಎಲೆ ಅಕಸ್ಮಾತ್ ಹೆಚ್ಚಾದ ದಿನಗಳಲ್ಲಿ ೨೦ ತೂಕ ಹೀಗೆ ಪ್ರತಿ ದಿನ ಒಂದು ವರ್ಷಕ್ಕೆ ಆಗುವ ಖರ್ಚು | → ೪ನಾಣ್ಯದ ನಿಷ್ಕ (೧ ನಿಷ್ಕ = ಒಂದು ಚಿನ್ನದ ತೂಕ ಸು. ೧೪೬ ಗ್ರೇನ್) | ೫೮೪ ಗ್ರೇನ್ (ಗುಲಗಂಜಿ ತೂಕ) |
| ೭. | ಶ್ರೀಖಂಡ (ವಿಶೇಷ ಭಕ್ಷ್ಯ) | → ೧ ನಿಷ್ಕ | ೧೪೬ ಗ್ರೇನ್ |
| ೮. | ಕುಂಕುಮ, ಕೇಸರಿ, ಪಚ್ಚ ಕರ್ಪೂರಕ್ಕೆ | → ೫ ನಿಷ್ಕ | ೭೩೦ ಗ್ರೇನ್ |
| ೯. | ಚೈತ್ರಮಾಸದ ವಿಶೇಷ ಪೂಜೆಗೆ | → ೧ ನಿಷ್ಕ | ೧೪೬ ಗ್ರೇನ್ |
| ೧೦. | ಪವಿತ್ರ ಹಬ್ಬಕ್ಕೆ | → ೧ ನಿಷ್ಕ | ೧೪೬ ಗ್ರೇನ್ |
| ೧೧. | ಹೀಗೆ ದೇವರ ಅಂಗಭೋಗಕ್ಕೆ | → ೫೨ ನಿಷ್ಕ | ೭,೫೯೨ ಗ್ರೇನ್ |
| ೧೨. | ಋಗ್ವೇದ ಪಂಡಿತರಿಗೆ | → ೬ ನಿಷ್ಕ | ೮೭೬ ಗ್ರೇನ್ |
| ೧೩. | ಯಜುರ್ವೇದದವರಿಗೆ | → ೬ ನಿಷ್ಕ | ೮೭೬ ಗ್ರೇನ್ |
| ೧೪. | ಅಕ್ಷರದ ಶಿಕ್ಷಕರಿಗೆ ಭತ್ಯ ರೂಪದಲ್ಲಿ (ಇವರು ಪಂಡಿತರಾಗಿದ್ದು ಪ್ರಾರಂಭಿಕ ಶಿಕ್ಷಣವನ್ನೂ ಬೋಧಿಸುತ್ತಿದ್ದು ದರಿಂದ ಅವರಿಗೆ ವಿಶೇಷ ಹಣ) | → ೪ ನಿಷ್ಕ | ೫೮೪ ಗ್ರೇನ್ |
| ೧೫. | ಮೂರು ಜನ ಪರಿಚಾರಕರಿಗೆ | → ೯ ನಿಷ್ಕ | ೧೩೧೪ ಗ್ರೇನ್ |
| ೧೬. | ಅಡಿಗೆಯವರಿಗೆ | → ೨ ನಿಷ್ಕ | ೨೯೨ ಗ್ರೇನ್ |
| ೧೭. | ಅಭ್ಯಂಗ ತೈಲಕ್ಕೆ | → ೨ ನಿಷ್ಕ | ೨೯೨ ಗ್ರೇನ್ |
| ೧೮. | ಪ್ರತಿಹಬ್ಬದ ಪಕ್ವಾನ್ನಕ್ಕೆ | → ೯ ನಿಷ್ಕ | ೧೩೧೪ ಗ್ರೇನ್ |
| ೧೯. | ವ್ಯಾಕರಣ ಅಭ್ಯಾಸಕ್ಕೆ | → ೬ ನಿಷ್ಕ | ೮೭೬ ಗ್ರೇನ್ |

ನ್ಯಾಮತಿಯ ಸಂಗೀತತಜ್ಞ, ಮೈಸೂರಿನ ಆಸ್ಥಾನ ವಿದ್ವಾನ್ ಶ್ರೀ ಬಿ. ದೇವೇಂದ್ರಪ್ಪನವರು ಕರ್ನಾಟಕ ಸಂಗೀತದಲ್ಲಿ ಬಸವಣ್ಣನವರ ವಚನಗಳನ್ನು ಅಳವಡಿಸಿ ದವರಲ್ಲಿ ಮೊದಲಿಗರಾಗಿದ್ದರಷ್ಟೇ ಅಲ್ಲ ೬೦ರ ದಶಕದಲ್ಲಿ ಜಪಾನಿನವರಿಗೂ ಕರ್ನಾಟಕ ಸಂಗೀತದ ವಿಶೇಷತೆಯನ್ನು ಉಣಬಡಿಸುತ್ತಿದ್ದರು!

ಶಾಸನ ಸಂಖ್ಯೆ ದಾ. ೩೯ರಲ್ಲಿ (ಕ್ರಿ.ಶ. ೧೧೬೮) ಹರಿಹರದೇವರ ತ್ರಿಕಾಲ ನೈವೇದ್ಯಕ್ಕೆಂದು ಇತ್ತ ದಾನದ ವಿವರಗಳಲ್ಲಿ ನಿರ್ದಿಷ್ಟ ಕಾರ್ಯಕ್ಕೆಂದೇ ಗುತ್ತಿಗೆ ಸ್ವರೂಪದ ಆ ಕಾಲದ ಹಣವನ್ನು ಹೇಗೆ ಬಳಸುತ್ತಿದ್ದರು ಎನ್ನುವ ದಾಖಲೆಯು ಶಿಕ್ಷಣ, ಅದರಲ್ಲಿಯೂ 'ಅಕ್ಷರ ಜ್ಞಾನ'ದಿಂದ ಪ್ರಾರಂಭವಾಗಿ ವ್ಯಾಕರಣ, ವೇದಗಳವರೆಗೆ ಶಿಸ್ತಿನಿಂದ ಅಚ್ಚುಕಟ್ಟಾಗಿ ನಿರ್ವಹಿಸುತ್ತಿದ್ದರೆನ್ನುವುದನ್ನು ನೋಡೋಣ. ಅಲ್ಲದೇ ದೈನಂದಿನ ಪರಿಚಾರಕರಿಗೆ ಅಭ್ಯಂಜನ ತೈಲಕ್ಕೆ (ಬಿಸಿ ನೀರಿನಿಂದ ಸ್ನಾನ ಮಾಡುವಾಗ ಬಳಸಬೇಕಾದ ಎಣ್ಣೆ) ಅಕ್ಕಿ. ತುಪ್ಪ, ಸಿಹಿತಿಂಡಿಯಾದ ಶ್ರೀಖಂಡ, ಪಾಯಸಕ್ಕಾಗಿ ಉಪ ಯೋಗಿಸುತ್ತಿದ್ದ ಕಣಕ (ಹಸಿ ಗೋಧಿ ಹಿಟ್ಟು), ದೀಪದ ಎಣ್ಣೆ ಇತ್ಯಾದಿಗಳಿಗಾಗಿ ಖರ್ಚು ಮಾಡುತ್ತಿದ್ದ ಹಣವನ್ನೂ ತಿಳಿಸುತ್ತವೆ.

**ಸುಂಕ** : ದೋಣಿಯಲ್ಲಿ ಸರಕು, ಮನುಷ್ಯರು, ಪ್ರಾಣಿಗಳು, ನದಿಯನ್ನು ದಾಟುವಾಗ ಕೊಡಬೇಕಾದ ಹಣವನ್ನು ದಾ. (೬೧)ನೆ ಶಾಸನ ಹೇಳುತ್ತದೆ. ಇದೇ ಶಾಸನದಲ್ಲಿ ಹೂಮಾಲೆ ಕಟ್ಟುವವರಿಗೆ ಮನೆಯಿಲ್ಲದ್ದರಿಂದ ಯೋಗೇಶ್ವರ ದೇವಸ್ಥಾನದ ಭೂಮಿಕೆಯನ್ನು ಮಾರಾಟ ಮಾಡಿ ಹಣ ಕೂಡಿಸಿದ್ದನ್ನು ದಾಖಲಿಸಿದೆ.

**ನೀರಿಗೆ ಸಂಬಂಧಿಸಿದ ವಿಷಯಗಳು** : ಎರೆಗುಂಟೆ (ಎರೆ + ಕುಂಟೆ), ಅರಕಟ್ಟೆ, ಕಂಚಿಗೆಱು, ಕೊಡಲೂರು, ಗರಿಗ ನರಸಿ, ನಿತ್ತಕೊಳ, ಪಂಪಾತಟ, ನೇರಲ್ಗೆರೆ, ಮಿಟ್ಟಿಗನಕಟ್ಟೆ, ಹಳ್ಳವೂರು, ಹಿರಿಯಕೆರೆ, ತುಂಗಭದ್ರೆ), ಹರಿದ್ರೆ, ಕರಲಕಟ್ಟೆ, ಕೇಕರಕೊಳ ಇತ್ಯಾದಿ ಶಬ್ದಗಳು ನೀರ್ದಾಣಗಳ ಹೆಸರುಗಳು: ನೀರಿನ ಸಂಗ್ರಹ ಪ್ರಮಾಣವನ್ನೂ, ಎರೆಹೊಲದ ಬದಿಯ ಕುಂಟೆಯಿಂದ ಪ್ರಾರಂಭ ವಾಗಿ ಸಮುದ್ರದವರೆಗೂ ಎಂದರೆ ಅತಿ ಚಿಕ್ಕದರಿಂದ ಅತಿ ದೊಡ್ಡದಾದ ನೀರನ್ನು ಸಂಗ್ರಹಿಸುವ ಬಳಸುವ ಮೂಲಗಳನ್ನು ದಾಖಲಿಸಿವೆ. ಕರಲಕೆಱು ಸುಣ್ಣ ಮತ್ತು ಚಾಳಿನ ಅಂಶಗಳು ಆ ನೆಲದಲ್ಲಿ ಇರುವುದನ್ನು ಗುರ್ತಿಸಲು ಸಹಾಯಕವಾಗುತ್ತವೆ.

ಹರಿದ್ರಾ ನದಿಗೆ ಕಟ್ಟೆಯನ್ನು ಕಟ್ಟಿ ಪ್ರವಾಹವನ್ನು ತಡೆಯಲು ಕಾಲುವೆ ಕಟ್ಟಿಸಿದ್ದು ಅದು ಒಡೆದು ಹೋದಾಗ ಮತ್ತೆ ಜೀರ್ಣೋದ್ಧಾರ ಮಾಡಿದ ಸಂಗತಿಯನ್ನೂ, ತಂತ್ರಜ್ಞರ ಹೆಸರು ಮತ್ತು ಕಾಲವನ್ನು ನಿಶ್ಚಿತವಾಗಿ ಯಾವ ಸಂಶಯಕ್ಕೂ ಎಡೆ ಗೊಡದಂತೆ ದಾ. ೨೩ (ಕ್ರಿ.ಶ. ೧೪೧೦), ಮತ್ತು ದಾ. ೨೯ (ಕ್ರಿ.ಶ. ೧೪೨೫) ದಾಖಲಿಸಿವೆ. (ಚಿತ್ರ ನೋಡಿ ವಿವರಗಳನ್ನು ಗ್ರಹಿಸಬಹುದಾಗಿದೆ.) ಕೇಂದ್ರೀಯ ಜಲ ಆಯೋಗದವರು ನೀರಿನ ಹರಿವನ್ನು ಮತ್ತು ಗುಣಲಕ್ಷಣಗಳನ್ನು ತಿಳಿಯಲು ೧೯೮೬ರ ನಂತರವಷ್ಟೇ ಹರಿದ್ರೆಗೆ ಬ್ಯಾಲದಹಳ್ಳಿ ಎನ್ನುವಲ್ಲಿ ಗೇಜಿಂಗ್ ಸ್ಟೇಷನ್ ಒಂದನ್ನು ಪ್ರಾರಂಭಿಸಿದ್ದಾರೆ. ಡಾ॥ ಜಿ.ಎಸ್. ದೀಕ್ಷಿತರು ನನಗೆ ತಿಳಿಸಿದ ಪ್ರಕಾರ ಅವರು ಚಿಕ್ಕವರಾಗಿದ್ದಾಗ ಹರಿದ್ರೆಯ ನೀರು ಹೆಚ್ಚು ಉಪ್ಪಾಗಿದ್ದು ತುಂಗಭದ್ರೆಯನ್ನು ಕೂಡುವ ಜಾಗ (ಇದು ಶಾಸನೋಕ್ತವಾಗಿ ಕೂಡಲೂರು)ದಲ್ಲಿ ತುಂಗಭದ್ರೆಯ ನೀರು ಹೆಚ್ಚು ಸಿಹಿಯಾಗಿದ್ದಿತು ಎನ್ನುತ್ತಾರೆ.

ಹೆಚ್.ಎಂ. ಶಂಕರನಾರಾಯಣರಾಯರು 'ಶ್ರೀ ಹರಿಹರ ದೇವಾಲಯ' ಪುಸ್ತಕದಲ್ಲಿ (ಪು ೨೯೩) 'ಬಾನವಳ್ಳಿ'ಗೆ ಲಕ್ಷ್ಮೀ ನಾರಾಯಣಪುರವೆಂಬ ಹೆಸರಿದ್ದು, ಈಗ ಆ ಹೆಸರು ಕಳಚಿಹೋಗಿ ಬಾವ(ನು)ವಳ್ಳಿ ಎಂಬ ಹೆಸರೇ ಉಳಿದಿದೆ ಎನ್ನುತ್ತಾರೆ. ಒಂದು ಜನಪದೀಯ ಹೆಸರು ಎಷ್ಟೇ 'ಸಂಸ್ಕೃತಾನುಕರಣ'ಗೊಂಡಿದ್ದರೂ ಜನರ ಬಾಯಿಯಲ್ಲಿ ಉಳಿಯುವುದು ಸುಲಭ ಬಳಕೆಯ ಹೆಸರೇ ಹೊರತು ಉಚ್ಚಾರಕ್ಕೆ ಹೆಚ್ಚು ಕಷ್ಟವೆನಿಸುವ ಉದ್ದನೆಯ ಹೆಸರಲ್ಲ. ಅಲ್ಲದೇ ಮೂಲ ಹೆಸರು ಬರಲು ಅನೇಕ ನೈಸರ್ಗಿಕ ಕಾರಣಗಳೂ ಇರುತ್ತವಲ್ಲವೆ? ಆದ್ದರಿಂದ ಇದು ಬಾನವಳ್ಳಿ (ಆಕಾಶಸೂಚಿ); ಇದಕ್ಕೆ ಪೂರಕವಾಗಿ 'ಬಿಸಿಲಹಳ್ಳಿ' ಎನ್ನುವ ಹೆಸರೂ ಶಾಸನೋಕ್ತ ವಾಗಿದೆ (ಶಾ.ಸಂ. ೬೭). ಎರಡೂ 'ಜಲಚಕ್ರ'ಕ್ಕೆ ಸಂಬಂಧಿಸಿದ ಹೆಸರುಗಳು. ಇನ್ನೊಂದು ಉದಾಹರಣೆ ಕೊಡುವುದಾದರೆ ದಾವಣಗೆರೆ ಜಿಲ್ಲೆಗೇ ಸೇರಿದ ಹರಪನಹಳ್ಳಿ ತಾಲ್ಲೂಕಿನಲ್ಲಿ ಹರಿಹರದೇವರ ನೈವೇದ್ಯಕ್ಕೆಂದೇ ಇದ್ದ ಊರು "ನೈವೇದ್ಯಪುರಿ." ಅದೇ ಈಗ ಯಡಿಹಳ್ಳಿ ಎಂದಾಗಿದೆ.

ಹೀಗೆ ಹರಿಹರೇಶ್ವರ ದೇಗುಲದ ಪರಿಸರದಲ್ಲಿರುವ ಶಿಲಾಶಾಸನಗಳು ಗಿಡ, ಮರ, ಭೂಮಿ, ನೀರು, ಸುಂಕ ಇತ್ಯಾದಿ ಗಳ ಬಗ್ಗೆ ನಿರ್ದಿಷ್ಟವಾದ ವೈಜ್ಞಾನಿಕ ಮಾಹಿತಿಯನ್ನು ಒಂದು ಸಾವಿರದ ಮುನ್ನೂರ ಹತ್ತು ವರ್ಷಗಳಷ್ಟು ಹಿಂದಿನಿಂದಲೂ ಸಾರಿ ಹೇಳುತ್ತಿವೆ. ಇಂದಿನ ವಿದ್ವಾಂಸರು ಕರ್ನಾಟಕ ಶಾಸನ ಸಂಪತ್ತನ್ನು ಆಳವಾಗಿ ಪರಿಶೀಲಿಸಿ ವಿಶ್ಲೇಷಿಸುವುದರಿಂದ ಅಂತರ್ ಶಿಸ್ತೀಯ ಅಧ್ಯಯನಕ್ಕೆ ಹೆಚ್ಚು ಮಹತ್ವ ಬರುವುದಲ್ಲದೇ ನಮ್ಮ ಪರಂಪರೆ ಉಳಿದು, ಅಭಿಮಾನವು ಹೆಚ್ಚಿ, ನಕಾರಾತ್ಮಕ ಹೇಳಿಕೆ ಗಳನ್ನು ತಕ್ಕಮಟ್ಟಿಗಾದರೂ ತಡೆಯುವುದು, ದಾಖಲಿಸುವುದೂ ಕಡಿಮೆಯಾಗುತ್ತೆನ್ನಬಹುದು.



---

ಹೆಚ್ಚಿನ ವಿವರಗಳಿಗೆ ಇದೇ ಲೇಖಕರ ಶಿವತತ್ವಾರತ್ನಾಕರದಲ್ಲಿ ಜಲವಿಜ್ಞಾನ ಮಾಹಿತಿ, ಇತಿಹಾಸದರ್ಶನ, ಸಂ. ೧೮/೨೦೦೩ರನ್ನು ನೋಡಬೇಕಾಗಿ ವಿನಂತಿ.

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಶಾ.ಸಂ. ೬೧ ಕ್ರಿ.ಶ. ೧೧೪೩; ೧೧೭೨, ೨. ಶಾ.ಸಂ. ೨೭, ೩. ಶಾ.ಸಂ. ೬೭, ೪. ಶಾ.ಸಂ. ೬೧, ೫. ಶಾ.ಸಂ. ೩೧.

* ಹೆಚ್ಚಿನ ವಿವರಗಳಿಗೆ ಹತ್ತಿರದ ತೋಟಗಾರಿಕೆ ಇಲಾಖೆಯನ್ನು ಸಂಪರ್ಕಿಸಬಹುದು.

**ಕೃತಜ್ಞತೆಗಳು**

೧. **ಎಪಿಗ್ರಾಫಿಯಾ ಕರ್ನಾಟಕಾ** ಸಂ. XI
೨. **ಶ್ರೀ ಹರಿಹರ ದೇವಾಲಯ** - ಎಚ್.ಎಂ. ಶಂಕರನಾರಾಯಣರಾವ್.
೩. ತೋಟಗಾರಿಕೆ ಬೆಳೆಗಳ ಸುಧಾರಿತ ಬೇಸಾಯ ಕ್ರಮಗಳು, ಕೃಷಿ ವಿಶ್ವವಿದ್ಯಾನಿಲಯ, ಧಾರವಾಡ.
೪. ಡಾ॥ ಜಿ.ಎಸ್. ದೀಕ್ಷಿತ್.
೫. ಶ್ರೀ ಕೆ. ಶೇಷಾದ್ರಿ, ಎಕ್ಸಿಕ್ಯುಟಿವ್ ಇಂಜಿನೀಯರ್, ಬೆಂಗಳೂರು.
೬. ಕೇಂದ್ರೀಯ ಜಲ ಆಯೋಗದ ಶ್ರೀ ಟಿ.ಎಸ್. ರಂಗನಾಥ್, ಬೆಂಗಳೂರು.



ಆರ್. ವೆಂಕಟೇಶ್ ಮೂರ್ತಿ*

# ಶಾಸನಗಳ ಹಿನ್ನೆಲೆಯಲ್ಲಿ ಮುಗಿಲಕುಲದ ಗರುಡರು

ಮುಗಿಲ ಕುಲದ ಗರುಡರು ಹೊಯ್ಸಳರ ಕಾಲದಲ್ಲಿ ನಿಷ್ಠೆಯ ಭಾಷೆಯನ್ನು ಹೊತ್ತು, ನಾಡನ್ನು ಆಳಿದವರು, ಅರಸನ ಜೊತೆ ಪ್ರಾಣಕೊಟ್ಟವರು. ಶಾಸನಗಳು ಇವರಲ್ಲಿ ವ್ಯಾಪಾರ ವೃತ್ತಿಯವರೂ ಇದ್ದ ಬಗ್ಗೆ ಹೇಳುತ್ತ ವಂಶ ಪಾರಂಪರ್ಯ ಮಹಾಪ್ರಭು-ನಾಳ್ಪ್ರಭು ಮನೆತನಗಳೂ ಇದ್ದ ಬಗ್ಗೆ ತಿಳಿಸಿವೆ. ಇವರು ಶೈವ ಧರ್ಮೀಯರೆಂದಿರುವಲ್ಲಿ ಶಿವನ 'ಈಶಾನಮುಖ'ವು ಮುಗಿಲಮುಖವಾದ ಕಾರಣ ಮುಗಿಲಕುಲ ಎಂಬ ಕನ್ನಡ ರೂಪ ಹೊತ್ತ ಕನ್ನಡತನ ಇವರದು. ಈ ಮುಗಿಲಕುಲದವರು ಮಹಾಪ್ರಭು, ಮಹಾಸಾಮಂತ, ಸಾಮಂತ ಪದವಿಗಳಲ್ಲಿದ್ದು ವಂಶ ಪಾರಂಪರ್ಯವಾಗಿ ಗರುಡ ವೃತ್ತಿಯನ್ನು ಅನುಸರಿಸಿ ಹೊಯ್ಸಳ ರಾಜರಿಗೆ ಗರುಡರಾಗಿ ನಿಷ್ಠೆ ತೋರಿದ ವೀರರೂ ಆಗಿದ್ದಾರೆ.

ಕೃಷ್ಣರಾಜಪೇಟೆ ತಾಲ್ಲೂಕು ಅಗ್ರಹಾರ ಬಾಚಹಳ್ಳಿಯ ಹುಣಸೇಶ್ವರ ದೇವಾಲಯದ ಆವರಣದಲ್ಲಿ ಹನ್ನೆರಡು ವೀರಗಲ್ಲುಗಳು ಮತ್ತು ಮೂರು ಗರುಡಸ್ತಂಭಗಳು ಇವೆ. ಇವುಗಳಲ್ಲಿ ಐದು ವೀರಗಲ್ಲು ಮತ್ತು ಮೂರು ಸ್ತಂಭಶಾಸನಗಳು ಮುಗಿಲ ಕುಲದ ಗರುಡರಿಗೆ ಸಂಬಂಧಿಸಿದುದಾಗಿವೆ. ಇವರು ಹೊಯ್ಸಳ ಎರೆಯಂಗನಿಂದ ಹಿಡಿದು ಮೂರನೆಯ ನಾರಸಿಂಹನವರೆಗೆ ಗರುಡರಾಗಿ ಆಯಾ ಅರಸರ ಜೊತೆಯಲ್ಲಿ ಪ್ರಾಣತ್ಯಾಗ ಮಾಡಿದ್ದಾರೆ. ಮೊದಲಿಗೆ ಶಾಸನಗಳಲ್ಲಿ ದಾಖಲಾಗಿರುವ ಈ ಕುಲದವರ ವಿವರಗಳತ್ತ ನೋಟವನ್ನು ಹರಿಸಬಹುದು.

ಕಬಾಹುನಾಡನ್ನು ಆಳುತ್ತಿದ್ದ ಬಾಚೆಯಹಳ್ಳಿಯ ಗಂಡ ನಾರಾಯಣ ಸೆಟ್ಟಿ ಮತ್ತು ಬೀಚವ್ವೆಗೆ ಜನಿಸಿ ಹೊಯ್ಸಳಸೆಟ್ಟಿ, ಬೋಕಣ ಮತ್ತು ಬಮ್ಮಚ ಎಂಬ ಮೂರು ಮಕ್ಕಳಲ್ಲಿ ಮೊದಲನೆಯವನಾದ ಹೊಯ್ಸಳಸೆಟ್ಟಿ ಮತ್ತು ಪತ್ನಿ ಮಾಚವ್ವೆಸೆಟ್ಟಿಯ ಮಗನಾದ "ಮಹಾಸಾಮಂತ ಬಬ್ಬೆಯನಾಯಕನನ್ನು ದೋರಸಮುದ್ರದ ಬೀಡಿನೊಳಿದ್ದು ಬಲಾಳುದೇವಂ ಕರದು ಸಂಕಮದೇವನ ಕಟಕದದ ಕಾದುವುದೆಂದು ಬೆಸಸಿ ವೀಳಯಮ ಕೊಟ್ಟು ಬೀಳ್ಕೊಟ್ಟಾಗ ಮಹಾಪ್ರಸಾದವೆಂದು" ಅರಸನ ಅಣತಿಯಂತೆ ಯುದ್ಧದಲ್ಲಿ ಹೋರಾಡಿ ವೀರಸ್ವರ್ಗವನ್ನು ಹೊಂದುತ್ತಾನೆ. (ಎ.ಕ.-೬ ಶಾಸಂ.೭೭, ಕ್ರಿ.ಶ. ೧೧೭೯) ಇಲ್ಲಿ ದಾಖಲಾಗಿರುವ ವಂಶಾವಳಿ ಕೆಳಕಂಡಂತಿದೆ.




ಹೊಯ್ಸಳನಾಯಕ ಎಂಬುವನು ಮಾಡಿದ ದಾಳಿಯ ಸಂದರ್ಭದಲ್ಲಿ ಕೊರೆಯನಾಯಕನ ಮಗನಾದ ಶ್ರೀಮನ್ಮಹಾಸಾಮನ್ತ ಬಲ್ಲೆಯನಾಯಕನ ಜೊತೆಗೂಡಿ ವೈರಿಯೊಡನೆ ಕಾದಾಡುತ್ತಿದ್ದ ಈತನ ಸೇವಕನಾದ ಬಲ್ಲಗೌಡನ ಮಗ ಕೇತನ ಎಂಬುವವನು ಗೋವುಗಳು, ಎಮ್ಮೆಗಳು ಮತ್ತು ಹೆಂಗಸರನ್ನು ಸುರಕ್ಷಿತವಾಗಿ ಮರಳುವಂತೆ ಮಾಡಿ ವೀರಸ್ವರ್ಗವನ್ನು ಪಡೆಯುತ್ತಾನೆ. ಈತನ ಮರಣಕ್ಕೆ ಪರೋಕ್ಷವಿನಯವಾಗಿ ವೀರನ ತಂದೆ ವೀರಗಲ್ಲನ್ನು ಮಾಡಿಸಿದಾಗ ಬಲ್ಲೋಜ ಮತ್ತು ಕೂತೋಜ ಎಂಬುವರು ನಿಲ್ಲಿಸುತ್ತಾರೆ. (ಎ.ಕ-೬, ಶಾ.ಸಂ.೭೮. ಕ್ರಿ.ಶ. ೧೨೨೪)

* ೨೭/೧, ನವಸುಮ, ೨೩ನೇ ಮುಖ್ಯರಸ್ತೆ, ಮುನೇಶ್ವರಬ್ಲಾಕ್, ಬೆಂಗಳೂರು - ೫೬೦ ೦೮೫



**ವೇಳೆವಾಳಿ-ಗರುಡರು, ಅಗ್ರಹಾರ ಬಾಚಹಳ್ಳಿ**
**ಕೃಪೆ : ಡಾ. ಎಂ. ಚಿದಾನಂದಮೂರ್ತಿ ಕ.ಶಾ.ಸಾ.ಅ. (ಪು. ೩೦೯)**

ಸಾಮಂತ ಕನ್ನೆಯನಾಯಕನು ತನ್ನ ಪತ್ನಿಯರಾದ ವುಮವ್ವೆ, ಜವನವ್ವೆ ಮತ್ತು ಕಲ್ಲವ್ವೆಯೂ ಸೇರಿದಂತೆ ೧೦ ಲೆಂಕಿತಿಯರು ಹಾಗೂ೨೧ ಲೆಂಕರನ್ನೊಳಗೊಂಡು ಗಜಮಸ್ತಕದಲ್ಲಿ ಆರುಬಾರಿ ಗರುಡನನಪ್ಪಿ ಹೊಯ್ಸಳ ರಾಜ ಸೋಮೇಶ್ವರನೊಡನೆ ಪ್ರಾಣತ್ಯಾಗ ಮಾಡುತ್ತಾನೆ. ಮುಗಿಲಕುಲಕ್ಕೆ ಸೇರಿದವನಾಗಿರುವ ಈತನ ಪೂರ್ವಜರೂ ಸಹ ಗರುಡರಾಗಿದ್ದು ಹೊಯ್ಸಳಸೆಟ್ಟಿ-ಮಾಚವ್ವೆನಾಯಕಿತಿಯ ಮಗನಾದ ಕೂರೆಯನಾಯಕ-ಮಾರವ್ವೆ ನಾಯಕಿತಿಯ ಇಬ್ಬರೂ ಪುತ್ರರಲ್ಲಿ ಸಿವನೆಯನಾಯಕನು ತನ್ನ ಐವರು ಲೆಂಕರೊಂದಿಗೆ ಬಲ್ಲಾಳದೇವನೊಡನೆ ಪ್ರಾಣತ್ಯಾಗ ಮಾಡಿದರೆ, ಲಖ್ಖೆಯನಾಯಕನು ತನ್ನ ಪತ್ನಿ ಗಂಗಾದೇವಿ ಮತ್ತು ಮೂವರು ಲೆಂಕರೊಡನೆ ನಾರಸಿಂಗನೊಂದಿಗೆ ಪ್ರಾಣತ್ಯಾಗ ಮಾಡುತ್ತಾನೆ. (ಎ.ಕ.೬, ಶಾಸಂ.೮೨, ಕ್ರಿ.ಶ. ೧೨೫೬).

ಗಂಡನಾರಾಯಣಸೆಟ್ಟಿಯು ತನ್ನ ಪತ್ನಿ ಮಾರವ್ವೆನಾಯಕಿತಿ ಯೊಂದಿಗೆ ಐದು ಜನ ಲೆಂಕರನ್ನು ಕೂಡಿಕೊಂಡು ಎರೆಯಂಗ ಅರಸನೊಂದಿಗೆ ಪ್ರಾಣತ್ಯಾಗ ಮಾಡಿದರೆ, ಹೊಯ್ಸಳಸೆಟ್ಟಿಯು ತನ್ನ ಪತ್ನಿ ಮಾಚವೆನಾಯಕಿತಿಯೊಂದಿಗೆ ಐದು ಜನ ಲೆಂಕರನ್ನು ಕೂಡಿ ಬಿಟ್ಟಿದೇವನೊಂದಿಗೆ ಪ್ರಾಣತ್ಯಾಗ ಮಾಡುತ್ತಾನೆ. ಹೊಯ್ಸಳ ಸೆಟ್ಟಿಯ ಪುತ್ರ ಕೂರೆಯನಾಯಕನು ತನ್ನ ಪತ್ನಿಯರಾದ ಮಾರವ್ವೆ ನಾಯಕಿತಿ, ಚಿಕ್ಕಮಾದವ್ವೆನಾಯಕಿತಿಯರೊಂದಿಗೆ ಏಳು ಪ್ರಜೆ ಲೆಂಕರನ್ನು ಕೂಡಿ ಒಂದನೇ ನಾರಸಿಂಹನೊಂದಿಗೆ ಮಡಿದರೆ, ಕನ್ನೆಯನಾಯಕನ ಮಗ ರಂಗೆಯನಾಯಕನು ತನ್ನ ಪತ್ನಿಯರಾದ ಕೇತವ್ವೆನಾಯಕಿತಿ, ಹೊನ್ನವ್ವೆನಾಯಕಿತಿ, ಮಂಚವ್ವೆನಾಯಕಿತಿಯ ರೊಂದಿಗೆ ಹತ್ತು ಮಾನಿಸ ಲೆಂಕಿತಿಯರು ಹಾಗೂ ಇಪ್ಪತ್ತು ಮಾನಿಸ ಲೆಂಕರನ್ನೊಳಗೊಂಡು ಮೂರನೇ ನಾರಸಿಂಹನೊಂದಿಗೆ ಪ್ರಾಣ ತ್ಯಾಗ ಮಾಡುತ್ತಾನೆ. (ಎ.ಕ-೬, ಶಾಸಂ. ೮೪, ಕ್ರಿ.ಶ.೧೨೯೧).

"...... ಸ್ತಗುಣಸಂಪನ್ನನಪ್ಪ ಬಬ್ಬಯನಾಯಕರ್ಗಂ ಸೌಜನಗುಣ...... ನಾರಿಗಂ ಪುಟ್ಟಿದ ಶ್ರೀ ಮನ್ಮಹಾಶಾಮನ್ತ... ರಿ.... ರಾಜಬ... ಮುರಾರಿ ಬಿರು.. ಗೋವ(ತ್ಂದೆ) ಯುಗನ್ದವಾರಣ ಮಹದೇವನಾಯಕ ಸುರಲೋಕಪ್ರಾಪ್ತನಾದಲ್ಲಿ ಆತನ ಸ್ತ್ರೀ.. .. .. .. ಬಿಬೆಯನಾಯಕ .. .. .. .. ಹಾಯ್ದು...." ಎಂಬ ದಾಖಲೆ ಇರುವಲ್ಲಿ ಬಬ್ಬೆಯನಾಯಕ ಮತ್ತು ಅವನ ಮಗನ ಪತ್ನಿಯರ ಹೆಸರುಗಳು ತ್ರುಟಿತವಾಗಿರುವುದು ದುರದೃಷ್ಟಕರ. (ಎ.ಕ-೬. ಶಾಸಂ. ೮೧, ಕ್ರಿ.ಶ. ೧೩ನೇ ಶತಮಾನ)

ಈ ವಿವರಗಳಂತೆ ಇವರು ವಂಶಾವಳಿಯನ್ನು
ಹೀಗೆ ಕಾಣಬಹುದು.




ಅಗ್ರಹಾರ ಬಾಚಹಳ್ಳಿ ಶಾಸನಗಳಂತೆ ರೂಪಿಸಲಾಗಿರುವ ಮುಗಿಲಕುಲದ ವಂಶಾವಳಿಯಲ್ಲಿ ಗಂಡ್ಡನಾರಾಯಣಸೆಟ್ಟಿಯು ಮೊದಲನೆಯ ವ್ಯಕ್ತಿಯಾಗಿರುತ್ತಾನೆ. ಆದರೆ ಇದೇ ತಾಲ್ಲೂಕಿನ ಹೊಸವೊಳಲು ಗ್ರಾಮದ ಶಾಸನವೊಂದು (ಎ.ಕ-೬, ಶಾ.ಸಂ.೩, ಕ್ರಿ.ಶ. ೧೧೧೮) ನೊಳಂಬಸೆಟ್ಟಿಯ ಪತ್ನಿ ದೇಮಿಕಬ್ಬೆಯು ತ್ರಿಕೂಟ ಜಿನಾಲಯವನ್ನು ನಿರ್ಮಿಸಿ ದಾನ ನೀಡಿದ ಸಂದರ್ಭದಲ್ಲಿ ".... ಬೆಟ್ಟನಾಯ್ಕನ ಮಗಂ ಗಣ್ಡನಾರಾಯಣಸೆಟ್ಟಿ ಕತ್ತರಿಘಟ್ಟ ಭೂಮಿಯೊಳಗೆ ಕೇಣಿಯ ಸಮೀಪದ ಕಡವದ ಕೊಳದ ಕೆರೆ ಎರಡುಮಂ ಕೆರೆಯ ಮೂಡಣ ಕೋದಿಯಿಂ ಪರಿದ ಪಳ್ಳದಿಂ ತೆಂಕಲುಂ ಪಡುವಲಾದ ಗರ್ದ್ದೆ ಬೆದ್ದಲೆಯುಮಂ ಬಿಟ್ಟನ್ನನಿಮಂ" ಎಂದು ತಿಳಿಸಿ ಬೆಟ್ಟನಾಯ್ಕನ ಮಗ ಗಣ್ಡನಾರಾಯಣಸೆಟ್ಟಿ ಎಂದು ದಾಖಲಿಸಿದೆ. ಈತನು ದಾನ ನೀಡಿದ ಭೂಮಿಯಿರುವ ಕತ್ತರಿಘಟ್ಟ ಗ್ರಾಮವು ಕಬಾಹುನಾಡಿಗೆ ಸೇರಿದುದಾಗಿರುತ್ತದೆ. ಆದ್ದರಿಂದ ಸ್ಥಳದ ಆಧಾರದಂತೆ ಇಲ್ಲಿ ದಾಖಲಾಗಿರುವ ಬೆಟ್ಟನಾಯ್ಕನನ್ನು ಈ

ಕುಲದ ಮೊದಲ ವ್ಯಕ್ತಿ ಎಂದು ಹೇಳಬಹುದಾದರೂ, ಗಂಡ್ಡ ನಾರಾಯಣ ಸೆಟ್ಟಿಯು ಕ್ರಿ.ಶ.೧೧೦೦ರಲ್ಲಿ ಎರೆಯಂಗನೊಡನೆ ಪ್ರಾಣತ್ಯಾಗ ಮಾಡಿರುವುದರಿಂದ ಕಾಲ ಆಧಾರದಂತೆ ಸಾಧ್ಯವಾಗುವುದಿಲ್ಲ.

ಮೇಲೆ ದಾಖಲಾಗಿರುವ ವಂಶಾವಳಿಯಲ್ಲಿ ಗಂಡ್ಡ ನಾರಾಯಣಸೆಟ್ಟಿಗೆ ಹೊಯ್ಸಳಸೆಟ್ಟಿ, ಬೋಕಣ ಮತ್ತು ಬಮ್ಮಚ ಎಂಬ ಮೂರು ಮಕ್ಕಳೆಂದು ದಾಖಲಾಗಿದೆ. ಆದರೆ ಕ್ರಿ.ಶ. ೧೧೯೪ರ ಅರಕಲಗೂಡು ಶಾಸನದಂತೆ ಅಹಿತ್ರ ರೇಚಿಸೆಟ್ಟಿ ಎಂಬುವನು ಪಲ್ಲಾದಿತ್ಯ ದೇವರ ದೇವಾಲಯವನ್ನು ನಿರ್ಮಿಸಿದಾಗ ಈತನ ಮೊಮ್ಮಗಳು ದೇವಾಲಯಕ್ಕೆ ನಂದಿ ಮಂಟಪ ಮತ್ತು ಭೈರವನ ಮೂರ್ತಿಯನ್ನು ನಿರ್ಮಿಸುತ್ತಾಳೆ. ಈ ಮುಖ್ಯ ದೇವಾಲಯವನ್ನು ಶಿಲ್ಪಿ ಗಣ್ಡನಾರಾಯಣಸೆಟ್ಟಿಯ ಮಗ ಲಕನಾಚಾರಿ ಎಂಬುವವನು ಕಟ್ಟಿರುತ್ತಾನೆ. (ಎಕ.೮, ಶಾ.ಸಂ. ೧೪೬) ಇದರಂತೆ ಗಂಡ್ಡನಾರಾಯಣಸೆಟ್ಟಿಗೆ ನಾಲ್ಕನೆಯ ಮಗನಾಗಿ ಈ ಲಕನಾಚಾರಿಯೂ ಸೇರ್ಪಡೆಯಾಗುತ್ತಾನೆ.

ಹಾಗೆಯೇ ಕನ್ನೆಯನಾಯಕನ ಮಗ ರಂಗೆಯನಾಯಕನು ವಂಶದ ಕೊನೆಯವನಾಗಿರುತ್ತಾನೆ. ಈತನ ಮೂರನೇ ನಾರಸಿಂಹನೊಂದಿಗೆ ಗರುಡನಾಗಿ ಪ್ರಾಣತ್ಯಾಗ ಮಾಡುತ್ತಾನೆ. ಆದರೆ ಬೇಲೂರಿನ ಶಾಸನವೊಂದು (ಎಕ.೯, ಶಾ.ಸಂ.೫೪೬) ವೀರನಾರಸಿಂಗದೇವನ ರಾಜ್ಯಭಾರದ ಕಾಲದಲ್ಲಿ, "ಕನ್ನೆಯನಾಯನಕನರಸನ.... ಹುರದ..... ಘಟ್ಟದೊಳಗೆ ಪಲಂಬ(ಂಬ)ರು ಕಳ್ಳರುತಾಗಿದಡೆ.... ಕೊನ್ದು ತಾನುಂ ಸುರಲೋಕ ಪ್ರಾಪ್ತನಾದ ಕನ್ನೆಯನಾಯಕನ ಮಗ.... ಬಿಳ್ದನಾತನ ತಂಮ ದೇಕಣಂ ಪರೋಕ್ಷವಿನೆಯಂ ಮಾಡಿ ವೀರಗಲ್ಲ ನಿಲ್ಲಿಸಿದ" ಎಂದು ದಾಖಲಿಸಿದೆ. ಇದರಂತೆ ಕನ್ನೆಯನಾಯಕನಿಗೆ ಒಟ್ಟು ಮೂರು ಜನ ಮಕ್ಕಳಾಗುತ್ತಾರೆ. ಇಲ್ಲಿ ಮರಣ ಹೊಂದಿದವನ ಹೆಸರು ದಾಖಲಾಗಿಲ್ಲದೆ ಇರುವುದರಿಂದ ಅವನ ತಮ್ಮನಾದ ದೇಕಣನೊಬ್ಬನು ಈ ವಂಶಕ್ಕೆ ಸೇರ್ಪಡೆಯಾಗುತ್ತಾನೆ.

ಸೋಮೇಶ್ವರನು ರಾಜ್ಯವಾಳುತ್ತಿದ್ದ ಸಮಯದಲ್ಲಿ ಕಬ್ಬಾಹುನಾಡನ್ನಾಳುತ್ತಿದ್ದ ಕೂರೆಯನಾಯಕನ ಬಾಚಿಯಹಳ್ಳಿಯ ಕಣ್ಣನಯಕ ಎಂಬುವನು ದಾಳಿ ಮಾಡಿದಾಗ ಪಟ್ಟಣಸ್ವಾಮಿ ಮಲೆಯ ಎಂಬುವನು ಅವರೊಡನೆ ಹೋರಾಡಿ ಮಡಿಯುತ್ತಾನೆ. ಪರೋಕ್ಷ ವಿನಯವಾಗಿ ಈತನ ಅಕ್ಕ ಮಾಳವೆಯು ವೀರಗಲ್ಲನ್ನು ನಿಲ್ಲಿಸುತ್ತಾಳೆ. (ಎ.ಕ-೬, ಶಾಸಂ.೭೯, ಕ್ರಿ.ಶ.೧೨೪೨)

ವಿಜಯಾದಿತ್ಯ ಹೊಯ್ಸಳ (ವಿಷ್ಣುವರ್ಧನ) ಆಡಳಿತ ಕಾಲದಲ್ಲಿ ನಡೆದ ಹಾದಿಕಾಳಗದಲ್ಲಿ ತರಣಿಯ ಮೈದವೆಗ್ಗಡೆ ಎಂಬುವನು ಮರಣ ಹೊಂದಿದಾಗ ರಾಯನ ಮಗ ಬಬ್ಬೆಯ ನಾಯಕನು ಈತನ ನೆನಪಿಗಾಗಿ ದೇವಾಲಯವನ್ನು ಕಟ್ಟಿಸಿ ೨ ಸಲಗೆ ಗದ್ದೆ, ಬೆಳ್ದಿಲೆ ಕೊಳಗ ೧೦ನ್ನು ದೇವದಾನವಾಗಿ ನೀಡುತ್ತಾನೆ. (ಎಕ.೮, ಶಾ.ಸಂ.೭೮, ಹೊ.ನ.)

ಈ ಮುಗಿಲಕುಲದವರು ಆಳುತ್ತಿದ್ದ ಕಬಾಹುನಾಡನ್ನು ಶಾಸನಗಳು ಕಬ್ಬಹುಸಾಸಿರ, ಕಭ್ಭೂನಾಡು, ಕಭಹುನಾಡು, ಕಬ್ಬಹುನಾಡು, ಕಬ್ಬುಹುನಾಡು ಮತ್ತು ಕಬ್ಬಾಹುನಾಡು ಎಂದು ಕರೆದಿವೆ. ಈ ನಾಡು ಈಗಿನ ಕೃಷ್ಣರಾಜಪೇಟೆ ಮತ್ತು ಸುತ್ತ ಮುತ್ತಲಿನ ಭಾಗವನ್ನು ಒಳಗೊಂಡಿದ್ದಂತೆ ಕಂಡುಬರುತ್ತದೆ.

ಹುಣಸೇಶ್ವರ ದೇವಾಲಯದ ಆವರಣದಲ್ಲಿರುವ ವೀರಗಲ್ಲುಗಳಲ್ಲಿ ಮೂರು ಗರುಡ ಸ್ತಂಭಗಳು ವಿಶೇಷವಾಗಿ ಗಮನ ಸೆಳೆಯುತ್ತವೆ. ಸುಮಾರು ೧೨ ಅಡಿ ಎತ್ತರವಿರುವ ಈ ಕಂಬಗಳ ಮೇಲೆ ಸುಮಾರು ಒಂದೂವರೆ ಅಡಿ ಅಗಲ ಮತ್ತು ಎರಡೂವರೆ ಅಡಿಯಷ್ಟು ಮಟ್ಟಸವಾದ ಚಪ್ಪಡಿ ಕಲ್ಲಿನ ಮೇಲೆ ಸುಮಾರು ೨ ಅಡಿ ಎತ್ತರದ ಆನೆಯ ಶಿಲ್ಪಗಳಿವೆ. ಮಧ್ಯದ ಕಂಬದಲ್ಲಿ ಆನೆಯ ಮೇಲೆ ಒಬ್ಬ ಪುರುಷ ಮತ್ತು ಅವನ ಹಿಂದೆ ಒಬ್ಬಳು ಸ್ತ್ರೀ ಕುಳಿತಿರುವ ಶಿಲ್ಪಗಳಿವೆ. ಉಳಿದೆರಡು ಕಂಬಗಳಲ್ಲಿರುವ ಆನೆಯ ಮೇಲೆ ಉಜನ ಪುರುಷರ ಶಿಲ್ಪಗಳಿವೆ. ಮೂರರಲ್ಲಿಯೂ ಮುಂದೆ ಕುಳಿತಿರುವ ವ್ಯಕ್ತಿಯು ಆನೆಯ ಗಂಡಸ್ಥಳದ ಮೇಲಿರುವ ಸುಮಾರು ಅರ್ಧ ಅಡಿ ಎತ್ತರದ ಗರುಡ ಶಿಲ್ಪದೊಂದಿಗೆ ಹೋರಾಡುತ್ತಿರುವಂತೆ ಚಿತ್ರಿಸಲಾಗಿದೆ.

ಈ ಕಂಬಗಳ ಮೇಲಿರುವ ಶಾಸನಗಳಲ್ಲಿ ಬೇರೆ ಬೇರೆ ದೊರೆಗಳು ಮಡಿದಾಗ ಅವರ ಜೊತೆಯಲ್ಲಿ ಈ ಮುಗಿಲಕುಲದ ನಾಯಕರು ಹಾಗೂ ಅನೇಕ ಲೆಂಕ ಲೆಂಕತಿಯರು ಗಜಮಸ್ತಕದ ಮೇಲೆ ಆರುಬಾರಿ ಗರುಡನನಪ್ಪಿ ಬಾಸೆಯಂ ಪೂರೈಸಿದ ಎಂದೂ ಎಣಿಸಲ್ಕೇಳನೆ ಬಾರಿ ಅಪ್ಪಿದ ಲೆಂಕವಾಳಿಯಂ ಎಂದೂ, ಗರುಡನಿಗೆ ಹೆದರಿ ಫಣಿರಾಜನು ಪಾತಾಳವನ್ನು ಹೊಕ್ಕನು, ಆದರೆ ಈ ಲೆಂಕವಾಳಿಯರು ಭಯಂಕರನಾದ ಗರುಡನನ್ನು ಎದುರಿಸಿ ಅವನನ್ನು ಅಪ್ಪಿಕೊಂಡು ತಮ್ಮ ಲೆಂಕವಾಳಿತನವನ್ನು ತೋರಿದರು ಎಂದು ದಾಖಲಿಸಿವೆ. ಆರುಬಾರಿ, ಏಳನೇಬಾರಿ, ಎಂಬುದರ ಅರ್ಥವನ್ನು ಗ್ರಹಿಸುವುದು ಕಷ್ಟ. ಆದರೂ ಐದು ಮತ್ತು ಆರು ಯುದ್ಧಗಳಲ್ಲಿ ರಾಜನೊಂದಿಗೆ ಭಾಗವಹಿಸಿ ನಂತರದ ಯುದ್ಧದಲ್ಲಿ ಅವನೊಂದಿಗೆ ಪ್ರಾಣತ್ಯಾಗ ಮಾಡಿದರು ಎನ್ನಬಹುದೇ? ಭಯಂಕರನಾದ ಗರುಡನ್ನು ಎದುರಿಸಿ ಅವನನ್ನು ಅಪ್ಪಿಕೊಂಡು ತಮ್ಮ ಲೆಂಕವಾಳಿತನವನು ತೋರಿದರು ಎನ್ನುವುದು ಇವರ ಶೌರ್ಯದ ಸಂಕೇತವಿರಬಹುದೇ?

ಶಾಸನಗಳು ಇವರನ್ನು, ಶ್ರೀಮನ್ಮಹಾಪ್ರಭು ಶ್ರೀ ಮನ್ಮುಗಿಲ ಕುಲಕಮಳಮಾರ್ತ್ತಂಡರುಂ ಶ್ರೀಮನುಮಹಾ ಸಾಮಂತರುಂ ಸಮಯದ್ರೋಹನಂ ಮರ್ದ್ದಿಸಿ ನಾನಾದೇಸಿಯಿಂ ಸೆಟ್ಟಿವಟ್ಟವಂ ತಳೆದ ಗಂಡನಾರಾಯಣರುಂ ಕಂನಡಿಗಮೊನೆಯಾಳ್ತನಂಗೆಯ್ವ ನಾಯಕರ್ಗೆ ಸೇನಾನಾಯಕರುಂ ಬಿರುದರಗೋವರುಂ ಹೊಯ್ಸಳ

ಲೆಂಕನಿಸ್ಸಂಕರುಂ ಕಬ್ಬಾಹುನಾಡಾಳ್ವರುಂ ಹಟ್ಟಿಗಾಳಿಗಕ್ಕೆಮಲೆವ ನಾಯಕರಗಂಡರುಂ ಸೇಉಣಸೈನ್ಯವಿಭ್ಭಾಡನರುಂ ಅನಂತಬಣಂಜ ಧರ್ಮ್ಮಪ್ರತಿಪಾಳನುಂ ದೇಶಿಮುಖದೇಸಿಯಾಭರಣಯು ಭಯದೇಸಿಸಮುದ್ಧರಣರಪ್ಪ ಎಂದು ಹೊಗಳಿವೆ.

ಶಾಸನಗಳಲ್ಲಿ ನಾನಾದೇಸಿಯರು ವರ್ತಕರಲ್ಲಿನ ಒಂದು ವರ್ಗವೆಂದು ದಾಖಲಾಗಿರುವುದೂ, ಬಣಂಜುಗಳು ಎಂದರೆ ವ್ಯಾಪಾರಿಗಳು ಎಂದು ಕರೆದಿರುವುದೂ, ಅಂತೆಯೆ ಸೆಟ್ಟಿಯವರೂ ಕೂಡ ವರ್ತಕರಾಗಿದ್ದರು ಎಂಬುದೂ ತಿಳಿದಿರುವ ವಿಷಯವಾಗಿದೆ. ಈ ಮುಗಿಲಕುಲದವರನ್ನು ನಾನದೇಸಿಯಿಂ ಸೆಟ್ಟಿವಟ್ಟವಂ, ಅನಂತಬಣಂಜ ಧರ್ಮ್ಮಪ್ರತಿಪಾಳರುಂ ಎಂದು ಕರೆದಿರುವುದರಿಂದ ವ್ಯಾಪಾರವು ಇವರ ಮೂಲವೃತ್ತಿಯಾಗಿದ್ದಿರಬಹುದಾದರೂ, ಸೆಟ್ಟಿಯರಲ್ಲಿ ವಿವಿಧ ಧರ್ಮೀಯರಿದ್ದು, ಸೆಟ್ಟಿಯರಲ್ಲಿಯೇ ವಂಶಪಾರಂಪರ್ಯವಾಗಿ ನಡೆದುಬಂದ ಮಹಾಪ್ರಭು, ನಾಳ್ಪ್ರಭು ಮನೆತನಗಳಿದ್ದವು. ಇನ್ನೂ ಕೆಲವರು ಪಟ್ಟಣಸ್ವಾಮಿ, ದಂಡನಾಯಕ, ಮಹಾಸಾಮಂತರು, ಸಾಮಂತರುಗಳಾಗಿ ರಾಜ್ಯಭಾರ ನಿರ್ವಹಿಸಿರುತ್ತಾರೆ. ಅಂತೆಯೇ ಈ ಕುಲದವರೂ ಸಹ ಮಹಾಪ್ರಭು, ಮಹಾಸಾಮಂತ, ಸಾಮಂತರೆನಿಸಿಕೊಂಡಿದ್ದಾರೆ.

ಹುಣಸೇಶ್ವರ ದೇವಾಲಯದ ನೈರುತ್ಯ ಮಂಟಪದಲ್ಲಿರುವ ವೀರಗಲ್ಲು ಶಾಸನದ ಮೇಲಿನ ಹಂತದಲ್ಲಿ ಲಿಂಗ ಪೂಜೆಯನ್ನು ಮಾಡುತ್ತಿರುವ ಶಿಲ್ಪವಿರುವುದರಿಂದ ಇವರು ಶೈವ ಧರ್ಮೀಯರಾಗಿದ್ದರೆಂದು ಹೇಳಬಹುದಾಗಿದೆ.

ಇನ್ನು ಮುಗಿಲಕುಲ ಎನ್ನುವತ್ತ ಗಮನಹರಿಸಿದರೆ, ಶಿವಲಿಂಗದ ಪಂಚಮುಖ ಎನ್ನುವ ಸಂದರ್ಭದಲ್ಲಿ ಅಘೋರ, ತತ್ಪುರುಷ, ವಾಮದೇವ, ಸದ್ಯೋಜಾತ ಮತ್ತು ಈಶಾನ ಎನ್ನುವುದಿದೆ. ಶಿವನ ಮುಖಕ್ಕೆ ಈಶಾನ ಎಂದು ತಾತ್ವಿಕವಾಗಿ ಕರೆಯುವುದುಂಟು. ಇದನ್ನು ಮುಗಿಲಮುಖ ಎಂದೂ ಕರೆಯುತ್ತಾರೆಂದು ತಿಳಿದುಬರುತ್ತದೆ. ಈ ಮುಗಿಲಮುಖ ಎಂಬುದು ಶುದ್ಧ ಕನ್ನಡೀಕರಣವಾದ ಶಬ್ದವಾಗಿ ಕಾಣುತ್ತದೆ. ಈ ಮುಗಿಲ ಮುಖದ ಹಿನ್ನೆಲೆಯಲ್ಲಿ ಮುಗಿಲಕುಲ ಎಂದು ಬಂದಿರ ಬಹುದಾದ ಸಾಧ್ಯತೆಯಿದೆ.

ಸದ್ಯದ ದಾಖಲೆಯಂತೆ ಈ ಮುಗಿಲಕುಲದವರು ಶೈವ ಧರ್ಮೀಯರಾಗಿ ಮಹಾಪ್ರಭು, ಮಹಾಸಾಮಂತ, ಸಾಮಂತರು ಎನಿಸಿಕೊಂಡು ವಂಶಪಾರಂಪರ್ಯವಾಗಿ ಗರುಡ ವೃತ್ತಿಯನ್ನು ಅನುಸರಿಸಿ ಹೊಯ್ಸಳ ರಾಜರಿಗೆ ಗರುಡರಾಗಿ ತಮ್ಮ ನಿಷ್ಠೆಯನ್ನು ತೋರಿರುತ್ತಾರೆ ಎಂದು ಹೇಳಬಹುದಾಗಿದೆ.





**ನಿಷ್ಠೆಯ ಭಾಷೆಯಲಿ ಪ್ರಭುವಿನ ಸಮಯದವರು**
**ಪ್ರಾಣವನು ಪಾಲಿಸಿದ ಮುಗಿಲಕುಲದ ಗರುಡರು**
**ಶಿವಗೂ ನಿಷ್ಠೆ ತೋರಿ ಈಶಾನ ಮೊಗದ ಹೆಸರ**
**ಕನ್ನಡದಿ ಸೃಜಿಸಿದವರು ಮುಗಿಲಕುಲದ ಶರಭರು**



**ಕ. ಇತಿಹಾಸ ಅಕಾದೆಮಿಯ ೧೫ನೆಯ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೨೦೦೧)**

*ಇತಿಹಾಸದ ಪಳೆಯುಳಿಕೆಗಳು ನಮ್ಮ ಪ್ರಾಚೀನ ದೇಶದಲ್ಲಿ ಅಸಂಖ್ಯ ಪ್ರಮಾಣದಲ್ಲಿರುವುದು ಪ್ರಾಕ್ತನ ಶಾಸ್ತ್ರಜ್ಞರೆಲ್ಲ ಬಲ್ಲರು. ಅದರಂತೆ ರೂಢಿ ನಂಬಿಕೆಗಳು, ಪೂಜಾದಿ ವಿಧಾನಗಳು ಕುಟುಂಬ ಅಥವಾ ಜನಾಂಗಗಳಲ್ಲಿ ಉಳಿದುಬಂದ ಕಥಾನಕಗಳು ಜನಸಾಮಾನ್ಯರ ಇತಿಹಾಸದ ಪುನಾರಚನೆಗೆ ತುಂಬ ಸಹಾಯ ನೀಡುತ್ತವೆ. ಪ್ರಾಚೀನ ವಿಶ್ವಕೋಶದಂತಿರುವ ಕನ್ನಡ, ಸಂಸ್ಕೃತಿ ಶಾಸ್ತ್ರ ಗ್ರಂಥಗಳಲ್ಲೂ ಇವುಗಳ ಉಲ್ಲೇಖ ಬರುವುದುಂಟು. ೧೨ನೆಯ ಶತಮಾನದ ಚಾಲುಕ್ಯ ಸೋಮೇಶ್ವರ ಭೂಲೋಕಮಲ್ಲನ (ಕ್ರಿ.ಶ. ೧೧೨೬-೧೧೩೮) ಸಂಸ್ಕೃತ ಕೃತಿ 'ಮಾನಸೋಲ್ಲಾಸ' ಅಪೂರ್ವ ಆಕರಗ್ರಂಥ. ಚಾವುಂಡರಾಯನ 'ಲೋಕೋಪಕಾರಂ' ಕನ್ನಡದ ೧೧ನೆಯ ಶತಮಾನದ ಪುಟ್ಟ ವಿಶ್ವಕೋಶ ಸಮಾನ ಗ್ರಂಥ. ಇವುಗಳಲ್ಲಿನ ತೌಲನಿಕ ಮಾಹಿತಿಯಿಂದ ಕನ್ನಡ ಕಾವ್ಯಗಳಲ್ಲಿ ಅಲ್ಲಲ್ಲಿ ಅಡಕವಿರುವ ಅಂಶಗಳೊಡನೆ ಹೋಲಿಸಿದಾಗ ಕಣ್ಮರೆಯಾದ ಕಲಾ ಪ್ರಪಂಚದ ಇಣುಕುನೋಟಗಳು ಗೋಚರಿಸುತ್ತವೆ. ಕಾವ್ಯಾಭ್ಯಾಸಿಗಳಿಗೆ ಸಹಸಾ ಮಹತ್ವದ್ದೆನಿಸದ ಅಂಶಗಳು ಜನಜೀವನ ಸಂಶೋಧಕರಿಗೆ ಉಪಯುಕ್ತವೆನಿಸುತ್ತವೆ.*

**ಡಾ. ಜ್ಯೋತ್ಸ್ನಾ ಕಾಮತ್**
ಸಮ್ಮೇಳನಾಧ್ಯಕ್ಷರು

ಡಾ॥ ಎಸ್.ಎಂ. ನಾಗಭೂಷಣ*

# ಚಿಕ್ಕಮಗಳೂರು ಜಿಲ್ಲೆಯ ಶಾಸನ ಕವಿಗಳು, ಲಿಪಿಕಾರರು, ರೂವಾರಿಗಳು

*ಈ ಜಿಲ್ಲೆಯ ಕೆಲವೇ ಶಾಸನ ಕವಿಗಳನ್ನು ಕೆಲವು ಕೃತಿಗಳಲ್ಲಿ ಉಲ್ಲೇಖಿಸಿದ್ದರೂ, ಉಳಿದವರ ಹೆಸರುಗಳು ಪ್ರಸ್ತಾಪಿತವಾಗಿಲ್ಲ. ಆದರಲ್ಲಿಯೂ ರೂವಾರಿಗಳ ಕುರಿತು ಯಾವುದೇ ಉಲ್ಲೇಖಗಳಿಲ್ಲ. ಆ ಕುರಿತು ಸದ್ಯ ಈ ಪ್ರಬಂಧದಲ್ಲಿ ಗಮನಹರಿಸಲಾಗಿದೆ. ಇಲ್ಲಿನ ಶಾಸನಗಳಿಂದ ಕವಿಗಳು ಹಾಗು ಅವರಿಗಿದ್ದ ಬಿರುದುಗಳು ತಿಳಿಯುತ್ತವೆ. ವಿಶೇಷತಃ ೧೨-೧೫ನೇ ಶತಮಾನದ ನಡುವಿನ ಕಾಲ ಘಟ್ಟದ ಶಾಸನಗಳೇ ಹೆಚ್ಚಾಗಿದ್ದು, ಸೇನಬೋವರೇ ಅವನ್ನು ರಚಿಸಿ ಬರೆದುವಾಗಿವೆ. ಸಾಮಾನ್ಯವಾಗಿ ತಾಮ್ರಶಾಸನಗಳನ್ನು ಕೆತ್ತುವ ವಿಶ್ವಕರ್ಮ ಆಚಾರಿಗಳು, ಶಿಲಾಶಾಸನವನ್ನು ಕೆತ್ತಿದ ರೂವಾರಿಗಳಾಗಿರುವುದು ಗಮನಕ್ಕೆ ಬರುತ್ತದೆ.*

ಚಿಕ್ಕಮಗಳೂರು ಜಿಲ್ಲೆಯು ಶಾಸನ ಸಂಪತ್ತು ವಿಪುಲವಾದದ್ದು ಮತ್ತು ವೈವಿಧ್ಯಮಯವಾದುದು; ಇದುವರೆಗೆ ಇಲ್ಲಿ ಸುಮಾರು ಒಂದು ಸಾವಿರ ಶಾಸನಗಳು ಪ್ರಕಟವಾಗಿವೆ. ಇವುಗಳಲ್ಲಿ ಸುಮಾರು ನೂರು ಶಾಸನಗಳಲ್ಲಿ ಶಾಸನ ಕವಿ, ಲಿಪಿಕಾರರು ಹಾಗೂ ರೂವಾರಿಗಳನ್ನು ಶಾಸನಗಳಲ್ಲಿ ಉಲ್ಲೇಖವಾಗಿದೆ. ಶಾಸನಕವಿ, ಬರಹಗಾರ ಮತ್ತು ರೂವಾರಿಗಳು, ಶಿಲಾಲಿಪಿಗಳ ಕಾರ್ಯವೈಖರಿಯನ್ನು ಇತಿಹಾಸ ಸಂಪುಟ, ೧೭, ೧೮ರಲ್ಲಿ ವಿವರಿಸಲಾಗಿದೆ. ಕಾರಣ ಇಲ್ಲಿ ಕೇವಲ ಜಿಲ್ಲೆಯ ವಿಶೇಷಗಳೊಂದಿಗೆ ಶಾಸನ ಪಟ್ಟಿಯನ್ನು ಸಿದ್ಧಪಡಿಸಿದ್ದೇನೆ.

ಮೊದಲೇ ಹೇಳಿದ ಹಾಗೆ ಚಿಕ್ಕಮಗಳೂರು ಶಾಸನ ಸಂಪತ್ತು ವಿಪುಲವಾಗಿದೆ. ಜೊತೆಗೆ ಶಾಸನ ಕವಿಗಳ ಸಂಖ್ಯೆಯು ಹೆಚ್ಚಾಗಿ ಸಿಗುತ್ತದೆ. ಕನ್ನಡದ ಹೆಸರಾಂತ ಕವಿಚಕ್ರವರ್ತಿಗಳಲ್ಲೊಬ್ಬನಾದ ಜನ್ನನು ಅಮೃತಾಪುರ ಹಾಗೂ ತರೀಕೆರೆಯ ಶಾಸನಗಳನ್ನು ರಚಿಸಿದ್ದಾನೆ. ರೂವಾರಿ ಮಲ್ಲೋಜ ಈ ಶಾಸನಗಳನ್ನು ಕೆತ್ತಿದ್ದಾನೆ. ಇದುವರೆಗೆ ಚಿಕ್ಕಮಗಳೂರು ಜಿಲ್ಲೆಯ ಶಾಸನ ಕವಿ ಹಾಗೂ ರೂವಾರಿಗಳನ್ನು ಗುರುತಿಸುವ ಕೃತಿಗಳು ಹೊರಬಂದಿಲ್ಲವಾದರೂ, "ಕರ್ನಾಟಕ ಕವಿ ಚರಿತೆ" ಹಾಗು ಮೇವುಂಡಿ ಮಲ್ಲಾರಿಯವರ "ಕನ್ನಡ ನಾಡಿನ ಶಾಸನ ಕವಿಗಳು" ಕೃತಿಗಳಲ್ಲಿ ಕೆಲವೇ ಕವಿಗಳನ್ನು ಉಲ್ಲೇಖಿಸಿದ್ದಾರೆ. "ಚಿಕ್ಕಮಗಳೂರು ಜಿಲ್ಲಾ ದರ್ಶನ" ಸಂ.ಬ. ಪಾರ್ಥಸಾರಥಿ ಗ್ರಂಥದಲ್ಲಿ ಒಂದು ಲೇಖನ "ಶಾಸನ ಸಂಪತ್ತು" ಶ್ರೀ ಎಂ.ಪಿ. ಮಲ್ಲಪ್ಪ ಶೆಟ್ಟಿ, ಮಸಗಲಿ ಇವರು, ಕೆಲವೇ ಶಾಸನ ಕವಿಗಳನ್ನು ಹೆಸರಿಸಿ ರೂವಾರಿಗಳ ಬಗ್ಗೆ ಯಾವುದೇ ಉಲ್ಲೇಖಗಳಿಲ್ಲ. ಹೀಗಾಗಿ ರೂವಾರಿಗಳ ಬಗೆಗೆ ಯಾವುದೇ ಸಂಶೋಧಕರು ಆಸ್ತೆ ವಹಿಸಿಲ್ಲ. ಪ್ರಸ್ತುತ ಪ್ರಬಂಧದಲ್ಲಿ ಶಾಸನ ಕವಿಗಳು ರೂವಾರಿಗಳನ್ನು ಅವರ ವಂಶಾವಳಿಯುನ್ನು ಶೋಧಿಸುವ ಪ್ರಯತ್ನಗಳನ್ನು ಮಾಡಲಾಗಿದೆ.

ಚಿಕ್ಕಮಗಳೂರು ಜಿಲ್ಲೆಯ ಅಮೃತಾಪುರ ಶಾಸನವನ್ನು ಕವಿ ಜನ್ನನು ರಚಿಸಿದರೆ ಅದನ್ನು ಮಲ್ಲೋಜನೆಂಬ ರೂವಾರಿ ಕೆತ್ತಿದನು. ಮೂಡಗೆರೆಯ ಕ್ರಿ.ಶ. ೧೧೩೦ರ ಶಾಸನವನ್ನು ಮಲ್ಲಿನಾಥನು ರಚಿಸಿದ. ಇವನಿಗೆ "ಮದನ ಮಹೇಶ್ವರ" ಎಂಬ ಬಿರುದು ಹೊಂದಿದ್ದನೆಂದು ಶಾಸನದಿಂದ ತಿಳಿದುಬರುತ್ತದೆ. ಚಿಕ್ಕಮಗಳೂರಿನ ಕ್ರಿ.ಶ. ೧೧೪೭ರ ಶಾಸನವನ್ನು ಕವಿ ಕಾಳಿದಾಸ ರಚಿಸಿದ. "ನಾಗದೇವ" ಎಂಬ ಕವಿ ಚಿಕ್ಕಮಗಳೂರು ಹಾಗೂ ಕಡೂರು ಶಾಸನಗಳನ್ನು ರಚಿಸಿದ. ರುವಾರಿ ಬಯಿಚೋಜ, ಬೆನ್ನೋಜ ಏಜೋಜ ಇದೇ ವಂಶಸ್ಥರಾಗಿ ಚಿಕ್ಕಮಗಳೂರು ತಾಲ್ಲೂಕಿನ ಶಾಸನಗಳನ್ನು ಕೆತ್ತಿದರೆ ಬಲಕೋಜ, ಮಾದಿಯೋಜ,

* ಉಪನ್ಯಾಸಕರು, ಪಂ. ನಾಗಭೂಷಣಶಾಸ್ತ್ರಿ ಮಾರ್ಗ, ಮಹಾಂತನಗರ, ಧಾರವಾಡ- ೫೮೦ ೦೦೬

ಮೂಡಗೆರೆಯ ಸುತ್ತಮುತ್ತಲ ಶಾಸನಗಳ ರೂವಾರಿಗಳಾಗಿದ್ದಾರೆ. ಶ್ರೀಗೇರಿಯ ತಾಂಬ್ರ ಶಾಸನಗಳನ್ನು ವರದಪ್ಪಾಚಾರಿ ಕೆತ್ತಿದ್ದಾನೆ. ಹಾಗೂ ಶಿಲಾಶಾಸನಗಳನ್ನು ತಿಮ್ಮೋಜ, ಲಿಂಗೋಜ ರೂವಾರಿಗಳು ಚಿಕ್ಕಮಗಳೂರು ರೂವಾರಿ ಚಿನ್ನಮಲ್ಲೋಜನ ಮಕ್ಕಳು ಕೆತ್ತಿದ್ದಾರೆ. ಬಹುತೇಕ ಶಾನಭೋಗರೇ ಇಲ್ಲಿನ ಶಾಸನಗಳ ಬರಹಗಾರರಾಗಿರುವುದು ಕಂಡುಬರುತ್ತದೆ. ಹೀಗೆ ಇಲ್ಲಿ ವಿಪುಲವಾಗಿ ಶಾಸನಗಳ ಕೊನೆಯಲ್ಲಿ ಕವಿ, ಲಿಪಿಗಾರ ಕಲ್ಲುಕುಟಿಗರ ಹೆಸರು ಲಭ್ಯವಾಗುತ್ತದೆ. ಅವುಗಳನ್ನು ಪಟ್ಟಿಯಲ್ಲಿ ವಿಂಗಡಿಸಲಾಗಿದೆ.

ಈ ಜಿಲ್ಲೆಯ ಶಾಸನ ಕವಿಗಳು ಹಾಗು ಅವರ ಬಿರುದುಗಳು ಶಾಸನಗಳಿಂದ ತಿಳಿದು ಬರುತ್ತವೆ. ಇನ್ನೊಂದು ವಿಶೇಷವೆಂದರೆ ಜಿಲ್ಲೆಯ ಬಹಳ ಶಾಸನಗಳು ೧೨-೧೫ನೇ ಶತಮಾನದ ನಡುವಿನ ಕಾಲಘಟ್ಟದವುಗಳು. ಈ ಶಾಸನಗಳಲ್ಲಿ ವಿಶೇಷವಾಗಿ ಸೇನ ಬೋವರೇ ರಚಿಸಿ ಬರೆದ ಶಾಸನಗಳು ಹೆಚ್ಚಾಗಿವೆ. ಶಾಸನ ರೂವಾರಿಗಳ ಹೆಸರು ವಿಪುಲವಾಗಿ ದೊರೆಯುತ್ತಿವೆ. ಇನ್ನೊಂದು ವಿಶೇಷವೆಂದರೆ ಶಿಲಾಶಾಸನಗಳನ್ನು ವಿಶ್ವಕರ್ಮ "ಆಚಾರಿ"ಗಳೂ ಕೆತ್ತಿದ ನಿದರ್ಶನಗಳಿವೆ. ವಿಶ್ವಕರ್ಮ ಆಚಾರಿಗಳು ತಾಂಮ್ರ ಶಾಸನಗಳು ಕೆತ್ತುವುದು ವಾಡಿಕೆ. ಆದರೆ ಇಲ್ಲಿ ಕಲ್ಲಿನಲ್ಲಿ ವಿಶ್ವಕರ್ಮಗಳದೂ ಕೆತ್ತಿ ರೂವಾರಿಗಳಾಗಿದ್ದಾರೆ. ಜಿಲ್ಲೆಯಾದ್ಯಂತ ಒಬ್ಬ ರೂವಾರಿ ಅನೇಕ ಶಿಲಾಶಾಸನಗಳನ್ನು ಕೆತ್ತಿರುವುದು ಕಂಡುಬರುತ್ತದೆ.

## ಚಿಕ್ಕಮಗಳೂರು ಜಿಲ್ಲಾ ಶಾಸನ ಕವಿ'ಳು ಲಿಪಿಕಾರರು ಮತ್ತು ರೂವಾರಿಗಳು

**ತಾಲೂಕುವಾರು ಪಟ್ಟಿ** **ಚಿಕ್ಕಮಗಳೂರು ತಾಲ್ಲೂಕು**

| ಸಂಖ್ಯೆ | ಶಾಸನ ತಾಮ್ರಪಟ | ದಿನಾಂಕ | ಭಾಷೆ ಲಿಪಿ | ಲಭ್ಯ ಸ್ಥಳ | ಕವಿ | ಲಿಪಿಕಾರ | ರೂವಾಲ | ಆಕರ |
|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ |
| ೧. | ಗಂಜಿಗೇರಿ | ೯ನೇ ಶತಮಾನ | ಕನ್ನಡ | ರಾಮೇಶ್ವರ ದೇವಾಲಯದ ಬಳಿ | - | ಗೋವಿಂದಯ್ಯನ ಲಿಖಿತಂ | ಮಾರುತಯ್ಯ ...ರುಚಿತ್ತಿರ ಮಂಗಳ... | E C Vol XI No. 113. P. 72 |
| ೨. | ಆಲ್ದೂರು | ಕ್ರಿ.ಶ. ೧೧೧೬ | ಕನ್ನಡ. | ದೇವೀರಮ್ಮ ದೇವಾಲಯದ ಬಳಿಯ ವೀರಗಲ್ಲು | - - | - - | ದಮ್ಮಾಚಾರಿ ಕಲ್ಲಂ ಮಾಡಿದ | EC Vol. XI No. 162. P 100 |
| ೩. | ಚಿಕ್ಕಮಗಳೂರು | ಫೆ. ೪ ಕ್ರಿ.ಶ ೧೦೦೧ | ಕನ್ನಡ | ಅಗ್ರಹಾರದ ಬೀದಿ ಮೊದಲ ದಿನ್ನೆಯ ಮೇಲೆ ವೀರಗಲ್ಲು | - | ಜಗಮಣಿಚಾರಿ ಬರೆದ | - - | Ec XI No. 6 P. 7 |
| ೪. | ಚಿಕ್ಕಮಗಳೂರು | ೨೫ ನವಂಬರ್ ಕ್ರಿ.ಶ. ೧೧೪೦ | ಕನ್ನಡ | ಕೋಟೆ ಕಂದಕದಲ್ಲಿ ವೀರಗಲ್ಲು | ಹೆಂಮಾಡಿ ಗೌಡನ ಮಗ ಮಸಣಿ ತಂಮ | - - | ಕಂಡರಿಸಿದ ರೂವಾರಿ ಬಯಿಚೋಜ... ಶ್ರೀ ಶ್ರೀ ಶ್ರೀ | EC XI No. 4, P. 6 |
| ೫. | ಅಂಬಳೆ | ಡಿಸೆ. ೨೨ ಕ್ರಿ.ಶ.೧೧೭೮ | ಕನ್ನಡ | ಚೆನ್ನಿಗ ದೇವರಾಯ ದೇವಾಲಯ ದ್ವಾರದಲ್ಲಿ | - - | ಬರೆವರಾಚಾರ್ಯಂ ಸೂರ್ಯ್ಯ ೯೨೦ ಬರೆದಂ | - - | EC XI No. 88 P. 51 |
| ೬. | ಇಂದಾವುರ | ೧೧೯೦-೯೧ವ | ಕನ್ನಡ | ಬೈರದೇವರ ಬಳಿಯ ವೀರಗಲ್ಲು | ಸವನ ಬರೆದ ಮಂಚಯ್ಯ | - | - | Ec XI No. 28, P. 17 |
| ೭. | ಉಪ್ಪವಳ್ಳಿ | ಏ ೨೩, ೧೧೯೩ | ಕನ್ನಡ | ಉತ್ತರದ ಗದ್ದೆಯಲ್ಲಿ | ಸೇನಬೋವ ಮಾಯಣ ಮಾಡಿದ | - | ರೂವಾರಿ ಬೋಗೋಜ | EC XI No. 44, P. 24 |
| ೮. | ಕೆಂಕೆರೆ | ೧೨ ಆಗಸ್ಟ್ ೧೧೯೫ ಕ್ರಿ.ಶ | ಕನ್ನಡ | ಗ್ರಾಮದ ಪಶ್ಚಿಮ ಕೆರೆ ಏರಿ ಮೇಲೆ | - | - | ಬಡಗಿ ಸಂಕೋಜ ಮಲೋಜ ಬತೋಜ ಮಾಡಿದ ವೀರಗಲ್ಲು | EC XI No. 200, P. 126 |
| ೯. | ಮುತ್ತಿನಪುರ | ೨೭ ಏಪ್ರಿಲ್ ೧೨೦೨ | ಕನ್ನಡ | ವಿರುಪಾಕ್ಷ ದೇವಾಲಯದಲ್ಲಿನ ಶಾಸನ | - | ಮಾದಯ್ಯಂಗಳ ಮಗ ಮಲ್ಲಯ್ಯ ಬರೆದ ಶಾಸನ | - - | EC XI No. 192. P. 123 |
| ೧೦. | ಚಿಕ್ಕಮಗಳೂರು | ಸೆಪ್ಟಂಬರ್ ೧೨೮೯ ಕ್ರಿ.ಶ | ಕನ್ನಡ | ವೀರಭದ್ರ ದೇವಾಲಯದ ಬಳಿ, ವೀರಗಲ್ಲು | - | - | ಬಸವನಳ್ಳಿಯ ಬಾಚೋಜನ ಮಗ ಚಿಂನ್ನೋಜ ಮಾಡಿದ ವೀರಗಲ್ಲು | EC XI No. 8, P.7 |
| ೧೧. | ಉಪ್ಪವಳ್ಳಿ | ೧೨-೧೩ನೇ ಶತಮಾನ | ಕನ್ನಡ | ಗ್ರಾಮದ ಉತ್ತರದ ಗದ್ದೆಯಲ್ಲಿ | - | ಬರೆದಾತ ವಸುದೇವರ ಮಗ ಚಿಂದಣ್ಣನು | ರೂ. ಬೈಚೋಜನ ಮಗ ಏಚೋಜನ ಮಗ ಮರಿಯಯನ ಸಿಸ್ಯ ಚಿಕ್ಕರೂವಾರಿ ಚಿಕ್ಕ ಬೈಚೋಜನು | EC XI No. 45. P. 25 |

| ಸಂಖ್ಯೆ | ಶಾಸನ ತಾಮ್ರಪಟ | ದಿನಾಂಕ | ಭಾಷೆ ಲಿಪಿ | ಲಭ್ಯ ಸ್ಥಳ | ಕವಿ | ಲಿಪಿಕಾರ | ರೂವಾಲ | ಆಕರ |
|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ |
| ೧೨. | ಸಾದರನಹಳ್ಳಿ | - | - | ಗ್ರಾಮದ ಕೆರೆ ಈಶ್ವರ ದೇವಾಲಯದ ಬಳಿ | - | ಲೋಕಿಯ ಬಂಡಾಯ ಮದು ಮಂಗಳ ಮಗ ಮಲ್ಲಯ್ಯ ಬರೆದ ಶಾಸನ | - | EC XI No. 206. P. 130 |
| ೧೩. | ಹಲಸೂರು (ತಾಂಬ್ರ ಶಾಸನ) | ಮಾರ್ಚ್ ೧೧ ೧೭೧೭ ಕ್ರಿ.ಶ | ಕನ್ನಡ | ಮಠದ ೩ನೇ ತಾಂಬ್ರ ಶಾಸನ | - | ಮಾಚನದ ಮಲ್ಲಪನ ಮಗ ವೀರಪ್ಪನ ಕೈಯಲ್ಲಿ ಕೆತ್ತಿದ | ..... | EC XI No. 16. P. 36 |
| | | | | **ಮೂಡಗೆರೆ ತಾಲ್ಲೂಕು** | | | | |
| ೧೪. | ಜಾವಳಿ | ೨೦ ಏಪ್ರಿಲ್ ೭೫೦ ಕ್ರಿ.ಶ | ಸಂಸ್ಕೃತ | ಪಾಟೀಲ ಸಿದ್ದನ ಗೌಡರ ವಶದಲ್ಲಿ ತಾಂಬ್ರ ಶಾಸನ | - | - | ಸರ್ವಕಾಲಾನ್ತು... ಚಿತ್ರಕಲಾಬಿಜ್ಞೇನ ವಿಶ್ವಕರ್ಮ ಚಾಚ್ಯೋಃಣೇದಂ ಶಾಸನ ಲಖಿತಂ | EC XI P. 223 |
| ೧೫. | **ಮಠವಳ್ಳಿ** | **೧೦-೧೧ ಶತಮಾನ** | **ಕನ್ನಡ** | **ಮನೆಯೊಂದರ ಹಿತ್ತಲಲ್ಲಿ** | **-** | **-** | **ಉಣ್ಣಿಲ್ದೆನವರ ಮಾಳಿತಗಜ್ಜದು ಕಣ್ಡೆಸಿದ** | **EC XI No. 34, P. 171** |
| ೧೬. | ಹಂತೂರು | ೨೫ ಡಿ. ೧೧೨೯. ಕ್ರಿ.ಶ | ಕನ್ನಡ | ಗ್ರಾಮದ ಬಳಿ ಪಾಳು ಜೈನ ಬಸ್ತಿ | ಶ್ರೀ ಮನ್ಮಲ್ಲಿನಾಥಂ ಬಿರುದು ಲೇಖಕ ಮದನ ಮಹೇಶ್ವರಂ ಬರೆದಂ | - | ನಾಗರಾದಿ ನಾಗರಿಕ ದ್ರಾ ಎಳಸ ಮುದ್ದರ ಣ್ಣನಪ್ಪ ಮಾಣ ಮೋಜನ ಮುಗಂ ಬಿರುದು ರೂವಾರಿ ವೇಶ್ಯಾ ಭುಜಂಗ ಬಲಕೋಜ ಕಣ್ಡರಿಸಿದಂ | EC XI No.18, P. 162 & K.S. P. 115 |
| | **ಅಂಗಡಿ** | **೨೩ ನ ೧೧೧೭ ಕ್ರಿ.ಶ** | **ಕನ್ನಡ** | **ಊರ ಬಾಗಿಲ ಮುಂದೆ ನೆಟ್ಟ ವೀರಗಲ್ಲು** | **-** | **-** | **ಮಸಣೋಜನಂ ಮಾಡಿಂ ಕಲ್ಲಾ ಮೊದೆಯೋಜ ಬರೆದ ಸಾಸನವಾ** | **EC XI No. 29. P. 169** |
| ೧೮. | ಕಳಸ | ೧೧೫೪ ಕ್ರಿ.ಶ | ಕನ್ನಡ | ಕಳಸೇಶ್ವರ ದೇವಾಲಯದ ಪ್ರಾಕಾರದಲ್ಲಿ | - | - | ವಿನ್ತಿ ಶಾಸನವಂ ಬರೆದಾತ ಗೋದಿನ್ದಿ ವೆರ್ಗ್ಗಡ | EC XI No. 43, P. 175 |
| **೧೯.** | **ಕಳಸ** | **೧೨೬೮ ಕ್ರಿ.ಶ** | **ಕನ್ನಡ** | **ಕಳಸೇಶ್ವರ ದೇವಾಲಯದಲ್ಲಿ** | **ಶಾಸನ ಬರೆದ ಸಾಲಿಗರ ಸೇನ ಬೋವ ಕೋಟಿಯ** | **-** | **ಹ... ಕಂಮಟ ಹಣ ಕಂಡರಿಸಿದ** | **EC XI No. 71; P. 205** |
| ೨೦. | ಉಗ್ಗಿಹಳ್ಳಿ | ೧ ಜನವರಿ ೧೨೧೬ | ಕನ್ನಡ | ಹರಿಜನ ಕೇರಿಯಲ್ಲಿ | - | - | ಕನಿಯಾಚಾರಿ ಮಾಡಿದ ಕಣ್ಡರಣೆ | EC XI No. 15, P. 159 |
| ೨೧. | ಕಳಸ | ಕ್ರಿ.ಶ ೧೨೮೪ | " | ೯ನೇ ತಾಂಬ್ರ ಶಾಸನ | ಬರೆದವ ಸೇನ ಭೋವ ಇಸಪಚಾರಿ | - | - | EC XI P. 213 |
| **೨೨.** | **ಕಳಸ** | **೨೯ ಅಕ್ಟೋ ೧೨೮೫ ಕ್ರಿ.ಶ** | **"** | **-** | **ಗೋವಿಂದ ಹೆಬ್ಬಾರುವ ಬರೆದಾತ ಕಲ್ಲೆಯನ ಮಾದವಳ್ಳಿ** | **- -** | **ಚರಿಯನ ಮಗ ಇಸರ ಕಂಡರಿಸಿದನು... ಶ್ರೀ ಶ್ರೀ** | **EC XI P. 210** |
| ೨೩. | ಕಳಸ | ೧೨೭೭ ಕ್ರಿ.ಶ | " | - | - | - | ಕಲ್ಲೆಯನ ಮದನ ಶ್ರೀ | EC XI P. 211. |
| ೨೪. | ರಾಮಚಂದ್ರಾಪುರ ರುದ್ರಪಾದ ಬಳಿ | ೧೩೭೮ ಕ್ರಿ.ಶ | ಕನ್ನಡ | ರಾಮಚಂದ್ರಾಪುರ ರುದ್ರಪಾದ ಬಳಿ ಕಲ್ಲು | - - | ಶಾಸನ ಬರೆದಾತ ಗ್ರಾಮನಾಡ ಸೇನ ಬೋವ ನರಶಂ ಹ್ವದೇವನ್... ಶ್ರೀ | - | EC XI, P; 234 |
| ೨೫. | ಮುಡಗೆರೆ | ೧೧೩೦ ಕ್ರಿ.ಶ | ಕನ್ನಡ | - | ಮಲ್ಲಿನಾಥ | - | - | EC XI |

| ಸಂಖ್ಯೆ | ಶಾಸನ ತಾಮ್ರಪಟ | ದಿನಾಂಕ | ಭಾಷೆ ಲಿಪಿ | ಲಭ್ಯ ಸ್ಥಳ | ಕವಿ | ಲಿಪಿಕಾರ | ರೂವಾರಿ | ಆಕರ |
|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ |
| | | | | **ಕಡೂರು ತಾಲ್ಲೂಕು** | | | | |
| ೨೬. | ಆಸಂದಿ | ೧೨೦೬ ಕ್ರಿ.ಶ | ಕನ್ನಡ | ವೀರಭದ್ರ ದೇವಾಲಯದ ಮುಂದೆ | - | ಸೂರ್ಯ್ಯಗಣಂ ಬಿರುದಾ ಲೇಖಕ ಮದನ ಮಹೇಶ್ವರ | - | EC XII P; 10 |
| **೨೭.** | **ಕುಪ್ಪೆಗಾಳು** | **೧೧೭೩ ಕ್ರಿ.ಶ** | **ಕನ್ನಡ** ” | **ಬಸವನಗುಡಿಯ ಬಳಿಯಲ್ಲಿ** | **-** | **ಶ್ರೀ ರುದ್ರದೇವ** | **ರೂವಾರಿ ಅಬೋಜನ** | **EC XII P. 68** |
| ೨೮. | ಕಂಜಿಗಲ್ಲು | ೧೨೧೧ ಕ್ರಿ.ಶ | ” | ಕಲ್ಲೇಶ್ವರ ದೇವಾಲಯದ ಬಳಿ ಕಲ್ಲು | - | ಯೀ ಶಾಸನ ಬರೆದ ಅಕ್ಕಸಾಲಿ ತಿಪ್ಪಾಚಾರಿ | - | EC XII P. 50 |
| **೨೯.** | **ಕೆರೆಸಂತೆ** | **೧೨೨೪ಕ್ರಿ.ಶ** | ” | **ಶಂಭುಲಿಂಗ ದೇವಾಲಯದ ಹತ್ತಿರ** | **ನಾಗದೇವ** | **-** | **ಬೃಹಸ್ಪತಿ ಸೋಮನಾಥ ಶಂಕರನುಜಂ ನಿರ್ಮ್ಮಿಸಿದಂ ಕವಿ ನಾಗದೇವ ನೀಕ್ಷಿ** | **EC XII P. 81 K.S. P. 247** |
| ೩೦. | ಕೆರೆಸಂತೆ | ೧೧೮೧ ಕ್ರಿ.ಶ | ” | ಹೆಮಗಿ ಸಿದ್ಧರ ಮಠದಲ್ಲಿ | -<br>- | -<br>- | ರೂವಾರಿ ಮಲ್ಲೋಜ ಹೊಯ್ದಿ ಶಾಸನ | EC XII P. 84 |
| **೩೧.** | **ಕೆರೆಸಂತೆ** | ೧೫೨೧ ಕ್ರಿ.ಶ | ” | **ಜನಾರ್ಧನ ಗುಡಿ ರಂಗಮಂಟಪ ಗೋಡೆಯಲ್ಲಿ** | **-** | **-** | **ಬಾಣೂರು ಕಲ್ಲೋಜನ ಮಗ ಕಲ್ಲಯ್ಯನ ಬರಹ** | **EC XII P. 75** |
| ೩೨. | ಕೆರೆಸಂತೆ | **೧೫೫೦ಕ್ರಿ.ಶ** | ” | ಗದ್ದೆಯಲ್ಲಿನ ಕಲ್ಲು | - | - | ಈ ಬರಹ ಗೈದವನು ಕುಮಾರ ವೀರೋಜನ ಮಗ ಭದ್ರಯ್ಯ | EC XII P. 83 |
| ೩೩. | ಮರವಂಜಿ | **೧೧೭೦ಕ್ರಿ.ಶ** | **ಕನ್ನಡ** | ಕಲ್ಲೇಶ್ವರ ದೇವಾಲಯ ಬಳಿಯ ಕಲ್ಲು | - | ಕಲಿದೇವಂಣಂಗಳ ಬರಹ | -<br>- | EC XII P. 202 |
| **೩೪.** | **ಕೆರೆಸಂತೆ** | **೧೨೪೦ಕ್ರಿ.ಶ** | **ಕನ್ನಡ** | **ಹೊಲದಲ್ಲಿ** | **-** | **ಸೇನಬೋದ ಸಿಂಗಯ್ಯ** | **ರೂವಾರಿ ಚಟ್ಟೋಜನ ಕೆಲಸ** | **EC XII P. 94** |
| ೩೫. | ಗರ್ಜೆ | **೧೦೮೯ಕ್ರಿ.ಶ** | ” | ಕಲ್ಲೇಶ್ವರ ದೇವಾಲಯದ ಬಳಿ | ನೊಳಂಬಾಚಾರಿ | -<br>- | -<br>- | EC XI P. 102 |
| **೩೬.** | **ನಿಡುವಳ್ಳಿ** | **-** | **-** | **-** | **-** | **-** | **ನಿಡುವಳ್ಳಿ ನಾಗೋಜನ ಮಗ ಮಾಳಿಯ ಕಟ್ಟಿದ ಗುಡಿ** | **EC XII 128** |
| ೩೭. | ಪಟ್ಟಣಗೆರಿ | **೧೨೪೩ಕ್ರಿ.ಶ** | ” | - | - | | ಅಕ್ಕಸಾಲೆ ಬಮ್ಮೋಜನ ಮಗ ಮಾದಿವೋಜ ಸಂಕರೋಜನ ಮಗ ಮಲ್ಲೋಜ... ೦ | EC XII P. 130 |

| ಸಂಖ್ಯೆ | ಶಾಸನ ತಾಮ್ರಪಟ | ದಿನಾಂಕ | ಭಾಷೆ ಲಿಪಿ | ಲಭ್ಯ ಸ್ಥಳ | ಕವಿ | ಲಿಪಿಕಾರ | ರೂವಾರಿ | ಆಕರ |
|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ |
| ೩೮. | ಬ್ರಹ್ಮಸಮುದ್ರ | ೧೧೭೨ಕ್ರಿ.ಶ | " | ಲಕ್ಷ್ಮಿನಾರಾಯಣನ ದೇವಾಲಯ ತಳಪಾಯ | ಶ್ರೀಮತ ಬರವ ರಾಜಾರ್ಯ ಸುರಿಯಾಳನ ಬಿರುದ ಲೇಖಕಂ ಮದನ ಮಹೇಶ್ವರ ಬರೆದ ಶಾಸನ | - | - | EC XII P. 182 |
| ೩೯. | ಬ್ರಹ್ಮಸಮುದ್ರ | ೧೧೬೯ಕ್ರಿ.ಶ | " | ನಾಗನಾಥೇಶ್ವರ ದೇವಾಲಯ ಬಳಿ | ಬಿರುದ ಲೇಖಕ ಮದನಮಹೇಶ್ವರ ಬರೆದ ಶಾಸನ | | | EC XII P. 182 |
| ೪೦. | ಮಚ್ಚೇರಿ ತಾಂಮ್ರ ಶಾಸನ | ೧೪೯೯ಕ್ರಿ.ಶ | ಕನ್ನಡ | - | - | ಶಾಸನ ಲೇಖಕ... ಲಿಖಿತಂ ರುಚಿರಾಕ್ಷರಂ ಶ್ರೀಸಂಗಂ | | EC XII P. 191 |
| ೪೧. | ಮತ್ತಿಹಳ್ಳಿ | ೧೨೦೩ಕ್ರಿ.ಶ | " | ಸಿದ್ದೇಶ್ವರ ದೇವಾಲಯ ಸಮೀಪದ ಕಲ್ಲು | - - | - | ಬಲ್ಲೋಜ ಗೆಯ್ದನು | EC XII P. 196 |
| | | | | ತರಿಕೆರೆ ತಾಲ್ಲೂಕು | | | | |
| ೪೨. | ಕುಂಟನ ಮಡವು | ೨೬ ಮೇ ೧೦೭೭ಕ್ರಿ.ಶ | ಕನ್ನಡ | ಊರ ಮುಂದೆ ಗದ್ದೆಯಲ್ಲಿ ಕಲ್ಲು | - | ಸೇನ ಬೋದ ಬಮ್ಮ | - | EC XII P; 370 |
| ೪೩. | ಬಂಕನಕಟ್ಟೆ | ೧೧೦೪ಕ್ರಿ.ಶ | " | ಬಂಕೇಶ್ವರ ದೇವಾಲಯ ದ್ವಾರದಲ್ಲಿ | - - | - - | ಬಲೋಜ ಏಬೋಜ | EC XII P. 398 |
| ೪೪. | ತರಿಕೆರೆ ಹಳೆಯೂರು | ೧೧೫೮ಕ್ರಿ.ಶ | ಕನ್ನಡ | - | - | - | ಶಂಭುಶಕ್ತಿ ಆದಿಕೆರ | EC XII P. 437 |
| ೪೫. | ತರೀಕೆರೆ ತಾಂಮ್ರ ಶಾಸನ | ೧೧೮೪ಕ್ರಿ.ಶ | " | - | ಜೊಂಬಟ ಪಂಡಿತರ ಕವಿತೆ | | ಬರೆವರಾ ಚಾರ್ಯರ ಸೂರ್ಯಣ್ಣಂಗಳ ಶಿಷ್ಯ ಬಾಚಯ್ಯ | EC XII P. 384 |
| ೪೬. | ಅಮೃತಾಪುರ | ೧೧೯೮ಕ್ರಿ.ಶ | ಕನ್ನಡ | ಅಮೃತೇಶ್ವರ ದೇವಾಲಯ ದಕ್ಷಿಣ ಭಾಗದಲ್ಲಿ | ಉದ್ದಂಡ ಕವಿ ಬಾಳನೇತ್ರ ಸುಕವಿ ಜನಮಿತ್ರಂ ಜನ್ನಯ್ಯ ನ ಕವಿತೆ | ಲೊಕ್ಕಿಗುಂಡಿಯ ಮಹಾದೇವರಣ್ಣಗಳ ಶಿಷ್ಯ ನಾಕಂಣ್ಣನ ಬರಹ | ಕಂಡರಣಕಾರ ಕೊಳಹಾರಂ ರೂವಾರಿ ಮಲ್ಲೋಜನ ಕಂಡರಣೆ | EC XII P. 346-54 |
| ೪೭. | ನಂದಿ | ೧೫೮೫ ಕ್ರಿ.ಶ | " | ಸಿದ್ದೇಶ್ವರ ದೇವಾಲಯ ದೇವಾಲಯ ದ್ವಾರದಲ್ಲಿ | - | ಕಾಮರಾಜ | ಮೋಜಸಿದ್ದಯ್ಯನ ಬರಹ | EC XII P. 396 |
| ೪೮. | ಹರಿಹರಪುರ | ೧೩೯೨ ಕ್ರಿ.ಶ | " | - | - | ಸಾಬಂಣಂಗಳ ಬರಹ | - | EC XII P. 314 |
| ೪೯. | ಬೆಮ್ಮಲಾಪುರ | ೧೪೦೩ ಕ್ರಿ.ಶ | " | ತ್ರಿಪುರಾಂತಕ ದೇವಾಲಯ ಸಮೀಪದ ಕಲ್ಲು | - - | ಸೇನಬೋವ ನರಹರಿದೇವ ಕಿಗ್ಗ ಬರೆದಂ | | EC XII P. 290 |
| ೫೦. | " | ೧೪೦೩ ಕ್ರಿ.ಶ | " | " | | ಸೇನಬೋವ ಮುದವಲ್ಲಾ ಬರೆದಂ | - | EC XII P. 292 |
| ೫೧. | " | ೧೪೦೩ ಕ್ರಿ.ಶ | " | " | | ಏಟ್ಟಣ್ಣ ಬರೆದಂ | - | EC XII P. 294 |
| ೫೨. | " | ೧೪೦೪ ಕ್ರಿ.ಶ | " | " | | ವಾಮರಸ ಬರೆದಂ | - | EC XII P. 299 |
| ೫೩. | ನಾರವೆ | ೧೫೯೨ ಕ್ರಿ.ಶ | " | ಗೋಪಾಲಕೃಷ್ಣ ದೇವಾಲಯದಲ್ಲಿ ನೆಟ್ಟಕಲ್ಲು | | ಸೇನಬೋವ ತಿಂಮ್ಮಪ್ಪನ ಬರಹ | - - | EC XII P. 288 |
| ೫೪. | ನಾರವೆ | ೧೬೦೧ ಕ್ರಿ.ಶ | " | " | - | ಅಂಣಾಜಿಸೇನಬೋವನ ಬರಹ | | EC XII P. 286 |
| ೫೫. | ಶೃಂಗೇರಿ | ೯ ಮಾರ್ಚ್ ೧೩೪೬ ಕ್ರಿ.ಶ | ಕನ್ನಡ | - | - | - | ಚಿನ್ನಮಯೋಜನ ಮಗನು ಲಿಂಗೋಜನು | EC XI P. 242 |

| ಸಂಖ್ಯೆ | ಶಾಸನ ತಾಮ್ರಪಟ | ದಿನಾಂಕ | ಭಾಷೆ ಲಿಪಿ | ಲಭ್ಯ ಸ್ಥಳ | ಕವಿ | ಲಿಪಿಕಾರ | ರೂವಾಲ | ಆಕರ |
|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ |
| ೫೬. | ಶೃಂಗೇರಿ | ೧೪೩೨ ಕ್ರಿ.ಶ | ” | ಶ್ರೀಮಠದ ೫ನೇ ತಾಂಮ್ರಶಾಸನ | - | ಶಾಸನಾಚಾರ್ಯ ವರದಪ್ಪಾಚಾರಿ ಲಿಖಿತಂ | - | EC XI P. 273 |
| ೫೭. | ಶೃಂಗೇರಿ | ೧೪೩೨ ಕ್ರಿ.ಶ | ” | ಶ್ರೀಮಠದ ೬ನೇ ತಾಂಮ್ರಶಾಸನ | | ವರದಪ್ಪಾಚಾರ್ಯ | | EC XI P. 278 |
| ೫೮. | ಹೊನ್ನವಳ್ಳಿ | ೧೪೦೬ ಕ್ರಿ.ಶ | ” | ಶೆಟ್ಟಮಕ್ಕಿ ಬಯಲಿನ ನೆಟ್ಟಕಲ್ಲು | - | ಆ ನಾಡ ಸೇನಬೋರ್ವ ದೇವಪ್ಪನ ಬರಹ | - | EC XI P. 339 |
| ೫೯. | ಆನೆಗುಂದ | ೧೪೦೮ ಕ್ರಿ.ಶ | ” | ಗಿಣಕಟ್ಟೆಯ ಮೇಲಿನ ಕಲ್ಲು | - | ದೇವರಸೇನಬೋವ ಬರಹ ಶ್ರೀ ಶ್ರೀ | - | EC XI P. 339 |
| ೬೦. | ವಿದ್ಯಾರಣ್ಯಪುರ | ೧೫೪೭ ಕ್ರಿ.ಶ | ” | ವಿನಾಯಕ ದೇವಾಲಯದ ಹತ್ತಿರ ನೆಟ್ಟಕಲ್ಲು | - | - | ಅಚ್ಯುತಂ ಬರೆದಂ | EC XI 311 |
| ೬೧. | ಹುಲಿಮನೆ | ೧೪೧೮ ಕ್ರಿ.ಶ | ” | - | - | ಪಾಲನಾದಚ್ಯುತಂ ಚ್ಯುತಂ ಪದಂ | | EC XI P. 346 |
| ೬೨. | ಬಿದರವಳ್ಳಿ | ೧೪೧೯ ಕ್ರಿ.ಶ | ” | - | - | | | |
| ೬೩. | ತೊಟ್ಲ್ಯೋಡಿ | ೧೪೫೯ ಕ್ರಿ.ಶ | ” | ಮಲ್ಲಿಕಾರ್ಜುನ ದೇವರ ಗುಡಿ ಹತ್ತಿರ ನೆಟ್ಟ ಕಲ್ಲು | - | - | ತಿಮ್ಮೋಜ ಬರಹ | EC XI P. 337 |
| ೬೪. | ತಳಕೊಡು | ೧೫೨೯ ಕ್ರಿ.ಶ | ” | ತೋಟದಲ್ಲಿ ಬಿದ್ದಿರುವ ಕಲ್ಲು | -<br>- | ಶಂಕರಪ್ಪ ಸೇನಬೋವಿ | - | EC XI P. 323 |
| ೬೫. | ಬಾಳೆಹಳ್ಳಿ | ೧೭ನೇ ಶತಮಾನ | ” | ಶ್ರೀಮಠದಲ್ಲಿ ತಾಂಮ್ರಶಾಸನ | - | ಬರದಾತ ಸೇನಬೋಗ ಮಹಂತಯ್ಯ | -<br>- | EC XII P. 467 |
| ೬೬. | ಪೇಟೆಗದ್ದೆ (ಬೆ.ಮ. ತಾ.) | | ” | ಆಂಜನೇಯ ದೇವಾಲಯ ಮಂಡುಗಲ್ಲು | - | ಬೊಮ್ಮರಸರನ ಕಲ್ಲು | - | EC XII P. 490 |





## ಕ. ಇತಿಹಾಸ ಅಕಾದೆಮಿಯ ೧೭ನೇ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೨೦೦೩)

*ಐಹೊಳೆ, ಬಾದಾಮಿ, ಪಟ್ಟದಕಲ್ಲು ಮತ್ತು ಮಹಾಕೂಟದಲ್ಲಿ ರೇಖಾನಾಗರ, ದ್ರಾವಿಡ ಮತ್ತು ಕದಂಬನಾಗರ - ಈ ಎಲ್ಲಾ ಶೈಲಿಗಳಲ್ಲಿ ನಿಷ್ಣಾತರಾದ ಸ್ಥಪತಿಗಳು ವಾಸವಾಗಿದ್ದರು, ಎಂಬುದು ನಿರ್ವಿವಾದ ಅಂಶ. ಹಾಗಾದರೆ ದ್ರಾವಿಡ ಶೈಲಿಯ ಉಗಮ ಎಲ್ಲಿ ಎಂಬುದರ ವಿಶ್ಲೇಷಣೆ ಬೇಕಾಗುತ್ತದೆ. ಪಲ್ಲವರ ನಾಡಿನಲ್ಲಿ ಯಾವ ದೇವಾಲಯಗಳೂ ರೇಖಾನಾಗರ ಶೈಲಿಯಲ್ಲಿಲ್ಲ.*

*ಚಲುಕ್ಯ ನಾಡಿನಲ್ಲಿ ಕ್ರಿ.ಶ. ೬೨೫ರ ಹೊತ್ತಿಗಾಗಲೇ ಅಸ್ತಿತ್ವದಲ್ಲಿದ್ದ ದ್ರಾವಿಡ ಶೈಲಿ ದೇವಾಲಯಗಳ ಕಾಲಾವಧಿಯನ್ನು ಮಹಾಬಲಿಪುರಂದಲ್ಲಿರುವ ಏಕಶಿಲಾರಥಗಳು ಮತ್ತು ಕಡಲತೀರದ ದೇವಾಲಯಗಳ ಕಾಲಾವಧಿ (೭ನೇ ಶತಮಾನದ ಮಧ್ಯಕಾಲ ಮತ್ತು ೮ನೇ ಶತಮಾನದ ಆರಂಭಕಾಲ) ಯೊಂದಿಗೆ ತೂಗಿ ನೋಡಿದಾಗ ಸ್ಪಷ್ಟವಾಗುವ ಅಂಶವೆಂದರೆ ಚಲುಕ್ಯ ನಾಡಿನ ಸ್ಥಪತಿಗಳು ದ್ರಾವಿಡಶೈಲಿಯಲ್ಲಿ ದೇವಾಲಯಗಳನ್ನು ಕಟ್ಟುವುದನ್ನು ಪಲ್ಲವ ಸ್ಥಪತಿಗಳಿಗಿಂತಲೂ ಒಂದು ಶತಮಾನದಷ್ಟು ಮೊದಲೇ ಆರಂಭಿಸಿದ್ದರು ಎನ್ನುವುದು ಮತ್ತು ಚಲುಕ್ಯನಾಡಿನ ವಾಸ್ತುಶಾಸ್ತ್ರಜ್ಞರು ಮತ್ತು ಶಿಲ್ಪಿಗಳು ದ್ರಾವಿಡ ಮತ್ತು ರೇಖಾನಾಗರ ಶೈಲಿಗಳೆರಡರಲ್ಲಿಯೂ ನಿಷ್ಣಾತರಾಗಿದ್ದರು ಎನ್ನುವುದೇ ಆಗಿದೆ.*

**ಡಾ. ಸಿಂದಗಿ ರಾಜಶೇಖರ್**

*ಸಮ್ಮೇಳನಾಧ್ಯಕ್ಷರು*

ಡಾ|| ಎ.ಕೆ. ಶಾಸ್ತ್ರಿ*

# ಶೃಂಗೇರಿ ಮಠದ ದಾಖಲೆಗಳಲ್ಲಿ ಕೆಳದಿ ನಾಯಕರ ಕಾಲದ ಮಠ ಮತ್ತು ದೇವಾಲಯಗಳ ಉಲ್ಲೇಖ

*ಕೆಳದಿ ನಾಯಕರ ಕಾಲದಲ್ಲಿ ಮಠ ಮತ್ತು ದೇವಸ್ಥಾನಗಳ ನಿರ್ಮಾಣ, ವಾಸ್ತುಶಿಲ್ಪ, ಕಲೆ ಇವುಗಳ ಅರಿವು ಹಾಗು ಈ ಸಾಂಸ್ಕೃತಿಕ ಸಂಸ್ಥೆಗಳ ಇತಿಹಾಸದ ಮೇಲೆ ಬೆಳಕು ಬೀರುವ ಆಕರ ಸಾಮಗ್ರಿಗಳ ಅಧ್ಯಯನವೂ ಅಷ್ಟೇ ಮಹತ್ವದ್ದಾಗಿದೆ. ಶೃಂಗೇರಿ ಮಠದ ದಾಖಲೆಗಳು ಈ ದಿಸೆಯಲ್ಲಿ ವಿಶಿಷ್ಟ ಸೋದಾಹರಣೆ ಯಾಗುತ್ತವೆ. ಇದಲ್ಲದೆ ಕೆಳದಿ ಅರಸರ ಪರಧರ್ಮ ಸಹಿಷ್ಣುತೆಯ ಕುರುಹಾಗಿ ರಾಮಾನುಜಪಂಥದ ಮಠಕ್ಕೆ, ಮುಸಲ್ಮಾನರ ಮಸೀದೆಗೆ ದಾನವಿತ್ತಂತೆ ಶೃಂಗೇರಿ ಮಠಕ್ಕೂ ಶಿಷ್ಯಪರಂಪರೆಯಾಗಿ ಮಠಧರ್ಮಕ್ಕೆ ನಡೆದು ಬರುವಂತೆ ದಾನ ನೀಡಿದ ಬಗ್ಗೆ ತಾಮ್ರಶಾಸನದ ಪ್ರತಿಯೇ ಆಧಾರ ನೀಡುತ್ತದೆ.*

ಶೃಂಗೇರಿ ಮಠದ ಚರಿತ್ರೆ ಆದಿಶಂಕರರಷ್ಟೇ ಪುರಾತನ ವಾದುದು. ವಿಜಯನಗರದ ಸಾಮ್ರಾಟರು ಶ್ರೀಮಠಕ್ಕೆ ಭೂದಾನ ಮಾಡಿ ರಾಜಾಶ್ರಯ ನೀಡಲು ಪ್ರಾರಂಭ ಮಾಡಿದಾಗಿನಿಂದ, ಅಂದರೆ, ಹದಿನಾಲ್ಕನೇ ಶತಮಾನದಿಂದ, ಅದೊಂದು ಧರ್ಮ ಸಂಸ್ಥಾನವಾಗಿ ರೂಪುಗೊಂಡಿತು. ನಂತರದಲ್ಲಿ ಬಂದ ಕೆಳದಿ ನಾಯಕರು, ಮೈಸೂರಿನ ಒಡೆಯರು, ಹೈದರಾಲಿ, ಟಿಪ್ಪುಸುಲ್ತಾನ, ಮರಾಠರು, ಬ್ರಿಟಿಷರು ಮತ್ತು ಅನೇಕ ಸಂಸ್ಥಾನಿಕರು ಮುಂಚಿನಿಂದ ಬಂದ ಪರಂಪರೆಯನ್ನು ಮುಂದುವರಿಸಿದರು. ಪ್ರಸ್ತುತದಲ್ಲಿ, 'ಶೃಂಗೇರಿ ಮಠಕ್ಕೆ ಸಂಬಂಧಿಸಿದ ಆಕರ ಸಾಮಗ್ರಿಗಳಲ್ಲಿ ಕೆಳದಿ ನಾಯಕರ ಕಾಲದ ಮಠ ಮತ್ತು ದೇವಸ್ಥಾನಗಳ ಉಲ್ಲೇಖ', ಎಂಬ ವಿಷಯದ ವಿವೇಚನೆ ಅಗತ್ಯ. ಮಠ ಮತ್ತು ದೇವಾಲಯಗಳ ನಿರ್ಮಾಣ, ವಾಸ್ತುಶಿಲ್ಪ ಮತ್ತು ಶಿಲ್ಪಕಲೆಯನ್ನು ಕುರಿತು ಚಾರಿತ್ರಿಕ ದಾಖಲೆಗಳು ಹೆಚ್ಚಿನ ಬೆಳಕು ಬೀರದಿದ್ದರೂ, ಕೆಳದಿ ನಾಯಕರ ಕಾಲದ (ಕ್ರಿ.ಶ. ೧೪೯೯ - ಕ್ರಿ.ಶ. ೧೭೬೩) ಮಠ ಮತ್ತು ದೇವಸ್ಥಾನಗಳ ಚರಿತ್ರೆ ಕುರಿತು ಮಾಹಿತಿ ನೀಡುತ್ತವೆ. ಕೆಳದಿ ನಾಯಕರ ಕಾಲದಲ್ಲಿ ಮಠ ಮತ್ತು ದೇವಸ್ಥಾನಗಳ ನಿರ್ಮಾಣ, ವಾಸ್ತುಶಿಲ್ಪ, ಕಲೆ, ಇವುಗಳನ್ನು ಅರಿಯುವುದರ ಜೊತೆಗೆ, ಈ ಧಾರ್ಮಿಕ ಸಂಸ್ಥೆಗಳ ಚರಿತ್ರೆಯ ಮೇಲೆ ಬೆಳಕು ಬೀರುವ ಆಕರ ಸಾಮಗ್ರಿಗಳ ಅಧ್ಯಯನವೂ ಅಷ್ಟೇ ಅರ್ಥಪೂರ್ಣವಾದುದು. ಪ್ರಸ್ತುತದಲ್ಲಿ, ದೃಷ್ಟಾಂತಕ್ಕಾಗಿ ಕೆಲವೇ ಆಕರಗಳನ್ನು ಪರಿಚಯಿಸ ಲಾಗಿದೆ.

ಕೆಳದಿ ನಾಯಕರಲ್ಲಿ ಘನವಂತನಾದ ದೊಡ್ಡಸಂಕಣ್ಣ ನಾಯಕನ ಪುತ್ರ ಹಿರಿಯ ವೆಂಕಟಪ್ಪನಾಯಕನು (ಕ್ರಿ.ಶ. ೧೫೮೨-೧೬೨೯) ವಿಜಯನಗರ ಪತನಾನಂತರ ಮುಂದೆ ಕೆಳದಿಯ ಸ್ವತಂತ್ರ ದೊರೆಯಾದನು. ಕ್ರಿ.ಶ. ೧೬೨೩ರಲ್ಲಿ ಇಕ್ಕೇರಿಯನ್ನು ಸಂದರ್ಶಿಸಿದ ಇಟಲಿಯ ಪ್ರವಾಸಿ ಪೆಟ್ರೊ ಡೆಲ್ಲಾವಲ್ಲೆ ಕೂಡ ವೆಂಕಟಪ್ಪ ನಾಯಕನ ಘನತೆಯನ್ನು ಉಲ್ಲೇಖಿಸಿದ್ದಾನೆ.[೧] ವೆಂಕಟಪ್ಪನು ಸರ್ವಧರ್ಮಗಳನ್ನು ಸಮಾನವಾಗಿ ಪೋಷಿಸಿದನೆನ್ನಲು ಕೆಲವು ಉದಾಹರಣೆಗಳನ್ನು ಗಮನಿಸಬಹುದಾಗಿದೆ. ಈತನು ಶೃಂಗೇರಿ ಮಠದ ಪ್ರಥಮ ಶ್ರೀ ಅಭಿನವ ನರಸಿಂಹಭಾರತೀ ಸ್ವಾಮಿಗಳನ್ನು (ಕ್ರಿ.ಶ. ೧೫೯೯-೧೬೨೨) ಇಕ್ಕೇರಿಯ ತನ್ನ ಆಸ್ಥಾನಕ್ಕೆ ಬರಮಾಡಿಕೊಂಡು, ಗೌರವಿಸಿ, ಉಡುಗೊರೆ ಸಲ್ಲಿಸಿದನು.

ಘನವಿದ್ವಾಂಸರಾದ ಅಭಿನವ ನರಸಿಂಹ ಭಾರತಿಗಳು 'ಶಿವಗೀತೆ'ಯ ಮೇಲೆ ಭಾಷ್ಯ ರಚಿಸಿದರು.[೨] ತಮ್ಮ ಗುರುಗಳ ಸ್ಮರಣಾರ್ಥವಾಗಿ ಅಭಿನವ ನರಸಿಂಹ ಭಾರತಿಗಳು 'ನರಸಿಂಹಪುರ' ಎಂಬ ಅಗ್ರಹಾರವನ್ನು ನಿರ್ಮಿಸಿದರು.[೩] ಸ್ವಾಮಿಗಳ ವಸತಿಗಾಗಿ

* ಟಿ.ಎನ್.ಎಸ್. ರೈಸ್‌ಮಿಲ್ ಕೆಳಗೆ, ಸಿರಸಿ, ಉತ್ತರ ಕನ್ನಡ ಜಿಲ್ಲೆ - ೫೮೧ ೪೦೨

ವೆಂಕಟಪ್ಪನು ಶೃಂಗೇರಿಯಲ್ಲಿಯ ಮಠದ ಕಟ್ಟಡವನ್ನು ವಿಸ್ತರಿಸಿದನು.[೪] ಇದಲ್ಲದೆ, ಅಗ್ರಹಾರವನ್ನು ನಿರ್ಮಿಸಿ, ೫೦ ಪಗೋಡಗಳಿಗಿಂತಲೂ ಹೆಚ್ಚು ಉತ್ಪತ್ತಿಯುಳ್ಳ ಮುಕ್ಕರ ನಾಡಿನ ಭೂಮಿಯನ್ನು ದಾನ ಮಾಡಿದನು.[೫] ಈ ಸತ್ಕಾರ್ಯಕ್ಕಾಗಿ ನಾಯಕನಿಗೆ "ಶೃಂಗೇರಿಯ ಪ್ರತಿಷ್ಠಾಪಕ" ಎಂಬ ಪ್ರಶಸ್ತಿ ದೊರೆಯಿತು.[೬] ಇದಲ್ಲದೆ, ಗುರುಗಳಿಂದ ಈತನಿಗೆ "ವಿಶುದ್ಧ ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪಕ" ಎಂಬ ಬಿರುದೂ ದೊರೆಯಿತು.[೭] ಈ ರೀತಿಯಾಗಿ ಹಿರಿಯ ವೆಂಕಟಪ್ಪನಾಯಕನು ಮಠದ ಸ್ಥಿತಿಗತಿಗಳನ್ನು ಸುಧಾರಿಸಿ ಕೀರ್ತಿ ಸಂಪಾದಿಸಿದನೆಂದೂ 'ಕೆಳದಿ ನೃಪವಿಜಯಂ'ದಲ್ಲಿ ಉಲ್ಲೇಖಿಸಲಾಗಿದೆ.[೮] ಪರಧರ್ಮ ಸಹಿಷ್ಣುವಾದ ನಾಯಕನು ರಾಮಾನುಜ ಪಂಥದ ಮಠಕ್ಕೆ ಹಾಗೂ ಶ್ರೀ ವೆಂಕಟೇಶ ದೇವರಿಗೆ ಭೂಮಿಯನ್ನು ಉಂಬಳಿಯಾಗಿ ಬಿಟ್ಟನು.[೯] ಅದೇ ರೀತಿ, ಭುವನಗಿರಿದುರ್ಗದ ಮುಸಲ್ಮಾನರ ಮಸೀದಿಯೊಂದಕ್ಕೂ ದಾನ ಮಾಡಿದನು.[೧೦]

ಕೆಳದಿ ವೆಂಕಟಪ್ಪನಾಯಕನ ಪೌತ್ರನಾದ, ಭದ್ರಪ್ಪನಾಯಕನ ಪುತ್ರರಾದ ವೀರಭದ್ರನಾಯಕನು ಶಾಲಿವಾಹನ ಶಕವರ್ಷ ೧೫೫೨ನೇ ಶುಕ್ಲ ಸಂವತ್ಸರದ ಪುಷ್ಯ ಶು. ೧೦ಯಂದು ಶೃಂಗೇರಿಯ ಶ್ರೀ ಸಚ್ಚಿದಾನಂದಭಾರತೀ ಸ್ವಾಮಿಗಳಿಗೆ ಪಟ್ಟಗುಪ್ಪೆ ಹೊಳೆ ಬಳಿಯ ಮನೆವಾರ್ತೆ ವೆಂಕಣ್ಣನು ಕಟ್ಟಿಸಿದ ಮಠವನ್ನು ಸಮರ್ಪಿಸಿ, ಆ ಮಠದ ದೇವಪೂಜೆ, ಅಮೃತಪಡಿ ಮತ್ತು ನಂದಾದೀಪ್ತಿಗಾಗಿ ಪಟ್ಟಗುಪ್ಪೆ ಸೀಮೆಯೊಳಗಿನ ಚೌಡೀಸೆಟ್ಟಿ ಕೊಪ್ಪದ ಗ್ರಾಮದಲ್ಲಿಯ ಭೂಮಿಯನ್ನು ಶಿಷ್ಯ ಪರಂಪರೆಯಾಗಿ ಮಠಧರ್ಮಕ್ಕೆ ನಡೆಸಿಕೊಂಡು ಬರುವಂತೆ ಸರ್ವಮಾನ್ಯವಾಗಿ ನೀಡಿದನೆಂದು ತಾಮ್ರ ಶಾಸನದ ಪ್ರತಿಯಿಂದ ತಿಳಿದುಬರುತ್ತದೆ.[೧೧]

ಕೆಳದಿ ಸಂಸ್ಥಾನದಲ್ಲಿ ಅತ್ಯಂತ ಪ್ರಸಿದ್ಧನಾದ ಶಿವಪ್ಪನಾಯಕನು (ಕ್ರಿ.ಶ. ೧೬೪೫-೧೬೬೦) ಶೃಂಗೇರಿ ಮಠವನ್ನು ರಕ್ಷಿಸಿ ದಾನ ಧರ್ಮಾದಿಗಳನ್ನು ಮಾಡಿದನು. ಪ್ರಥಮ ಶ್ರೀ ಸಚ್ಚಿದಾನಂದಭಾರತೀ ಸ್ವಾಮಿಗಳವರು (ಕ್ರಿ.ಶ. ೧೬೨೨-೧೬೬೩) ಶಿವಪ್ಪನಾಯಕನ ಸಮಕಾಲೀನರು. ಶೃಂಗೇರಿ ಸಂಸ್ಥಾನದ ಕೆಲವು ಗೇಣಿದಾರರು ಮಠಕ್ಕೆ ಕಾಲಕಾಲಕ್ಕೆ ಗೇಣಿಯನ್ನು ಸರಿಯಾಗಿ ಸಲ್ಲಿಸದೇ ಇದ್ದುದರಿಂದ, ವಿಷಯವನ್ನು ತಿಳಿದ ನಾಯಕನು, ವಿಚಾರಣೆ ಮಾಡಿ, ಇಂತಹ ಅಕಾರ್ಯಗಳನ್ನು ನಿಲ್ಲಿಸಿದ್ದಲ್ಲದೇ, ಮಠಕ್ಕೆ ನ್ಯಾಯವಾಗಿ ದೊರೆಯಬೇಕಾದ ಭೂಮಿಯನ್ನು ದೊರಕಿಸಿಕೊಟ್ಟನು. ಶ್ರೀ ಮಲ್ಲಿಕಾರ್ಜುನ, ಶ್ರೀ ವಿದ್ಯಾಶಂಕರ, ಶ್ರೀ ಸರಸ್ವತಿ ಮೊದಲಾದ ದೇವತಾ ಸೇವೆ ಮತ್ತು ಅನ್ನಧರ್ಮವನ್ನು ಸಾಂಗವಾಗಿ ನಡೆಸಿಕೊಂಡು ತನ್ನನ್ನು ಆಶೀರ್ವದಿಸುವಂತೆ ಶಿವಪ್ಪನಾಯಕನು ಗುರುಗಳಲ್ಲಿ ಪ್ರಾರ್ಥಿಸಿಕೊಂಡನು.[೧೨]

ಪೂರ್ವದಲ್ಲಿ ಶೃಂಗೇರಿಯ ಶ್ರೀ ವಿದ್ಯಾರಣ್ಯ ಶ್ರೀಪಾದಂಗಳಿಗೆ ವಿಜಯನಗರದ ಹರಿಹರ ಮಹಾರಾಜರು ಶೃಂಗಪುರದಲ್ಲಿ ೧೫೦ ವೃತ್ತಿಯನ್ನು ಬ್ರಾಹ್ಮಣರಿಗೆ ಅಗ್ರಹಾರವನ್ನಾಗಿ ಮಾಡಿ ಸಮರ್ಪಿಸಿದಲ್ಲಿ, ಕಾಲವಶದಿಂದ ವಿಷಕಲಿತವಾಗಿ, ಪ್ರಜಾಧರ್ಮದವರು ಆ ಭೂಮಿಗಳಲ್ಲಿ ಪೂಗಾರಾಮಗಳ ಹಾಕಿಕೊಂಡು, ಅನ್ಯೋನ್ಯ ಆದಿಕ್ರಯಾದಿಗಳನ್ನು ಮಾಡಿಕೊಂಡು ಅನುಭವಿಸಿ ಬರುತ್ತಿದ್ದಲ್ಲಿ ಮತ್ತು ಶೃಂಗೇರಿ ಧರ್ಮಸಂಸ್ಥಾನವನ್ನು ಕೆಳದಿ ಶಿವಪ್ಪನಾಯಕನು ಪರಿರಕ್ಷಿಸಿಕೊಂಡು ಬರುವ ಸಮಯದಲ್ಲಿ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳು ಭೂಮಿಗಳನ್ನು ವಿಚಾರಿಸಿ ಪುನರುದ್ಧಾರವ ಮಾಡಿ ಯಥಾಪ್ರಕಾರ ಅಗ್ರಹಾರ ಮಾಡಬೇಕೆಂದು ನಾಯಕನಲ್ಲಿ ಹೇಳಿಕೊಂಡಾಗ, ಶಿವಪ್ಪನಾಯಕನು ಅದೇ ಪ್ರಕಾರ ಮಾಡಲಾಗಿ, ಸ್ವಾಮಿಗಳು ಶಾ.ಶ. ೧೫೭೪, ನಂದನ ಸಂವತ್ಸರದ ಭಾದ್ರಪದ ಶು. ೧೫ ಯಂದು ಶೃಂಗಪುರದ ಮೊದಲು ಮನೆಯ ರಾಮಚಂದ್ರ ವಾರಣಾಸಿಗಳಿಗೆ ಪಾಲಿಸಿದ ಭೂದಾನ ಪಟ್ಟೆಯು, ಅಗ್ರಹಾರದ ಪುನಃನಿರ್ಮಾಣಕ್ಕೆ ಸಂಬಂಧಿಸಿದ ಮಹತ್ವದ ದಾಖಲೆಯಾಗಿದೆ.[೧೩]

ಶೃಂಗೇರಿ ಮಠದ ಧರ್ಮಕ್ಕೆ ಮುಕ್ಕರನಾಡು ಸೀಮೆಯೊಳಗೆ ಬಿಟ್ಟ ಗ್ರಾಮ ಸರ್ವಮಾನ್ಯವಾಗಿರುವದರಿಂದ ಆ ಸೀಮೆಯ ಮಣೆಯಗಾರ ಹಣಕಾಸು ಕೇಳದೇ ನಿರುಪದ್ರವದಲ್ಲಿ ನಡೆಸಬೇಕಾಗಿ, ಮೊದಲನೆಯ ಸೋಮಶೇಖರ ನಾಯಕನ ಪತ್ನಿ ರಾಣಿ ಚೆನ್ನಮ್ಮಾಜಿಯು ಪ್ರಜೋತ್ಪತ್ತಿ (ಕ್ರಿ.ಶ. ೧೬೯೨) ಸಂವತ್ಸರದಲ್ಲಿ ಅಹೋಬಲರಾಯರಿಗೆ ಬರೆಸಿ ಕಳುಹಿದ ಕಾರ್ಯ[೧೪] ಮತ್ತು ಅದೇ ಸಂವತ್ಸರದಲ್ಲಿ ಶೃಂಗೇರಿ ಶಾರದಾಮ್ಮನವರ ನಿತ್ಯ ನೈವೇದ್ಯ, ತುಪ್ಪದ ನಂದಾದೀಪ ಮತ್ತು ಉಪಾಧಿ ಬಗ್ಗೆ, ತಮ್ಮ ಅಜ್ಜ ಕೊನೆರಿಭಟ್ಟರಿಗೆ ಚೆನ್ನಮ್ಮಾಜ್ಜಿಯು ಪಾಲಿಸಿದ ದಾನಪಟ್ಟೆಯನ್ನು, ತಾನು ಶಿವಾರ್ಪಿತವಾಗಿ ಧಾರೆಯನೆರೆದುದಾಗಿ ಕೊನೆರಿಭಟ್ಟನು ಸೋಮಶೇಖರಪುರ ಅಗ್ರಹಾರದ ವಿದ್ವನ್ ಮಹಾಜನಂಗಳಿಗೆ ಬರಕೊಟ್ಟ ವಾಲೆ,[೧೫] ಇವು ರಾಣಿ ಚೆನ್ನಮ್ಮಾಜಿಯು ಶೃಂಗೇರಿಮಠ ಮತ್ತು ಶಾರದಾಂಬೆಯ ಬಗ್ಗೆ ಇರಿಸಿಕೊಂಡ ಭಕ್ತಿ ಮತ್ತು ಗೌರವಕ್ಕೆ ನಿದರ್ಶನಗಳಾಗಿವೆ.

ಶೃಂಗೇರಿಯ ಶ್ರೀ ಶಾರದಾಂಬಾ ದೇವಸ್ಥಾನದ ಜೀರ್ಣೋದ್ಧಾರ ಮತ್ತು ದೇವಸ್ಥಾನಕ್ಕೆ ಸುವರ್ಣ ಕಲಶ ಸ್ಥಾಪನೆಗೆ ಸಂಬಂಧಿಸಿ ಕಡತಗಳಲ್ಲಿ ಉಲ್ಲೇಖಿಸಲಾಗಿದೆ. ಶೃಂಗೇರಿ ಮೂರು ಸಾವಿರ ಸೀಮೆಯ ಪ್ರಜೆಗಳು ಮತ್ತು ದೇಶ ಹೆಬ್ಬಾರಕ್ಕಳು ಶಾರದಮ್ಮನವರ ದೇವಸ್ಥಾನದ ಜೀರ್ಣೋದ್ಧಾರದ ಕೆಲಸಕ್ಕಾಗಿ ಗದ್ಯಾಣ ॥ ೩ ॥ = ೦ ನ್ನು ಕಂತುಪ್ರಮಾಣ, ಚಕ್ರದ ಹಣ ನಿಲವಾಗದ ರೀತಿ ಸಂದಾಯ ಮಾಡಿ ಕೊಡುವದಾಗಿ ಶ್ರೀಮಠದ ಭಂಡಾರಕ್ಕೆ ಪಿಂಗಳ ಸಂವತ್ಸರದಲ್ಲಿ (ಕ್ರಿ.ಶ. ೧೭೩೮) ಬಿನ್ನವತ್ತಳೆಯನ್ನು ಅರ್ಪಿಸಿದರು.[೧೬] ಶೃಂಗೇರಿಯ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳವರು, ಶಾರದಾಮ್ಮನವರ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿ, ಶಿಲಾಮಯದಲ್ಲಿ ದೇವಸ್ಥಾನ ಕಟ್ಟಿಸಿ, ಪ್ರತಿಷ್ಠೆಯ ಕಾಲದಲ್ಲಿ ಜಾನಕಿರಾಮಾ ಶಾಸ್ತ್ರಿಗಳಿಗೆ ೬ ಗದ್ಯಾಣಗಳ ಸ್ವಾಸ್ಥೆ ಮತ್ತು ಅಮ್ಮನವರ ಸನ್ನಿಧಿಯಲ್ಲಿ ನಿತ್ಯದಲ್ಲಿ ನಡೆಯುವ ಲಲಿತಾ ಸಹಸ್ರ ನಾಮ ಉಪಾಧಿಗಾಗಿ ಸಂಬಳ ಗ.೬, ಉಭಯಂ ೧೨ ವರಹಗಳ

ಸ್ವಾಸ್ಥೆಯನ್ನು ಶಾ.ಶ. ೧೬೫೯ (ಕ್ರಿ.ಶ. ೧೭೩೮)ರಲ್ಲಿ ಪಾಲಿಸಿದರು.[೧೭]

ಸಿರಿ ಕರಡಿಗ್ರಾಮದ ಒಕ್ಕಲುಗಳಿಂದ ಭುವನಗಿರಿ ದುರ್ಗದ ಕೋಟೆ ಕಟ್ಟಿಸದಂತೆ ಅಪ್ಪಣೆಯಾಗಿರುವದರಿಂದ, ಆ ಸಿರಿ ಕರಡಿ ಗ್ರಾಮದ ಒಕ್ಕಲುಗಳು ದುರ್ಗವ ಕಟ್ಟಬೇಕೆಂದು ವರಾತಮಾಡದ ಹಾಗೆ ತಾಕಿತಿ ಮಾಡುವದಾಗಿ ಶಿವಪ್ಪನು ಕಾವಡಿ ತಿಮ್ಮಣ್ಣಗೆ ಬರೆದ ಆಶೀರ್ವಾದ ಪತ್ರಿಕೆಯು, ಭುವನಗಿರಿ ದುರ್ಗದ ಕೋಟೆಯ ನಿರ್ಮಾಣಕ್ಕೆ ಸಂಬಂಧಿಸಿದ ಮಹತ್ವದ ಸಂಗತಿಯಾಗಿದೆ. ಕೋಟೆಯ ನಿರ್ಮಾಣಕ್ಕೆ ಸಂಬಂಧಿಸಿ ಹೆಚ್ಚಿನ ಮಾಹಿತಿ ದೊರೆಯದಿದ್ದರೂ ಸುಮಾರು ಕ್ರಿ.ಶ. ೧೭೪೭ರ ಈ ದಾಖಲೆಯು ಭುವನಗಿರಿ ದುರ್ಗದ ಕೋಟೆಯ ನಿರ್ಮಾಣದ ಪ್ರಾರಂಭಿಕ ಹಂತದ ಬೆಳವಣಿಗೆಯನ್ನು ಸೂಚಿಸುತ್ತದೆ.[೧೮]

ಶೃಂಗೇರಿಯ ಶ್ರೀ ಶಾರದಮ್ಮನವರ ದೇವಸ್ಥಾನಕ್ಕೆ ಸುವರ್ಣ ಕಲಶ ಸ್ಥಾಪನೆ ಮತ್ತು ಆ ಕೆಲಸಕ್ಕಾಗಿ ಹಣ ಸಂದಾಯ, ಇವುಗಳಿಗೆ ಸಂಬಂಧಿಸಿದ ದಾಖಲೆಯೊಂದನ್ನು ಕಡತದಲ್ಲಿ ಉಲ್ಲೇಖಿಸಲಾಗಿದೆ. ಶಾರದಮ್ಮನವರ ದೇವಸ್ಥಾನಕ್ಕೆ ಸುವರ್ಣ ಕಲಶ ಸ್ಥಾಪನೆಗಾಗಿ, ಬಾಣಾವರ ಗರುಡಗಿರಿ ಸೀಮೆಯಲ್ಲಿರುವ ಮಹಾಜನಂಗಳಿಂದ ಮತ್ತು ಗೃಹಸ್ಥರಿಂದ ಬರತಕ್ಕ ಹಣವನ್ನು ಬರಮಾಡಿಸಿ, ಕಂಠೀ ರಾಯನು, ಗ. ೧೦೦ (ನೂರು ವರಹಗಳು) ನ್ನು ಗಂಟು ಕಟ್ಟಿಸಿ ವೆಂಕಟೇಶ್ವರ ಶೌತ್ರಿಗಳ ವಶಕ್ಕೆ ಕೊಟ್ಟು ಸಾಗಿಸಿ ಕಳುಹಿಸಿರುವದಾಗಿ, ಬಾಣಾವರದ ವಿದ್ವನ್ ಮಹಾಜನಂಗಳು ಮತ್ತು ಗೃಹಸ್ಥರು ಸು. ಕ್ರಿ.ಶ. ೧೭೫೬ರಲ್ಲಿ ಶೃಂಗೇರಿ ಸ್ವಾಮಿಗಳಿಗೆ (ಪ್ರಥಮ ಶ್ರೀ ಅಭಿನವ ಸಚ್ಚಿದಾನಂದ ಭಾರತೀ-ಕ್ರಿ.ಶ. ೧೭೪೧-೧೭೬೭) ಬಿನ್ನವತ್ತಳೆಯನ್ನು ಸಮರ್ಪಿಸಿದರು.[೧೯] ಶಾ.ಶ. ೧೭೫೨ (ಕ್ರಿ.ಶ. ೧೮೩೧) ರಲ್ಲಿ, ಹದಿನೆಂಟು ಸೇರು, ಎಂಟು ವರಹ ಮತ್ತು ಆರುಮುಕ್ಕಾಲು ಹಣ ತೂಕದ ಚಿನ್ನದ ಪ್ರಭಾವಳಿಯನ್ನು ಮಾಘ ಶು. ೧೪, ಸ್ಥಿರವಾರ, ಸೂರ್ಯ ಉದಯವಾದ ಘಳಿಗೆ ೬ಕ್ಕೆ, ಮೀನ ಲಗ್ನದಲ್ಲಿ, ಶ್ರೀ ಶಾರದಮ್ಮನವರಿಗೆ ಸಮರ್ಪಣೆಯಾದ ಸಂಗತಿ, ಕಡತದ ದಾಖಲೆಯೊಂದರಲ್ಲಿ ಉಲ್ಲೇಖವಾಗಿದೆ.[೨೦]

ಕೆಳದಿಯ ಸೋಮಶೇಖರ ನಾಯಕರು (ವೀರಮ್ಮಾಜಿಯ ದತ್ತಕ ಪುತ್ರ) ಕ್ರಿ.ಶ. ೧೭೫೭ರಲ್ಲಿ, ಚೆನ್ನವೀರ ರಾಜೇಶ್ವರದೇವರು ಮತ್ತು ರತ್ನಮಯ ವೇಣುಗೋಪಾಲ ಕೃಷ್ಣದೇವರಿಗೆ ಅಮೃತಪಡಿ, ನಂದಾದೀಪ ಮುಂತಾದ ದೇವತಾ ಸೇವೆಯ ಬಗ್ಗೆ ಶೃಂಗೇರಿಯ ಅಭಿನವ ಸಚ್ಚಿದಾನಂದ ಭಾರತೀ ಸ್ವಾಮಿಗಳವರಿಗೆ ಮುನ್ನೂರು ಅರವತ್ತು ವರಹ, ನಾಲ್ಕು ಹಣವಿನ ಸ್ವಾಸ್ಥೆಯನ್ನು ಶಿವಾರ್ಪಿತವಾಗಿ ಉತ್ತರವಾಗಿ ನೀಡಿದರು.[೨೧] ಶ್ರೀಮದ್ ಅಭಿನವ ಸಚ್ಚಿದಾನಂದ ಭಾರತಿಗಳು ಬಿದರೂರಿಗೆ ಬಂದಾಗ ಸೋಮಶೇಖರ ನಾಯಕರ ತಾಯಿ ಚೆನ್ನವೀರಮ್ಮಾಜಿಯವರು, ಚೆನ್ನವೀರ ರಾಜೇಶ್ವರ ದೇವರು ಮತ್ತು ರತ್ನಮಯ ವೇಣುಗೋಪಾಲಕೃಷ್ಣ ದೇವರಿಗೆ ಅಮೃತಪಡಿ, ನಂದಾದೀಪ ಮುಂತಾದ ದೇವತಾ ಸೇವೆಯ ಬಗ್ಗೆ ಉತ್ತಾರವ ಕೊಟ್ಟದ್ದೂ ಪ್ರಸ್ತುತ ದಾಖಲೆಯಲ್ಲಿ ಉಲ್ಲೇಖಗೊಂಡಿದೆ.

ಕೆಳದಿಯ ಮುಮ್ಮಡಿ ಸೋಮಶೇಖರ ನಾಯಕನು ಶೃಂಗೇರಿ ವಿದ್ಯಾಶಂಕರ ದೇವರಿಗೆ ಮತ್ತು ಕೊಡೆಯಾಲದ ಪೇಟೆಯಲ್ಲಿಯ ದಾಮೋದರ ದೇವರಲ್ಲಿಗೆ ಎಂಟು ವರಹ, ಐದು ಹಣ, ಮುಪ್ಪಾಗ ಮತ್ತು ಬೇಳೆಯ ಸ್ವಾಸ್ಥೆಯನ್ನು ಈಶ್ವರ (ಕ್ರಿ.ಶ. ೧೭೫೭) ಸಂವತ್ಸರದಲ್ಲಿ ಶಿವಾರ್ಪಿತವಾಗಿ ನೀಡುವಂತೆ ನಂಬಿಯಣ್ಣಗೆ ನಿರೂಪ ಬರೆಸಿದನು.[೨೨]

ಬಿದರೂರಿಂದ ಬೆಟ್ಟದ ಮಲ್ಲಿಕಾರ್ಜುನ ದೇವರ ಸನ್ನಿಧಿಯಲ್ಲಿ ಕಾಲು ಮಂಡಲ ಪರ್ಯಂತ ಪರ್ಜನ್ಯ ಮಾಡಿಸುವ ಬಗ್ಗೆ ಬಹುಧಾನ್ಯ (ಕ್ರಿ.ಶ. ೧೭೫೮) ಸಂವತ್ಸರದಲ್ಲಿ ಶೃಂಗೇರಿ ಮಠಕ್ಕೆ ಬಂದ ಕಾಗದದಲ್ಲಿಯ ಅಂಶಗಳಿಂದ, ಬೆಟ್ಟದ ಮಲ್ಲಿಕಾರ್ಜುನ ದೇವರಿಗೆ ಪರ್ಜನ್ಯ ಮಾಡಿಸುವ ಸಂಪ್ರದಾಯ ಮೊದಲಿನಿಂದಲೂ ಇತ್ತೆಂಬುದು ಸ್ಪಷ್ಟವಾಗುತ್ತದೆ.[೨೩]

ಜಗದ್ಗುರು ಪರಂಪರೆಯಲ್ಲಿ ಇಪ್ಪತ್ತೆಂಟನೆಯವರಾದ ಪ್ರಥಮ ಶ್ರೀ ಅಭಿನವ ಸಚ್ಚಿದಾನಂದ ಭಾರತೀ ಸ್ವಾಮಿಗಳು (ಕ್ರಿ.ಶ. ೧೭೪೧-೧೭೬೭) ಭುವನಗಿರಿ ದುರ್ಗದ ಮಹಂತಿನ ಮಠದಲ್ಲಿ ಇರುವ ಚಾವಡಿ ವಿನಾಯಕ ದೇವರ ಅಮೃತಪಡಿ ಮತ್ತು ನಂದಾದೀಪದ ಬಗ್ಗೆ ದುರ್ಗದ ಮಠದ ಸ್ವಾಸ್ಥೆಯೊಳಗಿನ ಶಂಕರಮಠದ ಯಲ್ಲಗೊಂಡನ ಪಾಲಿನ ಭೂಮಿಯನ್ನು ಶಾ.ಶ. ೧೬೮೪ (ಕ್ರಿ.ಶ. ೧೭೬೩)ರಲ್ಲಿ ಪಾಲಿಸಿದರು.[೨೪]

ಈ ರೀತಿಯಾಗಿ, ಶೃಂಗೇರಿ ಮಠದ ಕಡತಗಳಲ್ಲಿ, ಕೆಳದಿನಾಯಕರ ಕಾಲದ ಮಠ ಮತ್ತು ದೇವಾಲಯಗಳ ರಕ್ಷಣೆ ಮತ್ತು ಪೋಷಣೆ ಆದದ್ದು ಸ್ಫುಟವಾಗಿ ಮೂಡಿಬಂದಿವೆ. ಶೃಂಗೇರಿ, ಸ್ವರ್ಣವಲ್ಲಿ, ರಾಮಚಂದ್ರಾಪುರ, ನೆಲೆಮಾವು, ಗೋಕರ್ಣ, ಸೋದೆ ಹಯಗ್ರೀವ, ಪಲಿಮಾರು, ಅದಮಾರು, ನೆರಂಬಳಿ, ಪೇಜಾವರ, ತೀರ್ಥಹಳ್ಳಿ, ಮುಳವಾಗಿಲ, ರಾಮಾನುಜ, ಶ್ರೀ ಯೋಗೀಶ್ವರ, ಶ್ರೀ ಯೋಗೀಂದ್ರ, ವೀರ ಮಹೇಶ್ವರ, ವಿರಕ್ತ ಮಹಂತಿನ ಮಠ ಮುಂತಾದ ಅನೇಕ ಮಠಗಳನ್ನು ಉಲ್ಲೇಖಿಸಲಾಗಿದೆ.[೨೫] ಕೆಳದಿಯ ನಾಯಕರಾದ ವೆಂಕಟಪ್ಪ, ವೀರಭದ್ರ, ಶಿವಪ್ಪ, ಭದ್ರಪ್ಪ, ಸೋಮಶೇಖರ, ಚೆನ್ನಮ್ಮಾಜಿ, ಇಮ್ಮಡಿ ಸೋಮಶೇಖರ, ಬಸವಪ್ಪ, ಚೆನ್ನಬಸವಪ್ಪ ಮತ್ತು ಮುಮ್ಮಡಿ ಸೋಮಶೇಖರ ನಾಯಕರು ಶೃಂಗೇರಿ ಮಠದ ಧರ್ಮಕ್ಕಾಗಿ ಮತ್ತು ಅಲ್ಲಿಯ ದೇವಸ್ಥಾನಗಳಲ್ಲಿಯ ಸಪರ್ಯಗಳಿಗಾಗಿ ಭೂದಾನ ಮಾಡಿ ಅವುಗಳನ್ನೆಲ್ಲ ರಕ್ಷಿಸಿ, ಪೋಷಿಸಿದ್ದು ಕಡತಗಳಲ್ಲಿಯ ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ನಾಯಕರ ಕಾಲದ ದೇವಾಲಯಗಳ ವಾಸ್ತುಶಿಲ್ಪ ಮತ್ತು ಕಲೆಯನ್ನು ಅಧ್ಯಯನ ಮಾಡುವ ಪೂರ್ವದಲ್ಲಿ, ಚಾರಿತ್ರಿಕ ಅಂಶಗಳ ಮೇಲೆ ವಿಶೇಷವಾಗಿ ಬೆಳಕು ಚೆಲ್ಲುವ ಶೃಂಗೇರಿ ಮಠದ ಕಡತಗಳನ್ನು ಪರಿಶೀಲಿಸುವದು ಹೆಚ್ಚು ಸಮಂಜಸ.[೨೬]



***

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಪೆಟ್ರೋಡೆಲ್ಲಾವಲ್ಲೆ, 'ದಿ ಟ್ರಾವೆಲ್ಸ್ ಇನ್ ಇಂಡಿಯಾ', (ಜಿ. ಹ್ಯಾವರ್ಸ್‌ರವರ ೧೯೬೪ರ ಹಳೆಯ ಇಂಗ್ಲಿಷ್ ಭಾಷಾಂತರ,) ಎಡ್‌ವರ್ಡ್ ಗ್ರೆ, ಲಂಡನ್, ೧೮೯೨, ಸಂ. ೧, ಪು. ೧೯೧.
೨. ಇ.ಸಿ. **(ಎಪಿಗ್ರಾಫಿಯಾ ಕರ್ನಾಟಕಾ)**, vi, ಶೃಂಗೇರಿ (ಎಸ್.ಜಿ.), ೨೨.
೩. ಅದೇ, ಎಸ್.ಜಿ. ೨; ಎಂ.ಎ.ಆರ್. (ಆನ್ಯುವಲ್ ರಿಪೋರ್ಟ್ ಆಫ್ ದಿ ಮೈಸೂರು ಆರ್ಕಿಯಲಾಜಿಕಲ್ ಡಿಪಾರ್ಟಮೆಂಟ್), ೧೯೩೩, ನಂ. ೨೨.
೪. **ಕೆ.ನೃ.ವಿ. (ಕೆಳದಿನೃಪ ವಿಜಯಮ್)**, ಸಂ. v, ನಂ. ೬೧, ಪು. ೮೨.
೫. ಇ.ಸಿ., vi, ಎಸ್.ಜಿ. ೫, ಎಸ್.ಜಿ.ಆರ್. ೧೧ (ಸಿಲೆಕ್ಷನ್ಸ್ ಫ್ರಾಮ್ ದಿ ರೆಕಾರ್ಡ್ಸ್ ಆಫ್ ದಿ ಶೃಂಗೇರಿ ಮಠ).
೬. ಇ.ಸಿ. vi, ಎಸ್.ಜಿ. ೫.
೭. ಗು.ವ.ಕಾ. **(ಗುರುವಂಶ ಕಾವ್ಯಂ)**, ಸ. x, ಶ್ಲೋ. ೧೬, ಪು. ೧೦೫.
೮. ಸ. v, ಶ್ಲೋ. ೭೪, ಪು. ೮೫.
೯. ಇ.ಸಿ., viii, ಎಸ್.ಜಿ. ೭೯.
೧೦. ಅದೇ ಗ್ರಂಥ, ಟಿ. ೧, ೩೮.
೧೧. ಕ. (ಕಡತ) ೭೨, ದಾ. (ದಾಖಲೆ) ೪೩.
೧೨. ಕ. ೫೦, ದಾ. ೫., ಎಸ್.ಜಿ.ಆರ್. ೧೨.
೧೩. ಕ. ೮೧, ದಾ. ೪೪.
೧೪. ಎಸ್.ಜಿ.ಆರ್. ೨೦.
೧೫. ಕ. ೨೫, ದಾ. ೮೭.
೧೬. ಕ. ೧೦೧, ದಾ. ೯೦.
೧೭. ಕ. ೮೪, ದಾ. ೬.
೧೮. ಕ. ೮೭, ದಾ. ೩೭.
೧೯. ಕ. ೪೫, ದಾ. ೮೨.
೨೦. ಕ. ೮, ದಾ. ೨೬.
೨೧. ಕ. ೪೫, ದಾ. ೧೦೫.
೨೨. ಕ. ೧೧೩, ದಾ. ೧೧೬.
೨೩. ಕ. ೪೫, ದಾ. ೧೧೬.
೨೪. ಕ. ೧೫೪, ದಾ. ೪೮.
೨೫. ಕ. ೨೫, ದಾ. ೫೨.
೨೬. ಪ್ರಸ್ತುತ ವಿಷಯಕ್ಕೆ ಸಂಬಂಧಿಸಿ ಹೆಚ್ಚಿನ ಮಾಹಿತಿಗಾಗಿ ಲೇಖಕರ ಈ ಕೆಳಗಿನ ಗ್ರಂಥಗಳನ್ನು ಓದಬಹುದು.
   i. **ಶೃಂಗೇರಿ ಧರ್ಮಸಂಸ್ಥಾನ**, ೧೯೮೩, ಶೃಂಗೇರಿ ಮಠ.
   ii. **ಎ ಹಿಸ್ಟರಿ ಆಫ್ ಶೃಂಗೇರಿ.**, ೧೯೯೮. ಕ.ವಿ. ಧಾರವಾಡ.
   iii. **ಶೃಂಗೇರಿ ಮಠದ ಕಡತಗಳಲ್ಲಿಯ ಆಯ್ದ ಚಾರಿತ್ರಿಕ ದಾಖಲೆಗಳು.**, ೨೦೦೩. ಕರ್ನಾಟಕ ರಾಜ್ಯ ಪತ್ರಾಗಾರ.
   iv. *ದ ರೆಕಾರ್ಡ್ಸ್ ಆಫ್ ದಿ ಶೃಂಗೇರಿ ಮಠ ರಿಲೇಟಿಂಗ್ ಟು ಕೆಳದಿ*, ೨೦೦೧. ಕೆಳದಿ ವಸ್ತು ಸಂಗ್ರಹಾಲಯ.
   ಸೂಚನೆ : ಕೆಳದಿ ನಾಯಕರ ಕಾಲದ ದೇವಾಲಯಗಳ ವಾಸ್ತು ಮತ್ತು ಶಿಲ್ಪಕಲೆ ಕುರಿತು ಹೆಚ್ಚಿನ ಸಂಶೋಧನೆ ಅಗತ್ಯ.

### ಕ.ಇ. ಅಕಾದೆಮಿಯ ೮ನೆಯ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೪)

*ಸಾಮಾನ್ಯವಾಗಿ ಹಸ್ತಪ್ರತಿಗಳು ಸಾಹಿತ್ಯ-ಶಾಸ್ತ್ರವನ್ನೊಳಗೊಂಡಿದ್ದರೂ ಅವು ಇತಿಹಾಸಕ್ಕೂ ಸಾಮಗ್ರಿಯನ್ನು ಒದಗಿಸುತ್ತವೆ ಎಂಬುದನ್ನು ಬೇರೆ ಹೇಳಬೇಕಿಲ್ಲ. ನನ್ನ ದೃಷ್ಟಿಯಲ್ಲಿ ಸಾಹಿತ್ಯ ಬೇರೆಯಲ್ಲ, ಇತಿಹಾಸ ಬೇರೆಯಲ್ಲ. ಸತ್ಯದ ವಾಸ್ತವ ರೂಪ ಇತಿಹಾಸ, ಕಲಾರೂಪ ಸಾಹಿತ್ಯ.*

**ಡಾ. ಎಂ. ಎಂ. ಕಲಬುರ್ಗಿ**
ಸಮ್ಮೇಳನಾಧ್ಯಕ್ಷರು

### ಕ.ಇ. ಅಕಾದೆಮಿಯ ೧೧ನೆಯ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ

*ನೀರಿನ ಸಮಸ್ಯೆಗೆ ಈಗ ನಮಗೆ ಹೊಳೆಯುವ ಪರಿಹಾರಗಳು - ಭಾರಿ ಅಣೆಕಟ್ಟುಗಳು ಮತ್ತು ಕೊಳವೆ ಭಾವಿಗಳು. ಭಾರೀ ಅಣೆಕಟ್ಟುಗಳನ್ನು ಎಲ್ಲಾ ಕಡೆಗಳಲ್ಲಿಯೂ ಕಟ್ಟುವುದಕ್ಕೆ ಸಾಧ್ಯವಿಲ್ಲ. ಎಲ್ಲಿ ಸಾಧ್ಯವೋ ಅಲ್ಲಿ ಕಟ್ಟಬೇಕು. ಆದರೆ ಈಚೆಗೆ ಅವುಗಳ ಬಗೆಗೆ ಜನರಲ್ಲಿ ಮೊದಲಿದ್ದ ಆಕರ್ಷಣೆ ಕಡಿಮೆಯಾದ ಹಾಗೆ ಕಾಣುತ್ತದೆ. ಕೆಲವು ಕಡೆ ವಿರೋಧವೂ ಕಂಡುಬರುತ್ತದೆ. ಇದಕ್ಕೆ ಕಾರಣ ಅವುಗಳ ನಿರ್ಮಾಣಕ್ಕೆ ಹಣದ ಹೊಳೆಯನ್ನು ಹರಿಸಬೇಕು. ಕಟ್ಟಲಿಕ್ಕೆ ಅನೇಕ ವರ್ಷಗಳು ಬೇಕು. ಅವುಗಳನ್ನು ಕಟ್ಟುವಾಗ ಎಷ್ಟೋ ಸಲ ಬಹು ಉಪಯುಕ್ತವಾದ ದಟ್ಟವಾದ ಕಾಡುಗಳು ನಾಶವಾಗುತ್ತವೆ. ಇವುಗಳ ಜೊತೆಗೆ ಅನೇಕ ಜನರು ತಮ್ಮ ಹೊಲಮನೆಗಳನ್ನು ಕಳೆದುಕೊಳ್ಳುತ್ತಾರೆ. ಮತ್ತು ಅವರ ಪುನರ್ವಸತಿ ಸುಲಭಸಾಧ್ಯವಲ್ಲ. ಆದ್ದರಿಂದ ಅಂಥವರು ಇವು ಬೇಡವೇ ಬೇಡವೆನ್ನುತ್ತಾರೆ. ಇಷ್ಟೆಲ್ಲಾ ಅಡಚಣೆಗಳಿದ್ದರೂ ಅವನ್ನು ಸರಿಪಡಿಸಿ ಅಣೆಕಟ್ಟುಗಳನ್ನು ಕಟ್ಟುವುದು ಅವಶ್ಯ. ನೀರಿನ ಸಮಸ್ಯೆಗೆ ಹೊಚ್ಚ ಹೊಸದಾದ ಪರಿಹಾರ ಕೊಳವೆ ಬಾವಿಗಳು. ಅವು ಕಡಿಮೆ ಖರ್ಚಿನಲ್ಲಿ ಶೀಘ್ರ ನಿರ್ಮಾಣವಾದರೂ, ಇತ್ತೀಚಿನ ದಿನಗಳಲ್ಲಿ ಅವುಗಳ ಆಳ ದಿನದಿನಕ್ಕೆ ಹೆಚ್ಚಾಗುತ್ತಾ ಹೋಗುತ್ತಿದೆ. ಅವುಗಳ ನಿರ್ಮಾಣ ಲಾಭ ನಷ್ಟ ಊಹಿಸುವಂತಿಲ್ಲ. ಅದೊಂದು ಲಾಟರಿ ಆಗಿದೆ. ಆದರೂ ಕೊಳವೆ ಭಾವಿಗಳ ಆಳ ಕಡಿಮೆ ಮಾಡುವ ಉಪಕ್ರಮ ಹುಡುಕಬೇಕೇ ಹೊರತು ಅವುಗಳನ್ನು ಕೈ ಬಿಡುವ ಹಾಗಿಲ್ಲ. ಈ ಉಪಕ್ರಮದಲ್ಲಿ ಹಳೆ ಕೆರೆಗಳ ಜೀರ್ಣೋದ್ಧಾರ ಮುಖ್ಯ. ಯಾಕೆಂದರೆ ಕೆರೆಗಳಿಂದಲೇ ಬಾವಿಗಳಲ್ಲಿ ನೀರು ಹೆಚ್ಚಾಗುವುದು. ಈ ಸಂಬಂಧವನ್ನು ನಮ್ಮ ಹಿರಿಯರು ಚೆನ್ನಾಗಿ ಅರಿತಿದ್ದರು.*

**ಡಾ. ಜಿ. ಎಸ್. ದೀಕ್ಷಿತ್**
ಸಮ್ಮೇಳನಾಧ್ಯಕ್ಷರು

ಡಾ. ಬಿ.ವಿ. ಸುಧಾಮಣಿ*

# ಶತಮಾನ ಪತ್ರಗಳಲ್ಲಿ ಸಂಕೇತಿ ಸಮಾಜ - ಒಂದು ಅವಲೋಕನ

*ಸಂಕೇತಿ ಸಮಾಜವು ೧೯-೨೦ನೇ ಶತಮಾನದ ಅವಧಿಯಲ್ಲಿ ಆಧುನೀಕರಣದ ಪ್ರಭಾವದ ನಡುವೆಯೂ ಸಂಪ್ರದಾಯವನ್ನು ಸಂಭಾಳಿಸಿದ ಸಂಯೋಜಿತ ಬದುಕನ್ನು ಬಾಳಿದ ಬಗೆ ಒಂದು ಸಾಂಸ್ಕೃತಿಕ ಯಶಸ್ಸು ಎಂಬಂತಾಗಿದೆ. ಇದು ಅವರಲ್ಲಿಯ ಕೌಟುಂಬಿಕ ವ್ಯವಹಾರಗಳ ಪತ್ರಗಳಿಂದ ಸುವ್ಯಕ್ತ. ಒಟ್ಟಿನಲ್ಲಿ ಇಂದಿಗೆ ಬದಲಾದ ಪರಿಸ್ಥಿತಿಗೆ ಅನುಗುಣವಾಗಿ ಈ ಸಮುದಾಯದವರು ಸ್ತ್ರೀಯರಿಗೆ ಹೆಚ್ಚಿನ ಶಿಕ್ಷಣ, ಸ್ವಾತಂತ್ರ್ಯ ಚಳುವಳಿ ಕುರಿತು ಹಾಗು ಆಧುನಿಕ ಜೀವನದ ಕುರಿತು ಅವರ ಪ್ರತಿಕ್ರಿಯೆಗಳು ಅವರ ಪತ್ರಗಳಲ್ಲಿ ವ್ಯಕ್ತಗೊಂಡಿರುವುದನ್ನು ಸದ್ಯದ ವಿಶ್ಲೇಷಣೆಯಲ್ಲಿ ಪ್ರಸ್ತುತಪಡಿಸಲಾಗಿದೆ.*

ಪ್ರಸ್ತುತ ಲೇಖನವು ಕರ್ನಾಟಕದ ಸ್ಮಾರ್ತ ಬ್ರಾಹ್ಮಣ ಪಂಗಡಕ್ಕೆ ಸೇರಿರುವ ಸಂಕೇತಿ ಜನಾಂಗದವರ ೧೦೦ ವರ್ಷಗಳ ಕೌಟುಂಬಿಕ ವ್ಯವಹಾರ ಪತ್ರಗಳನ್ನು ಅವಲಂಬಿಸಿದೆ.[೧] ಕುತೂಹಲಕ್ಕಾಗಿ ಡಾ. ಪ್ರಣತಾರ್ಥಿ ಹರನ್‌ರವರು ಸಂಪಾದಿಸಿರುವ 'ಸಂಕೇತಿ - ಶತಮಾನ ಪತ್ರಗಳು' ಎಂಬ ಸಂಪುಟವನ್ನು ಓದುವ ಸಂದರ್ಭದಲ್ಲಿ ನೂರು ವರ್ಷಗಳ ಕಾಲಾವಧಿಯ ಈ ಪತ್ರಗಳು ಸಂಕೇತಿ ಸಮುದಾಯದ ಸಾಮಾಜಿಕ ಪ್ರತಿಬಿಂಬಗಳಂತೆ ಕಂಡುಬಂದವು. ಕ್ರಿ.ಶ. ೧೮೯೧-೧೯೯೧ರ ವರೆಗಿನ ಪತ್ರಗಳಲ್ಲಿ ಅವರ ಸಾಮಾಜಿಕ ಸಂಸ್ಕಾರಗಳು, ಹವ್ಯಾಸಗಳು, ವಿಶೇಷ ತಿನಿಸುಗಳು, ವ್ಯವಸಾಯ, ಅವರು ಅನುಭವಿಸಿದ ಕ್ಷಾಮಡಾಮರಗಳು, ಪ್ಲೇಗು-ಸಿಡುಬು ಮುಂತಾದ ರೋಗ ಬಾಧೆಗಳು, ಬಡತನ, ನಿರುದ್ಯೋಗ, ಆಧುನಿಕ ವಿದ್ಯಾಭ್ಯಾಸ ಪಡೆಯಲು ಪಟ್ಟ ಕಷ್ಟ ಕಾರ್ಪಣ್ಯಗಳು, ತಮ್ಮ ಸಂಸ್ಕೃತಿ ಸಂಸ್ಕಾರಗಳನ್ನು ಕಾಪಾಡಿಕೊಳ್ಳಲು ಅವರು ಪಟ್ಟ ಶ್ರಮ, ಸಮಕಾಲೀನ ಆ ಪ್ರಾಂತ್ಯದ ಮಳೆ-ಬೆಳೆ ಹಾಗೂ ಧಾನ್ಯಗಳ ಬೆಲೆ ಇತ್ಯಾದಿ ಹತ್ತು ಹಲವು ವಿಚಾರಗಳ ಬಗೆಗೆ ಸ್ಥೂಲವಾಗಿ ತಿಳಿಯಬಹುದಾಗಿದೆ. ಪತ್ರ ಬರೆಯುವ ಸಂದರ್ಭದಲ್ಲಿ ಅವರಾರೂ ಮುಂದೊಂದು ದಿನ ತಮ್ಮ ಪತ್ರಗಳು ಒಂದು ಸಂಪುಟ ಅಥವ ಲೇಖನದ ರೂಪದಲ್ಲಿ ಪ್ರಕಟವಾಗುತ್ತದೆಂದು ತಿಳಿದಿದ್ದವರಲ್ಲ. ಹೀಗಾಗಿ ಪತ್ರಗಳ ಮಾಹಿತಿಗಳು ಅವರ ಸಮಾಜದ ನೈಜ ಚಿತ್ರಣವನ್ನು ನೀಡುವಲ್ಲಿ ಸಹಕಾರಿಯಾಗಿವೆ.

ಈ ಪತ್ರಗಳು ಸಂಸ್ಕೃತ, ಕನ್ನಡ ಹಾಗೂ ಆಂಗ್ಲ ಭಾಷೆಗಳಲ್ಲಿವೆ. ಶೈಲಿ ಉತ್ತಮವಾಗಿದ್ದು ಹಾಸ್ಯ, ವ್ಯಂಗ್ಯ, ಸಂತೋಷ ದುಃಖ ಇತ್ಯಾದಿಗಳ ನೋಟ ನೀಡುತ್ತವೆ. ಮೂಲತಃ ಅಡಿಕೆ ತೋಟ ಮಾಡುವ ಕೃಷಿಕರಾಗಿದ್ದರೂ ಅವರ ಕನ್ನಡ ಭಾಷಾ ಶೈಲಿ ಉತ್ಕೃಷ್ಟವಾಗಿತ್ತೆಂಬುದಕ್ಕೆ ಈ ಸಂದರ್ಭದಲ್ಲಿ ಒಂದು ಉದಾಹರಣೆಯನ್ನು ನೀಡಬಹುದಾಗಿದೆ. ನಗರದಲ್ಲಿ ನೌಕರಿಯಲ್ಲಿದ್ದ ಆಧುನಿಕ ವಿದ್ಯೆ ಗಳಿಸಿದ್ದ ಯುವಕನೊಬ್ಬ ತನ್ನ ಗ್ರಾಮದಲ್ಲಿದ್ದ ರೈತ ಮಿತ್ರನಿಗೆ ಪತ್ರ ಬರೆದು ವಿವಾಹವಾದ ನಂತರ ತನ್ನನ್ನು ಮರೆತಿದ್ದಾನೆಂದು ಆಕ್ಷೇಪ ಮಾಡಿದ್ದ ಸಂದರ್ಭದಲ್ಲಿ ಗ್ರಾಮದ ಯುವಕ ತನ್ನ ಸ್ನೇಹಿತನಿಗೆ ಮಿತ್ರಾ! ಮಗ್ಗುಲಲ್ಲಿರುವ ನವಮಣಿಯ ಮೇಲ್ಮೆಯ ಬೆಡಗಿನ ಬಿನ್ನಾಣದ ಮಧುರಾಧರದ ಹೊಳಪಿಗೆ ಸೋತು ಆಜನ್ಮ ಮಿತ್ರರತ್ನವನ್ನು ಮರೆಯುವಂಥಾ ಕುಲಹೇಡಿಯಾದ ಮಿತ್ರದ್ರೋಹಿ ಎಂದು ನನ್ನನ್ನು ಭಾವಿಸಿದೆಯಾ?[೨] ಎಂದು ಉತ್ತರಿಸಿರುವ ರೀತಿ ಪ್ರಶಂಸಾರ್ಹ.

೨೦ನೇ ಶತಮಾನದ ಪೂರ್ವಭಾಗದ ಪತ್ರಗಳಲ್ಲಿ ಸಂಕೇತಿಗಳು ಪರಂಪರಾನುಗತವಾಗಿ ಬಂದಿದ್ದ ಸಂಸ್ಕಾರಗಳಿಗೆ ಹೆಚ್ಚು

* ಇತಿಹಾಸ ವಿಭಾಗ, ಮಹಾರಾಣಿ ಮಹಿಳಾ ಕಲಾ ಕಾಲೇಜು, ಮೈಸೂರು

ಮಹತ್ವ ನೀಡಿದ್ದರೆಂಬುದು ಕಂಡುಬರುತ್ತದೆ. ವಿವಾಹ, ಸೀಮಂತ, ಚೌಲ, ನಾಮಕರಣ, ಇತ್ಯಾದಿ ಹಲವು ಹತ್ತು ಸಂಸ್ಕಾರಗಳನ್ನು ಹಾಗೂ ಹೋಮ ಹವನಾದಿಗಳನ್ನು ನಿಗದಿತ ಸಂದರ್ಭಗಳಲ್ಲಿ ತಪ್ಪದೇ ಆಚರಿಸುತ್ತಿದ್ದರು. ಆದರೆ ೧೯೪೦ರ ದಶಕದ ಹಾಗೂ ನಂತರದ ಪತ್ರಗಳಲ್ಲಿ ಅವರ ಅನೇಕ ಆಚರಣೆಗಳನ್ನು ಸಂದರ್ಭಕ್ಕನು ಗುಣವಾಗಿ ಸಡಿಲಿಸಿರುವ ಮಾಹಿತಿಗಳು ದೊರಕುತ್ತವೆ. ಇಲ್ಲಿ ಅಂತಹ ಒಂದೆರಡು ದೃಷ್ಟಾಂತಗಳನ್ನು ನೀಡಬಹುದು. ವಿವಾಹ ಆಚರಣೆಗೆ ಸಂಬಂಧಿಸಿದಂತೆ ಬಾಲ್ಯ ವಿವಾಹವು ರೂಢಿಯಲ್ಲಿತ್ತು. ವಿದ್ಯಾರ್ಥಿಗಳೂ ಕೂಡ ವಿವಾಹಿತರಾಗಿದ್ದರೆಂಬುದಕ್ಕೆ ಹಲವಾರು ಪತ್ರಗಳಲ್ಲಿ ಮಾಹಿತಿ ಲಭ್ಯವಿದೆ.[೩] ಹಾಗೆಯೇ ವಿವಾಹದ ಲಗ್ನ ಪತ್ರಿಕೆಯನ್ನು ಪೋಸ್ಟ್ ಕಾರ್ಡ್ ಬಳಕೆಗೆ ಬಂದ ದಿನಗಳಲ್ಲಿ ಅದರಲ್ಲೇ ಬರೆದು ಪ್ರತಿಯೊಬ್ಬ ಬಂಧುವಿಗೂ ಕಳುಹಿಸುತ್ತಿದ್ದರು. ವರನ ತಂದೆ ತಾಯಿಗಳೆ ಕನ್ಯೆಯನ್ನು ನೋಡಿ ವಿವಾಹ ನಿಶ್ಚಯ ಮಾಡುತ್ತಿದ್ದರು. ಪತ್ರ ಒಂದರಲ್ಲಿ ತಂದೆಯು ವಿದ್ಯಾಭ್ಯಾಸ ಮಾಡುತ್ತಿದ್ದ ನಗರದಲ್ಲಿದ್ದ ಮಗನಿಗೆ ನಿನ್ನ ವಿವಾಹಕ್ಕೆ ತಪ್ಪದೇ ಬಾ ಎಂದು ಬರೆದಿದ್ದಾರೆ.[೪] ವಾಸ್ತವವೆಂದರೆ ಆ ವಿದ್ಯಾರ್ಥಿಗೆ ತನ್ನ ವಿವಾಹಕ್ಕೆ ಪ್ರಯತ್ನ ನಡೆದಿರುವ ವಿಚಾರವೇ ತಿಳಿದಿದ್ದಂತಿಲ್ಲ. ಹಾಗೇ ವರದಕ್ಷಿಣೆ ಪಡೆಯುವುದೂ ಸರ್ವೇ ಸಾಮಾನ್ಯವಾಗಿತ್ತು. ಕನ್ಯೆ ಒಳ್ಳೆ ಕುಲದವಳಾಗಿದ್ದು ಗೃಹಕೃತ್ಯಗಳಲ್ಲಿ ತೊಡಗಿದ್ದರೆ ಸಾಕೆಂಬ ಭಾವನೆ ಇತ್ತು. ವಿವಾಹಕ್ಕೆ ಸಂಬಂಧಿಸಿರುವ ಈ ಆಚರಣೆಗಳಲ್ಲಿ ೧೯೪೦ರ ದಶಕದಿಂದೀಚೆಗೆ ಹಲವಾರು ಬದಲಾವಣೆಗಳನ್ನು ಪತ್ರಗಳಲ್ಲಿ ಗುರ್ತಿಸಬಹುದು. ಬಾಲ್ಯ ವಿವಾಹದ ಸ್ಥಾನದಲ್ಲಿ ವರನು ವಿದ್ಯಾಭ್ಯಾಸ ಮುಗಿದ ನಂತರ ಅಥವಾ ಒಂದು ನೌಕರಿ ಹೊಂದಿದ ನಂತರ ವಿವಾಹ ಮಾಡಿಕೊಳ್ಳತೊಡಗಿದುದು ಗಮನಿಸಬೇಕಾದ ಅಂಶ. ಅದೇ ರೀತಿ ಮುದ್ರಣದ ಸೌಲಭ್ಯದ ಅರಿವಾದ ನಂತರ ಲಗ್ನಪತ್ರಿಕೆಗಳನ್ನು ಕನ್ನಡ ಹಾಗೂ ಆಂಗ್ಲ ಭಾಷೆಗಳೆರಡರಲ್ಲೂ ಅಚ್ಚು ಹಾಕಿಸಲಾರಂಭಿಸಿದುದು[೫] ವಿವಾಹ ಆಗಬಯಸುವ ಹುಡುಗ ಹುಡುಗಿಯ ಆಯ್ಕೆಯ ಬಗೆಗೆ ತನ್ನ ನಿಲುವನ್ನೂ ವ್ಯಕ್ತಪಡಿಸ ಲಾರಂಭಿಸಿದುದು[೬], ಕೇವಲ ದ್ರವ್ಯ ಕನ್ಯೆ ತರುವುದರಿಂದ ಗೃಹ ಸೌಖ್ಯ ಸಾಧ್ಯವಿಲ್ಲವೆಂಬ ಅರಿವು[೭], ಕನ್ಯೆ ಸತ್ಕುಲದವಳಾಗಿರುವುದರ ಜೊತೆಗೆ ಎಸ್.ಎಸ್.ಎಲ್.ಸಿ.ವರೆಗೆ ಓದಿರಬೇಕೆಂಬ ಶರತ್ತು ಹಾಕಿರುವುದು[೮], ಜಾತಕ ವಿಷಯದಲ್ಲಿ ಸಡಿಲಿಕೆ ಇತ್ಯಾದಿ ಬೆಳವಣಿಗೆಗಳನ್ನು, ಬದಲಾವಣೆಗಳನ್ನು ಗುರ್ತಿಸಬಹುದಾಗಿದೆ.

ಕೆಲವು ಪತ್ರಗಳು ಅವರ ಹವ್ಯಾಸಗಳು, ವಿಶೇಷವಾದ ತಿನಿಸುಗಳು ಮತ್ತು ಕೆಲವು ಸಂಪ್ರದಾಯಗಳನ್ನು ಇಂದಿಗೂ ತಪ್ಪದೇ ಆಚರಿಸಿಕೊಂಡು ಬರುತ್ತಿರುವ ಬಗ್ಗೆ ಅರಿವು ಮೂಡಿಸುತ್ತವೆ. ಹವ್ಯಾಸಗಳಲ್ಲಿ ನಶ್ಯ ಸೇದುವುದು, ಇಸ್ಪೀಟ್ ಆಡುವುದು, ಎಲೆ ಅಡಿಕೆ ಹಾಗೂ ಹೊಗೆಸೊಪ್ಪು ಜಗಿಯುವುದು, ಸಂಗೀತಾಭ್ಯಾಸ ಇವುಗಳು ಇಂದಿಗೂ ಈ ಸಮುದಾಯದವರಲ್ಲಿ ಮುಂದುವರೆದು ಕೊಂಡು ಬಂದಿವೆ. ತಿನಿಸುಗಳಲ್ಲಿ ಚೋಮಾಯ್ (ಒತ್ತು ಶಾವಿಗೆ), ಕೊಳಕಟ್ಟೆ (ಉದ್ದಿನ ಕಡುಬು), ಮೋರ್ಕುಳಿ (ಮಜ್ಜಿಗೇಹುಳಿ) ಇತ್ಯಾದಿ ಇಂದಿಗೂ ಅವರ ಅಚ್ಚುಮೆಚ್ಚಿನ ಅಡುಗೆಗಳು. ಸಂಪ್ರದಾಯಗಳಲ್ಲಿ ಹೆಣ್ಣುಮಕ್ಕಳಿಗೆ ಗೌರೀ ಹಬ್ಬಕ್ಕೆ ತಪ್ಪದೆ ದ್ರವ್ಯ ಕಳುಹಿಸುವುದು, ದೀಪಾವಳಿಯ ಮರುದಿನ ಸಹೋದರರು ಸಹೋದರಿಯರ ಮನೆಗಳಿಗೆ ಸೋದರಬಿದಿಗೆಗೆ ಹೋಗುವುದು, ಬಂಧುಗಳು ಸಾವಪ್ಪಿದ ವರ್ಷ ಅವರ ಮನೆಗೆ ಹಬ್ಬದ ದಿನಗಳಲ್ಲಿ ತಿಂಡಿ ಇಡುವುದು ಇತ್ಯಾದಿ ಆಚರಣೆಗಳು ಮುಂದುವರಿಯುತ್ತಿವೆ.

ಸಂಕೇತಿಗಳ ಕುಟುಂಬ ಪದ್ಧತಿಗೆ ಸಂಬಂಧಿಸಿದಂತೆ ಅವಿಭಕ್ತ ಕುಟುಂಬಗಳು ೧೯೪೦ರ ದಶಕಕ್ಕೆ ಮೊದಲು ಅಸ್ತಿತ್ವದಲ್ಲಿದ್ದುದು ಆಧುನಿಕ ಶಿಕ್ಷಣ ಹಾಗೂ ನೌಕರಿಯ ಸಲುವಾಗಿ ನಗರಗಳಿಗೆ ವಲಸೆ ಹೋಗಲಾರಂಭಿಸಿದ ನಂತರ ವಿಭಕ್ತ ಕುಟುಂಬಗಳು ಅಸ್ತಿತ್ವಕ್ಕೆ ಬಂದು ಸಹೋದರರು ಆಸ್ತಿ ಹಂಚಿಕೊಂಡಿರುವುದಕ್ಕೆ ಪತ್ರ ದಾಖಲೆಗಳಿವೆ.[೯]

ಆಧುನಿಕ ಶಿಕ್ಷಣದ ಸೌಲಭ್ಯ ಮೈಸೂರು ಸಂಸ್ಥಾನಕ್ಕೆ ಲಭ್ಯವಾದಾಗ ಸಂಸ್ಕೃತಾಭ್ಯಾಸವನ್ನೇ ಪರಂಪರೆಯನ್ನಾಗಿ ಮಾಡಿ ಕೊಂಡಿದ್ದ ಸಂಕೇತಿ ಜನಾಂಗದವರು ಆಧುನಿಕ ಶಿಕ್ಷಣಕ್ಕೂ ತೊಡಗಿ ಕೊಂಡರು. ಅಂದಮಾತ್ರಕ್ಕೆ ಸಂಸ್ಕೃತಾಭ್ಯಾಸವನ್ನು ದೂರ ಮಾಡಲಿಲ್ಲ. ಬದಲಾಗಿ ಸಂಸ್ಕೃತ ಹಾಗೂ ಆಂಗ್ಲ ವಿದ್ಯಾಭ್ಯಾಸ ಎರಡನ್ನೂ ಜೊತೆಜೊತೆಗೇ ಅಭ್ಯಸಿಸಿದರು. ಇಲ್ಲಿ ಸಂಕೇತಿಗಳು ಸಂಪ್ರದಾಯ ಹಾಗೂ ಆಧುನಿಕತೆ ಎರಡರ ಸಂಯೋಜನೆ ಮಾರ್ಗ ಅನುಸರಿಸಿದರೆನ್ನಬಹುದು. ಹೊಸದಾಗಿ ನಗರಗಳಿಗೆ ಶಿಕ್ಷಣ ಪಡೆಯುವ ಸಲುವಾಗಿ ಹೋದ ಹೋರಾಟದ ವಿವರಣೆ ನೂರಾರು ಪತ್ರಗಳಲ್ಲಿ ಲಭ್ಯವಿದೆ.[೧೦] ಎಂತಹ ಕಠಿಣ ಸಂದರ್ಭದಲ್ಲೂ ಎದೆಗುಂದದೆ ತಮ್ಮ ಗುರಿಮಟ್ಟಲು ಪಟ್ಟ ಪಾಡು ತೊಟ್ಟ ಛಲದ ಪರಿಚಯ ಅವರ ಪತ್ರಗಳಿಂದಾಗುತ್ತದೆ. ಈ ಸಂದರ್ಭದಲ್ಲಿ ಅನಿವಾರ್ಯವಾಗಿ ಮಡಿವಂತಿಕೆಯನ್ನು ಬಿಟ್ಟು ಹೋಟಲ್ಲುಗಳನ್ನು ಆಶ್ರಯಿಸಿದ್ದುದು ಗಮನಾರ್ಹ ಬದಲಾವಣೆಯಾಗಿದೆ. ಅದೇ ರೀತಿ ರೈಲು ಹಾಗೂ ಮೋಟಾರು ವಾಹನಗಳಲ್ಲಿ ಪ್ರಯಾಣ ಮಾಡಿದರೆ ತಮ್ಮ ಮಡಿ ಹಾಳಾಗುತ್ತದೆಂದು ನಂಬಿದ್ದ ಅವರು ತಮ್ಮ ಮಕ್ಕಳನ್ನು ನಗರಗಳಿಗೆ ಕಳುಹಿಸಲಾರಂಭಿಸಿದ ನಂತರದ ದಿನಗಳಲ್ಲಿ ಅನಿವಾರ್ಯವಾಗಿ ಪ್ರಯಾಣದ ನೂತನ ಸೌಲಭ್ಯಗಳನ್ನು ಬಳಸಿ ಕೊಳ್ಳಲಾರಂಭಿಸಿದುದು ಕಂಡುಬರುತ್ತದೆ.[೧೧]

ಔಷಧಿಯ ವಿಚಾರದಲ್ಲೂ ಸಂಕೇತಿ ಸಮುದಾಯದವರು ಸಂಯೋಜನಾ ಮಾರ್ಗವನ್ನು ಅನುಸರಿಸಿದ್ದುದು ಕಂಡುಬರುತ್ತದೆ. ಪರಂಪರಾನುಗತವಾಗಿ ಅನುಸರಿಸಿಕೊಂಡು ಬಂದಿದ್ದ ನಾಟಿ ಔಷಧಿಯ ಜೊತೆಗೆ ಐರೋಪ್ಯರ ಸಂಪರ್ಕದಿಂದ ಮೈಸೂರು

ಸಂಸ್ಥಾನಕ್ಕೆ ಲಭ್ಯವಾಗಿದ್ದ ಆಂಗ್ಲ ವೈದ್ಯಕೀಯ ಸೌಲಭ್ಯವನ್ನೂ ಪಡೆದುಕೊಳ್ಳಲಾರಂಭಿಸಿದ್ದರು.[೧೨] ಪ್ರಸವವನ್ನು ಮನೆಯಲ್ಲೇ ಮಾಡಿಸುತ್ತಿದ್ದವರು ಮಿಷನ್ ಆಸ್ಪತ್ರೆಗೆ ಹೆಣ್ಣುಕ್ಕಳನ್ನು ಕರೆದೊಯ್ಯಲಾರಂಭಿಸಿದರು,[೧೩] ಪ್ಲೇಗ್ ರೋಗಕ್ಕೆ ಸರ್ಕಾರದ ಧನ್ವಂತರಿ ಇಲಾಖೆಯವರು ನೀಡುತ್ತಿದ್ದ ಇನ್ಯಾಕ್ಯುಲೇಷನ್ ಪಡೆಯಲಾರಂಭಿಸಿದರು.[೧೪]

ತೋಟಗಾರಿಕೆ ಹಾಗೂ ಸಂಸ್ಕೃತ ಅಧ್ಯಯನ ಸಂಕೇತಿಗಳಿಗೆ ಪರಂಪರಾನುಗತವಾಗಿ ಬಂದಿತ್ತು. ಇಪ್ಪತ್ತನೇ ಶತಮಾನದ ಆದಿಭಾಗದಲ್ಲಿ ಆಂಗ್ಲ ಶಿಕ್ಷಣ ಇವರನ್ನು ಸೆಳೆದುದು ಅವರ ಪತ್ರಗಳಿಂದ ತಿಳಿದುಬರುವ ಸಂಗತಿ. ಆಧುನಿಕ ಶಿಕ್ಷಣ ಪಡೆಯುತ್ತಿದ್ದಂತೆಯೇ ಆಧುನಿಕ ನೌಕರಿಯನ್ನೂ ಗಳಿಸತೊಡಗಿದರು. ಆದರೂ ಈ ಸಮುದಾಯದವರು ಅಧ್ಯಯನ ಮತ್ತು ವೃತ್ತಿ ಎರಡೂ ವಿಷಯಗಳಲ್ಲಿ ಸಂಪ್ರದಾಯ ಮತ್ತು ಆಧುನೀಕತೆ ಎರಡರ ಸಂಯೋಜನೆಯ ಮಾರ್ಗವನ್ನು ಅನುಸರಿಸಿದರು.[೧೫] ಕೇವಲ ತೋಟದ ಕೃಷಿಗೆ ಮಹತ್ವ ಕೊಟ್ಟಿದ್ದ ಇವರು ಕ್ರಮೇಣ ಹೊಲ ಗದ್ದೆಗಳ ಬೇಸಾಯವನ್ನೂ ಮಾಡತೊಡಗಿದರು.[೧೬] ೧೯೩೦ರ ದಶಕದಲ್ಲಿ ಕೃಷಿಕ ತಂದೆಯೊಬ್ಬರು ಆಂಗ್ಲ ಶಿಕ್ಷಣ ಪಡೆದು ನಗರದಲ್ಲಿದ್ದ ಮಗ ಗ್ರಾಮಕ್ಕೆ ಹಿಂತಿರುಗಿ ಕುಲಕಸುಬನ್ನು ಮುಂದುವರಿಸುವ ಆಸೆ ವ್ಯಕ್ತಪಡಿಸಿದ ಸಂದರ್ಭದಲ್ಲಿ ಆತನನ್ನು ಸರ್ಕಾರಿ ಕೆಲಸವನ್ನೇ ಪಡೆಯುವಂತೆ ಬಲವಂತಪಡಿಸಿರುವ ಉದಾಹರಣೆ ಇದೆ.[೧೭]

ಆಧುನೀಕರಣದ ಪ್ರಭಾವದಿಂದಾಗಿ ಸಂಕೇತಿ ಸಮಾಜದಲ್ಲಿ ಹೆಣ್ಣುಮಕ್ಕಳ ಪರಿಸ್ಥಿತಿಯೂ ಸುಧಾರಿಸಿತೆಂದು ತೋರುತ್ತದೆ. ೧೯೫೦ರ ದಶಕದವರೆವಿಗೂ ಹೆಣ್ಣುಕ್ಕಳನ್ನು ಶಾಲೆಗೆ ಕಳುಹಿಸುವುದು ಅಗೌರವದ ಸಂಗತಿಯಾಗಿತ್ತು. ಬಹಳ ಅಪರೂಪಕ್ಕೆ ೧೯೩೧ರ ಪತ್ರ ಒಂದರಲ್ಲಿ ಈ ಜನಾಂಗದ ಹೆಣ್ಣುಮಗಳೊಬ್ಬಳು ಎಮ್.ಎ,ಬಿ.ಟಿ., ಮಾಡಿದ್ದಳು.[೧೮] ಆದರೆ ತಮ್ಮ ಹೆಣ್ಣುಮಕ್ಕಳಿಗೂ ಶಿಕ್ಷಣದ ಅವಶ್ಯಕತೆ ಇದೆ ಎಂದು ಅವರು ಕಂಡುಕೊಂಡಿದ್ದು ನಗರದಲ್ಲಿ ಶಿಕ್ಷಣ ಪಡೆಯುತ್ತಿದ್ದ ಅಥವಾ ನೌಕರಿಯಲ್ಲಿದ್ದ ವರಗಳು ಕನ್ಯೆಗೆ ಎಸ್.ಎಸ್.ಎಲ್.ಸಿ. ಆಗಿರಬೇಕೆಂಬ ಬೇಡಿಕೆಯನ್ನು ಮುಂದಿಡತೊಡಗಿದಾಗ.[೧೯] ೧೯೭೦ರ ದಶಕದಲ್ಲಿ ಪದವಿಯಾದ ಕನ್ಯೆಗೆ ಬೇಡಿಕೆ ಹೆಚ್ಚತೊಡಗಿದ್ದರಿಂದ ಕಾಲೇಜು ಶಿಕ್ಷಣವೂ ಅವರಿಗೆ ಲಭಿಸುವಂತಾಯಿತು. ೧೯೭೦ರ ದಶಕದಲ್ಲಿ ಈ ಜನಾಂಗದವರು ಬಡ ಗ್ರಾಮಾಂತರ ಹೆಣ್ಣುಮಕ್ಕಳು ಕಾಲೇಜು ಶಿಕ್ಷಣ ಪಡೆಯಲು ಅನುಕೂಲವಾಗುವಂತೆ ಉಚಿತ ವಿದ್ಯಾರ್ಥಿನಿ ನಿಲಯ ಒಂದನ್ನು ಹಾಸನ ನಗರದಲ್ಲಿ ತೆರೆದುದು ಪ್ರಶಂಸಾರ್ಹ. ೧೯೬೦ರ ದಶಕದ ವೇಳೆಗಾಗಲೆ ಎಸ್.ಎಸ್.ಎಲ್.ಸಿ. ಮಾಡಿದ ಅನೇಕ ಹೆಣ್ಣು ಮಕ್ಕಳಿದ್ದುದರಿಂದ ಅವರು ಹೊಲಿಗೆ, ಎಂಬ್ರಾಯ್ಡರಿ ಮುಂತಾದ ನೂತನ ಕಸುಬುಗಳನ್ನು ಕಲಿಯಲಾರಂಭಿಸಿದ್ದರು.[೨೦] ತಮ್ಮ ಗ್ರಾಮದಲ್ಲಿದ್ದ ಸಮಾಜದಂತಹ ಸಂಘಟನೆಗೆ ಸದಸ್ಯತ್ವ ಪಡೆದು ಸಾಂಘಿಕ ಚಟುವಟಿಕೆಯಲ್ಲೂ ತೊಡಗಿಕೊಂಡರು. ಆಧುನೀಕರಣದ ಪರಿಣಾಮದಿಂದಾಗಿ ಇವರ ಗ್ರಾಮದ ಮನೆಗಳಲ್ಲಿ ಹಲವಾರು ಸೌಲಭ್ಯಗಳು ಒದಗಿದವು. ನಗರದಲ್ಲಿ ಕಲಿತು ನೌಕರಿ ಹಿಡಿದ ಯುವಕರ ದೆಸೆಯಿಂದಾಗಿ ಮಣ್ಣಿನ ನೆಲಕ್ಕೆ ಬದಲಾಗಿ ಗಾರೆನೆಲ, ಇಟ್ಟಿಗೆಗೋಡೆ, ಫ್ಯಾನ್, ವಿದ್ಯುದ್ದೀಪ, ಶೌಚಾಲಯ ಇತ್ಯಾದಿ ಸೌಲಭ್ಯಗಳು ದೊರೆತವು.

ತಮಿಳುನಾಡಿನಿಂದ ೯೦೦ ವರ್ಷಗಳಷ್ಟು ಹಿಂದೆಯೇ ಕರ್ನಾಟಕಕ್ಕೆ ವಲಸೆ ಬಂದಿರುವ ತಮ್ಮ ಪೂರ್ವಜರ ಮೂಲ ಸ್ಥಳವನ್ನು ೧೯೮೦ರ ದಶಕದವರೆವಿಗೂ ನೋಡಿರಲಿಲ್ಲ. ಅದರ ಬಗ್ಗೆ ಆಸಕ್ತಿಯನ್ನೂ ತೋರಿರಲಿಲ್ಲ. ಆಧುನಿಕ ಶಿಕ್ಷಣದ ಪರಿಣಾಮವಾಗಿ ತಮಿಳುನಾಡಿನ ಸಂಕೇತಿಗಳೊಂದಿಗೆ ೮೦ರ ದಶಕದಿಂದೀಚೆಗೆ ಪತ್ರವ್ಯವಹಾರ ನಡೆಸಲಾಗುತ್ತಿದೆ. ಈರ್ವರ ನಡುವೆ ಸಂಬಂಧ ಬೆಳೆಸಲೂ ಪ್ರಯತ್ನ ನಡೆದಿತ್ತೆಂಬ ವಿಷಯ ಪತ್ರಗಳಿಂದ ತಿಳಿಯುತ್ತದೆ.[೨೧] ಈ ಪತ್ರಗಳಲ್ಲಿ ಸಮಕಾಲೀನ ಹಳೇ ಮೈಸೂರು ಪ್ರಾಂತ್ಯದ ಮಳೆ-ಬೆಳೆ, ಧಾನ್ಯಗಳ ಬೆಲೆ, ಮಳೆ ಇಲ್ಲದೆ ಕ್ಷಾಮದಿಂದ ಜನ ಅನುಭವಿಸಿದ ತೊಂದರೆ ಹಾಗೂ ಪ್ಲೇಗು ರೋಗದಿಂದ ಗ್ರಾಮಗಳೇ ಖಾಲಿಯಾದ ವಿಚಾರ, ಈ ರೋಗವನ್ನು ತಡೆಯಲು ಮೈಸೂರು ಸರ್ಕಾರ ಕೈಗೊಂಡ ಕ್ರಮ, ಸ್ವಾತಂತ್ರ ಚಳುವಳಿಯ ವಿಷಯಗಳು, ಸ್ವಾತಂತ್ರ್ಯಾ ನಂತರ ಉಂಟಾದ ಕೋಮು ಗಲಭೆ ಮುಂತಾದ ವಿಷಯಗಳಿಗೂ ಕೂಡ ನಮ್ಮ ಗಮನ ಸೆಳೆಯುತ್ತವೆ. ಒಟ್ಟಿನಲ್ಲಿ ಸಂಕೇತಿ ಸಮುದಾಯದವರು ಬದಲಾದ ಪರಿಸ್ಥಿತಿಗೆ ಅನುಗುಣವಾಗಿ ಆಧುನಿಕ ಶಿಕ್ಷಣ ಹಾಗೂ ನೌಕರಿ ಪಡೆದುಕೊಂಡರೂ, ಸಂಪ್ರದಾಯವನ್ನೂ ಪೂರ್ಣವಾಗಿ ಬಿಟ್ಟುಕೊಡದೆ ಆಧುನೀಕರಣ ಮತ್ತು ಸಂಪ್ರದಾಯ ಎರಡರ ಸಂಯೋಜನೆಯ ಬದುಕನ್ನು ನಡೆಸಿದ್ದುದು ಗಮನಾರ್ಹ. ಇಂತಹ ಪತ್ರಗಳ ಸಂಗ್ರಹದಿಂದ ಆಯಾ ಸಮುದಾಯದ ನೈಜ ಚಿತ್ರಣ ಪಡೆಯಲು ಸಾಧ್ಯವಾಗುತ್ತದೆ.

(ಸಂಕೇತಿ ಜನಾಂಗಕ್ಕೆ ಸಂಬಂಧಿಸಿದಂತೆ ಈ ಪತ್ರಗಳ ಸಂಗ್ರಹ ಕಾರ್ಯ ಕೈಗೊಂಡು ಒಂದು ಸಂಪುಟವನ್ನು ರಚಿಸಿ ಈ ಲೇಖನ ರಚಿಸಲು ಕಾರಣರಾದ ಡಾ. ಬಿ.ಎಸ್.ಪಿ. ಹರನ್‌ರವರಿಗೆ ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ನೆನೆಯುತ್ತೇನೆ.)



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. **ಸಂಕೇತಿ ಶತಮಾನದ ಪತ್ರಗಳು**, ೧೮೯೧-೨೦೦೩, ಪ್ರಣತಾರ್ತಿಹರನ್ (ಸಂ), ಸಂ. ೨ ಸಮುದಾಯ ಅಧ್ಯಯನ ಕೇಂದ್ರ, ಮೈಸೂರು, ೨೦೦೪.

೨. ೧೯೩೫, ಪತ್ರಸಂಖ್ಯೆ: ೧೭೯, ಪು. ೮೯.

೩. ಸುಮಾರು ಐವತ್ತಕ್ಕೂ ಹೆಚ್ಚು ಪತ್ರಗಳು ವಿವಾಹಿತ ವಿದ್ಯಾರ್ಥಿಗಳ ಬಗೆಗೆ ಮಾಹಿತಿ ನೀಡುತ್ತವೆ.

೪. ೧೯೩೪, ಸಂ. ೨೬೬, ಪು. ೧೩೦-೧೩೧.

೫. ೧೯೩೪, ಸಂ. ೨೬೭, ಪು. ೧೩೧-೧೩೨.

೬. ೧೯೩೩, ಸಂ. ೪೬, ಪು. ೨೫.

೭. ೧೯೩೩, ಸಂ. ೨೬೩, ಪು. ೧೨೯.

೮. ೧೯೬೧, ಸಂ. ೫೮, ಪು. ೩೧.

೯. ೧೯೩೪, ಸಂ. ೧೭೮, ಪು. ೫೯: ೧೯೪೩, ಸಂ. ೧೬೬, ಪು. ೮೦.

೧೦. ಹಲವಾರು ಪತ್ರಗಳಲ್ಲಿ ಮಾಹಿತಿ ಇದೆ. ೧೯೨೧, ಸಂ. ೧೧, ಪು. ೮: ೧೯೨೪, ಸಂ. ೧೩, ಪು. ೯: ೧೯೨೯, ಸಂ. ೧೬, ಪು. ೧೦.

೧೧. ೧೯೪೧, ಸಂ. ೧೪೮, ಪು. ೭೦: ೧೯೪೭, ಸಂ. ೧೮೭, ಪು. ೭೨.

೧೨. ೧೯೪೨, ಸಂ. ೧೩೦, ಪು. ೬೨: ೧೯೩೬, ಸಂ. ೧, ಪು. ೪.

೧೩. ೧೯೪೨, ಸಂ. ೧೩೦, ಪು. ೬೨.

೧೪. ೧೯೩೬, ಸಂ. ೧, ಪು. ೪.

೧೫. ೧೯೪೬, ಸಂ. ೯೧. ಪು. ೪೮.

೧೬. ೧೯೨೬, ಸಂ. ೮೨, ಪು. ೪೨.

೧೭. ೧೯೩೫, ಸಂ. ೮೮, ಪು. ೪೫.

೧೮. ೧೯೩೧, ಸಂ. ೮೩, ಪು. ೪೨-೪೩.

೧೯. ೧೯೬೧, ಸಂ. ೫೮, ಪು. ೩೧.

೨೦. ೧೯೮೧, ಸಂ. ೨೦೪, ಪು. ೯೯.

೨೧. ೧೯೯೪, ಸಂ. ೪೨೬, ಪು. ೧೯೮, ೧೯೯೧ರವರೆಗಿನ ಪತ್ರಗಳನ್ನು ಲೇಖನಕ್ಕೆ ಬಳಸಲಾಗಿದೆ. ಆದರೆ ಈ ಪತ್ರದ ವಿಷಯ ಮುಖ್ಯವಾದುದೆಂಬ ಕಾರಣಕ್ಕಾಗಿ ೧೯೯೪ರ ಪತ್ರವನ್ನು ಉದಾಹರಿಸಲಾಗಿದೆ.



ಪತ್ರ ಪದರುಗಳಲ್ಲಿ ಬರೆದಿಟ್ಟ ದಿನನಿತ್ಯದ
ಬದುಕು ಅಭಿಜಾತವಾಗಿತ್ತು
ಸಮರಸವು ಸಂಕೇತಿಗಳಲ್ಲಿ ಅರಳಿ ಬಂದ
ಸಾಂಸ್ಕೃತಿಕ ಜಾಯಮಾನವಾಗಿತ್ತು

ಕೆಳದಿ ಗುಂಡಾಜೋಯಿಸ್*

# ಗಾಜನೂರು ಅಗ್ರಹಾರ; ಪಲ್ಲಕ್ಕಿ ಕೃಷ್ಣಾಚಾರ್; ಕೆಳದಿ ಬಸಪ್ಪನಾಯಕನ ಅಪ್ರಕಟಿತ ಶಾಸನ ದಾಖಲೆ

*ಗಾಜನೂರು ಕೋಟೆ ಒಂದು ಪ್ರಸಿದ್ಧ ಕೋಟೆ; ಕೆಳದಿ ಹಿರಿಯ ಬಸಪ್ಪನಾಯಕನ ಶಾಸನ ದಾಖಲೆಯೊಂದರಲ್ಲಿ ಇನಾಂ ಜಮೀನುಗಳ ಸ್ಥಿರೀಕರಣಕ್ಕೆ ಇಲಾಖೆಯ ಮೂಲಕ ನೋಂದಣೆ ಮಾಡಿದ ವಿಷಯ ವಿದೆ; ಗಾಜನೂರು ಅಗ್ರಹಾರದ ಪಲ್ಲಕ್ಕಿ ಕೃಷ್ಣಾಚಾರ್ ಮನೆತನದವರಿಗೆ ಸೇವೆಗಾಗಿ ಸಂದಗೌರವಗಳ ಪ್ರತೀಕವಾಗಿ ಇನಾಂ ಜಮೀನುಗಳು ವಿವಿಧ ಜಿಲ್ಲೆಗಳಲ್ಲಿವೆ.*

ಶಿವಮೊಗ್ಗದಿಂದ ತೀರ್ಥಹಳ್ಳಿ ಮಾರ್ಗವಾಗಿ ಸುಮಾರು ಹತ್ತು ಕಿ.ಮೀ. ದೂರದ ತುಂಗಾ ನದಿ ದಡದಲ್ಲಿರುವ ಗಾಜನೂರು ಕೋಟೆಯೊಂದು ಲಿಂಗಣ್ಣಕವಿಯ ಕೆಳದಿ ನೃಪವಿಜಯದಲ್ಲಿ-

ಕಂ॥ ಹಿರಿಯ ಹನುಮೇಂದ್ರಸುತನಂ
ಪೊರೆದೆಡತೊರೆ ಗಾಜನೂರು ಸೀಮೆಗೆಯ ಸುವಿ
ಸ್ತರಮಾದ ಲಕ್ಕುವಳ್ಳಿಯ
ವರ ಕೋಂಟಾತ್ರಯವನಾ ನೃಪಂ ವಶಗೈದಂ॥

(ಕೆ.ನೃ.ವಿ. V ಆ.)

ಎಂದು ಉಲ್ಲೇಖಿಸಿದಂತೆ ಕೋಟೆಯ ಪಳೆಯುಳಿಕೆಗಳು ಕಂಡುಬಂದಿವೆ. ಕೆಳದಿ ಅರಸರ ಶಾಸನ ಸಂಪುಟ ನಂ. ೯೯, ಎಕ: ಶಾಸನ ಸಂ. VII pt 1 ಶಾಸನ ನಂ. ೨೭, ೨೮, ೭೧; ಎಕ VIII ತೀರ್ಥಹಳ್ಳಿ ೪೨; ಇದೇ ಕೆಳದಿ ಅರಸರ ಕಾಲದ, ತಾಳೆಯೋಲೆಯಲ್ಲಿ ಕ್ರಿ.ಶ. ೧೬೯೮-೧೭೧೫; ೧೭೪೦-೧೭೫೫; ಮನ್ಮಥ ಸಂ॥ದ ಭಾದ್ರಪದ ಶು.೧೦; ಧಾತು ಸಂ॥ದ ಭಾದ್ರಪದ ಶು. ೧೦ (೧೬೭೨-೧೬೯೭ರ ಕೆಳದಿ ರಾಣಿ ಚೆನ್ನಮ್ಮಾಜಿಯ ನಿರೂಪ), ವಿಜಯ ಸಂದ ಫಾಲ್ಗುಣ ಶು. ೫-ಕೆಳದಿ ಬಸಪ್ಪನಾಯಕರು ರಾಮಪ್ಪಗೆ ಕಳುಹಿದ ಕಾರ್ಯ, ಅದೇ ನಿರೂಪ ೯ಇತ್ಯಾದಿಗಳಲ್ಲಿ ಗಾಜನೂರ ಕೋಟೆ ಠಾಣದಾರನ ಸಂಗತಿ; ನಿರೂಪ ೧೨ ಮತ್ತು ೧೫ರಲ್ಲಿ ಗಾಜನೂರ ಕೋಟೆ ವೆಂಕಟೇಶಾರಾಧ್ಯನ ಯಜಮಾನಿಕೆ; ಗಾಜನೂರು ಸೀಮೆ ಕುರಿತಂತೆ ಎ.ಕ. ಸಂ. VIII ತೀರ್ಥಹಳ್ಳಿ ೯೧ ಉಲ್ಲೇಖನಗಳಲ್ಲಿ ಕೇವಲ ಗಾಜನೂರು ಕೋಟೆ ಹಾಗೂ ಶೀಮೆಯ ಪ್ರಸ್ತಾಪಗಳಿವೆ.[೧] ಗಾಜನೂರು ಕೋಟೆಯಲ್ಲಿ ಪರಶುರಾಂ ಭಾವೂ ಮತ್ತು ಬೆಂಕಿ ನವಾಬ ಮಹಮ್ಮದ್ ರೇಝಾನೊಂದಿಗೆ ನಡೆದ ಯುದ್ಧದ ಸಂಗತಿಯೊಂದನ್ನು ಬುಕನನ್ ಸಾಹೇಬನು ದಿನಾಂಕ ೨-೪-೧೮೦೦ರ ತನ್ನ ವರದಿಯಲ್ಲಿ ಉಲ್ಲೇಖಿಸಿರುವನು.

**ಕೆಳದಿ ಹಿರಿಯ ಬಸಪ್ಪನಾಯಕನ ಶಾಸನ** : ಕೆಳದಿ ಕಾಲದ ಅಪ್ರಕಟಿತ ಶಾಸನದ ದಾಖಲೆಯೊಂದನ್ನು ಪರಿಶೋಧನೆಗಾಗಿ ರಾಜಕೀಯ ನಾಯಕರಾದ ಶ್ರೀ ಪ.ರಾ. ಶ್ರೀನಿವಾಸ್‌ರವರು ಮತ್ತು ಮಾಜಿ ಶಾಸಕ ಶ್ರೀ ಎಲ್.ಟಿ. ಹೆಗಡೆ ಅವರುಗಳು ನನಗೆ ನೀಡಿದ್ದರಿಂದ ಈ ದಾಖಲೆಯನ್ನು ಕುತೂಹಲಾಸಕ್ತಿಯಿಂದ ಅವಲೋಕಿಸುವಂತಾಯಿತು.

ವಿವಿಧ ದೃಷ್ಟಿಕೋನಗಳಿಂದ ಇಂತಹ ದಾಖಲೆಗಳ ತುಲನಾತ್ಮಕ ಅಧ್ಯಯನವು ಮುಂದಿನ ಆಕರಗಳಿಗೆ ಸಹಕಾರಿಯಾಗಬಲ್ಲವು. ಇನಾಂ ಜಮೀನುಗಳ ಸ್ಥಿರೀಕರಣಕ್ಕಾಗಿ ಸರಕಾರ ಇನಾಂ ಕಮೀಷನರ್ ನೇತೃತ್ವದಲ್ಲಿ ಹುದ್ದೆಯೊಂದನ್ನು ನಿರ್ಮಿಸಿ, ಈ ಇಲಾಖೆಯ ಮುಖಾಂತರ ನೋಂದಣಾದಿಗಳನ್ನು ಕೈಗೊಂಡಿದ್ದು

* ಗೌರವ ಕ್ಯುರೇಟರ್, ಕೆಳದಿ ವಸ್ತು ಸಂಗ್ರಹಾಲಯ ಕೆಳದಿ.

ಈಗ ಇತಿಹಾಸ. ಈ ಇಲಾಖೆಯಲ್ಲಿ ತಾಮ್ರ ಶಾಸನಗಳ ಬೃಹತ್ ಸಂಗ್ರಹಗಳೇ ಇದ್ದ ಬಗ್ಗೆ ದಾಖಲೆಗಳಲ್ಲಿ ಕಂಡು ಬರುತ್ತವೆ. ಮೂಲ ತಾಮ್ರ ಶಾಸನಗಳು ಎಲ್ಲಿವೆಯೋ ತಿಳಿಯದಂತಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ತಾಲ್ಲೂಕು ಖಜಾನೆಗಳಲ್ಲಿಯೂ ತಾಮ್ರ ಶಾಸನಗಳು ಶೇಖರಿಸಿರುವುದು ಕಂಡುಬಂದಿವೆ.[೨] ಹಲವು ನ್ಯಾಯಾಲಯಗಳಲ್ಲಿ ಸಾಕ್ಷಿ-ಪುರಾವೆಗಳಿಗೆ ತಾಮ್ರ ಶಾಸನಗಳನ್ನು ಕಕ್ಷಿಗಾರರು ಹಾಜರು ಮಾಡಿದ್ದ ಸಂಗತಿಗಳನ್ನು ಉಚ್ಚ ನ್ಯಾಯಮೂರ್ತಿ ಹಾಗು ಬಿಹಾರದ ರಾಜ್ಯಪಾಲರಾಗಿದ್ದ ಶ್ರೀರಾಮಾಜೋಯ್ಸರು ಕೆಳದಿಗೆ ಭೇಟಿಯಿತ್ತು ನನಗೆ ತಿಳಿಸಿದ್ದರು.[೩] ಈ ನಿಟ್ಟಿನಲ್ಲಿ ಇನಾಂ ಕಮೀಷನರ್ ನ್ಯಾಯಾಲಯದಲ್ಲಿ ಹಾಜರುಪಡಿಸಲಾಗಿತ್ತು. ಇದು ಕೆಳದಿ ಇತಿಹಾಸ ಶಾಸನ ಸಂಪುಟದಲ್ಲಿ ಸೇರಲು ನೂತನ ಆಕರ ಅಂಶಗಳಾಗಿ ಲಭಿಸಿವೆ.

**ಸರಕಾರೀ ದಾಖಲೆಯಲ್ಲಿರುವ ಶಾಸನ ಉಲ್ಲೇಖ :** Extract : From the Register of Inam in Arevasi Village of Tarekatte ನೋಂದಣೆಯಲ್ಲಿರುವ ಈ ಚಾರಿತ್ರಿಕ ದಾಖಲೆಯು ೨೦ ಕಾಲಂಗಳನ್ನೊಳಗೊಂಡಿದೆ. ದಾಖಲೆಯ ಪೂರ್ಣ ವಿವರ ಅನುಬಂಧದಲ್ಲಿ ನೀಡಲಾಗಿದ್ದು ಮುಖ್ಯ ಭಾಗಗಳಲ್ಲಿ ಈವರೆಗೂ ಗಮನಕ್ಕೆ ಬಾರದಿರುವ ಗಾಜನೂರು ಅಗ್ರಹಾರ ಮತ್ತು ಕೆಳದಿ ಬಸಪ್ಪನಾಯಕನ ಉಲ್ಲೇಖನದ ಭಾಗಗಳನ್ನು ಈ ಕೆಳಕಂಡಂತೆ ನಿರೂಪಿಸಲಾಗಿದೆ.

**I class extent and value of Inam**

a-1) Number of case or entire holding under one grant in this village.
-Register No. 173 sheet.I.D. No. 155 pymash made by Inamdars.
ಇದರಲ್ಲಿ ಗ್ರಾಮದ ಬಾರಾಬಲೂತಿ ಇನಾಂ ಜಮೀನುಗಳ ಪರಿಮಾಣಗಳು ಉಲ್ಲೇಖನಗೊಂಡಿವೆ.

b-8) Description of Inam, If for service it is to be stated whether the service is continued, If for tanks, buildings etc., whether they are efficiently kept up heriditary or for life.
-For The benefit of the holder heriditary.

c-10) By whom granted and in what year.
-Granted by Basappah naik a chief of Naggar in A.D. 1713 after the receipt of a Nuzza from the granter.

d-12) Name of original grantee.
-Yellannas son Thimmanna for building and endowing an agrahar.

e-13) Name entered in the Register prepared by poornaiah up to 1810.
-1805; Berizy 40-2-2
Aravasi
pagadi 20-1-1
Jari 20-1-1

ಕೂಡ್ಲಿ ಪಲ್ಲಕ್ಕಿ ಕೃಷ್ಣಾಚಾರ್ಯರವರಿಂದ ತ್ಯಾಕಲ್ ರಾಮಭಟ್ಟರ ವರೆಗೆ ವೃತ್ತಿ ಉಲ್ಲೇಖನಗಳಿವೆ.

ದಿವಾನ್ ಪೂರ್ಣಯ್ಯನವರು ತಮ್ಮ ಸ್ವಹಸ್ತಾಕ್ಷರಗಳಲ್ಲಿ ಇನಾಂ ರಿಜಿಸ್ಟರುಗಳನ್ನು ಬರೆಯುತ್ತಿದ್ದ ಸಂಗತಿಯ ಪ್ರಬಂಧವು ೧೯೯೧ರಲ್ಲಿ ಜರುಗಿದ ಚಿತ್ರದುರ್ಗದ ಕರ್ನಾಟಕ ಇತಿಹಾಸ ಅಕಾದೆಮಿ ಸಭೆಯಲ್ಲಿ "ದಿವಾನ್ ಪೂರ್ಣಯ್ಯನವರ ರಹದಾರಿ ಪತ್ರ" ಲೇಖನದಲ್ಲಿ ಪ್ರಕಟವಾಗಿದೆ.[೪] ಈ ಅಂಶವು ೧೩ನೇ ಕಾಲಂನಲ್ಲಿ ವ್ಯಕ್ತಪಡುತ್ತದೆ. ೧೦ನೇ ಕಾಲಂನಲ್ಲಿ ಉಲ್ಲೇಖನಗೊಂಡ ನಗರದ ಅಧಿಪತಿ ಬಸಪ್ಪನಾಯಕನ ಕಾಲ ಕ್ರಿ.ಶ. ೧೬೯೭-೧೭೧೪ರಲ್ಲಿ ಕೆಳದಿ ರಾಜ್ಯವನ್ನಾಳಿದ ಬಸಪ್ಪ ನಾಯಕನನ್ನು ಸೂಚಿಸುತ್ತದೆ. ಇತಿಹಾಸಕಾರೆಲ್ಲ ತಿಳಿದಿರುವಂತೆ ನಗರದ ಹಿಂದಿನ ಸ್ಥಳನಾಮವು ಬಿದನೂರು. ಇದು ಕೆಳದಿಯ ರಾಜಧಾನಿಯೆಂಬುದೂ ಒತ್ತಿ ಹೇಳಬೇಕಾಗಿಲ್ಲವಷ್ಟೆ? ಇದೇ ದಾಖಲೆಯ ೧೧ನೇ ಕಾಲಂನಲ್ಲಿ

In this column it should be stated whether the Inam is held with or without grant whether the grant is produced or lost (do) and the general specification of the terms of all documents produced should be given.

**Copper plate sasanam**

ಒಂದು ತಾಮ್ರ ಶಾಸನವೆಂದು ನಿರ್ದಿಷ್ಟವಾಗಿ ಉಲ್ಲೇಖನಗೊಂಡಿದ್ದು, ಈವರೆಗಿನ ನನ್ನ ಪ್ರಯತ್ನದಲ್ಲಿ ಮೂಲ ತಾಮ್ರಶಾಸನವು ಗೋಚರವಾಗದೆ, ಹುಡುಕಾಟವು ಮುಂದುವರಿಯುತ್ತಲೇ ಇದೆ.

**ರೆವಿನ್ಯೂ ದಾಖಲೆಯಲ್ಲಿ ಶಾಸನದ ಸಂಕ್ಷಿಪ್ತ ಮಾಹಿತಿ:** ಗಾಜನೂರು ಅಗ್ರಹಾರದಲ್ಲಿ ಮೈಸೂರು ಸರ್ವೆ ದಾಖಲೆಯಲ್ಲಿ ಕಂಡಂತೆ ರೆವಿನ್ಯೂ ಸರ್ವೆ ನಂಬರ್ ೧ ರಿಂದ ೨೯ರವರೆಗೆ, ವೃತ್ತಿವಂತರುಗಳ ಹೆಸರುಗಳು, ಇನಾಂದಾರರ ಹೆಸರುಗಳು, ಖುಷ್ಕಿ, ತರಿ, ಆಕಾರ ಎಕರೆ ಗುಂಟೆಗಳು, ಇನಾಂದಾರ್ ಶೀನಪ್ಪ ಬಿನ್ ಅನಂತಾಚಾರ್ಯರಿಂದ ಆರಂಭಿಸಿ ಜೋಡಿ ಯಿನಾಂ ಕೂಡ್ಲಿಗಿ ಅಣ್ಣಯ್ಯಾಚಾರ್ಯ ಪ। ಶೀನಪ್ಪ ಅಣ್ಣ ಅನಂತಾಚಾರ್ಯರವರೆಗೆ ಅಂತೂ ಒಟ್ಟು ಬೇರೀಜು ೨೯ರವರೆಗೆ ಇರುವ ಸರಕಾರಿ ಮಾಹಿತಿಗಳು ಶಾಸನದ ಇತಿಹಾಸದಲ್ಲಿ ಗಮನಾರ್ಹವಾದುದು. ಇದರಲ್ಲಿರುವ ೨ ಮತ್ತು ೩ನೇ ಸರ್ವೆ ನಂಬರಿನಲ್ಲಿ ಕಂಡುಬರುವ ಜೋಡಿ ಯಿನಾಂ-ಯಿನಾಂದಾರ್ ಶ್ರೀನಿವಾಸಾಚಾರ್ಯ ಪಾಲಕಿ ವಗೈರೆ ಯಿಕಂ ೧೦; ಪರಂಪೋಕು ಕೆರೆ ಜೋಡಿ ಯಿನಾಂ; ಯಿನಾಂದಾರ್ ಶ್ರೀನಿವಾಸಾಚಾರ್ಯ ಪಾಲಕಿ ಮುಂತಾದ ಮಾಹಿತಿಗಳು ಶ್ರೀ ಕೂಡ್ಲೀ ಆರ್ಯ ಅಕ್ಷೋಭ್ಯತೀರ್ಥಮಠದ ಚರಿತ್ರೆಯನ್ನು ಅರಿಯಲು ಆಕರಗಳಿಗೆ ಸಹಾಯಕವಾಗಿವೆ.

**ಶ್ರೀ ಕೂಡ್ಲೀ ಆರ್ಯ ಅಕ್ಷೋಭ್ಯತೀರ್ಥಮಠ :** ದ್ವೈತ ಸಿದ್ಧಾಂತಾಚಾರ್ಯ ಮಧ್ವಾಚಾರ್ಯರಿಗೆ (೧೨೩೮- ದಿ.

೨೨-೧-೧೩೧೭ ಶನಿವಾರ) ಡಾ. ಬಿ.ಎನ್.ಕೆ. ಶರ್ಮರವರ ಪ್ರಕಾರ ಪದ್ಮನಾಭ ತೀರ್ಥ (1324 AD) ನರಹರಿತೀರ್ಥ (1333 AD) ಮಾಧವ (1350 AD) ಅಕ್ಷೋಭ್ಯತೀರ್ಥ (1365 AD) ರು ನಾಲ್ವರು ಶಿಷ್ಯರು. ಎಪಿಗ್ರಾಫಿಯ ಇಂಡಿಕಾ, ಸಂ VI ನಂ 25 ರ ಮೇರೆಗೆ ನರಹರಿತೀರ್ಥರ ಶಾಸನವಿದೆ. ಕ್ರಿ.ಶ. ೧೩೮೮ ರಲ್ಲಿದ್ದ ಜಯತೀರ್ಥರು ಅಕ್ಷೋಭ್ಯತೀರ್ಥ ಶಿಷ್ಯರು ವಿದ್ಯಾರಣ್ಯರ ಸಮಕಾಲೀನರಾದ ಇವರ ಜೀವನ ಚರಿತ್ರೆಯಲ್ಲಿ ಶ್ರೀವಿದ್ಯಾರಣ್ಯರು ಜಯತೀರ್ಥರಿಗೆ ರಾಜಸನ್ಮಾನ ಮಾಡಿದರೆಂದು ಉಲ್ಲೇಖನ ಗೊಂಡಿದೆ.[೫] ವಿಜಯನಗರ ಚಕ್ರವರ್ತಿಗಳು ಅದ್ವೈತ, ದ್ವೈತ, ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತಗಳ ಸಮಾನ ಪೋಷಕರಾಗಿದ್ದರು. ಕ್ರಿ.ಶ. ೧೩೩೩ರಲ್ಲಿದ್ದ, ನರಹರಿತೀರ್ಥರು ೧೩೨೪ರಲ್ಲಿದ್ದ ಪದ್ಮನಾಭತೀರ್ಥರು ವಿಜಯನಗರ ಆನೆಗೊಂದಿಯಲ್ಲಿದ್ದರೆಂದು ಕಾಣುತ್ತದೆ. ಇವರ ಕುರಿತು ಧಾರ್ಮಿಕ ಇತಿಹಾಸ ಸಂಶೋಧನೆ ಅಗತ್ಯವೆಂದು ಹೇಳಬಹುದು.

ಎ.ಕ. ಸಂ. VII (1902-pp 42-43) ರ ಮೇರೆಗೆ ಕೂಡ್ಲಿ ಮಠವನ್ನು ಕುರಿತು- There are two Mathas at Kudli. The Sringeri Mathas of the Smartha sect and the Arya Matha of the Madhva sect, called the kudli matha or stone matha of the inscriptions of the Arya matha sh. 84 is a grant to Narayana yatindra, disciple of Raghupati Yatindra, sh 85 is a grant to Vyasatirtha yatindra disciple of Brahmanyatirtha.

**ಶಿವಮೊಗ್ಗ ತಾಲ್ಲೂಕಿನ ೮೪ನೇ ಶಾಸನದಲ್ಲಿಯ ಸಾಲುಗಳು :**

೬೧ ಉತ್ಥಾನ ದ್ವಾದಶೀ ತಿಥೌ। ತುಂಗಭದ್ರಾನದೀ ತೀರೇ [ತು]ಂಗತ್ಕಲ್ಲೋಲ ಶೀತಳೇ । ಸಂನ್ನಿ

೬೨ ಧೌವಿಠಲೇಶಸ್ಯ ಸರ್ವಸಂಪದ್ವಿಧಾಯಿನಿ। ಶ್ರೀಮತ್ಪರಮ ಹಂಸಾಖ್ಯ ಪರಿವ್ರಾ

೬೩ ಜೇ ಮಹಾತ್ಮನೇ । ಪದವಾಕ್ಯ ಪ್ರಮಾಣಾಖ್ಯ ಸರಸ್ವತ್ಯಾರ ದೃಶ್ಯನೇ । ವೈಷ್ಣವಾಗ

೬೪ ಮಸಿದ್ಧಾಂತ ಪ್ರತಿಷ್ಠಾಚಾರ್ಯಮೌಳಯೇ । ನಿಗಮಾಗಮ ನಿರ್ಣೀತ ನಿರ್ಜರಾಧೀಶ

೬೫ ಮಂತ್ರಿಣೇ । ನೃಪೇಂದ್ರಮುಕುಟೀರತ್ನ ನೀರಾಜಿತ ನಿಜಾಂಘ್ರಯೇ । ನಿರಹಂಕಾರಚಿ

೬೬ ತ್ತಾಯ ನೀತಿಮಾರ್ಗೋಪದೇಶಿನೇ । **ಕುಡಲ್ಯಾರ್ಯ** ಮಠೀಯಾಯ ಕಲುಷಾಸ್ಪೃಷ್ಟಮೂ

೬೭ ರ್ತಯೇ । ಶಿಷ್ಯಾಯ ಶ್ರೀ ರಘುಪತೇಯತೀಂದ್ರಸ್ಯ ಮಹಾತ್ಮನಃ । ಶ್ರೀನಾರಾಯಣಯತೀಂ

೬೮ ದ್ರಾಯ ಶ್ರಿತಕಾಮಿತದಾಯಿನೇ । ಆರಗಾಖ್ಯ ಮಹಾಗ್ರಾಮ ವೇಂಠೇಯ ವಿಹಿತಸ್ಥಿ

೬೯ ಸ್ಥಿತಂ । ಹ್ವಳೀಹಟ್ಯಾಭಿದಂಗ್ರಾಮಂ ಹುರುಳೀಹಳಿನಾಮಕಂ ತಥಾ ಬುಳಾಪುರಂ ಗ್ರಾಮಂಖೀರ

೮೭ ಗ್ರಾಮಾಣಾಂ ರೇಖಾ - ಹ್ವಳೀಹಟೀರೆಖಾ

ಕೂಡ್ಲಿ ದ್ವೈತ ಆರ್ಯ ಅಕ್ಷೋಭ್ಯತೀರ್ಥ ಸಂಸ್ಥಾನ ಮಠದಂತೆ ತೀರ್ಥಹಳ್ಳಿ ತಾಲ್ಲೂಕಿನ 'ಬಾಳುಗಾರು' ಎಂಬಲ್ಲಿಯೂ ಮಠ ವೊಂದಿದ್ದು, ತಹಸೀಲ್ದಾರ್ ದಿ॥ ಕಸಗಾರು ಮಾಧವರಾಯ ರೊಂದಿಗೆ ಇಲ್ಲಿಯ ಅಭಿಲೇಖಾ ಪತ್ರಾಗಾರದ ಚಾರಿತ್ರಿಕ ದಾಖಲೆಗಳ ಕ್ಯಾಟಲಾಗ್ ನಾನು ಸಿದ್ಧಪಡಿಸಿದ್ದು ಇನ್ನೂ ಪ್ರಕಟ ವಾಗಿಲ್ಲ.

**ಗಾಜನೂರು ಅಗ್ರಹಾರದಲ್ಲಿ ಪಲ್ಲಕ್ಕಿ ಆಚಾರ್ಯ ಮನೆತನ**

ಹಿಂದೆಯೇ ನಿರೂಪಿಸಿದಂತೆ ಇನಾಂ ರಿಜಿಷ್ಟರಿನ ರೆವಿನ್ಯೂ ದಾಖಲೆಯ ೧೧ನೇ ಕಾಲಂನಲ್ಲಿ ಉಲ್ಲೇಖನಗೊಂಡ ಕೆಳದಿ ಬಸಪ್ಪನಾಯಕನ ತಾಮ್ರಶಾಸನದಲ್ಲಿ - ಅಗ್ರಹಾರದ ವೃತ್ತಿಗಳು ಈ ಕೆಳಕಂಡಂತಿವೆ.

| | | |
|---|---|---|
| 1805 | ಬೇರೀಜು | 40-2-2 |
| | ಅರೆವಾಸಿ ಪಗಡಿ | 20-1-1 |
| | ಜಾರಿ | 20-1-1 |
| | (೧) ಕೂಡ್ಲಿ ನರಸಿಂಹಾಚಾರ್ಯ | V-2 |
| | (೨) ಪಲ್ಲಕ್ಕಿ ಕೃಷ್ಣಾಚಾರ್ಯ | V-1 |
| | (೩) ತಿಮ್ಮಣ್ಣಾಚಾರ್ಯ | V-1 |
| | (೪) ವೆಂಕಟಾಚಾರ್ಯ | V-1 |
| | (೫) ಶೇಷಗಿರಿಯಾಚಾರ್ಯ | V-1 |
| | (೬) ಹಲಸಿನಕಟ್ಟೆ ವೆಂಕಟಾಚಾರ್ಯ | V-1 |
| | (೭) ನಾರಾಯಣಾಚಾರ್ಯ | V-1 |

ನಂ. ೮ ರಿಂದ ೧೩ ರವರೆಗಿನ ದಾಖಲೆಗಳು ತ್ರುಟಿತ.

| | | |
|---|---|---|
| ೧೮೩೪ | ಬೇರೀಜು | ೪೧-೩-೧೪ |
| | ಸರಕಾರಿ ಬಾಜೇಬಾಬು | ೧-೧-೧೨ |
| | ಉತ್ತಾರ | ೪೦-೨-೨ |

(೧) ಕೂಡ್ಲಿ ಗುರುರಾಯಾಚಾರ್ಯ
(೨) ಪಲ್ಲಕ್ಕಿ ಕೃಷ್ಣಾಚಾರ್ಯ
(೩) ಶ್ರೀನಿವಾಸಾಚಾರ್ಯ
(೪) ಭೀಮಾಚಾರ್ಯ
(೫) ಉಪಾಧ್ಯ ಶೇಷಗಿರಿಯಾಚಾರ್ಯ
(೬) ಗುರುರಾಯಾಚಾರ್ಯ
(೭) ಅನಂತಾಚಾರ್ಯ
(೮) ಅಯಾಚಿತ ಸುಮತೀಂದ್ರಾಚಾರ್ಯ
(೯) ಭೀಮಾಚಾರ್ಯ
(೧೦) ಸವಾಯಿ ವೆಂಕಟಪ್ಪಾಚಾರ್ಯ
(೧೧) ತ್ಯಾಕಲ್ ರಾಮಭಟ್ಟ

1862 ಬೇರೀಜು : ರೂ. 152-1-1
ಪಗಡಿ : - 76-0-6 ಜಾರಿ : - 76-0-7

(೧) ಪಲ್ಲಕ್ಕಿ ಕೃಷ್ಣಾಚಾರ್ಯ
(೨) ಹನುಮಂತಾಚಾರ್ಯ
(೩) ಶ್ರೀನಿವಾಸಾಚಾರ್ಯ
(೪) ಸುಬ್ಬಣ್ಣಾಚಾರ್ಯ
(೫) ಕೃಷ್ಣಾಚಾರ್ಯ
(೬) ಅಣ್ಣಾಚಾರ್ಯ, ವೆಂಕಟರಮಣಾಚಾರ್ಯ, ರಂಗಾಚಾರ್ಯ
(೭) ನಲ್ಲೂರು ಕೃಷ್ಣಾಚಾರ್ಯ
(೮) ರಾಘವೇಂದ್ರಾಚಾರ್ಯ, ಸುಬ್ಬಣ್ಣಾಚಾರ್ಯ, ಪುಟ್ಟಾಚಾರ್ಯ
(೯) ಸವಾಯಿ ನರಸಿಂಗಪ್ಪ

**ಕೂಡ್ಲಿ ಅಕ್ಷೋಭ್ಯ ಮಠದ ಇತಿಹಾಸದಲ್ಲಿ ಪಲ್ಲಕ್ಕಿ ಕೃಷ್ಣಾಚಾರ್ಯರು** : ಪಲ್ಲಕ್ಕಿ ಕೃಷ್ಣಾಚಾರ್ಯರ ಕುರಿತು ರೋಚಕ ಇತಿಹಾಸ ವಿರುವುದು ಕಂಡುಬರುತ್ತದೆ. ಕ್ರಿ.ಶ. ೧೫೫೯ಲರಿಂದ ೧೬೭೧ರ ವರೆಗೆ ವೈಭವದ ಧಾರ್ಮಿಕ ಇತಿಹಾಸವನ್ನೊಳಗೊಂಡ ಮಂತ್ರಾಲಯದ ಶ್ರೀ ರಾಘವೇಂದ್ರ ಯತಿಗಳ ಸಮಕಾಲೀನ ಚರಿತ್ರೆಯಲ್ಲಿ ಈ ಮನೆತನವು ಸಮ್ಮಿಳಿತಗೊಂಡಿದ್ದೆಂದು ಹೇಳ ಲಾಗಿದೆ. ಆಂಧ್ರರಾಜ್ಯಕ್ಕೆ ಸೇರಿದ ಮಂತ್ರಾಲಯದ ಇತಿಹಾಸವು ಕೇವಲ ಒಂದು ಪ್ಯಾರಾದಲ್ಲಿ ಹೀಗಿದೆ :

Venkatanatha popularly known as Raghavendra swamy (1623-1671)[೭] strengthened Vaishnavism. in kanara in the 17th century. He served as a pontiff of the Kumbhakonam Matha after Sudhindra Thirtha. As a missionary Raghavendra toured places in south kanara, Subrahmanya and udupi. In the course of his tour he attracted a sizable section of the people to his teaching[೮]. He is supposed to have written 46 works and commentaries, elucidating the philosophy of Madhavacharya[೯] Some of the literary works are parimala, Nyayamuktavali, (Bedabodhini), Tatwamanjari, Bhavasangraha, Tantradipike etc.,[೧೦] He wrote all these works in the interval of his tours from one place to another. For example gurugunasatva and Tanthradipike were written while Raghavendra was at udupi.[೧೧] This Raghavendra is a link between purandara and vijayadasa groups.[೧೨]

ಶ್ರೀ ರಾಘವೇಂದ್ರರು ಕುಂಭಕೋಣಂನಲ್ಲಿದ್ದಾಗ ತಾಮ್ರ ಪರ್ಣಿನದಿಯಲ್ಲಿ ಪಲ್ಲಕ್ಕಿ ಕೃಷ್ಣಾಚಾರ್ಯರ ಸಮಾಗಮ ಒದಗಿತೆಂದು ಉಕ್ತವಾಗಿದೆ. ಇದೇ ಪೀಳಿಗೆಯವರಾದ ಶ್ರೀ ಪ.ರಾ. ಶ್ರೀನಿವಾಸ ರವರ ಪ್ರಕಾರ ಶ್ರೀ ರಾಘವೇಂದ್ರರು ಕೃಷ್ಣಾಚಾರ್ ರವರಿಗೆ ಪೂಜಿಸಲು ದೇವರ ಮೂರ್ತಿಗಳನ್ನು ನೀಡಿದರೆಂದೂ, ಪೂಜಾದಿ ಕೈಂಕರ್ಯಕ್ಕಾಗಿ ಗಂಧದ ಕೊರಡನ್ನು ತೀರಾ ಇತ್ತೀಚಿನವರೆಗೂ (೧೯೬೬-೭೦) ಶಿವಮೊಗ್ಗದಲ್ಲಿರುವ ಈ ಪೀಳಿಗೆಯವರಿಗೆ ಮಂತ್ರಾಲಯದಿಂದಲೇ ಕಳುಹಿಸುತ್ತಿದ್ದು, ಗೌರವಧನವಾಗಿ ಪ್ರತಿ ಸಾಲಿನಲ್ಲಿಯೂ ರೂ. ೨೫/ ರಂತೆ ಹಾಗೂ ಕಾಲಾನಂತರ ಇದನ್ನು ಹೆಚ್ಚಿಸಿ ರೂ. ೬೦/-ರಂತೆ ಪಾವತಿಸುತ್ತಿರುವ ಮಾಹಿತಿಯು ಮಂತ್ರಾಲಯದಲ್ಲಿದ್ದು, ಅಲ್ಲಿನ ಹಸ್ತಪ್ರತಿಗಳ ಹಾಗೂ ಪತ್ರಾಗಾರದ ಸಂಶೋಧನೆಯಲ್ಲಿ ತೊಡಗುತ್ತಿದ್ದೇವೆ. "ಪಲ್ಲಕ್ಕಿ" ಎಂಬ ಬಿರುದನ್ನು ಕುರಿತು ಸಂಶೋಧನೆಯಲ್ಲಿ ಈ ಕೆಳಗಿನ ಅಂಶಗಳು ಕಂಡುಬರುತ್ತವೆ.

Kondubhatta, in his **Vaiyakarana Bhubhanasara** claims that his father Rangoji Bhatta, defeated vidyadhisha[೧೩] in a debate, which took place in the court of venkatappa Nayaka of KELADI (1582-1629)[೧೪] and obtained from the ruler, The honour of the present of a **palanquin** in token of his victory.[೧೫]

ವಿದ್ಯಾಧೀಶವಡೇರು ಸಂಜ್ಞಕಯತಿ[೧೬] ಶ್ರೀಮಾಧ್ವಭಟ್ಟಾರಕಂ।
ಜಿತ್ವಾ ಕೇಲದಿ[೧೭] ವೇಂಕಟಯ್ಯ[೧೮] ಸವಿಧೇsಪ್ಯಾಂದೋಲಿಕಾಂ ಪ್ರಾಪ್ತವಾನ್ ॥
ಯಶ್ಚಕ್ರೇ ಮುನಿವರ್ಯಸೂತ್ರವಿವೃತಿಂ ಸಿದ್ಧಾಂತಭಂಗಂ ತಥಾ।
ಮಾಧ್ವಾನಾಂ, ತಮಹಂ ಗುರೂಪಮಗುರುಂ ರಂಗೋಜಿ ಭಟ್ಟಂಭಜೇ॥

ಪಲ್ಲಕ್ಕಿ ಕೃಷ್ಣಾಚಾರ್ಯರ ಪೀಳಿಗೆಯವರೇ ಆದ ಶ್ರೀ ಪ.ರಾ. ಶ್ರೀನಿವಾಸರವರು ನೀಡಿದ ವಂಶವೃಕ್ಷದ ಮಾಹಿತಿಯ ಹಾಗೂ ಇತರೆ ದಾಖಲೆಯ ಮೇರೆಗೆ, ಕೋಲಾರ ಜಿಲ್ಲಾ ಗೌರೀಬಿದನೂರು ತಾಲ್ಲೂಕಿನ ಮಾಳೇನಹಳ್ಳಿಯಲ್ಲಿರುವ ಇನಾಂ ಭೂಮಿಗಳು, ತುಮಕೂರು ಜಿಲ್ಲೆ ಮಧುಗಿರಿಯಲ್ಲಿ ೧೮೭೬ನೇ ಇಸವಿ ಮೈಸೂರು ರೆವಿನ್ಯೂ ಸರ್ವೆ ಮಠದ ಗದ್ದೆ ನಂ. ೭ ಜೋಡಿ ಇನಾಂ ಸಾಗು ಭೂಮಿ ಹಾಗೂ ಗೃಹನಿವೇಶನಗಳು ಲಭಿಸಿದ್ದ ಮಾಹಿತಿಗಳಿವೆ. ಕೃಷ್ಣಾಚಾರ್ ಅಥವಾ ಈ ಪೀಳಿಗೆಯವರು ಧಾರ್ಮಿಕ ಸುಧಾರಣೆ ಯಲ್ಲಿ ಪಲ್ಲಕ್ಕಿಯಲ್ಲಿಯೇ ಸಂಚರಿಸುತ್ತಿದ್ದಾಗ ಕೋಲಾರ, ಮಧುಗಿರಿ ಪಾಳೆಯಗಾರರುಗಳಿಂದ ಸನ್ಮಾನಿಸಲ್ಪಟ್ಟು ಇನಾಂ ಭೂಮಿಗಳನ್ನು ಪಡೆದುಕೊಂಡರೆಂಬುದನ್ನು ತರ್ಕಿಸಲು ಅವಕಾಶವಿದೆ. ಆದರೆ ಕೆಳದಿ ವೆಂಕಟಪ್ಪನಾಯಕನಿಂದ ಪಡೆದು ಕೊಂಡ ಪಲ್ಲಕ್ಕಿ ಹಾಗೂ ಈ ಬಿರುದು ಕುರಿತು ಡಾ. ಬಿ.ಎನ್.ಕೆ. ಶರ್ಮರವರ ಸಂಶೋಧನೆ ಯಲ್ಲಿ ಕೂಡ್ಲಿ ಅಕ್ಷೋಭ್ಯ ತೀರ್ಥಮಠಕ್ಕೆ ಅಥವಾ ದಾಖಲೆಯಲ್ಲಿ ಕಂಡುಬರುವ ಪಲ್ಲಕ್ಕಿ ಕೃಷ್ಣಾಚಾರ್ಯರು ಹಾಗೂ ಪಾಲಕಿ ಶ್ರೀನಿವಾಸಾಚಾರ್ಯರ ಬಗ್ಗೆ ಕೂಡ್ಲಿಮಠದ ಪೀಠ ಪರಂಪರೆಯಲ್ಲಿ ಖಚಿತ ಆಕರಗಳು ಸಂಶೋಧನೆಯಲ್ಲಿ ಗೋಚರಿಸುವವರೆಗೂ ಯಾರು ಎಂಬುದನ್ನು ತೀರ್ಮಾನ ಕೈಗೊಳ್ಳುವುದು ಸಧ್ಯ ಸಾಧ್ಯವಿಲ್ಲ!

**ಕೂಡ್ಲಿ ಅಕ್ಷೋಭ್ಯತೀರ್ಥ ಪೀಠಾಧಿಕಾರಿ ಶ್ರೀ ರಘುವರ್ಯ ತೀರ್ಥರು :** ಡಾ. ಬಿ.ಎನ್.ಕೆ. ಶರ್ಮರವರು ಹಾಗೂ ಪಂ॥ ಚಿಕ್ಕೇರೂರು ಗೋವಿಂದಾಚಾರ್ಯರ ಕೃತಿಗಳಲ್ಲಿ ಈ ಪೀಠ ಪರಂಪರೆಯ ಹೆಸರುಗಳು ಕೆಳಕಂಡಂತಿವೆ.

| **ಡಾ. ಬಿ.ಎನ್.ಕೆ. ಶರ್ಮ** | **ಗೋವಿಂದಾಚಾರ್ಯ** |
|---|---|
| ೧ ಅಕ್ಷೋಭ್ಯ ತೀರ್ಥರು (1365 AD) | ೧ ಅಕ್ಷೋಭ್ಯ ತೀರ್ಥರು (1350-1367 AD) |
| ೨ ತ್ರೈಲೋಕ್ಯಭೂಷಣ | ೨ ತ್ರೈಲೋಕ್ಯಭೂಷಣ |
| ೩ ಲೋಕವಂದಿತ | ೩ ಲೋಕವಂದಿತ |
| ೪ ಸುಲಭ | ೪ ಸುಲಭ |
| ೫ ರಘುಪುಂಗವ | ೫ ರಘುಪುಂಗವ |
| ೬ ರಘುನಾಥ | ೬ ರಘುನಾಥ |
| ೭ ರಘುವರ್ಯ | ೭ ರಘುವಂದ್ಯ |
| ೮ ರಘುನಂದನ | ೮ ರಘುನಂದನ |
| ೯ ವಿದ್ಯಾನಿಧಿ | ೯ ವಿದ್ಯಾನಿಧಿ |
| ೧೦ ರಘುಪತಿ | ೧೦ ರಘುಪತಿ |
| ೧೧ ನಾರಾಯಣ[೧೯] | ೧೧ ನಾರಾಯಣ ತೀರ್ಥ |
| ೧೨ ಮುಕುಂದ | ೧೨ ಮುಕುಂದ ತೀರ್ಥ |
| ೧೩ ರಘುಪತಿ | ೧೩ ರಘುಪತಿ |
| ೧೪ ರಾಮಚಂದ್ರ | ೧೪ ಶ್ರೀರಾಮಚಂದ್ರ |
| ೧೫ ರಘುರಾಜ[೨೦] | ೧೫ ರಘೂತ್ತಮ |
| ೧೬ ರಾಮಚಂದ್ರ | ೧೬ ರಘುರಾಜ |
| ೧೭ ರಘುವರ್ಯ | ೧೭ ರಘುಪತಿ |
| ೧೮ ರಘುವಲ್ಲಭ | ೧೮ ರಾಮಚಂದ್ರ ತೀರ್ಥ |
| ೧೯ ರಘುಪ್ರಿಯ | ೧೯ ಶ್ರೀರಾಮ ತೀರ್ಥ |
| ೨೦ ರಘುವರ್ಯ | ೨೦ ರಘುವರ್ಯ |

ಚಿಕ್ಕೇರೂರು ಗೋವಿಂದಾಚಾರ್ಯರು ಹಾಗೂ ಡಾ. ಬಿ.ಎನ್.ಕೆ. ಶರ್ಮರವರ ಕೃತಿಯಲ್ಲಿ ಕಂಡುಬರುವ ೨೦ನೇ ರಘುವರ್ಯತೀರ್ಥರೇ ಶಿವಮೊಗ್ಗದಲ್ಲಿದ್ದ ಪಲ್ಲಕ್ಕಿ ಮನೆತನದ ಶ್ರೀನಿವಾಸಾಚಾರ್ಯರೆಂಬುದನ್ನು ಗುರ್ತಿಸುವಲ್ಲಿ ಅದು ಸ್ವಲ್ಪಮಟ್ಟಿಗೆ ಸಹಕಾರ ನೀಡುತ್ತದೆ. ಬಿ.ಎನ್.ಕೆ. ಶರ್ಮರ ೧೯ನೇ ರಘುಪ್ರಿಯ ತೀರ್ಥರ ಕುರಿತು ತರ್ಕಕ್ಕೀಡು ಮಾಡಿದೆ. ಪಲ್ಲಕ್ಕಿ ಮನೆತನದವರು ಮಂತ್ರಾಲಯದ ಶ್ರೀರಾಯರ ಮಠಕ್ಕೆ ಸೇರಿದವರು. ಬೇರೆ ಮಠ ಸಂಪ್ರದಾಯದವರು ಶ್ರೀ ಕೂಡ್ಲಿ ಆರ್ಯ ಅಕ್ಷೋಭ್ಯತೀರ್ಥರ ಮಠಕ್ಕೆ ಅಭಿಷಿಕ್ತರಾದವರಲ್ಲಿ ಪಲ್ಲಕ್ಕಿಯವರೇ ಮೊದಲಿಗರು. (ಶ್ರೀ ಶ್ರೀ ರಘುಶಾಂತತೀರ್ಥ ಲಿಖಿತ ಮಠ ಪರಂಪರಾ ಮುಚ್ಚಲಿಕಾ) ದಿವಾನ್ ಪೂರ್ಣಯ್ಯನವರ ದಿನಾಂಕ ೩೦-೬-೧೮೧೦ರ ಪತ್ರ ಹಾಗೂ ಮೈಸೂರು ರೆವಿನ್ಯೂ ಸರ್ವೆ ೧೮೩೬ರ ದಾಖಲೆ ಮೇರೆಗೆ ಈ ಕಾಲದಲ್ಲಿ ರಘುವರ್ಯರು ಇದ್ದರೆಂಬುದು ವ್ಯಕ್ತಪಡುತ್ತದೆ.[೨೧] ಪರಂಪರೆ ೭ ಮತ್ತು ೧೯ನೇ ಪರಂಪರೆಯ ನಾಮಾಂಕಿತಗಳು ವಿಭಿನ್ನವಾಗಿದ್ದು ಖಚಿತತೆ ಅಗತ್ಯ. ೧೭೯೧ರಲ್ಲಿ ಮಹಾರಾಷ್ಟ್ರದ ಪರಶುರಾಮಭಾವು ಶೃಂಗೇರಿ ಮತ್ತು ಅಕ್ಷೋಭ್ಯತೀರ್ಥ ಮಠವನ್ನು ಅಗ್ನಿಗಾಹುತಿ ಮಾಡಿದ್ದರಿಂದ ಅನೇಕ ಪಳೆಯುಳಿಕೆಗಳು ನಾಶವಾಗಿರುವುದು ವ್ಯಕ್ತಪಡುತ್ತದೆ.[೨೨]

ಈ ಕೆಳಗಿನ ಕೃತಿಗಳ ಕುರಿತು ಪಲ್ಲಕ್ಕಿ ಮನೆತನದವರ ವಿದ್ವತ್ ಪ್ರಭಾವವನ್ನು ಪರಿಶೋಧನೆಯಲ್ಲಿ ಕಂಡುಕೊಳ್ಳುವ ಅಗತ್ಯವಿದೆ.

**I ಶ್ರೀ ಮಂತ್ರಾಲಯದಲ್ಲಿರುವ ಹಸ್ತಪ್ರತಿ.**[೨೩]

೧) ನಂ. ೨೯; ಸ್ಮೃತಿ ಮುಕ್ತಾವಲಿ ಕಾಲ ನಿರ್ಣಯ, ೨) ನಂ. ೩೦; ಪೂರ್ವಪ್ರಯೋಗ, ೩) ನಂ. ೩೧; ಮಂತ್ರ ಸಂಗ್ರಹ.

**II ಉತ್ತರಾದಿ ಮಠದಲ್ಲಿರುವ ಹಸ್ತಪ್ರತಿಗಳು**

೧. ನಂ. ೭೨ ಸಿದ್ಧಾಂತ ಶಿಖಾಮಣಿಃ ; ಶ್ರೀನಿವಾಸಾಚಾರ್ಯಃ?

೨. ನಂ. ೯೯ ಕಾಲನಿರ್ಣಯಃ ; ಕೃಷ್ಣಾಚಾರ್ಯಃ

೩. ನಂ. ೩೩೬ ವಿಷ್ಣುತತ್ವನಿರ್ಣಯ ಟಿಪ್ಪಣಿ ; (ತಾಮ್ರ ಪರ್ಣೀಯಂ?) ಶ್ರೀನಿವಾಸತೀರ್ಥ?

೪. ನಂ. ೩೫೮ ಐತರೇಯ ಭಾಷ್ಯರತ್ನಮಾಲಾ ತಾಮ್ರಪರ್ಣಿ ಶ್ರೀನಿವಾಸಾಚಾರ್ಯಃ

**III ಗೋವಿಂದ ಪೈ ಸಂಶೋಧನಾ ಕೇಂದ್ರ ಉಡುಪಿ**

1/T 52 ವಿಷ್ಣುತತ್ವನಿರ್ಣಯ ಟೀಕಾ ವ್ಯಾಖ್ಯಾನ (ಅಪೂರ್ಣ) ಶ್ರೀನಿವಾಸತೀರ್ಥ?

2/N 19 ಮಾಯಾವಾದ ಖಂಡನ ಟೀಕಾ ಶ್ರೀನಿವಾಸ ತೀರ್ಥೀಯ

IV Descriptive Catalogue of Sanskrit Mss. (K.T. Pandurangi)

(1) P. 184. ಪ್ರಮೇಯ ಮುಕ್ತಾವಲೀ - ತಾಮ್ರಪರ್ಣಿ ಶ್ರೀನಿವಾಸ

V Alphabetical list of Mycrofilms : ORI, Mysore No. 1 N 201 ಮಹಾಭಾರತ ತಾತ್ಪರ್ಯ ನಿರ್ಣಯ ವ್ಯಾಖ್ಯಾ ಕೃಷ್ಣಾಚಾರ್ಯ.

(2) N 806 ರಹಸ್ಯತ್ರಯ ಸಾರ ವಿವರಣಮ್ ಶ್ರೀನಿವಾಸಾಚಾರ್ಯಃ

(3) N 807 ರಹಸ್ಯತ್ರಯ ಸಾರ ವಿವರಣಮ್ ಶ್ರೀನಿವಾಸಾ ಚಾರ್ಯಃ

(4) N 808 ರಹಸ್ಯತ್ರಯ ಸಾರ ವಿವರಣಮ್ ಶ್ರೀನಿವಾಸಾ ಚಾರ್ಯಃ

(5) N 53 ಶ್ರೀಕೃಷ್ಣಲೀಲಾ ಮಣಿಮಾಲಿಕಾ? ಶ್ರೀನಿವಾಸಾ ಚಾರ್ಯಃ

**ಉಪಸಂಹಾರ**

ಈವರೆಗಿನ ಕೆಳದಿ ಅರಸರ ಕಾಲದ ೧೮ ಅಗ್ರಹಾರಗಳಲ್ಲಿ ರೆವಿನ್ಯೂ ದಾಖಲೆಯಲ್ಲಿ ಕಂಡುಬರುವ ಗಾಜನೂರು ಅಗ್ರಹಾರವು ಸೇರಲು ಅರ್ಹವಾಗಿರುವುದು ಗಮನಾರ್ಹವಾಗಿದೆ. ೧೭೯೯ರ ಟಿಪ್ಪುವಿನ ತರುವಾಯ ಬ್ರಿಟಿಷರ ಮೈಸೂರು ಸಂಸ್ಥಾನದಲ್ಲಿ ೧) ನಗರ, ೨) ಅಗ್ರಹಾರ, ೩) ಚಿತ್ರದುರ್ಗ ವಿಭಾಗಗಳಲ್ಲಿ ನಗರ ವಿಭಾಗದ ಸೂಪರಿಂಟೆಂಡೆಂಟ್ ಕಾಲದ ಈ ಚಾರಿತ್ರಿಕ ದಾಖಲೆಯು ಆಕರಗಳ ಸಾಲಿಗೆ ಸೇರುತ್ತವೆ. ಈ ದಿಸೆಯಲ್ಲಿ ೧೮೫೫ರ ಇನಾಂ ರಿಜಿಸ್ಟರ್ ಒಂದು ಕಂಡುಬಂದಿದ್ದು, ಇದು ನಾಶವಾಗುವ ಮುನ್ನವೇ ಪ್ರಕಟವಾಗುವುದು ಅತ್ಯಗತ್ಯ. ಹಾಗೆಯೇ ಉಡುಪಿ ಇತ್ಯಾದಿ ದ್ವೈತ ಮಠಗಳಲ್ಲಿರುವ ಪತ್ರಾಗಾರ ಸಂಗ್ರಹಗಳ ಅಧ್ಯಯನ ಕೈಗೊಂಡು ಸಿದ್ಧಪಡಿಸಿ ಪ್ರಚುರಪಡಿಸುವುದು ಅತ್ಯಗತ್ಯ. ಸ್ವಾತಂತ್ರ್ಯಾನಂತರ ಧಾರ್ಮಿಕ ಪೀಠಗಳು ನ್ಯಾಯ ತೀರ್ಮಾನ

ಗಳಿಗೆ, ತಮ್ಮಲ್ಲಿರುವ ತಾಮ್ರಪಟಗಳು ಚಾರಿತ್ರಿಕ ದಾಖಲೆಗಳನ್ನು ನ್ಯಾಯಾಲಯಗಳಿಗೆ ಒಪ್ಪಿಸುತ್ತಿರುವುದು ದುರ್ದೈವ! ನ್ಯಾಯಾಲಯದಲ್ಲಿ ಕಂಡುಬರುವ ಐತಿಹಾಸಿಕ ಆಕರ ಸಾಮಗ್ರಿಗಳನ್ನು ತಜ್ಞರ ಪರಿಶೀಲನೆಗೆ ತಂದು ನ್ಯಾಯ ತೀರ್ಮಾನ ಮಾಡುವುದು ಅಗತ್ಯ. ಇದರಿಂದ ಆಕರ ಸಾಮಗ್ರಿಗಳು ಪತ್ರಾಗಾರದ Catalogue ನಲ್ಲಿ ಸೇರಲು ಅರ್ಹವಾಗುತ್ತದೆ. ಈ ಕಾರಣದಿಂದ ನ್ಯಾಯಾಲಯ ಹಿಂದಿನ ಇನಾಂ ಕಮೀಷನರ್ ಕಛೇರಿ, ಸರ್ವೆ ಇಲಾಖೆ ಮುಂತಾದೆಡೆಯಲ್ಲಿರುವ ಐತಿಹಾಸಿಕ ದಾಖಲೆಗಳ ಕ್ಯಾಟಲಾಗನ್ನು ತಜ್ಞ ವಿದ್ವಾಂಸರೊಂದಿಗೆ ಸೇರಿ ಯೋಜನೆಗಳ ಮುಖಾಂತರ ಪ್ರಕಟಿಸುವುದೂ ಆದ್ಯಕರ್ತವ್ಯ. ದಿವಾನ್ ಪೂರ್ಣಯ್ಯನವರ ೧೮೧೦ಕ್ಕೂ ಮುಂಚಿನ ರಿಜಿಷ್ಟರುಗಳು ಪತ್ರಾಗಾರದಲ್ಲಿರುವುದನ್ನು ಸಂಪಾದಿಸಿ, ಪರಿಷ್ಕರಿಸಿ ಪ್ರಕಟಿಸುವುದೂ ಅಷ್ಟೇ ಪ್ರಾಮುಖ್ಯವಾದುದು.

ದ್ವೈತಿಕ ಪಂಥದ ಗಾಜನೂರು ಅಗ್ರಹಾರವು ಕೆಳದಿ ಬಸಪ್ಪ ನಾಯಕನ ಕಾಲದಲ್ಲಿ ವಿವಿಧ ವೃತ್ತಿಗಳೊಂದಿಗೆ, ದೈನಂದಿನ ಜೀವನದಲ್ಲಿ ಹೇಗೆ ಬಾಳಿ ಬೆಳಗಿತು ಎಂಬುದನ್ನು ಈ ಚಾರಿತ್ರಿಕ ದಾಖಲೆಯು ನೂತನ ಬೆಳಕನ್ನು ನೀಡಬಲ್ಲುದು. (ಈ ಸಂಶೋಧನೆಗೆ ನೆರವಾದ ಪಲ್ಲಕ್ಕಿ ಮನೆತನದ ಶ್ರೀ ಪ.ರಾ. ಶ್ರೀನಿವಾಸ್ ಹಾಗೂ ಇವರ ಮನೆತನದವರು, ಮಾಜಿ ಶಾಸಕ ಶ್ರೀ ಎಲ್.ಟಿ. ಹೆಗ್ಗಡೆರವರು, ಭೀಮನ ಕೋಣೆ ಶ್ರೀ ರಾಜಗೋಪಾಲ್‌ರವರಿಗೂ ಅತ್ಯಂತ ಕೃತಜ್ಞತೆಗಳನ್ನು ಸಲ್ಲಿಸುವೆನು.)

**ಅನುಬಂಧಗಳು**

**ಗಾಜನೂರು ಅಗ್ರಹಾರ ಪಲ್ಲಕ್ಕಿ ಕೃಷ್ಣಾಚಾರ್ ಮನೆತನದ ಕೆಳದಿ ಬಸಪ್ಪನಾಯಕನ ತಾಮ್ರ ಶಾಸನದ ಇತಿಹಾಸ ಪರಂಪರೆ**

| ನಂ. | ತಾಮ್ರ ಶಾಸನ ಮತ್ತು ದಾಖಲೆಗಳು ಕಾಲ | ಹೆಸರು | ವಿವರಣೆ |
|---|---|---|---|
| ೧. | Quit Rent Register No. 173 Sheet. 12-10-1872 7-1-1870 | ಪಲ್ಲಕ್ಕಿ ಕೃಷ್ಣಾಚಾರ್ | ಇವರ ಇತಿಹಾಸದಲ್ಲಿ ಕಂಡು ಬರುವ ತಾಮ್ರಪರ್ಣಿ ನದಿಯನ್ನು ಕುರಿತಂತೆ- ಶ್ರೀ ಮದ್ರಾಘವೇಂದ್ರ ವಿಜಯದಲ್ಲಿ (ಪು.೧೧೪). ಅಧಿ ತಾಮ್ರ ಪರ್ಣಿ ಸನಿಮಜ್ಯ ತತ್ತಟೇ ಲಸಿತಾಃ ಪ್ರಣಮ್ಯ ನವ ದೇವತಾಃ ಪರಾಃ। ಕೃತಮಾಲಿಕಾಸರಿದಲಂಕೃತಾಮಗಾನ್ಮಧುರಾಭಿಧಾಂ ಮಧುರವಾಙ್ಮಹಾಪುರೀಮ್॥೪೬॥ ಈ ಶ್ಲೋಕವು ಇವರಿಗೆ ಪೂರಕ ಆಕರವನ್ನೊದಗಿಸಬಲ್ಲುದು. (ಶ್ರೀ ನಾರಾಯಣಾಚಾಯ ವಿರಚಿತ-ಕನ್ನಡಾನು ವಾದ: ಅ. ರಾ. ಪಂಚಮುಖಿ ಮತ್ತು ರಾಜಾ ಎಸ್. ಪವಮಾನಾಚಾರ್ಯ - ೧೯೯೨) ಇದರಲ್ಲಿ ಗಾಜನೂರು ಅಗ್ರಹಾರ, ಕೆಳದಿ ಬಸಪ್ಪ ನಾಯಕನ ತಾಮ್ರಶಾಸನ ಉಲ್ಲೇಖ, ದಿವಾನ್ ಪೂರ್ಣಯ್ಯನವರ ಮಾಹಿತಿಯನ್ನೂ ಒಳಗೊಂಡಿದೆ. MAR 1944/ ದಿ 3-4-1679 ರ 29 ನೇ ಶಾಸನದಲ್ಲಿಯೂ ತಾಮ್ರಪರ್ಣಿಯ ಉಲ್ಲೇಖನವಿದೆ. ಮಂತ್ರಾಲಯದಲ್ಲಿ "ತಾಮ್ರಪರ್ಣಿ ಮಾಹಾತ್ಮ್ಯ" ಓಲೆಗರಿ ಹಸ್ತಪ್ರತಿಯೊಂದೂ ನನ್ನ ಸರ್ವೇಕ್ಷಣೆಯಲ್ಲಿ ಕಂಡುಬಂದಿದೆ. |
| 2. | ಮೈಸೂರು ರೆವಿನ್ಯೂ ಸರ್ವೆ ನಂ. ೨, ೩, ೫. (೧೮೩೬) | ಯಿನಾಂದಾರ್ ಶ್ರೀನಿವಾಸಾಚಾರ್ಯ ಪಾಲಕಿ. | ಇವರೇ ಕೂಡ್ಲಿ ಶ್ರೀ ಅಕ್ಷೋಭ್ಯತೀರ್ಥ ಮಠದಲ್ಲಿ "ಶ್ರೀ ರಘುವರ್ಯ ತೀರ್ಥ"ರೆಂಬ ನಾಮಾಂಕಿತದಲ್ಲಿ ಪೀಠಾಧಿಪತಿಗಳಾಗಿದ್ದರು. |
| 3. | ಮೈಸೂರು ರೆವಿನ್ಯೂ ಸರ್ವೆ; ಮೌಜೆತಾರೀಕಟ್ಟೆ (೧೮೭೬) | ಪಲ್ಲಕ್ಕಿ ಶ್ರೀನಿವಾಸಾಚಾರ್ಯ ಗಾಜನೂರು | ನಂ. ೧೮; ಓಣಿಹಕ್ಕಲು: ಪಲ್ಲಕ್ಕಿ ರಾಜಾಚಾರ್ಯರ ಉಲ್ಲೇಖನಗಳೂ ಈ ದಾಖಲೆಯಲ್ಲಿ ಕಂಡುಬಂದಿದೆ. Sd/- Doreswamy, Commissioner for Settlements and Land Records, Bangalore. |
| 4. | Mysore Revenue Survey No. 38 (1876) | ಇನಾಂದಾರ್ ಪಲ್ಲಕ್ಕಿ ಶ್ರೀನಿವಾಸಾಚಾರ್ | ದಿ. ೨೬-೧-೧೯೪೯ರ ದಾಖಲೆ ಮೇರೆಗೆ |

| | | | |
|---|---|---|---|
| 5. | ರಿಜಿಷ್ಟರು ದಾಖಲೆ<br>OS. No. 58<br>ದಿ. 25-7-1883 | ಪಲ್ಲಕ್ಕಿ ಶ್ರೀನಿವಾಸಾ<br>ಚಾರ್ಯರ ಮಕ್ಕಳು<br>ರಾಜಾಚಾರ್ಯರು | ನೋಂದಣಿಯಾದ ದಸ್ತಾವೇಜಿನಲ್ಲಿ ಕಂಡಂತೆ<br>ರಾಜಾಚಾರ್‌ರವರ ಹೆಸರು ವಂಶವೃಕ್ಷದಲ್ಲಿ<br>ಕಂಡುಬರುತ್ತದೆ. |
| 6. | Special DC<br>Inam Records<br>D. 8-11-1969 | Hanumantha Devaru<br>Gajanur Agrahara | Special D.C. for Abolition of<br>Tenants, Hassan Division<br>Abolition of Inams. |

ವಿ.ವಿ : ಕೆಳದಿ ಬಸಪ್ಪನಾಯಕನ ಕ್ರಿ.ಶ. ೧೭೧೩ರ ಈ ತಾಮ್ರ ಶಾಸನದ ಕಾಲದಿಂದ ಕೆಳದಿ ಇತಿಹಾಸೋತ್ತರ ಕಾಲದ ೧೭೬೩ರ ಕೆಳದಿ ರಾಜ್ಯದ ಪತನಾನಂತರ ಕೂಡ್ಲಿ ಅಕ್ಷೋಭ್ಯ ತೀರ್ಥ ಮಠದ ಗುರುಪರಂಪರೆಯಲ್ಲಿ ೧೮೧೬ರ ಶ್ರೀ ರಘುವರ್ಯ ತೀರ್ಥರವರೆಗೆ ಸುಮಾರು ೧೦೩ ವರ್ಷ ಕಾಲ ಇತಿಹಾಸ ಪರಂಪರೆಯಲ್ಲಿ ಪಳೆಯುಳಿಕೆಯಾಗಿ ಎಷ್ಟು ಪ್ರಾಮುಖ್ಯತೆ ಗಳಿಸಿದೆ ಎಂಬುದನ್ನು ಕಂಡುಕೊಳ್ಳಬಹುದಾಗಿದೆ. ಈ ಕಾರಣ ನೂತನ ಅನ್ವೇಷಣೆಯಲ್ಲಿ ಈ ಅಪ್ರಕಟಿತ ದಾಖಲೆ (xerox ಆಗಿದ್ದರೂ - ಮೂಲ ದಾಖಲೆ ಅಲಭ್ಯವಾಗಿದ್ದರಿಂದ) ಯ ಮಹತ್ವವನ್ನು ಮನಗಾಣಬಹುದು.

...ument in Support of the Inam.

| By whom granted and in what year. | Written instruments in support of the claims. original Sannad, all miscellaneous documents and other proofs of Long possession. In this column it should be stated whether the Inam is held with or without grant whether the grant is produced or lost &c, and the general specification of terms of all documents produced should be given. |
|---|---|
| 10 | 11. |
| Granted by Basappah naik a chief of Naggar in A.D. 1713 after the receipt of a Nuzza from the granter. | 1 Copper plate Sasanam. |

Name and Relationship of original grantee an

| Name of original grantee | Name entered in the Register prepared by poornaiah upto 1810 | Name entered in accounts Subsequent to 18 |
|---|---|---|
| 12 | 13 | 14 |
| yellanna's Son Jimmanna for building and endowing an aggrahar | 1805<br>Beriz. 40. 2. 2.<br>Aravasi pagadi } 20. 1. 1<br>Jari 20. 1. 1<br>1. Kudly Narasimhachari V. 2.<br>2. pallakki Krishnachari V. 1<br>3. Jimmannachari V. 1.<br>4. Venkatachari. V. 1.<br>5. Seshagiriyachari. V. 1<br>6. Halasinakatte. venkatachari V. 1.<br>7. Narayanachari V. 1<br>8. to 13. (Not Legible since torn) | 1834.<br>Beriz. p. 41. 3. 1<br>of which Cirkar Bajebab } 1. 1. 1.<br>uttar — 40. 2.<br>pagadi — 20. 1. 1<br>Jari — 20. 1. 1<br>1. Kudly. Gururayachari<br>2. pallaki Krishnachari<br>3. Srinivasachari<br>4. Bhimachari<br>5. upadya sheshagiri-achari<br>6. Gururayachari<br>7. Anantachari<br>8. Ayachita Sumatendra-char.<br>9. Bhimachari<br>10. Savayi venkatachar<br>11. Iyakal Ramabhat. |

- 5.

Vol One : Vedah. (ORI) Mysore.

Appendix - page No. 99.

Sl.No. 790 : 150. Ms. No : P. 4026.

ऐतरेयोपनिषद्भाष्यव्याख्या
(भाष्यार्थरत्नमाला)

Beginning :

श्रीमदानन्दतीर्थार्यहृद्धामकमन्दिरम्।
जानकीनानिमानन्दसान्द्रं वन्दे निरञ्जनम्॥
\+ \+ \+
महैतरेयभाष्यस्य गुरूक्तार्थोऽनुवर्ण्यते।
टीकास्पष्टः सङ्ग्रहेण कृपां कुर्वन्तु सज्जनाः॥

अथ भगवान् सर्वज्ञमुनिः एष पन्था इत्यादौ अभिकृत्त् विशिष्टमिष्टं नारायणं ग्रन्थादावुपश्लोकयन् शरणं प्रार्थयते- नारायणमिति॥

End :

॥तथा चेति॥ ब्रह्ममीमांसाया बादरायणोपज्ञत्वस्य प्रसि- द्धत्वात्तत्र बादरायण ग्रहणम्। यथा सर्व xxxx शौनकं तथेत्यर्थः॥

Colophon :

इति श्रीमद्विठ्ठलाचार्यपुत्रेण श्रीमत्तीर्थाचार्यचरणसे- विना श्रीनिवासेन विरचितायां श्रीमन्महैतरेयोपनिषद्भा- ष्यार्थरत्नमालायां प्रथम प्रपाठकः पर्यवसितः॥

---

ಅಕ್ಷೋಭ್ಯರ ಶಿಷ್ಯರಾದ ಜಯತೀರ್ಥರು ... ಶ್ರೀನಿವಾಸ ...

अक्षोभ्याचा शिष्य जयतीर्थ टीकाचार्य ह्याने तत्त्वप्रकाशिका सुधावगैरे २३ ग्रंथ लिहिले. त्याचा शिष्य व्यासतीर्थ याने जय- तीर्थविजय आणि उपनिषदांवर टीका लिहिल्या

## ವಂಶ ವೃಕ್ಷ




**ಪಲ್ಲಕ್ಕಿ ಕೃಷ್ಣಾಚಾರ್‌ರವರ ಪೂರ್ವಜರು**

೧) ಶ್ರೀನಿವಾಸಚಾರ್ ತಂದೆ ಗೊತ್ತಿರುವುದಿಲ್ಲ.

೨) ರಾಮಾಚಾರ್

೩) ವೆಂಕಣ್ಣಚಾರ್

೪) ಶ್ರೀನಿವಾಸಚಾರ್

೫) ಷಡಂಗದ ಕೃಷ್ಣಾಚಾರ್ (ರಾಘವೇಂದ್ರ ಸ್ವಾಮಿಗಳ ಸಮಕಾಲೀನರು)

೧) ಶ್ರೀ ರಾಘವೇಂದ್ರ ಸ್ವಾಮಿಗಳು ಉಡುಪಿಗೆ ಪ್ರವಾಸ ಹೋಗಿ ಬರುವಾಗ ಮಾರ್ಗ ಮಧ್ಯದಲ್ಲಿ ಶಿವಮೊಗ್ಗದಲ್ಲಿ ತಂಗಿದ್ದು, ಆ ಸಮಯದಲ್ಲಿ ಷಡಂಗದ ಕೃಷ್ಣಾಚಾರ್‌ರವರ ಪಾಂಡಿತ್ಯವನ್ನು ನೋಡಿ ರಾಮದೇವರ ಪೂಜೆ ಮಾಡಿ ಅವರಿಗೆ ರಾಮದೇವರನ್ನು ಕೊಟ್ಟಿದ್ದಾರೆ ಎಂದು ಹೇಳುತ್ತಾರೆ. ಆ ಉದ್ದೇಶದಿಂದ ಪೂಜೆಯ ಖರ್ಚಿಗೆ ಹಾಗೂ ಅವರ ಪಾಂಡಿತ್ಯಕ್ಕೆ ಮಾಶಾಸನ ಕೊಡುತ್ತಿದ್ದರು ಎಂದು ತಿಳಿದು ಬರುತ್ತದೆ. ಸ್ವತಃ ರಾಘವೇಂದ್ರ ಸ್ವಾಮಿಗಳು ಸನದನ್ನು ಬರೆಸಿದ್ದಾರೆಂದು ಇದರ ಬಗ್ಗೆ ತಾಮ್ರ ಶಾಸನವನ್ನು ಬರೆಸಿದ್ದಾರೆಂದು ತಿಳಿದುಬರುತ್ತದೆ. ಇದನ್ನು ಮಂತ್ರಾಲಯ ಮಠದಲ್ಲಿ ಖಾತ್ರಿ ಪಡಿಸಿಕೊಳ್ಳಬೇಕು. ಇನ್ನೊಂದು ಸಂಗತಿಯಲ್ಲಿ ತಾಮ್ರಪರ್ಣಿ ನದಿತೀರದಲ್ಲಿ ರಾಘವೇಂದ್ರ ಸ್ವಾಮಿಗಳು ಷಡಂಗದ ಕೃಷ್ಣಾಚಾರ್‌ರವರಿಗೆ ದೇವರ ವಿಗ್ರಹಗಳನ್ನು ಕೊಟ್ಟರೆಂದು ಪ್ರತೀತಿ ಇದೆ. ಇದರಲ್ಲಿ ಯಾವುದು ಸತ್ಯ ಎಂಬುದನ್ನು ತಿಳಿದುಕೊಳ್ಳಬೇಕು.

೨) ಶ್ರೀನಿವಾಸಚಾರ್ ಮುತ್ತಜ್ಜನ ತಂದೆಯಿಂದ ಪಲ್ಲಕ್ಕಿ ಎಂಬ ಬಿರುದು ಬಂದಿದೆ ಎಂಬ ಪ್ರಶ್ನೆ ಇರುತ್ತದೆ. ಇದು ನಿಜವೇ ಎಂಬುದನ್ನು ಪತ್ತೆಹಚ್ಚಬೇಕು. ಇವರು ಹಯಗ್ರೀವ ಉಪಾಸಕರಾಗಿದ್ದು ಇವರಿಗೆ ಸ್ವಪ್ನಲಬ್ಧವಾಗಿ ಹಯಗ್ರೀವ ದೇವರು ಸಿಕ್ಕಿರುವುದಾಗಿ ತಿಳಿದುಬರುತ್ತದೆ.

೩) ಶ್ರೀನಿವಾಸಚಾರ್ ಇವರು ಶ್ರೀನಿವಾಸದೇವರ ಉಪಾಸಕ ರಾಗಿದ್ದು, ತುಂಗಾನದಿಯಲ್ಲಿ ಸ್ನಾನ ಮಾಡುವಾಗ ನದಿಯಲ್ಲಿ ಮುಳುಗು ಹಾಕಿದಾಗ ಶ್ರೀನಿವಾಸದೇವರ ದರ್ಶನವಾಗಿ ಮೇಲೆದ್ದಾಗ ನದಿಯಲ್ಲಿ ಪೆಟ್ಟಿಗೆ ತೇಲಿ ಬಂದು ಅದರಲ್ಲಿ ಶ್ರೀದೇವಿ, ಭೂದೇವಿ ಸಹಿತ ಶ್ರೀನಿವಾಸ ದೇವರು ಇತ್ತೆಂದು ಹೇಳುತ್ತಾರೆ. ಇದರ ಬಗ್ಗೆ ಭವಿಷ್ಯೋತ್ತರ ಪುರಾಣದ ಮೇಲೆ ವಿಮರ್ಶಾತ್ಮಕವಾದ ವ್ಯಾಖ್ಯಾನ ಬರೆದಿರುತ್ತಾರೆ ಎಂದು ಹೇಳುತ್ತಾರೆ. ಇದನ್ನು ಖಚಿತಪಡಿಸಿಕೊಳ್ಳಬೇಕು.

೪) ಷಡಂಗದ ಕೃಷ್ಣಾಚಾರ್ ಬ್ರಹ್ಮದೇವರು ಮಾಡಿದ ಶ್ರೀ ಭಾಗವತ ದಶಮಸ್ಕಂದದ ಗರ್ಭಸ್ತುತಿ ಬಗ್ಗೆ ಇದಕ್ಕೆ ವ್ಯಾಖ್ಯಾನ ಮಾಡಿದ್ದಾರೆ.

೫) ಶ್ರೀ ವಿಜಯೇಂದ್ರರು ಬರೆದ ಶ್ರೀ ನರಸಿಂಹಾಷ್ಟಕ ಇದಕ್ಕೆ ವ್ಯಾಖ್ಯಾನ ಮಾಡಿದ್ದಾರೆ. ಉಪನಿಷತ್ತುಗಳಿಗೆ ಭಾಗವತದ ಪ್ರಥಮ, ದ್ವಿತೀಯ, ತೃತೀಯ, ಪಂಚಮ, ಹನ್ನೊಂದನೆ ಸ್ಕಂದಗಳಿಗೆ ವ್ಯಾಖ್ಯಾನ ಮಾಡಿರುತ್ತಾರೆ. ಗೀತೆಗಳಿಗೂ ವ್ಯಾಖ್ಯಾನ ಬರೆದಿದ್ದಾರೆಂದು ಹೇಳುತ್ತಾರೆ.

MYSORE REVENUE SURVEY

P.T.O.

[illegible]

This Extract is granted under Rule 107 of the Land Revenue Rules as amended by Govt. Progs. No. R. 8673 [illegible]—L. R. 301-08-1 dated 20th April 1909.

1909ನೇ ಇಸವಿ ಏಪ್ರಿಲ್ 20ನೇ [illegible] R. 8673-[illegible]—L. R. 341-08-1ನೇ ನಂಬರು ಗೌರ್ನಮೆಂಟು ಪ್ರೊಸೀಡಿಂಗ್ಸ್ [illegible] 107 [illegible] ರೂಲನ್ನು ಅನುಸರಿಸಿ ಈ ಉತಾರು ಕೊಡಲ್ಪಟ್ಟಿದೆ. [illegible]

ತಾ. 26.1.1949

Commissioner Survey, Settlement and Land Records, BANGALORE

# XIX

## ಮುಮ್ಮಡಿ ಸೋಮಶೇಖರನಾಯಕ

**263**

ಸ್ಥಳ : ಸಾವಗೊಂಡನಹಳ್ಳಿ

ಗ್ರಾಮಕ್ಕೆ ಆಗ್ನೇಯ ದಿಸೆಯಲ್ಲಿ ನಟ್ಟಿರುವ ಕಲ್ಲಲ್ಲಿ

ಕಾಲ : ಕ್ರಿ. ಶ. ಸು. ೧೭೪೪

ಸಾರಾಂಶ : ಕೂಡಲಿ ಕಲ್ಲುಮಠದ ರಘುರಾಜತೀರ್ಥರಿಗೆ ಕೊಟ್ಟ ದಾನದ ವಿವರ

ತಾಲೂಕು/ಜಿಲ್ಲೆ : ಶಿವಮೊಗ್ಗ

ಭಾಷೆ : ಕನ್ನಡ

೧ ಪಿಂಗಳ ಸಂ। ಪುಶ್ಯ ೬ ಶ್ರೀಮತು ಕೆಳದಿ

೨ ಸೋಮಸೇಕರನಾಯಕರು ಕೂಡಲಿ ಕಲುಮಠ

೩ ರಘುರಾಜತೀರ್ಥಸ್ವಾಮಿಗಳಿಗೆ। ಗಾಜ

೪ ನೂರಸೀಮೆಯಲ್ಲು। ಬೆಂನಗೊಂಡನ ಕೊ

೫ ಪಟ ಬದಲು। ಯಿದಕೂರೆ ಹರುವಾ

೬ ಗದೆಯಲ್ಲಿನ। ಸಾಗಗೊಂಡನಹಳ್ಳಿ ಸಿ

೭ ವಾಪೀಕವಾಗಿ ಕೊಟ್ಟ ಯಿಧಾರ

೮ ಶ್ರೀ

ಎಪಿ. ೮. ೬: ಶಿವಮೊಗ್ಗ ೯೮

೦೦೦




***

## ಆಧಾರಸೂಚಿ ಮತ್ತು ಟಿಪ್ಪಣಿಗಳು

*೧ **ಹರತಿಸಿರಿ** : ೧೯೮೭ : (ಸಂ) ಪ್ರೊ. ಲಕ್ಷ್ಮಣ ತೆಲಗಾವಿ; ಸತ್ಯಶುದ್ಧಕಾಯಕ ಸಂ. ೩-೪ರಲ್ಲಿ 'ಕೆಳದಿ ಅರಸರ ನಿರೂಪಗಳು' : ಡಾ. ವೆಂಕಟೇಶಜೋಯಿಸ್ ಲೇಖನಗಳು.

*೨ ಉತ್ತರ ಕರ್ನಾಟಕ ಗದಗ ತಾಲ್ಲೂಕು ಕಚೇರಿಯ ಖಜಾನೆಯಲ್ಲಿ ತಾಮ್ರಶಾಸನಗಳಿದ್ದು ಗ್ಯಾಜೆಟೀರ್‌ನಲ್ಲಿ ಉಲ್ಲೇಖಿಸಲಾಗಿದೆ.

*೩ ಡಾ. ವೆಂಕಟೇಶ್‌ಜೋಯಿಸ್, ಕೆಳಶಾಸಂ II ನೇ ಸಂಪುಟದಲ್ಲಿ ಸೇರಿಸಿದ್ದಾರೆ.

*೪ **ಇತಿಹಾಸ ದರ್ಶನ** : ಸಂ. ೭/೧೯೯೨; ಪು. ೧೯೨-೧೯೩.

*೫ Aufrecht Catalogue Catalogorum Vol I ರ ಮೇರೆಗೆ ಆನಂದತೀರ್ಥರು "ಶಂಕರಾಚಾರ್ಯಾವತಾರ ಕಥಾ" ಕೃತಿ ರಚಿಸಿದ ಹಸ್ತಪ್ರತಿಯೊಂದು ನಂ. ೬೨೩೨ರ ಮೇ:ಗೆ ಕಂಡುಬರುತ್ತದೆ. Catalogue Catalogorum P. VII 48-Oppert-List of Sanskrit Mss in private libraries of Southern India by Gustav Oppert Vol I Madras 1880-4 Vol II Madras 1885. 8. No German should have sent his name to such bad workmanship.

Part I page V and VI, 30-Burnell - A classified Index to the Sanskrit MSS in the palace at Tanjore by A.C. Burnell, London 1880, Any work proceeding from the pen of such a scholar as Burnell may be presumed to be excellent, we only regret in this Catalogue that the author has comparatively rarely given the beginings of teh works he has described.

*೬ ಮದರಾಸಿನ OML ಪ್ರಾಚ್ಯಭಂಡಾರದಲ್ಲಿ ವಿಜಯನಗರದ "ರಾಯರೇಖೆ" ಹಸ್ತ ಪ್ರತಿಯೊಂದು ನನಗೆ ಲಭಿಸಿದ್ದು, ಅಧ್ಯಯನ ನಡೆಸುತ್ತಿದ್ದೇನೆ. EC Vol. VII No. 84, Date 1527 Ad.

*೭ ಶ್ರೀ ರಾಘವೇಂದ್ರರು ಬೃಂದಾವನಸ್ಥರಾದುದು ಶಾ.ಶ. ೧೫೯೩ನೇ ಶ್ರಾವಣ ಬ. ೨ ಗುರುವಾರ (ರಾಘವೇಂದ್ರ ವಿಜಯ : ಬೇಲೂರು ಕೇಶವದಾಸರು. ಪು. ೧೩೨) ಎಫಿಮರೀಸ್ ಪ್ರಕಾರ ಇದು ದಿ. ೧೧-೮-೧೬೭೧ಕ್ಕೆ ಸೇರಿದ್ದು ಶನಿವಾರವಾಗುತ್ತದೆ. ಗುರುವಾರ ದಿ. ೯-೮-೧೬೭೧ಕ್ಕೆ ಸೇರುತ್ತದೆ. ಆ ದಿನ ಪೂರ್ಣಿಮ ಕಂಡುಬರುತ್ತದೆ. (ವಿರೋಧಿಕೃತು ಸಂ). ಹುಲ್ಲೂರು ಶ್ರೀನಿವಾಸಜೋಯ್ಸರ ಅಭಿಪ್ರಾಯದಲ್ಲಿ ಶುಕ್ರವಾರ ಎಂದು ಪ್ರತಿಪಾದಿಸಲಾಗಿದೆ. (ಹು. ಶ್ರೀ. ಜೋ.ಐ. ಲೇಖನಗಳು. ಪು. ೩೭೭.)

MAR 1944/34 ನೇ ಶಾಸನ ದಿ. ೬-೭-೧೬೬೩ರಲ್ಲಿರುವ ದೊಡ್ಡದೇವರಾಜ ಒಡೆಯರ ಶಾಸನದಲ್ಲಿ ನಿರೂಪಿಸಿದಂತೆ ಶ್ರೀರಾಯರು ೧೬೨೪ರಿಂದ ೧೬೭೧ರವರೆಗೆ ಗುರುಪೀಠವನ್ನಲಂಕರಿಸಿದರು.

*೮ Rangacharya, Ibid II P. 837, No: 297, Mac Coln No. 230 P. 75.

*೯ EC VIII TL 34 pp 525.

*೧೦ Mac Coln Record No. 236 P. 75.

*೧೧ EC VIII TL 42.;
*Religions in Coastal Karnataka 1500-1763;* Dr. K.G. Vasanthamadhava; Inter India Publication ; New Delhi 1987, Page 44.

*೧೨ Ibid TL 88; The Matha received grant of land in 1641 AD from The Jain Merchant of Basunur; see Ibid 52 P. 471- Ibid.

*೧೩ P.K. Gode (Brahmavidya, Adyar Lib Bulletin, XVIII, 3, 4, Dec. 54) is wrong in taking "Odern" in the verse, to be a proper name and in identifying the ascetic (see his f.n.) with a pontiff of the Vaishnava Matha of the saraswatha Brahmans at parthagali in the concon dt of Goa, "Oder" is just a Kannada honorfie tille, meaning 'master', 'swamy', applied to Madhva ascetics and not a proper name. The vidyadhisha Oderu refered to in This verse, is really the pontiff of the uttaradi Mutt, whose biography makes a distint reference to his disputation with Rangoji Bhatta, details of which are preserved in a ms of a tract entitled Rangojibhattadhikkara. There is no pontiff of the name of vidyadhisha in the succession list of the Gokarna Matha of the saraswata Brahmins.

*೧೪ E.C. VII P. 43 (1902).

*೧೫ The short tract Rangojibhattadhikkara (Ms. K.T. Pandurangi) gives some details regarding the points raised in the disputation. The S.K. Places the meeting at Bidunur in the Keladi teritory. The Gurukarya also does the same.
ದ್ವಂ ತತೋ ಬಿದರೂರಾಖ್ಯಪುರಂ ಗತ್ವಾ ಚ ತತ್ರ ಹಿ।
*** ರಂಗೋಜಿಭಟ್ಟೇನ ಪ್ರಸಂಗಂ ಸುಮಹತ್ತರಂ। V

*೧೬ As in the TPL. ms (*5837) The Printed text in Benares SKT. Series, 1900 pp. 325, misreads "ಮತಿ" or "ಯತಿ". The India office cat pt II p. 188 (no 708) reads "ಪತಿ".

೧೭ This is also misread in the printed texts an 'ಕೇವಲ' the Tanjore is has 'ಕೇಲತಿ' for 'ಕೆಳದಿ'

೧೮ I.O. Catalogue has move preesisely 'ವೆಂಕಟಪ್ಪ' (No.708)

*೧೯ Donee of a grant in 1527 AD by krishnadeva Raya (Shimoga 84 EC). This Narayana Tirtha is refered to by Somanatha kavi in his "Vyasayogicharita" as the kindly ascetic who introduced him to Vyasaraya.

*೨೦ Donee of a grant by keladi somashekhara Nayaka in 1659 (Pingala - Vide Shimoga 98).

*೨೧ ಚಿಕ್ಕೇರೂರು ಗೋವಿಂದಾಚಾರ್ಯ, **ಶ್ರೀ ಕೂಡ್ಲಿ ಆರ್ಯ ಅಕ್ಷೋಭ್ಯತೀರ್ಥ ಮಠದ ಚರಿತ್ರೆ**; ಪು. ೩೮.
ಮೈಸೂರು ರೆವಿನ್ಯೂ ಸರ್ವೆ ೧೮೩೬ರ ದಾಖಲೆ : ಅನುಬಂಧ ನೋಡಿರಿ.

೨೨ ಬ.ವಿ. **ಸೂರ್ಯನಾರಾಯಣರಾವ್**, ಮರೆಯಲಾರದ ಮಹಾಸಾಮ್ರಾಜ್ಯ, ಕನ್ನಡ ವಿಶ್ವವಿದ್ಯಾಲಯ, ಪು. ೨೯೧.

*೨೩ Research Project : Govt of India ; Keladi Gunda Jois ; 1994.

**ಗ್ರಂಥಋಣ**

೧ A History of the Dwaita School of Vedanta and its literature Vol. I, II : From the Begining to the age of Jaya Thirtha. Dr. B.N.K. Sharma, Ruparel College Bombay Book Sellers and Publishers, Mehendale Bldg. B.P. Road, Bombay D?

೨ **ಶ್ರೀ ಕೂಡ್ಲೀ ಶ್ರೀ ಅಕ್ಷೋಭ್ಯ ತೀರ್ಥಮಠದ ಚರಿತ್ರೆ** : ಚಿಕ್ಕೇರೂರು ಗೋವಿಂದಾಚಾರ್ಯ ; ಕೂಡ್ಲಿ ಅಕ್ಷೋಭ್ಯತೀರ್ಥಮಠ, ಶಿವಮೊಗ್ಗ.D?

೩ **ಶ್ರೀ ಆರ್ಯ ಅಕ್ಷೋಭ್ಯತೀರ್ಥ ಸಂಸ್ಥಾನ** : ಶ್ರೀ ಕಸಗಾರು ಮಾಧವರಾಯರು, ಬಾಳಗಾರು ಮಠ, ತೀರ್ಥಹಳ್ಳಿ ತಾ. ಶಿವಮೊಗ್ಗ ಜಿಲ್ಲಾ. Date?

ಡಾ. ಕೆಳದಿ ವೆಂಕಟೇಶ ಜೋಯಿಸ್*

# ಕೆಳದಿ ಕಾಲದ ಹಲಸನಾಡು ಕರಣಿಕ ಮನೆತನದ ಅಪೂರ್ವ ದಾಖಲೆ

*ದಕ್ಷಿಣ ಕನ್ನಡದ ಕಾವ್ರಾಡಿ ಮನೆತನವೊಂದು ಕರಣಿಕರಾಗಿ ಕೆಳದಿ ಅರಸರ ಕಾಲದಲ್ಲಿ ಸಲ್ಲಿಸಿದ ಸೇವೆ, ಹಾಗು ಕರಣಿಕತನದ ಮಹತ್ವವನ್ನು ಲಭ್ಯ ಹೊಸ ದಾಖಲೆಯೊಂದು ತೋರಿಸಿದೆ. ವಂಶವೃಕ್ಷವೂ ಗಮನಾರ್ಹವಾಗಿದೆ. ವಂಶದ ವಲಸೆ ಚಾರಿತ್ರಿಕವಾಗಿ ತಿಳಿದುಬಂದಿದೆ.*

ಕ್ರಿ. ಶ. ೧೪೯೯ ರಿಂದ ೧೭೬೩ವರೆಗೆ ಆಡಳಿತ ನಡೆಸಿದ ಕೆಳದಿ ಅರಸರು ದಕ್ಷಿಣ ಭಾರತದ ಇತಿಹಾಸದಲ್ಲಿ ಪ್ರಮುಖ ಸ್ಥಾನ ಪಡೆದಿದ್ದಾರೆ. ವಿಜಯನಗರ ಸಾಮಂತರಾಗಿದ್ದು ಆನಂತರ ಸ್ವತಂತ್ರರಾದ ಇವರು ತಮ್ಮ ಹಿರಿಯರು ಹಾಕಿಕೊಟ್ಟ ಮಾದರಿಯಲ್ಲಿಯೇ ಆಡಳಿತ ನಡೆಸಿದರು. ತಮ್ಮ ೨೫೦ ವರ್ಷಗಳ ಆಡಳಿತದ ಅವಧಿಯಲ್ಲಿ ರಾಜಕೀಯ, ಆಡಳಿತ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ವಿಶೇಷ ನೈಪುಣ್ಯತೆಯನ್ನು ಮೆರೆದು ವಿಜಯನಗರ ಸಂಸ್ಕೃತಿಗೆ ಕುಂದು ಬಾರದಂತೆ ನಡೆದರು.

ಕೆಳದಿ ಅರಸರ ಆಡಳಿತದ ಬಗ್ಗೆ ಮೊದಲು ೧೯೩೯ರಲ್ಲಿ ಡಾ. ಆರ್.ಎಸ್. ಸಾಲೆತೊರೆಯವರು ವಿಮರ್ಶಾತ್ಮಕವಾಗಿ ಅಧ್ಯಯನ ನಡೆಸಿದರು. ಅನಂತರದಲ್ಲಿ ಡಾ. ಕೆ.ಎನ್. ಚಿಟ್ನೀಸ್, ಡಾ. ಬಿ.ಎಸ್. ಶಾಸ್ತ್ರಿ, ಡಾ. ವಸಂತಮಾಧವ ಮೊದಲಾದವರು ತಮ್ಮ ಸಂಶೋಧನೆಯಲ್ಲಿ ಆ ಕಾಲದ ಆಡಳಿತ, ಸಾಮಾಜಿಕ ವ್ಯವಸ್ಥೆಗಳ ಬಗ್ಗೆ ಬೆಳಕು ಚೆಲ್ಲಲು ಪ್ರಯತ್ನ ನಡೆಸಿದ್ದಾರೆ.

ಕೆಳದಿ ಕಾಲದ ಆಡಳಿತ ಮತ್ತು ಅಧಿಕಾರಿ ಕುರಿತಂತೆ ವಿವರಗಳನ್ನು ತಿಳಿಯಲು ಸಮಕಾಲೀನ ಶಾಸನಗಳು, ಸ್ಥಳೀಯ ದಾಖಲೆಗಳು, ಪತ್ರಗಳು, ಸಾಹಿತ್ಯಕ ಕೃತಿಗಳು, ವಿದೇಶಿ ದಾಖಲೆಗಳು, ಪ್ರವಾಸಿ ವರದಿಗಳು ಸಹಾಯಕವಾಗಿವೆ. ಇತ್ತೀಚಿನ ಸಂಶೋಧನೆಗಳಿಂದ ಹೊರಬಂದಿರುವ ಅಪ್ರಕಟಿತ ಶಾಸನ ನಿರೂಪಗಳು ಈಗಾಗಲೇ ತಿಳಿದಿರುವ ಸ್ವರೂಪವನ್ನು ಪುನರ್ ವಿಮರ್ಶಿಸಲು ಸಹಾಯಕವಾಗಿವೆ. ಕೆಳದಿ ಕಾಲದಲ್ಲಿ ಆಡಳಿತ ವರ್ಗದಲ್ಲಿ ರಾಜ್ಯಪಾಲರು ಪ್ರಮುಖರಾಗಿದ್ದರು. ಸಚಿವ ಸಂಪುಟದಲ್ಲಿ ರಾಜಗುರು, ಪ್ರಧಾನಿ, ಹುಜೂರು ಪ್ರಧಾನಿ, ಸರ್ವಾಧಿಕಾರಿ, ದಳವಾಯಿ, ಬೊಕ್ಕಸದ ಮಂತ್ರಿ, ವಿದೇಶಾಂಗ ಮಂತ್ರಿ ಅಲ್ಲದೇ ಖಾತೆರಹಿತ ಮಂತ್ರಿಗಳು ಇರುತ್ತಿದ್ದರು. ಸಚಿವಾಲಯದ ನಿರ್ವಹಣೆಯಲ್ಲಿ ಆಡಳಿತಾಂಗವು ಪ್ರಮುಖ ದಾಖಲೆಗಳ ಸರ್ಕಾರಿ ಕಾರ್ಯಾಲಯವಾಗಿತ್ತು. ಪ್ರಧಾನ ಕಾರ್ಯದರ್ಶಿಯೇ ಇದರ ಮುಖ್ಯಸ್ಥನಾಗಿದ್ದನು. ದಾಖಲೆಗಳನ್ನು ಇಡುವ ಸ್ಥಳಕ್ಕೆ ಕಡತದ ಚಾವಡಿ ಎಂಬ ಹೆಸರಿತ್ತು. ವಿದೇಶಿ ಪ್ರವಾಸಿ ಪೀಟರ್ ಮಂಡಿಯು ಇಂತಹ ಕಡತದ ಚಾವಡಿಗೆ ಭೇಟಿ ಇತ್ತುದರ ವರದಿ ಮಾಡಿದ್ದಾನೆ.[೧] ಆಡಳಿತಾಂಗದಲ್ಲಿ ಮುಖ್ಯವಾಗಿ ಕಾರ್ಯದರ್ಶಿ, ಪ್ರಧಾನ ಕಾರ್ಯದರ್ಶಿ, ಕರಣಿಕಜ್ಯೋತಿಷಿ, ಜೋಯಿಸ್ ಮೊದಲಾದವರು ಇರುತ್ತಿದ್ದರು.

ಪ್ರಸ್ತುತ ಈ ಪ್ರಬಂಧದಲ್ಲಿ ದಕ್ಷಿಣ ಕನ್ನಡದ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನಲ್ಲಿರುವ ಕಾವ್ರಾಡಿ ಮನೆಯಲ್ಲಿ ದೊರೆತ ವೃತ್ತಿ ಆಧರಿಸಿದ ದಾಖಲೆಗಳ ಬಗ್ಗೆ ಬೆಳಕು ಚೆಲ್ಲಲು ಪ್ರಯತ್ನಿಸಲಾಗಿದೆ.

* ಕೆಳದಿ ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ - ೫೭೭ ೪೦೧

ಕುತೂಹಲಕ್ಕಾಗಿ ತಮ್ಮ ಮನೆತನದ 'ವಂಶವೃಕ್ಷ' ರಚಿಸಲು ಹೊರಟ ಕುಂದಾಪುರ ತಾಲ್ಲೂಕಿನ ಕರಣಿಕ ಮನೆತನದವರು ತಮ್ಮ ಕುಟುಂಬದ ಹಿಂದಿನ ಹಲವು ಮನೆಗಳ ಹಳೆಯ ಕಾಗದ ಪತ್ರಗಳನ್ನು ಪರಿಶೀಲಿಸುವ ಸಂದರ್ಭದಲ್ಲಿ ಇವರ ಕಾವ್ರಾಡಿ ಮನೆಯ ಪಂಚಾಂಗದ ಕಟ್ಟೊಂದರಲ್ಲಿ ಎರಡು ಅಪೂರ್ವ ಐತಿಹಾಸಿಕ ದಾಖಲೆಗಳು ಕಳೆದ ಜುಲೈ ೨೦೦೪ರಲ್ಲಿ ದೊರೆತಿವೆ. ಅವುಗಳಲ್ಲಿ ಮೊದಲನೆಯದು ಕ್ರಿ.ಶ. ೧೭೪೫ರಲ್ಲಿ ಕೆಳದಿ ಬಸಪ್ಪನಾಯಕನು ಹಲ್ಸನಾಡು ನಾಗಪ್ಪಯ್ಯನನ್ನು 'ಆಸ್ಥಾನ ಕರಣಿಕ' ಹುದ್ದೆಗೆ ನೇಮಿಸಿದ ಮೂಲ ರಾಜಾಜ್ಞೆ, ಇನ್ನೊಂದು ಕ್ರಿ.ಶ. ೧೪೧೩ರಲ್ಲಿ ವಿಜಯನಗರದ ವೀರಪ್ರತಾಪ ದೇವರಾಯರ ಕಾಲದಲ್ಲಿ ಆತನ ಪ್ರಧಾನ ಮಂಡಲೇಶ್ವರನಾದ ಸಂಗಿರಾಯನ ಮೂಲಕ ಈ ಮನೆತನಕ್ಕೆ ಕೊಡಲ್ಪಟ್ಟ ತಾಮ್ರಶಾಸನದ ಯಥಾಪ್ರತಿ. ಪ್ರಸ್ತುತ ಇವೆರಡನ್ನು ಆಧರಿಸಿದ ಸಂಶೋಧನಾ ಪ್ರಬಂಧ ಇದಾಗಿರುತ್ತದೆ.

ಕರಣಿಕ ಹುದ್ದೆಯು ಆಡಳಿತದಲ್ಲಿ ಪ್ರಮುಖ ಸ್ಥಾನ ಪಡೆದಿತ್ತು. ಸಚಿವಾಲಯದಲ್ಲಿ ಇವನು ಪ್ರಧಾನ ಅಧಿಕಾರಿಯಾಗಿದ್ದನು. ರಾಜ್ಯದ ಎಲ್ಲಾ ಲೆಕ್ಕಪತ್ರಗಳನ್ನು ಮತ್ತು ಪತ್ರವ್ಯವಹಾರಗಳನ್ನು ಸಹಾಯಕರ ಮೂಲಕ ಬಣ್ಣದ ಚಾವಡಿಗೆ ಅಥವಾ ಕಡತದ ಚಾವಡಿಗೆ ಒಪ್ಪಿಸಿ ಕಾರ್ಯನಿರ್ವಹಿಸುತ್ತಿದ್ದನು.

ಲಿಂಗಣ್ಣ ಕವಿಯ 'ಕೆಳದಿ ನೃಪವಿಜಯ' ಮತ್ತು ದಾಖಲೆಗಳ ಆಧಾರದ ಮೇರೆಗೆ ಕೆಳದಿ ಕಾಲದಿಂದಲೂ ಇದ್ದ ಕರಣಿಕರ ಹೆಸರುಗಳು ಇಂತಿವೆ.[೨]

೧) ಚೌಡಪ್ಪನಾಯಕ : ?
೨) ಸದಾಶಿವನಾಯಕ : ?
೩) ದೊಡ್ಡಸಂಕಣ್ಣನಾಯಕ : ಕರಣಿಕ ಅಣ್ಣಾಜಯ್ಯ
೪) ಚಿಕ್ಕಸಂಕಣ್ಣನಾಯಕ : ಕರಣಿಕ ಅಣ್ಣಾಜಯ್ಯ
೫) ರಾಮರಾಜನಾಯಕ : ಕರಣಿಕ ಅಣ್ಣಾಜಯ್ಯ
೬) ಹಿರಿಯ ವೆಂಕಟಪ್ಪನಾಯಕ : ಕರಣಿಕ ಅಣ್ಣಾಜಿ ವೆಂಕಟಯ್ಯ
೭) ವೀರಭದ್ರನಾಯಕ : ಕರಣಿಕ ಬಳಗಿ ಕೋಣಪ್ಪಯ್ಯ
೮) ಶಿವಪ್ಪನಾಯಕ : ಕರಣಿಕ ಅಪ್ಪಣ್ಣಯ್ಯ
೯) ಚಿಕ್ಕವೆಂಕಟಪ್ಪನಾಯಕ : ಕರಣಿಕ ಅಪ್ಪಣ್ಣಯ್ಯ
೧೦) ಭದ್ರಪ್ಪನಾಯಕ : ಕರಣಿ ಬಳಗಿ ಕೋಣಪ್ಪಯ್ಯ
೧೧) ಹಿರಿಯ ಸೋಮಶೇಖರನಾಯಕ : ಬಳಗಿ ಸುಬ್ಬಯ್ಯ
೧೨) ಚೆನ್ನಮ್ಮಾಜಿ : ಬಳಗಿ ಸುಬ್ಬಯ್ಯ
೧೩) ಹಿರಿಯ ಬಸಪ್ಪನಾಯಕ : ?
೧೪) ಕಿರಿಯ ಸೋಮಶೇಖರ ನಾಯಕ : ಕರಣಿಕ ಕೋಳಾಳದ ವೆಂಕಟಯ್ಯ (ದಾಖಲೆ)
೧೫) ಕಿರಿಯ ಬಸಪ್ಪನಾಯಕ : ಹಲಸನಾಡು ನಾಗಪ್ಪಯ್ಯ (ದಾಖಲೆ)
೧೬) ಚೆನ್ನಬಸಪ್ಪನಾಯಕ : ಹಲಸನಾಡು ನಾಗಪ್ಪಯ್ಯ (ದಾಖಲೆ)
೧೭) ಸೋಮಶೇಖರನಾಯಕ ಮತ್ತು ವೀರಮ್ಮಾಜಿ : ಕರಣಿಕ ವೆಂಕಟಪತಿ ಅಯ್ಯ[೩]

ಇವರುಗಳು ಕರಣಿಕ ಹುದ್ದೆಯನ್ನು ಅಲಂಕರಿಸಿದ್ದರು. ಹೊಯ್ಸಳ ಕರ್ನಾಟಕ ಮತ್ತು ಹವ್ಯಕ ಬ್ರಾಹ್ಮಣರು ಈ ವೃತ್ತಿಯನ್ನು ನಿರ್ವಹಿಸಿರುವುದಾಗಿ ದಾಖಲೆಗಳಿಂದ ತಿಳಿದುಬರುತ್ತದೆ.

ಕರಣಿಕ ಹುದ್ದೆಯು ಆಡಳಿತಾಂಗದಲ್ಲಿ ಪ್ರಮುಖವಾಗಿದ್ದಿತು. ಇವರು ಲೆಕ್ಕಪತ್ರಗಳನ್ನು ನೋಡಿಕೊಳ್ಳುತ್ತಿದ್ದರು. ಒಬ್ಬ ರಾಜನ ಕಾಲದಲ್ಲಿ ಹೆಚ್ಚಾಗಿ ಒಬ್ಬನೆ ಕರಣಿಕ ವೃತ್ತಿಯನ್ನು ನಿರ್ವಹಿಸುತ್ತಿದ್ದನು. ಸಂಕಣ್ಣನಾಯಕ, ದೊಡ್ಡ ಸಂಕಣ್ಣನಾಯಕ ಮತ್ತು ರಾಮರಾಜ ನಾಯಕನ ಕಾಲದಲ್ಲಿ ಕರಣಿಕ ವೃತ್ತಿಯನ್ನು ಅಣ್ಣಾಜಯ್ಯನೆ ನಿರ್ವಹಿಸಿದ್ದನು. ಹಿರಿಯ ವೆಂಕಟಪ್ಪನಾಯಕನ ಕಾಲದಲ್ಲಿ ಕರಣಿಕ ನಾಗಿದ್ದ ಅಣ್ಣಾಜಿ ವೆಂಕಟಯ್ಯನು ಅಣ್ಣಾಜಯ್ಯನ ಮಗನಾಗಿದ್ದನು. ಹಿರಿಯ ಸೋಮಶೇಖರನಾಯಕ ಮತ್ತು ಚೆನ್ನಮ್ಮಾಜಿ ಕಾಲದಲ್ಲಿ ಬಳಗಿ ಸುಬ್ಬಯ್ಯನು ಕರಣಿಕ ವೃತ್ತಿ ನಿರ್ವಹಿಸಿದನು. ಇವನು ಭದ್ರಪ್ಪನಾಯಕನ ಕಾಲದಲ್ಲಿ ಕರಣಿಕನಾಗಿದ್ದ ಕೋಣಪ್ಪಯ್ಯನ ಮಗನಾಗಿದ್ದನು. ಕೆಲ ಸಂದರ್ಭದಲ್ಲಿ ಕರಣಿಕ ವೃತ್ತಿಯು ವಂಶ ಪಾರಂಪಾರ್ಯವಾಗಿಯೇ ಉಳಿಯುತ್ತಿತ್ತು. ಬಳಗಿ ಕೋಣಪ್ಪಯ್ಯನು ವೀರಭದ್ರನಾಯಕ ಮತ್ತು ಶಿವಪ್ಪನಾಯಕ, ಚಿಕ್ಕ ವೆಂಕಟಪ್ಪ ನಾಯಕನ ಕಾಲದಲ್ಲಿ ಕರಣಿಕ ವೃತ್ತಿಯನ್ನು ನಿರ್ವಹಿಸದೆ ಆನಂತರ ಬಂದ ಭದ್ರಪ್ಪನಾಯಕನ ಕಾಲದಲ್ಲಿ ಕಾರ್ಯನಿರ್ವಹಿಸಿ ರುವುದು ಕಂಡುಬರುತ್ತದೆ. ೨ನೇ ಸೋಮಶೇಖರನಾಯಕ, ಬಸಪ್ಪನಾಯಕ, ಚೆನ್ನಬಸಪ್ಪನಾಯಕನ ಕಾಲದಲ್ಲಿ ಕೋಳಾಲದ ವೆಂಕಟಯ್ಯ (ವೆಂಕಟೇಶಯ್ಯ)ನು ಕರಣಿಕ ವೃತ್ತಿ ನಡೆಸಿರುವುದು ಕಂಡುಬರುತ್ತದೆ. ಆದರೆ ೨ನೇ ಸೋಮಶೇಖರನಾಯಕನ ಕಾಲದಲ್ಲಿ ಕರಣಿಕ ಯಾರಾಗಿದ್ದರು ಎಂಬ ಬಗ್ಗೆ ನಮಗೆ ಇದೂವರೆಗಿನ ದಾಖಲೆಗಳಿಂದ ಸ್ಪಷ್ಟವಾಗಿರಲಿಲ್ಲ.

**ಕರಣಿಕ ಮನೆತನ :** ಕುಂದಾಪುರ ತಾಲ್ಲೂಕು ಹಲಸನಾಡು ಭಾಗದಲ್ಲಿ ಮತ್ತು ಸುಳ್ಸೆ, ಬೇಳೂರು, ಬಳಗಿ, ನಗಿರೆ (ಭಟ್ಕಳ), ಕೊಡಗು ಭಾಗದಲ್ಲಿ ವಾಸವಾಗಿರುವ ಗೌತಮಗೋತ್ರದ ಹವ್ಯಕ ಕರಣಿಕ ಮನೆತನವು ಐತಿಹಾಸಿಕವಾಗಿ ಪ್ರಾಮುಖ್ಯತೆ ಪಡೆದಿದೆ. ಈ ಮನೆತನವು ವಿಜಯನಗರ ಕಾಲದಿಂದ ಆರಂಭವಾಗಿ ಬೇರೆ ಬೇರೆ ಅರಸು ಮನೆತನದ ಅವಧಿಯಲ್ಲಿ ಆಸ್ಥಾನ ಕರಣಿಕರಾಗಿ ಸೇವೆ ಸಲ್ಲಿಸಿರುವ ಬಗ್ಗೆ ಅವರಲ್ಲಿರುವ ಅಪ್ರಕಟಿತ ದಾಖಲೆಗಳು ಹಾಗೂ ಐತಿಹಾಸಿಕ ಸಾಮಗ್ರಿಗಳು ಪುರಾವೆ ನೀಡುತ್ತವೆ. ಪ್ರಾರಂಭ ದಲ್ಲಿ ಭಟ್ಕಳದ ಹಾಡುವಳ್ಳಿ ಇವರ ಮೂಲ ಸ್ಥಾನವಾಗಿತ್ತೆಂದು ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಕೆಳದಿ ಮತ್ತು ಹೈದರನ ಕಾಲದಲ್ಲಿಯೂ ಇವರು ಕರಣಿಕರಾಗಿ ಮುಂದುವರಿದಿರುವುದು ತಿಳಿದುಬರುತ್ತದೆ. ಭೌಗೋಳಿಕವಾಗಿ ಇವರಿಗೆ ಶಿವಮೊಗ್ಗ, ಕರಾವಳಿ

ಮತ್ತು ಕೊಡಗಿನವರೆಗೆ ಅಧಿಕಾರವಿತ್ತೆಂದು ಹೇಳಬಹುದಾಗಿದೆ. ಕ್ರಿ.ಶ. ೧೭೪೫ರಿಂದ ಕೆಳದಿ ಬಸಪ್ಪನಾಯಕರ ಆಸ್ಥಾನದಲ್ಲಿದ್ದ ಕರಣಿಕ ಹಲ್ಸನಾಡು ನಾಗಪ್ಪಯ್ಯನನ್ನು ಕರಣಿಕ ವೃತ್ತಿಗೆ ಆಸ್ಥಾನದಲ್ಲಿ ಸೇರಿಸಿಕೊಂಡ ಬಗ್ಗೆ ಈ ದಾಖಲೆ ತಿಳಿಸುತ್ತದೆ. ಹಲ್ಸನಾಡು ಚಿನ್ನಪ್ಪಯ್ಯನಿಗೆ ಐವರು ಮಕ್ಕಳು. ನಾಗಪ್ಪಯ್ಯ ಇವರಲ್ಲಿ ಒಬ್ಬನಾಗಿದ್ದ. ರಾಮಪ್ಪಯ್ಯರು ಗೇರುಸೊಪ್ಪೆಸೀಮೆ ಕೊಡಾಣಿಯಲ್ಲಿ, ದೇವಪ್ಪಯ್ಯನವರು ಹಲ್ಸನಾಡು ಮಾಗಣಿ ಸುಜಾಡಿಯಲ್ಲಿ ಸೂರಪ್ಪಯ್ಯನವರು ಗೇರುಸೊಪ್ಪೆ ಸೀಮೆ ಬೇರಂಕಿಯಲ್ಲಿ, ನಾಗಪ್ಪಯ್ಯರವರು ಯಳಾರೇ ಮಾಗಣಿ ಕಾವ್ರಾಡಿಯಲ್ಲಿ, ಲಕ್ಷ್ಮರಸಯ್ಯನವರು ಹಲ್ಸನಾಡು ಮಾಗಣಿ ಕುಂದದಲ್ಲಿ ವಾಸವಾಗಿದ್ದರು. ರಾಮಪ್ಪಯ್ಯ ಮತ್ತು ಸೂರಪ್ಪಯ್ಯರ ಕುಟುಂಬಗಳು ಈಗಲೂ ಗೇರುಸೊಪ್ಪೆ ಸೀಮೆಯಲ್ಲಿದೆ. ದೇವಪ್ಪಯ್ಯನವರ ಕುಟುಂಬ ಹೆಣ್ಣು ಸಂತತಿಯಿಂದಾಗಿ ಅಳಿಯಂದಿರಿಗೆ ಅಧಿಕಾರ ಹಸ್ತಾಂತರವಾಗಿ ಸ್ಥಳಾಂತರಗೊಂಡಿದೆ. ಹಲ್ಸನಾಡು ನಾಗಪ್ಪಯ್ಯ ಈ ಪ್ರಬಂಧದ ಕೇಂದ್ರ ವ್ಯಕ್ತಿಯಾಗಿದ್ದು ಇವರ ಕುಟುಂಬ ಕಾವ್ರಾಡಿಯಲ್ಲಿ ಮುಂದುವರಿದಿದೆ. ಲಕ್ಷ್ಮರಸಯ್ಯನವರ ಕುಟುಂಬ ಕ್ರಿ.ಶ. ೧೮೬೪ರ ತನಕ ಕುಂದದಲ್ಲಿ ಅವಿಭಕ್ತ ಕುಟುಂಬವಾಗಿಯೇ ಇದ್ದು ಅನಂತರ ಕುಂದಾಪುರ ಕೋರ್ಟಿನ ಮೂಲಕ ೮ ವಿಭಾಗಗಳಾಗಿ ಹಿಸೆಯಾಗಿ ಕುಂದ, ಬೆಳ್ಳಿಗದ್ದೆ, ಸುಳ್ಯ, ಬೇಳೂರು (ಕೋಟೆ) ಈ ಸ್ಥಳಗಳಿಗೆ ಸ್ಥಳಾಂತರಗೊಂಡಿದೆ.[೪] ಈಗ ದೊರೆತಿರುವ ದಾಖಲೆಯು ಕಾವ್ರಾಡಿ ಮನೆತನದವರಾದ ನಾಗಪ್ಪಯ್ಯ ಕರಣಿಕ ಮತ್ತು ಜಯಂತ್ ಕಾವ್ರಾಡಿಯರಲ್ಲಿದ್ದುದು ಆಗಿದೆ. ಈ ಕರಣಿಕರ ಮನೆತನದ ಬಗ್ಗೆ ಅಧ್ಯಯನ ನಡೆಸಲು ಆ ಕಾಲದ ದಾಖಲೆಗಳ ಜೊತೆಗೆ ಈಸ್ಟ್ ಇಂಡಿಯಾ ಕಂಪನಿಯ ಕಾಗದ ಪತ್ರಗಳು ಭೂ ಸಂಬಂಧದ ದಾಖಲೆ ಪತ್ರಗಳು ಕಂದಾಯ ಇಲಾಖೆಯಲ್ಲಿರುವ ಅಡಂಗಲ್ಲು ಫೈಸಲ್ ಪತ್ರಿಕೆ ಮೊದಲಾದವು ಸಹಕಾರಿಯಾಗಿದೆ. ಸ್ಥಳ ಅಧ್ಯಯನದ ಸಂದರ್ಭದಲ್ಲಿ ಕಾವ್ರಾಡಿ ಮನೆಯ ಪತ್ರಾಗಾರದಲ್ಲಿ ಶ್ರೀರಾಮಚಂದ್ರಾಪುರ ಮಠದ ಕಾಗದ ಪತ್ರಗಳು, ಸ್ಥಳೀಯ ಪ್ರಸಿದ್ಧ ಮನೆತನಗಳಾದ ಬೈಲೂರು ಶಾನುಭೋಗರ ಮನೆ ಮತ್ತು ಹಲ್ಸನಾಡಿನ ಪ್ರತಿಷ್ಠಿತ ಜಮೀನ್ದಾರು ಮನೆತನವಾದ ಕಾರಂತರ ಮನೆಯಿಂದ ಬಂದಂತಹ ಕಾವ್ರಾಡಿ ಮನೆ ಯಜಮಾನರನ್ನು ಗೌರವಪೂರ್ವಕವಾಗಿ ಹೆಸರು ಸೂಚಿಸಿ ಕರಣಿಕರು ಎಂಬುದಾಗಿ ಸ್ಪಷ್ಟವಾಗಿ ಸಂಬೋಧಿಸಿರುವ ದಾಖಲೆಗಳು ಕಂಡುಬಂದಿವೆ. ೧೯ನೇ ಶತಮಾನದ ಅಂತ್ಯದವರೆಗೆ ಇಲ್ಲಿಯವರನ್ನು ಹಲ್ಸನಾಡು ಕರಣಿಕರೆಂತಲೇ ಸಂಬೋಧಿಸಿರುವುದು ದಾಖಲೆಗಳಲ್ಲಿ ಕಂಡುಬರುತ್ತದೆ. ಇವರಲ್ಲಿ ಹಲಸನಾಡು ನಾಗಪ್ಪಯ್ಯ ಹ. ಸುಬ್ಬರಸಯ್ಯ ಕರಣಿಕರ ಮುಂಡಾಸು, ಖಡ್ಗಗಳು, ಕರಣಿಕರ ದಂಡ, ಭತ್ತದ ಪತ್ತಾಸು ಒಂದು ಕಾಲದಲ್ಲಿ ವಿಶೇಷವಾಗಿ ಪೂಜೆ ಗೊಂಡಿರುವ ಲಕ್ಷ್ಮೀನಾರಾಯಣನ ವಿಗ್ರಹ, ಸಾಲಿಗ್ರಾಮ ಸಂಪುಟ, ಸ್ಫಟಿಕಲಿಂಗ, ಪಚ್ಚೆ ಸ್ಫಟಿಕಲಿಂಗ, ಬೃಹತ್ ದೇವರ ಮಂಟಪ, ತಾಡಯೋಲೆ ಹಸ್ತಪ್ರತಿಗಳು, ಬೆಳ್ಳಿ, ಪಂಚಲೋಹದ ವಿಗ್ರಹಗಳು ಮತ್ತು ಪೂಜಾ ಸಾಮಗ್ರಿಗಳು ಅಂದಿನ ವೈಭವವನ್ನು ಸಾರುವಂತಿವೆ. ಅವರ ಪಾಲುಪಟ್ಟಿಯಲ್ಲಿ (ಕ್ರಿ.ಶ. ೧೮೦೦) ಸೂಚಿಸಿರುವ ಮುತ್ತು ರತ್ನ ಹವಳ ಬೆಳ್ಳಿ ಆಭರಣಗಳು ಕಾಲು ದೀಪಗಳು ಈ ಮನೆತನದ ಗತವೈಭವಕ್ಕೆ ಸಾಕ್ಷಿಯಾಗಿವೆ.

ಮನೆಯ ಪಕ್ಕದಲ್ಲಿ ಆರು ಬ್ರಾಹ್ಮಣರ ಮನೆಗಳ ಅಗ್ರಹಾರವಿದ್ದ ಕುರುಹು ಕಂಡುಬರುತ್ತದೆ ಮತ್ತು ರಾಮೇಶ್ವರ ದೇವಸ್ಥಾನವಿದೆ. ಇದು ಕೆಳದಿ ಕಾಲದ್ದೆಂಬುದನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಕ್ರಿ.ಶ. ೧೮೫೦ರಲ್ಲಿ ಈ ಮನೆಯ ಹ. ರಾಮಕೃಷ್ಣ ಕರಣಿಕರು ಶ್ರೀಚಕ್ರ ಮತ್ತು ಪಾರ್ತೇಶ್ವರನ ಪೂಜೆ ಮಾಡುತ್ತಿದ್ದು ಕ್ರಿ.ಶ. ೧೯೫೪ರಲ್ಲಿ ಶ್ರೀಚಕ್ರವನ್ನು ಶ್ರೀ ಶ್ರೀಧರ ಸ್ವಾಮಿಗಳು ತಮ್ಮ ಮನೆಗೆ ಬಂದಾಗ ಅವರಿಗೆ ಒಪ್ಪಿಸಿರುವುದಾಗಿ ಈಗಿನ ನಾಗಪ್ಪಯ್ಯ ಕರಣಿಕರು ತಿಳಿಸಿದ್ದಾರೆ. ಈ ಪ್ರದೇಶ ಇಂದು ಕರಣಿಕರ ಬೆಟ್ಟು ಎಂದು ಗುರುತಿಸಲ್ಪಟ್ಟಿದೆ. ಈ ಸ್ಥಳದಲ್ಲಿ ಆನೆ ಕುದುರೆಗಳ ತಟ್ಟುಗಳು, ಹಾಗೂ ಸುಮಾರು ೨ ಕಿ.ಮಿ. ದೂರದಲ್ಲಿ ಕಂದ್ಲೂರು ಕೋಟೆಯ ಅವಶೇಷವಿದೆ. ಇದು ಕೆಳದಿ ಕಾಲದಲ್ಲಿ ತಂಗುದಾಣವಾಗಿರಬಹುದೆಂದು ಊಹಿಸಬಹುದಾಗಿದೆ.

ಹಲ್ಸನಾಡು ಕರಣಿಕರ ಮನೆ ಕುಂದ ಭಗವತಿ ಗುಡ್ಡದ ಭಾಗದಲ್ಲಿತ್ತು. ಹಳೆಯ ವಾಸ್ತುಶೈಲಿಯಲ್ಲಿ ರಚಿಸಿದ ಚತುಃಪ್ರಾಸಾದಗಳ ೮೦ ಅಂಕಣಕ್ಕು ಮಿಕ್ಕಿದ ದೊಡ್ಡಮನೆ ಇದಾಗಿತ್ತು. ಕ್ರಿ.ಶ. ೧೮೬೪ರಲ್ಲಿ ಮನೆ ೮ ಹಿಸೆಗಳಾದಾಗ ಮನೆ ಸಣ್ಣದಾಗುತ್ತಾ ಬಂದಿತು. ೧೯೫೫ರ ತನಕವು ಈ ಮನೆಯ ಹೆಬ್ಬಾಗಿಲು ಇದ್ದುದಾಗಿ ತಿಳಿದುಬರುತ್ತದೆ. ಆ ವೇಳೆಯಲ್ಲಿ ಕುಂದದ ಪ್ರಾಥಮಿಕ ಶಾಲೆಯಾಗಿ ಬಳಸಲ್ಪಟ್ಟಿತು. ಈಗ ಆ ಮನೆಯ ತಳಕಟ್ಟಿನ ಕುರುಹುಗಳು ಮಾತ್ರ ಉಳಿದಿವೆ. ಅಂದಿದ್ದ ಅಶ್ವತ್ಥಮರ, ದುರ್ಗಾಪರಮೇಶ್ವರಿ ಗುಡಿ, ರಾಮೇಶ್ವರಗುಡಿ, ನಾಗಬನ, ಹಾಯ್‌ಗುಳಿಸ್ಥಾನ ಮನೆದೈವವಾದ ಕುಂದದ ಚಿಕ್ಕುವಿನ ಸ್ಥಾನ ಮೊದಲಾದ ಕುರುಹುಗಳು ಇಂದೂ ಅವಶೇಷವಾಗಿ ಉಳಿದಿವೆ. ಕ್ರಿ.ಶ. ೧೬೦೦ರ ಸಂದರ್ಭದಲ್ಲಿ ಹೊನ್ನಗಂಬಳಿ ರಾಜ್ಯದ ಶಂಕರ ನಾರಾಯಣಭಟ್ಟನ ಕಾಲದಲ್ಲಿ ಈ ಮನೆತನದವರು ವಲಸೆ ಬಂದಿರುವಂತೆ ಕಂಡುಬರುತ್ತದೆ. ಇಲ್ಲಿರುವ ಒಡೆಯಪ್ಪನ ಕಟ್ಟೆ ಪ್ರದೇಶದಲ್ಲಿ ಇವರ ಕುಲದೈವರಾದ ಶ್ರೀ ಲಕ್ಷ್ಮೀನಾರಾಯಣ ದೇವಸ್ಥಾನವಿದ್ದು ಅದು ಇಂದು ಕೃಷ್ಣಉಪಾಧ್ಯಾಯ ಎಂಬುವರ ಮನೆ ಅಂಗಳದಲ್ಲಿದೆ. ಹಿಂದೆ ಮಾಣಿಕೊಳಲು ಚೆನ್ನಕೇಶವದೇವರು ರಥೋತ್ಸವದ ನಂತರ ಅವಭೃತಸ್ನಾನಕ್ಕೆ ಈ ದೊಡ್ಮನೆಯ ಎದುರಿನ ಹೊಳೆಗೆ ಬರುತ್ತಿದ್ದರೆಂದು ಆಗ ಈ ಕರಣಿಕರ ಮನೆಯ ವಸಂತಪೂಜೆ ನಡೆಯುತ್ತಿತ್ತೆಂದು ತಿಳಿದುಬರುತ್ತದೆ. ಅದು ಇಂದು ಅವಶೇಷವಾಗಿರುವ ಇಂದಿನ ಶ್ರೀರಾಮೇಶ್ವರ ದೇವರ ಎದುರು ಕಟ್ಟೆಯಲ್ಲಿ ನಡೆಯುತ್ತಿತ್ತು. ಕುಂದದ ಚಿಕ್ಕು ಮತ್ತು ಪರಿವಾರ ದೈವಗಳಿಗೆ

ಸಂಬಂಧಿಸಿದ (ಜೀರ್ಣೋದ್ಧಾರವಾಗಿರುವ) ದೊಡ್ಡ ದೈವಸ್ಥಾನ ಕುಂದದಲ್ಲಿದ್ದು ಈಗಲೂ ಕರಣಿಕ ಮನೆತನಕ್ಕೆ ಪ್ರಥಮ ಗೌರವ ಸಲ್ಲುತ್ತಿದೆ. ಹೊನ್ನಗಂಬಳಿಯ ಶಂಕರನಾಯಣಭಟ್ಟನು ಕಟ್ಟಿಸಿದ ಭಗ್ವಾಡಿ ಹೋಬಳಿಯ ಕೋಟೆಯು ಚಕ್ರಾನದಿಯ ಉತ್ತರ ಪಾರ್ಶ್ವದ ಎತ್ತರದ ಪ್ರದೇಶದಲ್ಲಿದ್ದು ಈ ಕೋಟೆಯಲ್ಲಿಯೂ ಕರಣಿಕರ ಮನೆತನಕ್ಕೆ ಸೇರಿದ ಸುಮಾರು ೧ ಎಕರೆ ಭೂಮಿ ಇದ್ದುದು ಕಂಡುಬರುತ್ತದೆ. ಅದು ಸುಮಾರು ೩ ತಲೆಮಾರುಗಳ ಹಿಂದೆ ಇಂದಿನ ವಿಠ್ಠಲಶೆಟ್ಟಿ ಎಂಬುವವರ ಕುಟುಂಬಕ್ಕೆ ಮೂಲಗೇಣಿಯಾಗಿ ದೊರೆತ್ತಿತ್ತೆಂದು ತಿಳಿದುಬರುತ್ತದೆ.[೪೮]

**ಐತಿಹಾಸಿಕವಾಗಿ ಕರಣಿಕ ಮನೆತನ** : ಸಾಳುವ ಹೈವರಸನು ಕ್ರಿ.ಶ. ಸು. ೧೩೮೦ರಲ್ಲಿ ಗೇರುಸೊಪ್ಪೆಯಲ್ಲಿ ತನ್ನ ರಾಜ್ಯವನ್ನು ಸ್ಥಾಪಿಸಿದ ಸಂದರ್ಭದಲ್ಲಿ ಈ ಮನೆತನದವರು ಆಸ್ಥಾನದಲ್ಲಿ ಕರಣಿಕ ವೃತ್ತಿಯನ್ನು ಹೊಂದಿದ್ದರು. ಅನಂತರದಲ್ಲಿ ಕ್ರಿ.ಶ. ೧೪೦೦ರಲ್ಲಿ ಗೇರುಸೊಪ್ಪೆಯು ಭಟ್ಕಳ ಮತ್ತು ಗೇರುಸೊಪ್ಪೆ ಎಂದು ೨ ಭಾಗವಾಯಿತು. ಕ್ರಿ.ಶ. ೧೪೧೩ರಲ್ಲಿ ವಿಜಯನಗರದ ವೀರಪ್ರತಾಪದೇವರಾಯನ ಕಾಲದಲ್ಲಿ ಭಟ್ಕಳದ ಮಂಡಲೇಶ್ವರ ನಾಗಿದ್ದ ಸಂಗಮರಾಯ (ಸಂಗೀರಾಯ)[೫] ನಿಂದ ಈ ಮನೆತನಕ್ಕೆ ಮೊದಲು ಸೇನಭೋವಿಕೆ ಮತ್ತು ಕರಣಿಕ ವೃತ್ತಿ ಕೊಟ್ಟಿರುವ ಬಗ್ಗ ಈ ಮನೆತನದಲ್ಲಿರುವ ಶಂಭುಲಿಂಗ ಸೇನಭೋವ ಎಂಬುವವನು ಪ್ರತಿಮಾಡಿರುವ ತಾಮ್ರಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಅದರಲ್ಲಿ ಇವರಿಗೆ ಸೇನುಭೋವಿಕೆ ಜೊತೆಗೆ ದಂಡಿಗೆ, ಕುದುರೆ, ರಾತ್ರಿ ದೀವಟಿಗೆ ಮೊದಲಾದ ಮರ್ಯಾದೆಗಳು ಕೊಡಲ್ಪಟ್ಟಿದ್ದವು. ಕ್ರಿ.ಶ. ೧೫೫೫ರಲ್ಲಿ ವಿಜಯನಗರದ ಚಕ್ರವರ್ತಿ ಸದಾಶಿವರಾಯನು ಕೆಳದಿ ಸದಾಶಿವನಾಯಕನಿಗೆ ಇಡಿಯ ತುಳುವ ರಾಜ್ಯವನ್ನು ಅಮರ ಮಾಗಣಿಯಾಗಿ ಬಿಟ್ಟುಕೊಟ್ಟ ಬಳಿಕ ಗೇರುಸೊಪ್ಪೆ ರಾಜ್ಯವು ಅತ್ತಲಾಗಿ ಬಿಳಗಿ ಮತ್ತು ಈ ಕಡೆ ಕೆಳದಿ ಅರಸರ ವಿರೋಧ ಕಟ್ಟಿಕೊಳ್ಳಬೇಕಾಯಿತು. ಹಿರಿಯ ವೆಂಕಟಪ್ಪನಾಯಕನು ಕ್ರಿ.ಶ. ೧೬೦೭ರಲ್ಲಿ ತನ್ನ ಸೇನಾನಿ ದಳವಾಯಿ ಲಿಂಗಣ್ಣನನ್ನು ಕಳುಹಿಸಿ ಗೇರುಸೊಪ್ಪೆ ಆಡುವಳ್ಳಿಯ ರಾಜ್ಯವನ್ನು ನಾಶ ಮಾಡಿ ರಾಣಿಯನ್ನು ಸೆರೆ ಹಿಡಿದು ಕೆಳದಿಗೆ ಕರೆದೊಯ್ದನು. ಆ ರಾಣಿಯು ತನ್ನ ಕೊನೆಗಾಲವನ್ನು ಸೆರೆಮನೆಯಲ್ಲಿಯೇ ಕಳೆಯಬೇಕಾಯಿತು. ಹೀಗೆ ಚೆನ್ನಾಭೈರಾದೇವಿಯು ಅಸುನೀಗಿದ ಬಗ್ಗೆ ಹಾಗೂ ಸಾಳುವರ ರಾಜ್ಯ ಕೆಳದಿ ರಾಜ್ಯಕ್ಕೆ ಸೇರಿದ ಬಗ್ಗೆ ಕೆಳದಿನೃಪವಿಜಯ ಉಲ್ಲೇಖಿಸುತ್ತದೆ. ಈ ಕಾರಣದಿಂದ ಈ ಮೊದಲು ಚೆನ್ನಭೈರಾದೇವಿಯ ಆಸ್ಥಾನದಲ್ಲಿದ್ದ ಈ ಕರಣಿಕರು ಕೆಳದಿ ರಾಜ್ಯದ ಕರಣಿಕರಾಗಿ ಮುಂದುವರಿಯುವಂತಾಯಿತು.[೬]

ಕೆಳದಿ ಸೋಮಶೇಖರನಾಯಕ ಮತ್ತು ಚೆನ್ನಮ್ಮಾಜಿಯ ಕಾಲದಲ್ಲಿ ಈ ಮನೆತನಕ್ಕೆ ಸೇರಿದ ಚೆನ್ನಪ್ಪಯ್ಯ ಮತ್ತು ವಿಶ್ವೇಶ್ವರಯ್ಯ ಎಂಬ ಸಹೋದರರು ಆಸ್ಥಾನದಲ್ಲಿ ಕರಣಿಕ ವೃತ್ತಿಯನ್ನು ಮಾಡುತ್ತಿದ್ದುದರ ಬಗ್ಗೆ ಮದ್ರಾಸ್ ಗ್ಯಾಜೆಟಿಯರ್ ವರದಿ ಮಾಡುತ್ತದೆ.[೭] ಈ ಮನೆತನದ ಹಿರಿಯರ ಅಭಿಪ್ರಾಯದಂತೆ ಚೆನ್ನಪ್ಪಯ್ಯನ ಕುಟುಂಬವು ಕುಂದಾಪುರ ತಾಲ್ಲೂಕಿನ ಹಲಸನಾಡಿನಲ್ಲೂ ವಿಶ್ವೇಶ್ವರಯ್ಯನ ಕುಟುಂಬವು ಹೊಸನಗರ ತಾಲ್ಲೂಕಿನ ಅಡಮನೆ ಎಂಬಲ್ಲಿಯೂ ಇತ್ತೆಂದು ತಿಳಿದುಬರುತ್ತದೆ.[೮] ಕಾಲಕ್ರಮದಲ್ಲಿ ಕೊಡಗು ಮತ್ತು ಕೆಳದಿ ಅರಸರ ಮಧುರ ಬಾಂಧವ್ಯದಿಂದ ಕೊಡಗಿನ ಹಾಲೇರಿ ವಂಶದ ಮುದ್ದುರಾಜನು ಕೆಳದಿ ಶಿವಪ್ಪ ನಾಯಕನ ಕಾಲದಲ್ಲಿ ಬಿದನೂರಿಗೆ ಭೇಟಿ ಇತ್ತು ಇಲ್ಲಿಯ ನಂಬಿಕೆಯ ಕರಣಿಕರಾಗಿದ್ದ ಅಡೆಮನೆ ಕುಟುಂಬವನ್ನು ಕೊಡಗಿಗೆ ಅಲ್ಲಿನ ಆಸ್ಥಾನ ಕರಣಿಕರಾಗಿ ಕರೆಸಿಕೊಂಡಿರುವುದಾಗಿ ದಾಖಲೆಗಳು ತಿಳಿಸುತ್ತವೆ. ಕೊಡಗಿನ ಇತಿಹಾಸದ ಪ್ರಕಾರ ಕೆಳದಿ ಮತ್ತು ಕೊಡಗು ರಾಜರುಗಳು ಬಂಧುಗಳು ಆಗಿದ್ದರಿಂದ ಇದು ಆಗಿರಲು ಸಾಧ್ಯವಿದೆ ಎಂದೆನ್ನಬಹುದು. ಅಡುಮನೆಯಿಂದ ಹೋದ ಈ ಕರಣಿಕರು ಕೆಳದಿ ರಾಜರಿಂದ ಕೊಡಗಿಗೆ ಒದಗಿದ ಪಳ್ಳತ್ತಡ್ಕ ಎಂಬ ಊರಿನಲ್ಲಿ ನೆಲೆಸಿದರು. ಆ ಸಲುವಾಗಿಯೇ ಅದರ ನೆನಪಿಗಾಗಿ ಕೊಡಗಿನ ಕರಣಿಕ ಕುಟುಂಬದವರು ಇಂದಿಗೂ ಎ.ಪಿ. ಎಂಬ ಹಿಂಬರಹ ಉಪಯೋಗಿಸುವುದಿದೆ. ಉದಾ. ಎ.ಪಿ. ತಿಮ್ಮಪ್ಪಯ್ಯ, ಎ.ಪಿ. ಗೋವಿಂದಯ್ಯ ಇತ್ಯಾದಿ. ಇಲ್ಲಿ ಎ ಎನ್ನುವುದು ಅಡಮನೆಯನ್ನು ಪಿ ಎನ್ನುವುದು ಪಳ್ಳತ್ತಡ್ಕ ಎಂಬುದನ್ನು ಸೂಚಿಸುತ್ತದೆ. ಹಲಸನಾಡು ಕೊಡಚಾದ್ರಿ ಪರ್ವತದ ಪಶ್ಚಿಮಕ್ಕೆ ಕುಂದಾಪುರ ತಾಲ್ಲೂಕಿನ ಚಕ್ರಾನದಿಯ ಉತ್ತರದಂಡೆಯಲ್ಲಿದ್ದರೆ ಅರಮನೆ ಕೊಡಚಾದ್ರಿ ಪರ್ವತದ ಪೂರ್ವಕ್ಕೆ ಹೊಸನಗರ ತಾಲ್ಲೂಕಿನ ಸಂಪೆಕಟ್ಟೆ ಸಮೀಪವಿದೆ. ಭೌಗೋಳಿಕ ಸಾಮೀಪ್ಯವು ಕೂಡ ಈ ಎರಡು ಕುಟುಂಬವು ಒಂದೇ ಎಂಬ ಹೇಳಿಕೆಯನ್ನು ಪುಷ್ಟೀಕರಿಸುತ್ತದೆ. ಹೀಗೆ ಭೌಗೋಳಿಕವಾಗಿ ಗೇರುಸೊಪ್ಪೆ, ಭಟ್ಕಳ, ಕೆಳದಿ, ಕೊಡಗು, ಈ ಎಲ್ಲಾ ಪ್ರದೇಶದ ಆಡಳಿತದಲ್ಲಿ ಗೌತಮ ಗೋತ್ರದ ಭೋದಾಯಣ ಸೂತ್ರದ ಈ ಹವ್ಯಕ ಬ್ರಾಹ್ಮಣ ಮನೆತನ ದವರು ಕರಣಿಕರಾಗಿ ಕಾರ್ಯನಿರ್ವಹಿಸಿರುವುದು ಸ್ಪಷ್ಟವಾಗುತ್ತದೆ.

ಕೆಳದಿ ಚೆನ್ನಮ್ಮಾಜಿ ಕಾಲದಲ್ಲಿ ಕರಣಿಕ ಚನ್ನಪ್ಪಯ್ಯನಿಗೆ ಹಲಸನಾಡು ಮಾಗಣಿಯ ಅಧಿಕಾರ ಸಿಕ್ಕಿತ್ತು. ಇವರ ಕಾಲದಲ್ಲಿ ಹಿರಿಯ ಮಗ ಹಲಸನಾಡು ರಾಮಪ್ಪಯ್ಯ ಎಂಬುವವನು ಹಲಸನಾಡು ಮಾಗಣಿಯ ಕುಂದ ಬಾರಂದಾಡಿ ಗ್ರಾಮದಲ್ಲಿನ ಒಡೆಯಪ್ಪನ ಕಟ್ಟೆ ಎಂಬಲ್ಲಿಂದ ಅಧಿಕಾರ ನಿರ್ವಹಿಸುತ್ತಿದ್ದನು. ಇದಕ್ಕೆ ಪೂರ್ವಕ್ಕಿರುವ ಕುಂದದ ಭಗವತಿ ಗುಡ್ಡದ ಪಶ್ಚಿಮಕ್ಕೆ ಕೆಳದಿ ಅರಸರ ಅಪೇಕ್ಷೆಯಂತೆ ರಾಮೇಶ್ವರ ದೇವಸ್ಥಾನ ಕಟ್ಟಿಸಿದ್ದಲ್ಲದೆ ಅದರ ಪಕ್ಕದಲ್ಲಿ ವಾಸಕ್ಕೆಂದು ಸುಮಾರು ೮೦ ಅಂಕಣದ ದೊಡ್ಮನೆ ಕಟ್ಟಲ್ಪಟ್ಟಿತ್ತು. ಆದರೆ ಇಂದು ಕುಂದದಲ್ಲಿದ್ದ ಕರಣಿಕರ ಮನೆ ಅವಶೇಷವಾಗಿದೆ. ಅಂದಿನ ಅವಶೇಷಗಳು ಆ ಸುತ್ತಮುತ್ತಲಲ್ಲಿ ಇತಿಹಾಸ ಸಾರುತ್ತ ಕುಳಿತಿವೆ.

ಮೆಕಂಜಿ ದಾಖಲೆಯು ಹೊನ್ನಗಂಬಳಿರಾಜ್ಯ ಹೊಸಂಗಡಿಯಲ್ಲಿ ಇರುವಾಗಲೇ ಶಂಕರನಾರಾಯಣಭಟ್ಟನ ಆಡಳಿತದಲ್ಲಿ ಬಗ್ವಾಡಿ ಹೋಬಳಿ ಎಂಬ ಪ್ರದೇಶಕ್ಕೆ ಹಲಸನಾಡು ಮಾಗಣೆ ಸೇರಿಸಲ್ಪಟ್ಟಿದ್ದಂತೆ ತಿಳಿಸುತ್ತದೆ. ಇದಲ್ಲದೆ ಕೊಲ್ಲೂರು, ತ್ರಾಸಿ, ಗಂಗೊಳ್ಳಿ ಕಂಡ್ಲೂರು, ಕಾವ್ರಾಡಿ, ವಂಡ್ಸೆ ಈ ಪ್ರದೇಶಗಳೆಲ್ಲ ಸೇರಿಸಲ್ಪಟ್ಟಿತ್ತೆಂದು ತಿಳಿಸುತ್ತದೆ. ಸ್ಥಳದ ಸೇನಬೋವಿಕೆ ಮತ್ತು ಆಡಳಿತ ನಿರ್ವಹಣೆ ಅಂದಿನಿಂದಲೇ ಹಲ್ಸನಾಡು ಕರಣಿಕ ನಾಗಪ್ಪಯ್ಯನವರ ಪೂರ್ವಜರಾದ ಚೆನ್ನಪ್ಪಯ್ಯನವರ ಕುಟುಂಬಕ್ಕೆ ಸೇರಲ್ಪಟ್ಟಿತ್ತೆಂದು ತಿಳಿಸುತ್ತದೆ.[೮೫]

ಕರಣಿಕ ಮನೆತನದವರು ಇತ್ತೀಚಿಗೆ ಸಂಗ್ರಹಿಸಿರುವುದನ್ನು ಕೆಳದಿ ವಸ್ತು ಸಂಗ್ರಹಾಲಯಕ್ಕೆ ನೀಡಿರುವ ವಂಶವೃಕ್ಷದಲ್ಲಿ ಸುಮಾರು ೧೫೦ಕ್ಕೂ ಮಿಕ್ಕಿದ ಹೆಸರುಗಳಿದ್ದು ೧೧ ತಲೆಮಾರುಗಳನ್ನು ಉಲ್ಲೇಖಿಸುತ್ತದೆ. ಈ ಮನೆತನದಲ್ಲಿ ಸುಬ್ಬರಸಯ್ಯ (ಸುಬ್ಬರಾಯ), ನಾಗಪ್ಪಯ್ಯ, ಚೆನ್ನಪ್ಪಯ್ಯ, ತಿಮ್ಮಪ್ಪಯ್ಯ ಮೊದಲಾದ ಹೆಸರುಗಳು ಪುನರುಕ್ತಿಯಾಗಿದೆ. ಈ ವಂಶವೃಕ್ಷದಲ್ಲಿ ಹೊನ್ನಾವರದ ಗೇರುಸೊಪ್ಪೆ ಸಮೀಪದ ಬೇರಂಕಿಯಲ್ಲಿರುವ ಇವರ ಮನೆತನದ ಕರಣಿಕ, ಸೂರಪ್ಪಯ್ಯ, ಕರಣಿಕ ರಾಮಪ್ಪಯ್ಯರ ಮನೆಯವರು ಹಲಸನಾಡಿನ ಕುಂದ ಕಟ್ಟಬೆಳ್ತೂರು ಸುಳ್ಸೆಕೋಟದ ಸಮೀಪದ ಬೇಳೂರು, ಕಾವ್ರಾಡಿ ಮನೆತನದ ಹೆಸರುಗಳಿವೆ. ೧೮೩೮ರಲ್ಲಿ ಈ ಮನೆತನದ ದೇವಪ್ಪಯ್ಯ ಎಂಬುವವರು ನ್ಯಾಯಾಲಯಕ್ಕೆ ಹಾಜರುಪಡಿಸಿದ ವಂಶವೃಕ್ಷ ಇದಾಗಿದೆ. ಕ್ರಿ.ಶ. ೧೮೬೪ರಲ್ಲಿ ಕುಂದದ ದೊಡ್ಮನೆಯನ್ನು ೮ ಭಾಗಗಳನ್ನಾಗಿ ಮಾಡಿ ನ್ಯಾಯ ನೀಡಿದ ತೀರ್ಪಿನ ನಕಲು ಕ್ರಿ.ಶ. ೧೯೪೦ರಲ್ಲಿ ಈ ಮನೆತನದ ದುಗ್ಗಪ್ಪಯ್ಯ ಎಂಬುವವರ ಹೆಂಡತಿ ಸುಬ್ಬಮ್ಮ ಎಂಬುವವರ ಆಸ್ತಿ ಸೆಟಲ್‌ಮೆಂಟಿನ ಬಗ್ಗೆ ಕುಂದಾಪುರದಲ್ಲಿ ಆದ ಮುಡಾರ್ ಮಂಜಯ್ಯ ಕರಣಿಕ ಕೋರ್ಟಿಗೆ ಹಾಜರು ಮಾಡಿದ ವಂಶವೃಕ್ಷದ ನಕಲು ಅಲ್ಲದೇ ಚಿಟ್ಟೆ, ಫೆಸಲ್ ಪತ್ರಿಕೆ, ಆರ್.ಟಿ.ಸಿ. ಕಂದಾಯ ಇಲಾಖೆಯ ದಾಖಲೆಗಳ ಆಧಾರದಿಂದ ಈ ವಂಶವೃಕ್ಷ ರಚಿಸಲಾಗಿದೆ. ಸುಬ್ಬಯ್ಯ, ತಿಮ್ಮಪ್ಪಯ್ಯ, ಸೂರಪ್ಪಯ್ಯ, ನಾಗಪ್ಪಯ್ಯ, ಚೆನ್ನಪ್ಪಯ್ಯ, ರಾಮಪ್ಪಯ್ಯ ಈ ಮೊದಲಾದ ಹೆಸರುಗಳು ಪ್ರತಿ ಬಳ್ಳಿಯಲ್ಲಿಯೂ ಪುನರಾವರ್ತನೆಗೊಂಡಿದೆ. ಈಗಲೂ ಸಹ ಸುಬ್ರಹ್ಮಣ್ಯ, ಶ್ರೀನಿವಾಸ, ನಾಗರಾಜ, ಸೂರ್ಯನಾರಾಯಣ ಎಂಬ ಹೆಸರುಗಳೇ ಅಲ್ಪಸ್ವಲ್ಪ ಮಾರ್ಪಾಡಿನೊಂದಿಗೆ ಬಳಕೆಯಲ್ಲಿದೆ. ಕರಣಿಕ ಎಂಬ ವೃತ್ತಿ ಸೂಚಕ ಪದ ಇಂದೂ ಸಹ ಇವರ ಹೆಸರಿನ ಮುಂದೆ ಅಭಿಮಾನದಿಂದ ಇಟ್ಟುಕೊಳ್ಳುವುದು ರೂಢಿಯಲ್ಲಿದೆ. ಈ ಎಲ್ಲಾ ಆಧಾರವನ್ನು ಗಮನಿಸಿದಾಗ ಮತ್ತು ಕಾವ್ರಾಡಿ ಮನೆಯಲ್ಲಿ ಬಿಳಗಿಯಿಂದ ಬಂದ ೧೯ನೇ ಶತಮಾನದ ಕಾಗದ ಪತ್ರಗಳನ್ನು ಗಮನಿಸಿದಾಗ ಇವರಿಗೆ ಬಿಳಗಿ ಪ್ರದೇಶದೊಡನೆ ಇದ್ದ ನಂಟನ್ನು ಅರಿಯಬಹುದಾಗಿದೆ.[೮೫] ಇದರಿಂದ ಕೆಳದಿ ಭದ್ರಪ್ಪನಾಯಕನ ಕಾಲದಲ್ಲಿ ಆಸ್ಥಾನ ಕರಣಿಕನಾಗಿದ್ದ ಬಿಳಗಿ ಸುಬ್ಬಯ್ಯನು ಇದೇ ವಂಶದವನೇ ಆಗಿದ್ದಿರಬಹುದೆಂದು ಊಹಿಸಬಹುದಾಗಿದೆ. ಗೋಕರ್ಣದ ಮಹಾಬಲೇಶ್ವರ ದೇವಾಲಯ ಮುಂಭಾಗದ ನಂದಿ ಮಂಟಪದ ನವರಂಗದಲ್ಲಿ ಬರೆದಿರುವ ಶಾಸನವು ಕರಣಿಕ ಹಲಸನಾಡು ಸುಬ್ಬಯ್ಯ ನಿರ್ಮಿಸಿದನೆಂದು ಉಲ್ಲೇಖಿಸುತ್ತದೆ.[೯]

ಕ್ರಿ.ಶ. ೧೭೬೧ರಲ್ಲಿ ಹೈದರಾಲಿಯು ಬಿದನೂರನ್ನು ಗೆದ್ದಾಗ ಈ ಮನೆತನ ಸಂಪೂರ್ಣವಾಗಿ ಹಲಸನಾಡು ಮಾಗಣೆಯ ಕುಂದಕ್ಕೆ ವಲಸೆ ಹೋಯಿತು[೧೦] ಆದರೂ ಹೈದರಾಲಿಯ ಅಣತಿಯಂತೆ ಇದೇ ಕುಟುಂಬದ ಹಲಸನಾಡು ಸುಬ್ಬರಸಯ್ಯನು ಕ್ರಿ.ಶ. ೧೭೬೩ ಆಸ್ಥಾನ ಕರಣಿಕರಾಗಿ ನಗರದಲ್ಲಿ ಮುಂದುವರೆದಿರುವುದು ಕಂಡುಬರುತ್ತದೆ. ಆಗ ಇವರಿಗೆ ಯಳರೆ ಮಾಗಣೆ (ಈಗಿನ ಕಂಡ್ಲೂರು, ಕಾವ್ರಾಡಿ, ಹಳನಾಡು, ಹಂಪಾರು ಗ್ರಾಮಗಳು) ಅಧಿಕಾರ ದೊರೆತಿತ್ತು. ಕ್ರಿ.ಶ. ೧೭೮೦ರಲ್ಲಿ ಈ ಮನೆತನದ ಸುಬ್ಬರಸಯ್ಯ ಎಂಬುವವರು ನಗರದಲ್ಲಿಯೂ ಇದೇ ಹೆಸರಿನ ಇನ್ನೊಬ್ಬನು ಕೊಡಗು ರಾಜ್ಯದಲ್ಲಿಯು ಹೈದರನ ಕೈಕೆಳಗೆ ಆಸ್ಥಾನ ಕರಣಿಕರಾಗಿ ಇದ್ದುದು ಕಂಡುಬರುತ್ತದೆ. ಇವರಿಬ್ಬರ ಗೋತ್ರ ಸೂತ್ರಗಳು ಒಂದೇ ಆಗಿರುವುದರಿಂದ ಹಲಸನಾಡು ಮತ್ತು ಕೊಡಗು ಕುಟುಂಬಗಳು ಒಂದೇ ಕುಟುಂಬದವರು ಎಂಬ ಮಾತನ್ನು ದೃಢೀಕರಿಸುತ್ತದೆ. ಅಜ್ಜ ಅಥವಾ ಮುತ್ತಜ್ಜನ ಹೆಸರನ್ನು ಹುಟ್ಟಿದ ಮಗುವಿಗೆ ಇಡುವ ಪರಿಪಾಠ ಇತ್ತೀಚಿನ ತನಕವು ಮುಂದುವರೆದುಕೊಂಡು ಬಂದಿದೆ. ಈ ಮನೆತನ ಕುಂದಾಪುರ ತಾಲ್ಲೂಕಿನ ಕುಂದ ಕಟ್ಟಬೆಳ್ತೂರಿನ ಸುಳ್ಸೆ, ಕೋಟದ ಸಮೀಪದ ಬೇಳೂರು, ಕಾವ್ರಾಡಿ ಮತ್ತು ಹೊನ್ನಾವರ ತಾಲ್ಲೂಕಿನ ಗೇರುಸೊಪ್ಪೆ ಸೀಮೆಯ ಬೇರಂಕಿ ಮತ್ತು ಕೊಡಾಣಿಗಳಲ್ಲಿ ಕಾಣಬಹುದಾಗಿದೆ. ಕುಂದ ಮತ್ತು ಕಾವ್ರಾಡಿಗಳಲ್ಲಿ ಕರಣಿಕರ ಮೂಲ ಮನೆಗಳ ಸಮೀಪ ಕೆಳದಿ ರಾಜರ ಕುಲದೈವ ಶ್ರೀರಾಮೇಶ್ವರ ದೇವಾಲಯವಿದೆ.[೧೧] ಅಲ್ಲದೇ ಹೊನ್ನಾವರ ತಾಲ್ಲೂಕಿನ ಗೇರುಸೊಪ್ಪೆ ಸೀಮೆಯ ಕೂಡಾಣಿಯಲ್ಲಿ ಸಾಳುವ ರಾಜರ ಕಾಲದ ಕಾಮೇಶ್ವರ ದೇವಾಲಯ ಇದ್ದು ಅದರ ಮೊಕ್ತೇಸಾರಿಕೆಯನ್ನು ಈ ಮನೆತನದವರೇ ಮುಂದುವರೆಸಿಕೊಂಡು ಬಂದಿದ್ದಾರೆ. ಈ ಮನೆತನದ ಮೂಲ ದೇವರಾದ ಲಕ್ಷ್ಮೀನಾರಾಯಣ ಪಂಚಲೋಹದ ವಿಗ್ರಹವೊಂದನ್ನು ಇತ್ತೀಚಿಗೆ ಕೆಳದಿ ವಸ್ತುಸಂಗ್ರಹಾಲಯಕ್ಕೆ ನೀಡಲಾಗಿದೆ. ೧೫-೧೬ನೇ ಶತಮಾನಕ್ಕೆ ಸೇರಿರುವ, ಬೇರಂಕಿಯ ಕರಣಿಕ ಸುಬ್ರಾಯ ಸೂರಯ್ಯ ಹೆಗಡೆಯವರಲ್ಲಿದ್ದ ಈ ವಿಗ್ರಹವು ಈ ಮನೆತನದ ಪ್ರಾಚೀನತೆಯನ್ನು ಅರಿತುಕೊಳ್ಳಲು ಸಹಕಾರಿಯಾಗಿದೆ. ಇದರ ಜೊತೆಗೆ ರಾಜರ ಕಾಲದಲ್ಲಿ ಕೊಡಲ್ಪಟ್ಟ ಕರಣಿಕ ಹುದ್ದೆಯ ಗಾಂಭೀರ್ಯದ ಬೆಳ್ಳಿಕಟ್ಟು ಇರುವ ಕೋಲು, ಛತ್ರಿ, ಖಡ್ಗ, ಮುಂಡಾಸು, ಇವುಗಳು ಜೊತೆಗೆ ಕಾವ್ರಾಡಿಯಲ್ಲಿರುವ ಕರಣಿಕ

ಹಲಸನಾಡು ನಾಗಪ್ಪಯ್ಯ ಮನೆ, ಕುಂದದ ಕರಣಿಕ ಚಿನ್ನಪ್ಪಯ್ಯನವರ ದೊಡ್ಡಮನೆಗೆ ಸಂಬಂಧಿಸಿದ ಐತಿಹಾಸಿಕ ದಾಖಲೆಗಳು ಹೈದರಾಲಿ ಕಾಲದವರೆಗಿನ ಕಾಗದ ಪತ್ರಗಳು ಈ ವಂಶದ ಬಗ್ಗೆ ಬೆಳಕು ಚೆಲ್ಲಲು ಸಹಕಾರಿಯಾಗಿದೆ. ಜೊತೆಗೆ ಕುಂದದಲ್ಲಿರುವ ಕರಣಿಕ ಹಲಸನಾಡು ಚಿನ್ನಪ್ಪಯ್ಯ ಕಾವ್ರಾಡಿಯಲ್ಲಿರುವ ಕರಣಿಕ ಹಲಸನಾಡು ನಾಗಪ್ಪಯ್ಯ ಎಂಬ ಸಂಬೋಧನೆ, ಈಸ್ಟ್ ಇಂಡಿಯಾ ಕಂಪೆನಿಯ ವಿಕ್ಟೋರಿಯಾರಾಣಿ, ಹಿಂದೂಸ್ಥಾನದ ಆಡಳಿತ ತೆಗೆದುಕೊಂಡು ಆ ಕುರಿತಂತೆ ತಾನು ಹಿಂದೂಸ್ಥಾನದ ಚಕ್ರವರ್ತಿನಿ ಎಂದು ಜನರಿಗೆ ಪ್ರಚುರಪಡಿಸಲು ಮಂಗಳೂರಿನ ನೆಹರೂ ಮೈದಾನದಲ್ಲಿ ೧-೧-೧೮೭೭ ರಲ್ಲಿ ಕರೆದ ಸಭೆಯ ಆಹ್ವಾನಪತ್ರ, ೪-೧-೧೯೧೪ರಲ್ಲಿ ಮಹಾಯುದ್ಧ ಪ್ರಾರಂಭ ಕುರಿತು ಜನಜಾಗೃತಿ ಮೂಡಿಸಲು ಕನ್ನಡ ಜಿಲ್ಲಾಧಿಕಾರಿಗಳು ಕುಂದಾಪುರ ಬೋರ್ಡ್ ಹೈಸ್ಕೂಲ್ ಆವರಣದಲ್ಲಿ ಜಿ.ಡಬ್ಲ್ಯೂ ವೇಲ್ಸ್‌ರವರು ಕರೆದ ಸಭಾ ಆಮಂತ್ರಣ ಪತ್ರ ಮೊದಲಾದವು ಈ ಮನೆತನವು ಅಂದು ಪ್ರತಿಷ್ಠಿತವಾಗಿತ್ತೆಂಬುದನ್ನು ಸ್ಪಷ್ಟಪಡಿಸುತ್ತದೆ.[೧೨]

**ಹಲಸನಾಡು** : ೧೭ನೇ ಶತಮಾನದಲ್ಲಿ ಹಲಸನಾಡು ದೊಡ್ಡ ಮಾಗಣೆಯಾಗಿ ೧೬ ಗ್ರಾಮಗಳ ಕೇಂದ್ರವಾಗಿತ್ತು. ಇಲ್ಲಿನ ಚೆನ್ನಕೇಶವ ದೇವಸ್ಥಾನ ಮಾಣಿಕೊಳಲು ಇದು ಸೀಮೆ ಪ್ರಮುಖ ದೇವಾಲಯವಾಗಿತ್ತು. ಇಲ್ಲಿನ ಹೆಚ್ಚಿನ ಮನೆಗಳಲ್ಲಿ ಚೆನ್ನಪ್ಪಯ್ಯ, ಚೆನ್ನಕೇಶವಯ್ಯ, ರಾಮಪ್ಪಯ್ಯ, ಸೂರಪ್ಪಯ್ಯ, ಸುಬ್ಬಯ್ಯ ಮೊದಲಾದ ಹೆಸರುಗಳು ಇದ್ದು ಇಂದೂ ಅದನ್ನು ಗಮನಿಸಬಹುದು. ಕುಂದಾಪುರ ಪಟ್ಟಣದಿಂದ ೧೫ ಕಿ.ಮೀ. ದೂರದಲ್ಲಿ ಈ ಹಲಸನಾಡು ಇದೆ. ಇದು ಚಕ್ರಾನದಿಯ ಉತ್ತರ ದಂಡೆಯಲ್ಲಿದೆ. ಇಂದಿನ ಹಕ್ಲಾಡಿ, ಯಳೂರು, ಕುಂದಬಾರಂದಾಡಿ, ನೂಜಾಡಿ, ವಂಡ್ಸೆ, ಹತ್ತೂರು, ಚಿತ್ತೂರು, ಇಡೂರು, ಗುಜ್ಜಾಡಿ, ಕಟ್ಟಬೆಳ್ತೂರು ಗ್ರಾಮಗಳು ಈ ಮಾಗಣೆಗೆ ಸೇರಿದ್ದವು. ಚಕ್ರಾನದಿಯು ನಗರದ ಸಮೀಪ ಪಶ್ಚಿಮ ಘಟ್ಟದಲ್ಲಿ ಹುಟ್ಟಿ ಸಾವೆಹಕ್ಕಲು ಎಂಬಲ್ಲಿ ಘಟ್ಟ ಇಳಿದು ಬರೆಗುಂಡಿ, ಕಮಲಶಿಲೆ, ವಂಡ್ಸೆ ಮೂಲಕ ಗಂಗೊಳ್ಳಿಯನ್ನು ಸೇರುತ್ತದೆ. ವಿಜಯನಗರದ ಅರಸರ ಕಾಲದಲ್ಲಿ ಭಟ್ಕಳದ ಮಂಡಲಾಧೀಶ್ವರರ ಕೈಕೆಳಗಿದ್ದ ಈ ಪ್ರದೇಶ ಕ್ರಿ.ಶ. ೧೬೦೭ರಲ್ಲಿ ಕೆಳದಿ ರಾಜ್ಯದೊಡನೆ ಲೀನವಾಯಿತು.[೧೩]

**ಈಗ ದೊರೆತಿರುವ ಅಪ್ರಕಟಿತ ದಾಖಲೆ** : ಕಾವ್ರಾಡಿ ಮನೆಯಲ್ಲಿ ಇತ್ತೀಚೆಗೆ ದೊರಕಿರುವ ಅಪ್ರಕಟಿತ ದಾಖಲೆಯು ಕೆಳದಿಯ ಎರಡನೆ ಬಸಪ್ಪನಾಯಕನು ಕ್ರಿ.ಶ. ೧೭೪೫ರಲ್ಲಿ ಗೌತಮಗೋತ್ರದ ಹಲಸನಾಡು ನಾಗಣ್ಣನಿಗೆ ಬರೆದು ಕಳುಹಿಸಿದ್ದಾಗಿದೆ. ಈ ಕುಟುಂಬದವರಿಗೆ ಮೊದಲು ಭಟ್ಕಳದಲ್ಲಿ ಬೈರಾದೇವಿಯು ತನ್ನ ಸಂಸ್ಥಾನದಲ್ಲಿ ಲೆಕ್ಕವನ್ನು ಬರೆದುಕೊಂಡು ಇರುವ ಕರಣಿಕ ವೃತ್ತಿಯನ್ನು ಕೊಟ್ಟಿದ್ದು ಅದೇ ಪ್ರಕಾರ ಈಗಲೂ ಕಾಣಿಕೆಯನ್ನು ಕೊಟ್ಟೇನು ನನಗೆ ಆ ವೃತ್ತಿಯನ್ನು ದಯಪಾಲಿಸಬೇಕು ಎಂದು ಕೇಳಿಕೊಂಡಿದ್ದರಿಂದ ಆ ಪ್ರಕಾರ ಕೆಳದಿ ಸಂಸ್ಥಾನದಲ್ಲಿರುವ ಸೀಮೆಗಳ ಲೆಕ್ಕ ಬರೆದು ಕಟ್ಟಳೆ ಪ್ರಕಾರ ಬಣ್ಣದ ಚಾವಡಿಗೆ (ಅಧಿಕಾರಿಗಳು ಇರುವ ಸ್ಥಳ) ಕಡತಗಳನ್ನು ಒಪ್ಪಿಸುವಂತೆ ಈ ವೃತ್ತಿಗೆ ಸಂಬಳ ಕಾಲವೊಂದಕ್ಕೆ ಇಕ್ಕೇರಿ ಗದ್ಯಾಣ ೩೬೦ ತೆಗೆದುಕೊಂಡು ಸೀಮೆಗಳಲ್ಲಿ ಇರುವ ವರ್ತನೆ, ಜಾತಿಕಾಯಿ ಸಹ ತೆಗೆದುಕೊಂಡು ನಾವು ಆಳುವ ಸೀಮೆ ಕಂದಾಚಾರ, ಬೊಕ್ಕಸ, ಉಗ್ರಾಣ, ದಂಡಿನ ಹೋಬಳಿ, ಧರ್ಮಾಧಿಕಾರಿ, ಹುಜೂರು ಮುಂತಾಗಿ ಎಲ್ಲಾ ಲೆಕ್ಕಗಳನ್ನು ಬರೆದುಕೊಂಡು ಅರಮನೆ ಕೆಲಸವನ್ನು ಮುಖ್ಯವಾಗಿ ನಡೆದುಕೊಂಡು ಬರುವಂತೆ ಮತ್ತು ಈ ಸಂಬಳ ಶಿಸ್ತಿನ ಮೇಲೆ ಕಾಣಿಕೆಯಾಗಿ ಭಂಡಾರಕ್ಕೆ ೩೬೦೦ ವರಹಾವನ್ನು ಸಲ್ಲಿಸಿಕೊಂಡು ಬರುವಂತೆ ಮತ್ತು ಕರಣಿಕತನಕ್ಕೆ ಪಾಲಿಸಿದ ದಂಡಿಗೆ, ಕುದುರೆ, ಸತ್ತಿಗೆ, ಪಕ್ಕಜೋಡು, ದೀವಟಿಗೆ ಮೊದಲಾದ ಮರ್ಯಾದೆಯನ್ನು ಸಂತಾನ ಪಾರಂಪರ್ಯವಾಗಿ ಅನುಭವಿಸಿಕೊಳ್ಳುತ್ತಾ ಲೆಕ್ಕವನ್ನು ಬರಕೊಂಡು ಬರುವಂತೆ ವೃತ್ತಿಯನ್ನು ಪಾಲಿಸಿದ ನಿರೂಪವಾಗಿದೆ.

ಅರಮನೆಗೆ ಸಂಬಂಧಿಸಿದ ಆಸ್ಥಾನ ಕರಣಿಕ ಹುದ್ದೆ ಅಲ್ಲದೆ ಬೇರೆ ಬೇರೆ ದುರ್ಗಗಳಲ್ಲಿಯೂ, ಸೀಮೆಗಳಲ್ಲಿಯೂ ಕರಣಿಕ ಹುದ್ದೆಗಳಿದ್ದವು. ಇವು ಸಾಮಾನ್ಯವಾಗಿ ವಂಶಪಾರಂಪರ್ಯವಾಗಿತ್ತು. ಒಬ್ಬ ರಾಜನ ಆಸ್ಥಾನದಲ್ಲಿ ಹೆಚ್ಚಾಗಿ ಒಬ್ಬನೇ ಆಸ್ಥಾನ ಕರಣಿಕ ವೃತ್ತಿಯನ್ನು ನಿರ್ವಹಿಸುತ್ತಿದ್ದನು. ಈ ಹುದ್ದೆಯು ಪತ್ರ ವ್ಯವಹಾರಗಳಿಗೆ ಸಂಬಂಧಿಸಿದುದಾದುದರಿಂದ ಆ ಕಾಲದಲ್ಲಿದ್ದ ಮಠ, ದೇವಸ್ಥಾನಗಳ ಪತ್ರಾಗಾರಗಳಲ್ಲಿ ಆ ಕಾಲದ ಕರಣಿಕರ ಹೆಸರುಗಳನ್ನು ಪರಿಶೀಲಿಸಲು ಅವಕಾಶವಿದೆ.

ವಿಜಯನಗರ ಕಾಲದಲ್ಲಿದ್ದ ಸೇನಭೋವ ಹುದ್ದೆಗೆ ಕೆಳದಿ ಕಾಲದಲ್ಲಿದ್ದ ಸೇನಭೋವ ಮತ್ತು ಕರಣಿಕ ಎಂಬ ಹುದ್ದೆಗಳು ಮೇಲುನೋಟಕ್ಕೆ ಒಂದೇ ಆಗಿ ಕಂಡರೂ ಸೇನುಭೋವ ಎಂಬುದು ಭೂ ದಾಖಲೆಗಳ ವರ್ಗಾವರ್ಗಿ, ಮಾಗಣೆಗಳಲ್ಲಿನ ಕರ ವಸೂಲಿಗೆ ಸಂಬಂಧಿಸಿದಂತೆ ಇದ್ದು ಕರಣಿಕ ಹುದ್ದೆಯು ಎಲ್ಲಾ ವಿಧದ ಕರ ಎಣಿಕೆಗಳ ಲೆಕ್ಕ ಪತ್ರಗಳಿಗೆ ಸಂಬಂಧಿಸಿದುದು ಆಗಿರುತ್ತಿತ್ತು. ಕೆಳದಿ ಕಾಲದಲ್ಲಿ ರಾಜ್ಯದ ಪಶ್ಚಿಮ ಕರಾವಳಿಯಲ್ಲಿ ಯುರೋಪಿಯನ್ನರಿಂದ ವ್ಯಾಪಾರ ವಹಿವಾಟು ನಡೆಯುತ್ತಿದ್ದಾಗ ಅಲ್ಲಿ ವಿಧಿಸುತ್ತಿದ್ದ ಮಾರಾಟ ಕರ ತೆರಿಗೆಗಳ ಲೆಕ್ಕವು ರಾಜನ ಆಸ್ಥಾನದ ಆಡಳಿತಾಂಗದಲ್ಲಿ ಈ ವಿಧದ ಪ್ರತ್ಯೇಕ ಕರಣಿಕ ಹುದ್ದೆಗೆ ಅವಕಾಶ ಮಾಡಿಕೊಟ್ಟಿರುವ ಸಾಧ್ಯತೆ ಕಂಡುಬರುತ್ತದೆ.

೧೯೯೪-೯೫ರಲ್ಲಿ ಕುಂದಾಪುರದ ಭಂಡಾರ್‌ಕರ್ಸ್ ಕಾಲೇಜಿನ ವಾರ್ಷಿಕ ಸಂಚಿಕೆ ದರ್ಶನದಲ್ಲಿ ಆಗ ದೊರೆತ ಮಾಹಿತಿಯನ್ನಾಧರಿಸಿ ಹಲಸನಾಡು ಮನೆತನ ಒಂದು ಅಧ್ಯಯನ ಎಂಬ ಲೇಖನವನ್ನು ಪ್ರಕಟಿಸಲಾಗಿದೆ. ಹಾಗೆಯೇ ಇತಿಹಾಸ ದರ್ಶನ ನಂ. ೧೮/೨೦೦೩ರಲ್ಲಿ ಹಲಸನಾಡಿನ ಬಗ್ಗೆ ಪ್ರತಿಷ್ಠಿತ

ಜಮೀನುದಾರಿ ಮನೆತನವಾದ ಕಾರಂತರ ಕುಟುಂಬದ ಪೂರ್ವಿಕರು ಹಲಸನಾಡು ಕರಣಿಕ ನಾಗಪ್ಪಯ್ಯ ಮತ್ತು ಚೆನ್ನಪ್ಪಯ್ಯನ ಕುಟುಂಬದವರು ಎಂಬುದಾಗಿ ಇವೆರಡೂ ಪ್ರಬಂಧಗಳಲ್ಲಿ ಉಲ್ಲೇಖಿಸಲ್ಪಟ್ಟು ಪ್ರಕಟಿಸಲಾಗಿದೆ. ಈ ಲೇಖನಗಳಿಗೆ ಆಗ ಲಭ್ಯವಿದ್ದ ಕೆಲವೇ ದಾಖಲೆಗಳನ್ನು ಮತ್ತು ವೈಯಕ್ತಿಕ ಹೇಳಿಕೆಯನ್ನು ಬಳಸಿಕೊಳ್ಳಲಾಗಿದೆ. ಅಲ್ಲಿ ಪ್ರಕಟಿಸಲ್ಪಟ್ಟಿರುವ ವಂಶವೃಕ್ಷದಲ್ಲಿ ಕ್ರಿ.ಶ. ೧೮೧೨ರ ನಂತರದ ವಿಚಾರಗಳು ಸರಿ ಹೊಂದುತ್ತದೆ. ಆದರೆ ಅದಕ್ಕೂ ಹಿಂದಿನ ವಿಚಾರಗಳು ಮತ್ತು ಕುಟುಂಬ ಪೂರ್ವಿಕರ ಹೆಸರುಗಳು ಪ್ರಶ್ನಾರ್ಥವಾಗಿಯೇ ಉಳಿಯುತ್ತದೆ. ಮೂಲ ದಾಖಲೆಗಳ ಕೊರತೆಯಿಂದ ಕೆಳದಿ ಹಾಗೂ ಹಲಸನಾಡಿನ ಕಾರಂತರ ಕುಟುಂಬದ ಪೂರ್ವಜರಿಗೆ ಸಂಬಂಧಿಸಿದಂತೆ ಕಲ್ಪಿಸಿದ ಬಾಂಧ್ಯವಕ್ಕೆ ವೈಯಕ್ತಿಕ ಹೇಳಿಕೆಗಳು ಅಥವಾ ಅನಿಸಿಕೆಗಳು ಕಾರಣವಾದಂತೆ ಕಂಡುಬರುತ್ತದೆ. ಈಗ ದೊರೆತಿರುವ ದಾಖಲೆಗಳು ಐತಿಹಾಸಿಕ ಸಾಮಗ್ರಿಗಳು ಮತ್ತು ಮೂಲ ಮನೆತನದ ಅವಶೇಷಗಳು ಮತ್ತು ಆ ಕಾಲದ ಕಾಗದ ಪತ್ರಗಳು ಹಲಸನಾಡು ಕರಣಿಕರ ಮನೆತನವನ್ನು ಸ್ಪಷ್ಟವಾಗಿ ಚಿತ್ರಿಸಲು ಸಹಕಾರಿಯಾಗಿವೆ. ಈ ಹಿಂದಿನ ಲೇಖನವು ವೈಯಕ್ತಿಕ ಹೇಳಿಕೆ ಅಥವಾ ಅನಿಸಿಕೆಗಳಂತೆ ಕಂಡುಬಂದು ಕಾರಂತರ ಕುಟುಂಬವನ್ನು ಐತಿಹಾಸಿಕ ಹಿನ್ನೆಲೆಯಲ್ಲಿ ಚಿತ್ರೀಕರಿಸುವಂತೆ ಕಂಡುಬರುತ್ತದೆ. ಮೂಲ ದಾಖಲೆಗಳನ್ನಾಧರಿಸಿ ಈ ಬಗ್ಗೆ ಹೆಚ್ಚಿನ ಸಂಶೋಧನೆ ಆಗಬೇಕಾಗಿದೆ. ಮೇಲಿನ ಆಧಾರಗಳಿಂದ ಹೊಸದಾಗಿ ಹಲಸನಾಡು ಕರಣಿಕರ ಮನೆತನವನ್ನು ವಂಶವೃಕ್ಷದೊಂದಿಗೆ ಪರಿಚಯಿಸಲು ಸಾಧ್ಯವಾಗಿದೆ.

(ಈ ದಾಖಲೆಗಳನ್ನು ಸಂಶೋಧನೆಗೆ ಬಳಸಿಕೊಳ್ಳಲು ಅವಕಾಶವಿತ್ತ ಶ್ರೀ ನಾಗಪ್ಪಯ್ಯ ಕರಣಿಕರು ಮತ್ತು ಶ್ರೀ ಜಯಂತ ಕರಣಿಕ ಕಾವ್ರಾಡಿ, ಕರಣಿಕ ಕುಟುಂಬದ ಬಗ್ಗೆ ಮಾಹಿತಿ ಮತ್ತು ವಂಶವೃಕ್ಷಗಳನ್ನು ದೊರಕಿಸಿಕೊಟ್ಟ ಮತ್ತು ಸ್ಥಳ ಅಧ್ಯಯನಕ್ಕೆ ನನ್ನೊಟ್ಟಿಗೆ ಸಹಕರಿಸಿದ ಶ್ರೀ ಸುಬ್ರಹ್ಮಣ್ಯ ಪದವಿಪೂರ್ವ ಕಾಲೇಜಿನ ಗಣಿತಶಾಸ್ತ್ರ ಉಪನ್ಯಾಸಕರಾದ ಶ್ರೀ ಎಸ್. ಬಾಲಚಂದ್ರ ಕರಣಿಕರವರಿಗೆ ಜೊತೆಗೆ ಸೂಕ್ತ ರೀತಿಯಲ್ಲಿ ಸಂಶೋಧನೆಗೆ ಸಹಕಾರವಿತ್ತ ಹಲ್ಸನಾಡು ಭಾಗದ ಕುಂದ, ಸುಳ್ಸೆ, ಬೇಳೂರು, ಕಾವ್ರಾಡಿ, ಹೊನ್ನಾವರದ ಬೇರಂಕಿ ಮತ್ತು ಕೊಡಗು ಕರಣಿಕ ಕುಟುಂಬವರ್ಗದವರಿಗೆ ಕೃತಜ್ಞತೆಗಳು ಸಲ್ಲುತ್ತವೆ.)[೧೪]





**ಕರಣಿಕ ಹಲ್ಸನಾಡು ನಾಗಪ್ಪಯ್ಯ ಇವರ ಕುಟುಂಬದವರು ಈಗ ಇರುವ ಪ್ರದೇಶಗಳು :**
**ಕುಂದ, ಸುಳ್ಯ ಕಾವ್ಯಾಡಿ, ಬೇಲೂರು, ಕುಂದಾಪುರ ಇತ್ಯಾದಿ**

**ಕಾವ್ರಾಡಿ ಮನೆಯಲ್ಲಿ ಸಿಕ್ಕಿದ ದಾಖಲೆ**

೧ ಕ್ರೊಧನ ಸಂವತ್ಸರದ ಆಷಾಡ ಶು ೧೩ಲ್ಲು ಶ್ರೀಮತ್ಕೆಳದಿ

೨ ಬಸವಪ್ಪನಾಯಕರ್‍ಯೆಯನವರು ಹಲಸನಾಡ ನಾಗಂಣನೆ

೩ ಬರಶಿ ಪಾಲಿಶಿದ ನಿರೂಪ ನೀನು ಹುಜುರು ಬಂದು ಪ್ರಾಕು ಬಟ್ಟಕ

೪ ಳದಲ್ಲು ಬೈರಾದೇವಿಯವರು ನನಗೆ ತಂನ್ನ ಸಂಸ್ಥಾನದಲ್ಲುಯಿರ್‍ರ

೫ ವ ಲೆಖಗಳ ಬರಕೊಂಡು ಯಿರುವ ಕರಣಿಕೆ ಬಗ್ಗೆ ತಾಂಬ್ರದ ಶಾಸನ

೬ ಬರಕೊಟ್ಟುಯಿದ್ದಾರೆ ಆ ಪ್ರಕಾರ ಯಿಾಗ ಯಿ ಕಾಣಿಕೆಯಂನು ಕೊ

೭ ಟ್ಟೆನು ಕರಣಿಕೆಯಂನ್ನು ನನಗೆ ದಯಾಪಾಲಿಸಬೇಕು ಯಂಬದಾ

೮ ಗಿ ಆರ್ರಿಕೆ ಮಾಡಿಕೊಂಡು ತಾಂಬ್ರದ ಶಾಸನವಂನ್ನು ತಂದು ತೊರ್ರಿದ

೯ ಸಂಮಂಧ ಪೂರ್ವಪ್ರಕಾರ ನಂಮ ಕೆಳದಿ ಸಂಸ್ಥಾನದಲ್ಲು ಯಿರುವ ಶಿ

೧೦ ಮೆ ಲೆಖಗಳಂನ್ನು ಹಸ್ತಕರಯಿಟ್ಟು ಲೆಖ ಬರದು ಕಟ್ಟಲೆ ಪ್ರಕಾರ ಬ

೧೧ ಂಣದ ಚಾವಡಿಗೆ ಕೈಕಡಿತ್ತಗಳ ವಪ್ಪಿಶಿಕೊಡುವುದು ।ಯಿಾ ಕರಣಿಕೆ।

೧೨. ಸಂಬಳ ಕಾಲ ೧ಕ್ಕೆ ಯಿಕ್ಕೇರ್ರಿ ಗ ೩೬೦ ಮುಂನ್ನುರು ಅರುವತ್ತು ವರಹಾ

೧೩. ನೆ ಪ್ರಕಾರ ಸಂಬಳವಂನ್ನು ತೆಗೆದುಕೊಂಡು ಶಿಮೆಗಳಲ್ಲು ಯಿರುವ ವ।

೧೪. ರ್‍ತನೆ ಚಲುತಿಕಾಯಿ ಸಹ ಕಟ್ಟಲೆ ಪ್ರಕಾರ ತೆಗೆದುಕೊಂಡು ಸಾಲು ಆ

೧೫. ಳುವ ಸಿಮೆ ಕಂದಾಚಾರ ಬೊಕ್ಕಸ ಉಗ್ರಾಣ ದಂಡಿನ ಹೊಬಳಿ ಧಂ

೧೬. ರ್ಮಾಧಿಕಾರ್‍ರಿ ಹುಜುರು ಮುಂತಾಗಿಯೆನುಂಟಾದ ಲೆಖಗಳ ಸಹಾ

೧೭. ಬರಕೊಂಡು ಅರಮನೆ ಕೆಲ್ಸ ಮುಖ್ಯವಾಗಿ ನಡೆಕೊಂಡು ಬರುವುದು

೧೮. ಯಿಾ ಸಂಬಳದ ಸಿಸ್ತಿನ ಮೇಲೆ ಕಾಣಿಕೆ ಬಗ್ಗೆ ನಿಂನ್ನ ಕೈಯ ತೆಗೆದುಕೊ

೧೯. ಂಡದ್ದು ಗ ೩೬೦೦ ಮೂರುಸಾವಿರದ ಆರನ್ನೂರ್‍ರುವರಹಾಂನ್ನು ನಂಮ

೨೦. ಬಂಡಾರಕೆ ಸಲಿಶಿಕೊಂಡು ನಂಮ ಸಂಸ್ಥಾನದ ಕರಣಿಕತನಕ್ಕೆ ನಿ

೨೧. ನಗೆ ಪಾಲಿಸಿದ ದಂಡಿಗೆ ಕುದುರೆ ಸತ್ತಿಗೆ ವತ್ಯಜೋಡು ದೀವಟ್ಟಿಗೆ ।

೨೨. ಸಹಾ ಉಂಟಾದ ಮರ್‍ರಿಯಾದಿಯಂನ್ನು ನಿಂನ್ನ ಸಂತಾನ ಪಾರಂ

೨೩. ಪರೆಯಾಗಿ ಅನುಬವಿಸಿಕೊಳ್ಳುತ್ತಾ ಲೆಖಗಳ ಬರಕೊಂಡು ಬ

೨೪. ಹದುಯಂದು ಬರಶಿಪಾಲಿಶಿದ ನಿರೂಪ (ಮೊಹರಿದೆ)



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಪ್ರವಾಸಿ ಕಂಡ ಇಂಡಿಯಾ**, ಸಂ. ೩-೪ (ಸಂ.) ಹೆಚ್.ಎಲ್. ನಾಗೇಗೌಡ.

೨. ಕೆನ್ನವಿ., ೧೯೭೭, ಕಸಾಪ; **ಕೆಳದಿ ಸಂಸ್ಥಾನ ಸಮಗ್ರ ಅಧ್ಯಯನ**., ೧೯೯೪, ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಪು. ೪೯೮.

೩. ಈ ಕಾಲದಲ್ಲಿಯೂ ಇದೇ ಮನೆತನದವರು ಕರಣಿಕವೃತ್ತಿಯಲ್ಲಿದ್ದರೂ ವೆಂಕಟಪತಿಅಯ್ಯ ವ್ಯಕ್ತಿಯ ಉಲ್ಲೇಖ ಕಂಡುಬರುತ್ತಿದೆ. ಇದು ಹೆಚ್ಚಿನ ಸಂಶೋಧನೆಗೆ ಒಳಪಡಬೇಕಿದೆ.

೪. ಕಾವ್ರಾಡಿ ಮನೆಯ ಪತ್ರಾಗಾರದಲ್ಲಿ ದೊರಕಿದ ದಾಖಲೆಗಳು ಮತ್ತು ಕರಣಿಕ ಮನೆತನದ ವಿಶ್ರುತವಾದ ವಂಶವೃಕ್ಷ; ಈ ಕೋರ್ಟು ತೀರ್ಪಿನ ಮೂಲದಾಖಲೆ ಲಭ್ಯವಿದ್ದು ಅದು ಈ ಸಂಶೋಧನೆಯ ಆಕರಗಳಲ್ಲಿ ಒಂದಾಗಿದೆ. ೧೮೬೪ರ ಹಿಸೆ ವ್ಯಾಜ್ಯದ ಕುರಿತ ತೀರ್ಪು.

೪ಅ ಕರಣಿಕ ವಂಶಸ್ಥರಾದ ಶ್ರೀ ಬಾಲಚಂದ್ರ ಕರಣಿಕರವರು ಈ ಎಲ್ಲಾ ಸ್ಥಳಗಳಿಗೆ ಶ್ರೀಜಯಂತ ಕರಣಿಕರೊಡನೆ ಭೇಟಿ ಕೊಡಿಸಿ ಸ್ಥಳ ಅಧ್ಯಯನಕ್ಕೆ ಸಹಕರಿಸಿದ್ದಾರೆ. ಅವರುಗಳಿಗೆ ಕೃತಜ್ಞತೆಗಳು.

೫. ಡಾ. ಹಂಪ ನಾಗರಾಜಯ್ಯ ಅವರ **ಸಾಳುವ ಭಾರತ** ಪುಸ್ತಕ ಮುನ್ನುಡಿಯಲ್ಲಿ.

೬. ಮದ್ರಾಸ್ ಗ್ಯಾಜೆಟಿಯರ್ ೧೮೯೪-೯೫ ಮತ್ತು ಕೆನ್ನವಿ ಮತ್ತು ಕರ್ನಾಟಕ ಅರಸು ಮನೆತನಗಳು, ೨೦೦೦ ಪ್ರಸಾರಾಂಗ ಕವಿವಿ., ಕಾವ್ರಾಡಿ ಮನೆ ಪತ್ರಾಗಾರದಲ್ಲಿ ದೊರಕಿದ ತಾಮ್ರಶಾಸನ. (ಶಂಭುಲಿಂಗ ಸೇನಬೋವನು ಮಾಡಿದ ಪ್ರತಿ)

೭. ಮದ್ರಾಸ್ ಗ್ಯಾಜೆಟಿಯರ್ ೧೮೯೪-೯೫ ; **ಕೊಡಗಿನ ಇತಿಹಾಸ** ೧೯೯೫ ಮೈಸೂರು ವಿವಿ., **ಉತ್ತರಕನ್ನಡ ದರ್ಶನ** ೧೯೮೬.

೮. **ಕರ್ನಾಟಕ ಕೈಫಿಯತ್ತುಗಳು**, ಕನ್ನಡ ವಿವಿ, ಹಂಪಿ, ಪು. ೩೯೫, ೨೭೦, ೨೫೬, ೨೫೭, ೩೬೩, ೪೦೧, ೨೩೭.

೮ಅ. ಆ ಹಲಸನಾಡು ಕರಣಿಕ ಚಿನ್ನಪ್ಪಯ್ಯನವರಿಂದ ಪ್ರಾರಂಭಿಸಿ ಒಟ್ಟು ಈತನಕದ ೧೧ ತಲೆಮಾರುಗಳ ವ್ಯವಸ್ಥಿತವಾದ ವಂಶವೃಕ್ಷವನ್ನು ಈ ಕುಟುಂಬದವರು ಕೆಳದಿ ವಸ್ತು ಸಂಗ್ರಹಾಲಯಕ್ಕೆ ನೀಡಿರುತ್ತಾರೆ. ಸುಮಾರು ೧೫೦ಕ್ಕೂ ಮಿಕ್ಕಿ ಗಂಡು ಸಂತತಿಯ ವಿವರಗಳುಳ್ಳ ಈ ವಂಶವೃಕ್ಷವನ್ನು ಯಥಾವತ್ತಾಗಿ ಪ್ರಕಟಿಸಲು ಸ್ಥಳಾಭಾವವಿರುವುದರಿಂದ ಕೇವಲ ಕಾವ್ರಾಡಿಯ ಶಾಖೆಯ ವಿವರವನ್ನು ಮಾತ್ರ ನೀಡಲಾಗಿದೆ.

೯. **ಗೋಕರ್ಣದ ಚರಿತ್ರೆ**., ೧೯೮೨ ಮತ್ತು **ಸ್ಟಡೀಸ್ ಇನ್ ತುಳುವ ಹಿಸ್ಟ್ರಿ ಅಂಡ್ ಕಲ್ಚರ್**, ಡಾ. ಪಿ. ಗುರುರಾಜಭಟ್ ಮತ್ತು **ಶೃಂಗೇರಿ ಧರ್ಮಸಂಸ್ಥಾನ**, ಡಾ. ಎ.ಕೆ. ಶಾಸ್ತ್ರಿ, ಕರ್ನಾಟಕ ವಿವಿ, ಧಾರವಾಡ.

೧೦. ಕುಂದ ಮತ್ತು ಕಾವ್ರಾಡಿ ಗ್ರಾಮಗಳಲ್ಲಿ ಹಾಗೂ ಗೇರುಸೊಪ್ಪೆಯ ಬೇರಂಕಿಯಲ್ಲಿ ಮನೆ ಅಂಗಳದಲ್ಲಿ ಕುಲದೇವರಾದ ಲಕ್ಷ್ಮೀನಾರಾಯಣ ದೇವರಿದೆ.

೧೧. **ಕರ್ನಾಟಕ ಕೈಫಿಯತ್ತುಗಳು**., ೧೯೯೪ ಡಾ. ಎಂ.ಎಂ. ಕಲಬುರ್ಗಿ, ಪ್ರಸಾರಾಂಗ ಕವಿವಿ, ಮತ್ತು ಸ್ಥಳ ಅಧ್ಯಯನದ ವರದಿ.

೧೨. ಕರಣಿಕರ ಮನೆತನಕ್ಕೆ ಸಂಬಂಧಿಸಿದ ಮೂಲ ಐತಿಹಾಸಿಕ ದಾಖಲೆಗಳು - ಅದರ ಪ್ರತಿಗಳು ಕೆಳದಿ ವಸ್ತು ಸಂಗ್ರಹಾಲಯದಲ್ಲಿದೆ.

೧೩. **ತುಳು ಕರ್ನಾಟಕ ಅರಸು ಮನೆತನಗಳು**., ೨೦೦೦. ಕನ್ನಡ ವಿವಿ, ಹಂಪಿ.

೧೪. **ದರ್ಶನ**, ಭಂಡಾರಕರ್ರ್ಸ್ ಕಾಲೇಜು ಕುಂದಾಪುರ, ೧೯೯೪-೯೫; **ಇತಿಹಾಸ ದರ್ಶನ** ಸಂ. ೧೮ / ೨೦೦೩. ರಮೇಶ್‌ಕಾರಂತರ ಲೇಖನ.

** **ಶ್ರೀರಾಮಚಂದ್ರಾಪುರ ಮಠದ ರಾಜಮಾನ್ಯ ಇತಿಹಾಸ** ಸಂ. ೨, ೨೦೦೩, (ಸಂ) ಕೆಳದಿ ಗುಂಡಾಜೋಯಿಸ್.

** ೧೭೬೩ರಲ್ಲಿ ಸಂಪೂರ್ಣವಾಗಿ ಮನೆ ಹಲ್ಸನಾಡಿಗೆ ಬಂದನಂತರ ಚಿನ್ನಪ್ಪಯ್ಯನವರ ಮಕ್ಕಳಲ್ಲಿ ಮೊದಲಬಾರಿಗೆ ಹಿಸೆ ಆಗಿ ಗೇರುಸೊಪ್ಪೆಯಲ್ಲಿ ಎರಡು ಕುಂದ, ನೂಜಾಡಿ ಮತ್ತು ಕಾವ್ರಾಡಿಯಲ್ಲಿ ಮೂರು ಹೀಗೆ ೫ ವಿಭಾಗಗಳಾದವು. ಹೈದರಾಲಿಯಿಂದ ಪುನಃ ಕರೆಸಲ್ಪಟ್ಟ ಮೇರೆಗೆ ಹಲ್ಸನಾಡು ನಾಗಪ್ಪಯ್ಯ ನಂತರ ಇವರ ಮಗ ಹಲ್ಸನಾಡು ಸುಬ್ಬರಸಯ್ಯ ಇವರು ನಗರದಲ್ಲಿ ಕರಣಿಕರಾಗಿ ಮುಂದುವರಿದಿದ್ದಾರೆ.






ವ. ರಮೇಶ ಕಾರಂತ*

# ಕೆಳದಿ ಅರಸರ ಮೂರು ಅಪ್ರಕಟಿತ ದಾಖಲೆಗಳು

*ಕೆಳದಿಯ ದೊರೆಗಳ ಕಾಲದ ಈ ದಾಖಲೆಗಳಲ್ಲಿ ಕೆಳದಿರಾಜ್ಯ ಮತ್ತು ಆರಗದ ಪ್ರಧಾನಿ ವಿರೂಪಾಕ್ಷ ಅಗ್ರಹಾರದ ಮಹಾಜನರಿಗೆ ವಿವಿಧ ದೇವಾಲಯಗಳ ನಿತ್ಯನೈಮಿತ್ತಿಕ ಕಾರ್ಯಗಳಿಗೆ, ವೃತ್ತಿವಂತರಿಗೆ ಸಂಭಾವನೆಗಾಗಿ ನೀಡಿದ ಉತ್ತಾರದ ವಿಷಯ ಹಾಗು ಸೋಮಶೇಖರನಾಯಕನ ನಿರೂಪದಲ್ಲಿ ದೇಗುಲದ ಉತ್ತಾರ ಸಾಲದಾಗ, ಹೆಚ್ಚು ಮಾಡಿದ ಕ್ರಮದ ವಿವರವಿದೆ; ಮಹಾಜನಗಳು ಚುನಾಯಿತ ಪ್ರತಿನಿಧಿಗಳಾಗಿ ಜನಸಾಮಾನ್ಯರು ಹಾಗು ಅರಮನೆ ನಡುವಣ ಕೊಂಡಿಯಾಗಿ ಜನರ ಸಂಕಷ್ಟಗಳನ್ನು ಕೊರತೆಗಳನ್ನು ಅರಸನ ಗಮನಕ್ಕೆ ತರುವ ಮಧ್ಯಮ ವ್ಯಕ್ತಿಗಳಾಗಿ ಈ ನಿರೂಪಗಳಿಂದ ಗಮನಕ್ಕೆ ಬರುತ್ತಾರೆ.*

"ರತ್ನಗರ್ಭಾ ವಸುಂಧರಾ" ಎಂಬ ಮಾತಿದೆ ಈ ಮಾತು ಕೆಳದಿಯ ಇತಿಹಾಸಕ್ಕೂ ಅನ್ವಯಿಸುತ್ತದೆ. ಸುಮಾರು ೨೫೦ಕ್ಕೂ ಹೆಚ್ಚು ವರ್ಷಗಳ ಕಾಲ ಸ್ವತಂತ್ರರಾಗಿ, ಸಾಮಂತರಾಗಿ ರಾಜ್ಯವಾಳಿದ ಈ ರಾಜವಂಶ ಕೇರಳದ ಉತ್ತರದ ಮಂಜೇಶ್ವರ ದಿಂದ ಹಿಡಿದು ಉತ್ತರ ಕನ್ನಡ ಜಿಲ್ಲೆಯ ತನಕದ ಕರಾವಳಿ ವಲಯದಲ್ಲೂ, ದಕ್ಷಿಣ ಕರ್ನಾಟಕದ ಬಹುಭಾಗಗಳಲ್ಲಿ, ಉತ್ತರ ಕರ್ನಾಟಕದ ಕೆಲಭಾಗಗಳಲ್ಲಿ ಕೂಡ ತನ್ನ ಪ್ರಭಾವವನ್ನು ಬೀರಿದೆ. ಈ ವಿಶಾಲ ಭೂಭಾಗದಲ್ಲಿ ಈಗಲೂ ಹೊಸ ಹೊಸ ದಾಖಲೆಗಳು ಸಿಗುತ್ತಲೇ ಇವೆ. ಇವು ದಾನಶಾಸನಗಳಿರಬಹುದು, ನಿರೂಪಗಳಿರಬಹುದು, ರಾಯಸಗಳಿರಬಹುದು, ಅಧಿಕಾರ ಪ್ರಮಾಣ ಪತ್ರಗಳಿರಬಹುದು, ನ್ಯಾಯಪಂಚಾಯತಿಗಳಿಗೆ ಸಂಬಂಧಪಟ್ಟವುಗಳಿರಬಹುದು, ತೆರಿಗೆಗೆ ಸಂಬಂಧಿಸಿದ್ದಿರಬಹುದು. ಹೀಗೆ ಹತ್ತು ಹಲವು ರೀತಿಯ ದಾಖಲೆಗಳು ಕಂಡು ಬರುತ್ತವೆ. ಅರಸರು ಆಕ್ರಮಿಸಿಕೊಂಡ ಬಹುತೇಕ ಪ್ರಾಂತಗಳಲ್ಲಿ ತಮ್ಮ ರಾಜಪ್ರತಿನಿಧಿಗಳನ್ನು ನೆಲೆಗೊಳಿಸುವುದರ ಬದಲು ಅಲ್ಲಿನ ರಾಜನಿಷ್ಠ ಸ್ಥಳೀಕರಿಗೆ ಹೆಚ್ಚಿನ ಅಧಿಕಾರಗಳನ್ನು ಕೊಟ್ಟು ಅವರಿಂದಲೇ ಆ ಪ್ರದೇಶದಿಂದ ಅರಮನೆಗೆ ಬರಬೇಕಾದ ಕಪ್ಪಕಾಣಿಕೆಗಳನ್ನು ವಸೂಲಿ ಮಾಡುತ್ತಿದ್ದುದಲ್ಲದೆ ಸ್ಥಳೀಯ ವಿದ್ರೋಹಿಗಳ ಹುಟ್ಟಡಗಿಸುತ್ತಿದ್ದರು. ಸ್ಥಳೀಕರ ಸಮಸ್ಯೆಗಳಿಗೆ ಪರಿಹಾರವನ್ನು ಒದಗಿಸುತ್ತಿದ್ದರು. ಕೆಳದಿಯ ಅರಸರ ಆಳ್ವಿಕೆಯ ಕಾಲ ಇತಿಹಾಸದ ನವೋದಯದ ಕಾಲವೆಂದರೆ ತಪ್ಪಾಗದು. ಭಾರತದೇಶದ ರಾಜಕಾರಣದಲ್ಲಿ ಮುಸ್ಲಿಂರೊಂದಿಗೆ ಆಂಗ್ಲರು ಕಾಲಿಡುತ್ತಿದ್ದ ಸಮಯ ಅದಾಗಿತ್ತು. ಕೆಳದಿಯ ಅರಸೊತ್ತಿಗೆ ಅಸ್ತಂಗತವಾದರೂ ಅದರಲ್ಲಿ ಭಾಗಿಯಾಗಿದ್ದ ಸಹಸ್ರಾರು ಸೇನಬೋವರು, ಕರಣಿಕರು, ಮಹಾಜನಗಳ ಸಂತತಿ ಮುಂದೆಯೂ ಉಳಿದಿದ್ದು ಅವರ ಬಳಿ ಅಮೂಲ್ಯ ದಾಖಲೆಗಳು ಉಳಿದುಕೊಂಡವು. ಮುಂದೆ ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಬೇರೆ ಬೇರೆ ಕಾರಣದಿಂದಾಗಿ ಆ ದಾಖಲೆಗಳನ್ನು ಉಳಿಸಿಕೊಳ್ಳಲೇಬೇಕಾದ ಸಂದರ್ಭಗಳು ಉಂಟಾದಾಗ ಅವುಗಳ ಪ್ರತಿ ಮರುಪ್ರತಿಗಳು ಆ ಜನರ ನಂತರದ ತಲೆಮಾರಿನವರ ಬಳಿ ಉಳಿದುಕೊಂಡವು. ಹಳೆಯ ಕಡತಗಳ ರಾಶಿಯಲ್ಲಿ ಹುದುಗಿಹೋದುವು. ಇತಿಹಾಸದ ಬಗೆಗಿನ ಕಾಳಜಿ ಹಾಗೂ ಸಂರಕ್ಷಣೆ ಮಾಡಿಕೊಳ್ಳಬೇಕೆಂಬ ಕಳಕಳಿ ಉಳ್ಳವರ ಸಂಖ್ಯೆ ಹೆಚ್ಚುತ್ತಿರುವ ಕಾರಣದಿಂದಾಗಿ ಕಾಲನಗರ್ಭದಲ್ಲಿ ಅಡಗಿ ಹೋಗುತ್ತಿದ್ದುತಹ ದಾಖಲೆಗಳು ಇಂದು ಬೆಳಕನ್ನು ಕಾಣುತ್ತಿವೆ. ಇಂತಹ ದಾಖಲೆಗಳ ಸಾಲಿನಲ್ಲಿ ನನ್ನ ಅಧ್ಯಯನದ ಕಾಲದಲ್ಲಿ ಇತ್ತೀಚೆಗೆ ದೊರಕಿದ ಕೆಳದಿಯ ದೊರೆ ಹಿರಿಯ ಸಂಕಣ್ಣನಾಯಕರ ನಿರೂಪ, ವಿರೂಪಾಕ್ಷ ಅಗ್ರಹಾರದ ನಿರೂಪ, ಹಾಗೂ

* ವಿಜಯಾ ಬ್ಯಾಂಕ, ಉಳವಿ, ಸೊರಬ ತಾ. ಶಿವಮೊಗ್ಗ ಜಿಲ್ಲೆ - ೫೭೭ ೪೩೪

ಎರಡನೇಯ ಸೋಮಶೇಖರನಾಯಕರ ನಿರೂಪಗಳು ಸೇರುತ್ತವೆ. ಇವು ಆ ಕಾಲದಲ್ಲಿ ಸ್ಥಳೀಯವಾಗಿ ಬಗೆಹರಿಸಿಕೊಳ್ಳಬಹುದಾದ ವಿವಾದಗಳನ್ನು ಹೇಗೆ ತಮ್ಮ ತಮ್ಮಲ್ಲಿ ಬಗೆಹರಿಸಿಕೊಳ್ಳುತ್ತಿದ್ದರು ಹಾಗೂ ಅವುಗಳನ್ನು ಹೇಗೆ ಆಳುವ ಅರಸರ ಗಮನಕ್ಕೆ ತರುತ್ತಿದ್ದರು ಎಂಬುದದನ್ನು ವಿಶದಪಡಿಸುತ್ತವೆ.

ಕೆಳದಿಯ ದೊರೆ ಎರಡನೆಯ ಸಂಕಣ್ಣನಾಯಕರ ಕಾಲದ (ಕ್ರಿ.ಶ. ೧೫೭೯-೧೫೭೧) ಮೊದಲನೆಯ ದಾಖಲೆಯು "ಶ್ರೀಮತು ಕೆಳದಿ ಸಂಕಣ್ಣನಾಯಕರು ಆರಗದ ರಾಜ್ಯವನ್ನಾಳುವ ಕಾಲದಲ್ಲಿ ಪ್ರಮೋಧೂತ ಸಂವತ್ಸರದ ಆಶ್ವೀಜ ಶುದ್ಧ ೧೦ಲು ಸಂಕಣ್ಣನಾಯಕರೈಯ್ಯನವರು ಕರೂರು ಪಾಳೆಯದಲ್ಲಿ ಇರಲಾಗಿ...." ಎಂದು ಆರಂಭವಾಗುವ ಕನ್ನಡ ಲಿಪಿಯ ಎರಡು ಹಾಳೆಗಳ ಈ ನಿರೂಪವು ಹಲವು ಹೊಸ ವಿಷಯಗಳನ್ನು ತಿಳಿಸುತ್ತದೆ. ಇದರ ಪ್ರಕಾರ ೧. ಆರಗದ ರಾಜ್ಯಕ್ಕೆ ಸೇರಿದ ಮಾಳೇನಹಳ್ಳಿ ಸೀಮೆಯನ್ನು ತುರುಕರು ಹಾಳುಗೆಡಹಿದಾಗ ಅವರನ್ನು ಮುರಿದು ಆರಗದ ಲಕ್ಷ್ಮೀಪತಿ ಅಯ್ಯನವರಿಗೆ ಆ ಸೀಮೆಯ ಪಾರುಪತ್ತೆಗಾರಿಕೆಯನ್ನು ನೀಡುವುದು ೨. ಚಿನ್ನ ಭಂಡಾರದ ರಾಮಚಂದ್ರಯ್ಯನವರನ್ನು ಕೆಳದಿ ರಾಜ್ಯ ಮತ್ತು ಆರಗದ ರಾಜ್ಯದ ಪ್ರಧಾನಿಯನ್ನಾಗಿಸುವುದು- "ಕೆಳದಿ ನೃಪ ವಿಜಯ" ದಲ್ಲಾಗಲಿ, "ಕೆಳದಿ ಸಂಸ್ಥಾನದ ಸಮಗ್ರ ಇತಿಹಾಸ" ದಲ್ಲಾಗಲಿ ಆರಗದ ಲಕ್ಷ್ಮೀಪತಯ್ಯನವರನ್ನು ಪ್ರಸ್ತಾಪಿಸ ದಿರುವುದು ಹಾಗೂ ಚಿನ್ನ ಭಂಡಾರದ ರಾಮಚಂದ್ರಯ್ಯ ನವರ ಹೆಸರು ಎರಡನೇ ಸಂಕಣ್ಣನಾಯಕರ ಆಡಳಿತದಲ್ಲಿ ಕಂಡು ಬರದೇ ಇರುವುದು, ಈ ಎರಡು ವಿಷಯಗಳು ಈ ದಾಖಲೆಯಲ್ಲಿ ಕಂಡು ಬರುವುದು ವಿಶೇಷ (iii) ಇನ್ನು ಮೂರನೆಯದಾಗಿ, "ಆಮೇಲೆ ಚಿನ್ನಭಂಡಾರದ ರಾಮಚಂದ್ರಯ್ಯನವರಿಗೆ ಪ್ರಧಾನಪಟ್ಟಕ್ಕೆ ಅಪ್ಪಣೆಯಾಗಿ"-ಎಂಬ ಬರಹ ಚಿ.ಭ. ರಾಮಚಂದ್ರಯ್ಯನವರಿಗಿಂತ ಮೊದಲು ಆರಗದ ಲಕ್ಷ್ಮೀಪತಯ್ಯ ನವರು ಪ್ರಧಾನಿಯಾಗಿದ್ದರು ಎನ್ನುವುದನ್ನು ಸೂಚಿಸುತ್ತದೆ. ಲಕ್ಷ್ಮೀಪತಯ್ಯನವರು ಪ್ರಧಾನಿ ಯಾಗಿದ್ದಾಗ ಹರಿಹರಪುರ ಅಗ್ರಹಾರದ ಮಹಾಜನಗಳ ಕೋರಿಕೆ ಯಂತೆ ಹಿಂದೆ ಮಾಳೇನಹಳ್ಳಿ ಸೀಮೆ ತುರುಕರ ವಶದಲ್ಲಿದ್ದಾಗ ಈ ಅಗ್ರಹಾರಕ್ಕೆ ಯಾವ ರೀತಿಯ ಉಂಬಳಿ ಉತ್ತಾರಗಳನ್ನು ಬಿಟ್ಟಿದ್ದರೋ ವಿವಿಧ ವೃತ್ತಿಯವರಿಗೆ ಎಷ್ಟು ಸಂಭಾವನೆಯನ್ನು ನಿಗದಿಪಡಿಸಿದ್ದರೋ ಕಾರಣಾಂತರಗಳಿಂದ ನಿಂತಹೋಗಿದ್ದ ಅವನ್ನು ಪುನಃ ಸ್ಥಾಪಿಸಿದರು. ಇನ್ನು ಚಿ.ಭ. ರಾಮಚಂದ್ರಯ್ಯನವರು ಪ್ರಧಾನಿ ಯಾದಾಗ ಇದೇ ಹರಿಹರಪುರ-ಅಗ್ರಹಾರದ ಮಹಾಜನರು ತಮ್ಮ ಅಗ್ರಹಾರದ ಹುಟ್ಟುವಳಿಯ ಸಂಬಂಧ ಅರಮನೆಗೆ ತೆರಬೇಕಾದ ಶಿಸ್ತು ಜಾಸ್ತಿಯಾಗಿದ್ದು ಅದನ್ನು ತೆರಲಾರದ ಸ್ಥಿತಿಯಲ್ಲಿ ತಾವಿದ್ದು ತೆರಿಗೆಯನ್ನು ಕಡಿಮೆ ಮಾಡುವಂತೆ ಕೇಳಿಕೊಂಡಾಗ ಅದರಂತೆ ಮಹಾಜನಗಳನ್ನು ಅರಮನೆಗೆ ಕರೆದೊಯ್ದು ಅರಸನ ಭೇಟಿ ಮಾಡಿಸಿ ಕಾರ್ಯಸಾಧನೆ ಮಾಡಿಸಿದುದಾಗಿ ತಿಳಿದುಬರುತ್ತದೆ.

ಎರಡನೆಯ ದಾಖಲೆ "ವಿರೂಪಾಕ್ಷ ಅಗ್ರಹಾರದ ಶಾಸನ ಪ್ರತಿ", ಕ್ರಿ.ಶ. ೧೬೩೮ನೇ ಚಿತ್ರಭಾನು ಸಂವತ್ಸರಕ್ಕೆ ಸೇರಿದ್ದಾಗಿದ್ದು ಕೆಳದಿಯ ದೊರೆ ವೀರಭದ್ರ ವಿರೂಪಾಕ್ಷ ಅಗ್ರಹಾರದ ಮಹಾ ಜನರಿಗೆ ಬರಸಿಕೊಟ್ಟ ತಾಮ್ರ ಶಾಸನದ ಪ್ರತಿಯಾಗಿದೆ. ಈ ಅಗ್ರಹಾರದಲ್ಲಿನ ವಿವಿಧ ದೇವಾಲಯಗಳ ನಿತ್ಯ ನೈಮಿತ್ತಿಕ ಕಾರ್ಯ ಗಳಿಗೆ, ವೃತ್ತಿವಂತರಿಗೆ ಸಂಭಾವನೆ ಮತ್ತಿತರ ವೆಚ್ಚಗಳಿಗೆ ಆ ಅಗ್ರಹಾರಕ್ಕೆ ಉತ್ತಾರವಾದ ಸ್ವಾಸ್ಥೆಯಿಂದ ಬರುವ ಉತ್ಪನ್ನ ಸಾಲದೆ ಇದ್ದುದನ್ನು ಮಹಾಜನರಿಂದ ತಿಳಿದು ದೊರೆ ವೀರಭದ್ರ ನಾಯಕರು ತುಂಗಭದ್ರಾ ತೀರದ ದೂರ್ವಾಸಾಶ್ರಮ- ಶಿವಮೊಗ್ಗೆಯಲ್ಲಿ ಈ ಅಗ್ರಹಾರಕ್ಕೆ ನೀಡಿದ ಉತ್ತಾರದ ವಿವರವನ್ನು ತಿಳಿಸುತ್ತದೆ. ಅಲ್ಲದೆ ವೀರಭದ್ರನಾಯಕನ ಆಸ್ಥಾನದಲ್ಲಿ ಮಂತ್ರಿಯಾಗಿದ್ದ ಬಿಳಗಿ-ಕೋನಪ್ಪಯ್ಯನ ಮಗ ಕೋನಪ್ಪಯ್ಯನು ಈ ಅಗ್ರಹಾರದ ಯಜಮಾನನಾಗಿದ್ದುದನ್ನು ತಿಳಿಸುತ್ತದೆ. ಮಾಳೂರು ಶೀಮೆಯೊಳ ಗಣ ಎಡೆಹಳ್ಳಿ ಸಾಲವಳಗಣ ಜಂಬವಳ್ಳಿ ಗ್ರಾಮದಿಂದ ಅರಮನೆಗೆ ಸಂದಾಯವಾಗುತ್ತಿದ್ದ ಕೋಟೆಬಿರಾಡ, ಶಿದಾಯ ಮುಂತಾದ ೪೩ ಗದ್ಯಾಣ ಹಾಗೂ ಮಾಳೂರು ಗ್ರಾಮದಿಂದ ೨೧ ಗದ್ಯಾಣ, ಒಟ್ಟು ೬೪ ಗದ್ಯಾಣ ಶಿಸ್ತಿನ ಭೂಮಿಯನ್ನು ದಾನವಾಗಿ ಕೊಟ್ಟಿದ್ದನ್ನು ತಿಳಿಸುತ್ತದೆ.

ಮೇಲಿನ ಎರಡು ದಾಖಲೆಗಳು ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಕುಪ್ಪಗಡ್ಡೆ ಗ್ರಾಮದ ಜನ್ನಿಭಟ್ಟರ ವಂಶಜರಾದ ಮಂಜಮ್ಮನವರ ಮನೆಯಲ್ಲಿ ದೊರತಿದೆ.

ಇನ್ನು ಮೂರನೆಯ ದಾಖಲೆಯಲ್ಲಿ ಕೆಳದಿಯ ದೊರೆ ಇಮ್ಮಡಿಸೋಮಶೇಖರ ನಾಯಕನ ನಿರೂಪ, ಮತ್ತೆರಡು ಪತ್ರಗಳು ಸೇರಿವೆ, ಈ ನಿರೂಪದ ಕಾಲ ಕ್ರಿ.ಶ. ೧೭೪೮ರ ವಿಶ್ವಾವಸು ಸಂವತ್ಸರ. "ವಿಶ್ವಾವಸು ಸಂವತ್ಸರದ ಮಾರ್ಗಶಿರ ಶುದ್ಧ ೩ಲು ಶ್ರೀಮತ್ಕೆಳದಿ ಸೋಮಶೇಖರ ನಾಯಕರು ರಾಮಪ್ಪಗೆ ಬರಶಿ ಕಳುಹಿದ ಕಾರ್ಯ", ಎಂದು ಆರಂಭವಾಗುವ ಈ ನಿರೂಪವು ಕರಣಿಕ ವೆಂಕಟಪತಯ್ಯನು ತೀರ್ಥಹಳ್ಳಿಯಲ್ಲಿ ದೇವಸ್ಥಾನ ಕಟ್ಟಿಸಿ ಪ್ರತಿಷ್ಠೆ ಮಾಡಿಸಿದ ಸುರೇಶ್ವರ ದೇವರ ದೇವತಾ ವೆಚ್ಚಕ್ಕೆ, ಕರಣಿಕ ಪರಮೇಶ್ವರಯ್ಯನು ಸುರೇಶ್ವರ ದೇಗುಲದ ಸಮೀಪದಲ್ಲಿ ತಾನು ಕಟ್ಟಿಸಿದ ವೆಂಕಟಾಪುರ ಅಗ್ರಹಾರ ಹಾಗೂ ವೆಂಕಟರಮಣ ದೇವಸ್ಥಾನಕ್ಕೆ ಬಿಟ್ಟ ಉತ್ತಾರ ಸಾಲದೆಂದು ತಿಳಿದು ಭದ್ರರಾಜಪುರ-ಅಗ್ರಹಾರಕ್ಕೆ ಉತ್ತಾರವಾದ ವಿರೂಪಾಪುರ ಗ್ರಾಮದಿಂದ ಅಪ್ಪಾಜಿ ವೆಂಕಟಾದ್ರಿಭಟ್ಟರ ಮಗ ದೇವರು ಭಟ್ಟರಿಗೆ ಉತ್ತಾರವಾದ ಸ್ವಾಸ್ಥೆ ಒಳಗಣ ೧೨ ಗದ್ಯಾಣ ಸ್ವಾಸ್ಥೆಯನ್ನು ಖರೀದಿಸಿ ತಾವು ಕಟ್ಟಿಸಿದ ದೇವಸ್ಥಾನಕ್ಕೆ ಉತ್ತಾರ ನೀಡುತ್ತಾರೆ. ಇಲ್ಲಿ ಗಮನಿಸಬೇಕಾದ ಮುಖ್ಯಾಂಶವೆಂದರೆ ಯಾವುದೇ ಸ್ಥಿರಾಸ್ತಿಯ ಕ್ರಯಸಾಧನವು ಕೊಡುವವರ ಹಾಗೂ ಕೊಳ್ಳುವವರ ನಡುವೆ ಮೊದಲು ಒಪ್ಪಂದವಾಗಿ ನಂತರ ಅದು ರಾಜಮಾನ್ಯವಾಗಲು ಆ ಸ್ವಾಸ್ಥೆಯ

ಕಂದಾಯದ ಇಮ್ಮಡಿ ಹಣವನ್ನು ಅರಮನೆಗೆ ಶುಲ್ಕವಾಗಿ ತೆರಬೇಕಾಗಿತ್ತು. ಅಂದರೆ ಈಗಿನಂತೆ ಸಬ್‌ರಿಜಿಸ್ಟ್ರಾರ್ ಕಚೇರಿಯಲ್ಲಿ ಆಸ್ತಿ ರಿಜಿಸ್ಟ್ರಾರ್ ಮಾಡಿಸಿದಂತೆ ಆಗಲೂ ಅರಮನೆ ಒಪ್ಪಿಗೆ ಬೇಕಿತ್ತು. ಇಲ್ಲಿ ಕರಣಿಕ ವೆಂಕಟಪತಯ್ಯ ಹಾಗೂ ಪರಮೇಶ್ವರ ಅಯ್ಯ ಇಬ್ಬರೂ ಇದೇ ಸೋಮಶೇಖರನಾಯಕನ ಆಸ್ಥಾನದಲ್ಲಿ ಮಂತ್ರಿಯಾಗಿದ್ದವರು. ಆದರೂ ಅವರು ಅರಸರ ಪತ್ನಿ ನೀಲಮ್ಮಾಜಿಯ ತಂದೆ ನಿರ್ವಾಣಯ್ಯನವರ ಮುಖಾಂತರ ಈ ಕ್ರಯದಾನ ಕಾರ್ಯಕ್ಕೆ ರಾಜಾಂಕಿತ ದೊರಕಿಸಿಕೊಂಡಿದ್ದಾರೆ. ಸೋಮಶೇಖರನಾಯಕರ ಆಡಳಿತದಲ್ಲಿ ನಿರ್ವಾಣಯ್ಯನವರ ಪಾತ್ರ ಬಹಳವಾಗಿದ್ದುದನ್ನು ಗಮನಿಸಬಹುದು, ನಿರ್ವಾಣಯ್ಯನವರನ್ನು ಹಲವು ದಾಖಲೆಗಳಲ್ಲಿ "ಮಾವ ನಿರ್ವಾಣಯ್ಯನವರು" "ನಿರ್ವಾಣಯ್ಯ ಮಾವನವರು" ಎಂದು ಪ್ರಸ್ತಾಪಿಸಲಾಗಿದೆ.

ಇನ್ನು ಮುಂದಿನ ಎರಡು ಪತ್ರಗಳು ಮೇಲಿನ ಕ್ರಯಸಾಧನ ಪತ್ರದ ಕಾಲದ ಸುಮಾರು ಇಪ್ಪತ್ತೈದು ವರ್ಷಗಳ ನಂತರದ ಕಾಲದವು. ಇವು ಹೇಗೆ ಕಾಲಾಂತರದಲ್ಲಿ ಅರಸರಿಂದ, ಪುರ ಪ್ರಮುಖರಿಂದ, ಸಿರಿವಂತರಿಂದ ನೀಡಲ್ಪಟ್ಟ ಉತ್ತಾರಗಳು, ದಾನಪತ್ರಗಳು, ಜನಸಾಮಾನ್ಯರ ಮನದಿಂದ ಮರೆಯಾಗಿ ದಾನಿಗಳ ಆಶಯ ಗೌಣವಾಗಿ ದೇವಸ್ಥಾನವ ಅಗ್ರಾಹಾರದ ಆಡಳಿತಗಾರರೆ ಉತ್ತಾರವಾದ ಆಸ್ತಿಯನ್ನು ಇತರರಿಗೆ ಪರಭಾರೆ ಮಾಡುತ್ತಾರೆ ಹಾಗೂ ಈ ಸಂಗತಿ ಕ್ರಯದಾನ ಪತ್ರದ ಕರ್ತೃವಿಗೆ ಇಲ್ಲವೆ ಅವನ ಸಂತತಿಯವರ ಗಮನಕ್ಕೆ ಬಂದಾಗ ಅವರು ಹೇಗೆ ಆ ತಪ್ಪನ್ನು ಗುರುತಿಸಿ ಸರಿಪಡಿಸಿಕೊಳ್ಳುತ್ತಾರೆ ಎಂಬುದನ್ನು ತಿಳಿಸುತ್ತದೆ. ಇದರಲ್ಲಿ ಮೊದಲಿನ ಪತ್ರವು ಹಲಸನಾಡು ಸುಬ್ಬರಾಯರು ವೆಂಕಟಾಪುರ-ಅಗ್ರಹಾರದ ವೆಂಕಟರಮಣ ದೇವಸ್ಥಾನದ ಅರ್ಚಕ ತೀರ್ಥಹಳ್ಳಿಯ ಮಂಜರ ಪರಮೇಶ್ವರ ಭಟ್ಟರಿಗೆ ಬರೆದುದು ಆಗಿದೆ. ಹಲಸನಾಡು ಸುಬ್ಬರಾಯರು ಕರಣಿಕ ಪರಮೇಶ್ವರ ಅಯ್ಯನವರ ಸಂತತಿಯವರಾಗಿದ್ದು ಈ ಪತ್ರದ, "ನಮ್ಮ ವೆಂಕಟರಮಣ ದೇವರ ವಿರೂಪಾಪುರದ ಸ್ವಾಸ್ಥೆಯನ್ನು ನೀವು ಪಟ್ಟೆ ಬರೆಸಿಕೊಂಡು ಇದ್ದೀರಿ. ಎಂಬ ವರ್ತಮಾನ ಕೇಳಿದ್ದಾಯಿತು." ಎಂಬ ಸಾಲುಗಳು ಈ ಮಾತನ್ನು ಸ್ಪಷ್ಟಪಡಿಸುವುದಲ್ಲದೆ ಅವರ ನೇರ ನಿಷ್ಠುರ ವ್ಯಕ್ತಿತ್ವವನ್ನು ಬಿಂಬಿಸುತ್ತದೆ. ಮುಂದೆ, "ನಮ್ಮ ಸ್ವಾಸ್ಥೆ ದೇವರು ನಮ್ಮ ವಿನಃ ಯಾರ ಕೈಲಾದರೂ ಬಾಚಿಕೊಂಡರೆ ಅದು ಶಾಶ್ವತವಾಗದು ಎಂಬರಿವು ನೀವು ಬಲ್ಲವರಾಗಿದ್ದ ಮೇಲೆ ನಾವು ಬರೆಯ ಬೇಕೆಂಬುದು ಇಲ್ಲವಷ್ಟೆ" ಎಂದು ಹೇಳಿ ತಮ್ಮದಲ್ಲದ ವಸ್ತುವನ್ನು ಬೇರೆಯವರು ಇನ್ನೊಬ್ಬರಿಗೆ ಮಾರಿದರೆ ಅದು ಖರೀದಿಸಿದವನ ತಪ್ಪಾಗುತ್ತದೆ ಎಂದು ಎಚ್ಚರಿಸಿ ಆ ತಪ್ಪನ್ನು ಸರಿಪಡಿಸಲು ಅಲ್ಲಿಯತನಕದ ಆ ಜಮೀನಿನ ಆಯ-ವ್ಯಯದ ಲೆಕ್ಕ ನೀಡಿ ಹೆಚ್ಚಿನ ಆದಾಯದಿಂದ ದೇವಸ್ಥಾನದ ಜೀರ್ಣೋದ್ಧಾರ ಮಾಡಿಸಿ ಮಂತ್ರಾಕ್ಷತೆ ತಲುಪಿಸುವಂತೆ ಆಜ್ಞಾಪಿಸಿದ್ದಾರೆ. ಕೊನೆಯಲ್ಲಿ ಇನ್ನು ಮುಂದೆ ದೇಗುಲಕ್ಕೆ ತಮ್ಮ ಹಿರಿಯರು ನೀಡಿದ ಸ್ವಾಸ್ಥೆಯ ಫಲವನ್ನು ಅವರು ಅನುಭವಿಸಲು ಬಾಧ್ಯರಲ್ಲ ಎಂದು ಎಚ್ಚರಿಕೆ ನೀಡಿದ್ದಾರೆ.

ಎರಡನೆಯ ಪತ್ರವು ವೆಂಕಟರಮಣ ದೇಗುಲದ ಅರ್ಚಕ. ಮಂಜರ ಪರಮೇಶ್ವರಭಟ್ಟರು ಆ ದೇಗುಲದ ಆಡಳಿತಗಾರ ಕೊಡಗಿ ತಿಮ್ಮಪ್ಪನವರಿಗೆ ಬರೆದ ಪತ್ರವಾಗಿದೆ. ತಾನು ಪಟ್ಟೆ ಬರಸಿಕೊಂಡಿದ್ದ ಪರಮೇಶ್ವರಯ್ಯನವರು ವೆಂಕಟರಮಣ ದೇವರಿಗೆ ಉತ್ತಾರವಾಗಿ ಬಿಟ್ಟ ವಿರೂಪಾಪುರದ ಸ್ವಾಸ್ಥೆಯನ್ನು ಹಿಂತಿರುಗಿಸಿ ಕಾಲಕಾಲಕ್ಕೆ ಅರಮನೆಗೆ ಸಲ್ಲತಕ್ಕ ಅರೆವಾಶಿ ಶಿಸ್ತನ್ನು ಸಲ್ಲಿಸಿ ದೇಗುಲದ ಅರ್ಚಕನಾಗಿ ಮುಂದುವರೆಯುತ್ತೇನೆ ಎಂದು ಬರದು ಕೊಟ್ಟ ಮುಚ್ಚಳಿಕೆಯಾಗಿರುತ್ತದೆ. ಈ ಪತ್ರವನ್ನು ಬರೆದಾತ ಚಿನ್ನ ಭಂಡಾರದ ರಂಗಯ್ಯ.

ನಾನು ಪ್ರಸ್ತುತ ಪಡಿಸಿದ ಮೊದಲಿನೆರಡು ದಾಖಲೆಗಳು ಆ ಕಾಲದಲ್ಲಿ ಅಗ್ರಹಾರಗಳಲ್ಲಿ ಮಹಾಜನಗಳ ಪಾತ್ರವನ್ನು ತಿಳಿಸುತ್ತವೆ. ಈ ಮಹಾಜನಗಳು ಚುನಾಯಿತ ಜನಪ್ರತಿನಿಧಿಗಳಾಗಿದ್ದು ಜನಸಾಮ್ಯಾನರ ಹಾಗೂ ಅರಮನೆಯ ನಡುವಣ ಕೊಂಡಿಯಾಗಿರುತ್ತಾರೆ. ಇವರು ಜನರ ಸುಖ-ದುಃಖಗಳನ್ನು, ಕುಂದು, ಕೊರತೆಗಳನ್ನು ಅರಸನ ಗಮನಕ್ಕೆ ತರುತ್ತಾರೆ, ಎಂಬುದನ್ನು ವಿಷದಪಡಿಸುತ್ತದೆ. 'ಕೆಳದಿಯ ದೊರೆ ಎರಡನೇಯ ಸೋಮಶೇಖರನಾಯಕನ ನಿರೂಪ ಹಾಗೂ ತತ್ಸಂಬಂಧಿ ಎರಡು ಪತ್ರಗಳು' ಎಂಬ ಮೂರನೆಯ ದಾಖಲೆಯು ಈಗಿನ ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ವಡೇರಹೋಬಳಿಯ ದಿ. ನರಸಿಂಹ ಕಾರಂತರ ಮನೆಯಲ್ಲಿ ದೊರತಿದೆ. ಈ ದಾಖಲೆಯಲ್ಲಿ ಕಂಡು ಬಂದ ಸುರೇಶ್ವರ ದೇವಸ್ಥಾನವು ತೀರ್ಥಹಳ್ಳಿಯ ರಾಮೇಶ್ವರ ದೇವಸ್ಥಾನದ ಎಡ ಪಾರ್ಶ್ವದಲ್ಲಿದೆ. ಅಲ್ಲದೆ ರಾಮೇಶ್ವರ ದೇವಸ್ಥಾನದ ಎದುರಿನಲ್ಲಿರುವ ವೆಂಕಭಟ್ಟರ ಬೀದಿಯಲ್ಲಿರುವ ವೆಂಕಟರಮಣ ದೇವಸ್ಥಾನವು ದಾಖಲೆಯಲ್ಲಿ ಕಂಡುಬಂದ ವೆಂಕಟಾಪುರ ಅಗ್ರಹಾರ ಹಾಗೂ ವೆಂಕಟರಮಣ ದೇವಸ್ಥಾನವಾಗಿದೆ ಎಂದು ತೀರ್ಥಹಳ್ಳಿಯ ಹಿರಿಯರಾದ ಸಕ್ಕರೆ ಶ್ಯಾಮಾಚಾರ ಮತ್ತು ಅವರ ಮಗ ವರದಾಚಾರ್ ತಿಳಿಸುತ್ತಾರೆ. ರಾಮೇಶ್ವರ ದೇಗುಲದ ಸುತ್ತ ತುಂಗಾನದಿಯ ತೀರದಲ್ಲಿ ಸದಾಶಿವ ಅಗ್ರಹಾರ ಪರಮೇಶ್ವರಯ್ಯನ ಅಗ್ರಹಾರ ರಾಯಸದ ಅಗ್ರಹಾರ ಮಹಿಷಿ ಅಗ್ರಹಾರ ವಿರುಪಾಕ್ಷ ಅಗ್ರಹಾರ ಮುಂತಾದ ಅಗ್ರಹಾರಗಳು ಇವೆ ಎಂದು ತಿಳಿದು ಬಂದಿದೆ. ಅಲ್ಲದೆ ಚಿನ್ನ ಭಂಡಾರದ ರಂಗಯ್ಯನ ವಂಶಜರಾದ ಶ್ರೀ ಪುರುಷೋತ್ತಮ ರಾಯರ ನಿವಾಸವು ಇಲ್ಲಿಯೇ ಇದೆ.

ಈ ದಾಖಲೆಗಳನ್ನು ಗಮನಿಸಿದಾಗ ತೀರ್ಥಹಳ್ಳಿಯ ಸುತ್ತ ಮುತ್ತ ತುಂಗೆಯ ತಟದಲ್ಲಿ ಮೇಲ್ಕಾಣಿಸಿದ ಅಗ್ರಹಾರಗಳಲ್ಲದೆ ಇನ್ನೂ ಹಲವಾರು ಅಗ್ರಹಾರಗಳಿದ್ದು ಕಾಲ ಕಾಲಕ್ಕೆ ರಾಜಾಶ್ರಯ

ದಿಂದ ಅಲ್ಲಿನ ವೈದಿಕ ಪರಂಪರೆ ಅನೂಚಾನವಾಗಿ ಜ್ಞಾನ ವಿಜ್ಞಾನಗಳ ಅಧ್ಯಯನ ಹಾಗೂ ಅಧ್ಯಾಪನವನ್ನು ನಡೆಸುತ್ತಾ ಬಂದಿತ್ತು ಎಂದು ತಿಳಿಯುತ್ತದೆ. ಇದಕ್ಕೆ ಸಂಬಂಧಿಸಿದ ನಮ್ಮ ಗಮನಕ್ಕೆ ಬಾರದ ದಾಖಲೆಗಳೆಷ್ಟೋ ಇನ್ನೂ ಅಲ್ಲಿನ ಜನರ ಬಳಿಯಲ್ಲಿ ಇದೆ ಎಂದೆನ್ನಿಸುತ್ತದೆ. ಈ ಪರಿಸರದಲ್ಲಿನ ಚಾರಿತ್ರಿಕ ದಾಖಲೆಗಳ ಶೋಧನೆ ಸಂರಕ್ಷಣೆ ಹಾಗೂ ಅಧ್ಯಯನ ಇನ್ನಷ್ಟು ಆದಾಗ ಕೆಳದಿಯ ಅರಸೊತ್ತಿಗೆಯ ಬಗೆಗೆ ಇನ್ನಷ್ಟು ಹೊಸ ಮಾಹಿತಿಗಳು ದೊರೆತು ಕೆಳದಿಯ ಇತಿಹಾಸ ಇನ್ನಷ್ಟು ಸ್ಪಷ್ಟ ಸಂಪುಷ್ಟವಾದೀತು ಎಂದೆನ್ನಿಸುತ್ತದೆ.

**।।ಶುಭಮಸ್ತು ವಿರುಪಾಕ್ಷದ ಅಗ್ರಹಾರದ ಶಾಸನದ ಪ್ರತಿ।।**

**ಮುಂಭಾಗ।।** ನಮತ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೈಲೋಕ್ಯ ನಗರಾಂಭಾ ಮೂಲಸ್ತಂಭಾಯ ಶಂಭವೇ।। ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕವರುಷ ೧೫೬೦ನೆಯ ಚಿತ್ರಭಾನು ಸಂವತ್ಸರದ ಚೈತ್ರ ಬ೩ಯಾ ಸೋಮ ವಾರದಲೂ ಶ್ರೀ ಮದ್ಯಡವ ಮುರಾರಿ ಕೋಟೆ ಕೋಲಾಹಲ ವಿಶುಧ ವೈದಿಕಾದ್ವಯತ ಶಿಧಾಂತ ಪ್ರತ್ರಿಪಾಲಕ ಶಿವಗುರು ಭಕ್ತಪರಾಯಣ ಕೆಳದಿ ವೆಂಕಟಪ್ಪನಾಯಕರ ಪ್ರಪೌಉತ್ರರಾದ ಭದ್ರಪ್ಪನಾಯಕರ ಭದ್ರಪ್ಪನಾಯಕರ ಪುತ್ರರಾದ ವೀರಭದ್ರ ನಾಯಕರು ಮಾಳೂರು ಶಿಮೆ ವಳಗಣ ವಿರುಪಾಕ್ಷದ ದೇವಸ್ತಾನ ಅಗ್ರಹಾರದ ಮಹಾಜನಂಗಳಿಗೆ ಬರಶಿಕೊಟ್ಟ ತಾಂಬ್ರದ ಶಾಸನದ ಕ್ರಮವೆಂತೆಂದರೆ ಮಳೂರ ಶಿಮೆವಳಗಣ ತ್ತುಂಗಭದ್ರಾ ತೀರದ ವಿರುಪಾಕ್ಷದಲ್ಲಿ ಲ್ಲಿಂಗ್ಗಣ ಹೆಗಡೆಯ ಲಿಂಗಪ್ಪ ಶಾನುಭೋವನ ಅಂಣ್ಣಯನ್ನು ಕಟ್ಟಿಶಿದ ಅಗ್ರಹಾರ ದೇವಸ್ಥಾನ ಅಗ್ರಹಾರಕೆ। ಸ್ವಾಸ್ಥೆಯಿಲ್ಲವೆಂದು

**ಹಿಂಭಾಗ :** ತ್ತುಂಗಭದ್ರಾ ತೀರದ ದೂರ್ವಾಸಾಶ್ರಮ ಶಿವಮೊಗೆಯಲೂ ಸಹಿರಂಣ್ಯೋದಕ ಧಾರಾಪೂರ್ವಕವಾಗಿ ಬಿಟ್ಟ ಸ್ವಾಸ್ಥೆವಿವರ ನಂಮ್ಮಕಾಳಂಜಿಯಾದ ಆರಗದ ರಾಜ್ಯಕ್ಕೆ ಸಲುವ। ಮಾಳವರ ಶಿಮೆವಳಗಣ ಯಡೇಹಳ್ಳಿ ಪಾಲವಳಗಣ ಜಂಬವಳ್ಳಿ ಗ್ರಾಮದಲ್ಲಿ ಅರಮನಿಗೆ ತೆತ್ತು ಬರುತ್ತಯಿದ ಕುಳ೨ಕೆ ರೆಖೆ ಗ ೨೦ ಆ ಬಿರಾಡ ಗ ೫ಹ ಕೋಟೆ ಬಿರಾಡ ಗ ।।೦ ಅಂತೂ ಗ ೨೫।। ಯಿ ಗ್ರಾಮದಲ್ಲಿ ಪುರಾಣಿಕ ದೇವಣ ಭಟ್ಟನ ಸ್ವಾಸ್ಥೆ ಕುಳಗ ।। ರ ಶಿದಾಯ ಗ೫ ಜೆಂನಿ ಭಟ್ಟನ ಸ್ವಾಸ್ಥೆ ಕುಳ ಗ।। ರ ಶಿದಾಯ ಗ೫ ಲೋಕಣ್ಣ ಜೊಯಿಸನ ಸ್ವಾಸ್ಥೆ ಕುಳ ಗ।।ರ ಶಿದಾಯ ಗ ೫ಹ ಲಿಂಗಪ ಸೆನಬೋವನ ಸ್ವಾಸ್ಥೆ ಕುಳ ಗ।।೦ ರ ಶಿದಾಯ ಗ೫ ಅಂತು ಕುಳಗ ೨ ರ ಗ೨೦ ಕೆ ನಷ್ಟಕೆ ಬಿಟದು ಗ ೨ಹ ಹೋಗಲಾಗಿ ಶುಧ ಗ ೧ಲ ಉಭಯಂ ಜಂಬವಳಿ ಗ್ರಾಮದಿಂದ ಕುಳ ಳಕೆ ಸಿಸ್ತು ಗ ೪೩।। ಮಾಳೂರ ಪಾಲು ವಳಗಣ ನಾರಣ ಶೂದಿ ರೆಖೆ ಗ೪।। ಹುಟ್ಟವಳ್ಳಿ ಹೆಚಿದು ಗ।।೦ ಉಭಯಂ ಗ೫ ತುಂಡು ಸ್ವಾಸ್ಥೆಯಿಂದಲೂ

೨. ನರಶಿಂ ಭಟರಿಗೆ ಯಜುರ್ವೆದದ ಸಂಮ್ಮಂಥ ಜಂಬವಳ್ಳಿಯಿಂದ ದೇವಣ ಭಟ್ಟರ ಸ್ವಾಸ್ಥೆಯಿಂದ ಗ೨ ನರಶಿಂ ಭಟ್ಟನ ಸ್ವಾಸ್ಥೆಯಿಂದ ಗ ।।೪ ಅಂಣ್ಣಯನ ಗದೆಯಿಂದ ಹ೩ ಅಂತೂ ಗ ೩ ಹ ೨ ಕೆಳಗಣ ಜಂಬವಳಿಯಿಂದ ಹ ೪ ಉಭಯಂ ಗ ೩।।೧ ಹರೀತಿಸ ಗೋತ್ರದ ಆಶ್ವಲಾಯನ ಸೂತ್ರದ ರುಕು ಶಾಖೆಯ ಕುಪುಗಡೆ ಮಾದೊಭಟರ ಮಗ ಮಾಧವ ಭಟರಿಗೆ ರುಗುವೆದ ಹೇಳುವ ಬಗ್ಗೆ ನಡುವಣ ಜಂಬವಳ್ಳಿಯಿಂದ ಗ ೩।।೧ ಆತನ ತಮ್ಮ ಕಾಂತಭಟರಿಗೆ ವಿಠಲದೇವರ ಅಭಿಷೇಕ ಸಂಮ್ಮಂಥ ಗ ೧ಹಳ ಉಭಯಂ ಗ ೫।। ಶ್ರೀವತ್ಸಗೋತ್ರದ ಅಶ್ವಲಾಯನ ಸೂತ್ರದ ರುಕು ಶಾಖೆಯ ಕೊನೇರಿ ಮುನಿಗಳ ಮಗ ಅಂಣ್ಣೆಯ ಭಟ್ಟರಿಗೆ ಅಶ್ವಥ ಪ್ರದಕ್ಷಿಣೆ ಹೂಲು ಪತ್ರ ತಾಹ ಸಂಮ್ಮಂಥ ನಡುವನ ಜಂಬವಳ್ಳಿಯಿಂದ ಗ ೪ ಭಾರದ್ವಾಜ ಗೋತ್ರದ ಆಪಸ್ತಂಭ ಸೂತ್ರದ ಯಜುರ್‌ಶಾಖೆಯ ಹೆದ್ದಸೆ ಗಿರಿಭಟರ ಮಗ ಅನಂತಭಟರಿಗೆ ನಿರ್ಮದ ವಿರುಪಾಕ್ಷ ದೇವರ ಅಭಿಷೇಕದ ಸಂಮ್ಮಂಥ ದೇವತೆ ನಾಯಕನ ಕೋಪದಿಂದ। ವಾರಣೌಶಿ ರಘು ಮಣನ ಸ್ವಾಸ್ಥೆಯಿಂದ ಗ ೩।।೧ ಕಾಶ್ಯಪಗೋತ್ರದ ಬೋಧಾಯನ ಸೂತ್ರದ ಯಜುಃ ಶಾಖೆಯ ಕೊಬಿಡ್ಯೆ

**ಹಿಂಭಾಗ :** ಬೊಂಮಣ ಜೊಯಿಸರ ಮಗ ತಂಮ್ಮಣ ಜೊಯಿಸರಿಗೆ ತಳಗಣ ಜಂಬವಳ್ಳಿಯಿಂದ ಗ ೨ಹ ವಾದೂಳಸ ಗೋತ್ರದ ಆಶ್ವಲಾಯನ ಸೂತ್ರದ ರುಕು ಶಾಖೆಯ ಮತ್ತೂರ ಮಲ್ಲಿಭಟ್ಟರ ಮಗ ತಿರುಮಲಭಟ್ಟರಿಗೆ ಜಪದ ಸಂಮ್ಮಂಥ ನಡುವಣ ಜಂಬವಳ್ಳಿಯಿಂದ ಗ ೩।।೧ ಕಾಶ್ಯಪಗೋತ್ರದ ಆಶ್ವಲಾಯನ ಸೂತ್ರದ ರುಕು ಶಾಖೆಯ ಹೆದಸೆ ಶಂಕರನಾರಾಯಣ ಭಟ್ಟರ ಮಗ ತಂಮಣಭಟರಿಗೆ ಸ್ವಯಂ ವಿರುಪಾಕ್ಷದೇವರ ಅಭಿಷೇಕಕ್ಕೆ ಕೆಳಗಣ ಜಂಬವಳ್ಳಿಯಿಂದ ಗ೨ ಮಾನ ಬಾಗ್ರವ ಗೋತ್ರದ ಆಶ್ವಲಾಯನ ಸೂತ್ರದ ರುಕು ಶಾಖೆಯ ಬಿಳಿಗೆ ಕೊನಪೈಯನ ಮಗ ಕೊನಪೈಯಗೆ ಯಜಮಾನಿಕೆ ಬಗೆ ದೇವತೆ ನಾಯಕನ ಕೊಪದಿಂದ ಗ ೨ಹಳ ಅಂತೂ ಗ ೬೦ಹ೨ ಪಂಚ ಕಾರಕದ ಸಂಮ್ಮಂದ ಗ ೪ಹ೨ ಅಂತೂ ಗ ೬೪ಹಳ ವಂನ್ನು ಸಹಿರಂಣ್ಯೊದಕ ಧಾರಾಪೂರ್ವಕವಾಗಿ ಶಿವಾರ್ಪಿತವಾಗಿ ಕೊಟ್ಟುಯಿಧೆವೆ ।ಉತಾರವಾದ ಗ್ರಾಮಗಳಲು ನೆಟ ವಾಮನ ಮುದ್ರೆಕಲು ವಳಗೆ ಉಳ ನಿಧಿ ನಿಕ್ಷೆಪ ಜಲ ಪಾಷಾಣ ಅಕ್ಷಿಣೆ ಆಗಾಮಿ ಸಿಧ ಸಾ.....

ವಿಶ್ವಾವಸು ಸಂವತ್ಸರದ ಮಾರ್ಗಶಿರ ಶು೩ಲು ಶ್ರೀಮತ್ಕೆಳದಿ ಸೋಮಶೇಖರ ನಾಯಕರು ರಾಮಪ್ಪಗೆ ಬರಶಿ ಕಳುಹಿದ ಕಾರ್ಯ, ಕರಣಿಕರ ವೆಂಕಟಪತಿ ಅಯ್ಯನು ತಿರತಳಿಯಲ್ಲು ದೇವಸ್ತಾನ ಕಟ್ಟಿಶಿ ಪ್ರತಿಷ್ಠೆ ಮಾಡ್ಸಿ ಸುರೇಶ್ವರ ದೇವರ ದೇವತಾ ವೆಚ ಯಿ ದೇವಸ್ತಾನದ ಸಮೀಪದಲು ತಾನ್ನು ಕಟ್ಟಿಶಿದ ವೆಂಕಟಾಪುರದ ಅಗ್ರಹಾರದಲ್ಲು ಯಿ ಅಗ್ರಹಾರದಲು ದೇವಸ್ತಾನವ ಕಟ್ಟಿಶಿ ಪ್ರತಿಷ್ಠೆ





ಮಾಡಿದ ವೆಂಕಟೇಶ್ವರ ದೇವರ ದೇವತಾ ವೆಚಕ್ಕೆ ಸಹಾ ಪ್ರಾಕು ಉತ್ತಾರವ ಕೊಟ್ಟ ಸ್ವಾಸ್ತೆ ಸಾಲದ್ರಿಂದ ಭದ್ರರಾಜಪುರದ ಅಗ್ರಹಾರಕ್ಕೆ ಉತ್ತಾರವಾದ ವಿರುಪಾಪುರ ಗ್ರಾಮದಿಂದ ಅಪ್ಪಾಜಿ ವೆಂಕಟಾದ್ರಿಭಟ್ಟನ ಮಗ ದೇವರು ಭಟ್ಟಗೆ ಉತ್ತಾರವಾದ ಸ್ವಾಸ್ತೆ ವಳಗೆ ಗ ೧೨ನ್ನು ಸ್ವಾಸ್ಥೆಯನ್ನು ಕ್ರಯಕ್ಕೆ ತೆಗೆದುಕೊಂಡು ಪಟ್ಟೆ ಬರೆಸಿಕೊಂಡು ಯಿದೇನೆ ಕಾಣಿಕೆ ಕೊಟೆನ್ನು ಯಿೂ ಸ್ವಾಸ್ತೆಯನ್ನು ಯಿೂ ಅಗ್ರಹಾರ ದೇವಸ್ತಾನಕ್ಕೆ ಸಹಾ ಉತ್ತಾರ ಮಾಡಬೇಕೆಂದು ಪರಮೇಶ್ವರಯನ್ನು ಹೇಳಿಕೊಳ್ಳುತ್ತಾನೆ. ಆ ರೀತಿ ಅಪ್ಪಣೆ ಆಗ ಬೇಕೆಂದು ನಿರ್ವಾಣಯ್ಯ ಮಾವನವರು ಹೇಳಿದ ಸಂಮಂದ ಯಿೂ ಪರಮೇಶ್ವರಯ್ಯನವರ ಕೈಯ್ಯ ಕಾಣಿಕೆ ಗ ೨೪ವರಹಾಂನ್ನು ಅರಮನೆಗೆ ತೆಗೆದುಕೊಂಡು ಯಿೂ ಭದ್ರರಾಜಪುರದ ಅಗ್ರಹಾರಕ್ಕೆ ವಿರುಪಾಪುರದ ಗ್ರಾಮದಿಂದ ಉತ್ತಾರವಾದ ಸ್ವಾಸ್ತೆವಳಿಗೆ ದೇವರು ಭಟ್ಟಗೆ ಉತ್ತಾರವಾಗಿ ಯಿದ ಸ್ವಾಸ್ತೆಯಿಂದ ಗ ೧೨ನ್ನು ಸ್ವಾಸ್ತೆ ಯಂನ್ನು ತೀರ್ಥರಾಜಪುರದಲ್ಲು ವೆಂಕಟಪತಿ ಅಯ್ಯನು ದೇವಸ್ತಾನ ಕಟ್ಟಿಸಿ ಪ್ರತಿಷ್ಠೆ ಮಾಡಿಸಿದ ಸೂರೆಶ್ವರ ದೇವರ ದೇವತಾ ವೆಚ ಯಿೂ ದೇವಸ್ತಾನದ ಸಮೀಪದಲ್ಲು ಪರಮೇಶ್ವರಯ ಕಟ್ಟಿಶಿದ ವೆಂಕಟಾಪುರದ ಅಗ್ರಹಾರ ಯಿೂ ಅಗ್ರಹಾರದಲ್ಲು ದೇವಸ್ತಾನ ಕಟ್ಟಿಸಿ ಪ್ರತಿಷ್ಠೆ ಮಾಡ್ಸಿದ ವೆಂಕಟೇಶ್ವರ ದೇವರ ದೇವತಾ ವೆಚ ಸಹಾ ಶಿವಾರ್ಪಿತವಾಗಿ ಕೊಟ್ಟು ಯಿದೇವೆ ಪಟ್ಟೆ ಪ್ರಮಾಣ ಭೂಮಿಯನ್ನು ಯಿೂತನ ಹವಾಲೆ ಮಾಡ್ಸಿಕೊಟ್ಟು ಯಿೂ ಕಾಗದವ ಸೆನಬವರ ಕಡತಕ್ಕೆ ಬರೆಸಿ ತಿರುಗಾ ಯಿೂತನ ವಶಕ್ಕೆ ಕೊಡುವುದಾಗಿ ನಕಲು ಯಿೂ ಪ್ರಕಾರ ನಕಲು ಸೂರಿಭಟ್ಟರ ಹತ್ತರ ಉಂಟು.

* *

ಶ್ರೀ ಮದ್ಯಜನಾದಿಷ್ಟಕಂರ್ಮ ನಿರುಕ್ತರಾದ ವೇದಮೂರ್ತಿ ಗಳಾದಂಥ ತೀರ್ಥಳಿ ಮಂಜರ ಪರಮೇಶ್ವರ ಭಟ್ಟರಿಗೆ ಹಲಸನಾಡ ಸುಬ್ರಾಯನ್ನು ಮಾಡುವ ನಮಸ್ಕಾರ ಪ್ರಮೊದೂತ ಸಂವತ್ಸರದ ಮಾಘ ಶು೨ ವರೆಗೆ ಕ್ಷೇಮದಲು ಯಿದೇನೆ. ತಂಮಾ ಕ್ಷೇಮ ಕುಶಲಕ್ಕೆ ಬರಲಿ ಕಳುಹಿಸಿ ಮಾಡುವಂತ ಮಾಡಸಬೆಕ್ಕು ತರುವಾಯ ನಂಮ ವೆಂಕಟರಮಣ ದೇವರ ವಿರುಪಾಪುರದ ಸ್ವಾಸ್ತಿಯನ್ನು ನೀಲು ಪಟ್ಟೆ ಬರೆಸಿಕೊಂಡು ಯಿಧಿರಿ ಯಂಬ ವರ್ತಮಾನ ತೆಳಿದಾಯಿತ್ತು ನಂಮ್ಮ ಸ್ವಾಸ್ತೆ ದೇವರದು ನಂಮ್ಮ ವಿನಹಾ ಯಾರ ಕಯಲಾದ್ರು ನಿಲು ಬರಶಿಕೊಂಡರೆ ಅದು ಶಾಶ್ವತವಾಗದು ಯಂಬರಿವದ ನಿಲು ಬಲ್ಲವರಾಗಿಯಿದ್ದ ಮೇಲೆ ನಾಲು ಬರೆಯ ಬೇಕೆಂಬುದು ಯಿಲ್ಲವಷ್ಟೆ. ಯಿೂಗ ಆಸ್ವಾಸ್ಥೆ ಬಗೆಯಲ್ಲು ನಿಂಮಿಂದ ಹೆರಳ ಹಣ ಬರಬೇಕಾಗುತ್ತದೆ ಯಿೂ ಬಗ್ಯೆ ನಿಲು ಆ ಗ್ರಾಮದ ಹುಂಟುಳಿ ಸಂದಾಗಿಂದ ಯಾ ಆದಾಯ ವೆಚದ ಲೆಖ ತೆಗೆದು ಕೊಂಡು ಬಂದು ಲೆಖ ಪಡಿಚಾಮಾಡಿ ಬಾಕಿಯಾದ ಹಣ ಸಂದಾಯ ಮಾಡಿ ಕೊಟ್ಟು ಹೊಗುವದು ಯಿ ಬಗೆ ನಿಲು ಸ್ವಸ್ತೆ...... ಜನರ ಕಯ ಬರೆಶಿಕೊಂಡು ಯಿದೆವೆ ಯಂಬ ಉಮೆದಿಯಿಂದ ಕುನಡತೆಯುಂಟಾದರೆ ಕೆಲಸಕ್ಕೆ ಬರಲರಿಯದು ಯಿ ವಿವರ ಸರಿ ಕಂಡು ಜರೂರ್‍ರು ಆಗಿ ನಿಮ್ಮ ಹತ್ರಯಿರುವ ದಸ್ತ್ರುವೆಜು ಲೆಖ ಪತ್ರ ಮುಂತಾಗಿ ತೆಗೆದುಕೊಂಡು ಬಂದು ಪಡಿಚ್ಯಾ ಮಾಡಿ ಬಾಕಿ ಆದ ಲೃವಜು ಸಂದಾಯ ಮಾಡಿ ಕೊಟ್ಟು ಹೊಗುವುದು ತಿಂಮಪ್ಪಯ ಶೆಶಯಗೆ ಸಹಾ ಪ್ರಾಕು ಬಹಾ ದೇವರ ಮಿಗತೆ ಹಣಕ್ಕೆ ದೇವಸ್ಥಾನ ಕಟ್ಟೆ ಪ್ರತಿಷ್ಠೆ ಮಾಡಿ ಆದಾಯ ವೆಚದ ಪಟ್ಟೆ ತಂದುಕೊಡುವಂತೆ ಕಹಾ ಮಾಡ್ಸಿ ಕಳುಹಿಸಿ ಅದೆ ಯಿೂ ಬಗ್ಯೆ ನಿಲು ಮತ್ತು ಮಹಾಜನಂಗಳು ಸಹಾ ಯಿದ್ದು ವಳ್ಳೆ ಶುಭ ಮುಹೂರ್ತದಲ್ಲಿ ದೇವರ ಪ್ರತಿಷ್ಠೆ ಮಾಡ್ಸಿ ಕೂಡಲೆ ಆದಾಯ ವೆಚದ ಪಟ್ಟೆ ಪ್ರಸಾದ ಮಂತ್ರಾಕ್ಷತೆ ಮುಂತಾದವನ್ನು ತೆಗೆದುಕೊಂಡು ಆದ್ಯಾಂತರು ಬರುವಂತೆ ಮಾಡಸಬೆಕು ಸದರಹು ನಿಮ್ಮಿಂದ ಬರತಕ್ಕ ಹಣ ಪಡಿಚ್ಯಾ ಮಾಡ್ಸಿ ಹೊಗದೆ ಇದ್ದರೆ ಕೊಡಲೆ ಇದರ ಅನುಭವ ತಮಗೆ ಮನವರಿಕೆ ಆದಿತ್ತು ಯಿನ್ನು ಮೇಲೆ ಆ

ಸ್ವಾಸ್ಥೆ ಪಲ ವಂದೆ ಕಾಸು ನಿಲು ತೆಗೆದುಕೊಳಕ್ಕೆ ಅಸರಿಲ್ಲಾ ಯಿೂ ಯಿೂ ವಿವರ ಮನವರಿಕೆಯಾಗಬೆಕ್ಕು-ಇಂತಿ ನಮಸ್ಕಾರ - ನಕಲು.

ಶ್ರಿಮುಕ ಸಂವತ್ಸರ ಮಾರ್ಗಶಿರ ಶುೞಲು ಶ್ರೀಮತು ಕಲಿಕೊಡಗಿ ತಿಂಮ್ಮಪ್ಪಯ್ಯನವರಿಗೆ ತೀರ್ಥರಾಜಪುರದ ಮಂಜರ ಪರಮೇಶ್ವರ ಭಟ್ಟನು ಬರಶಿಬಿಟ್ಟ ಕಾಗದಕ್ರಮವೆಂತೆಂದರೆ ಪ್ರಾಕು ವೆಂಕಪ್ಪಯ್ಯನವರ ಮಗ ಸುಬಯನು ವೈಂಕಟರಮಣದೇವರ ಸ್ವಾಸ್ತೆ ನಿರೂಪ ಸಹಾ ಆದ್ದನು ತಮ್ಮ ಹಿರಿಯವರ ಹತ್ರ ಯಿದ್ದದು ತಿಳಿಯದೆ ಯಿದ್ದದ್ದರಿಂದ ಆತನು ತಮ್ಮ ಹೆಸರಲ್ಲು ಕ್ರಯದಾನ ಪಟ್ಟೆ ಬರಶಿ ನಮಗೆ ಕೊಟ್ಟದ್ರಿಂದ ಯಿೂವರೆಗೆ ನಾನ್ನು ಅನುಭವಿಶಿ ಕೊಂಡು ಬರುತ್ತಿದ್ದ ಯಿೂ ಸಂವತ್ಸರದ ಕಾರ್ತಿಕ ಶು೭ಯು ಆದಿತ್ಯ ವಾರದಲ್ಲು ಕರಣಿಕ ಪರಮೇಶ್ವರಯ್ಯನವರು ಕಟ್ಟಿಶಿದ ವೆಂಕಟಾಪುರ ಅಗ್ರಹಾರದಲ್ಲು ದೇವಸ್ಥಾನ ಕಟ್ಟಿಸಿ ಶ್ರೀ ವೆಂಕಟರಮಣದೇವರ ಪ್ರತಿಷ್ಟೆ ಮಾಡ್ಸಿದಲ್ಲಿ ಆ ದೇವಸ್ತಾನವು ಜೇರ್ಣವಾದ್ರಿಂದ ಪುನಹಾ ನೀಉ ದೇವಸ್ತಾನ ಕಟ್ಟಿಸಿ ಪ್ರತಿಷ್ಟೆ ಮಾಡಿಸಿ ಮಹಾಜನಂಗಳ ಮುಂದಿಟ್ಟು ಕಹಾ ಮಾಡಿದ ಪ್ರಕಾರ ಯಿೂ ದೇವರ ಪೂಜೆಯನ್ನು ನೀಉ ನಮಗೆ ಮಾಡ್ಸಿಕೊಟ್ಟದ್ರಿಂದ ಯಿೂ ನಿರೂಪ ಪ್ರಕಾರ ವಿರೂಪಾಪುರದ ಸ್ವಾಸ್ಥೆ ಗ೧೨ ಹಂನೆರಡು ವರಹಾಂನ್ನ ಗ್ರಾಮವು ಅರಮನೆಗೆ ಅರವಾಶಿ ಹೊಗಲಾಗಿ ಮಿಗತೆ ಪಲವಂನ್ನು ತೆಗೆದುಕೊಂಡು ಯಿೂ ದೇವರ ಪೂಜೆಯನ್ನು ಮಾಡ್ಸಿಕೊಂಡು ಬಂದೆನೆಂದು ಬರೆಶಿಕೊಟ್ಟ ಕಾಗದ ನಮಗೆ ನಿಂಮ್ಮ ಮಗ ಸುಬ್ಬಯನು ಬರೆಶಿಕೊಟ್ಟ ಪಟ್ಟೆಯಂನ್ನು ನಿಮಗೆ ಕೊಟ್ಟು ಯಿ ಪ್ರಕಾರ ತಂಮ ಸಾದನವನ್ನು ಬರಶಿಕೊಂಡು ಅನುಭವಿಸಿಕೊಳ್ಳುತ್ತಾ ಯಿಧೆವೆ ಪರಮೇಶ್ವರಭಟ್ಟನ ೩ನಾಗರ ಬರಹದ ವಪ್ಪಿತಹಾಕಿದ್ದಾನೆ - ಯಿೂ ಕಾಗದ ಬರದಾತ ಚಿಂನಭಂಢಾರದ ರಂಗ್ಯಯ.

(ಈ ಪ್ರಬಂಧ ಸಿದ್ಧಪಡಿಸಲು ನೆರವಾದ ಕೆಳದಿಯ ವೆಂಕಟೇಶ ಜೋಯಿಸ್ ಹಾಗೂ ಪೂರಕ ಮಾಹಿತಿ ನೀಡಿದ ತೀರ್ಥಹಳ್ಳಿಯ ನಿವೃತ್ತ ಪ್ರಾಂಶುಪಾಲ ಸಕ್ಕರೆ ವರದಚಾರರನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.)





## ಕ.ಇ. ಅಕಾದೆಮಿಯ ೧೬ನೇ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೨೦೦೨)

*ತಾಳೆಗರಿ ಮತ್ತು ಕಾಗದ ಪತ್ರಗಳಲ್ಲಿ ಬಳಸಿರುವ ಸರ್ವಮಾನ್ಯ ಎತ್ತುವಳಿ, ಕಂದಾಚಾರ, ದಿಂಡೆತನ, ಪ್ರಾಕು, ಗದ್ಯಾಣ, ಮುಪ್ಪಾಗ, ಅಡ್ಡ, ಬೇಳೆ, ರಾಯಸ, ಹಾಡ್ಯ ಇತ್ಯಾದಿ ಪದಗಳು ಅಂದಿನ ಕನ್ನಡದ ಶಬ್ದಸಿರಿಯನ್ನು ಪ್ರಕಾಶಿಸುತ್ತವೆ. ಹಿಂದಿನ ದಾಖಲೆಗಳಿಗೆ ಹೋಲಿಸಿದಲ್ಲಿ ತೀರ ಇತ್ತೀಚಿನ ದಾಖಲೆಗಳಿಗೆ ಭಾಷೆಯ ಘನತೆ - ಗಾಂಭೀರ್ಯಗಳಿಲ್ಲ. ಪದಲಾಲಿತ್ಯವಿಲ್ಲ ಮತ್ತು ವಿಷಯ ನಿರೂಪಣೆಯಲ್ಲಿ ಸರಿಯಾದ ಕ್ರಮವಿಲ್ಲ.*

* * *

*ಕಡತ ಕಾಗದ ಪತ್ರಗಳು ಮತ್ತು ತಾಳೆಗರಿಗಳು ಶಿಲಾ ಮತ್ತು ತಾಮ್ರಶಾಸನಗಳಂತೆ ಬಾಳಿಕೆ ಬರುವ ವಸ್ತುಗಳಲ್ಲ. ಆದ್ದರಿಂದ ಅವುಗಳಿಗೆ ಹೆಚ್ಚಿನ ರಕ್ಷಣೆ ನೀಡುವುದು ಅಗತ್ಯ.*

*ಡಾ|| ಎ. ಕೆ. ಶಾಸ್ತ್ರಿ*
ಸಮ್ಮೇಳನಾಧ್ಯಕ್ಷರು

ಡಾ. ತಮಿಳ್ ಸೆಲ್ವಿ*

# ಮೆಕೆಂಜಿ ಸಂಗ್ರಹಿತ ದೇವರಾಯನ ಅಪ್ರಕಟಿತ ತಮಿಳು ಕೈಫಿಯತ್ತು

ವಿಜಯನಗರ ಕಾಲದಲ್ಲಿ ತಮಿಳುನಾಡು ಹಾಗು ಕರ್ನಾಟಕದ ನಡುವಿನ ಚಾರಿತ್ರಿಕ ಸಂಬಂಧದ ವಿಷಯ ಮೆಕೆಂಜಿ ಸಂಗ್ರಹಿತ ದೇವರಾಯನ ಈ ಅಪ್ರಕಟಿತ ಕೈಫಿಯತ್ತಿನಲ್ಲಿ ಕಂಡುಬರುತ್ತದೆ. ಈ ರಾಯನ ವಂಶಿಕ ರಾಯದೇವನೆಂಬವನ ರಾಜಸ್ತ್ರೀ ಬ್ರಾಹ್ಮಣರಿಗೆ ಕೊಟ್ಟ ದಾನವೊಂದು ಮೋಸದಿಂದ ಹಡೆದದ್ದು. ಅವರು ಸ್ಥಳೀಕರಿಗೆ ಹಿಂಸೆ ಕೊಡಲಾರಂಭಿಸಿದರು. ಆಗ ರಾಜನ ಬಳಿ ಸ್ಥಳೀಯರು ದೂರು ಕೊಡಲಾಗಿ 'ಮಲ್ಲಗಸೆಟ್ಟಿ' ಎಂಬ ವೀರಪಡೆ ಬಂದು ಸಮಸ್ಯೆ ಪರಿಹಾರವಾಯಿತು. ಮಲ್ಲಗಸೆಟ್ಟಿ ಪೈಕಿಯ ದುಂದುಗಸೆಟ್ಟಿ ಗರ್ವಿಷ್ಠನಾದರೂ ವೀರಮಲ್ಲನಾಗಿ, ರಾಜನ ವಿಶ್ವಾಸ ಗಳಿಸಿ ದಾನ ಪಡೆದು, ದೇಗುಲ ಕಟ್ಟಿಸಿದ. ಇದರ ಜೊತೆಗೆ ಜನಪದ ಆಚರಣೆ ಯೊಂದನ್ನು ಮೇಳೈಸಿದ್ದು ಚಾರಿತ್ರಿಕ ಕುತೂಹಲಕ್ಕೆ ಕಾರಣವಾಗಿದೆ.

ಮದ್ರಾಸಿನ ಓರಿಯಂಟಲ್ ರಿಸರ್ಚ್ ಲೈಬ್ರರಿಯಲ್ಲಿ ಯಾವುದಾದರೂ ಕನ್ನಡ ಹಸ್ತಪ್ರತಿಗಳು ಸಿಗಬಹುದೇನೋ ಎಂದು ಪರಿಶೀಲಿಸಲು ಹೋದಾಗ ಆಕಸ್ಮಿಕವಾಗಿ ವಿಜಯನಗರ ಕಾಲಕ್ಕೆ ಸಂಬಂಧಿಸಿದ ಒಂದು ತಮಿಳು ಕೈಫಿಯತ್ತು (ಸಂ: ಡಿ. ೩೪೧೪)ನನ್ನ ಗಮನ ಸೆಳೆಯಿತು. ಇದು ಮೆಕೆಂಜಿ ಸಂಗ್ರಹಿಸಿರುವ ಕೈಫಿಯತ್ತು. "ಅನ್ನಮ ದೇವರಾಯರ ಕೈಫಿಯತ್ತು" ಎಂಬುದು ಇದರ ಹೆಸರಾದರೂ ಆರಂಭದ ಸಾಲಿನಲ್ಲಿ ಬಿಟ್ಟರೆ ಉಳಿದಂತೆ ಈ ಕೈಫಿಯತ್ತು ಆ ಅರಸನನ್ನು ಹೆಸರಿಸುವುದು "ರಾಯದೇವ"ನೆಂದು ಮಾತ್ರ.

ಭಾರತೀಯ ಇತಿಹಾಸ, ಸಂಸ್ಕೃತಿಗೆ ಸಂಬಂಧಿಸಿದಂತೆ ಕರ್ನಲ್ ಮೆಕೆಂಜಿಯ ಸೇವೆ ಚಿರಸ್ಮರಣೀಯವಾದುದು. ಆತ ದಕ್ಷಿಣ ಭಾರತದಾದ್ಯಂತ ಸಂಚರಿಸಿ, ಇಲ್ಲಿನ ಇತಿಹಾಸ, ಸಂಸ್ಕೃತಿ, ಜಾನಪದಕ್ಕೆ ಸಂಬಂಧಿಸಿದಂತೆ ಹಲವಾರು ಮಾಹಿತಿಗಳನ್ನು ಕಲೆ ಹಾಕಿದ್ದಾನೆ. ಇವುಗಳಲ್ಲಿ ಕೆಲವು ಅಪರೂಪದ ಮಾಹಿತಿಗಳನ್ನು ಒಳಗೊಂಡಿವೆ. ದಕ್ಷಿಣ ಭಾರತದಲ್ಲಿ ಹಸ್ತಪ್ರತಿಗಳನ್ನು ಸಂಗ್ರಹಿಸಿದ ಪ್ರಥಮ ಹಾಗೂ ಪ್ರಮುಖ ವ್ಯಕ್ತಿ ಕರ್ನಲ್ ಮೆಕೆಂಜಿ. ಭಾರತದ ಬೇರೆ ಬೇರೆಡೆಗಳಲ್ಲಿ ಬೇರೆ ಬೇರೆ ರೀತಿಯ ಹುದ್ದೆಗಳನ್ನು ನಿರ್ವಹಿಸಿದ ಈತನ ಅಭಿರುಚಿ ವಿಶಿಷ್ಟವಾದುದು. ಪ್ರಾಚೀನ ಗ್ರಂಥ, ಪ್ರಾಚೀನ ವಸ್ತುಗಳು ಹಾಗೂ ಪ್ರಾಚೀನ ಇತಿಹಾಸವನ್ನು ಸಂಗ್ರಹಿಸುವುದು ಈತನ ಮೆಚ್ಚಿನ ಹವ್ಯಾಸವಾಗಿತ್ತು. ೧೪ ಭಾಷೆ, ೧೭ ಲಿಪಿಗಳಲ್ಲಿ ಬರೆಯಲ್ಪಟ್ಟ ಹಲವಾರು ವಿಷಯಗಳ ಗ್ರಂಥ ಮತ್ತು ಶಾಸನ, ನಾಣ್ಯ, ಭೂಪಟಗಳನ್ನು ಈತ ಸಂಗ್ರಹಿಸಿದ್ದ. ಈತನ ಸಂಗ್ರಹ ಮದರಾಸಿನ ಬಂದರಿನಿಂದ ಇಂಗ್ಲೆಂಡಿಗೆ ೧೮೨೩, ೧೮೨೫, ಮತ್ತು ಇನ್ನೊಮ್ಮೆ ಹೀಗೆ ಒಟ್ಟು ಮೂರು ಸಲ ಹೋಗಿ ಸೇರಿತು. ಅಳಿದುಳಿದ ಗ್ರಂಥಗಳೇ ಸುಮಾರು ೩೦೦೦ದಷ್ಟಿತ್ತು! ಅವು ೧೮೨೮ರಲ್ಲಿ ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನ ಲೈಬ್ರರಿಯನ್ನು ಸೇರಿದವು. ಕೆಲವು ವರ್ಷಗಳ ಹಿಂದೆ ಅಲ್ಲಿದ್ದ ವಿವಿಧ ಭಾಷೆಯ ಹಸ್ತಪ್ರತಿಗಳನ್ನು ಸಂಬಂಧಿಸಿದ ರಾಜ್ಯಗಳ ವಿಶ್ವವಿದ್ಯಾಲಯ ಹಾಗೂ ಪ್ರಮುಖ ಗ್ರಂಥಾಲಯಗಳಿಗೆ ಹಂಚಿಕೊಡಲಾಯಿತು. ಹಾಗೆ ಮೆಕೆಂಜಿ ಸಂಗ್ರಹ ಮಾಡಿದ ಕೆಲವು ಕನ್ನಡದ ಹಸ್ತಪ್ರತಿಗಳು ಮೈಸೂರು, ಹಾಗೂ ಧಾರವಾಡದ ವಿಶ್ವವಿದ್ಯಾಲಯಗಳಲ್ಲಿ ಹೋಗಿ ಸೇರಿದವು. ಅವುಗಳು ಡಾ. ಎಂ.ಎಂ. ಕಲಬುರ್ಗಿ ಅವರು ಸಂಪಾದಿಸಿರುವ 'ಕನ್ನಡ ಕೈಫಿಯತ್ತುಗಳು' ಎಂಬ ಕೃತಿಯಲ್ಲಿ ಸಂಗ್ರಹವಾಗಿವೆ.

'ಕೈಫಿಯತ್' ಎಂಬ ಪದದ ಅರ್ಥ : 'ಸ್ಥಳೀಯ ಐತಿಹಾಸಿಕ ವಿವರಗಳನ್ನೊಳಗೊಂಡ ವರದಿ'. ಮೆಕೆಂಜಿ ಭಾರತದಾದ್ಯಂತ

* ಕನ್ನಡ ಉಪನ್ಯಾಸಕರು, ಮದ್ರಾಸು ವಿಶ್ವವಿದ್ಯಾಲಯ, ಮರೀನ, ಚೆನ್ನೈ - ೬೦೦ ೦೦೫.

ಸಂಚರಿಸಿ ಸ್ಥಳೀಯ ಅಧಿಕಾರಿಗಳು ಮತ್ತು ವಿದ್ವಾಂಸರಿಂದ ಸಂಗ್ರಹಿಸಿದ ಮಾಹಿತಿಗಳನ್ನು ಕೈಫಿಯತ್ತುಗಳಲ್ಲಿ ಸಂಗ್ರಹಿಸಿದ್ದಾನೆ.

ಮದರಾಸಿನ ಓರಿಯಂಟಲ್ ರಿಸರ್ಚ್ ಮ್ಯಾನುಸ್ಕ್ರಿಪ್ಟ್ ಲೈಬ್ರರಿಯಲ್ಲಿರುವ, ಪ್ರಸ್ತುತ ನಾನು ಪರಿಶೀಲಿಸುತ್ತಿರುವ 'ಅನ್ನಮ ದೇವರಾಯರ್ ಕೈಫೀದು' ಎಂಬ ತಮಿಳಿನ ಈ ಅಪ್ರಕಟಿತ ಕೈಫಿಯತ್ತಿನಲ್ಲಿ ಒಟ್ಟು ೧೯ ಪುಟಗಳಿವೆ. ಇದನ್ನು ಯಾವಾಗ ದಾಖಲು ಮಾಡಿದ್ದು ಎಂಬುದನ್ನಾಗಲೀ, ಯಾರು ಹೇಳಿದರೆಂಬುದನ್ನಾಗಲೀ ಮೆಕೆಂಜಿ ಇದರಲ್ಲಿ ದಾಖಲಿಸಿಲ್ಲ.

ಈ ಕೈಫಿಯತ್ತಿನಲ್ಲಿ 'ಅನ್ನಮ'ದೇವರಾಯರ ಶೀರ್ಷಿಕೆಯನ್ನುಳಿದು ಬೇರೆ ಯಾವೆಡೆಯಲ್ಲೂ 'ಅನ್ನಮ' ಎಂಬ ಪದವನ್ನು ಉಪಯೋಗಿಸಿಲ್ಲ. ಅನ್ನಮ ಎಂಬ ಪದವನ್ನು ತಮಿಳು ಭಾಷೆಯಲ್ಲಿ ಬಳಸುವುದೂ ಇಲ್ಲ. ಬಹುಶಃ ಇದು ವಿಜಯನಗರದ ಅರಸರು ಬಳಸುತ್ತಿದ್ದ ತೆಲುಗಿನ ಪ್ರಭಾವದಿಂದ ಸ್ಥಳೀಯರು ಅರಸನ ಹೆಸರಿನೊಂದಿಗೆ ಗೌರವ ಸೂಚಕ ಸಂಬೋಧನಾ ರೂಪವಾಗಿ ಬಳಸಿರಬಹುದು. ಅನ್ನಮ, ಅನ್ನಮಾಚಾರ್ಯ ಅನ್ನಮನಾಯಕ... ಇತ್ಯಾದಿ ಹೆಸರುಗಳು ತೆಲುಗಿನಲ್ಲಿರುವುದನ್ನು ಗಮನಿಸಬಹುದು.

ವಿಜಯನಗರ ಅರಸರ ಕಾಲದಲ್ಲಿ ತಮಿಳುನಾಡು ಹಾಗೂ ಕರ್ನಾಟಕದ ನಡುವೆ ಇದ್ದ ಕೆಲವು ಐತಿಹಾಸಿಕ ಮಹತ್ವದ ಸಂಬಂಧಗಳ ಬಗ್ಗೆಯೂ ಇದು ತಿಳಿಸುತ್ತದೆ. ಆ ಕಾಲದಲ್ಲಿ ಕನ್ನಡಿಗರು ತಮಿಳುನಾಡಿನ ಕಂಚಿಗೆ ಹೋಗಿ ಅಲ್ಲಿಯೇ ನೆಲೆ ನಿಂತರೆಂಬ ಸಂಗತಿಯನ್ನೂ ಇದು ದಾಖಲಿಸುವುದು ಗಮನಾರ್ಹ.

ವಿಜಯನಗರ ಕಾಲಕ್ಕೆ ಸಂಬಂಧಿಸಿದಂತೆ ಇದುವರೆಗೆ ಎಲ್ಲೂ ದಾಖಲಾಗದ, ನಮಗೆ ತಿಳಿಯದ ಕೆಲವು ಸಂಗತಿಗಳು ಇದರಲ್ಲಿದ್ದು ಗಮನ ಸೆಳೆಯುತ್ತವೆ.

'ಅನ್ನಮ ದೇವರಾಯ'ನ ವಂಶಕ್ಕೆ ಸೇರಿದ ರಾಯದೇವನೆಂಬುವವನ ರಾಜಸ್ತ್ರೀಯಾದ ಕಲ್ಯಾಣಮ್ಮ ಎನ್ನುವವಳು ಕಾಂಚೀಪುರದ ಮಾರ್ಗವಾಗಿ ಸೇತುಯಾತ್ರೆಗೆ ಹೋಗುತ್ತಾಳೆ. ಆಗ ಕಾಂಚಿಯಿಂದ ಕೆಲವು ಬ್ರಾಹ್ಮಣರೂ ಅವಳ ಜೊತೆಗೆ ಹೋಗುತ್ತಾರೆ. ಅಲ್ಲಿ ಸೇತುಸ್ನಾನ ಮುಗಿದ ನಂತರ ಆ ರಾಣಿ ದಾನಧರ್ಮಗಳನ್ನು ನೀಡುತ್ತಾಳೆ. ಆ ಸಂದರ್ಭಕ್ಕಾಗಿಯೇ ಕಾಯುತ್ತಿದ್ದ ಕಾಂಚಿಯಿಂದ ಬಂದ ಬ್ರಾಹ್ಮಣರು, "ಕಾಂಚಿಯ ಸಮೀಪ ಇರುವ 'ವಲ್ಲಂ' ಎನ್ನುವ ಗ್ರಾಮವನ್ನು ಅಗ್ರಹಾರವಾಗಿ ಪರಿವರ್ತಿಸಿ ತಮಗೆ ನೀಡಬೇಕೆಂದೂ, ಅದು ಸ್ವಲ್ಪಮಟ್ಟಿಗೆ ಗ್ರಾಮವಾಗಿದೆ" ಯೆಂದೂ ಕೇಳುತ್ತಾರೆ. ಅದಕ್ಕೆ ಆಕೆ, "ಆ ಗ್ರಾಮ ಈಗಾಗಲೇ ಅಗ್ರಹಾರವಾಗಿದ್ದರೆ ಅಥವಾ ದೇವಸ್ಥಾನಕ್ಕೆ ಸೇರಿದ ಭೂಮಿಯಾಗಿದ್ದರೆ ಅದನ್ನು ದಾನವಾಗಿ ನೀಡಲಾಗದು. ಒಂದು ವೇಳೆ ನೀಡಿದರೂ ಆ ದಾನ ಊರ್ಜಿತವಾಗದು" ಎಂದು ಹೇಳಿದ್ದಕ್ಕೆ, ಆ ಬ್ರಾಹ್ಮಣರು "ಅದು ದೇವಸ್ಥಾನದ ಭೂಮಿಯೂ ಅಲ್ಲ, ಅಗ್ರಹಾರವೂ ಅಲ್ಲ" ಎಂದು ಸುಳ್ಳು ಹೇಳಿ "ವಲ್ಲಂ" ಗ್ರಾಮವನ್ನು ದಾನವಾಗಿ ಪಡೆದುಕೊಳ್ಳುತ್ತಾರೆ. ಆಕೆ ಧನುಷ್ಕೋಟಿಯಿಂದಲೇ "ವಲ್ಲಂ" ಗ್ರಾಮವನ್ನು ದಾನವಾಗಿ ನೀಡಿ ಅಲ್ಲಿಂದ ವಿಜಯನಗರಕ್ಕೆ ಮರಳುತ್ತಾಳೆ. "ವಲ್ಲಂ" ಗ್ರಾಮವು ಕಾಂಚೀಪುರದಿಂದ ಪಶ್ಚಿಮಕ್ಕೆ ೪೫ ಕಿ.ಮೀ. ದೂರದಲ್ಲಿದೆ.

ವಾಸ್ತವವಾಗಿ ಆ ಗ್ರಾಮ ಈಗಾಗಲೇ ದೇವಸ್ಥಾನಕ್ಕೆ ಸೇರಿದ ಭೂಮಿಯಾಗಿದ್ದು ಅದನ್ನು ಅವರು ಸುಳ್ಳು ಹೇಳಿ ಪಡೆದುಕೊಂಡುದರಿಂದ ತೀರ್ವೆ ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ಗ್ರಾಮಸ್ಥರಿಗೂ ಈ ಬ್ರಾಹ್ಮಣರಿಗೂ ನಡುವೆ ಸಂಘರ್ಷವೇರ್ಪಡುತ್ತದೆ. ಆಗ ಊರಿನ ಸ್ಥಾನಿಕರು, ಗುರುಗಳು, ಮೇಳವಾದ್ಯದವರು, ವೇಶ್ಯೆ..... ಮುಂತಾದ ಜನರು ಕೂಡಿಕೊಂಡು ವಿಜಯನಗರಕ್ಕೆ ಹೋಗಿ ರಾಯದೇವನ ಹತ್ತಿರ ಮೊರೆಯಿಡುತ್ತಾರೆ. ರಾಜ ತನ್ನ ಪಡೆಗೆ ಸೇರಿದ "ಮಲ್ಲಗಸೆಟ್ಟಿ"ಗಳಿಗೆ, "ಆ ಬ್ರಾಹ್ಮಣರನ್ನು ದಂಡಿಸಿ ಗ್ರಾಮವು ದೇವಸ್ಥಾನಕ್ಕೆ ನಡೆದುಕೊಳ್ಳುವಂತೆ ನೆಲೆ ನಿಲ್ಲಿಸಬೇಕೆಂದು" ಆಜ್ಞಾಪಿಸಿ ಕಳಿಸುತ್ತಾನೆ.

ದಾನ ನೀಡುವ ಸಂದರ್ಭದಲ್ಲಿ ದಾನದ ಭೂಮಿಯ ಬಗ್ಗೆ ರಾಣಿ ವಿಚಾರಿಸಿದ ನಂತರವೇ ದಾನ ನೀಡುತ್ತಾಳೆ. ಆದರೆ ಬ್ರಾಹ್ಮಣರು ರಾಜ ಮನೆತನದ ಸ್ತ್ರೀಯರನ್ನೂ ಮೋಸಗೊಳಿಸುತ್ತಿದ್ದರೆಂಬುದನ್ನು ಇಲ್ಲಿ ಗಮನಿಸಬಹುದು. ಇದಕ್ಕೆ ಕಾರಣ ಬಹುದೂರದಲ್ಲಿದ್ದ ವಿಜಯನಗರಕ್ಕೆ ಹೋಗಿ ಯಾರೂ ಅರಸನಿಗೆ ದೂರು ಸಲ್ಲಿಸಲಾರರು ಅಥವಾ ಅರಸ ಇಲ್ಲಿ ಬಂದು ಪರಿಶೀಲಿಸಲು ಸಾಧ್ಯವಾಗದು ಎಂಬ ಭಂಡ ಧೈರ್ಯವೇ ಇದಕ್ಕೆ ಕಾರಣವಾಗಿರಬೇಕು.

ಅನ್ಯಾಯಕ್ಕೊಳಗಾದ ಜನ ಅದನ್ನು ಪ್ರತಿಭಟಿಸಿ ನಿಲ್ಲುತ್ತಾರೆ. ಮತ್ತು ತಮಗೆ ದೊರಕಬೇಕಾದ ಹಕ್ಕುಬಾಧ್ಯತೆಗಳಿಗಾಗಿ ಹೋರಾಡುತ್ತಾರೆ. ಅದಕ್ಕಾಗಿ ಅವರು ಎಂತಹ ಶ್ರಮ ವಹಿಸುವುದಕ್ಕೂ ಸಿದ್ಧರಾಗಿದ್ದರು ಎಂಬುದನ್ನು ನಾವಿಲ್ಲಿ ಕಾಣಬಹುದು. ಸ್ಥಾನಿಕರು, ಗುರುಗಳು, ಮೇಳವಾದ್ಯದವರು, ದಾಸಿಯರು....ಇವರೇ ರಾಜನ ಬಳಿ ದೂರು ಸಲ್ಲಿಸಲು ಹೋದ ಜನರು. ಏಕೆಂದರೆ ದೇವಸ್ಥಾನದ ಕೆಲಸ ಕಾರ್ಯಗಳನ್ನು ನೋಡಿಕೊಳ್ಳುತ್ತಿದ್ದವರು ಇವರೇ. ಆ ಕಾರಣದಿಂದ ದೇವಸ್ಥಾನದ ಆದಾಯವನ್ನು ಅನುಭವಿಸುತ್ತಿದ್ದವರೂ ಇವರೇ. ಬ್ರಾಹ್ಮಣರು ರಾಣಿಯ ಹತ್ತಿರ ಸುಳ್ಳು ಹೇಳಿ ಅದರ ಆದಾಯವನ್ನು ತಾವು ಕಸಿದುಕೊಂಡಾಗ ಇವರಿಗೆ ಸಹಜವಾಗಿಯೇ ಸಿಟ್ಟು ಬಂದಿದೆ. ದೇವಾಲಯದ ಕೆಲಸಕಾರ್ಯಗಳು ಸುಗಮವಾಗಿ ಸಾಗಲು ಇದರಿಂದ ಅಡಚಣೆ ಉಂಟಾದುದಷ್ಟೇ ಅಲ್ಲದೆ ಇವರ ಜೀವನೋಪಾಯದ ಮಾರ್ಗವೂ ಇದರಿಂದ ಬಾಧಿಸಲ್ಪಟ್ಟಿರಬೇಕು. ಆದ ಕಾರಣದಿಂದಲೇ ಇವರೆಲ್ಲರೂ ಸೇರಿಕೊಂಡು ವಿಜಯನಗರಕ್ಕೇ ಹೋಗಿ ಅರಸನನ್ನೇ ಕಾಣುವ ತೀರ್ಮಾನ ತೆಗೆದುಕೊಂಡಿದ್ದಾರೆ.

"ಮಲ್ಲಗಸೆಟ್ಟಿ" ಎಂಬ ಪದ ಇಲ್ಲಿ ವ್ಯಕ್ತಿ ನಾಮವಾಗಿ ಬಳಕೆಯಾಗಿಲ್ಲ. ಅದು ವೀರರ ಪಡೆಯನ್ನೋ, ಅಥವಾ ಅರಸನ

ಆಜ್ಞೆಯನ್ನು ನೆರವೇರಿಸಲು ಇದ್ದ ಒಂದು ಸೈನಿಕ ಪಡೆಯನ್ನೋ ಸೂಚಿಸುವ ಶಬ್ದವಾಗಿಯೇ ಇಲ್ಲಿ ಬಳಕೆಯಾಗಿದೆ.

ಅರಸನ ಆಜ್ಞೆಯನ್ನು ನೆರವೇರಿಸಲು ಬಂದ "ಮಲ್ಲಗಸೆಟ್ಟಿ"ಗಳು ಹಾಗೂ ಬ್ರಾಹ್ಮಣರ ನಡುವೆ ಹೋರಾಟ ನಡೆಯುತ್ತದೆ. ಬ್ರಾಹ್ಮಣರೂ ಗುಂಪು ಕಟ್ಟಿಕೊಂಡು ಬಂದು ಅವರನ್ನು ಎದುರಿಸುತ್ತಾರಾದರೂ, ಬಲಶಾಲಿಗಳಾಗಿದ್ದ ಹಾಗೂ ಸೈನಿಕ ದಳಕ್ಕೆ ಸೇರಿದ "ಮಲ್ಲಗಸೆಟ್ಟಿ"ಗಳ ವಿರುದ್ಧ ಹೋರಾಡಲು ಅವರಿಂದ ಸಾಧ್ಯವಾಗುವುದಿಲ್ಲ. ಈ ಮಲ್ಲಗಸೆಟ್ಟಿಗಳು ಬ್ರಾಹ್ಮಣರನ್ನು ಕಬ್ಬಿಣದ ಒನಕೆಗಳಿಂದ ಬಡಿದು ಓಡಿಸುತ್ತಾರೆ. ಹಾಗೆ ತಪ್ಪಿಸಿಕೊಂಡು ಓಡುವ ಸಮಯದಲ್ಲಿ ಹುಲ್ಲಿನ ಬಣವೆಯಲ್ಲಿ ಬಚ್ಚಿಟ್ಟುಕೊಂಡ ಒಬ್ಬ ಬ್ರಾಹ್ಮಣನ ತಲೆಗೆ ಒಬ್ಬ ಮಲ್ಲನು ಒನಕೆಯಿಂದ ಹೊಡೆದುದರಿಂದ ಆತ ತಲೆಯೊಡೆದು ಅಲ್ಲಿಯೇ ಮರಣವನ್ನಪ್ಪುತ್ತಾನೆ.

"ಬ್ರಾಹ್ಮಣ ಹತ್ಯಾದೋಷ"ದ ಪರಿಹಾರಾರ್ಥವಾಗಿ ಆ "ಮಲ್ಲಗಸೆಟ್ಟಿ"ಯು ಊರಿನ ಶಿವಾಲಯದ ಈಶಾನ್ಯ ದಿಕ್ಕಿನಲ್ಲಿ ಒಂದು ಲಿಂಗವನ್ನು ಪ್ರತಿಷ್ಠಾಪಿಸಿ ದೇವಾಲಯ ಕಟ್ಟುತ್ತಾನೆ. ದೂರು ಸಲ್ಲಿಸಲು ಹೋಗಿದ್ದ ಗ್ರಾಮಸ್ಥರೂ ಕೂಡ ಪಾಪಪ್ರಜ್ಞೆಯಿಂದ ತಮ್ಮ ಪಾಪ ಪರಿಹಾರಾರ್ಥವಾಗಿ ಅದೇ ದೇವಾಲಯದ ಮೇಲ್ಭಾಗದಲ್ಲಿ ಮತ್ತೊಂದು ಲಿಂಗವನ್ನೂ ಪ್ರತಿಷ್ಠಾಪಿಸುತ್ತಾರೆ. ಮುಂದೆ ಈ ಎರಡೂ ದೇವಾಲಯಗಳನ್ನು ಕೆಡವಿ ಆ ಕಟ್ಟಡದ ಕಲ್ಲುಗಳನ್ನು ಮುಸಲ್ಮಾನರು "ವಂದವಾಸಿ"ಯಲ್ಲಿ ಕೋಟೆ ಕಟ್ಟಲು ತೆಗೆದುಕೊಂಡು ಹೋದರೆಂಬ ಮತ್ತೊಂದು ಐತಿಹಾಸಿಕ ಮಹತ್ವದ ಸಂಗತಿಯನ್ನೂ ಇದು ತಿಳಿಸುತ್ತದೆ. ವಂದವಾಸಿಯು ಕಾಂಚಿಪುರದಿಂದ ಪೂರ್ವಕ್ಕೆ ೪೨ ಕಿ.ಮೀ.ಗಳ ದೂರದಲ್ಲಿದ್ದು ಐತಿಹಾಸಿಕ ಮಹತ್ವ ಪಡೆದ ಸ್ಥಳವಾಗಿದೆ. ಬ್ರಿಟೀಷರ ಕಾಲದಲ್ಲಿ "ವಾಂಡಿವಾಷ್" ಕದನಗಳು ನಡೆದ ಸ್ಥಳವೇ ವಂದವಾಸಿ (ವಂದವಾಸಿ ಇಂಗ್ಲಿಷರ ಉಚ್ಚಾರಣೆಯಲ್ಲಿ ವಾಂಡಿವಾಷ್ ಆಗಿದೆ). ವಲ್ಲಂ ಗ್ರಾಮದ ಸುತ್ತಮುತ್ತಲಿನ ಗ್ರಾಮಗಳಲ್ಲಿದ್ದ ದೇವಾಲಯಗಳನ್ನೂ ಮಹಮದೀಯರು ಒಡೆದು ಅದನ್ನೂ ಮಂದವಾಸಿಗೆ ತೆಗೆದುಕೊಂಡು ಹೋಗಿ ಕೋಟೆ ಕಟ್ಟಿದ್ದಾರೆಂದು ಸುತ್ತಮುತ್ತಲಿನ ಗ್ರಾಮಸ್ಥರು ತಿಳಿಸುತ್ತಾರೆ.

ಈ ಬ್ರಹ್ಮಹತ್ಯಾ ದೋಷದ ವಿಮೋಚನೆಗಾಗಿ 'ಬ್ರಹ್ಮಹತ್ಯಾ' ಸ್ವರೂಪದ ಶಿಲಾವಿಗ್ರಹವೊಂದನ್ನು ಮಾಡಿಸಿ ಕೊಳದ ಅಗ್ನಿ ಮೂಲೆಯಲ್ಲಿ ಪ್ರತಿಷ್ಠಾಪಿಸಿದರಂತೆ. ಆದರೆ ಈಗ ಈ ಯಾವ ವಿಗ್ರಹಗಳೂ ಆ ಊರಿನಲ್ಲಿ ಕಂಡುಬರುವುದಿಲ್ಲ.

"ವಲ್ಲಂ"ನ ಬ್ರಾಹ್ಮಣರನ್ನು ಹತ್ತಿಕ್ಕಲು ವಿಜಯನಗರದಿಂದ ಬಂದ ಮಲ್ಲಗಸೆಟ್ಟಿಗಳು ಮುಂದೆ ಸ್ಥಿರವಾಗಿ ಅಲ್ಲಿಯೇ ನೆಲೆ ನಿಂತರೆಂಬ ಮತ್ತೊಂದು ವಿಷಯವನ್ನೂ ಇದು ತಿಳಿಸುತ್ತದೆ.

ಹೀಗೆ ಬಂದ ಮಲ್ಲಗಸೆಟ್ಟಿಗಳಲ್ಲಿ "ರಾಜಮಲ್ಲ" ನೆನ್ನುವ ಒಬ್ಬ ಮಲ್ಲಗಸೆಟ್ಟಿಯು ಕಾಂಚೀಪುರದ ಅಧಿಕಾರಿಯಾಗಿ, ಶೈವ ವೈಷ್ಣವ ದೇವಾಲಯಗಳಿಗೆ ಹೇರಳವಾಗಿ ದಾನ ದತ್ತಿ ನೀಡಿ ಅವುಗಳನ್ನು ಅಭಿವೃದ್ಧಿಪಡಿಸಿದನು.

ಹೀಗಿರುವಾಗ ವಿಜಯನಗರದಿಂದ ದಿವಾನನಾಗಿ ನೇಮಿತನಾಗಿದ್ದ "ದುಂದುಸೆಟ್ಟಿ" ಎನ್ನುವ ಮಲ್ಲಗಸೆಟ್ಟಿಯು ಬಹುಗರ್ವದಿಂದ ನಡೆದುಕೊಂಡು ಗ್ರಾಮದ ಜನರಿಗೆ ತುಂಬ ತೊಂದರೆ ನೀಡುತ್ತಿರುವುದನ್ನು ತಿಳಿದ ರಾಜನು ಅವನನ್ನು ಮಟ್ಟಹಾಕಬೇಕೆಂಬ ಉದ್ದೇಶದಿಂದ ನಿನ್ನ ಬಳಿ ಸ್ವಲ್ಪ ಮಾತನಾಡಬೇಕೆಂದು ಹೇಳಿ ಉಪಾಯದಿಂದ ಕರೆಸಿಕೊಳ್ಳುತ್ತಾನೆ. ಇಬ್ಬರೂ ಅಂತಃಪುರದಲ್ಲಿ ಚಪ್ಪರಕೂಟ ಮಂಚದಲ್ಲಿ(?) ಕುಳಿತಿರುವಾಗ ರಾಜ ಅವನಿಗೆ ತಿಳಿಯದಂತೆ ಆತನ ಕಠಾರಿಯನ್ನು ತೆಗೆದುಕೊಂಡು ಅದರ ಸ್ಥಳದಲ್ಲಿ ಮರದ ಕಠಾರಿಯನ್ನಿಟ್ಟು ಅವನನ್ನು ನಿರಾಯುಧನನ್ನಾಗಿಸುತ್ತಾನೆ. ನಂತರ ಅವನಿರುವ ಕೊಠಡಿಯೊಳಗೆ ಹುಲಿಯೊಂದನ್ನು ಬಿಟ್ಟು ಅವನನ್ನು ಕೊಲ್ಲಲು ನೋಡುತ್ತಾನೆ. ಆದರೆ ಆ ದುಂದುಸೆಟ್ಟಿಯು ಬಲಿಷ್ಠನಾದುದರಿಂದ ಬರಿಗೈಯಿಂದಲೇ ಹೋರಾಡಿ ಅದನ್ನು ಕೊಂದು ಅರಸನ ಮುಂದೆ ಅದರ ಶವವನ್ನು ತಂದು ಬಿಸುಡುತ್ತಾನೆ. ಅರಸನಿಗೆ ಅವನ ಶೌರ್ಯವನ್ನು ಕಂಡು ಬಹುಸಂತೋಷವಾಗುತ್ತದೆ, ಅವನ ಧೈರ್ಯ ಸಾಹಸಗಳನ್ನು ಮೆಚ್ಚಿಕೊಂಡ ಅರಸ ಅವನಿಗೆ ಯಥೇಚ್ಛವಾಗಿ ಧನಕನಕಗಳನ್ನು ನೀಡುತ್ತಾನೆ. ಅವನು ಅದೆಲ್ಲವನ್ನೂ ದಾನಧರ್ಮಗಳಿಗೇ ವಿನಿಯೋಗಿಸುತ್ತಾನೆ.

ವೀರನೊಬ್ಬನ ವೀರತ್ವವನ್ನು ಪರೀಕ್ಷಿಸಲು ಆತನಿಗೆ ಇಂತಹ ಅನೇಕ ಕಠಿಣ ಪರೀಕ್ಷೆಗಳನ್ನು ಇಡುತ್ತಿದ್ದ ಸಂಗತಿ ವಿಜಯನಗರ ಕಾಲದಲ್ಲಿ ಸಾಮಾನ್ಯವಾಗಿತ್ತು.

ಆ ಸಮಯದಲ್ಲಿ ರಾಜನ ಭೇಟಿಗೆಂದು "ವಲ್ಲಂ" ಗ್ರಾಮದಿಂದ ಬಂದಿದ್ದ ಗುರುಗಳಾದ ತಿರುಮಲಭಟ್ಟರಿಗೂ ಅರಸನು ಊರಿನ ಅಭಿವೃದ್ಧಿ ಕಾರ್ಯಗಳಿಗಾಗಿ ೪೦ ಸಹಸ್ರ ಹೊನ್ನುಗಳನ್ನು ನೀಡುತ್ತಾನೆ. ಆ ಹಣದಿಂದ ಗ್ರಾಮವನ್ನು ಅಭಿವೃದ್ಧಿಪಡಿಸಲಾಗಿದೆ. ಗ್ರಾಮ, ದೇವಸ್ಥಾನ, ಮಂಟಪ, ಕೆರೆ ಮೊದಲಾದವುಗಳ ನಿರ್ಮಾಣ ಹಾಗೂ ಅಭಿವೃದ್ಧಿಗಾಗಿ ಈ ಹಣವನ್ನು ವಿನಿಯೋಗಿಸಲಾಗಿದೆ. ದೇವಾಲಯದಲ್ಲಿ ಸ್ವಾಮಿಯ ಉತ್ಸವಾರ್ಥ ನಡೆಯುವ "ಪಾರು ಬೇಂಟೆ"ಗಾಗಿ ನಾಲ್ಕು ಮೂಲೆಗಳಲ್ಲೂ ಮಂಟಪಗಳನ್ನೂ ನಿರ್ಮಿಸಲಾಯಿತು. (ಪಾರುಬೇಟೆ ಎಂಬುದು ವೈಷ್ಣವ ದೇವಾಲಯಗಳಲ್ಲಿ ನಡೆಯುವ ಒಂದು ಪೂಜಾ ವಿಧಾನ. ಸ್ವಾಮಿಯು ಬೇಟೆಗೆ ಹೊರಟು ಬೇಟೆಯಾಡುವುದನ್ನು ಸಾಂಕೇತಿಕವಾಗಿ ಇಲ್ಲಿ ಪ್ರದರ್ಶಿಸಲಾಗುವುದು. ಕಿಟೆಲ್ ನಿಘಂಟಿನಲ್ಲಿ "ಪಾರುವೇಟೆ" ಎಂಬ ಪದಕ್ಕೆ the chase; game that is hunted ಎಂಬ ಅರ್ಥಗಳನ್ನು ನೀಡಲಾಗಿದೆ) ಆ ಮಂಟಪಗಳನ್ನೂ ಕೆಡವಿ ಅವುಗಳ ಕಲ್ಲುಗಳನ್ನು ಕೂಡ ಮುಂದೆ ಮುಸಲ್ಮಾನರು ಕೋಟೆ ಕಟ್ಟಲು ತೆಗೆದುಕೊಂಡು ಹೋದರಂತೆ. ಅಲ್ಲದೆ, ಆ ಹಣದಿಂದ ಊರಿನಲ್ಲಿ ದೊಡ್ಡ ಕೆರೆ ಮತ್ತು ಚಿಕ್ಕ ಕೆರೆ ಎಂಬ ಎರಡು ಕೆರೆಗಳನ್ನೂ

ಕಟ್ಟಲಾಯಿತು. ಈಗಲೂ ವಲ್ಲಂ ಗ್ರಾಮದಲ್ಲಿ ಆ ಎರಡೂ ಕೆರೆಗಳು ಸುಸ್ಥಿತಿಯಲ್ಲೇ ಇವೆಯಾದರೂ ನೀರಿಲ್ಲದೆ ಬತ್ತಿ ಹೋಗಿವೆ.

ದುಂದುಸೆಟ್ಟಿಯು ದೇವಾಲಯದಲ್ಲಿ ಸ್ತಂಭಕಲ್ಲೊಂದನ್ನೂ ನೆಟ್ಟನೆಂದೂ, ಅದು ತುಂಬ ಭಾರವಾಗಿದ್ದು ಒಂದು "ಕುಸ ಪ್ರಮಾಣ"ಕ್ಕಿಂತಲೂ ಹೆಚ್ಚು ದೊಡ್ಡದಾಗಿದೆಯೆಂದೂ ತಿಳಿಸುತ್ತದೆ. ಅವನು ಊರಿನ ಮೇಲ್ಭಾಗದಲ್ಲಿ, ಕೆರೆಯ ಕೆಳಭಾಗಕ್ಕೆ ಬರುವಂತೆ ವರದರಾಜಸ್ವಾಮಿಯ ದೇವಾಲಯವನ್ನೂ ನಿರ್ಮಿಸಿದನು. ಈಗ ಊರಿನಲ್ಲಿ ಪ್ರಾಚೀನ ಕಾಲದ ಈ ದೇವಾಲಯವಿದ್ದ ಜಾಗದಲ್ಲಿ ಅದರ ಅಳಿದುಳಿದ ಅಲ್ಪಸ್ವಲ್ಪ ಕುರುಹುಗಳು ಮಾತ್ರ ಇವೆ. ಒಡೆದು ಹೋದ ಒಂದು ಸ್ತಂಭದ ಮೇಲೆ ಕೊಳಲೂದುತ್ತಿರುವ ಕೃಷ್ಣನ ಶಿಲ್ಪವಿದ್ದು ಅದೊಂದೇ ಇಲ್ಲಿ ವರದರಾಜಸ್ವಾಮಿಯ ದೇವಾಲಯ ವಿತ್ತೆಂದು ತಿಳಿಯಲು ಇರುವ ಪ್ರಾಚೀನ ಆಧಾರವಾಗಿದ್ದು, ಈಗಿರುವ ವರದರಾಜ ಸ್ವಾಮಿಯ ೧೯೭೬ರಲ್ಲಿ ಹಳೆಯ ದೇವಾಲಯವಿದ್ದ ಎಡೆಯಲ್ಲೇ ನಿರ್ಮಿಸಲಾಯಿತೆಂದು ಸ್ಥಳೀಯರು ತಿಳಿಸುತ್ತಾರೆ. ಆದರೆ ಅಲ್ಲಿ ವಿಗ್ರಹಗಳಾವುವೂ ಇಲ್ಲದೆ ಮೊದಲಿನಿಂದಲೂ ತೆಂಗಿನಗರಿಗಳ ಒಂದು ಚಪ್ಪರ ಕಟ್ಟಿ ಅದರೊಳಗೆ ಫೋಟೋವನ್ನಿಟ್ಟು ಅದಕ್ಕೆ ಪೂಜಿಸುತ್ತಿದ್ದರಂದೂ, ಊರಿನವರೆಲ್ಲರೂ ಸೇರಿ ಇತ್ತೀಚಿಗೆ ಅದಕ್ಕೆ ಮಂಟಪ ಕಟ್ಟಿದರೆಂದೂ ಹೇಳುತ್ತಾರೆ. ಒಟ್ಟಿನಲ್ಲಿ ಅಲ್ಲೊಂದು ವರದರಾಜ ಸ್ವಾಮಿಯ ಆಲಯವಿತ್ತೆಂದೂ ಅದು ಮುಸಲ್ಮಾನರ ದಾಳಿಯ ಸಮಯದಲ್ಲಿ ಹಾಳಾಗಿರ ಬಹುದೆಂದೂ, ಅದರ ಸ್ಮರಣೆ ಮಾತ್ರ ಊರವರಲ್ಲಿ ಉಳಿದು ಬಂದು ಇತ್ತೀಚಿಗೆ ಹೊಸದಾಗಿ ಮಂಟಪವನ್ನು ಕಟ್ಟಿದ್ದಾರೆಂದೂ ಹೇಳಬಹುದು. ವಲ್ಲಂ ಗ್ರಾಮದ ಸುತ್ತಮುತ್ತಲಿನ ಇತರ ಗ್ರಾಮ ಗಳಲ್ಲಿಯೂ ಕೂಡ ಮುಸಲ್ಮಾನರ ದಾಳಿಗೆ ತುತ್ತಾದ ದೇವಾಲಯ ಗಳಿವೆಯೆಂಬುದು ಈ ಸಂದರ್ಭದಲ್ಲಿ ಗಮನಿಸಬೇಕಾದ ವಿಷಯ ವಾಗಿದೆ.

ಈ ಶಾಸನ ಹೆಸರಿಸುವ ದೇವರಾಯ ಒಂದನೆಯ ದೇವರಾಯನೋ ಅಥವಾ ಎರಡನೆಯ ದೇವರಾಯನೋ ಎಂಬುದು ಸ್ಪಷ್ಟವಾಗುವುದಿಲ್ಲ. ಅದನ್ನು ತಿಳಿಯಲು ಬೇಕಾದ ಬೇರ್‍ಯಾವ ಆಂತರಿಕ ಆಧಾರಗಳೂ ಇಲ್ಲಿ ದೊರೆಯುವುದಿಲ್ಲ. ಕಲ್ಯಾಣಮ್ಮ ಎಂಬ ರಾಣಿಯನ್ನು ಕೈಫಿಯತ್ತು ಹೆಸರಿಸುತ್ತದಾದರೂ ಆಕೆಯ ಹೆಸರು ನಮಗೆ ಇದುವರೆಗೂ ಬೇರೆಲ್ಲೂ ಕಂಡು ಬಂದಿಲ್ಲ. ಹೀಗಾಗಿ ವಿಜಯನಗರದ ಮತ್ತೊಬ್ಬ ರಾಣಿಯ ಹೆಸರು ನಮಗೆ ಇಲ್ಲಿ ದೊರಕುವುದು ಮಹತ್ವದ ಅಂಶವೇ ಸರಿ. ಆದರೆ ಅವಳು ಒಂದನೆಯ ದೇವರಾಯನ ರಾಣಿಯೋ ಅಥವಾ ಎರಡನೆಯ ದೇವರಾಯನ ರಾಣಿಯೋ ಎಂಬುದು ತಿಳಿಯುವುದಿಲ್ಲ.

ಆ ಕಾಲದಲ್ಲಿ ತಮಿಳುನಾಡಿನಲ್ಲಿ ಹೋಗಿ ನೆಲೆಸಿದ ಮಲ್ಲಗ ಸೆಟ್ಟಿಗಳು ತಮ್ಮ ನಡವಳಿಕೆಯಿಂದ ತಮಿಳಿನಲ್ಲಿ ಒಂದು ಗಾದೆಯ ಸೃಷ್ಟಿಗೇ ಕಾರಣರಾಗಿದ್ದಾರೆ: ಯಾರಿಗೂ ಮಣಿಯದ ವ್ಯಕ್ತಿಯನ್ನು "ಇವನು ಒಳ್ಳೇ ಮಲ್ಲಗಸೆಟ್ಟಿಯಾಗಿದ್ದಾನಲ್ಲ" ಎಂದು ಹೇಳುವುದು ಈಗಲೂ ವಾಡಿಕೆಯಲ್ಲಿದೆ.

ಈ ಕೈಫಿಯತ್ ಕೆಳಕಂಡ ವಿಷಯಗಳನ್ನು ತಿಳಿಸುತ್ತದೆ:

೧. (?) ದೇವರಾಯ ತಮಿಳುನಾಡಿನ ಕಾಂಚಿಯ ಮೇಲೆ ನೇರ ಅಧಿಕಾರವನ್ನಿಟ್ಟುಕೊಂಡಿದ್ದ.

೨. ವಿಜಯನಗರದ ಇತಿಹಾಸದಲ್ಲಿ ಕಲ್ಯಾಣಮ್ಮ ಎಂಬ ಮತ್ತೊಬ್ಬ ರಾಣಿಯ ಹೆಸರಿನ ಸೇರ್ಪಡೆ.

೩. ಅನ್ಯಾಯವನ್ನು ಕಂಡು ಅರಸನ ಆಕ್ರೋಶ ಹಾಗೂ ನ್ಯಾಯವನ್ನು ನೆಲೆ ನಿಲ್ಲಿಸಲು ಆದೇಶಿಸಿ ತನ್ನ ಪಡೆ ವೀರರನ್ನು ಕಳಿಸಿದ್ದಾನೆ.

೪. ಬ್ರಾಹ್ಮಣರೂ ತಮಗೆ ರಾಣಿಯಿಂದ ದೊರೆತ ದಾನವನ್ನು ಬಿಟ್ಟು ಕೊಡಲು ಅಷ್ಟೊಂದು ಸುಲಭವಾಗಿ ಒಪ್ಪಿಕೊಳ್ಳದೆ ತಮಗೆ ಸಂದಿರುವುದನ್ನು ನೆಲೆನಿಲ್ಲಿಸಿಕೊಳ್ಳಲು ಪ್ರಯತ್ನಿಸು ತ್ತಾರೆ.

೫. ತಮ್ಮ ಕೃತ್ಯದಿಂದ ಒಬ್ಬ ವ್ಯಕ್ತಿ ಮರಣ ಹೊಂದಿದುದರ ಬಗ್ಗೆ ಮಲ್ಲಗಸೆಟ್ಟಿಗಳಿಗೂ ಹಾಗೂ ಊರಿನ ಜನರಿಗೂ ಪಾಪಪ್ರಜ್ಞೆ ಕಾಡಿದೆ.

೬. ಅಧಿಕಾರದ ದುರುಪಯೋಗವನ್ನು ರಾಜ ಸಹಿಸಿಕೊಳ್ಳಲಾರ. ಆದರೆ ವ್ಯಕ್ತಿ ಯಾರೇ ಆಗಿರಲಿ ಆತನ ವೀರತ್ವವನ್ನು ಮನ್ನಿಸುವ, ಗೌರವಿಸುವ ಉದಾರತೆ ಅರಸನಲ್ಲಿತ್ತು.

೭. ಹಿಂದೂ ದೇವಾಲಯಗಳನ್ನು ಮುಸ್ಲಿಮರು ನಾಶ ಮಾಡಿ ತಮ್ಮ ಭಾಗದಲ್ಲಿ ಕೋಟೆ ಕಟ್ಟಲು ತೆಗೆದುಕೊಂಡು ಹೋದರೆಂಬುದು ಗಮನಾರ್ಹ.

೮. 'ಕುಸ ಪ್ರಮಾಣ' ಎಂಬ ಅಳತೆಯನ್ನು ಇಲ್ಲಿ ಹೆಸರಿಸಲಾಗಿದೆ. ಅದರ ಬಗ್ಗೆ ಪರಿಶೀಲನೆ ನಡೆಸುವ ಅಗತ್ಯವಿದೆ.

೯. ಮುಸ್ಲಿಂ ಆಡಳಿತ ಸ್ಥಳೀಯ ಭಾಷೆಯ ಮೇಲೂ ಪ್ರಭಾವ ಬೀರಿರುವುದರಿಂದ ಕೈಫಿಯತ್ತಿನಲ್ಲಿ ಜಫ್ತಿ, ತುಕ್ಕಡಿ, ಸರ್ದಾರ್..... ಇತ್ಯಾದಿ ಪದಗಳನ್ನು ಕಾಣಬಹುದು.

**ಲಿಪ್ಯಂತರ :***

**ಅನ್ನಮ ದೇವರಾಯರ್ ಕೈಫೀದು**

ವಿಜಯನಗರತ್ತಿಲಿರುನ್ದು ವಂದ ಮಲ್ಲರಾಜಾ ಅನ್ನಮ ದೇವರಾಯರ್ ಎನ್‌ಗಿರವರ್‌ಗಳುಡೈಯ ಮಗಾ ವಿಸೇಷಿತ್ತ ಕೈಫೀದು.

ಸಾಲಿವಾಗನ ಸಕಾಬ್ದಂ ೧೦೦೦ ವರುಷಮಾನ ಪಿನ್ಬು ವಿಜಯನಗರತ್ತಿಲೇ ಕರ್ನಾಡಗ ಪ್ರಬುವಾ ಯಿರುನ್ದ ಅನ್ನಮ ದೇವರಾಯರ್ ರಾಜ್ಜಿಯ ಪರಿಪಾಲನಂ ಸೆಯ್ದು ಕೊಣ್ಡು ದ್ರಾವಿಡ ದೇಸಮಾನ ಕಾಂಜಿ ಪಟ್ಟಣಂ ಕಟ್ಟಿಕೊಂಡು ವೆಗು ನಾಳಾ ಯಿಂದ ದೇಸತ್ತುಲೇ ಪ್ರಬುತ್ತುವಂ ಪಣ್ಣಿಯ ಪಿರಗು, ಅವರ್ ವಂಸತ್ತಿಲ್

ರಾಯದೇವರ್ ಎನ್‌ಗಿರವರುಮ್ ಆಂದ್ರ ಕರ್ನಾಡಗ ದ್ರಾವಿಡ ದೇಸಂಗಳುಂ ಕಟ್ಟಿಕೊಂಡು ದಾನಮ್ ನೀದಿಯಾಯಿ ರಾಜ್ಜಿಯಂ ಪರಿಪಾಲನಂ ಪಣ್ಣಿಕೊಂಣ್ಡಿರುಕ್ಕೈಯಿಲ್ ಅವರುಡೈಯ ಪಟ್ಟಸ್ತ್ರೀ ಕಲ್ಯಾಣಮ್ಮಾಳ್ ಯೆನ್‌ಗಿರವಳ್ ಸೇತು ಯಾತ್ತಿರೈಕ್ಕಿ ಪ್ಪೋಗಚ್ಚೇ ಯಿಂದ ಕಾಂಜೀಪುರತ್ತಿಲೇ ಯಿರುನ್ದು ಸಿರುದು ಬ್ರಾಮಣಾಳುಂ ಕೂಡ ಸೇದುವುಕ್ಕು ಅವರ್‌ಗಳ್ ಪಿನ್ ತುಡರ್‌ನ್ದು ಪೋನಾರ್ ಗಳ್.

ಪೋನವಿಡತ್ತಿಲೇ, ಅನ್ದ ರಾಜಸ್ತ್ರೀಯಾನವಳ್ ಸೇದು ಸ್ನಾನಂ ಪಣ್ಣಿ ಬ್ರಾಮಣಾಳುಕ್ಕು ದನಮ್ ದಾನಮ್ ಪಣ್ಣುಗ್ಗಿರ ವೇಳೆಯಿಲೇ ಯಿಂದ ಕಾಂಜೀಪುರತ್ತಿಲಿರುನ್ದು ಪೋನ ಬ್ರಾಮಣಾಳ್ ಸೊನ್ನದು: 'ಕಾಂಜೀ ತುಕ್ಕಡಿಯಿಲೇ ವಲ್ಲಮೆನ್‌ಗಿರ ಗ್ರಾಮಮ್ ಕೊಂಜ ಗ್ರಾಮಮಾ ಯಿರುಕ್ಕುದು. ಅಂದ ಗ್ರಾಮತ್ತೈ ಯೆಂಗಳುಕ್ಕು ಅಗ್ರಾರಮ್ ಪಣ್ಣಿ ಕುಡುಕ್ಕ ವೇಣುಮೆನ್ರು ಕೇಟ್ಟದುಕ್ಕು ಅಂದ ರಾಜಸ್ತ್ರೀಯಾನವಳ್ ಸೊನ್ನದು ಅಂದ ಗ್ರಾಮಮ್ ದೇವಸ್ತಾನಮಾ ಯಾವದು ಅಗ್ರಗಾರಮಾಯಿರುನ್ದಾಲ್ ದಾನಮ್ ಪಣ್ಣ ಮಾಟ್ಟೋಮ್. ಅಪ್ಪಡಿ ದಾನಮ್ ಪಣ್ಣಿನಾಲುಂ ದಾನತ್ತು ಸೆಲ್ಲಮಾಟ್ಟಾದು ಯೆನ್ರು ಸೊನ್ನದುಕ್ಕು ಅಂದ ಬ್ರಾಮಣಾಳ್ ವಲ್ಲಮೆನ್‌ಗಿರ ಗ್ರಾಮಮ್ ದೇವಸ್ತಾನ ಬೂಮಿಯುಮಲ್ಲ ಅಗ್ರಾರಮುಮಲ್ಲವೆನ್ರು ಸೊನ್ನದು ಕೇಟ್ಟು, ಅಂದ ರಾಜಸ್ತ್ರೀಯಾನವಳ್ ಧನುಷ್ಕೋಟಿಯಿಲೇ ಇಂದ ವಲ್ಲಮೆನ್‌ಗಿರ ಗ್ರಾಮತ್ತೈ ಬ್ರಾಮಣಾಳುಕ್ಕು ಸರ್ವ ಮಾನ್ಯಮಾಯ್ ದತ್ತಮ್ ಪಣ್ಣಿಪ್ಪೋಟ್ಟು ಅವಳುಡೈಯ ದೇಸಮ್ ವಿಜಯನಗರತ್ತೈ ಪೋಯಿ ಸೇರ್‌ನ್ದಾಳ್.

ಅದನ್ ಪಿರಗು ದಾನಮ್ ವಾಂಗಿನ ಬ್ರಾಮಣಾಳ್ ಯಿಂದ ವಲ್ಲಮೆನ್‌ಗಿರ ಗ್ರಾಮತ್ತಿರ್‌ಕು ವಂದು ಇಂದ ಗ್ರಾಮಂ ಎಂಗಳುಕ್ಕು ಸೇತುಕ್ಕರೈಯಿಲೇ ಗ್ರಹಣ ಪುಣ್ಣಿಯ ಕಾಲತ್ತಿಲೇ ರಾಜಸ್ತ್ರೀ ದಾನಮ್ ಪಣ್ಣಿಯಿರುಕ್ಕಿರಾಳೆನ್ರು ಯಿನಿಮೇಲ್ ಯೆಂಗಳುಕ್ಕು ತೀರ್ವೈ ಮೊದಲಾನದೆಯುಮ್ ಕುಡುಕ್ಕ ವೇಣುಮೆನ್ರು ಜ್ಞೆಪ್ತಿ ಸೆಯ್‌ದ ವಿಡತ್ತಿಲೇ ಅಪ್ಪೋ ಸ್ತಾನತ್ತಾರ್ ಗುರುಕ್ಕಳ್‌ಮಾರ್ ಮೇಳವಾದ್ದಿಯ ಕಾರ್ ದಾಸಿ ಮುದಲಾನ ಜ್ಞೆನಂಗಳುಮ್ ವಡಕ್ಕೇ ವಿಜೆಯ ನಗರತ್ತುಕ್ಕು ಪ್ಪೋಯಿ ರಾಯದೇವರೈ ಕಂಡು ಬೇಟಿ ಪಣ್ಣಿಕೊಂಡು ನಡನ್ದ ಸಮಾಚ್ಚಾರಂಗಳೈ ಯೆಲ್ಲಾಮ್ ಸೊಲ್ಲಿ ಅಮ್ಮಾಳ್ ದಾನಮ್ ಪಣ್ಣಿನದು ಬ್ರಾಮಣಾಳ್ ಜ್ಞೆಪ್ತಿ ಸೆಯ್ದು ದೇವಸ್ಥಾನತ್ತುಕ್ಕು ಗ್ರಾಮಮ್ ನಡಕ್ಕವೊಟ್ಟಾಮಲ್ ಸೆಯ್ದದುಮ್ ಯಿದುವೆಲ್ಲಾಂ ವಿಬರಮಾಯ್ ಸೊಲ್ಲಿಕೊಣ್ಡವಿಡತ್ತಿಲೇ ರಾಯದೇವರಾನವರ್ ಯಿಂದ ಸ್ತಾನಿಗಳುಕ್ಕು ಧೈರ್ಯಂ ಚೊಲ್ಲಿ ತನ್ನಿಡತ್ತಿಲಿರುಕ್ಕಿರ ಮಲ್ಲಗಸೆಟ್ಟಿಗಳೈ ಅವರ್‌ಗಳುಡನ್ ಕೂಡ ಅಣುಪ್ಪಿ ಅಂದ ಬ್ರಾಮಣಾಳೈ ತುರತ್ತಿ ವಿಟ್ಟು ದೇವಸ್ತಾನತ್ತೈ ನಿಲೈ ನಿರುತ್ತ ಸೊಲ್ಲಿ ಅನುಪ್ಪಿವಿಚ್ಚಾರ್.

ಅಂದ ಪ್ಪಡಿಯೇ ಅವಾಳ್ ವಂದವಿಡತ್ತಿಲೇ ಯಿಂದ ಗ್ರಾಮತ್ತಿಲೇ ಯಿರುಕ್ಕಿರ ಬ್ರಾಮಣಾಳ್ ವೆಗು ಜ್ಞೆನಂಗಳೈ ಕೂಟ್ಟಿ ಕೊಂಡು ರಾಜಾ ಆಗ್ಗಿನೈಯ್ಯೈ ಉಡಾವಿಚ್ಚವಿಡತ್ತಿಲೇ ವಂದಿರುಕ್ಕಿರ ಮಲ್ಲಸೆಟ್ಟಿಗಳ್ ಬಲಸಾಲಿಗಳಾನಪಡಿಯಿನಾಲೇ ಕೈಯಿಲೇ ಯಿರುಪ್ಪು ಉಲಕ್ಕೈಯ್ಯೈ ಯೆಡುತ್ತುಕ್ಕೊಂಡು ಬ್ರಾಮಣಾಳೈ ತುರತ್ತಿ ತುರತ್ತಿ ಅಡಿತ್ತಾರ್‌ಗಳ್. ಬ್ರಾಮಣಾಳೆಲ್ಲಾರುಮ್ ಬಯನ್ದು ಓಡಿಪ್ಪೋಯಿ ಅದಿಲೊರು ಬ್ರಾಮಣನ್ ವೈಕ್ಕಲ್ ಪೋರುಕ್ಕುಳ್ಳೇ ಪುಗುಂದುಕೊಣ್ಡಾನ್. ಅವನ್ನೈ ಮಲ್ಲನ್ ಯಿರುಪ್ಪು ಉಲಕ್ಕೈಯಿನಾಲೇ ಅಡಿಚ್ಚುಯಿಡತ್ತಿಲೇ ಅಂದ ಬ್ರಾಮಣನ್ ಮರಣಂ ಅಡ್ಡೆಂದು ಸಿವಗಿರಿ ಸೆನ್ರು ಪೋನಾನ್. ಅಂದ ದೋಷಮ್ ಅಂದ ಮಲ್ಲನುಕ್ಕು ವಂದಪಡಿಯಿನಾಲೇ ಅಂದ ದೋಷಮ್ ಪೋಗುರ ನಿಮಿರ್‌ತ್ತಿ ಯಾರ್‌ತಮ್ ವಲ್ಲಂ ತಿರು.....ಸ್ವರರ್ ಕೋಯಿಲುಕ್ಕು ಯೀಸಾನ್ಯ ದಿಕ್ಕಿಲೇ ಸಿವ ಪ್ರತಿಷ್ಟೈ ಪಣ್ಣಿ ವೈಟ್ಟಾನ್. ಅಪ್ಪೋ ಸ್ತಾನಿಗಳುಂ ಗುರುಕ್ಕಳ್‌ಮಾರುಂ ಅವನುಕ್ಕು ಮತ್ತಿತ್ತು ಸೆಯ್ದ ಪಡಿಯಿನಾಲೇ ಯಿವಾಳುಂ ಕೋವಿಲುಕ್ಕು ಮೇಲ್‌ಪುರಮ್ ಸಿವ ಪ್ರತಿಷ್ಟೈ ಪಣ್ಣಿನಾರ್‌ಗಳ್.

ಯಿಂದ ರೆಂಡು ಕೋವಿಲ್‌ಗಳುಂ ಪಿರಿಚ್ಚು ವಂದವಾಸಿ ಕೋಟ್ಟೈ ಕಟ್ಟ ಸುಲುತ್ತಾನ್ ಕೊಣ್ಡು ಪೋಯಿ ಪೋಟ್ಟಾನಾಮ್. ಅಂದ ಲಿಂಗಂಗಳ್ ಮಾತ್ತಿರಮ್ ಯಿನ್ನುಮ್ ಯಿರುಕ್ಕುರದು. ಅಂದ ಬಿರಮಗತ್ತಿ ವಿಮೋಸನಮಾಗಿ ಪೋನಪಡಿಯಿನಾಲೇ ಅಂದ ಬಿರಮಗತ್ತಿ ಸುವರುಮ್ ಸೆಯ್ದು ಸಿಲಾವಿಗ್ಗಿರಗಮ್ ಕೊಳತ್ತುಕ್ಕು ಅಗ್ನಿ ಮೂಲೈಯಿಲಿರುಕ್ಕುರದು. ಪಿರಗು ಅಂದ ಮಲ್ಲಗಸೆಟ್ಟಿಗಳಿಲೇ ದುಂದುಸೆಟ್ಟಿ ಯೆನ್‌ಗಿರ ಸರ್ದಾರುಡನೇ ಕೂಡ ನಾಲು ವೀಟ್ಟುಕ್ಕಾರರ್ ಯಿಂದ ಊರಿಲೇ ವೀಡು ಕಟ್ಟಿಕೊಂಡಿರುನ್ದಾರ್‌ಗಳ್. ಅದಿನ್ ಪಿರಗು ರಾಯದೇವರಂಡೈಯಿಲಿರುಂದು ವೆಗು ಮಲ್ಲಗಸೆಟ್ಟಿಗಳ್ ವಂದು ಯಿಂದ ದೇಸಂಗಳಿಲೇ ರಾಯರ್ ಮನುಷಿಯರ್‌ಗಳಾಯ್ ಅದಿಕಾರಮ್ ಪಣ್ಣಿಕೊಂಣ್ಡಿರುಂದಾರ್‌ಗಳ್. ಅಪ್ಪಡಿ ಯಿರುಕ್ಕೈಯಿಲ್ ಯಿಂದ ಗ್ರಾಮತ್ತಿಲೇ ಸೆಟ್ಟಿಗಳ್ ದುನ್‌ಮಾರ್‌ಗಮಾಯಿ ಊರಿಲೇ ಒರುತ್ತರೈಯುಂ ತೆರುವಿಲೇ ವೈಕ್ಕಾಮಲ್ ಕೋಯಿಲ್‌ಗಳುಕ್ಕುಮ್ ನೀದಿ ತಪ್ಪುವಿಕ್ಕೈಯಿಲ್ ತಿರುಂಬಿಯುಂ ಗುರುಕ್ಕಳ್‌ಮಾರ್ ರಾಯರಂಡೈ ಪೋಯಿ ಪ್ರಾತು ಪಣ್ಣಿಕೊಂಡು ಅಪ್ಪೋ ಯಿಂದ ಸೆಟ್ಟಿಗಳೈ ವಿಜ್ಜೈಯನಗರಿಕ್ಕಿ ಅಳೈಪ್ಪಿವಿಚ್ಚು ಯಿರುಕ್ಕೈಯಿಲ್ ಯಿಂದ ಸೆಟ್ಟಿಗಳ್ ವೆಗು ಪೇರೈ ಸೇರ್ಮಾನಂ ಸೆಯ್ದುಕೊಂಡು ವೆಗು ರಾಜ್ಜಿಯಂಗಳ್ ಸೆಯಿಚ್ಚಪ್ಪಡಿ ಯಿನಾಲೇ ರಾಸಾವಾನವರ್ ಯಿಂದ ಸೆಟ್ಟಿಗಳಿಲೇ ದುಂದುಸೆಟ್ಟಿಕ್ಕಿ ದಿವಾನ್ನಿ ಉದ್ದಿಯೋಗಂಗುಡುತ್ತಾ ಮುಗರ್ ಮೋದಿರಮುಮ್ ಕುಡುತ್ತು ಅವನ್ ವಳಿಯಾಯ್ ನಡಂದುರುಕ್ಕೈಯಿಲ್ ಅಪ್ಪೋ ಸೆಟ್ಟಿಗಳ್ ವೆಗುಪ್ಪೇರ್ ಅದಿಕಾರತ್ತುಕ್ಕು ಯಿಂದ ದೇಸತ್ತುಕ್ಕು ವಂದು ರಾಜ್ಞಮಲ್ಲರೆನ್‌ಗಿರ ಸೆಟ್ಟಿ ರಾಜಾ ಯಿಂದ ಕಾಂಜೀ ದೇಸಮ್ ರೆಕ್ಷಿಚ್ಚಿಕ್ಕೊಂಡು ಅನೇಕಂ ಸಿವಸ್ತಳಮ್ ವಿಷ್ಣು ಸ್ತಳತ್ತುಕ್ಕು ೧೨ ಮಂಗಳಮ್ ನಡಪ್ಪಿಚ್ಚು ಸಿಲಾಸಾಸನಮ್ ಪಣ್ಣಿ ವಮ್‌ಸಮಾಯಿ

ರಾಜ್ಜಿಯಂ ರಕ್ಷಿಚ್ಚಾರ್. ಅಪ್ಪಡಿಯಿರುಕ್ಕೈಯಿಲ್ ವಿಜಯನಗರತ್ತು ರಾಸಾವಂಣ್ಣ್ಪು ದಿವಾನಿಸಿಯಾಯಿರುಕ್ಕಿರ ದುಂದುಸೆಟ್ಟಿ ರೊಂಬವುಮ್ ಗರ್ವತ್ತೈಯಡ್ಡೆಂಜು ರಾಜಿಯತ್ತಿಲೇ ಗ್ರಾಮಂಗಳುಕ್ಕು ವಿಗ್ನಂ ತೇಡಿ ವೆಗು ಜ್ಜೆನಂಗಳುಕ್ಕು ಸಿರಮಮ್ ಉಣ್ಡಾಕ್ಕಿನಾರ್. ಅಪ್ಪೋ ರಾಜಾವಾನವರ್ ರೊಂಬವುಮ್ ಕೋಬತ್ತೈ ಮನದಿಲೇ ವೈತ್ತುಕೊಂಡು ಅಪ್ಪಡಿಯೇ ಮಗಾ ವಿರೋದಂ ಸೆಯ್ದವನ್ನೈ ವೈಕ್ಕ ಕೂಡಾದು ಯೆನ್ರು ಸಮ್ಮಾರಮ್ ಪಣ್ಣುಗ್ಗಿರದು ರಾಜ್ಞಾ ಯೋಸನ್ನೈ ಸೆಯ್ದವಿಡತ್ತಿಲೇ ಅದರ್ಕು ಅವನ್ ವಸಪ್ಪಡಾಮಲಿ ರುಕ್ಕುರಪ್ಪಡಿಯಿನಾಲೇ ರಾಜ್ಞಾವಾನವರ್ ವಂಜ್ಞನೈಯಾಯವನ್ನೈ ಕೊಲ್ಲವೇಣುಮೆನ್ರು ನಿನ್ನೈತ್ತು ಕೊಂಜ ಕಾರಿಯಮಿರುಕ್ಕಿರದೆನ್ರು ಪೇಸಿ ವರಚ್ಚೊಲ್ಲಿ ಅನುಪ್ಪಿವಿಚ್ಚ ಯಿಡತ್ತಿಲ್ ಅಂದ ಮಲ್ಲಸೆಟ್ಟಿ ರಾಜ್ಞಾವೇಟ್ಟೈಕ್ಕಿ ಅಂದಪುರತ್ತುಲೇ ವಂದಯಿಡತ್ತುಲೇ ಅಂದ ರಾಜಾ ಸಪ್ಪಿರಕೂಡ ಮಂಜತ್ತಿಲಿರುಕ್ಕಚ್ಚೇ ಅಂದ ಕಟ್ಟಿಲ್ ಮೇಲೇ ವಿನೋದಮಾನ ಬೊಮ್ಮೈಗಳ್ ಕಟ್ಟಿ ಯಿರುಕ್ಕಿರದ್ದೈ ಮೇಲ್ ನೋಕ್ಕಿ ಪಾರ್ತುಕ್ಕೊಂಡು ಯಿರುವರುಮಿರುಕ್ಕಿರ ವೇಳೈಯಿಲ್ ವಂದು ಅವರುಡೈಯ ಕಟಾರಿ ಕೀಳೈ ವೈತ್ತಿರುಂದದ್ದೈ ರಾಜಾವೆಡುತ್ತುಕ್ಕೊಂಡು ಮರತ್ತುನಾಲೇ ಕಟಾರಿ ಪೋಲ್ ಸೆಯ್‌ದಿರುಂದದ್ದೈ ಕೀಳೆ ಅದುಕ್ಕು ತೆರಿಯಾಮಲ್ ವೈತ್ತು ಪ್ಪೋಟ್ಟಾನ್. ಅದ್ದೈ ತೆರಿಯಾಮಲ್ ಸೆಟ್ಟಿಯಾನ್ ಅದ್ದೈ ಯೆಡುತ್ತುಕ್ಕೊಂಡು ರಾಜ್ಞಾವಂಣ್ಣ್ಪು ಅನುಪ್ಪಿವಿಚ್ಚುಕೊಂಡು ವೆಳಿಯಿಲೇರುಗ್ಗೈಯಿಲ್ ರಾಜ್ಞಾವಾನವನ್ ವಂಜನೈಯಾಯಿ ಒರು ಪುಲಿಯ್ಯೈ ವಾಸಲಿಲೇ ಪೆರನುಲೇ ಕಟ್ಟಿವೈಚ್ಚು ಯಿವನ್ ಪೋಗಚ್ಚೇ ಅಂದ ತಾವುಲೇ ಯಿರು ಪುರತ್ತಿಲೇಯುಮ್ ಕದವ್ವೈ ಸಾತ್ತಿ ವ್ಯಾಗ್ರತ್ತೈ ವಿಡಚ್ಚೊಲ್ಲಿ ಅಪ್ಪಡಿಯೇ ವಿಟ್ಟಯಿಡತ್ತಿಲ್ ಅಂದ ಪುಲಿ ಯಿಂದ ಸೆಟ್ಟಿ ಮೇಲೇ ಪಾಯ್‌ಗ್ಗೈಯಿಲ್ ಅವನ್ ಪುಲಿಯುಡನೇ ಸಂಡೈ ಪಣ್ಣಿಯದ್ದೈ ಕ್ಕೊನ್ರು ಪ್ಪೋಟ್ಟು ಅದ್ದೈ ರಾಜ್ಞಾವಂಡೈ ಕೊಂಡುವಂದು ಯೆರಿನ್ಸಾನ್. ರಾಜಾ ವೆಗು ಸಂತೋಷಪ್ಪಟ್ಟು ಅವನುಕ್ಕು ವೆಗು ಕನಕಾಬಿಷೇಕಮ್ ಪಣ್ಣಿ ವೆಗು ದ್ರವ್ಯಂ ರಾಸಿರಾಸಿಯಾಗ ಕ್ಕೊಟ್ಟಿನ ಯಿಡತ್ತಿಲೇ ಅಂದ ದ್ರವ್ಯಮೆಲ್ಲಾಂ ದಾನ ದರ್ಮಂ ಪಣ್ಣಿಪ್ಪೋಟ್ಟಾನ್.

ಅಪ್ಪೋ ಅಂದ ವಲ್ಲತ್ತು ಗುರುಕ್ಕಳ್‌ಮಾರುಲೇ ತಿರುಮಲ್ಯೆ ಬಟ್ಟರೆನ್‌ಗಿರವರ್ ಅಪ್ಪೋ ರಾಜ್ಞಾ ಬೇಟ್ಟಿಕ್ಕಿ ವಂದಿರುಂದ ವಿಡತ್ತಿಲ್ ಯಿಂದ ಗುರುಕ್ಕಳ್ ಪೇರಿಲ್ ದಯವು ವೈಚ್ಚು ನಾರ್ ಪದಾಯಿರಮ್ ವರಾಗಂ ಮಟ್ಟುಂ ಕೊಡುತ್ತು ಕೋವಿಲುಕ್ಕು ತಿರುಪ್ಪಣಿ ನಡಪ್ಪಿವಿಕ್ಕ ಚ್ಚೊಲ್ಲಿ ದಿಟ್ಟಂ ಸೆಯ್ದನುಪ್ಪಿವಿತ್ತಾರ್.

ಅಪ್ಪಡಿಯೇ ಅಂದ ದ್ರವ್ಯತ್ತೈ ಎಡುಪ್ಪಿಚ್ಚುಕ್ಕೊಂಡು ವಂದು ಯಿಂದ ಕೋವಿಲ್ ಆಸ್ತಾನ ಮಂಡಪಮ್ ತಿರುಮಡಮಾಳಿ ಮಂಡಪಂ ಮುದಲ್ ಪ್ರಕಾರಮ್ ಇರಂಡಾಮ್ ಪ್ರಕಾರಂ ತೆನ್‌ಪುರ ನಿಲ್ಯೆ ಗೋಪುರಂ ಕಟ್ಟಿ ಪೆರಿಯ ಯೇರಿ ಕಟ್ಟಿವೈತ್ತು ಸಿರಿಯ ಏರಿ ಕುಳಮಿದುಗಳೆಲ್ಲಾಂ ಉಂಡಾಕ್ಕಿ ಕೋವಿಲುಕ್ಕು ಚಿತ್ತಿರ ತೇರುಗಳುಂ ಉಚ್ಚವಾದಿಗಳುಮ್ ವೆಗು ವಿಮರಿಸೈಯಾಯಿ ನಡಪ್ಪಿವಿಚ್ಚಾರ್‌ಗಳ್. ಯಿಂದ ಸುವಾಮಿಯಾರುಕ್ಕು ಪ್ಪಾರುವೇಟ್ಟೈಕ್ಕಿ ನಾಲು ಮಂಡಪಂ ಕಟ್ಟಿವೈಚ್ಚು ಉಚ್ಚವ ವಿಗ್ರಗಮ್ ವಿಷ್ತಿರಿಚ್ಚು ಸೆಯ್‌ವಿಚ್ಚಾರ್‌ಗಳಾಮ್. ಅಂದ ವೆಳಿ ಪ್ರಕಾರಂಗಳ್ ಕಲ್ಲುಗಳೈ ಕೊಂಡುಪ್ಪೋಯಿ ಮುನ್ನೇ ಯಿರುನ್ದ ತುಲುಕ್ಕರ್ ಕ್ಕೋಟ್ಟೈಗಳ್ ಕಟ್ಟಿನಾರ್‌ಗಳಾಮ್..........

ಅಂದ ಮಲ್ಲನ್ ಪುಲಿಯೋಡ ಯುದ್ದಂ ಪಣ್ಣಿನಪಡಿಯಿನಾಲೇ ಅಂದ ಕೋಯಿಲ್ ಮದಳಿಲೇ ಪುಲಿಯುಮ್ ಅಂದ ಮಲ್ಲನ್ನೈಯುಂ ಸಿಲ್ಯೆಯಿಲೇ ಸೆಯ್ದಿರುಕ್ಕುರದು. ಅಂದ ದುಂದು ಸೆಟ್ಟಿಯೆನ್‌ಗಿರ ಮಲ್ಲನ್ ಕಲ್ಲುನಾಲೇ ಸೆಯ್ದಿರುಕ್ಕಿರ ಸ್ತಂಬಕಲ್ಲು ಯೆಡುತ್ತು ವೆಳೈಯಾಡುಗಿರ ಕಲ್ಲು, ಕೋವಿಲುಕ್ಕು ವಾಯು ಮೂಲ್ಯೆಯಿಲೇ ತೆರುವಿಲೇ ನಟ್ಟು ಯಿರುಕ್ಕುರದು. ಅದು ರೊಂಬವುಮ್ ಪಾರಿಯಾಯ್ ಒರು ಕುಸ(?) ಪ್ರಮಾಣಮ್ ಅಳವಿನುಡ ನೇಯುಮ್ ರೊಮ್ಬವುಮ್ ಪೆರುಮಾಣಮಾಯ್ ಯಿರುಕ್ಕುದು. ಅಂದ ಮಲ್ಲರ್ ಮುನ್ನಾಲೇ ಯಿಂದ ವೂರಿಲೇ ಮೇಲ್ ಪಿರಮ್ ಯೇರಿ ಕೀಳೈ ವರದರಾಜ ಪ್ಪೆರುಮಾಳ್ ಎನ್ರು ಪೇರುಂಣ್ಡಾಯಿ ಪ್ರದಿಷ್ಟೈ ಸೆಯ್ದಿರುಕ್ಕುರಾರ್‌ಗಳ್. ಅಂದ ಸುವಾಮಿಯಾರುಕ್ಕು ಕೋವಿಲ್ ಮಂಡಪ ಮುದಲ್ ಕಟ್ಟಿ ವೈಚ್ಚು ನಡಪ್ಪಿಚ್ಚಾಮ್.

**ಭಾಷಾಂತರ**** :

**ಅನ್ನಮ ದೇವರಾಯರ ಕೈಫಿಯತ್ತು**

ವಿಜಯನಗರದಿಂದ ಬಂದ ಮಲ್ಲರಾಜ ಅನ್ನಮದೇವ ರಾಯರ್ ಎನ್ನುವವರ ಮಹಾ ವಿಶೇಷದ ಕೈಫಿಯತ್ತು.

ಶಾಲಿವಾಹನ ಶಕಾಬ್ದ ೧೦೦೦ ವರುಷಗಳಾದ ನಂತರ ವಿಜಯನಗರದಲ್ಲಿ ಕರ್ನಾಟಕದ ಪ್ರಭುವಾಗಿದ್ದ ಅನ್ನಮದೇವ ರಾಯರ್ ರಾಜ್ಯಪರಿಪಾಲನೆ ಮಾಡಿಕೊಂಡು ದ್ರಾವಿಡ ದೇಶವಾದ ಕಾಂಚಿಪಟ್ಟಣ ಕಟ್ಟಿಕೊಂಡು ಬಹುದಿನಗಳು ಈ ದೇಶದಲ್ಲಿ ಪ್ರಭುತ್ವ ಮಾಡಿದ ನಂತರ ಅವರ ವಂಶದಲ್ಲಿ ರಾಯದೇವರ್ ಎನ್ನುವವರು ಆಂಧ್ರ ಕರ್ನಾಟಕ ದ್ರಾವಿಡ ದೇಶಗಳನ್ನು ಕಟ್ಟಿಕೊಂಡು ದಾನ ರೀತ್ಯಾ ರಾಜ್ಯ ಪರಿಪಾಲನೆ ಮಾಡುತ್ತಿರುವಲ್ಲಿ ಅವರ ಪಟ್ಟಸ್ತ್ರೀಯಾದ ಕಲ್ಯಾಣಮ್ಮಾಳ್ ಎನ್ನುವವಳು ಸೇತುಯಾತ್ರೆಗೆ ಹೋಗುವಾಗ ಈ ಕಾಂಚೀಪುರದಿಂದ ಕೆಲವು ಬ್ರಾಹ್ಮಣರೂ ಸಹ ಸೇತುವಿಗೆ ಅವಳನ್ನನುಸರಿಸಿ ಹೋದರು.

ಹೋದೆಡೆಯಲ್ಲಿ ಆ ರಾಜಸ್ತ್ರೀಯಾದವಳು ಸೇತುಸ್ನಾನ ಮಾಡಿ ಬ್ರಾಹ್ಮಣರಿಗೆ ಧನ-ದಾನ ನೀಡುವ ಸಮಯದಲ್ಲಿ ಕಾಂಚೀಪುರದಿಂದ ಹೋದ ಬ್ರಾಹ್ಮಣರು ಹೇಳಿದ್ದು : 'ಕಾಂಚಿ ತುಕ್ಕಡಿಯಲ್ಲಿ "ವಲ್ಲಂ" ಎನ್ನುವ ಗ್ರಾಮ ಸ್ವಲ್ಪ ಮಟ್ಟಿಗೆ ಗ್ರಾಮವಾಗಿದೆ. ಆ ಗ್ರಾಮವನ್ನು ನಮಗೆ ಅಗ್ರಹಾರವಾಗಿ ಮಾಡಿಕೊಡಬೇಕೆಂ'ದು ಕೇಳಿದ್ದಕ್ಕೆ ಆ ರಾಜಸ್ತ್ರೀಯಾದವಳು ಹೇಳಿದ್ದು: 'ಆ

ಗ್ರಾಮ ದೇವಸ್ಥಾನಕ್ಕೆ ಸೇರಿದ ಭೂಮಿಯಾಗಿಯಾಗಲೀ, ಅಗ್ರಹಾರ ವಾಗಿಯಾಗಲೀ ಇದ್ದಲ್ಲಿ ಅದನ್ನು ದಾನವಾಗಿ ನೀಡಲಾಗದು. ಹಾಗೆ ದಾನ ನೀಡಿದರೂ ಅದು ಊರ್ಜಿತವಾಗದು' ಎಂದು ಹೇಳಿದುದಕ್ಕೆ ಆ ಬ್ರಾಹ್ಮಣರು "ವಲ್ಲಂ ಎನ್ನುವ ಗ್ರಾಮ ದೇವಸ್ಥಾನದ ಭೂಮಿಯೂ ಅಲ್ಲ, ಅಗ್ರಹಾರವೂ ಅಲ್ಲ" ಎಂದು ಹೇಳಿದ್ದನ್ನು ಕೇಳಿ ಆ ರಾಜಸ್ತ್ರೀಯಾದವಳು ಧನುಷ್ಕೋಟಿಯಲ್ಲಿದ್ದುಕೊಂಡೇ ವಲ್ಲಂ ಎನ್ನುವ ಗ್ರಾಮವನ್ನು ಬ್ರಾಹ್ಮಣರಿಗೆ ಸರ್ವಮಾನ್ಯವಾಗಿ ದತ್ತಿ ನೀಡಿ ಅವಳ ದೇಶವಾದ ವಿಜಯನಗರಕ್ಕೆ ಹೋಗಿ ಸೇರಿದಳು.

ಅದರ ನಂತರ ದಾನ ಸ್ವೀಕರಿಸಿದ ಬ್ರಾಹ್ಮಣರು ವಲ್ಲಂ ಎನ್ನುವ ಗ್ರಾಮಕ್ಕೆ ಬಂದು ಈ ಗ್ರಾಮವನ್ನು ಸೇತುವಿನ ತೀರದಲ್ಲಿ ಗ್ರಹಣ ಪುಣ್ಯ ಕಾಲದಲ್ಲಿ ನಮಗೆ ರಾಜಸ್ತ್ರೀ ದಾನ ನೀಡಿದ್ದಾಳೆಂದೂ, ಇನ್ನು ಮೇಲೆ ತೀರ್ವೆ ಮೊದಲಾದವುಗಳನ್ನು ತಮಗೇ ನೀಡ ಬೇಕೆಂದು ಜಪ್ತಿ ಮಾಡಿದಾಗ ಊರಿನ ಸ್ಥಾನಿಕರು ಗುರುಗಳು ಮೇಳವಾದ್ಯದವರು ವೇಶ್ಯೆ ಮೊದಲಾದ ಜನಗಳು ವಿಜಯನಗರಕ್ಕೆ ಹೋಗಿ ರಾಯದೇವನನ್ನು ಕಂಡು ಭೇಟಿ ಮಾಡಿ ನಡೆದ ಸಮಾಚಾರಗಳನ್ನೆಲ್ಲ ಹೇಳಿ ಅಮ್ಮನವರು ದಾನ ನೀಡಿದ್ದು, ಬ್ರಾಹ್ಮಣರು ಜಪ್ತಿ ಮಾಡಿ, ಗ್ರಾಮವು ದೇವಸ್ಥಾನಕ್ಕೆ ನಡೆದುಕೊಳ್ಳ ಲಾಗದಂತೆ ಮಾಡಿದುದು ಎಲ್ಲವನ್ನೂ ವಿವರವಾಗಿ ಹೇಳಿಕೊಂಡ ಸಮಯದಲ್ಲಿ ರಾಯದೇವನು ಈ ಸ್ಥಾನಿಕರಿಗೆ ಧೈರ್ಯ ಹೇಳಿ ತನ್ನ ಬಳಿಯಿದ್ದ 'ಮಲ್ಲಗಸೆಟ್ಟಿ'ಗಳನ್ನು ಅವರುಗಳ ಜೊತೆ ಕಳಿಸಿ, ಆ ಬ್ರಾಹ್ಮಣರನ್ನು ಓಡಿಸಿ ದೇವಸ್ಥಾನವನ್ನು ನೆಲೆ ನಿಲ್ಲಿಸುವಂತೆ ಹೇಳಿ ಕಳಿಸಿದನು.

ಅದೇ ಪ್ರಕಾರವಾಗಿ ಅವರು ಬಂದಾಗ, ಈ ಗ್ರಾಮದಲ್ಲಿದ್ದ ಬ್ರಾಹ್ಮಣರು ತುಂಬ ಜನ ಸೇರಿಕೊಂಡು ರಾಜನ ಆಣತಿಯನ್ನು ವಿರೋಧಿಸಿದಾಗ ಬಂದಿದ್ದ ಮಲ್ಲಗಸೆಟ್ಟಿಗಳು ಬಲಶಾಲಿಗಳಾದು ದರಿಂದ ಕೈಯಲ್ಲಿ ಕಬ್ಬಿಣದ ಒನಕೆಗಳನ್ನು ತೆಗೆದುಕೊಂಡು ಅಟ್ಟಿಸಿಕೊಂಡು ಹೋಗಿ ಬ್ರಾಹ್ಮಣರನ್ನು ಹೊಡೆದರು. ಬ್ರಾಹ್ಮಣರು ಹೆದರಿ ಓಡಿ ಹೋಗುವಾಗ ಅವರಲ್ಲಿ ಒಬ್ಬ ಬ್ರಾಹ್ಮಣ ಹುಲ್ಲಿನ ಬಣವೆಯಲ್ಲಿ ಅಡಗಿಕೊಳ್ಳಲು ಅವನನ್ನು ಒಬ್ಬ ಮಲ್ಲನು ಕಬ್ಬಿಣದ ಒನಕೆಯಿಂದ ಹೊಡೆದಾಗ, ಆತ ಸ್ಥಳದಲ್ಲೇ ಮರಣವನ್ನಪ್ಪಿ ಶಿವಗಿರಿಗೆ ಹೋಗಿ ಸೇರಿದ. ಆ ದೋಷ ಆತನಿಗೆ ಬಂದುದರಿಂದ ದೋಷ ಪರಿಹಾರಾರ್ಥವಾಗಿ ವಲ್ಲಂ ಗ್ರಾಮದ (?) ಈಶ್ವರ ದೇವಾಲಯದ ಈಶಾನ್ಯ ದಿಕ್ಕಿನಲ್ಲಿ ಶಿವ ಪ್ರತಿಷ್ಠೆ ಮಾಡಿಸಿದ. ಊರಿನ ಸ್ಥಾನಿಕರೂ ಗುರುಗಳೂ ಅವನನ್ನನುಸರಿಸಿ ಅದೇ ದೇವಾಲಯದ ಮೇಲ್ಭಾಗದಲ್ಲಿ ಶಿವ ಪ್ರತಿಷ್ಠೆ ಮಾಡಿದರು.

ಈ ಎರಡು ದೇವಸ್ಥಾನಗಳನ್ನೂ ಬಿಚ್ಚಿ ವಂದವಾಸಿಯ ಕೋಟೆ ಕಟ್ಟಲು ಸುಲ್ತಾನ್ ತೆಗೆದುಕೊಂಡು ಹೋಗಿ ಹಾಕಿದ. ಆ ಲಿಂಗಗಳು ಮಾತ್ರ ಇನ್ನೂ ಇವೆ. ಆ ಬ್ರಹ್ಮಹತ್ಯೆಯ ಪರಿಹಾರಾರ್ಥ ವಾಗಿ ಬ್ರಹ್ಮಹತ್ಯಾ ಸ್ವರೂಪವನ್ನು ಮಾಡಿಸಿ ಆ ಶಿಲಾ ವಿಗ್ರಹವನ್ನು ಕೊಳದ ಅಗ್ನಿಮೂಲೆಯಲ್ಲಿರಿಸಲಾಗಿದೆ.

ನಂತರ ಆ ಮಲ್ಲಗಸೆಟ್ಟಿಗಳಲ್ಲಿ ದುಂದುಸೆಟ್ಟಿಯೆನ್ನುವ ಸರ್ದಾರ್‌ನೊಡನೆ ನಾಲ್ಕು ಮನೆಗಳವರು ಆ ಊರಿನಲ್ಲೇ ಮನೆ ಕಟ್ಟಿಕೊಂಡು ವಾಸಿಸುತ್ತಿದ್ದರು. ಅದರ ನಂತರ ರಾಜ ದೇವರಾಯನ ರಾಜ್ಯದಿಂದ ತುಂಬ ಜನ ಮಲ್ಲಗಸೆಟ್ಟಿಗಳು ಬಂದು ಈ ದೇಶ ದಲ್ಲಿಯೇ ರಾಯರ ಮನುಷ್ಯರಾಗಿ ಅಧಿಕಾರ ಮಾಡಿಕೊಂಡಿದ್ದರು. ಹೀಗಿರುವಾಗ ಈ ಗ್ರಾಮದಲ್ಲಿ ಸೆಟ್ಟಿಗಳು ದುರ್ಮಾರ್ಗರಾಗಿ ಊರಿನಲ್ಲಿ ಒಬ್ಬರನ್ನೂ ಲಕ್ಷ್ಯದಲ್ಲಿಟ್ಟುಕೊಳ್ಳದೆ ದೇವಾಲಯಗಳಿಗೂ ನೀತಿ ತಪ್ಪಿಸುವಾಗ ಮತ್ತೆ ಗುರುಗಳು ರಾಜನ ಆಸ್ಥಾನಕ್ಕೆ ಹೋಗಿ ಪ್ರಾರ್ಥನೆ ಮಾಡಿಕೊಂಡಾಗ ಈ ಸೆಟ್ಟಿಗಳನ್ನು ವಿಜಯನಗರಕ್ಕೆ ಕರೆಸಿಕೊಂಡು, ಈ ಸೆಟ್ಟಿಗಳು ತುಂಬ ಜನರನ್ನು ಸೇರಿಸಿಕೊಂಡು ಬಹುರಾಜ್ಯಗಳನ್ನು ಮಾಡಿದುದರಿಂದ ರಾಜನಾದವನು ಈ ಸೆಟ್ಟಿಗಳಲ್ಲಿ ದುಂದುಸೆಟ್ಟಿಗೆ ದಿವಾನ್ ಉದ್ಯೋಗ ನೀಡಿ ಮುದ್ರೆಯುಂಗುರವನ್ನು ನೀಡಿ ಅವನದೇ ದಾರಿಯಲ್ಲಿರುವಾಗ ಸೆಟ್ಟಿಗಳು ತುಂಬ ಜನ ಅಧಿಕಾರಕ್ಕಾಗಿ ಈ ದೇಶಕ್ಕೆ ಬಂದು ರಾಜಮಲ್ಲನೆನ್ನುವ ಸೆಟ್ಟಿಯು ಈ ಕಾಂಚಿ ದೇಶವನ್ನು ರಕ್ಷಿಸಿಕೊಂಡು ಅನೇಕ ಶಿವಸ್ಥಳ ವಿಷ್ಣುಸ್ಥಳಗಳಿಗೆ ೧೨ ಮಂಗಳಗಳನ್ನು ನಡೆಸಿ ಕೊಂಡು ಶಿಲಾಶಾಸನ ಮಾಡಿ ವಂಶಾನುಗತವಾಗಿ ರಾಜ್ಯವನ್ನು ರಕ್ಷಿಸಿದರು.

ಹಾಗಿರುವಾಗ ವಿಜಯನಗರದಲ್ಲಿ ರಾಜನ ಆಸ್ಥಾನ ದಿವಾನನಾಗಿದ್ದ ದುಂದುಸೆಟ್ಟಿಯು ತುಂಬ ಗರ್ವಗೊಂಡವನಾಗಿ ರಾಜ್ಯದಲ್ಲಿ ಗ್ರಾಮಗಳಿಗೆ ಹಾನಿಯನ್ನುಂಟು ಮಾಡಿ ತುಂಬ ಜನರಿಗೆ ತೊಂದರೆ ನೀಡುತ್ತಿದ್ದುದರಿಂದ ರಾಜನು ಬಹಳ ಕೋಪವನ್ನು ಮನಸ್ಸಿನಲ್ಲಿಟ್ಟುಕೊಂಡು ಹಾಗೆಲ್ಲ ಮಹಾಪರಾಧ ಮಾಡಿದವನನ್ನು ಉಳಿಸಬಾರದು ಸಂಹಾರ ಮಾಡಬೇಕು ಎಂದು ಯೋಚಿಸಿದುದ ರಿಂದ, ಅದಕ್ಕೆ ಅವನು ವಶವಾಗಲಾರನೆಂದೂ ವಂಚನೆಯಿಂದ ಅವನನ್ನು ಕೊಲ್ಲಬೇಕೆಂದೂ ರಾಜನು ಯೋಚಿಸಿ ಸ್ವಲ್ಪ ಕೆಲಸವಿದೆ ಯೆಂದು ತಿಳಿಸಿ ಬರಲು ಹೇಳಿಕಳಿಸಿದಾಗ ಆ ಮಲ್ಲಸೆಟ್ಟಿಯೂ ರಾಜನೂ ಬೇಟೆಯಾಡಲು ಬಂದ ಸಮಯದಲ್ಲಿ ರಾಜನು ಅಂತಃ ಪುರದಲ್ಲಿ ಚಪ್ಪರಕೂಟ ಮಂಚ(?)ದಲ್ಲಿರುವಾಗ ಆ ಮಂಚದ ಮೇಲೆ ವಿನೋದವಾದ ಗೊಂಬೆಗಳನ್ನು ಕಟ್ಟಿರುವುದನ್ನು ಅವನು ತಲೆಯೆತ್ತಿ ಮೇಲೆ ನೋಡುತ್ತಿರುವಾಗ, ಇಬ್ಬರೆ ಇರುವ ಸಮಯದಲ್ಲಿ ಅವನ ಕಠಾರಿ ಕೆಳಗಿಟ್ಟಿದ್ದುದನ್ನು ರಾಜನು ತೆಗೆದುಕೊಂಡು ಮರದಲ್ಲಿ ಮಾಡಿದ ಕಠಾರಿಯನ್ನು ಅವನಿಗೆ ಗೊತ್ತಾಗದಂತೆ ಇರಿಸಿದ. ಇದು ತಿಳಿಯದ ಸೆಟ್ಟಿಯು ಅದನ್ನು ತೆಗೆದುಕೊಂಡು, ರಾಜನು ಆಸ್ಥಾನಕ್ಕೆ ಹೋಗಲು ಹೊರಗೆ ಬರುವಾಗ ಒಂದು ಹುಲಿಯನ್ನು ಅವನಿರುವ ಕೊಠಡಿಯ ಬಾಗಿಲ ಹೊರಭಾಗದಲ್ಲಿ ಕಟ್ಟಿ ಹಾಕಿ, ಅವನು ಹೊರಗೆ ಹೋಗುವಾಗ ಎರಡೂ ಬದಿಗಳಲ್ಲಿ ಬಾಗಿಲನ್ನು ಮುಚ್ಚಿ

ವ್ಯಾಘ್ರವನ್ನು ಬಿಡುವಂತೆ ಹೇಳಿ, ಹಾಗೆ ಬಿಟ್ಟಾಗ ಆ ಹುಲಿ ಈ ಸೆಟ್ಟಿಯ ಮೇಲೆ ಹಾಯುವಾಗ ಅವನು ಹುಲಿಯೊಂದಿಗೆ ಹೋರಾಡಿ ಅದನ್ನು ಕೊಂದು ಹಾಕಿ ರಾಜನ ಮುಂದೆ ತಂದು ಬಿಸಾಡಿದ.

ಇದರಿಂದ ರಾಜನು ತುಂಬ ಸಂತೋಷಗೊಂಡು ಅವನಿಗೆ ಬಹು ಕನಕಾಭಿಷೇಕ ಮಾಡಿ ಬಹು ದ್ರವ್ಯವನ್ನು ರಾಶಿರಾಶಿಯಾಗಿ ಸುರಿದ ಸಮಯದಲ್ಲಿ ಆ ದ್ರವ್ಯವನ್ನೆಲ್ಲಾ ಆತ ದಾನ ಮಾಡಿದ. ಆ ಸಮಯದಲ್ಲಿ ವಲ್ಲಂನ ಗುರುಗಳಾದ ತಿರುಮಲಭಟ್ಟರೆನ್ನುವವರು ರಾಜನ ಭೇಟಿಗೆ ಬಂದಿರುವಲ್ಲಿ ಈ ಗುರುಗಳ ಮೇಲೆ ದಯೆಯಿಟ್ಟು ನಾಲ್ವತ್ತು ಸಾವಿರ ವರಹಗಳನ್ನು ಮಾತ್ರ ಕೊಟ್ಟು ದೇವಸ್ಥಾನದ ಶ್ರೀಕಾರ್ಯಗಳನ್ನು ನಡೆಸುವಂತೆ ತಿಳಿಸಿ ಕಳಿಸಿದ.

ಹೀಗೆ ಆ ದ್ರವ್ಯವನ್ನು ತೆಗೆದುಕೊಂಡು ಬಂದು ಈ ದೇವಸ್ಥಾನದ ಆಸ್ಥಾನ ಮಂಟಪ ಶ್ರೀಮಠದ ಮಂಟಪ ಮೊದಲನೇ ಪ್ರಾಕಾರ ಎರಡನೇ ಪ್ರಾಕಾರ ದಕ್ಷಿಣದಲ್ಲಿ ನಿಲುಗೋಪುರವನ್ನು ಕಟ್ಟಿ ದೊಡ್ಡ ಕೆರೆ, ಚಿಕ್ಕ ಕೆರೆ, ಕೊಳ ಮುಂತಾದವುಗಳನ್ನೆಲ್ಲಾ ಕಟ್ಟಿಸಿ ದೇವಸ್ಥಾನಕ್ಕೆ ಚಿತ್ರದ ತೇರುಗಳನ್ನೂ ಉತ್ಸವಾದಿಗಳನ್ನೂ ಬಹು ವಿಜೃಂಭಣೆಯಿಂದ ನಡೆಸಿದರು. ಸ್ವಾಮಿಗೆ ಪಾರುವೇಂಟೆಗೆ ನಾಲ್ಕು ಮಂಟಪಗಳನ್ನು ಕಟ್ಟಿಸಿ ಉತ್ಸವ ವಿಗ್ರಹವನ್ನು ವಿಸ್ತರಿಸಿದರು. ಆ ಹೊರ ಪ್ರಾಕಾರದಲ್ಲಿದ್ದ ಕಲ್ಲುಗಳನ್ನು ಮೊದಲಿದ್ದ ಸುಲ್ತಾನರು ತೆಗೆದುಕೊಂಡು ಹೋಗಿ ಕೋಟೆ ಕಟ್ಟಿದರು.

ಆ ಮಲ್ಲನು ಹುಲಿಯೊಂದಿಗೆ ಯುದ್ಧ ಮಾಡಿದುದರಿಂದ ಆ ದೇವಸ್ಥಾನದ ಹೊರ ಭಿತ್ತಿಯಲ್ಲಿ ಹುಲಿಯನ್ನೂ ಆ ಮಲ್ಲನ ಶಿಲ್ಪವನ್ನೂ ಮಾಡಲಾಗಿದೆ. ಆ ದುಂದುಸೆಟ್ಟಿಯೆನ್ನುವ ಮಲ್ಲನು ಕಲ್ಲಿನಿಂದ ಮಾಡಿಸಿದ ಸ್ತಂಭಕಲ್ಲನ್ನು ತೆಗೆದು ಆಟವಾಡುವ(?) ಕಲ್ಲು ದೇವಸ್ಥಾನಕ್ಕೆ ವಾಯುಮೂಲೆಯನ್ನು ಹಾದಿಯಲ್ಲಿ ನೆಡಲಾಗಿದೆ. ಅದು ತುಂಬಾ ತೂಕವಾಗಿದ್ದು ಒಂದು ಕುಸ ಪ್ರಮಾಣ ಅಳತೆಯನ್ನು ಹೊಂದಿದ್ದು ದೊಡ್ಡ ಗಾತ್ರ ಹೊಂದಿದೆ. ನಂತರ ಆ ಮಲ್ಲನು ಈ ಊರಿನ ಮೇಲ್ಭಾಗದಲ್ಲಿ ಕೆರೆಯ ಕೆಳಗೆ ವರದರಾಜದೇವರ ಪ್ರತಿಷ್ಠೆ ಮಾಡಿಸಿದ. ಆ ಸ್ವಾಮಿಗಳಿಗೆ ದೇವಸ್ಥಾನ ಮಂಟಪ ಮೊದಲಾದವನ್ನೂ ಕಟ್ಟಿಸಿ ನಡೆಸಿದ.

---

* (ಕನ್ನಡಕ್ಕೆ ಸಮೀಪವಾದ ಪದಪ್ರಯೋಗಗಳು ಕೈಫಿಯತ್ತಿನಲ್ಲಿದ್ದಲ್ಲಿ ಆ ರೂಪಗಳನ್ನು ಭಾಷಾಂತರದ ಸಮಯದಲ್ಲಿ ಅದೇ ಪ್ರಕಾರವಾಗಿ ಬಳಸಿಕೊಳ್ಳಲಾಗಿದೆ.

** ತಮಿಳಿನ ಪದ ಪ್ರಯೋಗಗಳನ್ನು ಹಾಗೆಯೇ ಉಳಿಸಿಕೊಳ್ಳಲಾಗಿದೆ.)



ಒಂದಕ್ಕೆ ಎರಡು ಬಗೆದು ದಾನಪಡೆದು ಮಾಡಿದ್ದು
ರಾಜಸ್ತ್ರೀಗೆ ಮೋಸ
ದಂದುಗವು ಮಲ್ಲಗಸೆಟ್ಟಿಗಳ ಮುಂದೆ ನಡೆಯದೆ
ಬೆಲೆ ತೆತ್ತದ್ದು ವಲಸೆ ವೇಷ
ದುಂದುಶೆಟ್ಟಿಯ ಶೌರ‍್ಯಕ್ಕೆ ಬೆಲೆ ಬಂದು ನೆಲೆ ಕಂಡದ್ದು
ವರದರಾಜ ದೇಗುಲ

### ಕ. ಇತಿಹಾಸ ಅಕಾದೆಮಿಯ ೧೩ನೆಯ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೯)

*ಸಾಹಿತ್ಯ ಮತ್ತು ಇತಿಹಾಸ - ಇವು ಸಂಶೋಧನ ಪ್ರಕ್ರಿಯೆಯಲ್ಲಿ ಸಮಾನ ಸ್ತರದಲ್ಲಿವೆ. ಎಷ್ಟೋ ಸಂದರ್ಭಗಳಲ್ಲಿ ಪರಸ್ಪರ ಪೂರಕವಾಗಿವೆ. ಸಾಹಿತ್ಯ ಸಂಶೋಧಕರು ಇತಿಹಾಸದ ಪ್ರಮುಖ ಆಕರವೆನಿಸಿದ ಶಾಸನಗಳನ್ನು ಧಾರಾಳವಾಗಿ ಬಳಸಿಕೊಂಡಂತೆ ಚರಿತ್ರೆಯನ್ನು ರೂಪಿಸುವಾಗ ಆ ಕಾಲದ ಕಾವ್ಯಗಳನ್ನು ಪರಿಶೀಲಿಸುವುದೊಳಿತು.*

*ಕಾಗದದ ದಾಖಲೆಗಳು ಮಧ್ಯೋತ್ತರ (post-mediaeval) ಕಾಲದ ಸ್ಥಿತಿಯನ್ನು ತಿಳಿಯುವಲ್ಲಿ ಶಾಸನಗಳಿಗಿಂತ ಇವುಗಳೇ ಪ್ರಯೋಜನಕಾರಿ.*

ಡಾ. ಶ್ರೀನಿವಾಸ ಹಾವನೂರ
ಸಮ್ಮೇಳನಾಧ್ಯಕ್ಷರು

ಡಾ। ಮಾಲತಿ ಕೆ. ಮೂರ್ತಿ*

# ಸುಂಕ ವಿನಾಯತಿ ಮಂಗಳೂರು ವ್ಯಾಪಾರಿಗಳ ಮತ್ತು ಉಡುಪಿ ಕೃಷ್ಣ ಮಠದ ಅರ್ಜಿಗಳು

## (೧೮೧೩ ಮತ್ತು ೧೮೧೫)

> *ಕೆನರಾದಲ್ಲಿ, ಸೋಂದಾದಲ್ಲಿ ಭೂಮಾರ್ಗದಿಂದ ಆಮದು ಮತ್ತು ರಫ್ತಾಗುವ ಎಲ್ಲ ಸರಕುಗಳ ಮೇಲೆ ಸೀಮಾಸುಂಕ, ಪಟ್ಟಣಸುಂಕವನ್ನು ವ್ಯಾಪಾರಿಗಳ ಮೇಲೆ ಹೇರಲಾಯಿತು. ಸಮುದ್ರದ ಮುಖಾಂತರ ರಫ್ತಾಗುವ ಕೆಲವು ಸರಕುಗಳ ಮೇಲೆ ಹೆಚ್ಚಿನ ರಫ್ತು ಸುಂಕ ಹಾಗು ವೀಳ್ಯದೆಲೆ, ಹೊಗೆಸೊಪ್ಪು, ಗಾಂಜಾ ಆಪೀಮಿನ ಮೇಲೆ ಅನುಭೋಗ ತೆರಿಗೆ ವಿಧಿಸಲಾಗಿ ಜಿಲ್ಲೆಯ ವರ್ತಕರಿಗೆ ಬಹಳ ತೊಂದರೆಯಾಯಿತು. ರಫ್ತು, ಮರುರಫ್ತು ಸಂದರ್ಭಗಳಲ್ಲಿ ಬಹಳ ತೊಂದರೆಯಾಯಿತು. ಕಾರಣ ರಫ್ತು, ಮರುರಫ್ತು ಸಂದರ್ಭಗಳಲ್ಲಿ ತೆರಬೇಕಾದ ಸುಂಕವು ಭಾರವೆನಿಸಿತ್ತು. ಈ ಬಗ್ಗೆ ಆಹವಾಲು ಸಲ್ಲಿಸಿದಾಗ, ಕಾಲಮಿತಿ ಇದ್ದುದನ್ನು ವಿಸ್ತರಿಸಲಾಯಿತು. ಅಂದರೆ ಸುಂಕನೀತಿಯನ್ನು ವಿರೋಧಿಸುವ ಮೂಲಕ ವಸಾಹತು ಆಡಳಿತದ ಬಗ್ಗೆ ಪ್ರತಿಭಟನೆ ನಡೆಯಿತೆಂದಾಯಿತು.*

ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪೆನಿ ಸರಕಾರವು ೧೭೯೯ ರಲ್ಲಿ ಕೆನರಾ ಪ್ರದೇಶವನ್ನು ವಶಪಡಿಸಿಕೊಂಡಾಗ, ಆರಂಭದ ದಿನಗಳಲ್ಲಿ ಸುಂಕವ್ಯವಸ್ಥೆಗೆ ಸಂಬಂಧಪಟ್ಟಂತೆ, ಹಿಂದಿನ ಸರಕಾರದ ಸುಂಕ ನೀತಿಯನ್ನೇ ಮುಂದುವರಿಸಲಾಗಿತ್ತು. ಒಳನಾಡು ಸುಂಕ, ಸಮುದ್ರ ಮುಖಾಂತರ ರಫ್ತು ಮತ್ತು ಆಮದು ಸುಂಕಗಳನ್ನೊಳಗೊಂಡ ವಿವಿಧ ರೂಪದ ತೆರಿಗೆಗಳು ಸುಂಕ ವಿಭಾಗದ ಕಕ್ಷೆಗೊಳಪಟ್ಟಿದ್ದವು. ಇಲ್ಲಿನ ಪರಿಸ್ಥಿತಿಯ ಅಧ್ಯಯನದ ಬಳಿಕ ಕಂಪೆನಿ ಸರಕಾರ ಎಲ್ಲಾ ಒಳನಾಡು ಸುಂಕಗಳನ್ನು ರದ್ದುಪಡಿಸಿ, ಪರ್ಯಾಯವಾಗಿ ಪಟ್ಟಣ ಹಾಗೂ ಸೀಮಾ ಸುಂಕಗಳನ್ನು ವಿಧಿಸಲೆತ್ನಿಸಿತ್ತು.[೧] ಆಗಿನ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪಟ್ಟಣಗಳ ಸಂಖ್ಯೆ ಕಡಿಮೆ ಇತ್ತು. ೧೮೦೨ರಲ್ಲಿ ನಿರ್ದಿಷ್ಟ ಪಡಿಸಿದಂತೆ ಸುಬ್ರಹ್ಮಣ್ಯ, ಕಾರ್ಕಳ, ಬಂಟ್ವಾಳ ಮತ್ತು ಬೆಳ್ಳಾರೆಗಳನ್ನು ಕೆನರಾದ ದಕ್ಷಿಣಭಾಗದ ಪಟ್ಟಣಗಳೆಂದೂ, ಬಾರ್ಕೂರು, ಉಡುಪಿ, ಮಂಗಳೂರು, ಮಂಜೇಶ್ವರ ಮತ್ತು ಕುಂದಾಪುರಗಳನ್ನು ರೇವು ಪಟ್ಟಣಗಳೆಂದೂ ಗುರುತಿಸಲಾಗಿತ್ತು.[೨]

೧೮೦೨ರ ರೆಗ್ಯುಲೇಶನ್ ೧ರ ಸುಂಕನಿಯಮಾವಳಿ ವಿಭಾಗ II, ಕೆನರಾದಲ್ಲಿ ಸುಂಕ ಆಡಳಿತಕ್ಕೆ ಸಂಬಂಧಪಟ್ಟಂತೆ ಕಂಪೆನಿ ಸರಕಾರ ಹೊರಡಿಸಿದ ಮೊದಲ ಕಾನೂನು: ಇದರ ಕೆಲವೊಂದು ಅಂಶಗಳನ್ನು ಪರಿಷ್ಕರಿಸಿ ೧೮೦೩ರ ರೆಗ್ಯುಲೇಶನ್ IIನ್ನು ರೂಪಿಸಿದರೂ, ಅದನ್ನು ೧೮೦೬ರಲ್ಲಷ್ಟೇ ಕೆನರಾ ಮತ್ತು ಸೋಂದಾದಲ್ಲಿ ಅನುಷ್ಠಾನಿಸಲಾಯಿತು. ಈ ಕಾನೂನಿನನ್ವಯ ಆಗ ಪ್ರಚಲಿತದಲ್ಲಿದ್ದ ಸಣ್ಣ ಪುಟ್ಟ ತೆರಿಗೆಗಳು (Sair- Village Taxes), ನದೀ ಸುಂಕ ಮುಂತಾದುವುಗಳನ್ನು ರದ್ದು ಪಡಿಸಿದರೂ, ಭೂ ಮಾರ್ಗದಿಂದ ಆಮದು ಮತ್ತು ರಫ್ತಾಗುವ ಎಲ್ಲಾ ಸರಕುಗಳ ಮೇಲೆ ಶೇ ೬ರ ಸೀಮಾಸುಂಕ ಮತ್ತು ಪಟ್ಟಣಸುಂಕವನ್ನು ಹೇರಲಾಯಿತು.[೩] ಇವುಗಳ ವಸೂಲಿಗೆಂದು ಜಿಲ್ಲೆಯ ಗಡಿಗಳಲ್ಲಿ ಮತ್ತು ಪಟ್ಟಣಗಳಲ್ಲಿ ಸುಂಕದ ಕಟ್ಟೆಗಳನ್ನು ಸ್ಥಾಪಿಸಲಾಯಿತು.

ಆ ನಂತರ ೧೮೦೮ರಲ್ಲಿ ಹೊರಡಿಸಿದ ರೆಗ್ಯುಲೇಶನ್ ಪ್ರಕಾರ ಬೋರ್ಡ್ ಆಫ್ ರೆವಿನ್ಯೂಗಿದ್ದಂತಹ ಸುಂಕ ವಸೂಲಾತಿಯ ಮೇಲ್ವಿಚಾರಣಾ ಅಧಿಕಾರವನ್ನು ಬೋರ್ಡ್ ಆಫ್ ಟ್ರೇಡ್‌ಗೆ (ವಾಣಿಜ್ಯ ಮಂಡಳಿ) ವರ್ಗಾಯಿಸಲಾಯಿತು, ಮಾತ್ರವಲ್ಲದೆ ದಕ್ಷಿಣ ಕನ್ನಡ ಜಿಲ್ಲೆಯಿಂದ ಸಮುದ್ರ ಮಾರ್ಗವಾಗಿ ರಫ್ತಾಗುವ ಅಕ್ಕಿ, ಭತ್ತ, ಅಡಿಕೆ, ಕಾಳುಮೆಣಸು, ಏಲಕ್ಕಿ, ಮತ್ತು ಶ್ರೀಗಂಧ, ಮಲಬಾರ್‌ನಿಂದ ರಫ್ತಾಗುವ ಭತ್ತ, ಅಕ್ಕಿ ಹೊರತಾಗಿ ಕೆಲವೊಂದು ವಸ್ತುಗಳ ಮೇಲೆ ರಫ್ತು ತೆರಿಗೆಯನ್ನು ವಿಧಿಸಿತ್ತು.[೪] ಕಂಪೆನಿ ಸರಕಾರದ ಸುಂಕ ನೀತಿ ಮದ್ರಾಸ್ ಪ್ರಾಂತ್ಯದೊಳಗೇ ಏಕರೂಪದ್ದಾಗಿರಲಿಲ್ಲ ಎನ್ನುವುದು ಇದರಿಂದ ಸ್ಪಷ್ಟವಾಗುತ್ತದೆ.

* ಮುಖ್ಯಸ್ಥರು, ಇತಿಹಾಸ ವಿಭಾಗ, ಎಂ.ಜಿ.ಎಂ. ಕಾಲೇಜು, ಉಡುಪಿ

೧೮೧೨ರ ರೆಗ್ಯುಲೇಶನ್ ೧, ದಕ್ಷಿಣಕನ್ನಡದಲ್ಲಿ ಶೇ. ೬ ರ ಪಟ್ಟಣಸುಂಕದ ಬದಲಾಗಿ ಶೇ ೫ರ ಒಳನಾಡು ಸಾಗಾಟ ತೆರಿಗೆಯನ್ನು ಧಾನ್ಯ, ಹತ್ತಿ ಮತ್ತು ಹತ್ತಿಯ ನೂಲು ಹೊರತಾಗಿ ಉಳಿದೆಲ್ಲ ವ್ಯಾಪಾರದ ಸರಕುಗಳ ಮೇಲೆ ಹೇರಿತ್ತು. ಅಂತೆಯೇ ೧೮೧೨ರ ರೆಗ್ಯುಲೇಶನ್ ೨ರ ಅನ್ವಯ ಕೆನರಾ ಮತ್ತು ಮಲಬಾರ್‌ನಿಂದ ಸಮುದ್ರ ಮುಖಾಂತರ ರಫ್ತಾಗುವ ಕೆಲವು ಸರಕುಗಳ ಮೇಲೆ ಶೇ. ೮ರ ರಫ್ತು ಸುಂಕ ಮತ್ತು ವೀಳ್ಯದೆಲೆ, ಹೊಗೆಸೊಪ್ಪು, ಗಾಂಜಾ, ಅಫೀಮುಗಳ ಮೇಲೆ ಹೆಚ್ಚಿನ ಅನುಭೋಗ ತೆರಿಗೆಯನ್ನು ವಿಧಿಸಿತ್ತು. ೧೮೧೨ರ ಈ ಸುಂಕ ನಿಯಮಾಮಳಿಗಳಿಂದ ಈ ಜಿಲ್ಲೆಯ ವರ್ತಕರು ಬಹಳಷ್ಟು ಸಂಕಷ್ಟಗಳಿಗೆ ಒಳಗಾದರೆನ್ನುವುದು ಇಲ್ಲಿನ ಜಿಲ್ಲಾ ಕಲೆಕ್ಟರನ ಮುಖಾಂತರ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ ಮತ್ತು ತನ್ಮೂಲಕ ಸರಕಾರಕ್ಕೆ ಅವರು ಸಲ್ಲಿಸಿದ ದೂರು ಅರ್ಜಿಗಳಿಂದ ತಿಳಿದು ಬರುತ್ತದೆ.

೧೮೧೨ರ ಸೆಪ್ಟಂಬರ್ ೧೧ರಂದು ಮಂಗಳೂರಿನ ೨೪ ವ್ಯಾಪಾರಿಗಳು ಮತ್ತು ಇಬ್ಬರು ದಲ್ಲಾಳಿಗಳು ಸಲ್ಲಿಸಿದ ದೂರು ಅರ್ಜಿಯಲ್ಲಿ ಮರು ರಫ್ತಿನ ಕಾಲಮಿತಿ ಕುರಿತ ಆತಂಕ ಪ್ರಧಾನ ಅಂಶವಾಗಿತ್ತು. ಮಲಬಾರ್ ಮತ್ತು ಕೆನರಾದಲ್ಲಿ ಒಂದು ಬಂದರದಿಂದ ಇನ್ನೊಂದಕ್ಕೆ ವ್ಯಾಪಾರದ ಸರಕುಗಳನ್ನು ಸಾಗಿಸಲಾಗುತ್ತಿತ್ತು.[೫] ಈ ಹೊಸ ರೆಗ್ಯುಲೇಶನ್‌ನಂತೆ, ಒಮ್ಮೆ ರಫ್ತು ಸುಂಕ ಪಾವತಿಸಿ, ೧೫ ದಿನಗಳೊಳಗೆ ಇನ್ನೊಂದು ಬಂದರಕ್ಕೆ ಮರು-ರಫ್ತು ಮಾಡಿದಲ್ಲಿ ಪುನಃ ತೆರಿಗೆಯನ್ನು ತೆರಬೇಕಾಗಿಲ್ಲ. ಆದರೆ ೧೫ ದಿನಗಳ ಬಳಿಕ ಮರು-ರಫ್ತು ಮಾಡುವುದಾದಲ್ಲಿ ಪುನಃ ರಫ್ತು ಸುಂಕವನ್ನು ತೆರಬೇಕಿತ್ತು. ವಿದೇಶೀ ವ್ಯಾಪಾರಿಗಳು ಯಾವಾಗ ಬರುವರೆಂದು ತಿಳಿದಿಲ್ಲ, ಎಷ್ಟು ದಿನ ಇರುವರೆಂದೂ ತಿಳಿದಿಲ್ಲ. ಅರಬ್ಬೀಸ್ಥಾನ, ಮುಂಬಯಿ ಮತ್ತು ಮಲಬಾರ್‌ಗಳಿಂದ ಮಂಗಳೂರು ಬಂದರುಗಳಿಗೆ ಈ ಬಂದರುಗಳಿಗೆ ವ್ಯಾಪಾರಿಗಳು ಬರುತ್ತಾರೆ. ಸರಕುಗಳ ಬೆಲೆ ಕಡಿಮೆಯಾದಾಗ ಇಲ್ಲಿನ ವ್ಯಾಪಾರಿಗಳು ಇವುಗಳನ್ನು ಕೊಂಡು, ಸುಂಕನೀಡಿ, ಮಂಗಳೂರಿಗೆ ತಂದು ಪರಿಶೀಲನೆಯ ಬಳಿಕ ದಾಸ್ತಾನು ಮಾಡುತ್ತಾರೆ. ಮರು ರಫ್ತಿನ ಸಮಯ ಮಿತಿ (೧೫ದಿನ) ಮೀರಿದಲ್ಲಿ ಮರು-ರಫ್ತು ಸುಂಕ ನೀಡಬೇಕಾಗುತ್ತದೆ. ಇದರಿಂದ ವ್ಯಾಪಾರಿಗಳಿಗೆ ನಷ್ಟವಾಗುತ್ತದೆ." ಎಂಬುದಾಗಿ ವರ್ತಕರು ಅರ್ಜಿ ಸಲ್ಲಿಸಿದ್ದರು. ಇದಕ್ಕೆ ಸ್ಪಂದಿಸಿದ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ಕೆನರಾದ ಕಲೆಕ್ಟರನಿಗೆ ಅದೇ ಸೆಪ್ಟೆಂಬರ್ ೨೯ರಂದು ಬರೆದ ಪತ್ರದಲ್ಲಿ ೧೫ ದಿನಗಳ ಮಿತಿಯನ್ನು ೩ ತಿಂಗಳುಗಳಿಗೆ ವಿಸ್ತರಿಸಿ, ಕಲೆಕ್ಟರನು ಇಚ್ಛಿಸಿದಲ್ಲಿ ಮತ್ತೆ ೩ ತಿಂಗಳಿಗೆ ವಿಸ್ತರಿಸಬಹುದೆಂದು ಆದೇಶ ನೀಡಿತು.[೬] ಮೇಲ್ನೋಟಕ್ಕೆ ಇದು ವ್ಯಾಪಾರಿಗಳ ವಿಜಯ ಅನ್ನಿಸಿದರೂ, ಸರಕಾರ ನೀಡಿದ ರಿಯಾಯಿತಿಗೆ ಅದರ ಸ್ವಾರ್ಥವೂ ಕಾರಣವಾಗಿತ್ತು ಅನ್ನುವುದನ್ನು ಇಲ್ಲಿ ಗಮನಿಸಬೇಕು. ವರ್ತಕರ ಅಸಮಾಧಾನದ ಸುಳಿವು ಮೊದಲೇ ಸಿಕ್ಕಿದ್ದ ಸಮುದ್ರ ಸುಂಕಾಧಿಕಾರಿ ಇ.ಪಿ ಬ್ಲೇಕನು, ಸೆಪ್ಟೆಂಬರ್ ೭ರಂದೇ (ಅಂದರೆ ವರ್ತಕರು ಅರ್ಜಿ ಸಲ್ಲಿಸುವ ೪ ದಿನಗಳ ಮುಂಚೆಯೇ) ಹೊಸನಿಯಮಾವಳಿಗಳಿಗೆ ವ್ಯಾಪಾರಿಗಳ ವಿರೋಧದಿಂದಾಗಿ ಕರಾವಳಿಯ ಮಾರುಕಟ್ಟೆಯಲ್ಲಿ ವ್ಯವಹಾರಕ್ಕೆ ಅಡಚಣೆಯುಂಟಾಗಿದೆ. ತೆಂಗಿನಕಾಯಿ ಮತ್ತು ಇತರ ಬೆಳೆಗಳು ಮಾರಾಟವಾಗದೆ, ರೈತರಿಗೆ ಭೂಕಂದಾಯ ನೀಡಲೂ ಸಾಧ್ಯವಾಗುತ್ತಿಲ್ಲ ಎಂಬ ಆತಂಕವನ್ನು ಬೋರ್ಡ್ ಆಫ್ ರೆವಿನ್ಯೂಗೆ ಬರೆದ ಪತ್ರದಲ್ಲಿ ವ್ಯಕ್ತಪಡಿಸಿದ್ದ.[೭] ಕಂಪೆನಿ ಸರಕಾರದ ಆಡಳಿತದಲ್ಲಿ ಕಂದಾಯ ಸುಂಕ ವಸೂಲಾತಿಗೆ ಸಂಬಂಧಿಸಿದಂತೆ ಅಧಿಕಾರಿಗಳು ಎಷ್ಟು ತ್ವರಿತವಾಗಿ ಕಾರ್ಯ ನಿರ್ವಹಿಸುತ್ತಿದ್ದರು ಅನ್ನುವುದಕ್ಕೆ ಇದು ಸಾಕ್ಷಿ.

ಇದರ ಮರುವರ್ಷ ಅಂದರೆ ೧೮೧೩ರ ಅಕ್ಟೋಬರ್ ೧೮ರಂದು ಮಂಗಳೂರಿನ ವ್ಯಾಪಾರಿಗಳು ಈ ಸುಂಕ ನಿಯಮಾವಳಿಗಳಿಂದಾಗುವ ಅನೇಕ ಸಂಕಷ್ಟಗಳನ್ನು ಈ ಕೆಳಗಿನಂತೆ ಪಟ್ಟಿಮಾಡಿ, ಜಿಲ್ಲಾ ಮ್ಯಾಜಿಸ್ಟ್ರೇಟ್ ಎ. ವಿಲ್ಸನ್ ಎಂಬಾತನಿಗೆ ದೂರು ಅರ್ಜಿ ಸಲ್ಲಿಸಿದ್ದರು.[೮]

೧. ಸಮುದ್ರ ಮುಖಾಂತರ ಆಮದಾದ ಎಲ್ಲಾ ಸರಕುಗಳ ಮೇಲೂ ಶೇ ೮ರ ಸುಂಕವಲ್ಲದೆ, ಮುಂಬೈಯಲ್ಲಿ ತೆರಬೇಕಾದ ಶೇ. ೫ರ ಹೆಚ್ಚುವರಿ ಸುಂಕದ ಹೊರೆ.

೨. ಸರಕುಗಳ ಹೆಚ್ಚುವರಿ ಮೌಲ್ಯಮಾಪನದಿಂದಾಗಿ ಹೆಚ್ಚಿನ ತೆರಿಗೆ.

೩ ಮೊಹರು ಹಚ್ಚಿದ ಸರ್ಟಿಫಿಕೇಟಿಗೆ ಅರ್ಧ ರೂಪಾಯಿಯ ಹೆಚ್ಚಿನ ಕರಭಾರ.

೪. ಏಲಕ್ಕಿ ಮತ್ತು ಕಾಳುಮೆಣಸು, ಚೈನಾ ಪೇಪರು ಮತ್ತು ಸೂರತ್‌ನ ಬಟ್ಟೆಗಳಿಗೆ ಸುಂಕದ ಕಛೇರಿಯಲ್ಲಿ ನಿಗದಿಪಡಿಸುವ ಬೆಲೆ, ಮಾರುಕಟ್ಟೆ ಧಾರಣೆಗಿಂತ ದುಪ್ಪಟ್ಟು, ಅಥವಾ ಅದಕ್ಕಿಂತ ಹೆಚ್ಚಾಗಿರುತ್ತಿತ್ತು. ಏಲಕ್ಕಿಗೆ ಬಜಾರ್ ಬೆಲೆ ಖಂಡಿಯೊಂದಕ್ಕೆ (೧ ಖಂಡಿ = ೨೦ ಮಣ) ರೂ ೫೦೦-೫೨೦. ಆದರೆ ಸುಂಕ ಕಛೇರಿ ಬೆಲೆ ಖಂಡಿಯೊಂದಕ್ಕೆ ರೂ ೧೨೦೦; ಕಾಳುಮೆಣಸಿಗೆ ಬಜಾರ್ ಧಾರಣೆ ಖಂಡಿಯೊಂದಕ್ಕೆ ರೂ. ೪೦-೪೨; ಸುಂಕದ ಕಛೇರಿಯಲ್ಲಿ ಖಂಡಿಯೊಂದಕ್ಕೆ ರೂ. ೧೧೫; ಚೀನಾ ಪೇಪರಿಗೆ ಮಾರುಕಟ್ಟೆಯಲ್ಲಿ ಪೆಟ್ಟಿಗೆಯೊಂದರ ಬೆಲೆ ರೂ. ೪೨, ಆದರೆ ಸುಂಕದ ಕಛೇರಿಯಲ್ಲಿ ರೂ. ೧೦೦. ಸೂರತ್‌ನ ಬಟ್ಟೆಗೆ ಬಜಾರಿನಲ್ಲಿ ಕೋಲೊಂದರ ಬೆಲೆ ರೂ ೪, ಆದರೆ ಸುಂಕದ ಕಛೇರಿಯಲ್ಲಿ ರೂ. ೬.[೯] ಬೆಲೆಯಾಧಾರಿತ ಸುಂಕ ನಿಗದಿಯಿಂದಾಗಿ ಸಹಜವಾಗಿಯೇ ಸುಂಕದಲ್ಲಿ ಏರಿಕೆಯಾಗಿತ್ತು.

೫. ಮುಂಬೈನಿಂದ ಆಮದಾಗುವ ಎಲ್ಲಾ ಸರಕುಗಳಿಗೂ ಹೆಚ್ಚು ಮೌಲ್ಯಮಾಪನ ಮಾಡಲಾಗುತ್ತಿದ್ದು, ಅವುಗಳ ಮೇಲೆ ಶೇ ೫ರ ಸುಂಕ ವಿಧಿಸಲಾಗುತ್ತಿತ್ತು.

೬. ಮಲಬಾರಿನಿಂದ ಆಮದಿತ ಸರಕುಗಳಿಗೂ ಮರು ಮರು ಮೌಲ್ಯಮಾಪನ ಮಾಡಲಾಗುತ್ತಿದ್ದು, ಅದು ಮೊದಲಿಗಿಂತ ಹೆಚ್ಚೇ ಆಗಿರುತ್ತಿತ್ತು. ಮಲಬಾರಿನಲ್ಲಿ ಸುಂಕ ಪಾವತಿಸಿದ್ದರೂ, ಹೆಚ್ಚುವರಿ ಮೌಲ್ಯಮಾಪನದಿಂದಾಗಿ ಮತ್ತೆ ಸುಂಕ ಪಾವತಿಸ ಬೇಕು. ಈ ಎರಡೂ ಪ್ರದೇಶಗಳು ಒಂದೇ ಸುಂಕಾಧಿ ಕಾರಿಯ ಕಕ್ಷೆಗೊಳಪಟ್ಟಿದ್ದು, ಮರು ಸುಂಕ ಪಾವತಿ ಅನವಶ್ಯ ಮತ್ತು ಸುಲಿಗೆ.

೯. ಮಂಗಳೂರಿನಲ್ಲಿದ್ದ ಸುಂಕ ಕಛೇರಿಯ ಸ್ಥಳೀಯ ಮೇನೇಜ ರನು ವರ್ತಕರನ್ನು ಅತ್ಯಂತ ಕೆಟ್ಟದ್ದಾಗಿ, ಅಗೌರವದಿಂದ ನಡೆಸಿಕೊಳ್ಳುತ್ತಿದ್ದಾನೆ.[೯]

೧ ಗಳಿಗೆಯಲ್ಲಾಗುವ (galgee = 24 minutes) ಕೆಲಸಕ್ಕೆ ೨-೩ ದಿನಗಳನ್ನು ತೆಗೆದುಕೊಂಡು ವ್ಯಾಪಾರಿಗಳು ಅನವಶ್ಯವಾಗಿ ಕಾಯುವಂತೆ ಮಾಡುತ್ತಿದ್ದಾನೆ[೧೦]. ಈ ಅರ್ಜಿಯಲ್ಲಿ ಒಟ್ಟು ೧೬ ವ್ಯಾಪಾರಿಗಳ ಸಹಿ ಇದೆ. ಉಳಿದ ಕೆಲವು ವ್ಯಾಪಾರಿಗಳ ಸಹಿಗಳನ್ನು ಲಗತ್ತಿಸಲಾದ ಪ್ರತ್ಯೇಕ ಅರ್ಜಿಯನ್ನು ೨ ದಿನಗಳ ಬಳಿಕ, ಅಂದರೆ ಅಕ್ಟೋಬರ್ (೧೮೧೩) ೧೮ರಂದು ಸಲ್ಲಿಸಲಾಗಿತ್ತು.[೧೧]

Native Manager. It is not proper that
the Merchants should be disrespectfully
treated and the Boats detained. When
the Merchants represent to the Native
Manager that they sustain losses from
this, he answers that, "If you will
not come, your Brother will, if he
pleases," he does not regard the Character
of the Merchants who are come from
other Ports. In all the British Ports,
the Merchants are respectfully treated,
but as the Native Manager of Mangalore
disrespects the Merchants and treats [illegible]
disrespectfully.

೭. ಒಂದೇ ಹಡಗಿನಲ್ಲಿ ಎಲ್ಲ ಸರಕುಗಳನ್ನು ತುಂಬಿಕೊಂಡು ತಂದರೂ, ವಿವಿಧ ದಿನಗಳಂದು ಕೊಂಡುಕೊಂಡ ಸರಕು ಗಳಿಗೆ ಪ್ರತ್ಯೇಕವಾಗಿ ಸರ್ಟಿಫಿಕೇಟುಗಳು, ಬೇರೆಯೇ ಸ್ಟಾಂಪ್ ಪೇಪರ್‌ಗಳು ಮತ್ತು ಪ್ರತ್ಯೇಕವಾಗಿ ಸುಂಕಗಳನ್ನು ತೆರಬೇಕಾಗಿದೆ.

೮. ಒಮ್ಮೆ ರಫ್ತು ಸುಂಕ ಪಾವತಿಸಿದರೂ, ಸಾಗಾಟದಲ್ಲಾದ ವಿಳಂಬಕ್ಕೆ ಮತ್ತೆ ಸುಂಕವನ್ನು ಪಾವತಿಸಬೇಕು.

೧೯ರಂದೇ ಅಂದರೆ ಮರುದಿನವೇ ಜಿಲ್ಲಾ ಮ್ಯಾಜಿಸ್ಟ್ರೇಟನು ಇದನ್ನು ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂಗೆ ಕಳುಹಿಸಿದ ಬಗ್ಗೆ ದಾಖಲೆಯಿದೆ.[೧೨] ಇಂತಹ ೩ ದೂರು ಅರ್ಜಿಗಳು ಬಂದಿದ್ದುವು ಎಂಬುದು ಆತ ಸರಕಾರದ ಕಾರ್ಯದರ್ಶಿಗೆ ಬರೆದ ಅಕ್ಟೋಬರ್ ೧೯ರ ಪತ್ರದಿಂದ ತಿಳಿಯುತ್ತದೆ.[೧೩]

ಸರಕಾರದ ಕಾರ್ಯದರ್ಶಿ, ಡಿ.ಹಿಲ್ ಎಂಬಾತನು ಫೋರ್ಟ್ ಸೈಂಟ್ ಜಾರ್ಜ್‌ನಿಂದ, ೧೮೧೩ರ ನವೆಂಬರ್ ೯ ರಂದು ಬೋರ್ಡ್ ಆಫ್ ರೆವಿನ್ಯೂಗೆ ಬರೆದ ಪತ್ರ ಮತ್ತು ಅಲ್ಲಿಂದ

Fort St. George 1st November 18[illegible]

petition on the subject of [illegible] by us for the [illegible] from the [illegible] Departments, which we request may be forwarded to His Excellency the Governor in Council of Fort St. George, and [illegible] that we may not suffer any hardships from [illegible].

(Signed) [illegible] (Signed) [illegible]

[illegible]

(True Translation)

(Signed) A. Wilson

ಅದೇ ನವೆಂಬರ್ ೧೮ ರಂದು ಬೋರ್ಡ್ ಆಫ್ ಟ್ರೇಡ್‌ನಿಂದ ಸಮುದ್ರ ಸುಂಕಾಧಿಕಾರಿಗೆ ಬಂದ ಪತ್ರಗಳು ಸರಕಾರವು ವರ್ತಕರ ದೂರುಗಳಿಗೆ ಸ್ಪಂದಿಸಿದ್ದನ್ನು ತಿಳಿಸುತ್ತವೆ.[೧೪] "ಕೆನರಾ ಮತ್ತು ಮಲಬಾರಿನಲ್ಲಿ ಈಗಿರುವ ಸುಂಕದ ದರ ಹೆಚ್ಚಾಗಿರುವುದು ನಿಜ. ಅದನ್ನು ನಿಗದಿ ಪಡಿಸುವಾಗ ಅದು ನ್ಯಾಯೋಚಿತವೆನ್ನಿಸಿದರೂ, ಈಗಿನ ವ್ಯಾಪಾರದ ಸ್ಥಿತಿ ವಾಣಿಜ್ಯದಲ್ಲಾದ ಇಳಿತ ಹಾಗೂ ಪ್ರಮುಖ ರಫ್ತು ಸರಕುಗಳ ಧಾರಣೆಯಲ್ಲಿ ಕುಸಿತ ಇವುಗಳನ್ನೆಲ್ಲ ಪರಿಗಣಿಸಿ, ೧೮೦೮ರ ರೆಗ್ಯುಲೇಶನ್ನಿನ ೧೭ನೇ ಸೆಕ್ಷನ್ನಿನ ನಿಯಮಾವಳಿಗಳನ್ನು ಈ ಜಿಲ್ಲೆಯ ಪ್ರಮುಖ ರಫ್ತು ಸರಕುಗಳಿಗೆ ಅನ್ವಯಿಸಬೇಕು."[೧೫]

"ವ್ಯಾಪಾರ ಸುಂಕಪಟ್ಟಿಯಲ್ಲಿ (Tariff) ನಮೂದಿತ ಬೆಲೆ ಆಧಾರಿತ ಸುಂಕದ ಮಾರುಕಟ್ಟೆಯ ಧಾರಣೆಯನ್ನಾಧರಿಸಿ ಸುಂಕ ನಿಗದಿಗೊಳಿಸಬೇಕು" ಎನ್ನುವುದು ಸರಕಾರದ ಆದೇಶವಾಗಿತ್ತು.[೧೬] "ಉಳಿದೆಲ್ಲ ವಿಷಯಗಳಿಗೆ ಸಂಬಂಧಿಸಿದಂತೆ ಪುನಃ ಮನವಿ ಮಾಡದೆ ತಕ್ಷಣ ಆ ಪದ್ಧತಿಗಳನ್ನು ನಿಲ್ಲಿಸಬೇಕು." ಎಂದೂ ಸೂಚಿಸಲಾಗಿತ್ತು.[೧೭] ಚಾಲ್ತಿಯಲ್ಲಿದ್ದ ಶೇ ೮ ರ ಸುಂಕ ಹೆಚ್ಚೆಂದು ಒಪ್ಪಿಕೊಂಡರೂ, ಕಂಪೆನಿ ಸರಕಾರ ಅದನ್ನು ಕಡಿಮೆಮಾಡಲಿಲ್ಲ. ಅಂದರೆ ಮುಖ್ಯ ಸಮಸ್ಯೆಯನ್ನು ಪರಿಪರಿಸಲಿಲ್ಲ. ಮಾತ್ರವಲ್ಲ, "ಇಂತಹ ಪ್ರಕರಣಗಳಲ್ಲಿ ಸರಕಾರದ ಆದಾಯಕ್ಕಾಗುವ ಲಾಭ, ವ್ಯಕ್ತಿಯ ನಷ್ಟಕ್ಕಿಂತ ಕಡಿಮೆ ಇದ್ದಲ್ಲಿ ಅಥವಾ ವ್ಯಕ್ತಿಯ ನಷ್ಟಕ್ಕನುಗುಣವಾಗಿ ಸರಕಾರಕ್ಕೆ ಲಾಭ ಇಲ್ಲದಿದ್ದಲ್ಲಿ, ಜನರ ಹಿತಾಸಕ್ತಿಗಳಿಗೆ ಗಮನ ನೀಡಬೇಕು" ಎಂದು ಆದೇಶ ನೀಡಿರುವುದೂ ಗಮನಾರ್ಹ[೧೮].

## ಉಡುಪಿ ಕೃಷ್ಣಮಠದ ಅರ್ಜಿ (೧೮೧೫)

ಉಡುಪಿ ಕೃಷ್ಣಮಠದ ಅರ್ಚಕ (?) (ಮೂಲ ದಾಖಲೆಯಲ್ಲಿ Priest ಎಂದಿದೆ. ದೇವಳದ ಪಾರುಪತ್ಯದಾರರಿರಬಹುದು) ನಾರಾಯಣಾಚಾರ್ಯ ಎಂಬುವರು ದೇವಳದ ದಿನಬಳಕೆಯ ವಸ್ತುಗಳಿಗೆ ಸುಂಕ ವಿನಾಯತಿ ಕೋರಿ ಸರಕಾರಕ್ಕೆ ಅರ್ಜಿ ಸಲ್ಲಿಸಿದ್ದರು. ೧೮೧೫ರ ಜನವರಿ ೨೦ ರಂದು ಬೋರ್ಡ್ ಆಫ್ ರೆವಿನ್ಯೂದ ಕಾರ್ಯದರ್ಶಿ ಬರೆದ ಪತ್ರಕ್ಕೆ ಕೆನರಾದ ಕಲೆಕ್ಟರ್ ಅಲೆಕ್ಸಾಂಡರ್ ರೀಡನು ಅದೇ ಫೆಬ್ರವರಿ ೧೫ ರಂದು ಉತ್ತರಿಸಿದ ಪತ್ರದಲ್ಲಿ ಈ ಕೆಳಗಿನ ಮಾಹಿತಿ ಇದೆ. "ತನಗೂ ಈ ಹಿಂದೆ ಇಂತಹ ಅರ್ಜಿಯೊಂದು ಬಂದಿದ್ದು, ೧೮೧೨ರ ೧೪ ರಂದು ಈ ವಿಷಯವನ್ನು ಬೋರ್ಡ್ ಆಫ್ ರೆವಿನ್ಯೂ ಗಮನಕ್ಕೆ ತರಲಾಗಿತ್ತು. ಆಗ ಅದನ್ನು ಬೋರ್ಡ್ ತಿರಸ್ಕರಿಸಿತ್ತು. ಅದನ್ನು ಅರ್ಜಿದಾರರಿಗೂ ತಿಳಿಸಲಾಗಿತ್ತು. ನಾರಾಯಣಾಚಾರ್ಯರ ಅರ್ಜಿಯಲ್ಲಿ, ದೇವಳದಲ್ಲಿ ದಿನನಿತ್ಯದ ಊಟ ಮಾಡುವ ಭಕ್ತರ ಸಂಖ್ಯೆಯನ್ನು ಅತಿಶಯಗೊಳಿಸಿರಬಹುದು. ಉಡುಪಿ ದೇವಳದಲ್ಲಿ ನಿತ್ಯದ ಊಟಕ್ಕಾಗಿ ಬಳಸುವ ವಸ್ತುಗಳಿಗೆ ಖಂಡಿತವಾಗಿಯೂ ಹೆಚ್ಚು ಖರ್ಚಿದೆ. ಅದಕ್ಕೆ ತಾನೇ ಪ್ರತ್ಯಕ್ಷದರ್ಶಿಯಾಗಿದ್ದೆ. ಅವುಗಳನ್ನು ಸಂಗ್ರಹಿಸಿಡುವ ಉಗ್ರಾಣಗಳು ಹಾಗೂ ಅಡುಗೆಯ ಕೋಣೆಗಳು ದೊಡ್ಡದಾಗಿವೆ. ದಿನನಿತ್ಯ ಸರಾಸರಿ ೧೨೦೦ ಜನರಿಗೆ ಹಾಗೂ ವಿಶೇಷ ಉತ್ಸವಗಳಂದು ಸುಮಾರು ೨೫,೦೦೦ ಜನರಿಗೆ ನಿರಂತರ ೮ ದಿನಗಳಲ್ಲಿ ಭೋಜನ ನೀಡಲಾಗುತ್ತಿದೆ. ಇದು ಬರೇ ಬ್ರಾಹ್ಮಣರಿಗಷ್ಟೇ ಸೀಮಿತವಾಗಿಲ್ಲ. ಬೇರೆ ಜಾತಿಯ ಬಡ ಜನರೂ ಇದನ್ನು ಪಡೆಯುತ್ತಾರೆ. ಇದೇ ಪದ್ಧತಿ ಗೋಕರ್ಣ, ಧರ್ಮಸ್ಥಳ ಮತ್ತು ಸುಬ್ರಹ್ಮಣ್ಯ ದೇವಸ್ಥಾನಗಳಲ್ಲೂ ಇದೆಯಾದರೂ, ಅದಕ್ಕಾಗಿ ಅವುಗಳು, ಸರಕಾರ ನೀಡುವ ಭತ್ಯೆ (allowance) ಗಿಂತ ಕಡಿಮೆ ಖರ್ಚು ಮಾಡುತ್ತವೆ. ಉಡುಪಿ ಮಠಕ್ಕೆ ಅವುಗಳಿಗಿಂತ ಹೆಚ್ಚಿನ ಧಾರ್ಮಿಕ ಮಹತ್ವ, "from the superior sanctity attached to the place" ಇರುವುದರಿಂದ ದೇಶದ ಬೇರೆ ಬೇರೆ ಭಾಗಗಳಿಂದ ಇಲ್ಲಿಗೆ ಯಾತ್ರಾರ್ಥಿಗಳು ಬರುತ್ತಾರೆ. ಇಲ್ಲಿನ ಸನ್ಯಾಸಿಗಳು ತಮ್ಮ ಸಂಚಾರದಲ್ಲಿ ಮತ್ತು ಸ್ಥಳೀಯರಿಂದ ಸಂಗ್ರಹಿಸಿದ ವಂತಿಗೆಗಳಿಲ್ಲದಿದ್ದರೆ, ಇವುಗಳ ಖರ್ಚನ್ನು ತೂಗಿಸಲು ಸಾಧ್ಯವಿಲ್ಲ. ಈ ದೇವಳಕ್ಕೆ ಸರಕಾರದ ಭತ್ಯೆ ವಾರ್ಷಿಕ ಸ್ಟಾರ್ ಪಗೋಡಾ ೨೪೦೦ (೧ ಸ್ಟಾರ್ ಪಗೋಡಾ = ೩ ೧/೨ ರೂ)"[೧೯]

ಕಲೆಕ್ಟರನು ಬೋರ್ಡ್ ಆಫ್ ರೆವಿನ್ಯೂಗೆ ಬರೆದ ಪತ್ರದಲ್ಲಿ ಸರಕಾರವು ನೀಡಬಹುದಾದ ಎರಡು ರೀತಿಯ ಸಹಾಯದ ಬಗ್ಗೆ ಹೀಗೆ ಸಲಹೆ ನೀಡಿದ್ದ :

೧) ದೇವಳದ ಬಳಕೆಗೆ ಬೇಕಾದ ನಿಮಿತ ಪ್ರಮಾಣದ ವಸ್ತುಗಳ ಮೇಲಿನ ಸುಂಕ ವಿನಾಯತಿ. ಅಥವಾ ೨) ಅವುಗಳ ಮೌಲ್ಯಕ್ಕನುಗುಣವಾಗಿ ಸರಕಾರದ ಸಹಾಯಧನವನ್ನು ಹೆಚ್ಚಿಸುವುದು. ದೇವಳಕ್ಕೆ ಬೇಕಾದ ವಸ್ತುಗಳ ಮೇಲೆ ಹೇರಿದ ಸುಂಕಗಳ ಪ್ರತ್ಯೇಕ ಪಟ್ಟಿ ಇಲ್ಲದ್ದರಿಂದ ತಕ್ಷಣಕ್ಕೆ ಅದನ್ನು ನಿಶ್ಚಯಿಸುವುದೂ ಸಾಧ್ಯವಿಲ್ಲ. ದೇವಳವು ನೀಡಿರುವ ಪಟ್ಟಿಯಲ್ಲಿರುವ ವಸ್ತುಗಳೆಂದರೆ ತೆಂಗಿನಕಾಯಿ, ಎಣ್ಣೆ, ತುಪ್ಪ, ಬೆಲ್ಲ, ಜೇನು, ತೆಂಗಿನೆಣ್ಣೆ, ಹುಣಸೆ ಹುಳಿ, ಮೆಣಸು, ಕಾಳುಮೆಣಸು ಅರಿಶಿನ, ಶುಂಠಿ, ಎಳ್ಳು, ಸಾಸಿವೆ, ಜೀರಿಗೆ, ಮೆಂತೆ, ಗಸಗಸೆ, ಶ್ರೀಗಂಧ, ಹುರಿಹಗ್ಗ, ಕಬ್ಬಿಣ, ಏಲಕ್ಕಿ, ವೀಳ್ಯದೆಲೆ, ಅಡಿಕೆ ಇತ್ಯಾದಿ; ಬೋರ್ಡ್ ಈ ಕುರಿತು ವಿನಾಯತಿ ನೀಡಬೇಕೆ ಅಥವಾ ಸಹಾಯಧನ ಹೆಚ್ಚಿಸಬೇಕೆ? ಎಂದು ನಿಶ್ಚಯಿಸಬೇಕು. ಈಗಾಗಲೇ ಅವರು ಪಾವತಿಸಿದ ಸುಂಕವನ್ನು ಮರಳಿಸಬೇಕಿಲ್ಲ" ಎಂದೂ ತನ್ನ ಅಭಿಪ್ರಾಯವನ್ನು ತಿಳಿಸಿದ್ದಾನೆ.[೨೦]

ಮೇಲಿನ ಅರ್ಜಿಗೆ ಸಂಬಂಧಿಸಿದಂತೆ ಬೋರ್ಡ್ ಆಫ್ ರೆವಿನ್ಯೂದ ಕಾರ್ಯದರ್ಶಿಯು ಸರಕಾರದ ಕಾರ್ಯದರ್ಶಿಗೆ ಬರೆದ ೨೦-೪-೧೮೧೫ ರ ಪತ್ರದಲ್ಲಿ ಬೋರ್ಡಿನ ಅಭಿಪ್ರಾಯ ಈ ರೀತಿಯಾಗಿ ವ್ಯಕ್ತವಾಗಿದೆ: "ಯಾವುದೇ ದೇವಳದ ಪೂರೈಕೆಗಳಿಗೆ ಸುಂಕ ವಿನಾಯತಿ ನೀಡುವುದು ಸುಂಕಾಧಿಕಾರದ ದುರುಪಯೋಗಕ್ಕೆ ಕಾರಣವಾಗಬಹುದು. ಆದ್ದರಿಂದ ಬೇರಾವುದೇ ದೇವಳಕ್ಕೆ ಸುಂಕ ವಿನಾಯತಿ ನೀಡದೆ, ಉಡುಪಿ ದೇವಳಕ್ಕೆ ಮಾತ್ರ ನೀಡಲಾಗುವುದಿಲ್ಲ. ಸಹಾಯಧನ ಹೆಚ್ಚಿಸಬಹುದಾದರೂ, ಅದು ಅಗತ್ಯವೇ ಎಂದು ತಿಳಿದಿಲ್ಲ".[೨೧]

ಅಂದರೆ ಸುಂಕ ವಿಧಿಸುವಲ್ಲಿ ಮದ್ರಾಸ್ ಪ್ರಾಂತ್ಯದೊಳಗೇ ಏಕರೂಪತೆ ತರದ ಸರಕಾರ, ವಿನಾಯತಿಯ ಸಂದರ್ಭದಲ್ಲಿ ಕಲೆಕ್ಟರನ ಸಮರ್ಥನೆ ಇದ್ದರೂ, ಏಕರೂಪ ನೀತಿಯ ನೆಪವೊಡ್ಡಿ, ದೇವಳದ ಅಹವಾಲನ್ನು ತಿರಸ್ಕರಿಸಿತ್ತು.[೨೨]

ಒಟ್ಟಿನಲ್ಲಿ, ಮೇಲ್ಕಾಣಿಸಿದ ಪ್ರಕರಣಗಳಲ್ಲಿ, ಕಂಪೆನಿ ಸರಕಾರದ ಆಡಳಿತ ನೀತಿಗೆ ಸಂಬಂಧ ಪಟ್ಟಂತೆ ಕೆಲವು ಅಂಶಗಳನ್ನು ಹೀಗೆ ಪಟ್ಟಿ ಮಾಡಬಹುದು.

೧. ಪ್ರತಿಯೊಂದು ಅರ್ಜಿಯೂ ಸೂಕ್ತ ಅಧಿಕಾರಿಗಳ/ಕಛೇರಿಗಳ ಮುಖಾಂತರವೇ ಸರಕಾರಕ್ಕೆ ತಲುಪುತ್ತಿತ್ತು. ಸಂಬಂಧಪಟ್ಟ ಜಿಲ್ಲಾ ಕಲೆಕ್ಟರ್/ಮ್ಯಾಜಿಸ್ಟ್ರೇಟರಿಂದ ಬೋರ್ಡ್ ಆಫ್ ರೆವಿನ್ಯೂಗೆ ಅಲ್ಲಿಂದ ಬೋರ್ಡ್ ಆಫ್ ಟ್ರೇಡ್‌ಗೆ ಬಳಿಕ ಸರಕಾರಕ್ಕೆ ಮತ್ತು ಸರಕಾರದ ಕಾರ್ಯದರ್ಶಿಯಿಂದ ಜಿಲ್ಲಾಧಿಕಾರಿಗೆ ಇದೇ ವ್ಯವಸ್ಥೆಯಲ್ಲಿ ಸೂಕ್ತ ಸಲಹೆ/ಆದೇಶಗಳೊಂದಿಗೆ ವಾಪಾಸಾಗುತ್ತಿತ್ತು.

೨. ಈ ಎಲ್ಲ ಅಧಿಕಾರಿಗಳು ಮೇಲಧಿಕಾರಿಗಳಿಗೆ ಬರೆಯುತ್ತಿದ್ದ ಪತ್ರದ ಜತೆಗೆ ಮೂಲ ಅರ್ಜಿಯ ಪ್ರತಿಯನ್ನು ಲಗತ್ತಿಸಲಾಗುತ್ತಿತ್ತು.

೩. ಮೂಲ ಅರ್ಜಿಯಲ್ಲಿನ ಅತಿ ಸಣ್ಣ ವಿಷಯಗಳಿಗೂ ವಿವರ ನೀಡಲಾಗುತ್ತಿತ್ತು. (ಉದಾ: ೧ಗಳಿಗೆ ಅಂದರೆ ೨೪ ಮಿನಿಟುಗಳು ಎಂಬ ವಿವರಣೆ)

೪. ವ್ಯವಸ್ಥಿತವಾದ ಆಡಳಿತ ಕ್ರಮ ಹಾಗೂ ತ್ವರಿತವಾಗಿ ಅರ್ಜಿಗಳ ವಿಲೇವಾರಿ ಅಂದಿನ ಸಂಪರ್ಕ ಕೊರತೆಯ ದಿನಗಳಲ್ಲೂ ಜಿಲ್ಲಾ ವಿಭಾಗಾಧಿಕಾರಿ ಕಛೇರಿಯಿಂದ ಮದ್ರಾಸಿಗೆ, ಅಲ್ಲಿಂದ ಬೋರ್ಡ್ ಆಫ್ ರೆವಿನ್ಯೂ-ಬೋರ್ಡ್ ಆಫ್ ಟ್ರೇಡ್- ಸರಕಾರದ ಕಾರ್ಯದರ್ಶಿಗೆ ಮರಳಿ ಜಿಲ್ಲಾ ವಿಭಾಗ ಕಛೇರಿಗೆ, ಅರ್ಜಿಗಳ ಮತ್ತು ಆಡಳಿತ ನಿರ್ದೇಶನಗಳ ತ್ವರಿತ ರವಾನೆ ಗಮನಾರ್ಹ.

೫. ಸರಕಾರದ ಧೋರಣೆಗೆ ಸಂಬಂಧಪಟ್ಟಂತೆ ಗಮನಿಸುವುದಾದರೆ, ಅತಿ ಸೂಕ್ಷ್ಮ ವಿಚಾರಗಳ ಬಗೆಗೂ ಮಾಹಿತಿ ಕೇಳಿ, ತನಿಖೆ ನಡೆಸಿ ವಿವರವಾದ ವರದಿ ಬಯಸುವ ಸರಕಾರ, ತನ್ನ ಮೂಲ ಧ್ಯೇಯದಲ್ಲಿ ಬದಲಾವಣೆ ಮಾಡುವುದಿಲ್ಲ. ಎಲ್ಲಿ ಆದಾಯದಲ್ಲಿ ಕಡಿತವಾಗುವುದೋ ಅಲ್ಲಿ ವಿನಾಯತಿ ಇಲ್ಲ. ಆದಾಯದಲ್ಲಿ ಕಡಿತವಾಗದಂತೆ ವ್ಯಾಪಾರವನ್ನು ಸರಿದೂಗಿಸಲು, ವ್ಯಾಪಾರಿಗಳನ್ನು ಓಲೈಸಲು ಅಗತ್ಯ ಕ್ರಮಗಳನ್ನು ಅನುಷ್ಠಾನಿಸುವಂತೆ ಆದೇಶ ಇಲ್ಲ. ವ್ಯಾಪಾರಿಗಳ ಮತ್ತು ಜನರ ಅಭ್ಯುದಯ ಬಗೆಗಿನ ತೋರಿಕೆಯ ಸಾಂತ್ವನವೂ ಇದೆ.

೬. ಸಂಕಷ್ಟಕ್ಕೊಳಗಾದ ವ್ಯಾಪಾರಿಗಳು ತಾವು ವ್ಯಾಪಾರ ನಡೆಸುವುದಿಲ್ಲ ಎಂದು ನಿಯಮಾವಳಿಗಳನ್ನು ವಿರೋಧಿಸಿ, ಅಂತೆಯೇ ನಡೆದುಕೊಂಡಾಗ, ಭೂಕಂದಾಯ ಕಟ್ಟದೆ, ಸರಕಾರಕ್ಕೆ ಆದಾಯ ನಷ್ಟವಾಗುವುದನ್ನು ಗಮನಿಸಿ, ಕಂಪೆನಿ ಸರಕಾರ ತಕ್ಷಣ ಕಾರ್ಯಪ್ರವೃತ್ತವಾಯಿತೇ ಹೊರತು, ಜನರ ಆಶೋತ್ತರಗಳಿಗೆ ಪ್ರಾಮಾಣಿಕವಾಗಿ ಸ್ಪಂದಿಸಿಲ್ಲ.

೭. ವ್ಯಾಪಾರಿಗಳು ಸಹಿ ಹಾಕಿದ ಅರ್ಜಿಯಲ್ಲಿ ಕಾಣುವಂತೆ ಪಾರ್ಸಿ/ಗುಜರಾತಿ ವ್ಯಾಪಾರಿಗಳೇ ಜಾಸ್ತಿ. ನಂತರದ ಸ್ಥಾನ ಮುಸ್ಲಿಂ ವ್ಯಾಪಾರಿಗಳದು.

೮. ಹೊಸ ಸರಕಾರದ ಸುಂಕ ನೀತಿಯನ್ನು ವಿರೋಧಿಸುವ ಮೂಲಕ, ಜಿಲ್ಲೆಯ ವ್ಯಾಪಾರಿಗಳು ಕಂಪೆನಿ ಸರಕಾರದ ಆಡಳಿತ ಆರಂಭವಾಗಿ ಒಂದು ದಶಕದಲ್ಲೇ ಕಂಪೆನಿ ಸರಕಾರದ ಆಡಳಿತದ ವಿರುದ್ಧ ದನಿಯೆತ್ತಿದ್ದರು. ವಸಾಹತುಶಾಹೀ ಆಡಳಿತದ ವಿರುದ್ಧ ಈ ಜಿಲ್ಲೆಯಲ್ಲಿ ನಡೆದ ಪ್ರತಿಭಟನೆಗಳಲ್ಲಿ ವ್ಯಾಪಾರಿಗಳ ಧ್ವನಿಗಳು ಮಹತ್ವದ್ದಾಗಿದ್ದುವೆಂಬುದು ಗಮನಾರ್ಹ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಜೆ.ಜೆ. ರೇವನ್‌ಶಾ ನಿಂದ ಬೋರ್ಡ್ ಆಫ್ ರೆವಿನ್ಯೂಗೆ ತಾ ೨೫-೭-೧೮೦೨ರ ಪತ್ರ, ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ೧೬-೮-೧೮೦೨, ಸಂ ೩೨೪, ಪು. ೯೧೦೫.

೨. ಅದೇ ಪು. ೯೧೦೭.

೩. ಅಲೆಕ್ಸಾಂಡರ್ ರೀಡ್‌ನಿಂದ ವಿಲ್ಲಿಯಂ ಪೆಟ್ರೀಗೆ ತಾ. ೨೦-೩-೧೮೦೬ರ ಪತ್ರ, ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ೨೧-೩-೧೮೦೬, ಸಂ. ೪೨೪, ಪು. ೧೮೭೧.

೪. ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ೧೯-೯-೧೮೦೮, ಸಂ ೪೭೫, ಪು. ೮೫೮೪-೮೫೯೧.

೫. ಸೀ ಕಸ್ಟಮ್ಸ್ ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ತಾ ೨೯-೯-೧೮೧೨, ಸಂ. ೧೮, ಪು. ೧೧೫೭-೧೧೬೨.

೬. ಅದೇ, ಪು. ೧೧೬೭-೧೧೭೦.

೭. ಇ.ಪಿ. ಬ್ಲೇಕ್ ನಿಂದ ಬೋರ್ಡ್ ಆಫ್ ಟ್ರೇಡ್‌ಗೆ ಪತ್ರ - ಸೀ ಕಸ್ಟಂಮ್ಸ್ ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ತಾ. ೨೯-೯-೧೮೧೨, ಸಂ. ೧೮, ಪು. ೧೦೪೯.

೮. ಮಂಗಳೂರಿನ ವ್ಯಾಪಾರಿಗಳ ತಾ. ೧೮-೧೦-೧೮೧೩ರ ದೂರು ಅರ್ಜಿಯನ್ನು ಕೆನರಾದ ಕಲೆಕ್ಟರ್ ಎ. ವಿಲ್ಸನ್, ಫೋರ್ಟ್ ಸೈಂಟ್ ಜಾರ್ಜ್‌ನಲ್ಲಿನ ಸರಕಾರದ ಕಾರ್ಯದರ್ಶಿಗೆ ಕಳುಹಿಸಿದ ಪತ್ರ, ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ೧೨-೧೧-೧೮೧೩, ಸಂ. ೬೭೫, ಪು. ೧೧೮೦೪ - ೧೧೮೧೧.

೯. ಅದೇ ಪು. ೧೧೮೦೪ ೧೧೮೦೫
೯ಎ. ಅದೇ, ಪು, ೧೧೮೦೪ ೧೧೮೦೫

೧೦. ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ., ೧೨-೧೧-೧೮೧೩, ಸಂ. ೮೨೫, ಪು ೧೧೮೦೪-೧೧೮೧೧.

೧೧. ಅದೇ. ೧೨. ಅದೇ.

೧೩. ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ ೧೨-೧೧-೧೮೧೩, ಸಂ. ೬೨೪, ಪು. ೧೧೮೧೪.

೧೪. ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ೧೨-೧೧-೧೮೧೩, ಸಂ. ೬೨೪, ಪು. ೧೧೮೦೨; ಸೀ ಕಸ್ಟಂಮ್ಸ್ ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್, ರೆವಿನ್ಯೂ, ತಾ ೧೮-೧೧-೧೮೧೩, ಸಂ ೨೧, ಪು. ೧೪೮೩-೧೪೮೪.

೧೫. ೧೮೦೮ರ ರೆಗ್ಯುಲೇಶನ್ನಿನ ೧೭ನೇ ಸೆಕ್ಷನ್ನಿನ ನಿಯಮಾವಳಿಗಳನ್ವಯ ಆಮದಾದ/ರಫ್ತಾದ ಎಲ್ಲ ಸರಕುಗಳ ಮೌಲ್ಯವನ್ನು ವ್ಯಾಪಾರ ಸುಂಕ ಪಟ್ಟಿಯಲ್ಲಿ ನಿಗದಿ ಪಡಿಸಿ ನಮೂದಿಸಬೇಕು. ಕೆಲವು ಸರಕುಗಳ ಬೆಲೆಯನ್ನು ನಿಗದಿ ಪಡಿಸಲಾಗದಿದ್ದಲ್ಲಿ, ಕಲೆಕ್ಟರನಿಗೆ ಅವುಗಳನ್ನು ನಿಗದಿ ಪಡಿಸುವ ಅಧಿಕಾರವಿದೆ. ಮಾರಾಟ ಸ್ಥಳದಲ್ಲಿನ ಬೆಲೆಯ ಆಧಾರದಲ್ಲಿ ಆತ ತೆರಿಗೆಯನ್ನು ನಿಗದಿಪಡಿಸಬಹುದು. -ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ತಾ ೨೯-೯-೧೮೧೨, ಸಂ. ೪೭೫, ಪು. ೮೫೯೧ ೮೫೯೨.

೧೬. ಜನರಲ್ ರಿಪೋರ್ಟ್ಸ್ ಫ್ರಮ್ ದ ಬೋರ್ಡ್ ಆಫ್ ರೆವಿನ್ಯೂ ಟು ದ ಗವರ್ನಮೆಂಟ್ ಫ್ರಮ್ ೧-೧-೧೮೧೪ಟು ೧೧-೨-೧೮೧೫, ಪು. ೧೨೦

೧೭. ಸೀ ಕಸ್ಟಮ್ಸ್ ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ ತಾ ೧೬-೧೧-೧೮೧೩, ಸಂ. ೨೧, ಪು. ೧೮೮೩-೧೪೮೪.

೧೮. ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂಗೆ ಸರಕಾರದ ಕಾರ್ಯದರ್ಶಿ ಡಿ. ಹಿಲ್‌ನ ೯-೧೧-೧೮೧೩ ರ ಪತ್ರ, ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ತಾ ೧೮-೧೧-೧೮೧೩, ಸಂ. ೨೧, ಪು. ೧೪೮೩-೧೪೮೪.

೧೯. ಕೆನರಾದ ಕಲೆಕ್ಟರ್, ಅಲೆಕ್ಸಾಂಡರ್ ರೀಡನು ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂಗೆ ಬರೆದ ತಾ. ೧೫-೨-೧೮೧೫ರ ಪತ್ರ. ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ಸಂ ೭೭೦, ಪು ೨೨೦೩ ೨೨೧೦

೨೦. ಅದೇ

೨೧. ಐ ಹ್ಯಾನ್ ಬರಿ, ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ ಕಾರ್ಯದರ್ಶಿ, ಕೆನರಾದ ಕಲೆಕ್ಟರನಿಗೆ ಬರೆದ ೨೦-೪-೧೮೧೫ರ ಪತ್ರ, ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ೨೦-೪-೧೮೧೫, ಸಂ. ೬೭೪ 'A'

೨೨. ಐ ಹ್ಯಾನ್ ಬರಿ, ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂದ ಕಾರ್ಯದರ್ಶಿ, ಕೆನರಾದ ಕಲೆಕ್ಟರನಿಗೆ ಬರೆದ ೨೦-೪-೧೮೧೫ರ ಪತ್ರ ಪ್ರೊಸೀಡಿಂಗ್ಸ್ ಆಫ್ ದಿ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ಸಂ. ೬೭೪ 'A'


**ಕ. ಇತಿಹಾಸ ಅಕಾದೆಮಿಯ ೮ನೆಯ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೪)**

*ಸವಕಲು ಶಬ್ದಗಳನ್ನೊಳಗೊಂಡ ಇಂದಿನ ಇತಿಹಾಸ ಬರವಣಿಗೆಯ ಶೈಲಿ ತುಂಬ ಗತಾನುಗತಿಕವಾಗಿದೆ. ಸಂಶೋಧನೆಯ ಇನ್ನೊಂದು ರೂಪವಾಗಿರುವ ವಿಮರ್ಶೆಯಂತೆ ಇತಿಹಾಸವೂ ಹೊಸ ಶೈಲಿಯನ್ನು ಅಂದರೆ ಸರಳ, ಆಕರ್ಷಕ ಮತ್ತು ಚಿಂತನಪರ ಶೈಲಿಯನ್ನು ರೂಢಿಸಿಕೊಳ್ಳಬೇಕಾಗಿದೆ. ಯಾವುದೇ ವಿಷಯದ ಸಾರ್ಥಕತೆ ಇರುವುದು ಅದರ ಸಂವಹನ ಕ್ರಿಯೆಯಲ್ಲಿ.*

**ಡಾ. ಎಂ. ಎಂ. ಕಲಬುರ್ಗಿ**
ಸಮ್ಮೇಳನಾಧ್ಯಕ್ಷರು





ವರ್ತಕಗೆ ಸುಂಕದಲ್ಲಿ ಮುಳುಗಿದ ವರನೆ
ಸರಕಾರಕ್ಕೆ ಆಡಳಿತದ ಭೋಗದೊರತೆ
ಪ್ರತಿಭಟನೆಯುಕ್ಕದೆ ದನಿ ಮೌನವಾದೀತೆ!
ಇಂತಿರಲು ವರ್ತಕರ ದನಿ ವಸಾಹತು ವರ್ತನೆಗೆ
ಗುದುಗದೆ ಬಿಟ್ಟೀತೆ!



ಮಂದರ್ಕೆ ನಿತ್ಯಾನಂದಪ್ಪ*

# ನನ್ನಿನೊಳಂಬನ ಅಪರೂಪದ ಚಿನ್ನದ ಗದ್ಯಾಣ

*ಕಂಚಿಪಲ್ಲವ ಪರಂಪರೆಗೆ ಸೇರಿದ ನೊಳಂಬರ ಪೈಕಿಯ ನನ್ನಿನೊಳಂಬ ಟಂಕಿತ ಅಪರೂಪದ ನಾಣ್ಯ ನಂದಿಗದ್ಯಾಣ, ರಾಜಕೀಯ ಇತಿಹಾಸವನ್ನೆ ತೆರೆದಿಟ್ಟಿದೆ. ಸಾಮಂತರು ಹಾಗು ಅವರ ಪ್ರಭುವಿನ ನಡುವಿನ ಸಾಂಸ್ಕೃತಿಕ ಸಂಬಂಧದ ಹಾಗು ಸ್ನೇಹದೊರತೆಯ ಸೂಚನೆಯನ್ನು ನಿಡುವಂತಿದೆ.*

ನೊಳಂಬವಾಡಿಯನ್ನು ತಮ್ಮ ಕೇಂದ್ರವನ್ನಾಗಿರಿಸಿ ನೊಳಂಬರು ಕ್ರಿ.ಶ. ೮ ರಿಂದ ೧೧ನೇ ಶತಮಾನದವರೆಗೆ ರಾಷ್ಟ್ರಕೂಟರು, ಗಂಗರು, ಕಲ್ಯಾಣದ ಚಾಲುಕ್ಯರ ಸಾಮಂತರಾಗಿ ಆಳಿದ್ದರು. ಮೂಲತಃ ಇವರು ಕಂಚಿ ಪಲ್ಲವ ಪರಂಪರೆಗೆ ಸೇರಿದವರಾಗಿದ್ದು, ಪಲ್ಲವರು ಕರ್ನಾಟಕದಿಂದ ಹೊರಹೋದಾಗ ನೊಳಂಬರು ಇಲ್ಲಿಯೇ ಉಳಿದರು. ಇದುವರೆಗೆ ನೊಳಂಬರ ದ್ದೆನ್ನಲಾದ ಏಕೈಕ ನಾಣ್ಯ ಮಾತ್ರ ಸಿಕ್ಕಿರುತ್ತದೆ. ಈ ನಾಣ್ಯದ ಮುಂಭಾಗದಲ್ಲಿ ಬಲಬದಿಗೆ ಮುಖಮಾಡಿ ಕುಳಿತಿರುವ ನಂದಿಯ ಚಿತ್ರವಿದೆ. ಹಿಂಬದಿಯಲ್ಲಿ 'ಶ್ರೀ ಶ್ರೀ ಇಮ್ಮಡಿ ನೊಳಂಬ ನಾರಾಯಣ' ಎಂಬ ೩ ಸಾಲಿನ ಕನ್ನಡ ಲಿಪಿ ಇದೆ. ಈ ಬಿರುದು ದಿಲೀಪ ಅಥವಾ ಇರಿವ ನೊಳಂಬ (ಕ್ರಿ.ಶ ೯೪೧-೯೬೮) ಮತ್ತು ಇಮ್ಮಡಿ ಮಹೇಂದ್ರ ( ಕ್ರಿ.ಶ. ೯೭೫-೯೮೧)ರು ಹೊಂದಿದ್ದು, ಇವರಲ್ಲಿ ಯಾರಾದರೊಬ್ಬರು ಈ 'ನಂದಿ ಗದ್ಯಾಣ'ವನ್ನು ಟಂಕಿಸಿರಬಹುದು ಎಂದು ಊಹಿಸಲಾಗಿದೆ.

ಪ್ರಸ್ತುತ 'ನನ್ನಿನೊಳಂಬ'ನ ಈ ನಾಣ್ಯವು ಏಕ ಮುಖ ಮುದ್ರಾಂಕಿತ ನಾಣ್ಯವಾಗಿದೆ (Uniface Punchmark Coin).

| | |
|---|---|
| **ಲೋಹ:** ಚಿನ್ನ, | **ತೂಕ** : ೩,೭೫ ಗ್ರಾಂ |
| **ವ್ಯಾಸ:** ೨೦ಮಿ.ಮೀ., | **ಆಕಾರ** : ವೃತ್ತಾಕಾರ |



ನನ್ನಿ
ನೊಳಂಬ

**ಮುಂಬದಿ** : ಈ ನಾಣ್ಯದ ಮುಂಭಾಗದಲ್ಲಿ ಒಟ್ಟು ೯ ಮುದ್ರೆಗಳಿವೆ (Punches). ಇದರಲ್ಲಿ ಬಲಬದಿಗೆ ಮುಖಮಾಡಿ ಕುಳಿತಿರುವ ನಂದಿಯ ೫ ಮುದ್ರೆಗಳು, ೨ ಕನ್ನಡ ಶ್ರೀ ಯ ಮುದ್ರೆಗಳಿದ್ದು, ೮ ಮತ್ತು ೯ ನೇಯ ಮುದ್ರೆಗಳನ್ನು ಸೇರಿಸಿದಾಗ 'ನನ್ನಿನೊಲಂಬ' ಎಂಬ ಕನ್ನಡ ಲಿಪಿಯನ್ನು ಕಾಣಬಹುದು.

**ಹಿಂಬದಿ** : ಖಾಲಿ

ನೊಳಂಬರಲ್ಲಿ 'ನನ್ನಿನೊಳಂಬ' ಎಂಬ ಬಿರುದನ್ನು ಛಲದಂಕಕಾರ ನನ್ನಿನೊಳಂಬ I (ಕ್ರಿ.ಶ. ೯೬೯ - ೯೭೫) ಮತ್ತು ತ್ರೈಲೋಕ್ಯಮಲ್ಲ ನನ್ನಿನೊಳಂಬ II ಪಲ್ಲವ ಪೆರ್ಮಾನಡಿ (ಕ್ರಿ.ಶ. ೧೦೪೪ -೫೪) ಅವರುಗಳು ಹೊಂದಿದ್ದರು. ಛಲದಂಕಕಾರ

* ಗಣೇಶ್ ಎಂಟರ್ ಪ್ರೈಸಸ್, ಬಸ್‌ಸ್ಟೇಂಡ್, ಮೂಡಬಿದರೆ - ೫೭೪ ೨೨೭

ನನ್ನಿನೊಳಂಬ I ನು ರಾಷ್ಟ್ರಕೂಟ ದೊರೆ ಕೃಷ್ಣ IIIನ ಮತ್ತು ಗಂಗ ದೊರೆ ಮಾರಸಿಂಹ IIನ ಸಮಕಾಲೀನನು.

ತ್ರೈಲೋಕ್ಯ ಮಲ್ಲ ನನ್ನಿನೊಳಂಬ II ಪಲ್ಲವ ಪೆರ್ಮಾನಡಿ (ಕ್ರಿ.ಶ. ೧೦೪೪-೫೪) ಅಣ್ಣ ಜಗದೇಕ ಮಲ್ಲ ಇಮ್ಮಡಿನೊಳಂಬ ಪಲ್ಲವ ಪೆರ್ಮಾನಡಿಯ ನಂತರ ಆಳ್ವಿಕೆಗೆ ಬಂದವನು. ಇವನು ಕಲ್ಯಾಣ ಚಾಳುಕ್ಯ ದೊರೆ ತ್ರೈಲೋಕ್ಯಮಲ್ಲ ಆಹವಮಲ್ಲ ಸೋಮೇಶ್ವರ I (ಕ್ರಿ.ಶ. ೧೦೪೪-೬೮)ನ ಸಾಮಂತನೆಂದು ಹಲವು ಶಾಸನಗಳು ಹೇಳುತ್ತವೆ. ಜಗದೇಕಮಲ್ಲನೆಂಬ ಕಲ್ಯಾಣ ಚಾಳುಕ್ಯರ ಬಿರುದನ್ನು ಇಮ್ಮಡಿ ನೊಳಂಬ ಪಲ್ಲವ ಪೆರ್ಮಾನಡಿಯು ಹೇಗೆ ಧರಿಸಿದ್ದನೋ ಹಾಗೆಯೇ ತ್ರೈಲೋಕಮಲ್ಲನೆಂದು ಬಿರುದನ್ನು ನನ್ನಿನೊಳಂಬ IIನು ಧರಿಸಿದ್ದನು. ಇದು ಚಾಳುಕ್ಯರು ಮತ್ತು ನೊಳಂಬರ ನಡುವಿನ ಸ್ನೇಹದ ದ್ಯೋತಕವಾಗಿದ್ದಿರಬಹುದು. ತಮ್ಮ ಪ್ರಭುಗಳ ಬಿರುದನ್ನು ಸಾಮಂತ ರಾಜರುಗಳು ತಮ್ಮ ಹೆಸರಿನೊಂದಿಗೆ ಸೇರಿಸಿಕೊಳ್ಳುವುದು ಆ ಕಾಲದಲ್ಲಿ ಸಾಮಾನ್ಯವಾಗಿತ್ತು. ಅಲ್ಲದೇ ತನ್ನದೇ ಬಿರುದನ್ನು ತನ್ನ ಸಾಮಂತರಿಗೆ, ಸ್ನೇಹಿತರಿಗೆ, ಸೇನಾನಿಗಳಿಗೆ ಕೊಡುವ ಸಂಗತಿಯು ಅಪರೂಪದ್ದಾಗಿರಲಿಲ್ಲ. ತೈಲ IIನು ತನ್ನ ಸೇನಾಪತಿಯಾಗಿದ್ದ ಬೂತೇಯ ದೇವನಿಗೆ ಅವನ ಶೌರ್ಯಕ್ಕಾಗಿ ಆಹವಮಲ್ಲ ಎಂಬ ಬಿರುದನ್ನು ದಯಪಾಲಿಸಿದ್ದ. (೧)

ತ್ರೈಲೋಕ್ಯಮಲ್ಲ ನನ್ನಿನೊಳಂಬ IIನು ಕೂಗಲಿ ೫೦೦, ಕದಂಬಳಿಗೆ ೧೦೦೦೦, ಬಲ್ಲಕುಂದೆ ೩೦೦, ಕನೇಯ ಕಲ್ಲು ೨೦೦, ಕುದಿಹಾರವಿ ೭೦, ಕರ್ವಿಡಿ ೩೦ನ್ನು ಆಳಿಕೊಂಡಿದ್ದು, ಕ್ರಿ.ಶ. ೧೦೫೪ರಲ್ಲಿ ಕೊಪ್ಪಂನಲ್ಲಿ ಚೋಳ, ಚಾಳುಕ್ಯರ ನಡುವೆ ನಡೆದ ಯುದ್ಧದಲ್ಲಿ ವೀರ ಮರಣವನ್ನಪ್ಪಿದ ಎಂದು ಮಣೆಮಂಗಳಂ ಶಾಸನವು ತಿಳಿಸುತ್ತದೆ. ಆ ಯುದ್ಧದಲ್ಲಿ ನೊಳಂಬರ ರಾಜಧಾನಿಯಾಗಿದ್ದ ಕಂಪಿಲಿಯು (ಇರಿವ ನೊಳಂಬ IIನ ಕಾಲದಿಂದ ರಾಜಧಾನಿಯಾಗಿತ್ತು) ನಾಶವಾಯ್ತು.

ನನ್ನಿನೊಳಂಬ I ಮತ್ತು ನನ್ನಿನೊಳಂಬ IIರ ನಡುವಿನ ಕಾಲವು ಕೆಲವೇ ವರ್ಷಗಳಾಗಿದ್ದರಿಂದ ಲಿಪಿ ಶಾಸ್ತ್ರದ ಆಧಾರದಲ್ಲಿ ಈ ನಾಣ್ಯವು ಯಾರಿಗೆ ಸೇರಿದ್ದೆಂದು ಹೇಳಲು ಸಾಧ್ಯವಾಗುವುದಿಲ್ಲಾ. ನನ್ನಿನೊಳಂಬ I ನು ರಾಷ್ಟ್ರಕೂಟ ದೊರೆ ಕೃಷ್ಣ II ಮತ್ತು ಗಂಗ ದೊರೆ ಮಾರಸಿಂಹನ II ನ ಸಮಕಾಲೀನನಾದುದರಿಂದ ಇವನ ನಾಣ್ಯಗಳು ಸಹ ಆ ಸಮಯದಲ್ಲಿ ಪ್ರಚಲಿತವಾಗಿದ್ದ ರಾಷ್ಟ್ರಕೂಟರ ಅಥವಾ ಗಂಗರ ನಾಣ್ಯಗಳಂತೆ ದ್ವಿಮುಖ ಅಚ್ಚು (Double die stuck) ವಿಧಾನದ ನಾಣ್ಯಗಳಾಗಿದ್ದಿರಬಹುದು. ಆದರೆ ಪ್ರಸ್ತುತ ಈ ನಾಣ್ಯವು ಏಕಮುಖ ಮುದ್ರಾಂಕಿತ ನಾಣ್ಯ (Uniface Punch Mark)ವಾಗಿದ್ದುದರಿಂದ ಈ ನಾಣ್ಯವು ಛಲದಂಕಕಾರ ನನ್ನಿನೊಳಂಬ I ನಿಗೆ ಸೇರಿದಲ್ಲವೆಂದು ಊಹಿಸಬಹುದು.

ನನ್ನಿನೊಳಂಬ IIನು ಕಲ್ಯಾಣ ಚಾಳುಕ್ಯ ದೊರೆ ತ್ರೈಲೋಕ್ಯ ಮಲ್ಲ ಆಹವಮಲ್ಲ ಸೋಮೇಶ್ವರ Iನ ಸಾಮಂತರನಾಗಿದ್ದು, ತನ್ನ 'ಪ್ರಭು'ವಿನ ಬಿರುದನ್ನು ತನ್ನ ಹೆಸರಿಗೆ ಸೇರಿಸಿಕೊಂಡಿದ್ದ. ಆ ಸಮಯದಲ್ಲಿ ಏಕಮುಖ ಮುದ್ರಾಂಕಿತ ನಾಣ್ಯಗಳು (ನಾಣ್ಯಗಳ ಮುಂಭಾಗದಲ್ಲಿ ೫ ಸಿಂಹ ಮುದ್ರೆಗಳು, ೨ ಕನ್ನಡ ಶ್ರೀ ಮುದ್ರೆಗಳು, ೨ ರಾಜರ ಬಿರುದಿನ ಮುದ್ರೆಗಳ ಒಟ್ಟು ೯ ಮುದ್ರೆಗಳು) ಚಲಾವಣೆಯಿದ್ದು. ಸಾಮಂತ ರಾಜರುಗಳು ಸಹ ತಮ್ಮ ಪ್ರಭುವಿನ ನಾಣ್ಯಗಳ ಮಾದರಿಯಲ್ಲಿಯೇ ನಾಣ್ಯಗಳನ್ನು ಟಂಕಿಸುವ ಪರಿಪಾಟವಿತ್ತು. ಉದಾಹರಣೆಗೆ ತ್ರೈಲೋಕ್ಯಮಲ್ಲ ಆಹವಮಲ್ಲ ಸೋಮೇಶ್ವರI ಮತ್ತು ಅವನ ಸಾಮಂತ, ಮಹಾಸಾಮಂತ ಮಾರ್ತಾಂಡಯ್ಯನ ನಾಣ್ಯಗಳು. (ಎರಡು) ಇವನಿಗೆ 'ಕಾಯ್ವರ ಗಂಡ' ಎಂಬ ಬಿರುದಿತ್ತು. ಇವನು ಚಾಳುಕ್ಯ ದೊರೆ ಸೋಮೇಶ್ವರIನ ಸಾಮಂತ, ಕದಂಬ ಕುಲದ ಮಹಾಮಂಡಲೇಶ್ವರ ಚಟ್ಟಯ್ಯ ದೇವನ ಸಾಮಂತನಾಗಿದ್ದ.



ಮಾರ್ತಾಂಡಯ್ಯ ಮತ್ತು ತ್ರೈಲೋಕ್ಯಮಲ್ಲನ ನಾಣ್ಯಗಳಲ್ಲಿ ಬಹಳಷ್ಟು ಸಾಮ್ಯತೆಗಳಿದ್ದು ೫ಸಿಂಹದ ಮುದ್ರೆಗಳು, ೨ಶ್ರೀ ಮುದ್ರೆಗಳು ಸಾಮಾನ್ಯವಾಗಿದ್ದು, ಮಾರ್ತಾಂಡಯ್ಯನ ನಾಣ್ಯದಲ್ಲಿ ಕಾಯ್ವರ ಮತ್ತು ಗಂಡ (ಕಯ್ವರ/ಗಣ್ಡ)ಎಂಬ ೨ಮುದ್ರೆಗಳು ಮತ್ತು ತ್ರೈಲೋಕ್ಯಮಲ್ಲ ಅಹವಮಲ್ಲ ಸೋಮೇಶ್ವರ Iನ ನಾಣ್ಯದಲ್ಲಿ ತ್ರೈಲೋಕ್ಯ ಮತ್ತು ಮಲ್ಲ (ತ್ರೈಲೋಕ್ಯ/ಮಲ್ಲ) ಎಂಬ ೨ಮುದ್ರೆಗಳಿವೆ. ಇದರಿಂದ ಸಾಮಂತರು ತಮ್ಮ ಪ್ರಭುವಿನ ಬಿರುದನ್ನು ಧರಿಸುವುದಲ್ಲದೇ, ಅವರದೇ ರೀತಿಯ ನಾಣ್ಯಗಳನ್ನು ಟಂಕಿಸುತ್ತಿದ್ದರು ಎಂದು ಗೊತ್ತಾಗುತ್ತದೆ. ಆದುದರಿಂದ ಪುಸ್ತಕ "ನನ್ನಿನೊಲಂಬ" ಲಿಪಿ ಇರುವ ಈ ನಾಣ್ಯವು ಛಲದಂಕಕಾರ ನನ್ನಿನೊಳಂಬI ಗಿಂತಲೂ ತ್ರೈಲೋಕ್ಯಮಲ್ಲ ನನ್ನಿನೊಳಂಬ IIನಿಗೆ ಸೇರಿದ್ದೆಂದು ಖಚಿತವಾಗಿ ಹೇಳಬಹುದು. ಆದರೆ ಈ ನಾಣ್ಯದಲ್ಲಿ ಸಿಂಹದ ಚಿಹ್ನೆಯ ಬದಲು ನೊಳಂಬರ ರಾಜ ಲಾಂಛನವಾದ ನಂದಿಯ ಚಿತ್ರವಿದೆ.



***

**ಆಧಾರಸೂಚಿ ಮತ್ತು ಟಿಪ್ಪಣಿಗಳು**


1. *The Nolambas* by Dr. M.S. Krishnamurty.
2. *Article in recent researches in karnataka archaeology,* by M. Mukund Prabhu, Mangalore.


**'ನಾಣ್ಯ' ಮುಖ ಇತಿಹಾಸಕ್ಕೆ ತೆರೆದಪುಟ**
**ಅಚ್ಚು ಹಾಕಿದ ಚಿನ್ನದಂಥ ಬಾಳಿನ ಮಾಟ**
**ಪ್ರಭುವಿನ ಬಿರುದು ಹೊತ್ತು ಇದು ಸಾಮಂತ ಟಂಕಿಸಿದ**
**ಸ್ನೇಹದೊರತೆಯಲ್ಲಿ ಮಿಂದ ಬಲು ಭಾಗ್ಯವಂತ**

ಡಾ। ಜ್ಯೋತ್ಸ್ನಾ ಕಾಮತ್*

# ನೀತಿವಾಕ್ಯಾಮೃತಂ - ಕೆಲ ಇಣುಕು ನೋಟಗಳು

ಕ್ರಿ.ಶ. ೯೬೫ರ ಸೋಮದೇವನ 'ನೀತಿವಾಕ್ಯಾಮೃತ' ವೆಂಬ ರಾಜನೀತಿ ಬೋಧನೆಯ ಪ್ರಾಚೀನ ಕೃತಿಯು ಆಡಳಿತಗಾರರ ಅತ್ಯುತ್ತಮ ಕೈಪಿಡಿಯಾಗಿದೆ. ಅದರಲ್ಲಿಯ ನೀತಿಸೂತ್ರಗಳು ಸರ್ವಕಾಲಿಕ ಹಾಗು ಸಾಮಯಿಕ. ವರ್ತಮಾನಕ್ಕೆ ಅದರ ಅನ್ವಯ ಒಂದು ಪ್ರಸ್ತುತಶೀಲ.

ಸೋಮದೇವಸೂರಿಯು 'ನೀತಿವಾಕ್ಯಾಮೃತ'ವೆಂಬ ರಾಜನೀತಿಯ ಗ್ರಂಥವನ್ನು ಸುಮಾರು ಕ್ರಿ.ಶ. ೯೬೫ರಲ್ಲಿ ರಚಿಸಿದನು. ಇದೇ ಕವಿಯ ಯಶಸ್ತಿಲಕ ಚಂಪೂ ಕಾವ್ಯ ಸಂಸ್ಕೃತದ ಸುಪ್ರಸಿದ್ಧ ಚಂಪೂಕಾವ್ಯಗಳಲ್ಲಿ ಒಂದು. ಕೊಪ್ಪಳದಲ್ಲಿ ಕ್ರಿ.ಶ. ೯೮೩ರಲ್ಲಿ ನಿಧನ ಹೊಂದಿದ ಸೋಮದೇವನು ರಾಷ್ಟ್ರಕೂಟ ಮೂರನೆಯ ಕೃಷ್ಣನ ಸಾಮಂತ ದೊರೆ, ನಾಲ್ಕನೆಯ ಅರಿಕೇಸರಿಯಿಂದ ಒಂದು ಗ್ರಾಮವನ್ನು ದತ್ತಿಯಾಗಿ ಪಡೆದಿದ್ದ.[೧] 'ನೀತಿವಾಕ್ಯಾಮೃತ'ದ ಇಟಾಲಿಯನ್, ಇಂಗ್ಲಿಷ್, ಸಂಸ್ಕೃತ, ಹಿಂದಿ ಮತ್ತು ತೆಲುಗು ಭಾಷೆಗಳಲ್ಲಿ ಅನುವಾದ ಇಲ್ಲವೇ ಟೀಕೆಗಳು ತುಂಬ ಹಿಂದೆಯೇ ಲಭ್ಯವಿದ್ದರೂ, ಅಚ್ಚ ಕನ್ನಡಿಗನ ಈ ಅಮೂಲ್ಯಕೃತಿಯು, ಕನ್ನಡ ಟೀಕೆ ಕ್ರಿ.ಶ. ಸುಮಾರು ೧೨೦೦ರಷ್ಟು ಹಿಂದೆಯೇ ಬರೆದದ್ದು ಇದ್ದರೂ, ಅಜ್ಞಾತವಾಗಿಯೇ ಹಸ್ತಪ್ರತಿ ರೂಪದಲ್ಲಿ ಉಳಿದಿತ್ತು. ಕೊನೆಗೊಮ್ಮೆ ಪ್ರೊ. ಜಿ.ಎಸ್. ದೀಕ್ಷಿತರ ಪರಿಶ್ರಮದ ಫಲವಾಗಿ ನೀತಿವಾಕ್ಯಾಮೃತ, ನೇಮಿನಾಥನ ಕನ್ನಡ ಟೀಕೆಯ ಸಹಿತ ಕ್ರಿ.ಶ. ೨೦೦೦ನೇ ವರ್ಷ ಪ್ರಕಟವಾಯಿತು. ಕನ್ನಡ ಹಾಗೂ ಸಂಸ್ಕೃತ ಪಂಡಿತರಾಗಿದ್ದ ದಿ। ಪ್ರೊ। ಬಿ. ರಾಮಸ್ವಾಮಿ ಹಾಗೂ ಡಾ। ಶ್ರೀನಿವಾಸ ರಿತ್ತಿ ಅವರ ಸಮರ್ಥ ಸಹಾಯದಿಂದ ಪ್ರೊ. ದೀಕ್ಷಿತರು ಸಂಪಾದಿಸಿದ ಈ ಗ್ರಂಥವನ್ನು ಹಂಪಿ ವಿಶ್ವವಿದ್ಯಾಲಯವು ಅದೇ ವರ್ಷ ಹೊರತಂದಿದೆ. ಸೂತ್ರ ರೂಪದಲ್ಲಿರುವ ಈ ಗ್ರಂಥ ಅಂದಿನ ಯುಗದಲ್ಲಿ ಪ್ರಚಲಿತವಿದ್ದ ಧರ್ಮಶಾಸ್ತ್ರ, ನೀತಿಶಾಸ್ತ್ರಗಳ ಸಾರವಾಗಿದೆ. ಇದು ಸ್ವತಂತ್ರ ಕೃತಿಯೆಂದು ಸಂಪಾದಕರ ಮತ.

ಕ್ರಿ.ಶ. ೧೦೩೦ರ ದುರ್ಗಸಿಂಹನ ಪಂಚತಂತ್ರದಲ್ಲಿ, ನೀತಿವಾಕ್ಯಾಮೃತದ ಕೆಲಸೂತ್ರಗಳು ಉದ್ಧೃತವಾಗಿವೆ. ಧರ್ಮ, ಅರ್ಥ, ಕಾಮಗಳ ತ್ರಿವರ್ಗ ನಿರೂಪಣೆ ಮಾಡಿದ ಲೇಖಕನು ಕಾಮಕ್ಕಿಂತ ಅರ್ಥವೂ, ಅರ್ಥಕ್ಕಿಂತ ಧರ್ಮವೂ ಮುಖ್ಯವಾದವು! ಎಂದು ಉಲ್ಲೇಖಿಸಿದ್ದಾನೆ. ಪ್ರಕರಣಗಳೆಲ್ಲ 'ಸಮುದ್ದೇಶ' ಎಂದು ಕರೆಯಲ್ಪಟ್ಟಿವೆ. ೩೨ ಸಮುದ್ದೇಶ ಅಥವಾ ಪ್ರಕರಣಗಳನ್ನು ಹೊಂದಿರುವ ಈ ಕೃತಿ, ಮಧ್ಯಯುಗದಲ್ಲಿ ರಾಜರಿಗೆ, ಆಡಳಿತ ಗಾರರಿಗೆ ಅತ್ಯುತ್ತಮವಾದ ಕೈಪಿಡಿ ಆಗಿದ್ದಿರಲು ಸಾಕು. ಸದ್ಯಕ್ಕೆ ಅದರಲ್ಲಿಯ ಸಾರ್ವಕಾಲಿಕ ಮತ್ತು ಸಾಮಯಿಕವೆಂದು ತೋರುವ ಕೆಲವು ಸೂತ್ರಗಳ ಇಣುಕು ನೋಟಗಳನ್ನು ಒದಗಿಸಲು ಇಲ್ಲಿ ಯತ್ನಿಸಲಾಗಿದೆ.

**ವಿವಾಹದ ವಯಸ್ಸು** : ಬಾಲ್ಯ ವಿವಾಹ ಪ್ರಚಾರಕ್ಕೆ ಬಂದು ಶತಮಾನಗಳೇ ಕಳೆದಿದ್ದರೂ, ಸೋಮದೇವನು ೧೬ ವರ್ಷದ ಗಂಡು ಹಾಗೂ ೧೨ ವರ್ಷದ ಹೆಣ್ಣು ವಿವಾಹಕ್ಕೆ ಯೋಗ್ಯರೆನ್ನುತ್ತಾನೆ (೩೧.೧). ಉಷ್ಣವಲಯದಲ್ಲಿ ಮಕ್ಕಳು ಪ್ರಾಯಕ್ಕೆ ಬರುವ ಹಂತವನ್ನು ಕವಿಯು ಸರಿಯಾಗಿಯೇ ಗಮನಿಸಿದ್ದು

* ೧೧೦, ಶಶಿಕಿರಣ್, ೧೮ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೫೫

ಸಮಾಧಾನದ ವಿಷಯವಾಗಿದೆ. ಈಗಿನ ದಿನಮಾನಕ್ಕೆ ಹೋಲಿಸಿದರೆ ಇದೇನೂ ತೀರ ಆಕ್ಷೇಪಾರ್ಹ ವಿಚಾರವೆನಿಸುವುದಿಲ್ಲ. ಅದರಂತೆ ಸ್ಮೃತಿಗಳು ಉಲ್ಲೇಖಿಸುವ ಎಂಟು ಪ್ರಕಾರಗಳ ಮದುವೆಗಳು ಸೋಮದೇವನ ಕಾಲಕ್ಕೆ ಪ್ರಚಲಿತವಿದ್ದವು. ವಧು-ವರರು ಪರಸ್ಪರ ಮೆಚ್ಚಿಕೊಂಡ ವಿವಾಹ, ಧರ್ಮವಿರುದ್ಧವಲ್ಲ (೩೧ ಪದ್ಯ ೯-೧೩) ಎಂದು ಹೇಳುವದರ ಜೊತೆಗೆ ಜಾತಿ, ಕುಲಗಳಲ್ಲಿ ವಿಕಾರಗಳುಳ್ಳವ ನೊಂದಿಗೆ ವಿವಾಹವಾಗಿದ್ದರೆ ಆಕೆ ಪುನರ್ವಿವಾಹ ಮಾಡಿಕೊಳ್ಳ ಬಹುದು ಎಂದು ಸ್ಮೃತಿಗಳ ಹೇಳಿಕೆಯನ್ನು ಸೋಮದೇವ ಎತ್ತಿ ಹಿಡಿದಿದ್ದಾನೆ. (ವಿಪ್ರಕೃತಃ ಪ್ರತಿರೂಢೋವೆ ಪುನರ್ವಿವಾಹ ದೀಕ್ಷಾಂ ಅರ್ಹತಿ। ಇತಿ ಸ್ಮೃತಿಕಾರಾಃ ಪ್ರಾಹುಃ ೨೮.೧೪-೧೬). ಮಧ್ಯ ಯುಗದ ಕಠೋರತೆಯನ್ನು ಗಮನಿಸಿದರೆ ಈ ನಿಲುವು ಉದಾರ ವಾದದ್ದೇ! ಆದರೆ ಸ್ತ್ರೀಯರ ಕುರಿತು ಒಟ್ಟಿನಲ್ಲಿ ಸೋಮದೇವನ ಅಭಿಪ್ರಾಯ ಸಮಕಾಲೀನ ಕವಿ-ಶಾಸ್ತ್ರ-ಸ್ಮೃತಿ ವ್ಯಾಖ್ಯಾನಕಾರರಿಂದ ಬೇರೆಯಾಗಿರಲಿಲ್ಲ. ತಂದೆ-ತಾಯಿ, ಹೆಂಡತಿ ಹಾಗೂ ಅಪ್ರಾಪ್ತ ವಯಸ್ಕ ಮಕ್ಕಳ ರಕ್ಷಣಾ ಹೊರೆ, ಗೃಹಸ್ಥನದೆಂದು ಒತ್ತಿ ಹೇಳಲಾಗಿದೆ (೨೭:೨)

**ಧರ್ಮಸಹಿಷ್ಣುತೆ** : ಸ್ವಧರ್ಮ ಪಕ್ಷಪಾತ ಸಲ್ಲ. ತಂತಮ್ಮ ಮತಗಳಲ್ಲಿ ಹೆಚ್ಚಿನ ಅನುರಕ್ತಿ ತೋರುವವರಿಂದ ಲೋಕ ವ್ಯವಹಾರಗಳು ಸರಿಯಾಗಿ ನಡೆಯುವದಿಲ್ಲ! ಎಂದು ಲೇಖಕನು ಎಚ್ಚರಿಸುತ್ತಾನೆ. (ಸ್ವಪಕ್ಷಾನುರಾಗ ಪ್ರವೃತ್ತಾ: ಸರ್ವೇಸಮಯಾ ನ ಲೋಕವ್ಯವಹಾರೇಷು ಅಧಿಕ್ರಿಯಂತೇ ೭.೩). ಸ್ವತಃ ಜೈನನಾಗಿದ್ದ ಸೋಮದೇವ, ವೈದಿಕ ಧರ್ಮಗ್ರಂಥಗಳನ್ನೆಲ್ಲ ಆಳವಾಗಿ ಅಭ್ಯಸಿಸಿ ಮತಾತೀತವಾಗಿದ್ದ ಕೃತಿಯನ್ನು ರಚಿಸಿ ಸಾರ್ವಕಾಲಿಕತೆಯನ್ನು ಮೆರೆದಿದ್ದಾನೆ. ತಮ್ಮ ತಮ್ಮ ಇಷ್ಟದೇವತೆಗಳನ್ನು ಆರಾಧಿಸಬಹುದು ಎಂದಿದ್ದಾನೆ (೨-೨೪)

**ಲೋಕಾಯತದ ಉಪಯುಕ್ತತೆ** : 'ಚಾರ್ವಾಕ ಮತ' ಅಥವಾ ಲೋಕಾಯತವು ವೇದಪ್ರಾಮಾಣ್ಯವನ್ನು ಒಪ್ಪುವದಿಲ್ಲ. ಐಹಿಕ ಜಗತ್ತಿನ ಉಪಯುಕ್ತತೆಗೆ ಒತ್ತು ಕೊಡುತ್ತದೆ ಎಂಬುದು ಗೊತ್ತಿದ್ದ ಮಾತು. ಹಲವೆಡೆ ಅದು ಖಂಡನೆಗೆ ಒಳಗಾಗಿದೆ. ಆದರೆ ಸೋಮದೇವನು ಲೋಕಾಯತದ ಅಭ್ಯಾಸ ಲೋಕ ವ್ಯವಹಾರಕ್ಕೆ ಉಪಯುಕ್ತವಾಗಿದೆ. ಅದನ್ನು ಅಧ್ಯಯನ ಮಾಡಿದ ರಾಜನು ರಾಷ್ಟ್ರಕಂಟಕಗಳನ್ನು ನಾಶಗೊಳಿಸುವ ಉಪಾಯಗಳನ್ನು ಚೆನ್ನಾಗಿ ತಿಳಿದುಕೊಳ್ಳುತ್ತಾನೆ ಎಂದು ಸ್ಪಷ್ಟವಾಗಿ ಹೇಳಿದ್ದಾನೆ. (ಐಹಿಕ ವ್ಯವಹಾರ ಪ್ರಸಾದನಪರಂ ಹಿ ಲೋಕಾಯತಂ; ಅಧೀತ ಲೋಕಾಯತಂ ಹಿ ರಾಜಾ, ರಾಷ್ಟ್ರ ಕಂಟಕಾನ್ ಉಚ್ಛೇತ್ತುಂ ಅರ್ಹತೆ ೭.೩೨+೩೩) ೧೦ನೇ ಶತಮಾನದ ಹೊತ್ತಿಗೆ ಲೋಕಾ ಯತವು ಜನೋಪಯೋಗಿ ವಿಷಯವೆಂದು ಪರಿಗಣಿಸಲ್ಪಟ್ಟಿತ್ತು. ಮುಂದೆ ೧೪ನೇ ಶತಮಾನದ ಸಾಯಣಾಚಾರ್ಯರ 'ಸರ್ವಧರ್ಮ ದರ್ಶನ'ದಲ್ಲಿ ಲೋಕಾಯತವನ್ನು ಸೇರ್ಪಡೆ ಮಾಡಿದ್ದನ್ನು ನೋಡಬಹುದು.

**ಅರಸನ ಔದಾರ್ಯ** : ಅರಸನು ಉದಾರಭಾವವನ್ನು ಕಾಯಾವಾಚಾಮನಸಾ ರೂಢಿಸಿಕೊಳ್ಳಬೇಕು. ದೇವಪೂಜೆಯಲ್ಲಿ ನಿರತನಾಗಿದ್ದರೂ ಅಗತ್ಯಬಿದ್ದಾಗ ಯತಿಗಳು, ಸಂಬಂಧಿಗಳು ಹಾಗೂ ವೃದ್ಧರನ್ನು ಅರಸನು ಕಾಣಬೇಕು. ಏಕೆಂದರೆ ದೇವರ ಆಕಾರವನ್ನು ಹೊಂದಿದ ಕಲ್ಲನ್ನು ಪೂಜಿಸುತ್ತಿರುವಾಗ ಮನುಷ್ಯರನ್ನೇಕೆ ಮನ್ನಿಸಬಾರದು? ಎಂದು ಪ್ರಶ್ನಿಸಿದ್ದಾನೆ. (ದೇವಾಕಾರ ಉಪೇತಃ ಪಾಷಾಣ್ಯೋತಿ ನ ಅವಮಂತವ್ಯಃ ಕಿಂ ಪುನರ್ನ ಮನುಷ್ಯಃ? ೭; ೬೫-೬೬) ಇದು ಸೋಮದೇವನ ಅಮೃತವಾಕ್ಯ. ಕೊಂಚ ಮಟ್ಟಿಗೆ ಪಂಪನ, ಮನುಷ್ಯಜಾತಿ ತಾನೊಂದೆ ವಲಂ! ಎಂಬ ಮಾತನ್ನು ನೆನಪಿಸುತ್ತದೆ.

**ಸ್ವದೇಶ ಪ್ರೇಮ** : ಒಂದು ಮಹತ್ವದ ವಿಚಾರವನ್ನು, ಮಂತ್ರಿಯ ಆಯ್ಕೆಯದನ್ನು ಸೋಮದೇವ ಹೇಳಿದ್ದಾನೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಲ್ಲಿ ಯಾರೂ ಮಂತ್ರಿಯಾಗಬಹುದು. ಆದರೆ ಅರ್ಹತೆಯಲ್ಲಿ ಮಿಗಿಲಾಗಿರಬೇಕು. ಆ ಅರ್ಹತೆಗಳು ೧) ಸ್ವದೇಶ ದಲ್ಲಿ ಹುಟ್ಟಿದವನು, ೨) ಆಚಾರ-ವಿಚಾರಗಳಲ್ಲಿ ಪರಿಶುದ್ಧನು, ೩) ನಿರ್ವ್ಯಸನಿಯು, ೪) ಅವ್ಯಭಿಚಾರಿಯು, ೫) ವ್ಯವಹಾರ ತಂತ್ರಗಳನ್ನು ಚೆನ್ನಾಗಿ ಬಲ್ಲವನು, ೬) ಶಸ್ತ್ರಜ್ಞಾನ ಅಥವಾ military science ಚೆನ್ನಾಗಿ ಬಲ್ಲವನು, ಮಂತ್ರಿಯಾಗಲು ಯೋಗ್ಯ! ಎಂದಿದ್ದಾನೆ. 'ಸ್ವದೇಶಜ' ಎಂಬ ಮೊದಲು ಮಾತೇ ಎಷ್ಟು ಮುಖ್ಯ! ಈ ವಿಚಾರ ಒಂದು ಸಹಸ್ರಮಾನದ ನಂತರವೂ ಭಾರತೀ ಯರನ್ನು ಕಾಡುತ್ತಿದೆ. ವಿದೇಶೀಯ ಅಥವಾ ಹುಟ್ಟಿನಿಂದ ಆ ದೇಶದವರಲ್ಲದವರು, ಮಂತ್ರಿ ಪದವಿಗೆ ಯೋಗ್ಯರಲ್ಲ! (೧೦:೫) ಎಂದಿರುವದನ್ನು ಗಮನಿಸಬೇಕು. ಮೊನ್ನಿನ ಮಹಾಚುನಾವಣೆ ಮತ್ತು ಪ್ರಧಾನಿಯ ಆಯ್ಕೆ ವಿಚಾರದಲ್ಲಿ ದೇಶದಾದ್ಯಂತ ನಡೆದ ವಾದವಿವಾದಗಳನ್ನು ನೆನಪಿಸಿಕೊಂಡಾಗ, ಸೋಮದೇವ, ಪ್ರತಿಪಾದಿಸಿದ 'ಸ್ವದೇಶಜ' ಮಾತಿನ ಮಹತ್ವ ಎಷ್ಟು ಸಾಮಯಿಕ ವಾದ್ದದು, ಸಾರ್ವಕಾಲಿಕವಾದ್ದು! ಎಂದು ಅರ್ಥವಾಗುತ್ತದೆ. ಆದರಂತೆ ಸ್ತ್ರೀ ವಿಷಯದ ಮತ್ತು ಅರ್ಥವ್ಯವಹಾರಕ್ಕೆ ಸಂಬಂಧಿಸಿದ ಅಧಿಕಾರವು ಬಂಧು ವರ್ಗದವರಿಗೂ ಹೊರದೇಶದವರಿಗೂ ಎಷ್ಟು ಮಾತ್ರವೂ ಇರಕೂಡದು! ಎಂದು ಅಮಾತ್ಯ ಲಕ್ಷಣಗಳ ಅಧ್ಯಾಯದಲ್ಲಿ ಹೇಳಿದ್ದಾನೆ (೧೮.೫೦); 'ಸರ್ವಪಕ್ಷಪಾತೇಷು, ಸ್ವದೇಶ ಪಕ್ಷಪಾತೋ ಬಲಿಯಾನ್' (೧೦:೬)- ಎಲ್ಲ ಪಕ್ಷಪಾತ ಗಳಲ್ಲಿ ಸ್ವದೇಶ ಪಕ್ಷಪಾತವು ಬಲವಾದದ್ದು ಎಂದು ಒತ್ತಿ ಹೇಳಿ, ಎಷ್ಟೇ ಲಾಭ, ಅನುಕೂಲ ತರುವಂತಹದು ಇದ್ದರೂ, ದೇಶಹಿತಕ್ಕೆ ಹಾನಿಕರವಾದದ್ದನ್ನು ಸ್ವೀಕರಿಸಲೇಕೂಡದು! ಎಂಬ ತಾತ್ಪರ್ಯ ಇದರಿಂದ ಹೊರಡುತ್ತದೆ. ಬಹುಶಃ ಇಷ್ಟು ಸಂಕ್ಷಿಪ್ತವಾಗಿ, ಸೂತ್ರ ರೂಪದಲ್ಲಿ ಸ್ವದೇಶಪ್ರೇಮವನ್ನು ಎತ್ತಿಹಿಡಿದ ನೀತಿಶಾಸ್ತ್ರ ಗ್ರಂಥ ಇನ್ನೊಂದು ಇರಲಿಕ್ಕಿಲ್ಲ!

**ಲಂಚಪದ್ಧತಿಯ ಖಂಡನೆ:** ಸೋಮದೇವನ ಕಾಲಕ್ಕೆ ಲಂಚಪದ್ಧತಿ ಸಾಕಷ್ಟು ಪ್ರಚಲಿತವಿದ್ದಂತೆ ತೋರುತ್ತದೆ. 'ಲಂಚೋ ಹಿ ಸರ್ವಪಾತಕಾನಾಂ ಆಗಮನದ್ವಾರಂ' (೧೭.೩೦)-ಎಲ್ಲಾ ಪಾತಕ ಗಳಿಗೆ ಲಂಚವೇ ಮೂಲ! ಎಂದು ತನ್ನ ಅನುಭವಿ ನಿರ್ಣಯವನ್ನು

ಕೊಟ್ಟುಬಿಟ್ಟಿದ್ದಾನೆ. ಲಂಚ ತಿನ್ನುವವರು ರಾಕ್ಷಸರೇ ಸೈ! ಲಂಚದ ಮೂಲಕ ಧನಸಂಪಾದನೆಗೆ ದಾರಿ ಮಾಡಿಕೊಳ್ಳುವವನು, ದೇಶ, ಕೋಶ, ಮಿತ್ರರು ಕೊನೆಗೆ ತನ್ನವರ ವಿನಾಶಕ್ಕೆ ಕಾರಣನಾಗುತ್ತಾನೆ (೭:೪೪) ಎಂದು ಗ್ರಂಥದ ಹದಿನೇಳನೆಯ ಅಧ್ಯಾಯದಲ್ಲಿ ಏಳೆಂಟು ಸೂತ್ರಗಳನ್ನು ಲಂಚಖಂಡನೆಗೆ ಮೀಸಲಿಡಲಾಗಿದೆ.

**(ಬಹುಮುಖ್ಯ) ಅಧಿಕಾರಿಗಳ ವರ್ಗಾವರ್ಗಿ :** 'ಬಹು ಮುಖ್ಯಂ ಅನಿತ್ಯಂ ಚ ಕರಣಂ ಸ್ಥಾಪಯೇತ್' Important Officers Should remain Temporary ಅನ್ನುವ ಅರ್ಥ ಹೊರಡುತ್ತದೆ. (೧೮:೪೯) ಇಂಥ ಬದಲಾವಣೆಯು ಮುಖ್ಯವಾಗಿ Key post ಅಥವಾ ಆಯಕಟ್ಟಿನ ಹುದ್ದೆಗಳಲ್ಲಿರುವ ಅಧಿಕಾರಿಗಳನ್ನು ಬದಲಿಸುತ್ತಿರಬೇಕು ಎಂಬುದು ಸರ್ವಮಾನ್ಯತೆ ಪಡೆದ ಪ್ರಾಚೀನ ಪದ್ಧತಿ ಇದ್ದಿರಲು ಸಾಕು. ಅಥವಾ ಆ ಕಡೆಗೆ ಅರಸನು ಗಮನ ನೀಡಬೇಕು ಎಂಬ ಸೂಚನೆ ಇದೆ.

**ಆಡಳಿತಗಾರರ ಲೋಪದೋಷಗಳು :** ಸಿಕ್ಕಿದ್ದನ್ನು ಸ್ವಾಹಾ ಮಾಡುವದು, ಕಾರ್ಯಕ್ಕೆ ಅಡ್ಡಿ ಮಾಡುವದು, ವಸೂಲಾದ ಹಣವನ್ನು ಕೋಶಕ್ಕೆ ಸೇರಿಸದೇ ಇರುವದು ಹಣದ ಅದಲು ಬದಲು ಮಾಡುವದು, ಇವು ಅಮಾತ್ಯದೋಷಗಳೆಂದು ಸೋಮದೇವನ ಮತ. [ಭಕ್ಷಣಂ, ಉಪೇಕ್ಷಣಂ, ಪ್ರಜ್ಞಾಹೀನತ್ವಂ (insensitivity?) ಉಪರೋಧ ಶೀಲತ್ವಾ ಪ್ರಾಪ್ತ ಅರ್ಥ ಅಪ್ರವೇಶೋ ದ್ರವ್ಯವಿನಿಮಯಶ್ಚ Turning black money into white ಇತಿ ಅಮಾತ್ಯ ದೋಷಾಃ ೧೮.೪೮] ೧ ಸಾವಿರ ವರ್ಷಗಳಲ್ಲಿ ಈ ದೋಷಗಳೆಲ್ಲ ಸ್ಫುಟವಾಗಿ ಸಾರ್ವಜನಿಕರಿಗೆ ಗೋಚರಿಸುತ್ತಿವೆ.

**ಸಭಾಮರ್ಯಾದೆ :** ನಮ್ಮ ಸರ್ವಮಾನ್ಯ ಚುನಾಯಿತ ಪ್ರತಿನಿಧಿಗಳೆಲ್ಲ ವಿಧಾನಸಭೆ, ಲೋಕಸಭೆಗಳಲ್ಲಿ ವರ್ತಿಸುವ ರೀತಿಗಳೆಲ್ಲ ಚಿರಪರಿಚಿತ! ಒಬ್ಬರಿಗೊಬ್ಬರು ನೀತಿಸಂಹಿತೆ ಪಾಠ ಬೇರೆ ಕಲಿಸುತ್ತಾರೆ. ಸೋಮದೇವನಿಗೆ ಸಭಾಸದರು 'ಸಭ್ಯ'ರಾಗಿ ಇರಬೇಕು. 'ಸಭ್ಯ' ಅಂದರೆ ಸಭಾಸದ ಅನ್ನುವ ಆತ ಸಭಾ ಮರ್ಯಾದೆ ಪಾಲಿಸದವರ ಲಕ್ಷಣಗಳನ್ನು ಹೇಳಿದ್ದಾನೆ. ಇವುಗಳು ಹೀಗಿವೆ:

ಸಭೆಯನ್ನು ಕರೆದಾಗ-

೧) ವಿವಾದವನ್ನು ಹೂಡಿ ಸಭೆಗೆ ಬರದವನು.

೨) ಕರೆದರೂ ಬರದೇ ಹೋಗುವವನು.

೩) ಮೊದಲ ಹೇಳಿಕೆಗೆ ವಿರುದ್ಧವಾಗಿ ಆನಂತರ ಹೇಳಿಕೆ ಕೊಡುವವನು.

೪) ವಿರುದ್ಧ ಪಕ್ಷದವರು ಹೇಳಿದ್ದು ಯುಕ್ತವಾದದ್ದಾದರೂ ಅಂಗೀಕರಿಸದವನು.

೫) ತನ್ನ ದೋಷವನ್ನು ಪರಿಹರಿಸದೇ ಪರರ ದೋಷಗಳನ್ನು ತೋರಿಸುವವನು.

೬) ಯಥಾರ್ಥವಾದದ್ದನ್ನು ಹೇಳಿದರೂ ಸಭೆಯನ್ನು ದ್ವೇಷಿಸುವವನು.

ಇವೆಲ್ಲವೂ ಸೋತ ಸಭಾಸದನ ಲಕ್ಷಣಗಳು ಎಂದು ನೀತಿವಾಕ್ಯಾಮೃತ ಹೇಳುತ್ತದೆ. ಈ ಲಕ್ಷಣಗಳು ಹಿಂದೆ, ಇಂದು, ಎಂದೆಂದೂ ಎದ್ದು ನಿಲ್ಲುವಂಥವೇ! (೩೪.೯)

ಲಂಚಕ್ಕೆ, ಲುಂಚ, ಸಾಮಿಷ ಮುಂತಾದ ಶಬ್ದಗಳು ಪ್ರಚಲಿತವಿದ್ದವು.

ಲಂಚ ತೆಗೆದುಕೊಂಡವರು ಸಭಾಸದರಾಗಲು ಯೋಗ್ಯರಲ್ಲ ಎನ್ನುವದು ಸೋಮದೇವನ ಅಭಿಪ್ರಾಯ.

೧) ದುಡ್ಡಿನಿಂದ ದುಡ್ಡನ್ನು ಗಳಿಸಬೇಕು, **ಅರ್ಥೇನಾರ್ಥೋ ಪಾರ್ಜನಂ-** "ಬುದ್ಧಿ ಅಥವಾ ಪೌರುಷದಿಂದ ಧನಸಂಪಾದನೆ ಆಗುವದಿಲ್ಲ." ಬ್ಯಾಂಕ್ ಸವಲತ್ತು ಠೇವಣಿಗಳ ಅನುಕೂಲವಿಲ್ಲದ ದಿನಗಳಲ್ಲಿಯ ಅನುಭವಿಯ ಉದ್ಗಾರ, ಇದು. ದುಡ್ಡು ದುಡ್ಡನ್ನು ಗಳಿಸುತ್ತದೆ. ಅದಕ್ಕೆ ಉದಾಹರಣೆಯನ್ನೂ ಕೊಡಲಾಗಿದೆ. (೨೯.೯೭). ಖೆಡ್ಡಾದಲ್ಲಿ ಆನೆಗಳ ಸಹಾಯದಿಂದಲೇ ಆನೆಯನ್ನು ಬಂಧಿಸುವಂತೆ ಧನವನ್ನು ಧನದಿಂದಲೇ ಸಂಪಾದಿಸಬೇಕು. "ನ ಕೇವಲಂ ಬುದ್ಧಿ ಪುರುಷಕಾರಾಭ್ಯಾಂ" Money begets money ಎಂಬ ಹಳೇ ಗಾದೆಯನ್ನು ನೆನಪಿಸುತ್ತಾನೆ. ಸೋಮದೇವ.

ಕೊನೆಯದಾಗಿ ಗ್ರಹಿಸಬೇಕಾದದ್ದು **ವ್ಯಾಯಾಮದ ಮಹತ್ವ.**

ದುರ್ಬಲರು, ವಯಸ್ಕರು, ಕೆಲ ಪ್ರಕಾರದ ವ್ಯಾಧಿಗಳಿಂದ ಬಳಲುವವರನ್ನು ಬಿಟ್ಟರೆ ಉಷಃಕಾಲದ ವ್ಯಾಯಾಮ, ಪ್ರತಿಯೊಬ್ಬರಿಗೂ ಅಮೃತ ಸೇವನೆಯಂತೆ.

ಶರೀರಾಯಾಸ ಜನನೀ ಕ್ರಿಯಾವ್ಯಾಯಾಮಃ।- ಹಸಿವು, ಉತ್ಸಾಹ, ದೇಹದಾರ್ಢ್ಯಗಳು ವ್ಯಾಯಾಮ ಮಾಡದವರಲ್ಲಿ ಎಲ್ಲಿಂದ ಬರಬೇಕು?

ಅವ್ಯಾಯಾಮಶೀಲೇಷು, ಕುತೋಗ್ನಿ ಸಂದೀಪನಂ, ಉತ್ಸಾಹೋ ದೇಹದಾರ್ಢ್ಯಂ ಚ ?

- ಎಂದು ಪ್ರಶ್ನಿಸಿದ್ದಾನೆ. ೨೧ ನೇ ಶತಮಾನದಲ್ಲಿ ವೈದ್ಯರು ಹೇಳಿದ ಮೇಲೆಯೇ ಪ್ರಾತಃಕಾಲದ ವಾಕ್ ಕೈಕೊಳ್ಳುವ ನಾವು ಸಾವಿರ ವರ್ಷಗಳ ಮೊದಲು ಆರೋಗ್ಯ ರಕ್ಷಣೆಗೆ ವ್ಯಾಯಾಮ ಬೇಕೇ ಬೇಕು ಎಂದು ಹೇಳಿದ ಸೋಮದೇವನ ಮಾತುಗಳನ್ನು ನೆನಪಿಸಿಕೊಳ್ಳುವದು ಒಳ್ಳೆಯದು. ಇಂಥ ಬಹಳಷ್ಟು ಸಾಮಯಿಕ ಮಹತ್ವದ ವಿಚಾರಗಳನ್ನು ನೀತಿವಾಕ್ಯಾಮೃತದಲ್ಲಿ ಕಾಣಬಹುದು.

***

**ಆಧಾರಸೂಚಿ ಮತ್ತು ಟಿಪ್ಪಣಿಗಳು**


೧. ಆಚಾರ್ಯ ಶ್ರೀ ಸೋಮದೇವ ಸೂರಿ ವಿರಚಿತ ನೀತಿ ವಾಕ್ಯಾಮೃತಂ

೨. ಶ್ರೀ ನೇಮಿನಾಥ ವಿರಚಿತಂ ಕರ್ಣಾಟಕವ್ಯಾಖ್ಯಾನ ಸಹಿತಂ ೨೦೦೦. (ಸಂ) : ಜಿ.ಎಸ್. ದೀಕ್ಷಿತ್, ಬಿ. ರಾಮಸ್ವಾಮಿ, ಶ್ರೀನಿವಾಸರಿತ್ತಿ, ಹಂಪಿ.

೩. *Yasastilaka and Indian Culture.*, 1949 Sholapur.


*

ಹಳತರೊಳಗಿನ ನೀತಿ, ಅಮೃತದಂತೆ ಸವಿಯಿರೆ
ವರ್ತಮಾನದ ವಾಸ್ತವಕೆ ಸಂವೇದನೆಯ ಶ್ರೇಯಧಾರೆ

ಡಾ। ಬಿ. ಮಂಜುಳಾ*

# ಕನ್ನಡಿಗರು ಪರಿಚಯಿಸಿದ ಕಟ್ಟೋಗರಗಳು

'ಅನ್ನ' ಎಂಬ ಶಬ್ದಕ್ಕೆ 'ಓಗರ' ಎಂಬುದೂ ಒಂದು ಪರ್ಯಾಯಪದವಾಗಿದೆ. ಮಂಗರಸ, ಚಾವುಂಡರಾಯ ಹಾಗು ಇತರ ಕವಿಗಳು ಉಲ್ಲೇಖಿಸಿರುವ ಕಟ್ಟೋಗರಗಳು ಅಂದಿನ ಪರಿಸರಕ್ಕೆ ಒಗ್ಗಿದ ಹೊಟ್ಟೆಯ ತುತ್ತು. ಅದನ್ನು ಸಿದ್ಧಪಡಿಸುವಲ್ಲಿ ಶ್ರಮಸಂಸ್ಕೃತಿ ಇತ್ತು, ಸಾಮೂಹಿಕ ಪ್ರಜ್ಞೆಯ ಸಾಂಸ್ಕೃತಿಕ ಬದುಕು ಐತಿಹಾಸಿಕವಾಗಿ ಆಚರಣಾತ್ಮಕ ದಾಖಲೆಯಾಗಿ ಬಂದದ್ದು ಶುಚಿರುಚಿಯ ಆರೋಗ್ಯದ ಸಂಕೇತ; ದೇಸಿ ಅಡಿಗೆಯ ಪ್ರೌಢಿಮೆ. ಮಾವಿನಕಾಯಿ, ಮೊಸರು, ಉಪ್ಪು, ಸಾಸುವೆ, ಸೊಪ್ಪು ಇತ್ಯಾದಿಗಳನ್ನು ಬಳಸಿ ನಮ್ಮವರು ಸಿದ್ಧಪಡಿಸುವ ಕಟ್ಟೋಗರಗಳು, ಆಹಾರ ವೈವಿಧ್ಯ, ರುಚಿ ರಸಿಕತೆ, ಪರಂಪರೆಯ ಹಿನ್ನೆಲೆಯನ್ನು ಶಾಸ್ತ್ರೀಯವಾಗಿ ಹೊಂದಿರುವುದು ಗಮನಾರ್ಹ.

ಕನ್ನಡಿಗರು ಸಾಹಿತ್ಯ ಶಿಲ್ಪ ವಾಸ್ತು, ಚಿತ್ರಕಲೆ, ವೇಷಭೂಷಣ ಕಲೆಗಳಲ್ಲಿ ವೈಶಿಷ್ಟ್ಯವನ್ನು ತೋರಿದಂತೆ ಸೂಪಕಲೆಯಲ್ಲೂ ವಿಶಿಷ್ಟತೆಯನ್ನು ಮೆರೆದಿದ್ದಾರೆ. ನಮ್ಮ ಪ್ರಾಚೀನ ಕವಿಗಳ ಅಷ್ಟಾದಶ ವರ್ಣನೆಗಳಂತೆ ಸೂಪಕಲೆಯನ್ನು ವಿಶೇಷವಾಗಿ ವರ್ಣಿಸಿದ್ದಾರೆ. ಪಿಷ್ಟಪಾಕ, ಸಿಹಿಪಾಕ ಖಾದ್ಯ, ಶಾಕಪಾಕ, ಪಾನಕಪಾಕ, ಓಗರ ಪಾಕ ಮುಂತಾದ ವಿಭಿನ್ನ ಆಹಾರ ಪ್ರಕಾರಗಳು ಹಾಗೂ ಅವುಗಳ ತಯಾರಿಕೆಯ ವಿಧಾನವನ್ನು ಅತ್ಯಂತ ಶಾಸ್ತ್ರೀಯವಾಗಿ ಪ್ರಾಯೋಗಿಕವಾಗಿ ಕಂಡುಕೊಂಡಿದ್ದನ್ನು ಕಾವ್ಯಗಳಲ್ಲಿ ಗುರುತಿಸುತ್ತೇವೆ. ಮೂರನೆಯ ಮಂಗರಸನಾದಿಯಾಗಿ ಕನ್ನಡ ಕವಿಗಳು ಹಲವಾರು ಸಂದರ್ಭಗಳಲ್ಲಿ ಓಗರವನ್ನು ಕುರಿತು ಚರ್ಚಿಸಿದ್ದಾರೆ. ಓಗರಪಾಕಗಳಲ್ಲಿ ಮುಖ್ಯವಾಗಿ ಅನ್ನಗಳು, ಓದನಗಳು ಭಾತುಗಳಂತೆ 'ಕಟ್ಟೋಗರಗಳು' ಎಂಬೊಂದು ಪ್ರಭೇದವನ್ನು ಗುರುತಿಸುತ್ತೇವೆ.

ಓಗರ ಎಂಬುದಕ್ಕೆ ಅಕ್ಕಿಯ ಅನ್ನ, ಪಕ್ವವಾದದ್ದು, ಪರಿಪೂರ್ಣವಾದದ್ದು, ಬೇಯಿಸಿದ ಆಹಾರ ಎಂಬರ್ಥವನ್ನು ಶಬ್ದಕೋಶ ತಿಳಿಸುತ್ತದೆ. ಆದರೆ ಕನ್ನಡದಲ್ಲಿ ಈ ಶಬ್ದ ಸ್ವತಂತ್ರವಾಗಿ ಬಳಕೆಯಲ್ಲಿರದಿದ್ದರೂ ಮೇಲೋಗರ, ಪುಳಿಯೋಗರ, ಕಟ್ಟೋಗರ ಮುಂತಾದ ಪದಗಳಲ್ಲಿ ಜೀವಂತವಾಗಿದೆ. ಒಟ್ಟಿನಲ್ಲಿ 'ಅನ್ನ'ಕ್ಕೆ ಪರ್ಯಾಯ ಪದಗಳಾಗಿ ಬಳಸುವ ಕೂಳು ಅಶನ, ಓದನ, ಬಾನ, ಕವಳ ಮುಂತಾದವುಗಳಂತೆ ಓಗರವೂ ಒಂದು ಪರ್ಯಾಯ ಪದವಾಗಿದೆ. 'ಕಟ್ಟೋಗರ' ಎಂಬುದಕ್ಕೆ ಒಂದು ವಿಧದ ಚಿತ್ರಾನ್ನ ಎನ್ನಬಹುದು. ಕಾವ್ಯಗಳಲ್ಲಿ ಕಟ್ಟನ್ನ, ಕಟ್ಟಶನ, ಕಲಸಿದೋಗರ, ಕಲಸುಗೂಳು, ಹಾಲೋಗರ, ಮೊಸರಬಾನ ಎಂಬಿತ್ಯಾದಿ ಪರ್ಯಾಯ ಪದಗಳೂ ಉಲ್ಲೇಖವಾಗಿವೆ. ಹಾಗೆ ಕಾವ್ಯಗಳಲ್ಲಿ ಉಲ್ಲೇಖವಾದ ಹಲವು ನಮೂನೆಯ ಕಟ್ಟೋಗರಗಳನ್ನು ತಯಾರಿಸುವ ವಿಧಾನಗಳನ್ನು ಪರಿಚಯಿಸಿ ಕೊಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

### ಮಾವಿನ ಕಾಯಿ ಕಟ್ಟೋಗರ

ಮೊಸರು, ಉಪ್ಪು, ಮೆಣಸು, ನೀರುಳ್ಳಿ, ಏಲಕ್ಕಿ, ಹದನಾದ, ಮಾವಿನಕಾಯಿ, ಇವನ್ನು ಉದುರುದುರಾಗಿ ತಯಾರಿಸಿ ಬಿಸಿಯಾರಿಸಿದ ಅನ್ನಕ್ಕೆ ಕಲಸುವುದು ಮಾವಿನಕಾಯಿ ಕಟ್ಟೋಗರ. ಮೊಸರು, ಏಲಕ್ಕಿಯನ್ನು ಹೊರತು ಪಡಿಸಿದರೆ, ನಾವಿಂದು ತಯಾರಿಸುವ ಮಾವಿನಕಾಯಿ ಚಿತ್ರಾನ್ನವನ್ನು ಈ ಕಟ್ಟೋಗರ ಹೋಲುತ್ತದೆ.

### ಉಪ್ಪಿನ ಕಟ್ಟೋಗರ

ಮಾವಿನಕಾಯಿ ಹಾಗೆಯೇ ನೆಲ್ಲಿ, ಹಿಪ್ಪಲಿ, ಕರಂಜಿಗೆ, ಬೆಲ್ಲಪುಡಿ, ಮಾಗುಳಿ, ಬಿದಿರಕುಡಿ, ಅಂಬಟೆಕಾಯಿ ಮುಂತಾದ

* ಹಿರಿಯ ಶ್ರೇಣಿ ಕನ್ನಡ ಉಪನ್ಯಾಸಕರು, ಥಿಯೋಸಾಫಿಕಲ್ ಮಹಿಳಾ ಪ್ರಥಮ ದರ್ಜೆಕಾಲೇಜು, ಹೊಸಕೋಟೆ

ಕಾಯಿಗಳನ್ನು ಪ್ರತ್ಯೇಕವಾಗಿ ತಯಾರಿಸಿಕೊಂಡು ಉದುರಾದ ಅನ್ನಕ್ಕೆ ಹಾಕಿ ಬೆಳ್ಳುಳ್ಳಿ, ಹಸಿಶುಂಠಿ, ಏಲಕ್ಕಿ ಸೇರಿಸಲು ಅದು ಉಪ್ಪಿನಕಾಯ ಓಗರವಾಗುತ್ತದೆ.

ಮನುಷ್ಯ ಕಾಲಗಳಿಗೆ ಅಧೀನ. ತನ್ನ ಇಡೀ ಬದುಕಿನಲ್ಲಿ ಭೂತ-ವರ್ತಮಾನ-ಭವಿಷ್ಯತ್ತನ್ನು ಅನುಭವಿಸಿದಂತೆ ಪ್ರಕೃತಿದತ್ತವಾಗಿ ವರ್ಷದಲ್ಲಿ ಮಳೆಗಾಲ, ಚಳಿಗಾಲ ಮತ್ತು ಬೇಸಿಗೆ ಕಾಲವನ್ನು ಆಹ್ವಾನಿಸಿಕೊಳ್ಳುತ್ತಾನೆ. ಇದರಿಂದ ಆತ ಉಪಜೀವನದ ಜೀವ ಧಾತುಗಳಾದ ಆಹಾರ ಸಾಮಾಗ್ರಿಗಳ ಕಡೆಗೂ ಮುತುವರ್ಜಿ ವಹಿಸುವುದು ಅನಿವಾರ್ಯವಾಗುತ್ತದೆ. ಕಾಲೀನ ಅಗತ್ಯಗಳಿಗನು ಗುಣವಾಗಿ ಮಾವಿನಕಾಯಿ, ಬಿದಿರು, ಅಂಬಟೆಕಾಯಿ ಮುಂತಾದವನ್ನು ಸಂಗ್ರಹಿಸಿಟ್ಟುಕೊಂಡು ಕನ್ನಡಿಗರು ಈ ಬಗೆಯ ಕಟ್ಟೋಗರಗಳನ್ನು ತಯಾರಿಸುತ್ತಿದ್ದುದನ್ನು ಪ್ರಾಚೀನ ಕಾಲದಿಂದಲೂ ಕಾಣುತ್ತೇವೆ.

**ಮೊಸರ ಕಟ್ಟೋಗರ**

ಉದುರುದುರಾದ ಅನ್ನಕ್ಕೆ ಸ್ವಲ್ಪ ಬಿಸಿಯಾದ ಹಾಲನ್ನು ಹಾಕಿ ಅದಕ್ಕೆ ಹೆಪ್ಪಾಗುವಂತೆ ಮಜ್ಜಿಗೆಯನ್ನು ಬಿಟ್ಟು ಈರುಳ್ಳಿ, ಏಲಕ್ಕಿ, ಹಸಿಶುಂಠಿಯನ್ನು ಹದಪಡಿಸಿ ಸೇರಿಸಿ ಅನ್ನವನ್ನು ಕಲಸುವುದು ಮೊಸರ ಕಟ್ಟೋಗರ. ಪ್ರಾಯಶಃ ಜೋಳವನ್ನು ನೆನೆಯಿಕ್ಕಿ ಕಟ್ಟು ಮಾಡಿದ ಓಗರಕ್ಕೆ ಸ್ವಲ್ಪ ಪ್ರಮಾಣದಲ್ಲಿ ಹಾಲು ಬೆರಸಿ ಮಜ್ಜಿಗೆಯಲ್ಲಿ ನಾದಿ ಈರುಳ್ಳಿ ಹಾಕಿ ಬುತ್ತಿಬಾನ ಮಾಡುವ ಪದ್ಧತಿ ಈಗಲೂ ಉತ್ತರಕರ್ನಾಟಕ ಭಾಗದಲ್ಲಿ ಕಂಡು ಬರುತ್ತದೆ.

ಮಂಗರಸ ತನ್ನ 'ಸೂಪಶಾಸ್ತ್ರ'ದಲ್ಲಿ ತಿಳಿಸಿರುವ ಮೊಸರ ಕಟ್ಟೋಗರ ಹೋಲುವ ವಿಧಾನವನ್ನು ಚಾವುಂಡರಾಯ ತನ್ನ 'ಲೋಕೋಪಕಾರ'ದಲ್ಲಿ 'ಕಲಸೋಗರ' ಎಂದು ಹೆಸರಿಸಿದ್ದಾನೆ. ಅದರ ವಿಧಾನ ಹೀಗಿದೆ. 'ತೊಳಸಿಪತ್ರೆ' ಹಾಗೂ ಮಾದಲದ ಎಲೆಯನ್ನು ಉದಕದಲ್ಲಿ ಹಾಕಿ ಮಾಡಿದ ಕಷಾಯದ ನೀರಿನಲ್ಲಾಗಲಿ ಅಥವಾ ಗೋವಿನ ಮರದ ತೊಗಟೆಯನ್ನು ಸುಟ್ಟು ಅದರ ಬೂದಿಯನ್ನು ನೀರಿನಲ್ಲಿ ಕದಡಿ ತಿಳಿಯಾದ ಮೇಲೆ ಸೋಸಿದ ನೀರಿನಲ್ಲಾಗಲಿ ಅಥವಾ ಎರಡು ಬಗೆ ನೀರನ್ನು ಬೆರೆಸಿಕೊಂಡು ಇಟ್ಟ ಎಸರಿಗೆ ಅಕ್ಕಿ ಹಾಕಿ ಅನ್ನ ತಯಾರಿಸಬೇಕು. ಈ ರೀತಿ ತಯಾರಿಸಿದ ಅನ್ನಕ್ಕೆ ಒಳ್ಳೆಯ ಮೊಸರನ್ನು ಬೆರಸಿ ಕಲಸೋಗರ ಮಾಡಿದರೆ ಅದು ಹಲವು ದಿನ ಕೆಡದೆ ಚೆನ್ನಾಗಿರುವುದು. ಎಂದಿದ್ದಾನೆ.

ಹದವರಿತು ಮಾಡಿದ ಮೊಸರನ್ನ ಅಥವಾ ಬುತ್ತಿಬಾನ ಎರಡು ಮೂರುದಿನ ಕೆಡದೆ ಇರುವುದರಿಂದ ಹಿಂದಿನ ಕಾಲದಲ್ಲಿ ಇದನ್ನು ಪ್ರಯಾಣಕ್ಕೆ ಯೋಗ್ಯ ಎಂದು ಭಾವಿಸಿದ್ದಲ್ಲದೆ ಬಾಯಾರಿಕೆ ಹಾಗೂ ಬಳಲಿಕೆಯ ಬಾಧೆಯನ್ನು ತಣಿಸುತ್ತದೆ ಎಂದು ಬುತ್ತಿ ಕಟ್ಟಿಕೊಂಡು ಹೋಗುತ್ತಿದ್ದರು. 'ಎತ್ತಹೋದರೆ ತುತ್ತು ಬುತ್ತಿಯ ಕೊಂಡೊಯ್ದು ಉಂಬೆವಮ್ಮ' ಎಂಬ ಪುರಂದರದಾಸರ ನುಡಿ ಈ ಸಂಗತಿಗೆ ಪುಷ್ಟಿ ಒದಗಿಸಬಲ್ಲುದು. ಹಾಗೆಯೇ 'ತಂಗುಳ ಬುತ್ತಿಯ ಕಟ್ಟಿ ಹೊಟ್ಟೆಯ ಮೇಲಿಕ್ಕಿಕೊಂಡಿರ್ದಡೆ ಹಸಿವು ಹೋಗಿ ಅಪ್ಯಾಯನವಹುದೇ?' ಎಂಬ ವಚನಕಾರ ಚೆನ್ನಬಸವಣ್ಣನ ನುಡಿಯೂ ಅದನ್ನೇ ಧ್ವನಿಸುತ್ತದೆ.

**ಸೊಪ್ಪಿನ ಕಟ್ಟೋಗರ**

ನರುವಲು, ಚಕ್ಕೋತನ, ಕುಯಿಕೀರೆ, ಕೆಂಪು ಹರವೆಸೊಪ್ಪು ಮುಂತಾದವನ್ನು ನೀರಿನಲ್ಲಿ ಬೇಯಿಸಿ ಬಸಿದುಕೊಂಡು ಆ ಸೊಪ್ಪುಗಳನ್ನು ಪ್ರತ್ಯೇಕವಾಗಿಟ್ಟುಕೊಂಡು ತುಪ್ಪದ ಅನ್ನದಲ್ಲಿ ಒಂದೊಂದು ಭಾಗಕ್ಕೆ ಒಂದೊಂದು ಬಗೆಯ ಸೊಪ್ಪನ್ನು ಕಲಸಿ ಶುಂಠಿ ಈರುಳ್ಳಿ ಬೆಳ್ಳುಳ್ಳಿ, ಏಲಕ್ಕಿ ಮೊದಲಾದ ಪರಿಮಳ ದ್ರವ್ಯಗಳನ್ನು ಹಾಕಿ ಅವರವರ ಕಟ್ಟಶನ ಎಂದು ಹೆಸರಿಸಬೇಕೆಂದು ಸೂಪಶಾಸ್ತ್ರದಲ್ಲಿ ತಿಳಿಸಲಾಗಿದೆ. ಇಂದು ಸೊಪ್ಪಿನಿಂದ ಹತ್ತು ಹಲವು ನಮೂನೆಯ ಆಹಾರಗಳನ್ನು ತಯಾರಿಸಿದರೂ ಬಹುಶಃ ಕಾವ್ಯಗಳಲ್ಲಿ ಪ್ರಸ್ತಾಪಗೊಂಡ ಈ ವಿಧಾನ ಅಪರಿಚಿತವೆನಿಸುತ್ತದೆ. ಹಾಲು, ಮೊಸರು, ಸೊಪ್ಪುಗಳು ಸಮೃದ್ಧಿಯಾಗಿದ್ದ ಆ ಕಾಲದಲ್ಲಿ ಈ ಬಗೆಯ ಕಟ್ಟೋಗರಗಳನ್ನು ತಯಾರಿಸಿ ಸೇವಿಸುವ ಮೂಲಕ ಆಧುನಿಕ ವೈದ್ಯರು ಹೇಳುವ ಸಮತೋಲನ ಆಹಾರವನ್ನು ನಮ್ಮ ಪೂರ್ವಜರು ಕಾಯ್ದುಕೊಂಡಿರಬೇಕು.

**ಸಾಸುವೆಯ ಕಟ್ಟೋಗರ**

ಸಮನಾಗಿ ಅರೆದು ಕೊಂಡ ಸಾಸುವೆಗೆ ನಿಂಬೆಹುಳಿ ಹಿಂಡಿ ಹೊಂಬಣ್ಣ ಬರುವಷ್ಟು ಅರಿಶಿನ ಹಾಕಿ ಜೀರಿಗೆ, ಮೆಂತ್ಯ, ಶುಂಠಿ, ಈರುಳ್ಳಿ ಎಲ್ಲವನ್ನೂ ಸೇರಿಸಿ ಎಣ್ಣೆ-ಇಂಗಿನ ಒಗ್ಗರಣೆ ಕೊಟ್ಟು ಆರಿಸುವುದು. ಅನ್ನಕ್ಕೆ ಎಣ್ಣೆಹಾಕಿ ಉದುರು ಮಾಡಿಕೊಂಡು ಉಪ್ಪುಹಾಕಿ ಒಗ್ಗರಣೆ ಕಲಸಲು ಅದು ಸಾಸುವೆ ಕಟ್ಟೋಗರ ಎಂಬುದು ಬಹುತೇಕ ಇಂದಿನ 'ಜೀರಾರೈಸ್'ನ್ನು ನೆನಪಿಗೆ ತರುತ್ತದೆ. ಕೋನಯ್ಯನು ತನ್ನ 'ಕೃಷ್ಣಾರ್ಜುನ ಸಂಗರ'ದಲ್ಲಿ 'ಅಚ್ಚ ಸಾಸುವೆಯರೆದು ಮಾಡಿಸ ಪಚ್ಚಡಿಯ' 'ಹರಳುಪ್ಪುಗಾಯ್ಗಳ ಬೆಚ್ಚರದೊಳ ಬಲೆಯರು ನೀಡುವ ಕಲಸಿದೋಗರ' ಎಂದು ಸಾಸುವೆಯ ಕಟ್ಟೋಗರಕ್ಕೆ ಬಳಸುವ ಪರಿಕರಗಳನ್ನು ಉಲ್ಲೇಖಿಸಿದ್ದಾನೆ.

ಇಲ್ಲಿಯವರಿಗೆ ಪ್ರಸ್ತಾಪಿಸಿದ ಓಗರಗಳಲ್ಲದೆ ತುಪ್ಪದೋಗರ, ಎಣ್ಣೆಯೋಗರ ಸೌಗಂಧಿಕಾಸಹಿತ ರುಚಿಯೋಗರ, ಎಸರ ಕಟ್ಟೋಗರ ಎಂಬಿತ್ಯಾದಿ ಹಲವಾರು ಕಟ್ಟೋಗರಗಳು ಕನ್ನಡ ಸೂಪಶಾಸ್ತ್ರದಲ್ಲಿ ಪ್ರಸ್ತಾಪವಾಗಿವೆ. ಇದರಿಂದ ಒಂದಂಶ ಸ್ಪಷ್ಟವಾಗುವುದೇನೆಂದರೆ. ಸಾರಿನ ಬಳಕೆ ತೀರಾ ಕಡಿಮೆಯಿದ್ದ ಪ್ರಾಚೀನ ಕಾಲದಲ್ಲಿ ಅನ್ನಕ್ಕೇ ವಿವಿಧ ಪರಿಕರಗಳನ್ನು ಹಾಕಿ ತಯಾರಿಸುವ ಪದ್ಧತಿ ರೂಢಿಯಲ್ಲಿ ಇತ್ತೆಂಬುದು.

ಮಂಗರಸನಾಗಲಿ, ಚಾವುಂಡರಾಯನಾಗಲಿ ಅಥವಾ ಸಾಂದರ್ಭಿಕವಾಗಿ ಯಾವುದೇ ಕವಿ ಉಲ್ಲೇಖಿಸಿದಂಥ ಎಷ್ಟೋ ಕಟ್ಟೋಗರಗಳು ಈವೊತ್ತಿನ ಜನಾಂಗಕ್ಕೆ ಒಗ್ಗದಿರಲೂಬಹುದು. ಆದರೆ ಅಂದಿನ ಸಮಾಜದ ಪರಿಸರದಲ್ಲಿ ಅವು ಬಳಕೆಯಲ್ಲಿರ ಬೇಕು. ಅವನ್ನೇ ಆಯಾ ಪ್ರದೇಶದ ಕವಿಗಳು ದಾಖಲಿಸಿದ್ದಾರೆ. ಈ ರೀತಿ ಕಾವ್ಯ ಮುಖೇನ ದಾಖಲೀಕರಣ ಸಮಗ್ರವಾದೊಂದು ಪ್ರಾದೇಶಿಕ ಸಂಸ್ಕೃತಿಯನ್ನು ಅನಾವರಣ ಮಾಡಿದಂತೆಯೇ ಮತ್ತೊಂದು ವಿಷಯವನ್ನು ಇಲ್ಲಿ ಗಮನಿಸುವುದಾದರೆ ಪ್ರಾಚೀನ ಕರ್ನಾಟಕ, ಅವಿಭಕ್ತ ಪ್ರಜ್ಞೆ ಹಾಗೂ ಶ್ರಮ ಸಂಸ್ಕೃತಿಗೆ ಹೆಸರಾಗಿತ್ತು. ಪ್ರತಿಯೊಂದು ಅಡಿಗೆಗಳನ್ನು ಕೂಡಿ ಮಾಡುವಲ್ಲಿ ಅವರ ಸಾಮೂಹಿಕ ಪ್ರಜ್ಞೆಯ ಸಾಂಸ್ಕೃತಿಕ ಬದುಕನ್ನು ಹತ್ತು ಹಲವು ಆಹಾರ ಪ್ರಕಾರಗಳ ಬಳಕೆಯ ಐತಿಹಾಸಿಕತೆಯನ್ನು ಇದರಿಂದ ಗುರುತಿಸಲು ಸಾಧ್ಯ.

ನಗರೀಕರಣ, ಜಾಗತೀಕರಣ ಎಂಬ ಹುಚ್ಚುಹೊಳೆಯಲ್ಲಿ ನಮ್ಮ ಬದುಕಿನ ಶೈಲಿ ಬದಲಾಗುತ್ತಿದೆ. ಪಾಶ್ಚಿಮಾತ್ಯರ ಅನೇಕ ಆಹಾರ ಪಾನೀಯಗಳ ವ್ಯಾಮೋಹದಲ್ಲಿದ್ದೇವೆ. Fast food ಕಡೆ ಹೆಚ್ಚು ಮುಗಿಬೀಳುತ್ತ, ಅಡಿಗೆ ಮಾಡುವ ಶ್ರಮ ಕಡಿಮೆಯಾಗಿದೆ. ಸತ್ವವಿರದಿದ್ದರೂ ಶೋಕಿಯಂತೂ ಇರುತ್ತದೆ. ಆದರೆ ಶೋಕಿಯೊಂದೇ ಒಮ್ಮೆ ಕಳೆದುಕೊಂಡ ಆರೋಗ್ಯವನ್ನು ಹಿಂದಿರುಗಿ ತರಲಾರದು. ಈ ಎಲ್ಲ ಅಂಶಗಳನ್ನು ಗಮನಿಸಿ ಅಳಿದು ಹೋಗುತ್ತಿರುವ ಎಷ್ಟೋ ದೇಸೀ ಅಡಿಗೆಗಳನ್ನು ಮತ್ತೆ ಬಳಸುವ ಅನಿವಾರ್ಯತೆ ಇದೆ. ಹೀಗಾಗಿ ಅಡಿಗೆ ಬಗ್ಗೆ ಶಾಸ್ತ್ರೀಯ ಅಧ್ಯಯನ ಅಗತ್ಯವೂ ಇಂದು ಜರೂರಾಗಿ ಆಗಬೇಕಾಗಿದೆ.







**ಕ. ಇತಿಹಾಸ ಅಕಾದೆಮಿಯ ೧೩ನೆಯ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೯)**

*ಅನೇಕಾನೇಕ ಕನ್ನಡ ಕಾವ್ಯಗಳಲ್ಲಿ ಚರಿತ್ರೆಯ ಅಂಶಗಳು ಪರ್ಯಾಯವಾಗಿಯೋ ಸೂಕ್ಷ್ಮ ರೀತಿಯಾಗಿಯೋ ಹುದುಗಿಕೊಂಡಿರುತ್ತವೆ. ಎದ್ದು ಕಾಣುವ ಒಂದು ಉದಾಹರಣೆ ಎಂದರೆ ಬೆಟಗೇರಿ ಕೃಷ್ಣಶರ್ಮರ 'ಕನಕದಾಸರು ಕಂಡ ವಿಜಯನಗರ' ಪ್ರಬಂಧವು 'ಮೋಹನ ತರಂಗಿಣಿ' ಕಾವ್ಯವನ್ನು ಆಧರಿಸಿ ಆ ಕಾಲದ ರಾಜಕೀಯ ಸಾಮಾಜಿಕ ಪರಿಸ್ಥಿತಿಯ ಕೆಲವು ವಿನೂತನ ಅಂಶಗಳನ್ನು ಹೊರಗೆಡವಿದ್ದಾರೆ. ಕೆಲವೆಡೆ ಇತಿಹಾಸ ಘೋಷಿತ ಆಕರಗಳಿಗಿಂತ ಕಾವ್ಯಗಳೇ ಹೆಚ್ಚಿನ ಆಧಾರಗಳನ್ನು ಒದಗಿಸುತ್ತವೆ. ಮಧ್ಯಯುಗೀನ ಕಾಲದಲ್ಲಿ 'ತುಟಿ'ಲಾಟ್ಗಿಳ್' ಎಂಬ ಶೂರರ-ಕಲಿಗಳ ಪರಂಪರೆ ಕುರಿತು ೧೦-೧೩ನೆಯ ಶತಮಾನದವರೆಗಿನ ಕನ್ನಡ ಕಾವ್ಯಗಳಲ್ಲಿ ಅವರ ಪ್ರಸಕ್ತಿ ಬಂದಿದೆ.*

**ಡಾ. ಶ್ರೀನಿವಾಸ ಹಾವನೂರ್**
*ಸಮ್ಮೇಳನಾಧ್ಯಕ್ಷರು*







**'ಓಗರ' ಎಂದರೆ ಹಸಿದಾಹೊಟ್ಟೆಯ**
**ಆಪತ್ಕಾಲದ ತುತ್ತಿಗೆ ರುಚಿ**
**ಫಾಸ್ಟ್ ಫುಡ್ಡಿನ ತಳುಕಿನ ಮೈಕೊಬ್ಬಿಗೆ**
**ಬೆರಗಾಗದೆ ಇರಿಸಿದೆ ಶ್ರಮದ ಕುಚಿ**



ಡಾ। ಎಸ್.ಕೆ. ಜೋಶಿ*

# ಬಿಜಾಪುರದ ಅರಸರಿಗೆ ಜಲಸ್ರೋತದ ರಾಜಯೋಗ-ಜನಭೋಗ

*ಬಿಜಾಪುರದ ಭೂಗೋಲ ಹಾಗು ಭೂಗರ್ಭಗಳು ನಿದರ್ಶಿಸುವಂತೆ ಅದರ ಇಡೀ ಪರಿಸರವು ಭದ್ರಶಿಲೆಯ ಬುನಾದಿಯ ಮೇಲೆ ನಿಂತಿದೆ (Deccan trap). ದಿಲ್ಲಿ ಸುಲ್ತಾನರ ಕಾಲ, ಮೊಘಲರ ಕಾಲ, ಹಾಗು ಡೆಕ್ಕನ್ ಸುಲ್ತಾನರ ಕಾಲ. ಹೀಗೆ ತ್ರಿಕಾಲ ಘಟ್ಟಗಳಲ್ಲಿ ನಯನ ಮನೋಹರ ಹಿಂದು-ಮುಸ್ಲಿಂ ಸಂಮಿಶ್ರ ವಾಸ್ತುಕಲೆಯು ಆಯಾ ರಾಜಾಶ್ರಯದಲ್ಲಿ ಬೆಳೆದು ಬಂದಿತು. ಬಿಜಾಪುರವಂತು ವೈವಿಧ್ಯಮಯ ಐತಿಹಾಸಿಕ ನಗರ. ಬಿಜಾಪುರದ ಆದಿಲ್‌ಶಾಹಿಗಳು ನಗರದ ನಾಲ್ಕೂ ದಿಶೆಗಳಲ್ಲಿ ನಿರ್ಮಿಸಿದ ಕೆರೆ, ತಾಲಾವ್‌ಗಳಂತೆ ಇಂದು ನಮ್ಮ ಗ್ರಾಮ ಹಾಗು ಪಟ್ಟಣಗಳಲ್ಲಿ ಕೆರೆ ಸರೋವರಗಳನ್ನು ನಿರ್ಮಿಸಿದರೆ ಆಯಾ ಪ್ರದೇಶದ ಭೂಜಲ ಪಾತಳಿ ಮೇಲೇರುತ್ತದೆ. ಭಾವಿ ಜಲಸಂಗ್ರಹಾಗಾರಗಳಿಗೆ ನೀರು ತುಂಬಿ ನೆಲದ ಕೃಷಿಗೆ, ಜನತೆಯ ನಿತ್ಯಬಳಕೆಗೆ ನೀರೊದಗಣೆ ಆಗುತ್ತದೆ.*

**ಉಪೋದ್ಘಾತ :** ನಿಸರ್ಗದತ್ತವಾದ ಬಯಲು ಬಿಜಾಪುರದ ಪರಿಸರದ ಗುಣ ವಿಶೇಷ. ಬಿಜಾಪುರ ನಗರದ ಸ್ಥಳಾಯ್ಕೆಯು ಇನ್ನುಳಿದ ಸಮಕಾಲೀನ ಮಧ್ಯಯುಗದ ರಾಜಧಾನಿಗಳಂತಲ್ಲ. ಗುಡ್ಡ ಬೆಟ್ಟ ಕಂದರ ಕೊಳ್ಳಗಳ ಪರಿಸರವಿಲ್ಲದೆಯೆ, ಬಟ್ಟ ಬಯಲಲ್ಲಿ ನಿಂತ ತಾಣವದು. ಅದರ ಮಧ್ಯಯುಗೀನ ಬದುಕು ಅತಂತ್ರ. ಆಗ ಕೌಟುಂಬಿಕ ಹಾಗೂ ಸಾಮಾಜಿಕ ರಕ್ಷಣೆಯೇ ದಿನನಿತ್ಯದ ಮಹಾ ಸಮಸ್ಯೆ. ರಾತ್ರೀ ಕಾಲವಂತು ಅನುದಿನದ ಭಯಂಕರ ಭೀಷಣ ಕಾಲ. ಕೊಲೆ ಸುಲಿಗೆ ಲೂಟಿ ಕೊಳ್ಳೆಗಳ ಸಾಂಕ್ರಾಮಿಕ ಕಾಲ. ಅಂಥ ಭಯಾನಕ ಕಾಲದಲ್ಲಿ ಬಿಜಾಪುರವು ಧೈರ್ಯದಿಂದ ಮೇಲೆದ್ದು, ಅಭಿಮಾನದ ಬದುಕನ್ನು ಬಾಳಿ, ಸುಂದರ ಇತಿಹಾಸ ನೀಡಿತು. ಅದುವೇ ನಮಗೆ ಕೊಟ್ಟ ಸಾಂಸ್ಕೃತಿಕ ಸಹಬಾಳ್ವೆಯ ಬದುಕು. ನಾವು ಕನ್ನಡಿಗರು ಆ ನೆಲಕ್ಕೆ ಕೃತಕೃತ್ಯರು. ಅದರ ಕರ್ತೃ ಆದಿಲ್ ಶಹರಿಗೆ ನಮನ.

**ಭೂಗೋಲ, ಭೂಗರ್ಭ ಹಾಗೂ ಭೂಪಾತಳಿ :** ಹಾಗೆ ನೋಡಿದಲ್ಲಿ, ಬಿಜಾಪುರದ ಭೂಗೋಲ ಹಾಗೂ ಭೂಗರ್ಭಗಳು ನಿದರ್ಶಿಸುಮತೆ, ಅದರ ಇಡೀ ಪರಿಸರವು ಭದ್ರಶಿಲೆಯ ಬುನಾದಿಯ ಮೇಲೆ ನಿಂತಿದೆ, (Deccan Trap). ಭಾರ ಹಾಗೂ ಭವ್ಯವಾದ ಉತ್ತುಂಗ ಗಡುತರ ಸದೃಢ ಕಟ್ಟಡಗಳು ಒಂದರ ಬದಿಗೊಂದು ಅನತಿ ದೂರದಲ್ಲಿ ನಿಂತಿವೆ, ಇನ್ನೂ ಅಲುಗಿಲ್ಲ, ವಾಲಿಲ್ಲ, ನೇರ ಲಂಬರದಲ್ಲಿ ತಲೆ ಎತ್ತಿವೆ. ಈ ತರಹದ ಗಟ್ಟಿ ಕಲ್ಲಿನ ಬುನಾದಿ ಯುಳ್ಳ, ಹಾಗೂ ದೀರ್ಘಾಯುಷ್ಯ ನೀಡುವ ತಾಣವನ್ನು ಆಯ್ಕೆ ಮಾಡಿದ ಆಗಿನ ಭೂವಿಜ್ಞಾನಿಗಳು, ಭೌಗೋಲಿಕರು ಹಾಗೂ ಕಟ್ಟಡ ನಿಪುಣ ಅಭಿಯಂತರು (Geologists, Geographists and Engineers) ಜಾಣರು, ಕೌಶಲರು.

ಭೂ ಸಮತೋಲನವನ್ನು ಗಣನೆಗೆ ತೆಗೆದುಕೊಳ್ಳದೆಯೆ ಅವರೆಲ್ಲ ವಿಜ್ಞಾನಿಗಳು ಹೋಗಿದ್ದರೆ, ಬಿಜಾಪುರದ ವಸತಿ-ಪರಿಸರವು ಪೂರ್ವಕ್ಕೋ ಪಶ್ಚಿಮಕ್ಕೋ ವಾಲುತ್ತಿತ್ತೇನೋ? ಪೂರ್ವ ದಂಚಿನಲ್ಲಿ ನಿಂತ ದೈತ್ಯಾಕಾರದ ಗೋಳಗುಮ್ಮಟವು ಪಶ್ಚಿಮದಲ್ಲಿ ನಿರ್ಮಾಣಗೊಂಡ ಇಬ್ರಾಹಿಮ ರೋಝಾವನ್ನು ಸಮತೋಲಿಸು ವಂತಿದೆ. ದಕ್ಷಿಣದಲ್ಲಿ ನಿಂತ ಜುಮ್ಮಾ ಮಸೀದಿಯು ಉತ್ತರದ ಬಾರಾಕಮಾನ್ ಹಾಗೂ ಬಹಮನೀ ದರ್ವಾಜಾಗಳನ್ನು ಭೂ ಭಾರದಲ್ಲಿ ಸಮತೋಲಿಸುತ್ತಿದೆ. ಹೀಗೆ ಭೂಭಾರದಲ್ಲಿ ಸಮ ತೋಲನ, ಭಾವೈಕ್ಯದಲ್ಲಿ ಸಮನ್ವಯ, ಅನೇಕತೆಯಲ್ಲಿ ಐಕ್ಯತನ ತಂದು, ಬಾಳಿದ ಬಿಜಾಪುರದ ಇತಿಹಾಸದ ಬದುಕು ವಿಶಿಷ್ಟ ಬದುಕು.

**ಮಧ್ಯಯುಗೀನ ಇಸ್ಲಾಂ ವಾಸ್ತುಶಿಲ್ಪದ ಮೂರು ಟಿಸಿಲುಗಳು:** ಮಧ್ಯಯುಗೀನ ಮುಸ್ಲಿಂ ಭಾರತೀಯ ವಾಸ್ತುಕಲೆ

* ಪುರಾತತ್ವವಿದ, ೬೦, ಸಿಲ್ವರ್ ಆರ್ಚರ್ಡ್, ಧಾರವಾಡ - ೫೮೦ ೦೦೧

ಯಲ್ಲಿ (Medieval Islamic Indian Architectuere) ಪ್ರಮುಖ ಮೂರು ಟಿಸಿಲುಗಳು ಕಂಡು ಬರುತ್ತವೆ. ದಿಲ್ಲಿ ಸುಲ್ತಾನರ ಕಾಲ (ಕ್ರಿ.ಶ. ೧೩-೧೪ ಶತಕಗಳು), ಮೊಘಲರ ಕಾಲ (೧೬-೧೭ ಶತಮಾನಗಳು), ಹಾಗೂ ಡೆಕ್ಕನ್ ಸುಲ್ತಾನರ ಸಮಯ (೧೫-೧೭ ಶತಕಗಳು) ಹೀಗೆ ತ್ರಿಕಾಲ ಘಟ್ಟಗಳಲ್ಲಿ ನಯನ ಮನೋಹರವಾದ ಹಿಂದು-ಮುಸ್ಲಿಂ ಸಂಮಿಶ್ರ ವಾಸ್ತುಕಲೆಯು (Indo-Saracenic Architecture) ಆಯಾ ರಾಜಾಶ್ರಯಗಳಲ್ಲಿ ಬೆಳೆದು ಬಂದಿತು. "ಆಗ ಭಾರತದ ಮುಗಿಲ ರೇಖೆಯು" (Indian sky line), ಕಲಾ ಇತಿಹಾಸಕಾರ ಪರ್ಸಿಬ್ರಾವುನ್ ಹೇಳುವಂತೆ, "ಮುಸ್ಲಿಂ ವಾಸ್ತುಕಲೆಯ ವೈವಿಧ್ಯಮಯ ಸಾವಿರಾರು ವಿಸ್ತಾರವಾದ ಕಟ್ಟಡಗಳಿಂದ ಸಿಂಗರಿಸಲ್ಪಟ್ಟಿತು; ಮಸೀದಿಗಳು, ಮೀನಾರ್‌ಗಳು, ಗುಂಬಝ್‌ಗಳು, ಕೆರೆ, ಬಾವಿಗಳು, ಜಲಮಂದಿರಗಳು, ಕಾರಂಜಿಗಳು, ಪಾನೀ ಮಹಲ್‌ಗಳು, ಸಾವನ್ ಬಾಧೋಗಳು, ರಾಜಮಹಲುಗಳು, ದೀವಾನ್ ಎ ಖಾಸ್, ದೀವಾನ್ ಎ ಆಮ್, ಕೋಟೆ ಕೊತ್ತಳಗಳು, ಮುಂತಾದವುಗಳು ಅನಂತ ಸಂಖ್ಯೆಯಲ್ಲಿ ಕಟ್ಟಲ್ಪಟ್ಟವು.

**ವಿಕಸನದ ಬಿಜಾಪುರ ವಾಸ್ತು ಸಂಪದ :** ಈ ಮೇಲಣ ಕಾಲ ಘಟ್ಟದಲ್ಲಿ ಬಿಜಾಪುರದ ಆದಿಲ್ ಶಹರು (ಕ್ರಿ.ಶ. ೧೫-೧೭ ಶತಕಗಳು) ತಮ್ಮ ಬಹುಮುಖ ಕಲಾ ಕೊಡುಗೆಯಲ್ಲಿ, ವಾಸ್ತುಶಿಲ್ಪ, ಸಂಗೀತ, ಸಾಹಿತ್ಯ, ಇತ್ಯಾದಿ ಕ್ಷೇತ್ರಗಳಲ್ಲಿ ಬುದ್ಧಿವಂತಿಕೆ, ಚತುರತೆ ಹಾಗೂ ಸಾಮಾಜಿಕ ಮತ್ತು ಧಾರ್ಮಿಕ ಸಹಬಾಳ್ವೆಯನ್ನು (Social and religious Integration) ಪ್ರದರ್ಶಿಸಿದ್ದಾರೆ. ಸಾಮಾನ್ಯವಾಗಿ ರಾಜಕೀಯ ಕ್ಷೇತ್ರಗಳಲ್ಲಿ ಆಗಾಗ ಗೊಂದಲ ಗಳಿದ್ದರೂ, ಅವರಾಳಿದ ಶಾಂತಿಪರ್ವಗಳಲ್ಲಿ ಕ್ರಿಯಾತ್ಮಕ ಕಟ್ಟಡಗಳ ನಿರ್ಮಾಣದಲ್ಲಿ ಅವರು ಸಾಂಸ್ಕೃತಿಕ ಭಾವೋನ್ಮಾದದ ಗೀತೆಗಳನ್ನು ಕಲ್ಲುಗಳಲ್ಲಿ ಹಾಡಿದ್ದಾರೆ. (Songs in Stone). ಅವರು ನಿರ್ಮಿಸಿದ ವಿಸ್ತಾರ ಜಲಾಶಯಗಳಲ್ಲಿ, ಬಾವಿಗಳಲ್ಲಿ, ಜಲಸಂಗಾರಗಳಲ್ಲಿ ನೀಲ ತರಂಗಗಳನ್ನು ಏಳಿಸಿದ್ದಾರೆ; ಅವರು ಎತ್ತರಿಸಿದ ಉತ್ತುಂಗ ಮಸೀದಿಗಳ ಮೀನಾರಗಳಲ್ಲಿ ದೇವನನ್ನು ತೋರಿಸುವ ನೇರ ಬೆರಳುಗಳು ಆಗಸದ ಔನ್ನತ್ಯವನ್ನು ಸಂಕೇತಿಸಿವೆ: ಅವರು ಕಟ್ಟಿಸಿದ ಮರ್ತ್ಯ ಮಂದಿರಗಳು ಅಮರತ್ವದ ಆರಾಧನೆಯನ್ನು ಸೂಚಿಸಿವೆ. ಇದು ಈಗ ಇಷ್ಟು ಸಾಕು, ಅವರ ಜೆನರಲ್ ವಾಸ್ತುವಿನ ಬಗ್ಗೆ.



FIG.09

ಇನ್ನು, ಬಿಜಾಪುರದ ಮಧ್ಯಯುಗೀನ ನೀರಿನ ಸರಬರಾಜಿನ ಬಗ್ಗೆ : 'ಸಲಿಲಂ ಖಲ್ವಿದಂ ಜೀವನಂ': ನೀರೇ ಜೀವನ, ಜೀವನವೇ ನೀರು. ಬಿಜಾಪುರ ನಗರವು ನಿಮ್ನ ಪ್ರದೇಶದ ತಟ್ಟೆಯಂತಿರುವ

ಪ್ರದೇಶ, ಹಾಗಾಗಿ ಅಲ್ಲಿಯ ಜಲಪಾತಳಿಯು (Ground Water) ಬಹಳೇ ಮೇಲಿನ ಸ್ತರದಲ್ಲಿ ಸಂಗ್ರಹಿತವಾಗಿದೆ. ಸುಮಾರು ೧೫'-೨೦' ಅಗೆದರೆ ಸಾಕು, ಎಲ್ಲಿ ಅಗೆದಲ್ಲಿ ನೀರೇ ನೀರು. ಈ ಪ್ರಕೃತಿಯು ನೀಡಿದ ಕೊಡುಗೆಯನ್ನು ಹರ್ಷದಿಂದ ಸ್ವೀಕರಿಸಿ, ಪ್ರತಿ ಮನೆಮನೆಗೂ ಬಾವಿಗಳನ್ನು ತೋಡಲಾಗಿದೆ. 'ಸಾವಿರಾರು ಬಾವಿಗಳ ತಾಣ ಬಿಜಾಪುರ ಆದ್ದರಿಂದ, ಇದು ಐತಿಹಾಸಿಕವಾಗಿ 'ಬಾವಿಗಳ ನಗರ' (City of wells) ಎಂದು ಮತ್ತೊಂದು ಪೂರಕ ಹೆಸರು ಹೊಂದಿದೆ.' (ಕಲಾ ಇತಿಹಾಸಕಾರ ಪರ್ಸಿ ಬ್ರಾವುನ್‌ರ ಅವಲೋಕನವಿದು.)

ತಾಜ ಬಾವಡಿ, ಚಂದಾ ಬಾವಡಿ, ಗುಮಟ ಬಾವಡಿ, ಗುಂಡ ಬಾವಡಿ, ಬಟ್ಟ ಬಾವಡಿ, ಮಾಸಾ ಬಾವಡಿ, ಇಬ್ರಾಹಿಮ ಪುರ್ ಬಾವಡಿ, ಗುಮ್ಮಟ ಬಾವಡಿ, ಖತೀಜಾಪುರ ಬಾವಡಿ ಮುಂತಾದ ವಿಶಾಲವಾದ ಬಾವಿಗಳು ವೈಶಿಷ್ಟ್ಯಪೂರ್ಣ ವಾದ ವಿನ್ಯಾಸ ಹಾಗೂ ಆಕಾರ ಮತ್ತು ಆಳಗಳಲ್ಲಿ ಕಲ್ಲಿನಿಂದ ಕಟ್ಟಲ್ಪಟ್ಟಿವೆ.

**ಬಿಜಾಪುರದ ರಾಜರ ಉತ್ತೇಜನ :** ಇವುಗಳದ್ದೆಲ್ಲ ರಾಜರ ಉತ್ತೇಜನ, ಶಿರಿವಂತರ ಒಲವು ಹಾಗೂ ಜನಸಾಮಾನ್ಯರ ನೆರವು ಗಳ ಪಾರ್ಶ್ವವಿದೆ. ರಾಜ-ಶಿರಿವಂತ-ಜನಸಾಮಾನ್ಯ ಈ ಮೂವರು ನೀರಿಗಾಗಿ ಶ್ರಮಪಟ್ಟಿದ್ದಾರೆ. ಚಂದ್ರಕಾಂತ ಶಿಲೆಯಲ್ಲಿ ಜಲ ಹುಡುಕಿ ದ್ದಾರೆ. ಸಾಮಾಜಿಕ ಜೀವನದ ಅವಶ್ಯಕತೆಗಳಾದ ಈ ಬಾವಿಗಳು ಬೇಕಾದ ವಿನ್ಯಾಸ, ಸುತ್ತಲೂ ಸೋಪಾನ, ಒಂದೆರಡು ಬದಿಗೆ ಕೆಳಗೆ ನೀರಿಗೆ ಕೊಂಡೊಯ್ಯ ಕಮಾನಿನ ದ್ವಾರಗಳು ಇತ್ಯಾದಿ ಈ ಜಲ ಸಂಗಾರಗಳ ವೈಶಿಷ್ಟ್ಯ, (ಚಿತ್ರ ನೋಡಿ).

ಮತ್ತೆ ನೀರಿನ ಹುಡುಕುವಿಕೆಯಲ್ಲಿ, ಇವರೆಲ್ಲ ತಮ್ಮ ಜನವಸತಿಯ ಆಚೆಗೆ, ಕೋಟೆ ಗೋಡೆಯ ಆವರಣದ ಆಚೆಗೆ ಬಯಲಿಗೆ ಹೋಗಿದ್ದಾರೆ; ದಿಕ್ಕುಗಳನ್ನು ನಿರ್ಧರಿಸಿದ್ದಾರೆ; ನಗರದ ಪಶ್ಚಿಮದಲ್ಲಿ ತೊರವಿಬಟ್ಟ ಬಾವಡಿ ತಲಾವಿ, ವಾಯುವ್ಯ ದಿಕ್ಕಿನಲ್ಲಿ ರಾಮಲಿಂಗಕೆರೆ, ದಕ್ಷಿಣದಲ್ಲಿ ಬೇಗಮ್ ತಾಲಾಬ್, ಪೂರ್ವ ದಿಕ್ಕಿನಲ್ಲಿ ಮಛಲೀ ಖಂದಕ ಜಲ ಸಂಗ್ರಹ ಇತ್ಯಾದಿ ವಿಶಾಲ ಕೆರೆಗಳನ್ನು ನಿರ್ಮಿಸಿ, ಭೂಪೃಷ್ಠದ ನೀರನ್ನು (Surface Water) ಸೆರೆ ಹಿಡಿದಿದ್ದಾರೆ. ಇವೆಲ್ಲವುಗಳ ನೀರಿನ ಅಭಿಯಾಂತ್ರಿಕ ಶೈಲಿಯನ್ನು ಇನ್ನು ವಿಶೇಷವಾಗಿ ಅಭ್ಯಾಸಿಸೋಣ.

**ಬಿಜಾಪುರದ ಸ್ವಂತಿಕೆ :** ಬಿಜಾಪುರದ ಶಾಹಿಗಳು ಜಾಣರು. ಮೌಲಿಕ ಎತ್ತರದಲ್ಲಿ ತಾವೂ 'ಬುಲಂದ್' ಹಾಗೂ ಗುಣಮೌಲ್ಯಗಳ ಅರಸುವಿಕೆಯಲ್ಲಿ ವಸ್ತುನಿಷ್ಠರು. ತೂಗುತಕ್ಕಡಿ ಕಟ್ಟಡಗಳ ವಾಸ್ತುಶಿಲ್ಪದಲ್ಲಿ ಮಹತ್ತರ ವಾಸ್ತುತಜ್ಞರನ್ನು, ಸಾರ್ವಜನೀಯ (civil) ಅಭಿಯಂತರನ್ನು ರತ್ನಗಳನ್ನಾಯ್ದಂತೆ, ಜಲಸಂಗ್ರಹ ಹಾಗೂ ಅದರ ಸದ್ಬಳಕೆಗಾಗಿ ರಾಜ್ಯದ ಉತ್ತಮೋತ್ತಮ ಜಲಪರಿಣಿತರನ್ನೂ ಜಲಅಭಿಯಂತರನ್ನೂ ಆಯ್ದುಕೊಂಡು, ರಾಜ್ಯದ ಸರ್ವತೋ ಮುಖ ಏಳ್ಗೆಯಲ್ಲಿ ಅವರೆಲ್ಲರನ್ನು ತೊಡಗಿಸಿದ್ದಾರೆ. ಸಾವಿರಾರು ವರುಷಗಳಿಂದ ಬಾದಾಮಿ ಚಾಲುಕ್ಯರ ವಾಸ್ತು ವೈಭವ ರಚಿತ ರೂವಾರಿಗಳ-ಪರಂಪರಾಗತ ಹಿಂದು ಕೈಗಳಿಂದಲೇ ಮುಸ್ಲಿಂ ಧರ್ಮೀಯ ವಾಸ್ತು ಅವಶ್ಯಕತೆಗಳನ್ನು ಪೂರೈಸಿಕೊಂಡಿದ್ದಾರೆ. ಇಸ್ಲಾಂ ಧರ್ಮದ ರಸವಾಹಿನಿ, ಸತ್ವಪೂರ್ಣ ಸ್ವಂತಿಕೆ, ಲೌಕಿಕ ಶಿಲ್ಪಕಾವ್ಯದ ಪ್ರವಾಹ ಬಿಜಾಪುರದಲ್ಲಿ ಹರಿದಿದೆ.

**ಬಾವಿಗಳ ಐತಿಹಾಸಿಕ ನಗರ :** ಬಿಜಾಪುರದ ಭೂಪೃಷ್ಠ ಭೂಗೋಲ ಹಾಗೂ ಭೂವಿಜ್ಞಾನ ಹೇಳುವಂತೆ, ಈ ಐತಿಹಾಸಿಕ ನಗರವು ಒಂದು ವಿಶಾಲವಾದ ತಟ್ಟೆಯಾಕಾರದಲ್ಲಿದೆ. ನೈಸರ್ಗಿಕ ಪರ್ಜನ್ಯದ ಜಲವು ಇಲ್ಲಿ ಇಂಗಿ ಭೂಅಂತರ್ ಜಲದ ಪಾತಳಿ ಯನ್ನು ಮೇಲಕ್ಕೆ ತಂದಿದೆ. ಅದಾಗಿ, ಇಲ್ಲಿ, ಬಾವಿಗಳನ್ನು ತೋಡು ವುದು ಬಹಳ ಕಷ್ಟದ ಕೆಲಸವಲ್ಲ. ಖರ್ಚು, ಶ್ರಮಗಳು ಬಹಳ ಕಡಿಮೆ. ರಾಜರು, ಶಿರಿವಂತರು ಹಾಗೂ ಸಾರ್ವಜನಿಕರು, ವ್ಯಷ್ಠಿ ಹಾಗೂ ಸಮಷ್ಟಿಗಳ ಹಿತದೃಷ್ಟಿಯನ್ನಿಟ್ಟುಕೊಂಡು ನೂರಾರು ಬಾವಿಗಳನ್ನು ತೋಡಿದ್ದಾರೆ ಕಟ್ಟಿಸಿದ್ದಾರೆ. ಈ ಬಾವಿ ಕೃತಿಗಳು ಭೂ ಅಂತರ್‌ಜಲ (Ground Water) ವನ್ನು ಸದುಪಯೋಗ ಗೊಳಿಸುವ ವಿಧಾನಗಳು, ಕೃತಿಗಳು, ಸಾಮಾನ್ಯವಾಗಿ ಪ್ರತಿಯೊಂದು ಆಚೆಯ ಮನೆಯೂ (every next house) ಬಾವಿಯನ್ನು ಹೊಂದಿದೆ.

ಈ ಬಿಜಾಪುರದ ಬಾವಿಗಳಲ್ಲಿ ಮೂರು ತರಹದ ಬಾವಿಗಳಾಗಿ ವಿಂಗಡಿಸಬಹುದು. (೧) ಶಾಹಿ ಬಾವಿಗಳು, (೨) ಸಾರ್ವಜನಿಕ ಬಾವಿಗಳು, (೩) ವೈಯುಕ್ತಿಕ ಬಾವಿಗಳು. ಶಾಹಿಬಾವಿಗಳು ಬಿಜಾಪುರದ ಅರಸರುಗಳಿಂದ ಕಟ್ಟಿಸಲ್ಪಟ್ಟಿವೆ ಹಾಗೂ ಆಯಾ ರಾಣಿಯರ ಹೆಸರುಗಳನ್ನು ಅವುಗಳಿಗೆ ನಾಮಕರಣ ಮಾಡಲಾಗಿದೆ. ಉದಾ : ತಾಜ ಬಾವಡಿ-ಇಬ್ರಾಹಿಮ (ಎರಡನೆಯವ) ಆದಿಲ್‌ಶಹ ತನ್ನ ಪತ್ನಿ 'ತಾಜ ಸುಲ್ತಾನಾ'ಳ ಹೆಸರಿನಲ್ಲಿ ಈ ಭವ್ಯ ಬಾವಿಯು ಪ್ರಸಿದ್ಧಿ ಪಡೆದಿದೆ. 'ಚಾಂದ ಬಾವಡಿ' ಇದು ಅಲಿ ಆದಿಲ್‌ಶಹನ ಹೆಂಡತಿ,-ಅಹ್ಮದನಗರ ಶಾಹಿ ರಾಜಪುತ್ರಿ-ಅವಳ ಹೆಸರಿನಿಂದ ಕಟ್ಟಲ್ಪಟ್ಟ ಇನ್ನೊಂದು ಇದು ವಿಶಾಲವಾದ ಬಾವಿ. ಇವುಗಳಲ್ಲದೆ ; ಆಯಾ ಸರದಾರರ ಅಥವಾ ಪ್ರದೇಶದ ಹೆಸರುಗಳ ಶಿರೋನಾಮೆಯನ್ನು ಹೊಂದಿದ ಬಾವಿಗಳಿವೆ, ಉದಾ : ಇಬ್ರಾಹಿಮಪುರ ಬಾವಡಿ, ಮಹಾಲ ಬಾವಡಿ, ಗುಂಡ ಬಾವಡಿ, ಮಾಸಾ ಬಾವಡಿ, ಗುಮಟ ಬಾವಡಿ, ಖತಿಜಾಪುರ ಬಾವಡಿ, ಅಫಝುಲ್‌ಖಾನನ ಹೆಂಡತಿಯರ ಸಮಾಧಿಗಳ ಬಳಿಯ ಬಾವಡಿ, ಧಾರವಾಡಿ ಮಸೀದಿಯ ಬಾವಡಿ, ಇಖಲಾಸ್‌ಖಾನ ಮಸೀದಿ ಬಾವಡಿ, ಶಹಾನವಾಜ್ ಖಾನ ಟೂಂಬ್ ಬಾವಡಿ Shaha Nawaz Khan's tomb Bhavadi, ತಾಜಕ್‌ಖಾನ್ ಬಾವಡಿ, ಪಾರಖಾನ ಮಸೀದಿ ಬಾವಡಿ, ಜೋಡಗುಂಬಝು ಬಾವಡಿ, ಗೋಲಗುಂಬಝು ಬಾವಡಿ, ಜುಮ್ಮಾ ಮಸೀದಿ ಹತ್ತಿರದ ದಕ್ಷಿಣಕ್ಕಿರುವ ಬಾವಿ,

ಇನ್ನೂ ನಾನಾ ಹೆಸರಿನ ನೂರಾರು ಬಾವಿಗಳು ಈಗಲೂ ಅಸ್ತಿತ್ವದಲ್ಲಿವೆ.

**ಶಾಹಿ ಹಾಗೂ ಸಾರ್ವಜನಿಕ ಬಾವಿಗಳು :** ವಿನ್ಯಾಸದಲ್ಲಿ ಹಾಗೂ ವಾಸ್ತುವಿನಲ್ಲಿ ಶಾಹಿ ಬಾವಿಗಳು ಹಾಗೂ ಸಾರ್ವಜನಿಕ ಬಾವಿಗಳು, ಸಾಮಾನ್ಯವಾಗಿ ಒಂದೇ ತರಹದ ಬಂಧರಚನಾ ಕ್ರಮವನ್ನು ಹೊಂದಿವೆ. ತಾಜ ಬಾವಡಿ, ಚಾಂದ ಬಾವಡಿ ಇತ್ಯಾದಿಗಳು ಬೇಕಾದ ವಿನ್ಯಾಸ ಹಾಗೂ ಪ್ರವೇಶ ಕಮಾನುಗಳುಳ್ಳ ದ್ವಾರಗಳನ್ನು ಹೊಂದಿಕೊಂಡಿವೆ. ಪ್ರವೇಶವು ವಿಶಾಲವಾದ ಪಾವಟಿಗೆಗಳ ಮೂಲಕ ಕೆಳಗೆ ನೀರಿಗೆ ಕರೆದುಕೊಂಡು ಹೋಗುತ್ತದೆ. ನೀರಿನ ಕೆಲ ಅಡಿಗಳ ಮೇಲೆ, ಗೋಡೆಯ ಸುತ್ತ, ಪ್ರದಕ್ಷಿಣೆಗಾಗಿ ಪಥವಿದೆ. ಇನ್ನುಳಿದ ಮೂರೂ ದಿಕ್ಕುಗಳ ಗೋಡೆಗಳ ಮಧ್ಯ ಭಾಗದಲ್ಲಿ ಮಂಟಪಗಳನ್ನು ಕಟ್ಟಲಾಗಿದೆ; ಇವುಗಳ ಅಕ್ಕ-ಪಕ್ಕಗಳಲ್ಲಿ ಬಟ್ಟೆ ಬದಲಾಯಿಸಲು ಮರೆಕೋಣೆಗಳೂ ಇವೆ, (ಚಿತ್ರ).



ತಾಜಬಾವಡಿ

**ವೈಯಕ್ತಿಕ ಬಾವಿಗಳು :** ಇಂಥ ಶಾಹಿ ಬಾವಿಗಳು ಹಾಗೂ ಸಾರ್ವಜನಿಕ ಬಾವಿಗಳು ಸರ್ವತ್ರ ಜನರಿಗೆ-ಧರ್ಮ ಜಾತಿ ಮತ ಪಂಥಗಳನ್ನು ಮೀರಿ-ಪ್ರವೇಶ ನೀಡಲಾಗುತ್ತಿತ್ತು. ಇದು ಆಗಿನ ಸಾಮಾಜಿಕ ಜಾತ್ಯತೀತ ಬದುಕನ್ನು ತೋರಿಸುತ್ತದೆ. ಇವುಗಳೆಲ್ಲ ಹೊಕ್ಕು ತುಂಬುವ ಬಾವಿಗಳು. ಮಟ್ಟೆ ಹೊಡೆಯುವ ಬಾವಿಗಳೂ ಕೂಡ.

ಇನ್ನು ಸಾಮಾನ್ಯವಾದ ವೈಯಕ್ತಿಕ ಬಾವಿಗಳು ನೀರು ಸೇದುವ ಬಾವಿಗಳಾಗಿದ್ದವು. ಮತ್ತು ವೈಯಕ್ತಿಕ ಒಡೆತನದ ತೋಟಗಳಿಗೆ ನೀರು ಸರಬರಾಜು ಮಾಡಲು ವೈಯಕ್ತಿಕ ಬಾವಿಗಳು ಮಹತ್ವದ ಪಾತ್ರವಹಿಸುತ್ತಿದ್ದವು. ವಸತಿಯ ನಿಬಿಡದಲ್ಲಿದ್ದ ಬಾವಿಗಳು ಸಿಹಿ ನೀರಿನ ಬಾವಿಗಳಾಗಿದ್ದು, ರಾಟಿಯಿಂದ ಮೇಲೆ ನೀರನ್ನು ತರುವ ತಾಂತ್ರಿಕ ವ್ಯವಸ್ಥೆಗಳಿಂದ ಕೂಡಿವೆ. ಈ ವೈಯಕ್ತಿಕ ಬಾವಿಗಳಿಗೆ, ಆಯಾ ಒಡೆತನದ ಹಕ್ಕು ಇದ್ದು, ಇನ್ನುಳಿದ ಜಾತಿಗಳ ಜನರಿಗೆ ನೀರು ಕೊಂಡೊಯ್ಯಲು ಬಂಧನ ಹಾಗೂ ನಿಷೇಧವಿತ್ತು. ಕೆಳ ಜಾತಿಯ ಜನರ ಓಣಿಗಳಲ್ಲಿ ಅವರವೇ ಆದ ಬಾವಿಗಳಿದ್ದು, ಆ ಜನ ಮೇಲ್ ಜಾತಿಯವರ ಮಾಲಕೀಯ ಬಾವಿಗಳಿಂದ ನೀರನ್ನು ಕೊಂಡೊಯ್ಯುವಂತಿರಲಿಲ್ಲ.

ಬಿಜಾಪುರದ ಬಾವಿಗಳೆಲ್ಲ, ಆಳವಾಗಿ ಕೊರೆದಂತೆ, ಡೆಕ್ಕನ್ ಟ್ರಾಪ್ ಕರಿಕಲ್ಲು ಇರುವದರಿಂದ, ಭೂ ಆಳದಲ್ಲಿ ಸಿಹಿ ನೀರಿನ ಶಿಲೆಗಳು (springs) ಹರಡಿರುವುದರಿಂದ ಸಿಹಿನೀರಿನ ಬಾವಿಗಳೇ ಆಗಿವೆ (Wells of sweet waters). ಇದು ಬಿಜಾಪುರದ ನಗರಕ್ಕೆ ಪ್ರಕೃತಿ ನೀಡಿದ ವರದಾನವೆಂದು ಹೇಳಬಹುದು. ಇಂಥ ಸಿಹಿ ನೀರು, ಮಾನವನ ಬದುಕಿಗೆ ಹಾಗೂ ಸಸ್ಯಗಳ ಬೆಳವಣಿಗೆಗೆ, ಉತ್ತೇಜನ ನೀಡಿದೆ. ಆದಾಗಿ ಈ ನಮ್ಮ ಸಮಕಾಲದಲ್ಲಿಯೂ ಬಿಜಾಪುರದ ಅನಾಪ್ಶಾಹಿ ದ್ರಾಕ್ಷಿ, ಇಂಡಿ ಲಿಂಬಿ, ಕಾಯಿಪಲ್ಯ ಗಳು, ಬಾಳೆಹಣ್ಣುಗಳು, ಪ್ರಸಿದ್ಧ. 'ಶಾಹಿ' ದ್ರಾಕ್ಷೆ ಎಂಬ ಹೆಸರು ಆಗಿನ ಶಾಹಿ ಅರಸರುಗಳ ಹೆಸರನ್ನು ಅವರ ದ್ರಾಕ್ಷಿ ಪ್ರೀತಿಯನ್ನೂ ತೋರಿಸುತ್ತದೆ. ಈ ಫಲಪುಷ್ಪಗಳನ್ನು ಬೆಳೆಸುವ (Horticulture) ಕೃಷಿಕ ಕಲೆ ಆದಿಲ್‌ಶಹರ ಕಾಲದಿಂದ ನಮ್ಮೀ ಸಮಕಾಲೀನ ೨೧ನೆಯ ಶತಮಾನದವರೆಗೂ ಜೀವಂತವಾಗಿದೆ; ಹಾಗೂ ವ್ಯಾಪಾರೀಕರಣಕ್ಕೆ ಆರ್ಥಿಕವಾಗಿ ಒಂದು ದಾರಿಯಾಗಿದೆ. 'ನವಾಬಾಗ್', 'ಶಾಹಿಬಾಗ್' ಇತ್ಯಾದಿ ತೋಟಗಳು ಇಂದಿಗೂ ಆಗಿನ ತೋಟಗಳ (ಬಾಗ್) ಇತಿಹಾಸ ಹೇಳುತ್ತಿವೆ.

**ಕಾರಂಜಿಗಳು, ಪಾನೀಮಹಲ್ ಹಾಗೂ ನೀರಿನ ಹೌಜು (Houz) ಗಳು :** ಅರಮನೆಯ ಆವರಣಗಳಲ್ಲಿ, ಪ್ರತಿಷ್ಠಿತ ಸರದಾರರ ಪ್ರಾಂಗಣಗಳಲ್ಲಿ, ಮಸೀದಿಗಳ ಮುಂಗಡೆ, ಇಸ್ಲಾಂ ಗಣ್ಯರ ಸಮಾಧಿಗಳ ಮುಂಗಡೆ ನೀರಿನ ಸಂಗ್ರಹಗಳು, ವಾಟರ್ ಸಿಸ್ಟರ್ನ್‌ಗಳು ನೀರಿನ ಕಾರಂಜಿಗಳನ್ನು ಕಟ್ಟಿಸುತ್ತಿದ್ದರು. ಅವುಗಳಿಗೆ ಸತತವಾಗಿ ಹರಿಯುವ ವ್ಯವಸ್ಥೆ ಮಾಡಿದ್ದು, ಬೇಗಮ್ ತಲಾವ, ತೊರವಿ ಬಟ್ಟ ಬಾವಡಿ ತಲಾವ, ರಾಮಲಿಂಗ ತಲಾವ್ ಇತ್ಯಾದಿ ಕೆರೆಗಳಿಂದ ಇಳಿಜಾರಿನಲ್ಲಿ ಕೊಳವೆ ಮಾರ್ಗ (conduit pipe line) ಗಳ ಮಾಧ್ಯಮದಿಂದ ನೀರಿನ ಸರಬರಾಜು ಮಾಡುತ್ತಿದ್ದರು. ಕೆಲವು ಪಾನೀ ಮಹಲ್ ಎಂದು ಪ್ರಸಿದ್ಧ ಮಂಟಪಗಳು ಇವೆ.

ಚೀರಸ್ತಾ ಕೂಟಗಳಲ್ಲಿ ಮಧ್ಯದಲ್ಲಿ ಸುಂದರ ಕಾರಂಜಿಗಳು, ಕಮಲ ಆಕಾರದ ಅಥವಾ ಚೌಕಾದ ಹೌದುಗಳು ಕಟ್ಟಲ್ಪಟ್ಟಿವೆ. ಈಗ ಅಡತ್ ಬಾಝಾರ್ ಹಾಗೂ ಸಿಟಡಲ್‌ನಲ್ಲಿ ಪಾನೀ ಮಹಲ್, ಸಾತ್ ಮಂಝಿಲ್ (seven storied building) ಇತ್ಯಾದಿಗಳು ಇಂಥ ನಿದರ್ಶನಗಳಾಗಿದ್ದು, ನಗರ ಸುಂದರೀಕರಣಕ್ಕೆ ಪುಷ್ಟಿ ಕೊಟ್ಟಿವೆ. ಇಂಥ ನಗರ ಸೌಂದರ್ಯ ಕಲ್ಪನೆ ಮಧ್ಯಯುಗೀನ ಆದಿಲ್‌ಶಹರಲ್ಲಿ ಗಾಢವಾಗಿತ್ತೆಂಬುದು ಸುಸ್ಪಷ್ಟ. ಅಲ್ಲದೆ, ಬಿಜಾಪುರದಿಂದ ಪೂರ್ವಕ್ಕೆ 'ಕುಮಟಗಿ ವಾಟರ್ ಪವೀಲಿಯನ್ಸ್' ಎಂಬ ಸುಂದರ ತಾಣವು, ನೀರಿನ ಸರೋವರ, ನೀರಿನ ತೂಬು ಗಳು, ನೀರಿನ ಕಾರಂಜಿಗಳು, ನೀರಿನ ಮಂಟಪ (ಎರಡು ಅಂತಸ್ತಿನ) ಇತ್ಯಾದಿಗಳಿಂದ 'ನೀರಮಯ'ವಾದ ಕಟ್ಟಡಗಳಿಂದ

ಕೂಡಿದ್ದು, ಆದಿಲ್‌ಶಹ ರಾಜ ರಾಣಿಯರ ಮನೋರಂಜನೆಯ ತಾಣವಾಗಿತ್ತು. ಹೀಗೆ ಜಲವು ನಗರ ಸೌಂದರ್ಯ ಹಾಗೂ ಮನೋರಂಜನೆಗೆ ಬಳಸಲ್ಪಟ್ಟಿತು. ಇದೊಂದು 'ವಾಟರ್ ಗ್ರೇಡಿ ಯೆಂಟೇಶನ್ ಫ್ಲೋ', (Water gradientation flow) ಪದ್ಧತಿಯ ಅಭಿಯಾಂತ್ರಿಕ ಕೊಡುಗೆ, ಆಧುನಿಕ ಎಂಜಿನೀಯರ್ಸ್‌ಗಳಿಗೆ ದಿಕ್‌ಸೂಚಿ.




ನೀರಿನ ಮಂಟಪಗಳು, ಕುಮಟಗಿ.
WATER PAVILIONS,
KUMATGI (DT: BIJAPUR),
16 KM FROM BIJAPUR, EAST.
Built by Ibrahim Adil Shah-II
(A.D. 1580-1626)







ಇನ್ನು ಬಿಜಾಪುರ ಆದಿಲ್‌ಶಹರು ಈ ತಾಣದ ನಾಲ್ಕೂ ದಿಕ್ಕುಗಳಲ್ಲಿ ನಿರ್ಮಿಸಿದ ಜಲಾಶಯಗಳ ಬಗ್ಗೆ ನೋಡುವಾ, ದಕ್ಷಿಣದ ಬದಿಗೆ ಬೇಗಮ್ ತಲಾವ್, ಪಶ್ಚಿಮಕ್ಕೆ ತೊರವಿ ಹತ್ತಿರ ಬಟ್ಟ ಬಾವಡಿ (Butt Baodi) ತಲಾವ್, ಪಶ್ಚಿಮೋತ್ತರಕ್ಕೆ ರಾಮಲಿಂಗ ಟ್ಯಾಂಕ್, ಹಾಗೂ ಪೂರ್ವಕ್ಕೆ ಮಥಲಿ ಖಂದಕ್ ಹಾಗೂ ನಗರದ ಮಧ್ಯ ಪ್ರದೇಶದ ಅರಕಿಲ್ಲಾ ಬಳಿ ಶ್ರೀ ನರಸಿಂಹ ಖಂದಕ ಟ್ಯಾಂಕ್, ಹೀಗೆ ಐದು ವಿಶಾಲವಾದ ಜಲಸಂಗ್ರಹಗಳನ್ನು ಅರ್ಥಪೂರ್ಣವಾಗಿ ವ್ಯವಹಾರಿಕವಾಗಿ ನಿರ್ಮಿಸಿದ್ದಾರೆ. (ಚಿತ್ರ ನೋಡಿ).

**ಬೇಗಮ್ ತಲಾವ (Bagum Tank) :** ಈ ಎಲ್ಲ ಜಲಸಂಗ್ರಹಗಳಲ್ಲಿ ಆದಿಲ್‌ಶಾಹರು ಬೌದ್ಧಿಕ, ಅಭಿಯಾಂತ್ರಿಕ, ಕೌಶಲತೆಯನ್ನು ಉಪಯೋಗಿಸಿದ್ದರೆ ದಕ್ಷಿಣದ ಬೇಗಮ್ ಕೆರೆಯಿಂದ (೫೦೦ ಎಕರೆ ವಿಸ್ತಾರದ ಹಾಗೂ ೫೦' ಆಳದ) ನಗರದ ಪ್ರದೇಶದ ಮಧ್ಯದಲ್ಲಿರುವ ಅರಮನೆಗಳ (Arquilla) ಅರಕಿಲ್ಲಾವರೆಗೆ, ಇಳಿಜಾರಿನ ಪದ್ಧತಿಯಲ್ಲಿ ಅಗಲವಾದ (1 1/2' wide) ಸುಟ್ಟ ಮಣ್ಣಿನ ಪೈಪುಗಳನ್ನು ಜೋಡಿಸಿ, ಮಧ್ಯದಲ್ಲಿ ಅಲ್ಲಲ್ಲಿ water towers ಗಳನ್ನು ಕಟ್ಟಿಸಿದ್ದಾರೆ. ಈ ನೀರಿನ ಗಂಜ್ (ಪಾನೀಕಾ ಗಂಜ್)ಗಳ ಮಧ್ಯದಲ್ಲಿ ಪೊಳ್ಳು ಪ್ರದೇಶದಲ್ಲಿ ನೀರು ತುಂಬುವಂತೆ, ಆ ಪೈಪುಗಳನ್ನು ಉಪಯೋಗಿಸಿ, ಹಾಗೂ ಆ ಪೊಳ್ಳಿನಲ್ಲಿ ನೀರು ರಭಸದಿಂದ ಮೇಲಕ್ಕೆ ಏರುತ್ತ ಹೋಗಿ, ಅಲ್ಲಿಯೇ ಎತ್ತರ ಪಾತಳಿಯಲ್ಲಿ ನೀರು ಬರುವಂತೆ ಮಾಡಿ ಅಲ್ಲಿಂದ ಮತ್ತೊಂದು ಪೈಪಿನಿಂದ ನೀರು ಹೊರದೂಕುವಂತೆ (vent) ಹೊರ ಚಲನೆ ಮಾಡಿಸಿ, ಮುಂದಿನ ವಾಟರ್ ಟವರ್‌ವರೆಗೆ ನೀರು ಹರಿಯುವಂತೆ ಮಾಡಿದ್ದಾರೆ. ಹೀಗೆ ಪ್ರತಿ ವಾಟರ್ ಟವರ್‌ನಿಂದ ಮುಂದಿನ ವಾಟರ್ ಟವರ್‌ವರೆಗೆ ನೀರು ಮೇಲಕ್ಕೆ ಮೇಲಕ್ಕೆ ಏರುತ್ತ ಅರಕಿಲ್ಲಾ ಪ್ರದೇಶವನ್ನು ತಲುಪುತ್ತದೆ. ಆ ನಂತರ 'ಆಸಾರ್ ಮಹಲ'ದ ಹಿಂದಿರುವ 'ಚಿಂಚದಿಡ್ಡಿ' ಮಸೀದಿ ಹತ್ತಿರ ಕೊನೆಯ ವಾಟರ್ ಟವರಿನಿಂದ ನೀರು ಅರಕಿಲ್ಲಾದ ಎಲ್ಲ ರಾಜಮಹಲು ಗಳಿಗೆ ಹರಿಯುವಂತೆ ಮಾಡಿದ್ದಾರೆ. ಏಳು ಅಂತಸ್ತಿನ 'ಸಾತ್ ಮಂಝಿಲ್' ಕಟ್ಟಡದ ಕೊನೆಯ ಮಜಲಿಗೆ ನೀರು ತರುವಂತೆ ಅಭಿಯಾಂತ್ರಿಕ ಕಲೆಯನ್ನು, ಉಪಯೋಗಿಸಿದ್ದಾರೆ. (ಚಿತ್ರ ನೋಡಿ). ಇದೊಂದು ಅಭಿಯಾಂತ್ರಿಕತೆಯ ಮೈಲುಗಲ್ಲು.




SYPHON SYSEM,
WATER CONVEYED,
FROM BAGUM TALAO
TO BIJAPUR FORT CITY



BIJAPUR
WATER TOWERS
AT REGULAR INTERVALS & IN DESCENDING GRADIENT,
FROM BAGUM TALAO TO CITADEL

**ಬಟ್ಟ ಬಾವಡಿ ತಲಾವ್ :** ಅದೇ ರೀತಿ ತೊರವಿಯ ಬಟ್ಟ ಬಾವಡಿ ತಲಾವ್‌ನಿಂದ, ಭೂಮಿಯಲ್ಲಿ ಕಾಲುವೆಯನ್ನು ಅಗಿದು, ಆಶ್ಲರ್ ಮ್ಯಾಸನರಿಯಲ್ಲಿ ಅದನ್ನು ಕಟ್ಟಿ, ಪ್ರತಿ ಹಂತದಲ್ಲಿ ತಕ್ಕ ಇಳಿಜಾರನ್ನು ಮಾಡಿ ನೀರು ಹರಿಯುವಂತೆ ಮಾಡಿದ್ದಾರೆ. ಈ ನೀರು, ಸಂಗೀತ ಮಹಲ್, ಇಬ್ರಾಹಿಮ ರೋಝಾ, ಮಕ್ಕಾಗೇಟ್ ಇತ್ಯಾದಿಗಳಿಗೆ, ಹಾಗೂ ಅಲ್ಲಿಯ ಸಸ್ಯ ತೋಟಗಳಿಗೆ ಹರಿಯುವಂತೆ ಮಾಡಿದ್ದಾರೆ.

**ರಾಮಲಿಂಗ ತಲಾವ್ :** ಇನ್ನು ಪಶ್ಚಿಮೋತ್ತರ ದಿಕ್ಕಿನಲ್ಲಿ 'ರಾಮಲಿಂಗ ಟ್ಯಾಂಕ್' ಎಂಬ ವಿಶಾಲ ಕೆರೆಯನ್ನು ಕಟ್ಟಿಸಿ, ಶಹಪುರ, ಅಫಝಲ್‌ಖಾನ ಹೆಂಡಂದಿರರ ಸಮಾಧಿಗಳು, ನವಲಾಬಿ ಬಂಗಲೇ, ಶಹಪುರ ಗೇಟ್ ಪ್ರದೇಶ ಹಾಗೂ ಚಾಂದ ಬಾವಡಿ ತಾಣಗಳಿಗೆ, ತದನಂತರ ಬಹಮನಿ ಗೇಟ್ ಪ್ರದೇಶಗಳ ವಸತಿ ಮತ್ತು ಕೈ ತೋಟಗಳಿಗೆ ನೀರಿನ ಸರಬರಾಜನ್ನು ಪೈಪುಗಳ ಮೂಲಕ, ಇಳಿಜಾರು ತತ್ವವನ್ನು ಅಳವಡಿಸಿ ಕೈಕೊಂಡಿದ್ದಾರೆ.

**ಮಛಲೀ ಖಂದಕ ಕೆರೆ :** ಹಾಗೆಯೇ ಪೂರ್ವದ ಮಛಲೀ ಖಂದಕ ಪ್ರದೇಶದಲ್ಲಿ ಗೋಳಗುಮ್ಮಟನ ಉತ್ತರಕ್ಕೆ, ಕೋಟೆ ಗೋಡೆಗೆ ಸಮೀಪ, ಒಂದು ಕಲ್ಲಿನ ಕಣಿವೆಯನ್ನು ನಿರ್ಮಿಸಿದ್ದಾರೆ. ಇಲ್ಲಿಯ ಕಲ್ಲುಗಳನ್ನು ಸಮೀಪದ ಬ್ರಹದ್ ಗೋಳಗುಮ್ಮಟಕ್ಕೆ ರಚನೆಗಾಗಿ ಉಪಯೋಗಿಸಲಾಗಿದೆ. ಈ ರೀತಿ ಈ ಪ್ರದೇಶದ ಕಲ್ಲುಗಳನ್ನು ಅಗಿದು ತೆಗೆದ ಗಣಿಯನ್ನಾಗಿ ಮಾಡಿರುವದರಿಂದ, ಅಲ್ಲಿ ವಿಶಾಲವಾದ ಕೆರೆಯೇ ನಿರ್ಮಾಣವಾಗಿದೆ. ಇಲ್ಲಿಯ ನೀರು ಸಿಹಿ ಇರುವದರಿಂದ ಮೀನುಗಳ ಆಗರವಾಗಿದೆ. Fish Culture ಬೆಳೆಯಲು ಬಹಳ ಅನುಕೂಲವಾಗಿರುವದರಿಂದ, ಇದಕ್ಕೆ 'ಮಛಲಿ ಖಂದಕ್' ಎಂಬ ಹೆಸರು ಪ್ರಚಲಿತವಾಗಿದೆ. ಹೀಗೆಯೇ ಇದೊಂದು ಕೆರೆಯಾಗಿ ಮಾರ್ಪಟ್ಟಿದೆ.

**ಶ್ರೀ ನರಸಿಂಹ ಖಂದಕ ಕೆರೆ :** ಇನ್ನು ಅರಕಿಲ್ಲಾ ಪ್ರದೇಶದ ಶ್ರೀ ನರಸಿಂಹ ದೇವಸ್ಥಾನದ ಪ್ರದೇಶದಲ್ಲಿ ಕೋಟೆ ಗೋಡೆಗೆ ಹೊಂದಿ ಆಳವಾದ ನೀರಿನ ಸಂಗ್ರಹ ನಿರ್ಮಿಸಲಾಗಿದೆ. ಇದಕ್ಕೆ ಬೇಗಮ್ ತಲಾವ್‌ದಿಂದ ನೀರು ಪೂರೈಕೆ ಆಗುತ್ತಿತ್ತು. ಅಲ್ಲದೆ ಸ್ವಾಭಾವಿಕ ಮಳೆಯ ನೀರಿನಿಂದಲೂ ನೀರಿನ ಸಂಗ್ರಹವಾಗುತ್ತಿತ್ತು. ಈ ನೀರಿನ ಸಂಗ್ರಹದ ದಂಡೆಯ ಮೇಲೆ ಶ್ರೀ ನರಸಿಂಹ ದೇವಸ್ಥಾನವು ನಿರ್ಮಾಣಗೊಂಡದ್ದರಿಂದ ಬಹಳ ಸುಂದರ ದೃಶ್ಯ ಇಲ್ಲಿ ಕಂಡುಬರುತ್ತದೆ. ಈ ನೀರಿನ ಸಂಗ್ರಹದಿಂದ, ಅದರ ಆಚೆಗೆ ಇರುವ ಇನ್ನೊಂದು ಖಂಡಕ (Khandak) ದಲ್ಲಿ ನೀರು ಬಿಡಲಾಗುತ್ತಿತ್ತು. ಹೀಗಾಗಿ ಇಲ್ಲಿ ಜೋಡಿ (Double Moats) ಖಂಡಕಗಳಾಗಿ, ಅರಮನೆಗಳ ಮಹಲ್‌ಗಳಿಗೆ ಹೆಚ್ಚಾಗಿ ಭದ್ರತೆಯ ವ್ಯವಸ್ಥೆ ಮಾಡಿದಂತಾಗಿದೆ. ಈ ನರಸಿಂಹ ದೇವಸ್ಥಾನದ ನೀರಿನ ಸಂಗ್ರಹದಿಂದ ಅರಸಮಹಲ್, ಗಗನಮಹಲ್, ಆನಂದ ಮಹಲ್ ಇತ್ಯಾದಿಗಳಿಗೆ-ಹೂದೋಟಗಳಿಗೆ-ನೀರಿನ ಸರಬರಾಜು ಮಾಡಲ್ಪಡುತ್ತಿತ್ತು.

**ಬಿಜಾಪುರ ಆದಿಲ್‌ಶಾಹಿ ಅರಸರ ನೀರಿನ ನಿರ್ಮಿತಿ ಗಳಿಂದ (water works) ನಾವು ಕಲಿಯುವುದೇನು?:** 'ಪುರಾತನ, ಐತಿಹಾಸಿಕ ನಗರಗಳು ಸಾಯುವುದಿಲ್ಲ, ಅವುಗಳ ಅವಶೇಷಗಳ ಮೇಲೆಯೇ ಹೊಸ ಬದುಕು ಹೊಸ ನಾಗರಿಕತೆ ಮತ್ತೆ ಮತ್ತೆ ಎದ್ದೇಳುತ್ತವೆ'. ಅವುಗಳಿಂದ ನಾವು ಕಲಿಯುವುದು ಸಾಕಷ್ಟಿದೆ.

ಬಯಲು ನಾಡಿನ, ಬರಿ ಬಿಸಿಲಿನ, ಬಿಜಾಪುರದ ಪರಿಸರ ದಲ್ಲಿ ಅಪಾರ ಜಲಧಿ ನಿರ್ಮಿಸಿದ ಆದಿಲ್‌ಶಹರು ರಾಜ್ಯದಾಡಳಿತ ನಿಪುಣರು, ಕಲಾಪ್ರಿಯರು, ಪ್ರಜಾಪ್ರಿಯರು. ಅವರು ಎದುರಿಸಿದ ಪ್ರಕೃತಿ ಪ್ರಚಂಡ, ಅಂತೆಯೇ ಅವರ ಮಾನವ ಕೃತಿ ಪ್ರಚಂಡ.

ಇಪ್ಪತ್ತೊಂದನೆಯ ಶತಕದಲ್ಲಿ ನೀರಿನ ಕೊರತೆಯನ್ನು ನೀಗಿಸಲು ಪ್ರಾಯೋಗಿಕವಾಗಿ ಆದಿಲ್‌ಶಹರ ದಿಕ್ಸೂಚಿಗಳನ್ನು ಅಳವಡಿಸೋಣ:

೧) ಅವರು ಬಿಜಾಪುರದ ನಗರದ ನಾಲ್ಕೂ ದಿಶೆಗಳಲ್ಲಿ ನಿರ್ಮಿಸಿದ ಕೆರೆ-ತಾಲಾವ್‌ಗಳಂತೆ, ನಾವೂ ಕೂಡ ಹಳ್ಳಿ, ಪಟ್ಟಣ, ನಗರಗಳ ನಾಲ್ಕೂ ದಿಶೆಗಳಲ್ಲಿ ಕೆರೆ ಸರೋವರಗಳನ್ನು ಕಟ್ಟೋಣ. ಅಂದರೆ ಆಯಾ ಪ್ರದೇಶಗಳ ಭೂಜಲ ಪಾತಳಿ ಮೇಲೇರುತ್ತದೆ, ಹಾಗೂ ಬಾವಿ, ಜಲ ಸಂಗ್ರಹಾಗಾರಗಳಿಗೆ ನೀರು ತುಂಬುತ್ತದೆ. ನೆಲ ಹಚ್ಚ ಹಸಿರಾಗುತ್ತದೆ. ಅಲ್ಲಿ ಕಾಲುವೆಗಳನ್ನು ತೆರೆದು, ಸುತ್ತಲಿನ ಪ್ರದೇಶಗಳಿಗೆ ನೀರು ಸರಬರಾಜು ಆಗಿ, ಕುಡಿಯಲು ಹಾಗೂ ನಿತ್ಯ ಬಳಕೆಗೆ ಉಪಯೋಗಿಸಬಹುದು.

೨) ಹಳ್ಳಿ, ಪಟ್ಟಣ, ನಗರಗಳ ಸೌಂದರ್ಯೀಕರಣಕ್ಕೆ, ಕೈತೋಟ, ಹೂದೋಟ, ಪುಟ್ಟ ಪುಟ್ಟ ಹಣ್ಣಿನ ಗಿಡಗಳ ತೋಟ, ರಸ್ತೆಗಳ-ಚೌರಸ್ತಾ-ಮಧ್ಯದಲ್ಲಿ ಆದಿಲ್‌ಶಹರು ನಿರ್ಮಿಸಿದಂತೆ, ಕಾರಂಜಿ, ಪಾನೀಮಹಲ್‌ಗಳನ್ನು ನಿರ್ಮಿಸೋಣ.

೩) ಆದಿಲ್‌ಶಹರು ನಿರ್ಮಿಸಿದ 'ಶಾಹೀ ಬಾವಡಿ'ಗಳಂತೆ, ವಿಸ್ತಾರ ಹಾಗೂ ಆಳವಾದ ಬಾವಿಗಳನ್ನು (Stepped wells) ನಿರ್ಮಿಸಿ, (ತಾಜ ಬಾವಡಿ ಹಾಗೆ), ಸರ್ವಜನೋಪಯೋಗಕ್ಕೆ ಹೊಸ ಬಾವಿಗಳನ್ನು ಕಟ್ಟಿಸೋಣ. ಈ ರೀತಿಯ ಸಾರ್ವಜನಿಕ

ಉಪಯೋಗಕ್ಕಾಗಿ ನಿರ್ಮಿಸಿದ ಬಾವಿಗಳು ಸಮಾಜದ ಸರ್ವರೂ ಬಳಸುವದರಿಂದ 'ಜಾತ್ಯತೀತ' ಸೆಕ್ಯುಲರ್ ಸಮಾಜ ವೃದ್ಧಿಗೆ ಅನುವು ಮಾಡಿಕೊಟ್ಟಂತಾಗುವುದು.

೪) ಮನೆ ಮನೆ ಅಂಗಳದಲ್ಲಿ 'ಜಲ ಸಂಗ್ರಹ' 'ಹೌದು' ಇತ್ಯಾದಿ ನಿರ್ಮಿಸಿ, ಹಚ್ಚ ಹಸಿರು ನಿರ್ಮಾಣ ಮಾಡಿ ಫಲಪುಷ್ಪಾದಿಗಳನ್ನು ಬೆಳೆವ ಯೋಜನೆ ಕೈಕೊಳ್ಳೋಣ. ಇತ್ಯಾದಿಗಳು ಶ್ರದ್ಧೆ, ನಿಷ್ಠೆ, ತನ್ಮಯತೆ ಹಾಗೂ ನೆಲದ ಪ್ರೇಮ-ನಾಡಿನ-ರಾಷ್ಟ್ರಗಳ-ಪ್ರೇಮದಿಂದ ಮಾಡೋಣ.

ಅಂತಾಗಿ ಮಾಡಿದರೆ, ಬಿಜಾಪುರದ ಆದಿಲ್‌ಶಹರಿಂದ ನಾವು ಪಾಠ ಕಲಿತಂತಾಗುತ್ತದೆ. ನಮ್ಮ ಪರಿಸರ, ನಾಡು, ದೇಶಗಳು ಸಮಗ್ರತೆಯ ದೃಷ್ಟಿಯಿಂದ "ಸುಜಲಾಂ ಸುಫಲಾಂ, ಸಶ್ಯ ಶಾಮಲಾಂ" ಆಗುವುದರಲ್ಲಿ ಸಂಶಯವಿಲ್ಲ. ಅಂತೆ ಡಿ.ವಿ.ಜಿ. ಅವರ ಸಾರನುಡಿ ಇದು :

"ಜನಪದಗಳು ರಾಜ್ಯ ಸಾಮ್ರಾಜ್ಯಗಳು ಗುರು
ಸ್ಥಾನಗಳು ಧರ್ಮಗಳು ಭಾಷೆ ವಿದ್ಯೆಗಳು
ಕಾಣಿಸದೆ ಸಾಗಿಹವು ಕಾಲಪ್ರವಾಹದಲಿ...,
ತೆರಪನರಿಯದೆ ಪರಿವ ಕಾಲ ಪ್ರವಾಹದಲಿ
ಪುರುಷ ರಚಿತಗಳೆನಿತೊ ತೇಲಿ ಹೋಗಿಹವು
ಪುರ ರಾಷ್ಟ್ರ ದುರ್ಗಗಳು ಮತಿ ನೀತಿ ಯುಕ್ತಿಗಳು
ನಿಂತಿಹವು ಪೌರುಷದಿ ಅಮರವಾಗಿ"-ಮಂಕುತಿಮ್ಮ.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


1. Percy Brown., 1975 (Re. Edn). **Bijapur Architecture,** Islamic Period: Bombay.
೨. ಡಾ|| ಜಿ.ಎಸ್. ದೀಕ್ಷಿತ್., ೧೯೯೦, **ಪ್ರಾಚೀನ ಕರ್ನಾಟಕದ ಕೆರೆಗಳು,** ಬೆಂಗಳೂರು.
೩. ಸಿ.ಟಿ.ಎಂ. ಕೊಟ್ರಯ್ಯ., 'ವಿಜಯನಗರ ನೀರಿನ ವ್ಯವಸ್ಥೆ', **ಇತಿಹಾಸ ದರ್ಶನ,** ಕ.ಇ.ಅ. ಬೆಂಗಳೂರು. ಸಂ. ೧೫ / ೨೦೦೦.
೪. ಡಾ|| ಎಚ್. ಚಂದ್ರಶೇಖರ : 'ಬಿಜಾಪುರದ ಆದಿಲ್‌ಶಹರ ಬಾವಿಗಳು' **ಇತಿಹಾಸ ದರ್ಶನ,** ಕ.ಇ.ಅ. ಸಂ. ೧೬ / ೨೦೦೧. ಬೆಂಗಳೂರು.
೫. ಡಾ. ಎಸ್.ಕೆ. ಜೋಶಿ : 'ಬಿಜಾಪುರ ಆದಿಲ್ ಶಾಹಿಗಳ ಕಟ್ಟಡ ನಿರ್ಮಿತಿಗಳ ಮಾದರಿಗಳು (ವಿನ್ಯಾಸ ರಚನೆ, ವೈವಿಧ್ಯ, ಶೈಲಿ ಮತ್ತು ವೈಶಿಷ್ಟ್ಯ) ಹಾಗೂ ನೀರು ಸರಬರಾಜು ವ್ಯವಸ್ಥೆ ಮತ್ತು ಹೂದೋಟಗಳು.' ಸೇಮಿನಾರ್ ಪೇಪರ್: ಬಿಜಾಪುರ ಇತಿಹಾಸ, ಬಗ್ಗೆ ಡಾ|| ಅ. ಸುಂದರ ಅವರು ಏರ್ಪಡಿಸಿದ್ದ ವಿಚಾರಸಂಕಿರಣ, ೧೯೯೫.
6. Dr. S.K. Joshi., 'Water Harvestation under the Adil shahas of Bijapur', Paper read in the I.C. H.R., South Zonal Conference, sept, 2004. Bangalore.
೭. ಚಿತ್ರಗಳು : ಡಾ|| ಎಸ್.ಕೆ. ಜೋಶಿ ಹಾಗೂ ಎಸ್.ವಿ. ವೆಂಕಟೇಶಯ್ಯ, ಅಧೀಕ್ಷಕ ಪುರಾತತ್ವವಿದರು, A.S.I., ಧಾರವಾಡ ವಲಯ.
೮. ಡಾ|| ಡಿವಿಜಿ : **ಮಂಕುತಿಮ್ಮನಕಗ್ಗ.**




### ಕ.ಇ. ಅಕಾದೆಮಿಯ ೧೦ನೇ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೬)

*ನೀರಿನ ಸಮಸ್ಯೆಗೆ ಪರಿಹಾರವನ್ನು ಹಿಂದಿನವರು ಉಪಯೋಗಕರವಾಗಿ ಕಂಡುಕೊಂಡದ್ದು ಇತಿಹಾಸ ಸಂಶೋಧನೆಯಲ್ಲಿ ಒಂದು ಹೊಸ ಕ್ಷೇತ್ರವಾಗಿ ಉಪಯುಕ್ತ. ಬಾದಾಮಿ ಚಾಲುಕ್ಯ ವಿಜಯಾದಿತ್ಯನ ಕ್ರಿ.ಶ. ೭೦೭ರ ಶಿಗ್ಗಾವಿ ಶಾಸನವು (ಈಗಿನ ಗುಡಿಗೇರಿ) ಗುಡ್ಡಗೆರೆಯ ಹತ್ತಿರ ಒಟ್ಟು ೧೪ ಕೆರೆಗಳಿದ್ದ ಬಗ್ಗೆ ಹೇಳಿರುವಲ್ಲಿ ಕೆರೆ ಕಟ್ಟುವ ಪದ್ಧತಿ ಜನರಿಗೆ ಚೆನ್ನಾಗಿ ಗೊತ್ತಿತ್ತೆಂದು ಸೂಚಿತವಾಗುತ್ತದೆ. ರಾಷ್ಟ್ರಕೂಟರ ಕ್ರಿ.ಶ. ೮೭೨ರ ಚಿಂಚ್ಲಿ ಶಾಸನವು ಕೆರೆಗಳ ದುರಸ್ತಿಗೆ ನೀರುಣಿ ಸುಂಕವನ್ನು ವಸೂಲ್ಮಾಡುತ್ತಿದ್ದುದು ವ್ಯಕ್ತವಾಗುತ್ತದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕೆರೆಗಳ ಕಟ್ಟುವಿಕೆಗೆ ಮಹಾಪೂರ ಬಂತೆಂದು ಹೇಳಬಹುದು. ವಿಜಯನಗರದ ಅರಸರು ನೀರಾವರಿಗೆ ವಿಶೇಷ ಲಕ್ಷ್ಯ ಕೊಟ್ಟರು. ಅವರ ಕಾಲದಲ್ಲಿ ಕಟ್ಟಿದ ಅಣೆಕಟ್ಟನ್ನು ಚೆನ್ನಾಗಿ ಉಪಯೋಗಿಸಿಕೊಂಡ ಉದಾಹರಣೆಯನ್ನು ಹಿರೇಕೆರೂರು ತಾ. ಮದಗ ಮಾಸೂರಿನಲ್ಲಿ ನೋಡಬಹುದು. ಕೆರೆಗೆ ಸಂಬಂಧಿಸಿದ ಬಲಿದಾನದ ಕುರಿತ ಕೆಲವು ಜನಪದ ಗೀತೆಗಳಿವೆ. ಬ್ರಿಟಿಷರು ಮದಗದಂತಹ ಬಾರಿ ಕೆರೆಗಳನ್ನು ಸಂರಕ್ಷಿಸಿದ ಕಾರಣವೆಂದರೆ ಅವುಗಳಿಂದ ಕಂದಾಯ ಬರುತ್ತಿತ್ತು. ಸಾವಿರಾರು ಸಣ್ಣ ಕೆರೆಗಳನ್ನು ವರಮಾನವಿಲ್ಲವೆಂದು ಅವರು ಅಲಕ್ಷಿಸಿದರು. ಈ ಕೆರೆಗಳನ್ನು ಜನರೇ ದುರಸ್ತಿ ಮಾಡಿಕೊಳ್ಳುತ್ತಿದ್ದರು. ಇಂದು ನಮ್ಮ ಕೆರೆಗಳ ದುಸ್ಥಿತಿಗೆ ಜಲಾನಯನ ಪ್ರದೇಶವಿಲ್ಲದಿರುವುದು, ಸುತ್ತ ಗಿಡಮರಗಳಿಲ್ಲದಿರುವುದಾಗಿದೆ. ಹೀಗಾಗಿ ಕಾಡುಗಳನ್ನು ಬೆಳಸುವುದರಿಂದ ಅಂತರ್ಜಲ ಹೆಚ್ಚಿ, ಪಕ್ಷಿ ಪ್ರಾಣಿ ಸಹಿತವಾಗಿ ಜನರಿಗೆ ಅನುಕೂಲವಾಗುತ್ತದೆ ಎಂದು ಪರಿಸರವಾದಿಗಳು ತಿಳಿಸುತ್ತಾರೆ.*

**ಡಾ|| ಜಿ. ಎಸ್. ದೀಕ್ಷಿತ್**
ಸಮ್ಮೇಳನಾಧ್ಯಕ್ಷರು

ಅಮರೇಶ ಯತಗಲ್*

# ಜಲದುರ್ಗ - ಒಂದು ವಿಶಿಷ್ಟ ಐತಿಹಾಸಿಕ ನೆಲೆ

*ಭೌಗೋಳಿಕವಾಗಿ ಬಾಗಿದ ಬೆಟ್ಟಗುಡ್ಡದಂತೆ ಕಾಣುವ ಕಾರಣ 'ಕುಡಗುಂದೆ' ಕೃಷ್ಣೆಯ ನಡುಗಡ್ಡೆಯ ಪ್ರದೇಶದಲ್ಲಿ ಕೋಟೆಯನ್ನು ಹೊಂದಿರುವ ಕಾರಣ 'ಜಲದುರ್ಗ'ವೆಂದೂ ಕರೆಸಿಕೊಂಡಿದೆ. ೧೨ನೇ ಶತಮಾನದ ದೇವಗಿರಿ ಯಾದವರಿಂದ ಹಿಡಿದು ೨೦ನೇ ಶತಮಾನದ ಗುಂತಗೋಳದ ನಾಯಕರವರೆಗೆ ಈ ಪ್ರದೇಶವು ಆಳಲ್ಪಟ್ಟಿದೆ; ಇಲ್ಲಿಯ ಶಾಸನ, ಕೋಟೆ ದೇಗುಲ, ಶಿಲ್ಪ, ಗಿಡಮೂಲಿಕೆಗಳು, ಆಧುನಿಕ ಯೋಜನಾನ್ವಯ ಚಿಂತನೆಗಳು ಈ ಪ್ರದೇಶದ ಪ್ರಾಮುಖ್ಯವನ್ನು ತಿಳಿಸುತ್ತಿವೆ.*

ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕು ವೈಶಿಷ್ಟ್ಯಪೂರ್ಣ ಸಂಸ್ಕೃತಿಯನ್ನು ಹೊಂದಿದೆ. ಚರಿತ್ರಪೂರ್ವ ಇತಿಹಾಸ ಈ ತಾಲ್ಲೂಕಿಗಿದೆ. ತಾಲ್ಲೂಕಿನ ವಾಯುವ್ಯ ದಿಕ್ಕಿಗೆ ೨೭ ಕಿ.ಮೀ. ದೂರದಲ್ಲಿರುವುದೇ ಜಲದುರ್ಗ. ಎತ್ತರವಾದ ನಿಸರ್ಗ ನಿರ್ಮಿತವಾದ ಬೆಟ್ಟ, ಗುಡ್ಡ ಹಾಗೂ ಕೃಷ್ಣಾನದಿಯು ಟಿಸಿಲೊಡೆದು ಆವರಿಸಿರುವ ನಡುಗಡ್ಡೆಯ ಪ್ರದೇಶದಲ್ಲಿ ಕೋಟೆ ಇರುವದರಿಂದಲೇ ಇದನ್ನು 'ಜಲದುರ್ಗ'ವೆಂದು ಕರೆಯುತ್ತಾರೆ. ಇದೊಂದು ದ್ವೀಪದಂತೆ ಕಾಣಿಸುತ್ತದೆ. ಇದು ಈ ಭಾಗಕ್ಕೆ ಒಂದು ನಿಸರ್ಗ ರಮಣೀಯ ಸ್ಥಳವಾಗಿದೆ.

ಇದನ್ನು ಮೊದಲು 'ಕುಡುಗುಂದೆ' ಎಂದು ಕರೆಯುತ್ತಿದ್ದರಂತೆ ಎಂಬುದನ್ನು ಸ್ಥಳೀಯರು ಹೇಳುತ್ತಾರೆ. ಭೌಗೋಳಿಕ ಹಿನ್ನೆಲೆಯಲ್ಲಿಯೂ ಸಹಿತ ಇದು ಸರಿ ಎನಿಸುತ್ತದೆ. ಕುಡುಗುಂದೆ ಇದರರ್ಥ 'ಕುಡು' ಎಂದರೆ ಬಾಗಿರುವದು, 'ಗುಂದೆ' ಎಂದರೆ ಬೆಟ್ಟ, ಗುಡ್ಡ ಎಂದರ್ಥ. ಅಂದರೆ ಬಾಗಿದ ಬೆಟ್ಟ/ಗುಡ್ಡವೆಂದೂ, ಈಗಲೂ ಸ್ವಲ್ಪ ದೂರದಲ್ಲಿ ಆ ಜಲದುರ್ಗವನ್ನು ವೀಕ್ಷಿಸಿದರೆ ಅದು ಬಾಗಿದ ಬೆಟ್ಟದಂತೆ ಕಾಣುತ್ತದೆ.

**ರಾಜಕೀಯ ಚರಿತ್ರೆ :** ೧೨ನೇ ಶತಮಾನದಲ್ಲಿ ದೇವಗಿರಿಯ ಸೇವುಣರ ಆಳ್ವಿಕೆಗೊಳಪಟ್ಟಿತ್ತು. ನಂತರ ವಿಜಯನಗರದ ಅರಸರು (ಕ್ರಿ.ಶ. ೧೩೩೬ ರಿಂದ ೧೫೬೫) ಹಾಗೂ ಬಿಜಾಪುರದ ಆದಿಲ್‌ಶಾಹಿಗಳ (ಕ್ರಿ.ಶ. ೧೪೮೯-೧೬೮೬) ನಡುವೆ ನಡೆದ ಅನೇಕ ಕದನಗಳಲ್ಲೂ ಈ ಜಲದುರ್ಗದ ಪಾತ್ರ ಹಿರಿದು. ಆನಂತರ ಮೊಗಲರ ಆಳ್ವಿಕೆಗೊಳಪಟ್ಟಿತ್ತು. ಔರಂಗಜೇಬನನ್ನು (ಕ್ರಿ.ಶ. ೧೬೫೮-೧೭೦೭) ಸುರಪುರದ ಅರಸರು ವಾಗಣಗೇರಿ ಯುದ್ಧದಲ್ಲಿ ಸೋಲಿಸಿದ ಮೇಲೆ ಜಲದುರ್ಗವು ಸುರಪುರದ ನಾಯಕರ (ಕ್ರಿ.ಶ. ೧೬೩೯-೧೯೪೮) ವಶಕ್ಕೆ ಬಂದಿತು. ಸುರಪುರದ ನಾಯಕರು, ಗುಡಗುಂಟಿ ನಾಯಕರು (ಕ್ರಿ.ಶ. ೧೬೩೯-೧೯೪೮), ಗುಂತಗೋಳದ ನಾಯಕರು (ಕ್ರಿ.ಶ. ೧೪೯೧ ರಿಂದ ೧೯೪೮) ಸಂಬಂಧಿಗಳಾದುದರಿಂದ ಇವರೆಲ್ಲರ ಸಂಪರ್ಕಕ್ಕೆ ಜಲದುರ್ಗ ಬಂದಿತ್ತು. ಗುಂತಗೋಳದ ನಾಯಕರು ಕಂಚಿಯಿಂದ ಬಂದು ಮೊದಲು ಜಲದುರ್ಗದಲ್ಲಿಯೇ ಆಳ್ವಿಕೆ ಪ್ರಾರಂಭಿಸಿದರು, ಕೆಲವು ದಿನಗಳ ನಂತರ ಗುಂತಗೋಳಕ್ಕೆ ಬಂದು ನೆಲೆಸಿದರು. ಗುಂತಗೋಳದ ಸಂಸ್ಥಾನಿಕರ ಗಡಿಯನ್ನು ಸೂಚಿಸುವ ಜನಪದ ಗೀತೆಯೊಂದು ಇಂತಿದೆ.

ಮಾಮಲೆ ಮುದಗಲ್, ಕಿಲ್ಲೆ ಜಲದುರ್ಗ
ಸಮತ್ ಗೋನವಾಟ್ಲ । ಸಂಸ್ಥಾನ
ನಮ್ಮ ರಾಜರದು ॥[೧]

* ಅಧ್ಯಾಪಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಲಿಂಗಸುಗೂರು, ರಾಯಚೂರು ಜಿಲ್ಲೆ - ೫೮೪ ೧೨೨

**ಶಾಸನಗಳು** : ಜಲದುರ್ಗದಲ್ಲಿ ೨ ಶಾಸನಗಳು ದೊರಕಿವೆ, ಈಗಾಗಲೇ Inscriptions of Karnataka Vol.IV, No.57 & 59 ರಲ್ಲಿ ಪ್ರಕಟಗೊಂಡಿವೆ. ನಂತರ ಡಾ|| ಚನ್ನಬಸಪ್ಪ ಎಸ್. ಪಾಟೀಲ್‌ರವರು ಪ್ರಕಟಿಸಿದ್ದುಂಟು. ಹಾಗೂ ಕನ್ನಡ ವಿಶ್ವವಿದ್ಯಾ ನಿಲಯದ ಶಾಸನ ಸಂಪುಟ ೭ : (ರಾಯಚೂರು ಜಿಲ್ಲೆ) ಡಾ|| ದೇವರಕೊಂಡಾರೆಡ್ಡಿಯವರ ಸಂಪಾದಕತ್ವದಲ್ಲಿ ಪ್ರಕಟವಾದ ದ್ದುಂಟು. ಅದರಲ್ಲಿಯ ಒಂದು ಶಾಸನ ಇಂದು ಹೊಸ ಜಲದುರ್ಗದ ಊರ ಹೊರಗಿನ ಗುಂಡಿನ ಆಂಜನೇಯ ದೇವಾಲಯದ ಮುಂದೆ ಬಿದ್ದಿರುವ ಆಂಜನೇಯ ಮೂರ್ತಿಯ ಹಿಂಭಾಗದಲ್ಲಿ ಕೆತ್ತಲ್ಪಟ್ಟಿದೆ. ಇದು ಮೊದಲು ಜಲದುರ್ಗದ ಕೋಟೆಯಲ್ಲಿತ್ತಂತೆ; ಅದನ್ನು ಆ ಊರಿನ ಹನುಮನ ಗೌಡರೆಂಬುವವರು ತಂದು ಹೊಸ ಜಲದುರ್ಗ ದಲ್ಲಿಟ್ಟಿದ್ದಾರೆ. ಶಾಸನವು ಎರಡು ಭಾಗಗಳನ್ನು ಒಳಗೊಂಡಿದೆ. ಮೊದಲನೆಯ ಭಾಗದಲ್ಲಿ ಚಾಳುಕ್ಯ ವಿಕ್ರಮ ವರ್ಷದ ೧೨ನೇ ಪ್ರಭವ ನಾಮಸಂವತ್ಸರದ ಆಶಾಢ ಶುದ್ಧ ಆದಿತ್ಯವಾರ ದಕ್ಷಿಣಾ ಯಣ ಸಂಕ್ರಾಂತಿಯ ದಿನದಂದು ಅಂದರೆ, ೦೬-೦೬-೧೦೮೭ಕ್ಕೆ ಸರಿಹೊಂದುವದು. ಇಲ್ಲಿ ಕುಡುಗುಂದೆಯ ಮಹಾಜನಗಳು ಶ್ರೀ ಧನಂಜಯೇಶ್ವರನಿಗೆ ಭೂಮಿ ಮತ್ತು ನಿವೇಶನವನ್ನು ದಾನವಾಗಿ ಕೊಟ್ಟದ್ದನ್ನು ಉಲ್ಲೇಖಿಸುತ್ತದೆ.[೨]

ಈ ಶಾಸನದ ಎರಡನೆಯ ಭಾಗದಲ್ಲಿ ಚಾಳುಕ್ಯ ವಿಕ್ರಮ ವರ್ಷದ ೪೫ನೇ ಶಾರ್ವರಿ ಸಂವತ್ಸರದ ಶ್ರಾವಣ ಶುದ್ಧ ೧೦ ಬುಧವಾರದಂದು, ಅಂದರೆ ಕ್ರಿ.ಶ. ೦೭-೦೭-೧೧೨೦ಕ್ಕೆ ಸರಿಹೊಂದುವಲ್ಲಿ, ಕೆಲವು ವ್ಯಕ್ತಿಗಳು ಶ್ರೀ ಧನುಜಯೇಶ್ವರ ದೇವರಿಗೆ ದಾನ ನೀಡಿರುವದನ್ನು ಅದು ತಿಳಿಸುತ್ತದೆ.

ಆ ಶಾಸನ ಪೂರ್ಣ ಪಾಠಕ್ಕೆ Inscriptions of Karnataka Vol. IV, ಕನ್ನಡ ವಿ.ವಿ. ಶಾಸನ ಸಂಪುಟ (ರಾಯಚೂರು ಜಿಲ್ಲೆ) ಹಾಗೂ ಇತಿಹಾಸ ದರ್ಶನ, ಸಂ. ೧೨ (೧೯೯೭) ಪು. ೩೬ನ್ನು (ಶಾಸನ ಪಾಠವು ಪೂರ್ಣವಾಗಿ ಈಗಾಗಲೇ ಪ್ರಕಟವಾಗಿದೆ) ನೋಡಿ.[೩]

**ಶಾಸನದ ಸಾರಾಂಶ:** ಮಹಾ ಪ್ರಧಾನಿ ಮನೆವೆರ್ಗ್ಗಡೆ ದಣ್ಣಾಯಕ ಗೋವಿಂದಮಯ್ಯಗಳ ಆದೇಶಕ್ಕನುಗುಣವಾಗಿ, ಕರಡಿಕಲ್ಲುನಾಡಿನ ವಡ್ಡರಾವುಳದ ಸುಂಕವೆರ್ಗ್ಗಡೆ ಬಾಚಿಮಯ್ಯ ನಾಯಕ ಕುಡುಗುಂದೆಯಲ್ಲಿ ಒಂದೊಕ್ಕಲು ತೆರೆಯ ೫ ಪಣಗಳನ್ನು ಬಿಡುವನು. ನಾಡಮೇಲಾಳ್ಕೆಯ ಮಂಡಳಿಕನಾದ ಚೀತರಸನ ಆದೇಶದಂತೆ ಹೆಜ್ಜುಂಕದ ಸುಂಕವೆಗ್ಗಡೆ ವಿಟ್ಟಭಟ್ಟ ಆ ಊರಿನ ಒಕ್ಕಲು ತೆರೆಯನ್ನು ಬಿಟ್ಟನು. ನಾಡಮನ್ನೆಯ ಮಂಡಳಿಕ ಭೂತರಸನ (ಈತನು ಕದಂಬ ವಂಶದವನು. ಕರಡಿಕಲ್ಲು ೨೦೦ರನ್ನು ಆಳುತ್ತಿದ್ದವನು.) ಆದೇಶದಂತೆ ಊರಿನ ಒಡೆಯನಾದ ಧನುಜರಸ ಬಿಲ್ಕೊಡೆ, ಬೀರವಣ, ಸೇಸೆ, ಒಕ್ಕಲು ತೆರೆ ಬಿಟ್ಟನು. ಪೊನ್ನಕಣೆಯ ದಂಡನಾಯಕ ಬಿಟ್ಟರಸನ ಆದೇಶದಂತೆ ಹೆಗ್ಗಡೆ ಕಾವಣಭಟ್ಟನು ತಿಂಗಳುದೆರೆ, ಸೇಸೆ ಬಿಟ್ಟನು. ಕರಡಿಕಲ್ಲು ೨೦೦ರ ಸೆಟ್ಟಿಗುತ್ತ ನಾಮಿಸೆಟ್ಟಿ, ಕೇಸವಸೆಟ್ಟಿ ಮುಂತಾದವರು, ಗವರೆಯವರು, ಗಾತ್ರಿಗರು, ಬೀರರು, ಜೀರವಣಿಗರು, ಒಕ್ಕಲು ಮಕ್ಕಳು ತಾವು ಕೊಂಡ ಮತ್ತು ಮಾರಿದ ವಸ್ತುಗಳ ಮೇಲೆ ಒಂದು ಭಾಗವನ್ನು ದೇವರಿಗೆ ಕೊಟ್ಟರು. ತೆಲ್ಲಿಗರು ಗಿದ್ದ ಸೊಲ್ಲಿಗೆ ಎಣ್ಣೆಯನ್ನು ಮತ್ತು ಹೊನ್ನಕಣೆಯ ತಳದ ಬೋವರಾದ ಚಿಣ್ಣಬೋವ ಮುಂತಾದವರು ಮತ್ತು ಬಿಲ್ಲ ಮುನ್ನೂರ್ವರು ದೇವರ ನಂದಾದೀವಿಗೆಗೆ ಎರಡು ಗಾಣಗಳನ್ನು ಬಿಟ್ಟರು.[೪]

ಈ ಶಾಸನ ಜಲದುರ್ಗದಲ್ಲಿಯೇ ಇಲ್ಲವೇ ಬೇರೆ ಕಡೆಯಿಂದ ಸ್ಥಳಾಂತರಗೊಂಡಿರಬಹುದೋ ಎಂಬುದರ ಕುರಿತಾಗಿ ಕೆಲವು ಸಂಶೋಧಕರು ಸಂಶಯ ವ್ಯಕ್ತಪಡಿಸುತ್ತಾರೆ. ಆದರೆ ಇದು ಇದೇ ಸ್ಥಳದ್ದು. ಏಕೆಂದರೆ ಈ ಶಾಸನದಲ್ಲಿಯ **ಕುಡುಗುಂದೆ** ಎಂಬ ಗ್ರಾಮನಾಮ ಈ ಜಲದುರ್ಗಕ್ಕಿರುವ ಮೊದಲಿನ ಹೆಸರಾಗಿತ್ತು ಎಂದು ಸ್ಥಳೀಯರು ಹೇಳುತ್ತಾರೆ.[೫] ಹಾಗೂ ಅಲ್ಲಿಯ ಭೌಗೋಳಿ ಕತೆಯೂ ಅದಕ್ಕೆ ಸರಿಹೊಂದುತ್ತದೆ.

ಈ ಶಾಸನದಲ್ಲಿ ದೇವರ ನಂದಾದೀವಿಗೆಗೆ, ಎಣ್ಣೆಗಾಗಿ ಎರಡು ಗಾಣಗಳನ್ನು ದಾನಬಿಟ್ಟ ವಿಷಯ ಇದೆ. ಆ ಸ್ಥಳದಲ್ಲಿ ಎರಡು ಗಾಣಗಳೂ ನಮಗೆ ಲಭ್ಯವಿವೆ. ಹಾಗೂ ಈ ಶಾಸನ ದಲ್ಲಿಯ ಉಲ್ಲೇಖಿತವಾಗಿರುವ ಪೊನ್ನಕಣೆ/ಹೊನ್ನಕಣೆ ಎಂಬ ಚಿನ್ನದ ಗಣಿ, ಅಲ್ಲಿಗೆ ೩೦ ಕಿ.ಮೀ.ದಲ್ಲಿಯ ಹಟ್ಟಿ ಚಿನ್ನದ ಗಣಿಯೇ ಆಗಿದೆ. ಹೀಗಾಗಿ ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಅದು ಇದೇ ಸ್ಥಳದಲ್ಲಿದ್ದುದ್ದಾಗಿದೆ ಎನ್ನಬಹುದು.

ಇಲ್ಲಿಯ ಇನ್ನೊಂದು ಶಾಸನ ಜಲದುರ್ಗದ ಸಂಗಮೇಶ್ವರ ಗದ್ದುಗೆಯ ಮುಂದೆ ಇರುವ ಶಾಸನ. ಈ ಶಾಸನ ನಾಗರಿ ಮತ್ತು ಪರ್ಷಿಯಾ ಲಿಪಿ ಹಾಗೂ ಹಿಂದಿ ಮತ್ತು ಪರ್ಷಿಯಾ ಭಾಷೆಗಳಲ್ಲಿದ್ದ ಹಿಜಿರಾ ೧೧೧೧ ಎಂದರೆ ೧೬೯೯-೧೭೦೦ಕ್ಕೆ ಸರಿಯಾಗುತ್ತದೆ. ಇದರಲ್ಲಿ ಔರಂಗಜೇಬ್ ಅಲಮ್‌ಗೀರ್ ಚಕ್ರವರ್ತಿಯ ಖಾನ್ ಜಾದ್ (ಒಡೆಯನ ಮನೆಯಲ್ಲಿ ಹುಟ್ಟುವ ಗುಲಾಂ ಸಂತತಿ) ನಾದ ಚಿತ್ರಾಂಗದ ಬುಂದೇಲನ ಪುತ್ರ ತಕೂಕ್ ಸಿಂಗನನ್ನು ಉಲ್ಲೇಖಿಸುತ್ತದೆ.[೬]

**ಕೋಟೆ** : ಇಲ್ಲಿ ೫ ಸುತ್ತಿನ ಕೋಟೆ ಇದೆ. ೧೨ನೇ ಶತಮಾನದಲ್ಲಿ ದೇವಗಿರಿಯ ಯಾದವರು ಕಟ್ಟಿಸಿರಬಹುದೆಂದು



ಕೋಟೆ

ಕೆಲವು ವಿದ್ವಾಂಸರು ಬರೆಯುತ್ತಾರೆ. ಆದರೆ ಅದಕ್ಕೆ ಸಂಬಂಧಿಸಿದ ಯಾವುದೇ ಶಾಸನಗಳನ್ನು ಉಲ್ಲೇಖಿಸಿರುವದಿಲ್ಲ. ೧೪, ೧೫, ೧೬ ಮತ್ತು ೧೭ನೇ ಶತಮಾನಗಳಲ್ಲಿ ಇನ್ನಷ್ಟು ಅಭಿವೃದ್ಧಿಯನ್ನು ಕಂಡಿದೆ. ಈ ಕೋಟೆಯು ಆದಿಲ್‌ಶಾಹಿಗಳ ವಾಸ್ತುಶೈಲಿಯಲ್ಲಿದೆ. ಈ ಕೋಟೆಯನ್ನು ಕಟ್ಟಲು ದೊಡ್ಡದಾದ ಚೌಕಾಕಾರದ ಕಲ್ಲುಗಳನ್ನು, ಇನ್ನೂ ಕೆಲವು ಕಡೆ ಉದ್ದವಾದ ದಿಮ್ಮಿಯಾಕಾರದ, ಅನಿಯಮಿತಾಕಾರದ ಕಲ್ಲುಗಳನ್ನು ಬಳಸಿದ್ದಾರೆ. ಕೋಟೆಯ ಒಳಭಾಗದಲ್ಲಿ ಚಿಕ್ಕ ಕಲ್ಲುಗಳನ್ನು ಉಪಯೋಗಿಸಿದ್ದಾರೆ. ಹಾಗೂ ಕೋಟೆಯ ಕಲ್ಲುಗಳು ಒಂದಕ್ಕೊಂದು ಹೊಂದಿಕೊಂಡಿರುವದರಿಂದ ಎಲ್ಲಿಯೂ ಸಂದಿಗಳು ಕಂಡುಬರುವದಿಲ್ಲ. ವಿಜಯನಗರದ ಅರಸರ ಮತ್ತು ಆದಿಲ್‌ಶಾಹಿಗಳ ಕಾಲದಲ್ಲಿ ಇದೊಂದು ಸೈನಿಕರ ಠಾಣೆಯಾಗಿದ್ದು, ಅಪರಾಧಿಗಳನ್ನು ಬಂಧಿಸಿಡುವ ಸ್ಥಳವಾಗಿತ್ತು. ಬಂಧಿಸಿಡುತ್ತಿದ್ದ ಮನೆಗಳ ಕುರುಹುಗಳನ್ನು ಇಂದಿಗೂ ಕಾಣಬಹುದಾಗಿದೆ. ಆ ಮನೆಗಳನ್ನು ದೊಡ್ಡ ದೊಡ್ಡ ಕಲ್ಲುಗಳಿಂದ ಕಟ್ಟಿದ್ದಾರೆ. ಭೂಸಂಶೋಧನೆಯಾದರೆ ಇನ್ನೂ ಅನೇಕ ಮನೆಗಳು ಸಿಗಬಹುದು. ಕೆಲವು ಕಡೆ ಸದ್ಯ ಗೋಡೆಗಳು ಮಾತ್ರ ಉಳಿದಿವೆ.

ಸಂಗಮನಾಥ ದೇವಾಲಯದ ವಾಯುವ್ಯ ಭಾಗಕ್ಕಿರುವ ೪೦೦ ರಿಂದ ೫೦೦ ಅಡಿ ಎತ್ತರವಿರುವ ಕೋಟೆಯ ಮೇಲಿನಿಂದ ಅಪರಾಧಿಗಳನ್ನು ಕೃಷ್ಣಾ ನದಿಗೆ ದೂಡುತ್ತಿದ್ದರಂತೆ. ಹೀಗೆ ದೂಡುವ


ತೊಟ್ಟಿಲ ಬುರುಜು

ಬುರುಜನ್ನು ಸ್ಥಳೀಯರು **ತೊಟ್ಟಿಲ ಬುರುಜು** ಎಂದು ಕರೆಯುತ್ತಾರೆ. ಅದು ಕಲ್ಲಿನ ತೊಟ್ಟಿಲಾಗಿತ್ತು, ಆ ತೊಟ್ಟಿಲಿನಲ್ಲಿ ತೂಗುತ್ತಾ ಅಪರಾಧಿಯನ್ನು ಮೇಲಿನಿಂದ ಕೆಳಕ್ಕೆ ಎಸೆಯುತ್ತಿದ್ದರಂತೆ.

ಇಲ್ಲಿ ಬೃಹದಾಕಾರದ ಕಾವಲು ಗೋಪುರಗಳಿವೆ. ಇವುಗಳ ಮೇಲೆ ನಿಂತು, ಸುತ್ತಲೂ ದೃಷ್ಟಿ ಹಾಯಿಸಿದರೆ ಸುಮಾರು ೧೦ ರಿಂದ ೨೦ ಕಿ.ಮೀ. ದೂರದಲ್ಲಿರುವ ವೈರಿ ಸೈನಿಕರು ಕಾಣಿಸುತ್ತಿದ್ದರಂತೆ. ಹೀಗಾಗಿ ವೈರಿಗಳ ಅಕ್ರಮಣವನ್ನು ತಿಳಿಯಬಹುದಾಗಿತ್ತು. ಈ ಕೋಟೆಯ ಮೇಲೆ ನಿಂತರೆ ಮುದಗಲ್ ಕೋಟೆ ಕಾಣುತ್ತಿತ್ತಂತೆ; ೫ನೇ ಸುತ್ತಿನ ಒಳಕೋಟೆಯಲ್ಲಿ ಅರಮನೆಯಂತಹ ಬೃಹದಾಕಾರದ


ಕೋಟೆಯ ಮೇಲೆ ಬೃಹದಾಕಾರದ ಕಟ್ಟಡ

ಕಟ್ಟಡವೊಂದಿದೆ, ಇದರಲ್ಲಿ ಹಜಾರವಿದೆ. ಪಕ್ಕ ವೃತ್ತಾಕಾರದ ಕೊತ್ತಳದ ಗೋಡೆಗೆ ಬಂದೂಕಿನ ಕಿಂಡಿಗಳಿವೆ, ಕಟ್ಟಡ ಎತ್ತರವಾಗಿರುವದರಿಂದ ಮೇಲೆ ಹತ್ತಲು ಪಾವಟಿಗೆಗಳನ್ನು ಮಾಡಿದ್ದಾರೆ.

**ದೇವಾಲಯಗಳು** : ಇಲ್ಲಿರುವ ದೇವಾಲಯಗಳಲ್ಲಿ ನೀಲಮ್ಮನ ದೇವಾಲಯ, ಈಶ್ವರ ದೇವಾಲಯ, ಗಂಗಾಧರ ದೇವಾಲಯ, ಹನುಮಂತನ ಕಟ್ಟೆ, ಬಸವಣ್ಣನ ಕಟ್ಟೆ, ಮಂಡ ಎಲ್ಲಮ್ಮನ ದೇವಾಲಯ, ಸಂಗಮೇಶ್ವರ ದೇವಾಲಯಗಳು ಪ್ರಮುಖವಾಗಿವೆ.

ಇಸ್ಲಾಮಿಕ್ ವಾಸ್ತುಶೈಲಿಯಲ್ಲಿರುವ ಶ್ರೀ ಸಂಗಮೇಶ್ವರ ದೇವಾಲಯ ಈ ದೇವಾಲಯದ ಒಳಗೆ ಸಂಗಮನಾಥನ ಸಮಾಧಿ


ಶ್ರೀಸಂಗಮನಾಥನ ದೇವಾಲಯ

ಇದೆ. ಕೆಲವರು ಇದನ್ನು ಸೂಫೀಕರಣಕ್ಕೆ ಒಳಗಾದ ಸಂತರ ಸಮಾಧಿ ಎಂದು ಕರೆಯುತ್ತಾರೆ. ಈ ದೇವಸ್ಥಾನಕ್ಕೆ ಮೇಲ್ಛಾವಣಿಯಾಗಲಿ, ಕಳಸವಾಗಲಿ ಇಲ್ಲ. ಇಲ್ಲಿಗೆ ಹಿಂದೂಗಳು, ಮುಸಲ್ಮಾನರು ಭಕ್ತಿಯಿಂದ ಬಂದು ಹೋಗುವರು. ಇದರ ಕುರಿತಾಗಿ ಸಂಶೋಧನೆಯ ಅವಶ್ಯಕತೆ ಇದೆ.

**ಬಾವಿ** : ಸಂಗಮನಾಥನ ದೇವಾಲಯದ ಬಲಗಡೆಗೆ ಒಂದು ವಿಶಾಲವಾದ ಬಾವಿ ಇದೆ. ಸ್ಥಳೀಯರು ಇದನ್ನು **ಸಿಡಿಲು** ಬಾವಿ ಎಂದು ಕರೆಯುತ್ತಾರೆ. ಕಾರಣ ಒಂದು ಕಾಲಕ್ಕೆ ಸಿಡಿಲು ಬಡಿದು ಅದು ಬಹಳ ಆಳವಾಗಿದೆ ಎನ್ನುವರು. ಆದರೆ ಅದು ವ್ಯವಸ್ಥಿತವಾಗಿ ತೋಡಿದ ಬಾವಿಯೇ ಆಗಿದೆ. ಒಂದು ಕಡೆ ನೀರನ್ನು ಸೇದಲು, ಕಟ್ಟೆಯನ್ನು ಕಟ್ಟಲಾಗಿದೆ. ಹಾಗೂ ಇಳಿಯಲು ಪಾವಟಿಗೆಗಳೂ ನಮಗೆ ಸಿಗುತ್ತವೆ. ಬಹುಶಃ ಇಲ್ಲಿ ವಾಸವಾಗಿದ್ದ ಸೈನಿಕರು ನೀರಿಗಾಗಿ ಬಳಸುತ್ತಿದ್ದರೆನ್ನಬಹುದಾಗಿದೆ.

**ಹನುಮನ ವಿಗ್ರಹಗಳು** : ದಕ್ಷಿಣದಿಂದ ಬಂದ ಗೋಸಲ ವಂಶದ ಕಲ್ಲಪ್ಪ ನಾಯಕನು ಮುದಗಲ್‌ಗೆ ಬಂದು ನೆಲೆಸಿದ ನಂತರ, ಆತನ ೭ ಜನ, ಮಕ್ಕಳ ಹೆಸರುಗಳು 'ಹನುಮಪ್ಪನಾಯಕ' ರೆಂದು ಇದ್ದವು. ಅವರಲ್ಲಿಯ ಹಿರೇಹನುಮಪ್ಪನಾಯಕ, ಮುಮ್ಮಡಿ ಹನುಮಪ್ಪ ನಾಯಕ, ೭ನೇ ಚಿಕ್ಕ ಹನುಮನಾಯಕರುಗಳು ಜಲದುರ್ಗದಲ್ಲಿ ಬಂದು ಕೆಲವು ಕಾಲ ಇದ್ದು ನಂತರದಲ್ಲಿ ಹಿರೇ ಹನುಮಪ್ಪನಾಯಕ ಕೊಡೇಕಲ್ಲಿಗೆ ಹೋದ. ಮುಮ್ಮಡಿ ಹನುಮಪ್ಪ ನಾಯಕ ಬೀದರ್ ಕಡೆಗೆ ಹೋದ. ಕೊನೆಯ ಚಿಕ್ಕ ಹನುಮನಾಯಕ ಕಕ್ಕೇರಿಯ ಕಡೆಗೆ ಹೋದ. ಈತನ ವಂಶಜರೇ ಮುಂದೆ ಸುರಪುರ, ಗುಡಗುಂಟಿ, ಸಂಸ್ಥಾನಗಳ ಮೂಲ ಪುರುಷರಾದರು ಎಂದು ಸ್ಥಳೀಯ ಕಥೆಗಳಿವೆ. ಜೊತೆಗೆ ಇಲ್ಲಿ ನಮಗೆ ಹನುಮನ ಮೂರ್ತಿಗಳು ಲಭ್ಯವಾಗಿವೆ. ಅವುಗಳು ಇಲ್ಲಿ ನೆಲೆಸಿದ ಹನುಮನಾಯಕರ ದ್ಯೋತಕವೆನ್ನುತ್ತಾರೆ ಸ್ಥಳೀಯರು. ಹೀಗಾಗಿ ಇವುಗಳ ಕುರಿತಾಗಿ ಸಂಶೋಧನೆಯ ಅಗತ್ಯವಿದೆ.

**ಸಂಸ್ಥಾನಿಕರ ಆಡಳಿತ** : ಸುರಪುರದ ಅರಸರ ಒಡೆತನದಲ್ಲಿ ಜಲದುರ್ಗವಿತ್ತು. ಸುರಪುರ, ಗುಡಗುಂಟಿ, ಗುಂತಗೋಳದ ರಾಣಿಯರು ಬೇಸಿಗೆ ಕಾಲದಲ್ಲಿ ಜಲವಿಹಾರಕ್ಕೆ ಬರುತ್ತಿದ್ದರೆಂದು ಸ್ಥಳೀಯರು ಹೇಳುತ್ತಾರೆ. ಮಂಡ ಎಲ್ಲಮ್ಮನ ಹೊಂಡದ ಪಕ್ಕದಲ್ಲಿಯೇ ಸ್ನಾನಗೃಹಗಳಿದ್ದವು ಎಂದು ಪ್ರತೀತಿ ಇದೆ. ಈಗ ಅದರ ಅವಶೇಷಗಳನ್ನು ಗುರುತಿಸುವದು ಕಷ್ಟವಾಗಿದೆ.

ದಟ್ಟ ಅರಣ್ಯದಿಂದ ಕೂಡಿದ್ದ ಜಲದುರ್ಗದಲ್ಲಿ ಕಾಡುಪ್ರಾಣಿಗಳು ವಾಸವಾಗಿದ್ದವು. ಹೀಗಾಗಿ ಸುರಪುರ, ಗುಡಗುಂಟಿ, ಗುಂತಗೋಳದ ನಾಯಕ ಅರಸರು ಅನೇಕ ಬಾರಿ ಬೇಟೆಗಾಗಿ ಈ ಸ್ಥಳಕ್ಕೆ ಬಂದು ಹೋಗುತ್ತಿದ್ದರು.

**ಸಮಾಧಿಗಳು** : ಕೋಟೆಯ ಹೊರಗಡೆ ಇಂದಿನ ಹೊಸ ಜಲದುರ್ಗದ ಸಮೀಪ ಇರುವ ಸಮಾಧಿಗಳು ಅಂದಿನ ಸೈನಿಕರ ಮತ್ತು ಅಧಿಕಾರಿಗಳ ಸಮಾಧಿಗಳಾಗಿರಬಹುದು. ಇವುಗಳನ್ನು ಅವರ ಅಧಿಕಾರ ಅಂತಸ್ತುಗಳಿಗನುಸಾರವಾಗಿ ನಿರ್ಮಿಸಿರುವದನ್ನು ಕಾಣಬಹುದು. ಅಲ್ಲದೇ ಅದರ ಪಕ್ಕಕ್ಕೆ ಇನ್ನೂ ಕೆಲವು ಸಮಾಧಿಗಳಿವೆ. ಅವುಗಳು ಬೃಹತ್ ಶಿಲಾ ಸಮಾಧಿಗಳು. ಬೃಹತ್ ಶಿಲಾಯುಗದ ಮಾನವರು ಸತ್ತವರನ್ನು ಹೂಳುತ್ತಿದ್ದರು. ಹೀಗಾಗಿ



ಸೈನಿಕರ ಸಮಾಧಿ

ಅಂದಿನ ನಿವಾಸಿಗಳ ಬೃಹತ್ ಶಿಲಾ ಸಮಾಧಿಗಳನ್ನು ನಾವು ಅನೇಕ ಕಡೆ ನೋಡಬಹುದಾಗಿದೆ. ೧೯೫೪ರಲ್ಲಿ ಡಾ|| ಅಲ್ಟೇಕರ್ ಅವರು ರಾಯಚೂರು ಜಿಲ್ಲೆಯ ಪಿಕಳಿಹಾಳದಲ್ಲಿ ಮತ್ತು ೧೯೫೯ರಲ್ಲಿ ಡಾ|| ಶೇಷಾದ್ರಿರವರು ಮಸ್ಕಿಯಲ್ಲಿ ಇಂತಹ ಸಮಾಧಿಗಳನ್ನು ಶೋಧಿಸಿದ್ದಾರೆ. ಇಂಥ ಶಿಲಾಸಮಾಧಿಗಳು ಜಲದುರ್ಗದಲ್ಲಿ ಸುಮಾರು ೩೦-೪೦ ಇವೆ. ಇವುಗಳು ನೇರವಾದ ಸಾಲಿನಲ್ಲಿವೆ. ಒಂದು ಸರಳವಾದ ದಾರಿಯಂತೆ ಎರಡೂ ಬದಿಗೆ ಸಮಾಧಿಗಳನ್ನು ಮಾಡಿದ್ದಾರೆ. ಒಂದರ ನಂತರ ಒಂದು ಸರಳ



ಬೃಹತ್ ಶಿಲಾ ಸಮಾಧಿ

ರೇಖೆಯಲ್ಲಿ ತಯಾರಿಸಿದ್ದಾರೆ. ಇವುಗಳನ್ನು ಉತ್ಖನನ ಮಾಡಿದರೆ ಇನ್ನೂ ಹೊಸ ಅಂಶಗಳು ಬೆಳಕಿಗೆ ಬರಲು ಸಾಧ್ಯವಾಗಬಹುದು.

**ಅಮರಕಲ್ಯಾಣ :** ಜಲದುರ್ಗವನ್ನು ಅಮರಕಲ್ಯಾಣವೆಂದು ಕರೆಯುವರು. ಕಾರಣ ಕಲಬುರ್ಗಿ ಜಿಲ್ಲೆಯ ಸುರಪುರ ತಾಲ್ಲೂಕಿನ ಕೊಡೇಕಲ್ ಗ್ರಾಮದ ಬಸವಣ್ಣ ಎಂಬಾತ ಕ್ರಿ.ಶ. ೧೪೮೪ರಲ್ಲಿ ಶರಣಗಣಗಳೊಂದಿಗೆ ಜನದುರ್ಗಕ್ಕೆ ಆಗಮಿಸಿ, ತನ್ನ ಅಮರ ಕಲ್ಯಾಣ ಸಂಘಟನೆಯನ್ನು ಮುಂದುವರಿಸಿದನಂತೆ.[೭] ಆರೂಢ ಸಂಗಮನಾಥ, ಪರಮಾನಂದ ಪ್ರಭು, ತಿಂತಿಣಿ ಮೋನಪ್ಪಯ್ಯ, ಸಾಲೋಟಗಿ ಚೆನ್ನಬಸವ, ಗಲಗಿನ ಚನ್ನಬಸವ, ಬಾಲಸಂಗಯ್ಯ ಮೊದಲಾದವರೊಂದಿಗೆ ಇಷ್ಟಲಿಂಗ ತೊರೆದು ಆರೂಢನಾಗಿ ಬದುಕುತ್ತಾ ಸಾಂಕೇತಿಕ ಲಿಪಿಯಲ್ಲಿ ಅಂದಂದಿನ ಎಚ್ಚರ ಹೇಳುವ ಕಾಲಜ್ಞಾನ ಸಾರುತ್ತಾ ಆತ್ಮಜ್ಞಾನದ ಸಾಹಿತ್ಯ ರಚಿಸುತ್ತಾ ಜಲದುರ್ಗವನ್ನು ಅಮರಕಲ್ಯಾಣವಾಗಿಸುವ ಪ್ರಯತ್ನ ಮಾಡುತ್ತಾನೆ.[೮] ಮೋನಪ್ಪಯ್ಯನ ಶಿಷ್ಯ ಗಂಗಪ್ಪಯ್ಯ ಹುಟ್ಟಿದುದು ಜಲದುರ್ಗದಲ್ಲಿಯೇ. ಹೀಗಾಗಿ ಈತನ ನೆನಪಿಗಾಗಿ ಒಂದು ಗುಡಿಯನ್ನು ಕಟ್ಟಲಾಗಿದೆ. ಅದು ಈಗ ಶಿಥಿಲಾವಸ್ಥೆಯಲ್ಲಿದೆ.

**ಗುಂತಗೋಳದ ರಾಜಾ ರಾಯಪ್ಪ ನಾಯಕ :** ಗುಂತಗೋಳದ ಸಂಸ್ಥಾನದ ರಾಜಾ ರಾಯಪ್ಪ ನಾಯಕರು ಆಧ್ಯಾತ್ಮಿಕ ಜೀವಿಗಳಾಗಿದ್ದರು. ಇವರು ಆಗಾಗ ಜಲದುರ್ಗಕ್ಕೆ ಬರುತ್ತಿದ್ದರು. ಇಲ್ಲಿ ಮೌನಾಚರಣೆಯನ್ನು ಕೈಕೊಳ್ಳುತ್ತಿದ್ದರು. ಇವರ ಕುರಿತಾದ ಆರತಿ ಪದ್ಯದ ಒಂದು ನುಡಿ ಇಂತಿದೆ.

ರನ್ನದಾರುತಿ-ಬೆಳಗಿರೇ, ರಾಜಾ ರಾಯಣ್ಣ
ನಾಯಕರಿಗೆ ಚಿನ್ನದಾರುತಿ-ಬೆಳಗಿರೇ,
ಜಲದುರ್ಗ ಆಧ್ಯಾತ್ಮ ಭವದೊಳಗೆ
ಪವಡಿಸಿ ಮೌನಾಚರಣೆಗೈದ ರಾಯನಿಗೆ
ರನ್ನದಾರುತಿ-ಬೆಳಗಿರೇ, ರಾಜಾ ರಾಯಣ್ಣ
ನಾಯಕರಿಗೆ ಚಿನ್ನದಾರುತಿ-ಬೆಳಗಿರೇ,...
ಹೀಗೆ ಹಾಡು ಮುಂದುವರೆಯುತ್ತದೆ.

**ಔಷಧಿ ಸಸ್ಯಗಳು :** ಜಲದುರ್ಗದಲ್ಲಿ ಅನೇಕ ಗಿಡಮೂಲಿಕೆಗಳು ಸಿಗುತ್ತಿದ್ದವು. ಸೈನಿಕರಿಗೆ ಗಾಯಗಳಾದಾಗ, ಅನೇಕ ರಾಜವೈದ್ಯರು ಇಲ್ಲಿಗೆ ಬಂದು ಗಿಡಮೂಲಿಕೆಗಳನ್ನು ಒಯ್ಯುತ್ತಿದ್ದರು. ಗಿಡಮೂಲಿಕೆಗಾಗಿ ಬೇರೆ ಬೇರೆ ರಾಜ್ಯಗಳಿಂದ ಅನೇಕ ವೈದ್ಯರು ಬಂದು ಹೋಗುತ್ತಿದ್ದರು.

**ವಿದ್ಯುತ್ ಉತ್ಪಾದನೆ :** ಮಧ್ಯ ಅಮೇರಿಕಾದ ಕಂಪನಿಯ ಮೇಸರ್ಸ್ ತಂಪ್ಲೋರವರ ಪ್ರಸ್ತಾವನೆಯ ಪ್ರಕಾರ ಜಲದುರ್ಗದಲ್ಲಿ ಕೃಷ್ಣಾನದಿಯ ನೀರು ರಭಸವಾಗಿ ಹರಿಯುತ್ತಿರುವದರಿಂದ ಇಲ್ಲಿ ಸಣ್ಣ ಆಣೆಕಟ್ಟನ್ನು ನಿರ್ಮಿಸಿ ವಿದ್ಯುಚ್ಛಕ್ತಿ ಉತ್ಪಾದನೆ ಮಾಡಬಹುದಾಗಿದೆ[೯] ಎಂಬ ಅಭಿಪ್ರಾಯವನ್ನು ನೀಡಿದ್ದಾರೆ.

ಹೀಗೆ ಜಲದುರ್ಗ ತನ್ನದೆ ಆದ ಚಾರಿತ್ರಿಕ ಘಟನೆಗಳನ್ನು ತನ್ನ ಮಡಿಲಲ್ಲಿ ಗರ್ಭೀಕರಿಸಿಕೊಂಡಿದೆ. ಈ ಭಾಗವನ್ನು ಇನ್ನೂ ಸಂಶೋಧನೆಗೊಳಪಡಿಸಿದರೆ, ಹತ್ತು-ಹಲವು ಚಾರಿತ್ರಿಕ ಅಂಶಗಳು ಹೊರಬರುವುದರಲ್ಲಿ ಎರಡು ಮಾತಿಲ್ಲ.

(ಈ ಪ್ರಬಂಧ ರಚನೆಗೆ ಮಾರ್ಗದರ್ಶನ ನೀಡಿ, ಹೊನ್ನಾಳಿಯ ಕರ್ನಾಟಕ ಇತಿಹಾಸ, ಅಕಾದೆಮಿಯ ಸಮ್ಮೇಳನದಲ್ಲಿ ಮಂಡಿಸುವಂತೆ ಪ್ರೋತ್ಸಾಹಿಸಿದ ನನ್ನ ಗುರುಗಳೂ ಹಾಗೂ ಖ್ಯಾತ ಇತಿಹಾಸ ತಜ್ಞರೂ ಆದ ಪ್ರೊ|| ಲಕ್ಷ್ಮಣ್ ತೆಲಗಾವಿಯವರಿಗೆ ಹಾಗೂ ಕ್ಷೇತ್ರಕಾರ್ಯದಲ್ಲಿ ನನ್ನ ಜೊತೆಗಿದ್ದ ಸಾಹಿತಿ ಶ್ರೀ ಗವಿಸಿದ್ದಪ್ಪ ಗುರಿಕಾರ ನಾಗರಹಾಳರವರಿಗೂ, ಸ್ನೇಹಿತ ಮನೋಹರ ಪತ್ತಾರ ಶಿಕ್ಷಕರು, ಜಲದುರ್ಗರವರಿಗೂ, ಗೋಪಿನಾಥ ದೇಸಾಯಿ ಗುರುಗುಂಟಾರವರಿಗೂ ಕೃತಜ್ಞತೆಗಳನ್ನರ್ಪಿಸುವೆ.)



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. 'ಗುಂತಗೋಳ ಸಂಸ್ಥಾನದ ಐತಿಹಾಸಿಕ ಪದರುಗಳು', **ಇತಿಹಾಸ ದರ್ಶನ**, ಸಂಪುಟ ೧೯., (೨೦೦೪), ಪುಟ-೩೩೨.
೨. ಡಾ|| ಚನ್ನಬಸಪ್ಪ ಎಸ್. ಪಾಟೀಲ್., 'ಆರನೆಯ ವಿಕ್ರಮಾದಿತ್ಯನ ಜಲದುರ್ಗದ ಶಾಸನ', **ಇತಿಹಾಸ ದರ್ಶನ**, ಸಂಪುಟ ೧೨., (೧೯೯೭), ಪುಟ-೩೬.
೩. **ರಾಯಚೂರು ಜಿಲ್ಲೆಯ ಶಾಸನಗಳು**, ೧೯೯೯, (ಸಂ) ಡಾ. ದೇವರಕೊಂಡಾರೆಡ್ಡಿ, ಕನ್ನಡ ವಿಶ್ವವಿದ್ಯಾಲಯ ವಿದ್ಯಾರಣ್ಯ ಹಂಪಿ.
೪. **ಇತಿಹಾಸ ದರ್ಶನ**, ಸಂಪುಟ ೧೨., ೧೯೯೭, ಪುಟ-೩೫.
೫. ಶ್ರೀ ಬಸಣ್ಣ ಜಾಪೂರ, ಮಾಸ್ತರರು, ಸಾ|| ಗುಂತಗೋಳ.
೬. **ರಾಯಚೂರು ಜಿಲ್ಲೆಯ ಶಾಸನಗಳು**., ೧೯೯೯, (ಸಂ) ಡಾ. ದೇವರಕೊಂಡಾರೆಡ್ಡಿ, ಪುಟ: ೧೪೮ ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ.
೭. **ಸುವರ್ಣ ಸಿರಿ** ರಾಯಚೂರು ಜಿಲ್ಲಾ ೫ ನೇ ಕನ್ನಡ ಸಾಹಿತ್ಯ ಸಮ್ಮೇಳನ ಲಿಂಗಸುಗೂರು ನೆನಪಿನ ಸಂಚಿಕೆ., ಪು: vii.
೮. ಅದೇ.,
೯. **ದೇವನಾಂಪ್ರಿಯ**, ಸ್ಮರಣ ಸಂಚಿಕೆ ತಾಲ್ಲೂಕು ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ ಲಿಂಗಸುಗೂರು, ೧೯೯೫, ಪುಟ: ೧೮.




**ನೀರ ನಡುವಣ ನಡುಗಡ್ಡೆದುರ್ಗ, ಜನಕೆ ಭಾವಭೋಗ**
**ಏನೆಲ್ಲ ಅಡಕಗೊಂಡಿದೆ ಪ್ರಾಚ್ಯ-ಅರ್ವಾಚೀನ ಭಾಗ**



ಡಾ. ಹೆಚ್. ಎಸ್. ಉಷಾರಾಣಿ*

# ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಕೆರೆಗಳು

*ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ನವರತ್ನ ಸೇವೆಯ ಒಂದು ಭಾಗವೆಂದರೆ 'ಉಪಕಾರರತ್ನ'. ಹೆಸರೇ ಸೂಚಿಸುವಂತೆ ಜನೋಪಯೋಗಿಯಾದ ರತ್ನ ಪ್ರಾಯವೆನಿಸುವ ಕಾರ್ಯವಾಗಿ ಕೆರೆ ನಿರ್ಮಾಣಗಳು ನಡೆಯುತ್ತಿದ್ದುವು. ಮನೆದೇವರ ಪ್ರೀತ್ಯರ್ಥ ಒಡೆಯರ ರಾಣಿಯರಿಂದ ಕಟ್ಟಿಸಲ್ಪಟ್ಟ ಶಾಸನೋಕ್ತ ಕೆರೆಗಳಲ್ಲಿ ಮರುಣಾಗ್ರಾಮದ ದೇವಾಂಬುಧಿಕೆರೆ, ಲಿಂಗಾಂಬುಧಿ ತಟಾಕಗಳು ಸೇರಿವೆ.*

ಟಿಪ್ಪು ಸುಲ್ತಾನನ ಪತನಾ ನಂತರ ಅಧಿಕಾರಕ್ಕೆ ಬಂದ ಮುಮ್ಮಡಿ ಕೃಷ್ಣರಾಜ ಒಡೆಯರ್‌ರ ಆಳ್ವಿಕೆಯ ಕಾಲ ರಾಜಕೀಯವಾಗಿ ಸಂಘರ್ಷಕ್ಕೊಳಪಟ್ಟಿತ್ತು. ಕ್ರಿ.ಶ. ೧೭೯೯ರಲ್ಲಿ ಆಂಗ್ಲ ರೆಸಿಡೆಂಟ್ ಬ್ಯಾರಿಕ್ಲೋಸ್‌ನ ಮೇಲ್ವಿಚಾರಣೆಯಲ್ಲಿ ಮೈಸೂರು ಸಂಸ್ಥಾನದ ಆಡಳಿತಕ್ಕೆ ವ್ಯವಸ್ಥೆ ಮಾಡಲಾಗಿತ್ತು. ಆದರೆ ಕ್ರಿ.ಶ. ೧೮೩೧ರಲ್ಲಿ ಮೈಸೂರಿನ ಆಡಳಿತ ಕುಸಿದಿದೆ ಎಂಬ ಕಾರಣದ ಮೇರೆಗೆ ಕಂಪನಿ ಸರ್ಕಾರ ಮೈಸೂರನ್ನು ಕಮೀಷನರ್ ಆಳ್ವಿಕೆಗೆ ಒಳಪಡಿಸಿತ್ತು. ಇಷ್ಟಾದರೂ ಅಂದು ಮೈಸೂರು ಸಂಸ್ಥಾನದ ಆಡಳಿತ ನಿರ್ವಹಿಸುತ್ತಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಪ್ರಜಾಹಿತ ಕಾರ್ಯಗಳನ್ನು ಅಲ್ಲಗಳೆಯುವಂತಿಲ್ಲ. ಸನಾತನ ಧರ್ಮ, ಸಂಸ್ಕೃತಿ, ಲಲಿತಕಲೆಗಳಿಗೆ ರಾಜಾಶ್ರಯವನ್ನಿತ್ತಿದ್ದರು. ಈ ದಿಸೆಯಲ್ಲಿ ಆ ಕಾಲದ ನೀರಾವರಿ ಸೌಕರ್ಯವನ್ನು ಪರಿಶೀಲಿಸುವುದೇ ಪ್ರಸ್ತುತ ಪ್ರಬಂಧದ ಉದ್ದೇಶ.

ಜನಸಂಖ್ಯೆಯ ಹೆಚ್ಚಳದ ಕಾರಣ ಸಾಗುವಳಿ ಭೂಮಿಯ ವಿಸ್ತರಣೆ ಕುಡಿಯುವ ನೀರಿನ ಪೂರೈಕೆಗೆ ಹೆಚ್ಚಿನ ಮಹತ್ವ ನೀಡಿತ್ತು. ಹೀಗಾಗಿ ಆಡಳಿತ ವರ್ಗ ಮತ್ತು ಖಾಸಗಿ ವ್ಯಕ್ತಿಗಳು ದೇವಾಲಯ ಕಟ್ಟಲು ತೋರುತ್ತಿದ್ದ ಆಸಕ್ತಿಯಷ್ಟೇ ಕೆರೆಗಳ ನಿರ್ಮಾಣಕ್ಕೂ ಆಸಕ್ತಿ ವಹಿಸುತ್ತಿದ್ದರು. ೧೮ನೇ ಶತಮಾನದ ವೇಳೆಗಾಗಲೇ ಸಣ್ಣ, ಮಧ್ಯಮ ಹಾಗೂ ಬೃಹತ್ ಪ್ರಮಾಣದ ಸಾವಿರಾರು ಕೆರೆಗಳು ಅಸ್ತಿತ್ವದಲ್ಲಿದ್ದು ಬಳಸಲ್ಪಡುತ್ತಿದ್ದವೆಂಬುದು ವಾಸ್ತವ ಸಂಗತಿ.

ಸಾಮಾನ್ಯವಾಗಿ ಕೆರೆ, ಕಟ್ಟೆ, ಕೊಳ, ಡೊಣೆ, ಕುಂಟೆ, ಸರೋವರ ಪುಷ್ಕರಣಿ, ತಟಾಕ, ಸಮುದ್ರ ಇತ್ಯಾದಿ ಪದಗಳು ಕೆರೆ ನೀರಾವರಿಗೆ ಸಂಬಂಧಿಸಿದಂತೆ ಶಾಸನ ಹಾಗೂ ಸಾಹಿತ್ಯಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ.

ಕ್ರಿ.ಶ. ೧೭೯೯ ರಿಂದ ಕ್ರಿ.ಶ. ೧೮೬೮ರ ವರೆಗೆ ಸಿಂಹಾಸನಾರೂಢರಾಗಿದ್ದ ಮುಮ್ಮಡಿಯವರು ತಮ್ಮ ಹೆಚ್ಚಿನ ಸಮಯವನ್ನು ಕಲೆ ಮತ್ತು ಸಾಹಿತ್ಯದ ಅಭಿವೃದ್ಧಿಗೆ ವಿನಿಯೋಗಿಸಿದ್ದರೆಂಬುದರಲ್ಲಿ ಅತಿಶಯೋಕ್ತಿಯಿಲ್ಲ. ಆದಾಗ್ಯೂ ರೈತರ ಅನುಕೂಲಕ್ಕಾಗಿ ಕೆರೆಕಟ್ಟೆ ಕಟ್ಟಿಸುವ ಕಾರ್ಯದಲ್ಲಿ ಹಿಂದೆ ಸರಿದಿರಲಿಲ್ಲ. ಕೃಷಿ ಸಂಸ್ಕೃತಿಯನ್ನು ಪೋಷಿಸಲಾಗಿತ್ತು.

ಉದಾಹರಣೆಗೆ, ಕ್ರಿ.ಶ. ೧೮೧೦ರ ಮಂಡ್ಯ ಶಾಸನದ[೧] ಪ್ರಕಾರ ಶ್ರೀರಂಗಪಟ್ಟಣದ ತಿರುಮಲಾಚಾರ್ಯರು 'ಗೋವಿಂದರಾಜ ಪುಷ್ಕರಣಿ ಮತ್ತು ತೋಪು, ಗೋವಿಂದರಾಜೋದ್ಯಾನವನ' ಎಂಬ ಹೆಸರಿನಲ್ಲಿ ನಿರ್ಮಿಸಿದ್ದರೆಂದು ತಿಳಿದುಬರುತ್ತದೆ.

ಕ್ರಿ.ಶ. ೧೮೨೮ರ ಮೈಸೂರಿನ ಎರಡು ಶಾಸನಗಳು ಮುಮ್ಮಡಿ ಕೃಷ್ಣರಾಜರ ಧರ್ಮಪತ್ನಿಯವರಾದ ದೇವಾಜಮ್ಮ

* ೪೩೩, 'ಇ' ಬ್ಲಾಕ್, ಜೆ.ಸಿ. ನಗರ, ಮೈಸೂರು - ೫೭೦ ೦೦೮.

ಮತ್ತು ಲಿಂಗಾಜಮ್ಮ ಕಟ್ಟಿಸಿದ ಕೆರೆಗಳನ್ನು ಪ್ರಸ್ತಾಪಿಸುತ್ತವೆ. ದೇವಾಜಮ್ಮ ಕಟ್ಟಿಸಿದ ಕೆರೆಯ ಹಿನ್ನೆಲೆ ಹೀಗಿದೆ : "ಶ್ರೀ ಚಾಮುಂಡೇಶ್ವರಿ ಪ್ರೀತ್ಯರ್ಥವಾಗಿ ಪ್ರಾಕಾರ ಸ್ವರ್ಣಕಲಶಯುಕ್ತ ವಿಮಾನ ಸಹಿತವಾಗಿ ದೇವಾಲಯವಂ ನಿರ್ಮಿಸಿ ನಂಮ ಹೆಸರಿನಿಂದಾ ದೇವಾಂಬ ಸಮೇತವಾದ ಮಹಾದೇವೇಶ್ವರನೆಂಬ ಯೀಶ್ವರ ಪ್ರತಿಷ್ಟೆಯಂ ಮಾಡಿ ಯೀ ದೇವಾಲಯಕ್ಕೆ ಉತ್ತರ ಭಾಗದಲ್ಲಿ ದೇವಾಂಬುಧಿಯೆಂಬ ನೂತನ ತಟಾಕವನ್ನು ಆರಾಮ ಸಮೇತವಾಗಿ ಪ್ರತಿಷ್ಟೆಯಂ ಗೈದು ಯೀ ದೇವರಿಗೆ ನಿತ್ಯಪಡಿತರ ದೀಪಾರಾಧನ ರಥೋತ್ಸವಾದಿಗಳಿಗೆ ಯೀ ಕೆರೆಕೆಳಗೂ ಸರಕಾರದ ಹಿಸ್ಸೆ ಭೂಮಿಯಲ್ಲಿ ಕಂಠೀರಾಯಿ ಯಿಂನೂರ ಐವತ್ತು ವರಹದ ಭೂಮಿಯನ್ನು


ವರುಣಾಕೆರೆ, ವರುಣಾ ಗ್ರಾಮ

ನಿರುಪಾಧಿಕ ಸರ್ವಮಾನ್ಯವಾಗಿ ನಡೆಸಿಕೊಂಡು ಬರುವಂತೆ ಬುದ್ಧಿನಿರೂಪವನು ಅಪ್ಪಣೆ ಮಾಡಿಸಿ ಕೊಟ್ಟುಯಿದೆ"[೨] ಎಂದು ದಾಖಲಿಸಲಾಗಿದೆ. ಈ ಕೆರೆಯ ನಿರ್ಮಾಣಕ್ಕೆ ನೇಮಕಗೊಂಡಿದ್ದ ಕೂಲಿಯಾಳುಗಳ ಬಗ್ಗೆ ಅವರಿಗೆ ತಗುಲಿದ ವೆಚ್ಚ, ಕೆರೆಯ ವಿಸ್ತೀರ್ಣ ಕೆರೆಯ ನಿರ್ವಹಣೆ ಇತ್ಯಾದಿಗಳ ಬಗ್ಗೆ ಶಾಸನ ಮೌನವಾಗಿದೆ. ದೇವಾಂಬುಧಿ ಕೆರೆ ಮನೆ ದೇವರ ಪ್ರೀತ್ಯರ್ಥ ನಿರ್ಮಿಸಲ್ಪಟ್ಟದ್ದೆಂದು ಸ್ಪಷ್ಟವಾಗಿ ಗೋಚರಿಸುತ್ತದೆ.

ದೇವಾಂಬುಧಿ ಕೆರೆ ಮೈಸೂರಿನ ಹೊರವಲಯದ ವರುಣ ಗ್ರಾಮದಲ್ಲಿದ್ದು, ಅಲ್ಲಿಗೆ ಭೇಟಿ ಕೊಟ್ಟು ಗ್ರಾಮದ ಲೆಕ್ಕಿಗರನ್ನು ವಿಚಾರಿಸಿದಾಗ ದೊರೆತ ಮಾಹಿತಿ ಹೀಗಿದೆ. "ದೇವಾಂಬುಧಿ ಕೆರೆಯ ವಿಸ್ತೀರ್ಣ ೧೬೫ ಎಕರೆ, ಆಳ ೧೨ ಅಡಿ. ಕೆರೆಯ ಏರಿಯ ಎತ್ತರ ೧೫ ಅಡಿ ಇಂದು ೭೭ ಎಕರೆ, ೪ ಕುಂಟೆ ಜಮೀನಿಗೆ ನೀರನ್ನು ಹಾಯಿಸುತ್ತದೆ. ಈ ಕೆರೆ ಒಡೆಯುವುದನ್ನು ನಿಲ್ಲಿಸಲು ಕಟ್ಟೆಯೊಂದನ್ನು ಗಣೇಶನ ಆಕಾರದಲ್ಲಿ ನಿರ್ಮಿಸಲಾಯಿತು. ಗ್ರಾಮಸ್ಥರು ಅದನ್ನು ಗೊಂಬಪ್ಪನ ದೇವಸ್ಥಾನವೆಂದು ಕರೆಯುತ್ತಾರೆ. ಈ ಕೆರೆ ಒಂದು ಕಿ.ಮೀ. ಉದ್ದವಿದ್ದು ನೀರಿರುವ ಭಾಗ ಮುಕ್ಕಾಲು (೩/೪) ಕಿ.ಮೀ.ನಷ್ಟಿದೆ" ಎಂದಿದೆ.


ವರುಣಾಕೆರೆಯ ಮಂಟಪದ ಮೇಲೆ

ದೇವಾಂಬುಧಿ ಕೆರೆಯ ನೀರು ಮುಸುಂಬಯ್ಯನಹಳ್ಳಿ ಕೆರೆಗೂ, ಅಲ್ಲಿಂದ ಗಿರಿಬೆಟ್ಟದ ಕೆರೆಗೂ ಹಾಗೂ ಪಿಲ್ಲಹಳ್ಳಿ ಕೆರೆಗೂ ತಲುಪುತ್ತದೆಂದು ಗ್ರಾಮಸ್ಥರು ತಿಳಿಸಿದರು. ಇದರಿಂದ ಕೆರೆಗಳ ರಚನೆ ಸರಪಳಿಯಂತಿದ್ದು ಒಂದಕ್ಕೊಂದು ಪೂರಕವಾಗಿರುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ.

ಕೃಷ್ಣರಾಜ ಒಡೆಯರ ಮತ್ತೊಬ್ಬ ಧರ್ಮಪತ್ನಿ ಲಿಂಗಾಜಮ್ಮನವರು ಕಟ್ಟಿಸಿದ ಕೆರೆಯ ವಿವರ ಹೀಗಿದೆ : "ಚಾಮುಂಡೇಶ್ವರಿ ಪ್ರೀತ್ಯರ್ಥವಾಗಿ ಪ್ರಾಕಾರ ಸ್ವರ್ಣಕಲಶಯುಕ್ತ ವಿಮಾನ ಸಹಿತವಾಗಿ ದೇವಾಲಯವಂ ನಿರ್ಮಿಶಿ ನಂಮ ಹೆಸರಿನಿಂದ ಲಿಂಗಾಂಬಾ ಸಮೇತಮಾದ ಮಹಾಲಿಂಗೇಶ್ವರನೆಂಬ ಯೀಶ್ವರ ಪ್ರತಿಷ್ಠೆಯಂ ಮಾಡಿ ಯೀ ದೇವಾಲಯಕ್ಕೆ ದಕ್ಷಿಣ ಭಾಗದಲ್ಲಿ ಲಿಂಗಾಂಬುಧಿಯಂಬ ನೂತನ ತಟಾಕವನ್ನು ಆರಾಮ ಸಮೇತವಾಗಿ ಪ್ರತಿಷ್ಠೆಯಂ ಗೈದು ಯೀ ದೇವರಿಗೆ ನಿತ್ಯ ಪಡಿತರ ದೀಪಾರಾಧನ ರಥೋತ್ಸವಾದಿಗಳಿಗೆ ಯೀ ಕೆರೆಕೆಳಗಣ ಸರಕಾರದ ಹಿಸ್ಸೆ ಭೂಮಿಯಲ್ಲಿ ಕಂಠೀರಾಯಿ ಯಿಂನೂರ ಐವತ್ತು ವರಹಾದ ಭೂಮಿಯಂನ್ನು ನಿರುಪಾಧಿಕ ಸರ್ವಮಾನ್ಯವಾಗಿ ನಡೆಶಿಕೊಂಡು ಬರುವಂತೆ ಕಸಬಾ ಮಹಿಶೂರು ತಾಲೋಕಿಗೆ ನಂಮ ಆಳಿದ ಮಹಾಸ್ವಾಮೀಯವರ ಬುದ್ಧಿ ನಿರೂಪವಂನು ಅಪ್ಪಣೆ ಮಾಡಿಶಿ ಕೊಟ್ಟುಯಿದೆ" ಎಂದು ದಾಖಲಿಸಲಾಗಿದೆ.[೩] ಇದರಿಂದ ಈ ಶಾಸನದಲ್ಲೂ ಹೆಚ್ಚಿನ ವಿವರಗಳು ಲಭ್ಯವಿಲ್ಲ. ದೇವಾಂಬುಧಿಯಂತೆ, ಲಿಂಗಾಬುಧಿ ಕೆರೆಯ ನಿವೇಶನವನ್ನು ವೀಕ್ಷಿಸಿದಾಗ ತಿಳಿದು ಬಂದ ವಿವರ, "ಈ ಕೆರೆಯ ಉದ್ದ ೧ ಕಿ.ಮೀ. ವಿಸ್ತೀರ್ಣ ೨೪೩ ಎಕರೆ, ನೀರು ತುಂಬಿರುವ ಸ್ಥಳದ ವಿಸ್ತಾರ ೧೬೦ ಎಕರೆ"... ಎಂದು ಈ ಕೆರೆಯೂ ಮನೆತನದ ದೇವರಿಗಾಗಿ ನಿರ್ಮಿಸಿದ್ದೆಂದು ಸ್ಪಷ್ಟವಾಗಿದೆ.

ಕ್ರಿ.ಶ. ೧೮೩೯ರ ಮೈಸೂರು ಶಾಸನವು[೪] ಮುಮ್ಮಡಿ ಕೃಷ್ಣರಾಜ ಒಡೆಯರ್ ಕೈಗೊಂಡ ಸಮಗ್ರ ರಚನಾತ್ಮಕ ಕಾರ್ಯ

ಗಳನ್ನು 'ನವರತ್ನ ಸೇವೆ' ಎಂಬುದಾಗಿ ಉಲ್ಲೇಖಿಸಿದೆ. ನವರತ್ನ ಸೇವೆಯ ಒಂದು ಭಾಗ ಉಪಕಾರ ರತ್ನ. ಈ ಉಪಕಾರ ರತ್ನದಡಿಯಲ್ಲಿ ಮುಮ್ಮಡಿಯವರು ಕಾವೇರಿ ನದಿಗೆ ಕೃಷ್ಣರಾಜಕಟ್ಟೆ ಕಟ್ಟಿಸಿದುದನ್ನು ತಿಳಿಸುತ್ತದಷ್ಟೆ.

ಕ್ರಿ.ಶ. ೧೮೪೭ ಮಂಡ್ಯ ಶಾಸನ,[೫] ಮಂಡ್ಯ ತಾಲೋಕು ಆಮೀಲ ಕಾಶ್ಯಪಗೋತ್ರ ತಿರುಕುಡಿ ಶ್ರೀನಿವಾಸರಾವು ದೇವಸ್ಥಾನ ಮತ್ತು ಸರೋವರವನ್ನು ಜನರಿಗೆ ಉಪಯೋಗಕ್ಕಾಗಿ ಕಟ್ಟಿಸಿದ್ದರೆಂದು ತಿಳಿಸುತ್ತದೆ. ಕ್ರಿ.ಶ. ೧೮೬೦ರ ಮೈಸೂರು ಶಾಸನವು[೬] ಮುಮ್ಮಡಿ ಕೃಷ್ಣರಾಜ ಒಡೆಯರ ವ್ಯಕ್ತಿತ್ವವನ್ನು, "ಅಪರಿಮಿತ ವಾಪೀಕೂಪ ತಟಾಕ ದೇವಾಲಯ ಗೋಪುರಾನ್ನ ಸತ್ರ ಸೋಪಾನ ಸರಿತ್ಸೇತು ಮಂಟಪ ಧರ್ಮ ಶಾಲಾರಾಮಧ್ಯನೆ ಧರ್ಮಸಂಸ್ಥಾಪನಾಧುರೀಣ" ಎಂದು ವರ್ಣಿಸಿದೆ. ಇಲ್ಲಿಯೂ ಕೆರೆ ನಿರ್ಮಾಣಕ್ಕೆ ನೀಡಿದ್ದ ಆದ್ಯತೆ ಸ್ಪಷ್ಟವಾಗಿ ಗೋಚರಿಸುತ್ತದೆ. ಅಲ್ಲದೆ ನವರತ್ನ ಸೇವೆಯನ್ನು ಪುಷ್ಟೀಕರಿಸಿದಂತಿದೆ.

ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಕಾಲದಲ್ಲಿ ಮೂರು ನೂತನ ತಟಾಕಗಳು, ಪುಷ್ಕರಣಿ ನಿರ್ಮಾಣಗೊಂಡಿತೆಂಬುದರಲ್ಲಿ ಸಂದೇಹವಿಲ್ಲ. ಈಗಾಗಲೇ ನೂರಾರು ಕೆರೆಗಳು ಪಾರಂಪರಿಕವಾಗಿ ಅಸ್ತಿತ್ವದಲ್ಲಿದ್ದುದರಿಂದ ಅವುಗಳನ್ನು ಉಳಿಸಿಕೊಳ್ಳುವ ಹಾಗೂ ನಿರ್ವಹಿಸುವ ಅಗತ್ಯ ಹೆಚ್ಚಾಗಿತ್ತೆಂಬುದು ವೇದ್ಯವಾಗುತ್ತದೆ.

ಈ ಕಾಲದ ಕೆರೆಗಳ ವೈಶಿಷ್ಟ್ಯವೆಂದರೆ; ಅವು ಉದ್ಯಾನವನಗಳನ್ನು ಹೊಂದಿರುವಂತೆ ರಚಿಸುತ್ತಿದ್ದುದು. ಮುಮ್ಮಡಿಯವರ ಕಾಲದಲ್ಲಿ ಪಾಶ್ಚಾತ್ಯರ, ಪ್ರಭಾವ ಮೈಸೂರು ಸಂಸ್ಥಾನದಲ್ಲಿ ಕಂಡು ಬರುತ್ತಿತ್ತು, ಎಂಬುದಕ್ಕೆ 'ಆರಾಮ ಸಮೇತವಾಗಿ ಪ್ರತಿಷ್ಟೆಗೈದ' ಉಲ್ಲೇಖಿತ ತಟಾಕಗಳು, ಪುಷ್ಕರಿಣಿ ಮೂಕ ಸಾಕ್ಷಿಗಳಾಗಿವೆ.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಎಪಿಗ್ರಾಫಿಯಾ ಕರ್ನಾಟಕ** (ಪರಿಷ್ಕೃತ ಆವೃತ್ತಿ) ಸಂಪುಟ ೭, ಮಂಡ್ಯ ಶಾಸನ ಸಂಖ್ಯೆ ೨, ೩, ೪. ಮೈ.ವಿ.ವಿ.

೨. ಅದೇ; ಸಂಪುಟ ೫, ಮೈಸೂರು ಶಾಸನ ಸಂಖ್ಯೆ ೧೬೬.

೩. ಅದೇ; ಸಂಪುಟ ೫, ಮೈಸೂರು ಶಾಸನ ಸಂಖ್ಯೆ ೨೦೫.

೪. ಅದೇ; ಸಂಪುಟ ೫, ಮೈಸೂರ ಶಾಸನ ಸಂಖ್ಯೆ ೩೭; ಡಾ. ಹೆಚ್.ಎಸ್. ಉಷಾರಾಣಿ 'ಶಾಸನೋಕ್ತ ನವರತ್ನ ಸೇವೆ - ಒಂದು ಚಾರಿತ್ರಿಕ ಪರಿಶೀಲನೆ', **'ಇತಿಹಾಸ ದರ್ಶನ'** ಸಂಪುಟ ೧೩, ಪುಟ ಸಂಖ್ಯೆ ೨೦೩, ನೋಡಿ.

೫. ಎ.ಕ., ಸಂಪುಟ ೭, ಮಂಡ್ಯ ಶಾಸನ ಸಂಖ್ಯೆ ೧; ಎ.ಕ., ಸಂಪುಟ ೫, ಮೈಸೂರು ಶಾಸನ ಸಂಖ್ಯೆ ೪, ಕ್ರಿ.ಶ. ೧೮೩೬ ನೋಡಿ.

೬. ಅದೇ, ಸಂಪುಟ ೫ ಮೈಸೂರು ಶಾಸನ.




'ನವರತ್ನ ಸೇವೆ'ಯಳೊಂದು ಜನ ಹಿತಕಾಯಕ
ಕೃಷಿ ಸಂಸ್ಕೃತಿಗೆ ಕೆರೆ ನಿರ್ಮಾಣವದು 'ಉಪಕಾರರತ್ನ'
ವರುಣಕ್ಕೆ ವರವಾಗಿ ದೇವಿಯಾ ಪ್ರೀತಿಯೆನೆ
ರಾಣಿಭಕ್ತಿಯಲಿ ಉದಿಸಿತ್ತು ದೇವಾಂಬುಧಿ ಅನರ್ಘ್ಯ ಜಲರತ್ನ

ಡಾ. ಎಂ. ಕೆ. ದುರುಗಪ್ಪ*

# ಕನಕಗಿರಿಯ ಕಲಾತ್ಮಕ ಬಾವಿಗಳು

*ಮೌರ್ಯರ ಕಾಲದ ದಕ್ಷಿಣಪ್ರಾಂತ್ಯ, ಸುವರ್ಣಗಿರಿಯೇ ಇಂದಿನ ಕನಕಗಿರಿ; ಎಂಬ ಅಭಿಪ್ರಾಯವಿದೆ. ಅದು ಎರಡನೇ ತಿರುಪತಿ ಎಂದು ಪ್ರಸಿದ್ಧಿಯನ್ನು ಪಡೆದಿದೆ. ಇಲ್ಲಿರುವ ವಿವಿಧ ಭಾವಿಗಳ ವೈಶಿಷ್ಟ್ಯ ಗಮನಾರ್ಹವಾಗಿವೆ. ಶಿಲ್ಪಗಳ ಶರೀರಿಯಾಗಿ ಸಾಂಸ್ಕೃತಿಕ ಹಿರಿಮೆಯನ್ನು ತೋರಿರುವುದಲ್ಲದೆ ವರ್ತಮಾನದ ಅಗತ್ಯಗಳಿಗೂ ಅವು ತೆರೆದುಕೊಂಡಿರುವುದು ಗಮನಾರ್ಹ.*

ಮಧುರ ಕವಿ ಬರೆದ : 'ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಗಾರಂ ಮಾಡಿಸಜ್ಜಿಬ್'ಯೊಳ್....' ಹೀಗೆ ಮುಂದುವರೆಯುವ ಈ ಶಾಸನದಿಂದ ವಿಜಯನಗರ ದೊರೆ ದೇವರಾಯನ ಪ್ರಧಾನ ಅಮಾತ್ಯ ಲಕ್ಷ್ಮೀಧರನು ತನ್ನ ತಾಯಿಯ ತೊಡೆಯ ಮೇಲಿದ್ದಾಗಲೇ ಈ ಸದ್ಗುಣಗಳನ್ನು ಕಲಿತನೆಂದು ತಿಳಿದುಬರುತ್ತದೆ. ಕೆರೆಗಳನ್ನು ಕಟ್ಟಿಸು, ಬಾವಿಗಳನ್ನು ತೋಡಿಸು, ದೇವಾಲಯಗಳನ್ನು ನಿರ್ಮಿಸು, ಅನಾಥರಿಗೆ, ಸ್ನೇಹಿತರಿಗೆ ಸಹಾಯ ಮಾಡು, ನಿನ್ನನ್ನು ನಂಬಿದವರನ್ನು ತ್ಯಜಿಸಬೇಡ, ನಿನ್ನ ಅನುಯಾಯಿಗಳನ್ನು ರಕ್ಷಿಸು. ಇಂತಹ ಸದ್ಗುಣಗಳನ್ನು ತಿಳಿಸುವ ಈ ಶಾಸನ ಅಧ್ಯಯನಾಸಕ್ತರ ಗಮನ ಸೆಳೆಯುತ್ತದೆ. ವಿಜಯನಗರ ಅರಸರಲ್ಲಿ ಇಂತಹ ಸದ್ಗುಣಗಳಿದ್ದವೆಂದೂ, ಈ ಹಿನ್ನೆಲೆಯಲ್ಲಿಯೇ ಅನೇಕ ದೇವಾಲಯಗಳು, ಬಾವಿಗಳು, ಕೋಟೆಗಳು, ಪುಷ್ಕರಿಣಿಗಳು, ಗೋಪುರಗಳು, ಮಠಗಳು, ಇತ್ಯಾದಿ ನಿರ್ಮಾಣಗೊಂಡವೆಂದು ಹೇಳಬಹುದು. ವಿಜಯನಗರದ ಅಧೀನ ನಾಯಕರು ತಮ್ಮ ಕೇಂದ್ರ ಸ್ಥಾನಗಳಲ್ಲಿ ವಿಜಯನಗರ ಮಾದರಿಯಲ್ಲಿ ಅನೇಕ ದೇವಾಲಯಗಳನ್ನು, ಪುಷ್ಕರಿಣಿಗಳನ್ನು, ಬಾವಿಗಳನ್ನು ಕಟ್ಟಿಸಿದರು. ವಿಜಯನಗರ ಅರಸರ ಆಪ್ತ ವಲಯದ ಸಂಸ್ಥಾನಗಳಲ್ಲಿ ಕನಕಗಿರಿ ಸಂಸ್ಥಾನವೂ ಒಂದು.

ಮೌರ್ಯರ ಕಾಲದ ದಕ್ಷಿಣದ ಪ್ರಾಂತ್ಯ ಸುವರ್ಣಗಿರಿಯೇ ಇಂದಿನ ಕನಕಗಿರಿ ಎಂಬ ಮಾತು ಇದೆ. ಕೊಪ್ಪಳ ಜಿಲ್ಲೆ ಗಂಗಾವತಿ ತಾಲೂಕಿನ ಕನಕಗಿರಿ ಬಯಲು ಪ್ರದೇಶವನ್ನೊಂದಿದ್ದು, ಯಾವುದೇ ದೊಡ್ಡ ನದಿ, ಇಲ್ಲವೇ ಅಣೆಕಟ್ಟಿನ ನೀರಾವರಿ ಸವಲತ್ತು ಪಡೆದಿಲ್ಲ. ಆದರೆ ಪಕ್ಕದ ಕೇಸರಹಟ್ಟಿ ಕಾರಟಗಿ ಭಾಗ ತುಂಗಭದ್ರ ಅಣೆಕಟ್ಟಿನ ನೀರಾವರಿ ಸವಲತ್ತು ಪಡೆದಿವೆ. ಕನಕಗಿರಿ ಭಾಗದಲ್ಲಿ ಕೆರೆ, ಬಾವಿಗಳೇ ನೀರಿನ ಸಂಪನ್ಮೂಲ ಕೇಂದ್ರಗಳು. ಕನಕಗಿರಿ ನಾಯಕರು ಅನೇಕ ಬಾವಿಗಳನ್ನು, ಕೆರೆಗಳನ್ನು ನಿರ್ಮಿಸಿ ಅಂದಿನ ಜಲಕ್ಷಾಮವನ್ನು ತಡೆದರೆಂದು ತಿಳಿಯುತ್ತದೆ. ಕಾಲಕ್ಕೆ ಸರಿಯಾಗಿ ಮಳೆಯಾಗದ ಕಾರಣ ಇಂದು ಬಹುತೇಕ ಕೆರೆ, ಬಾವಿಗಳು ಬತ್ತಿವೆಯಾದರೂ ತಮ್ಮೊಳಗೆ ಕೆತ್ತಿದ ಕಲೆಯನ್ನು ಜೀವಂತವಾಗಿಟ್ಟು ಕೊಂಡ ಕೆಲವು ಬಾವಿಗಳು ಜನರನ್ನು ತಮ್ಮತ್ತ ಸೆಳೆಯುತ್ತವೆ.

ಕನಕಗಿರಿ ಎರಡನೇ ತಿರುಪತಿ ಎಂದು ಪ್ರಸಿದ್ಧಿಯನ್ನು ಪಡೆದಿದೆ. ಇಲ್ಲಿ ೭೦೦ ಬಾವಿಗಳು, ೭೦೦ ಗೊಲಕಿಗಳು, ೭೦೦ ದೇವಾಲಯಗಳು ಇದ್ದವೆಂದು ಹೇಳುತ್ತಾರೆ. ತಿರುಪತಿಯಲ್ಲಿ ನಡೆಯುವ ಉತ್ಸವಗಳಂತೆ ಇಲ್ಲಿಯೂ ಅನೇಕ ಉತ್ಸವಗಳು ನಡೆಯುತ್ತವೆ. "ಕಣ್ಣಿದ್ದವರು ಕನಕಗಿರಿ ನೋಡಿ ಕಾಲಿದ್ದವರು ಹಂಪಿ ನೋಡಿ" ಎಂಬ ನಾಣ್ಣುಡಿ ಈ ಭಾಗದಲ್ಲಿ ಜನಪ್ರಿಯವಾಗಿದೆ. ಮೂರು ಬಾಗಿಲ ಕೋಟೆ, ಮೂರು ನಾಮದ ದೇವರು, ಮೂರು ಪುಟ್ಟ ನದಿಗಳ (ಪುಷ್ಪಾ, ಗೋಪಿಕಾ, ಜಯಂತೀ) ಸಂಗಮ ಇಲ್ಲಿ

* ಇತಿಹಾಸ ಉಪನ್ಯಾಸಕ, ಸ.ಪ.ಪೂ. ಕಾಲೇಜ್-ಕನಕಗಿರಿ. ಗಂಗಾವತಿ ತಾಲೂಕು, ಕೊಪ್ಪಳ ಜಿಲ್ಲೆ-೫೮೩ ೧೧೯.

ಕಂಡುಬರುತ್ತವೆ. ಕ್ರಿ.ಶ. ೧೪೩೬ರಲ್ಲಿ ಪರಸಪ್ಪ ಉಡಿಚನಾಯಕ ಎಂಬ ಬೇಡ ಅರಸನೊಬ್ಬ ಇಲ್ಲಿ ಪಾಳೇಗಾರಿಕೆಯನ್ನು ಆರಂಭಿಸಿದನು. ವಿಜಯನಗರ ಅರಸರು ಈ ಕನಕಗಿರಿ ನಾಯಕರಿಗೆ ಅನೇಕ ಭೂದಾನ ನೀಡಿದ್ದುದು ಶಾಸನಗಳಿಂದ ವ್ಯಕ್ತವಾಗುತ್ತದೆ. ನಂತರ ಅಧಿಕಾರಕ್ಕೆ ಬಂದ ನವಾಬ ಉಡಿಚ ನಾಯಕನ ಕಾಲದಲ್ಲಿ ಕನಕಗಿರಿ ಒಂದು ಸಾಂಸ್ಕೃತಿಕ ಕೇಂದ್ರವಾಗಿ ಹೆಸರಾಯಿತು.

ಕನಕಗಿರಿಯಲ್ಲಿ ಲಕ್ಷ್ಮಿನರಸಿಂಹ ದೇವಾಲಯ, ಕೋಟೆ, ಪುಷ್ಕರಿಣಿ, ವೆಂಕಟಪತಿ ಬಾವಿ ಅಲ್ಲದೆ ಇನ್ನೂ ಅನೇಕ ದೇವಾಲಯಗಳೂ ಇಲ್ಲಿವೆ. ಕನಕಗಿರಿಯ ಬಾವಿಗಳಲ್ಲಿಯೇ ವೆಂಕಟಪತಿಬಾವಿ ಅತ್ಯಂತ ಕಲಾತ್ಮಕ ಬಾವಿಯೆಂದು ಹೆಸರಾಗಿದೆ. ಸ್ಥಳೀಯ ಬಿಳಿಬಿರುಸು ಶಿಲೆ (ಕಲ್ಲು)ಗಳ ಬಾವಿಗಳು ನಿರ್ಮಾಣ ಮಾಡಿರುವುದು ಹಾಗೂ ವಿಜಯನಗರ ಅರಸರ ಕಲಾಶೈಲಿಯನ್ನು ಅನುಸರಿಸಿ ದೇವಾಲಯಗಳನ್ನು, ಬಾವಿಗಳನ್ನು ನಿರ್ಮಾಣ ಮಾಡಿರುವುದು ಕಂಡುಬರುತ್ತದೆ. ಗುಡ್ಡಗಳ ಇಳಿಜಾರು ಇಲ್ಲವೇ ಕೆರೆ, ಹಳ್ಳಗಳ ಪಕ್ಕದಲ್ಲಿ ಬಾವಿಗಳನ್ನು ನಿರ್ಮಾಣ ಮಾಡಿದ್ದಾರೆ. ಪ್ರತಿಯೊಂದು ಬಾವಿಯ ಪಕ್ಕದಲ್ಲಿ ಮಂಟಪ ಇಲ್ಲವೆ ದೇವಾಲಯ ನಿರ್ಮಾಣ ಮಾಡಿದ್ದಾರೆ. ಕೆಲವು ಬಾವಿಗಳಲ್ಲಿಯೇ ಪುಟ್ಟ ಗುಡಿಗಳನ್ನು ನಿರ್ಮಿಸಿದ್ದಾರೆ. ಬಾವಿಗಳ ಪ್ರವೇಶ ಒಂದೇ ದಿಕ್ಕಿನೆಡೆ ಇರುವುದಿಲ್ಲ. ಕೆಲವು ಬಾವಿಗಳು ಪೂರ್ವಕ್ಕೆ, ಪಶ್ಚಿಮಕ್ಕೆ ಎತ್ತರಕ್ಕೆ ಅಭಿಮುಖವಾಗಿ ಇವೆ. ಪ್ರತಿಯೊಂದು ಬಾವಿಗೆ ಏತ ಕಟ್ಟಡ ಇದೆ. ಅಂದರೆ ನೀರನ್ನು ಮೇಲೆತ್ತುವ ವ್ಯವಸ್ಥೆ ಇತ್ತೆಂದು ಹಾಗೂ ಕಾಲುವೆಗಳಿರುವುದರಿಂದ ನೀರಾವರಿಗೂ ಈ ಬಾವಿಗಳ ಬಳಕೆ ಆಗುತ್ತಿತ್ತೆಂದು ಕಾಣುತ್ತದೆ. ಶಂಖ, ನಾಮ-ಚಕ್ರ ಮತ್ತು ಜಲಚರ ಜೀವಿಗಳ ಶಿಲ್ಪಗಳನ್ನೂ ಬಾವಿಯ ಗೋಡೆಗಳಲ್ಲಿ ಸ್ಥಾಪಿಸಿದ್ದಾರೆ. ಕೆಲವು ಚಿಕ್ಕದಾಗಿ, ಕೆಲವು ದೊಡ್ಡದಾಗಿಯೂ (ಬಾವಿಗಳು) ಇವೆ. ಕರ್ನಾಟಕದ ಲಕ್ಷ್ಮೇಶ್ವರ, ಚಿತ್ರದುರ್ಗ, ಹಂಪಿ, ಯಲಬುರ್ಗಾ, ಸುರಪುರ ಮುಂತಾದ ಇನ್ನೂ ಅನೇಕ ಸ್ಥಳಗಳಲ್ಲಿ ಬಾವಿಗಳನ್ನು ಕಾಣಬಹುದಾದರೂ ಕನಕಗಿರಿಯ ಬಾವಿಗಳು ಕಲಾತ್ಮಕ, ವಿಭಿನ್ನತೆಯಲ್ಲಿ ತಮ್ಮದೇ ಆದಂತಹ ಮಹತ್ವವನ್ನು ಹೊಂದಿವೆ.


ವೆಂಕಟಪತಿ ಬಾವಿ ಒಂದು ನೋಟ

### ವೆಂಕಟಪತಿ ಬಾವಿ

ಈ ಬಾವಿಯನ್ನು ಕನಕಗಿರಿಯ ದೊರೆ ಕನಕಯ್ಯ ಉಡಿಚ ನಾಯಕನ ತಮ್ಮನಾದ ವೆಂಕಟಪತಿ ನಾಯಕನು ಕಟ್ಟಿಸಿದನು. ಹಾಗಾಗಿ ವೆಂಕಟಪತಿ ಬಾವಿ ಎಂದು ಕರೆಯಲಾಗುತ್ತದೆ. ಕನಕಗಿರಿಯ ಎ.ಪಿ.ಎಂ.ಸಿ. ಆವರಣದಲ್ಲಿರುವ ಈ ಬಾವಿ ಕಲಾರಸಿಕರನ್ನೂ, ಸಂಶೋಧಕರನ್ನು ತನ್ನೆಡೆಗೆ ಸೆಳೆಯುತ್ತದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಈ ಬಾವಿಯ ನಿರ್ಮಾಣ ಕುರಿತಂತೆ ಹೆಚ್ಚಿನ ಮಾಹಿತಿ ಅಲಭ್ಯ.


ಅಂತಸ್ತು ಕಟ್ಟಡ ನೋಟ

ಭೂಮಿಯ ಸಮತಟ್ಟಕ್ಕೆ ಇರುವ ಈ ಬಾವಿಯನ್ನು ಅರಮನೆಯವರಿಗಾಗಿಯೇ ನಿರ್ಮಿಸಿಕೊಂಡರೆಂದು ಕಾಣಿಸುತ್ತದೆ. ಈ ಬಾವಿಯ ಮುಖ್ಯ ಪ್ರವೇಶ ನೈಋತ್ಯ ಮೂಲೆಯಲ್ಲಿ ಉತ್ತರಾಭಿಮುಖವಾಗಿದೆ. ನಂತರ ಬಾವಿಯ ಮುಖ್ಯಭಾಗಕ್ಕೆ ಪೂರ್ವಾಭಿಮುಖವಾಗಿಯೇ ಬರಬೇಕು. ಈ ಪ್ರವೇಶವಲ್ಲದೆ ಈ ಬಾವಿಗೆ ಆಗ್ನೇಯ, ವಾಯುವ್ಯ ಮತ್ತು ಈಶಾನ್ಯ ಭಾಗದ ಮೂಲೆಯಲ್ಲಿ L ಆಕಾರದ ಮೇಲ್ಛಾವಣಿ ಇರುವ ಪುಟ್ಟ ಪ್ರವೇಶಗಳಿವೆ. ಮುಖ್ಯ ಪ್ರವೇಶದ ಎಡಗೋಡೆಯಲ್ಲಿರುವ ದಶಕೈಗಳುಳ್ಳ ಗಜಸಂಹಾರ ನೃತ್ಯ ಶಿವಶಿಲ್ಪ ಇದೆ. ಇದರ ಪಕ್ಕದಲ್ಲಿ ನಾಗ ಶಿಲ್ಪವಿದೆ. ಹಾಗೆಯೇ


ಅಂತಸ್ತು ಕಟ್ಟಡ ನೋಟ

ಬಾವಿಯೊಳಗೆ ಇಳಿಯುತ್ತಿದ್ದಂತೆ, ಎಡಕ್ಕೆ ಹಿಂದೆಚಾಚಿದ ಬ್ರಹ್ಮ ದೇವಾಲಯವಿದೆ. ಗರ್ಭಗೃಹದಲ್ಲಿ ಯಾವುದೇ ವಿಗ್ರಹವಿಲ್ಲ. ಈ ದೇವಾಲಯದ ಹೊರಾಂಗಣದ ಕಂಬಗಳು ಕಲಾತ್ಮಕವಾಗಿವೆ. ಅಷ್ಟೊಂದು ಎತ್ತರವಲ್ಲದ ಈ ಕಂಬಗಳ ದಿಂಡು ಅಷ್ಟ ಭುಜಾಕೃತಿಯ ಪಟ್ಟಿಗಳಿಂದ ವಿಭಾಗಿಸಲ್ಪಟ್ಟು ಮೂರು ಚೌಕಾಕಾರದ ಭಾಗಗಳನ್ನು ಹೊಂದಿವೆ. ಇಲ್ಲಿ ಏಳು ವಿಭಿನ್ನ ಏಕಶಿಲಾ ಕಂಬಗಳನ್ನೂ ಕಾಣಬಹುದು. ಈ ಕಂಬಗಳಲ್ಲಿ ನೃತ್ಯಮಾನವ, ಗರುಡ, ಸಿಂಹ, ವ್ಯಾಳಿ, ಖಡ್ಗ ಹಿಡಿದ ವೀರ, ತಂತಿವಾದ್ಯ ಮತ್ತು ಮೃದಂಗ ವಾದನ ಮಾಡುವವರು, ರಾಕ್ಷಸನ ಮೇಲೆ ಹಾರುವ ಆಂಜನೇಯ ಮುಂತಾದ ಶಿಲ್ಪಗಳನ್ನೂ ಈ ಕಂಬಗಳಲ್ಲಿ ಆಕರ್ಷಣೀಯವಾಗಿ ಕೆತ್ತಿದ್ದಾರೆ. ಈ ದೇವಾಲಯದ ಪೂರ್ವಕ್ಕಿರುವ ಪ್ರವೇಶ ಕಟ್ಟಡ ಕಮಾನಿನಿಂದ ಕೂಡಿದೆ. ನೋಡಲು ಅಂದವಾಗಿದೆ ಮತ್ತು ಎಡ, ಬಲ ಬದಿಗಳಲ್ಲಿ ಹಾಗೂ ಎದುರಿಗಿರುವ ಅಂತಸ್ತು (ಬಾಲ್ಕನಿ) ಕಟ್ಟಡ ಅನೇಕ ಕಂಬಗಳಿಂದ ಕೂಡಿವೆ. ಬ್ರಹ್ಮ ದೇವಾಲಯದ ಮುಂದೆ ಎಡಕ್ಕೆ ಈಶ್ವರ ದೇವಾಲಯ ಮತ್ತು ಬಲಕ್ಕೆ ವಿಷ್ಣು ದೇವಾಲಯವನ್ನೂ ಕಾಣಬಹುದು. ಈಶ್ವರ ದೇವಾಲಯದಲ್ಲಿ



ಪಶ್ಚಿಮ ಭಾಗದ ಕಂಬಗಳ ನೋಟ

ಮಾತ್ರ ಭಗ್ನ ಶಿವ ಮತ್ತು ಲಿಂಗ ಶಿಲ್ಪಗಳಿವೆ. ವಿಷ್ಣು ದೇವಾಲಯದಲ್ಲಿ ಯಾವುದೇ ಮೂರ್ತಿ ಇಲ್ಲ. ಈ ದೇಗುಲಗಳ ಮುಂಭಾಗದ ಎಡ, ಬಲಕ್ಕಿರುವ ಕಂಬಗಳಲ್ಲಿನ ಉಪಕಂಬಗಳಿಂದ ಹಂಪಿಯ ವಿಜಯವಿಠ್ಠಲ ದೇವಾಲಯದ ಕಂಬಗಳಿಂದ ಹೊರಡುವ ಸಪ್ತ ಸ್ವರಗಳಂತೆ ಇವುಗಳಿಂದಲೂ ಹೊರಡಿಸಬಹುದೆಂದು ಹೇಳುತ್ತಾರಾದರೂ ಹಂಪಿಯ ಕಂಬಗಳಷ್ಟು ಸ್ಪಷ್ಟ ಸ್ವರಗಳ ಹೊರಡುವಿಕೆ ಇಲ್ಲಿಲ್ಲ. ಕಮಾನು ಕಟ್ಟಡದ ಮೂಲಕ ಮೆಟ್ಟಿಲುಗಳಿಂದ ಕೆಳಗಿಳಿದರೆ ಬಾವಿಯನ್ನೂ ಪ್ರವೇಶಿಸುತ್ತೇವೆ. ಚಚ್ಚೌಕವಾಗಿರುವ ಈ ಬಾವಿಯು ಹಂತಹಂತವಾಗಿ ಮೆಟ್ಟಿಲುಗಳ ಮೂಲಕ ಕಿರಿದಾಗುತ್ತಾ ಹೋಗಿದೆ. ಉತ್ತರ ಮತ್ತು ದಕ್ಷಿಣಕ್ಕೆ ಅಷ್ಟೊಂದು ಅಗಲವಲ್ಲದ ಮೆಟ್ಟಿಲುಗಳ ಮೂಲಕ ಬಾವಿಯಿಂದ ಮೇಲೇರಬಹುದು. ನಂತರ ಬಾವಿಯ ಸುತ್ತ ಕಂಬಗಳಿಂದ ಕೂಡಿದ ⊓ ಆಕಾರದ ಪ್ರದಕ್ಷಿಣಪಥ ಇದೆ. ಪೂರ್ವದ ಭಾಗದಲ್ಲಿ ತನ್ನೆರಡು ಕಾಲುಗಳನ್ನೆತ್ತಿ ನಿಂತ ಎರಡು ಸಿಂಹಗಂಬಗಳು ಗಮನ ಸೆಳೆಯುತ್ತವೆ. ಈ ಸಿಂಹಗಳ ಬಾಯಿಯಲ್ಲಿದ್ದ ಕಲ್ಲುಗುಂಡುಗಳನ್ನು ಕೈಯಿಂದ ತಿರುವುಬಹುದಿತ್ತು. ಆದರೆ ಈಗ ನಿಧಿಗಳ್ಳರು ಅವುಗಳನ್ನೂ ಹಾಳು ಮಾಡಿದ್ದಾರೆ. ಈ ಕಂಬಗಳ ಮೇಲೆಯೇ ಬಾಲ್ಕನಿ ನಿರ್ಮಾಣವಾಗಿರುವುದು. ಇಲ್ಲಿ ರಂಗವಲ್ಲಿ, ಕಮಾನುಜಾಲಂಧರ, ಮಿಥುನಶಿಲ್ಪ, ಕುಸ್ತಿಶಿಲ್ಪಗಳನ್ನೂ ಕಾಣಬಹುದು. ಹೀಗೆ ಇನ್ನೂ ಅನೇಕ ಶಿಲ್ಪಗಳ ಕೆತ್ತನೆಯಿಂದ ಹಾಗೂ ವಾಸ್ತು ದೃಷ್ಟಿಯಿಂದ ಈ ಬಾವಿಯು ಕನಕಗಿರಿ ಬಾವಿಗಳಲ್ಲಿಯೇ ಅತ್ಯಂತ ಪ್ರಮುಖ ಬಾವಿಯಾಗಿದೆ. ಈ ಬಾವಿ ನೋಡಿದ ಕೆಲವು ವಿದ್ವಾಂಸರು ಕರ್ನಾಟಕದಲ್ಲಿಯೇ ಇಂತಹ ಬಾವಿ ಇಲ್ಲ ಎಂದು ಹೇಳಿದ್ದನ್ನು ನಾನು ಕೇಳಿರುವೆ.

### ಅಚ್ಚಮ್ಮ ಬಾವಿ

ಈ ಬಾವಿಯು ಕನಕಗಿರಿ ಲಕ್ಷ್ಮಿದೇವಿ ಕೆರೆಯ ಅಂಗಳದ ಹಿಂಭಾಗದಲ್ಲಿದೆ. ಈ ಬಾವಿಯು ೫೦x೫೦ ಅಡಿಗಳ ಉದ್ದ ಅಗಲವನ್ನೂ ಹೊಂದಿದೆ. ೩೦ ಅಡಿಗಳಷ್ಟು ಆಳವಾಗಿದೆ. ಬಾವಿಯ ಮುಂದೆ ಚಾಚಿದ ಪ್ರವೇಶ ಕಿರಿದಾದ ಕಟ್ಟಡ ೪೦ ಅಡಿಗಳಷ್ಟು ಉದ್ದವಾಗಿದೆ. ಮೆಟ್ಟಿಲುಗಳ ಮೂಲಕ ಬಾವಿಯನ್ನು ಪ್ರವೇಶಿಸುತ್ತಿದ್ದಂತೆ ಎಡಕ್ಕೊಂದು ಮತ್ತು ಬಲಕ್ಕೊಂದು ಪುಟ್ಟ ಗುಡಿಗಳಿವೆ. ಎಡಕ್ಕಿರುವ ಗುಡಿಯಲ್ಲಿ ಯಾವುದೇ ವಿಗ್ರಹವಿಲ್ಲ. ಈ ಗುಡಿಯ ಪಕ್ಕದಲ್ಲಿ ೧೬ ದಳದ ಕಮಲ, ಗಜಲಕ್ಷ್ಮಿ ಮತ್ತು ನಾಗಶಿಲ್ಪಗಳನ್ನೂ ಕಾಣಬಹುದು. ಈ ಗುಡಿಯ ಎದುರಿನ ಪುಟ್ಟ ಗುಡಿಯೊಳಗೆ ಆದಿಶೇಷಶಯನನಾದ ಮಹಾವಿಷ್ಣು (ಶ್ರೀದೇವಿ, ಭೂದೇವಿಯರೊಡನೆ) ಮೂರ್ತಿಯು ಗಮನ ಸೆಳೆಯುತ್ತದೆ.



"ಹಳೇ ದೊಡ್ಡೇರಿ"ಯಲ್ಲಿ ಸಿಕ್ಕಿರುವ ಅವಶೇಷಗಳ ಚಿತ್ರ

ಗುಡಿಯ ಬಾಗಿಲ ಎಡಬಲಕ್ಕೆ ಜಯ-ವಿಜಯ ದ್ವಾರಪಾಲಕರಿದ್ದಾರೆ. ಈ ಆದಿಶೇಷಶಯನ ವಿಗ್ರಹ ಕಪ್ಪು ಗ್ರಾನೈಟ್ ಶಿಲೆಯಲ್ಲಿದೆ. ಈ ಗುಡಿಯ ಗೋಡೆಯ ಕಟ್ಟಡದಲ್ಲಿ ಮಜ್ಜಿಗೆ ಕಡೆಯುವ ಸ್ತ್ರೀ, ಪುರುಷಾಮೃಗವು ಕೈಯಲ್ಲಿ ಗಂಟೆ ಹಿಡಿದು ಶಿವಲಿಂಗಕ್ಕೆ ಮಂಗಳಾ


ಕಾಮಧೇನು ಈಶ್ವರ ಪೂಜೆ ಮಾಡುತ್ತಿರುವುದು

ರತಿ ಮಾಡುವ ಹಾಗು ಹಂಸ, ಶಿಲ್ಪಗಳನ್ನೂ ಕಾಣಬಹುದು. ಮಜ್ಜಿಗೆ ಕಡೆಯುವ ಸ್ತ್ರೀಶಿಲ್ಪ ಅಚ್ಚಮ್ಮ ಶಿಲ್ಪವೆಂದು ಸ್ಥಳೀಯರು ಹೇಳುತ್ತಾರೆ. ವೆಂಕಟಪತಿಬಾವಿಯ ಕಂಬಗಳೊಂದರಲ್ಲಿ ಈ ರೀತಿಯ ಶಿಲ್ಪವಿದೆ. ಈ ಬಾವಿಯಲ್ಲಿ ನಾಗನೀಕಾ, ದೇವನೀಕಾ ಎಂಬ ದೇವಕನ್ನೆಯರು ನೆಲೆಸಿದ್ದಾರೆಂದೂ, ಜನರು ಇಲ್ಲಿಗೆ ತಂದ ಕಾಯಿಗಳನ್ನು ಒಡೆದು ಇಲ್ಲಿಯೇ ಹಾಕಿ ಹೋಗುತ್ತಾರೆ. ಬಾವಿಯ ಪ್ರದೇಶದ ಎದುರಿನ ಗೋಡೆ ಕಟ್ಟಡದಲ್ಲಿ ಪುಟ್ಟ ವಿಘ್ನೇಶ್ವರ ವಿಗ್ರಹ, ಶಂಖ, ನಾಮ, ಚಕ್ರ ಶಿಲ್ಪಗಳಿವೆ. ಗಿಡಮರಗಳು ಆವೃತವಾಗಿರುವುದರಿಂದ ಅವುಗಳು ಸ್ಪಷ್ಟವಾಗಿ ಕಾಣುವುದಿಲ್ಲ. ಬಾವಿಯ ಒಳ ಭಾಗದ ಗೋಡೆಯಲ್ಲಿ ಜಗಳ ನಿರತ ಎರಡು ಗಜಗಳು, ತಳಕು ಕಮಲ, ಹಂಸ, ಆಮೆ, ಮಾನವ ಮಿಥುನ, ಮೀನ, ಶಿಲ್ಪಗಳಿವೆ.

**ಚಿಕ್ಕಕನಕಪ್ಪಬಾವಿ:** ಈ ಬಾವಿಯನ್ನು ಚಿಕ್ಕಕನಕಪ್ಪ ನಾಯಕನು ಕಟ್ಟಿಸಿದನು. ಈ ಬಾವಿಯ ಪ್ರವೇಶದ ಮೆಟ್ಟಿಲುಗಳ ಸಂಖ್ಯೆ ಅತ್ಯಂತ ಕಡಿಮೆ ಹಾಗೂ ಆಳವೂ ಕಡಿಮೆ. ಚಚ್ಚೌಕ


ಚಿಕ್ಕಕನಕಪ್ಪನ ಬಾವಿ / ಗುಡಿ

ಮೆಟ್ಟಿಲುಗಳಿಂದ ಹಂತಹಂತವಾಗಿ ವಿಸ್ತರಿಸಿರುವ ಈ ಬಾವಿಯ ದಕ್ಷಿಣಕ್ಕೆ ಮುಂದೆಚಾಚಿದ ಎತ ಕಟ್ಟಡವು ಎರಡು ಕಂಬಗಳ ಮೇಲೆ ನಿಂತಿದೆ. ಈ ಭಾಗದ ಕಟ್ಟಡದ ಗೋಡೆಯಲ್ಲಿ ವಿಘ್ನೇಶ್ವರ, ನಂದಿ, ಈಶ್ವರ, ಗಜಲಕ್ಷ್ಮೀ ಶಿಲ್ಪಗಳು ಕಂಡುಬರುತ್ತವೆ. ಕುಪ್ಪಳಿಸುವ ಸಿಂಹ ಶಿಲ್ಪಗಳು, ಈ ಬಾವಿಯ ಆಕರ್ಷಣೆಯನ್ನೂ ಹೆಚ್ಚಿಸಿವೆ. ಒಟ್ಟು ೧೨ ಇಂತಹ ಶಿಲ್ಪಗಳಿವೆ. ಈ ಬಾವಿಯ ಮುಂಭಾಗದ ಬಲಕ್ಕೆ ಚಿಕ್ಕಕನಕಪ್ಪಗುಡಿ ಇದೆ. ಈ ಗುಡಿಯೊಳಗೆ ಚಿಕ್ಕಕನಕಪ್ಪನ (ನಿಂತ) ಕಪ್ಪುಶಿಲೆ ವಿಗ್ರಹವಿದೆ. ಹೊರಭಾಗದ ಕಂಬಗಳಲ್ಲಿ ಮಿಥುನ


ಕನಕರಾಯನ ಬಾವಿ

ಶಿಲ್ಪಗಳಿವೆ. ಗರ್ಭಗೃಹದ ಮೇಲೆ ದ್ರಾವಿಡ ಶೈಲಿ ಶಿಖರವಿದೆ. ಈ ಬಾವಿಯು ಕನಕಗಿರಿಯಿಂದ ಕೊಪ್ಪಳಕ್ಕೆ ಹೋಗುವ ಮಾರ್ಗದ ಬಲಕ್ಕೆ ಬರುತ್ತದೆ.

**ಮೌನೇಶ್ವರ ಮಠದ ಬಾವಿ:** ಈ ಮಠವು ಒಂದು ಕಾಲಕ್ಕೆ ವೈಷ್ಣವ ದೇವಾಲಯವಾಗಿತ್ತು. ಈ ಮಠದ ಪ್ರವೇಶದ ಮುನ್ನ ಎಡಕ್ಕೆ ಚಿಕ್ಕದಾದ ಒಂದು ಬಾವಿ ಇದೆ. ಈ ಬಾವಿಯನ್ನು ಮೂರು ಹೆಸರಿನಿಂದ ಕರೆಯುತ್ತಾರೆ. ೧) ಹೊಕ್ಕುತುಂಬೋ ಬಾವಿ, ೨) ಗಿಂಡಿಬಾವಿ, ೩) ಸೇದಬಾವಿ. ಮಠದ ಒಳಗಿನಿಂದ ಪೂಜೆಗಾಗಿ ಬಾವಿಯೊಳಗೆ ಹೊಕ್ಕು (ಈ ಬಾವಿ ಪ್ರದೇಶ ಕಟ್ಟಡದ ಮೇಲೆ ಮಠವಿದೆ) ನೀರು ತುಂಬುವುದರಿಂದ ಹೊಕ್ಕುತುಂಬೋ ಬಾವಿಯೆಂದು, ಹೊರಗಿನಿಂದ ಸಾರ್ವಜನಿಕರು ನೀರನ್ನು ಸೇದಿಕೊಳ್ಳುವುದರಿಂದ ಸೇದಬಾವಿಯೆಂದೂ ಮತ್ತು ಮಠದಿಂದಲೇ ಗಿಂಡಿಯ ಮೂಲಕ ನೀರನ್ನು ಸಂತರು ಸೇದಿಕೊಳ್ಳುತ್ತಿದ್ದರಿಂದ ಗಿಂಡಿ ಬಾವಿಯೆಂದು ಕರೆಯುತ್ತಾರೆ. ಈ ಬಾವಿಯ ಪ್ರವೇಶ ಬಾಗಿಲು ಮೇಲಿನ ಗೋಡೆಯಲ್ಲಿ ಶಂಖ, ನಾಮ, ಚಕ್ರದ ಶಿಲ್ಪಗಳಿವೆ. ಕನಕಗಿರಿಗೆ ಬಂದ ಮೌನೇಶ್ವರರು ಇಲ್ಲಿ ಉಳಿದು ಕೊಂಡಿದ್ದರಿಂದ ಮೌನೇಶ್ವರ ಮಠವೆಂದು ಕರೆಯಲಾಯಿತು. ಹಾಗೆ ಇಲ್ಲಿನ ಬಾವಿಯನ್ನೂ ಸಹ ಅವರ ಹೆಸರಿನಿಂದ ಕರೆಯಲಾಗುತ್ತದೆ. ಈ ಬಾವಿಯೊಳಗೆ ಮೆಟ್ಟಿಲುಗಳ ಮೂಲಕ ಇಳಿಯುತ್ತಾ ಹೋದಾಗ ಎಡಗೋಡೆಯಲ್ಲಿ ಮುಂಗಸಿ ಹಾವನ್ನು ಹಿಡಿಯುತ್ತಿರುವ, ನಾಗ, ಮಿಥುನ ಶಿಲ್ಪಗಳು, ಬಲಗೋಡೆಯಲ್ಲಿ ಹುಲಿಯನ್ನೂ ಭರ್ಜಿಯಿಂದ ತಿವಿದ ವೀರನ ಶಿಲ್ಪ, ಆಮೆ, ತಪಸ್ಸು ನಿರತ ವ್ಯಕ್ತಿ ಶಿಲ್ಪಗಳನ್ನೂ ಕಾಣಬಹುದು.

ಈ ಬಾವಿಯ ಮುಂಭಾಗದಲ್ಲಿದ್ದ ಬಾವಿಯೊಂದು ಹಾಳಾಗಿದೆ. ಇದರ ಪಕ್ಕದಲ್ಲಿ ಎರಡು ಗುಡಿಗಳಿವೆ. ಒಂದರಲ್ಲಿ ಮೂರ್ತಿ ಇಲ್ಲ. ಇನ್ನೊಂದರಲ್ಲಿ ಶಿವಲಿಂಗ ವಿಗ್ರಹಗಳಿವೆ. ಏಕಶಿಲಾ ಗರುಡಗಂಬ ಇಲ್ಲಿದೆ. ಮೌನೇಶ್ವರ ಗದ್ದುಗೆ ಇರುವ ಪುಟ್ಟ ದೇಗುಲ ಉತ್ತರಕ್ಕೆ ಮುಖ ಮಾಡಿದೆ.

**೫. ಕನಕರಾಯನ ಬಾವಿ:** ಕನಕಗಿರಿಯ ಪಶ್ಚಿಮಕ್ಕಿರುವ ಲಕ್ಷ್ಮೀಗುಡ್ಡದ ಉತ್ತರದ ಇಳಿಜಾರಿನಲ್ಲಿರುವ ಈ ಬಾವಿಯನ್ನು ಮುಮ್ಮಡಿ ಉಡಿಚನಾಯಕನ ರಾಣಿ ಕನಕಮ್ಮ ರಾಣಿಯು ಕಟ್ಟಿಸಿದಳೆಂದು ಈ ಬಾವಿಯ ಪ್ರವೇಶದ ಎಡಗೋಡೆಯಲ್ಲಿನ ಶಾಸನ ಹೇಳುತ್ತದೆ. ಪೂರ್ವಾಭಿಮುಖವಾಗಿರುವ ಈ ಬಾವಿಯು ೪೦ ಅಡಿ ಅಗಲ, ೪೦ ಅಡಿ ಉದ್ದವನ್ನೂ ಹೊಂದಿದೆ. ೧೦ ಅಡಿ ಅಗಲದ ಪ್ರದೇಶವು ೩೬ ಮೆಟ್ಟಿಲುಗಳನ್ನು ಹೊಂದಿದೆ. ೨೫ ಅಡಿಗಳಿಗೂ ಹೆಚ್ಚು ಆಳ ಹೊಂದಿದ ಈ ಬಾವಿಯ ಒಳ ಭಾಗದ ಕಟ್ಟಡದಲ್ಲಿ ಶಂಖ, ನಾಮ, ಚಕ್ರ, ಮೀನು, ಆಮೆ, ಶಿಲ್ಪಗಳಿವೆ. ಈ ಬಾವಿಯ ಪಶ್ಚಿಮಕ್ಕೆ ಒಂದು ದೇವಾಲಯವಿದೆ. ನಿಧಿಗಳ್ಳರ ಕೃತ್ಯದಿಂದಾಗಿ ಗರ್ಭಗೃಹ ಹಾಳಾಗಿ ಹೋಗಿದೆ. ಯಾವುದೇ ವಿಗ್ರಹವಿಲ್ಲ. ಏತ ಕಟ್ಟಡವಿದೆ. ಮತ್ತು ಮೇಲ್ಭಾಗದಲ್ಲಿ ಗಾರೆಯಿಂದ ಮಾಡಿದ ಕಾಲುವೆಗಳಿವೆ.

**೬. ಜಕ್ಕಮ್ಮನ ಬಾವಿ:** ಕನಕಗಿರಿಯಿಂದ ಕಲಕೇರಿಗೆ ಹೋಗುವ ರಸ್ತೆಯ ಎಡಬದಿಯಲ್ಲಿರುವ ಈ ಬಾವಿಯ ನಿರ್ಮಾಣದ ಕಾಲ, ವ್ಯಕ್ತಿ ಬಗ್ಗೆ ಮಾಹಿತಿ ಇಲ್ಲ. ಸ್ಥಳೀಯರು ಜಕ್ಕಮ್ಮ ಬಾವಿಯೆಂದು ಈ ಬಾವಿಯನ್ನು ಕರೆಯುತ್ತಾರೆ. ಪೂರ್ವಾಭಿಮುಖವಾಗಿರುವ ಈ ಬಾವಿಯು ಹಾಳಾಗಿರುವುದೇ ಹೆಚ್ಚು. ಅಲ್ಲದೆ, ಗಿಡಗಂಟೆಗಳಿಂದ ತುಂಬಿದೆ. ಈ ಬಾವಿಯ ನಿರ್ಮಾಣಕ್ಕೆ ಒಂದೇ ರೀತಿಯ ಕಲ್ಲನ್ನು ಬಳಸದೇ ದೇವಾಲಯ ಇಲ್ಲವೇ ಯಾವುದೋ ಕಟ್ಟಡದ ಉಳಿದ ಕಲ್ಲುಗಳನ್ನೂ ಬಳಸಿ ಕಟ್ಟಿದಂತಿದೆ. ಈ ಬಾವಿಯ ಪಕ್ಕ ಜಕ್ಕಮ್ಮನ ದೇವಾಲಯವಿದೆ. ಈ ದೇವಾಲಯದ ಕಂಬಗಳು ಸುಂದರವಾಗಿ ರಚನೆಗೊಂಡಿದೆ. ದ್ರಾವಿಡ ಶೈಲಿ ಶಿಖರ ಈ ದೇವಾಲಯದ ಮೇಲಿದೆ. ನಿಧಿಗಳ್ಳರಿಂದ ಈ ದೇಗುಲದ ಗರ್ಭಗೃಹ ಹಾಳಾಗಿದೆ.

**೭. ದೆವ್ವದಗುಡಿ ಬಾವಿ:** ಈ ಬಾವಿಯು ಕನಕಗಿರಿಯಿಂದ ಹಿರೇಹಳ್ಳ ಬಸಪ್ಪ ದೇವಾಲಯಕ್ಕೆ ಹೋಗುವ ಮಾರ್ಗದ ಎಡಕ್ಕೆ ಬರುತ್ತದೆ. ೩೬ ಅಡಿ ಉದ್ದ ೩೬ ಅಡಿ ಅಗಲ ಹೊಂದಿದ ಈ ಬಾವಿಯು ೩೦ ಅಡಿ ಆಳವನ್ನೂ ಹೊಂದಿದೆ. ಸ್ಥಳೀಯರು ಈ ಬಾವಿಯನ್ನು ದೆವ್ವದಗುಡಿ ಬಾವಿ ಎಂದು ಕರೆಯುತ್ತಾರೆ. ಬಾವಿಯ ಪ್ರವೇಶದ ಎಡಗೋಡೆಯಲ್ಲಿನ ಶಿಲಾಶಾಸನವನ್ನು ಓದಬಾರದೆಂದು, ಓದಿದರೆ ಕಣ್ಣು ಹೋಗುತ್ತವೆಂದು ಕೆಲವು ಕಿಡಿಗೇಡಿಗಳು ಗೀಚಿ ಓದಲು ಬಾರದಂತೆ ಮಾಡಿದ್ದಾರೆ. ಬಾವಿಯ ಒಳಭಾಗದ ಪ್ರವೇಶ ಗೋಡೆಯಲ್ಲಿ ನಂದಿ, ನಾಟ್ಯ ಗಣೇಶ ಶಿಲ್ಪಗಳಿವೆ. ಈ ಬಾವಿಯ ಪಕ್ಕದಲ್ಲಿ ದೇವಾಲಯವೊಂದಿದೆ. ಅದನ್ನು ದೆವ್ವದಗುಡಿ ಎಂದು ಕರೆಯುತ್ತಾರೆ. ನಿಧಿಗಳ್ಳರಿಂದ ಈ ದೇವಾಲಯವೂ ಹಾಳಾಗಿ ಹೋಗಿದೆ. ಹೀಗೆಯೇ ಕನಕಗಿರಿಯಲ್ಲಿ ಇನ್ನೂ ಅನೇಕ ಬಾವಿಗಳಿವೆ. ಅವುಗಳೆಂದರೆ IB ಆವರಣದೊಳಗಿರುವ ಬಾವಿ, ಗರುಡನ ಬಾವಿ, ಹನುಮಂತನ ಬಾವಿ, ತವರಿನ ಬಾವಿ, ರಾಮತಿಮ್ಮಪ್ಪ ಬಾವಿ (ಬಂಕಾಪುರ). ಬಹುತೇಕ ಬಾವಿಗಳು ಬತ್ತಿವೆಯಾದರೂ ರಾಮತಿಮ್ಮಪ್ಪ ಬಾವಿಯಲ್ಲಿ ನೀರು ಬತ್ತಿಲ್ಲ. ಈ ಬಾವಿಗೆ ಬಾಯಿಗೆ ನಾಲಗೆ ಇದ್ದಂತೆ ನಾಲಗೆ ಕಲ್ಲು ಇರುವುದೊಂದು ವಿಶೇಷ. ಅನೇಕ ಬಾವಿಗಳು ಸ್ಥಳೀಯ ಜನರಿಟ್ಟ ಹೆಸರಿನಿಂದಲೇ ಕರೆಸಿಕೊಳ್ಳುತ್ತಲಿವೆ. ಅವುಗಳ ನಿರ್ಮಾಣ ಮಾಡಿದುದರ ಹಿಂದಿನ ಶ್ರಮ ಏನೆಂಬುದು ಇಂದಿನ ಜನರನ್ನು ತಲುಪಿಲ್ಲ. ಅನೇಕ ಬಾವಿಗಳು ಮರೆಯಾಗಿ ಹೋಗಿವೆ. ಅವುಗಳ ಕಲ್ಲುಗಳು ಮನೆ ಕಟ್ಟಲಿಕ್ಕೊ, ಮತ್ತ್ಯಾವುದಕ್ಕೊ ಬಳಕೆಯಾಗಿವೆ. ಶಾಸನವಿರುವ ಭಯ, ದೇವರು ಇರುವುದೆಂಬ ಭಯ ಇತ್ಯಾದಿ ಕಾರಣಗಳಿಂದ ಕೆಲವು ಬಾವಿಗಳು ಕಾಲನ ಹೊಡೆತಕ್ಕೆ ಕ್ರಮೇಣ ಹಾಳಾಗುತ್ತಾ ಬಂದಿವೆ. ಕೆಲವು ಬಾವಿಗಳ ಮಹತ್ವ ಅರಿತ ಸ್ಥಳೀಯ ಯುವ ವೃಂದ ಇತ್ತೀಚಿನ ದಿನಗಳಲ್ಲಿ ಅವುಗಳ ಉಳಿವಿಗಾಗಿ ಶ್ರಮಿಸುತ್ತಿರುವುದು ಕಂಡುಬಂದಿರುವುದೊಂದು ನೆಮ್ಮದಿಯ ಸಂಗತಿ.

(ಈ ಪ್ರಬಂಧ ಸಿದ್ಧಪಡಿಸುವಲ್ಲಿ ಮಾರ್ಗದರ್ಶನ ನೀಡಿದ ಪ್ರೊ. ಲಕ್ಷ್ಮಣ್ ತೆಲಗಾವಿ, ಡಾ. ಚನ್ನಕ್ಕ ಪಾವಟೆ, ಡಾ. ಎಚ್. ಚಂದ್ರಶೇಖರ್ ಅವರಿಗೂ ಮತ್ತು ಹೊನ್ನಾಳಿಯಲ್ಲಿ ನಡೆದ ಇತಿಹಾಸ ಅಕಾಡೆಮಿಯ ಸಮ್ಮೇಳನದಲ್ಲಿ ಈ ಪ್ರಬಂಧ ಮಂಡಿಸಿದಾಗ ಸಲಹೆ ನೀಡಿದ ಅನೇಕ ಹಿರಿಯರಿಗೂ, ಗೋಷ್ಠಿ ಅಧ್ಯಕ್ಷತೆ ವಹಿಸಿದ್ದ ಪ್ರೊ. ವಸಂತ ಕುಷ್ಟಗಿ ಅವರಿಗೂ ನನ್ನ ಕೃತಜ್ಞತೆಗಳು. ಈ ಬಾವಿಗಳನ್ನು ನೋಡುವಲ್ಲಿ ಸಹಾಯ ಹಾಗೂ ಅವುಗಳ ಬಗ್ಗೆ ಮಾಹಿತಿ ನೀಡಿದ ನನ್ನ ಮಾಜಿ ವಿದ್ಯಾರ್ಥಿಗಳಾದ ನಾಗಭೂಷಣ ವಾಲ್ಮೀಕಿ, ಮಧುಸೂದನ ರೆಡ್ಡಿ, ಹರೀಶ್ ಅವರಿಗೂ ನಾನು ಕೃತಜ್ಞ.)



***

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಜಯತೀರ್ಥ ರಾಜಪುರೋಹಿತ., ೧೯೭೫, ಕನಕಗಿರಿ, ಬೆಂಗಳೂರು
೨. ಶರಣಬಸಪ್ಪ ಕೋಲ್ಕಾರ., ೧೯೯೪, ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು, ಅಪ್ರಕಟಿತ ಎಂ.ಫಿಲ್ ಪ್ರಬಂಧ, ಧಾರವಾಡ.
೩. ವಿನೋದಾ ಪಾಟೀಲ-'ಕನಕಗಿರಿ ವೆಂಕಟಪತಿಬಾವಿ'-**ವಿಜಯನಗರ ಅಧ್ಯಯನ**.

ಡಾ. ಭೋಜರಾಜ ಪಾಟೀಲ*

# ಸಂಸ್ಕೃತಪದ ನಿರ್ದಿಷ್ಟ ಘಟಕವಾಗಿರುವ ಸ್ಥಳನಾಮಗಳು

ಸ್ಥಳನಾಮಗಳಲ್ಲಿ ಪೂರ್ವಘಟಕವು 'ನಿರ್ದಿಷ್ಟ', ಉತ್ತರಘಟಕ 'ವಾರ್ಗಿಕ' ಎಂದು ವಿಂಗಡಿಸುವ ಆಲೋಚನೆಯು ಅವುಗಳ ನಿಜಾರ್ಥವನ್ನು ಅರಿಯಲು ಸಹಕಾರಿ ಆಗುತ್ತದೆ. ಸ್ಥಳದ ವೈಶಿಷ್ಟ್ಯವನ್ನು ತಿಳಿಯಲು ನಿಖರ ನೆರವು ನೀಡುತ್ತದೆ.

ಸ್ಥಳನಾಮಗಳು ಸಾಮಾನ್ಯವಾಗಿ ಎರಡು ಇಲ್ಲವೆ ಮೂರು ಘಟಕಗಳಿಂದ ನಿರ್ಮಾಣವಾಗಿರುತ್ತವೆ. ಅವುಗಳಲ್ಲಿ ಪೂರ್ವ ಘಟಕಕ್ಕೆ ನಿರ್ದಿಷ್ಟವೆಂದೂ ಉತ್ತರಘಟಕಕ್ಕೆ 'ವಾರ್ಗಿಕ'ವೆಂದೂ ಹೆಸರು. ಇವುಗಳಲ್ಲಿ ನಿರ್ದಿಷ್ಟ ಘಟಕವು ಬಹು ಮಹತ್ವದ್ದು. ಏಕೆಂದರೆ ಅದು ಆ ಊರಿಗೆ ಮಾತ್ರ ಮೀಸಲಾಗಿರುತ್ತದೆ. ಉತ್ತರ ಪದವಾಗಿರುವ ವಾರ್ಗಿಕವನ್ನು ಅನೇಕ ಇತರ ಸ್ಥಳನಾಮಗಳೊಂದಿಗೆ ಕಾಣಬಹುದು. ಯಾವುದೇ ಸ್ಥಳದ ವಿಶೇಷತೆಯನ್ನು ಮನಗಾಣುವುದಾದರೆ ನಿರ್ದಿಷ್ಟ ಘಟಕವನ್ನೇ ಅಧ್ಯಯನಕ್ಕೆ ಅಳವಡಿಸಬೇಕಾಗುತ್ತದೆ.

ಕರ್ನಾಟಕದ ಸ್ಥಳನಾಮಗಳಲ್ಲಿ ನಿರ್ದಿಷ್ಟ ಘಟಕವು ಕನ್ನಡ ಪದವೇ ಆಗಿರುವ ಉದಾಹರಣೆಗಳು ಹೇರಳವಾಗಿವೆ. ಇದು ಸಹಜವೂ ಆಗಿದೆ. ಆದರೆ ಇತರ ಭಾಷೆಗಳ ಪದಗಳೂ ನಿರ್ದಿಷ್ಟ ಘಟಕಗಳಾಗಿರುವ ಹಲವಾರು ಉದಾಹರಣೆಗಳು ಲಭ್ಯವಿವೆ. ಇವುಗಳಲ್ಲಿ ಸಂಸ್ಕೃತಪದ ನಿರ್ದಿಷ್ಟ ಘಟಕವಾಗಿರುವ ಉದಾಹರಣೆಗಳು ಹೆಚ್ಚು. ಇಲ್ಲಿ ಇಂಥ ಮೂರು ಸ್ಥಳನಾಮಗಳನ್ನು ಪರಿಚಯಿಸುವದರೊಂದಿಗೆ ನನ್ನ ಆಲೋಚನೆಯನ್ನು ಚರ್ಚೆಗೊಳಪಡಿಸುವುದೂ ಈ ಲೇಖನದ ಉದ್ದೇಶವಾಗಿದೆ.

ಇಲ್ಲಿ ಆಯ್ದಿರುವ ಮೂರು ಸ್ಥಳನಾಮಗಳಲ್ಲಿ ಶಿರಾಳಕೊಪ್ಪ ಶಿಕಾರಿಪುರಗಳು ಶಿವಮೊಗ್ಗ ಜಿಲ್ಲೆಗೂ, ಶಿರಗಂಬಿ ಹಾವೇರಿ ಜಿಲ್ಲೆಗೂ ಸೇರಿವೆ.[೧] ಶಿರಾಳಕೊಪ್ಪ, ಇದರ ವಿಗ್ರಹವು 'ಶಿರಾಳ' ಎಂಬ ನಿರ್ದಿಷ್ಟವನ್ನೂ 'ಕೊಪ್ಪ' ಎಂಬ ವಾರ್ಗಿಕವನ್ನೂ ನಮ್ಮೆದುರು ಇಡುತ್ತದೆ. 'ಶಿರಾಳ' ಇದರ ಮೂಲರೂಪವನ್ನು 'ಶಿರಿಯಾಳ' ಎಂದು ಭಾವಿಸಿದ ಅನೇಕರು ಇದನ್ನು ಶಿರಿಯಾಳ+ಕೊಪ್ಪ ಎಂದೇ ವಿಗ್ರಹಿಸುತ್ತಾರೆ. ಹಾಗೂ ಸಾಹಿತ್ಯಕವಾದ ಬರವಣಿಗೆಯಲ್ಲಿ 'ಶಿರಿಯಾಳಕೊಪ್ಪ' ಎಂದೂ ಬರೆಯುತ್ತ ಬಂದಿದ್ದಾರೆ. ಇವರ ಈ ತೆರದ ಆಲೋಚನೆಗೆ ಮೂಲ ಕಾರಣವೆಂದರೆ ಪೌರಾಣಿಕ ವ್ಯಕ್ತಿಯಾದ ಶಿವಭಕ್ತ ಶಿರಿಯಾಳಸೆಟ್ಟಿ. ಈತ ಈ ಊರವನೆಂದೂ ಈತನ ಹೆಸರೆ ಗ್ರಾಮಕ್ಕೆ ಬಂದಿದೆಯೆಂದು ಇವರ ತರ್ಕವು. ಯಥಾರ್ಥದಲ್ಲಿ ಶಿರಿಯಾಳಸೆಟ್ಟಿ ತಮಿಳುನಾಡಿನ ಕಾಂಚಿಪುರದವನು. ಇವನಿಂದ ಈ ಊರಿಗೂ ಸಂಬಂಧ ಕಲ್ಪಿಸುವುದು ಎಷ್ಟರ ಮಟ್ಟಿಗೆ ಉಚಿತ?

ನನ್ನ ಆಲೋಚನೆಯಂತೆ ಇದರ ವಿಗ್ರಹವು ಮುಂದಿನಂತಿದೆ ಸ್ಥಳನಾಮಗಳಲ್ಲಿ ನಿಸರ್ಗವಾಚಕ ಸ್ಥಳನಾಮಗಳು ಅತ್ಯಂತ ಪುರಾತನವಾದುವು. ನಿಸರ್ಗವಾಚಕಗಳು ಹೆಚ್ಚಾಗಿ ಆ ಪ್ರದೇಶದ ಭೌಗೋಲಿಕ ಪರಿಸ್ಥಿತಿಯನ್ನು ಹೇಳುತ್ತವೆ. ಈ ಹಿನ್ನೆಲೆಯಲ್ಲಿ ವಾರ್ಗಿಕವಾಗಿರುವ 'ಕೊಪ್ಪ'ವನ್ನು ಹೊರತು ಪಡಿಸಿದರೆ 'ಶಿರಾಳ'

* ಹಂಸಭಾವಿ, ಹಿರೇಕೆರೂರು ತಾ, ಹಾವೇರಿ ಜಿಲ್ಲೆ

ಎಂಬುದು ಉಳಿಯುತ್ತದೆ. 'ಶಿರಾಳ'ವು ಮೇಲ್ನೋಟಕ್ಕೆ ಒಂದೇ ಘಟಕದಂತೆ ಕಂಡರೂ ನಿಜವಾಗಿ ಇಲ್ಲಿರುವುವು ಎರಡು ಘಟಕಗಳು: ಶಿರ+ಆಳ - ಎಂದು. 'ಆಳ' ಇದರ ಮೂಲ 'ಆಲ', ಲಕಾರ ಳಕಾರವಾಗುವುದು ಕನ್ನಡದಲ್ಲಿ ಸಹಜ ಕ್ರಿಯೆ. ಆದ್ದರಿಂದ ಶಿರ+ಆಲ ಎಂಬುದು ಸರಿಯಾದ ರೂಪು. ಇದೆ ಶಿರ+ಆಲ+ಕೊಪ್ಪ> ಶಿರ+ಆಳ+ಕೊಪ್ಪ> ಶಿರಾಳಕೊಪ್ಪ ಎಂದಾಗಿದೆ. ಇದರ ಅರ್ಥ ವಿವರಣೆಗೆ ಬಂದರೆ 'ಶಿರ' ಸಂಸ್ಕೃತಪದ. ಇದರ ಶಬ್ದಾರ್ಥ 'ತಲೆ' ಎಂದಾಗುತ್ತಿದ್ದರೂ ಭಾವಾರ್ಥವು 'ತುದಿ' 'ಮೇಲ್ಭಾಗ' ಎಂದಾಗುತ್ತದೆ. 'ಆಲ' ಕನ್ನಡ ಪದ. ಇದರ ಅರ್ಥ 'ನೀರು'. ಈಗ 'ಶಿರಾಲ' ವೆಂದರೆ 'ಮೇಲ್ಭಾಗದಲ್ಲಿಯೇ ನೀರು' ಎಂದು ಅಂದರೆ ಅಂತರ್ಜಲ ಮಟ್ಟ ಮೇಲೆಯೆ ಇದೆ ಎಂದು ವಿವರಣೆ. 'ಕೊಪ್ಪ' ಎಂದರೆ ಚಿಕ್ಕಗ್ರಾಮ.

ಶಿರಾಳಕೊಪ್ಪ ಗ್ರಾಮ ಪ್ರದೇಶದಲ್ಲಿ ಈಗಲೂ ಸಹ ಅಂತರ್ಜಲವು ಸುತ್ತಲಿನ ಗ್ರಾಮಗಳಿಗಿಂತ ಮೆಲ್ಮಟ್ಟದಲ್ಲಿಯೆ ಇದೆ ಎಂಬ ಸತ್ಯವನ್ನು ತಿಳಿದರೆ ಈ ವಿಗ್ರಹ ಹಾಗೂ ಆಲೋಚನೆ ಸರಿಯೆನಿಸದೆ ಇರಲಾರದು.

**ಶಿಕಾರಿಪುರ**

ಶಿಕಾರಿಪುರದ ಶಾಸನವೊಂದರಲ್ಲಿ ಹಾಗೂ ಅರಿಷಿಣಗೆರೆಯ ಕ್ರಿ.ಶ. ೧೫೧೫ರ ಶಾಸನದಲ್ಲಿ ಈ ಊರನ್ನು 'ಮಾಳೇನಹಳ್ಳಿ' ಎಂದು ಗುರ್ತಿಸಲಾಗಿದೆ. ಶಿಕಾರಿಪುರದಲ್ಲಿ ನನಗೆ ಇತ್ತೀಚಿಗೆ ದೊರೆತ ಕೆಳದಿ ಅರಸರ ಶಾಸನದಲ್ಲಿಯೂ 'ಮಾಳೇನಹಳ್ಳಿ' ಎಂದಿದೆ. ಆದರೆ ಮಾದರವಳ್ಳಿಯ ೧೬೬೪ರ ಶಾಸನ 'ಮಹದೇವಪುರ' ಎಂದು ಉಲ್ಲೇಖಿಸಿದೆ. ಹಯವದನರಾವ್ ಅವರು ತಮ್ಮ ಗೆಝೆಟಿಯರ್‌ನಲ್ಲಿ ಇದನ್ನು ತಪ್ಪಾಗಿ 'ಮಹಾದಾನಪುರ' ಎಂದು ಪ್ರಕಟಿಸಿದ್ದಾರೆ.

ಶಿಕಾರಿಪುರದ ಸ್ಥಳೀಯ ಹಿರಿಯರು ಹಾಗೂ ಲೇಖಕರು ಹೈದರಾಲಿಯ ಕಾಲದಲ್ಲಿ ಈ ಊರು ತನ್ನ ಮೂಲ ಹೆಸರು ಕಳೆದುಕೊಂಡು 'ಶಿಕಾರಿಪರ' ಎಂದಾಯಿತೆಂದು ಹೇಳುತ್ತಾರೆ. ಅವರು ಇದಕ್ಕೆ ಕೊಡುವ ಕಾರಣವೆಂದರೆ ಮಲೆನಾಡಿನ ಕಾಡಿನ ಈ ಊರಿಗೆ ಅಧಿಕಾರಿಗಳು ಶಿಕಾರಿಗೆ ಬರುತ್ತಿದ್ದರೆಂಬುದು.

ನನ್ನ ವಿಚಾರದಲ್ಲಿ ಈ ಗ್ರಾಮದ ಮೂಲ ಹೆಸರೆ 'ಶಿಕಾರಿಪುರ' ಏಕೆಂದರೆ ಈಗ ದೊರೆತಿರುವ ಈ ಊರಿನ ಶಾಸನಗಳು ಹಳೆಯ ಶಿಕಾರಿಪುರ ಭಾಗದಲ್ಲಿ ದೊರೆತವಲ್ಲ. ಅಲ್ಲಿಂದ ದೂರದಲ್ಲಿ ಅಂದರೆ ಈಗ ಹೊಸದಾಗಿ ಬೆಳೆದ ವಿಸ್ತೀರ್ಣ ಪ್ರದೇಶದಲ್ಲಿ ಆದ್ದರಿಂದ 'ಮಾಳೇನಹಳ್ಳಿ' ಎಂಬುದು ಹಳೆಯ ಶಿಕಾರಿಪುರಕ್ಕೆ ಸಮೀಪದ ಈಗಿನ ವಿಸ್ತೀರ್ಣ ಪ್ರದೇಶದಲ್ಲಿ ಇದ್ದ ಒಂದು ಗ್ರಾಮದ ನಾಮ ವಾಗಿದೆ. ಈ ಹಿನ್ನೆಲೆಯಲ್ಲಿ 'ಶಿಕಾರಿ' ಪದವು 'ಬೇಟೆ' ಎಂಬರ್ಥ ಕೊಡುವ ಉರ್ದುಶಬ್ದ ಆಗಿರಲಾರದು. ಇದೂ ಸಹ 'ಶಿರಾಳ' ದಂತೆ ಎರಡು ಘಟಕಗಳಿಂದಾಗಿದೆ. 'ಶಿಖಾ+ಆರಿ' ಎಂದು. 'ಶಿಖಾ' ಸಂಸ್ಕೃತಪದ ಕನ್ನಡದಲ್ಲಿ 'ಶಿಕಾ' ಆಗಿದೆ. 'ಶಿಖಾ' ಇದರ ಶಬ್ದಾರ್ಥ 'ಜುಟ್ಟು' ಎಂದಾದರೆ, ಭಾವಾರ್ಥವು ತುತ್ತತುದಿ, 'ಚೂಪಾದ ಮೇಲ್ಭಾಗ' ಎಂದು 'ಆರಿ' ಎಂದರೆ ನೀರು. ಈಗ 'ಶಿಖಾರಿ' ಇದರ ಒಟ್ಟಾರ್ಥ 'ತುತ್ತತುದಿಯಲ್ಲಿಯೇ ನೀರು' ಎಂದು ಅಂದರೆ 'ಅಂತರ್ಜಲ ಮಟ್ಟ ತೀರ ತುದಿಯಲ್ಲಿರುವ' ಎಂದು ವಿವರಣೆ. 'ಶಿರಾಳ' ಕ್ಕಿಂತಲೂ ಇಲ್ಲಿಯ ಅಂತರ್ಜಲ ಮೇಲ್ಮಟ್ಟದಲ್ಲಿರಬೇಕು. ಏಕೆಂದರೆ ಜುಟ್ಟು ತಲೆಯ ಮೇಲೆ ಇರುತ್ತದೆಯಲ್ಲವೆ? ಇದು ಸತ್ಯಸಂಗತಿಯೂ ಆಗಿದೆ. ಹಳೆಯ ಶಿಕಾರಿಪುರ ಭಾಗದಲ್ಲಿ ಅಂತರ್ಜಲ ತೀರ ತೀರ ಮೆಲ್ಮಟ್ಟದಲ್ಲಿ ಇದ್ದಿತ್ತು.

**ಶಿರಗಂಬಿ**

ಈ ಗ್ರಾಮ ಹಾವೇರಿ ಜಿಲ್ಲೆ ಹಿರೇಕೆರೂರು ತಾಲೂಕದಲ್ಲಿದ್ದು ಅನೇಕ ಪ್ರಾಚೀನ ಸ್ಮಾರಕಗಳ ಆಗರವಾಗಿದೆ. ನೂತನ ಶಿಲಾ ಯುಗದ ಹಲವು ಅವಶೇಷಗಳು ಇಲ್ಲಿ ದೊರೆತಿವೆ.

ಶಿರಗಂಬಿ ಸ್ಥಳನಾಮದಲ್ಲಿ ಶಿರ+ಕಂಬಿ ಎಂಬೆಡರು ಘಟಕ ಗಳಿವೆ. ಇದರಲ್ಲಿ 'ಶಿರ' ಸಂಸ್ಕೃತವಾದರೆ 'ಕಂಬಿ' ಕನ್ನಡ. ಹಿಂದೆ ನೋಡಿದಂತೆ 'ಶಿರ' ಎಂದರೆ ತುದಿ ಮೇಲ್ಭಾಗ ಎಂದರ್ಥ. 'ಕಂಬಿ' ಎಂದರೆ ಲೋಹದ ಅದಿರು. ಈಗ 'ಶಿರಗಂಬಿ' ಎಂದರೆ ಅದಿರನ ಅಂಥ ಭೂಮಿಯ ಮೆಲ್ಭಾಗದಲ್ಲಿಯೇ ಇರುವ ಸ್ಥಳ' ಎಂದು ಇದು ಪರೀಕ್ಷೆಯಿಂದಲೂ ದೃಢಪಟ್ಟಿದೆ.

ಈ ರೀತಿ ಕರ್ನಾಟಕದ ಗ್ರಾಮಗಳಲ್ಲಿ ನಿರ್ದಿಷ್ಟಘಟಕವಾಗಿ ಸಂಸ್ಕೃತ ಶಬ್ದಗಳು ಬಳಕೆಯಾಗಿರುವ ಹಲವಾರೂ ನಿದರ್ಶನಗಳು ಕಂಡು ಬರುತ್ತವೆ.



ಡಾ। ಮುನಿರಾಜಪ್ಪ*

# ಕಾಣೆಕಾರಹಳ್ಳಿ - ನಾಮ ವಿವೇಚನೆ

ಅರ್ಕಾವತಿ ನದಿಯ ದಂಡೆಯ ಮೇಲಿರುವ ಕನಕಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಎಂಟು ತಾಲ್ಲೂಕು ಕೇಂದ್ರಗಳಲ್ಲೊಂದು. ಅರಣ್ಯ ಬೆಟ್ಟಗುಡ್ಡಗಳಿಂದಲೂ ನಿಸರ್ಗದತ್ತ ಚೆಲುವಿನಿಂದಲೂ ಸುತ್ತುವರೆದಿರುವ ಈ ಊರಿನ ದಕ್ಷಿಣಕ್ಕೆ ೩೫ ಕಿ.ಮೀ ದೂರದಲ್ಲಿ ಕಾವೇರಿ ನದಿ ಮೇಕೆದಾಟುವಷ್ಟು ಕಿರಿದಾದ ಜಾಗದಲ್ಲಿ ಹರಿಯುವುದೊಂದು ವಿಶೇಷ. ಮುಡಿಗುಂಡ ಚೋಳ ಒಳನಾಡಿನ ಭಾಗವಾಗಿದ್ದ ಕನಕಪುರದ ಸುತ್ತಮುತ್ತ ಇಪ್ಪತ್ತಕ್ಕೂ ಹೆಚ್ಚು ತಮಿಳು ಶಾಸನಗಳಿವೆ.

ಕನಕಪುರದಿಂದ ದಕ್ಷಿಣಕ್ಕೆ ಎರಡು ಮೈಲು ದೂರದಲ್ಲಿರುವ ಅರಳಾಳು ಹೊಯ್ಸಳರ ಕಾಲಕ್ಕೆ ಸೀಗಲನಾಡಿನ ರಾಜಧಾನಿಯಾಗಿತ್ತೆಂಬುದಕ್ಕೆ ಶಾಸನಾಧಾರಗಳಿವೆ. ಈ ಪ್ರದೇಶದಲ್ಲಿ ಹೊಯ್ಸಳರ ಅಚಲನಾಡು, ಹೊಮ್ಮಳಿಗೆ ನಾಡಿನ ಶಾಸನೋಲ್ಲೇಖಗಳಿವೆ. ಆ ಕಾಲಕ್ಕೆ ಈಗಿನ ಕನಕಪುರ ಕಾಣೆಕಾರಹಳ್ಳಿಯಾಗಿತ್ತು. ಇಲ್ಲಿಗೆ ಸಮೀಪದ ಅಚ್ಚಲು[೧] ನಾಯಕನಹಳ್ಳಿ[೨] ಮತ್ತು ಮಳಗಾಳು ಶಾಸನಗಳಲ್ಲಿ ಕಾಣೆಕಾರಹಳ್ಳಿಯ ಉಲ್ಲೇಖವಿದೆ. ಫ್ರಾನ್ಸಿಸ್ ಬುಕನನ್ ಕಾಣೆಕಾರಹಳ್ಳಿಯ ನಾಮ ವಿವೇಚನೆ ಮಾಡುತ್ತಾ 'ಕಾಣೆ' ಎಂಬ ಪದವು ತಮಿಳು ಮೂಲದಿಂದಾಗಿದ್ದು 'ಗದ್ದೆ' ಎಂಬರ್ಥ ಹೊಂದಿದೆ. ಕಾಣೆಕಾರ ಎಂದರೆ ಭೂ ಮಾಲಿಕ[೩] ಎಂದಿದ್ದಾರೆ. ತಮಿಳುನಾಡಿನ ಭಾರತಿದಾಸ ವಿಶ್ವವಿದ್ಯಾಲಯದ ಇತಿಹಾಸ ಪ್ರಾಧ್ಯಾಪಕರಾದ ಡಾ॥ ಎನ್. ರಾಜೇಂದ್ರ ಅವರನ್ನು ಈ ಕುರಿತು ಕೇಳಿದಾಗ, 'ಕಾಣೆ' ಎಂಬ ಪದವನ್ನು ಭೂಮಿಯ ಅಳತೆಗೆ ಸಂಬಂಧಿಸಿದಂತೆ ಬಳಸಲಾಗುತ್ತಿತ್ತು ಎಂದರು. ಕನಕಪುರ ತಾಲ್ಲೂಕಿನ ಶಾಸನಗಳನ್ನು ಕುರಿತು ವಿಶ್ಲೇಷನೆ ಮಾಡಿರುವ ಕೊ. ವೆ. ರಾಮಕೃಷ್ಣಗೌಡರು ಕಾಣೆ ಒಂದು ಬಗೆಯ ಸುಂಕ, ಕಾಣೆಕಾರ ಎಂದರೆ, ಕುಲ ಪರಂಪರೆಯಿಂದ ಬಂದ ಊರೊಟ್ಟಿನ ಜಮೀನಿನ ಸಮಾನ ಹಕ್ಕು ಅಥವಾ ಪಾಲುಗಾರಿಕೆ, ಆದ್ದರಿಂದ ಇದನ್ನು ಸುಂಕಕಾರನಹಳ್ಳಿ ಅಥವಾ ನೆಲದೊಡೆಯನ ಹಳ್ಳಿಯೆಂದು ಅರ್ಥೈಸಬಹುದೆಂದಿದ್ದಾರೆ[೪]. ಒಟ್ಟಾರೆ ಕಾಣೆ ಎಂಬ ಪದ ಅಳತೆ ಅಥವಾ ಮಾಪನ ಸೂಚ್ಯವಾಗಿ ಬಳಕೆಯಾಗಿತ್ತೆಂಬುದು ಗಮನಾರ್ಹ, ಉಳಿದಂತೆ ಸಾಕ್ಷ್ಯಾಧಾರಗಳ ಬೆಂಬಲವಿಲ್ಲ. ವಿಶೇಷವಾಗಿ ಫ್ರಾನ್ಸಿಸ್ ಬುಕನನ್ ಅಭಿಪ್ರಾಯವಂತೂ ಸಾಕ್ಷ್ಯಾಧಾರಗಳಿಲ್ಲದೆ ಸೊರಗುತ್ತದೆ.

'ಕಾಣೆ' ಎಂಬುದು ಅಳತೆಯ ಅರ್ಥದಲ್ಲಿ ಬಳಕೆಯಲ್ಲಿತ್ತೆಂಬು ಜಾಡು ಹಿಡಿದು ಕಾಣೆಕಾರಹಳ್ಳಿಯ ಇತಿಹಾಸವನ್ನು ಕೆದಕಿದರೆ, ಹೊಯ್ಸಳರ ಕಾಲದ ಅರ್ಥವ್ಯವಸ್ಥೆಯ ಮುಖ್ಯಾಂಶಗಳಲ್ಲಿ ಈ ಪದ ಗೋಚರಿಸುತ್ತದೆ. ಕಾಣೆ ಎಂಬುದು ಪ್ರಾಚೀನ ಭಾರತದಲ್ಲಿ ರೂಢಿಯಲ್ಲಿದ್ದ ಐದು ರತಿ ತೂಕದ ತಾಮ್ರದ ನಾಣ್ಯವೆಂಬುದು

*'ಕಾಣೆ' ಎಂಬ ಪದ ಮಾಪನ ಸೂಚಕವಾಗಿ ಬಳಕೆಗೊಳ್ಳುತ್ತಿತ್ತು. ಕಾಣೆ ಎಂಬುದು ಐದು ರತಿ ತೂಕದ ತಾಮ್ರದ ನಾಣ್ಯವಾಗಿ ಪ್ರಾಚೀನ ಭಾರತದಲ್ಲಿ ಬಳಕೆಗಿತ್ತು. ಹೀಗಾಗಿ ಕಾಣೆ ಎಂಬ ತಾಮ್ರನಾಣ್ಯ ತಯಾರಕನ ಊರು 'ಕಾಣೆಕಾರಹಳ್ಳಿ' ಎನಿಸಿರುವಂತಿದೆ. ಇಲ್ಲಿಗೆ ಸಮೀಪದ ಹಲಕೂರು (ಹಲಗೂರು) ಹೊಯ್ಸಳರ ಕಾಲದ ಖಜಾನೆಗಳಲ್ಲೊಂದಾಗಿತ್ತು. ಚೋಳರ ಕಾಲಕ್ಕೆ ಚತುರ್ವೇದಿ ಮಂಗಲವೆನಿಸಿದ್ದ ಚನ್ನಪಟ್ಟಣದ ಬಳಿಯ ಪೆರಿಯ ಮಳೂರು, ಕೂಡಲೂರು, ನಿಟ್ಟೂರು, ಸೂಳೇರಿ, ಹಡಬಳ್ಳಿಯ ಕಾಣೆಕಾರರಾದ ಓಜರ ಹೆಸರುಗಳು ಶಾಸನೋಕ್ತವಿರುವುದು ಈ ಪ್ರದೇಶದ ಹೆಸರಿಗೆ ಕಸುಬು ಆಧಾರಿತ ಶಬ್ದವೊಂದು ಕಾರಣವಾಗಿರುವಂತಿದೆ.*

* ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು, ಇತಿಹಾಸ ವಿಭಾಗ, ರೂರಲ್ ಕಾಲೇಜು. ಕನಕಪುರ - ೫೬೨ ೧೧೭

ಪ್ರಾಚೀನ ಭಾರತದ ಸಾಹಿತ್ಯಾಧಾರಗಳಿಂದ[೫] ಸ್ಪಷ್ಟ. ಹೊಯ್ಸಳರ ಕಾಲದಲ್ಲಿ ಗದ್ಯಾಣ, ಪಣ, ಹಾಗ ಎಂಬ ಚಿನ್ನದ ನಾಣ್ಯಗಳು ಕಾಣಿ ಎಂಬ ತಾಮ್ರದ ನಾಣ್ಯಗಳು ಚಲಾವಣೆಯಲ್ಲಿದ್ದುದು ಸರಿಯಷ್ಟೆ. ಐದು ರತಿ ಅಥವಾ ಗುಲಗಂಜಿ ತೂಕದ ಈ ತಾಮ್ರದ ನಾಣ್ಯವನ್ನು ಅಳತೆಯಲ್ಲಿ 'ಪೇರು' ಆಗಿ ಬಳಸಲಾಗುತ್ತಿತ್ತು[೬]. ಇಂತಹ ನಾಣ್ಯಗಳು ವಿಜಯನಗರ ಕಾಲಕ್ಕೂ ಮುಂದುವರೆದಿದ್ದವು.

ಹೊಯ್ಸಳರ ಕಾಲದ ಕಸುಬಾಧಾರಿತ ಶ್ರೇಣಿಕೃತ ಸಮಾಜದಲ್ಲಿದ್ದ ಲೋಹಕಾರ, ಕಂಚುಗಾರ, ಚರ್ಮಕಾರ, ಗಜಗಾರ, ಮಾಲೆಕಾರ, ಬಳೆಗಾರ, ಸ್ವರ್ಣಕಾರ, ರಥಕಾರ ತೈಲಕಾರರಂತೆ, ಕಾಣಿಕಾರ ಶ್ರೇಣಿಯನ್ನು ತಳ್ಳಿ ಹಾಕುವಂತಿಲ್ಲ. ಇಂತಹ ಶ್ರೇಣಿಗಳ ಹೆಸರಿನಲ್ಲಿ ಹಳ್ಳಿಗಳು, ಬೀದಿಗಳು ಹುಟ್ಟಿಕೊಂಡಿರುವುದಕ್ಕೆ ಚರಿತ್ರೆಯಲ್ಲಿ ಸಾಕ್ಷಿಯುಂಟು. ಹೀಗೆ ಕಾಣಿ ಎಂಬ ತಾಮ್ರದ ನಾಣ್ಯ ತಯಾರಕನ ಊರೇ ಕಾಣಿಕಾರಹಳ್ಳಿಯಾಗಿರಲು ಸಾಧ್ಯ. ಇದು ಈ ಲೇಖನದ ಉದ್ದೇಶವೂ ಕೂಡ. ಅಂದಿನ ಕಾಣಿಕಾರರಾದ ಓಜ, ವಾಜರನ್ನು ಇಂದಿನ ವಿಶ್ವಕರ್ಮ ಜನಾಂಗದವರೊಂದಿಗೆ ಗುರುತಿಸಬಹುದಾಗಿದೆ. ಕಾಣಿಕಾರಹಳ್ಳಿ ಕುರಿತ ವಿಶ್ಲೇಷಣೆ ಪ್ರಾಕ್ಚಾರಿತ್ರಿಕ ಆಧಾರಗಳಿಂದ ಮತ್ತಷ್ಟು ಬಲಗೊಳ್ಳುತ್ತದೆ. ಈ ಊರಿನ ಮಧ್ಯಭಾಗದಲ್ಲಿರುವ ಪ್ರಾಚೀನ ಪುಷ್ಕರಣಿಯ ಮುಂಭಾಗದಲ್ಲಿದ್ದ ಕಾಳಿಕಾಂಬ ಗುಡಿ ಈಗ ನಾಶಗೊಂಡಿದ್ದು, ಹೊಸ ಗುಡಿಯೊಂದು ಪುಷ್ಕರಿಣಿಯ ಅಂಚಿನಲ್ಲೇ ತಲೆಯೆತ್ತಿದೆ. ವಿಶ್ವಕರ್ಮ ಜನಾಂಗಕ್ಕೆ ಸೇರಿದ್ದವರ ಭೂಹಿಡುವಳಿಗಳು ಈಗ ಸಾಗುವಳಿದಾರರ ಹಿಡಿತದಲ್ಲಿವೆ. ಇಂತಹ ಭೂಹಿಡುವಳಿಗಳಿಗೆ ಆಧಾರಗಳು ತುಂಗಣಿ, ಅಚ್ಚಲು ಮುಂತಾದ ಸ್ಥಳಗಳಲ್ಲಿ ದೊರೆಯುತ್ತವೆ. ಇಂದಿಗೂ ಜನಪ್ರಿಯ ಧಾರ್ಮಿಕ ಕ್ಷೇತ್ರವಾಗಿರುವ ಕಬ್ಬಾಳಮ್ಮ ದೇವತೆಗೆ ನಿರಂತರ ಪೂಜೆಗಳು ಕಬ್ಬಾಳಿನಲ್ಲಿ ನಡೆಯುತ್ತವೆ. ಕಬ್ಬಾಳಿ-ಕಾಳಿ ಹೆಸರಿನಲ್ಲಿರುವ ಸಾಮ್ಯತೆ ಗಮನಾರ್ಹ. ಕಬ್ಬಾಳಿನಲ್ಲಿರುವ ಶಾಸನವೊಂದರಲ್ಲಿ ಚೋಳರ ರಾಜಸಿಂಹನಗರ, ಚತುರ್ವೇದಿಮಂಗಲ ಎಂದೆಲ್ಲಾ ಖ್ಯಾತಿಗಳಿಸಿದ್ದ ಪೆರಿಯ ಮಳೂರಿನ (ಚನ್ನಪಟ್ಟಣ ಸಮೀಪ) ವೀರುಪೋಜ, ಬಲ್ಲೋಜ, ಚಿಕಮಳೂರಿನ ದೇವೋಜ, ಕೂಡಲೂರಿನ ಮಾಯೋಜ ನಿಟ್ಟೂರಿನ ಬಮ್ಮೋಜ, ಪೆರುಗಾಳಿನ ಮಲ್ಲೋಜ ಬಯಿರೋಜ ಸೂಳೇರಿಯ ಅಂಕೋಜ ಹಡಬಳ್ಳಿಯ ದೊಂಡೋಜ ಮುಂತಾದವರ ಹೆಸರುಗಳಿವೆ. ಇಲ್ಲಿಗೆ ಸಮೀಪದ ಹಲಕೂರು (ಹಲಗೂರು) ಹೊಯ್ಸಳರ ಕಾಲದ ಖಜಾನೆಗಳಲ್ಲೊಂದಾಗಿತ್ತು. ಅಚ್ಚಲುನಾಡಿನ ಪ್ರಧಾನ ಕೇಂದ್ರವಾಗಿದ್ದ ಅಚ್ಚಲು ಸ್ಥಳ ಪುರಾಣಗಳೂ ಈ ವಿಷಯಕ್ಕೆ ಬೆಂಬಲವಾಗುತ್ತವೆ.

ಇದರ ಜೊತೆಗೆ ವಿದೇಶಿಯರ ಅಭಿಪ್ರಾಯಗಳನ್ನು ಬಹಳ ಎಚ್ಚರಿಕೆಯಿಂದ ಪರಿಶೀಲಿಸಬೇಕೆಂಬ ಮಾತು ಸಹಜವೆನಿಸುತ್ತದೆ.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಎ.ಕ.ಸಂ ೯ (ರೈಸ್ ಆವೃತ್ತಿ), ಬೆಂಗಳೂರು ಜಿಲ್ಲೆ, ಕನಕಪುರ - ೬೮(೧೩೧೯)

೨. ಅದೇ., ಕನಕಪುರ - ೪೭ (೧೩೧೭)

3. Francis, Buhanan., *A Journey from Madras through the countries of Mysore canara Malabar* (New Delhi, Madras; Indian Education service 1988)

೪. ಕೊ.ವೆಂ. ರಾಮಕೃಷ್ಣಗೌಡ., 'ಕನಕಪುರ ತಾಲ್ಲೂಕಿನ ಶಾಸನಗಳ ಸಮೀಕ್ಷೆ', **ನೆಲದ ಸಿರಿ**, ೧೯೯೭, ಡಾ|| ಎಚ್. ಎಸ್. ಗೋಪಾಲರಾವ್ (ಸಂ). ಬೆಂ.ಗ್ರಾ.ಜಿ. ಕ.ಸಾ.ಪ. ಸ್ಮರಣ ಸಂಚಿಕೆ.

೫. ಡಾ|| ಎಸ್. ಶ್ರೀಕಂಠಶಾಸ್ತ್ರಿ., ೧೯೫೪, **ಭಾರತೀಯ ಸಂಸ್ಕೃತಿ**; ಮಾನಸ ಗಂಗೋತ್ರಿ, ಪು ೨೫೯.

೬. ಅದೇ.,

೭. ಎ.ಕ.ಸಂ ೯, ಅದೇ., ಕನಕಪುರ - ೬೫.

ಪ್ರೊ. ದೇವರ ಕೊಂಡಾರೆಡ್ಡಿ*

# ಸೂಳೆ ಎಂಬ ಪದದಿಂದ ಆರಂಭವಾಗುವ ಸ್ಥಳಗಳ ವಿಶ್ಲೇಷಣೆ

*'ಸೂಳೆ' ಎಂಬ ಶಬ್ದವು ಪ್ರಾಚೀನ ಶಾಸನಗಳಲ್ಲಿ ವಿಶೇಷಾರ್ಥದಲ್ಲಿ ಬಳಕೆಗೊಂಡಿದೆ. ಈ ಸೂಳೆಯರಲ್ಲಿ ರಾಜನ ಸೇವೆಯ ಊಳಿಗದಾಕೆ, ದೇವಾಲಯ ಸೇವೆಯ ಸೂಳೆ ಎಂದು ವಿಭಾಗಗೊಂಡಿದ್ದುದುಂಟು. ವರ್ತಮಾನ ದಲ್ಲಿ ಅದಕ್ಕೆ ಬೇರೆಯೇ ಅರ್ಥವು ಬಳಕೆಯಾಗಿ ಕುಂದು ಇರುವ ವ್ಯಕ್ತಿತ್ವ ಎಂಬ ಅರ್ಥವನ್ನೆ ಆಶ್ರಯಿಸಲಾಗಿದೆ. ಇದಕ್ಕೆ ಆ ವೃತ್ತಿಯಲ್ಲಿ ಕಲುಷ ಸೇರಿ ಉಂಟಾದ ಹೀನೈಸು ವಿಕೆಯ ಅರ್ಥವೇ ಕಾರಣವಾಗಿದೆ.*

ಕರ್ನಾಟಕದಲ್ಲಿ ಸೂಳೆ ಎಂಬ ಪದದೊಂದಿಗೆ ಸೇರಿರುವ ಕೆರೆ. ದೇವಾಲಯ ಮತ್ತು ಬೀದಿಗಳ ಹೆಸರುಗಳು ಸಿಕ್ಕುತ್ತವೆ. ಸೂಳೆಕೆರೆ, ಸೂಳೆ ಬಸದಿ, ಸೂಳೆಬೀದಿ ಮುಂತಾದವುಗಳನ್ನು ಆಯ್ದು ಉದಾಹರಣೆಯಾಗಿ ನೀಡಬಹುದು. ಈ ಹೆಸರುಗಳಲ್ಲಿನ ಸೂಳೆ ಎಂಬ ಪದವನ್ನು ವಾಚ್ಯಾರ್ಥದಲ್ಲಿ ತೆಗೆದುಕೊಂಡು ಜನಪದರು ವಿಪರೀತಾರ್ಥವನ್ನು ಮಾಡಿರುತ್ತಾರೆ. ಈ ಪದದ ಹಿನ್ನೆಲೆಯಲ್ಲಿ ಕಥೆಗಳನ್ನು ಕಟ್ಟಿರುತ್ತಾರೆ. ವಿಪರೀತಾರ್ಥವನ್ನು ಮಾಡಿರುತ್ತಾರೆ. ಈ ಪದದ ಹಿನ್ನೆಲೆಯಲ್ಲಿ ಕಥೆಗಳನ್ನು ಕಟ್ಟಿರುತ್ತಾರೆ. ಸೂಳೆಕೆರೆ ಎಂಬ ಹೆಸರು ತಮ್ಮೂರಿಗೆ ಅಪಮಾನವೆಂದು ತಿಳಿದು ಆ ಊರಿಗೆ (ಕೆರೆಗೆ) ಶಾಂತಿಸಾಗರ ಎಂದು ಹೊಸ ನಾಮಕರಣ ವನ್ನೂ ಮಾಡಿದ್ದಾರೆ. ಸೂಳೆ ಬಸ್ತಿ ಎಂದು ಕರೆಯುವ ಕಟ್ಟಡಗಳು, ಹಾಗೂ ಹಂಪೆಯ ಸೂಳೆ ಬಜಾರು ಶಿಥಿಲವಾಗಿರುವುದರಿಂದ ಅದನ್ನು ಬದಲಿಸುವ ಗೋಜಿಗೆ ಯಾರೂ ಹೋಗಿಲ್ಲ. ನೆಲಮಂಗಲ ತಾಲೂಕಿನ ಮಣ್ಣೆಯಲ್ಲಿ ಸೂಳೆ ಬಸ್ತಿ, ಹುನಗುಂದ ತಾಲೂಕಿನ ಅರಸಿಬೀದಿಯಲ್ಲಿ ಸೂಳೆ ಬಸ್ತಿಗಳಿವೆ. ಇನ್ನೂ ಬೇರಡೆಯಲ್ಲಿಯೂ ಇರಬಹುದು. ಇಲ್ಲಿ ಈ ಬಸದಿಗಳಿಗೆ ಅವುಗಳನ್ನು ಕಟ್ಟಿಸಿದವರು ಅರಸಿಬೀದಿಯ ಬಸದಿಗೆ ಗುಣದ ಬೆಡಂಗಿ ಜಿನಾಲಯ; ಮಣ್ಣೆಯ ಬಸದಿಯನ್ನು ಲೋಕತಿಲಕಜಿನಾಲಯವೆಂದು ಕರೆಯಲಾಗಿದೆ. ಹಾಗೆಯೇ ಸೂಳೆಬಜಾರು ಎಂದು ಕರೆಯುವ ಹಂಪಿಯ ಅಚ್ಯುತರಾಯ ದೇಗುಲದ ಪೇಟೆ ಬೀದಿಯನ್ನು ಅಚ್ಯತರಾಯ ಪೇಟೆ ಎಂದು ಕರೆದಿದ್ದು ಇದನ್ನು ತಿರುವೆಂಗಳನಾಥ ಬೀದಿ (ಕ್ರಿ.ಶ. ೧೫೩೧) ಎಂದೂ ಶಾಸನದಲ್ಲಿ ಕರೆಯಲಾಗಿದೆ. ಈ ಮೇಲಿನ ವಿವರಣೆಯಿಂದ ಈ ಕಟ್ಟಡಗಳಾವುದಕ್ಕೂ ಮೂಲದಲ್ಲಿ ಸೂಳೆ ಎಂಬ ಹೆಸರಿಯಿಲ್ಲ. ಕಟ್ಟಡಗಳಿಗೆ ಅಥವಾ ಅವುಗಳ ಅವಶೇಷ ಗಳಿಗೆ ಸೂಳೆ ಎಂಬ ಅರ್ಥದ ಹೆಸರಿರುವುದು ಕೇವಲ ಕರ್ನಾಟಕಕ್ಕೆ ಮಾತ್ರ ಸೀಮಿತವಲ್ಲ. ಭಟ್ಟಿಪ್ರೋಲು ಎಂಬಲ್ಲಿನ ಬೌದ್ಧಸ್ತೂಪದ ಅವಶೇಷಗಳ ದಿಣ್ಣೆಯನ್ನು ಅಲ್ಲಿ ಲೆಂಜದಿಬ್ಬ (ಸೂಳೆ ದಿಣ್ಣೆ) ಎಂದು ಕರೆಯುತ್ತಿದ್ದರು. ಉಳಿದ ರಾಜ್ಯಗಳಲ್ಲಿಯೂ ಈ ಬಗೆಯ ಅರ್ಥ ಬರುವ ಉದಾಹರಣೆಗಳು ದೊರೆಯಬಹುದು.

ಹಾಗಾದರೆ ಸೂಳೆಯೆಂದರೇನು? ಎಂಬುದರ ಬಗ್ಗೆ ಚರ್ಚಿಸಿದಾಗ ಸಾಮಾನ್ಯವಾಗಿ ನಿಘಂಟುಗಳು ಈಗಿರುವ ಅರ್ಥವನ್ನೇ ಪ್ರಧಾನವಾಗಿ ಗ್ರಹಿಸಿ 'ಜಾರಿಣಿ' ಎಂಬ ಅರ್ಥವನ್ನೇ ನೀಡಿವೆ. ಕನ್ನಡದಲ್ಲಿ ಬಳಕೆಯಿರುವ ಶಬ್ದವಾದ ಸೂಳೆಗೆ ತಮಿಳಿನಲ್ಲಿ ಸಮಾನಾಂತರ ಶಬ್ದ ಚೂಳೈ ಎಂಬುದು. ಇದಕ್ಕೆ ಅಲ್ಲಿಯೂ ಕನ್ನಡದಲ್ಲಿರುವಂತೆ ಕುಲಟೆ, ಗಣಿಕೆ, ವೇಶ್ಯೆ ಮುಂತಾಗಿ ಅರ್ಥ ಗಳನ್ನು ನೀಡಲಾಗಿದೆ. ಮಲೆಯಾಳದಲ್ಲಿಯೂ ಇದೇ ಅರ್ಥದಲ್ಲಿ ಬಳಕೆಯಾಗಿದೆ (ನೋಡಿ ಡಿ.ಇಡಿ. ೨೨೬೨). ಈ ಸೂಳೆ ಅಥವಾ

* ಪ್ರಾಧ್ಯಾಪಕರು, ಶಾಸನಶಾಸ್ತ್ರ ವಿಭಾಗ, ಹಂಪಿ ಕನ್ನಡ ವಿಶ್ವವಿದ್ಯಾಲಯ - ೫೮೩ ೨೭೬

ಚೂಳ್ಳೈ ಎಂಬ ಶಬ್ದಕ್ಕೆ ಮೂಲ ಸಂಸ್ಕೃತದ 'ಶೂಲಾ' ಎಂದು ನಿಘಂಟುಕಾರರು ಹೇಳಿ ಮೇಲಿನ ಅರ್ಥವನ್ನು ನೀಡುರುತ್ತಾರೆ. ದಕ್ಷಿಣದ್ರಾವಿಡದಲ್ಲಿ ಈ ಪದ ಚೂಳ್ಳೈ ಎಂಬುದರಿಂದ ನಿಷ್ಪನ್ನವಾಗಿರುವುದರಿಂದ ಬಹುಶಃ ಈ ಶಬ್ದವೂ ಮೂಲದ್ದೇ ಆಗಿದ್ದು, ಇದು ಸಂಸ್ಕೃತಕ್ಕೆ ಹೋಗಿರಬಹುದು. ಏಕೆಂದರೆ 'ಚ'ಕಾರವು ದ್ರಾವಿಡ ಭಾಷೆಗಳಲ್ಲಿ ಸಕಾರ, ತಕಾರವಾಗಿ ಹಾಗೂ ಸ್ವರವಾಗಿ ಮಾರ್ಪಡುತ್ತದೆ. ಉದಾ : ಚೂಳ್ಳೈ ಸೂಳೆ ! ಊಳಿಗ ಎಂಬುವು. ಇಲ್ಲಿ ಊಳಿಗಕ್ಕೆ ಹಿಂದಿನ ರೂಪ 'ತೂಳ್' ಎಂದಿದ್ದರಬೇಕು. ಈ ರೂಪನಮಗೆ ದೊರೆತಿಲ್ಲ. ಆದ್ದರಿಂದ ಚೂಳ್ ಎಂಬ ರೂಪವನ್ನೇ ನಾವು ಮೂಲದ್ರಾವಿಡ ಸ್ವೀಕರಿಸಬೇಕಾಗುತ್ತದೆ. ತೆಲುಗಿನಲ್ಲಿ ಈ ಶಬ್ದ ಬಳಕೆಯಲ್ಲಿಲ್ಲ. ಅಲ್ಲಿ 'ಸೂಳೆ' ಎಂಬ ಅರ್ಥದಲ್ಲಿ ಬಳಕೆಯಾಗುವ ಲಂಜ ಎಂಬ ಶಬ್ದಕ್ಕೆ ಸಂಸ್ಕೃತದ ಲಜ್ಜಾ ಮೂಲವಾಗಿದೆ.

ಹಿಂದಿನ ಕಾಲದ ಇತಿಹಾಸವನ್ನು ಗಮನಿಸಿದಾಗ ಶಾಸನಗಳಲ್ಲಿ ಎರಡು ಬಗೆಯ ಸೂಳೆಯರನ್ನು ಹೆಸರಿಸುತ್ತದೆ. ಒಂದು ಸೇವೆಯಲ್ಲಿದ್ದ ಊಳಿಗದವರು. ಇನ್ನೊಂದು ದೇವಾಲಯ ಸೇವೆಯ ಸೂಳೆಯರು. ಚನ್ನಕ್ಕಎಲಿಗಾರರು ಈ ಸೂಳೆಯರನ್ನು ವ್ಯಕ್ತಿ ಸೂಳೆ, ದೇವಸೂಳೆ, ಸಮಾಜ ಸೂಳೆ ಎಂದು ಮೂರು ವಿಭಾಗವಾಗಿ ವಿಂಗಡಿಸುತ್ತಾರೆ. (**ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ ಪು. ೪೭**). ಆದರೆ ಶಾಸನಗಳು ಎರಡು ಬಗೆಯ ಸೇವೆಯ ಸೂಳೆಗಳನ್ನು ಹೆಸರಿಸುತ್ತವೆ. ರಾಜನ ಸೇವೆಯಲ್ಲಿದ್ದವರು ರಾಜನ ಉಪಪತ್ನಿಯರಾಗಿ ಅರಮನೆಯಲ್ಲಿರುಬೇಕಿತ್ತು. ಇವರ ಮಕ್ಕಳಿಗೆ ಪಟ್ಟಾಧಿಕಾರವಿರಲಿಲ್ಲ. ಇವರು ಇತರರ ಸೇವೆ ಮಾಡುವಂತಿರಲಿಲ್ಲ. ಸಮಾಜದಲ್ಲಿ ಇವರಿಗೆ ರಾಜನ ಸೂಳೆಯರೆಂಬ ಮರ್ಯಾದೆಯೂ ಇತ್ತು. ಇದೊಂದು ವಂಶಪಾರಂಪರಿಕ ವೃತ್ತಿ ಎಂಬಂತೆ ಶಾಸನಗಳು ಹೇಳಿವೆ. ಈ ವಂಶದಲ್ಲಿ ಹುಟ್ಟಿದ ಹೆಣ್ಣಿಗೆ ಮಾತ್ರ ಮರ್ಯಾದೆ ಮತ್ತು ಆಸ್ತಿ. ಇವರು ತಾಯಿಯ ಹೆಸರನ್ನು ಮಾತ್ರ ಹೇಳುತ್ತಿದ್ದರು. ರಾಜನ ಸಂಸರ್ಗದಿಂದ ಶ್ರೀಮಂತರಾಗಿದ್ದ ಇವರು ದೇವಾಲಯಕ್ಕೆ ದಾನ ನೀಡುವಷ್ಟು ಅಥವಾ ದೇವಾಲಯ ಭಾಗಗಳನ್ನು ಮೂಡಿಸುವಷ್ಟು ಶ್ರೀಮಂತರಾಗಿದ್ದರು. ಪುಲಕೇಶಿಯ ಮಗ ಚಂದ್ರಾದಿತ್ಯನ ಕ್ರೋಚಿ ಶಾಸನದಲ್ಲಿ (ಕ್ರಿ.ಶ. ೬೫೫-೬೫೯) ವಿಜಯ ಮಹಾದೇವಿ ಬೊಡ್ಡಿ ಪೊಡ್ಡಿ ಎಂಬುವವಳು ತನ್ನನ್ನು ಚಂದ್ರಾದಿತ್ಯನ ಪ್ರಿಯಮಹಿಷಿ ಎಂದು ಕರೆದುಕೊಂಡಿದ್ದರೆ (JB BRAS II pt. III p. 211) ಮಹಾಕೂಟ ಶಾಸನದಲ್ಲಿ ವಿನಾಪೊಡಿ ಎಂಬುವವಳು ತನ್ನನ್ನು ವಿಜಯಾದಿತ್ಯನ ಪ್ರಾಣವಲ್ಲಭೆ (ಕ್ರಿ.ಶ. ಸು. ೭೧೦) ಎಂದು ಹೇಳಿಕೊಂಡಿದ್ದಾಳೆ. ಇವು ಕರ್ನಾಟಕದಲ್ಲಿ ಸೂಳೆಯರ ಪ್ರಾಚೀನ ಉಲ್ಲೇಖಗಳೂ ಹೌದು. ವಿನಾಪೊಡಿ ತಾಯಿ ಕುಚಿಪೊಡಿ ಕುಚಿಪೊಡಿಯ ತಾಯಿ ರೇವಮಂಚಳ್ ಎಂದಿದೆ. ಇಲ್ಲಿ ಬಂದಿರುವ ಪೊಡಿ ಎಂಬುದು ಬೊಡ್ಡಿ ಎಂಬುದರ ಪ್ರಾಚೀನ ರೂಪ. ಮುಂದೆ ಅನೇಕರು ಇಂತಹ ರಾಜನ ಸೂಳೆಯರು ತಾವೆಂದು ಆತ್ಮಾಭಿಮಾನದಿಂದ ಹೇಳಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಈ ಸೂಳೆ ಎಂಬ ಪದಕ್ಕೆ ಇಂದಿನ ಅರ್ಥವಿದ್ದಿರಲಾರದು.

ಹಾಗೆಯೇ ದೇವಾಲಯದ ಸೂಳೆಗೆ ಸಂಬಂಧಿಸಿದಂತೆ ಇದೇಕಾಲದ ಶಾಸನವೊಂದು 'ಶ್ರೀ ಬಿಜೇಶ್ವರದ ಸೂಳೆ ಚಲಬ್ಬೆ' ದೇವಾಲಯದ ಮೂರು ಕಂಬಗಳನ್ನು ಮಾಡಿಸಿದಂತೆ ಹೇಳಿಕೊಂಡಿದ್ದಾಳೆ. ರಾಜನ ಊಳಿಗದ ಸೂಳೆಯರಿಗೆ ಹೊರಗೆ ಬರುವಂತಹ ಅವಕಾಶವಿರಲಿಲ್ಲ. ಅದೇ ದೇವಾಲಯದ ಸೂಳೆಯರಿಗೆ ಇಂಥ ನಿಯಂತ್ರಣವಿರಲಿಲ್ಲ. ಸಾರ್ವಜನಿಕ ಪ್ರದರ್ಶನಕ್ಕೆ ಮೀಸಲಿದ್ದವರು. ಈ ದೇವಾಲಯದ ಸೂಳೆಯರು ದೇವಾಲಯದಲ್ಲಿದ್ದ ಗಾಂಧರ್ವ್ವರ ಸಮೂಹದಲ್ಲಿದ್ದವರು. ಪಟ್ಟದಕಲ್ಲು ದೇವಾಲಯವೊಂದರಲ್ಲಿ ದೇವರ ಸೇವೆಗಳನ್ನು 'ಗಾಂಧರ್ವ್ವರ್' ನಡೆಸಬೇಕೆಂದು ಹೇಳಿದೆ. ದೇವರ ಅಂಗ-ರಂಗಭೋಗದಲ್ಲಿ ಈ ಸೂಳೆಯರು ಕಾರ್ಯ ನಿರ್ವಹಿಸಬೇಕಿತ್ತು. ಬಿಜ್ಜಬ್ಬೆ, ಮನೋಭಾಲೆ ಚೊದಮ್ಮ ಎಂಬುವವರು ಕಂಬಗಳನ್ನು ಮೂಡಿಸಲು ದಾನವನ್ನು ನೀಡಿರುವುದು ಈ ರಂಗಮಂಟಪದ ಕಂಬಗಳಿಗೆ ಹೀಗಾಗಿ ರಂಗಮಂಟಪವು ಇವರ ಕಲಾಪ್ರದರ್ಶನ ಕೇಂದ್ರವಾಗಿತ್ತೆಂಬುದನ್ನು ಇದು ಸೂಚಿಸುತ್ತದೆ. ಈ ವಿಜಯೇಶ್ವರ ದೇವರ ಗಾಂಧರ್ವರ ಮರ್ಯಾದೆಗಳು ಬಾಲವಾದಾಗ ಮುಂದೆ ಲೋಕಮಹಾದೇವಿ ಇವರಿಗೆ ಪುನರ್ದತ್ತಿ ನೀಡುತ್ತಾಳೆ (IA X P. 166). ಮುಂದಿನ ಶತಮಾನಗಳಲ್ಲಿ ಈ ವೃತ್ತಿಗೆ ಹೊಸ ಹೊಸ ಹೆಸರುಗಳಾದ ಸೂಳೆ, ಪೊಡಿ, ಬೊಡ್ಡಿ, ಪಾತ್ರ, ಬಸವಿ ಮುಂತಾದವು ಸೇರಿಕೊಳ್ಳುತ್ತವೆ. ಸೂಳೆಯರನ್ನು ದೇವಾಲಯಗಳಲ್ಲಿ ನೇಮಿಸಿಕೊಂಡು ಅವರಿಗೆ ಅನುಕೂಲ ಕಲ್ಪಿಸುವುದು ಸಮಾಜದಲ್ಲಿ ಪ್ರತಿಷ್ಠೆಯಾಗಿತ್ತು. ಇಲ್ಲಿಂದಾಚೆಗೆ ಇವರ ವೃತ್ತಿಯಲ್ಲಿ ಕಲುಂಷಿತಸೇರಿ, ಈ ವೃತ್ತಿಗೆ ಕಪ್ಪು ಚುಕ್ಕೆಯಾಯಿತು.

ಇಂತಹ ಸೂಳೆಯರ ಹೆಸರು ಊರುಗಳಿಗೆ ಕಟ್ಟಡಗಳಿಗೆ ಹೇಗೆ ಬಂತೆಂಬುದು ಮುಂದಿರುವ ಪ್ರಶ್ನೆ. ಕರ್ನಾಟಕದಲ್ಲಿ ಸೂಳೆ, ಸೂಲ ಮುಂತಾದ ಶಬ್ದಗಳಿಂದ ಆರಂಭವಾಗುವ ಗ್ರಾಮಗಳಾದ ಸೂಲಕುಂಟೆ, ಸೂಳಿಕುಪ್ಪೆ, ಸೂಳೆಕೆರೆ, ಸೂಳಿಬೀಳು, ಸೂಳಿಕಟ್ಟೆ, ಸೂಲದ ಹಳ್ಳಿ, ಸೂಳೆಗಾಳಿ, ಸೂಳೆಬಾವಿ, ಸೂಲಿಬೆಲೆ, ಸೂಳೆಬೈಲು, ಸೂಳದಿಮ್ಮನ ಹಳ್ಳಿ, ಮುಂತಾದ ಗ್ರಾಮನಾಮಗಳು ದೊರೆಯುತ್ತವೆ. ಇನ್ನೂದಾಖಲಾಗದ ಗ್ರಾಮಗಳು ಅನೇಕವಿರಬಹುದು. ಈ ಗ್ರಾಮಗಳಲ್ಲಿ ಕೆಲವು 'ಶೂಲ' ಎಂಬುದರಿಂದ ನಿಷ್ಪನ್ನವಾಗಿರಬಹುದು. ಆದರೆ ಉಳಿದವು ಸೂಳೆ ಎಂಬ ಶಬ್ದದಿಂದಲೇ ಆರಂಭವಾಗುತ್ತವೆ.

ಬಳಕೆಯಾಗಿರುವ ಸೂಳೆ ಶಬ್ದಗಳು ಸಾಮಾನ್ಯವಾಗಿ ಜೈನರಿಗೆ ಅಥವಾ ವ್ಯಾಪಾರಿಗಳ ರಚನೆಗೆ ಸಂಬಂಧಿಸಿದುದಾಗಿವೆ. ಆಂಧ್ರದಲ್ಲಿಯೂ ಹಿಂದೆ ಹೇಳಿದಂತೆ ಬೌದ್ಧದಿಬ್ಬಗಳಿಗೆ ಲಂಜದಿಬ್ಬ

(ಸೂಳೆದಿಣ್ಣೆ) ಎಂದು ಕರೆದಿರುವುದು. ಕರ್ನಾಟಕದಲ್ಲಿ ಬಸದಿಗಳಿಗೆ ಮತ್ತು ಹಂಪಿ ಪೇಟೆಗೆ ಮತ್ತು ಜೈನರೇ ಕಟ್ಟಿಸಿರಬಹುದಾದ (?) ಸೂಳೆಕೆರೆಗೆ ಕಟ್ಟಡಗಳಿಗೆ ಈ ಸೂಳೆ ಪದ ಪೂರ್ವಪದವಾಗಿ ಬಂದಿರುತ್ತದೆ. ಇದಕ್ಕೆ ಕಾರಣವನ್ನು ಹೀಗೆ ಊಹಿಸಬಹುದು. ವ್ಯಾಪಾರಿಗಳು ಯಾವುದೇ ಮತೀಯರಾಗಿ. ಒಮ್ಮೆ ಮಾರಾಟಕ್ಕೆಂದು ಊರು ಬಿಟ್ಟರೆ ಅನೇಕ ತಿಂಗಳುಗಳು ಅವರು ಮನೆಕಡೆ ಬರುತ್ತಿರಲಿಲ್ಲ. ಇವರು ಗುಂಪಾಗಿ ಬೀಡು ಬಿಟ್ಟ ಕಡೆ ತಾತ್ಕಾಲಿಕ ಪಟ್ಟಣ ನಿರ್ಮಾಣವಾಗುತ್ತಿತ್ತು. ತಾತ್ಕಾಲಿಕ ಪಟ್ಟಣದಲ್ಲಿ ಸೂಳೆಗಾರಿಕೆಯೂ ಪ್ರಧಾನವಾಗಿರುತ್ತಿತ್ತು. ಅನೇಕ ಬೌದ್ಧ ಜಾತಕಥೆಗಳಲ್ಲಿ ವ್ಯಾಪಾರಿಗಳು ವೇಶ್ಯೆಯರ ಮನೆಗೆ ಹೋಗುತ್ತಿದ್ದ ಪ್ರಸಂಗಗಳನ್ನು ತಿಳಿಸುತ್ತವೆ. ಈ ವ್ಯಾಪಾರಿಗಳ (ಜೈನರು ಸಾಮಾನ್ಯವಾಗಿ ವ್ಯಾಪಾರಿಗಳು) ರಚನೆಗಳನ್ನೂ ಜನರು ವ್ಯಂಗ್ಯವಾಗಿ ಸೂಳೆ ಎಂಬ ಪೂರ್ವ ಪದವನ್ನೂ ಸೇರಿಸಿ ಕರೆದಿರಬಹುದು. ಈ ಕಾರಣದಿಂದ ಸೂಳೆಗು ರಚನೆಗಳಿಗೂ ಸಂಬಂಧ ಎಲ್ಲದಿದ್ದರೂ ವ್ಯಾಪಾರಿಗಳ ಕಾರಣದಿಂದ ಈ ಪದ ಬಂದಿರಬಹುದೆಂದು ಹೇಳಬಹುದು.

(ಈ ಲೇಖನ ಬರೆಯುವಲ್ಲಿ ಚರ್ಚೆಯಲ್ಲಿ ಪಾಲ್ಗೊಂಡು ಸಲಹೆ ನೀಡಿದ ಡಾ.ಎಸ್.ನಾಗರಾಜು ಅವರಿಗೆ ಕೃತಜ್ಞತೆಗಳು)







**ಕ. ಇತಿಹಾಸ ಅಕಾದೆಮಿಯ ೧೩ನೇ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೯)**

*ಹೊಸ ಹೊಸ ವಿಷಯಗಳನ್ನು ಅರಸಿಕೊಂಡು ಹೋಗುವ ಮನೋಧರ್ಮವನ್ನು ನಾವು ಬೆಳೆಸಿಕೊಳ್ಳಬೇಕು. ಒಂದೇ ವಿಷಯಕ್ಕೆ ಅಂಟಿಕೊಂಡರೆ ನಾವು 'ತಜ್ಞ' ಎನಿಸಿಕೊಳ್ಳಬಹುದಲ್ಲದೆ 'ಸಂಶೋಧಕ' ಎಂದಲ್ಲ. ಮತ್ತೆ ಸಂಶೋಧಕ, ತಜ್ಞನೇ ಆಗಿರಬೇಕು ಎಂದೇನೂ ಇಲ್ಲ. ನವನವೋನ್ಮೇಷದ ವಿಚಾರಗಳು ಅವನಲ್ಲಿ ಸ್ಫುರಿಸುತ್ತಾ ಇರಬೇಕು. ಆಗಲೇ ಮೌಲಿಕ ಸಂಶೋಧನೆ ಸಾಧ್ಯವಾಗುತ್ತದೆ.*

*ಶೋಧನ ಮತ್ತು ಸಂಶೋಧನ - ಈ ಪದಗಳ ಅರ್ಥ ಸ್ಪಷ್ಟಗೊಳ್ಳಬೇಕು. ಹೊಸಗನ್ನಡ ಕಾವ್ಯದ ಒಂದು ಮಹತ್ವದ ಹಸ್ತಪ್ರತಿಯನ್ನು ಕಂಡುಹಿಡಿದು ಅಭ್ಯಾಸ ಮಾಡಿ ಅದಕ್ಕೆ ವಿದ್ವತ್ ಪೂರ್ಣವಾದ ಮುನ್ನುಡಿ ಬರೆದರೆ ಸಾಹಿತ್ಯ ವಿಮರ್ಶೆ ಎನಿಸಿಕೊಳ್ಳುತ್ತದೆ, ಸಾಹಿತ್ಯ ಸಂಶೋಧನೆ ಅಲ್ಲ. ಅದೇ ಬಗೆಯ ಪರಿಶ್ರಮವನ್ನು ಇತಿಹಾಸ ವಿಷಯದಲ್ಲಿ ತೋರಿದ್ದಾದರೆ ಇದು ಶೋಧದ ಹೆಜ್ಜೆಯನ್ನು ದಾಟಿಕೊಂಡು ಸಂಶೋಧನದ ಸದರಿನಲ್ಲಿ ಬರಬಹುದು. ಯಾವುದೇ ಸಂಶೋಧನಕ್ಕೆ ತಳಹದಿಯಾಗಿ ನಮ್ಮಲ್ಲಿ ಮೊದಲು ಆ ಬಗ್ಗೆ ಜಿಜ್ಞಾಸೆ ಅಥವಾ ಸಂದೇಹ ಮೂಡುತ್ತದೆ. ಇದು ಉತ್ಕಟವಾದಷ್ಟೂ ಸಂಶೋಧನ ಕಾರ್ಯ ಮೌಲಿಕವೆನಿಸೀತು.*

**ಡಾ. ಶ್ರೀನಿವಾಸ ಹಾವನೂರ**
ಸಮ್ಮೇಳನಾಧ್ಯಕ್ಷರು



ಡಾ. ಬಿ. ಎಸ್. ಶ್ಯಾಮಲಾರತ್ನಕುಮಾರಿ*

# ಮೈಸೂರಿನ ಕನ್ನೇಗೌಡನ ಕೊಪ್ಪಲು ಬಡಾವಣೆ

*ಚಾಲುಕ್ಯರ ಅಧಿಕಾರಿಯೊಬ್ಬನು ಕಟ್ಟಿಸಿರುವ ದೇಗುಲವಿರುವ ಪ್ರಸಿದ್ಧ ನೆಲೆ : ಮೈಸೂರಿನ ಪ್ರಾಚೀನ ಕನ್ನೇಗೌಡನಕೊಪ್ಪಲು. ಮಾಗಡಿ ಕೆಂಪೇಗೌಡನ ವಂಶೀಕನಾದ ಕನ್ನಯ್ಯ ಯಾ ಕನ್ನೆಗೌಡನು; ಮೈಸೂರರಸರ ಮುಂದೆ ಬುದ್ಧಿಚಾತುರ್ಯ ಸಹಿತವಾಗಿ ಶೌರ್ಯ ಪ್ರದರ್ಶನ ಮಾಡಿ ನೆಲೆನಿಂತ ತಾಣವಿದು. ಆವನ ಹೆಸರಿನಲ್ಲಿರುವ 'ಕನ್ನಯ್ಯನ ಕಲ್ಲು' ಬಳಿ ಬಂದು ನಿಂತು ಈ ಪ್ರದೇಶದ ಹಳೆಯ ನಿವಾಸಿಗಳು ವಂಶಪರಂಪರೆಯಂತೆ ವಿವಾಹಾದಿ ಶುಭಕಾರ್ಯಗಳನ್ನೂ ನಡೆಸಿಕೊಂಡು ಬಂದವರು. ಈ ಕೊಪ್ಪಲಿನಲ್ಲಿ ಗರಡಿಮನೆಗಳು, ಸಿದ್ದಪ್ಪಾಜಿ ಮಂಟೇಸ್ವಾಮಿ ದೇಗುಲ, ಗದ್ದುಗೆ, ಮೂಗಮಾರಮ್ಮ, ಕಾಳಿಕಾ ದೇಗುಲಗಳಿದ್ದು ಇದು ಇತಿಹಾಸ, ಜಾನಪದ ಸಂಗತಿಗಳ ಸಮ್ಮಿಳನ ನೆಲೆಯಾಗಿದೆ.*

ಮೈಸೂರುನಗರದ ನಾಲ್ಕು ಉಪನಗರ (ಬಡಾವಣೆ)ಗಳಲ್ಲಿ ಮೊದಲನೆಯದು ಈ ಕನ್ನೇಗೌಡನಕೊಪ್ಪಲು ಅಥವಾ ಕೆ.ಜಿ. ಕೊಪ್ಪಲು.[೧] ಸುಮಾರು ೫೫೦೦ ಎಕರೆ ಪ್ರದೇಶದಲ್ಲಿ ಹರಡಿರುವ ಈ ಬಡಾವಣೆಯಲ್ಲಿ ಇಂದಿನ ಕುವೆಂಪುನಗರದ ೧, ೨ ಹಂತಗಳು, ಕುವೆಂಪುನಗರದ ಭಾಗಗಳಾದ ಶಾರದಾದೇವಿನಗರ ರಾಮಕೃಷ್ಣನಗರ, ವಿವೇಕಾನಂದನಗರ ಮತ್ತು ಜನತಾನಗರ ಹಾಗೂ ಮಣಲವಾಡಿ ಗ್ರಾಮದ ಪಕ್ಕದಲ್ಲಿನ ಚಿಕ್ಕಹರದನಹಳ್ಳಿ, ನಿವೇದಿತಾನಗರ ಮತ್ತು ದಟ್ಟಗಳ್ಳಿಯ ಮೂರು ಹಂತಗಳು ಸೇರಿವೆ. ಈ ಕೊಪ್ಪಲಿನ ನಾಲ್ಕು ದೆಸೆಗಳಲ್ಲಿ ಬೀಸಾಳಕಟ್ಟೆ, ಬಸಪ್ಪನ ಕಟ್ಟೆ, ಸಿದ್ಧಪ್ಪಾಜಿಕಟ್ಟೆ ಮತ್ತು ದೇವರಕೊಳಗಳಿದ್ದು, ಈಗ ದೇವರ ಕೊಳವೊಂದುಳಿದು ಇತರ ಕಟ್ಟೆ-(ಕೆರೆ)ಗಳು ಬತ್ತಿ ಹೋಗಿ ಆ ಸ್ಥಳಗಳಲ್ಲಿ ಕ್ರಮವಾಗಿ ಸರ್ಕಾರಿ ಶಾಲೆ, ಪಶುಆಸ್ಪತ್ರೆ ಹಾಗೂ ಚಾಮರಾಜಪುರಂ ರೈಲ್ವೆನಿಲ್ದಾಣ ಎದ್ದುನಿಂತಿವೆ. ಕಾಂತರಾಜ ಅರಸ್ ರಸ್ತೆಯು ಪೂರ್ವದಲ್ಲಿ ಬ್ರಿಡ್ಜ್‌ನಿಂದ ಪಶ್ಚಿಮಕ್ಕೆ ಕುಕ್ಕನಹಳ್ಳಿ ವರೆಗೆ ಜಯನಗರದ ಉತ್ತರಕ್ಕೆ ಕನ್ನೇಗೌಡಕೊಪ್ಪಲಿನ ದಕ್ಷಿಣಕ್ಕೆ ಹಾದುಹೋಗುತ್ತದೆ.

### ಕನ್ನೇಗೌಡ ಯಾರು?

ಕನ್ನೇಗೌಡನು ಮಾಗಡಿ ಕೆಂಪೇಗೌಡನ ಆಪ್ತವರ್ಗಕ್ಕೆ ಸೇರಿದವನೆಂದೂ, ಮಾಗಡಿಯನ್ನು ಮೈಸೂರಿನ ಒಡೆಯರು ಆಕ್ರಮಿಸಿದಾಗ ಇವನು ಮಹಾರಾಜರ ಕೈದಿಯಾದನೆಂದೂ, ಇವನ ಕೈಗೆ ನುಲಿಗೆ ಬೇಡಿ ಹಾಕಿ ಸೆರೆಯಲ್ಲಿಟ್ಟರೆಂದು ಮೈಸೂರು ಅರಮನೆ ಕಟ್ಟುವಾಗ ಅರಮನೆಯ ಪೂರ್ವದ್ವಾರದಿಂದ ಪ್ರವೇಶಿಸಿದರೆ ಅರಮನೆಯ ಹಿಂಭಾಗದಲ್ಲಿರುವ ಕರೀಕಲ್ಲಿನ ತೊಟ್ಟಿ ಎಂಬ ಬಾವಿಯಲ್ಲಿ ಅಲ್ಲಿದ್ದ ಕಗ್ಗಲ್ಲನ್ನು ಎತ್ತಿ ನೀರನ್ನು ಬರಿಸಲು ಮಹಾರಾಜರು ಸಂತೃಪ್ತರಾಗಿ ನಿನಗೇನು ಬೇಕೋ ಕೇಳಿಕೋ ಕೊಡುವೆನೆಂದರು. ಕನ್ನೇಗೌಡನು ಬಳೆ ಬಣಜಿಗ, ಲಿಂಗಾಯತ ಕನ್ಯೆಯರನ್ನು ವಿವಾಹವಾಗಲು ಅನುಮತಿಸಬೇಕೆಂದೂ ಹಾಗೂ ತಾನು ಕುಟುಂಬದೊಡನೆ ನೆಲೆ ನಿಲ್ಲಲು ಭೂಮಿಯನ್ನು ನೀಡಬೇಕೆಂದೂ



* ಮುಖ್ಯಸ್ಥರು, ಇತಿಹಾಸ ವಿಭಾಗ, ಬಸವೇಶ್ವರ ಪ್ರಥಮದರ್ಜೆ ಕಾಲೇಜು, ರಾಜಾಜಿನಗರ, ಬೆಂಗಳೂರು-೧೦

ವಿನಂತಿಸಿಕೊಂಡನೆಂದೂ ಅದರಂತೆ ಈ ಬಡಾವಣೆಯ ಕನ್ನಯ್ಯನ ಕಲ್ಲು ಇರುವ ಸ್ಥಳದಲ್ಲಿ ನೆಲೆನಿಂತನೆಂದೂ ತಿಳಿದುಬರುತ್ತದೆ. ಕನ್ನೆಗೌಡನ ವಂಶಸ್ಥರು ತಮ್ಮನ್ನು ಗಂಗಡಿಕಾರ ಒಕ್ಕಲಿಗರೆಂದು ಕರೆದುಕೊಳ್ಳುತ್ತಾರೆ. ಇಂದು ೫೦,೦೦೦ ಜನ ಗಂಗಡಿಕಾರ ಒಕ್ಕಲಿಗರು ಈ ಪ್ರದೇಶದಲ್ಲಿ ನೆಲೆಸಿದ್ದಾರೆ ಎಂದು ಒಂದು ಅಂದಾಜು ಮಾಡಲಾಗಿದೆ.

**ಕನ್ನೇಗೌಡ ಕೊಪ್ಪಲಿನ ಗರಡಿಗಳು**

ಈ ಕೊಪ್ಪಲಿನಲ್ಲಿ ಲಿಂಗೇಗೌಡನ ಗರಡಿ, ಹುಚ್ಚಯ್ಯನ ಗರಡಿ, ಪೈಲ್ವಾನ್ ಬಸಪ್ಪನ ಗರಡಿ, ದಾಸೇಗೌಡನ ಗರಡಿ ಮತ್ತು ಬೋರೇ ಬಸವಯ್ಯನ ಗರಡಿ ಎಂಬ ಐದು ಗರಡಿಗಳಿವೆ.

ಪೈಲ್ವಾನ್ ಬಸವಯ್ಯನ ಗರಡಿ ಮೇಗಳ ಬೀದಿಯಲ್ಲಿದೆ. ದಾಸೇಗೌಡರ ಗರಡಿ ಮತ್ತು ಪೈಲ್ವಾನ್ ಬಸವಯ್ಯನ ಗರಡಿಗಳನ್ನು ಹತ್ತೂ ಜನರ ಗರಡಿಗಳೆಂದು ಕರೆಯಲಾಗುತ್ತದೆ. ಈ ಹತ್ತು ಜನರೆಂದರೆ ಗ್ರಾಮದ ವಿವಿಧ ವೃತ್ತಿಗಳ ಪ್ರತಿನಿಧಿಗಳು. ಅವರೆಂದರೆ ಬಡಗಿ, ಕುಂಬಾರ, ಅಗಸ, ಆಚಾರಿ, ಕಮ್ಮಾರ, ಕ್ಷೌರಿಕ, ಒಕ್ಕಲಿಗ, ಹರಿಜನ, ತಮ್ಮಡಿಗಳು, ಬ್ರಾಹ್ಮಣ ಪುರೋಹಿತರು. ಈ ಹತ್ತೂ ಜನರಿಗೆ ಒಬ್ಬೊಬ್ಬರಿಗೂ ಪ್ರತಿಮನೆಯಿಂದ ೨ ಮೊರ ಧಾನ್ಯವನ್ನು ಪ್ರತಿವರ್ಷವೂ ಹಡದೆ ಅಥವಾ ವೇತನವನ್ನು ನೀಡಬೇಕಾಗಿದ್ದಿತು. ಜಮೀನಿನ ಪ್ರಮಾಣದ ಆಧಾರದ ಮೇಲೆ ಹಡದೆಯ ಪ್ರಮಾಣ ವನ್ನು ನಿರ್ಧರಿಸುತ್ತಿದ್ದರು.

ಪ್ರತಿಯೊಂದು ಗರಡಿಯಲ್ಲೂ ಐದು ಜನ ಯಜಮಾನರು ಇರುತ್ತಿದ್ದರು. ಹೀಗೆ ಐದು ಗರಡಿಗಳಿಗೆ ಒಟ್ಟು ೨೫ ಯಜಮಾನ ರಿದ್ದು, ಈ ಐದು ಗರಡಿಗಳ ಇಪ್ಪತ್ತೈದು ಜನ ಯಜಮಾನರು ಒಟ್ಟಾಗಿ ಐವರನ್ನು ದೊಡ್ಡಯಜಮಾನರೆಂದು ಆಯ್ಕೆ ಮಾಡುತ್ತಿದ್ದರು. ಈ ರೀತಿಯ ಆಯ್ಕೆ ಪದ್ಧತಿ ಇಂದು ನಿಂತುಹೋಗಿದೆ.

ಈ ಐವರು ದೊಡ್ಡ ಯಜಮಾನರು ಒಬ್ಬನನ್ನು ನ್ಯಾಯಾಧೀಶನೆಂದು ಆರಿಸುತ್ತಿದ್ದರು. ಕೊಪ್ಪಲಿನ ಗಂಗಡಿಕಾರರ ಎಲ್ಲಾ ವ್ಯಾಜ್ಯಗಳನ್ನೂ ನ್ಯಾಯಯುತವಾಗಿ ತೀರ್ಮಾನಿಸುತ್ತಿದ್ದವನು ಇವನೇ. ಇವನ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತಿತ್ತು. ಈ ನ್ಯಾಯದಾನ ಪದ್ಧತಿಯು ಈಗಲೂ ಯಶಸ್ವಿಯಾಗಿ ನಡೆದುಕೊಂಡು ಬರುತ್ತಿದೆ.



**ಸದರಿ ಯಜಮಾನರುಗಳು:** ಲಿಂಗೇಗೌಡನ ಗರಡಿಗೆ-ಮರಿಲಿಂಗೇಗೌಡರು, ರಾಮಣ್ಣ; ಬೋರೆ ಬಸವಯ್ಯನ ಗರಡಿ ಅಥವಾ ಮಟ್ಟೆಗರಡಿಗೆ-ಬಸವಯ್ಯ ಬೋರೆ ಬಸವಯ್ಯ ಆಸ್ಥಾನ ಕಂಟ್ರಾಕ್ಟರ್ ಆಗಿದ್ದು, ಶರಾವತಿ ವಿದ್ಯುತ್ ಯೋಜನೆ, ರೈಲ್ವೆ ನಿಲ್ದಾಣ, ಕೆ.ಆರ್. ಆಸ್ಪತ್ರೆ ಕಟ್ಟಿದರು (ಗಂಡುಮಗಪ್ಪ) ಮತ್ತು ಗಾಡಿ ಸಿದ್ದಪ್ಪ; ದಾಸೇಗೌಡರ ಗರಡಿಗೆ ವೆಂಕಟೇಶ, ಲಿಂಗಪ್ಪ; ಬಸವಯ್ಯನ ಗರಡಿಗೆ-ಚಿಕ್ಕಣ್ಣ-ಕೊಂಟಪ್ಪ, ನಿಂಗಪ್ಪ, ಬಸಪ್ಪ; ಬಸವಯ್ಯನವರ ಚಿಕ್ಕಗರಡಿಗೆ ಚಿಕ್ಕೀರಣ್ಣ, ಬಸಪ್ಪ ಹಾಗೂ ಹುಚ್ಚಯ್ಯನ ಗರಡಿಗೆ-ಲಿಂಗಪ್ಪ.

ದಸರಾ ಉತ್ಸವದ ಸಂದರ್ಭದಲ್ಲಿ ಮಾತ್ರ ಈ ಗರಡಿಗಳು ಕಾರ್ಯನಿರತವಾಗಿ ಶಿಕ್ಷಣವನ್ನು ನೀಡುತ್ತವೆ. ಉಳಿದಂತೆ ಮುಚ್ಚಿರುತ್ತವೆ. ನಾಲ್ಕೈದು ಶಿಕ್ಷಕರಿರುತ್ತಾರೆ. ಹತ್ತರಿಂದ ಇಪ್ಪತ್ತರವರೆಗೆ ಕುಸ್ತಿಪಟುಗಳು ಪಂದ್ಯಗಳಲ್ಲಿ ಭಾಗವಹಿಸುತ್ತಾರೆ. ಹುಚ್ಚಯ್ಯನ ಗರಡಿಗೆ ನಾಲ್ವಡಿ ಕೃಷ್ಣರಾಜ ಒಡೆಯರು ಬೆಳ್ಳಿ ಕರಂಡವನ್ನು ಪಾರಿತೋಷಕವಾಗಿ ನೀಡಿದ್ದಾರೆ.

**ಕನ್ನೇಗೌಡ ಕೊಪ್ಪಲಿನಲ್ಲಿರುವ ದೇವಾಲಯಗಳು**

ಕನ್ನೇಗೌಡನಕೊಪ್ಪಲಿನಲ್ಲಿ ಅತ್ಯಂತ ಪ್ರಾಚೀನವಾದ ದೇವಾಲಯವೆಂದರೆ ಮರುಳೇಶ್ವರ ಎಂದು ಕರೆಯಲ್ಪಡುತ್ತಿರುವ ನಾರಸಿಂಗೇಶ್ವರ ದೇವಾಲಯ. ಈ ದೇವಾಲಯವನ್ನು ಚಾಲುಕ್ಯ ಅಧಿಕಾರಿಯಾಗಿದ್ದ ನಾರಸಿಂಗಯ್ಯನು ಕಟ್ಟಿಸಿ ದೇವಾಲಯದ ಪೂಜಾದಿಗಳಿಗಾಗಿ ಮಣಲವಾಡಿ ಗ್ರಾಮವನ್ನು ದಾನ ನೀಡಿದ ವಿಷಯವನ್ನು ಕುಕ್ಕರಹಳ್ಳಿಯ ಶಾಸನವು[೨] ತಿಳಿಸುತ್ತದೆ. ಈ ಶಾಸನವು ಇಂದು ದೇವಾಲಯದ ಮುಂದೆ ಬಿದ್ದಿದೆ. ದೇವಾಲಯವನ್ನು ಈಗ ಪುನರ್ ನಿರ್ಮಾಣ ಮಾಡಲಾಗುತ್ತಿದೆ. ದೇವಾಲಯವು ಪೂರ್ವಾಭಿಮುಖವಾಗಿದೆ. ದೇವಾಲಯದ ಗರ್ಭಗುಡಿಯ ಕಂಬಗಳು ಮತ್ತು ಗೋಡೆಯ ಇಟ್ಟಿಗೆಗಳು ಹಾಗೂ ದೇವಾಲಯದ ಗರ್ಭಗುಡಿಯ ಕಂಬಗಳು ಮತ್ತು ಗೋಡೆಯ ಇಟ್ಟಿಗೆಗಳು ಹಾಗೂ ದೇವಾಲಯದ ಮುಂಭಾಗದಲ್ಲಿರುವ ಕಲ್ಲಿನ ದೀಪ ಅಥವಾ ಬಲಿ ಸ್ತಂಭ ಪ್ರಾಚೀನತೆಯ ಕುರುಹುಗಳಾಗಿ ಉಳಿದುಬಂದಿದೆ. ದೇವಾಲಯದ ಗರ್ಭಗುಡಿಯಲ್ಲಿ ಒಂದೂವರೆ ಅಡಿ ಎತ್ತರದ ಸಾಲಿಗ್ರಾಮ ಶಿಲೆಯ ಲಿಂಗವಿದೆ. ಆವರಣದಲ್ಲಿ ಮರುಳೇಶ್ವರ ಸಮಿತಿಯು ಒಂದು ಪ್ರಾಥಮಿಕ ಶಾಲೆಯನ್ನು ನಡೆಸುತ್ತಿದೆ. ದೇವಾಲಯದ ಪುನರ್ ನಿರ್ಮಾಣ ಕಾರ್ಯವನ್ನು ಈ ಸಮಿತಿಯೇ ಕೈಗೊಂಡಿದೆ. ನಿರ್ಮಾಣ ಮುಕ್ತಾಯದ ಹಂತವನ್ನು ತಲುಪಿದೆ. ಮಣಲವಾಡಿ ದೇವಾಲಯದ ಪೂರ್ವಕ್ಕೆ ಮುಂದಿರುವ ಪ್ರದೇಶವಾಗಿದೆ. ದೇವಾಲಯವು ವಿಶಾಲ ಆವರಣವನ್ನು ಹೊಂದಿದೆ. ಈಗ ಎದುರಿನಲ್ಲಿ ಕಾವೇರಿ ಶಾಲೆ ಇದೆ.

ಚಂದ್ರಮೌಳೀಶ್ವರ ದೇವಾಲಯವು ಈ ಬಡಾವಣೆಯಲ್ಲಿರುವ ಇನ್ನೊಂದು ಪ್ರಸಿದ್ಧ ದೇವಾಲಯ. ಇದನ್ನೂ ನೂತನವಾಗಿ

ನಿರ್ಮಿಸಲಾಗಿದೆ. ಆದರೆ ಇದೂ ಪ್ರಾಚೀನ ದೇವಾಲಯವೆಂದು ಚೋಳರ ಕಾಲದ್ದೆಂದು ಸ್ಥಳೀಯರು ಹೇಳುತ್ತಾರೆ. ದೇವಾಲಯ ವಿಶಾಲ ಆವರಣವನ್ನು ಹೊಂದಿದೆ. ಅಶ್ವತ್ಥಕಟ್ಟೆಯನ್ನೂ ನಾಗರಕಲ್ಲುಗಳನ್ನೂ ಹೊಂದಿದೆ. ಗರ್ಭಗುಡಿಯಲ್ಲಿ ಎರಡು ಅಡಿ ಎತ್ತರದ ಈಶ್ವರನ ಮೂರ್ತಿಯಿದೆ. ದೇವಾಲಯ ಪಶ್ಚಿಮಾಭಿಮುಖವಾಗಿದೆ. ನಾಗರಾಜ ಎಂಬ ಬೊಬ್ಬರಕಮ್ಮೆ ಸ್ಮಾರ್ತ ಬ್ರಾಹ್ಮಣರು ದೇವರ ಅರ್ಚಕರಾಗಿದ್ದಾರೆ.

ಮಣಲವಾಡಿಗೆ ಸೇರಿದಂತಿರುವ **ಆಂಜನೇಯನ ದೇವಾಲಯವೂ** ಪುನರ್ ನಿರ್ಮಾಣಗೊಂಡಿದೆಯಾದರೂ



ಗರ್ಭಗುಡಿಯಲ್ಲಿರುವ ಆಂಜನೇಯನ ವಿಗ್ರಹ ಹಳೆಯದಾಗಿದೆ. ದೇವಾಲಯದ ಆವರಣದಲ್ಲಿ ಉತ್ತರದ ಪಾರ್ಶ್ವದಲ್ಲಿ ಬೋರೆ ಬಸವಯ್ಯ ಎಂಬುವರು ಸೋಪಾನಗಳಿರುವ ಕೊಳವೊಂದನ್ನು ಕಟ್ಟಿಸಿದ್ದಾರೆ. ಆ ಕೊಳದಲ್ಲಿ ಎಂದೂ ನೀರು ಬತ್ತುವುದಿಲ್ಲವೆಂದು ಪ್ರತೀತಿಯಿದೆ. ಈ ಕೊಳದ ನೀರನ್ನೇ ಎಲ್ಲ ದೇವಾಲಯಗಳ,



ಜನರ ಉತ್ಸವಗಳಿಗೂ 'ಮೀಸಲು ನೀರು' ಇಲ್ಲಿಂದಲೇ ಪೂರೈಸಲಾಗುತ್ತದೆ. ಆದುದರಿಂದ ಇದನ್ನು ದೇವರಕೊಳವೆಂದೇ ಜನರು ಕರೆಯುವರು.

**ಕುಕ್ಕರಹಳ್ಳಿ ಶಾಸನ**

ಅದರ ಕೆಲ ಸಾಲುಗಳು :

೪ .......... ಚಾಳುಕ್ಯಾರ್ಜುನಂ ಚಲಕೆ ಮೊದಲಿ
೫ ಗ ವಾರಬ್ಬಿಗಣ್ಡನಕಳಂಕಮಹೇಸ್ವರಂದ
೬ ಣ್ಡ ಮುನ್ನಿಜೆವೊಂ ಶ್ರೀಮತ್ ನರಸಿಂಗಯ್ಯ ನರಸಿಂಗೇ
೭ ಸ್ವರಮ್ಮಾಡಿಸಿ ಮಣಲೆವಾಡಿಯನಭ್ಯ
೮ ನ್ತರಸಿದ್ಧಿಯಾಗೆ ಬಿಟ್ಟಂ ಇ ಧರ್ಮ್ಮವಂ ಮೂ
೯ ವರ್ನ್ನಾಗರ್ಗ್ಗವುಣ್ಡುಗಳು ಸರಿಸುವೊರ್ ಪೂರ್ವ್ವ ಬ
೧೦ ಯಲ್ನಾಡನ ಬಿಟ್ಟ ದತ್ತಿ ಇ ಧರ್ಮ್ಮವನಟಿ
೧೧ ದವರ್ ಲಿಂಗವುಮಂ ಶ್ರೀಪರ್ವತಮುಮಂ
೧೨ ಎಟಿಕ್ಕೋಟಿಯುಮಂ ಬಾಣರಾಸಿಯುಮಂ
೧೩ ಕವಿಲೆಯಮನಟಿದ ಪಞ್ಚ ಮ
೧೪ ಪಾಪಾತಕರ್

**ಸಿದ್ಧಪ್ಪಾಜಿ ಮಂಠೇಸ್ವಾಮಿ ದೇವಸ್ಥಾನ :** ಕೆಳಗಲಿ ಕಾಂತರಾಜ ರಸ್ತೆಯಲ್ಲಿದೆ ಈ ದೇವಾಲಯದಲ್ಲಿ ಎರಡು ಗರ್ಭಗುಡಿಗಳಿದ್ದು, ಒಂದರಲ್ಲಿ ಸಿದ್ಧಪ್ಪಾಜಿ ಎಂಬ ಮಂಠೇಸ್ವಾಮಿಗಳ ಶಿಷ್ಯರ ಆರೂವರೆ ಅಡಿ ಎತ್ತರದ (ಪೀಠ ಸೇರಿದಂತೆ) ಕರಿಕಲ್ಲಿನ



ವಿಗ್ರಹವಿದೆ. ಸಿದ್ಧಪ್ಪಾಜಿಯ ಎಡಗೈಯಲ್ಲಿ ಕೆಂಪುಬಾವಲಕ್ಕಿ ಗೂಡಿದೆ. ಬಲಗೈಯಲ್ಲಿ ತ್ರಿಶೂಲವಿದೆ. ವಿಗ್ರಹ ಅತ್ಯಂತ ಆಕರ್ಷಕವಾಗಿದೆ. ಇನ್ನೊಂದು ಗರ್ಭಗುಡಿಯಲ್ಲಿ ಮಂಠೇಸ್ವಾಮಿಯ ಗದ್ದುಗೆ, ಪಾದ ರಕ್ಷೆ, ಮುಳ್ಳುಪಾವಡ, ಕಡ್ಡೆಯ, ತ್ರಿಶೂಲ ಮತ್ತು ಬಾರಕಡ್ಡೆಯಗಳು ಇವೆ.



**ಸಿದ್ಧಪ್ಪಾಜಿ ಐತಿಹ್ಯ :** ಸಿದ್ಧಪ್ಪಾಜಿ ದೇವಸ್ಥಾನದಲ್ಲಿ ಅರ್ಚಕರಾದ ಸಿದ್ಧಪ್ಪಾಜಿ ಗುಡ್ಡಪ್ಪ ತಿಳಿಸಿದಂತೆ-

ಸಿದ್ಧಪ್ಪಾಜಿ ಮಂಟೇಸ್ವಾಮಿಗಳ ಶಿಷ್ಯರಾಗುವ ಮೊದಲು ದಳವಾಯಿಯಾಗಿದ್ದರು. ಶಿಷ್ಯತ್ವವನ್ನು ಸ್ವೀಕರಿಸಿದ ನಂತರ ಗುರುಗಳ ಆದೇಶದಂತೆ ಮಠಕಟ್ಟಲು ಧನಭಿಕ್ಷೆಗಾಗಿ ಹಲಗೂರು ಪಾಂಚಾಳ ಗೇರಿಗೆ ತೆರಳಿ ಮೂರು ಹಾರೆ, ಮೂರು ಗುದ್ದಲಿ, ಮೂರು ಪಿಕಾಸಿಗಳ ಒಂಭತ್ತು ಲಗಾನ (ತೆರ)ವನ್ನು ಕೇಳಿದರು. ಪಾಂಚಾಳ ಗೇರಿಯ ವಿಶ್ವಕರ್ಮರು ಲಗಾನ ಕೊಡಲು ನಿರಾಕರಿಸಿದಾಗ ದಳವಾಯಿ ಸಿದ್ಧಪ್ಪನವರು ಪಾಂಚಾಳಗೇರಿಯನ್ನು ನಾಶ ಮಾಡಿದರು. ನಂತರ ಈ ಪಾಂಚಾಳಗೇರಿಯ ವಿಶ್ವಕರ್ಮರು ಮಳವಳ್ಳಿ ಬಪ್ಪಗೌಡನಪುರದಲ್ಲಿ ಮಠವನ್ನು ಕಟ್ಟಿಕೊಟ್ಟರು. ಈಗ ಸಿದ್ಧಪ್ಪಾಜಿ ಮಂಟೇಸ್ವಾಮಿ ದೇವಸ್ಥಾನದಲ್ಲಿ ಬಪ್ಪಗೌಡನ ಪುರ ಮಠದ ನೇಮ ನಡೆಯುತ್ತಿದೆ. ವಿಶ್ವಕರ್ಮ ಜನಾಂಗದೊಂದಿಗೆ ಗಂಗಡಿಕಾರಗೌಡ ಜನಾಂಗದವರೂ ಈ ದೇವಾಲಯಕ್ಕೆ ನಡೆದುಕೊಳ್ಳುತ್ತಿದ್ದಾರೆ. ಈ ದೇವಾಲಯದಲ್ಲಿ ಆಷಾಢ ಹುಟ್ಟಿದ ಒಂದು



ವಾರಕ್ಕೆ ಕಡ್ಡೆಯದ ಉತ್ಸವ ನಡೆಯುತ್ತದೆ. ಈ ಸಂದರ್ಭದಲ್ಲಿ ಬಸಪ್ಪ ಎಂಬ ವಿಶ್ವಕರ್ಮ ಮನೆತನವದವರು ಕಾವಿದಳವೇರಿಸುತ್ತಾರೆ. ಸಿದ್ಧಪ್ಪಾಜಿಯ ಗದ್ದುಗೆ ಕೊಪ್ಪಲಿನ ಐದನೇ ಅಡ್ಡರಸ್ತೆಯಲ್ಲಿದೆ. ಇದೇ ದೇವಾಲಯದಲ್ಲಿ ದೊಡ್ಡನ್ಯಾಯಪೀಠವಿದ್ದು, ಗರಡಿಯ ಯಜಮಾನರು ಅಂತಿಮ ನ್ಯಾಯ ತೀರ್ಮಾನ ನೀಡುತ್ತಾರೆ.

ಚಿಕ್ಕಲ್ಲೂರಿನಲ್ಲಿ ಸಿದ್ಧಪ್ಪಾಜಿ ಗದ್ದುಗೆ ಮಠವಿದೆ. ಸಿದ್ಧಪ್ಪಾಜಿ ದೇವಾಲಯದಿಂದ ಅನತಿ ದೂರ ಕೆ.ಜಿ. ಕೊಪ್ಪಲಿನ ಒಳಭಾಗಕ್ಕೆ ಹಾದುಹೋದಾಗ ಆದಿಚುಂಚನಗಿರಿ ಭೈರವೇಶ್ವರ, ಗಂಗಾಧರೇಶ್ವರ, ಅಂತರಹಳ್ಳಿ ಸಿದ್ಧೇಶ್ವರ, ತುಂಬನೇರಳೇಹಳ್ಳಿ ನಾಗೇಶ್ವರ, ಇಗ್ಗಲೂರು ಗುಜ್ಜಮ್ಮ, ಕಾಮಾಕ್ಷಮ್ಮ ದೇವರುಗಳಿಗೆ 'ಮನೆ' ಎಂಬ ನಾಮಫಲಕ ಕಾಣಬರುತ್ತದೆ. ಅಲ್ಲಿನ ಜನರನ್ನು ವಿಚಾರಿಸಿದಾಗ ಉತ್ಸವ ಸಂದರ್ಭಗಳಲ್ಲಿ ಅಥವಾ ಮಠದ ಗುರುಗಳ ಪಾದಪೂಜೆಗಾಗಿ ಕರೆಸಿದಾಗ ದೇವರುಗಳ ಮೂರ್ತಿಗಳನ್ನು ಸ್ವಾಮಿ ಅಥವಾ ಗುರುಗಳನ್ನು ಇಲ್ಲಿ ಬಿಜಯ ಮಾಡಿಸಿ ಇಳಿಸಿಕೊಳ್ಳಲಾಗುತ್ತದೆ ಎಂದು ತಿಳಿದುಬಂದಿತು.

ಈ ದೇವರ ಮನೆಯ ಮುಂದೆ ಮೂಗಮಾರಮ್ಮನ ದೇವಾಲಯವಿದೆ. ಮಾರಮ್ಮ ಭಕ್ತರ ಮೈಮೇಲೆ ಬಂದು ಆವೇಶಗೊಂಡಾಗ ಮಾತನಾಡದೆ ಸುಮ್ಮನಿರುವುದರಿಂದ ಮೂಗ ಮಾರಮ್ಮನೆಂಬ ಹೆಸರು ಬಂದಿತಂತೆ.



ಕೆಳಗಲ ಬೀದಿಯಲ್ಲಿ ಹತ್ತೂ ಜನರ ಶ್ರೀರಾಮ ಮಂದಿರ ಮತ್ತು ಉತ್ತೂರಮ್ಮ, (ಹುತ್ತೂರಮ್ಮ), ಶ್ರೀ ಚೌಡೇಶ್ವರಿ ದೇವಾಲಯಗಳಿವೆ. ಹುತ್ತೂರಮ್ಮ ಬಂದಕಾರ್ಲಿಂಗು ಕನ್ನೇಗೌಡನ ಮನೆತನದ ದೇವತೆಗಳು. ಹತ್ತು ಜನರ ದೇವಾಲಯ ಹತ್ತು ಜನರ ಗರಡಿ ಈ ನಾಮಫಲಕಗಳು ಇಂದಿಗೂ ಕನ್ನೇಗೌಡನ ಕೊಪ್ಪಲಿನಲ್ಲಿ



ಪ್ರಾಚೀನ ಗ್ರಾಮಾಡಳಿತದ ಅಧಿಕಾರ ಸೂಚಕವಾದ ಹದಿನೆಂಟೆಂಬರು, ಊರಸಮಸ್ತರು, ಹಲವರು ಮುಂತಾದ ಶಾಸನಸ್ಥ ಪದಗಳನ್ನು ನೆನಪಿಗೆ ತರುತ್ತವೆ. ಈ ಕೊಪ್ಪಲಿನ ಆಂತರಿಕ ವ್ಯವಹಾರಗಳಲ್ಲಿ ಇಂದಿಗೂ ಗ್ರಾಮ ಮುಖ್ಯಸ್ಥರ ಪ್ರಮುಖ ಪಾತ್ರವನ್ನು ಸಾಬೀತುಗೊಳಿಸುತ್ತಿವೆ.

ಕೆ.ಜಿ. ಕೊಪ್ಪಲಿನ ಆರನೇ ಅಡ್ಡರಸ್ತೆಯಲ್ಲಿ ಕನ್ನೇಗೌಡನ ಮನೆತನದ ಪುಟ್ಟಮಾದುರವರ ಮನೆಗೆ ಸೇರಿದಂತೆ ಕೇವಲ ಮುಖದ ರೇಖಾಚಿತ್ರವನ್ನು ಹೊಂದಿರುವ 'ಕನ್ನಯ್ಯನ ಕಲ್ಲು' ಎಂಬ ಹೆಸರಿನಿಂದ ಕರೆಯಲ್ಪಡುವ ಕಲ್ಲೊಂದು ಇತ್ತೀಚೆಗೆ ಕಟ್ಟಿಸಿರುವ ತೊಟ್ಟಿಯ ಮಧ್ಯೆ ಕಂಡುಬರುತ್ತದೆ. ಈ ಕಲ್ಲಿನ ಮುಂದೆ ಉಗಾದಿ ದಿನ ಕೆ.ಜಿ. ಕೊಪ್ಪಲಿನ ಎಲ್ಲ ಗಂಗಡಿಕಾರರು ತಮ್ಮ ಮಕ್ಕಳ ಲಗ್ನಗಳನ್ನು ಕಟ್ಟಿಸುವ ಸಂಪ್ರದಾಯ ನಡೆದುಕೊಂಡುಬರುತ್ತಿದೆ.

ಬಳೆಬಣಜಿಗರು, ಲಿಂಗಾಯಿತರು ಸಾಮೂಹಿಕ ವಿವಾಹವನ್ನು ಈಗ್ಗೆ ೨೫ ವರ್ಷಗಳವರೆವಿಗೂ ಕನ್ನಯ್ಯನ ಲಗ್ನ ಸಂಪ್ರದಾಯಕ್ಕನುಗುಣವಾಗಿ ನಡೆಸುತ್ತಿದ್ದರು. ಆ ಪ್ರಕಾರ ಚಪ್ಪರದೂಟ, ಧಾರೆಊಟ ಮತ್ತು ನೆರವಿ ಅಂದರೆ ಬೀಗರ ಊಟಕ್ಕಾಗಿ ಸೊಪ್ಪಿನೂಟ ಹೀಗೆ ಮೂರು ದಿನಗಳ ಮದುವೆ ಸಮಾರಂಭ ನಡೆಯುತ್ತಿದ್ದಿತು.

ದರ್ಜಿಗಳ ಕುಟುಂಬಕ್ಕೆ ಸೇರಿದ ಸಿದ್ಧಲಿಂಗಯ್ಯನವರನ್ನು ಗಂಗಡಿಕಾರರು ತಮ್ಮ ಮನೆತನದ ಗುರುಗಳೆಂದು ಭಾವಿಸುತ್ತಾರೆ. ಸಿದ್ಧಲಿಂಗಯ್ಯನವರು ಶ್ರೀರಂಗಪಟ್ಟಣದ ಸಂತೆಮಾಳದಲ್ಲಿ ಜೀವಸಮಾಧಿಯಾಗುವ ಸಂದರ್ಭದಲ್ಲಿ ತಮ್ಮ ಶಿಷ್ಯ ಮನೆತನವಾದ ಗಂಗಡಿಕಾರರು ತಮ್ಮ ಕುಟುಂಬದಲ್ಲಿ ಒಬ್ಬ ಮಗನಿಗೆ ಸಿದ್ಧಲಿಂಗಯ್ಯನೆಂದು ಹೆಸರನ್ನಿಡಬೇಕೆಂದು ಆದೇಶಿಸಿದರು. ಆ ಆದೇಶವು ಈಗಲೂ ನಡೆದುಕೊಂಡು ಬಂದಿದೆ. ಸಿದ್ಧಲಿಂಗಯ್ಯ ಗುರುಗಳಿಗೆ ಸಂಕ್ರಾಂತಿಯಂದು ಎಡೆ ನೀಡಲಾಗುತ್ತದೆ. ಅಲ್ಲದೆ ಪಕ್ಷದ ದಿನ ಬಳೆ ಬಣಜಿಗರು, ಲಿಂಗಾಯತರು ಮತ್ತು ಗಂಗಡಿಕಾರರು ತಮ್ಮ ಸಂಪ್ರದಾಯಗಳಿಗನುಗುಣವಾಗಿ ಎಡೆ ನೀಡಿ ಪೂಜೆಯನ್ನು ನಡೆಸುತ್ತಾರೆ.

ಮಾರಮ್ಮ ಈ ಪ್ರದೇಶದ ಗ್ರಾಮದೇವತೆ. ಕೆ.ಜಿ. ಕೊಪ್ಪಲಿನ ಮೂಗಮಾರಮ್ಮ, ಬೀಚನಹಳ್ಳಿಯ (ಚಾಮರಾಜಪುರಂ) ಮಾರಮ್ಮ ದಟ್ಟಗಳ್ಳಿ, ಮಣಲವಾಡಿ ಮಾರಮ್ಮ ತೊಣಚಿ ಕೊಪ್ಪಲಿನ ಬಿಸಿಲಮಾರಮ್ಮ, ರಾಮ ಮಂದಿರದಲ್ಲಿನ ಹಟ್ಟಿ ಮಾರಮ್ಮ ಇಲ್ಲಿನ ಪ್ರಸಿದ್ಧ ಮಾರಮ್ಮನ ದೇವಾಲಯಗಳಾಗಿವೆ. ಚಿಕ್ಕಹರದನಹಳ್ಳಿ ಬಂಡಿ ಬಸವದೇವಾಲಯ ಮಣಲವಾಡಿಯ ಜೋಡಿ ಬಸವ, ಬೋಗಾದಿ ಎರಡನೇ ಹಂತದ ಬಸವ ಇಲ್ಲಿನ ಪ್ರಸಿದ್ಧ ಬಸವ ದೇವಾಲಯಗಳು.

ಬಂದಂತಮ್ಮ, ಕಾಳಮ್ಮ, ಚಾಮುಂಡೇಶ್ವರಿ ದೇವಾಲಯಗಳು ಕುವೆಂಪುನಗರಕ್ಕೆ ಮುಖ್ಯರಸ್ತೆಗೆ ಹೊಂದಿಕೊಂಡಂತಿರುವ ಪ್ರಮುಖ ಪ್ರಾಚೀನ ದೇವಾಲಯಗಳಾಗಿವೆ. ಈ ಚಾಮುಂಡೇಶ್ವರಿ ದೇವಾಲಯವು ಮೈಸೂರು ನಗರದಲ್ಲಿ ಅತ್ಯಂತ ಪ್ರಾಚೀನವಾದ ಚಾಮುಂಡಿ ದೇವಾಲಯವಾಗಿದೆ. ಆಷಾಢ ಮಾಸದಲ್ಲಿ ಚಾಮುಂಡೇಶ್ವರಿ ಹಬ್ಬವನ್ನಾಚರಿಸಲಾಗುತ್ತದೆ. ಈ ಹಬ್ಬಕ್ಕೆ ಮುಂಚಿತಾಗಿ ಬೀಚನಹಳ್ಳಿ ಕಟ್ಟೆ ಅಥವಾ ಇಂದಿನ ಬೀಸಾಳಕಟ್ಟೆ ಮುಂಭಾಗದ ಅರಳೀಮರಕ್ಕೆ ಭೈರವೇಶ್ವರ, ಸಿದ್ಧಪ್ಪಾಜಿಯವರ ತ್ರಿಶೂಲ, ಧ್ವಜಗಳನ್ನು ತಂದು ಕಟ್ಟಲಾಗುತ್ತದೆ. ಮಲೆಮಾದೇಶ್ವರನ ಪರ ಊಟದ ನೇಮ, ಕರೀಗೌಡನ ವಠಾರ-ದಾಸಯ್ಯನ ಒಕ್ಕಲು, ಜೋಗಯ್ಯನ ಆರಾಧಕರೂ ಕಾಲಭೈರವೇಶ್ವರ ಒಕ್ಕಲಿನ ಭಾನುವಾರದವರು ದಾಳ ಹಾಕುತ್ತಾರೆ ಹಾಗೂ ಮರುಳೇಶ್ವರ ದೇವಾಲಯದ ಆವರಣದಲ್ಲಿ ಮಕ್ಕೆಕಲ್ಲಿನ ಪೂಜೆ ಮಾಡಿ ಪೂರ್ವಜರಿಗೆ ಎಡೆಯಿಡುತ್ತಾರೆ. ಇತ್ತೀಚೆಗೆ ಬಂದಂತಮ್ಮ, ಕಾಳಿಕಾ, ಚಾಮುಂಡೇಶ್ವರಿ ದೇವತೆಗಳ ವಿಗ್ರಹಗಳನ್ನೂ ಹೊಸದಾಗಿ ಪ್ರತಿಷ್ಠಾಪಿಸಿ ದೇವಾಲಯವನ್ನೂ ಪುನರ್ ನಿರ್ಮಾಣ ಮಾಡಲಾಗಿದೆ.



ಕೆ.ಜಿ. ಕೊಪ್ಪಲಿನ ಗ್ರಾಮಸ್ಥರು ತಮ್ಮ ಭೂಮಿಯೆಲ್ಲವನ್ನೂ ಎಕರೆಯೊಂದಕ್ಕೆ ೧೨೦೦-೧೬೦೦ ರೂ.ಗಳಂತೆ ಮಾರಿಕೊಂಡು ಬಿಟ್ಟಿದ್ದಾರೆ. ಕೇವಲ ೫೦ ಎಕರೆಯಷ್ಟು ಭೂಮಿ ಮಾತ್ರ ಈ ಸಮುದಾಯದವರಲ್ಲಿ ಉಳಿದಿದೆ. ಆದುದರಿಂದ ಇಂದು ಇವರ ಪ್ರಮುಖ ಉದ್ಯೋಗ ಹೈನುಗಾರಿಕೆಯಾಗಿದೆ, ಹಣಕಾಸು ಲೇವಾದೇವಿ ಇತರ ಉದ್ಯೋಗವಾಗಿದೆ.

ಸಿದ್ಧಪ್ಪಾಜಿ ಒಕ್ಕಲಿಗರ ಸಂಘ, ಚಾಮುಂಡೇಶ್ವರಿ ಯುವಕರ ಸಂಘ, ಮಲೆಮಾದೇಶ್ವರ ಯುವಕರ ಸಂಘ ಹಾಗೂ ೧೯೯೪ರಲ್ಲಿ ಸ್ಥಾಪನೆಯಾದ ಒಕ್ಕಲಿಗರ ಹಿತರಕ್ಷಣಾ ಸಮಿತಿ, ಕೆ.ಜಿ. ಕೊಪ್ಪಲಿನ ಜನರ ಅಭಿವೃದ್ಧಿಗಾಗಿ ಶ್ರಮಿಸುತ್ತಿವೆ. ೭೪ ವರ್ಷಗಳ ಹಿರಿಯರಾದ

ಎಂ. ಮರಿಲಿಂಗೇಗೌಡರು ಸ್ಟೇಟ್ ಕೌನ್ಸಿಲರ್ ಆಗಿದ್ದು, ರಾಮಕೃಷ್ಣ ಹೆಗ್ಗಡೆಯವರ ಕಾಲಕ್ಕೆ ಜನತಾಪಾರ್ಟಿಗೆ ಸೇರಿದರು. ಈಗ ಗ್ರಾಮ ಸೇವಕರಾಗಿ ಕಾರ್ಯನಿರತರಾಗಿದ್ದಾರೆ. ಇವರೇ ಕರ್ನಾಟಕದ ಹಾಲು ಮಾರಾಟಗಾರರ ಒಕ್ಕೂಟದ ಅಧ್ಯಕ್ಷರೂ ಆಗಿದ್ದಾರೆ. ಕೆ.ಜಿ. ಕೊಪ್ಪಲಿನ ಹಿರಿಯ ಯಜಮಾನರೂ ಆಗಿದ್ದಾರೆ. ಇವರ ಮಗ ಶಿವಕುಮಾರ್ ಉರುಫ್ ಮೋಹನ್ ಕುಮಾರ್ ಗೌಡರು ಒಕ್ಕಲಿಗ ಹಿತರಕ್ಷಣಾ ಸಮಿತಿಯ ಉಪಾಧ್ಯಕ್ಷರಾಗಿದ್ದಾರೆ. ಶ್ರೀಯುತರಾದ ಶಂಕರ್, ಬಾಲು, ರಾಜಣ್ಣ, ಶಿವಪ್ಪ, ಗುಡ್ಡಪ್ಪ ಇವರೆಲ್ಲರೂ ಸಮಿತಿಯ ಸದಸ್ಯರಾಗಿದ್ದಾರೆ.

(ಮೇಲ್ಸೂಚಿತ ಇವರೆಲ್ಲರೂ ಈ ಲೇಖನ ಸಿದ್ಧಪಡಿಸಲು ಬೇಕಾದ ಎಲ್ಲ ಮಾಹಿತಿಯನ್ನೂ ಒದಗಿಸಿಕೊಟ್ಟು ಉಪಕರಿಸಿದ್ದಾರೆ. ಇವರೆಲ್ಲರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಅಲ್ಲದೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನನ್ನೊಂದಿಗಿದ್ದು ಸಹಕರಿಸಿದ ನನ್ನ ಬಂದುಭಗಿನಿ ಕುಮಾರಿ ಗುಹಶ್ರೀಗೂ ನನ್ನ ವಂದನೆಗಳು ಹಾಗೂ ಈ ಬಡಾವಣೆಯ ಕ್ಷೇತ್ರಕಾರ್ಯದ ಮೂಲಪ್ರೇರಣೆಯಾದ ಸಂಶೋಧಕ ದಿವಂಗತ ಡಾ. ರಘುನಾಥ ಭಟ್ಟರಿಗೆ ನನ್ನ ಅಭಿಮಾನದ ಸ್ಮರಣೆಗಳು.)



***

### ಆಧಾರಸೂಚಿ ಮತ್ತು ಟಿಪ್ಪಣಿಗಳು

೧. **ಮೈಸೂರು ಗ್ಯಾಜೆಟಿಯರ್**, ಪುಟ ೭೫೪.

೨. **ಎಪಿಗ್ರಾಫಿಯಾ ಕರ್ನಾಟಕಾ**, ಸಂಪುಟ ೫, ಪುಟ ೩೨೧, ಶಾಸನ ಸಂಖ್ಯೆ ೨೨೩.



### ಕ. ಇ. ಅಕಾದೆಮಿಯ ಎಂಟನೆಯ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣ (೧೯೯೪)

*ಪಠ್ಯಪುಸ್ತಕದ ಆಚೆಗೂ ಇತಿಹಾಸವಿದೆ, ವರ್ಗಕೋಣೆಯ ಆಚೆಗೂ ಇತಿಹಾಸ ಕೇಳುವ ಜನರಿದ್ದಾರೆ.. ಇತಿಹಾಸದ ಆಕರಗಣಿಗಳೆಂದರೆ ಶಾಸನ ಮತ್ತು ಪುರಾತತ್ವ ಅವಶೇಷಗಳು ಮಾತ್ರವಲ್ಲ. ಇತಿಹಾಸದ ನಿಗೂಢ ಮಗ್ಗುಲು ಮತ್ತು ಪದರುಗಳನ್ನು ಕಾಣಬೇಕಾದರೆ ಹೊಸ ಬಗೆಯ ಆಕರಗಳನ್ನು ಹುಡುಕಿಕೊಂಡು ಹೋಗಬೇಕಾಗುತ್ತದೆ. ಜೊತೆಗೆ ಜಾಗತಿಕ ಮಟ್ಟದಲ್ಲಿ ಇತಿಹಾಸದ ಗ್ರಹಿಕೆ ಮತ್ತು ರಚನೆಯ ವಿಷಯವಾಗಿ ನಡೆದಿರುವ ಹೊಸ ಹೊಸ ಚಿಂತನೆ-ಪ್ರಯೋಗಗಳನ್ನು ಆಮದು ಮಾಡಿಕೊಳ್ಳಬೇಕಾಗುತ್ತದೆ.... ಎಲ್ಲ ಮಗ್ಗುಲಿನಿಂದಲೂ ಇತಿಹಾಸವನ್ನು ಬೆಳಸಿದರೆ ಅದು ವಿದ್ವಾಂಸರಾದ ನಮ್ಮನ್ನು ಬೆಳೆಸುತ್ತದೆ.*

**ಡಾ. ಎಂ. ಎಂ. ಕಲ್ಬುರ್ಗಿ**
ಸಮ್ಮೇಳನಾಧ್ಯಕ್ಷರು



**ಇತಿಹಾಸದೊಡನೆ ಜಾನಪದ ಮೇಳವಿಟ್ಟ ಕನ್ನಯ್ಯ
ಅರಸರ ಮುಂದೆ ಶೌರ್ಯ ಸಾಧಿಸಿದ ಚತುರ ವೀರ
ಚಾಳುಕ್ಯರಂಗಳವಾಗಿ ಹೊಂದಿದ್ದ ದೇವನೆಲೆ
ಉಸುರಿತ್ತು ಶಾಸನೋಕ್ತ ವಿವರ
ಸಿದ್ಧಪ್ಪಾಜಿ ಮೂಗಮಾರಮ್ಮ ಕಾಳಿಕಾಂಬೆಯರು
ಮೇಳೈಸಿದರು ಪರಂಪರೆಯ ಯಾವ ಸಾರ?**

ವೈ. ಹನುಮಂತರೆಡ್ಡಿ*

# ಕುಮಾರರಾಮನ ಭಟ್ಟರಹಳ್ಳಿಯ ಶೋಧನೆ

*ಜಟಿಂಗ ರಾಮೇಶ್ವರ ದೇವರ ವರಪ್ರಸಾದದಿಂದ ಜನಿಸಿದವ ಕುಮಾರರಾಮ. ಕುಮಾರರಾಮನ ಹಳೇ ಭಟ್ಟರಹಳ್ಳಿಯ ಸ್ಮಾರಕವೊಂದಕ್ಕೆ 'ರಾಮದೇವರು' ಎಂಬ ಹೆಸರಿದ್ದು ಅವನನ್ನೂ ದೈವತ್ವಕ್ಕೇರಿಸಿದ ಸಂಕೇತವಾಗಿದೆ. ಇಂದು ಭಟ್ಟರಹಳ್ಳಿ ಅಳಿದಿದ್ದರೂ 'ಲಕ್ಷ್ಮೀಪುರ'ದ ನೆಲೆಗೆ ವಲಸೆ ಆಗಿದ್ದರೂ, ಅವಶೇಷಗಳು ಕುಮಾರರಾಮನ ಹೆಸರನ್ನೂ ಜೀವಂತವಿರಿಸಿವೆ.*

ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸದಲ್ಲಿ ಮುಮ್ಮಡಿ ವಂಶದ ಸಿಂಗೆಯ ನಾಯಕ, ಕಂಪಿಲರಾಯ ಮತ್ತು ಕುಮಾರ ರಾಮ ಇವರು ವಿಶಿಷ್ಟ ಸ್ಥಾನ ಪಡೆದಿರುವರು. ಸಿಂಗೆಯ ನಾಯಕ ಮತ್ತು ಮಾದನಾಯಕಿಯವರ ಮಗ ಕಂಪಿಲರಾಯ; ಕಂಪಿಲರಾಯ ಮತ್ತು ಹರಿಯಲಾದೇವಿ ಇವರ ಮಗನೇ ಕುಮಾರ ರಾಮ. ಜಟಿಂಗ ರಾಮೇಶ್ವರ ಇವರ 'ಮನೆ ದೇವರು'. ಈ ದೇವರ ವರಪ್ರಸಾದದಿಂದ ಜನಿಸಿದವನೇ 'ರಾಮನಾಥ' ಅಥವಾ 'ಕುಮಾರ ರಾಮ'. ಈತನ ಧೈರ್ಯ, ಶೌರ್ಯ, ಸಾಹಸ ಮತ್ತು ಪರಾಕ್ರಮಗಳನ್ನು ಕಥೆ, ಕಾವ್ಯ ಮತ್ತು ಕೈಫಿಯತ್ತುಗಳು ಬಹುವಾಗಿ ವರ್ಣಿಸಿವೆ.

**ಕದನಗಳು** : ಕಂಪಿಲರಾಯ ಮತ್ತು ಕುಮಾರ ರಾಮ ಇಬ್ಬರೂ, ಹೊಯ್ಸಳರ ಮೇಲೆ, ಓರಂಗಲ್ಲಿನ ಮೇಲೆ ಮತ್ತು ದೆಹಲಿಯ ಸುಲ್ತಾನರ ಅಗಾಧವಾದ ಸೈನ್ಯದ ಮೇಲೆ, ಕೆಚ್ಚೆದೆಯಿಂದ ಹೋರಾಡಿ ಸತಿ, ಸುತರನ್ನು ಕಳೆದುಕೊಂಡು ತಾವೂ ವೀರ ಸ್ವರ್ಗ ಸೇರಿದ್ದಾರೆ.

**ಕಾಡು ಮೃಗದೊಡನೆ ಹೋರಾಟ** : ಸಂಡೂರು ಪ್ರದೇಶದ ಹೊಸಮಲೆದುರ್ಗದ ಕಾಡಿನಲ್ಲಿ ಒಂದು ಬಲಿಷ್ಠವಾದ, ಭಯಂಕರವಾದ, ಕ್ರೂರವಾದ ಕಾಡುಹಂದಿ (ಹೆಸರು ಕೋಟಿ ಶಂಕರ) ಇದ್ದು, ಅದು ಅನೇಕ ಜನರನ್ನು ಕೋರೆ ಹಲ್ಲುಗಳಿಂದ ಇರಿದು ಕೊಲ್ಲುತ್ತಿದ್ದಿತು. ಇದನ್ನು ಕೇಳಿದ ಕುಮಾರ ರಾಮನು ಪ್ರಾಣಾಪಾಯವನ್ನು ಲೆಕ್ಕಿಸದೆ ಅದನ್ನು ಬೆನ್ನಟ್ಟಿ ಹೋಗಿ, ಕಾಚಗೊಂಡನಹಳ್ಳಿಯ (ಭಟ್ಟರಹಳ್ಳಿ) ಬೆಟ್ಟದ ಬುಡದಲ್ಲಿ ಈಟಿಯಿಂದ ಇರಿದು ಕೊಂದನು. ಈತನ ಶೂರತನ, ಪರಾಕ್ರಮಗಳನ್ನು ಕಂಡ, ಈತನ ಸೇವೆಯಲ್ಲಿದ್ದ ಭಟ್ಟರ ಗೋವಿಂದ, ಗೋಪಾಲಯ್ಯ ಸಹೋದರರೂ, ಮತ್ತು ಇವರ ಭಾವ ಮೈದುನ ರೂಪಿದೇವಯ್ಯನೆಂಬುವರು, "ಮುಖದ ಕನ್ನಡಿ, ಸಮರದಲಿ ಸಿಂಹಶಲಾಲಾ, ಹೊಕ್ಕಳ ಘಂಟೆ, ಹುಲಿಚರ್ಮ ಮುಂತಾದವು ಹಿಡಿಯಸೊರಾಯರಗಂಡಽ" ಎಂದು ಮತ್ತು "ಬಡವರಿಗೆ ಈತ ದಿಕ್ಕು ದಿಕ್ಕು ದಿಟವಾಗಿಯೂ, ಅನ್ನವಾ ವಸ್ತ್ರದಾನಗಳ, ಕೊಡುತಿದಿ ಸರ್ವಕಾಲದಲಿ ನಿಜರೂಪನ ತೋರುವ ಧಾತ್ರಿ ಮಧ್ಯದೊಳು ತಾಕೊಟ್ಟುದು ನಡಿಸುವ ಭಟ್ಟ ಜನರಿಗೆ ದೃಢದಲ್ಲಿ ನಂಬಿ ಕಂಪಲಿರಾಯನು ಕೊಮಾರ ರಾಮನೆ ಮಂಡಲೇಶ್ವರಾ" ಎಂದೂ ಬಹುವಾಗಿ ಹೊಗಳುತ್ತಿರಲು, 'ಕಾಟಗೊಂಡನಹಳ್ಳಿ' ಗ್ರಾಮವನ್ನು ಭಟರಿಗೆ ಸರ್ವಮಾನ್ಯ ಉಂಬಳಿಯಾಗಿ ದಾನ ಪತ್ರ ಬರಕೊಟ್ಟ. ಆ ಗ್ರಾಮಕ್ಕೆ ಭಟ್ಟರಹಳ್ಳಿಯೆಂದು ಹೆಸರು ಇಟ್ಟು, ನಡಹಿ, ಶಿಲಾಶಾಸನವ, ಹಳೆಗನ್ನಡ ಅಕ್ಷರದಿಂದ ಹಾಕಿಸಿ, ಅದರ ಬಳಿ ಬಂದು ಕಲ್ಲಿನ ಮೇಲೆ ಕತ್ತೆಯ ಭಿತ್ತಿ ಚಿತ್ರ ಕೆತ್ತಿಸಿ, ಈ ಧರ್ಮ ತಪ್ಪಿದವರು 'ಕತ್ತಿ ತುಣ್ಣೆ ಕಲ್ಲುಪ್ಪು ತಿಂದವರು' ಎಂದು ಕೆತ್ತಿಸಲಾಗಿದೆ. ಆದರೆ ಇಂದು ಆ ಶಾಸನ ಅಲ್ಲಿ ಇಲ್ಲ.

* ನಿವೃತ್ತ ಇತಿಹಾಸ ಉಪನ್ಯಾಸಕರು, ತಾಳೂರು ರಸ್ತೆ, ಬಳ್ಳಾರಿ - ೩.

ಕತ್ತೆಯನ್ನು ಕೆತ್ತಿದ ಕಲ್ಲು ಮಾತ್ರ ಇದ್ದು, ಅದರ ಮೇಲ್ಭಾಗದಲ್ಲಿ ಮೇಲೆ ತಿಳಿಸಿದ ಶಬ್ದಗಳನ್ನು ಬರೆದಿರಬಹುದು, ಆದರೆ ಅವು ಹಾಳಾಗಿದ್ದು ಕಾಣುತ್ತಿಲ್ಲ. ಅಂದಿನಿಂದ ಆ ಗ್ರಾಮಕ್ಕೆ 'ಭಟ್ಟರಹಳ್ಳಿ' ಎಂಬ ಹೆಸರಿತ್ತು. ಆದರೆ ಈಗ ಆ ಹೆಸರೂ ಇಲ್ಲ. ಆ ಹೆಸರಿನ ಗ್ರಾಮವೂ ಇಲ್ಲ. ಹಾಗಾದರೆ ಅದು ಏನಾಯಿತು? ಎಂಬುದೇ ಈ ಪ್ರಬಂಧದ ಮುಖ್ಯ ವಿಷಯ.

ಕ್ರಿ.ಶ. ೧೪ನೇ ಶತಮಾನದಿಂದ ೧೯ನೇ ಶತಮಾನದ ವರೆವಿಗೂ, ಭಟ್ಟರ ವಶದಲ್ಲಿದ್ದು, 'ಭಟ್ಟರಹಳ್ಳಿ' ಎಂದೇ ಕರೆಸಿಕೊಳ್ಳುತ್ತಿದ್ದ ಗ್ರಾಮ ನಂತರ ನಾಮಾವಶೇಷವಾಗಿದೆ. ಅದು ಮೊದಲಿದ್ದ ಜಾಗದಿಂದ ಸ್ಥಳಾಂತರಗೊಂಡಿದ್ದು, 'ಲಕ್ಷ್ಮೀಪುರ' ವೆಂಬ ಹೊಸ ಹೆಸರನ್ನು ಪಡೆದಿದೆ. ಇದು ಹೀಗೇಕಾಯಿತು? ಕಾರಣಗಳೇನು? ಎನ್ನುವ ಪ್ರಶ್ನೆಗಳುದ್ಭವಿಸುತ್ತವೆ. ಈ ಬಗ್ಗೆ ಪರಿಶೀಲನೆ ಮಾಡಿದಾಗ, ಇದರ ಇತಿಹಾಸದ ಹೊಸ ಅಧ್ಯಾಯ ಪ್ರಾರಂಭಗೊಂಡಿದ್ದು ತಿಳಿದುಬರುತ್ತದೆ. ರಾಯಚೂರು ಜಿಲ್ಲೆ, ಲಿಂಗಸೂಗೂರು ತಾಲೂಕು 'ಗೆಜ್ಜಲಗಟ್ಟೆ' ಎಂಬ ೧೪ ಹಳ್ಳಿಗಳ ಜಹಗೀರ್ ಮನೆತನದ ಹಿರಿಯರಾಗಿದ್ದ ಶ್ರೀಮತಿ. ಲಕ್ಷ್ಮಮ್ಮನವರಲ್ಲಿ; ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕಿನ 'ಮಣ್ಣಾಗರ' ಗ್ರಾಮದ 'ರಂಗನಗೌಡ' ಎಂಬುವರು, ಬಾಲ್ಯದಿಂದ ಅವರಲ್ಲಿ ಇದ್ದು, ಆ ಮನೆತನದ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಆತನು ಪ್ರಾಯಕ್ಕೆ ಬರಲು ಲಗ್ನ ಮಾಡಲು, ಕನ್ಯೆ ತೆಗೆಯಲು ಬೇರೊಬ್ಬ ಜಹಗೀರ್‌ದಾರರಲ್ಲಿ ಹೋದಾಗ, ಅವರು ಈತನಿಗೆ ಕನ್ಯೆ ಕೊಡಲು, ಈತನೇನು 'ಜಹಗೀರ್‌ದಾರನೇ' ಎಂದು ಹೀಯಾಳಿಸಿದ್ದಾರೆ. ಆಗ ಆತನನ್ನು ಒಬ್ಬ ಜಹಗೀರ್ ದಾರನನ್ನಾಗಿ ಮಾಡಬೇಕೆಂದು, ಲಕ್ಷ್ಮಮ್ಮನು ನಿರ್ಧರಿಸಿ, ಬಳ್ಳಾರಿ ತಾಲೂಕಿನ ಭಟ್ರಹಳ್ಳಿಗೆ ಬಂದು, ಭಟ್ಟರಿಂದ ಆ ಗ್ರಾಮವನ್ನು ಕ್ರಿ.ಶ. ೧೯೧೪ರಲ್ಲಿ ಖರೀದಿಸಿ, ೧೯೧೬ರಲ್ಲಿ ಬಳ್ಳಾರಿ ಜಿಲ್ಲಾ ಕಲೆಕ್ಟರ್‌ರಿಂದ ಅನುಮೋದನೆ ಪಡೆದುಕೊಂಡು, ೧೯೧೮ರಲ್ಲಿ ಭಟ್ಟರ ಪರವಾಗಿ, ೧. ಭೀಮಪ್ಪ, ೨. ಮಜ್ಜಿಗೆರೆಪ್ಪ ಎಂಬವರಿಂದ ರಂಗನಗೌಡರ ಹೆಸರಿನಲ್ಲಿ ರಿಜಿಸ್ಟರ್ ಮಾಡಿಸಿಕೊಂಡಿದ್ದಾರೆ. ನಂತರ ಅಲ್ಲಿಂದ ೧ ಕಿ.ಮೀ. ದೂರದಲ್ಲಿ ಹೊಸ ಗ್ರಾಮವನ್ನು ನಿರ್ಮಿಸಿ, ಲಕ್ಷ್ಮೀಬಾಯಿಯವರ ಸ್ಮರಣಾರ್ಥವಾಗಿ, 'ಲಕ್ಷ್ಮೀಪುರ'ವೆಂದು ನಾಮಕರಣ ಮಾಡಿದ್ದಾರೆ. ಹಳೇಗ್ರಾಮದಲ್ಲಿ ವಾಸವಾಗಿದ್ದ ಜನರನ್ನು ಅಲ್ಲಿಂದ ಹೊಸ ಗ್ರಾಮಕ್ಕೆ ಬಂದು ನೆಲಸುವಂತೆ ಮಾಡಿದ್ದಾರೆ.

ಹೀಗೆ ಐತಿಹಾಸಿಕ ಮಹತ್ವದ 'ಭಟ್ಟರಹಳ್ಳಿ' ಗ್ರಾಮ ೨೦ನೇ ಶತಮಾನದ ಪ್ರಾರಂಭದಿಂದ ನಿರ್ಜನ ಪ್ರದೇಶವಾಗಿ, ಹೇಳ ಹೆಸರಿಲ್ಲದಂತಾಗಿದೆ. ಅಲ್ಲಿಗೆ ಹೋಗಿ ಕ್ಷೇತ್ರಕಾರ್ಯ ಕೈಗೊಂಡು ಸ್ಥಳಪರಿಶೀಲನೆ ಮಾಡಲು, ಹೋದಾಗ ಅಲ್ಲಿ ಕೆಲವು ಸ್ಮಾರಕಗಳು ಅಳಿದುಳಿದು ನಿಂತಿದ್ದು ಪ್ರಾಚೀನ ಇತಿಹಾಸದ ಕುರುಹುಗಳಾಗಿ ಕಂಡು ಬಂದಿವೆ. ಅವುಗಳ ವಿವರ ಕೆಳಗಿನಂತಿದೆ.

೧. ಲಕ್ಷ್ಮೀಪುರದಿಂದ ಭಟ್ಟರಹಳ್ಳಿಗೆ ಹೋಗುವ ರಸ್ತೆಯ ಪಕ್ಕದಲ್ಲಿ ಒಂದು ಚಿಕ್ಕದಾದ ೮'×೮' ಅಳತೆಯ ಗುಡಿಯಿದ್ದು, ಅದರಲ್ಲಿ ಕಲ್ಲಿನಲ್ಲಿ ಕೆತ್ತಿದ ಮಾನವ ರುಂಡ ಮಾತ್ರ ಇದೆ. ಅದರ ಪಕ್ಕದಲ್ಲಿ ಒಂದು ಕತ್ತಿಯನ್ನು ಇಟ್ಟಿದ್ದು; ಇದು ಕುಮಾರ ರಾಮನ ರುಂಡವೆಂದು ಪೂಜಿಸುತ್ತಿದ್ದಾರೆ. ಕಂಪಿಲರಾಯನು ರಾಮನ ರುಂಡವನ್ನು ಭಟ್ಟರಿಗೆ ಕೊಟ್ಟ ಬಗೆ ಕೈಫಿಯತ್‌ನಲ್ಲಿದೆ.

೨. ಹಳೇಭಟ್ಟರಹಳ್ಳಿ ಇದ್ದ ಪರಿಸರದಲ್ಲಿ ಹಲವು ಗುಡಿಗಳೂ, ವೀರಗಲ್ಲುಗಳು, ಮಾಸ್ತಿಕಲ್ಲುಗಳೂ ಮೊದಲಾದ ಐತಿಹಾಸಿಕ ಸ್ಮಾರಕಗಳು ಇವೆ. ಇಲ್ಲಿಯೂ ರಾಮ ದೇವರಗುಡಿ ಎಂದು ಕರೆಯುತ್ತಿರುವ-ಪೂರ್ವಾಭಿಮುಖವಾಗಿ ೧೨'೮×೯' ಅಗಲದ ತೆರೆದ ಮಂಟಪ ಮತ್ತು ಅದಕ್ಕೆ ಹೊಂದಿಕೊಂಡು ೬'× ೬' ಅಳತೆಯ ಗರ್ಭಗುಡಿ ಇದೆ. ಇದರಲ್ಲಿ ೨'×೨' ಅಳತೆಯ ಶಿಲಾಫಲಕದಲ್ಲಿ ಒಬ್ಬ ವೀರನು ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಚೂರಿ ಹಿಡಿದು ಮುನ್ನುಗ್ಗಿ ಒಬ್ಬ ವ್ಯಕ್ತಿಯನ್ನು ಇರಿದು ಕೊಂದಿರುವಂತೆ ಕಾಣುತ್ತಿದೆ. ಇದು ಕೂಡ ಕುಮಾರನ ಸ್ಮಾರಕ ಶಿಲೆಯೆಂದು ತೋರುತ್ತದೆ. ಇದನ್ನು ರಾಮದೇವರು ಎಂದು ಕರೆಯುತ್ತಿದ್ದು, ಕುಮಾರ ರಾಮನು ಹೋರಾಡಿ ಸತ್ತ ನಂತರ ದೈವತ್ವಕ್ಕೇರಿಸಲಾಗಿದೆ, ೧೫ನೇ ಶತಮಾನದಲ್ಲಿ ವಿಜಯನಗರಕ್ಕೆ ಭೇಟಿ ನೀಡಿದ ನ್ಯೂನಿಜ್‌ನು 'ಕುಮಾರ ರಾಮನನ್ನು' ದೇವರೆಂದು ಇಲ್ಲಿಯ ಜನರು ಪೂಜಿಸುತ್ತಿದ್ದಾರೆಂದು ತಿಳಿಸಿದ್ದಾನೆ.

೩. ಇದೇ ಗುಡಿಯ ಹೊರಗೋಡೆಗೆ ಒರಗಿಸಿಟ್ಟಿರುವ ೪'೮×೨' ಅಗಲದ ವೀರಗಲ್ಲು ಇದೆ. ಇದರಲ್ಲಿ ೩ ಭಾಗಗಳಿದ್ದು, ಕೆಳಗಿನ ಭಾಗದಲ್ಲಿ, ಒಬ್ಬ ವೀರನು ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಖಡ್ಗವನ್ನು ಹಿಡಿದುಕೊಂಡು ಕುದುರೆ ಮೇಲೆ ಕುಳಿತಿರುವ ವೈರಿಗಳೊಡನೆ ಹೋರಾಡುತ್ತಿದ್ದಾನೆ. ಗುಡಿಯ ಒಳಗಡೆ ಇರುವ ಫಲಕದಲ್ಲಿರುವ ವೀರನಂತೆ, ಈ ಫಲಕದಲ್ಲಿರುವ ವೀರನೂ ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಖಡ್ಗ ಹಿಡಿದಿದ್ದು, ಇದು ಕೂಡ ಕುಮಾರನ ವೀರಗಲ್ಲು ಇರಬಹುದೆಂದು ತೋರುವುದು. ಇದು ಈತನು ದೆಹಲಿಯ ಸುಲ್ತಾನರ ಸೈನ್ಯದೊಡನೆ ಹೋರಾಡಿ ವೀರಸ್ವರ್ಗ ಸೇರಿದುದರ ಸ್ಮಾರಕವಾಗಿರಬಹುದು. ಎರಡನೇ ಭಾಗದಲ್ಲಿ ಇಬ್ಬರು ಸುರಾಂಗನೆಯರು ಈತನನ್ನು ಸ್ವರ್ಗಕ್ಕೆ ಕರೆದೊಯ್ಯುವ ಮತ್ತು ಮೇಲಿನ ಭಾಗದಲ್ಲಿ ಮಧ್ಯದಲ್ಲಿ ಶಿವಲಿಂಗ, ಅದರ ಎಡಭಾಗದಲ್ಲಿ ಬಸವ ಮತ್ತು ಬಲಭಾಗದಲ್ಲಿ ವೀರನು ಕೈಮುಗಿದು ಕುಳಿತಿರುವ ಶಿಲ್ಪಗಳಿದ್ದು, ವೀರನು ಸ್ವರ್ಗವನ್ನು ಸೇರಿರುವ ಪ್ರತೀಕವಾಗಿವೆ. ಒಳಗಿನ ಶಿಲ್ಪವು ವೀರನು ವೈರಿಯನ್ನು ಕೊಂದಿರುವ ಪ್ರತೀಕವಾಗಿದ್ದರೆ, ಹೊರಗಿನ ಶಿಲ್ಪದಲ್ಲಿ ವೀರನೇ ವೈರಿಗಳಿಂದ ಹತನಾಗಿ ವೀರಸ್ವರ್ಗ ಸೇರಿರುವುದರ ಪ್ರತೀಕವಾಗಿವೆ.

೪. ರಾಮದೇವರ ಗುಡಿಯಿಂದ ಸು. ೧೦೦ ಮೀ. ದೂರದಲ್ಲಿ ಕಲ್ಲುಗಾರೆಗಳಿಂದ ನಿರ್ಮಿಸಿದ ೮'×೮' ಚೌಕಾಕಾರದ ಗುಡಿ

ಯಿದ್ದು, ಅದರಲ್ಲಿ ೨೧/೨'ಉ×೨' ಅಗಲದ ಶಿಲಾಫಲಕವಿದ್ದು, ಅದರಲ್ಲಿ ಕುದುರೆ ಏರಿ ಕುಳಿತಿರುವ ಒಬ್ಬ ಪುರುಷನು ತಲೆಯ ಮೇಲೆ ಶಿರಸ್ತಾಣ, ಕಿವಿಗಳಲ್ಲಿ ಕುಂಡಲ ಧರಿಸಿದ್ದು, ಬಲಗೈಯಲ್ಲಿ ಕುದುರೆ ಜೀನು ಹಿಡಿದಿದ್ದಾನೆ. ಕುದುರೆ ಮುಂದೆ ಒಬ್ಬ ಸೇವಕನು ನಿಂತಿದ್ದು, ಒಡೆಯನಿಗೆ ಉದ್ದದ ಕೊಡೆಯನ್ನು ಹಿಡಿದಿದ್ದಾನೆ. ಪುರುಷನ ಹಿಂದೆ ಒಬ್ಬ ಸ್ತ್ರೀ ಕುಳಿತಿದ್ದು, ಬಲಗೈಯನ್ನು ಎತ್ತಿಹಿಡಿದಿದ್ದಾಳೆ. ಅವಳ ಪಕ್ಕದಲ್ಲಿ ಒಂದು ಕೂಸು ಕೂಡ ಇದೆ. ಈ ಗುಡಿಯನ್ನು 'ಮಾಸ್ತಿಮಲ್ಲಮ್ಮನ' ಗುಡಿಯೆಂದು ಕರೆಯುತ್ತಿದ್ದಾರೆ. ತನ್ನ ಪತಿಯು ಮರಣಿಸಿದ ಕಾರಣ ಆಕೆಯು ಸಹಗಮನ ಮಾಡಿದಂತೆ ತೋರುತ್ತದೆ. ಆದರೆ ಸ್ತ್ರೀ, ಪುರುಷರು ಮಗುವಿನೊಂದಿಗೆ ಒಂದೇ ಕುದುರೆಯ ಮೇಲೆ ಕುಳಿತಿರುವ ಈ ಶಿಲ್ಪ ವಿಶೇಷ ಮಹತ್ವದ್ದಾಗಿದೆ.

೫. ಇಲ್ಲಿಂದ ಸು. ೧೦೦ ಮೀ. ದೂರದಲ್ಲಿ ೪' ಎತ್ತರದ ಇನ್ನೊಂದು ಮಾಸ್ತಿಕಲ್ಲು ಬಯಲಿನಲ್ಲಿ ಇದೆ. ಇದು ೫ ತುಂಡುಗಳಾಗಿ ಒಡೆದಿದ್ದು, ಅವುಗಳನ್ನು ಸರಿಯಾಗಿ ಹೊಂದಿಸಿ ಭಾವಚಿತ್ರ ತೆಗೆಯಲಾಗಿದೆ. ಶಿಲ್ಪದ ಕುತ್ತಿಗೆ, ಸೊಂಟ ಮತ್ತು ಎರಡೂ ಕೈಗಳು ತುಂಡಾಗಿವೆ. ಎತ್ತಿದ ಬಲಗೈಯ ಹಸ್ತ ಮಾತ್ರ ಇದ್ದು ಉಳಿದದ್ದು ನಾಶವಾಗಿದೆ. ಈಕೆ ತಲೆಕೂದಲನ್ನು ಒಪ್ಪವಾಗಿ ಕಟ್ಟಿ ಆಭರಣ ಧರಿಸಿದ್ದು, ಕಿವಿಗಳಲ್ಲಿ ದುಂಡಾದ ಓಲೆಗಳು, ಕೊರಳಿನಲ್ಲಿ ೩ ಸರಗಳೂ ಕೈಗಳಲ್ಲಿ ಕಡಗ ಮೊದಲಾದ ಆಭರಣಗಳನ್ನು ಧರಿಸಿದ್ದು, ನೋಡಲಾಗಿ ರಾಜಮನೆತನದ ಅಥವಾ ಒಬ್ಬ ಕುಲೀನ ಸ್ತ್ರೀಯಾಗಿದ್ದು, ಆಕೆ ಸಹಗಮನ ಮಾಡಿದ ಸ್ಮಾರಕವಾಗಿ ಸ್ಥಾಪಿಸಿದ್ದು, ಇದು ಅಳಿದುಳಿದಿದೆ.

**೬. ಕೊಂಡದ ಬಸವಣ್ಣನ ಗುಡಿ** : ಇಲ್ಲಿಂದ ಸ್ವಲ್ಪ ದೂರದಲ್ಲಿ ೧೨'ಉ×೮' ಅಗಲದ ಒಂದು ಗುಡಿ ಇದ್ದು, ಇದರಲ್ಲಿ ೭'ಉ×೫' ದಪ್ಪದ ಬಸವಣ್ಣ ಮೂರ್ತಿ ಇದೆ. ಇದನ್ನು ಅಲ್ಲಿಯೇ ಇದ್ದ ಗುಂಡಿನಲ್ಲಿ ಕೆತ್ತಲಾಗಿದೆ. ಇದು ಪಶ್ಚಿಮಾಭಿಮುಖವಾಗಿದ್ದು, ದಪ್ಪದ ಮೂತಿ ಮತ್ತು ಮೊಂಡು ಕೋಡುಗಳು ಇದ್ದು, ಆಕಾರದಲ್ಲಿ ಸಾಮಾನ್ಯಕ್ಕಿಂತ ದಪ್ಪವಾಗಿದೆ. ಇದನ್ನು ಕೊಂಡದ ಬಸವಣ್ಣನೆಂದು ಕರೆಯುತ್ತಿದ್ದಾರೆ.

**೭. ರಾಮತೀರ್ಥ** : ಕುರುಗೋಡು ಕಡೆಯಿಂದ ಭಟ್ಟರ ಹಳ್ಳಿಯವರೆಗೆ ಹಬ್ಬಿರುವ ಗುಡ್ಡಕ್ಕೆ 'ರಾಮಣ್ಣನ ಗುಡ್ಡ' ವೆಂದು ಕರೆಯುತ್ತಾರೆ. ಇದರ ಪಶ್ಚಿಮದ ಕೊನೆಯಲ್ಲಿ ಸು. ೫೦' ಎತ್ತರದಲ್ಲಿ ಸು. ೫೦' ಉದ್ದ, ೧೦' ಅಗಲ ಕಿರಿದಾದ ಗುಹೆ ಇದೆ. ಇದರಲ್ಲಿ ೬' ಉದ್ದದ ಪಾಣಿಪೀಠದ ಮೇಲೆ, ೧' ಎತ್ತರದ ದುಂಡಾದ ಲಿಂಗಾಕಾರದ ಕಲ್ಲನ್ನು ಸ್ಥಾಪಿಸಿದ್ದು ಇದನ್ನು 'ರಾಮಲಿಂಗ'ನೆಂದು ಕರೆಯುತ್ತಾರೆ. ಈ ಗುಹೆಯಿಂದ ಕೆಳಗಡೆ ಇರುವ ಕೊರಕಲಿನಲ್ಲಿ ನೀರಿನ ಹೊಂಡವಿದ್ದು, ಇದರಲ್ಲಿ ಯಾವಾಗಲೂ ಸಿಹಿನೀರು ಇರುತ್ತದೆ. ಇದನ್ನು '**ರಾಮತೀರ್ಥ**'ವೆಂದು ಕರೆಯುತ್ತಿದ್ದು, ಈ ಪ್ರದೇಶದಲ್ಲಿ ಹೆಚ್ಚಾಗಿ ರಾಮನ ಹೆಸರೇ ಪ್ರಸ್ತುತವಾಗಿದೆ.

**೮. ಇತರ ಕುರುಹುಗಳು** : ಭಟ್ಟರ ಹಳ್ಳಿಯ 'ಅಗಸೆ ಬಾಗಿಲು' ಇತ್ತೆಂದು ಹೇಳುವ ಜಾಗದ ಹತ್ತಿರದಲ್ಲಿ ಸು. ೬೦'ಉ ×೪೦' ಅಗಲದ ಸು. ೫೦'-೬೦' ಆಳದ ಭಾವಿಯಿದ್ದು, ಆ ಗ್ರಾಮಕ್ಕೆ ನೀರು ಪೂರೈಸುವುದಕ್ಕಾಗಿ ನಿರ್ಮಿಸಿದ್ದು, ಈಗ ಹೂತು ಹೋಗಿ, ಪಾಳು ಮತ್ತು ವಾಸದ ಮನೆಗಳ ನೆಲಗಟ್ಟುಗಳೂ ಕಂಡುಬರುತ್ತಿವೆ. ಪುರಾತನ ಗ್ರಾಮ 'ಭಟ್ಟರಹಳ್ಳಿ'ಯ ಹೆಸರು ಅಳಿಸಿಹೋಗಿದ್ದರೂ, ಅದು ಮೊದಲು ಜನವಸತಿವುಳ್ಳ ಗ್ರಾಮವಾಗಿತ್ತು ಎಂಬ ಐತಿಹಾಸಿಕ ಸತ್ಯವನ್ನು ಮೇಲೆ ತಿಳಿಸಿದ ಹಲವಾರು ಕುರುಹುಗಳು ಸಾರಿ ಹೇಳುತ್ತಿವೆ.

**೯. ಕುಮಾರ ರಾಮನ ಗುಡಿಗಳು** : ಕುಮಾರ ರಾಮನು ತನ್ನ ವೈಶಿಷ್ಟ್ಯಪೂರ್ಣ ವ್ಯಕ್ತಿತ್ವದಿಂದ ಸ್ವರ್ಗಸ್ಥನಾದ ಮೇಲೆ ದೈವತ್ವವನ್ನು ಪಡೆದುಕೊಂಡಿದ್ದಾನೆ. ಹಾನಗಲ್ಲು ತಾಲೂಕಿನ ಮೂಡೂರು, ಮುಲ್ಗುಂದ, ಶಿರೋಡ, ಸೊರಬ ತಾ. ಶಂಕ್ರಿಕೊಪ್ಪ, ಕೊರಟಗೆರೆ ತಾ. ದೊಡ್ಡಪಾಲನಹಳ್ಳಿ, ಸಿದ್ದಾಪುರ ತಾ. ಬೇಡಕರ್ಣಿ, ಹಾವೇರಿ ತಾ. ಸಂಗೂರು, ಮೊಳಕಾಲ್ಮೂರು ತಾ. ರಾಂಪುರ ಹಾಗೂ ಕುಮ್ಮಟದುರ್ಗ, ಹೊಸಮಲೆದುರ್ಗ ಮತ್ತು ಸಂಡೂರುಗಳಲ್ಲಿ ರಾಮನ ಗುಡಿಗಳಿರುವುದು ಈಗಾಗಲೇ ವರದಿಯಾಗಿದೆ. ಬಳ್ಳಾರಿ ಜಿಲ್ಲೆಯ, ಈ ಭಟ್ಟರಹಳ್ಳಿ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕಿನ ವರೆಗೆ ನಾಗಲಾಪುರ ಗ್ರಾಮಗಳಲ್ಲಿರುವ ಗುಡಿಗಳೂ, ಈ ಶೋಧದಿಂದ ಮೇಲಿನ ಸಾಲಿಗೆ ಸೇರುತ್ತವೆ.



***

### ಆಧಾರಸೂಚಿ ಮತ್ತು ಟಿಪ್ಪಣಿಗಳು


೧ ಜಿ. ವರದರಾಜರಾವ್., ೧೯೬೬, ಮೈಸೂರು ವಿ.ವಿ., **ಕುಮಾರರಾಮನ ಸಾಂಗತ್ಯಗಳು.**

೨. ಎಂ.ಎಂ. ಕಲಬುರ್ಗಿ., ೧೯೯೪, **ಕರ್ನಾಟಕದ ಕೈಫಿಯತ್ತುಗಳು**, ಕನ್ನಡ ವಿ.ವಿ. ಹಂಪಿ.

೩. ಡಾ. ಜೆ.ಯಂ. ನಾಗಯ್ಯ., ೨೦೦೨, **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ**, ಲೋಹಿಯಾ ಪ್ರಕಾಶನ, ಬಳ್ಳಾರಿ.

೪. ವೈ. ಹನುಮಂತರೆಡ್ಡಿ., ೨೦೦೩, **ಬಲ್ಲಕುಂದೆ ನಾಡಿನ ರಾಜಧಾನಿ ಕುರುಗೋಡಿನ ಸಾಂಸ್ಕೃತಿಕ ಇತಿಹಾಸ**, ಜ್ಞಾನವಾಹಿನಿ ಪ್ರಕಾಶನ, ಬಳ್ಳಾರಿ.


**ಜಟಿಂಗ ರಾಮನ ಕರುಣೆಯಲುದಿಸಿದ**
**ಕುಮಾರರಾಮ**
**ಹೊಯ್ಸಳ, ದೆಹಲಿ ಸುಲ್ತಾನೆದುರಾದ ಕೆಚ್ಚಿನ ರಾಮ**
**ರಾಮನಾ ಭಟ್ಟರಹಳ್ಳಿ ಕ್ರೂರ**
**ಕಾಡು ಹಂದಿಯ ಕೊಂದ ನೆಲೆ ಬೆಟ್ಟ**
**ಧೈರ್ಯಸಾಹಸಕೆ ಇರುವನಕ ಪುಟವಿಟ್ಟ**
**ಜಿಲ್ಲೆ ಎಲ್ಲೆಯ ಮೀರಿ ಜನದ ಮನದಲ್ಲಿ ಲಗ್ಗೆ ಇಟ್ಟ**

ಪ್ರೊ. ಗೋಪಾಲಕೃಷ್ಣ ಸಾಮಗ*

# ತುಳುನಾಡಿನಲ್ಲಿ ವೀರಶೈವರ ಆರಂಭಿಕ ನೆಲೆಗಳು

*ತುಳುವದೇಶದ ತುಲಕಾಣ್ಯರಿಗೆ ಮಹಿಮೆಯನ್ನು ತೋರಿ ಶತಪವಾಡ ಮಹನೀಯರೆನಿಸಿದ ಗೋಸಲಾರ್ಯ ವರ್ಯರ ಮೂಲಕ ಹೊಯ್ಸಳ ಬಲ್ಲಾಳನು ವೀರಶೈವ ಧರ್ಮವನ್ನು ಪರಿಚಯಿಸಿದ ಎಂದರೆ ಹೊಯ್ಸಳರ ಕಾಲದಲ್ಲಿಯೇ ತುಳುನಾಡಿನಲ್ಲಿ ವೀರಶೈವ ಧರ್ಮ ನೆಲೆಗೊಂಡಿತ್ತು ಎನ್ನಬೇಕು. ವೀರಶೈವ ಜಂಗಮರಿಗೆ ಈ ನಾಡಿನಲ್ಲಿ ಬಹಳ ಜನಪ್ರಿಯತೆ ಹಾಗು ಗೌರವವಿತ್ತು. ಬಾರಕೂರಿನ ಕ್ರಿ.ಶ. ೧೩೭೨ರ ಶಾಸನವು ತುಳುನಾಡಿನ ಕೋಟೇಶ್ವರವು ವೀರಶೈವ ಕೇಂದ್ರವಾಗಿತ್ತೆಂದು ತಿಳಿಸುತ್ತದೆ. ಮುಂದೆ ವಿಜಯನಗರದ ರಾಜಪ್ರತಿನಿಧಿಗಳ ಪ್ರೋತ್ಸಾಹದೊಂದಿಗೆ ಒಂದು ಪ್ರಭಾವಿ ಧರ್ಮವಾಗಿ ವೀರಶೈವವು ಬೆಳೆದ ಕಾರಣ ತುಳುನಾಡಿನ ಮಹಾದೇವ ದೇಗುಲಗಳು ಮಹಾಲಿಂಗೇಶ್ವರ ದೇಗುಲಗಳೆನಿಸಿದುವು.*

ಕರ್ನಾಟಕದ ಪಶ್ಚಿಮ ಕರಾವಳಿಯಲ್ಲಿರುವ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯನ್ನು ಇತಿಹಾಸ ಕಾಲದಿಂದಲೂ ತುಳುನಾಡು ಎಂದು ಕರೆಯಲಾಗಿದೆ. ಸಾಂಸ್ಕೃತಿಕ ಮತ್ತು ರಾಜಕೀಯ ಅಂಶಗಳು ಹಾಗೂ ಇಲ್ಲಿನ ಬಹು ಸಂಖ್ಯಾತ ಜನತೆಯ ಆಡುಭಾಷೆಯಾಗಿರುವ ತುಳುವಿನಿಂದ ಈ ನಾಡಿಗೆ ತುಳುನಾಡು ಎಂಬ ಹೆಸರು ಬಂತು. ತುಳುನಾಡನ್ನು ಅನೇಕ ರಾಜವಂಶದವರು ಆಳಿದ್ದರು. ಅವರಲ್ಲಿ ಅಳುಪರು ಮೊದಲಿಗರು. ಕರ್ನಾಟಕವನ್ನಾಳಿದ ಇವರ ರಾಜ ಮನೆತನಗಳೂ ಈ ನಾಡಿನ ಮೇಲೆ ತಮ್ಮ ರಾಜಕೀಯ ಅಧಿಕಾರ ದಿಂದ ಶಿವಾರಾಧನೆಯ ಜೊತೆಗೆ ಇತರ ಧಾರ್ಮಿಕ ಆಚರಣೆಗಳನ್ನೂ ಪೋಷಿಸುತ್ತಾ ಬಂದರು. ವಿಜಯನಗರ ಪತನಾನಂತರ ಪ್ರಖ್ಯಾತಿಗೆ ಬಂದ ಕೆಳದಿಯ ಅರಸರು ಈ ನಾಡಿನಲ್ಲಿ ವೀರಶೈವ ಧರ್ಮವನ್ನು ರಾಜಾಶ್ರಯದೊಂದಿಗೆ ಪ್ರಚಾರ ಮಾಡಿದರು. ಆದರೂ ಬಹಳಷ್ಟು ಕುತೂಹಲ ಕೆರಳಿಸಿರುವ ಅಂಶವೆಂದರೆ ಇಲ್ಲಿಗೆ ವೀರಶೈವ ಧರ್ಮದ ಪರಿಚಯವು ಯಾವಾಗ ಮತ್ತು ಹೇಗೆ ಆಯಿತು ಎಂಬುದು. ಇದನ್ನು ಅರಿಯುವುದೇ ಈ ಸಂಪ್ರಬಂಧದ ಉದ್ದೇಶ.

## ಹೊಯ್ಸಳರ ಕಾಲದಲ್ಲಿ ವೀರಶೈವಧರ್ಮ

ತುಳುನಾಡಿನ ಕರಾವಳಿಯಲ್ಲಿ ಹದಿನಾರನೇ ಶತಮಾನದಲ್ಲಿ ಕೆಳದಿ ಅರಸರ ರಾಜಾಶ್ರಯದಲ್ಲಿ ಈಗಾಗಲೇ ಇದ್ದ ಶೈವ ಧರ್ಮವನ್ನು ಪುನರುತ್ಥಾನಗೊಳಿಸುತ್ತಾ ವೀರಶೈವ ಧರ್ಮವು ನಾಡಿನ ಉದ್ದಗಲಕ್ಕೆ ಹರಡಿತು. ಆದರೂ ಹದಿನಾಲ್ಕನೇ ಶತಮಾನದ ಮಧ್ಯಭಾಗದಲ್ಲಿಯೇ ಇಲ್ಲಿಗೆ ವೀರಶೈವ ಧರ್ಮದ ಪರಿಚಯವಾಗಿತ್ತು[1]. ಹೊಯ್ಸಳರು ತುಳುನಾಡನ್ನು ಆಳುತ್ತಿದ್ದ ಕಾಲದಲ್ಲಿ ಹಲವಾರು ವೀರಶೈವ ವ್ಯಾಪಾರಿಗಳು ಕರ್ನಾಟಕದ ಬಯಲು ಸೀಮೆಯಿಂದ ಇಲ್ಲಿಗೆ ಬಂದು ಈ ನಾಡಿನ ಉತ್ತರದ ಭೂ ಪ್ರದೇಶದಲ್ಲಿ ವ್ಯಾಪಾರಿ ಕೇಂದ್ರವನ್ನು ಸ್ಥಾಪಿಸಿಕೊಂಡರು. ಕಾಲ ಕ್ರಮೇಣ ಇವರು ಸ್ಥಾಪಿಸಿದ ವ್ಯಾಪಾರ ಕೇಂದ್ರಗಳು ವೀರಶೈವರ ಧಾರ್ಮಿಕ ಕೇಂದ್ರಗಳಾಗಿ ಬೆಳೆದವು. ಇಂತಹ ವ್ಯಾಪಾರಿಗಳಲ್ಲಿ ಕೆಲವರು ತುಳುನಾಡಿನ ಶೈವ ದೇವಾಲಯಗಳಿಗೆ ನೀಡಿದ ದಾನ ಧರ್ಮಗಳಿಗೆ ಸಾಕಷ್ಟು ಶಾಸನಾಧಾರಗಳಿವೆ. ವೀರಶೈವ ಧರ್ಮವು ಇಲ್ಲಿಗೆ ಪಸರಿಸಿದ ಕುರಿತು ಅವಲೋಕಿಸಿದಾಗ ಅನೇಕ ರೋಚಕ ವೃತ್ತಾಂತಗಳು ತಿಳಿದುಬರುತ್ತವೆ. ಹೊಯ್ಸಳ ದೊರೆ ೩ನೇ ವೀರ ಬಲ್ಲಾಳನ ರಾಣಿಯರಲ್ಲಿ ಒಬ್ಬಳು ತುಳುನಾಡನ್ನಾಳಿದ ಆಳೂಪ ರಾಜ ವಂಶಸ್ಥಳಾದ ಚಿಕ್ಕಾಯಿ ತಾಯಿ ಎಂಬಾಕೆಯಾಗಿದ್ದಳು. ೪ನೇ ಬಲ್ಲಾಳನೆಂದು ಖ್ಯಾತನಾದ ವಿರೂಪಾಕ್ಷನು ವೀರ ಬಲ್ಲಾಳನ ಮಗನಾಗಿದ್ದು ತಂದೆಯ ಅವಸಾನದ ಬಳಿಕ ಕ್ರಿ.ಶ. ೧೩೨೪ರಲ್ಲಿ ಪಟ್ಟವೇರಿದನು. ಈತನು ತನ್ನ ದಿಗ್ವಿಜಯದ ಕಾಲದಲ್ಲಿ ಹರದನಹಳ್ಳಿಯ ಶ್ರೀ ಗೋಸಲಾಚಾರ್ಯ[2] ಎಂಬ ವೀರಶೈವ

* ಮುಖ್ಯಸ್ಥರು, ಇತಿಹಾಸ ವಿಭಾಗ, ಸಂತ ಮೇರಿ ಕಾಲೇಜು, ಶಿರ್ವ, ಉಡುಪಿ.

ಜಂಗಮನಿಗೆ ಬರೆಸಿಕೊಟ್ಟ ಎರಡು ತಾಮ್ರ ಶಾಸನಗಳಲ್ಲಿ ಒಂದರಲ್ಲಿ ಗೋಸಲಸ್ವಾಮಿಯು ತುಳುನಾಡಿಗೆ ಬಂದ ಉಲ್ಲೇಖವಿದೆ. **ತುಳುವ ದೇಶಕ್ಕೆ ಬಂದು ತುಲಕಾಣ್ಯರಿಗೆ ಮಹಿಮೆಯಂ ತೋರಿ ಶತಪವಾಡ ಮಹನೀಯರೆಂದು ಬಿರುದಂ ಪಡೆದ ಶ್ರೀಮದ್ ಗೋಸಲಾರ್ಯವರ್ಯ** ಎಂಬ ವಾಕ್ಯವಿದೆ. ಅಂತೆಯೇ ಈ ವೀರಶೈವ ಸಂತನು ಇಲ್ಲಿಗೆ ಬಂದು ತನ್ನ ಮಾಂತ್ರಿಕ ಶಕ್ತಿಯನ್ನು ಪ್ರದರ್ಶಿಸಿ ಜನರನ್ನು ತನ್ನೆಡೆಗೆ ಆಕರ್ಷಿಸಿದ್ದನು. ತುಳುನಾಡಿನ ವೀರಶೈವ ಧರ್ಮ ಪ್ರಚಾರದ ಕಾರ್ಯದಲ್ಲಿ ಇದು ಮೊದಲನೇ ಹೆಜ್ಜೆ. ಆ ಕಾಲದಲ್ಲಿ ಪವಾಡಗಳಿಗೆ ಜನರು ಮರುಳಾಗುತ್ತಿದ್ದರು. ಎಂಬುದು ನಿರ್ವಿವಾದ. ಅಂತೆಯೇ ಹೊಯ್ಸಳ ಬಲ್ಲಾಳನು ಈ ಪವಾಡ ಪುರುಷನ ಮೂಲಕ ಇಲ್ಲಿಗೆ ವೀರಶೈವ ಧರ್ಮವನ್ನು ಪರಿಚಯಿಸಿದನು.

ಇನ್ನೊಂದು ವಾದದಂತೆ ಅದರ ಮೊದಲೇ ಇಲ್ಲಿ ವೀರಶೈವ ಜಂಗಮ ಗುರುಗಳ ಚಲನವಲನಗಳಿದ್ದು ಅವರು ಜನಪ್ರಿಯ ರಾಗಿದ್ದರು ಎಂದು ತಿಳಿದು ಬರುತ್ತದೆ. ಉದ್ಭಟ ಕಾವ್ಯ ಎಂಬ ಚಂಪೂ ಕಾವ್ಯವನ್ನು ರಚಿಸಿದ ತುಳುನಾಡಿನ ಮೂಡಬಿದ್ರೆಯ ಕವಿ ಸೋಮರಾಜ (ಕ್ರಿ.ಶ.೧೨೨೨) ಎಂಬ ಕವಿಯು ತನ್ನ ಕಾವ್ಯದಲ್ಲಿ **ಅಲ್ಲಮ ಪ್ರಿಯ**ನೆಂದು ಪ್ರಾಚೀನ ವೀರಶೈವ ಸಂತರ ಅಂಕಿತವನ್ನಿಟ್ಟುಕೊಂಡು ಪದ್ಯವನ್ನು ಬರೆದಿರುವನು. ಬಸವಣ್ಣನವರ ಪವಾಡಗಳನ್ನು ನೋಡಬರುತ್ತಿದ್ದ ಶಿವಶರಣರಲ್ಲಿ ತುಳುನಾಡಿನವರೂ ಇದ್ದರೆಂದೂ ವಿರೂಪಾಕ್ಷ ಕವಿಯ ಚೆನ್ನಬಸವ ಪುರಾಣದ ಈ ಪದ್ಯದಲ್ಲಿ ಹೇಳಲಾಗಿದೆ.

**ಅಂಗಮಲಯಾಳ ಮಾಳವ ಮಗಧ ಬರ್ಬರ ಕ।**
**ಲಿಂಗ ಕಾಶ್ಮೀರ ಕೊಂಕಣ ಸಿಂಧು ಹಮ್ಮೀರ।**
**ವಂಗ ಹೊಯ್ಸಳ ಚೋಳ ತುಳುವ ಚೇರನು।**

(ಆರನೇ ಸಂಧಿ -೪೯ನೇ ಪದ್ಯ).

ಹೀಗೆ ಹೊಯ್ಸಳರ ಕಾಲದಲ್ಲಿಯೇ ತುಳುನಾಡಿನಲ್ಲಿ ವೀರಶೈವ ಧರ್ಮವು ಇಲ್ಲಿಗೆ ಪರಿಚಯಿಸಲ್ಪಟ್ಟಿತ್ತು. ಎಂದು ಉತ್ತರ ಹೇಳಬಹುದು ಹಾಗೂ ಮಂದಗತಿಯಲ್ಲಿ ಪ್ರಸರಣ ಹೊಂದಿ ತುಳುನಾಡಿನಲ್ಲಿ ಹರಡಿತು. ವೀರಶೈವರ ಪುರೋಹಿತ ವರ್ಗದ ವರಂತಿದ್ದ ಜಂಗಮರಿಗೆ ಈ ನಾಡಿನಲ್ಲಿ ಬಹಳ ಗೌರವವಿತ್ತು. ಕ್ರಿ.ಶ. ೧೩೭೨ರ ಬಾರಕೂರಿನ ಶಾಸನದಿಂದ ತಿಳಿಯುವಂತೆ ಕೋಟೇಶ್ವರವು ತುಳುನಾಡಿನಲ್ಲಿ ವೀರಶೈವರ ಪ್ರಪ್ರಥಮ ಕೇಂದ್ರ. ಮುಂದೆ ವ್ಯಾಪಾರಿಗಳಿಂದ ಬಾರ್ಕೂರು ಮತ್ತು ಬಸ್ರೂರುಗಳಲ್ಲಿ ವೀರಶೈವರ ನೆಲೆಗಳು ಹುಟ್ಟಿಕೊಂಡವು.

ಕೋಟೇಶ್ವರ ದೇವಸ್ಥಾನದಲ್ಲಿರುವ ಕ್ರಿ.ಶ. ೧೩೭೭ರ ಶಾಸನದ ಸಾರಾಂಶದಂತೆ -ವೀರಬುಕ್ಕರಾಯನ ಮಗ ಹರಿಯಪ್ಪನ ರಾಜಾಭ್ಯುದಯ ಕಾಲದಲ್ಲಿ ಬೊಮ್ಮರಸ ಒಡೆಯನು ಬಾರಕೂರು ರಾಜ್ಯವನ್ನು ಆಳುತ್ತಿದ್ದಾಗ, ಮಹಾ ಪ್ರಧಾನಿ ಮುದ್ದೆ ದಣ್ಣಾಯಕನು ಮಠಕ್ಕೆ ನೀಡಿದ ದಾನವನ್ನು ವಿವರಿಸುತ್ತಾ, ಮಠವ ಬೋಹರಿಸುವ ಬಸವಿತ್ತಿ ಒಬ್ಬಳಿಗೆ ನಿಶ್ಚಿತವಾಗಿ ಸಲ್ಲುವ ಅಕ್ಕಿಯ ವಿವರವಿದೆ. ಬಸವಿತ್ತಿ ಎಂಬುದು ವೀರಶೈವ ಹಿನ್ನೆಲೆಯನ್ನೂ, ನಿಶ್ಚಿತವಾಗಿ ಸಲ್ಲುವ ಅಕ್ಕಿ ಎಂಬುದು ಆಕೆಯ ಖಾಯಂ ವಾಸ್ತವ್ಯವನ್ನೂ ತಿಳಿಸುತ್ತವೆ. ಕೋಟೇಶ್ವರ ಪರಿಸರದ ಜನರಲ್ಲಿ ಪರಂಪರೆಯಿಂದ ಬಂದಿರುವ ವಾಡಿಕೆಯ ಮಾತಾಗಿರುವ ಮೌಖಿಕ ಇತಿಹಾಸವು ತಿಳಿಸುವಂತೆ-

**ನಡೆದದ್ದೇ ಭೂಪ್ರದಕ್ಷಣೆ, ನುಡಿದದ್ದೇ ಸ್ವಾಮಿ ವಚನ**
**ಮಲಗಿದ್ದೇ ಉದ್ದಂಡ ನಮಸ್ಕಾರ**[೩]

ಇಲ್ಲಿ ವಚನ ಪದದ ಬಳಕೆಯು ವೀರಶೈವ ಪ್ರಭಾವವನ್ನು ತಿಳಿಸುತ್ತದೆ.

**ವಿಜಯನಗರ ಕಾಲದಲ್ಲಿ ವೀರಶೈವ ಧರ್ಮದ ಪ್ರಗತಿ**

೧೬ನೇ ಶತಮಾನಕ್ಕಿಂತ ಮೊದಲು ಅಂದರೆ ಕೆಳದಿ ಅರಸರು ತುಳುನಾಡನ್ನು ಆಳುವ ಮೊದಲು ವ್ಯಾಪಾರಿಗಳ, ಸೈನಿಕರ, ಸಂಗಮರ ಹಾಗೂ ವಿಜಯನಗರ ಅಧಿಕಾರಿಗಳ ಮೂಲಕ ಕೋಟೇಶ್ವರ, ಬಸ್ರೂರು ಮೊದಲಾದ ಕಡೆಗಳಲ್ಲಿ ವೀರಶೈವ ಧರ್ಮವು ಪಸರಿಸಿತು.[೪] ಈ ಕಾಲದಲ್ಲಿ ಉತ್ತರ ತುಳುನಾಡಿನಾದ್ಯಂತ ವೀರಶೈವ ಧರ್ಮವು ಹರಡಿತು. ಕ್ರಿ.ಶ. ೧೩೭೨ರ ಬಾರಕೂರಿನ ಶಾಸನದಿಂದ ತಿಳಿಯುವಂತೆ ಗೋಪರಸ ಒಡೆಯನು ಬಾರ್ಕೂರು ರಾಜ್ಯದ ಮಹಾಪ್ರಧಾನನಾಗಿದ್ದಾಗ ನಂದನಾಥ, ಬ್ರಿಂಘಿನಾಥ, ವೀರಭದ್ರದೇವ ಮತ್ತು ಗಣಕುಮಾರ ಹೆಗ್ಗಡೆಯು ಇಲ್ಲಿ ಭೂಮಿಯನ್ನು ಕ್ರಯಕ್ಕೆ ಪಡೆದು ಕೋಟೇಶ್ವರದ ಶಿವಾಲಯದಲ್ಲಿ ದಾನ ನೀಡುವ ಸಂದರ್ಭದಲ್ಲಿ 'ಕುಡಿಯಹಬ್ಬ'[೫] ಎಂಬ ಜಾತ್ರೆಯಲ್ಲಿ ಉಭಯ ಜಂಗಮರಿಗೆ ಅಶನಾರ್ಥಕ್ಕಾಗಿ ನೀಡಿದ ದಾನಧರ್ಮದ ವಿವರಣೆಯಿದೆ. ಇದರಿಂದ ಈ ಜಂಗಮರು ಇಲ್ಲಿ ಖಾಯಂ ನೆಲೆಯಿದ್ದರು ಎಂದು ತಿಳಿಯುತ್ತದೆ. ಬಾರ್ಕೂರಿನ ಕ್ರಿ.ಶ. ೧೩೭೯, ೧೪೦೨, ೧೪೧೬ ಮತ್ತು ೧೪೨೦ರ ಶಾಸನಗಳು ಈ ಕೆಳಗಿನ ಪ್ರಭಾವೀ ವೀರಶೈವ ವ್ಯಕ್ತಿಗಳನ್ನು ಹೆಸರಿಸುತ್ತದೆ - ಚಂದಪ್ಪ ಅಯ್ಯ, ದೇವರು ಅಯ್ಯ, ಲೋಕಣ್ಣ ಅಯ್ಯ ಮತ್ತು ಮಲ್ಲ ದೇವರು.[೬] ಕೆಲವೊಂದು ವಿಜಯನಗರ ಅಧಿಕಾರಿಗಳೂ ಬಾರ್ಕೂರು ರಾಜ್ಯದಲ್ಲಿ ವೀರಶೈವ ಧರ್ಮವನ್ನು ಪ್ರೋತ್ಸಾಹಿಸಿದರು. ಉದಾಹರಣೆಗೆ ಬಸವಣ್ಣನು ಬಾರ್ಕೂರು ರಾಜ್ಯವನ್ನು ಆಳುತ್ತಿದ್ದಾಗ ವೀರಶೈವ ವ್ಯಾಪಾರಿಯಾದ ಮಲ್ಲದೇವ ಮತ್ತು ಇತರರು ಬಾರ್ಕೂರಿನ ಕಾವ್ಯದೇವ ದೇವಾಲಯಕ್ಕೆ ನೀಡಿದ ಭೂದಾನದ ವಿವರವನ್ನು ಕ್ರಿ.ಶ. ೧೪೦೨ರ ಬಾರಕೂರು ಶಾಸನವು ತಿಳಿಸುತ್ತದೆ.[೭] ಕ್ರಿ.ಶ. ೧೪೧೬ರ ಶಾಸನವು ಬಾರ್ಕೂರು ರಾಜ್ಯದ ರಾಜ್ಯಪಾಲನಾದ ಶಂಕರದೇವ ಒಡೆಯನು ಶ್ರೀ ಅಮೃತ ಪ್ರಜ್ಞ ನಾರಾಯಣಗಿರಿ ಎಂಬವರಿಗೆ ನೀಡಿದ ದಾನವನ್ನು ಜಾರಿಗೊಳಿಸುವಲ್ಲಿ ಚೌಳಿಕೇರಿಯ ಅಯ್ಯನವರು ಮತ್ತು ಹಲರು ವಹಿಸಿದ ಪಾತ್ರವನ್ನು ತಿಳಿಸುತ್ತದೆ.[೮] ವಿರೂಪಾಕ್ಷ ದೇವನು ಬಾರ್ಕೂರು ರಾಜ್ಯದ ರಾಜ್ಯಪಾಲನಾಗಿದ್ದಾಗ ಪಡುವಕೇರಿಯ ಸೆಟ್ಟಿಯವರ ಗುರುವಾಗಿದ್ದಂತಹ 'ರುದ್ರಾಕ್ಷಿ ಒಡೆಯ'ನೆಂಬುವನು ಕ್ರಿ.ಶ. ೧೪೪೭ರಲ್ಲಿ ಮಹಾದೇವ ದೇವರ ಹೆಸರಿನಲ್ಲಿ ಒಂದು ಮಠವನ್ನು ಕಟ್ಟಿಸಿದನು. ಆ ಮಠಕ್ಕೆ ಬಸ್ರೂರಿನ ಹಲರು ೯೫ ಹೊನ್ನುಗಳನ್ನು ಮತ್ತು ೫೦ ಗದ್ಯಾಣಗಳನ್ನು ಕುಂದಾಪುರದ ಅದಿವಾಸದ ಆದಾಯ

ದಿಂದ ದಾನವಾಗಿ ನೀಡಿದ್ದರು.[೯] ಹೀಗೆ ಹಂತ ಹಂತವಾಗಿ ಬೆಳೆದ ವೀರಶೈವ ಧರ್ಮವು ತುಳುನಾಡಿನಲ್ಲಿ ಈಗಾಗಲೆ ಇದ್ದಂತಹ ಶಿವಾಲಯಗಳ ಮೇಲೆ ಬಹಳಷ್ಟು ಪ್ರಭಾವವನ್ನು ಬೀರಿತು. ಈವರೆಗೆ ಮಹಾದೇವ ದೇವಾಲಯ ಎಂದು ಕರೆಯಲ್ಪಡುತ್ತಿದ್ದ ದೇವಾಲಯಗಳು ಈಗ ಮಹಾಲಿಂಗ, ಮಹಾಲಿಂಗೇಶ್ವರ, ಸಿದ್ದೇಶ್ವರ ಮೊದಲಾದ ಹೆಸರಿನಿಂದ ಗುರುತಿಸಲ್ಪಡುವ ದೇವಾಲಯಗಳಾದವು. ಈ ಬದಲಾವಣೆಯನ್ನು ಕ್ರಿ.ಶ. ಸುಮಾರು ೧೪೬೩ ರಿಂದ ಕಾಣಬಹುದಾಗಿದೆ.[೧೦] ಉದಾಹರಣೆಗೆ ಸೂರಾಲು ಮತ್ತು ಬಸ್ರೂರಿನ ಮಹಾದೇವ ದೇವಾಲಯಗಳು ವೀರಶೈವ ಪ್ರಭಾವದೊಂದಿಗೆ ಈಗ ಮಹಾಲಿಂಗೇಶ್ವರ ದೇವಾಲಯಗಳಾದವು.[೧೧] ಕುಂದಾಪುರ ತಾಲೂಕಿನ ಶಂಕರನಾರಾಯಣ ಗ್ರಾಮಕ್ಕೆ ವೀರಶೈವ ಧರ್ಮದ ಪ್ರಸರಣವು ೧೬ನೇ ಶತಮಾನದಲ್ಲಿ ಆಯಿತು. ಕ್ರಿ.ಶ. ೧೫೪೪ರ ಶಾಸನವು ರುದ್ರಯ್ಯನ ಹೆಸರನ್ನು ಹೆಸರಿಸುತ್ತದೆ.[೧೨] ಹೀಗೆ ವಿಜಯನಗರದ ರಾಜಪ್ರತಿನಿಧಿಗಳ ಪ್ರೋತ್ಸಾಹದೊಂದಿಗೆ ತುಳುನಾಡಿನಲ್ಲಿ ವೀರಶೈವ ಧರ್ಮವು ಒಂದು ಪ್ರಭಾವಿ ಧರ್ಮವಾಗಿ ಬೆಳೆಯಿತು. ಮಾತ್ರವಲ್ಲದೆ ಈ ನಾಡಿನ ಮಹಾದೇವ ದೇವಾಲಯಗಳು ಮಹಾಲಿಂಗೇಶ್ವರ ದೇವಾಲಯಗಳಾದವು. ತುಳುನಾಡನ್ನಾಳಿದ ವಿಜಯನಗರ ರಾಜ್ಯಪಾಲರುಗಳಲ್ಲಿ ಲಿಂಗರಸ, ವಿರುಗಪ್ಪ, ಬಸವಣ್ಣ ಮೊದಲಾದ ವೀರಶೈವರು ಅಧಿಕಾರಿಗಳಾಗಿದ್ದರು ಎಂಬುದು ವೀರಶೈವರು ರಾಜಪ್ರತಿನಿಧಿಗಳಾಗಿಯೂ ಪ್ರಭಾವೀ ವ್ಯಕ್ತಿಗಳಾಗಿ ಇಲ್ಲಿ ನೆಲೆ ನಿಂತಿದ್ದರು ಎಂಬುದನ್ನು ತಿಳಿಸುತ್ತದೆ.[೧೩] ಹೀಗೆ ಹೊಯ್ಸಳರ ಕಾಲದಲ್ಲಿ ಪರಿಚಯಿಸಲ್ಪಟ್ಟ ವೀರಶೈವ ಧರ್ಮವು ವಿಜಯನಗರ ಕಾಲದಲ್ಲಿ ತುಳುನಾಡಿನ ಬಾರ್ಕೂರು, ಕೋಟೇಶ್ವರ, ಬಸ್ರೂರು, ಕುಂದಾಪುರಗಳನ್ನು ಕೇಂದ್ರವಾಗಿಟ್ಟುಕೊಂಡು ಹೆಚ್ಚು ಪ್ರಭಾವಶಾಲಿಯಾಗಿ ಬಾರ್ಕೂರು, ರಾಜ್ಯದಾದ್ಯಂತ ಹರಡಿತ್ತು ಎಂಬುದು ಮೇಲಿನ ವಿವರಣೆಯಿಂದ ತಿಳಿಯುತ್ತದೆ.

(ಕೃತಜ್ಞತೆಗಳು : ಪು. ಶ್ರೀನಿವಾಸಭಟ್, ಕಟೀಲು ಅವರಿಗೆ)



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಎಂ. ಎ.ಆರ್., ೧೯೩೦ ಪುಟ ೧೩೮ -೪೦.
೨. ಗೋಸಲ ಆಚಾರ್ಯರು ಗೋಸಲ ಚೆನ್ನಬಸವೇಶ್ವರರು. ಚಾಮರಾಜನಗರ ತಾಲೂಕಿನ ಹರದನಹಳ್ಳಿ ಇವರ ಜನ್ಮಸ್ಥಳ. ಕ್ರಿ.ಶ. ೧೪೭೦ರ ಸುಮಾರಿಗೆ ಜೀವಿಸಿದ್ದ ಪ್ರಸಿದ್ಧ ಜಂಗಮಗುರು ಎಡೆಯೂರು ಸಿದ್ದಲಿಂಗೇಶ್ವರರು ಇವರ ಶಿಷ್ಯ: **ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ** ಡಾ। ಹಾ. ಮಾ. ನಾಯಕ್., ಪುಟ ೧೦೨.
೩. ಡಾ.ಕೆ. ಎಸ್. ಎನ್. ಉಡುಪ., **ಶ್ರೀ ಕ್ಷೇತ್ರ ಕೋಟೇಶ್ವರ - ಇತಿಹಾಸ**, ಪುಟ ೫೬.
೪. ಡಾ। ಕೆ.ಜಿ. ವಸಂತ ಮಾಧವ., ರಿಲಿಜಿಯನ್ಸ್ ಇನ್ ಕೆನರಾ - ಪುಟ ೭೪.
೫. ಎಸ್.ಐ.ಐ.: ೯ ಭಾಗ ನಂ. ೪೧೫.
೬. ಎಸ್. ಐ.ಐ. : ೭ ನಂ. ೩೧೫,೩೫೭,೩೨೩,೩೩೯.
೭. ಎಸ್.ಐ.ಐ : ೭ ನಂ. ೩೨೩.
೮. ಎಸ್.ಐ.ಐ. : ೭ ನಂ. ೩೯೯.
೯. ಅದೇ : ೪೭೩.
೧೦. ಡಾ। ಪಿ. ಗುರುರಾಜ್ ಭಟ್., ೧೯೭೫, **ಸ್ಟಡೀಸ್ ಇನ್ ತುಳುವ ಹಿಸ್ಟರಿ ಎಂಡ್ ಕಲ್ಚರ್**, ಪುಟ ೨೮೯.
೧೧. ಎಸ್.ಐ.ಐ.: ೭ ನಂ. ೫೨೫, ಎಆರ್ಐಎಸ್ಐ: ೧೯೨೩ ನಂ. ೩೩೧.
೧೨. ಎಸ್.ಐ.ಐ.: ೯ ಭಾಗ ೨ ನಂ. ೬೯೯.
೧೩. ಡಾ। ಪಿ. ಗುರುರಾಜ್ ಭಟ್., ಪೂರ್ವೋಕ್ತ ಪುಟ ೪೬-೪೯.





### ಕ.ಇ. ಅಕಾದೆಮಿಯ ೫ನೇ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೧)

*ಮಾಂಡಲೇಶ್ವರ ಪಾಳೆಯಗಾರರು ಆಳಿದ ಸಣ್ಣಪ್ರದೇಶಗಳ ಇತಿಹಾಸವನ್ನರಿಯಲು ಶ್ರಮಿಸಬೇಕು. ಪ್ರಾದೇಶಿಕ ಇತಿಹಾಸದತ್ತ ಗಮನಹರಿಸಬೇಕು. ಈ ಸಣ್ಣ ನಾಯಕರು ನೀಡಿದ ನೆರವೇ ದೊಡ್ಡ ಸಾಮ್ರಾಜ್ಯಗಳ ಅಸ್ತಿತ್ವಕ್ಕೆ, ಬೆಳವಣಿಗೆಗೆ ಪೋಷಕವಾದುವು. ಹಿರಿಯ ಮನೆತನದ ಅರಸ ಇವರ ಮೂಲಕವೇ ಜನಸಾಮಾನ್ಯನನ್ನು ಮುಟ್ಟಬೇಕಾಯಿತು. ಆದುದರಿಂದ ಇವರ ಬಾಂಧವ್ಯಗಳನ್ನು ವಿಶ್ಲೇಷಣೆಗೊಳಪಡಿಸಬೇಕು. ರಾಜಕೀಯ, ಇತಿಹಾಸ ಕಾಲ ಮುಗಿದು ಸಾಮಾಜಿಕ ಆರ್ಥಿಕ ಇತಿಹಾಸಗಳನ್ನು ಆ ದೃಷ್ಟಿಕೋನದಿಂದ ಸಮಾಜದ ಅಳಿವು-ಉಳಿವುಗಳಲ್ಲಿ ಅವರು ವಹಿಸಿದ ಪಾತ್ರ ಇತ್ಯಾದಿಗಳ ಅಧ್ಯಯನದ ಕೆಲಸ ಆಗಬೇಕು. ಸ್ಥಳೀಯ ಸಂಶೋಧಕರು, ಕಾಲೇಜು ಅಧ್ಯಾಪಕರು, ಯುವ ಜನಾಂಗ ಇಂತಹವುಗಳಲ್ಲಿ ಹೆಚ್ಚಿನ ಆಸಕ್ತಿ ವಹಿಸಬೇಕು.*

**ಡಾ. ಬಾ. ರಾ. ಗೋಪಾಲ**
ಸಮ್ಮೇಳನಾಧ್ಯಕ್ಷರು





**ಸೋಮರಾಜಗೆ ಕಾವ್ಯದೊಳಗೊಂದು ಅಂಕಿತ 'ಅಲ್ಲಮ ಪ್ರಿಯ'**
**ತುಳುನಾಡ ವೀರಶೈವದ ಮಹಾದೇವ, ಮಹಾಲಿಂಗೇಶನಾದ ಆದ ಜನಪ್ರಿಯ**
**ಹೊಯ್ಸಳಗು ವಿಜಯನಗರದರಸರಿಗು ಒದಗಿದ್ದ**
**ಶತಪಾದದ ಮಹಿಮೆಯೊಳಗೆ ಶಿವಪ್ರಿಯ**

ಡಾ. ಎಫ್.ಟಿ. ಹಳ್ಳಿಕೇರಿ*

# ರೇವಣಸಿದ್ಧ ಪರಂಪರೆಯ ಹಾಲುಮತ ಮಠಗಳು

*ಹಾಲುಮತ ಗುರುಪರಂಪರೆಯಲ್ಲಿ ರೇವಣಸಿದ್ಧ ಹಾಗು ಸಿದ್ಧರಾಮ ಸಂಪ್ರದಾಯಗಳಿವೆ. ರೇವಣಸಿದ್ಧನಿಂದ ಸೊನ್ನಲಾಪುರದಲ್ಲಿ ದೀಕ್ಷಿತನಾದವನು ಸಿದ್ಧರಾಮ. ಪ್ರಸ್ತುತ ಹಾಲುಮತ ಮಠಗಳ ವ್ಯಾಪಕತೆ, ಆಚರಣೆಯ ಬಗೆಗಳು, ಸಾಮಾಜಿಕ ಸೇವೆ, ಜಾನಪದಿಕ ಅನ್ವಯಗಳು ಹಾಗು ಈ ಮಠಗಳ ವರ್ತಮಾನದ ನೆಲೆ ನಿಟ್ಟುಗಳ ವಿಚಾರ ಇಲ್ಲಿದೆ.*

ಸ್ವಧರ್ಮ ರಕ್ಷಣೆ, ಪರಧರ್ಮ ಸಹಿಷ್ಣುತೆಯ ದೃಷ್ಟಿಯಿಂದ ವಿವಿಧ ಮತಧರ್ಮದವರು ಮಠಗಳನ್ನು ಸ್ಥಾಪಿಸುವುದರ ಮೂಲಕ ಸಮಾಜದ ಸಮನ್ವಯತೆಯನ್ನು ಸಾಧಿಸಿದ್ದಾರೆ. ಇದಕ್ಕೆ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿರುವ ಜೈನ, ವೈಷ್ಣವ ಹಾಗೂ ವೀರಶೈವ ಮಠಗಳು ನಿದರ್ಶನವಾಗಿವೆ. ಇವುಗಳ ಮಾದರಿಯಲ್ಲಿ ಶೈವಾರಾಧಕರಾದ ಹಾಲುಮತ (ಕುರುಬ) ಸಮಾಜದವರು ರೇವಣಸಿದ್ಧೇಶ್ವರ, ಸಿದ್ಧರಾಮೇಶ್ವರ, ಅಮೋಘಸಿದ್ಧೇಶ್ವರ, ಸಿದ್ಧೇಶ್ವರ, ಕರಿಸಿದ್ಧೇಶ್ವರ, ಬೀರೇಶ್ವರ ಮೊದಲಾದ ತಮ್ಮ ಧಾರ್ಮಿಕ ಗುರುಗಳ, ನಾಯಕರ ಹೆಸರಿನಲ್ಲಿ ಮಠಗಳನ್ನು ಸ್ಥಾಪಿಸಿರುವರು.

ಕರ್ನಾಟಕದ ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ರೇವಣಸಿದ್ಧೇಶ್ವರನದು ಪ್ರಸಿದ್ಧ ಹೆಸರು. ವಿಶೇಷವಾಗಿ ಕುರುಬ ಮತ್ತು ಲಿಂಗಾಯತ ಸಮಾಜಗಳೆರಡಕ್ಕೂ ಈತ ಪೂಜನೀಯ ವ್ಯಕ್ತಿಯಾಗಿದ್ದಾನೆ. ಕುರುಬರ ಗುರುಪರಂಪರೆಯಲ್ಲಿಯಂತೂ ಈತನಿಗೆ ಮೊದಲ ಪ್ರಾಶಸ್ತ್ಯ. ಲಿಖಿತ ಮತ್ತು ಮೌಖಿಕ ಸಾಮಗ್ರಿಗಳಲ್ಲಿ ಈತನ ಕುರಿತು ಸಾಕಷ್ಟು ಮಾಹಿತಿಗಳು ಲಭ್ಯವಿವೆ. ಅಷ್ಟೇ ಏಕೆ ಮೌಖಿಕ ಸಾಮಗ್ರಿಗಳನ್ನಷ್ಟೇ ಇಟ್ಟುಕೊಂಡು ರೇವಣಸಿದ್ಧನ ಬಗ್ಗೆ ಸ್ವತಂತ್ರ ಅಧ್ಯಯನ ಕೈಗೊಳ್ಳಬಹುದು. ಶಾಸನ, ಕಾವ್ಯ ಮತ್ತು ಮೌಖಿಕ ಆಕರಗಳನ್ನಾಧರಿಸಿ ಹೇಳುವುದಾದರೆ ಆಂಧ್ರದ ಮಠಮಾನ್ಯ ಇತ್ಯಾದಿ ಸ್ಮಾರಕಗಳು ಸಾಕಷ್ಟು ಪುರಾವೆಗಳನ್ನು ಒದಗಿಸುತ್ತವೆ. ಸೊನ್ನಲಾಪುರಕ್ಕೆ ಬಂದು ಸಿದ್ಧರಾಮನಿಗೆ ದೀಕ್ಷೆ ನೀಡಿದ್ದು, ಕಲ್ಯಾಣಕ್ಕೆ ಬಂದು ಬಸವಾದಿ ಪ್ರಮಥರೊಡನೆ ವೈಚಾರಿಕ ಕ್ರಾಂತಿಯಲ್ಲಿ ಭಾಗವಹಿಸಿದ್ದು, ಶಾಂತಮುತ್ತಯ್ಯನೆಂಬ ಶಿಷ್ಯನಿಗೆ ಗುರುಪಟ್ಟ ಕಟ್ಟಿ ಹಾಲುಮತ ಸಮಾಜದ ನಾಯಕತ್ವವನ್ನು ವಹಿಸಿಕೊಂಡು ಅವರಿಗೆ ಸಾಮಾಜಿಕ ಸ್ಥಾನಮಾನ ತಂದುಕೊಡಲು ಹೋರಾಡಿದ್ದು ಇತ್ಯಾದಿ ಘಟನೆಗಳು ಆತನ ಕಾರ್ಯವ್ಯಾಪ್ತಿಯನ್ನು ತಿಳಿಸುತ್ತವೆ. ೧೧ನೆಯ ಶತಮಾನದ ಕೊನೆಯ ದಶಕದಲ್ಲಿ ಹುಟ್ಟಿ, ೧೨ನೆಯ ಶತಮಾನದ ಕೊನೆಯ ದಶಕದವರೆಗೂ ರೇವಣಸಿದ್ಧ ದೀರ್ಘಾಯುಶಿಯಾಗಿ ಬದುಕಿರಬಹುದಾದ ಸಾಧ್ಯತೆಯಿದೆ.[೧] ಪ್ರಸ್ತುತ ಸಂಪ್ರಬಂಧದಲ್ಲಿ ಹಾಲುಮತ ಗುರುಪರಂಪರೆ, ರೇವಣಸಿದ್ಧ ಸಂಪ್ರದಾಯದ ಹಾಲುಮತ ಮಠಗಳ ಭೌಗೋಳಿಕ ವ್ಯಾಪ್ತಿ, ಮಠಾಧಿಪತಿಗಳ ಆಚರಣೆಗಳು, ಅವರ ಸಾಮಾಜಿಕ ಸೇವೆ, ಮಠ ಮಠಾಧಿಪತಿಗಳ ಇಂದಿನ ಸ್ಥಿತಿಗತಿ ಇತ್ಯಾದಿ ಸಂಗತಿಗಳನ್ನು ಚರ್ಚಿಸುವುದು ಮುಖ್ಯ ಉದ್ದೇಶ.

**ಹಾಲುಮತ ಗುರುಪರಂಪರೆ**

ಕುರುಬರ ಗುರುಪರಂಪರೆಯಲ್ಲಿ ಮುಖ್ಯವಾಗಿ ಎರಡು ಸಂಪ್ರದಾಯಗಳಿವೆ. ಒಂದು ರೇವಣಸಿದ್ಧ ಸಂಪ್ರದಾಯ.

* ಪ್ರವಾಚಕರು, ಹಂಪಿ ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ-೫೮೩ ೨೭೬

ಇನ್ನೊಂದು ಸಿದ್ಧರಾಮ ಸಂಪ್ರದಾಯ. ರೇವಣಸಿದ್ಧನ ಶಿಷ್ಯ ಶಾಂತ ಮುತ್ತಯ್ಯ. ಈತನ ಅನುಯಾಯಿಗಳನ್ನು ಶಾಂತೊಡೆಯರೆಂದು ಕರೆಯುತ್ತಾರೆ. ಇನ್ನು ಶಿವಯೋಗಿ ಸಿದ್ಧರಾಮಯ್ಯನ ಶಿಷ್ಯ ಸಿದ್ಧಮಂಕ. ಈತನ ಅನುಯಾಯಿಗಳನ್ನು ಮಂಕೊಡೆಯರೆನ್ನುತ್ತಾರೆ. ಈ ಪರಂಪರೆಯನ್ನು ಹೀಗೆ ಗುರುತಿಸಬಹುದು.




ಈ ಸಂಪ್ರದಾಯಗಳ ದ್ಯೋತಕವಾಗಿ ಕರ್ನಾಟಕದಾದ್ಯಂತ ರೇವಣಸಿದ್ಧ ಮತ್ತು ಸಿದ್ಧರಾಮೇಶ್ವರರ ಹೆಸರಿನಲ್ಲಿ ಮಠಮಾನ್ಯಗಳು, ದೇವಾಲಯಗಳು ಸ್ಥಾಪಿತಗೊಂಡಿವೆ.[೨] ರೇವಣಸಿದ್ಧ ಸಂಪ್ರದಾಯದ ಶಾಂತಮುತ್ತಯ್ಯನಿಗೆ ಕುರುಬ ಸಮಾಜದಲ್ಲಿ ವಿಶೇಷ ಗೌರವವಿದೆ. ಈ ಸಂಪ್ರದಾಯದ ಒಡೆಯರನ್ನು ಶಾಂತೊಡೆಯರು ಎಂದು ಕರೆಯುತ್ತಾರೆ. ರೇವಣಸಿದ್ಧೇಶ್ವರ ಮಠ, ದೇವಾಲಯಗಳ ಪೂಜಾರಿಗಳಾಗಿ, ಹಾಲುಮತ ಸಮಾಜದ ಗುರುಗಳಾಗಿ ಇವರು ಕಾರ್ಯನಿರ್ವಹಿಸುತ್ತಾರೆ. ಶಾಂತಮಯ ಮುತ್ತಯ್ಯ, ಶಾಂತಿಮಯ್ಯ, ಶಾಂತಯ್ಯ, ಸಾತಿಮಯ್ಯ ಎಂದು ಕಾವ್ಯ ಶಾಸನಗಳಲ್ಲಿ ಕರೆಯಲ್ಪಟ್ಟ ಈತ ರೇವಣಸಿದ್ಧೇಶ್ವರನ ಪರಮಭಕ್ತನಾಗಿದ್ದರಿಂದ ಕುರುಬರ ಗುರುಪರಂಪರೆಯಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿದ್ದಾನೆ.[೩] ರೇವಣಸಿದ್ಧ ತನ್ನ ನಂತರದಲ್ಲಿ ಗುರುಸ್ಥಾನವನ್ನು ಶಾಂತಮುತ್ತಯ್ಯನಿಗೆ ವಹಿಸಿದಂತಿದೆ. ಇತ್ತೀಚೆಗೆ ತುರುವೇಕೆರೆಯಲ್ಲಿ ದೊರೆತ ತಾಮ್ರ ಶಾಸನದಲ್ಲಿ ಶಾಂತಮುತ್ತಯ್ಯನ ಸೋದರರಾದ ಸೋವಿಮುತ್ತ ಮತ್ತು ಸಾಯಿಮುತ್ತಯ್ಯಗಳಿಗೂ ರೇವಣಸಿದ್ಧೇಶ್ವರನ ಶಿಷ್ಯಪಟ್ಟವನ್ನು ವಹಿಸಿಕೊಟ್ಟ ಬಗೆಗೆ ನಿರೂಪಿಸಲಾಗಿದೆ.

ಇದಕ್ಕೆ ಪೂರಕವೆಂಬಂತೆ ತಗರ ಪವಾಡ ಕೃತಿಯು ನಮಗೆ ಅಪೂರ್ವವಾದ ಮಾಹಿತಿಯನ್ನು ಒದಗಿಸುತ್ತದೆ.[೪] ಶಾಂತಮುತ್ತಯ್ಯನಿಗೆ ಲಿಂಗದೀಕ್ಷೆ ನೀಡಿದ್ದು, ಆತ ಸತ್ತ ಕುರಿಯನ್ನು ಬದುಕಿಸಿದ ಮತ್ತು ಕಲ್ಯಾಣದಿಂದ ಹೊರಹೋಗಿದ್ದ ಕುರುಬರನ್ನು ಒಳಗೆ ಕರೆದುಕೊಂಡ ವಿಷಯವನ್ನು ಈ ಕೃತಿ ನಿರೂಪಿಸುತ್ತದೆ. ಕಲ್ಯಾಣದಲ್ಲಿ ಕಿನ್ನರಿ ಬೊಮ್ಮಯ್ಯನ ಲಿಂಗಮುದ್ರೆ ಒತ್ತಿದ ತಗರು ದಿನಗಳೆದಂತೆ ಮದವೇರಿ ಜನರಿಗೆ ಇರಿಯಲು, ಲಿಂಗದ ಪೂಜೆಯನ್ನು ಕೆಡಿಸಲು ಆರಂಭಿಸುತ್ತದೆ. ಕಿನ್ನರಯ್ಯ ಇದನ್ನು ಸರೂರಿನ ಶಾಂತಯ್ಯನ ಕುರಿಹಿಂಡಿನಲ್ಲಿ ಬಿಡುತ್ತಾನೆ. ಒಮ್ಮೆ ಕಲ್ಯಾಣದಿಂದ ಕುರುಬರು ಸತ್ತ ಕುರಿಯನ್ನು ಪೇಟೆಯಲ್ಲಿ ಮಾರಿದ ಪ್ರಮಾದಕ್ಕಾಗಿ ರಾಜಧಾನಿಯಿಂದ ಹೊರಹಾಕಿಸಿಕೊಳ್ಳುತ್ತಾರೆ. ೧೨ ವರ್ಷಗಳ ಹೊರಗಿದ್ದ ಅವರು ಸರೂರಿಗೆ ಬಂದು ತಮಗೆ ಕಲ್ಯಾಣ ಪ್ರವೇಶ ಮಾಡಿಸಬೇಕೆಂದು ಬಿನ್ನವಿಸುವಷ್ಟರಲ್ಲಿ ಕಿನ್ನರಯ್ಯ ಬಿಟ್ಟು ಹೋಗಿದ್ದ ಕುರಿ ಸಾಯುತ್ತದೆ. ಅದನ್ನು ಶಾಂತಯ್ಯ ತೆಗೆದುಕೊಂಡು ಬಂದು ಕಲ್ಯಾಣ ಪ್ರವೇಶಿಸಲು, ಪ್ರಜೆಗಳು ತಡೆದು, ಇದನ್ನು ಬದುಕಿಸಲು ಆಹ್ವಾನ ಒಡ್ಡುತ್ತಾರೆ. ಈ ಸುದ್ದಿ ತಿಳಿದ ಬಿಜ್ಜಳ-ಪ್ರಜೆಗಳು, ಬಸವಣ್ಣ-ಶರಣರು ನೆರೆಯುತ್ತಾರೆ. ಬಸವಣ್ಣ ಶಾಂತಯ್ಯನ ಹಣೆಗೆ ವಿಭೂತಿ ಲೇಪಿಸಿ "ಮೇಷ ಪವಾಡವ ಮೆರೆಸಬೇಕು" ಎಂದು ನೈತಿಕ ಬೆಂಬಲ ನೀಡುತ್ತಾನೆ. ಶಾಂತಯ್ಯ ಭಸಿತವಿಟ್ಟು, ಪಾದೋದಕ ಸಿಂಪಡಿಸಲು ತಗರ ಜೀವ ಪಡೆಯುತ್ತದೆ. ಶರಣರ ಉತ್ಸಾಹ ಉಕ್ಕೇರುತ್ತದೆ. "ಬೇಕಾದುದನ್ನು ಬೇಡು" ಎಂದು ಬಸವಣ್ಣ ಕೇಳಲು "ನನಗೆ ಎಲ್ಲ ಭಾಗ್ಯವೂ ಇದೆ. ಈ ರಟ್ಟಕುಲದವರನ್ನು ಉದ್ಧರಿಸು" (೭-೩೩) ಎಂದು ಬಿನ್ನವಿಸಿಕೊಳ್ಳುತ್ತಾನೆ. ಬಸವಣ್ಣ ಕಲ್ಯಾಣದೊಳಗೆ ಕುರುಬರನ್ನು ಬರಮಾಡಿಕೊಂಡು ದಿಕ್ಕುದಿಕ್ಕಿನ ಕುರುಬರಿಗೆ ಉಡುಗೊರೆ ನೀಡಿ, ಭಸಿತವಿಟ್ಟು, "ಸುಖದಿಂದ ಇರಿ ಹಾಲುಮತದವರೆನಿಸಿ" ಎಂದು ಹರಸುತ್ತಾನೆ. "ಹಾಲುಮತದ ಕುಲದವರ್ಗೆಲ್ಲ ಶಾಂತಯ್ಯ........ ನೀನೆ ಗುರುವಾಗು" ಎಂದು ಘೋಷಿಸುತ್ತಾನೆ ಮತ್ತು ಗುರುತನದ ಕುರುಹಾಗಿ "ಮೂರೇಣಿನ ಕಂಥೆ" (೭-೪೫) ನೀಡುತ್ತಾನೆ.

ಶಾಂತಮುತ್ತಯ್ಯನಿಗೆ ಸಂಬಂಧಿಸಿದಂತೆ ಸಿರಿವಾಳ (೧೧೭೦, ೧೧೭೮), ಕೆಲ್ಲೂರ (೧೧೭೫), ಹೋತಗಲ್ಲ (೧೧೭೫), ಹಿರೇಬೇವಿನೂರು (೧೧೯೦) ತುರುವೇಕೆರೆ (೧೪೮೦) - ಹೀಗೆ ಆರು ಶಾಸನಗಳು ಸದ್ಯಕ್ಕೆ ಸಿಗುತ್ತವೆ. ಇಲ್ಲೆಲ್ಲ ಈತನನ್ನು ಶಿವಯೋಗಿ ಎಂದು ಕರೆಯಲಾಗಿದೆ. ತುರುವೇಕೆರೆ ಶಾಸನವಂತೂ ವಿಜಯನಗರದ ದೊರೆಗಳಾದ ವೀರಪ್ರತಾಪ, ರಾಮರಾಜೈಯ್ಯ, ಸದಾಶಿವರಾಯ, ವೆಂಕಟಾದ್ರಿರಾಜ ಇವರ ಸಮ್ಮುಖದಲ್ಲಿ, ವಿವಿಧ ಸ್ವಾಮೀಜಿಗಳ, ಹಿರಿಯರುಗಳ ನೇತೃತ್ವದಲ್ಲಿ ನಡೆದ ಹಾಲುಮತದ ಕುರುಬರಿಗೆ ಗುರುಗಳಾರು ಎಂಬ ವಾದ ವಿವಾದವನ್ನು ದೀರ್ಘವಾಗಿ ತಿಳಿಸುತ್ತದೆ.[೫] ಈ ವಾದದಲ್ಲಿ ಶಾಂತಮುತ್ತಯ್ಯನವರು ಗೆದ್ದು ಮಂಕನವರನ್ನು ಸೆರೆಹಾಕಿಸಿದ ಪ್ರಸ್ತಾಪ ಬಂದಿದೆ. ಕೊನೆಗೆ "ಹಾಲುಮತದ ಕುರುಬ ಕುಲಕೆ ಶಾಂತಮುತ್ತೈಯ್ಯನವರೆ ಗುರುಗಳು ಮಂಕನಾದರೆ ಗುರುತನಕೆ ಕಾರಣವಿಲ್ಲ" ಎಂದು ಸಭೆ ತೀರ್ಮಾನಿಸುವ ವಿವರವೂ ಇಲ್ಲಿದೆ.

ಶಾಂತಮುತ್ತಯ್ಯನ ಕಾರ್ಯಕ್ಷೇತ್ರ ಸರೂರು. ಅಲ್ಲಿ ಈಗಲೂ ಶಾಂತಮುತ್ತಯ್ಯ ಪವಾಡ ಮೆರೆದುದನ್ನು ಜನ ಹೇಳುತ್ತಾರೆ. ಮೇಲಾಗಿ ಆತನ ಸ್ಮಾರಕವಾಗಿ ಗದ್ದುಗೆಯೊಂದು ರೇವಣಸಿದ್ಧೇಶ್ವರ (ಮಲ್ಲಿಕಾರ್ಜುನ) ದೇವಸ್ಥಾನದ ಪಕ್ಕದ ಗುಡ್ಡದಲ್ಲಿರುವುದನ್ನು ಈಗಲೂ ಕಾಣಬಹುದು. ಕುರುಬ ಸಮಾಜದ ಒಡೆಯರ ಮನೆತನಗಳು ಅಧಿಕ ಪ್ರಮಾಣದಲ್ಲಿರುವುದು, ಇವರ ಒಡೆತನದಲ್ಲಿ



**ಶಾಂತಮುತ್ತಯ್ಯನ ಗದ್ದುಗೆ, ಸರೂರು**

ಟಗರ ಪವಾಡ ಹೆಸರಿನ ಹಸ್ತಪ್ರತಿಯನ್ನೊಳಗೊಂಡ ಸುರುಳಿಯಾಕಾರದ ದಾಖಲೆಯಿರುವುದು.[೬] ಸರೂರು ಸಂಪ್ರದಾಯ ಎಂಬ ಪ್ರಸಿದ್ಧ ಗೋತ್ರವು ಕುರುಬರಲ್ಲಿರುವುದು ಗಮನಿಸಬೇಕಾದ ಸಂಗತಿಗಳಾಗಿವೆ. ಇದರಿಂದಾಗಿ ಸರೂರು ಕುರುಬರ ಸಂಸ್ಕೃತಿ ದೃಷ್ಟಿಯಿಂದ ತುಂಬ ಪ್ರಮುಖವಾದ ನೆಲೆಯಾಗಿದೆ.

ಸಿದ್ಧೇಶ್ವರನ ಅನುಯಾಯಿಯಾದ ಸಿದ್ಧಮಂಕನನ್ನು ಮಂಕತಂದೆ, ಮರಳು ಮಂಕ, ಮಂಕಯ್ಯ, ಮಂಕಯ ಎಂದು ಕಾವ್ಯ ಶಾಸನಗಳಲ್ಲಿ ಕರೆಯಲಾಗಿದೆ. ಸಿದ್ಧಮಂಕ ಚರಿತೆ, ಈತನ ಚಾರಿತ್ರಿಕ ಸಂಗತಿಗಳನ್ನು ದಾಖಲಿಸುವ ಏಕೈಕ ಕೃತಿ. ಹೀಗಾಗಿ ಸದ್ಯದಮಟ್ಟಿಗೆ ಈತನನ್ನು ಅಭ್ಯಾಸ ಮಾಡಲು ಏಕೈಕ ಆಕರ ಇದಾಗಿದೆ. 'ಸಿದ್ಧಮಂಕನು ಸರವೂರದೊಳು ತಪವಿದ್ದು, ಸಿದ್ಧಿಯ ಪಡೆದ ಕಥನ' (೧-೧೬)ವೆಂಬುದನ್ನು ಕೃತಿಯ ಆರಂಭದಲ್ಲಿ ಕವಿ ಸ್ಪಷ್ಟಪಡಿಸಿದ್ದಾನೆ. ಆದ್ದರಿಂದ ಇಲ್ಲಿ ಸಿದ್ಧಮಂಕನೆ ಕಥಾನಾಯಕ. ಸತ್ತ ಕುರಿಗಾಗಿ ಕಲ್ಯಾಣದಿಂದ ಹೊರ ಹಾಕಿಸಲ್ಪಟ್ಟಿದ್ದ ಕುರುಬರನ್ನು ಒಳಗೆ ಕರೆದುಕೊಂಡ ವಿವರಗಳು ಇಲ್ಲಿವೆ. ಸಿದ್ಧೇಶ್ವರನು ಕುರುಬರಿಗೆಲ್ಲ ಮಂಕತಂದೆಯೆ ಗುರುವೆಂದು ಹರಸಿದನು. ಅದರಂತೆ ಕುರುಬರ ಮುಖ್ಯಸ್ಥರಲ್ಲಿ ಒಬ್ಬನಾದ ಹೆಗ್ಗಗೌಡನು "ತನಗೆ ಮಂಕತಂದೆ ಗುರು, ಸಿದ್ಧರಾಮ ಪರಮಗುರು" ಎಂದು ಹೇಳಿದನು. ಇಲ್ಲಿಂದ ಸಿದ್ಧಮಂಕನು ಕುರುಬ ಕುಲಕ್ಕೆ ಗುರುವಾದುದನ್ನು ಈ ಕೃತಿ ತಿಳಿಸಿಕೊಡುತ್ತದೆ. ಇಲ್ಲಿ ಬರುವ ಹೆಗ್ಗಗೌಡನನ್ನು "ಕುರುಬ ಲಿಂಗವಂತ" (೪-೯೩)ನೆಂದೇ ಕರೆಯಲಾಗಿದೆ.[೭] ಸರೂರಿನ ರೇವಣಸಿದ್ಧೇಶ್ವರ ದೇವಾಲಯದಲ್ಲಿ ಕ್ರಿ.ಶ. ೧೨೦೮ ಮತ್ತು ಕ್ರಿ.ಶ. ೧೨೧೧ನೆಯ ಕಾಲದ ಎರಡು ಶಾಸನಗಳು ಲಭ್ಯವಾಗಿವೆ. ಒಂದನೆಯ ಶಾಸನದಲ್ಲಿರುವ "ಮಂಕಯಂಗಳಿಗೆ ಮಲ್ಲಿನಾಥ ರಾಮವಂಬನು ಸಂನಿಧಾನದಲು" ಎಂಬ ವಾಕ್ಯ, ಎರಡನೆಯ ಶಾಸನದಲ್ಲಿರುವ "ಅರಸನಹಳ್ಳಿಯ ವೀರನಗೌಡರ ಕೈಯಲು ಮಂಕಯ್ಯನು ಹೊಂನ ಕೊಟ್ಟು ಆ ಹೊಲದೊಲು" ಮತ್ತು "ಹೊನಗುಂದದ ಬೀಚಗುರು ತಂನ ಮಗ ಮಂಕಯನ ಕಾಲದಾ ಗುರುವಿಗೆ ಮಂಕಯನು ಮಲ್ಲಿನಾಥದೇವರ ಸ್ತಾನವ ಧಾರಾಪೂರ್ವಕ ಮಾಡಿಕೊಟ್ಟರು" ಎಂಬ ವಾಕ್ಯಗಳು ಕಾವ್ಯೋಕ್ತ ಮಂಕಯ್ಯನನ್ನು ನೆನಪಿಸುತ್ತವೆ.[೭]

ಈ ಸಂಪ್ರದಾಯವನ್ನು ಬೆಂಬಲಿಸುವಂತೆ ಮುದ್ದೇಬಿಹಾಳ ತಾಲೂಕಿನ ಸರೂರು ಮತ್ತು ತುಮಕೂರು ಜಿಲ್ಲೆಯ ಚಿಕ್ಕನಾಯಕನ ಹಳ್ಳಿಯಲ್ಲಿ "ಮಂಕೊಡೆಯರು" ಎಂದು ಕರೆಯಿಸಿಕೊಳ್ಳುವ ಒಡೆಯರ ಮನೆತನಗಳಿವೆ. ಸೊನ್ನಲಾಪುರದ ಸಿದ್ಧೇಶ್ವರನ ಪರಮ ಭಕ್ತರಾದ ಇವರು ಲಿಂಗಾಯತ ಜಂಗಮರಂತೆ ಕಂಡುಬರುತ್ತಾರೆ. ಸಿದ್ಧೇಶ್ವರ, ಕರಿಸಿದ್ಧೇಶ್ವರನ ದೇವಸ್ಥಾನಗಳು ಎಲ್ಲಿರುತ್ತವೆಯೋ ಅಲ್ಲಿ ಮಾತ್ರ ಇವರು ಕಂಡುಬರುತ್ತಾರೆ. ಹೀಗಾಗಿ ಶಾಂತೊಡೆಯರಿಗೆ ಹೋಲಿಸಿದರೆ ಇವರ ಸಂಖ್ಯೆ ತುಂಬ ಕಡಿಮೆ. ಕುರುಬ ಸಮಾಜದ ಉಪಪಂಗಡವಾದ ಸಾದುಗುರುಬರಿಗೆ ಗುರುಗಳಾಗಿ ಅವರ ಎಲ್ಲ ಧಾರ್ಮಿಕ ಕಾರ್ಯಗಳನ್ನು ನಡೆಸಿಕೊಡು ತ್ತಾರೆ. ಆದರೆ ಇವರೊಂದಿಗೆ ಇತರೆ ಕುರುಬರು ರಕ್ತಸಂಬಂಧವನ್ನು ಬೆಳೆಸುವುದಿಲ್ಲ.

**ಮಠಗಳ ಭೌಗೋಳಿಕ ವ್ಯಾಪ್ತಿ :** ರೇವಣಸಿದ್ಧ ಸಂಪ್ರದಾಯದ ಹಾಲುಮತ ಮಠಗಳ ಭೌಗೋಳಿಕ ವ್ಯಾಪ್ತಿ ಕರ್ನಾಟಕ ದಾದ್ಯಂತ ವಿಸ್ತಾರಗೊಂಡಿದೆ. **"ನಾಗಾಳೊನ್ನೀಗೆ ಆದಾವು ಗುರು ಮಟ । ನ್ಯಾಯಗಾರರು ಕುರುಬರು। ನ್ಯಾಯಗಾರರು ಕುರುಬರ ಕೇರ್‍ಯಾಗ। ಆದವು ರೇವಣ್ಣರ ಗುರುಮಟ॥"** ಎಂಬ ಜನಪದ ಹಾಡೊಂದನ್ನು[೮] ಗಮನಿಸಿದರೆ ಸಾಮಾನ್ಯವಾಗಿ ಕುರುಬರ ಕೇರಿಗಳಿದ್ದ ಕಡೆ ರೇವಣಸಿದ್ಧೇಶ್ವರ ಮಠಗಳು ಕಂಡುಬರುತ್ತವೆ. ಈ ಪರಂಪರೆಯ ಮಠಗಳ ಜಿಲ್ಲಾವಾರು ಊರುಗಳ ಹೆಸರುಗಳು ಹೀಗಿವೆ.

ಬಳ್ಳಾರಿ : ಗಾದಿಗನೂರು, ಓಬಳಾಪುರ, ವಿಠಲಾಪುರ, ಬಳ್ಳಾರಿ.

ಕೊಪ್ಪಳ : ಚಿಕ್ಕಸಿಂಧೋಗಿ, ಕೊಪ್ಪಳ, ಬಸವಾಪಟ್ಟಣ.

ತುಮಕೂರು : ಚಿಕ್ಕನಾಯಕನಹಳ್ಳಿ, ತುರಿವೇಕೆರೆ, ಶಿರಾ, ಎಳನಾಡು, ಪಟ್ನನಾಯಕನಹಳ್ಳಿ, ಹೊನ್ನುಡಿಕೆ, ಮೂಗನಾಯಕನ ಕೋಟೆ, ಗಂಗನಹಳ್ಳಿ, ಹಂದನಕೆರೆ, ಹಾಗಲವಾಡಿ, ಹೊನ್ನವಳ್ಳಿ, ಕಂದಿಕೆರೆ,

ರಾಯಚೂರು : ಗಬ್ಬೂರು, ಸಿಂಧನೂರು.

ಚಿತ್ರದುರ್ಗ : ಬೂದಿಹಾಳು, ಬಿಳಿಚೋಡು, ಹೊಸದುರ್ಗ, ಹರ್ತಿಕೋಟೆ, ದೊಡ್ಡೇರಿ, ಕಡದರಹಳ್ಳಿ, ಗೂಳಿಹಳ್ಳಿ, ನಗರಗೆರೆ, ಕಾರೇಹಳ್ಳಿ, ಹಿರಿಯೂರು, ಬಾಗೂರು, ಸೊಲ್ಲಾಪುರ, ತುರುವನೂರು,

| | |
|---|---|
| | ಕುರುಬರಹಟ್ಟಿ, ಚಿಕ್ಕಹಳ್ಳಿ, ರಂಗವನಹಳ್ಳಿ, ಕಣಜನಹಳ್ಳಿ, ತಾಳಿಕಟ್ಟೆ, ಹುಳಿಯಾರು. |
| ಹಾವೇರಿ : | ಬಂಕಾಪುರ. |
| ಗದಗ : | ಡಂಬಳ. ಚಿಕ್ಕನರಗುಂದ. |
| ಧಾರವಾಡ : | ಮನಸೂರು. |
| ಬಿಜಾಪುರ : | ಸರೂರು, ಉಮ್ರಜ, ಇಂಗಳೇಶ್ವರ, ಮನಗೂಳಿ, ತೂಗುಡ್ಡ. |
| ಬಾಗಲಕೋಟೆ : | ಹಿರೇನಸಿಬಿ. |
| ಬೆಳಗಾವಿ : | ಸಂಗ್ರೇಶಿಕೊಪ್ಪ, ಹಿರೇಕುಮ್ಮಿ, ಬೆಂಡವಾಡ. |
| ದಾವಣಗೆರೆ : | ಅಲ್ಲೀಪುರ ಇಟ್ಟಿಗುಡಿ. |
| ಬೆಂಗಳೂರು : | ರಾಜಾಪುರ, ನಾಗಮಂಗಲ, ಕೈಲಂಚ, ಶಿವಗಂಗೆ ಬೆಟ್ಟದ ಮೇಗಳಗವಿ ಮಠ. |
| ಹಾಸನ : | ಕಂಕೆರೆ, ಸಂತೆಶಿವರ, ಹಣತಿಕೋಡಿಹಳ್ಳಿ, ಬಾಣಾವರ. |
| ಚಿಕ್ಕಮಗಳೂರು : | ತರಿಕೆರೆ. |

ಮೇಲಿನ ಊರುಗಳನ್ನು ಗಮನಿಸಿದಾಗ ಈ ಸಂಪ್ರದಾಯದ ಮಠಗಳು ವಿಶೇಷವಾಗಿ ಮಧ್ಯಕರ್ನಾಟಕದ ತುಮಕೂರು, ಚಿತ್ರದುರ್ಗ ಜಿಲ್ಲೆಗಳಲ್ಲಿ ಅಧಿಕ ಸಂಖ್ಯೆಯಲ್ಲಿರುವುದು ಸ್ಪಷ್ಟವಾಗುತ್ತದೆ.[೯]

ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕಿನ ಸರೂರು ಗ್ರಾಮದಲ್ಲಿ ರೇವಣಸಿದ್ದೇಶ್ವರನ ಮಠ, ಶಾಂತಮುತ್ತಯ್ಯನ



ಶ್ರೀ ರೇವಣಸಿದ್ಧೇಶ್ವರ ಮಠ

ಗದ್ದುಗೆಗಳಿವೆ. ಕರ್ನಾಟಕದ ಎಲ್ಲ ರೇವಣಸಿದ್ದೇಶ್ವರ ಮಠಗಳಿಗೆ ಇದು ಮೂಲಮಠ. ಹಾಲುಮತ ಜಗದ್ಗುರು ಶ್ರೀ ರೇವಣಸಿದ್ಧೇಶ್ವರ ಜಾತ್ರೆ, ಉತ್ಸವಗಳು ಪ್ರತಿವರ್ಷ ಯುಗಾದಿ ಹಬ್ಬದಂದು ವಿಜೃಂಭಣೆಯಿಂದ ಜರುಗುತ್ತವೆ. ರೇವಣಸಿದ್ಧೇಶ್ವರ ಪಲ್ಲಕ್ಕಿ ಉತ್ಸವ, ಶಿವಭಜನೆ, ಕಳಸದ ಮೆರವಣಿಗೆ, ಶಿವವಾಣಿ (ಹೇಳಿಕೆಗಳು) ಮುಂತಾದ ಆಚರಣೆಗಳು ಜರುಗುತ್ತವೆ. ಜೊತೆಗೆ ಡೊಳ್ಳು ಕುಣಿತ, ಕಬ್ಬಡ್ಡಿ, ಕುಸ್ತಿ ಪಂದ್ಯಾವಳಿಗಳು ಚಾಚು ತಪ್ಪದೆ ನಡೆದುಕೊಂಡು ಬರುತ್ತಿವೆ. ಈ ಎಲ್ಲ ಕಾರ್ಯಕ್ರಮಗಳು ಮಠದ ಪೀಠಾಧಿಪತಿಗಳಾದ ವೇದಮೂರ್ತಿ ಶ್ರೀ ಸಿದ್ಧಯ್ಯ ಗುರುವಿನ ಹಾಗೂ ಶ್ರೀ ಕಾಡಯ್ಯ ಅವರ ಸಾನಿಧ್ಯದಲ್ಲಿ ನಡೆಯುತ್ತವೆ. ಜಾತ್ರಾ ಸಂದರ್ಭದಲ್ಲಿ ನೆರೆದ ಭಕ್ತಾದಿಗಳ ಸಮ್ಮುಖದಲ್ಲಿ ಒಡೆಯರು ಹೇಳುವ ಹೇಳಿಕೆಗಳು ತುಂಬಾ ಪರಿಣಾಮಕಾರಿಯಾಗಿರುತ್ತವೆ. **"ಪುಂಡಿಯ ಕಟ್ಟಿಗ್ಯಾಗ ಕೆಂಡವ ಒಗೆದ್ಹಾಂಗ ಪುಂಡ ಸರೂರ ಒಡೆಯರಾ ಹೇಳಿದ ಮಾತು ಬಂಡೀಗಿ ಕೀಲು ಜಡಿದ್ಹಾಂಗ"** ಎಂಬ ಮಾತನ್ನ ಗಮನಿಸಿದರೆ ಈ ಹೇಳಿಕೆಗಳ ಮಹತ್ವ ಗೊತ್ತಾಗುತ್ತದೆ. ಆಯಾ ವರ್ಷದ ಮಳೆಬೆಳೆ, ರೈತರ ಸುಖ ದುಃಖ, ಲೋಕೋದ್ಧಾರ ಕುರಿತಂತೆ ಒಗಟಿನ ಮೂಲಕ ಹೇಳುವ ಈ ಹೇಳಿಕೆಗಳನ್ನು ಸಂಗ್ರಹಿಸಿ ಅಧ್ಯಯನ ಮಾಡಿದರೆ ಹೊಸ ಸಂಗತಿಗಳು ಹೊರಬರುವ ಸಾಧ್ಯತೆಗಳಿವೆ. ಉದಾಹರಣೆಗೆ **"ಆನಿಗಡತರ ಮೋಡ ಒಂಟಗಡತರ ಹುಲ್ಲು ಆಡಮರಿ ಕುಡಿಯಲಿಕ್ಕೆ ನೀರಿಲ್ಲ"** ಎಂಬ ಹೇಳಿಕೆ ಬರಗಾಲವನ್ನು ಸೂಚಿಸುತ್ತದೆ. **"ಬಂಡಿ ತುಂಬ ಅನ್ನ, ಗಿಂಡಿ ತುಂಬ ನೀರು ಕೊಟ್ಟ ಒಕ್ಕಲಿಗ್ಯಾ ಮಗನ್ನ ಸಲುವೀನಿ"** ಎಂಬ ಹೇಳಿಕೆಯಂತೂ ಕಾಲುವೆಗಳ ಮುಖಾಂತರ ವೇಳೆಯನ್ನು ನಿರ್ದಿಷ್ಟಪಡಿಸಿಕೊಂಡೇ ನೀರು ಪಡೆದು ತುಂಬಾ ಇಳುವರಿಯನ್ನು ಪಡೆಯುವ ಇಂದಿನ ಆಧುನಿಕ ನೀರಾವರಿ ಪದ್ಧತಿಯ ಪರಿಣಾಮವನ್ನು ಚಿತ್ರಿಸುವಂತಿದೆ.[೧೦]

ಬಾಣಾವರದ ಮಠವನ್ನು ಶ್ರೀ ಜಗದ್ಗುರು ಸರೂರ ಶಾಂತ ಮುತ್ತಂ ಶಾಖಾ ಬಾಣಾವರ ಹೊಸಂಬತ್ತು ಗಡಿಮಠ ಎನ್ನುತ್ತಾರೆ. ಎಂ.ಜಿ. ನಾಗರಾಜ ಅವರು ಹೇಳುವಂತೆ "ಶಿಷ್ಯವರ್ಗದ ಸ್ವತಂತ್ರ ಪಟ್ಟದ ಮಠವಾಗಿದೆ. ಹಾಲುಮತದ ಒಡೆಯರೆನಿಸಿದ ಇಷ್ಟಲಿಂಗ ಧಾರಿ ಗುರುಗಳಿಲ್ಲಿದ್ದಾರೆ. ಕರ್ನಾಟಕ, ಆಂಧ್ರ, ಕೇರಳ ಹಾಗೂ ತಮಿಳುನಾಡುಗಳಲ್ಲಿ ಇದರ ಸೋದರ ಶಾಖಾಮಠಗಳಿವೆ. ಇಂದೂರಿನ ರಾಜವಂಶಕ್ಕೆ ಈ ಮಠದವರು ರಾಜಗುರುಗಳು. ಮೈಸೂರು ಜಿಲ್ಲೆಯ ಗಡಿಮಠವಾಗಿ ಒಂದು ಕಾಲಕ್ಕೆ ೯ ಜಿಲ್ಲಾ ಗಡಿಗಳಿಗೆ ರಹದಾರಿ ನೀಡುವ ಕಾಯಕ ಈ ಮಠಕ್ಕೆ ಇದ್ದ ಕಾರಣ ಹೊಸಂಭತ್ತು ಗಡಿಮಠವೆನಿಸಿತು. ಈ ಮಠದಲ್ಲಿ ರೇವಣ, ರೇಣುಕ, ಸಿದ್ಧರಾಮ, ಬಸವ, ಪ್ರಭುದೇವ ಮತ್ತು ರುದ್ರದೇವರ ಹೆಸರಲ್ಲಿ ಏಕಪೀಠಸ್ಥ ಪಂಚಲಿಂಗ ಗದ್ದುಗೆಗಳಿವೆ. ವೀರಭದ್ರ ಹಲಗೆಯೂ ಇದೆ. ೧೨ ವರ್ಷಕ್ಕೊಮ್ಮೆ ಲಿಂಗದ ಕಂತೆ, ರುದ್ರನ ಹಲಗೆ ಇಟ್ಟು ಜಾತ್ರೆ ನಡೆಸುತ್ತಾರೆ. ಮಠದಿಂದ ಇಷ್ಟಲಿಂಗದೀಕ್ಷೆ ಪಡೆದ ಮಠದ ಶಿಷ್ಯರಿಗೆ ಆ ಸಮಯದಲ್ಲಿ ಮುಳ್ಳುಪಲ್ಲಕ್ಕಿಯ ಮೇಲೆ ಮಲಗುವ ದಳವಾಯಿಕೆ ಪಟ್ಟ, ಕತ್ತಿಯ ಮೇಲೆ ಮಲಗುವ ಹಲಗೆ ದಳವಾಯಿಕೆ ಪಟ್ಟ, ಬೀರದೇವರ ಪೂಜಾರಿಕೆ ಪಟ್ಟ, ಮೈಮೇಲೆ ಗಣಬರುವ ಈರಗಾರಿಕೆ ಪಟ್ಟ, ವಾರಕ್ಕೊಮ್ಮೆ ದೇವರ ಮನೆಯಲ್ಲಿ ಶುದ್ಧಮುದ್ರಿಕೆಯಲ್ಲಿ ಉಪವಾಸವಿದ್ದು ಬರುವ

ಒಂದೊತ್ತಿನ ಪಟ್ಟ, ಕತ್ತಿಯ ಮೇಲೆ ನಿಲ್ಲುವ ಕಟ್ಟಲಗೆ ಪಟ್ಟ, ಗೊರವಿಕೆ ಪಟ್ಟ, ದಾಸಯ್ಯಗಳ ಪಟ್ಟ ಇತ್ಯಾದಿ ಒಂಭತ್ತು ಪಟ್ಟಗಳನ್ನು ಬಹುಶಃ ವೀರಶೈವಾಚಾರಗಳ ಮತ್ತು ಗಡಿ ಅಧಿಕಾರ ಸಂಖ್ಯೆಯ ಸಂಕೇತವಾಗಿ ನೀಡುವ ರೂಢಿ ಈ ಮಠದಲ್ಲಿದೆ. ಗುರು ವಿರಕ್ತ ಸಮನ್ವಯ, ಹೆಣ್ಣಿಗೂ ಆದರವಿರುವ ಈ ಮಠದ ಮುಖ್ಯರು ಶ್ರೀ ಬಸವ ಒಡೆಯರ್ ಹಾಗೂ ಭೂದೇವಸ್ವಾಮಿ ಒಡೆಯರ್."೧೧

ಚಿಕ್ಕನಾಯಕನಹಳ್ಳಿಯ ರೇವಣಸಿದ್ಧೇಶ್ವರ ಮಠದ ಒಡೆಯರು ತಗರ ಪವಾಡ ಕೃತಿಯ ಹಸ್ತಪ್ರತಿಯನ್ನು ಬೆಳ್ಳಿಪಲ್ಲಕ್ಕಿಯಲ್ಲಿಟ್ಟು ಊರ ತುಂಬ ಮೆರವಣಿಗೆ ಮಾಡುವ ಪದ್ಧತಿ ಇಂದಿಗೂ ಪರಿಪಾಲಿಸಿಕೊಂಡು ಬರುತ್ತಿದ್ದಾರೆ. ತಲೆತಲಾಂತರದಿಂದ ಸಂರಕ್ಷಿಸಿಕೊಂಡು ಬಂದಿದ್ದ ಈ ಕೃತಿಯ ಹಸ್ತಪ್ರತಿಗಳನ್ನು ಸಂರಕ್ಷಿಸಿಕೊಂಡು ಬಂದವರು, ಚಿಕ್ಕನಾಯಕನಹಳ್ಳಿಯ ರೇವಪ್ಪಯ್ಯ ಒಡೆಯರ್ ಮತ್ತು ಹಾಗಲವಾಡಿಯ ಶ್ರೀ ಗಂಗೆಸಿದ್ಧಯ್ಯನವರು. ಸಾಮಾನ್ಯವಾಗಿ ಎಲ್ಲ ಒಡೆಯರು ಭಕ್ತರ ಮನೆಗೆ ಬಿನ್ನಕ್ಕೆ ಹೋದ ಸಂದರ್ಭದಲ್ಲಿ ಪೂಜಾ ವಿಧಿವಿಧಾನಗಳು ಮುಗಿದ ನಂತರ ಈ ಕೃತಿಯ ಆಯ್ದ ಭಾಗವನ್ನು ಓದಿ ಹೇಳುವುದು. ಒಂದು ಸಂಪ್ರದಾಯವಾಗಿದೆ. ಹೀಗಾಗಿ ತಗರ ಪವಾಡ ಗ್ರಂಥವು ಹಾಲುಮತಸ್ಥರಿಗೆ ಒಂದು ರೀತಿಯಲ್ಲಿ ಭಗವದ್ಗೀತೆಯಂತಿದೆ.

ಉತ್ತರ ಕರ್ನಾಟಕದಲ್ಲಿ ಈ ಸಂಪ್ರದಾಯದ ಮಠಗಳು ಇಲ್ಲವೆನ್ನುವಷ್ಟು ಕಡಿಮೆ. ಇಲ್ಲಿನ ಕುರುಬರ ಮೇಲೆ ಶಿವಶರಣರ ಪ್ರಭಾವ ದಟ್ಟವಾಗಿ ಬೀರಿರುವುದು. ಸಂಪ್ರದಾಯ ಹಾಗೂ ಆಚರಣೆಗಳಲ್ಲಿ ಕುರುಬರಿಗೂ ಲಿಂಗಾಯತರಿಗೂ ಪರಸ್ಪರ ಸಮಾನ ಅಂಶಗಳಿರುವುದು.೧೨ ಕುರುಬರ ಗುರುಗಳಾದ ಒಡೆಯರು ಇಲ್ಲಿ ಕಡಿಮೆ ಸಂಖ್ಯೆಯಲ್ಲಿರುವುದು. ಹೀಗಾಗಿ ಲಿಂಗಾಯತ ಜಂಗಮರ ಸಮ್ಮುಖದಲ್ಲಿಯೇ ಕುರುಬರ ಮದುವೆ, ಮರಣ ಇತ್ಯಾದಿ ಸಾಮಾಜಿಕ ಕಾರ್ಯಗಳನ್ನು ನಡೆಸುವುದು ಕಂಡುಬರುತ್ತದೆ. ಕೆಲವು ರೇವಣಸಿದ್ಧೇಶ್ವರ ಮಠಗಳಿಗೆ ಪರ್ಯಾಯವಾಗಿ ನಂಜುಂಡೇಶ್ವರ ಮಠ, ಕೆಂಡದಮಠ ಎಂದು ಕರೆಯಲಾಗುತ್ತದೆ. ಉದಾಹರಣೆಗೆ ಗಂಗಾವತಿ ತಾಲ್ಲೂಕಿನ ಬಸವಾಪಟ್ಟಣದ **ರೇವಣಸಿದ್ಧೇಶ್ವರ ಮಠಕ್ಕೆ** ಕಳೆದ ೭೫ ವರ್ಷಗಳಿಂದ **ನಂಜುಂಡೇಶ್ವರ ಮಠ** ಎಂದು ಕರೆಯಲಾಗುತ್ತಿದೆ. ಇದಕ್ಕೆ ಮುಖ್ಯ ಕಾರಣ ನಂಜುಂಡೇಶ್ವರ ಹೆಸರಿನ ಒಡೆಯರು ಬಹಳಷ್ಟು ಸಾಧನೆ ಮಾಡಿ ಪವಾಡ ಪುರುಷರೆಂದು ಜನಮನದಲ್ಲಿ ಪ್ರಸಿದ್ಧರಾದ್ದರಿಂದ ಅವರ ಹೆಸರೇ ಆ ಮಠಕ್ಕೆ ರೂಢಿಯಾಗಿ ಬಂದಿರುವುದನ್ನು ಅಲ್ಲಿನ ಜನತೆ ಹೇಳುತ್ತಾರೆ. ಹಾಗೆಯೇ ಬಂಕಾಪುರ ಹಾಗೂ ಕೊಪ್ಪಳದ ಕೆಂಡದಮಠಗಳು ಮೂಲತಃ ರೇವಣಸಿದ್ಧೇಶ್ವರ ಮಠಗಳಾಗಿದ್ದವು. ಬಂಕಾಪುರದ ಶ್ರೀ ಒಡೆಯರ್ ಬಸವಯ್ಯಸ್ವಾಮಿಗಳು ಕೈಯಲ್ಲಿ ಕೆಂಡವನ್ನು ಹಿಡಿದುಕೊಂಡು ಮಳೆ ತರಿಸಿದ್ದರೆಂದು ಪ್ರತೀತಿ. ಹೀಗಾಗಿ ಈ ಮಠಗಳಿಗೆ ಈಗ ಕೆಂಡದಮಠ ಎಂದು ಕರೆಯುತ್ತಾರೆ. ವ್ಯಾಪಕ ಕ್ಷೇತ್ರಕಾರ್ಯದ ಮೂಲಕ ಹಾಲುಮತ ಮಠಗಳ ಸರ್ವೇಕ್ಷಣ ನಡೆಸಿ ಅಧ್ಯಯನಕ್ಕೊಳಪಡಿಸಿದಾಗ ಕುರುಬರ ಧಾರ್ಮಿಕ ಮತ್ತು ಸಾಮಾಜಿಕ ಸಂಗತಿಗಳತ್ತ ಹೊಸಬೆಳಕು ಬೀರುವ ಸಾಧ್ಯತೆಗಳಿವೆ. ಈ ಕಾರ್ಯ ಇಂದು ಅಗತ್ಯವಾಗಿ ನಡೆಯಬೇಕಾಗಿದೆ.


ನಂಜುಂಡೇಶ್ವರ ಮಠ, ಬಸವಾಪಟ್ಟಣ

**ಮಠಾಧಿಪತಿಗಳ ಆಚರಣೆಗಳು :** ಕಟ್ಟಾ ಶಾಖಾಹಾರಿಗಳಾದ ಒಡೆಯರುಗಳು ಲಿಂಗಧಾರಿಗಳು. ಗಂಡುಮಗು ಹುಟ್ಟಿದ ಮೂರು ದಿನಗಳಲ್ಲಿ ಪೀಠವಿರುವ ಸಣ್ಣದಾದ ಲಿಂಗವನ್ನು ಮಗುವಿಗೆ ಕಟ್ಟುತ್ತಾರೆ. ಇದನ್ನು "ಹುಟ್ಟುಲಿಂಗ" ವೆನ್ನುತ್ತಾರೆ. ನಂತರ ಮದುವೆಯ ಸಂದರ್ಭದ ಮೊದಲು ವಿಧಿವತ್ತಾಗಿ ಎರಡನೆಯ ಲಿಂಗದೀಕ್ಷೆಯಾಗುತ್ತದೆ. ಈ ಲಿಂಗದೀಕ್ಷೆ ಏಕೆ ತಡವಾಗಿ ಕೊಡಲಾಗುತ್ತದೆ ಎಂಬ ಪ್ರಶ್ನೆಗೆ ಒಡೆಯರು ಕೊಡುವ ಉತ್ತರ ಸ್ವಾರಸ್ಯಕರವಾಗಿದೆ. ಯಾವುದೇ ಊರಲ್ಲಾಗಲೀ ಒಡೆಯರ ವಾಸ ಕುರುಬರ ಓಣಿಯಲ್ಲಿಯೇ. ಇವರ ಮಕ್ಕಳು ಕುರುಬರ ಮಕ್ಕಳ ಜೊತೆಗೆ ಆಡುತ್ತ ಬೆಳೆಯುತ್ತಿರುತ್ತಾರೆ. ಅಂಥ ಸಂದರ್ಭದಲ್ಲಿ ಒಡೆಯರ ಮಗು ಹಿರಿಯರಿಗೆ ಗೊತ್ತಾಗದಂತೆ ಕುರುಬರ ಮಕ್ಕಳ ಸಹವಾಸದಿಂದ ಅವರ ಮನೆಯಲ್ಲಿ ಮಾಂಸವನ್ನು ಸೇವಿಸಿರ ಬಹುದು. ಆ ಮಗು ದೊಡ್ಡದಾದ ಮೇಲೆ ಶಿವಪೂಜೆ ಮಾಡುವ ಕಾಲಕ್ಕೆ ಲಿಂಗದೀಕ್ಷೆ ನೀಡಿದರೆ ಆತ ಜವಾಬ್ದಾರಿಯರಿತು ನಡೆದುಕೊಳ್ಳಬಲ್ಲ.

ಒಡೆಯ ಒಡೆಯರಲ್ಲಿ ಅಣ್ಣತಮ್ಮಂದಿರೆಂಬ ನಂಬಿಕೆ ಬಲವಾಗಿದ್ದರಿಂದ ಸಗೋತ್ರ ಮದುವೆ ಇಲ್ಲಿ ನಿಷಿದ್ಧ. ಆದ್ದರಿಂದ ಇವರು ಕುರುಬರಿಂದ ಹೆಣ್ಣನ್ನು ತರಬೇಕು. ತಮ್ಮ ಹೆಣ್ಣು ಮಕ್ಕಳನ್ನು ಕುರುಬರ ಮನೆಗೆ ಕೊಡಬೇಕು. ಆದರೆ ಆಧುನಿಕತೆಯ ಪ್ರಭಾವದಿಂದಾಗಿ ಇತ್ತೀಚೆಗೆ ಕೆಲವು ಕುಟುಂಬಗಳಲ್ಲಿ ಸಗೋತ್ರ ಮದುವೆಗಳಾಗುತ್ತಿವೆ. ಒಡೆಯರ ಹುಡುಗಿ ಕುರುಬರ ಮನೆಗೆ ಮದುವೆ ಮಾಡಿಕೊಡುವುದ

ರಿಂದ ಅವಳಿಗೆ ಲಿಂಗದೀಕ್ಷೆ ನೀಡುವ ಪ್ರಮೇಯವೇ ಬರುವುದಿಲ್ಲ. ಆದರೆ ಕುರುಬರ ಹುಡುಗಿ ಒಡೆಯರ ಮನೆಗೆ ಸೊಸೆಯಾಗಿ ಬರುವ ಸಂದರ್ಭದಲ್ಲಿ ಅವಳಿಗೆ ಕಡ್ಡಾಯವಾಗಿ ಕೆಲವು ಸಂಸ್ಕಾರಗಳನ್ನು ನೆರವೇರಿಸಬೇಕಾಗುತ್ತದೆ. ಮದುವೆಯ ಹಿಂದಿನ ದಿವಸ ವಧುವಿಗೆ ರೇವಣಸಿದ್ಧೇಶ್ವರ ಮಠದಲ್ಲಿ ದೀಕ್ಷೆ ನಡೆಯುತ್ತದೆ. ಮೊದಲು ಹುಡುಗಿಯ ಕೈಮೇಲೆ ಐದು ಬಗೆಯ ಮರದ ಚಕ್ಕೆಯ ಕೆಂಡವನ್ನು ಹಾಕಿ, ನಾಲಗೆಯನ್ನು ಗಂಧದಕಡ್ಡಿ ತುದಿಯ ಬೆಂಕಿಯಿಂದ ಸುಟ್ಟು ಶುದ್ಧಿ ಮಾಡಲಾಗುತ್ತದೆ. ನಂತರ ಪಂಚಕಳಶಗಳನ್ನು ಹೂಡಿ, ಅವುಗಳನ್ನು ಬಂಧಿಸಿದ ಸೂತ್ರವು ರೇವಣಸಿದ್ಧೇಶ್ವರನ ವಿಗ್ರಹದ ಕೊರಳ ಮೂಲಕ ಬಂದು, ಪಂಚಕಳಶಗಳ ಮಧ್ಯ ಹಾಸಿರುವ ಕರಿಯ ಕಂಬಳಿಯ ಮೇಲೆ ಕುಳಿತಿರುವ ವಧುವರರನ್ನು ಸ್ಪರ್ಶಿಸುತ್ತದೆ. ಇದನ್ನು ಸೂಸ್ರ ಅಥವಾ ಸೂತ್ರ ಎನ್ನುತ್ತಾರೆ. ಈ ಸೂತ್ರದ ಮೂಲಕ ದಾರ ತಂದು, ಐವರು ಹಿರಿಯ ಒಡೆಯರು ಸೇರಿ ರೇವಣಸಿದ್ಧೇಶ್ವರರ ಹೆಸರು ಹೇಳಿ ಚಿದ್ರಸ ಅಥವಾ ಕಂತೆಯ ಲಿಂಗವನ್ನು ವಧುವರರಿಬ್ಬರಿಗೂ ಕಟ್ಟುತ್ತಾರೆ. ಐದು ಅಥವಾ ಮೂರು ಜನ ಒಡೆಯರು ವರನ ನೆತ್ತಿಯ ಮೇಲೆ ಪಾದವಿಟ್ಟು, ಕಾಲು ತೊಳೆದ ಆ ನೀರಿನಿಂದ ಅವನನ್ನು ಶುದ್ಧಿ ಮಾಡಲಾಗುತ್ತದೆ. ತದನಂತರ ಇಬ್ಬರ ಕೈಗೂ ಜೋಳಿಗೆ ಬೆತ್ತಗಳನ್ನು ಕೊಟ್ಟು ಕೋರಾಣ್ಯ ಭಿಕ್ಷ ಮಾಡಿಸುತ್ತಾರೆ. ಅಂದಿನಿಂದ ಒಡೆಯರ ಹುಡುಗ ನಿಜವಾದ "ಒಡೆಯರು", ಕುರುಬರ ಮನೆಯ ಹುಡುಗಿ ಅಂದರೆ ಆತನ ಹೆಂಡತಿ "ಒಡೇರಮ್ಮ" ಎನಿಸಿಕೊಳ್ಳುತ್ತಾಳೆ.

ಒಡೆಯರ ಕುಟುಂಬದ ಸದಸ್ಯರಿಗೆ ಸಾವು ಸಂಭವಿಸಿದಾಗ ಕುರುಬರಿಗಿಂತ ವಿಭಿನ್ನವಾಗಿ ಶವಸಂಸ್ಕಾರವನ್ನು ಮಾಡಲಾಗುತ್ತದೆ. ಒಡೆಯರ ಗಂಡಸಾಗಲಿ, ಹೆಂಗಸಾಗಲಿ ಕೂಡ್ರಿಸಿ ಹೂಳುತ್ತಾರೆ. ಒಡೆಯರು ಸತ್ತಾಗ ಅವರಿಗೆ ಕಟ್ಟಿದ ಪಟ್ಟವನ್ನು ಮೊದಲು ಅಳಿಸಿಹಾಕಬೇಕು. ಕರಡಿಗೆಗೆ ಕಟ್ಟಿದ ಸೂತ್ರದ ದಾರವನ್ನು ತೆಗೆದು ಲಿಂಗವನ್ನು ಮಾತ್ರ ಹಾಗೇ ಬಿಡಬೇಕು. ಚೌಕಾಕಾರದ ಸಮಾಧಿಯಲ್ಲಿ, ಶವದ ಕೈಯ ಲಿಂಗಕ್ಕೆ ಪೂಜೆ ಮಾಡಿ, ಅದನ್ನು ತೆಗೆದುಕೊಳ್ಳಬೇಕು. ನಂತರ ಸಮಾಧಿ ತುಂಬ ಭಸ್ಮ, ಬಿಲ್ವಪತ್ರೆ ಹಾಕಿ, ಶವವನ್ನು ಲಿಂಗಪೂಜೆ ಮಾಡುತ್ತಿರುವ ಭಂಗಿಯಲ್ಲಿ ಕೂರಿಸಿ ಹೂಳಬೇಕು. ಬಳಿಕ ಲಿಂಗವನ್ನು ಬಾವಿ ಅಥವಾ ನದಿಗೆ ಬಿಡುವುದುಂಟು. ಕೆಲವರು ಶವದ ತೋಳಿಗೆ ಬಟ್ಟೆಯಲ್ಲಿ ಲಿಂಗವನ್ನು ಕಟ್ಟಿ ಮಣ್ಣು ಮಾಡುವ ಉಪಕ್ರಮವೂ ಇದೆ. ಒಡೆಯರ ರೀತಿಯಲ್ಲಿಯೇ ಒಡೇರಮ್ಮನ ಶವಸಂಸ್ಕಾರವನ್ನು ಮಾಡಲಾಗುತ್ತದೆ.

ಈ ಒಡೇರಮ್ಮನಿಗೆ ಕುರುಬ ಸಮಾಜದಲ್ಲಿ ತುಂಬ ಗೌರವವನ್ನು ಕೊಡಲಾಗುತ್ತದೆ. ಈಕೆಯನ್ನು ಅಮ್ನೋರು, ಒಡೆಯರಮ್ನೋರು ಎಂದು ಕುರುಬರು ಗೌರವದಿಂದ ಕರೆಯುತ್ತಾರೆ. ಒಡೆಯರಿಗೆ ಇರುವ ಎಲ್ಲ ಹಕ್ಕು ಬಾಧ್ಯತೆಗಳು ಒಡೇರಮ್ಮನಿಗೂ ಇರುತ್ತದೆ. ಏಕೆಂದರೆ ಯಾವುದೇ ಇನ್ನಿತರ ಮೇಲ್ವರ್ಗದ, ಪ್ರತಿಷ್ಠಿತ ಸಮಾಜದ ಪುರೋಹಿತರ ಹೆಣ್ಣು ಮಕ್ಕಳಿಗೆ ಅಷ್ಟೊಂದು ಪ್ರಾಮುಖ್ಯತೆಯಿಲ್ಲ. ಆದರೆ ಈ ಸಮಾಜ ಉನ್ನತವಾದ ಸ್ಥಾನವನ್ನು ಕಲ್ಪಿಸಿಕೊಟ್ಟಿದೆಯೆಂದು ಹೇಳಬಹುದು. ದೀಕ್ಷೆಯಾದ ದಿನದಿಂದ ತಂದೆ ತಾಯಿಗಳೂ ಸೇರಿದಂತೆ ಎಲ್ಲರೂ ಅವಳಿಗೆ ಬಾಗಿ ನಮಸ್ಕರಿಸುತ್ತಾರೆ. ತವರು ಮನೆಗೆ ಹೋದರೆ ಮಡಿಯಿಂದ ಅವಳಿಗಾಗಿ ಪ್ರತ್ಯೇಕ ಶುದ್ಧವಾದ ಅಡುಗೆ ಮಾಡುತ್ತಾರೆ. ಒಡೆಯರಂತೆ ಅವಳು ಮೈಮೇಲೆ ಸದಾ ಲಿಂಗವನ್ನು ಧರಿಸಬೇಕು. ಒಡೆಯರು ಊರಲ್ಲಿಲ್ಲದಾಗ ಒಡೇರಮ್ಮನೇ ಮುಂದೆ ನಿಂತು ಜನನ, ಮದುವೆ, ಮರಣದಂಥ ಕ್ರಿಯಾಚರಣೆಗಳನ್ನು ನಡೆಸಿಕೊಡುತ್ತಾಳೆ. ರೇವಣಸಿದ್ಧೇಶ್ವರ ಮಠದ ದೇವರ ಪೂಜಾದಿ ಕಾರ್ಯಗಳನ್ನು ನೇರವೇರಿಸಲೂ ಈಕೆ ಅರ್ಹಳು. ಪ್ರತಿದಿನವೂ ಸ್ನಾನದ ನಂತರ ದಿನಕ್ಕೆರಡು ಸಲ ತನ್ನ ಕೊರಳ ಕರಡಿಗೆಯ ಇಷ್ಟಲಿಂಗವನ್ನು ಪೂಜಿಸುತ್ತಾಳೆ. ಯಾವಾಗಲೂ ಎದೆಯ ಮೇಲೆ ಕರಡಿಗೆ, ಹಣೆಯ ಮೇಲೆ ವಿಭೂತಿ ಧರಿಸಿರಬೇಕು. ಈ ಕರಡಿಗೆ ಮತ್ತು ವಿಭೂತಿ ಒಡೇರಮ್ಮಳನ್ನು ಕುರುಬ ಹೆಂಗಸರಿಂದ ಪ್ರತ್ಯೇಕಿಸಿ ತೋರಿಸುವ ಚಿಹ್ನೆಗಳಾಗಿವೆ. ಗಂಡ ಸತ್ತರೂ ಇವಳು ವಿಧವೆಯಾಗುವುದೇ ಇಲ್ಲ. ಹಿಂದೂ ವಿಧವೆಯರಂತೆ ಅವಳು ಸೌಭಾಗ್ಯದ ಚಿನ್ಹೆಗಳಾದ ಬಳೆ, ಅರಿಶಿನ, ಕುಂಕುಮ, ಮಾಂಗಲ್ಯ ತೆಗೆಯುವುದಿಲ್ಲ. ಬದಲಾಗಿ ಅವಳು ಯಾವುದೇ ಮಂಗಲ ಕಾರ್ಯಗಳಲ್ಲಿ ಭಾಗವಹಿಸಿ ಪೌರೋಹಿತ್ಯವನ್ನು ಮಾಡಬಹುದು. ಅವಳ ಆಗಮನವನ್ನು ಅಮಂಗಲವೆಂದು ಯಾರೂ ಭಾವಿಸುವುದಿಲ್ಲ. ಒಂದರ್ಥದಲ್ಲಿ ಶಿವಶರಣರ 'ಶರಣಪತಿ ಲಿಂಗಪತಿ" ಎಂಬ ತತ್ವ ವೀರಶೈವೇತರ ಪಂಗಡದಲ್ಲಿ, ಅಂದರೆ ಕುರುಬ ಸಮಾಜದಲ್ಲಿ ಮಾತ್ರ ಅರ್ಥಪೂರ್ಣವಾಗಿ ಆಚರಿಸಲ್ಪಡುವುದು ಮಹತ್ವದ ಸಂಗತಿಯಾಗಿದೆ. ಈ ಉಪಕ್ರಮ ಬಹುಶಃ ಭಾರತೀಯ ಸಂಸ್ಕೃತಿಯಲ್ಲಿಯೇ ವಿಶಿಷ್ಟವೂ, ಹೆಚ್ಚು ಪ್ರಗತಿಪರವೂ ಆಗಿದೆ.

ಈ ಹಿಂದೆ ಹೇಳಿದಂತೆ ಕುರುಬರ ಎಲ್ಲ ಧಾರ್ಮಿಕ ಮತ್ತು ಸಾಮಾಜಿಕ ಆಚರಣೆಗಳು ಒಡೆಯರ ಅಥವಾ ಒಡೇರಮ್ಮನ ನೇತೃತ್ವದಲ್ಲಿ ನಡೆಯುತ್ತವೆ. ನಾಮಕರಣ ಸಂದರ್ಭದಲ್ಲಿ ಒಡೆಯರ ಅವಶ್ಯಕತೆ ಇರುವುದಿಲ್ಲ. ಆದರೆ ಮದುವೆ ಮರಣದ ಸಂದರ್ಭಗಳಲ್ಲಿ ಇವರು ಅವಶ್ಯವಾಗಿ ಇರಲೇಬೇಕು. ಕರಿಯ ಕಂಬಳಿ ಗದ್ದುಗೆಯ ಮೇಲೆ ಕುಳಿತು ಕುರುಬ ವಧುವರರಿಗೆ ಕಂಕಣಧಾರಣೆ ಮಾಡಿಸಿ "ಐರದಾಳಿ" ಹಾಗೂ "ಐರಗಡಗ"ಗಳನ್ನು ಪೂಜಿಸಿ ಹುಡುಗನಿಂದ ಹುಡುಗಿಗೆ ಅವುಗಳನ್ನು ಧಾರಣ ಮಾಡಿಸುತ್ತಾರೆ. ಈ ಸಂದರ್ಭದಲ್ಲಿ ಕಡ್ಡಾಯವಾಗಿ ಒಡೆಯರು ವಧುವರರಿಗೆ **"ಕಲಿಕಲಿಯಾಗಿ ಕರ್ಣಜ್ಜನಾಗಿ ಭೀಮಣ್ಣನಾಗಿ ಭಲ್ಲರಾಜ್ಯವನಾಳಿ ಗುರುರೇವಣಸಿದ್ಧ ಕಟ್ಟಿದ ಸೇಸೆ ಸ್ಥಿರವಾಗಿರಲಿ, ಸರೂರು ಶಾಂತಮುತ್ತಯ್ಯ ಕಟ್ಟಿಸಿದ ಕಲ್ಯಾಣ ಸ್ಥಿರವಾಗಿರಲಿ, ಸೋಬತಿ ಸೋಬಾನ ಸೋಬತಿ ಸೋಬಾನ"** ಎಂದು ಆಶೀರ್ವಚನ

ನೀಡುತ್ತಾರೆ. ನಂತರ ಎಲ್ಲರೂ ತೆಂಗಿನಕಾಯಿ ಮುಚ್ಚಿದ ಹಾಲಿನ ಕರಗದಿಂದ ವಧುವರರ ಕೈಗೆ ಹಾಲು ಎರೆಯುತ್ತಾರೆ. ಪರಸ್ಪರ ಇಬ್ಬರಿಗೂ ಸಂಬಂಧಮಾಲೆಯನ್ನು ಹಾಕಿಸಿ, ಇಬ್ಬರ ವಸ್ತ್ರದ ಸೆರಗಿಗೆ ಅಡಿಕೆ ಗೋಟನ್ನು ಇಟ್ಟು ಗಂಟು ಹಾಕುತ್ತಾರೆ. ಇದಕ್ಕೆ 'ಬ್ರಹ್ಮಗಂಟು' ಎಂದು ಕರೆಯಲಾಗುತ್ತದೆ. ಇಲ್ಲಿಗೆ ಮದುವೆಯ ಆಚರಣೆಯ ಬಹುಮುಖ್ಯ ಭಾಗ ಮುಗಿಯುತ್ತದೆ.

ಸಾವು ಸಂಭವಿಸಿದಾಗಲೂ ಒಡೆಯರೇ ಹೋಗಿ ಕರ್ಮ ಕಳೆಯಬೇಕು. ಸ್ನಾನ ಮಾಡಿಸಿದ ಶವದ ಹಣೆಗೆ ಒಡೆಯರು ವಿಭೂತಿ ಹಚ್ಚಿದ ನಂತರವೇ ಸಂಸ್ಕಾರಕ್ಕೆ ಸಿದ್ದತೆ ನಡೆಯುತ್ತದೆ. ಕುರುಬರನ್ನು ಮಲಗಿಸಿ ಹೂಳುತ್ತಾರೆ. ಅಲ್ಲದೇ ಸಮಾಜದಲ್ಲಿ ಕಲಹಗಳುಂಟಾದರೆ ಪರಿಹರಿಸಲು, ತಪ್ಪಿತಸ್ಥರಿಗೆ ದಂಡ ವಿಧಿಸಲು ಸೇರಿದ ಸಭೆಯಲ್ಲಿ ಒಡೆಯರು, ಅವರಿಲ್ಲದಿದ್ದರೆ ಒಡೇರಮ್ಮನಿಗೆ ಅಧಿಕಾರವಿರುತ್ತದೆ.

ಕರ್ನಾಟಕದಲ್ಲಿ ಕುರುಬರ ಸಂಖ್ಯೆಯನ್ನು ಹೋಲಿಸಿದರೆ ಒಡೆಯರ ಸಂಖ್ಯೆ ಬಹಳ ಕಡಿಮೆ. ಹೀಗಾಗಿ ಎಲ್ಲ ಸಂದರ್ಭ ಗಳಲ್ಲೂ, ಎಲ್ಲರಿಗೂ ಇವರು ದೊರಕುವುದು ತುಂಬ ಕಷ್ಟ. ವೀರಶೈವ ಜಂಗಮರಂತೆ ಪ್ರತಿ ಊರಿನಲ್ಲಿ ಒಡೆಯರು ಇಲ್ಲ. ಹತ್ತು ಹದಿನೈದು ಊರುಗಳಿಗೊಬ್ಬ ಒಡೆಯನಿರುತ್ತಾನೆ. ಅಷ್ಟೇ ಏಕೆ ಕೆಲವು ಜಿಲ್ಲೆಗಳಲ್ಲಿ ಇಲ್ಲವೆನ್ನುವಷ್ಟರ ಮಟ್ಟಿಗೆ ಇವರ ಜನಸಂಖ್ಯೆ ತುಂಬ ಕಡಿಮೆ. ನಾಮಕರಣ, ಮದುವೆಯ ಸಮಯದಲ್ಲಾದರೆ ಕಾಯಬಹುದು. ಆದರೆ ಸತ್ತಾಗ ಕಾಯುವುದು ತುಂಬ ಕಷ್ಟವಾಗು ತ್ತದೆ. ಅಂಥ ಸಂದರ್ಭದಲ್ಲಿ "ಕಾಲಿಲ್ಲದ ಐನೋರು" ಬರುತ್ತಾರೆ. ಈ ಐನೋರು ಒಬ್ಬ ವ್ಯಕ್ತಿಯಲ್ಲ. ಒಡೆಯರು ಮಂತ್ರಿಸಿ ಕೊಟ್ಟ ಒಂದು ವಿಭೂತಿಗಟ್ಟಿ. ಇದು ಒಡೆಯರ ಪ್ರತಿನಿಧಿಯಾಗಿ ಅವರ ಎಲ್ಲ ಕಾರ್ಯಗಳನ್ನು ಪೂರೈಸಿಕೊಡುತ್ತದೆ. ಒಡೆಯರು ಮಂತ್ರಿಸಿ ಕೊಟ್ಟ ಈ ವಿಭೂತಿ ಆಯಾ ಊರಿನ ಕುರುಬರ ಮುಖ್ಯಸ್ಥನಾದ ಗೌಡನ ಮನೆಯಲ್ಲಿರುತ್ತದೆ. ಯಾವಾಗಲೂ ಇದನ್ನು ಒಂದು ಚಿಕ್ಕ ಜೋಳಿಗೆಯಲ್ಲಿ ಇಡಲಾಗಿರುತ್ತದೆ. ಒಡೆಯರು ಸಿಗದಿದ್ದ ಸಮಯದಲ್ಲಿ ಜನರು ಕಾಲಿಲ್ಲದ ಐನೋರನ್ನ ಕರೆತನ್ನಿ ಎಂದು ಹೇಳುತ್ತಾರೆ. ಆಗ ಗೌಡನ ಮನೆಗೆ ಹೋಗಿ ಆ ಜೋಳಿಗೆಯೊಂದಿಗೆ ಅದನ್ನು ತರಲಾಗುತ್ತದೆ. ಮದುವೆಯಲ್ಲಿ ಕರಿಯ ಕಂಬಳಿ ಮೇಲೆ ಅದನ್ನು ಇಟ್ಟರೆ ಒಡೆಯರೇ ಬಂದು ಮೂರ್ತಗೊಂಡಂತೆ, ಹೆಣದ ಹಣೆಗೆ ಅದನ್ನು ಹಚ್ಚಿದರೆ ಒಡೆಯರೇ ಬಂದು ಭಸ್ಮಧಾರಣೆ ಮಾಡಿದಂತೆ. ಈ ಕಾಲಿಲ್ಲದ ಐನೋರಿಗೆ ಬಂದ ಹಣವನ್ನು ಅದೇ ಜೋಳಿಗೆಯಲ್ಲಿ ಹಾಕಿ ಆಗಾಗ ಸಂಬಂಧಿಸಿದ ಒಡೆಯರಿಗೆ ತಲುಪಿಸುವ ಜವಾಬ್ದಾರಿ ಗೌಡನದಾಗಿರುತ್ತದೆ.[೧೩]

**ಸಾಮಾಜಿಕ ಸೇವೆ** : ಹಾಲುಮತ ಧಾರ್ಮಿಕ ಸಭೆ, ಸಮ್ಮೇಳನಗಳನ್ನು ಏರ್ಪಡಿಸಿ ಸಮಾಜದ ಸಂಘಟನೆ ಮತ್ತು ಶೈಕ್ಷಣಿಕ ಬೆಳವಣಿಗೆಗಾಗಿ ಇವರು ನಿರಂತರವಾಗಿ ಶ್ರಮಿಸಿರುವರು. ಅಂಥವರಲ್ಲಿ ಚಿಕ್ಕನಾಯಕನಹಳ್ಳಿಯ ರೇವಪ್ಪಯ್ಯ ಒಡೆಯರ್, ತುಮಕೂರಿನ ಸಿರಿಯಪ್ಪ ಒಡೆಯರ್, ಹೂವಿನಹಡಗಲಿಯ ಗುರುಪಾದಸ್ವಾಮಿ ಗುರುವಿನ, ಸಂಗ್ರೇಶಕೊಪ್ಪದ ಗುರುಸಿದ್ಧಸ್ವಾಮಿ ಒಡೆಯರ್ ಪ್ರಮುಖರು. ಕುರುಬರ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಬೆಳವಣಿಗೆಯಲ್ಲಿ ಒಡೆಯರ ಪಾತ್ರ ಮಹತ್ವದ್ದಾಗಿದೆ. ಕಳೆದ ಶತಮಾನದ ಪೂರ್ವಾರ್ಧದಲ್ಲಿ ಇವರ ಸಮ್ಮುಖದಲ್ಲಿ ಏರ್ಪಡಿಸಿದ ಹಾಲುಮತ ಧಾರ್ಮಿಕ ಸಭೆ ಸಮಾರಂಭ, ಸಮ್ಮೇಳನಗಳಿದಕ್ಕೆ ಉತ್ತಮ ನಿದರ್ಶನಗಳಾಗಿವೆ. ಬಾಲ್ಯ ವಿವಾಹ ಪದ್ಧತಿಯ ನಿರ್ಮೂಲನೆ, ಶೈಕ್ಷಣಿಕವಾಗಿ ಹಾಲುಮತ ಸಮಾಜದ ಮಕ್ಕಳನ್ನು ತಯಾರುಗೊಳಿಸುವುದು, ಸಾಮಾಜಿಕ ಪಿಡುಗುಗಳಾದ ಹೆಂಡ ಸರಾಯಿ ಮದ್ಯ ಮಾಂಸಗಳನ್ನು ತ್ಯಜಿಸುವುದು ಮುಂತಾದವು ಗಳ ಬಗೆಗೆ ತಿಳುವಳಿಕೆ ಹೇಳುವುದರ ಮೂಲಕ ಜನರಲ್ಲಿ ಜಾಗ್ರತೆ ಮೂಡಿಸಲು ಪ್ರಯತ್ನಿಸಿರುವುದು ಇವರ ಭಾಷಣಗಳಿಂದ ತಿಳಿದುಬರುತ್ತದೆ. ೧೯೧೦ರಲ್ಲಿ ಸಮಾವೇಶಗೊಂಡ ಹಾಲುಮತ ಧರ್ಮೋತ್ತೇಜಕ ಮಹಾಸಭೆಯಲ್ಲಿ ಹೂವಿನಹಡಗಲಿಯ ಶ್ರೀ ಗುರುಪಾದಸ್ವಾಮಿ ಗುರುವಿನ ಅವರು ಮಾಡಿದ ಭಾಷಣವು ಕುರುಬ ಸಮಾಜದ ಅಭಿವೃದ್ಧಿಯ ನಿಟ್ಟಿನಲ್ಲಿ ಮಹತ್ತರವಾಗಿದೆ. ಆಚಾರ ವಿಚಾರದ ನೇಮಗಳ ಗುಟ್ಟುಗಳನ್ನು ಹೇಳುತ್ತಾ "ಮನುಷ್ಯನ ಆಹಾರ ವಿಚಾರಗಳಲ್ಲಿ ಮನಬಲ್ಲಂತೆ ನಡೆದರೆ ಆರೋಗ್ಯ ಕೆಡುವುದು. ಮೈಥುನ ತಿನಸುಗಳಲ್ಲಿ ನೇಮಿತದಂತೆ ನಡೆದರೆ ಒಳಿತಾಗುವುದು. ಆರೋಗ್ಯಶಾಸ್ತ್ರದಲ್ಲಿ ತುಪ್ಪಾ ತಿನ್ನುವವನಿಗೆ ಸ್ಮರಣಶಕ್ತಿ ಹೆಚ್ಚು, ಹಾಲು ಉಣ್ಣುವವನಿಗೆ ಆಯುಷ್ಯ ಪ್ರಮಾಣ ಹೆಚ್ಚು, ಕಾರಾ ತಿನ್ನುವವನಿಗೆ ಸಿಟ್ಟು ಹೆಚ್ಚು, ಮಾಂಸ ತಿನ್ನುವವನಿಗೆ ಮದಾಂಧಗುಣ ಹುಟ್ಟುವುದೆಂದು ಹೇಳಿರುವುದು ನಿಜವದೆ. ಕಾರಣ ಊಟಕೂಟಗಳ ಕಟ್ಟಪ್ಪಣೆಗಳನ್ನು ಪಾಲಿಸಿ ನಮ್ಮ ಹಾಲುಮತದ ಮಹಿಮರು ಉದ್ಧಾರವಾಗಬೇಕೆಂದು ಬೇಡಿಕೊಳ್ಳುವೆನು" ಎಂದು ಹೇಳಿರುವುದನ್ನು ಕುರುಬರ ಸಾಮಾಜಿಕ ಬೆಳವಣಿಗೆಯಲ್ಲಿ ಒಡೆಯರ ಪಾತ್ರ ಎಷ್ಟು ಮಹತ್ವದ್ದಾಗಿತ್ತೆಂಬುದು ತಿಳಿದುಬರುತ್ತದೆ.[೧೪]

ತುಮಕೂರಿನ ಕಾಳಿದಾಸ ವಿದ್ಯಾವರ್ಧಕ ಸಂಘದ ಸ್ಥಾಪನೆ ಯಲ್ಲಿ ಸಿರಿಯಪ್ಪ ಒಡೆಯರ್ ಅವರ ಸೇವೆ ಗಮನಾರ್ಹ. ಕುರುಬ ಸಮಾಜದ ಬಡಮಕ್ಕಳಿಗೆ ಶಿಕ್ಷಣ ಕೊಡಬೇಕೆನ್ನುವ ಒಂದೇ ಒಂದು ಮಹದಾಶೆಯಿಂದ ಸ್ಥಾಪಿಸಿದ ಈ ಸಂಸ್ಥೆ ಇಂದು ಬಹಳಷ್ಟು ಅಭಿವೃದ್ಧಿ ಹೊಂದಿದೆ. ಹಾಗೆಯೇ ೧೯೮೧ರಲ್ಲಿ ಗಂಗಾವತಿ ತಾಲ್ಲೂಕಿನ ಬಸವಾಪಟ್ಟಣದ ನಂಜುಂಡೇಶ್ವರ (ರೇವಣಸಿದ್ದೇಶ್ವರ) ಮಠದ ಆಶ್ರಯದಲ್ಲಿ ರಾಜರಾಜೇಶ್ವರಿ ಪ್ರೌಢಶಾಲೆಯೊಂದನ್ನು ತೆರೆದು ಗ್ರಾಮೀಣ ಭಾಗದ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವ ಈ ಉಪಕ್ರಮ ಇತರೆ ಕುರುಬ ಮಠಗಳಿಗೆ ಮಾದರಿಯಾಗಿದೆ. ಈ ಮಠದ ಗುರುಗಳಾದ ಸಿದ್ದರಾಮಯ್ಯನವರು ಈ ಶಾಲೆಯ ಗೌರವಾಧ್ಯಕ್ಷರು. ನಿತ್ಯ ಬರುವ ಭಕ್ತಾದಿಗಳಿಗೆ ಉಚಿತ ಪ್ರಸಾದ ವ್ಯವಸ್ಥೆ, ಜಾತ್ರಾ ಸಂದರ್ಭದಲ್ಲಿ ಸಾಮೂಹಿಕ ವಿವಾಹ, ಪುರಾಣ

ಪ್ರವಚನ ಇತ್ಯಾದಿ ಕಾರ್ಯಕ್ರಮಗಳನ್ನು ನಿರಂತರವಾಗಿ ಹಮ್ಮಿಕೊಂಡು ಬರುತ್ತಿರುವುದು ಶ್ಲಾಘನೀಯವಾಗಿದೆ.

**ಮಠ-ಮಠಾಧಿಪತಿಗಳ ಇಂದಿನ ಸ್ಥಿತಿಗತಿ :** ಭೌತಿಕವಾಗಿ ರೇವಣಸಿದ್ಧೇಶ್ವರ ಮಠಗಳು ಅಷ್ಟೇನೂ ಸುಸ್ಥಿತಿಯಲ್ಲಿಲ್ಲ. ಚಿಕ್ಕನಾಯಕನಹಳ್ಳಿ, ತುರುವೇಕೆರೆ, ಬಸವಾಪಟ್ಟಣ, ಸರೂರು ಇತ್ಯಾದಿ ಕೆಲವು ಮಠಗಳನ್ನು ಹೊರತುಪಡಿಸಿದರೆ ಉಳಿದೆಲ್ಲವುಗಳೂ ಅತ್ಯಂತ ಜೀರ್ಣಾವಸ್ಥೆಯಲ್ಲಿವೆ. ಕೊಪ್ಪಳ, ಹಿರೇಸಿಂದೋಗಿಯಲ್ಲಿರುವ ಮಠಗಳ ಸ್ಥಿತಿಯಂತೂ ತುಂಬಾ ಶೋಚನೀಯ. ಇದಕ್ಕೆ ಒಡೆಯರ ಮತ್ತು ಸಮಾಜದ ಅಲಕ್ಷ್ಯವೇ ಮುಖ್ಯ ಕಾರಣ. ವರ್ಷಕ್ಕೊಮ್ಮೆ ಶಿವರಾತ್ರಿ ಅಥವಾ ದೀಪಾವಳಿಯಲ್ಲಿ ಪಲ್ಲಕ್ಕಿ ಉತ್ಸವ, ಪೂಜೆ ಪುನಸ್ಕಾರಗಳು ಮಾತ್ರ ನಡೆಯುತ್ತವೆ. ರೇವಣಸಿದ್ಧೇಶ್ವರ ಮಠಾಧಿಪತಿಗಳಾದ ಒಡೆಯರು ಆರ್ಥಿಕವಾಗಿ ಅಷ್ಟೇನೂ ಸಬಲರಲ್ಲ. ಸಾಮಾನ್ಯವಾಗಿ ಒಬ್ಬ ಒಡೆಯನಿಗೆ ೩೩ ಹಳ್ಳಿಗಳ ಕುರುಬ ಮನೆತನಗಳ ಜಹಗೀರನ್ನು ಹಾಕಿಕೊಡಲಾಗಿದೆ. ಬಂಕಾಪುರದ ಕೆಂಡದ (ರೇವಣಸಿದ್ಧೇಶ್ವರ) ಮಠದ ಒಡೆಯರ್ ಬಸವಯ್ಯಸ್ವಾಮಿಗಳು ಹಾವೇರಿ ಜಿಲ್ಲೆಯ ೩೦೦ ಹಳ್ಳಿಗಳ ಕುರುಬ ಸಮಾಜಕ್ಕೆ ಗುರುಗಳಾಗಿರುವುದು ಇಲ್ಲಿ ಉಲ್ಲೇಖನೀಯ. ಆಧುನಿಕತೆ ಹಾಗೂ ನಗರೀಕರಣದ ಪ್ರಭಾವದಿಂದಾಗಿ ಒಡೆಯರಂತೂ ಭಕ್ತರ ಮನೆಗೆ ಹೋಗುವ ಕಾಯಕವನ್ನೇ ನಿಲ್ಲಿಸಿ, ಸರಕಾರಿ ನೌಕರಿ, ವ್ಯಾಪಾರ ಇತ್ಯಾದಿ ಅನ್ಯ ದುಡಿಮೆಯಲ್ಲಿ ತೊಡಗಿಕೊಂಡಿದ್ದಾರೆ. ಮೇಲಾಗಿ ಕುರುಬರು ಕೊಡುವ ಕಾಣಿಕೆ ರೂಪದ ಹಣ, ಬಟ್ಟೆ, ಧಾನ್ಯಗಳು ಇವರ ಜೀವನಕ್ಕೆ ಸಾಕಾಗುವುದಿಲ್ಲ. ಇದೆಲ್ಲಕ್ಕಿಂತ ಮುಖ್ಯವಾಗಿ ಕಳೆದ ದಶಕದ ಆರಂಭ (೧೯೯೨)ದಲ್ಲಿ ಕಾಗಿನೆಲೆಯಲ್ಲಿ ಕನಕ ಗುರುಪೀಠವನ್ನು ಸ್ಥಾಪಿಸಿದ ಪರಿಣಾಮವಾಗಿ ಈ ಮಠಗಳನ್ನು, ಒಡೆಯರನ್ನು ಕುರುಬಸಮಾಜ ಕಡೆಗಣಿಸಿದಂತಿದೆ. ಈ ಸಿಟ್ಟಿನಲ್ಲಿ ಸಮಾಜದ ಗುರುಹಿರಿಯರು, ಮುಖಂಡರು, ಸಾಹಿತಿಗಳು ಕೆಲವು ರಚನಾತ್ಮಕ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುವುದು ಅವಶ್ಯವಿದೆ. ಅವುಗಳನ್ನು ಹೀಗೆ ಗುರುತಿಸಬಹುದು. ೧. ರೇವಣಸಿದ್ಧೇಶ್ವರ ಮಠಗಳ ಜೀರ್ಣೋದ್ಧಾರ ಕಾರ್ಯವನ್ನು ತಕ್ಷಣ ಕೈಕೊಳ್ಳುವುದು. ೨. ಆಚಾರ ವಿಚಾರ ಸಂಪ್ರದಾಯಗಳನ್ನು ಸಮಾಜಕ್ಕೆ ಹೇಳಿಕೊಡಲು ಸಮರ್ಥರಾಗುವಂತೆ ಒಡೆಯರಿಗೆ ಸೂಕ್ತವಾದ ತರಬೇತಿ ಕೊಡುವುದು. ೩. ಕುರುಬರು ಕಡ್ಡಾಯವಾಗಿ ಈ ಮಠಗಳಿಗೆ ಪ್ರತಿವರ್ಷ ಕಾಣಿಕೆರೂಪದ ಹಣ, ದವಸಧಾನ್ಯ ವಸ್ತ್ರ ಮುಂತಾದ ಸಾಮಗ್ರಿಗಳನ್ನು ಪೂರೈಸುವುದು. ೪. ವರ್ಷಕ್ಕೊಮ್ಮೆ ನಾಡಿನ ವಿವಿಧ ಭಾಗಗಳಲ್ಲಿ ಒಡೆಯರ ಸಮಾವೇಶ, ಉಪನ್ಯಾಸ ಕಾರ್ಯಕ್ರಮ, ತರಬೇತಿ ಶಿಬಿರಗಳನ್ನು ಆಯೋಜಿಸುವುದು. ೫. ರೇವಣಸಿದ್ಧೇಶ್ವರನಿಗೆ ಸಂಬಂಧಿಸಿದ ಲಿಖಿತ ಮತ್ತು ಮೌಖಿಕ ಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸುವುದು ಹಾಗೂ ಅವುಗಳನ್ನು ಪ್ರಸಾರಗೊಳಿಸುವುದು. ೬. ರೇವಣಸಿದ್ಧೇಶ್ವರ ಮಠ, ದೇವಾಲಯ ಅಥವಾ ಕುರುಬರ ಓಣಿ, ಮನೆಗಳಲ್ಲಿ ರೇವಣಸಿದ್ಧೇಶ್ವರ ಪುರಾಣ, ಹಾಲುಮತ ಪುರಾಣ, ತಗರ ಪವಾಡ ಕೃತಿಗಳ ಪ್ರವಚನ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು. ೭. ಮಠಗಳ ಆಶ್ರಯದಲ್ಲಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವುದು. ವಿಶೇಷವಾಗಿ ಪ್ರಾಥಮಿಕ ಪ್ರೌಢ ಮತ್ತು ಡಿ.ಎಡ್, ಬಿ.ಎಡ್‌ನಂಥ ತಾಂತ್ರಿಕ ಕೋರ್ಸುಗಳನ್ನು ಆರಂಭಿಸಲು ಆದ್ಯತೆ ನೀಡುವುದು. ೮. ನಾಮಕರಣ, ಮದುವೆ, ಮರಣಗಳಂಥ ಸಮಾಜದ ಎಲ್ಲ ಕಾರ್ಯಕ್ರಮಗಳು ಒಡೆಯರ ಸಾನಿಧ್ಯದಲ್ಲಿ ಜರುಗಿಸುವುದು. ಇಂಥ ಹಲವಾರು ಸಂಗತಿಗಳತ್ತ ಗಮನ ಕೊಟ್ಟರೆ ಈ ಮಠಗಳ ಪುನರುದ್ಧಾರ ಸಾಧ್ಯವಾಗುತ್ತದೆ.



***

### ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ರೇವಣಸಿದ್ಧನ ಬಗೆಗಿನ ಹೆಚ್ಚಿನ ಮಾಹಿತಿಗಾಗಿ ನೋಡಿ : ೧. **ಚನ್ನಮಲ್ಲಿಕಾರ್ಜುನ, ರೇವಣಸಿದ್ಧರು**, (೧೯೫೮), ೨. ಸುಧಾಕರ, 'ರೇವಣಸಿದ್ಧೇಶ್ವರ,, ಪುಟ. ೧, ಹಾಲಕೆನೆ, (೨೦೦೨), ಶ್ರೀ ಕಾಳಿದಾಸ ವಿದ್ಯಾವರ್ಧಕ ಸಂಘ, ಬಿಜಾಪುರ, ೩. ಎಂ.ಎಂ. ಕಲಬುರ್ಗಿ, 'ರೇವಣಸಿದ್ಧ' **ಮಾರ್ಗ ೪**, (೨೦೦೪) ಪುಟ. ೩೮೩, ಸಪ್ನ ಬುಕ್ ಹೌಸ್ ಬೆಂಗಳೂರು.

೨. ಇವುಗಳ ಜೊತೆಗೆ ಅಮೋಘಸಿದ್ಧೇಶ್ವರ, ಕರಿಸಿದ್ಧೇಶ್ವರ, ಬೀರೇಶ್ವರ, ಕನಕದಾಸ ಹೆಸರಿನಲ್ಲಿಯೂ ಮಠಗಳು ಸ್ಥಾಪನೆಗೊಂಡಿರುವುದನ್ನು ಈಗಲೂ ಕಾಣಬಹುದು.

೩. ಈತನ ಇತಿವೃತ್ತಕ್ಕಾಗಿ ನೋಡಿ. ೧. ಎಂ.ಎಂ. ಕಲಬುರ್ಗಿ, 'ಕುರುಬರಗುರು ಶಾಂತಮುತ್ತಯ್ಯ', **ಮಾರ್ಗ ೪**, (೨೦೦೪) ಪುಟ ೩೭೭, ಸಪ್ನ ಬುಕ್ ಹೌಸ್, ಬೆಂಗಳೂರು.

೪. ಎಂ. ಎಂ. ಕಲಬುರ್ಗಿ, ಸಿ.ಕೆ. ಪರಶುರಾಮಯ್ಯ, ಎಫ್.ಟಿ. ಹಳ್ಳಿಕೇರಿ (ಸಂ), **ತಗರ ಪವಾಡ**, ೨೦೦೪, ವಿದ್ಯಾನಿಧಿ ಪ್ರಕಾಶನ ಗದಗ.

೫. ಅದೇ. ಅನುಬಂಧ ನೋಡಿ.

೬. ಅನುಬಂಧ ನೋಡಿ. ಎಂ.ಎಂ. ಕಲಬುರ್ಗಿ, ವೈ.ಸಿ. ಭಾನುಮತಿ (ಸಂ), **ಸಿದ್ಧಮಂಕ ಚರಿತೆ**, ೨೦೦೪, ಲಿಂಗಾಯತ ಸಂಶೋಧನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ.

೭. ಇಲ್ಲಿನ ಶಾಸನ, ಶಿಲ್ಪ ಇತ್ಯಾದಿ ಮಾಹಿತಿಗಾಗಿ ನೋಡಿ : ರು.ಮ. ಷಡಕ್ಷರಯ್ಯ ಅವರ ಸರೂರಿನ ಶಿಲ್ಪಗಳು, **ಇತಿಹಾಸ ದರ್ಶನ** ಸಂ. ೪, ೧೯೮೯. ಪುಟ. ೭೭.

೮. ರೇವಣಸಿದ್ಧನ ಕುರಿತು ಮೌಖಿಕ ಸಂಪ್ರದಾಯದಲ್ಲಿ ಸಾಕಷ್ಟು ಮಾಹಿತಿಗಳಿವೆ. ಉದಾ. ಎಸ್.ಜಿ. ಸಿದ್ಧರಾಮಯ್ಯ, 'ಜನಪದ ಕವಿ ಕಂಡ ರೇವಣಸಿದ್ಧ' **ಪಾವನ ಕೋಗಿಲೆ**, ೧೯೯೨. ಮಹಾಸಂಸ್ಥಾನ ಕನಕಗುರುಪೀಠದ ಸಂಸ್ಮರಣ ಸಂಚಿಕೆ, ಪುಟ. ೩೭.

೯. ವ್ಯಾಪಕ ಕ್ಷೇತ್ರಕಾರ್ಯದ ಮೂಲಕ ಕರ್ನಾಟಕದಾದ್ಯಂತ ಸರ್ವೇಕ್ಷಣೆ ಕೈಕೊಂಡರೆ ರೇವಣಸಿದ್ಧ ಪರಂಪರೆಯ ಹಾಲುಮತ ಮಠಗಳ ಸಂಖ್ಯೆ ಎಷ್ಟು? ಈಗ ಅವುಗಳಲ್ಲಿ ನಾಶಗೊಂಡಿರುವ ಹಾಗೂ ಅಸ್ತಿತ್ವದಲ್ಲಿರುವ ಮಠಗಳೆಷ್ಟು? ಅವುಗಳ ಸ್ವರೂಪ, ವೈಶಿಷ್ಟ್ಯಗಳನ್ನು ಕಂಡುಕೊಳ್ಳಬಹುದು. ಅಂಥ ಒಂದು ವ್ಯಾಪಕ ಸಂಶೋಧನ ಯೋಜನೆಯನ್ನು ನಾನು ಈಗ ಕೈಗೆತ್ತಿಕೊಂಡಿದ್ದೇನೆ.

೧೦. ಎಂ.ಎಂ. ಪಡಶೆಟ್ಟಿ., ೧೯೯೩. (ಸಂ), **ಹೇಳಿಕೀ ಮಾಡ್ಯಾರ ಒಡೆಯರು**, ನೆಲೆ ಪ್ರಕಾಶನ ಸಿಂದಗಿ.

೧೧. ಎಂ.ಜಿ. ನಾಗರಾಜ., 'ಹಾಸನ ಜಿಲ್ಲೆಯ ವೀರಶೈವ ಮಠಗಳು', **ಇತಿಹಾಸ ದರ್ಶನ**, ಸಂ. ೧೨, ೧೯೯೭. ಪುಟ. ೨೩೨.

೧೨. ೧. ಎಂ.ಎಂ. ಕಲಬುರ್ಗಿ, 'ಕುರುಬ ಸಮಾಜ ಮತ್ತು ಲಿಂಗಾಯತ ಸಮಾಜ', **ಮಾರ್ಗ ೪**, ೨೦೦೪. ಪುಟ ೩೭೩, ಸಪ್ನ ಬುಕ್ ಹೌಸ್, ಬೆಂಗಳೂರು.

೨. ಎಫ್.ಟಿ. ಹಳ್ಳಿಕೇರಿ., **ಕುರುಬ ಲಿಂಗಾಯತ**, ಕಂಠ ಪತ್ರ ೨, (೨೦೦೪) ಪುಟ. ೧೮೩, ವಿಕಾಸ ಪ್ರಕಾಶನ, ಹೊಸಪೇಟೆ.

೧೩. ಹೆಚ್ಚಿನ ಮಾಹಿತಿಗಾಗಿ ನೋಡಿ : ಡಾ. ಎಂ. ಚಿದಾನಂದಮೂರ್ತಿ, 'ಕುರುಬ ಜಾತಿಯ ಒಡೆಯರು ಮತ್ತು ಒಡೇರಮ್ಮ' (**ಪಗರಣ ಮತ್ತು ಇತರ ಸಂಪ್ರಬಂಧಗಳು**, ಪುಟ. ೧೧೭, ೧೯೮೪), ಐನೋರು ಮತ್ತು ಕಾಲಿಲ್ಲದ ಐನೋರು (**ಗ್ರಾಮೀಣ**, ಪುಟ. ೪೬) ಹಾಗೂ ಎಫ್.ಟಿ. ಹಳ್ಳಿಕೇರಿ, **ಕುರುಬ ಲಿಂಗಾಯತ** (ಕಂಠ ಪತ್ರ ೨, ಪುಟ. ೧೮೩, ವಿಕಾಸ ಪ್ರಕಾಶನ, ಹೊಸಪೇಟೆ, ೨೦೦೪) ಲೇಖನಗಳ ನೆರವನ್ನು ಇಲ್ಲಿ ಪಡೆದುಕೊಂಡಿದ್ದೇನೆ.

೧೪. ಹಾಲುಮತ ಧಾರ್ಮಿಕ ಮಹಾಸಭೆ, ಸಮ್ಮೇಳನಗಳಲ್ಲಿ ಒಡೆಯರು ಮಾಡಿದ ಭಾಷಣಗಳು ಅಲ್ಲಲ್ಲಿ ಪ್ರಕಟವಾಗಿವೆ. ಅವೆಲ್ಲವುಗಳನ್ನು ಸಂಗ್ರಹಿಸಿ ಒಂದೆಡೆ ಪ್ರಕಟಿಸಬೇಕು. ಉದಾ. ೧. ೧೯೧೦, ಅಕ್ಟೋಬರ್ ೨೩ ರಿಂದ ೨೫ರವರೆಗೆ ನಡೆದ ಹಾಲುಮತ ಧರ್ಮೋತ್ತೇಜಕ ಮಹಾಸಭೆಯಲ್ಲಿ ಹೂವಿನಹಡಗಲಿಯ ಶ್ರೀ ವೇ. ಗುರುಪಾದಸ್ವಾಮಿ ಗುರುವಿನ ಅವರು ಮಾಡಿದ ಭಾಷಣ, (ಬಸವಣ್ಣೆಪ್ಪ ನೀಲಪ್ಪ ಹಳವಳ್ಳಿ ಅವರ ಹಾಲುಮತದ ಪುರಾಣವು, ಪುಟ. ೭೩, ವಿದ್ಯಾನಿಧಿ, ಪ್ರಕಾಶನ, ಗದಗ, ೧೯೯೯), ೨. ೨೭.೪.೧೯೨೩ರಂದು ಹುಲ್ಲೂರಿನಲ್ಲಿ ನಡೆದ ಎರಡನೆಯ ಹಾಲುಮತ ಧಾರ್ಮಿಕ ಮಹಾಸಭೆಯ ಅಧ್ಯಕ್ಷಸ್ಥಾನದಿಂದ ಸಂಗ್ರೇಶಕೊಪ್ಪದ ಶ್ರೀ ಗುರುಸಿದ್ಧಯ್ಯ ಸ್ವಾಮಿಗಳು ಮಾಡಿದ ಭಾಷಣ. (ಎಂ. ಕರಿಯಪ್ಪ ಸಂಪಾದಿತ **ಮೇಷ ವಿಜಯ**, ಪ್ರಸ್ತಾವನೆ ಪುಟ. ೧೧, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು. ೨೦೦೧).



**ಕ.ಇ. ಅಕಾದೆಮಿಯ ಪ್ರಥಮ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೮೭)**

*ಕನ್ನಡಿಗರ ಬಹುಮುಖ ಜೀವನವನ್ನು ಹಿಂದಿನ ಸಾಹಿತ್ಯವು ತನ್ನದೇ ಆದ ರೀತಿಯಲ್ಲಿ ಹಿಡಿದಿಟ್ಟಿದೆ. ಸಂಗೀತ, ನರ್ತನ, ಚಿತ್ರ ಮೊದಲಾದ ಲಲಿತ ಕಲೆಗಳು ಬೇರೆ ಬೇರೆ ವರ್ಗದ ಜನರ ಬದುಕು, ನಂಬಿಕೆಗಳು ಎಷ್ಟೋ ರಾಜಕೀಯ ವಿವರಗಳು ಸಾಹಿತ್ಯದಲ್ಲಿ ಬಂದಿವೆ. ಐತಿಹಾಸಿಕ ಕಾವ್ಯಗಳೇ ಹುಟ್ಟಿವೆ. ಅವನ್ನೆಲ್ಲ ಬಳಸಿಕೊಳ್ಳುವುದು ಅಗತ್ಯ.*

*ಕರ್ನಾಟಕವನ್ನು ಮುಸುಕಿರುವ ಮಬ್ಬನ್ನು ಹೊಡೆದೋಡಿಸುವಲ್ಲಿ ಇತಿಹಾಸಕಾರರ ಪ್ರಮುಖ ಪಾತ್ರವಿದೆ. ಕನ್ನಡಿಗರ ಸ್ವ ಸ್ವರೂಪ ಜ್ಞಾನೋದಯ ಕಾರ್ಯದಲ್ಲಿ ಇತಿಹಾಸಕಾರರು ಶ್ರೀಕೃಷ್ಣ ಪರಮಾತ್ಮರಾಗಬೇಕು.*

***ಡಾ. ಎಂ. ಚಿದಾನಂದಮೂರ್ತಿ***
*ಸಮ್ಮೇಳನಾಧ್ಯಕ್ಷರು*



**ರೇವಣಸಿದ್ಧರಾಮರು ಗುರುಪರಂಪರೆಯ ಉಭಯ ಶೃಂಗ**
**ಸೃಜಿಸಿದಾ ಒಡೆಯರ ಒಡೇರಮ್ಮನ ಸೌಭಾಗ್ಯ ಬದುಕಿನುದ್ದಕ್ಕೂ ಅಭಂಗ**
**ಹೆದ್ದೆಗು, ಗುಂಡಿಗು ಒಡಕಿಲ್ಲದ ದೈವತ್ವ**
**ರೇವಣಸಿದ್ಧ ಪರಂಪರೆಯ ಅಪೂರ್ವ ಸತ್ವ**
**ನಾಡಿಗು, ನಡೆಗು, ನುಡಿಗು ಬೇಕಿದೆ ಈ ತತ್ವ**

ಕೆ. ನಾರಾಯಣ ನಾಯಕ್*

# ಕೊಂಡಾಡಿಯ ಜಂಗಮ ಮಠ

*ಕರಾವಳಿ ಪ್ರದೇಶದಲ್ಲಿ ವಿಜಯನಗರ ಕಾಲದಿಂದಲೇ ಜಂಗಮರ ಅಸ್ತಿತ್ವವಿತ್ತೆನ್ನಬಹುದು. ಕೊಂಡಾಡಿ ಮಠವು ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದುವೆನ್ನಲಾದ ೬೪ ವೀರಶೈವ ಮಠಗಳಲ್ಲಿ ಒಂದಾಗಿದ್ದು ಬೊಮ್ಮಾರಬೆಟ್ಟು ಗ್ರಾಮದಲ್ಲಿದೆ. ಹಿರಿಯಡಕದ ವೀರಭದ್ರನ ಸಿರಿಜಾತ್ರೆಗೆ ಬಂದವರು ಈ ಮಠವನ್ನರಸಿ ಬರುತ್ತಾರೆ. ಈ ಮಠದಲ್ಲಿ ಸಿದ್ಧಲಿಂಗೇಶ್ವರಗುಡಿ ಇದೆ. ತುಳುನಾಡಿನ ಜಾನಪದ ಆಚರಣೆ, ಆರಾಧನೆಗಳ ಪ್ರಭಾವವು ಕೆಳದಿ ಅರಸರಿಂದ ರೂಪಿತವಾದ ವೀರಶೈವ ಮಠಗಳ ಮೇಲೆ ಆಗಿದೆ.*

ಕರಾವಳಿ ಕರ್ನಾಟಕ ಪ್ರದೇಶವು (ಕಾಸರಗೋಡು ತಾಲ್ಲೂಕು ಸೇರಿದಂತೆ) ೧೫ನೆಯ ಶತಮಾನದ ಅನಂತರ ೧೭೬೩ವರೆಗೂ ಕೆಳದಿ ರಾಜ್ಯಕ್ಕೆ ಸೇರಿತ್ತು. "ವಿಜಯನಗರ ಕಾಲದಿಂದಲೇ ಜಂಗಮರ ಅಸ್ತಿತ್ವವನ್ನು ನಾವಿಲ್ಲಿ ಕಾಣಬಹುದಾದರೂ, ಬಳಿಕ ಕೆಳದಿಯ ಕೈಕೆಳಗೆ ಬಾರಕೂರು, ಮಂಗಳೂರು ರಾಜ್ಯಗಳು ಬಂದಾಗ ಇಲ್ಲಿನ ಆಡಳಿತದಲ್ಲಿ ಇನ್ನೂ ಹೆಚ್ಚು ಲಿಂಗಾಯತರು ಇಲ್ಲಿಗೆ ಬರಬೇಕಾಯಿತು".[೧] ಲಿಂಗಣ್ಣ ಕವಿ ವಿರಚಿತ "ಕೆಳದಿನೃಪ ವಿಜಯ"ದಲ್ಲಿ ಕೆಳದಿ ಅರಸರು ರಾಜ್ಯ ರಕ್ಷಣೆಗಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಿರ್ಮಿಸಿದ ಕೋಟೆಗಳು ಮತ್ತು ಧರ್ಮ, ಸಂಸ್ಕೃತಿ, ಆಡಳಿತ ದೃಷ್ಟಿಯಲ್ಲಿ ಕಟ್ಟಿದ ಜಂಗಮ ಮಠಗಳ ಕುರಿತಾದ ಮಾಹಿತಿಯಿದೆ. ವೆಂಕಟಪ್ಪನಾಯಕ, ಶಿವಪ್ಪನಾಯಕ, ಭದ್ರಪ್ಪನಾಯಕ ಚೆನ್ನಮ್ಮಾಜಿ, ಬಸವಪ್ಪನಾಯಕ-ಇವರೇ ಮೊದಲಾದ ಕೆಳದಿ ಆಳರಸರು ಈ ದಿಸೆಯಲ್ಲಿ ನಡೆಸಿದ ಸಾಧನೆ ಸ್ಮರಣೀಯವಾಗಿದೆ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸುಮಾರು ೬೪ ವೀರಶೈವ ಮಠಗಳಿದ್ದುವು ಎನ್ನಲಾಗಿದೆ. ಇವುಗಳಲ್ಲಿ ಬಸರೂರು, ಕೋಟೇಶ್ವರ, ಶಂಕರ ನಾರಾಯಣ, ಬಾರಕೂರು, ಎಣ್ಣೆಹೊಳೆ, ಕಾರಕಳ ಹಾಗೂ ಕೊಂಡಾಡಿ[೨] ಮಠಗಳ ಹೆಸರುಗಳು ಕಂಡುಬರುತ್ತವೆ. ಇತಿಹಾಸದ ಪುಟಗಳಲ್ಲಿ ಸೇರ್ಪಡೆಯಾಗದೇ ಇರುವ ನಾಮಾವಶೇಷವಾಗಿರುವ ಮಠಗಳೂ[೩] ಇರಬಹುದು. ಈ ಬಗ್ಗೆ ಸಮೀಕ್ಷಾ ಕಾರ್ಯವನ್ನು ಕೈಗೊಂಡು ಮುದ್ರಿತ ಇತಿಹಾಸ ಸೂಚಿಯನ್ನು ಸಿದ್ಧಪಡಿಸಿ ಈ ಜಂಗಮ ಮಠಗಳ ಅಧ್ಯಯನವನ್ನು ಕೈಗೊಳ್ಳಬೇಕೆಂಬುದಾಗಿ ಖ್ಯಾತ ಇತಿಹಾಸತಜ್ಞ ಶ್ರೀ ಕೆಳದಿ ಗುಂಡಾಜೋಯಿಸ್‌ರವರು ಕರೆ ನೀಡಿರುತ್ತಾರೆ.[೪]



ಸಿದ್ಧಲಿಂಗೇಶ್ವರ : ಕೊಂಡಾಡಿ ಮಠ

ಕೊಂಡಾಡಿ ಜಂಗಮ ಮಠವು ಉಡುಪಿ ತಾಲ್ಲೂಕಿನ ಬೊಮ್ಮಾರಬೆಟ್ಟು ಗ್ರಾಮದಲ್ಲಿದೆ. ಉಡುಪಿ-ಕಾರಕಳ ರಾಜ್ಯ ಹೆದ್ದಾರಿಯಲ್ಲಿ ಸಾಗಿದರೆ ಹಿರಿಯಡ್ಕ[೫]ದಿಂದ ಮುಂದೆ ೨ ಕಿ.ಮೀ.

* 'ನಿಸರ್ಗ', ಜಯದುರ್ಗಾ ನಗರ, ಕನ್ನರಪಾಡಿ, ಉಡುಪಿ - ೫೭೬ ೧೦೩

ದೂರದಲ್ಲಿ ಕೊಂಡಾಡಿ ಊರು ಸಿಗುತ್ತದೆ. (ಕೊಂಡಾಡಿಗೆ ಉಡುಪಿಯಿಂದ ದೂರ ೧೬ ಕಿ.ಮೀ.) ಹಸಿರಿನ ಬನಸಿರಿಯ ಇನ್ನೊಂದು ಬದಿಯಲ್ಲಿ ಹೊಲಗದ್ದೆ, ಮರಗಿಡಗಳ ನಡುವೆ ಸುಂದರವಾದ ಪ್ರಕೃತಿಯ ಮಡಿಲಲ್ಲಿ ಕೊಂಡಾಡಿಯ ಜಂಗಮ ಮಠವು ನೆಲೆಸಿದೆ. "ಜಂಗಮಮಠ" ಎಂಬುದು ಹಿರಿಯಡಕದಲ್ಲಿಯೇ ಹಲವರು ಗೊತ್ತಿಲ್ಲವೆನ್ನುವುದೇ ಆಶ್ಚರ್ಯಕರ![೬] ಹಿರಿಯಡಕ ವೀರಭದ್ರ ದೇವಸ್ಥಾನದ ಸಿರಿಜಾತ್ರೆಗೆ[೭] ಶಿವಮೊಗ್ಗ ಜಿಲ್ಲೆಯಿಂದ ಬರುವ ವೀರಶೈವರು ಈ ಜಂಗಮ ಮಠವನ್ನು ಹುಡುಕಿಕೊಂಡು ಬರುತ್ತಾರೆ.



ಕೊಂಡಾಡಿಯ ಜಂಗಮ ಮಠದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಗುಡಿ ಹಾಗೂ ಮಠದ ಮುಖ್ಯಸ್ಥರಾದ ಶ್ರೀ ಸೋಮಶೇಖರಯ್ಯ ಮತ್ತು ಶ್ರೀಮತಿ ಹೇಮಾವತಿ ದಂಪತಿಗಳು ತಮ್ಮ ಮಕ್ಕಳೊಂದಿಗೆ ವಾಸಿಸುವ ಮನೆಯಿದೆ. ಮಠದ ಈಶಾನ್ಯ ದಿಕ್ಕಿನಲ್ಲಿ ಬಾವಿಕಟ್ಟೆಯ ಬಳಿಯಲ್ಲಿ ಬಿಲ್ವಪತ್ರೆಯ ಮರವೊಂದಿದೆ.[೮] ಈ ಮಠವು ಸುಮಾರು ೫೦೦ ವರ್ಷಗಳಷ್ಟು ಪ್ರಾಚೀನ ಎಂದು ಹೇಳುತ್ತಿರುವುದಾದರೂ ಸುಮಾರು ೪೦೦ ವರ್ಷಗಳ ಹಿಂದೆ ಸ್ಥಾಪಿತವಾಗಿರಬೇಕು. ಗುರುಪುರ ಮಠದಷ್ಟೇ ಪ್ರಾಚೀನ ಎಂಬುದಾಗಿ ಶ್ರೀ ಸೋಮಶೇಖರಯ್ಯ ದಂಪತಿಗಳ ಅಭಿಪ್ರಾಯ, ಹಳೆಯ ಕಟ್ಟಡವನ್ನು ಕೆಡವಿ, ೧೯೯೫ರಲ್ಲಿ ಹೊಸತಾಗಿ ಗುಡಿ ಮತ್ತು ಮನೆಯನ್ನು ನಿರ್ಮಿಸಿರುತ್ತಾರೆ. ಬಾಗಿಲು,



ಹಸ್ತಿ ಸೋಪಾನಗಳನ್ನು ಉಳಿಸಿ ಕೊಂಡಿರುವುದಾದರೂ, ಅಪೂರ್ವ ಕೆತ್ತನೆಯ ಚೆಂದದ ಸ್ತಂಭಗಳೆಲ್ಲವನ್ನು ಇಲ್ಲಿ ಉಳಿಸಲಾಗಿಲ್ಲ.[೯]

ಶ್ರೀ ಸಿದ್ಧಲಿಂಗೇಶ್ವರ ಗುಡಿಯು ಚಿಕ್ಕ ಹಾಗೂ ಚೊಕ್ಕವಾಗಿದ್ದು, ಎದುರು ಬದಿಯಲ್ಲಿರುವ ಹಸ್ತಿ ಸೋಪಾನಗಳು ಗಮನಾರ್ಹವಾಗಿವೆ. ಈ ಶಿಲಾ ಸೋಪಾನಗಳು ಹಳೆಯ ಮಠದಲ್ಲಿದ್ದವು. ಮಠದ ಪ್ರಾಚೀನತೆಗೆ ಇವು ಸಾಕ್ಷಿಯಾಗಿವೆ. ಗುಡಿಗೆ ಶೋಭೆ ನೀಡುವ ಈ ಐತಿಹಾಸಿಕ ಸ್ಮಾರಕವು ಈ ಪರಿಸರದಲ್ಲಿ ಅಪರೂಪವೆನಿಸಿರುವ ಕಲಾಕೃತಿಯಾಗಿದೆ. ಇದರೊಂದಿಗೆ ಸುಂದರ ಕಲಾಕುಸುರಿನ ಬಾಗಿಲು ಮಠದ ಪ್ರಾಚೀನತೆಯನ್ನು ಸಾರುತ್ತದೆ. ಸುಮಾರು ೧ ೧/೨ ಅಡಿ ಎತ್ತರ ೧ ಅಡಿ ಚಚ್ಚೌಕದ ಶಿಲಾಪೀಠದ ಮೇಲೆ ಪಾಣಿಪೀಠದಲ್ಲಿರುವ ಶ್ರೀ ಸಿದ್ಧಲಿಂಗೇಶ್ವರ ಲಿಂಗವು ಪಂಚಲೋಹದ ಶಿವನ ಮುಖಾಕೃತಿಯನ್ನು ಹೊಂದಿದೆ. ಮುಖಾಕೃತಿಯ ಮೇಲ್ಗಡೆಯಿರುವ ನಾಗನ ಹೆಡೆಯು ಗಮನಸೆಳೆಯುವುದು. ಶ್ರೀ ಸೋಮಶೇಖರಯ್ಯನವರು ನಿತ್ಯ ಪೂಜಾ ಕೈಂಕರ್ಯವನ್ನು ನಿರ್ವಹಿಸುತ್ತಾರೆ. ಶ್ರಾವಣ ಸೋಮವಾರ, ಶಿವರಾತ್ರಿ ಇತ್ಯಾದಿ ಪರ್ವ ದಿನಗಳಲ್ಲಿ ವಿಶೇಷ ಪೂಜೆ, ಆಚರಣೆಗಳಿರುತ್ತವೆ. ಗುಡಿಯ ಬಳಿಯಲ್ಲೇ ಇರುವ ವಾಸ ಸ್ಥಾನದ ಸಾಂಪ್ರದಾಯಿಕ ರೀತಿಯದ್ದಾಗಿರುವ ಮನೆಯ ಮುಖ್ಯ ದ್ವಾರವು ಹಳೆಯ ಮಠದ್ದೇ ಆಗಿದ್ದು, ಕೆತ್ತನೆ ಕೆಲಸದ ವೈಖರಿಯಿಂದ ಪ್ರೇಕ್ಷಣೀಯವೆನಿಸಿದೆ. ಇಲ್ಲಿ ಐತಿಹಾಸಿಕ ಮಹತ್ವದ ಕೆಲವು ವಸ್ತುಗಳು ಕಂಡುಬಂದಿವೆ. ಇವುಗಳಲ್ಲಿ ಕಂಚಿನ ಗಂಧದೆಣ್ಣೆಯ ತೀರ್ಥದ ಕರಡಿಗೆಯು ತಿರುಗಣೆಯ ಮುಚ್ಚಳವನ್ನು ಹೊಂದಿದ್ದು ಬಹು ಅಪರೂಪವೆನಿಸುವಂತಾದ್ದು. ಮುಚ್ಚಳದಲ್ಲಿ ಇರುವ ಚಿಕ್ಕ ನಂದಿ ವಿಗ್ರಹದ ಕೊರಳಲ್ಲಿ ಶಿವಲಿಂಗವಿದ್ದು ವೈಶಿಷ್ಟ್ಯಪೂರ್ಣವಾಗಿದೆ.[೧೦] ಅಂತೆಯೇ ಪಟ್ಟದಕತ್ತಿ, ಕಾಷ್ಠದ ಕರಡಿಗೆ, ಸನ್ಯಾಸಿದಂಡ - ಇವೆ ಮೊದಲಾದುವು ಜಂಗಮಮಠದ ಬಗ್ಗೆ ಹೆಚ್ಚಿನ ಐತಿಹಾಸಿಕ ಮಾಹಿತಿಯನ್ನು ನೀಡುವಲ್ಲಿ ನೆರವಾಗಬಲ್ಲವು. ಇದು ಸನ್ಯಾಸಿಮಠವಾಗಿತ್ತು ಎಂಬ ಐತಿಹ್ಯಕ್ಕೆ ಪುರಾವೆ ಸಿಕ್ಕಿದಂತಾಗಿದೆ. ಮಠ ದಲ್ಲಿರುವ ೧೧ ತಾಳೆಗರಿಯ ಕಡತಗಳನ್ನು



ಸಂರಕ್ಷಿಸಿ, ಅವುಗಳಲ್ಲಿರುವ ಮಾಹಿತಿಯನ್ನು ಪ್ರಕಟಪಡಿಸುವ ಅವಶ್ಯಕತೆ ಇದೆ.


ಲಿಂಗಮುದ್ರೆ ಕಲ್ಲು, ಕೊಂಡಾಡಿ ಮಠ

ಕೊಂಡಾಡಿ ಮಠದ ಮನೆಯವರು ಉಪ್ಪೂರು, ಬಾಳೆಕೊಪ್ಪ, ಮೂಡಬಿದಿರೆ, ಕಲ್ಯಾಣಪುರ, ಎಣ್ಣೆಹೊಳೆ, ಪಾಂಗಾಳ, ಕಾರಕಳ ಮೊದಲಾದ ಊರುಗಳಲ್ಲಿರುವ ವೀರಶೈವ ಮನೆತನಗಳೊಂದಿಗೆ ಸಂಬಂಧವನ್ನು ಹೊಂದಿರುತ್ತಾರೆ. ಸಾಗರ ಮೊದಲಾದ ಶಿವಮೊಗ್ಗ ಜಿಲ್ಲೆಯ ಮನೆತನಗಳೊಂದಿಗೂ ಇವರಿಗೆ ವಿವಾಹ ಸಂಬಂಧ ಬೆಳೆದುಬಂದಿರುತ್ತದೆ. ಒಂದು ಕಾಲದಲ್ಲಿ ಹೊಂದಿದ್ದ ಸ್ಥಾನಮಾನ, ಪರಂಪರೆಯ ಅರಿವು ಹಾಗೂ ವರ್ತಮಾನ ಕಾಲದ ಸಮಸ್ಯೆಗಳು ಇವರಿಗಿವೆ. ಕೃಷಿಯೇ ಪ್ರಧಾನ ಉದ್ಯೋಗವಾಗಿದ್ದು, ಆದಾಯದ ಮೂಲಗಳು ಸಾಕಷ್ಟು ಇಲ್ಲದೆ, ಮಠದ ಪೂಜೆ, ಕಾರ್ಯನಿರ್ವಹಣೆ ಸುಲಭ ಸಾಧ್ಯವಾಗಿಲ್ಲ. ಕೊಂಡಾಡಿ ಮಠಕ್ಕೆ ಹೇರಳವಾದ ಭೂಮಿಯು ಇತ್ತೆಂದು ಹೇಳಲಾಗಿದೆ. ಶಿವಲಿಂಗಮುದ್ರೆಯ ಗಡಿಕಲ್ಲುಗಳು ಸನಿಹದ ಮೈರೆ[೧೧], ಕೋಟನಕಟ್ಟೆ, ಪರಿಸರದಲ್ಲಿ ಇದ್ದು, ಶತಮಾನಗಳ ಮೊದಲಿನ ಮಠದ ಸಿರಿಸಂಪತ್ತನ್ನು ಊಹಿಸಬಹುದಾಗಿದೆ.

"ಕೆಳದಿಯ ಅರಸರು ತುಳುವರ ಮುಖ್ಯ ಊರುಗಳಲ್ಲೆಲ್ಲಾ ದೊಡ್ಡ ಜಂಗಮ ಮಠಗಳನ್ನು ಕಟ್ಟಿಸಿ ಅವುಗಳಿಗೆ ಉಂಬಳಿಯನ್ನು ಬಿಟ್ಟರು.[೧೨] ಈಗ ಕೊಂಡಾಡಿಯು ಸಣ್ಣ ಊರಾಗಿದ್ದರೂ ಈ ಮಠದ ನಿರ್ಮಾಣ ಕಾಲದಲ್ಲಿ (ಸುಮಾರು ೪೦೦ ವರ್ಷಗಳ ಹಿಂದೆ) ಒಂದು ದೊಡ್ಡ ಊರಾಗಿತ್ತು ಎಂದು ಊಹಿಸಲು ನೆರವಾಗುವ ಪುರಾವೆಯೆಂಬಂತೆ ಮಠದ ಈಶಾನ್ಯ ದಿಶೆಯಲ್ಲಿ ಸುಮಾರು ೧ ಕಿಲೋಮೀಟರ್ ದೂರದಲ್ಲಿರುವ ಪಾಳು ಬಿದ್ದಿರುವ ಜೈನಬಸದಿಯ ಅವಶೇಷಗಳಿವೆ. ಬೊಮ್ಮಾರ ಬೆಟ್ಟಿನ ಈ ಬಸದಿಯ ಸುತ್ತುಮುತ್ತಲೂ ಜೈನರು ವಾಸಿಸುತ್ತಿದ್ದರು ಎಂಬ ಜನಜನಿತ ಐತಿಹ್ಯವಿದೆ. ವ್ಯಾಪಾರ ವಾಣಿಜ್ಯದ ನೆಲೆಯೂ ಇಲ್ಲಿದ್ದಿರಬೇಕು. "ಮಹತ್ತಿನ ಮಠಮಂ ಕಟ್ಟಿಸಿ, ಭೂಸ್ವಾಸ್ಥೆಗಳಂ ಬಿಡಿಸಿ, ಶಿವ ಜಂಗಮಾರ್ಥ ಶಿವಾರ್ಪಿತವಾಗಿ ಧಾರೆಯನೆರೆದು ಸ್ಥಿರ ಶಾಸನಮಂ ಬರೆಸಿತ್ತನ್[೧೩]...." ಎಂಬಂತೆ, ಜಂಗಮ ಮಠದ ಉದ್ದೇಶವು ಸ್ಪಷ್ಟವಾಗಿದೆ. ಕೆಳದಿರಾಜರ ಕೃಪಾಕಟಾಕ್ಷದ ರಾಜಾಶ್ರಯದಲ್ಲಿ ನಿತ್ಯವೂ ಶಿವಾರಾಧನೆ, ದಾಸೋಹ, ದಾನಧರ್ಮಗಳು ನಡೆಯುತ್ತಿದ್ದವು. ಊರ ಪರವೂರ ವೀರಶೈವರಿಗೆ, ಗುರುಜಂಗಮರಿಗೆ ಮಠವು ಆಶ್ರಯದ ನೆಲೆಯಾಗಿತ್ತು. ಕೆಳದಿ ರಾಜರ ಆಡಳಿತ ಕಾಲದಲ್ಲಿ ಸುತ್ತುಮುತ್ತಲ ಹಳ್ಳಿಯ ಕಂದಾಯ ವಸೂಲು ಮಾಡುವ ಜವಾಬ್ದಾರಿಯೂ ಈ ಮಠಗಳದಾಗಿತ್ತು. ಕೊಂಡಾಡಿ ಮಠವೂ ಇದೇ ರೀತಿಯ ಕಾರ್ಯನಿರ್ವಹಣೆಯನ್ನು ಮಾಡುತ್ತಿತ್ತು ಎಂದು ತಿಳಿಯಬೇಕು.

"ಸುಮಾರು ೨೫೦ ವರ್ಷ ಕೆಳದಿಯವರು ಇಲ್ಲಿ ಆಳಿ ಕೋಟೆ ಕೊತ್ತಲ ಕಟ್ಟಿ, ಜಂಗಮಮಠ ನಿರ್ವಹಿಸಲು, ಗಟ್ಟದ ಸೀಮೆಯಿಂದ ಕರೆಸಿದ ಅನೇಕ ವೀರಶೈವರು ಇಲ್ಲಿ ಬಂದು ನೆಲೆಸಿದರೂ[೧೪] ಹೆಚ್ಚಿನ ಪ್ರಭಾವ ಇಲ್ಲಿನ ಜನರ ಮೇಲೆ ಆಗಿಲ್ಲ. ಕಾರಣ ಸುಸ್ಪಷ್ಟವಾಗಿದೆ. ಮಂಜೇಶ್ವರ ಗೋವಿಂದ ಪೈಯವರು ಅಭಿಪ್ರಾಯಪಡುವಂತೆ, "ವೀರಶೈವ ಗುರುಗಳು ತಮ್ಮ ಧರ್ಮವನ್ನು ಊರೂರಲ್ಲಿ ಸಾರುವ ಕೆಲಸವನ್ನು ಕೈಗೊಳ್ಳದೇ, ಬರೇ ರಾಜಾಶ್ರಯವನ್ನೇ ನೆಮ್ಮಿ ಕುಳಿತ ಕಾರಣವೇನೋ[೧೫]...ಇಲ್ಲಿನ ಜನರ ಮೇಲೆ ಜಂಗಮಮಠಗಳ ಪ್ರಭಾವ ಆಗಿರುವುದಿಲ್ಲ. "ಕೆಳದಿಯ ಅಧಿಕಾರದ ನಂತರ ಈ ಮಠಗಳು ನೆಪಮಾತ್ರಕ್ಕೆ ಉಳಿದುಕೊಂಡವು. ಕೂಡಿಟ್ಟ ಕುಡಿಕೆಯ ಹಣದಂತೆ ಮಠದ ಆಸ್ತಿಯು ಕರಗುತ್ತಾ ಹೋಯಿತು. ಈಗ ಅವು ಪಳೆಯುಳಿಕೆಯಂತಾಗಿವೆ".[೧೬] ಈ ಮೇಲಿನ ಮಾತುಗಳು ಕೊಂಡಾಡಿಯ ಜಂಗಮ ಮಠಕ್ಕೂ ಸಲ್ಲುವವು.

ಕರಾವಳಿ ಕರ್ನಾಟಕದ ತುಳುನಾಡಿನ ಜನಪ್ರಿಯ ನಾಗಾರಾಧನೆ, ಭೂತಾರಾಧನೆಯ ಪ್ರಭಾವದಿಂದ ಇಲ್ಲಿ ನೆಲೆಸಿರುವ ಲಿಂಗಾಯತರು ದೂರವಿರುವುದು ಸಾಧ್ಯವಿಲ್ಲ. ಕೊಂಡಾಡಿ ಜಂಗಮಮಠದ ಪರಿಸರದಲ್ಲಿ ನಾಗಬನ ಹಾಗೂ ಪಂಚದೈವಗಳಿರುವ ಬ್ರಹ್ಮಸ್ಥಾನವಿದ್ದು,[೧೭] ನೈಮಿತ್ತಿಕ ಆರಾಧನೆಗಳು ನಡೆಯುತ್ತವೆ. ಇದಲ್ಲದೆ, ಸ್ಥಾನದ ಬೊಬ್ಬರ್ಯ[೧೮] ಮತ್ತು ಪಂಜುರ್ಲಿ ದೈವದ[೧೯] ಆರಾಧನೆಯೂ ಇಲ್ಲಿ ನಡೆಯುತ್ತದೆ.

ಕೆಳದಿ ಅರಸರ ಉದಾರ ನೀತಿ, ಧರ್ಮ ಸಹಿಷ್ಣುತೆ, ನೆಮ್ಮದಿಯ ಆಡಳಿತ, ಪೋರ್ಚುಗೀಸರ ಹಾವಳಿಯನ್ನು ನಿವಾರಿಸಿದ ಸುರಕ್ಷಿತತೆಯ ವಾತಾವರಣ-ಇವೇ ಮೊದಲಾದ ಜನಪರ ಕೊಡುಗೆಗಳೊಂದಿಗೆ ಜಂಗಮ ಮಠಗಳೂ ಶಿವಾರಾಧನೆ, ದಾಸೋಹ, ದಾನಧರ್ಮಾದಿ ಸತ್ಕಾರ್ಯಗಳಿಂದ ತುಳುನಾಡಿನ ಜನರ ನೆನಪಿನಿಂದ ಮರೆಯಾಗಿಲ್ಲ ಎನ್ನುವುದಕ್ಕೆ ಜನರ ಮಾತಿನಲ್ಲಿ ಈಗಲೂ ನೆಲೆಸಿರುವ ಗಂಜೀಮಠ, ಗುರುವಯ್ಯನ ಮಠ (ಗುರುವಾಯನಕೆರೆ) - ಇವು ಸಾಕ್ಷಿಯಾಗಿವೆ. ಈ ಜಂಗಮ ಮಠಗಳನ್ನು ಉಳಿಸಿಕೊಳ್ಳುವ ಬಗ್ಗೆ ಸರಿಯಾದ ಮಾರ್ಗದರ್ಶನವನ್ನು ನೀಡುವ ಬಗ್ಗೆ ಕನ್ನಡ ನಾಡಿನ ಸಂಘ ಸಂಸ್ಥೆಗಳು ಮುಂದೆ ಬರಬೇಕಾಗಿವೆ.

ಮಠಗಳೂ ಸಂಘಟಿತವಾಗಿ, ಊರವರ ಸಹಕಾರವನ್ನು ಪಡೆದು ಪುನಃ ತಲೆಯೆತ್ತಿ ನಿಲ್ಲುವಂತಾಗಬೇಕು. ಹೀಗಾಗಿ ಕೊಂಡಾಡಿಯಂತಹ ಜಂಗಮ ಮಠಗಳ ಐತಿಹಾಸಿಕ ಪರಂಪರೆ ಸದಾ ಕಾಲವೂ ಉಳಿದುಕೊಳ್ಳುವಲ್ಲಿ ಕನ್ನಡಿಗರ ಪಾತ್ರ ಅವಶ್ಯ ಎಂಬ ಅರಿವು ಎಲ್ಲೆಡೆ ಉಂಟಾಗಬೇಕು.

**ಮಾಹಿತಿದಾರರು** : ಶ್ರೀ ಸೋಮಶೇಖರಯ್ಯ ಮತ್ತು ಶ್ರೀಮತಿ ಹೇಮಾವತಿ ಕೊಂಡಾಡಿ ಜಂಗಮ ಮಠ. ಶ್ರೀ ಮಧುಕರ ಕಾಮತ್, ಕೊಂಡಾಡಿ, ಬೊಮ್ಮರಬೆಟ್ಟು ಗ್ರಾಮ.

(ಈ ಸಂಪ್ರಬಂಧ ಬರೆಯಲು ಮಾರ್ಗದರ್ಶನ ನೀಡಿದ ಡಾ|| ಪಿ.ಎನ್. ನರಸಿಂಹಮೂರ್ತಿ, ಚಿತ್ರಗಳನ್ನು ನೀಡಿ ನೆರವು ನೀಡಿದ ಪ್ರೊ|| ಗೋಪಾಲಕೃಷ್ಣ ಸಾಮಗ ಹಾಗೂ ಮಾಹಿತಿದಾರರಿಗೆ ನನ್ನ ಕೃತಜ್ಞತೆಗಳು.)



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ರಾಂಮೋಹನ್ ಮಣೇಲ್., ಗುರುಪುರದಲ್ಲೊಂದು ಜಂಗಮಮಠ, **ಉದಯವಾಣಿ** ದಿನಪತ್ರಿಕೆ, ದಿನಾಂಕ ೨೯-೦೫-೧೯೮೫.

೨. ಕೆಳದಿ ಗುಂಡಾಜೋಯಿಸ್., 'ಉಡುಪಿ ಜಂಗಮ ಮಠದ ಕೆಳದಿ ಸೋಮಶೇಖರ ನಾಯಕರ ಅಪ್ರಕಟಿತ ಚಾರಿತ್ರಿಕ ದಾಖಲೆ', **ಇತಿಹಾಸ ದರ್ಶನ**, ಸಂಪುಟ ೧೨/೧೯೯೭.

೩. ಕೆ. ನಾರಾಯಣ ನಾಯಕ್., 'ಉಡುಪಿ ಜಿಲ್ಲೆಯ ಕೊಡಿಬೆಟ್ಟು ಕೋಡಿಯಲ್ಲಿ ಜಂಗಮ ಮಠದ ಸುಳಿವು', **ಇತಿಹಾಸ ದರ್ಶನ**, ಸಂಪುಟ ೧೫/೨೦೦೦.

೪. ಅದೇ.

೫. ಬ್ರಹ್ಮಲಿಂಗೇಶ್ವರ, ವೀರಭದ್ರ ಮತ್ತು ಅನೇಕ ದೈವಗಳಿರುವ ತುಳುನಾಡಿನ ಪ್ರಸಿದ್ಧ ದೇವಸ್ಥಾನ ಹಿರಿಯಡಕದಲ್ಲಿದೆ. (ಒಂದು ಹಿರಿಯ ಆಲಡೆಸ್ಥಾನ)

೬. ಡಾ|| ಮುರಳೀಧರ ಉಪಾಧ್ಯ, ಡಾ. ಬಿ. ಚಂದಯ್ಯಹೆಗ್ಡೆ., (೧೯೯೭), **ತುಳು ದೆವಲಪ್‌ಮೆಂಟ್ ಟ್ರಸ್ಟ್**, ಮಣಿಪಾಲ.

೭. ಅರುಣಕುಮಾರ್ ಎಸ್.ಆರ್., 'ಸಿರಿ ಆಲಡೆಗಳು, ಐತಿಹಾಸಿಕ ಅಧ್ಯಯನ', **ಇತಿಹಾಸ ದರ್ಶನ** ೧೯/೨೦೦೪.

೮. ಬಿಲ್ವಪತ್ರೆ ಮರವು ಜಂಗಮಮಠದ ಬಳಿ ಎಲ್ಲೆಡೆಯೂ ಕಂಡುಬರುತ್ತದೆ; ಪವಿತ್ರ ವೃಕ್ಷಗಳಲ್ಲೊಂದಾಗಿದೆ.

೯. ಕೊಂಡಾಡಿ ಮಠದ ಸ್ತಂಭಗಳಲ್ಲಿ ಕೆಲವು ಮಣಿಪಾಲದ 'ಹಸ್ತಶಿಲ್ಪ'-ಹೆರಿಟೇಜ್ ವಿಲೇಜ್‌ನಲ್ಲಿವೆ. (ಹಳೆಯ ಕಾಲದ ವಾಸ್ತು ರಚನೆಗಳನ್ನು ಉಳಿಸಿಕೊಳ್ಳುವ ಶ್ರೀ ವಿಜಯನಾಥ ಶೆಣೈಯವರ ವಾಸ್ತು ಸಂಗ್ರಹಾಲಯ.)

೧೦. ಕ್ಷೇತ್ರ ಕಾರ್ಯದಲ್ಲಿ ಜಂಗಮಮಠಗಳ ಅಧ್ಯಯನ ನಡೆಸುತ್ತಿರುವ ಪ್ರೊ|| ಗೋಪಾಲಕೃಷ್ಣ ಸಾಮಗರು ಪರಿಶೀಲಿಸಿ ನೀಡಿದ ಮಾಹಿತಿ.

೧೧. ಮೈರೆ-ಕೊಂಡಾಡಿಯ ವಾಯುವ್ಯಕ್ಕೆ ಇರುವ ಊರು. ಮೈರೆ ಎಂದರೆ ನವಿಲು ಎಂಬ ಅರ್ಥ ಇದೆ. (ತುಳು ನಿಘಂಟು).

೧೨. ಕೇಶವ ಕುಡ್ವ, ೧೯೪೮. **ದಕ್ಷಿಣ ಕನ್ನಡದ ಇತಿಹಾಸ.**

೧೩. ಲಿಂಗಣ್ಣ ಕವಿಯ **ಕೆಳದಿ ನೃಪವಿಜಯಂ** (ಪು. ೨೨).

೧೪. ಮಂಜೇಶ್ವರ ಗೋವಿಂದಪೈ, **ತೆಂಕನಾಡು** (೧೯೪೭).

೧೫. ಅದೇ.

೧೬. ಡಾ|| ನರಸಿಂಹಮೂರ್ತಿ ಪಿ.ಎನ್., (೧೯೮೫), **ಕಾರ್ಕಳ-ಒಂದು ಪ್ರಾದೇಶಿಕ ಅಧ್ಯಯನ.**

೧೭. ಬ್ರಹ್ಮಸ್ಥಾನ, ಬ್ರಹ್ಮ, ಕ್ಷೇತ್ರಪಾಲ, ರಕ್ತೇಶ್ವರಿ, ನಂದಿಗೋಣ ಮತ್ತು ನಾಗಸಾನ್ನಿಧ್ಯವಿರುವ ಕ್ಷೇತ್ರ ಆಲಡೆಯೆನಿಸುವುದು. ತುಳುನಾಡಿನಲ್ಲಿ ಇಂತಹ ಅನೇಕ ಆಲಡೆಗಳಿವೆ. ನೋಡಿ ಡಾ|| ಗುರುರಾಜಭಟ್ ಪಿ. *Studies in Tuluva History and Culture* (pages 356-358)

೧೮. ಬೊಬ್ಬರ್ಯ, ದುರಂತ ಮರಣಕ್ಕೀಡಾಗಿ ದೈವತ್ವವನ್ನು ಪಡೆದ ಅಮಾನುಷ ಶಕ್ತಿ ಮಹಿಮೆಯ ದೈವ.

೧೯. ಪಂಜುರ್ಲಿ, ವಾರಾಹಿದೈವ-ವರಾಹಮೂರ್ತಿ, ಉದಾ: ಅಣ್ಣಪ್ಪ ಪಂಜುರ್ಲಿ.

ಹೆಚ್ಚಿನ ವಿವರಗಳಿಗೆ ನೋಡಿ : ಅಮೃತ ಸೋಮೇಶ್ವರ., **ತುಳುಪಾಡ್ದನ**, ಸಂಪುಟ, ಡಾ|| ಕೆ. ಚಿನ್ನಪ್ಪಗೌಡ., **ಭೂತಾರಾಧನೆ**, ಡಾ|| ಬಿ.ಎ. ವಿವೇಕರೈ., **ತುಳು ಜನಪದ ಸಾಹಿತ್ಯ**

ಎಂ. ಶಿವಶಂಕರಯ್ಯ*

# ಹೊನ್ನಾಳಿ ಶ್ರೀ ಚನ್ನಪ್ಪಸ್ವಾಮಿ ಮಠದ ಸಾಂಸ್ಕೃತಿಕ ಮತ್ತು ಐತಿಹಾಸಿಕ ಅಧ್ಯಯನ

*ಹೊನ್ನಾಳಿಯ ಹಿರೇಕಲ್ಮಠವು ಶ್ರೀ ಚನ್ನಪ್ಪ ಸ್ವಾಮಿಗಳಿಂದ ಪ್ರಸಿದ್ಧಿಗೊಂಡ ಶ್ರೀಶೈಲ ಶಾಖಾಮಠ ವಾಗಿದೆ. ಈ ಮಠದ ಪರಂಪರೆಯಲ್ಲಿ ಬಂದ ಶ್ರೀ ಚನ್ನಮಲ್ಲಿಕಾರ್ಜುನ ಶಿವಾಚಾರ್ಯರು ಮಾರಿಕೊಪ್ಪದ ಮಾರಿಕಾಂಬೆಗೆ ಮೂಢಭಕ್ತಿಯಿಂದ ನೀಡುತ್ತಿದ್ದ ಪ್ರಾಣಿ ಬಲಿ ನಿಲ್ಲಿಸಿ, ದೇವಿಗೆ ದೇಗುಲ ನಿರ್ಮಿಸಿ ಜಂಗಮಾ ರಾಧನೆ ನಡೆಯುವಂತೆ ಮಾಡಿದರು. ಈ ದೇವಿ ಈಗ 'ಹಳದಮ್ಮ'ನೆನಿಸಿದ್ದಾಳೆ. ಹಿಂದೂ ಮುಸ್ಲಿಂ ಸಾಮರಸ್ಯದ ಸಂಕೇತವಾಗಿ ಈ ಮಠದ ಗುರುಗಳಿಂದ ಮುಸ್ಲಿಂ ವ್ಯಾಜ್ಯಗಳು ಬಗೆಹರಿದಿವೆ. ಅಲ್ಲದೆ ಮಠದ ಜಾಗವೊಂದನ್ನು ಮಸೀದಿ ನಿರ್ಮಾಣಕ್ಕೆ ಆಗ ಮಾಡಿದ್ದೂ ಇದೆ. ಮೊಹರಂ ಹಬ್ಬದಲ್ಲಿ ಶ್ರೀಮಠದಿಂದ ಅಕ್ಕಿಬೆಲ್ಲ, ದೀಪಕ್ಕೆ ಎಣ್ಣೆ ಇತ್ಯಾದಿಗಳನ್ನು ಮುಸ್ಲಿಂ ಬಂಧುಗಳು ತಂದು ಆಚರಿಸುವ ಪರಂಪರೆಯೂ ಇದೆ. ಈ ಮಠದ ಒಡೆಯರ್ 'ಗುರುಗಳ' ಕಾರಣವೇ ಮೈಸೂರು ಅರಸರಿಗೆ 'ಒಡೆಯರ್' ಎಂಬ ಉಪಾಧಿಯು ಹೆಸರಿಗೆ ಅಂಟಿತು ಎಂಬ ಐತಿಹ್ಯವಿದೆ. ಶೈಕ್ಷಣಿಕ, ಧಾರ್ಮಿಕ ಕ್ಷೇತ್ರಗಳಲ್ಲಿ, ಗುರುವಿರಕ್ತ ಸಮನ್ವಯ ಕಾರ್ಯದಲ್ಲಿ ಈ ಮಠ ತೊಡಗಿಕೊಂಡು ದೇಣಿಗೆ ನೀಡಿ ಸಾಂಸ್ಕೃತಿಕ ಪ್ರತಿಷ್ಠಾನವಾಗಿದೆ. ಅಂತೇ ಕೆಳದಿ, ಮೈಸೂರು ಅರಸರಿಗೆ, ನವಾಬರಿಗೆ ಇದೊಂದು ಗುರುಪೀಠವಾಗಿ ನಡೆದುಬಂತು.*

ಕನ್ನಡ ನಾಡಿನ ಪ್ರಮುಖ ಐತಿಹಾಸಿಕ ನೆಲೆಗಳಲ್ಲಿ ಹೊನ್ನಾಳಿಯೂ ಒಂದು. ಮಲೆನಾಡಿನ ಸೆರಗಿಗೆ ಅಂಟಿಕೊಂಡು ಬಯಲು ಸೀಮೆಯೊಂದಿಗೆ ಹೆಚ್ಚು ಪ್ರಾಕೃತಿಕ ಸಂಬಂಧವಿದ್ದು, ಪೂರ್ವಕ್ಕೆ ತುಂಗಭದ್ರೆಯು ಪ್ರವಹಿಸುವಳು. ಇದನ್ನು ಶಾಸನಗಳಲ್ಲಿ ಸುವರ್ಣ ಪುರ ಓನ್ನಾಳಿ, ಪೊಂನ್ನಾಳಿ, ಮಲ್ಲಿಕೇಶ್ವರ ತೀರ್ಥ ಎಂದೂ, ಸ್ಥಳ ಪುರಾಣಗಳು ಭಾಸ್ಕರತೀರ್ಥವೆಂದು ಕರೆದಿವೆ.

ಬೆಳಗುತ್ತಿಯ ಸಿಂಧರ ಆಳ್ವಿಕೆಗೆ ಒಳಪಟ್ಟ ಹೊನ್ನಾಳಿಯ ಇತಿಹಾಸ ಕ್ರಿ.ಶ. ೫ನೇ ಶತಮಾನದ ಹಿಂದಕ್ಕೆ ಹೋಗುತ್ತದೆ. ಅದು ಕಲ್ಯಾಣಿ ಚಾಲುಕ್ಯರು, ಯಾದವರು, ಹೊಯ್ಸಳರು, ಕಳಚೂರಿಗಳು, ವಿಜಯನಗರದ ಅರಸರು, ಕೆಳದಿ ಹಾಗೂ ಮೈಸೂರು ದೊರೆಗಳ ಆಳ್ವಿಕೆಗೆ ಒಳಪಟ್ಟು ಅನೇಕ ಐತಿಹಾಸಿಕ ಕದನಗಳನ್ನು ಕಂಡ ನಾಡಾಗಿದೆ.

ವೀರಶೈವ ಧರ್ಮ ಸ್ಥಾಪಕ ಪೀಠಗಳಲ್ಲೊಂದಾದ ಶ್ರೀಶೈಲ ಪೀಠದ ಶಾಖಾ ಮಠವಾದ ಹೊನ್ನಾಳಿಯ ಹಿರೇಕಲ್ಮಠವು ಬಹು ಪ್ರಸಿದ್ಧವಾದುದು. ಇದು ಶ್ರೀ ಚನ್ನಪ್ಪಸ್ವಾಮಿ ಮಠವೆಂದು ಭಕ್ತರ ಹೃದಯದಲ್ಲಿ ರಾರಾಜಿಸುತ್ತಿರುವುದಲ್ಲದೆ ಭಕ್ತರಲ್ಲಿ ಭಕ್ತಿ ಭಾವನೆಗಳನ್ನು ಉದ್ದೀಪನಗೊಳಿಸುವುದಲ್ಲದೆ ಭಕ್ತರ ಸಂಕಟ ವಿಮೋಚನಾ ಮಠವಾಗಿ ನ್ಯಾಯಪೀಠವಾಗಿ ನಾಡಿನ ಮಧ್ಯೆ ವಿರಾಜಮಾನ ವಾಗಿದೆ.

ಶ್ರೀಮಠದ ಗುರು ಪರಂಪರೆ ಮತ್ತು ಕನ್ನಡ ನಾಡನ್ನಾಳಿದ ಅರಸು ಮನೆತನಗಳ ಮಧ್ಯೆ ಸಮೃದ್ಧವಾದ ದಾಖಲೆಗಳಿದ್ದಾಗ್ಯೂ ಅವುಗಳನ್ನು ಸಂರಕ್ಷಿಸಿಕೊಂಡು ಬಾರದೇ ಇರುವುದರಿಂದ ಅನೇಕ ಐತಿಹಾಸಿಕ ಮತ್ತು ಧಾರ್ಮಿಕ, ಸಾಮಾಜಿಕ ಸಂಗತಿಗಳು ಬೆಳಕಿಗೆ ಬಾರದೇ ಹೋಗಿದೆ. ಆದಾಗ್ಯೂ ಸಹ ದೊರೆತ ಹೊನ್ನಾಳಿ ತಾಲ್ಲೂಕಿನ ಶಾಸನಗಳಿಂದ, ಅರಸರ ನಿರೂಪಗಳಿಂದ, ಶ್ರೀಮಠದ ಪುರಾಣ ಮತ್ತು ಐತಿಹ್ಯಗಳಿಂದ ಶ್ರೀಮಠದ ಭವ್ಯ ಇತಿಹಾಸವನ್ನು ಅರಿಯಬಹುದಾಗಿದೆ.

ಶ್ರೀಮದ್ ಗಿರಿರಾಜ ಶ್ರೀಶೈಲ ಸೂರ್ಯಸಿಂಹಾಸನಾಪೀಠದ ಪರಂಪರೆಯಲ್ಲಿ ತಪೋನಿಧಿಗಳೂ, ಪವಾಡ ಪುರುಷರೂ, ಭಕ್ತಸಮುದಾಯಕ್ಕೆ ಸುಜ್ಞಾನದ ಬೆಳಕನ್ನು ತೋರಿ ಪವಿತ್ರಾತ್ಮವ ನ್ನಾಗಿಸಿದವರು ಜಗದ್ಗುರು ಜಡೆಯ ಶಂಕರರು. ಇವರು ಕ್ರಿ.ಶ. ೧೦ನೇ ಶತಮಾನದಲ್ಲಿ ಶ್ರೀಶೈಲದ ಸೂರ್ಯ ಸಿಂಹಾಪಸನ ಪೀಠವನ್ನೇರಿ ಪ್ರಸಿದ್ಧರಾದರೆಂದು ಹೊನ್ನಾಳಿ ಶ್ರೀ ಮಠದ 'ಗುರುಪರಂಪರೆ' ಹಾಗೂ 'ಶ್ರೀಶೈಲ ಪೀಠದರ್ಶನ' ಎಂಬ ಕೃತಿಗಳಲ್ಲಿ ಉಲ್ಲೇಖವಾಗಿದೆ. ಅಲ್ಲದೆ ಬಸವ ಪೂರ್ವದ ಶರಣ ಶಂಕರ ದಾಸಿಮಯ್ಯ ಜ|| ಜಡೆಯ ಶಂಕರರ ಸೇವೆ ಮೂಡಿದ ಬಗ್ಗೆ

* ಇತಿಹಾಸ ಪ್ರವಾಚಕರು, ಶ್ರೀ ಮೃ.ಶಿ.ಪ್ರ. ಕಾಲೇಜು, ಹೊನ್ನಾಳಿ

ಷಡಕ್ಷರಿ ಕವಿಗಳ ಸಂಸ್ಕೃತ ಗ್ರಂಥ 'ವೃಷಭೇಂದ್ರ ವಿಜಯ'ದಿಂದ ತಿಳಿದುಬರುತ್ತದೆ. ಶ್ರೀಮತಿ ಗಂಗಾಬಿಕೆವಳಸಂಗ್ ಕಿತ್ತೂರು, ಬೆಳಗಾಂ (ಜಿಲ್ಲಾ) ಇವರ 'ಶ್ರೀಶೈಲದರ್ಶಿನಿ' ಎಂಬ ಪುಸ್ತಕ ದಿಂದಲೂ ಇದೇ ಅಭಿಪ್ರಾಯ ವ್ಯಕ್ತವಾಗುತ್ತದೆ.

ರಂಭಾಪುರಿ ಪೀಠದ ಜಗದ್ಗುರು ರೇವಣಸಿದ್ಧರ ಅಪ್ಪಣೆ ಯಂತೆ ರುದ್ರಮುನಿ ಶಿವಾಚಾರ್ಯರ ಪಟ್ಟಾಧಿಕಾರದ ಕಾರ್ಯ ಕ್ರಮಕ್ಕೆ ಜ|| ಜಡೆಯ ಶಂಕರರು ತಮ್ಮ ಶಿಷ್ಯರೊಡಗೂಡಿ ಚಿಕ್ಕ ಮಗಳೂರು ಜಿಲ್ಲಾ ಬಾಳೆಹೊನ್ನೂರಿಗೆ ದಯಮಾಡಿಸಬೇಕಿದ್ದಿತು. ಪ್ರಸ್ತುತ ಹೊನ್ನಾಳಿ ಬಳಿ ಪ್ರವಹಿಸುವ ತುಂಗಭದ್ರೆಯ ಒಡಲು ಮಳೆಗಾಲವಾದ್ದರಿಂದ ಹಿಗ್ಗಿದ್ದಿತು. ಒಂದು ಕಡೆ ಹರಿಗೋಲು ಹಾಯಿಸಲು ಅಂಬಿಗನ ನಿರಾಕರಣೆ, ಮತ್ತೊಂದೆಡೆ ಕಾರ್ಯ ಬಾಹುಳ್ಯದ ಒತ್ತಡ; ಜಗದ್ಗುರುಗಳು ತಮ್ಮ ಗದ್ದುಗೆ ಕಂಬಳಿಯ (ಕೌದಿ) ಮೇಲೆ ಕೂತು ದಂಡವನ್ನೇ ಹುಟ್ಟಾಗಿಸಿ ದಡವನ್ನು ಸೇರಿದರು. ಇಂದಿಗೂ ಸಹ ಈ ಜಾಗವನ್ನು 'ಕೌದಿಹೊಳೆ' ಎಂದು ಜನರು ಕರೆಯುವರು. (ಎಪಿಗ್ರಾಫಿಯಾ ಕರ್ನಾಟಿಕ - VII ಹೊನ್ನಾಳಿ-೨೮ ಚಿಕ್ಕಯರೇಹಳ್ಳಿ ಶಾಸನದ ಕ್ರಿ.ಶ. ೧೧೯೬)

*'ಸ್ವಸ್ತಿಶ್ರೀ ಮನ್ಮಹಾಮಂಡಲೇಶ್ವರಂ....ಪಿಂಗಳ ಸಂವತ್ಸರದ ವೈಶಾಖ ಸು ೧೦ ಆದಿತ್ಯವಾರದಂದು ವುಂಮಾದೇವಿ...ಕವುದಿ ಹೊಳೆಯಲ್ಲಿ ಬೀಡುಬಿಟ್ಟು ಧಾಳಿ ಮಾರ್ಗದಿಂದ ಬೆಳಗುತ್ತಿಗೆ ಬಂದು ತಾ....'* ಎಂದಿರುವುದು ಘಟನೆಯ ತಥ್ಯೆಯ ಮೇಲೆ ಬೆಳಕು ಚೆಲ್ಲುವುದನ್ನು ಮತ್ತು ಶ್ರೀ ಮಠದ ಪ್ರಾಚೀನತೆಯನ್ನು ಎತ್ತಿ ತೋರಿಸುವುದಾಗಿದೆ.

ಅಂಬಿಗನಿಂದ ವಿಷಯ ತಿಳಿದು ತಂಡೋಪತಂಡವಾಗಿ ಬಂದ ಜನ ಹೊನ್ನಾಳಿ ಬಳಿ ಬಿದಿರೆಹಳ್ಳಿಯಲ್ಲಿ (ಕೆಳದಿ ಅರಸರ ನಿರೂಪದಲ್ಲಿ ಇದನ್ನು ಬಿದಿರೆ ಹೊನ್ನಾಳಿ ಎಂದಿದೆ.) ಜಗದ್ಗುರುಗಳಿಗೆ "ತಾವು ಮಹಿಮರಾಗಿದ್ದಲ್ಲಿ, ಕೂತಿರುವ ಒಣಗಿದ ಅರಳೀಮರ ಚಿಗುರಬೇಕೆಂದು" ಬಿನ್ನವಿಸಿಕೊಂಡರು. ಭಕ್ತರ ಬೇಡಿಕೆಗೆ ಕಾಲದ ಗಡುವು ನೀಡಿ ಗುರುಕಾರ್ಯ ನೆರವೇರಿದ ನಂತರ ಆಗಬಹುದೆಂದು ಆಶೀರ್ವದಿಸಿ ಬಾಳೆಹೊನ್ನೂರಿಗೆ ಪ್ರಯಾಣ ಬೆಳೆಸಿದರು. ಕಾಲದ ಗಡುವು ಸಮೀಪಿಸಿದಂತೆ ಭಕ್ತ ಜನ ಸಾಗರ ಸೇರಿತು. ಜಗದ್ಗುರು ಗಳು ಕಾಲ ನಿಗದಿಯಂತೆ ಆಗಮಿಸಿ, ಭಕ್ತರ ಬೇಡಿಕೆಯಂತೆ ಜಗದ್ಗುರುಗಳು ಒಮ್ಮೆ ತಮ್ಮ ದಿವ್ಯದೃಷ್ಟಿಯಿಂದ ಒಣಗಿದ ಅರಳಿ ಮರದ ಕಡೆ ನೋಡಿ ಕಮಂಡಲದಲ್ಲಿದ್ದ ತೀರ್ಥ, ಮಂತ್ರಾಕ್ಷತೆಯನ್ನು ಸಿಂಪಡಿಸು ತ್ತಿದ್ದಂತೆಯೇ ಒಣಗಿದ ಅರಳೀಮರ ಚಿಗುರಿ ಹೊನ್ನಾಗಿ ಉದುರಿತು. ಅಂದಿನಿಂದ ಬಿದಿರೆಹಳ್ಳಿಯು ಹೊನ್ನರಳಿಯಾಗಿ ಬಿದಿರೆ ಹೊನ್ನಾಳಿ ಯಾಗಿ ಪ್ರಸ್ತುತ ಹೊನ್ನಾಳಿ ಎಂದು ಮಾರ್ಪಟ್ಟಿತು.

**ದ್ವಿತೀಯ ಶ್ರೀಶೈಲ :** ಜಗದ್ಗುರು ಜಡೆಯ ಶಂಕರರು ಬಿದಿರೆಹಳ್ಳಿ ಭಕ್ತರನ್ನು ಹರಸಿ ಶ್ರೀಶೈಲಕ್ಕೆ ದಯಮಾಡಿಸಿದರು. ಆದರೆ ತಮ್ಮ ಅಂತಿಮ ದಿನಗಳು ಹತ್ತಿರವಾಗುತ್ತಿರುವುದನ್ನು ಅರಿತು ಶ್ರೀಪತಿ ಪಂಡಿತಾರಾಧ್ಯರನ್ನು ಶ್ರೀಶೈಲ ಪೀಠಕ್ಕೆ ಪಟ್ಟಗಟ್ಟಿ ಹೊನ್ನಾಳಿಗೆ ಆಗಮಿಸಿ ಇಲ್ಲಿಯೇ ನೆಲೆನಿಂತರು. ತಮ್ಮ ಅಂತಿಮ ಸಮಯ ಸಮೀಪಿಸಿದುದನ್ನು ಭಕ್ತವೃಂದಕ್ಕೆ ತಿಳಿಸಿ ಚನ್ನಮಲ್ಲಿಕಾರ್ಜುನ ಎಂಬ ವಟುವಿಗೆ ಪಟ್ಟಗಟ್ಟಿ ಭಕ್ತರು ತಮ್ಮ ದುಃಖ ದುಮ್ಮಾನಗಳಿಗೆ ನೂತನ ಗುರುಗಳಿಂದ ಸೂಕ್ತ ಪರಿಹಾರ, ಮಾರ್ಗದರ್ಶನ ಸಿಗುವು ದೆಂದು ಬಿದಿರೆಹೊನ್ನಾಳಿಯು ದ್ವಿತೀಯ ಶ್ರೀಶೈಲವೆಂದು ಖ್ಯಾತಿ ಹೊಂದುವುದೆಂದು ಹರಸಿ ಶ್ರೀ ಕ್ಷೇತ್ರದಲ್ಲಿ ಜೀವಂತ ಸಮಾಧಿ ಯಾದರು. ಇಂದಿಗೂ ಜಗದ್ಗುರುಗಳ ಗದ್ದುಗೆಗೆ ನಿತ್ಯಪೂಜೆ ಗೊಳ್ಳುತ್ತದೆ. ಅಂದಿನಿಂದ ಈ ಕ್ಷೇತ್ರವು ಕೇವಲ ವೀರಶೈವರಿಗೆ ಮಾತ್ರವಲ್ಲ ಸರ್ವಧರ್ಮೀಯರಿಗೂ ಪವಿತ್ರ ಕ್ಷೇತ್ರವಾಗಿ ದ್ವಿತೀಯ ಶ್ರೀಶೈಲವೆಂದು ಮನ್ನಣೆ ಪಡೆಯಿತು. (ಕೆಳದಿ ಅರಸರ ನಿರೂಪಗಳಲ್ಲಿ ಇದನ್ನು 'ಶ್ರೀಶೈಲ ಸೂರ್ಯಸಿಂಹಾಸನ ಪೀಠ'ವೆಂದೇ ಕರೆದಿ ರುವರು.

**ಶ್ರೀಮಠದ ಗುರುಪರಂಪರೆ**

**ಶ್ರೀ ಚನ್ನಮಲ್ಲಿಕಾರ್ಜುನ ಶಿವಾಚಾರ್ಯರು :** ಇವರು ತಮ್ಮ ಬಾಲಲೀಲೆಗಳಿಂದ ಪ್ರಸಿದ್ಧಿ ಪಡೆದರು. ಜಗದ್ಗುರು ಜಡೆಯ ಶಂಕರರ ಕರಕಮಲ ಸಂಜಾತರಾಗಿ ಪಟ್ಟಾಧಿಕಾರ ಸ್ವೀಕರಿಸಿ ವೀರಶೈವಾಚಾರ್ಯರ ತತ್ವಗಳನ್ನು ನಾಡಿನಾದ್ಯಂತ ಬೋಧನೆ ಮಾಡಿದ್ದಲ್ಲದೆ ಚೀಲೂರು, ಮಲ್ಲಾಪುರ, ಕತ್ತಿಗಿ, ಬಳ್ಳೇಶ್ವರ, ಹರಳಹಳ್ಳಿ ಇನ್ನೂ ಮುಂತಾದ ಕಡೆಗಳಲ್ಲಿ ಚನ್ನಮಲ್ಲಿಕಾರ್ಜುನ ಹೆಸರಿನಲ್ಲಿ ಶಿವಲಿಂಗಗಳನ್ನು ಸ್ಥಾಪಿಸಿದ್ದಲ್ಲದೆ ಶಿವಮೊಗ್ಗ ತಾಲ್ಲೂಕು ಹಾರ್ನಹಳ್ಳಿ, ಹೊನ್ನಾಳಿ ತಾಲ್ಲೂಕು ಕತ್ತಿಗಿ ಗ್ರಾಮಗಳಲ್ಲಿ ಮಠಗಳನ್ನೂ ಸಹ ಸ್ಥಾಪಿಸಿದರು. ಭಕ್ತರ ಕಲ್ಯಾಣಕ್ಕಾಗಿ ನಾಡಿನಾದ್ಯಂತ ಸಂಚರಿಸಿ ಶ್ರೀ ಮಲ್ಲಿಕಾರ್ಜುನನ ಹೆಸರಿನಲ್ಲಿ ಹಳೇಬೀಡಿನ ಪುಷ್ಪಗಿರಿ, ತಲಕಾಡು, ಮೈಸೂರು ಜಿಲ್ಲಾ ದೇವಾಲಯಗಳನ್ನೂ ಸಹ ಸ್ಥಾಪಿಸಿದರು.

ಸನಾತನ ಧರ್ಮಿಗಳಾದ ಕನ್ನಡ ನಾಡಿನ ಪ್ರಸಿದ್ಧ ಅರಸು ಮನೆತನಗಳು ಗುರುಪೀಠ ಮತ್ತು ಮಠಗಳಿಗೆ ಯಥೋಚಿತವಾದ ದಾನ, ದತ್ತಿಗಳನ್ನಿತ್ತಿರುವುದು ಗಮನಾರ್ಹ. ಎಪಿಗ್ರಾಫಿಯಾ ಕರ್ನಾಟಿಕ-VII ಹೊನ್ನಾಳಿ-೧೭ ಬಳ್ಳೇಶ್ವರ ಶಾಸನದಲ್ಲಿ ಹೊಯ್ಸಳ ದೊರೆ ೨ನೇ ವೀರ ಬಲ್ಲಾಳ (ಕ್ರಿ.ಶ. ೧೧೭೩-೧೨೨೦) ತಂದೆ ವಿಜಯ ನರಸಿಂಹನ ಹೆಸರಿನಲ್ಲಿ ಶಿವಲಿಂಗ ಸ್ಥಾಪಿಸಿ ಆ ಸ್ಥಳವನ್ನು ಸುಂಕಮುಕ್ತಗೊಳಿಸಿ ಮಲ್ಲಿಕಾರ್ಜುನ ಗುರುಗಳಿಗೆ ದಾನ ನೀಡಿದ ವಿವರ ಉಲ್ಲೇಖವಾಗಿದೆ. ೨ನೇ ವೀರ ಬಲ್ಲಾಳನು ಕ್ರಿ.ಶ. ೧೧೭೩ ರಲ್ಲಿ ಅಧಿಕಾರಕ್ಕೆ ಬಂದು ಉತ್ತರ ಕರ್ನಾಟಕದ ಮೇಲಿನ ದಿಗ್ವಿಜಯ ಗಳನ್ನು ೧೧೯೦ರ ವೇಳೆಗೆ ಪೂರೈಸಿದ ವಿಷಯವು ಡಾ|| ಪಿ.ಬಿ. ದೇಸಾಯಿ ಅವರ 'ಎ ಹಿಸ್ಟರಿ ಆಫ್ ಕರ್ನಾಟಕ'ದಲ್ಲಿ ವ್ಯಕ್ತವಾಗಿರುವ ಹಿನ್ನೆಲೆಯಲ್ಲಿ ಈ ಘಟನೆಯು ಕ್ರಿ.ಶ. ೧೧೮೦ ರಿಂದ ೧೧೯೦ ರೊಳಗಾಗಿ ನಡೆದಿರಬಹುದಾಗಿದೆ. ಆದ್ದರಿಂದ ಶ್ರೀಮಠದ

ಚನ್ನಮಲ್ಲಿಕಾರ್ಜುನ ಗುರುಗಳು ಹೊಯ್ಸಳ ದೊರೆಗಳಿಂದ ಗೌರವಾದರಗಳನ್ನು ಸ್ವೀಕರಿಸಿದ ಐತಿಹಾಸಿಕ ಗುರುಗಳೆಂಬುದು ಖಚಿತವಾಗುತ್ತದೆ.

**ಚನ್ನಮಲ್ಲಿಕಾರ್ಜುನರು ಮತ್ತು ಅಹಿಂಸಾ ಧರ್ಮ :** ಹೊನ್ನಾಳಿಯಿಂದ ಕೇವಲ ೩ ಮೈಲು ಅಂತರದಲ್ಲಿರುವ ಮಾರಿಕೊಪ್ಪದಲ್ಲಿ ಮಾತೆ ಮಾರಿಕಾಂಬೆಗೆ ಊರಿನಲ್ಲಿ ಪ್ಲೇಗು, ಕಾಲರ ಮುಂತಾದ ಅಂಟು ಜಾಡ್ಯಗಳು ಕಾಣಿಸಿದಾಗ ಮತ್ತು ಹಬ್ಬ-ಹರಿದಿನಗಳಲ್ಲಿ ಪ್ರಾಣಿಬಲಿ ಕೊಡುವ ಪದ್ಧತಿ ಶತಮಾನಗಳಲ್ಲಿ ನಡದೇ ಇದ್ದಿತು. ಭಕ್ತರ ಮೌಢ್ಯವನ್ನು ಕಳೆದು ಪವಿತ್ರಾತ್ಮ ರನ್ನಾಗಿಸುವ ದೃಷ್ಟಿಯಿಂದ ಗುರುಗಳು ಮಾರಿಕೊಪ್ಪಕ್ಕೆ ಆಗಮಿಸಿ, ಮಾರಿಕಾಂಬೆಯ ವಾಣಿಯಿಂದಲೇ ನನಗೆ ಬಲಿ ಬೇಡ; ಸಾತ್ವಿಕ ಆಹಾರದ ಎಡೆ ಸಾಕು. ಗುರುಗಳಿಂದ ದೀಕ್ಷೆ ಪಡೆದು ಕೃತಾರ್ಥಳಾಗುತ್ತೇನೆ. ಅಲ್ಲದೇ ಹಳ್ಳದ ಬಳಿ ಇರುವ ಶಮೀ ವೃಕ್ಷದ ಕೆಳಗಿರುವ ಹುತ್ತದಲ್ಲಿ ಐಕ್ಯಳಾಗಿ ವಿಗ್ರಹದ ಮೂಲಕ ಪ್ರತ್ಯಕ್ಷಳಾಗುವುದಾಗಿಯೂ ಅದನ್ನು ನಿರ್ದಿಷ್ಟ ದಿನದಂದು ಹೊರತೆಗೆದು ಗುರುಗಳಿಂದ ಪ್ರತಿಷ್ಠಾಪನೆ ಮಾಡಿಸಬೇಕೆಂದು ಅಪ್ಪಣೆ ಕೊಡಿಸಿದಳು. ದೇವಿಯ ಅಪ್ಪಣೆಯಂತೆ ಗ್ರಾಮದ ಭಕ್ತರು ಗುರುಗಳಿಂದ ಕಾರ್ಯವನ್ನು ವಿಧಿವತ್ತಾಗಿ ಮುಗಿಸಿ ದೇವಸ್ಥಾನವನ್ನೂ ಸಹ ನಿರ್ಮಿಸಿದರು.

ಅಲ್ಲದೆ ಅದರ ಅಂಗವಾಗಿ ಪ್ರತಿ ಗುರುವಾರ ಅಂದಿನಿಂದ ಇಂದಿನವರೆವಿಗೂ ಮಾರಿಕೊಪ್ಪದಲ್ಲಿ ಜಂಗಮಾರಾಧನೆ ನಡೆದು ಕೊಂಡು ಬಂದಿದೆ. ಹೀಗೆ ಗುರುಗಳ ಅನುಗ್ರಹದಿಂದ ಹಿಂಸಾ ಪ್ರತೀಕವಾಗಿದ್ದ ಮಾರಿಕಾಂಬೆಯ ಸಾತ್ವಿಕ ಮೂರ್ತಿ **ಹಳದಮ್ಮಳಾಗಿ** ಚನ್ನಪ್ಪಸ್ವಾಮಿಯ ಸೋದರಿಯಾಗಿ ಭಕ್ತರ ಮಾತೆಯಾಗಿ ಮೆರೆಯುತ್ತಿದ್ದಾಳೆ. ಗುರುಚನ್ನಮಲ್ಲಿಕಾರ್ಜುನರು ಪ್ರತ್ಯಕ್ಷವಾಗಿ ೧೫೦ ವರ್ಷ ಅಪ್ರತ್ಯಕ್ಷವಾಗಿ ೧೫೦ ವರ್ಷ ಬದುಕಿ ಧರ್ಮಪ್ರಚಾರ ಮಾಡಿದರೆಂದು ಶ್ರೀಮಠದ ಪುರಾಣ ಮತ್ತು ಜಾನಪದ ಐತಿಹ್ಯಗಳ ಮಾತು.

**ಶ್ರೀ ಚನ್ನಮಲ್ಲಿಕಾರ್ಜುನ ದೇಶೀಕೇಂದ್ರ ಮರಿಜಡೆಯ ಶಂಕರ ದೇವರು :** ಶ್ರೀ ಚನ್ನಮಲ್ಲಿಕಾರ್ಜುನ ಶಿವಾಚಾರ್ಯರ ಸದಿಚ್ಛೆಯಂತೆ ಶಿವಾಚಾರ ಸಂಪನ್ನರಾಗಿ ಶಿವಸಿದ್ಧಾಂತ ಶಿಖಾಮಣಿಯನ್ನು ಪ್ರಚುರಪಡಿಸಿ ಮಹಾತಪಸ್ವಿಗಳಾಗಿದ್ದವರು. ಇವರ ಕಾಲಮಾನ ಕ್ರಿ.ಶ. ೧೪ನೇ ಶತಮಾನ.

**ಶ್ರೀ ಚನ್ನರಾಜ ದೇಶೀಕೇಂದ್ರ ಗಿರಿಮಲ್ಲೇಶ ದೇವರು:** ಇವರು ೧೨ನೇ ಶತಮಾನದಲ್ಲಿ ಚನ್ನಮಲ್ಲಿಕಾರ್ಜುನರು ಸ್ಥಾಪಿಸಿದ ಪುಷ್ಪದಗಿರಿ, ಬೆಟ್ಟದಪುರ ಮುಂತಾದ ಮಲ್ಲಿಕಾರ್ಜುನ ದೇವಾಲಯಗಳಿಗೆ ಭೇಟಿಯನ್ನಿತ್ತ ಸಂದರ್ಭದಲ್ಲಿ ಭಕ್ತರಿಗೆ ಷಟ್‌ಸ್ಥಳ ಅಷ್ಟಾವರಣಗಳನ್ನು ಬೋಧನೆ ಮಾಡಿದರು. ಇವರ ಕಾಲಮಾನ ೧೫ನೇ ಶತಮಾನ ಆರಂಭ ಎಂದು ತಿಳಿದುಬರುತ್ತದೆ.

**ಚನ್ನರಾಜ ದೇಶೀಕೇಂದ್ರ ಕರಿಬಸವ ಸ್ವಾಮಿಗಳು :** ಇವರು ಮಹಾನ್ ವೈರಾಗ್ಯ ಮೂರ್ತಿಗಳಾಗಿದ್ದವರು. ಶ್ರೀಶೈಲವಾಸಿ ಮಲ್ಲಿಕಾರ್ಜುನನ್ನು ಕಾಣುವ ಹಂಬಲದಿಂದ ಶ್ರೀಶೈಲಕ್ಕೆ ಪ್ರವಾಸ ಹೋಗಿಬರುವ ಮಾರ್ಗದಲ್ಲಿ ಲಿಂಗೈಕ್ಯರಾದರೆಂದು ತಿಳಿದುಬರುತ್ತದೆ. ಇವರ ಕಾಲಮಾನ ಕ್ರಿ.ಶ. ೧೫ನೇ ಶತಮಾನದ ಅಂತ್ಯ.

**ಒಡೆಯರ್ ಚನ್ನರಾಜ ದೇಶೀಕೇಂದ್ರ ಚನ್ನಗುರು ಮಲ್ಲಯ್ಯ ಅಥವಾ ಚನ್ನಗುರು ಮಲ್ಲಾರ್ಯರು :** ಇವರ ಕಾಲಮಾನ ಕ್ರಿ.ಶ. ೧೬ನೇ ಶತಮಾನ. ದೇಶದ ಇತಿಹಾಸದಲ್ಲಿ ಈ ಶತಮಾನವನ್ನು ಸಂಶಯ ಮತ್ತು ವಿಮರ್ಶೆಯ ಕಾಲವೆಂದು ಇತಿಹಾಸಕಾರರ ನಿರ್ಣಯ. ಜಾತಿ-ಭೇದವಳಿದು ಸರ್ವರೂ ಶಿವನ ಮಕ್ಕಳೆಂದು ಭಾವಿಸಿ ಸರ್ವರಿಗೆ ಲೇಸನ್ನೇ ಬಯಸಿದ ಮಹಾತ್ಮರಿವರು.

**ಹಿಂದೂ ಮುಸ್ಲಿಂ ಸಾಮರಸ್ಯದ ಸಂಕೇತ :** ಉತ್ತರ ಭಾರತದಲ್ಲಿ ಮೊಘಲರು, ದಕ್ಷಿಣದಲ್ಲಿ ಬಹಮನಿಗಳು ಪ್ರಬಲರಾದಂತೆ ಹೊನ್ನಾಳಿಯೂ ಮುಸಲ್ಮಾನರ ಆಳ್ವಿಕೆಗೆ ಒಳಪಟ್ಟಿತು. ಒಮ್ಮೆ ಗುರುಮಲ್ಲಾರ್ಯರನ್ನು ಸಂಶಯಿಸಿ ನವಾಬನು ನಿಂತಲ್ಲಿಯೇ ಸಾವಿರ ಹೊನ್ನನ್ನು ಕೊಡಬೇಕೆಂದು ಸವಾಲು ಹಾಕಿದನು. ಆಗ ಗುರುಗಳು ನಸುನಕ್ಕು ನವಾಬರೇ, ನಿಮ್ಮೆದುರಿಗಿರುವ ಮಣ್ಣಿನ ಹೆಂಟೆಯನ್ನು ಎತ್ತಿರಿ ಸಿಗುವುದು ಎಂದು ಅಪ್ಪಣೆ ಮಾಡಿದರು. ಗುರುವಾಕ್ಯವನ್ನು ಪರೀಕ್ಷೆ ಮಾಡುವಂತೆ ಹೆಂಟೆಯನ್ನು ಮೇಲೆತ್ತಿದಾಗ ಹೊನ್ನನ್ನು ಕಂಡು ಆಶ್ಚರ್ಯಭರಿತನಾಗಿ ವಂದಿಸಿದನು.

ಚನ್ನಗುರು ಮಲ್ಲಾರ್ಯರು ನವಾಬನಿಗೆ 'ದೇವನೊಬ್ಬನೇ' ಅವನಲ್ಲಿ ಭೇದವೆಣಿಸಬಾರದೆಂದು ಬೋಧಿಸಿ ಶ್ರೀಮಠದ ಒಳ ಭಾಗದಲ್ಲಿರುವ ಬಾವಿಯಿಂದ ನಿಮ್ಮ ಧರ್ಮದ ಚಿನ್ಹೆಯಾದ 'ಹಸ್ತ' ದೊರೆಯುತ್ತದೆ ಅದನ್ನು ತೆಗೆದುಕೊಂಡು ನಿಮ್ಮ ಪದ್ಧತಿಯಂತೆ ಆರಾಧಿಸಿರೆಂದು ಅಪ್ಪಣೆಯನ್ನಿತ್ತರು. ಪರಮಪೂಜ್ಯರ ಪ್ರಭಾವದಿಂದಾಗಿಯೇ ನವಾಬನು ಈ ಭಾಗದಲ್ಲಿ ದೇವಾಲಯ ಗಳನ್ನು ನಾಶಪಡಿಸುವ ದುಸ್ಸಾಹಸಕ್ಕೆ ಯತ್ನಿಸಲಿಲ್ಲ. ಅಂತೆಯೇ ಇಂದಿಗೂ ಮುಸಲ್ಮಾನರು ಶ್ರೀಮಠದೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿರುತ್ತಾರೆ. ಅನೇಕ ಮುಸಲ್ಮಾನ ವ್ಯಾಜ್ಯಗಳು ಗುರುಗಳ ಆಶೀರ್ವಾದದಿಂದ ಬಗೆಹರಿದಿರುವುದು ಶ್ರೀಮಠದ ದಾಖಲೆಗಳಿಂದ ತಿಳಿದುಬರುತ್ತದೆ.

ಗುರುಗಳು ಹೊನ್ನಾಳಿಯಲ್ಲಿ ತಮ್ಮ ಒಡೆತನದಲ್ಲಿದ್ದ ಜಾಗವನ್ನು ಮಸೀದಿ ನಿರ್ಮಾಣಕ್ಕಾಗಿ ಆಶೀರ್ವದಿಸಿದರು. ಇಂದಿಗೂ ಈ ಜಾಗವನ್ನು ಮಸೀದಿಯ ಜಾಗವೆನ್ನುವರು. ಇಂದೂ ಸಹ ಪ್ರತಿ ವರ್ಷ ಮೊಹರಂ ಹಬ್ಬದಲ್ಲಿ ದೇವರನ್ನು ಈ ಜಾಗದಲ್ಲಿ ಕೂಡ್ರಿಸಿ ಶ್ರೀಮಠದಿಂದ ಅಕ್ಕಿ, ಬೆಲ್ಲ, ದೀಪಕ್ಕೆ ಎಣ್ಣೆಯನ್ನು ಮುಸಲ್ಮಾನ ಬಂಧುಗಳು ತಂದು ಹಬ್ಬವನ್ನು ಆಚರಿಸುವುದು ಪರಂಪರೆಯಾಗಿ ಬೆಳೆದುಕೊಂಡು ಬಂದಿದೆ.

**ಚನ್ನಗುರು ಮಲ್ಲಾರ್ಯರು ಮತ್ತು ಕೆಳದಿ ಅರಸರು**

ಕ್ರಿ.ಶ. ೧೬ನೇ ಶತಮಾನದ ಮಧ್ಯಭಾಗ ವಿಜಯನಗರ ಮತ್ತು ಕೆಳದಿಯ ಅರಸರಿಗೆ ಸಂಕ್ರಮಣದ ಕಾಲವೆನ್ನಬಹುದು. ಒಂದೆಡೆ 'ರಕ್ಕಸತಂಗಡಿ' ಕದನವು ವಿಜಯನಗರ ಸಾಮ್ರಾಜ್ಯದ ಅಸ್ತಿತ್ವಕ್ಕೆ ಕುತ್ತು ತಂದರೆ ಅದರ ನೇರ ಪರಿಣಾಮ ಕೆಳದಿಯ ರಾಜ್ಯದ ಮೇಲೆ ತನ್ನ ಛಾಯೆ ಬೀರಬಹುದೆಂಬ ಆತಂಕ ಅರಸ ಚಿಕ್ಕಸಂಕಣ್ಣನಾಯಕ (ಕ್ರಿ.ಶ. ೧೫೫೯-೭೧) ನಿಗಿತ್ತು. ಮತ್ತೊಂದೆಡೆ ಮಗ ಸಿದ್ಧಪ್ಪ ನಾಯಕನಿಗೆ ಪುತ್ರಸಂತಾನವಾಗದ ಕೊರತೆ ಇತ್ತು. ಚನ್ನಗುರುಮಲ್ಲಾರ್ಯರ ಅನುಗ್ರಹದಿಂದ ಪುತ್ರಸಂತಾನವಾಗಿ ಗುರುಗಳ ಅಪ್ಪಣೆಯಂತೆ ಮಗುವಿಗೆ ಶಿವಪ್ಪನಾಯಕನೆಂದು ಹೆಸರಿಟ್ಟರು. ಮುಂದೆ ಶಿಸ್ತಿನ ಶಿವಪ್ಪನಾಯಕನೆಂದು ಕ್ರಿ.ಶ. ೧೬೪೫ ರಿಂದ ಕ್ರಿ.ಶ. ೧೬೬೦ ರವರೆಗೆ ಆಳಿದ. ಗುರುಗಳು ಶಿವಪ್ಪ ನಾಯಕರಿಗೆ ಆಗಿಂದಾಗ್ಗೆ ದರ್ಶನಾಶೀರ್ವಾದಗಳನ್ನಿತ್ತು ಕೆಳದಿಯ ಔನ್ನತ್ಯಕ್ಕೆ ಕಾರಣ ಪುರುಷರಾದರು.

ಶಿವಪ್ಪನಾಯಕರು ಗುರುಕಾರುಣ್ಯದಿಂದ ಸಂಪ್ರೀತರಾಗಿ 'ಒಡೆಯರಿಗೆ ಹತ್ತು ಊರುಗಳನ್ನು' ದತ್ತಿಯಾಗಿ ನೀಡಿರುತ್ತಾರೆ. ಆದರೆ ಕಾರಣಿಕರ ಕೈವಾಡದಿಂದ ಗ್ರಾಮಕ್ಕೆ ಹತ್ತೂರು ಎಂದು ಕರೆದು ದತ್ತಿ ಕೊಟ್ಟರೆಂದು ಮಠದ ದಾಖಲೆಗಳಿಂದ ತಿಳಿಯುತ್ತದೆ. ಇಂದಿಗೂ ಇದನ್ನು 'ಒಡೆಯರ ಹತ್ತೂರೆಂದು' ಕರೆಯುತ್ತಾರೆ. ಅಲ್ಲದೆ ಅಲ್ಲಿ ಶ್ರೀಮಠದ ಶಾಖಾ ಮಠವೂ ಇದೆ. ಅದೇ ರೀತಿಯಾಗಿ ಭದ್ರಾವತಿ ತಾಲ್ಲೂಕು ಆನವೇರಿ ಬಳಿ ಇರುವ ಒಡೆಯರರಾಂಪುರ ಎಂದು ಕರೆಯಲ್ಪಡುವ ಗ್ರಾಮವೂ ಸಹ ಶ್ರೀಮಠದ ದತ್ತುಗ್ರಾಮ ವೆಂದು ಮಠದ ದಾಖಲೆಗಳಿಂದ ತಿಳಿದುಬರುತ್ತದೆ.

ಕೆಳದಿಯ ಅರಸ ಸೋಮಶೇಖರ ನಾಯಕನ ಹೆಂಡತಿ ರಾಣಿ ಚೆನ್ನಮ್ಮಾಜಿ (ಕ್ರಿ.ಶ. ೧೬೭೧ ರಿಂದ ೧೬೯೭) ಶ್ರೀಮಠ ದೊಂದಿಗೆ ನಿಕಟ ಸಂಪರ್ಕ ಹೊಂದಿದ ಬಗ್ಗೆ ಮಾಹಿತಿ ಇದೆ ಹಾಗೂ ಚನ್ನಗುರು ಮಲ್ಲಾರ್ಯರ ಪ್ರಭಾವದಿಂದಾಗಿ ಚೆನ್ನಮ್ಮಾಜಿ ಎಂಬ ಹೆಸರೂ ಕೂಡ ಬಂದಿರಬಹುದೆಂದು ತೋರುತ್ತದೆ.

**ಮೈಸೂರಿನ ಒಡೆಯರು ಮತ್ತು ಚನ್ನಗುರು ಮಲ್ಲಾರ್ಯರು:** ಶ್ರೀಮಠದ ಪರಂಪರೆಯಂತೆ ಶ್ರೀ ಗುರು ಚನ್ನಮಲ್ಲಾರ್ಯರು ವೀರಶೈವ ಧರ್ಮಪ್ರಚಾರ ಕೈಗೊಂಡ ಸಂದರ್ಭದಲ್ಲಿ ಮೈಸೂರು ಬಳಿ ಬೆಟ್ಟದಪುರದ ಶ್ರೀ ಮಲ್ಲಿಕಾರ್ಜುನ ದೇವಾಲಯದಲ್ಲಿ ತಂಗಿದ್ದರು. ಮೈಸೂರುನ್ನಾಳುತ್ತಿದ್ದ ಚಾಮರಾಜರು ಪುತ್ರಸಂತಾನ ವಿಲ್ಲದೆ ಮರಣ ಹೊಂದಿದರು. ದುರುಳ ಸೇನಾಪತಿ ಮಾರ ನಾಯಕನು ರಾಜ್ಯದ ಗದ್ದುಗೆಯ ಮೇಲೆ ಕಣ್ಣಿಟ್ಟು ರಾಣಿ ದೇವರಾಜಮ್ಮಣ್ಣಿಗೆ ಏಕೈಕ ಪುತ್ರಿಯನ್ನು ವಿವಾಹ ಮಾಡಿಕೊಟ್ಟು ರಾಜ್ಯದ ಅಧಿಕಾರ ಸೂತ್ರವನ್ನು ವಹಿಸಿಕೊಡುವಂತೆ ಪೀಡಿಸು ತ್ತಿದ್ದುದು ಸರ್ವರಿಗೂ ತಿಳಿದ ವಿಷಯವಾಗಿ. ಮಹಾಮಹಿಮ ರಾದ ಶ್ರೀ ಚನ್ನಗುರುಮಲ್ಲಾರ್ಯರು ಬೆಟ್ಟದಪುರದಲ್ಲಿ ತಂಗಿದ್ದ ವಾರ್ತೆ ತಿಳಿದು ಮಹಾರಾಣಿಯವರು ದರ್ಶನಾಶೀರ್ವಾದಕ್ಕೆ ಬಂದಂಥ ಸಂದರ್ಭದಲ್ಲಿ ಅವರ ಸಂಕಟವನ್ನು ಮನಗಂಡು ಧೈರ್ಯದಿಂದಿರಲು ಆಶೀರ್ವದಿಸಿದರು.

ಅದೇ ವೇಳೆಯಲ್ಲಿ ಯಾತ್ರಾರ್ಥಿಗಳಾಗಿ ದ್ವಾರಕೆಯಿಂದ ಯದುವಂಶದ ಸೋದರರಾದ ಯದುರಾಯ ಮತ್ತು ಶ್ರೀಕೃಷ್ಣ ರಾಯರು ಬೆಟ್ಟದಪುರದಲ್ಲಿ ತಂಗಿದ್ದರು. ದರ್ಶನಾಕಾಂಕ್ಷಿಗಳಾದ ಯದು ಸೋದರಿಗೆ ಮಹಾಮಾತೆ ಚಾಮುಂಡೇಶ್ವರಿಯ ಇಚ್ಛೆಯಂತೆ ಸುತ್ತೂರು ಮಠದ ಘನಲಿಂಗಿ ದೇವರು (೧೫೩೦-೧೫೫೦) ಮಾರ್ಗದರ್ಶನ ನೀಡಿದು ಮಹಾರಾಣಿಯವರನ್ನು ಮತ್ತು ರಾಜ್ಯದ ಜನತೆಯನ್ನು ಪಾರು ಮಾಡುವಂತೆ ಸೂಚಿಸಿದರು. ಘನಲಿಂಗ ದೇವರು ಮತ್ತು ಮಹಾರಾಣಿಯವರ ಸೂಚನೆಯಂತೆ ಯದು ಸೋದರರು ಸೇನೆಯ ನಾಯಕತ್ವ ವಹಿಸಿ ದುರುಳ ಮಾರನಾಯಕ ನನ್ನು ಸಂಹರಿಸಿ ಮಹಾರಾಣಿಯವರನ್ನು ಸಂಕಟದಿಂದ ಪಾರು ಮಾಡಿದ್ದಲ್ಲದೆ ಗುರುಗಳ ಆದೇಶದಂತೆ ರಾಜಕುಮಾರಿ ಸೌಭಾಗ್ಯ ದೇವಿಯೊಂದಿಗೆ ವಿವಾಹ ಜರುಗಿ ರಾಜ್ಯದ ಅಧಿಕಾರ ಸೂತ್ರವನ್ನು ವಹಿಸಿಕೊಡುವ ಸಂದರ್ಭದಲ್ಲಿ ಜಂಗಮರ ಲಾಂಛನವಾದ ಕಾವಿ ಬಟ್ಟೆಯನ್ನು ಅರಸರ ಧ್ವಜದಲ್ಲಿ ಕಟ್ಟುವಂತೆಯೂ 'ಒಡೆಯರ್' ಎಂಬ ಬಿರುದಾಂಕಿತ ರಾಗುವಂತೆಯೂ ಚನ್ನಗುರುಮಲ್ಲಾರ್ಯರು ಆಶೀರ್ವದಿಸಿದರು.

ಯದುರಾಯರು ಒಂದು ಹೆಜ್ಜೆ ಮುಂದೆ ಬಂದು 'ಗುರುಗಳೇ ಈ ರಾಜ್ಯ ಪದವಿ ತಮ್ಮ ಅನುಗ್ರಹ ಆದ್ದರಿಂದ ಈ ಗೌರವ ಮೊದಲು ತಮಗೆ ಸಲ್ಲುವುದುಚಿತ. ಆದ್ದರಿಂದ ತಮ್ಮ ಹೆಸರಿನ ಆರಂಭದಲ್ಲಿ 'ಒಡೆಯರ್' ಎಂಬ ಬಿರುದು ಧಾರಣವಾಗಬೇಕು ಅಂತೆಯೇ ನಮ್ಮ ಹೆಸರಿನ ನಂತರ ಒಡೆಯರ್ ಬಿರುದು ಧರಿಸುವಂತೆ ಅನುಗ್ರಹಿಸಬೇಕೆಂದು ಭಕ್ತಿಯಿಂದ ಬೇಡಿಕೊಂಡ ಮೇರೆಗೆ ಗುರುಗಳು ಒಪ್ಪಿದರು. ಅಂದಿನಿಂದ ಇಂದಿನವರೆವಿಗೂ ಶ್ರೀಮಠದ ಪರಂಪರೆಯ ಗುರುಗಳು ತಮ್ಮ ಹೆಸರಿನ ಆರಂಭದಲ್ಲಿ 'ಒಡೆಯರ್' ಎಂಬ ಬಿರುದು ಧರಿಸುವುದು ಪರಂಪರಾನುಗತವಾಗಿ ಬಂದಿದೆ ಎಂದು 'ಹಿರಿಯ ಕಲ್ಮಠ ಕ್ಷೇತ್ರ ಪರಿಚಯ' ಎಂಬ ಕಿರುಗ್ರಂಥದಲ್ಲಿ, ಶ್ರೀಮಠದ ಪುರಾಣದಲ್ಲಿ ಉಲ್ಲೇಖವಾಗಿದೆ. ಅಲ್ಲದೆ ಇಂದಿಗೂ ಸಹ ಮೈಸೂರು ರಾಜಮನೆತನದಲ್ಲಿ 'ಚನ್ನರಾಜ ಅರಸು' 'ಮಲ್ಲರಾಜ ಅರಸು' ಎಂಬ ನಾಮಾಂಕಿತವನ್ನು ವಿಶೇಷ ವಾಗಿ ಕಾಣಬಹುದೆಂದು ವಿದ್ಯಾವಿಭೂಷಣ, ಸಾಹಿತ್ಯರತ್ನ ಶ್ರೀ ಓ.ಎನ್. ಲಿಂಗಣ್ಣಯ್ಯ ಅವರ 'ಜಂಗಮ ವಿಜಯ' ಆಧಾರದಿಂದ ತಿಳಿದುಬರುತ್ತದೆ.

**ಚನ್ನಪ್ಪಸ್ವಾಮಿ ಕೂಲಿ :** ಚನ್ನಗುರು ಮಲ್ಲಾರ್ಯರು ನಾಡಿನ ಭಕ್ತರ ಮತ್ತು ಅರಸರ ಅಭ್ಯುದಯ ಬಯಸಿದಂತೆ ಶ್ರೀಮಠದ ಉನ್ನತಿ ಬಯಸಿದವರು. ಸಮೀಪದ ಕತ್ತಗಿ ಗ್ರಾಮದ ಬೆಟ್ಟದಿಂದ ಕಲ್ಲುಗಳನ್ನು ತರಿಸಿ ಬಂಧುರವಾದ ಶಿಲಾಮಠವನ್ನು ನಿರ್ಮಿಸಿದರು.

ಶಿಲಾಮಠದ ನಿರ್ಮಾಣದ ವೇಳೆ ಕೆಲಸ ಮಾಡುತ್ತಿದ್ದ ವಡ್ಡರಿಗೆ ಪ್ರತಿದಿನ ಸಂಜೆ ಸಾಲಾಗಿ ಕೂರಲು ಹೇಳಿ ಮರಳುಗುಂಪೆ ಮಾಡಿಕೊಳ್ಳಲು ತಿಳಿಸಿ ತಮ್ಮ ಬೆತ್ತದಿಂದ 'ಕಷ್ಟದಂತೆ ಫಲ' ಎಂದ ಸ್ಪರ್ಶಿಸುತ್ತಿದ್ದರು. ವಡ್ಡರು ಮರಳು ಗುಂಪೆ ಕೆದಕಿದಾಗ ಶ್ರಮಕ್ಕೆ ತಕ್ಕಂತೆ ಚಿನ್ನದ ನಾಣ್ಯಗಳು ದೊರೆಯುತ್ತಿದ್ದವು. ನಾಡಿನಲ್ಲಿ 'ಹೊನ್ನಾಳಿ ಹೊಡೆತ' ಎಂದು ಪ್ರಸಿದ್ಧಿಯಾಗಿದೆಯೋ ಹಾಗೆಯೇ 'ಶ್ರೀ ಚನ್ನಪ್ಪಸ್ವಾಮಿ ಕೂಲಿ' ಎಂಬುದೂ ಕೂಡ ಜನಜನಿತವಾಗಿದೆ.

ಇದೇ ಮಾತನ್ನು ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದ ದಿ|| ಜೆ.ಎಚ್. ಪಟೇಲರು ಅನೇಕ ಸಭೆ-ಸಮಾರಂಭಗಳಲ್ಲಿ ಚನ್ನಪ್ಪಸ್ವಾಮಿಯ ಕೂಲಿಯನ್ನು ಸ್ಮರಿಸಿಕೊಳ್ಳುತ್ತಾ, ಇದು ತಮ್ಮ ಜೀವನದ ಮೇಲೆ ಪ್ರಭಾವಿತವಾಗಿರುವ ಸಂಗತಿ ಎನ್ನುತ್ತಿದ್ದುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ. ಅಲ್ಲದೇ ಮುಂದೆ ೧೮ನೇ ಶತಮಾನದಲ್ಲಿ ಸೇಂಟ್ ಸೈಮನ್, ಲೂಯಿ ಬ್ಲಾಂಕ್, ಕಾರ್ಲ್ ಮಾರ್ಕ್ಸ್‌ರ 'ಶ್ರಮಕ್ಕೆ ತಕ್ಕ ಪ್ರತಿಫಲ' ಎಂದು ಸಿದ್ಧಾಂತ ವಾಗುವ ಮೊದಲೇ ಗುರುಗಳು 'ಮಾನವ ಯಾವಾಗಲೂ ಶ್ರಮಜೀವಿಯಾಗ ಬೇಕು. ತನ್ನ ಉನ್ನತಿಗೆ ತಾನೇ ಕಾರಣನಾಗಬೇಕು' ಎಂದು ಭಕ್ತರಿಗೆ ಉಪದೇಶ ಮಾಡುತ್ತಿದ್ದುದು ಜನಮಾನಸದಲ್ಲಿ ಇಂದಿಗೂ ಉಳಿದು ಕೊಂಡು ಬಂದಿದೆ.

ಇಂದೂ ಕೂಡ ಕತ್ತಿಗೆಗುಡ್ಡದಲ್ಲಿ ಕಲ್ಲು ಕಿತ್ತ ಸ್ಥಳದಲ್ಲಿ ಕಲ್ಲು ಚಪ್ಪಡಿ ಕಂಬಗಳನ್ನು ಕಾಣುವಂತೆ ಸ್ವಾಮಿಗಳ ಪಾದಗಳನ್ನು ಸಹ ಕಾಣಬಹುದಾಗಿದೆ. ಅಲ್ಲದೇ ಸುಮಾರು ೫ ಅಡಿ ಎತ್ತರವಿರುವ ಉದ್ದನೆಯ ಕಲ್ಲು ದೋಣಿಯು ಈಗಲೂ ಸಹ ಯರೇಹಳ್ಳಿ ಗ್ರಾಮದ ಬಳಿ ಇದೆ. ಇದು ಪ್ರಾಯಶಃ ಕಲ್ಲು ಸಾಗಿಸುವ ವಡ್ಡರಿಗೆ ಮತ್ತು ಎತ್ತುಗಳಿಗೆ ನೀರುಣಿಸಲು ಬಳಸಿರುವುದಾಗಿದೆ. ನಾಡಿನ ಪ್ರಸಿದ್ಧ ಇತಿಹಾಸಕಾರರಾದ ಡಾ|| ಅ. ಸುಂದರ ಅವರು 'ವಾಸ್ತುಶಿಲ್ಪ ಶೈಲಿಯಲ್ಲಿ ಮಠದ ವಾಸ್ತುಶಿಲ್ಪವು ವಿಜಯನಗರದ ಅಂತ್ಯದ ಕಾಲಮಾನದ್ದಾಗಿದೆ' ಎಂದು ಅಭಿಪ್ರಾಯಪಟ್ಟಿದ್ದಾರೆ.

ಚನ್ನಗುರು ಮಲ್ಲಾರ್ಯರು ಕ್ರಿ.ಶ. ೧೬ನೇ ಮಧ್ಯಭಾಗದಿಂದ ಕ್ರಿ.ಶ. ೧೭ನೇ ಅಂತ್ಯದವರೆಗೆ ಅಂದರೆ, ಸುಮಾರು ೧೦೦ ವರ್ಷಗಳ ಕಾಲ ಬದುಕಿದ್ದರು.

**ಒಡೆಯರ್ ಶ್ರೀ ಚನ್ನರಾಜ ದೇಶೀಕೇಂದ್ರ ಚನ್ನಬಸವ ಶಿವಾಚಾರ್ಯರು (ಕ್ರಿ.ಶ. ೧೬೭೫ ರಿಂದ ೧೭೫೦)** : ಇವರು ಮಹಾತಪಸ್ವಿಗಳೂ, ಶಿವಾಚಾರ ಸಂಪನ್ನರೂ, ಶಾಸನೋಕ್ತರೂ, ಕೆಳದಿ ಅರಸು ವಂದಿತರೂ ಆಗಿದ್ದುದು ತಿಳಿದುಬರುತ್ತದೆ. ಶಿವಮೊಗ್ಗ ತಾಲ್ಲೂಕು ಆಯನೂರು ಹೋಬಳಿ ಕುಡಿ ಗ್ರಾಮ (ಬೇಚರಾಕ್ ಗ್ರಾಮ, ಬಸವರಾಜಪುರ) ಮೈಸೂರು ಆರ್ಕಿಯಾಲಾಜಿಕಲ್ ವರದಿ ೧೯೨೩ ಸಂಖ್ಯೆ ೬೩ ರಂತೆ ೧೬೯೯ ವೇಳೆಗಾಗಲೇ ಪಟ್ಟಾಧಿಕಾರಿಗಳಾಗಿದ್ದುದು ತಿಳಿದುಬರುತ್ತದೆಯಲ್ಲದೆ ಕೆಳದಿಯ ಬಸವಪ್ಪ ನಾಯಕರ ಕಾಲದಲ್ಲಿನ ನಿರೂಪದಲ್ಲಿ ಶ್ರೀಮಠವನ್ನು ಶ್ರೀಶೈಲ ಪರ್ವತ ಸೂರ್ಯಸಿಂಹಾಸನ ಪಟ್ಟ ಎಂದಿರುವುದು ಪಲ್ಲಕ್ಕಿ ಭೂಷಿತರಾಗಿ ಶ್ವೇತಚತ್ರ ಪಂಚಕಳಶ, ಪಂಚದೀವಟಿಗೆ, ಪಂಚವಾದ್ಯವೆಂಬ ಬಿರುದುಗಳು ಹಾಗೂ ಸಿಬ್ಬಂದಿಯೊಂದಿಗೆ ಪ್ರವಾಸ ಮಾಡುವುದಕ್ಕೆ ಹಾಗೂ ಕಪ್ಪ ಕಾಣಿಕೆ ವಸೂಲಿ ಮಾಡಲು ಅಡ್ಡಿಪಡಿಸಿದವರು ಅರಮನೆಯ ಶಿಕ್ಷೆಗೆ ಒಳಪಡುವರೆಂಬ ವಿಷಯ ನಿರೂಪದಿಂದ ತಿಳಿದುಬರುತ್ತದೆ.

**ಒಡೆಯರ್ ಶ್ರೀ ಚನ್ನರಾಜ ದೇಶೀಕೇಂದ್ರ ವೀರಭದ್ರ ಶಿವಾಚಾರ್ಯರು** : ಇವರ ಕಾಲಮಾನ ೧೭೪೮ (೫೦) ರಿಂದ ೧೭೫೭ ಹೆಚ್ಚಿನ ಮಾಹಿತಿ ಲಭ್ಯವಿಲ್ಲ.

**ಒಡೆಯರ್ ಶ್ರೀ ಚನ್ನರಾಜ ದೇಶೀಕೇಂದ್ರ ಕೆಂಚವೀರ ಶಿವಾಚಾರ್ಯರು** : ಇವರ ಕಾಲಮಾನ ೧೭೫೭ ರಿಂದ ೧೭೬೫. ಶ್ರೀಮಠದ ಪರಂಪರೆಯಂತೆ ಧರ್ಮ ಪ್ರಚಾರಕ್ಕಾಗಿ ಹರಿಹರ ತಾಲ್ಲೂಕು ನಂದಿಗುಡಿಗೆ ಹೋದ ಸಂದರ್ಭದಲ್ಲಿ ಅಲ್ಲಿಯೇ ಲಿಂಗೈಕ್ಯರಾದ ಕಾರಣ ಇವರ ಗದ್ದುಗೆಯನ್ನು ಅಲ್ಲಿಯೇ ಮಾಡ ಲಾಗಿದೆ.

**ಒಡೆಯರ್ ಶ್ರೀ ಚನ್ನರಾಜ ದೇಶೀಕೇಂದ್ರ ಚನ್ನಪ್ಪ ಸ್ವಾಮಿಗಳು** : ಇವರ ಕಾಲಮಾನ ಕ್ರಿ.ಶ. ೧೭೬೫ ರಿಂದ ೧೮೧೦. ಮಾಹಿತಿ ಸಂಗ್ರಹದ ಅವಶ್ಯಕತೆ ಇದೆ.

**ಒಡೆಯರ್ ಶ್ರೀ ಚನ್ನರಾಜ ದೇಶೀಕೇಂದ್ರ ಗುರುಸಿದ್ಧ ಶಿವಾಚಾರ್ಯರು** : ಇವರ ಕಾಲಮಾನ ಕ್ರಿ.ಶ. ೧೮೧೦ ರಿಂದ ೧೮೩೦. ಇವರು ಹೊನ್ನಾಳಿ ತಾಲ್ಲೂಕಿನ ನ್ಯಾಮತಿ ಗ್ರಾಮದವರು.

**ಒಡೆಯರ್ ಶ್ರೀ ಚನ್ನರಾಜ ದೇಶೀಕೇಂದ್ರ ಚನ್ನಮಲ್ಲಪ್ಪ ಶಿವಾಚಾರ್ಯರು** : ಇವರ ಕಾಲಮಾನ ಕ್ರಿ.ಶ. ೧೮೩೦ ರಿಂದ ೧೮೭೨. ಹೊನ್ನಾಳಿ ತಾಲ್ಲೂಕಿನ ದೊಡ್ಡೆತ್ತಿನಹಳ್ಳಿ ಗ್ರಾಮದವರು.

**ಒಡೆಯರ್ ಶ್ರೀ ಚನ್ನರಾಜ ದೇಶೀಕೇಂದ್ರ ಮುರುಗೆಪ್ಪ ಶಿವಾಚಾರ್ಯರು** : ಇವರ ಕಾಲಮಾನ ಕ್ರಿ.ಶ. ೧೮೭೨ ರಿಂದ ೧೮೯೦. ಇವರ ಜನ್ಮಸ್ಥಳ ಹೊನ್ನಾಳಿ ತಾಲ್ಲೂಕಿನ ಮುಗಳೀಹಳ್ಳಿ. ಇವರ ತೈಲಚಿತ್ರ ಶ್ರೀಮಠದಲ್ಲಿದೆ. ಇವರ ಬಗ್ಗೆ ಮಾಹಿತಿ ಸಂಗ್ರಹದ ಅಗತ್ಯತೆಯಿದೆ.

**ಒಡೆಯರ್ ಶ್ರೀ ಚನ್ನರಾಜ ದೇಶೀಕೇಂದ್ರ ರುದ್ರಪ್ಪ ಸ್ವಾಮಿಗಳು** : ಇವರು ಹಿಂದಿನ ಸ್ವಾಮಿಗಳ ಸಹೋದರರು. (ಮುರುಗೆಪ್ಪ ಸ್ವಾಮಿಗಳು) ಇವರ ಕಾಲದಲ್ಲಿ ಮೈಸೂರಿನ ಅರಸರಾದ ನಾಲ್ವಡಿ ಕೃಷ್ಣರಾಜ ಒಡೆಯರು ಶ್ರೀಮಠಕ್ಕೆ ಆಗಮಿಸಿ, ಗುರುಗಳ ದರ್ಶನಾಶೀರ್ವಾದ ಪಡೆದರೆಂದು ತಿಳಿದುಬರುತ್ತದೆ. ಜನ್ಮಸ್ಥಳ- ಇದೇ ತಾಲ್ಲೂಕಿನ ಮುಗಳೀಹಳ್ಳಿ. ಕಾಲಮಾನ-ಕ್ರಿ.ಶ. ೧೮೯೦ ರಿಂದ ೧೯೦೨.

**ಒಡೆಯರ್ ಶ್ರೀ (ಇಮ್ಮಡಿ) ಚನ್ನರಾಜ ದೇಶೀಕೇಂದ್ರ ರುದ್ರಪ್ಪ ಸ್ವಾಮಿಗಳು** : ಹೊನ್ನಾಳಿ ತಾಲ್ಲೂಕಿನ ಸೋಗಿಲು ಗ್ರಾಮದವರು.

ಮಹಿಮರೂ ಉದ್ದಾಮ ಪಂಡಿತರೂ ಆಗಿದ್ದರಲ್ಲದೆ ಕುದುರೆ ಸವಾರಿ ಅಚ್ಚುಮೆಚ್ಚಿನ ಹವ್ಯಾಸವಾಗಿದ್ದಿತು. ಇವರ ಕಾಲಮಾನ ಕ್ರಿ.ಶ. ೧೯೦೨ ರಿಂದ ಕ್ರಿ.ಶ. ೧೯೨೯. ಇವರ ಫೋಟೋ ಶ್ರೀಮಠದಲ್ಲಿದೆ. ಇವರನ್ನು ತೇಜಿರುದ್ರಮುನಿಗಳೆಂದು ಕರೆಯುತ್ತಾರೆ.

**ಒಡೆಯರ್ ಶ್ರೀ ಚನ್ನರಾಜ ದೇಶೀಕೇಂದ್ರ ಮೃತ್ಯುಂಜಯ ಶಿವಾಚಾರ್ಯರು** : ಇವರ ಕಾಲಮಾನ ೧೯೨೯-೧೯೭೧. ಜನ್ಮಸ್ಥಳ-ಧಾರವಾಡ ಜಿಲ್ಲಾ ಶಿರಹಟ್ಟಿ ತಾಲ್ಲೂಕು ಮಾಡಹಳ್ಳಿ ಗ್ರಾಮ. ತಂದೆ-ವೇ|| ಚನ್ನಬಸವಾರ್ಯ, ತಾಯಿ-ಸಿದ್ಧಮ್ಮರ ಸುಪುತ್ರರು. ಅಥಣಿ ಶಿವಯೋಗಿಗಳ ಪರಮಶಿಷ್ಯರು. ಕನ್ನಡ, ಹಿಂದಿ, ಸಂಸ್ಕೃತ ಭಾಷಾಪಂಡಿತರೂ ಆಗಿದ್ದರು. ಹುಬ್ಬಳ್ಳಿ, ಧಾರವಾಡ, ಸೊಲ್ಲಾಪುರ ಮತ್ತು ಶಂಕರ ಸಂಸ್ಕೃತ ಕಾಲೇಜು, ಯಾದಗಿರಿ ಇಲ್ಲಿ ವಿದ್ಯಾಭ್ಯಾಸ ಮಾಡಿದರು. ಶ್ರೀಮಠದ ಅಭಿವೃದ್ಧಿ ಕಾರ್ಯಗಳು ಇವರ ಕಾಲದಲ್ಲಿ ಹೆಚ್ಚಿದವು.

೧. ಶ್ರೀಮಠದಲ್ಲಿ ಇಂದಿಗೂ ಇರುವ ಮಹಾದ್ವಾರ.
೨. ಹಿಂದಿನ ಸ್ವಾಮಿಗಳ ಗದ್ದುಗೆಗೆ ಹೆಂಚಿನ ಕಟ್ಟಡ. (ಪ್ರಸ್ತುತ ಬದಲಿ ಕಟ್ಟಡ ನಿರ್ಮಾಣವಾಗಿದೆ)
೩. ಗೋಶಾಲೆ
೪. ಕಲ್ಯಾಣಮಂಟಪ
೫. ಪ್ರತಿ ತಿಂಗಳು ಅಮಾವಾಸ್ಯೆ ಪೂಜಾ ಕಾರ್ಯಕ್ರಮ ಮತ್ತು ಶಿವಾನುಭವ ಮಂಟಪ
೬. ಶ್ರೀ ಚನ್ನೇಶ್ವರ ಗಾನಕಲಾ ಸಂಘ
೭. ಉಚಿತ ಪ್ರಸಾದನಿಲಯ, ಮುಂತಾದವುಗಳು.

ಅಂತೆಯೇ ೧೯೬೦ರಲ್ಲಿ ಶಿವಮೊಗ್ಗ ಜಿಲ್ಲೆ ಶಿಕಾರಿಪುರದಲ್ಲಿ ಶ್ರೀ ಮದುಜ್ಜಯಿನಿ ಸಿಂಹಾಸನಾಧೀಶ್ವರ ಶ್ರೀ ಸಿದ್ಧೇಶ್ವರ ಶಿವಾಚಾರ್ಯ ಭಗವತ್ಪಾದರ ಸಾನ್ನಿಧ್ಯದಲ್ಲಿ ನಡೆದ ವೀರಶೈವ ಧರ್ಮದ ಸ್ಥಿರಚರ ಪಟ್ಟಾಧಿಕಾರಿಗಳ ಘನ ಅಧ್ಯಕ್ಷತೆಯ ಗೌರವಕ್ಕೆ ಪಾತ್ರರಾದರು. ೧೯೬೧ರಲ್ಲಿ ಶ್ರೀಶೈಲದಲ್ಲಿ ಜರುಗಿದ ವೀರಶೈವ ಮಹಾಸಭೆಯಲ್ಲಿ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಭಗವತ್ಪಾದರು 'ಶಿವತತ್ವ ವಿಶಾರದ ಪ್ರಶಸ್ತಿ' ದಯಪಾಲಿಸಿದುದು ಶ್ರೀಗಳವರ ಪಾಂಡಿತ್ಯಕ್ಕೆ ಕವಿ ಹೃದಯಕ್ಕೆ ಕನ್ನಡಿಯಾಗಿದೆ. ೮-೩-೧೯೭೧ರಂದು ಲಿಂಗೈಕ್ಯರಾದರು. ಗುರುಗಳ ಅಂತ್ಯಕ್ರಿಯೆ ಶ್ರೀ ರಂಭಾಪುರಿ ಜಗದ್ಗುರು ವೀರಗಂಗಾಧರ ಶಿವಾಚಾರ್ಯ ಭಗವತ್ಪಾದರ ನೇತೃತ್ವದಲ್ಲಿ ಅಪಾರ ಭಕ್ತಜನ ಸ್ತೋಮದ ಮಧ್ಯೆ ಜರುಗಿತು.

**ಶ್ರೀ ಷ|| ಬ್ರ|| ಒಡೆಯರ್ ಚಂದ್ರಶೇಖರ ಶಿವಾಚಾರ್ಯರು** : ಬಳ್ಳಾರಿ ಜಿಲ್ಲಾ ಹಡಗಲಿ ಕಂದಗಲ್ ಪುರದ ಸೋಗಿಮಠದ ವೇ|| ಗುರುನಂಜಯ್ಯ ಮತ್ತು ಮಾತೃಶ್ರೀ ರಾಚಮ್ಮನವರ ಸುಪುತ್ರರು. ಸಂಸ್ಕೃತ ವೇದಾಧ್ಯಯನ ಮಾಡುತ್ತಿರುವಾಗಲೇ ಸೋಗಿಪುರವರ್ಗ ಮಠದ ಪಟ್ಟಾಧಿಕಾರಿಗಳಾಗಿದ್ದರೂ ವಿದ್ಯಾಭ್ಯಾಸವನ್ನು ಕಡೆಗಣಿಸದೆ ಧಾರವಾಡದ ಕರ್ನಾಟಕ ವಿಶ್ವ ವಿದ್ಯಾನಿಲಯದಲ್ಲಿ ಕನ್ನಡ ವಿಷಯದಲ್ಲಿ ಸ್ನಾತಕೋತ್ತರ ಎಂ.ಎ. ಪದವಿ ಪಡೆದರು.

ಶ್ರೀ ಷ|| ಬ್ರ|| ಒಡೆಯರ್ ಮೃತ್ಯುಂಜಯ ಶಿವಾಚಾರ್ಯರು ಲಿಂಗದೊಳಗಾದ ನಂತರ ಶ್ರೀಮದ್ರಂಭಾಪುರಿ ವೀರಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಪ್ರಸನ್ನರೇಣುಕ ವೀರಗಂಗಾಧರ ಶಿವಾಚಾರ್ಯ ಭಗವತ್ಪಾದರು ಮತ್ತು ಶ್ರೀಶೈಲ ಜಗದ್ಗುರು ಸೂರ್ಯ ಸಿಂಹಾಸನಾಧೀಶ್ವರ ಶ್ರೀ ವಾಗೀಶ ಪಂಡಿತಾರಾಧ್ಯರು ಮತ್ತು ಶ್ರೀಮಠದ ಸದ್ಭಕ್ತರು ಸಮಾಲೋಚಿಸಿ ಸೋಗೀಪುರ ವರ್ಗ, ಕಟ್ಟೆಮನೆ, ಮಠಾಧ್ಯಕ್ಷರಾದ ಶ್ರೀ ಷ||ಬ್ರ|| ಚಂದ್ರಶೇಖರ ಶಿವಾಚಾರ್ಯರೇ ಹೊನ್ನಾಳಿ ಶ್ರೀ ಚನ್ನಪ್ಪಸ್ವಾಮಿ ಮಠದ ಮುಂದಿನ ಉತ್ತರಾಧಿಕಾರಿಗಳೆಂದು ತೀರ್ಮಾನಿಸಿದರು.

೧೯೭೨ ನವೆಂಬರ್ ೬ ರಂದು ಪಟ್ಟಾಧಿಕಾರ ಮಹೋತ್ಸವವು ಶ್ರೀಮದ್ರಂಭಾಪುರಿ ಮತ್ತು ಶ್ರೀಶೈಲ ಜಗದ್ಗುರುಗಳು ಹರಗುರು ಚರಮೂರ್ತಿಗಳು ಹಾಗೂ ಅಪಾರ ಸಂಖ್ಯೆಯ ಸದ್ಭಕ್ತ ಸ್ತೋಮದೆದುರು 'ಶ್ರೀ ಚನ್ನರಾಜ ದೇಶೀಕೇಂದ್ರ ಒಡೆಯರ್ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು' ಎಂಬ ಅಭಿದಾನದೊಂದಿಗೆ ವೀರಶೈವ ಧರ್ಮ ಪರಂಪರೆಯಂತೆ ಹೊನ್ನಾಳಿ ಬೃಹಚ್ಛಿಲಾಮಠದ ಪಟ್ಟಾಧಿಕಾರ ಅನುಗ್ರಹಿಸಲ್ಪಟ್ಟಿತು. ಅಂದಿನಿಂದ ಪೂಜ್ಯರ ನೇತೃತ್ವದಲ್ಲಿ ನಾಡಿನಾದ್ಯಂತ ಸಾಮಾಜಿಕ, ಧಾರ್ಮಿಕ ಹಾಗೂ ಶೈಕ್ಷಣಿಕ ಕ್ರಾಂತಿಯೇ ನಡೆಯಿತೆನ್ನಬಹುದು.

(ಶಿವಮೊಗ್ಗ ನಗರದ ನಗರಸಭೆಯ ಪಕ್ಕದಲ್ಲಿರುವ ವೀರಶೈವ ಕಲ್ಯಾಣ ಮಂಟಪದ ಹಿಂಭಾಗ ಶ್ರೀ ಚನ್ನಪ್ಪಸ್ವಾಮಿಗಳ ಗದ್ದುಗೆ ಮತ್ತು ಇದೇ ನಗರದ ಕುಂಬಾರಗುಂಡಿಯಲ್ಲಿ ಮತ್ತೊಂದು ಚನ್ನಪ್ಪ ಸ್ವಾಮಿಗಳ ಗದ್ದುಗೆಗಳು ನಿತ್ಯಪೂಜೆಗೊಳ್ಳುತ್ತಿದ್ದು ಗುರುಪರಂಪರೆಯನ್ನು ಪುನರ್ ವಿಮರ್ಶೆ ಮಾಡಬೇಕಾಗಿದೆ.)

**ಶೈಕ್ಷಣಿಕ ಸಾಧನೆಗಳು** : ಸಾಮಾಜಿಕ ಅಸಮಾನತೆ ಮತ್ತು ಮೌಢ್ಯತೆಯ ನಿವಾರಣೆಗೆ ರೈತ ಹಾಗೂ ಬಡ ಹಿಂದುಳಿದ ವರ್ಗಗಳ ಸಮಸ್ಯೆಗಳಿಗೆ ಶಿಕ್ಷಣವೇ ಪರಿಹಾರವೆಂದು ಭಾವಿಸಿ ಶ್ರೀ ಚನ್ನಪ್ಪಸ್ವಾಮಿ ವಿದ್ಯಾಪೀಠವನ್ನು ೧೯೭೨ರಲ್ಲಿ ಸ್ಥಾಪಿಸಿ ಅನೇಕ ಸಂಸ್ಥೆಗಳನ್ನು ಆರಂಭಿಸಿದರು.

೧. ಸಂಸ್ಕೃತ ಪಾಠಶಾಲೆ, ಹಿರೇಕಲ್ಮಠ, ಹೊನ್ನಾಳಿ.
೨. ಹಿರಿಯ ಪ್ರಾಥಮಿಕ ಶಾಲೆ, ಹೊನ್ನಾಳಿ.
೩. ಜ|| ಜಡೇಯಶಂಕರ ಪ್ರೌಢಶಾಲೆ, ಹಿರೇಕಲ್ಮಠ, ಹೊನ್ನಾಳಿ.
೪. ಶ್ರೀ ಹಳದಮ್ಮದೇವಿ ಬಾಲಕಿಯರ ಪ್ರೌಢಶಾಲೆ.
೫. ಶ್ರೀ ಮಾಳಿಗೇರಾ ವೀರಪ್ಪ ಚನ್ನಪ್ಪ ಪ್ರೌಢಶಾಲೆ, ಒಡೆಯರ ಹತ್ತೂರು.
೬. ಶ್ರೀ ಮಹಾರುದ್ರಸ್ವಾಮಿ ಪ್ರೌಢಶಾಲೆ, ರಾಜನಹಳ್ಳಿ, ಚನ್ನಗಿರಿ ತಾ||

೭. ಶ್ರೀ ಚನ್ನೇಶ್ವರ ಗ್ರಾಮಾಂತರ ಪದವಿಪೂರ್ವ ಕಾಲೇಜು
೮. ಶ್ರೀ ಮೃತ್ಯುಂಜಯ ಶಿವಾಚಾರ್ಯ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ, ಹಿರೇಕಲ್ಮಠ, ಹೊನ್ನಾಳಿ
೯. ಐ.ಟಿ.ಐ. ಕಾಲೇಜು, ಹೊನ್ನಾಳಿ
೧೦. ಐ.ಟಿ.ಐ. ಕಾಲೋಜು ನ್ಯಾಮತಿ
೧೧. ಶ್ರೀ ಒಡೆಯರ್ ಚಂದ್ರಶೇಖರ ಶಿವಾಚಾರ್ಯ ಡಿ.ಇಡಿ. ಕಾಲೇಜು, ಹೊನ್ನಾಳಿ
೧೨. ಶ್ರೀ ವಾಗೀಶಪಂಡಿತಾರಾಧ್ಯ ಬಿ.ಇಡಿ. ಕಾಲೇಜು ಹೊನ್ನಾಳಿ
೧೩. ಶ್ರೀ ಅಕ್ಕಮಹಾದೇವಿ ಬಾಲಕಿಯರ ಆಂಗ್ಲ ಪ್ರೌಢಶಾಲೆ, ಹೊನ್ನಾಳಿ
೧೪. ಉಚಿತ ಪ್ರಸಾದ ನಿಲಯ
೧೫. ಶ್ರೀ ಚನ್ನಚೇತನ ಪ್ರಕಾಶನ ಮತ್ತು ಮುದ್ರಣಾಲಯ

**ಧಾರ್ಮಿಕ ಕಾರ್ಯಕ್ರಮಗಳು**

೧. ಪ್ರತಿ ತಿಂಗಳು ಅಮಾವಾಸ್ಯೆ ಪೂಜಾ ಮತ್ತು ಧಾರ್ಮಿಕ ಸಭೆ.
೨. ಪ್ರತಿ ವರ್ಷ ಶ್ರಾವಣಮಾಸ ಪೂಜೆ ಮತ್ತು ಕ್ಷೇತ್ರನಾಥ ವೀರಭದ್ರೇಶ್ವರ ಕೆಂಡದಾರ್ಚನೆ, ಜಂಗಮ ವಟುಗಳಿಗೆ ದೀಕ್ಷೆ ಹಾಗೂ ಶ್ರೀ ಚನ್ನಪ್ಪಸ್ವಾಮಿ ರಥೋತ್ಸವ.
೩. ಗಣೇಶಚೌತಿ ಮತ್ತು ಭೂತಾರಾಧನೆ.
೪. ದಸರಾ ಮಹೋತ್ಸವ.
೫. ಕಾರ್ತೀಕ ಮಹೋತ್ಸವ.
೬. ಮಹಾಶಿವರಾತ್ರಿ
೭. ಶ್ರೀ ಮೃತ್ಯುಂಜಯ ಸ್ವಾಮಿಗಳ ಪುಣ್ಯತಿಥಿ, ಉಚಿತ ಸಾಮೂಹಿಕ ವಿವಾಹ ಮತ್ತು ಕೈ ಡಾ|| ಎಚ್. ತಿಪ್ಪೇರುದ್ರಸ್ವಾಮಿಗಳ ದತ್ತಿ ಉಪನ್ಯಾಸ ಮತ್ತು ಕೈ|| ಎಚ್.ಎನ್. ಷಡಾಕ್ಷರಿ ಶಾಸ್ತ್ರಿಗಳ ದತ್ತಿ ಉಪನ್ಯಾಸ.
೮. ಯುಗಾದಿ ಪ್ರಯುಕ್ತ ಚಂದ್ರದರ್ಶನವಾದ ನಂತರ ಪಂಚಾಂಗ ವಾಚನ ಮತ್ತು ವೀರಶೈವ ಜ|| ಪಂಚಾಚಾರ್ಯರ ಯುಗಮಾನೋತ್ಸವ.

ಮಾತೃಹೃದಯದ ಶ್ರೀಗಳು ಹಗಲಿರುಳೆನ್ನದೆ ಭಕ್ತರು ಬದುಕಿ, ಬಾಳಿ, ಭಕ್ತಿವಂತರಾಗಿ ಮುಕ್ತರಾಗಬೇಕೆಂದು ಸದಾಶಯದಿಂದ ಹರಸುವರು. ಪೂಜ್ಯರು, ಸರಳರು, ಕರುಣಾಮೂರ್ತಿಗಳಾಗಿ ಕೇವಲ ಕನ್ನಡ ನಾಡಿನ ಶಿವಾಚಾರ್ಯ ಬಳಗಕ್ಕೆ ಮಾತ್ರವಲ್ಲದೆ ದೇಶದ ಸಂತರ ಬಳಗಕ್ಕೆ ಆದರ್ಶಪ್ರಾಯರೂ ಹೌದು. ಗುರು ಚಂದ್ರಶೇಖರ ದರ್ಶನ, ಸ್ಪರ್ಶನ ಭಕ್ತರಿಗೆ ಸ್ಫೂರ್ತಿಯ ಸಿಂಚನ.

**ಗುರುವಿರಕ್ತರ ಸಂಗಮ** : ವೀರಶೈವ ಧರ್ಮದ ಗುರುವಿರಕ್ತ ಸಂಪ್ರದಾಯಗಳ ಸಮನ್ವಯದ ಹೊನ್ನಾಳಿಯ ಶ್ರೀ ಚನ್ನಪ್ಪಸ್ವಾಮಿಗಳ ಹಿರಿಯ ಕಲ್ಮಠ. ಇಂಥ ಶಿವಮೊಗ್ಗ ಜಿಲ್ಲೆಯ ಆನಂದಪುರಂ ಮಠದ ಶ್ರೀ ಮ|| ನಿ|| ಪ್ರ|| ಗುರುಬಸವಸ್ವಾಮಿಗಳ ಗದ್ದುಗೆಯು ಹೊನ್ನಾಳಿಯ ಹಿರಿಯಕಲ್ಮಠದ ಜ|| ಜಡೆಯ ಶಂಕರರು ಮತ್ತು ಶ್ರೀ ಚನ್ನಮಲ್ಲಿಕಾರ್ಜುನರ ಗದ್ದುಗೆಯ ಪಕ್ಕದಲ್ಲಿದೆ.

ಗುರುಬಸವ ಸ್ವಾಮಿಗಳು ತಾವು ಲಿಂಗೈಕ್ಯರಾದ ನಂತರ ಚನ್ನಪ್ಪಸ್ವಾಮಿಗಳ ಗದ್ದುಗೆಯ ಪಕ್ಕದಲ್ಲಿಯೇ ತಮ್ಮ ದೇಹವನ್ನು ಸಂಸ್ಕಾರಗೊಳಿಸುವಂತೆ ಅಪ್ಪಣೆ ಕೊಡಿಸಿದ ಮೇರೆಗೆ ಇಲ್ಲಿಯೇ ನಿರ್ಮಿಸಿರುವುದು ಒಂದು ವಿಶೇಷ. ಇಲ್ಲಿ ೨ ವಿಷಯಗಳನ್ನು ಚರ್ಚಿಸುವುದು ಮಹತ್ವದ ಸಂಗತಿಯಾಗಿದೆ.

೧. ಶ್ರೀ ಚನ್ನಪ್ಪ ಸ್ವಾಮಿಗಳ ಮಠ ಗುರುಪರಂಪರೆಗೆ ಸೇರಿದು ದಾದರೂ ಕೂಡ ವಿರಕ್ತ ಸಂಪ್ರದಾಯದ ಗುರುಗಳ ಗದ್ದುಗೆ ಯನ್ನು ಶ್ರೀಮಠದಲ್ಲಿ ನಿರ್ಮಿಸಲು ಅವಕಾಶ ನೀಡಿದುದು.
೨. ವಿರಕ್ತ ಸಂಪ್ರದಾಯದವರಾದರೂ ಕೂಡ ಗುರುಬಸವ ಸ್ವಾಮಿಗಳು ತಮ್ಮ ಭೌತಿಕ ಶರೀರ ಸಂಸ್ಕಾರಕ್ಕೆ ಜ|| ಜಡೆಯ ಶಂಕರರ ಮತ್ತು ಶ್ರೀ ಚನ್ನಪ್ಪಸ್ವಾಮಿಗಳ ತಪೋಭೂಮಿಯನ್ನೇ ಏಕೆ ಆರಿಸಿಕೊಂಡರೆಂಬುದು.

ಈ ದಿಸೆಯಲ್ಲಿ ಶ್ರೀ ಚನ್ನಪ್ಪ ಸ್ವಾಮಿಗಳ ಮತ್ತು ಶ್ರೀ ಗುರುಬಸವ ಸ್ವಾಮಿಗಳ ಭಾವನೆಗಳನ್ನು ಅರ್ಥ ಮಾಡಿಕೊಂಡರೆ ಸಮನ್ವಯ ಸಾಮರಸ್ಯದ ಸಂದೇಶ ಸಿಗುತ್ತದೆ.

**ಸದ್ಭಾವ ಮತ್ತು ಸೌಹಾರ್ದತೆಯ ಸಂಗಮ** : ಶ್ರೀ ಗುರು ಚನ್ನಮಲ್ಲಿಕಾರ್ಜುನ ಮತ್ತು ಶ್ರೀ ಚನ್ನಗುರು ಮಲ್ಲಾರ್ಯರ ಭಾವನೆ ಗಳು ಶ್ರೀಮಠದಸದ್ ಪರಂಪರೆಯಲ್ಲಿ ಹಾಸುಹೊಕ್ಕಾಗಿರು ವುದು ಕಂಡುಬರುತ್ತದೆ. ಅಂತೆಯೇ ಶ್ರೀ ಚನ್ನಪ್ಪಸ್ವಾಮಿಯ ಮಠವನ್ನು ಪರಮತಸಹಿಷ್ಣುತೆಯ ಮತ್ತು ಸೌಹಾರ್ದತೆಯ ತವರೆನ್ನಬಹುದು. ದ್ವಿತೀಯ ಮಂತ್ರಾಲಯವೆಂದೇ ಖ್ಯಾತಿವೆತ್ತ ಬೃಂದಾವನ ಕ್ಷೇತ್ರ ಶ್ರೀ ಗುರುರಾಘವೇಂದ್ರ ಮಹಾಸ್ವಾಮಿಗಳ ಮಠ ಇಂದಿಗೂ ಹೊನ್ನಾಳಿಯ ತುಂಗಭದ್ರೆಯ ದಂಡೆಯಲ್ಲಿದೆ. ರಾಘವೇಂದ್ರ ಸ್ವಾಮಿಗಳು ವೈಕುಂಠವಾಸಿಗಳಾಗುವ ಮುನ್ನ ತಮ್ಮ ಆತ್ಮೀಯ ಭಕ್ತರನ್ನು ಕರೆದು ಬೃಂದಾವನ ಕೇತ್ರ ನಿರ್ಮಾಣಕ್ಕೆ ಹಿರಿಯಕಲ್ಮಠದ ಕ್ಷೇತ್ರದಲ್ಲಿನ ಶಿಲೆಯೊಂದನ್ನು ತಂದು ನಿಲ್ಲಿಸಿ ನಿರ್ಮಾಣ ಕಾರ್ಯ ವನ್ನು ಪೂರೈಸಬೇಕೆಂದು ಅಪ್ಪಣೆ ಕೊಡಿಸಿರುದು ಶ್ರೀ ಕ್ಷೇತ್ರದ ಮಹಿಮೆಯನ್ನು ಎತ್ತಿ ತೋರಿಸುವುದಾಗಿದೆ. ಮಾತ್ರವಲ್ಲ ಧರ್ಮದ ದಾರಿ ಬೇರೆಯಾದರೂ ಗುರಿ ಒಂದಾಗಿರುವ ಐಕ್ಯತಾ ವಿಚಾರವನ್ನು ಮನಗಾಣುವುದಾಗಿದೆ.

**ಶ್ರೀ ಚನ್ನಪ್ಪಸ್ವಾಮಿ ನ್ಯಾಯಾಲಯ** : ಈ ಭಾಗದ ಭಕ್ತರಿಗೆ ಚನ್ನಪ್ಪಸ್ವಾಮಿ ಮಠವೇ ನ್ಯಾಯಾಲಯ, ಇಲ್ಲಿ ಚನ್ನಪ್ಪ ಸ್ವಾಮಿಗಳೇ ನ್ಯಾಯಾಧೀಶರು ಮತ್ತು ನ್ಯಾಯವಾದಿಗಳು. ಗುರುಗಳ ಅಪ್ಪಣೆಯೇ ತೀರ್ಪು. ಒಮ್ಮೆ ಮಠದಲ್ಲಿ ಮತ್ತು ಶ್ರೀ ಗುರುಗಳ ಸಮಕ್ಷಮದಲ್ಲಿ ಮಾತು ಕೊಟ್ಟರೆ ಜೀವನ ಪೂರ್ತಿ ಪಾಲಿಸಿಕೊಂಡು ಬರುವರು.

ಶತಮಾನಗಳಿಂದ ಹಳ್ಳಿ-ಹಳ್ಳಿಗಳ ಮಧ್ಯೆ ಜನಾಂಗಗಳ ಮಧ್ಯೆ ಸಂಘರ್ಷ, ಕೌಟುಂಬಿಕ ವಿಚಾರ ಅಥವಾ ಯಾವುದೇ ಗಂಭೀರ ವಾದ ಸಮಸ್ಯೆಗಳಿದ್ದರೆ ಉಭಯ ಬಣಗಳು ಚನ್ನಪ್ಪಸ್ವಾಮಿಗಳ ಸಮಕ್ಷಮದಲ್ಲಿ ಬಗೆಹರಿಸಿಕೊಳ್ಳುವ ಕಾತುರದ ಭಾವನೆಗಳನ್ನು ಕಾಣಬಹುದು.

ತಾಲ್ಲೂಕಿನ ದಂಡಾಧಿಕಾರಿಗಳ ನ್ಯಾಯಾಲಯದಿಂದ ಒಡಿದು ಹೈಕೋರ್ಟ್‌ಗಳಲ್ಲೂ ಬಗೆಹರಿಯದೇ ಇರುವ ಪ್ರಕರಣಗಳು ಇಲ್ಲಿ ಬಗೆಹರಿದಿವೆ. ಅನೇಕ ಸಂದರ್ಭಗಳಲ್ಲಿ ಪೊಲೀಸ್ ಕಚೇರಿ, ಕೋರ್ಟ್‌ಗಳಿಗೆ ಹೋಗದೆ ಮಠದ ಗುರುಗಳಲ್ಲಿಯೇ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವ ಯತ್ನ ಅಧಿಕಾರಿಗಳಿಗೆ ಅಥವಾ ಸರ್ಕಾರವನ್ನು ಒತ್ತಡದಿಂದ ಪಾರು ಮಾಡಿದ ಪ್ರಕರಣಗಳು ಅನೇಕ. ಶ್ರೀಮಠದಿಂದಾಗಿ ತಮ್ಮ ಕಾರ್ಯ ಸರಳ ಎಂಬುದಾಗಿ ದಂಡಾಧಿಕಾರಿಗಳು ಮತ್ತು ಪೊಲೀಸ್ ಅಧಿಕಾರಿಗಳು ಹೇಳುವುದನ್ನು ಇಲ್ಲಿ ಪ್ರಸ್ತಾಪಿಸಬಹುದಾಗಿದೆ.

ಇವೆಲ್ಲಕ್ಕಿಂತ ಹೆಚ್ಚಾಗಿ ಜನಸಾಮಾನ್ಯರಿಗೆ ಎರಡು ರೀತಿಯಲ್ಲಿ ಅನುಕೂಲವಾಗಿರುವುದನ್ನು ಮನಗಾಣಬಹುದು.

೧. ಇತ್ತೀಚಿನ ದಿನಗಳಲ್ಲಿ ಕೋರ್ಟ್, ಕಚೇರಿಗಳ ಆರ್ಥಿಕ ಹೊರೆಯಿಂದ ಪಾರಾಗಿರುವುದು.

೨. ಅನಾಹುತ ಮತ್ತು ದ್ವೇಷಗಳಿಂದ ಜನರು ಪಾರಾಗಿರುವುದು.

ಈ ಎಲ್ಲವುಗಳಿಂದ ಚನ್ನಪ್ಪಸ್ವಾಮಿಗಳು ಭಕ್ತರ ಹೃದಯದಲ್ಲಿ ನೆಲೆನಿಂತು ಸದಾ ಜಾಗೃತ ಸ್ಥಳವಾಗಿದೆ. ಒಟ್ಟಿನಲ್ಲಿ ವೀರಶೈವ ಧರ್ಮದ ಮಠವಾಗಿದ್ದರೂ ಸರ್ವಧರ್ಮೀಯರ ಆರಾಧ್ಯ ದೈವವಾಗಿ ಸಂಕಟವಿಮೋಚನಾ ಕೇಂದ್ರವಾಗಿ ನ್ಯಾಯಪೀಠವಾಗಿ ಶೈಕ್ಷಣಿಕ ಜಾಗೃತಿಯನ್ನುಂಟುಮಾಡಿದ ಗೌರವ ಶ್ರೀಮಠಕ್ಕೆ ಸಲ್ಲುತ್ತದೆ.





### ಕ.ಇ. ಅಕಾದೆಮಿಯ ೬ನೆಯ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೨)

*ಭಾರತದ ಇನ್ನಾವ ಪ್ರಾಂತಗಳಿಗಿಂತಲೂ ಹೆಚ್ಚಾಗಿ ಮಧ್ಯಯುಗದ ಮತ್ತು ಅನಂತರದ ಶತಮಾನಗಳಲ್ಲಿ ಕರ್ನಾಟಕದ ಜ್ಞಾನಿಗಳನೇಕರು ಒಂದು ಪರಂಪರೆಯ ಗೀಳಿನಿಂದ ಕನ್ನಡ ನಾಡಿನ ಸಮಾಜದಲ್ಲಿ ಆಗುತ್ತಿದ್ದ ಏರುಪೇರುಗಳನ್ನು ಕಷ್ಟನಷ್ಟಗಳನ್ನು ಗುರುತಿಸಿ ಹಾಡಿ ಹೀಗಳೆದಿದ್ದರು. ಬಸವಣ್ಣನವರೇ ಮೊದಲಾದ ವಚನಕಾರರೂ, ಪುರಂದರದಾಸ, ಕನಕದಾಸಾದಿ ಹರಿದಾಸರುಗಳೂ ನಮ್ಮ ಕುರುಡ ಗೌರವಾದರಗಳಿಗೆ ಮಾತ್ರ ಪಾತ್ರರಾಗಿದ್ದಾರೆ. ಅವರುಗಳು ನಮಗೆ ನೀಡಿರುವ ಎಚ್ಚರಿಕೆಯ ಮಾತುಗಳು ಹಾಡುಗಾರರ ಇಂಪುದನಿಗೆ ತಲೆಯಾಡಿಸುತ್ತಿದ್ದ ನಮ್ಮ ಪೂರ್ವಜರ ಇಂದಿಗೂ ತಲೆಯಾಡಿಸುತ್ತಿರುವ ನಮ್ಮಗಳ ಅಂತಃಕರಣವನ್ನು ಮುಟ್ಟಿಲ್ಲ. ಚಿಂತನೆಗಳನ್ನು ಕೆರಳಿಸಿಲ್ಲ. ಈ ದೃಷ್ಟಿಯಿಂದ ನಾವು ದುರ್ದೈವಿಗಳೇ ಹೌದು. ಮನುಷ್ಯ ಪ್ರಯತ್ನದಿಂದ ಅಸ್ತಿತ್ವಕ್ಕೆ ಬರುವ ಎಲ್ಲ ವಸ್ತು ವಿಷಯಗಳೂ ಕಟ್ಟುಕಟ್ಟಳೆಗಳೂ ಕಾಲಕ್ರಮದಲ್ಲಿ ತಮ್ಮ ಅಂತಃಸತ್ವವನ್ನು ಕಳೆದುಕೊಂಡು ನಶಿಸಿ ಹೋಗುವುದೂ ಇಲ್ಲ. ಗುರುತಿಸಲಾರದ ಮಟ್ಟಿಗೆ ಪರಿವರ್ತನೆಗೊಳ್ಳುವುದೂ ಲೋಕ ಸಹಜವಾದ ಚಿರಂತನ ಅನುಭವ. ಅಂತಹ ಒಂದು ಮಾನವ ಸೃಷ್ಟಿ ಆದ ಮಾನ್ಯಖೇಟದ ರಾಷ್ಟ್ರಕೂಟ ವಂಶವು ಎರಡು ಶತಕಗಳಿಗೂ ಹೆಚ್ಚು ಕಾಲ ರಾಜ್ಯವಾಳಿದ ನಂತರ ಪತನವಾದಾಗ ಅಂದಿನ ಶಾಸನಗಳಲ್ಲಿ ಆ ಮನೆತನವನ್ನು 'ಕಾಲಾತ್ ಖಂಡಿತ ರಾಷ್ಟ್ರಕೂಟ ಕುಲ' ಎಂದು ಪ್ರಸ್ತಾಪಿಸಲಾಗಿದೆ.... ಇಂದು ಜಾತಿ ಪದ್ಧತಿಯು ಕಾಲಾತ್ ಖಂಡಿತವಾಗಿ ಹೋಗಿದೆ. ಅಂದಮೇಲೆ ಕಲಾತ್ಖಂಡಿತ ಜಾತಿ ಪದ್ಧತಿಯ ವಂಶಪಾರಂಪರ್ಯ ಹುಟ್ಟಿಸಿರುವ ವಿಷವು ಹರಡಿ ನಮ್ಮ ಇಡಿಯ ಸಮಾಜವೂ ಕಾಲಾತ್‌ಖಂಡಿತವಾಗುವ ಮುನ್ನ ನಾವೇಕೆ ಇತಿಹಾಸಕಾರರು ದನಿಯೆಬ್ಬಿಸಿ ಆ ಹಳೇ ಕಾಲದ ಪ್ರಾಗ್‌ಜಾತಿ ಯುಗದ ಆಯ್ಕೆಯ ಸ್ವಾತಂತ್ರ್ಯವನ್ನು ಪುನಃ ಕಲ್ಪಿಸಬಾರದು? ಇದು ಸಾಧ್ಯವಾದರೆ ನಾವು ಇತಿಹಾಸ ಸಂಶೋಧಕರಾಗಿ ಮಾತ್ರ ಉಳಿಯದೆ ಇತಿಹಾಸದ ಸೃಷ್ಟಾರರೂ ಆದೇವು.*

**ಡಾ. ಕೆ. ವಿ. ರಮೇಶ್**

ಸಮ್ಮೇಳನಾಧ್ಯಕ್ಷರು

ಡಾ॥ ಡಿ. ಎನ್. ಯೋಗೀಶ್ವರಪ್ಪ*

# ಹೊಳೆದಂಡೆ ಹೊನ್ನಾಳಿ - ಐತಿಹಾಸಿಕ ಅವಲೋಕನ

*ಭಾಸ್ಕರಕ್ಷೇತ್ರ, ಬದಿರಿ ಇತ್ಯಾದಿ ಪೌರಾಣಿಕ ಐತಿಹಾಸಿಕ ಹೆಸರುಟ್ಟ ಹೊನ್ನಾಳಿ ಹೊನ್ನಿನ ಜಂಕೆಯ ಬೇಟೆಯ ಐತಿಹ್ಯ, ಅಗಸ್ತ್ಯ ಸ್ಥಾಪಿತ ಐತಿಹ್ಯದ ಮಲ್ಲಿಕಾರ್ಜುನ ದೇಗುಲ, ಹಿರೇಕಲ್ಮಠದ ಪ್ರಾಚೀನತೆ, ಮಾರನಾಯಕನ ಆಳ್ವಿಕೆ, ನವಾಬರ ಆಳ್ವಿಕೆ, ಕೆಳದಿಯ ಆಳ್ವಿಕೆ-ದಾನದತ್ತಿಗಳ ವಿಷಯವನ್ನೂ ಒಡಲಲ್ಲಿಟ್ಟುಕೊಂಡಿರುವ ಹೊನ್ನಾಳಿ, ಮೆಕೆಂಜಿಯ ಗಮನವನ್ನು ಸೆಳೆದು ಕೈಫಿಯತ್ತಿನಲ್ಲಿ ವಿವರಗೊಂಡಿದೆ.*

ಹೊಳೆದಂಡೆ ಹೊನ್ನಾಳಿ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಆಡಳಿತ ಕೇಂದ್ರ. ಶಿವಮೊಗ್ಗ - ಹರಿಹರ ಮಾರ್ಗ ಮಧ್ಯೆ ಇರುವ ಹೊನ್ನಾಳಿ ಪಟ್ಟಣ ಪ್ರಮುಖ ನಗರ ಶಿವಮೊಗ್ಗದಿಂದ ೪೦ ಕಿ.ಮೀ. ಅಂತರದಲ್ಲಿದೆ. ವಿಶ್ವನಕ್ಷೆಯ ೧೪°.೧೪'ರ ಅಕ್ಷಾಂಶ ಹಾಗೂ ೭೫°.೩೯'ರ ರೇಖಾಂಶದಲ್ಲಿ ಕಂಡು ಬರುವ ಇದು ಸಮುದ್ರಮಟ್ಟದಿಂದ ೫೪೭.೫೦ ಮೀಟರ್ ಎತ್ತರದಲ್ಲಿದೆ. ತುಂಗಭದ್ರಾನದಿಯ ಪಶ್ಚಿಮದಂಡೆಯಲ್ಲಿರುವ ಹೊನ್ನಾಳಿ ಪಟ್ಟಣವು ಚರಿತ್ರೆಯಲ್ಲಿ ರಾಜಕೀಯವಾಗಿ ಪ್ರಮುಖ ಸ್ಥಾನವನ್ನು ಪಡೆದುಕೊಳ್ಳದಿದ್ದರೂ ಅನೇಕ ರಾಜಕೀಯ ಮನೆತನಗಳ ಕಾದಾಟದ ಸ್ಥಳವಾಗಿ ಪರಿಣಮಿಸಿದೆ. ಪ್ರಸ್ತುತ ಹೊನ್ನಾಳಿ ಪಟ್ಟಣದ ಚರಿತ್ರೆಯ ರಚನೆಗೆ ತೊಡಗುವ ಸಂಶೋಧಕ ಆಕರಗಳ ಕೊರತೆಯನ್ನು ಎದುರಿಸಬೇಕಾಗುತ್ತದೆ. ಆದಾಗ್ಯೂ ಹೊನ್ನಾಳಿ ಪಟ್ಟಣವನ್ನು ಕುರಿತಂತೆ ಅಲ್ಲಲ್ಲಿ ಸಣ್ಣಪುಟ್ಟ ಮಾಹಿತಿ ನೀಡುವ ಕಿರುಲೇಖನಗಳೂ ಬಂದಿರುವುದನ್ನು ಗಮನಿಸಬಹುದು.

## ಅಧ್ಯಯನ

ಮೊದಲ ಬಾರಿಗೆ ಬಿ.ಎಲ್. ರೈಸ್‌ರು ತಮ್ಮ ಗ್ಯಾಜೆಟಿಯರ್‌ನಲ್ಲಿ ಹೊನ್ನಾಳಿ ಪಟ್ಟಣದ ಚರಿತ್ರೆಯನ್ನು ಸೂಕ್ಷ್ಮವಾಗಿ ಪರಿಚಯಿಸಿದ್ದಾರೆ[೧]. ಎರಡನೆಯದಾಗಿ ಹಯವದನರಾವ್ ಅವರು ತಮ್ಮ ಮೈಸೂರು ಗ್ಯಾಜೆಟಿಯರ್ ಕೃತಿಯಲ್ಲಿ ರೈಸ್ ಗ್ಯಾಜೆಟಿಯರ್‌ನಲ್ಲಿರುವ ವಿವರಣೆಯನ್ನೇ ನೀಡಿದ್ದಾರೆ[೨]. ಮೂರನೆಯದಾಗಿ **ಹೊನ್ನಾಳಿ ತಾಲ್ಲೂಕು ದರ್ಶನ**ದ ಕಿರು ಪುಸ್ತಕದಲ್ಲಿ ಮೇಲಿನ ಎರಡೂ ಲೇಖನಗಳ ವಿವರವೇ ಬಂದಿದೆ[೩]. ಇತ್ತೀಚೆಗೆ ನಾ. ಕೊಟ್ರೇಶ್ ಉತ್ತಂಗಿಯವರು ತಮ್ಮ **ಹೊನ್ನೆಲೆಗಳು** ಎಂಬ ಕೃತಿಯಲ್ಲಿ ಕೆಲವು ಸ್ಥಳಪುರಾಣದೊಂದಿಗೆ ಹೊನ್ನಾಳಿ ಪಟ್ಟಣದ ಚರಿತ್ರೆಯನ್ನು ರಚಿಸಲು ಪ್ರಯತ್ನಿಸಿದ್ದಾರೆ[೪].

## ಆಕರಗಳು

ಈ ಲೇಖನಗಳನ್ನು ಹೊರತುಪಡಿಸಿದರೆ ನನ್ನ ಗಮನಕ್ಕೆ ಬಂದಂತೆ ಈ ಪಟ್ಟಣದ ಬಗೆಗೆ ವಿವರವಾದ ಮಾಹಿತಿ ಇರುವ ಲೇಖನಗಳೇ ಬಂದಿಲ್ಲದಿರುವುದು ಆಕರ ಸಾಮಗ್ರಿಯ ಕೊರತೆಯಿಂದಲೊ ಅಥವಾ ಸಂಶೋಧಕರ ನಿರಾಸಕ್ತಿಯೋ ಕಾರಣ ತಿಳಿಯದು. ಪ್ರಸ್ತುತ ಲೇಖಕನ ಲೇಖನಿಗೆ ಇತ್ತೀಚೆಗೆ ದೊರಕಿರುವ ಮೆಕೆಂಜಿಯ ಅಪ್ರಕಟಿತ ಕೈಫಿಯತ್ತು ಇಂಗ್ಲೀಷ್ ಭಾಷೆಯಲ್ಲಿದ್ದು, ಅದನ್ನು ಜುಲೈ ೧೮೦೦ರಲ್ಲಿ ಸಂಗ್ರಹಿಸಲಾಗಿದ್ದು ಅದು ಆ ಪಟ್ಟಣದ ಚರಿತ್ರೆಯ ಬಗೆಗೆ ಸ್ವಲ್ಪ ಹೆಚ್ಚಿನ ವಿವರವನ್ನು ಒಳಗೊಂಡಿದೆ. ಈ ಆಕರವನ್ನೇ ಪ್ರಮುಖವಾಗಿಟ್ಟುಕೊಂಡು ಈವರೆಗೆ ಹೊನ್ನಾಳಿ ಪಟ್ಟಣದ ಬಗೆಗೆ ಬಂದಿರುವ ಲೇಖನಗಳನ್ನು ಪೂರಕವಾಗಿ

* ಪ್ರಾಧ್ಯಾಪಕ, ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು, ತುಮಕೂರು.

ಬಳಸಿಕೊಳ್ಳುತ್ತಾ ಆ ಪಟ್ಟಣದ ಚರಿತ್ರೆಯ ರಚನೆಗೆ ಪ್ರಯತ್ನಿಸಲಾಗಿದೆ. ಅಲ್ಲದೆ ಹೊನ್ನಾಳಿ ಪಟ್ಟಣದ ಮಲ್ಲಿಕಾರ್ಜುನ ದೇವಾಲಯದ ಅಂಗಳದಲ್ಲಿ ದೊರಕಿರುವ ನಾಲ್ಕು ಶಾಸನಗಳು[೫] ಕೆಳದಿ ಅರಸರ ಶಾಸನ ಸಂಪುಟದಲ್ಲಿನ ಎರಡು ಶಾಸನಗಳನ್ನು[೬] ಕೂಡಾ ಆಕರವಾಗಿ ತೆಗೆದುಕೊಂಡು ಹೊನ್ನಾಳಿಯ ಬಗೆಗೆ ಹೆಚ್ಚಿನ ವಿವರ ನೀಡಲು ಈ ಲೇಖನದಲ್ಲಿ ಪ್ರಯತ್ನಿಸಲಾಗಿದೆ. ಮೊದಲಿಗೆ ಹೊನ್ನಾಳಿ ಪದದ ನಿಷ್ಪತ್ತಿಯ ಬಗೆಗೆ ಪರಿಶೀಲಿಸೋಣ.

**ಹೊನ್ನಾಳಿ ಪದದ ನಿಷ್ಪತ್ತಿ**

ರೈಸ್‌ರವರ ಪ್ರಕಾರ[೭] ಹೊನ್ನಾಳಿಗೆ ಭಾಸ್ಕರ ಕ್ಷೇತ್ರವೆಂತಲೂ ಮಹಮದೀಯರ ಸರ್ಕಾರದಲ್ಲಿ ಇದನ್ನು ಬಿದಿರಿ ಎಂತಲೂ ಹೆಸರಾಯಿತು. ಹೊನ್ನಾಳಿಯ ಅರ್ಥ "Gold bearing" ಎಂದು ಹೇಳಿದ್ದಾರೆ. ಹೊನ್ನಾಳಿ ತಾಲ್ಲೂಕು ದರ್ಶನ ಹಾಗೂ ಹಯವದನ ರಾಯರ ಗ್ಯಾಜೆಟಿಯರ್‌ಗಳೂ ಕೂಡಾ ಇದಕ್ಕಿಂತ ಹೆಚ್ಚೇನನ್ನು ಹೇಳುವುದಿಲ್ಲ. ಆದರೆ ಇತ್ತೀಚಿನ **ಹೊನ್ನೆಲೆಗಳು** ಕೃತಿಯಲ್ಲಿ ಹೊನ್ನಾಳಿಯ ಹೆಸರಿನ ಬಗೆಗೆ ಅನೇಕ ಸ್ಥಳಪುರಾಣಗಳನ್ನು ನೀಡುವುದರ ಮೂಲಕ ಅರ್ಥೈಸಲು ಪ್ರಯತ್ನಿಸಲಾಗಿದೆ[೮]. ಅದರಂತೆ ಹಿಂದೊಬ್ಬ ಪಾಳೇಗಾರನು ಬೇಟೆಯಾಡುತ್ತಾ ಬರುವಾಗ ಹೊನ್ನಿನ ಬಣ್ಣದ (ಎರಳಿ) ಜಿಂಕೆ ಕಂಡು ಹಿಂಬಾಲಿಸುತ್ತಾನೆ. ಅದು ನೆಲವನ್ನು ತನ್ನ ಕಾಲಿನಿಂದ ಕೆರೆದು ಮಾಯವಾಗುತ್ತದೆ. ಅದು ಕೆರೆದ ಸ್ಥಳದಲ್ಲಿ ಅಗೆದಾಗ ಅಗಸ್ತ್ಯ ಮುನಿಗಳಿಂದ ಸ್ಥಾಪಿತವಾದ ಮಲ್ಲಿಕಾರ್ಜುನ ದೇವಾಲಯ ಕಂಡುಬಂದಿತು. ಆ ಹೊನ್ನಿನ ಎರಳಿ ತೋರಿದ ತಾಣದಲ್ಲಿ ಕಂಡು ಬಂದ ದೇಗುಲದ ಸನಿಹದಲ್ಲಿ ರೂಪುಗೊಂಡ ಗ್ರಾಮವು ಹೊನ್ನೆರಳಿ ಹೊನ್ನಾಳಿಯಾಗಿರುವುದಾಗಿ ಪ್ರತೀತಿ ಇದೆ. ಈ ಮಾಹಿತಿಯನ್ನು ವಿಶ್ಲೇಷಿಸಿ ನೋಡಿದಾಗ ಹೊಳೆದುಂಡೆಯಲ್ಲಿನ ಮಲ್ಲಿಕಾರ್ಜುನ ದೇವಾಲಯಕ್ಕೆ ಕ್ರಿ.ಶ. ೧೦೫೫ರಲ್ಲಿ ದತ್ತಿ ನೀಡಿದ್ದುದನ್ನು ಹಾಗೂ ಒನ್ನಾಳಿ ಎಂಬ ಹೆಸರನ್ನು ಆ ದೇಗುಲದ ಅಂಗಳದಲ್ಲಿರುವ ಶಾಸನವೇ ತಿಳಿಸುವುದರಿಂದ ಈ ಪ್ರದೇಶಕ್ಕೆ ಒನ್ನಾಳಿ ಎಂಬ ಹೆಸರು ಕ್ರಿ.ಶ.೧೦೫೫ಕ್ಕಿಂತ ಮೊದಲೇ ಬಂದಿದೆ[೯]. ಮಲ್ಲಿಕಾರ್ಜುನ ದೇಗುಲವನ್ನು ಭೂಮಿಯಲ್ಲಿ ಅಗೆದು ತೆಗೆಯಲಾಯಿತು ಎಂಬ ಅಂಶವಾಗಲೀ ಅದು ಅಗಸ್ತ್ಯ ಮುನಿಯಿಂದ ಸ್ಥಾಪಿತವಾಯಿತು ಎಂಬುದಾಗಲೀ ನಂಬಲರ್ಹವಲ್ಲ. ಏಕೆಂದರೆ ದೇವಾಲಯದ ಪ್ರಾಚೀನತೆಗೆ ಇಂತಹ ಕಟ್ಟುಕತೆಗಳನ್ನು ಆ ಕಾಲದಲ್ಲಿ ಹೆಣೆಯುತ್ತಿದ್ದುದು ಸಹಜವಾಗಿದೆ. ಮತ್ತೊಂದು ಸ್ಥಳಪುರಾಣದಂತೆ ಶ್ರೀಶೈಲ ಜಗದ್ಗುರು ಜಡೆಯ ಶಂಕರಾಚಾರ್ಯರು ತಮ್ಮ ಗದ್ದುಗೆ ಕಂಬಳಿ ಮೇಲೆ ಕುಳಿತು ತುಂಗಭದ್ರಾನದಿ ದಾಟಿ ಒಣಗಿದ ಅರಳಿ ಮರದ ಕೆಳಗೆ ತಂಗಿರುತ್ತಾರೆ. ಜನರು ಅವರನ್ನು ಸಂದರ್ಶಿಸಲು ತಂಡೋಪತಂಡವಾಗಿ ಬಂದಾಗ ಅವರಲ್ಲಿದ್ದ ಕೆಲ ಕಿಡಿಗೇಡಿಗಳು ಒಣಗಿದ ಅರಳಿಮರವನ್ನು ಚಿಗುರಿಸುವಂತೆ ಸ್ವಾಮಿಗಳನ್ನು ಕೆಣಕುತ್ತಾರೆ. ಸ್ವಾಮಿಗಳು ಅದನ್ನು ಚಿಗುರಿಸುವುದರೊಂದಿಗೆ ಅದರಿಂದ ಹೊನ್ನಿನ ಮಣಿಗಳನ್ನು ಸುರಿಸುತ್ತಾರೆ. ಅರಳಿಮರದಿಂದ ಹೊನ್ನು ಸುರಿದಿದ್ದರಿಂದ ಹೊನ್ನರಳಿಯಾಗಿರುವುದಾಗಿ ಹೊನ್ನಾಳಿಯ ಹಿರೇಕಲ್ಮಠದ ಪುರಾಣದಲ್ಲಿ ಉಲ್ಲೇಖಿತವಾಗಿದೆ. ಇದೇ ರೀತಿಯ ಪುರಾಣವು ಹೆಳವರ ಕಥೆಯಲ್ಲಿಯೂ ಕೂಡಾ ಬಂದಿದ್ದು ಸಾಧ್ವಿಯ ಭಕ್ತಿಗೆ ಒಣಗಿದ ಅರಳೀಮರ ಹೊನ್ನಿನ ಮಳೆ ಸುರಿದ ಸ್ಥಳದಲ್ಲಿ ರೂಪುಗೊಂಡ ಗ್ರಾಮವು ಹೊನ್ನಾರಳಿ ಹೊನ್ನಾಳಿಯಾಗಿರುವುದಾಗಿ ಹೆಳವರು ಹೇಳುತ್ತಾರೆ. ಇಂತಹ ಸ್ಥಳಗಳಿಗೆ ಹೇಗೆ ಹೆಸರುಗಳು ಬಂದವು ಎಂಬುದರ ಬಗ್ಗೆ ಆಯಾ ಪ್ರದೇಶದ ಜನ ತಮಗೆ ತೋಚಿದ ನಿಷ್ಪತ್ತಿಗಳನ್ನು ಸೂಚಿಸುವುದುಂಟು ಇಂತಹ ನಿಷ್ಪತ್ತಿಗಳನ್ನು ಜನಪದ ನಿಷ್ಪತ್ತಿಗಳು ಎಂದು ಕರೆಯುತ್ತಾರೆ. ಈ ಜನಪದ ನಿಷ್ಪತ್ತಿಗಳು ಬಹುಮಟ್ಟಿಗೆ ಕಾಲ್ಪನಿಕವಾಗಿರುತ್ತವೆ. ಕುತೂಹಲವೊಂದನ್ನು ಬಿಟ್ಟರೆ ಇವುಗಳಿಂದ ಹೆಚ್ಚು ಪ್ರಯೋಜನವಾಗುವುದಿಲ್ಲ. ಆದುದರಿಂದ ಮೇಲೆ ಹೇಳಿದ ಹೊನ್ನಾಳಿಯ ಬಗೆಗೆ ಇರುವ ಸಂಗತಿಗಳು ಜನಪದ ನಿಷ್ಪತ್ತಿಗಳೇ ಆಗಿರುವುದರಿಂದ ಇದರಲ್ಲಿ ಸತ್ಯಾಂಶದ ಕೊರತೆ ಇರುವುದರಿಂದ ತಳ್ಳಿಹಾಕಬಹುದು.

ಮೆಕೆಂಜಿಯು ತನ್ನ ಕೈಫಿಯತ್ತಿನಲ್ಲಿ ಹೇಳಿರುವಂತೆ[೧೦] The literal name of this village is Honna - Anala or Honhully but in the circar's account is called beedeeree, ರೈಸರು ಹೊನ್ನಾಳಿ ಎಂದರೆ Gold bearing ಎಂದು ಹೇಳುತ್ತಾರೆ. ರೈಸರು ತಮ್ಮ ಗೆಜೆಟಿಯರ್‌ನ "Honnali gold field" ಎಂಬ ಉಪವಿಭಾಗದಲ್ಲಿ ಹೊನ್ನಾಳಿಯ ಕಾಳವರಾಗನ ಬೆಟ್ಟದಲ್ಲಿ ಬಂಗಾರದ ಗಣಿ ಇತ್ತು ಮತ್ತು ಅದಿರನ್ನು ಹೇಗೆ ಸಂಸ್ಕರಿಸಲಾಗುತ್ತಿತ್ತು ಎಂದು ತಿಳಿಸಿರುವುದನ್ನು ಪರಿಶಿಲಿಸಿದರೆ ಹೊನ್ನಾಳಿಗೂ ಮತ್ತು ಹೊನ್ನಿಗೂ ಇರುವ ಸಂಬಂಧ ಅರ್ಥವಾಗುತ್ತದೆ. ಇದಕ್ಕೆ ಪೂರಕವಾಗಿ ಹೊನ್ನಾಳಿಯನ್ನು ೧೭ನೇ ಶತಮಾನದಲ್ಲಿ ಸುವರ್ಣಪುರ ಎಂದು ಕರೆಯಲಾಗುತ್ತಿತ್ತು ಎಂದು ಹಿರೇಕಲ್ಮಠದ ಸ್ವಾಮಿಗಳಿಗೆ ಬರೆದ ಪತ್ರವೊಂದು ತಿಳಿಸುತ್ತದೆ.

**"ಶ್ರೀ ಮದ್ರಾಜಾಧಿರಾಜ ಪೂಜಿತ ಕನಕಹರಿಪೀಠ ಶೋಭಿತ ಶ್ರೀ ಗಿರಿರಾಜ ಸೂರ್ಯ ಸಿಂಹಾಸನಾ ಸುವರ್ಣಪುರ ಬೃಹಚ್ಛಿಲಾಮಠಾಧಿಪ....."**

ಸುವರ್ಣ ಎಂದರೆ ಹೊನ್ನು ಅದು ಹೊನ್ನಿನ ಪುರ ಎಂದೆ ಅರ್ಥ. ಆದುದರಿಂದ ಈ ಪ್ರದೇಶ ಪ್ರಾಚೀನ ಕಾಲದಲ್ಲಿ ಹೊನ್ನಿನ ಹಾಳು ಆಗಿರಬಹುದು ಹೊನ್ನು+ಹಾಳು; ಹೊನ್ನಾಳು ಆಗಿ ಕ್ರಮೇಣ ಇದು ಹೊನ್ನಾಳಿ ಆಗಿರಬಹುದು. ಪ್ರಾಯಶಃ ಈ ಸ್ಥಳವು ಹೊನ್ನನ್ನು ಸಂಸ್ಕರಿಸುವ ಸ್ಥಳವಾಗಿದ್ದುದರಿಂದ ಮುಂದೆ ಈ ಸ್ಥಳದಲ್ಲಿ ಊರು ಸ್ಥಾಪನೆಯಾದಾಗ ಅದಕ್ಕೆ ಆ ಹೆಸರೇ ಬಂದಿರಬಹುದು ಎಂದು ಹೇಳಬಹುದು. ಹೀಗೆ ಈ ಊರಿಗೆ ಶಾಸನಗಳು ಒನ್ನಾಳಿ[೧೨], ಒನಳಿ[೧೩], ಉಂಹಳ್ಳಿ[೧೪], ವೊಂನಾಳಿ[೧೫], ಹೊಂನೂರ[೧೬], ಹೊಂನಾಳಿ[೧೭], ಹೊನ್ನಾಳಿ ಸುವರ್ಣಪುರ ಎಂದು ಕರೆದಿವೆ.

**ಸ್ಥಾಪನೆ**

ಹೊನ್ನಾಳಿ ಹೆಸರಿನ ಮೊದಲ ಉಲ್ಲೇಖ ಕ್ರಿ.ಶ. ೧೦೫೫ರ ಶಾಸನದಲ್ಲಿ ಪ್ರಯೋಗವಾಗಿದೆ. ಆ ಶಾಸನವು ಕಲ್ಯಾಣಿ ಚಾಲುಕ್ಯರ ಕಾಲಕ್ಕೆ ಸೇರಿದ್ದು ಕ್ರಿ.ಶ. ೧೦೫೫ರಲ್ಲಿ ಒನ್ನಾಳಿಯ **ಮಾಚಗವುಡನು ಮಲ್ಲಿಕಾರ್ಜುನ ದೇವಾಲಯಕ್ಕೆ** ದತ್ತಿ ಬಿಟ್ಟಿರುವುದನ್ನು ತಿಳಿಸುತ್ತದೆ[೧೮]. ಅದೇ ದೇವಾಲಯದಲ್ಲಿ ಮೂರು ವೀರಗಲ್ಲುಗಳಿದ್ದು ಅವು ಕ್ರಿ.ಶ. ೧೦೬೫ರ ಕಾಲಕ್ಕೆ ಸೇರಿದ್ದು 'ಒನ್ನಾಳಿ' ಹೆಸರನ್ನು ಉಲ್ಲೇಖಿಸುತ್ತವೆ. ಆದುದರಿಂದ ಪ್ರಸ್ತುತ ಹೊನ್ನಾಳಿಯನ್ನು ೧೧ನೇ ಶತಮಾನದಲ್ಲಿ ಒನ್ನಾಳಿ ಎಂದು ಕರೆಯಲಾಗುತ್ತಿತ್ತು ಆಗ ಅದು ಕಲ್ಯಾಣಿ ಚಾಲುಕ್ಯರ ಆಡಳಿತಕ್ಕೆ ಸೇರಿತ್ತು. ಎಂದು ತಿಳಿಯುತ್ತದೆ. ಆದುದರಿಂದ ಹೊನ್ನಾಳಿ ಗ್ರಾಮವು ಕಲ್ಯಾಣಿ ಚಾಲುಕ್ಯರಿಗಿಂತ ಸ್ವಲ್ಪ ಮೊದಲು ಸ್ಥಾಪನೆ ಗೊಂಡಿರಬಹುದು. ನಂತರ ಇವರ ಕಾಲದಲ್ಲಿ ಏಳಿಗೆಗೆ ಬಂದಿರ ಬೇಕು. ಕಲ್ಯಾಣಿ ಚಾಲುಕ್ಯರ ದೊರೆ ಎರಡನೇ ಸೋಮೇಶ್ವರನ ಆಳ್ವಿಕೆಯಲ್ಲಿ ಅಭಿವೃದ್ಧಿ ಹೊಂದಿದ್ದ ಈ ಹೊನ್ನಾಳಿ ಪ್ರದೇಶವಿದ್ದುದು; ನಂತರ ಸುಮಾರು ೫೦೦ ವರ್ಷಗಳ ಕಾಲ ಯಾವುದೇ ಶಾಸನಗಳು ಈ ಊರಿನ ಹೆಸರನ್ನು ಪ್ರಸ್ತಾಪಿಸಿರುವುದಿಲ್ಲ. ಆದರೆ ಕ್ರಿ.ಶ. ೧೫೫೬ರ ಕೆಳದಿಯ ದೊರೆ ಸದಾಶಿವನಾಯಕನ ಕಾಲದ ಶಾಸನವು ಹೊನ್ನಾಳಿಯನ್ನು ಹೆಸರಿಸುತ್ತದೆ ಅದರ ಪ್ರಕಾರ.

ಕೆಳದಿಯ ಸದಾಶಿವನಾಯಕರಿಗೆ
ಅಮರಮಾಗಣೆಯಾಗಿ ಕೊಟ್ಟ
ಯಿಾ ಹೊನ್ನಾಳಿ ಸೀಮೆಯೊಳಗಣ ಕುಬುವರ
ರಾಮೇಶ್ವರ ದೇವರಿಗೆ

ಅಂದರೆ ವಿಜಯನಗರದ ಚಕ್ರವರ್ತಿ ಸದಾಶಿವರಾಯನ ಕಾಲದಲ್ಲಿ ಹೊನ್ನಾಳಿಯು ಒಂದು ಪ್ರಮುಖ ಆಡಳಿತ ವಿಭಾಗವಾಗಿ ಹೊರಹೊಮ್ಮಿತು ಒನ್ನಾಳಿ ಎಂದು ಬಳಸಲ್ಪಡುತ್ತಿದ್ದ ಪದವು ಈ ವೇಳೆಗೆ ಹೊನ್ನಾಳಿ ಆಗಿ ಬದಲಾದುದನ್ನು ಈ ಶಾಸನದಲ್ಲಿ ಗುರ್ತಿಸಬಹುದು. ಹೀಗೆ ಹೊನ್ನಾಳಿ ಪ್ರದೇಶವು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಪ್ರಗತಿ ಹೊಂದಿತ್ತು. ಕಲ್ಯಾಣಿ ಚಾಲುಕ್ಯರ ಸಾಮಂತರಾದ ಹೊಯ್ಸಳರು ಅವರಿಂದ ಸ್ವತಂತ್ರಗೊಂಡ ನಂತರ ಈ ಪ್ರದೇಶ ಹೊಯ್ಸಳರ ಅಧೀನಕ್ಕೆ ಬಂದಿತು. ಹೊಯ್ಸಳ ಸಾಮ್ರಾಜ್ಯ ಅಲ್ಲಾವುದ್ದೀನ್ ಖಿಲ್ಜಿ, ಮಹ್ಮದ್ ಬಿನ್ ತುಘಲಕ್‌ರ ದಾಳಿಗಳಿಗೆ ಸಿಲುಕಿ ಪತನಹೊಂದಿದ ಮೇಲೆ ತುಂಗಭದ್ರಾನದಿ ತೀರದಲ್ಲಿ ವಿಜಯನಗರ ಸಾಮ್ರಾಜ್ಯವು ಹರಿಹರ ಬುಕ್ಕರ ಪ್ರಯತ್ನದ ಫಲವಾಗಿ ಉದಯವಾಯಿತು. ಈ ಸಂದರ್ಭದಲ್ಲಿ ಹೊನ್ನಾಳಿ ಪ್ರದೇಶವು ವಿಜಯನಗರ ಸಾಮ್ರಾಜ್ಯದ ಅಧೀನಕ್ಕೆ ಒಳಪಟ್ಟಿತು. ವಿಜಯನಗರ ದವರಿಂದ ಅಮರ ನಾಯಕತ್ವವನ್ನು ಪಡೆದುಕೊಂಡು ಕೆಳದಿಯಲ್ಲಿ ಚೌಡಪ್ಪ ನಾಯಕ ರಾಜ್ಯವೊಂದನ್ನು ಸ್ಥಾಪಿಸಿದನು. ಅವನ ನಂತರ ಈ ರಾಜ್ಯಕ್ಕೆ ಉತ್ತರಾಧಿಕಾರಿಯಾಗಿ ಬಂದ ಸದಾಶಿವನಾಯಕರ ಕಾಲದಲ್ಲಿ (ಕ್ರಿ.ಶ. ೧೫೫೭೦ರಲ್ಲಿ) ಹೊನ್ನಾಳಿಯು ವಿಜಯನಗರ ಸಾಮ್ರಾಜ್ಯದಲ್ಲಿ ಸೀಮೆಯ ಸ್ಥಾನಮಾನವನ್ನು ಹೊಂದಿತ್ತು. ಇದನ್ನು ಸದಾಶಿವನಾಯಕರ ಕಾಲದ ಶಾಸನವು ನಮಗೆ ತಿಳಿಸುತ್ತದೆ ಅದರ ಪ್ರಕಾರ[೧೯]

**"ಯಿಾ ಹೊನ್ನಾಳಿ ಸೀಮೆಯೊಳಗಣ ಕುಬುವರ ರಾಮೇಶ್ವರ ದೇವರಿಗೆ"**

ಹೀಗೆ ವಿಜಯನಗರದ ಕಾಲದಲ್ಲಿ ಪ್ರಾಮುಖ್ಯತೆಗೆ ಬಂದ ಹೊನ್ನಾಳಿಯು ಅನೇಕ ವರ್ಷಗಳ ಕಾಲ ಅವರ ಅಧೀನದಲ್ಲಿಯೇ ಮುಂದುವರೆಯಿತು. ಆದರೆ ಕೃಷ್ಣದೇವರಾಯನ ನಂತರದ (ಕ್ರಿ.ಶ. ೧೫೦೯-೧೫೨೯) ಬದಲಾದ ರಾಜಕೀಯ ಸನ್ನಿವೇಶದಲ್ಲಿ ರಾಮರಾಯ ಸರ್ವಾಧಿಕಾರಿಯಾದನು. ಕ್ರಿ.ಶ. ೧೫೬೫ರಲ್ಲಿ ನಡೆದ ತಾಳಿಕೋಟೆ ಕದನವು ವಿಜಯನಗರದ ಪತನಕ್ಕೆ ಕಾರಣವಾಯಿತು. ಈ ಅವಕಾಶವನ್ನುಪಯೋಗಿಸಿಕೊಂಡ ವಿಜಯನಗರದ ಚಕ್ರವರ್ತಿಗಳಿಂದ ನೇಮಕಗೊಂಡಿದ್ದ ಅನೇಕ ಅಮರ ನಾಯಕರು ಸ್ವತಂತ್ರವಾಗಿ ಆಳತೊಡಗಿದರು. ಇಂತಹ ಅಮರ ನಾಯಕರಲ್ಲಿ ಮೂಗುಲ್ ದೊರೆ ಮಾರನಾಯಕನೂ ಕೂಡಾ ಒಬ್ಬನಾಗಿದ್ದಾನೆ. ಮೆಕೆಂಜಿ ತನ್ನ ಕೈಫಿಯತ್ತಿನಲ್ಲಿ ತಿಳಿಸಿರುವಂತೆ[೨೦]

A several of the Anegondi kings named Moogul Dorai Maranaik took forciable possession of this District and built a fort at Honelly where he resided from the cycle year Doormukhy 1518

**ಕೋಟೆ ನಿರ್ಮಾಣ ಮತ್ತು ಮಾರನಾಯಕ**

ಮಾರನಾಯಕನು ವಿಜಯನಗರ ಸಾಮ್ರಾಜ್ಯ ಪತನ ಹೊಂದಿದ ಅವಕಾಶವನ್ನುಪಯೋಗಿಸಿಕೊಂಡು ಕ್ರಿ.ಶ. ೧೫೯೬ ರಲ್ಲಿ ಹೊನ್ನಾಳಿಯನ್ನಾಕ್ರಮಿಸಿ ಸ್ವತಂತ್ರ ಆಳಿಕೆಯ ಸಂಕೇತವಾಗಿ ಕೋಟೆಯೊಂದನ್ನು ಕಟ್ಟಿಸಿ ಅಲ್ಲಿ ತನ್ನ ಆಳ್ವಿಕೆ ಆರಂಭಿಸಿದನು. ಈ ಸಂದರ್ಭದಲ್ಲಿ ಸಂತೆಬೆನ್ನೂರು ತರೀಕೆರೆಯ ನಾಯಕರೂ ಹಾಗೂ ಕೆಳದಿಯ ನಾಯಕರೂ ಆ ಭಾಗದಲ್ಲಿ ಬಲಾಢ್ಯರಾಗಿ ಆಳ್ವಿಕೆ ಮಾಡುತ್ತಿದ್ದರು. ಈ ಸಮಯದಲ್ಲಿಯೇ ಮತ್ತೊಂದು ಸ್ವತಂತ್ರ ಮನೆತನವೊಂದು ಉದಯವಾದುದು ತರೀಕೆರೆಯ ನಾಯಕರನ್ನು ರೊಚ್ಚಿಗೆಬ್ಬಿಸಿತು. ಆಗ ಹಿರೇಕೆಂಗಾ ಹನುಮಪ್ಪನಾಯಕನು ಬಸವಾಪಟ್ಟಣ ಮತ್ತು ಸಂತೆಬೆನ್ನೂರು ಎರಡೂ ಪ್ರಾಂತ್ಯಗಳಲ್ಲಿ ಒಟ್ಟಿಗೆ ಆಳ್ವಿಕೆ ಮಾಡುತ್ತಿದ್ದನು. ಅವನು ಹೊನ್ನಾಳಿಯಲ್ಲಿ ಸ್ವತಂತ್ರವಾಗಿ ರಾಜ್ಯಸ್ಥಾಪಿಸಿದ್ದ ಮಾರನಾಯಕನ ಏಳಿಗೆಯನ್ನು ಸಹಿಸದೆ ದಾಳಿ ಮಾಡಿದನು. ಅದನ್ನು ಮೆಕೆಂಜಿಯು ಹೀಗೆ ದಾಖಲಿಸಿದ್ದಾನೆ[೨೧].

"The Tarikere chief Kanganna Naik came and invade war up on him for some time but returned to his country being unable to take the place"

ಮೆಕೆಂಜಿಯ ದಾಖಲೆಯಲ್ಲಿನ ಕೆಂಗಣ್ಣನಾಯಕನೇ ಕ್ರಿ.ಶ.೧೫೮೧ ರಿಂದ ಕ್ರಿ.ಶ. ೧೬೩೮ರ ವರೆಗೆ ಆಳ್ವಿಕೆ ಮಾಡಿರುವ ಹಿರೇಕೆಂಗಾ

ಹನುಮಪ್ಪ ನಾಯಕನೇ ಆಗಿದ್ದಾನೆ. ಅವನು ಹೊನ್ನಾಳಿಯನ್ನು ಆಕ್ರಮಿಸಲು ಹೋಗಿ ಮಾರನಾಯ್ಕನಿಂದ ಸೋತು ಹಿಂತಿರುಗಿದನು.

**ಆದಿಲ್‌ಷಾಹಿಗಳ ಆಳ್ವಿಕೆ**

ಇದೇ ಸಮಯಕ್ಕೆ ಉತ್ತರ ಕರ್ನಾಟಕದಲ್ಲಿ ಹಲವಾರು ಹೊಸ ರಾಜಕೀಯ ಬೆಳವಣಿಗೆಗಳು ಉಂಟಾಗಿದ್ದವು. ವಿಜಯನಗರ ಪತನಹೊಂದಿದ ನಂತರ ವಿಜಾಪುರದ ಆದಿಲ್‌ಶಾಹಿಗಳು ಒಂದು ಪ್ರಬಲ ರಾಜಕೀಯ ಶಕ್ತಿಯಾಗಿ ಬೆಳೆದಿದ್ದರು. ಮೊಗಲರ ರಾಜ್ಯ ವಿಸ್ತರಣೆಯನ್ನು ಮಹ್ಮದ್ ಆದಿಲ್‌ಶಾಹಿ ಕ್ರಿ.ಶ. ೧೬೩೬ ರವರೆಗೂ ಯಶಸ್ವಿಯಾಗಿ ತಡೆದಿದ್ದನು. ಆದರೂ ಅವನು ಅದೇ ವರ್ಷ ಅನಿವಾರ್ಯವಾಗಿ ಅವರೊಂದಿಗೆ ಅಧೀನತ್ವದ ಒಪ್ಪಂದ ಮಾಡಿಕೊಳ್ಳಬೇಕಾಯಿತು. ಉತ್ತರದಲ್ಲಿ ತನಗಾದ ನಷ್ಟವನ್ನು ತುಂಬಿಕೊಳ್ಳಲು ಅವನ ದಕ್ಷಿಣದ ಕಡೆಗೆ ತಿರುಗಬೇಕಾಯಿತು. ದಂಡನಾಯಕ ರಣದುಲ್ಲಾಖನನ ಕಣ್ಣು ಕರ್ನಾಟಕದ ದಕ್ಷಿಣದ ಕಡೆಗೆ ತಿರುಗಿತು. ಅಪಾರ ಸೇನೆಯೊಡನೆ ಷಹಾಜಿಯ ಜೊತೆಗೂಡಿ ಅವನು ಹೊರಟು ಅನೇಕ ಚಿಕ್ಕ ಮತ್ತು ದೊಡ್ಡ ರಾಜಮನೆತನಗಳನ್ನು ಜಯಿಸುತ್ತಾ ಅಪಾರ ಐಶ್ವರ್ಯವನ್ನು ಕೊಳ್ಳೆ ಹೊಡೆಯತೊಡಗಿದನು. ಈ ಸಂದರ್ಭದಲ್ಲಿಯೆ ಹೊನ್ನಾಳಿಯಲ್ಲಿ ಆಳ್ವಿಕೆ ಮಾಡುತ್ತಿದ್ದ ಮಾರನಾಯಕನೂ ಬಿಜಾಪುರದ ಆದಿಲ್‌ಶಾಹಿಗಳ ದಾಳಿಗೆ ತುತ್ತಾಗಬೇಕಾಯಿತು. ಮೆಕೆಂಜಿ ದಾಖಲಿಸಿರುವಂತೆ[೨೨],

"Afterwards the subedhar sarsupa belonging to the Beejapore padshah came with a great number of troops and controlled for a long time with Mara Naik who being unable to withstand their force or drive them off made peace with them and agreed to submit as the obedient vasal of that Government"

ಬಿಜಾಪುರದ ಆದಿಲ್‌ಶಾಹಿಗಳ ಸುಬೇದಾರ ಸರ್ಸಪ್ಪನ ಸೇನೆಯೊಡನೆ ಅನೇಕ ದಿನಗಳ ಕಾಲ ಹೋರಾಟ ಮಾಡಿದ ಮಾರನಾಯ್ಕನು ಅವನ ಬಲದ ಎದುರು ನಿಲ್ಲಲಾಗದೆ ಆತನೊಂದಿಗೆ ಶಾಂತಿ ಒಪ್ಪಂದ ಮಾಡಿಕೊಂಡು ಬಿಜಾಪುರದವರ ನಿಷ್ಠೆಯ ಸಾಮಂತನಾದನು. ಹೀಗೆ ಸ್ವತಂತ್ರನಾಗಿ ಆಳ್ವಿಕೆ ಮಾಡುತ್ತಿದ್ದ ಮಾರಪ್ಪನಾಯ್ಕ ಬಸವಾಪಟ್ಟಣದವರನ್ನು ಸೋಲಿಸಿದರೂ ಕೊನೆಗೆ ಆದಿಲ್ ಶಾಹಿಗಳಿಗೆ ಮಣಿದು ಸ್ವತಂತ್ರ ಕಳೆದುಕೊಳ್ಳಬೇಕಾಯಿತು. ಆದರೂ ಕೂಡಾ ಆತನ ಪ್ರಾದೇಶಿಕ ವ್ಯಾಪ್ತಿಯಲ್ಲಿ ಆಡಳಿತ ನಿರ್ವಹಣೆ ಸ್ವಾತಂತ್ರ್ಯ ಉಳಿಸಿಕೊಂಡಿದ್ದ ಅವನನ್ನು ಕ್ರಿ.ಶ. ೧೬೫೮ರಲ್ಲಿ ಅಧಿಕಾರದಿಂದ ಕೆಳಗಿಳಿಸಿ ಅವನ ಇಡೀ ರಾಜ್ಯವನ್ನು ತಮ್ಮ ನೇರ ಅಧೀನಕ್ಕೆ ತೆಗೆದುಕೊಂಡರು. ಹೀಗೆ ಬಿಜಾಪುರದ ಎರಡನೇ ಅಲಿ ಆದಿಲ್‌ಶಾಹಿ (ಕ್ರಿ.ಶ ೧೬೫೬-೧೬೭೨) ಮತ್ತು ಆದಿಲ್ ಶಾಹಿಗಳ ಕೊನೆಯ ಸುಲ್ತಾನ ಸಿಖಂದರ್ ಆದಿಲ್‌ಶಾಹಿ (ಕ್ರಿ.ಶ ೧೬೭೨-೧೬೮೬)ಯು ತಮ್ಮ ಪ್ರತಿನಿಧಿಗಳ ಮೂಲಕ ಹೊನ್ನಾಳಿಯಲ್ಲಿ ಆಳ್ವಿಕೆ ಮಾಡಿದರು. ಈ ಸಮಯದಲ್ಲಿ ಅಷರ್ ಚೌಕಿ ಮಹ್ಮದ್, ಮಹ್ಮದ್‌ಖಾನ್, ಸಲಾಖತ್‌ಖಾನ್, ಅಮೀನ್ ಉಲ್‌ಮುಲ್ಕಿ ಮತ್ತು ಶಿವರಾವ್ ಬಿಜಾಪುರ ಆದಿಲ್ ಶಾಹಿಗಳ ಪ್ರತಿನಿಧಿಗಳಾಗಿ ಹೊನ್ನಾಳಿಯಲ್ಲಿದ್ದರು[೨೩].

**ಕೆಳದಿಯವರ ಆಕ್ರಮಣ**

ಬಿಜಾಪುರದ ಆದಿಲ್ ಶಾಹಿಗಳ ಪ್ರಭಾವವು ದಕ್ಷಿಣ ಕರ್ನಾಟಕದಲ್ಲಿ ಇಳಿಮುಖವಾಗುತ್ತಿರುವುದನ್ನು ಗಮನಿಸಿದ ಕೆಳದಿಯವರು ಹೊನ್ನಾಳಿ ಆಕ್ರಮಣಕ್ಕೆ ಯೋಜನೆ ರೂಪಿಸಿದರು. ಆ ಸಂದರ್ಭದಲ್ಲಿ ಹೊನ್ನಾಳಿಯಲ್ಲಿ ಬಿಜಾಪುರದ ಪ್ರತಿನಿಧಿಯಾಗಿ ಶಿವರಾವ್ ಕಾರ್ಯನಿರ್ವಹಿಸುತ್ತಿದ್ದನು. ಆಗ ಕೆಳದಿಯ ಆಡಳಿತದ ಜವಾಬ್ದಾರಿ ಹೊತ್ತಿದ್ದ ರಾಣಿ ಚನ್ನಮ್ಮ ಹೊನ್ನಾಳಿಯ ಆಕ್ರಮಣಕ್ಕೆ ಸೇನಾ ಸಿದ್ಧತೆ ಮಾಡಿಕೊಂಡು ಜೊತೆಗೆ ಯುದ್ಧವಿಲ್ಲದೆ ಹೊನ್ನಾಳಿ ಪಡೆಯಲು ಮುಸ್ಲಿಂ ಸುಲ್ತಾನನ ಹಿಂದೂ ಪ್ರತಿನಿಧಿಯಾಗಿದ್ದ ಶಿವರಾವ್ ಜೊತೆ ಮಾತುಕತೆಗೆ ತನ್ನ ರಾಯಭಾರಿಯನ್ನು ಕಳುಹಿಸಿದಳು. ಬಿಜಾಪುರ ಸಾಮ್ರಾಜ್ಯದ ಪ್ರಾಬಲ್ಯ ಕಡಿಮೆಯಾಗುತ್ತಿರುವುದನ್ನು ಮನಗಂಡಿದ್ದ ಶಿವರಾವ್ ದೂರದ ಪ್ರದೇಶಕ್ಕಿಂತ ತನ್ನ ಪ್ರದೇಶದ ಹತ್ತಿರದಲ್ಲೇ ಇದ್ದ ಪ್ರಬಲ ನಾಯಕರನ್ನು ಎದುರು ಹಾಕಿಕೊಳ್ಳಲು ಇಚ್ಛಿಸದ ಅವನು ಇದೇ ಯೋಗ್ಯವೆಂದು ಬಗೆದು ಕೆಳದಿಯವರ ಜೊತೆ ಒಪ್ಪಂದ ಮಾಡಿಕೊಂಡು ಕ್ರಿ.ಶ. ೧೬೮೪ರಲ್ಲಿ ಹೊನ್ನಾಳಿಯನ್ನು ನಾಯಕರಿಗೆ ಬಿಟ್ಟುಕೊಟ್ಟನು. ಇದನ್ನು ಮೆಕೆಂಜಿ ಕೈಫಿಯತ್ತು ಹೀಗೆ ದಾಖಲಿಸುತ್ತದೆ[೨೪].

"At that period the Rannee of Naggur Chinnamma having notice of the fall of the Beejapore Government by a secret letter of her vakeel sent troops and took Honelly by agreement with Seevarow from that year 1684 AD".

ಹೀಗೆ ಹೊನ್ನಾಳಿಯು ಬಿಜಾಪುರದ ಆದಿಲ್‌ಶಾಹಿಗಳ ಅಧಿಕಾರದಿಂದ ಮುಕ್ತಿಹೊಂದಿ ಕೆಳದಿ ಅರಸರ ಅಧೀನಕ್ಕೆ ಒಳಪಡುತ್ತದೆ. ಕ್ರಿ.ಶ. ೧೬೮೪ ರಿಂದ ಕ್ರಿ.ಶ. ೧೭೬೨ರವರೆಗೂ ಆಡಳಿತ ನಡೆಸಿದ ಅವರ ಕಾಲದಲ್ಲಿ ಹೊನ್ನಾಳಿಯು ಒಂದು ಪ್ರಮುಖ ಆಡಳಿತ ಕೇಂದ್ರವಾದ ಸೀಮೆಯ ಸ್ಥಾನಮಾನವನ್ನು ಹೊಂದಿತ್ತೆಂದು ಕ್ರಿ.ಶ. ೧೭೨೦ರ ಕೆಳದಿ ಅರಸರ ಶಾಸನ ತಿಳಿಸುತ್ತದೆ[೨೫].

ಶ್ರೀ ಮತ್ಕೆಳದಿ ಸೋಮಶೇಖರ ನಾಯ
ಕರೂ ರಾಯಪಗೆ ಬರೆಸಿ ಕಳುಹಿದ ನಿರೂ
ದ ಪ್ರಮಾಣ ಹೊಂನಾಳಿ ಕೋಟೆ ಸೇರೋಗದ
ಗಲುಲೋಜಿಯು ಹೊಂನಾಳಿ ಸೀಮೆ ಒ
ಳ ಊರ ಕಣುವೇಲು ಹುಲಿಯ ಬಹ
ಆದಿವಸ ಉಡಿ ಮಾಡುತಿದಲಿ ಆ ಹು
ಲಿಯನು ಕಡಿದು ಯಿವನು ಮ್ರುತನಾದ.

### ಹೈದರಾಲಿಯ ಆಕ್ರಮಣ

ಕೆಳದಿಯ ಸೋಮಶೇಖರ ನಾಯಕನ ನಂತರವೂ ಇಮ್ಮಡಿ ಬಸವಪ್ಪನಾಯಕ, ಚನ್ನಬಸಪ್ಪನಾಯಕ, ವೀರಮ್ಮಾಜಿಯ ಆಳ್ವಿಕೆ ಯಲ್ಲಿ ಹೊನ್ನಾಳಿಯು ಅಭಿವೃದ್ಧಿಗೊಂಡಿತು. ಹೀಗೆ ಅಭಿವೃದ್ಧಿ ಪಥದತ್ತ ಸಾಗುತ್ತಿದ್ದ ಹೊನ್ನಾಳಿಗೆ ದುರ್ದೆಸೆಯ ದಿನಗಳು ಆರಂಭ ವಾದವು. ಮಹತ್ವಾಕಾಂಕ್ಷಿಯಾದ ಹೈದರಾಲಿಯು ಕರ್ನಾಟಕದ ದಕ್ಷಿಣಭಾಗದಲ್ಲಿ ಪ್ರಬಲವಾಗಿ ಬೆಳೆದಿದ್ದನು. ಸಣ್ಣಪುಟ್ಟ ರಾಜಮನೆ ತನಗಳ ಕಡುದ್ವೇಷಿಯಾಗಿದ್ದ ಹೈದರಾಲಿಯು ಎಲ್ಲಾ ಕೋಟೆಗಳನ್ನು ಆಕ್ರಮಿಸಿಕೊಳ್ಳುತ್ತಾ ಸಾಗಿದನು. ಬಹುದೊಡ್ಡ ರಾಜವಂಶವಾಗಿದ್ದ ಚಿತ್ರದುರ್ಗವನ್ನೇ ಆಕ್ರಮಿಸಿದ ಹೈದರಾಲಿಯು ಕೆಳದಿಯ ಮೇಲೆ ದಾಳಿ ಮಾಡಿದನು. ಅವರ ಅಧೀನದಲ್ಲಿದ್ದ ಹೊನ್ನಾಳಿ ಕೋಟೆಯನ್ನು ಆಕ್ರಮಿಸಿಕೊಂಡನು. ಅದನ್ನು ಮೆಕೆಂಜಿಯು ಈ ರೀತಿ ತಿಳಿಸಿದ್ದಾನೆ[೨೬].

"The Nabob Hyder ally Naik coming to Chitradroog took chenna Basapah Naik under his protection and took Chennagurry, Honelly and Annantpore forts, marched to Naggur and took that places. The Ranee and king both fled to Bellana Row Droog then Hyder got possession of all the Guddees by exhibiting to the inhabitents Chinnabasava Naik as their rightful Raja".

ನಂತರ ಹೈದರಾಲಿಯು ರಾಣಿ ವೀರಮ್ಮಾಜಿ ಮತ್ತು ಅವಳ ದತ್ತಕ ಪುತ್ರ ೩ನೇ ಸೋಮಶೇಖರ ನಾಯಕನನ್ನು ಸೆರೆಹಿಡಿದು ಮಧುಗಿರಿಯ ಕೋಟೆಯಲ್ಲಿಟ್ಟನು. ಮರಾಠರ ಮಾಧವರಾವ್ ಮತ್ತು ರಘೋಭ ಕ್ರಿ.ಶ. ೧೭೬೦ರಲ್ಲಿ ಮಧುಗಿರಿಯ ಮೇಲೆ ಆಕ್ರಮಣ ಮಾಡಿದರು. ಈ ಸಂದರ್ಭದಲ್ಲಿ ರಾಣಿ ವೀರಮ್ಮಾಜಿ ಮತ್ತು ದತ್ತುಪುತ್ರ ಮುಮ್ಮಡಿ ಸೋಮಶೇಖರನನ್ನು ಸೆರೆಯಿಂದ ಬಿಡುಗಡೆಗೊಳಿಸಿ ಪೂನಾಕ್ಕೆ ಕರೆದುಕೊಂಡು ಹೊರಟರು. ಆದರೆ ಮಾರ್ಗ ಮಧ್ಯದಲ್ಲಿ ರಾಣಿ ಮರಣ ಹೊಂದಿದಳು ಕೆಳದಿ ರಾಜ ಸೋಮಶೇಖರ ನಾಯಕ ಪೂನಾದಲ್ಲಿನ್ನೂ ಜೀವಿಸಿದ್ದಾನೆಂದು ಮೆಕೆಂಜಿಯು ತಿಳಿಸುತ್ತಾನೆ[೨೭].

### ಮರಾಠರು ಮತ್ತು ಟಿಪ್ಪುವಿನ ಆಕ್ರಮಣ

ಹೈದರಾಲಿಯು ಹೊನ್ನಾಳಿಯನ್ನು ವಶಪಡಿಸಿಕೊಂಡು ಮೈಸೂರಿಗೆ ಹಿಂತಿರುಗಿದ ಮೇಲೆ ಮರಾಠರು ಹೊನ್ನಾಳಿಯ ಮೇಲೆ ಧಾಳಿ ನಡೆಸಿ ಆಕ್ರಮಿಸಿಕೊಂಡರು. ಹೀಗೆ ಹೈದರಾಲಿಯಿಂದ ಹೊನ್ನಾಳಿ ಕೈಬಿಟ್ಟುಹೋಯಿತು. ಹೊನ್ನಾಳಿಯಲ್ಲಿ ಮರಾಠರ ಆಳ್ವಿಕೆ ಆರಂಭಗೊಂಡಿತು. ಹೈದರಾಲಿಯ ನಂತರ ಅವನ ಮಗನಾದ ಟಿಪ್ಪು ಸುಲ್ತಾನನು ಶ್ರೀರಂಗಪಟ್ಟದಲ್ಲಿ ಅಧಿಕಾರಕ್ಕೆ ಬಂದನು. ಇವನು ತನ್ನ ತಂದೆಯ ಕಾಲದಲ್ಲಿ ಅನೇಕ ಯುದ್ಧಗಳಲ್ಲಿ ಭಾಗಿಯಾಗಿದ್ದನು. ವಿಶೇಷವಾಗಿ ಎರಡನೇ ಮೈಸೂರು ಯುದ್ಧದಲ್ಲಿ ಕರಾವಳಿ ಮತ್ತು ಮಲೆನಾಡು ಪ್ರಾಂತ್ಯಗಳ ಜವಾಬ್ದಾರಿ ಹೊತ್ತಿದ್ದನು. ಆ ಪ್ರಾಂತಗಳ ಭೂಗೋಳದ ಅರಿವು ಚನ್ನಾಗಿ ತಿಳಿದಿತ್ತು. ಯಾವಾಗ ಹೊನ್ನಾಳಿಯು ತಮ್ಮಿಂದ ಕೈಬಿಟ್ಟಿತೋ ಅದನ್ನು ಪಡೆಯಲು ತವಕಿಸುತ್ತಿದ್ದನು. ಆದರೆ ತನ್ನ ತಂದೆ ಮರಣಿಸಿದ್ದುದರಿಂದ ಶ್ರೀರಂಗಪಟ್ಟಣಕ್ಕೆ ತೆರಳಬೇಕಾಗಿದ್ದುದರಿಂದ ಇದು ಸಾಧ್ಯವಾಗಿರಲಿಲ್ಲ. ಪರಿಸ್ಥಿತಿ ಸುಧಾರಿಸಿದ ಮೇಲೆ ಟಿಪ್ಪೂ ಸುಲ್ತಾನನು ಮತ್ತೊಮ್ಮೆ ಬಲಾಢ್ಯವಾದ ಹೊನ್ನಾಳಿ ಕೋಟೆಗೆ ಮುತ್ತಿಗೆ ಹಾಕಿ ಅಲ್ಲಿದ್ದ ಮರಾಠರನ್ನು ಹೊರದೂಡಿದನು. ಈ ಸಂದರ್ಭದಲ್ಲಿ ಮರಾಠರಿಗೆ ಬೆಂಬಲವಾಗಿ ಬ್ರಿಟಿಷರು ನಿಂತರು. ಬ್ರಿಟೀಷರ ಜನರಲ್ ಮ್ಯಾಥ್ಯೂಸನು ಟಿಪ್ಪೂ ಸುಲ್ತಾನನ್ನು ಎದುರಿಸಿದನು. ಘೋರ ಯುದ್ಧ ಕ್ರಿ.ಶ. ೧೭೮೩ ಏಪ್ರಿಲ್‌ನಲ್ಲಿ ಸಂಭವಿಸಿತು. ಜನರಲ್ ಮ್ಯಾಥ್ಯೂಸನಿಗೆ ಸೋಲುಂಟಾಯಿತು. ಹೊನ್ನಾಳಿ ಟಿಪ್ಪೂ ಸುಲ್ತಾನನ ವಶವಾಯಿತು[೨೮]. ಹೀಗೆ ಕೈಬಿಟ್ಟುಹೋಗಿದ್ದ ಹೊನ್ನಾಳಿಯನ್ನು ಟಿಪ್ಪೂ ಪಡೆದು ಅಲ್ಲಿದ್ದ ಮರಾಠರು ಪಲಾಯನಗೈಯ್ಯುವಂತೆ ಮಾಡಿದ್ದೇ ಅಲ್ಲದೆ ಬ್ರಿಟಿಷರಿಗೆ ಸೋಲಿನ ರುಚಿ ಉಣಿಸಿದನು. ಅವನು ಈ ಕೋಟೆಯನ್ನು ಕ್ರಿ.ಶ ೧೭೯೯ರವರೆಗೆ ಯಾವುದೇ ಅಡಚಣೆಯಿಲ್ಲದೆ ತನ್ನ ನಿಯಂತ್ರಣದಲ್ಲಿಟ್ಟುಕೊಂಡಿದ್ದನು.

### ದೋಂಡಿಯಾವಾಘನ ಆಕ್ರಮಣ

ಬ್ರಿಟೀಷರು ೧೭೯೯ರಲ್ಲಿ ಶ್ರೀರಂಗಪಟ್ಟಣ ಜಯಿಸಿ ಟಿಪ್ಪೂವನ್ನು ಸೋಲಿಸಿದ ನಂತರ ಕಾರಾಗೃಹದ ಗೋಡೆಗೆ ಸರಪಣಿಗಳಿಂದ ಬಂಧಿಸಲ್ಪಟ್ಟಿದ್ದ ವಾಘನನ್ನು ನೋಡಿದ ಬ್ರಿಟೀಷರು ಅವನನ್ನು ಅಲ್ಲಿಂದ ಬಿಡುಗಡೆ ಮಾಡಿದರು. ಒಡನೆಯೇ ಅವನು ಓಡಿಹೋಗಿ ತನ್ನ ಅನುಯಾಯಿಗಳ ಹಿಂದಿನ ತಂಡ ಸೇರಿಕೊಂಡನು. ಈ ಸಂದರ್ಭದಲ್ಲಿ ಬ್ರಿಟಿಷರ ಹಿಡಿತದಿಂದ ತಮ್ಮನ್ನು ಬಿಡಿಸಿಕೊಳ್ಳಬೇಕೆಂಬ ಭಾವನೆ ರೈತವರ್ಗದಲ್ಲಿ ಹೆಚ್ಚಾಗಿತ್ತು. ಇದು ಇತರರಿಂದ ಸೇವೆ ಮಾಡಿಸಿಕೊಳ್ಳುವ ಪ್ರವೃತ್ತಿಯವನೂ ಆದ ದೋಂಡಿಯಾವಾಘನಿಗೆ ಸಹಜವಾಗಿ ಪ್ರೋತ್ಸಾಹ ದೊರಕಿತು. ಆದ್ದರಿಂದ ತನ್ನಂತೆಯೇ ಅನಿರ್ಬಂಧಿತ ಯೋಧರಾಗಿದ್ದ ಕೆಲವು ಜನರ ತಂಡ ಕಟ್ಟಿಕೊಂಡು ಶಿವಮೊಗ್ಗ ಬಿದನೂರುಗಳ ಬಳಿ ಕೆಲವು ಕೋಟೆಗಳನ್ನು ವಶಪಡಿಸಿಕೊಂಡನು. ಶಿವಮೊಗ್ಗವನ್ನು ತನ್ನ ವಿರೋಧಿ ಚಟುವಟಿಕೆಗಳ ಕೇಂದ್ರ ಮಾಡಿಕೊಂಡು ಅವನು ಹೊನ್ನಾಳಿ ಕೋಟೆ ಆಕ್ರಮಿಸುವ ಯೋಜನೆ ರೂಪಿಸಿದನು. ಹೊನ್ನಾಳಿ ಕೋಟೆಯಲ್ಲಿ ಟಿಪ್ಪು ಸುಲ್ತಾನನು ಮರಣಿಸಿದ ನಂತರ ಪ್ರಬಲ ನಾಯಕರಾರೂ ಇರಲಿಲ್ಲ. ಅಲ್ಲಿನ ಅಧಿಕಾರಿಗಳು ಕೇಂದ್ರ ನಾಯಕತ್ವದ ಭಯವಿಲ್ಲದ ಸ್ವೇಚ್ಛೆಯಿಂದ ವರ್ತಿಸುತ್ತಿದ್ದರು ಈ ಜನತೆ ಅಧಿಕಾರಿಗಳ ಕಿರುಕುಳದಿಂದ ಬೇಸತ್ತಿದ್ದರು. ಈ ವಾತಾವರಣ ದೋಂಡಿಯಾವಾಘನಿಗೆ ಅನುಕೂಲಕರವಾಗಿ ಪರಿಣಮಿಸಿ ರೈತ ಪ್ರತಿನಿಧಿ ಎಂದು ತನ್ನನ್ನು ಘೋಷಿಸಿಕೊಂಡು ಹೊನ್ನಾಳಿ ಕೋಟೆಯ ಮೇಲೆ ಕ್ರಿ.ಶ. ೧೭೯೯ರ ಜೂನ್‌ನಲ್ಲಿ ಆಕ್ರಮಣ ಮಾಡಿ ಅದನ್ನು ವಶಪಡಿಸಿ

ಕೊಂಡನು. ಎರಡು ತಿಂಗಳು ಕಾಲ ಅದು ಅವನ ಅಧೀನದಲ್ಲಿತ್ತು ಮೆಕೆಂಜಿಯ ಪ್ರಕಾರ[೨೯] "Dondia occupied it for the two months of Jastum and Ashada of the Seedarthi year".

ದೋಂಡಿಯಾನ ಚಟುವಟಿಕೆಗಳು ಬ್ರಿಟೀಷರನ್ನು ರೊಚ್ಚಿಗೆಬ್ಬಿಸಿದವು. ಅವನು ಜೀವಸಹಿತ ಇರುವವರೆಗೂ ಕಂಪನಿಯ ಪ್ರದೇಶಗಳಲ್ಲಿ ಶಾಂತಿ ಉಳಿದಿರುವುದಿಲ್ಲ ಎಂದು ಲಾರ್ಡ್‌ವೆಲ್ಲೆಸ್ಲಿ ತನ್ನ ಪತ್ರಗಳಲ್ಲಿ ಸ್ಪಷ್ಟಪಡಿಸಿದನು. ಆದ್ದರಿಂದ ಅವನನ್ನು ಅವನ ಅನುಚರರನ್ನೂ ನಿರ್ನಾಮ ಮಾಡಲು ಅವನು  ಬಯಸಿದನು. ಕ್ರಿ.ಶ. ೧೭೯೯ ಆಗಸ್ಟ್‌ನಲ್ಲಿ ವೆಲ್ಲಸ್ಲಿಯು ದೇಶೀಯ ಪಡೆಗಳನ್ನು ಕಂಪನಿಯ ಬಟಾಲಿಯನ್ ಜೊತೆ ಕರ್ನನಲ್ ಜೇಮ್ಸ್ ಸ್ಟೀವನ್ ಸನ್ ಮತ್ತು ಕರ್ನಲ್ ದಾರ್ಲಿಂಪಲ್ ಇವರ ನೇತೃತ್ವದಲ್ಲಿ ಕಳುಹಿಸಿದನು. ಇವರು ಬಂದು ಶಿವಮೊಗ್ಗ ಮತ್ತು ಹೊನ್ನಾಳಿ ಕೋಟೆಗೆ ಮುತ್ತಿಗೆ ಹಾಕಿದರು. ಅಲ್ಲಿಂದ ಅವನನ್ನು ಹೊರ ದೂಡಿದರು. ಈ ವಿಷಯವನ್ನು ಮೆಕೆಂಜಿಯು"The colonial Dalrymple with the English troops expelled Dondia and established for the company is Govt."[೩೦]

ಬ್ರಿಟಿಷರು ಅವನನ್ನು ಹೊನ್ನಾಳಿಯಿಂದ ಹೊರಹಾಕಿದ ಮೇಲೆ ಹೊನ್ನಾಳಿಯನ್ನು ಅವರು ಮೈಸೂರು ರಾಜರ ಅಧೀನಕ್ಕೆ ಒಳಪಡಿಸಿದರು. ಆಗ ಅದು ಕ್ರಿ.ಶ. ೧೮೦೦ರಲ್ಲಿ ಮೈಸೂರು ರಾಜ್ಯದ ಒಂದು ಭಾಗವಾಗಿ ಅಲ್ಲಿ ಅಮಲ್ದಾರರು ಅದರ ಆಡಳಿತ ನಿರ್ವಹಣೆ ಮಾಡುತ್ತಿದ್ದಾರೆಂದು ಮೆಕೆಂಜಿ ತಿಳಿಸುತ್ತಾನೆ.

ಹೀಗೆ ಹೊನ್ನಾಳಿ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಒಂದು ಗ್ರಾಮವಾಗಿ ಬೆಳಕಿಗೆ ಬಂದು ವಿಜಯನಗರ ಸಾಮ್ರಾಜ್ಯವು ಪತನಗೊಂಡ ನಂತರ ಆನೆಗೊಂದಿಯ ಮಾರನಾಯಕ ಹೊನ್ನಾಳಿ ಆಕ್ರಮಿಸಿ ಕ್ರಿ.ಶ. ೧೫೯೬ರಲ್ಲಿ ಕೋಟೆ ಕಟ್ಟಿ ತರೀಕೆರೆ ಪಾಳೇಗಾರರನ್ನು ಹಿಮ್ಮೆಟ್ಟಿಸಿ ಕ್ರಿ.ಶ. ೧೬೫೮ ರಿಂದ ಬಿಜಾಪುರದವರ ಆಳ್ವಿಕೆಗೊಳಪಟ್ಟು ಕ್ರಿ.ಶ. ೧೬೮೪ರಲ್ಲಿ ಕೆಳದಿ ದೊರೆಗಳ ದಾಳಿಗೆ ತುತ್ತಾಗಿ ಕ್ರಿ.ಶ. ೧೭೬೩ರಿಂದ ಕೆಳದಿ ರಾಜ್ಯ ಸೀಮೆಯಾಗಿ ಮಾರ್ಪಟ್ಟು ಹೈದರಾಲಿಯ ಆಕ್ರಮಣಕ್ಕೊಳಗಾಗಿ ಟಿಪ್ಪೂವಿನ ಕೈಗೆ ಹಸ್ತಾಂತರಗೊಂಡು ಅವನ ನಂತರ ೨ ತಿಂಗಳು ಕಾಲ ದೋಂಡಿಯಾನ ಆಡಳಿತದ ರುಚಿ ನೋಡಿ ಪುನಃ ಬ್ರಿಟಿಷರ ವಶಕ್ಕೆ ಹೋದ ಈ ಊರು ಮೈಸೂರು ಒಡೆಯರ ಆಡಳಿತದ ಭಾಗವಾಗಿ ಮಾರ್ಪಟ್ಟು ಕ್ರಿ.ಶ. ೧೮೦೦ರಿಂದ ಅಮಲ್ದಾರರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ.

ಕ್ರಿ.ಶ. ೧೮೦೦ರ ಜುಲೈ ತಿಂಗಳಿನಲ್ಲಿ ಹೊನ್ನಾಳಿಗೆ ಭೇಟಿ ನೀಡಿದ್ದ ಕರ್ನಲ್ ಮೆಕೆಂಜಿಯು ಆಗಿನ ಕೆಲವು ಸ್ವಾರಸ್ಯಕವಾದ ವಿವರಗಳನ್ನು ನೀಡಿದ್ದಾನೆ ಅವುಗಳನ್ನು ಹೀಗೆ ಸಂಕ್ಷೇಪಿಸಬಹುದು.

## KYFYAT OF HONELLY

from communication there in july 1800

1. Honelly is situated about west $20^0$ south of Chittedroog on the west bank of Toongabhadra.
2. From East to west it is . . . . . coss and from south to north is coss.

**How Bounded**

It is bounded on the east and north east by chinnagiri on the south east by Hollehonore on the south by Shivamoga on the west by coomshee on the North west by Shikaripore and on the north by Sanoor - The literaly name of this village is Honnaanala or honhully but in the circar's account is called Beedeeree.

Beedeeree or honna analoo is divided into 3 hobalis. Honelly and Namatee situated on the west side of the River and Sasavahally on the east along the bank. The District is entirely enclosed by hills like a rampart except a small opening on the south east.

**Fort and Petta**

Close to the cusba and fort on the North is the Petta in which are of 12 pagodas, 2 multam and 6 mosques 2 takeeyas a Durgah of Marom Saib and four circar houses with 184 houses of the several casts as followed Viz.

Brahmin 55, Lingavanth 38, Mharatas 10, Musulman 16, Boat men 10, Runjaras 02, Mooches 02, Goldsmith 03, Jain 01, Oilmaker 01 Rajapoots 01, Combaly weaver 35, Washerman 03, Jeengaroo of Saddle Makers 1, Taylors 04, jandras or weaver 1 Total : 184.

**Population**

The Population of the town is supposed to be near 1000 and of the district is 4000. Total 5000 of all casts.

**Soil :**

The soil is various clay, stoney, Red Earth.

**Producation**

The clay land produces cotton, Javary wheat and channa chinna in the Hilly tracks Raggy, cotton, cormat and anomooloo in the red soil javery, Raggy condooloo,Hareloo or Seeds of Lamp oil and Nooloo or seeds of sweet oil no paddy is

cultivated there being on larger tank excepting at cheelooru.

**Mode of setting of lands**

The circar lets out the cultivated land for a fixed money for waste or uncultivated lands the Ryoti pay one third of the produce for lands formerly cultivated and left waste for some years back. The ryots for the first year give one moiety of the produce after which they pay the same money rent as was paid formerly for that land by the former cultivation.

**Seasons**

They begin to cultivate the land in Vysakam and sow the seed in jastom month. The crop of small grain in ripe in Badrapadom and that of joaree is ausweejom; the Rangallar thro all season. The rain commence in chitram the proper winter is in three months of Ashadam, Sravanam, Badrapadam at ends in ausweeiam the cold season is in karteekam, Margaseer, Poosham and Maugham and the summer is in the month of Palgoonum Chitram Vyshakam and Jastom.

**Lanugauge**

The natives of this country generally use the canara language. The Bedar caste are not so numerous here as in the chitterdroog country this caste only speak telling a whence it may be samed they are not of the ancient inhabitants of the country and indeed there is some tradition of their having originally come from payengaat.

**Animals**

Tigers, Wolves, jakales, Horses wilde Hogs cutta keerba (animals that feed on the ass) Bears, Deers are frequent in the hill and jungals.

**Tress**

There is little wood in this country excepting some jungle trees no cocoa plantains, Mangoes, limes or tamarends, there are many sooma trees which are generally found on the bank of the river.

**Minerals**

A kind of slate is dug from quarries in large slabs like those of Ferozabad.

**Dress**

The inhabitants generally dress in white cloth coloured cloths are rarely used.

ಮೆಕೆಂಜಿ ಹೊನ್ನಾಳಿ ಪಟ್ಟಣದ ಜನಸಂಖ್ಯೆಯನ್ನು ೧೦೦೦ ಎಂದು ಹೇಳುತ್ತಾನೆ. ಕ್ರಿ.ಶ. ೧೮೦೦ರಲ್ಲಿ ೧೦೦೦ ಇದ್ದ ಹೊನ್ನಾಳಿ ಪಟ್ಟಣದ ಜನಸಂಖ್ಯೆ ಈಗ ೨೦೦೧ರ ಜನಗಣತಿಯ ಪ್ರಕಾರ ೧೫೫೬೮ ಆಗಿದೆ ಅಂದರೆ ೨೦೦ ವರ್ಷಗಳ ಅವಧಿಯಲ್ಲಿ ಹದಿನೈದು ಪಟ್ಟು ಹೆಚ್ಚಾಗಿದೆ. ಅದನ್ನು ಈ ಕೆಳಗಿನ ಪಟ್ಟಿಯಿಂದ ತೋರಿಸಬಹುದು.

| ದಾಖಲೆ | ಕಾಲ | ಜನಸಂಖ್ಯೆ | | |
|---|---|---|---|---|
| | | ಪುರುಷರು | ಸ್ತ್ರೀಯರು | ಒಟ್ಟು |
| ಮೆಕೆಂಜಿ | ಕ್ರಿ.ಶ. ೧೮೦೦ | - | - | ೧೦೦೦ |
| ರೈಸ್ ಗೆಜೆಟಿಯರ್ | ಕ್ರಿ.ಶ. ೧೮೯೧ | ೧೭೧೩ | ೧೭೫೪ | ೩೪೬೭ |
| ಹಯವದನರಾವ್ .ಸಿ | ಕ್ರಿ.ಶ. ೧೯೨೧ | ೨೦೨೬ | ೧೮೩೪ | ೩೮೬೦ |
| Census of India | ಕ್ರಿ.ಶ.೨೦೦೧ | ೭೮೭೪ | ೭೬೯೪ | ೧೫೫೬೮ |

ಮೇಲಿನ ಪಟ್ಟಿಯನ್ನು ಗಮನಿಸಿದರೆ ಇತ್ತೀಚಿನ ದಿನಗಳಲ್ಲಿ ಹೊನ್ನಾಳಿ ಪಟ್ಟಣದ ಜನಸಂಖ್ಯೆ ತೀವ್ರಗತಿಯಲ್ಲಿ ಏರಿಕೆಯಾಗುತ್ತಿರುವುದನ್ನು ಗಮನಿಸಬಹುದು. ಕ್ರಿ.ಶ. ೧೮೯೧ ಮತ್ತು ೧೯೨೧ರ ೩೦ ವರ್ಷಗಳ ಅವಧಿಯಲ್ಲಿ ಕೇವಲ ೪೦೦ ಜನರು ಹೆಚ್ಚಾದರೆ, ೧೯೨೧ ಮತ್ತು ೨೦೦೧ರ ೮೦ ವರ್ಷಗಳ ಅವಧಿಯಲ್ಲಿ ೧೨೦೦೦ ಜನರು ಹೆಚ್ಚಾಗಿರುವುದನ್ನು ಗಮನಿಸಬಹುದು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಬಿ.ಎಲ್. ರೈಸ್, ೧೮೯೭ **ಮೈಸೂರು ಗ್ಯಾಜೆಟಿಯರ್** ಸಂ-೨ ಪು. ೪೫೩ ಲಂಡನ್

೨. ಸಿ.ಹಯವದನರಾವ್, ೧೯೩೦ **ಮೈಸೂರು ಗ್ಯಾಜೆಟಿಯರ್** ಸಂ-೫ ಪು-೧೨೯೮, ಬೆಂಗಳೂರು

೩. ಎ. ಎಸ್. ವೇಣುಗೋಪಾಲರಾವ್, **ಹೊನ್ನಾಳಿ ತಾಲ್ಲೂಕು ಇತಿಹಾಸ ದರ್ಶನ** ಐ.ಬಿ.ಹೆಚ್, ಬೆಂಗಳೂರು

೪. ನಾ. ಕೊಟ್ರೇಶ್ ಉತ್ತಂಗಿ - **೨೦೦೪ ಹೊನ್ನೆಲೆಗಳು**, ಸಹನಾದ್ರಿ ಪ್ರಕಾಶನ ಹೊನ್ನಾಳಿ

೫. ರೈಸ್ - ಎ.ಕ., ಸಂ-೭ ಹೊನ್ನಾಳಿ-೧

೬. ಕೆಳದಿ ವೆಂಕಟೇಶ್ ಜೋಯಿಸ್, **ಕೆಳದಿ ಅರಸರ ಶಾಸನ ಸಂಪುಟ** ಪು-೧೦ ೪೨೫,೪೨೯ ವೀರಶೈವ ಅಧ್ಯಯನ ಸಂಸ್ಥೆ ಡಂಬಳ

೭. ರೈಸ್ ಬಿ.ಎಲ್, **ಮೈಸೂರು ಗೆಜೆಟಿಯರ್** ಸಂ. ೨ ಪು ೪೫೩

೮. ನಾ ಕೊಟ್ರೇಶ್ ಉತ್ತಂಗಿ. **ಹೊನ್ನೆಲೆಗಳು**, ಸಹನಾದ್ರಿ ಪ್ರಕಾಶನ ಪು - ೩೩೪-೩೩೮

೯. ರೈಸ್, ಎ.ಕ., ಸಂ ೭, ಹೊನ್ನಾಳಿ-೧

೧೦. **ಮೆಕಂಜಿಯ ಅಪ್ರಕಟಿತ ಕೈಫಿಯತ್ತು**

೧೧. ನಾ ಕೊಟ್ರೇಶ್ ಉತ್ತಂಗಿ., ಹೊನ್ನೆಲೆಗಳು, ಪು - ೩೩೭

೧೨. ಎ.ಕ., ಸಂ. ೭ ಹೊನ್ನಾಳಿ - ೧,

೧೩. ಎ.ಕ., ಸಂ. ೭ ಹೊನ್ನಾಳಿ - ೨೦

೧೪. ಎ.ಕ., ಸಂ. ೭ ಹೊನ್ನಾಳಿ - ೬೮

೧೫. ಎ.ಕ., ಸಂ. ೭ ಹೊನ್ನಾಳಿ - ೩೫

೧೬. ಎ.ಕ., ಸಂ. ೭ ಹೊನ್ನಾಳಿ - ೭೬

೧೭. ಕೆಳದಿ ವೆಂಕಟೇಶ ಜೋಯಿಸ್, **ಕೆಳದಿ ಅರಸರ ಶಾಸನ ಸಂಪುಟ** ಪು -೧೦

೧೮. **ಮೆಕಂಜಿ ಅಪ್ರಕಟಿತ ಕೈಫಿಯತ್ತು**

೧೯. ಅದೇ

೨೦. ಅದೇ

೨೧. ಅದೇ

೨೨. **ಕೆಳದಿ ಅರಸರ ಶಾಸನ ಸಂಪುಟ**, ಪು -೧೦

೨೩. **ಮೆಕೆಂಜಿ ಅಪ್ರಕಟಿತ ಕೈಫಿಯತ್ತು**

೨೪. ಅದೇ

೨೫. ಅದೇ

೨೬. ಅದೇ

೨೭. ಅದೇ

೨೮. ಅದೇ

೨೯. ಅದೇ

೩೦. ಅದೇ




**ಹೊನ್ನು + ಆಳು; ಹೊನ್ನಾಳು ಆಗಿತ್ತು ಮುಂದೆ ಹೊನ್ನಾಳಿ**
**ಶಾಸನವಂತು ಉಗ್ಗಡಿಸಿದೆ ಒನ್ನಾಳಿ, ಹೊಂನಾಳಿ**
**ಕಲ್ಯಾಣ ಚಾಲುಕ್ಯರ ಮುಷ್ಟೇ ಮೊಗದೋರಿತ್ತು ಒನ್ನಾಳಿ!**



### ಕ. ಇತಿಹಾಸ ಅಕಾದೆಮಿಯ ೯ನೇ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೮)

*ನಾಣ್ಯಶಾಸ್ತ್ರ ಅಧ್ಯಯನದಲ್ಲಿ ಒಂದು ಹೊಸ ಬೆಳವಣಿಗೆಯನ್ನು ಈಗ ಕಾಣುತ್ತಿದ್ದೇವೆ. ಹಿಂದಿನ ವಿದ್ವಾಂಸರು ಮಾಡಿದಂತೆ ಹಿಮ್ಮುಖ - ಮುಮ್ಮುಖ ವರ್ಣನೆ ಇತಿಹಾಸಕಾರನಿಗೆ ಹೆಚ್ಚಿನ ಮಾಹಿತಿಯನ್ನು ಒದಗಿಸುವುದಿಲ್ಲ. ಶಾಸನಗಳಲ್ಲಿ, ನಾಣ್ಯಶಾಸ್ತ್ರ ಗ್ರಂಥಗಳಲ್ಲಿ ಈ ರೀತಿಯ ಮಾಹಿತಿ ದೊರಕುತ್ತದೆ. ನಾಣ್ಯಗಳನ್ನು ಟಂಕಿಸುತ್ತಿದ್ದ ವಿಧಾನಗಳೂ ಕೂಡ ಶಾಸನಗಳಿಂದ ಗೊತ್ತಾಗುತ್ತದೆ. ಈ ಶಾಸನಗಳಿಂದ ನಲವತ್ತು ರೀತಿಯ ಗದ್ಯಾಣಗಳು ಗೊತ್ತಾಗುತ್ತವೆ.*

*ಡಾ. ಎ. ವಿ. ನರಸಿಂಹಮೂರ್ತಿ*
ಸಮ್ಮೇಳನಾಧ್ಯಕ್ಷರು

## ಕೆ. ಸಿದ್ದಪ್ಪ*

# ಹೊನ್ನಾಳಿ ನವಾಬರು

*ಹೊನ್ನಾಳಿ ಪ್ರದೇಶವು ೧೭ನೇ ಶತಮಾನದಲ್ಲಿ ಮೊಘಲರ ಅಧಿಕಾರಿಗಳಾದ ನವಾಬರ ಆಡಳಿತಕ್ಕೊಳಗಾಯಿತು. ಕುತುಬ್ ಉದ್ ಮುಲ್ ಶೇರ್ ಖಾನ್‌ನಿಂದ ಈ ಆಳ್ವಿಕೆಯ ಇತಿಹಾಸ ಆರಂಭವಾಗುತ್ತದೆ. ಟಿಪ್ಪುವಿನ ಅಚ್ಚುಮೆಚ್ಚಿನ ಅಧಿಕಾರಿ ನವಾಬ್ ಹಸನ್-ಆಲಿ-ಖಾನ್, ನಾಲ್ಕನೇ ಮೈಸೂರು ಯುದ್ಧದಲ್ಲಿ ವೀರಮರಣಗೊಂಡ ಮೇಲೆ ಹೊನ್ನಾಳಿಯ ನವಾಬರ ಆಳ್ವಿಕೆ ಮುಗಿದಿತ್ತು. ನವಾಬರ ಕಾಲದ ಸಾಂಸ್ಕೃತಿಕ ಕೊಡುಗೆ ಎಂದರೆ ಕುಸ್ತಿ ಕಲೆಗೆ ಉತ್ತೇಜನ. ಹೊನ್ನಾಳಿ ಹಿರೇಕಲ್ಮಠದ ಗುರುಗಳಲ್ಲಿ ಭಕ್ತಿ, ಹಿಂದೂ, ಮುಸ್ಲಿಂ ಸಾಮರಸ್ಯ ಸಾಧನೆ, ಶೈಕ್ಷಣಿಕ ಅಭಿವೃದ್ಧಿ ಸ್ವಾತಂತ್ರ್ಯದ ಹೋರಾಟದಲ್ಲಿ ಪಾಲ್ಗೊಂಡದ್ದು ಕಲಾ ಕೌಶಲ್ಯಕ್ಕೆ ಪ್ರೋತ್ಸಾಹ ಇತ್ಯಾದಿಗಳಾಗಿವೆ.*

ತುಂಗಭದ್ರ ನದಿಯ ದಡದಲ್ಲಿರುವ ಹೊನ್ನಾಳಿ ಶಿವಮೊಗ್ಗ ಜಿಲ್ಲೆಯಿಂದ ಬೇರ್ಪಟ್ಟು ದಾವಣಗೆರೆ ಜಿಲ್ಲೆಗೆ ಸೇರಿದ ತುಂಬಾ ಹಳೆಯ ಹಾಗೂ ಪ್ರಸಿದ್ಧ ಪಟ್ಟಣ. ಐತಿಹಾಸಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಮಹತ್ವ ಪಡೆದಿರುವ ಈ ಪ್ರದೇಶವು ಕದಂಬರು, ಬಾದಾಮಿ ಚಾಲುಕ್ಯರು, ಸೇವುಣರು, ಪಾಂಡ್ಯರು, ಸಿಂಧರು, ವಿಜಯನಗರದರಸರು, ಬೆಳಗುತ್ತಿ ಸುಲ್ತಾನರು, ಕೆಳದಿ ಅರಸರು, ಮೈಸೂರು ಅರಸರು, ಸಂತೆಬೆನ್ನೂರು ಹಾಗು ಬಸವಾಪಟ್ಟಣದ ಪಾಳೆಪಟ್ಟಿನವರು, ಬಿಜಾಪುರ ಸುಲ್ತಾನರು, ಟಿಪ್ಪು-ಹೈದರಾಲಿ ಮುಂತಾದವರ ಆಳ್ವಿಕೆಗೆ ಒಳಪಟ್ಟಿತ್ತಲ್ಲದೆ ಹೊನ್ನಾಳಿಯನ್ನು ನವಾಬರೂ ಆಳಿದ್ದಾರೆ.

ಈ ನಾಡನ್ನಾಳಿದ ಅನೇಕ ಮನೆತನಗಳು, ರಾಜರುಗಳು, ನಾಯಕರುಗಳು ಇತಿಹಾಸ ಪುಟಗಳಲ್ಲಿ ಮರೆಯಾಗಿ ಹೋಗಿದ್ದಾರೆ. ಅಂತಹ ಮನೆತನಗಳಲ್ಲಿ ಹೊನ್ನಾಳಿಯ ನವಾಬರ ಮನೆತನವೂ ಒಂದಾಗಿದೆ.

**ನವಾಬರ ಮೂಲ** : ನವಾಬರು ಎಲ್ಲಿಂದ ಬಂದರು, ಎಂಬುದಕ್ಕೆ ಸ್ಪಷ್ಟವಾದ ಆಧಾರಗಳಿಲ್ಲ. ಮೊದಲು ಇವರು ಮೊಘಲ್ ಚಕ್ರವರ್ತಿ ಹುಮಾಯೂನನ ಕಾಲದಲ್ಲಿದ್ದವರೆಂದು, ಲಾಹೋರ್‌ನ ಮೂಲದವರೆಂದು, ನಂತರ ದಕ್ಷಿಣಕ್ಕೆ ಬಂದರೆಂದು ತಿಳಿದುಬರುತ್ತದೆ.

ಕೆಲವು ದಾಖಲೆ ಪ್ರಕಾರ (ಎಂ.ಎ.ಆರ್.) ಔರಂಗಜೇಬನು ೧೬೮೬ರಲ್ಲಿ ಬಿಜಾಪುರವನ್ನು ವಶಪಡಿಸಿಕೊಂಡ ನಂತರದಲ್ಲಿ ಇವರ ಇತಿಹಾಸ ಪ್ರಾರಂಭವಾಗುತ್ತದೆ. "ಕುತುಬ್ ಉದ್ ಮುಲ್ಕ್ ಶೇರ್ ಖಾನ್" ಎಂಬುವನನ್ನು ಹೊನ್ನಾಳಿಯ ಆಡಳಿತಕ್ಕೆ ಮೊಘಲ್ ಅಧಿಕಾರಿಯನ್ನಾಗಿ ನೇಮಿಸಿ ಹೊನ್ನಾಳಿ ಮತ್ತು ಹರಿಹರದ ಸುತ್ತಮುತ್ತಲಿನ ಪ್ರದೇಶದ ಆಡಳಿತವನ್ನು ನೋಡಿಕೊಳ್ಳಲು ವಹಿಸಿಕೊಟ್ಟರು ಎಂಬ ಸಂಗತಿ ತಿಳಿಯುತ್ತದೆ. ಅಲ್ಲದೆ ಮೊಘಲ್ ಅರಸರು "ನವಾಬ್" ಎಂಬ ಬಿರುದು ಕೊಟ್ಟರು. ಮುಂದೆ ಇವರನ್ನು ಸವಣೂರಿಗೂ ವರ್ಗಾಯಿಸಲಾಯಿತು ಎಂಬುದಾಗಿ ತಿಳಿದುಬರುತ್ತದೆ. ಈ ವೇಳೆಗಾಗಲೇ ನವಾಬರು ಹೊನ್ನಾಳಿಯಲ್ಲಿ ಪ್ರಬಲರಾಗಿದ್ದುಕೊಂಡು ಅರಮನೆ ನಿರ್ಮಿಸಿಕೊಂಡು ಈ ಪ್ರಾಂತ್ಯದ ಆಡಳಿತವನ್ನು ನೋಡಿಕೊಳ್ಳುತ್ತಾ ಮುಂದೆ ಪ್ರಬಲರಾಗಿ ಖಾಯಂ ಆಗಿ ಹೊನ್ನಾಳಿಯಲ್ಲಿ ನೆಲೆಸಿರಬಹುದು.

**ನವಾಬರು ಮತ್ತು ಮೈಸೂರು ಅರಸರು** : ಈ ನವಾಬ್ ವಂಶದ ಪೂರ್ವಿಕರು ಹೈದರಾಲಿ ಮತ್ತು ಟಿಪ್ಪು ಸುಲ್ತಾನ್‌ರ ಒಡನಾಡಿಯಾಗಿದ್ದುಕೊಂಡು ಅನೇಕ ಕದನಗಳಲ್ಲಿ ಭಾಗವಹಿಸಿದರು, ಅಲ್ಲದೆ ಬ್ರಿಟೀಷ್‌ರ ವಿರುದ್ಧ ನಡೆದ ಆಂಗ್ಲೋ ಮೈಸೂರು ಕದನಗಳಲ್ಲಿ ಭಾಗವಹಿಸಿರುವುದಾಗಿ ತಿಳಿದುಬರುತ್ತದೆ.

* ಇತಿಹಾಸ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಹೊನ್ನಾಳಿ

ಟಿಪ್ಪು ಸುಲ್ತಾನ ತನ್ನ ಆಳ್ವಿಕೆಯ ಕಾಲದಲ್ಲಿ ಕುತುಬ್-ಉದ್-ದೀನ್-ಖಾನ್‌ನನ್ನು ಹೊನ್ನಾಳಿ ಪ್ರಾಂತ ನೋಡಿಕೊಳ್ಳಲು ನೇಮಿಸಿದ್ದನು. ಅಲ್ಲದೆ ಟಿಪ್ಪು ಇವನನ್ನು ತನ್ನ ಆಸ್ಥಾನದಲ್ಲಿ "ಅಮೀನ್-ಉಲ್-ಉಮ್ರಾ" ಎಂದು ಗೌರವಿಸಿದ್ದನು. ಹೊನ್ನಾಳಿಯು ಟಿಪ್ಪು ಸುಲ್ತಾನನ ಅಧೀನದಲ್ಲಿದ್ದು ಇಲ್ಲಿಯ ನವಾಬ ಕುತುಬ್-ಉದ್-ದೀನ್-ಖಾನ್‌ನ ಮಗ "ಹಸನ್-ಆಲಿ-ಖಾನನ" ಧೈರ್ಯ, ಸಾಹಸ, ಶೌರ್ಯಗಳನ್ನು ಮೆಚ್ಚಿ ಇವನನ್ನು ಶ್ರೀರಂಗಪಟ್ಟಣಕ್ಕೆ ಕರೆತಂದನು.

ಹಸನ್-ಆಲಿ-ಖಾನ್ ಟಿಪ್ಪು ಸುಲ್ತಾನ್‌ನ ಬಲಗೈ ಬಂಟನಾಗಿದ್ದ. ಅಚ್ಚುಮೆಚ್ಚಿನವನಾಗಿದ್ದನು. ಇವನು ಅಜಾನುಬಾಹುವೂ ಆಗಿದ್ದು, ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದ. ಬ್ರಿಟೀಷ್‌ರ ವಿರುದ್ಧ ನಡೆದ ಆಂಗ್ಲೋ ಮೈಸೂರು ಕದನಗಳಲ್ಲಿ ಭಾಗವಹಿಸಿ ಸಾಹಸವನ್ನು ಮೆರೆದಿದ್ದ.

ನಾಲ್ಕನೇ ಆಂಗ್ಲೋ ಮೈಸೂರು ಕದನದಲ್ಲಿ ಭಾಗವಹಿಸಿದ್ದು ಯುದ್ಧ ಮುಗಿಯುವ ಒಂದೆರಡು ದಿನ ಮುಂಚಿತವಾಗಿಯೇ ರಣರಂಗದಲ್ಲೇ (೧೭೯೯, ಮೇ, ೨ ಅಥವಾ ೩ ರಂದು) ಮರಣ ಹೊಂದಿದ. ಬಲಗೈ ಭಂಟ ಹಸನ್-ಆಲಿ-ಖಾನ್‌ನ ಮರಣ ಟಿಪ್ಪುವಿಗೆ ತುಂಬಾ ನೋವು, ದುಃಖವನ್ನು ಬರಿಸಿತು. ಕೊನೆಗೆ ಇವನ ಸಮಾಧಿಯನ್ನು ಶ್ರೀರಂಗಪಟ್ಟಣದಲ್ಲೇ ಮಾಡಲಾಯಿತು. ಈ ಗೋರಿ ೮ ಅಡಿ ಉದ್ದವಿದ್ದು ಅಜಾನುಬಾಹುತನಕ್ಕೆ ಸಾಕ್ಷಿಯಾಗಿದೆ. ಈಗಲೂ ಇವರ ಸಮಾಧಿಯನ್ನು ಶ್ರೀರಂಗಪಟ್ಟಣದಲ್ಲಿ ಕಾಣಬಹುದು.

ನವಾಬ್ ಹಸನ್-ಆಲಿ-ಖಾನ್‌ರು ಹೊನ್ನಾಳಿಯಲ್ಲಿದ್ದಾಗಲೇ ಉತ್ತಮ ಗುರಿಕಾರರು ಹಾಗೂ ಕುದುರೆ ಸವಾರರಾಗಿದ್ದರು. ಕುದುರೆಯನ್ನೇರಿ ಹೋಗುತ್ತಿದ್ದಾಗ ಕುದುರೆಯ ಮೇಲಿಂದಲೇ ಮರದ ಕೊಂಬೆಗೆ ಜೋತು ಬಿದ್ದು ಕಾಲಿಂದ ಚಪ್ಪಳಗಾಲು ಹಾಕಿ, ಕುದುರೆಯನ್ನು ಎತ್ತಿ, ಏಳು ಬಾರಿ ಜೋಲಿ ಹೊಡೆಸುತ್ತಿದ್ದರೆಂಬುದನ್ನು ಹೊನ್ನಾಳಿಯ ಜನತೆಯ ಬಾಯಲ್ಲಿ ಈಗಲೂ ಜನಜನಿತವಾಗಿದೆ.

ನಾಲ್ಕನೆಯ ಆಂಗ್ಲೋ ಮೈಸೂರು ಕದನದಲ್ಲಿ ಹಸನ್-ಆಲಿ-ಖಾನ್ ಮರಣ ಹೊಂದಿದ ನಂತರ, ಹೊನ್ನಾಳಿಯಲ್ಲಿ ನವಾಬರ ಆಳ್ವಿಕೆಯು ಅಂತ್ಯವಾಗುತ್ತದೆ. ಆದರೂ ನವಾಬ ಮನೆತನಕ್ಕೆ ಮೈಸೂರು ಒಡೆಯರು ಹಾಗೂ ಬ್ರಿಟೀಷ್‌ರು ಇನಾಮು ಮತ್ತು ಗೌರವ ವೇತನವನ್ನು ನೀಡಿ ಗೌರವಿಸುತ್ತಲೇ ಬಂದರು.

ಹಸನ್-ಆಲಿಖಾನ್‌ರ ಮಗ ನವಾಬ್ ಷೇರ್ ಖಾನ್‌ರು ಹೊನ್ನಾಳಿಯ ನವಾಬರಾಗಿ ಮುಂದುವರಿದು ಅನೇಕ ಅಭಿವೃದ್ಧಿ ಕೆಲಸಗಳನ್ನು ಕೈಕೊಂಡರಲ್ಲದೆ, ಹಿಂದೂ-ಮುಸ್ಲಿಂ ಸಾಮರಸ್ಯವನ್ನು ಬೆಸೆಯುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ.

ಹೊನ್ನಾಳಿಯಿಂದ ಏಳು ಕಿ.ಮೀ. ದೂರದ ಹಳ್ಳೂರು ರಸ್ತೆಯಲ್ಲಿ ಹನುಮಸಾಗರ ಎಂಬ ಗ್ರಾಮವಿದೆ. (ಇದನ್ನು ಹೊಸೂರು ಎಂದು ಕರೆಯುತ್ತಿದ್ದರು) ಇಲ್ಲಿ ಸುಮಾರು ೧೫೦೦ ಎಕರೆ ಜಮೀನನ್ನು ಟಿಪ್ಪು ಸುಲ್ತಾನ್‌ರು ನವಾಬ್‌ರಿಗೆ ಉಂಬಳಿಯಾಗಿ ಕೊಟ್ಟಿರುವುದಾಗಿ ತಿಳಿದು ಬರುತ್ತದೆ. ಈ ವಿಸ್ತಾರದ ಜಮೀನಿನ ಉಳಿಮೆಗಾಗಿ ಮುಸ್ಲಿಂ ಜನಾಂಗಕ್ಕೆ ಪ್ರಾಧಾನ್ಯತೆ ಕೊಡದೆ, ಬೋವಿ ಅಥವಾ ವಡ್ಡರನ್ನು ಮತ್ತು ಬಂಜಾರ ಅಥವಾ ಲಂಬಾಣಿ ಜನರನ್ನು ನೆರೆ ಪ್ರದೇಶಗಳಿಂದ ಕರೆದುಕೊಂಡು ಬಂದು ಅವರಿಗೆ ವಸತಿ ಸೌಕರ್ಯಗಳನ್ನು ಮಾಡಿಕೊಟ್ಟು, ಉದ್ಯೋಗ ದೊರಕಿಸಿಕೊಟ್ಟರು. ಸರ್ಕಾರದ ಈಗಿನ ಮೀಸಲಾತಿಯನ್ನು ಆಗಿನ ಕಾಲದಲ್ಲಿ ಪರಿಶಿಷ್ಟ ವರ್ಗ-ಪರಿಶಿಷ್ಟ ಪಂಗಡಗಳ ಜನತೆಯ ಅಭಿವೃದ್ಧಿ ಕಾರ್ಯಗಳನ್ನು ನವಾಬರು ಕೈಗೊಂಡಿದ್ದು ಆದರ್ಶಪ್ರಾಯವಾಗಿದೆ. ಈ ಜಮೀನಿನಲ್ಲಿ ಹನುಮಂತ ದೇವರ ವಿಗ್ರಹ ಸಿಕ್ಕಿದ್ದು, ಅದಕ್ಕೆ ಒಂದು ಪುಟ್ಟ ದೇವಾಲಯ ಒಂದನ್ನು ನವಾಬರೇ ಕಟ್ಟಿಸಿ ಕೊಟ್ಟಿದ್ದರೆಂದು ತಿಳಿಸುತ್ತಾರೆ. ಆ ದೇವಾಲಯದ ಜೀರ್ಣೋದ್ಧಾರ ಕಾರ್ಯ ನಡೆಯುತ್ತಿದ್ದು ಅದಕ್ಕೂ ಈಗಿರುವ ನವಾಬವಂಶಸ್ಥರಾದ ಅಜ್ಮತ್ ಆಸೀಫ್‌ರು ನೆರವು ನೀಡುವುದರೊಂದಿಗೆ, ಧಾರ್ಮಿಕ ಸೌಹಾರ್ದತೆ ಯನ್ನು ಮೆರೆಯುವದರೊಂದಿಗೆ ಅಲ್ಲಿಯ ಜನರೊಂದಿಗೆ ನಿಕಟ ಸಂಪರ್ಕ ಹಾಗು ಸ್ನೇಹವನ್ನಿಟ್ಟುಕೊಂಡಿದ್ದಾರೆ. ಹನುಮಸಾಗರದ ಹೆಚ್ಚಿನ ಜಮೀನಿನ ಹೆಚ್ಚು ಪಾಲು ಉಳುವವನೇ ಒಡೆಯನ ಪಾಲಾಗಿದೆ. ಇಲ್ಲಿಯ ಜನ ನವಾಬರನ್ನು ಗೌರವದಿಂದ ಕಾಣುತ್ತಾರೆ.

ಹೈದರಾಲಿ ಹಲವಾರು ಬಾರಿ ಹೊನ್ನಾಳಿ-ಬೆಳಗುತ್ತಿ ಪ್ರಾಂತ್ಯಕ್ಕೆ ಬಂದಿರುವುದು ತಿಳಿದುಬರುತ್ತದೆ. ಬೆಳ್ಗುತ್ತಿ ಅರಸರು ಮಹಾಯೋಧರಾಗಿದ್ದು ಕೋಟೆ ಕಟ್ಟುವುದರಲ್ಲಿ, ಕುದುರೆಗಳ ಪಾಲನೆಯಲ್ಲಿ ಸಿದ್ಧಹಸ್ತರು. ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಹಲವಾರು ಕದನಗಳಲ್ಲಿ ಬೆಳಗುತ್ತಿ ಸೈನ್ಯವನ್ನು ಮತ್ತು ಸೇನಾಪತಿಗಳನ್ನು ಸೇರಿಸಿಕೊಂಡಿದ್ದರು. ಬೆಳಗುತ್ತಿಯ ವೆಂಕಟಪ್ಪನು ಸುಮಾರು ೩೪ ವರ್ಷಗಳ ಕಾಲ ಹೈದರ್ ಮತ್ತು ಟಿಪ್ಪು ಸುಲ್ತಾನ್‌ರ ಅಧಿಕಾರ ಅವಧಿಯಲ್ಲಿ ಸೇನಾಪತಿಯಾಗಿದ್ದುದು ಒಂದು ಐತಿಹಾಸಿಕ ದಾಖಲೆ.

ಮೂರನೇ ಆಂಗ್ಲೋ ಮೈಸೂರು ಯುದ್ದದ ನಂತರ ಟಿಪ್ಪುವು ಬ್ರಿಟೀಷ್‌ರನ್ನು ಭಾರತದಿಂದ ಹೊರಹಾಕಲು ಫ್ರೆಂಚ್ ಸೈನಿಕರಿಂದ ತನ್ನ ಸೈನಿಕರಿಗೆ ತರಬೇತಿ ಕೊಟ್ಟನು. ಮದ್ದು ಗುಂಡುಗಳನ್ನು ಹೆಚ್ಚಿಸಿಕೊಂಡು ಕೋಟೆಗಳನ್ನು ಬಲಪಡಿಸಿಕೊಂಡ. ಪರಕೀಯರನ್ನು ಪರಕೀಯರಿಂದಲೇ ಸೋಲಿಸಬೇಕೆಂದು ಅರೇಬಿಯಾ, ಇಸ್ತಾಂಬೂಲ್, ಮಾರಿಷಸ್ ಮತ್ತು ಫ್ರಾನ್ಸ್‌ಗಳಿಗೆ ರಾಯಭಾರಿಗಳನ್ನು ಕಳಿಸಿದ್ದನು. ನೆಪೋಲಿಯನ್ ಸಹಾಯ ಕೊಡಲು ಒಪ್ಪಿದನಾದರೂ ನೆಲ್ಸನ್‌ನಿಂದ ನೈಲ್‌ನದಿ ಕದನದಲ್ಲಿ ಸೋತು ಸಹಾಯ ಮಾಡದಾದ. ಕೊನೆಗೆ ಟಿಪ್ಪುವು ಏಕಾಂಗಿಯಾಗಿ ಹೋರಾಡಲು ಸಿದ್ದನಾದ. ಆ ವೇಳೆಯಲ್ಲಿ ತನ್ನ ನೆರವಿಗೆ ನಿಂತ ರಾಜರ, ಪಾಳೇ

ಗಾರರ, ನವಾಬರ ಸೈನಿಕ ನೆರವು ಪಡೆಯಲು ಪ್ರವಾಸ ಕೈಗೊಂಡ. ಈ ವೇಳೆಯಲ್ಲಿ ಟಿಪ್ಪುಸುಲ್ತಾನ್ ಹೊನ್ನಾಳಿಗೆ ಬಂದಿರುವುದಾಗಿ ತಿಳಿದುಬರುತ್ತದೆ. ಇದೇ ವೇಳೆಯಲ್ಲಿ ರಂಜಾನ್ ಹಬ್ಬವಿದ್ದು ಟಿಪ್ಪುವು ನವಾಬರ ಮನೆಯಲ್ಲಿದ್ದುದರಿಂದ ಎಲ್ಲಾ ಮುಸ್ಲಿಂ ಬಾಂಧವರು ನವಾಬರ ಮನೆಯಲ್ಲಿ ಸೇರಿ ಅಲ್ಲಿಂದ ಎಲ್ಲರೂ ಟಿಪ್ಪು ಸುಲ್ತಾನ್‌ನೊಂದಿಗೆ ಈದ್ಗಾಕ್ಕೆ ಹೋಗಿ ಪ್ರಾರ್ಥನೆ ಸಲ್ಲಿಸಿ ಪುನಃ ವಾಪಾಸು ನವಾಬರ ಮನೆಗೆ ಬಂದು ಸೇರಿದರು. ಈ ನೆನಪಿಗಾಗಿ ಈಗಲೂ ರಂಜಾನ್ ಹಬ್ಬದಲ್ಲಿ ಮುಸ್ಲಿಂ ಬಾಂಧವರು ನವಾಬರ ಮನೆಯಲ್ಲಿ ಸೇರಿ, ಅಲ್ಲಿಂದ ಈದ್ಗಾಕ್ಕೆ ಹೋಗಿ ಪ್ರಾರ್ಥನೆ ಸಲ್ಲಿಸಿ ಪುನಃ ನವಾಬರ ಮನೆಗೆ ಬಂದು ಅವರ ಆತಿಥ್ಯವನ್ನು ಸ್ವೀಕರಿಸಿ ತಮ್ಮ ಮನೆಗಳಿಗೆ ಹೋಗುವ ಸಂಪ್ರದಾಯ ಹೊನ್ನಾಳಿಯಲ್ಲಿ ಈಗಲೂ ಉಳಿದುಕೊಂಡು ಬಂದಿದೆ.

ಹೊನ್ನಾಳಿಯ ನವಾಬ್ ಷೇರ್‌ಖಾನ್‌ರು "ಕುತುಬುದ್ದುಲ್-ಮುಲ್ಕ್" ಎಂಬ ಬಿರುದು ಹೊಂದಿದ್ದರು. ಟಿಪ್ಪುಸುಲ್ತಾನ್‌ರ ಮರಣದ ನಂತರ ಅಧಿಕಾರ ವಹಿಸಿಕೊಂಡ ಮೈಸೂರು ಒಡೆಯರು ಹೊನ್ನಾಳಿಯ ನವಾಬರನ್ನು ಗೌರವದಿಂದ ಕಾಣುತ್ತಿದ್ದರು ಮತ್ತು ಉತ್ತಮ ಸಂಪರ್ಕವಿಟ್ಟುಕೊಂಡಿದ್ದರು. "ದಸರಾ" ದರ್ಬಾರ್‌ನಲ್ಲಿ ವಿಶೇಷ ಆಸನ ವ್ಯವಸ್ಥೆ ಕೊಟ್ಟು, ಭಾರತ ಸ್ವಾತಂತ್ರ್ಯ ಪಡೆಯುವವರೆಗೂ ದಸರಾಕ್ಕೆ ಹೊನ್ನಾಳಿ ನವಾಬರನ್ನು ಆಹ್ವಾನಿಸುತ್ತಿದ್ದರು. ಹೊನ್ನಾಳಿಯಿಂದ ಮೈಸೂರಿಗೆ ಹೋಗಿಬರುವ ಮುಂಗಡ ಟಿಕೇಟ್‌ಗಳನ್ನು ಕಳಿಸಿಕೊಡುತ್ತಿದ್ದರು.

ಹೊನ್ನಾಳಿ ನವಾಬರ ಮನೆಗೆ ದಿವಾನ್‌ರಾದ ಸರ್. ಮಿರ್ಜಾ ಇಸ್ಮಾಯಿಲ್‌ರೂ ಕೂಡ ಆಗಮಿಸಿದ್ದರು. ಅವರು ಬರುವ ವಿಷಯ ತಿಳಿದ ನವಾಬರು ಅವರಿಗಾಗಿಯೇ ಒಂದು ವಿಶೇಷವಾದ ಕುರ್ಚಿಯನ್ನು ಮಾಡಿಸಿದ್ದರು. ಅದು ಈಗಲೂ ಅವರ ಮನೆಯಲ್ಲಿದೆ. ಅವರ ಮೇಲಿನ ವಿಶೇಷ ಗೌರವದಿಂದ ಅವರನ್ನು ಹೊರತುಪಡಿಸಿ ಇದುವರೆಗೂ ಬೇರೆ ಯಾರೂ ಸಹ ಅದರ ಮೇಲೆ ಕುಳಿತಿರುವುದಿಲ್ಲ. ಅವರು ಭೇಟಿ ನೀಡಿದ ಸಂದರ್ಭದಲ್ಲಿ ಅದರ ಮೇಲೆ ಕುಳಿತು ತೆಗೆಸಿದ ಛಾಯಾಚಿತ್ರವು ಇತಿಹಾಸವನ್ನು ಸ್ಮರಿಸುತ್ತದೆ.





ಇವರಲ್ಲದೆ ಆಲೀಘರ್ ವಿಶ್ವವಿದ್ಯಾಲಯ ಸ್ಥಾಪಕರಾದ ಸರ್ ಸೈಯದ್ ಅಹಮದ್ ಖಾನ್, ಬನಾರಸ್ ವಿಶ್ವವಿದ್ಯಾಲಯ ಸ್ಥಾಪಕರಾದ ಪಂಡಿತ್ ಮದನ್‌ಮೋಹನ ಮಾಲವೀಯ ಮುಂತಾದ ಗಣ್ಯರು ಬಂದು ಹೋಗಿರುತ್ತಾರೆ.

೯ನೇ ಚಾಮರಾಜ ಒಡೆಯರ್ (೧೮೯೧-೧೯೦೧) ಕಾಲದಲ್ಲಿ ದಿವಾನ್ ಸಿ. ರಂಗಾಚಾರ್ಲು ದಿವಾನರಾಗಿದ್ದ ಕಾಲದಲ್ಲಿ (೧೮೮೧ ಅಕ್ಟೋಬರ್‌ನಲ್ಲಿ) ಸ್ಥಾಪಿತವಾದ ಪ್ರಜಾ ಪ್ರತಿನಿಧಿ ಸಭೆಯ ಸದಸ್ಯರನ್ನಾಗಿ ಹೊನ್ನಾಳಿಯ ನವಾಬರನ್ನು (ಸತತ ೧೫ ವರ್ಷ) ಆಯ್ಕೆ ಮಾಡಿದ್ದು ನವಾಬರ ವ್ಯಕ್ತಿತ್ವಕ್ಕೆ ಸಂದ ಗೌರವವಾಗಿದೆ.

ದಿವಾನ್ ಷೇರ್ ಖಾನ್ ವಿದ್ಯಾವಂತರಾಗಿದ್ದರಲ್ಲದೆ, ಉತ್ತಮ ಬರಹಗಾರರಾಗಿದ್ದರೆಂಬುದಕ್ಕೆ ಅವರ ಆಂಗ್ಲ ಮತ್ತು ಉರ್ದು ಭಾಷೆಯ ಸುಂದರ ಬರಹಗಳೇ ಸಾಕ್ಷಿಯಾಗಿವೆ.

ಹೊನ್ನಾಳಿಯನ್ನು ಸಾಂಸ್ಕೃತಿಕ ಅಭಿವೃದ್ಧಿಯ ಪಥದತ್ತ ಕೊಂಡೊಯ್ಯುವಲ್ಲಿ ನವಾಬರ ಪಾತ್ರ ಹಿರಿದಾದುದು.

**ಸಾಂಸ್ಕೃತಿಕ ಕೊಡುಗೆಗಳು** : ಹೊನ್ನಾಳಿಯು ಕುಸ್ತಿ ಕಲೆಗೆ ಸುತ್ತಮುತ್ತಲೂ ಪ್ರಸಿದ್ಧಿಯಾಗಿದ್ದು, ಕುರುಬ ಜನಾಂಗದವರು ಈ ಕುಸ್ತಿ ಕಲೆಗೆ ಹೆಚ್ಚಿನ ಆಸಕ್ತಿ ತೋರುತ್ತಿದ್ದಾರೆ. ಆಗ ಅರಮನೆಯ ಮುಂಭಾಗದಲ್ಲಿ ಕುಸ್ತಿಯನ್ನು ಆಡಿಸಲಾಗುತ್ತಿತ್ತು. ಕುಸ್ತಿಯನ್ನು ಆಡಿಸಲು ಉತ್ತಮ (ಅಖಾಡ) ಮೈದಾನವಿದ್ದು, ನವಾಬರು ಅರಮನೆಯ ಚಾಂದಿನಿಯಿಂದ ಕುಳಿತು ಪೈಲ್ವಾನರುಗಳ ಕುಸ್ತಿಯ ಕಸರತ್ತು, ಹಿಡಿತಗಳನ್ನು ವೀಕ್ಷಿಸುತ್ತಿದ್ದರು. ಕುಸ್ತಿಯಲ್ಲಿ ಗೆದ್ದವರಿಗೆ ಬೆಳ್ಳಿ ಗದೆ, ಬಳೆ ಹಾಗೂ ಹಣವನ್ನು ಕೊಟ್ಟು ಗೌರವಿಸುತ್ತಿದ್ದರು.

ಒಂದು ಐತಿಹ್ಯದ ಪ್ರಕಾರ, ಹೊನ್ನಾಳಿಯ ನವಾಬರು ಒಮ್ಮೆ ಮಠದ ಮೇಲೆ ದಾಳಿ ಮಾಡಿ ತಮ್ಮ ವಶಕ್ಕೆ ತೆಗೆದುಕೊಳ್ಳಲು ನಿಶ್ಚಯಿಸಿ ಮಠಕ್ಕೆ ಸೈನ್ಯಸಮೇತ ಹೋದಾಗ, ಆಗಿನ ಗುರುಗಳಾದ ಶ್ರೀ ಚನ್ನಗುರು ಮಲ್ಲಾರ್ಯ ಮಹಾಸ್ವಾಮಿಗಳ ಬಳಿಗೆ ಹೋಗಿ, ಸಾವಿರ ಹೊನ್ನುಗಳನ್ನು ನಿಂತ ಜಾಗದಿಂದಲೇ ಕೊಡುವಂತೆ ಆಹ್ವಾನ ಕೊಟ್ಟಾಗ, ಸ್ವಾಮಿಗಳು ನವಾಬರ ಮನಸ್ಸನ್ನು ಪರಿವರ್ತಿಸಿ, ಸರ್ವಧರ್ಮ ತತ್ವವನ್ನು ಬೋಧಿಸಿ, ಮಠಕ್ಕೆ ಆಹ್ವಾನಿಸಿ,

ಮಠದ ಮಹತ್ವವನ್ನು ತಿಳಿಸಿ, ಮಠದ ಬಾವಿಯಲ್ಲಿ ಮುಸ್ಲಿಂ ಧರ್ಮದ ಸಂಕೇತವಾದ ಹಸ್ತಗಳನ್ನು ತೋರಿಸಿದರು. ಇದನ್ನು ನೋಡಿದ ನವಾಬರು ಎಲ್ಲಾ ಕೆಟ್ಟ ಆಲೋಚನೆಗಳನ್ನು ಬಿಟ್ಟು ಶ್ರೀಗಳವರಿಗೆ ಶರಣಾಗತನಾಗಿ ಆತ್ಮೀಯ ಭಕ್ತರಲ್ಲೊಬ್ಬ ರಾಗುತ್ತಾರೆ.

ಪೂಜ್ಯ ಸ್ವಾಮೀಜಿಯವರು ನವಾಬರನ್ನು ಮತ್ತು ಮುಸ್ಲಿಂ ಬಾಂಧವರನ್ನು ಶ್ರೀಮಠಕ್ಕೆ ಬರಮಾಡಿಕೊಂಡು ದೇವರ ಕುರುಹನ್ನು ಅವರಿಗೆ (ಹಸ್ತಗಳನ್ನು) ಕೊಟ್ಟು ಹೊನ್ನಾಳಿಯಲ್ಲಿ ಸ್ವಾಮಿಗಳವರ ಒಡೆತನದಲ್ಲಿದ್ದ ಜಾಗವನ್ನು ಮಸೀದಿಯ ನಿರ್ಮಾಣಕ್ಕಾಗಿ ಕೊಡುತ್ತಾರೆ. ಈ ಜಾಗವನ್ನು ಈಗಲೂ ಸಹ ಮಠದ ಮಸೀದಿ ಜಾಗವೆಂದು ಕರೆಯುತ್ತಾರೆ.

ಈ ಸ್ಥಳದಲ್ಲಿ ಈಗಲೂ ಮುಸಲ್ಮಾನ ಬಾಂಧವರು ಪ್ರತಿ ವರ್ಷ ಮೊಹರಂ ಹಬ್ಬದಲ್ಲಿ ಹಸ್ತಗಳನ್ನು ಪ್ರತಿಷ್ಠಾಪಿಸಿ ಪೂಜೆ, ಪ್ರಾರ್ಥನೆ ಸಲ್ಲಿಸುತ್ತಾರೆ. ಆ ವೇಳೆಯಲಿ ಮಠದಿಂದ ಅಕ್ಕಿ, ಬೆಲ್ಲ, ದೀಪಾರಾಧನೆಗಾಗಿ ಎಣ್ಣೆಯನ್ನು ಕೊಡುವ ಪದ್ದತಿ ಇದೆ.

ಮಠದ ಜಾತ್ರೆಯ ಸಂದರ್ಭದಲ್ಲಿ ಗುರುಗಳ ಪಲ್ಲಕ್ಕಿಯು ನವಾಬರ ಮನೆಯ ಮುಂದೆ ಬಂದಾಗ ಪೂಜೆ ಸಲ್ಲಿಸಿ ಗೌರವಿಸುವ ಸಂಪ್ರದಾಯ ಈಗಲೂ ಇದೆ. ಶ್ರಾವಣ ಮಾಸದಲಿ ನಡೆಯುವ ಶ್ರೀಗಳ ರಥೋತ್ಸವ ಸಂದರ್ಭದಲ್ಲಿ ನವಾಬ ಮನೆತನದವರು ಶ್ರೀಗಳಿಗೆ ಮತ್ತು ರಥಕ್ಕೆ ಹಾರ ಹಾಕಿ ಕಾಣಿಕೆ ಅರ್ಪಿಸುವ ಸಂಪ್ರದಾಯ ಈಗಲೂ ರೂಢಿಯಲ್ಲಿದೆ.

ನವಾಬ ಮನೆತನದವರು ಶ್ರೀ ಮಠದೊಂದಿಗೆ ಸೌಹಾರ್ದತೆಯನ್ನು ಇಟ್ಟುಕೊಂಡು ಬಂದಿದ್ದಾರಲ್ಲದೆ, ಮಠಗಳಲ್ಲಿ ನಡೆಯುವ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಾರೆ. ಹೀಗೆ ನವಾಬರು ಹಿಂದೂ-ಮುಸ್ಲಿಂರ ಭಾವೈಕ್ಯತೆಯ ಸಂಕೇತವಾಗಿದ್ದಾರೆ.

**ಸಾಮಾಜಿಕ ಕೊಡುಗೆಗಳು** : ನವಾಬರು ಸಾಮಾಜಿಕ ಕಳಕಳಿಯುಳ್ಳವರಾಗಿದ್ದು ನವಾಬ್ ಷೇರ್ ಖಾನ್‌ರು ಹೊನ್ನಾಳಿಯ ಅಭಿವೃದ್ಧಿಗೆ ಹೆಚ್ಚಿನ ಗಮನ ನೀಡಿರುವುದು ತಿಳಿದು ಬರುತ್ತದೆ.

ಹೊನ್ನಾಳಿಯಲ್ಲಿ ಮುನಿಸಿಪಲ್ ಪ್ರೌಢಶಾಲೆ, ಹರಿಹರ ರಸ್ತೆಯಲ್ಲಿರುವ ಮಿಡ್ಲ್‌ಸ್ಕೂಲ್‌ಗಳನ್ನು ಸ್ಥಾಪಿಸುವಲ್ಲಿ ಪ್ರಮುಖ ಪಾತ್ರವಹಿಸಿರುತ್ತಾರೆ. ಕೋಟೆ ರಸ್ತೆಯಲ್ಲಿರುವ ಹಳೇ ಅಂಚೆ ಕಛೇರಿಯನ್ನು ಕಟ್ಟಿಸಿದ್ದು, ಅಲ್ಲದೇ ನೀರು ಪೂರೈಕೆಗಾಗಿ ಪ್ರವಾಸಿ ಮಂದಿರದ ಬಳಿ ಟ್ಯಾಂಕ್ ಕಟ್ಟಿಸುವಲ್ಲಿ, ಹೊನ್ನಾಳಿಗೆ ಸಾರ್ವಜನಿಕ ಆಸ್ಪತ್ರೆ ತರುವಲ್ಲಿ, ಜಾಮಿಯಾ ಮಸೀದಿಯ ನಿರ್ಮಾಣದಲ್ಲೂ ಪ್ರಮುಖ ಪಾತ್ರವಹಿಸಿದ್ದರು. ನವಾಬರ ಮನೆ ಎದುರಿಗಿರುವ ಹೊಳಿ ದಂಡೆಯಲ್ಲಿ ಬಟ್ಟೆ ತೊಳೆಯಲು ಅನುಕೂಲವಾಗುವಂತೆ ಕಲ್ಲುಗಳನ್ನು ಹಾಕಿಸಿದರಲ್ಲದೆ, ಮೆಟ್ಟಿಲುಗಳನ್ನು ಮಾಡಿಸಿದರು.

ಹೊನ್ನಾಳಿಯ ಸೇತುವೆಯ ನಿರ್ಮಾಣ ಕಾರ್ಯ ಪ್ರಾರಂಭವಾದಾಗ ಪ್ರವಾಸಿ ಬಂಗಲೆ ನಿರ್ಮಿಸಲು, ಹಾಗೂ ಪಿ.ಡಬ್ಲ್ಯು.ಡಿ. ಕಛೇರಿಗಳನ್ನು ಕಟ್ಟಲು ನವಾಬರು ತಮ್ಮ ಸ್ಥಳವನ್ನು ಬಿಟ್ಟುಕೊಟ್ಟಿರುವುದಾಗಿ ತಿಳಿದು ಬರುತ್ತದೆ. ನವಾಬರಿಗೆ ಮಕ್ಕಳ ಮೇಲೆ ತುಂಬಾ ಅಕ್ಕರೆ ಹಾಗು ಅವರ ಶಿಕ್ಷಣದ ಮೇಲೆ ಅಪಾರ ಕಾಳಜಿ. ಯಾವುದೇ ಸಮಯದಲ್ಲಿ ಅವರ ಕಾಲುಗಳು ಶಾಲೆಯ ಹಾದಿಯತ್ತ ಹೆಜ್ಜೆ ಇಡುತ್ತಿದ್ದಂತೆಯೇ ಪೆಪ್ಪರ್‌ಮೆಂಟ್‌ಗಳು ಅವರ ಕಿಸೆಯನ್ನು ತುಂಬುತ್ತಿದ್ದವು. ಅಲ್ಲದೆ ಜಾತಿ ಭೇದವಿಲ್ಲದೆ ಪ್ರತಿ ಶುಕ್ರವಾರ ಹೊನ್ನಾಳಿಯ ಪ್ರತಿ ಶಾಲೆಗೆ ಹೋಗಿ ಮಕ್ಕಳ ಬಾಯಿ ಸಿಹಿ ಮಾಡಿ ಬರುತ್ತಿದ್ದರು.

ಹೀಗೆ ಹತ್ತು ಹಲವು ಕಾರ್ಯಕ್ರಮ ಕೈಗೊಂಡು ಹೊನ್ನಾಳಿಯ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿದರು. ಭಾವೈಕ್ಯತೆಯನ್ನು ಬೆಸೆಯುವಲ್ಲಿ ಪ್ರಮುಖ ಪಾತ್ರವಹಿಸಿದ್ದರು. ಈಗಲೂ ಹೊನ್ನಾಳಿಯ ಜನತೆ ನವಾಬ ಮನೆತನದೊಂದಿಗೆ ಸೌಹಾರ್ದಯುತವಾಗಿ ಬದುಕುತ್ತಿದ್ದಾರೆ. ಇವರು ಮಾಡಿದ ಕೆಲಸವನ್ನು ಮೆಲಕು ಹಾಕುತ್ತಿದ್ದಾರೆ.

**ಸ್ವಾತಂತ್ರ್ಯ ಹೋರಾಟದಲ್ಲಿ** : ಸ್ವಾತಂತ್ರ್ಯ ಚಳುವಳಿಯಲ್ಲಿ "ನವಾಬ್ ಇನಾಯತ್-ಉಲ್ಲಾ-ಖಾನ್"ರು ಗಾಂಧೀಜಿಯವರೊಂದಿಗೆ ಭಾಗವಹಿಸಿರುವುದು ತಿಳಿದು ಬರುತ್ತದೆಯಲ್ಲದೆ, ಗಾಂಧೀಜಿಯವರು ನವಾಬರಿಗೆ ಪತ್ರ ಬರೆದು ಸ್ವಾತಂತ್ರ ಚಳುವಳಿಯಲ್ಲಿ ಭಾಗವಹಿಸುವಂತೆ ಕೋರಿದ್ದರಂತೆ. ಅದಕ್ಕೆ ಉತ್ತರವಾಗಿ "ನನಗೆ ಆರೋಗ್ಯ ಸರಿಯಿಲ್ಲ ನನ್ನ ಬೆಂಬಲ ಖಂಡಿತಾ ಇದೆ. ಮುಂದಿನ ಚಳುವಳಿಯಲ್ಲಿ ಖಂಡಿತವಾಗಿ ಭಾಗವಹಿಸುತ್ತೇನೆ" -ಎಂಬುದಾಗಿ ಪತ್ರ ಬರೆದಿರುವುದಾಗಿ ತಿಳಿಸುತ್ತಾರೆ. ಆ ಪತ್ರಕ್ಕಾಗಿ ಹುಡುಕಾಟ ನಡೆದಿದೆ.

ಬ್ರಿಟೀಷ್ ಸಾಮ್ರಾಜ್ಯಶಾಹಿಯ ವಿರುದ್ಧ, ಸ್ವದೇಶಿ ಚಳುವಳಿಯ ಮೂಲಕ ಜನ ಸಂಘಟನೆಗೆ ತೊಡಗಿದ್ದ ಗಾಂಧೀಜಿಯವರು ರಾಷ್ಟ್ರದ ಮೂಲೆ ಮೂಲೆಗೂ ತೆರಳಿ ಖಾದಿ ಬಟ್ಟೆ ಉತ್ಪಾದನೆ ಮತ್ತು ಬಳಕೆಯನ್ನು ಪ್ರಚುರಪಡಿಸಿದರು. ೧೯೨೭ರಲ್ಲಿ ಅಂದಿನ ಮೈಸೂರು ಸಂಸ್ಥಾನದಲ್ಲಿ ಖಾದಿ ಪ್ರಚಾರ ಸಭೆಗಳನ್ನು ಹಮ್ಮಿಕೊಂಡಿದ್ದ ಗಾಂಧೀಜಿಯವರು ಆಗಸ್ಟ್ ೧೩, ೧೯೨೭ ರಂದು ಹೊನ್ನಾಳಿಗೂ ಬಂದಿದ್ದು ಇಲ್ಲಿಯೂ ಪ್ರಚಾರ ಸಭೆ ನಡೆಸಿದ್ದರು. ಜೊತೆಗೆ ಕಸ್ತೂರ್ ಬಾ, ಮಹಾದೇವ ದೇಸಾಯಿ, ರಾಜಾಜಿ, ಗಾಂಧೀಜಿಯವರ ಕಿರಿಯ ಮಗ ದೇವದಾಸ ಗಾಂಧಿ, ರಾಜಾಜಿಯ ಮಗಳು ಲಕ್ಷ್ಮಿ, ಮ್ರುಲಾಜಿನ್ ಮಣಿಬೇನ್, ಪಟೇಲ್ ಹಾಗೂ ಬೆಳಗಾವಿಯ ಗಂಗಾಧರ ದೇಶಪಾಂಡೆ ಅವರುಗಳನ್ನು ಹೊನ್ನಾಳಿಯ ಜನತೆ ಸ್ವಾಗತಿಸಿ, ಪ್ರವಾಸಿ ಮಂದಿರಕ್ಕೆ ಕರೆತಂದರು.

ಆ ಸಂದರ್ಭದಲ್ಲಿ ಉಪನೋಂದಣಾಧಿಕಾರಿಗಳಾಗಿದ್ದ ಶ್ರೀನಿವಾಸಮೂರ್ತಿಯವರು ನೂಲಿನ ಲಡಿ ನೀಡುವ ಮೂಲಕ ಸ್ವಾಗತಿಸಿದರು. ಸತತ ಖಾಧಿದಾರಿಗಳಾಗಿದ್ದ ನವಾಬ್ ಷೇರ್

ಖಾನ್ ಪರ್ಶಿಯನ್ ಭಾಷೆಯಲ್ಲಿ ಬಿನ್ನವತ್ತಳೆ ಓದಿ ಅರ್ಪಿಸಿದರು. ಅಲ್ಲದೆ ಗಾಂಧೀಜಿಯವರು ಹಿಂದಿಯಲ್ಲಿ ಮಾತನಾಡಿದ್ದನ್ನು ಕನ್ನಡಕ್ಕೆ ಭಾಷಾಂತರಿಸಿ ಹೇಳಿದರು. ಹೀಗೆ ನವಾಬರು ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದು ಒಂದು ಅಪೂರ್ವ ದಾಖಲೆಯಾಗಿದೆ. ಒಂದೆರಡು ಬಾರಿ ದೆಹಲಿ ಹಾಗೂ ಸಬರಮತಿ ಆಶ್ರಮಕ್ಕೂ ಭೇಟಿ ಕೊಟ್ಟಿರುವುದಾಗಿ ತಿಳಿದು ಬರುತ್ತದೆ.

**ನವಾಬರ ಕೋಟೆ :** ಹೊನ್ನಾಳಿಯಿಂದ ಮಾಸೂರು ರಸ್ತೆಯಲ್ಲಿ ಇಪ್ಪತ್ತೈದು ಕಿ.ಮೀ. ದೂರ ಸಾಗಿದರೆ ಹಾವೇರಿ ಜಿಲ್ಲೆಯ ಹಿರೇಕೇರೂರು ತಾಲ್ಲೂಕಿನ "ಅಂಗರ ಗಟ್ಟೆ" ಎಂಬ ಗ್ರಾಮವು ಸಿಗುತ್ತದೆ. ಈ ಗ್ರಾಮದಲ್ಲಿ ಸುಮಾರು ಮುನ್ನೂರು ಕುಟುಂಬಗಳು ವಾಸಿಸುತ್ತಿದ್ದು, ಅವುಗಳಲ್ಲಿ ಸುಮಾರು ಮುವ್ವತ್ತಕ್ಕಿಂತ ಹೆಚ್ಚು ಕುಟುಂಬಗಳು ಮುಸ್ಲಿಂರವಾಗಿವೆ. ಇಲ್ಲಿರುವ ಎತ್ತರವಾದ ಗುಡ್ಡದ ಮೇಲೆ ಹೊನ್ನಾಳಿ ನವಾಬರ ಕೋಟೆ ಇದೆ. ಈ ಕೋಟೆ



ಚೌಕಾಕಾರದಲ್ಲಿ ಸುಮಾರು ೨೦೦ ಅಡಿ ಉದ್ದಗಲದ ಗೋಡೆ ಇದ್ದು, ಸುತ್ತಳತೆ ೮೦೦ ಅಡಿಗಿಂತ ಜಾಸ್ತಿಯಾಗಿದೆ. ಕೋಟೆಯ ಗೋಡೆ ೧೨ ರಿಂದ ೧೫ ಅಡಿ ಎತ್ತರವಾಗಿದ್ದು ಸುಸ್ಥಿತಿಯಲ್ಲಿದೆ. ಎರಡು ಭಾಗದಲ್ಲಿ ಗೋಡೆ ಚೆನ್ನಾಗಿದ್ದು, ಉಳಿದೆರಡು ಭಾಗ ಹಾಳಾಗಿದೆ. ನಾಲ್ಕು ದಿಕ್ಕಿಗೂ ೧೦ ಅಡಿ ವ್ಯಾಸದ ಬುರುಜುಗಳಿವೆ. ನಾಲ್ಕರಲ್ಲಿ ಒಂದು ಮಾತ್ರ ಹಾಳಾಗಿದ್ದು ಮೂರು ಬುರುಜುಗಳು ಸುಸ್ಥಿತಿಯಲ್ಲಿವೆ. ಕೋಟೆಯ ಒಳಗಡೆ ಗೋಡೆಯ ಸುತ್ತಲೂ ತುಪಾಕಿ ಹಾರಿಸಲು, ವೀಕ್ಷಿಸಲು ಅನುಕೂಲವಾಗುವಂತೆ ಮೂರು



ಕಿಂಡಿಗಳಿವೆ. ಇಂತಹ ಇಪ್ಪತ್ತಕ್ಕಿಂತ ಹೆಚ್ಚು ಕಿಂಡಿಗಳು ಈಗಲೂ ಸುಭದ್ರ ಸ್ಥಿತಿಯಲ್ಲಿವೆ. ಕೋಟೆಗೆ ಎರಡು ಬಾಗಿಲುಗಳಿದ್ದು, ಮುಖ್ಯ ದ್ವಾರ ಪೂರ್ಣ ಹಾಳಾಗಿದೆ. ಕೋಟೆಯ ಒಳಗೆ ಪ್ರವೇಶಿಸುತ್ತಿದ್ದಂತೆ ಮತ್ತೊಂದು ಎತ್ತರವಾದ ಗೋಡೆ ಇದೆ. ನಾಲ್ಕು ದಿಕ್ಕಿನ ಬುರುಜುಗಳಿಗೆ ಹೋಗಲು ಒಬ್ಬ ವ್ಯಕ್ತಿ ಮೇಲೆ ಹೋಗಲು ಸಾಧ್ಯವಿರುವಂಥ ಬಾಗಿಲಿದೆ. ಕೋಟೆಯ ಒಳಭಾಗದಲ್ಲಿ ಸುತ್ತಲೂ ಗೋಡೆ ಇದೆ. ಕೋಟೆಯ ದಕ್ಷಿಣಕ್ಕೆ ಕಾಲಭೈರವೇಶ್ವರ ಹಾಗು ನಾಗಮ್ಮ ದೇವಸ್ಥಾನಗಳಿದ್ದು ಇವು ಜೀರ್ಣೋದ್ಧಾರಗೊಂಡು ಈಗಲೂ ನಿತ್ಯ ಪೂಜೆ ನಡೆಯುತ್ತಿದೆ. ಆದರೆ ಕೋಟೆಯ ಉತ್ತರಕ್ಕೆ ಮಸೀದಿ ಇದ್ದು ಇತ್ತೀಚೆಗೆ ಹಾಳು ಬಿದ್ದಿರುವುದಾಗಿ ತಿಳಿಸುತ್ತಾರೆ. ಅಲ್ಲಿನ ಕಲ್ಲುಗಳನ್ನು ಜನ ಅರಿವಿಲ್ಲದೆ ಬಳಸಿದ್ದಾರೆ. ಇಲ್ಲಿನ ಕೆಲ ಮುಸ್ಲಿಂ ಯಜಮಾನರು ತಮ್ಮ ಹೆಸರಿನ ಮುಂದೆ ಅಡ್ಡ ಹೆಸರು ಹೊನ್ನಾಳಿ ಎಂದು ಇಟ್ಟುಕೊಂಡಿದ್ದಾರೆ. ವಿವರ ತಿಳಿಯಲಾಗಿ ಹೊನ್ನಾಳಿ ನವಾಬರು ಈ ವಂಶಸ್ಥರನ್ನು ಇಲ್ಲಿಗೆ ಕರೆದುಕೊಂಡು ಬಂದುದಾಗಿ ಬಹಳ ಕಾಲದಿಂದ ನೆಲೆಸಿದ್ದುದಾಗಿ ತಿಳಿಸುತ್ತಾರೆ. ಅಂಗರಕಟ್ಟೆ- ಅಂಗರು ಅಥವಾ-ಸೈನಿಕರು ನೆಲೆಸಿದಂತಹ ಕೇಂದ್ರವಾಗಿರಬೇಕು. ಈ ಕೋಟೆಯನ್ನು ಯಾರು ಯಾವಾಗ ನಿರ್ಮಿಸಿದರು ಎಂಬುದಕ್ಕೆ



ಸ್ಪಷ್ಟ ಆಧಾರಗಳಿಲ್ಲ. ಹೈದರ್ ಅಥವಾ ಟಿಪ್ಪು ಅಧೀನದಲ್ಲಿ ನವಾಬರು ನಿರ್ಮಿಸಿರಬಹುದು. ಕೋಟೆ ಎತ್ತರವಾದ ಗುಡ್ಡದ ಮೇಲಿದ್ದರೂ, ಸುತ್ತಲೂ ನೀರು ನಿಲ್ಲುವಂತೆ ಜಲದುರ್ಗವಾಗಿವೆ. ಈಗಲೂ ಒಂದು ಕಡೆ ಕೆರೆಯಾಗಿ ಮಾರ್ಪಟ್ಟಿದೆ. ಪಕ್ಕದಲ್ಲೆ ಅನೇಕ ಮುಸ್ಲಿಂರ ಗೋರಿಗಳಿವೆ.

**ನವಾಬ ವಂಶಸ್ಥರು :** ಈಗಲೂ ಹೊನ್ನಾಳಿ ನವಾಬ್ ವಂಶಸ್ಥರು ಹೊನ್ನಾಳಿಯಲ್ಲಿದ್ದು, "ಇನಾಯತ್ ಮಂಜಿಲ್" ಎಂಬ ಸುಮಾರು ೧೦೦ ವರ್ಷ ಹಿಂದಿನ ಕಟ್ಟಡವನ್ನು ಹೊಂದಿದ್ದಾರೆ.

ಹಿಂದಿನ "ಷೇರ್ ಮಂಜಿಲ್" ಎಂಬ ಅರಮನೆ ಸಂಪೂರ್ಣ ಹಾಳಾಗಿದ್ದು ೧೯೯೦ರಲ್ಲಿ ಕೆಡವಿದ್ದರೂ ಅದರ ಅವಶೇಷವನ್ನು ಕಾಣಬಹುದು.



ಈಗಲೂ ನವಾಬರ ಮನೆಯಲ್ಲಿ ಹಳೆಯ ಹಲವಾರು ಕಲಾತ್ಮಕ ಪೀಠೋಪಕರಣಗಳು, ಫಿರಂಗಿ, ಖಡ್ಗಗಳೂ, ಬಂದೂಕುಗಳು ಇದ್ದು ಇವುಗಳಲ್ಲನೇಕವುಗಳನ್ನು ಶಿವಮೊಗ್ಗ ಮ್ಯೂಜಿಯಂಗೆ ಕೊಟ್ಟಿರುತ್ತಾರೆ. ಅಲ್ಲದೆ ಮರದ ತೊಟ್ಟಿಲು, ಬೆತ್ತದ ಕಲಾತ್ಮಕ ಕುರ್ಚಿ, ಕಲಾತ್ಮಕ ಮಣ್ಣಿನ ಹಂಡೆ, ಕನ್ನಡಿ ಮತ್ತು ಸ್ಟ್ಯಾಂಡ್, ಇಂಗ್ಲೆಂಡ್‌ನ ಪಿಂಗಾಣಿ ಪಾತ್ರೆಗಳು, ೧೫೦ ವರ್ಷದ ಹಿಂದಿನ ಆಸ್ಟ್ರೇಲಿಯನ್ ಲ್ಯಾಂಪ್ ಮುಂತಾದ ಅನೇಕ ಅಮೂಲ್ಯ ವಸ್ತುಗಳ ಸಂಗ್ರಹಗಳಿವೆ.

ನವಾಬ್ ವಂಶಸ್ಥರೊಂದಿಗೆ ಇತಿಹಾಸ ತಜ್ಞರ ಸಮಾಲೋಚನೆಯಲ್ಲಿ ತೊಡಗಿ ಅನೇಕ ಅಂಶಗಳನ್ನು ಸಂಗ್ರಹಿಸಲಾಯಿತು.

ಹೀಗೆ ಹೊನ್ನಾಳಿ ಪ್ರಾಂತ್ಯದಲ್ಲಿ ಆಳ್ವಿಕೆ ನಡೆಸಿದ ನವಾಬರು ಆಡಳಿತಾತ್ಮಕ ಕಾರ್ಯಗಳಲ್ಲದೆ ಸಾಂಸ್ಕೃತಿಕ ಹಾಗೂ ಧಾರ್ಮಿಕ ಚಟುವಟಿಕೆಗಳಲ್ಲಿ ಸೌಹಾರ್ದತೆಯನ್ನು ಕಾಪಾಡಿಕೊಂಡು ಬರುವುದರೊಂದಿಗೆ ಬ್ರಿಟೀಷರ ವಿರುದ್ಧ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯ



ವಾಗಿ ಪಾಲ್ಗೊಂಡು, ಈ ಪ್ರಾಂತ್ಯದ ಜನಮನಗಳಲ್ಲಿ ಈಗಲೂ ಹಸಿರಾಗಿ ಉಳಿದಿದ್ದಾರೆ.



(ಈ ಲೇಖನವನ್ನು ಸಿದ್ದಪಡಿಸುವಲ್ಲಿ ನೆರವು ಸಲಹೆ, ಸಹಕಾರ ನೀಡಿದ ಶ್ರೀ ಸೂರ್ಯನಾಥ್ ಕಾಮತ್, ಶ್ರೀರಾಮಭಟ್ಟ, ಶ್ರೀ ಸಿದ್ದಯ್ಯ ಹಿರೇಮಠ್, ಶ್ರೀ ಕೆಳದಿ ಗುಂಡಾಜೋಯಿಸ್, ಶ್ರೀ ಸಂಗನಾಳಮಠ್, ಶ್ರೀ ಮಂಜುನಾಥ್ ಗೊಲ್ಲರಹಳ್ಳಿ, ಶ್ರೀ ಅರವಿಂದ್ ಹಾಗು ನವಾಬ ವಂಶಸ್ಥರಾದ ಶ್ರೀ ಅಜ್ಮತ್ ಆಸೀಫ್, ಶ್ರೀ ನವಾಬ್ ರಫತ್ ಉಲ್ಲಾ ಖಾನ್ ಇವರಿಗೆ ಧನ್ಯವಾದಗಳು)

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಬಿ.ಎಸ್. ರಾಮಭಟ್ಟ. : 'ನಗರ ಪ್ರಾಂತ್ಯದ ರೈತರ ಬಂಡಾಯ'

೨. ಕರ್ನಾಟಕ ಮತ್ತು ಗಾಂಧಿ ಬಗ್ಗೆ ವಿವಿಧ ಲೇಖನಗಳು.

೩. **ಇತಿಹಾಸ ದರ್ಶನ** ಸಂ. ೧೯/೨೦೦೪.

೪. ಸೂರ್ಯನಾಥ್ ಕಾಮತ್ : **ಕರ್ನಾಟಕ ಇತಿಹಾಸ.**

೫. ಬಿ. ಶಾಂತವೀರಯ್ಯ ಅಗರಬನ್ನಿಕಟ್ಟೆ : ಹೊನ್ನಾಳಿ ಹಿರಿಯ ಕಲ್ಮಠದ ಗುರು ಪರಂಪರೆ

೬. ಶ್ರೀ ಬಿ.ಎಸ್. ರಾಮಭಟ್ : **ಶಿವಮೊಗ್ಗ ಇತಿಹಾಸ**

೭. ಎಂ.ಎಂ. ಕಲ್ಬುರ್ಗಿ, **ಕರ್ನಾಟಕದ ಕೈಫಿಯತ್.**

೮. ಎಂ.ಎ.ಆರ್. ರಿಪೋರ್ಟ್.

೯. **ಬೆಳಗುತ್ತಿಯ ಅರಸೊತ್ತಿಗೆ** : ಬಿ.ಎಸ್. ರಾಮಭಟ್ಟ.

೧೦. ಡಾ|| ನಾ. ಕೊಟ್ರೇಶ್ ಉತ್ತಂಗಿ : **ಹೊನ್ನೆಲೆಗಳು**

೧೧. ***Spiritual Heritage of Hiriyakalmath*** - Prof. C.N. Hiremath.




**ಯಾವ ಧರ್ಮದ ಲಾಂಛನವೆನ್ನಲಿ ಸಮರಸದ**
**ಬಾಳುವೆಯ ಸಂಸ್ಕೃತಿಯ ಚೆಲುವು**
**ನವಾಬರಾಳ್ವಿಕೆಯಲ್ಲಿ ಅರಳಿತ್ತು ಕಲ್ಮಠದೊಡನಾದ**
**ಭಕ್ತಿ, ಸ್ವಾತಂತ್ರ್ಯ ಹೋರಾಟದ ಹುರುದು**

ಬಸವರಾಜಪ್ಪ ಪರಪ್ಪ ಕಂದಗಲ್*

# ಚನ್ನಗಿರಿ ತಾಲೂಕಿನ ವಿಶಿಷ್ಟ ಇತಿಹಾಸದ ಸೂಳೆಕೆರೆ (ಶಾಂತಿ ಸಾಗರ)

*ಚನ್ನಗಿರಿ ತಾಲೂಕಿನ ಸೂಳೆಕೆರೆಯು ಶರಣರ ಕಾಲದಲ್ಲಿ ನಿರ್ಮಿತವಾಗಿರುವ ಅತಿ ದೊಡ್ಡ ಕೆರೆ. ರೈಸರ ರೀತ್ಯಾ ಪಾಳೆಯಗಾರರ ಕಾಲದ ಕೆರೆ. ಜನಪದ ಕತೆಯ ರೀತ್ಯಾ ದೊರೆಯ ಮಗಳಾದ ಶಾಂತವ್ವ, ತಂದೆಯ ಬೈಗುಳದ ಪಾಪ ಪರಿಹಾರಾರ್ಥ ತಂದೆಯ ಕಾಲಾನಂತರ ಸೂಳೆಯರಿರುವ ನೆಲೆಯಲ್ಲಿ ಕಟ್ಟಿದ್ದು ಅವರ ಶರತ್ತಿನ ರೀತ್ಯಾ ಹೆಸರು 'ಸೂಳೆಕೆರೆ' ಎಂದಾಯಿತೆನ್ನಲಾಗಿದೆ. ಕೆರೆಗಳಿಗೆ ತೂಬುಗಳಿದ್ದು ಸಿದ್ಧೇಶ್ವರ, ಬಸವೇಶ್ವರ ಕೃಪೆಯಿಂದ ಕಟ್ಟಿಸಿದ ಕಾರಣ, ದೇಗುಲವನ್ನು ನಿರ್ಮಿಸಿದಳಂತೆ ಶಾಂತಮ್ಮ. ಇಲ್ಲಿ ಕೋಟೆಯೂ ಇದ್ದು, ಶರಣರ ಜಾತ್ರೆ ನಡೆಯುತ್ತದೆ.*

ಸ್ಥಳ ಪರಿಚಯ: ಕರ್ನಾಟಕ ರಾಜ್ಯದ ಈಗಿನ ದಾವಣಗೆರೆ ಜಿಲ್ಲೆ ಹಿಂದಿನ ಶಿವಮೊಗ್ಗ ಜಿಲ್ಲೆಗೆ ಸೇರಿದ ಚನ್ನಗಿರಿ (ದೊಡ್ಡ ಹುಲಿಕೆರೆ) ತಾಲೂಕಿನಲ್ಲಿರುವ ಸೂಳೆಕೆರೆಯು; ಚನ್ನಗಿರಿಯಿಂದ ಉತ್ತರದ ಕಡೆಗೆ ದಾವಣಗೆರೆಗೆ ಹೋಗುವ ಮಾರ್ಗದಲ್ಲಿ ಸುಮಾರು ೨೦ ಕಿ.ಮೀ. ದೂರದಲ್ಲಿ ಇದೆ. ಈ ಕೆರೆಯ ವಿಸ್ತೀರ್ಣ ೪೪೧೬ ಎಕರೆ ೧೭ ಗುಂಟೆ ಆಗಿರುತ್ತದೆ. ಇದು ನೋಡುಗರಿಗೆ ಮನದಾನಂದವನ್ನುಂಟುಮಾಡುವ ರಮ್ಯ ನೋಟ. ಇದು ಶರಣರ ಕಾಲದಲ್ಲಿ ನಿರ್ಮಿತವಾಗಿರುವ ಅತಿ ದೊಡ್ಡ ಕೆರೆ ಎನ್ನಲಾಗಿದೆ. ಹಿಂದಿನ ಮೈಸೂರು ಸಂಸ್ಥಾನಕ್ಕೆ ಸೇರಿದ್ದಾಗಿದ್ದು, ಬಿ.ಎಲ್. ರೈಸ್‌ರವರ ವಿವರಣೆಯಂತೆ ಇದು ಪಾಳೆಗಾರರ ಕಾಲದ್ದಾಗಿರುತ್ತದೆ.

ಈ ಕೆರೆ ಕಟ್ಟುವಿಕೆಯ ಕಾಮಗಾರಿ ಎರಡು ಗುಡ್ಡಗಳ ನಡುವೆ ಸುಮಾರು ೯೫೦ ಅಡಿ ಉದ್ದದಲ್ಲಿ ಏರಿಯನ್ನು ಕಟ್ಟಿರುತ್ತಾರೆ. ಇದರ ಅಗಲ ಒಂದೊಂದು ಕಡೆ ೬೦ ರಿಂದ ೮೦ ಅಡಿ ಇರುತ್ತದೆ. ಹಿಂದೆ ಈ ಸ್ಥಳದಲ್ಲಿ ಸ್ವರ್ಗವತಿ ಎಂಬ ನಗರವಿತ್ತೆಂದು ಜನಪದ ಐತಿಹ್ಯಗಳಿಂದ ತಿಳಿಯುತ್ತದೆ. ಈ ನಗರವನ್ನು ವಿಕ್ರಮರಾಯ ಎಂಬ ರಾಜ ಆಳುತ್ತಿದ್ದ. ಆತನ ಹೆಂಡತಿಯ ಹೆಸರು ನೂತನಾದೇವಿ. ಇವರಿಬ್ಬರ ಗರ್ಭದಲ್ಲಿ ಶಾಂತಮ್ಮ ಎಂಬ ಮಗಳು ಜನಿಸಿರುತ್ತಾಳೆ (ಶಾಂತಲಾದೇವಿ). ಈಕೆ ಬೆಳೆದ ಮಗಳಾದನಂತರ ಒಂದು ದಿನ ತನ್ನ ಸ್ನೇಹಿತೆಯರೊಂದಿಗೆ ಬೇರೆ ಊರಿಗೆ ತಂದೆಗೆ ತಿಳಿಸದಂತೆ ಕಾರ್ಯನಿಮಿತ್ತವಾಗಿ ಹೋಗಿಬರುತ್ತಾಳೆ. ಮಗಳು ಅರಮನೆಗೆ ಬಂದಾಗ ತಂದೆ ವಿಕ್ರಮರಾಯ ತುಚ್ಛ ಮಾತಿನಲ್ಲಿ ಬೈಯುತ್ತಾನೆ. ಆ ಮಾತುಗಳು ಏನೆಂದರೆ ನೀನು ನಡತೆ ಕೆಟ್ಟವಳು ಶೀಲವಂತೆ ಅಲ್ಲ, ನೀನು ಸೂಳೆ ಎಂದು ಬೈದದ್ದರಿಂದ ತಂದೆಯ ಬೈಗುಳದ ಪಾಪವನ್ನು ತನ್ನ ಜೀವದಲ್ಲಿ ತೊಳೆದುಕೊಳ್ಳಬೇಕೆಂದು ಶಾಂತವ್ವ (ಶಾಂತಲಾ ದೇವಿ) ಯೋಚಿಸಿ ತನ್ನ ತಂದೆಯ ನಂತರ ಈ ಕೆರೆಯನ್ನು ಕಟ್ಟಿಸಲು ಯೋಚಿಸುತ್ತಾಳೆ. ಈ ಸ್ಥಳದ ಸ್ವರ್ಗವತಿ ಪಟ್ಟಣದಲ್ಲಿ ಸೂಳೆಯರಿರುವ ಬಡಾವಣೆಯಲ್ಲಿ ಕೆರೆಯನ್ನು ಕಟ್ಟಿಸಲು ನಿರ್ಧರಿಸಿ ಸೂಳೆಯ(ವೇಶ್ಯೆಯ)ರನ್ನು ಕೇಳಿದಾಗ ಅವರು ಈ ಸ್ಥಳದಲ್ಲಿ ಕೆರೆಯನ್ನು ಕಟ್ಟುವುದಾದರೆ ಸೂಳೆಕೆರೆ ಎಂದು ಹೆಸರಿಡಬೇಕು ಎಂದು ಈ ವೇಶ್ಯೆಯರು ಹೇಳಿದಾಗ ಅದಕ್ಕೆ ಒಪ್ಪಿ ಈ ಪ್ರದೇಶವನ್ನು ವೇಶ್ಯೆಯರು ಕುಲ್ಲ ಮಾಡಿಕೊಟ್ಟಾಗ ಕೆರೆಯ ನಿರ್ಮಾಣ ಕಾರ್ಯ ಪ್ರಾರಂಭವಾಗಿ ಮೇಲೆ ಹೇಳಿದಂತೆ ಕಟ್ಟಲ್ಪಟ್ಟಿದೆ.

ಈ ಕೆರೆಗೆ ಮೂರು ತೂಬುಗಳಿವೆ.

೧. ಸಿದ್ದೇಶ್ವರಸ್ವಾಮಿಯ ಹೆಸರಿನ ತೂಬು.
೨. ಕತ್ತರಿ ತೂಬು.
೩. ಬಸವೇಶ್ವರ ಸ್ವಾಮಿ ಹೆಸರಿನ ತೂಬು.

* ಮಾತೃಛಾಯಾ, ಸವಳಂಗ ರಸ್ತೆ, ಜಯನಗರದ ೨ನೇ ಸಮಾನಾಂತರ ರಸ್ತೆ, ಶಿವಮೊಗ್ಗ.



ಈ ಕೆರೆಯ ನಿರ್ಮಾಣದ ಸಮಯದಲ್ಲಿ ಶಿವಶರಣರಾದ ಸಿದ್ದೇಶ್ವರರು ಮತ್ತು ಬಸವೇಶ್ವರರು ಸಹಾಯಕರಾಗಿರುವುದು ತಿಳಿದುಬಂದಿರುತ್ತದೆ. ಸಿದ್ದೇಶ್ವರರು ಇರುವ ಜಾಗ ಕೆರೆಯ ಉತ್ತರದ ಕಡೆ ತೊತ್ತಿನ ಕೆರೆ ಇದೆ. ಇದು ಶಾಂತಮ್ಮನು ತನ್ನ ದಾದಿಯ ಹೆಸರಿನಲ್ಲಿ ಕಟ್ಟಿರುವ ಕೆರೆ. ಎಡಭಾಗದ ಗುಡ್ಡಗಳಲ್ಲಿ ಈಗಲೂ ನವಿಲುಗಳ ಗುಂಪುಗಳಿವೆ. ಬಲಭಾಗದ ಗುಡ್ಡದ ಆ ಕಾಲದ ಅಭಯಾರಣ್ಯದ ಪೆಳೆ (ಗಿಡಗಂಟೆ)ಗಳಲ್ಲಿ ಸಿದ್ದೇಶ್ವರರು ಇರುವುದು. ವಿಕ್ರಮರಾಯನ ದನಗಳ ಹಿಂಡಿನಲ್ಲಿ ಒಂದು ಹಸುವು ಕರುವನ್ನು ಹಾಕಿ ಕರುವಿಗೂ ಹಾಲು ಉಣಿಸದಂತೆ ಆ ಸಿದ್ದೇಶ್ವರರ ತಲೆಯ ಮೇಲೆ ದಿನನಿತ್ಯ ಹಾಲು ಕರೆಯುತ್ತದೆ. ಇದನ್ನು ಕಾಯುತ್ತಿದ್ದ ದನಗಳ ಕಾವಲುಗಾರನು ಆ ಜಾಗಕ್ಕೆ ಹೋಗಿ ನೋಡಿದಾಗ ಹಸುವು ಹಾಲು ಕರೆಯುವುದನ್ನು ನೋಡಿರುವುದು ಈಗಲೂ ಸಹ ಸಿದ್ದೇಶ್ವರ ಸ್ವಾಮಿಯವರ ಮೇಲೆ ಹಸುಗಳ ಪಾದಗಳ ಗುರುತುಗಳಿವೆ. ಈ ಮಹಾಮಹಿಮರ ಕೃಪೆಯಿಂದ ಶಾಂತಮ್ಮನು ಕೆರೆಯ ನಿರ್ಮಾಣವನ್ನು ಪ್ರಾರಂಭಿಸುತ್ತಾಳೆ. ನಿರ್ಮಾಣದ ವೆಚ್ಚವನ್ನು ಭರಿಸಲು ಮೇಲ್ಕಂಡ ಶರಣರು ಶಾಂತಮ್ಮ (ಶಾಂತಲಾದೇವಿ)ಗೆ ಅಪ್ಪಣೆ ಕೊಡುತ್ತಾರೆ. ಕೆರೆಯ ನಿರ್ಮಾಣ ಕಾಮಗಾರಿ ಕೆಲಸಗಾರರಿಗೆ ಕೆಲಸಕ್ಕೆ ತಕ್ಕಂತೆ ತಮ್ಮ ಗುರು ಕೃಪೆಯಿಂದ ನಿರ್ಮಾಣಗಾರರಿಗೆ ಧನ ಬರುತ್ತಿತ್ತೆಂದು ತಿಳಿದುಬಂದಿದೆ. ಆದ ಪ್ರಯುಕ್ತ ಈ ಶರಣರ ಆಶೀರ್ವಾದದ ಫಲದಿಂದ ಈ ಕೆರೆಯ ಕಾಮಗಾರಿ ಮುಗಿದಿರುತ್ತದೆ.



ಕಾಮಗಾರಿ ಆದನಂತರ ಶಾಂತಮ್ಮ (ಶಾಂತಲಾದೇವಿ) ಸಿದ್ದೇಶ್ವರನಿಗೆ ದೇವಸ್ಥಾನವನ್ನು ಕಟ್ಟಿಸಿ ಈ ದೇವಸ್ಥಾನದ ಎಡಭಾಗದಲ್ಲಿ ಶಾಂತಮ್ಮನು ಸಿದ್ಧೇಶ್ವರ ದೇವಸ್ಥಾನದ ಪಕ್ಕದಲ್ಲಿ ಐಕ್ಯವಾಗಿರುತ್ತಾಳೆ. ಬಸವೇಶ್ವರರ ಹೆಸರಿನಲ್ಲಿ ತೂಬಿಗೆ ಬಸವೇಶ್ವರರ ತೂಬು ಎಂದು ಹೆಸರಿಟ್ಟಿರುತ್ತಾಳೆ. ಕತ್ತರಿ ತೂಬಿನಲ್ಲಿ ದೊಡ್ಡ ಕತ್ತರಿಯನ್ನಿಟ್ಟು ಆಗಿನ



ಕಾಲದಲ್ಲಿ ತಪ್ಪು ಮಾಡಿದವರನ್ನು ಆ ತೂಬಿನಲ್ಲಿ ದೂಡಿಬಿಡುವುದಾಗಿ ತಿಳಿದಿದ್ದು, ತಪ್ಪಿತಸ್ತರು ಯಾರು ಇರುವುದಿಲ್ಲ. ಆದ ಕಾರಣ ಇದನ್ನು ಪರೀಕ್ಷಿಸಲು ಈ ತೂಬಿನಲ್ಲಿ ಒಂದು ನಿಂಬೆಹಣ್ಣನ್ನು ಹಾಕಿದರೂ ಕೂಡ ತುಂಡಾಗಿ ಬರುತ್ತಿತ್ತೆಂದು ತಿಳಿದಿದೆ. "ಮಾಡುವ ಕೆಲಸದಲ್ಲಿ ಮನುಜ ಮನಸ್ಸಿಟ್ಟು ಮಾಡಿದರೆ ತನ್ನ ಪ್ರಸಾದಕ್ಕೆ ಧಕ್ಕೆಯಿರುವುದಿಲ್ಲ, ಕಾಟಾಚಾರಕ್ಕೆ ಮನಸ್ಸಿಲ್ಲದೆ ಮಾಡಿದವರ ಕೆಲಸ ತನ್ನ ಹೊಟ್ಟೆಯ ಮೇಲೆ ತಾನೇ ಕಲ್ಲುಹಾಕಿಕೊಂಡಂತೆ" ಎಂಬ ಶರಣರ ಉಕ್ತಿ ನಾಣ್ನುಡಿಯು ಆಗಿರುತ್ತದೆ. ಈ ಕೆರೆಗೆ ಸುಮಾರು ೧೫-೨೦ ಹಳ್ಳಿಗೆ ನೀರಾವರಿ ಕಾಲುವೆಗಳಿದ್ದು ರೈತರು ಉಪಯೋಗಿಸುತ್ತಿದ್ದರು. ಸಿದ್ದೇಶ್ವರರ ತೂಬಿನ ನಡುವೆ ಬರುವ ಚಿರಡೋಣಿ ಹತ್ತಿರ ಒಡ್ಡನ್ನು ಕಟ್ಟಿರುತ್ತಾರೆ. ಹಾಲಿ ಸಿದ್ದೇಶ್ವರರ ಮತ್ತು ಬಸವೇಶ್ವರರ ತೂಬಿನಲ್ಲಿ ಈಗಲೂ ಸಹ ನೀರು ಹರಿಯುತ್ತದೆ. ಪರಂಪರೆ ಹೇಳುವಂತೆ ಶರಣರ ಕಾಲದಲ್ಲಿ ನಿರ್ಮಿತವಾದ ಈ ಭವ್ಯ ಕೆರೆ ಏರಿ ಮೇಲೆ ನಿಂತು ನೋಡಿದರೆ ನೋಟ ಚಂದ, ಸ್ಥಳ ಚಂದ. ಏರಿಯ ಮೇಲೆ ಪ್ರವಾಸಿ ಮಂದಿರ ಇದೆ. (ಕಲ್ಯಾಣ ಮಂದಿರ).

ಕೆರೆಯ ಸುತ್ತಲೂ ಹೊಂದಿಕೊಂಡಿರುವಂತೆ ರುದ್ರಾಪುರದ ಕಾವಲಿನಲ್ಲಿ (ಈಗ ಸೇವಾ ನಗರವಿದೆ) ಕಾವಲಿಗಾಗಿ ರುದ್ರದೇವರ ದೇವಸ್ಥಾನವಿದ್ದು ಸ್ಥಳ ಮಹಿಮೆ ಇದೆ. ಕೆರೆಯ ಪಶ್ಚಿಮ ಭಾಗಕ್ಕೆ ಮಥುರ ನಾಯಕರ ಹಳ್ಳಿಯಿದೆ. ಇದು ಚಿಕ್ಕ ಪಾಳೆಗಾರನ ಊರು, ಕೆರೆಯ ವಾಯುವ್ಯ ದಿಕಿನಲ್ಲಿ ಬಸವಪಟ್ಟಣವೆಂಬ ರಾಜಧಾನಿಯಿದ್ದು, ಕೋಟೆಯ ಮಹಾದ್ವಾರವಿದ್ದು ಶಿಥಿಲವಾಗಿರುವುದು ಕಂಡುಬರುತ್ತದೆ. ಈ ಕೋಟೆಯ ಸುತ್ತಲೂ ಕಂದಕಗಳಿರುವುದು

ಈಗಲೂ ಕಂಡುಬರುತ್ತದೆ. ಈ ಕೋಟೆಯ ಒಳಭಾಗದ ಜಾಗದಲ್ಲಿ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ದಿ|| ಜೆ.ಎಚ್. ಪಟೇಲರ ಹೆಸರಿನಲ್ಲಿ ಬಡವರಿಗೆ ಮನೆಗಳನ್ನು ಕಟ್ಟಿಸಿಕೊಟ್ಟಿರುತ್ತಾರೆ. ಅಲ್ಲದೆ ಇಲ್ಲಿ ಹಾಲುಸ್ವಾಮಿಯವರ ಗವಿಮಠವಿದೆ. ವರ್ಷಕ್ಕೊಮ್ಮೆ ಈ ಶರಣರ ಜಾತ್ರೆ ವಿಜೃಂಭಣೆಯಿಂದ ನಡೆಯುತ್ತದೆ. ಇದು ಈಗಲೂ ಸಹ ಮಹಾ ಮಹಿಮಾಸ್ಥಳ. ಇದಕ್ಕೆ ತಾಗಿದಂತೆ ದಾಗಿನಕಟ್ಟೆ ಗ್ರಾಮವಿದೆ. ಆ ಕಾಲದಲ್ಲಿ ಅದು ದಾಗೀನರ ಮಾಡುವ ಸ್ಥಳವಾಗಿರುತ್ತದೆ. ಅಲ್ಲಿಯ ಬೆಟ್ಟದಲ್ಲಿ ಈಗಲೂ ಸಹ ಸುರಂಗವಿರುವ ಜಾಗವಿದ್ದು ಶಿಥಿಲವಾಗಿರುವುದನ್ನು ಕಾಣಬಹುದು. ಪಕ್ಕದಲ್ಲಿ ಕಂಚುಗಾರನಹಳ್ಳಿ ಗ್ರಾಮವಿದೆ. ಹಾಗೆ ಇಲ್ಲಿ ಕಂಚು ತಯಾರಕರಿದ್ದರೆಂದು ಕಂಡುಬಂದಿದೆ. ಈ ಕೆರೆಯ ದಕ್ಷಿಣದ ಕಡೆಗೆ ಕಗತೂರು, ಬುಳ್ಳಸಾಗರ, ಬನ್ನಿಹಟ್ಟಿ, ಅಣಪೂರು ಮತ್ತು ಹಟ್ಟಿ ಗ್ರಾಮಗಳಿವೆ. ಆದರೆ ಬುಳ್ಳಸಾಗರದಲ್ಲಿ ಮಾತ್ರ ಇಂದಿಗೂ ನಡೆಯಲಿರುವ ಸಿದ್ದರಾಮೇಶ್ವರರ ಗದ್ದುಗೆಯ ದೇವಸ್ಥಾನವಿದೆ. ಈ ಶರಣರು ಈ ಕೆರೆಯ ನಿರ್ಮಾಣವಾದ ನಂತರ ಇಲ್ಲಿ



ಪ್ರಯಾಣಿಸುವಾಗ ಬಂದು ಸುಂದರವಾದ ಸ್ಥಳವನ್ನು ನೋಡಿ ಪೂಜೆಗೈದು ಗದ್ದುಗೆಯನ್ನು ಮಾಡಿರುವುದಾಗಿ ಹೇಳಲಾಗಿದೆ. ಈ ಮಹಿಮರ ಜಾತ್ರಾ ಮಹೋತ್ಸವವು ಹನ್ನೆರಡು ವರ್ಷಕ್ಕೊಮ್ಮೆ ನಡೆಯುತ್ತದೆ. ಕಾಲು ಲಕ್ಷಕ್ಕೂ (೧/೪) ಹೆಚ್ಚು ಜನ ಭಕ್ತಾದಿಗಳು ಬರುತ್ತಾರೆ. ನಾನು ಸಹ ಮಾಧ್ಯಮ ಶಾಲೆಯಲ್ಲಿ ಓದುವಾಗ ಆಗ ಹುಡುಗನಾಗಿ ಈ ಜಾತ್ರೆಯನ್ನು ಗಮನಿಸಿರುತ್ತೇನೆ. ಇಲ್ಲಿಯ ಗ್ರಾಮಸ್ಥರು ಸಾಮಾನ್ಯವಾಗಿ ಹೆಚ್ಚಾಗಿ ಸತ್ಯವನ್ನೇ ಹೇಳುತ್ತಾರೆ.

"ಸತ್ಯದ ಮನೆಯಲ್ಲಿ ಶಿವನಿರ್ಪನಲ್ಲದೇ, ಅಸತ್ಯದ ಮನೆಯಲ್ಲಿ ಶಿವನಿರ್ಪನೇ ಇದೆಲ್ಲ ಕಾಣಿರೋ! ಕೊನೆಯುಸಿರಿರುವ ವರೆಗೂ ಸತ್ಯವನ್ನೇ ಸಾಧಿಸಬೇಕು" ಎಂಬುದು ಶರಣರ ವಾಕ್ಯ. ಕಾರಣ ಸಿದ್ದರಾಮರ ಭಯವಿದೆ, ಭಯವಿದ್ದ ಕಡೆ ಭಕ್ತಿಯಿದೆ, ಭಕ್ತಿಯಿದ್ದ ಕಡೆ ಶಿವನಿದ್ದಾನೆ ಎಂದು ತಿಳಿಯುತ್ತದೆ.

ಇನ್ನೊಂದು ಗ್ರಾಮ ಕೆರೆಯ ಪೂರ್ವಭಾಗಕ್ಕಿದ್ದು, ಇದು ಸೋಮಲಾಪುರ ಗ್ರಾಮವಾಗಿರುತ್ತದೆ. ಈ ಗ್ರಾಮದಲ್ಲಿ ಒಂದು ದಿಣ್ಣೆ (ದಿಬ್ಬ) ಇರುತ್ತದೆ. ಈ ದಿಬ್ಬಕ್ಕೆ ಸೂಳೆದಿಬ್ಬ ಎಂದು ಕರೆಯುತ್ತಾರೆ. ಈ ದಿಬ್ಬದಲ್ಲಿ ಪಂಚಾಯ್ತಿ ಮಾಡುವಾಗ ಸತ್ಯವನ್ನ ನುಡಿಯಬೇಕಾಗಿ ಪಂಚಾಯ್ತಿದಾರರು ಹೇಳುತ್ತಿರುವಂತೆ ಭಾಸವಾಗುತ್ತದೆ. ಸೋಮಲಾಪುರ ಮತ್ತು ಕಗತೂರು ಗ್ರಾಮದವರು ಸೇರಿ ಶ್ರಾವಣ ಮಾಸದಲ್ಲಿ ಗೌರಿಪಬ್ಬದ ಮುನ್ನ ಆಯಾಯ ಗ್ರಾಮದ ದೇವರುಗಳನ್ನು ತಂದು ಆ ಸೂಳೆದಿಬ್ಬದಲ್ಲಿ ಭೇಟಿಯಾಗುತ್ತಾರೆ.



ಕೊನೆಯದಾಗಿ ಹೇಳುವುದಾದರೆ ತಂದೆ ಕೆಟ್ಟ ಮಾತಿನಿಂದಾಗಿ ಶಾಂತಮ್ಮ (ಶಾಂತಲಾದೇವಿ) ಈ ಪಾಪವನ್ನು ತೊಳೆದುಕೊಳ್ಳಲು ಈ ಕೆರೆಯನ್ನು ಕಟ್ಟಿಸಿರುತ್ತಾಳೆ. ಛಲ ಬೇಕು ಶರಣಂಗೆ, ಛಲ ಬೇಕು ಕುಲಜಂಗೆ ಎಂಬ ವಚನದಂತೆ ಶಾಂತಮ್ಮ (ಶಾಂತಲಾದೇವಿ) ನಡೆದುಕೊಂಡಿದ್ದಾಳೆ. ಕರ್ನಾಟಕ ರಾಜ್ಯದ ಹಿಂದಿನ ಮುಖ್ಯಮಂತ್ರಿಗಳಾದ ದಿ|| ಸಿದ್ದವ್ವನಹಳ್ಳಿ ನಿಜಲಿಂಗಪ್ಪನವರು ಈ ಕೆರೆಯ ಪ್ರವಾಸಿ ಮಂದಿರದಲ್ಲಿ ವಿಶ್ರಾಂತಿ ಪಡೆದ ನಂತರ ಈ ಕೆರೆಗೆ "ಶಾಂತಿಸಾಗರ"ವೆಂದು ನಾಮಕರಣ ಮಾಡಿರುತ್ತಾರೆ.



ದೇವೇಂದ್ರ ಮಾಧವನವರ*

# ಕಾಲಗರ್ಭಲೀನ ಜಾಲಿಹಾಳ ಸಂಸ್ಥಾನ

*ಜಾಲಿಹಾಳ ಬಾದಾಮಿಯ ಆಗ್ನೇಯಕ್ಕಿರುವ ಸುಶಿಕ್ಷಿತ ಊರು. ದೇಸಾಯರ ಸಂಸ್ಥಾನವಾಗಿ ಹೈದರಾಲಿ ಪೇಶ್ವೆಯರ ಯುದ್ಧ ಸಂದರ್ಭದಲ್ಲಿ ಪೇಶ್ವೆಯರ ಪರನಿಂತ ಸಂಸ್ಥಾನ. ಕೋಟೆ, ಪ್ರಾಚೀನ ದೇಗುಲ, ಶಿಲ್ಪ ಹಾಗು ವಿಶಿಷ್ಟ ಸಾಂಸ್ಕೃತಿಕ ಪರಂಪರೆ ಹೊಂದಿರುವ ಈ ಊರು ಕನ್ನಡನಾಡಿಗೆ ಹಲವಾರು ವಿದ್ವಾಂಸರನ್ನು ನೀಡಿದೆ.*

ಬಾದಾಮಿ ತಾಲೂಕಿನಲ್ಲಿದ್ದ ಜಾಲಿಹಾಳ ಸಂಸ್ಥಾನದ ದೇಸಾಯರು, ಕ್ರಿ.ಶ. ೧೭೭೬ರಲ್ಲಿ ಹುಬ್ಬಳ್ಳಿಯ ಹತ್ತಿರದ ಸಂಶಿಯಲ್ಲಿ ಹೈದರಾಲಿ ಮತ್ತು ಪೇಶ್ವೆಯರ ಮಧ್ಯೆ ನಡೆದ ಯುದ್ಧದಲ್ಲಿ ಪೇಶ್ವೆಯರಿಗೆ ಸಹಾಯ ಮಾಡಿದ ಸಂಗತಿ ಇತಿಹಾಸದ ಪತ್ರದಲ್ಲಿ ದಾಖಲಾಗಿದೆ.[೧] ಕರ್ನಾಟಕ ರಾಜ್ಯ ಗ್ಯಾಜೆಟಿಯರ್‌ನಲ್ಲೂ ಈ ಸಂಸ್ಥಾನದ ಪ್ರಸ್ತಾಪವಿದೆ. ಆದರೆ ಇದರ ವಿವರವಾದ ಇತಿಹಾಸ ಲಭ್ಯವಿಲ್ಲ. ಮೊನ್ನೆಯವರೆಗೆ ಇಲ್ಲಿ ಆಳಿದವರ ಹೆಸರೂ (ಒಬ್ಬಿಬ್ಬರದನ್ನು ಬಿಟ್ಟರೆ) ಗೊತ್ತಿರಲಿಲ್ಲ. ಪುಣೆಯ ಭಾರತ ಇತಿಹಾಸ ಸಂಶೋಧಕ ಮಂಡಳದಲ್ಲಿ ಕೆಲವು ಕಾಗದಗಳು ಇವೆಯೆಂದು ತಿಳಿದುಬರುತ್ತಿದೆ. ಜಾಲಿಹಾಳದ ಪಕ್ಕದಲ್ಲಿರುವ (೧/೨ ಕಿ.ಮೀ. ಅಂತರ) ಬೇಲೂರು ಮೊದಲು ಈ ಸಂಸ್ಥಾನದ ರಾಜಧಾನಿಯಾಗಿದ್ದಿತೆಂದೂ, ಬಾಗಲಕೋಟ ತಾಲೂಕಿನ ಶಿರೂರ ದೇಸಾಯಿ ಅಸಹಾಯಕನಾಗಿದ್ದ ಬೇಲೂರು ದೇಸಾಯಿಯ ಅಪೇಕ್ಷೆಯಂತೆ (ಹಾಳು) ಹುಲ್ಲೂರಿನ ಪ್ರಬಲ ಬೇಡ ಬಂಟರನ್ನು ನಂಬಿಸಿ ಅವರ ನೆಲೆಯನ್ನು ಮೋಸದಿಂದ ನಾಶ ಮಾಡಿ ಬೇಲೂರು ಸಂಸ್ಥಾನವನ್ನು ಪಡೆದು ಜಾಲಿಹಾಳಕ್ಕೆ ರಾಜಧಾನಿಯನ್ನು ಸ್ಥಳಾಂತರಿಸಿದನೆಂದೂ ಬೇರೊಂದು ಲೇಖನದಲ್ಲಿ ವಿವರವಾಗಿ ಬರೆದುದಾಗಿದೆ.[೨]

ಬೇಲೂರು ಸಂಸ್ಥಾನದ ಅರಮನೆ ಮೊದಲು ಬೇಲೂರಿನ ಗುಡ್ಡದ ಮೇಲೆ ಈಗಿನ ದೊಡ್ಡ ಹುಡೆಯ ಉತ್ತರಕ್ಕೆ ಇತ್ತು. ಈಗ ಅಲ್ಲಿ ಇದರ ಗುರುತುಗಳು, ಹಾಳಾದ ಹುಡೆ ಇವೆ. ಇದು 'ಬೇಲುಗಿರಿ' ಸಂಸ್ಥಾನವೆಂದು ಹಳೆಯ ದಾಖಲೆಯಲ್ಲಿ ಹೆಸರಿಸಲ್ಪಟ್ಟಿದೆ.[೩] 'ಬೇಲೂರು' ಇದರ ಮೂಲ ರೂಪ ಬಿಲ್ವಪುರ' ಎಂದು ತಿಳಿಯಲಾಗಿದೆ. ಬಿಲ್ವ ಅಂದರೆ 'ಬೆಲ್ಲವತ್ತ' ಎಂದೂ ಶಬ್ದಕೋಶದಲ್ಲಿದೆ. ಉತ್ತರ ಕರ್ನಾಟಕದ ಜನಪದರು 'ಬೆಲಪತ್ರಿ' ಅನ್ನುತ್ತಾರೆ, 'ಪುರ' ಎಂಬುದನ್ನು 'ಪೂರ' ಎಂದು ಎಳೆದು ಉಚ್ಚರಿಸುತ್ತಾರೆ. ಉದಾ: ವಿಜಾಪೂರ, ಸರ್ಜಾಪೂರ. ಆದರೆ '...ಪುರ, '...ಊರು' ಆಗುವುದಿಲ್ಲ. ಆದ್ದರಿಂದ ಬಿಲ್ವ(ಬೆಲ)ದ ಊರು ಎಂಬುದು ಬೇಲೂರು ಆಗಿರುವ ಸಾಧ್ಯತೆ ಇದೆ. ಮೂಲದಲ್ಲಿ ಇದು 'ಬೇಲುಗಿರಿ' ಆಗಿರಬಹುದು. ಇನ್ನೊಂದು ಸಾಧ್ಯತೆಯೂ ಇದೆ. ಆ ಕಾಲದಲ್ಲಿ ಗುಡ್ಡದ ಮೇಲೆ 'ಬೇಲ'ದ (ಬೆಳವಲ, ಬಳೂಲ) ಗಿಡಗಳು ಬಹಳ ಇದ್ದಿರಬಹುದು. ಆದ್ದರಿಂದ 'ಬೇಲುಗಿರಿ' ಆಗಿರಬಹುದು. ಬೇಲೂರಲ್ಲಿ ಕೋಟೆಯ ಪೂರ್ವ ದಿಕ್ಕಿಗೆ ದೊಡ್ಡ ಗೋಡೆ ಇದೆ. ಇಲ್ಲಿಯೇ ಪ್ರಾಚೀನ ಈಶ್ವರನ ಗುಡಿ, ಕೋಟೆ ಒಳಗಡೆ ತ್ರೈಪುರುಷ ದೇವಾಲಯವಿದ್ದು, ಒಂದೇ ಪೀಠದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರ ಸುಂದರ ಮೂರ್ತಿಗಳಿವೆ. (೪" ಎತ್ತರ). ಹೊರಗಡೆ ಒಂದು ಶಾಸನವಿದೆ. ಕೋಟೆ ಹೊರಗಡೆ ಮಾರುತಿ ದೇವಾಲಯದ ಮುಂದೆ ಕಲ್ಯಾಣ ಚಾಲುಕ್ಯರ ಕಾಲದ (ಕ್ರಿ.ಶ.

* ನಿವೃತ್ತ ಕನ್ನಡ ಉಪನ್ಯಾಸಕ, ಹೊಳೆಆಲೂರು; ರೋಣ ತಾಲೂಕು, ಗದಗ ಜಿಲ್ಲೆ - ೫೮೨ ೧೦೨

೧೦೪೦) ದಾನ ಶಾಸನವಿದೆ. ಇವನ್ನು ಇತಿಹಾಸಕಾರ ಆರ್.ಎಸ್. ಪಂಚಮುಖಿಯವರು ಪ್ರತಿ ಮಾಡಿ ಪ್ರಕಟಿಸಿದ್ದಾರೆ.

ಜಾಲಿಹಾಳ, ಬಾದಾಮಿಯ ಆಗ್ನೇಯ ದಿಕ್ಕಿನಲ್ಲಿ ೧೨ ಕಿ.ಮೀ. ಅಂತರದಲ್ಲಿರುವ ದೊಡ್ಡ ಸುಶಿಕ್ಷಿತ ಗ್ರಾಮ; ಬಾಗಲಕೋಟ, ಗದಗ, ಕೊಪ್ಪಳ ಜಿಲ್ಲೆಗಳ ಕೂಟ ಸ್ಥಳದಲ್ಲಿ ನೆಲೆಸಿದೆ (ಬಾದಾಮಿ), ರೋಣ, ಗದಗ ರಸ್ತೆ ದಕ್ಷಿಣಕ್ಕೆ ದೊಡ್ಡ ಹಳ್ಳ, ಉತ್ತರಕ್ಕೆ ಗುಡ್ಡದ ಸಾಲುಗಳು ಹಬ್ಬಿವೆ. ಕಪ್ಪು, ಕೆಂಪು ಎರಡೂ ಪ್ರಕಾರದ ಭೂಮಿಯಿದ್ದು, ಎಲ್ಲ ತರಹದ ಬೆಳೆಗಳನ್ನು ಬೆಳೆಯಲಾಗುತ್ತಿದೆ. ಊರ ಮಧ್ಯದಲ್ಲಿ ನಾಲ್ಕು ಫರ್ಲಾಂಗ್ ಸುತ್ತಳತೆಯ ಚೌಕಾಕಾರದ ಆವರಣದಲ್ಲಿ ಅರಮನೆಯ ಕಟ್ಟಡವಿತ್ತು. ಅದರ ನಾಲ್ಕೂ ಮೂಲೆಗಳಿಗೂ ಒಂದೊಂದು ಹುಡೆ (ಬತೇರಿ), ಸುತ್ತಲೂ



ಕೋಟೆ ಗೋಡೆ, ಅದರ ಹೊರಮಗ್ಗಲು ಅಗಳತ (ಕಂದಕ)- ಇವುಗಳ ಅವಶೇಷಗಳು ೬೦ ವರ್ಷಗಳ ಹಿಂದೆ ಇದ್ದುದನ್ನು ನಾನು ನೋಡಿರುವೆ. ಅಲ್ಲಲ್ಲಿ ಕೋಣೆಗಳ ಬಿದ್ದ ಕಟ್ಟಡ, ಗೋಡೆ, ಗಾರೆಗಂಟಿದ ಕಲ್ಲು ಉಂಡೆಗಳು, ಗಾರೆಯ ನೆಲಗಟ್ಟು, ಹುಡೆಗಳ ದುಂಡಾದ ತೆಗ್ಗು, ಕಲ್ಲಿನ ದುಂಡಾದ ಅಡಿಪಾಯ ಇದ್ದವು. ಈಗ ಅಲ್ಲಿ ನಿವೇಶನ, ಮನೆಗಳಾಗಿವೆ. ಈ ಓಣಿಗೆ ಈಗಲೂ 'ಅರಮನಿ' ಎಂದೇ ಕರೆಯುತ್ತಾರೆ. ಹಿಂದೆ ನೆಲ ಹಡ್ಡುವಾಗ ಹೊನ್ನು ದೊರೆತ ಉದಾಹರಣೆಗಳಿಲ್ಲ. ಆದರೆ ಪ್ರಾಣಿಗಳ (ಆಡು-ಕುರಿ) ಎಲವುಗಳು ಅಲ್ಲಲ್ಲಿ ಹೆಚ್ಚಾಗಿ ಹೊರಬರುತ್ತಿದ್ದವು. ದೇಸಾಯರ ಮಾಂಸಾಹಾರ ನೆನೆಸಿಕೊಂಡು ಜನ ಹಾಸ್ಯ ಮಾಡುತ್ತಿದ್ದರು.

**ಕಟ್ಟಡಗಳು, ಶಿಲ್ಪಕಲೆ:** ಊರ ಸುತ್ತಲೂ ಕೋಟೆ ಗೋಡೆ ಇತ್ತು. ಅರಮನೆ ಕೋಟೆಗೋಡೆಯ ಸುತ್ತಲೂ ಇದ್ದ ಅಗಳತದ ಒಂದು ಬಂಡೆ (ಒಡ್ಡು) ಈಗ ರಸ್ತೆಯಾಗಿದ್ದು, ಅದಕ್ಕೆ ಅಗಳತೊಂಡಿ ಅನ್ನುತ್ತಾರೆ. ಅರಮನೆ ಆವರಣದಲ್ಲಿಯೇ ಹನುಮಂತ ದೇವರ (ಜಾಳಪ್ಪ) ಗುಡಿ ಇದೆ. ಇದೇ ಆವರಣದಲ್ಲಿ ಅಂತರಗಂಗೆ ಎಂಬ ದೊಡ್ಡ ಬಾವಿ, ಇತ್ತೀಚಿನವರೆಗೂ ಅಶ್ವತ್ಥ ವೃಕ್ಷ, ಅದರ ಸುತ್ತಲೂ ಎತ್ತರವಾದ ಕಟ್ಟೆ ಇದ್ದವು. ಆವರಣಕ್ಕೆ ಹೊಂದಿಕೊಂಡು ಪಶ್ಚಿಮದಲ್ಲಿ ಪೂರ್ವಾಭಿಮುಖವಾಗಿ ವೆಂಕಟೇಶ್ವರನ ದೊಡ್ಡ ದೇವಾಲಯ



ವಿದ್ದು, ಸುಸ್ಥಿತಿಯಲ್ಲಿದೆ, ಸುಂದರವಾಗಿದೆ. ಕಂಬಗಳಲ್ಲಿ ದಶಾವತಾರಗಳನ್ನು ಕೆತ್ತಲಾಗಿದೆ. ೪೦೦ ವರ್ಷಗಳ ಹಿಂದೆ ಹಂಪಿಯ ಚಕ್ರತೀರ್ಥದಲ್ಲಿ ದೊರೆತ ಈ ವೆಂಕಟೇಶ್ವರ ಮೂರ್ತಿಯನ್ನು ದೇಸಾಯರು ತಂದು ಪ್ರತಿಷ್ಠಾಪಿಸಿದರೆಂದು ಪ್ರತೀತಿ. ಅಂತರಾಳದ ಬಾಗಿಲ ಮೇಲೆ ಗಜಲಕ್ಷ್ಮಿಯ ಉಬ್ಬು ಶಿಲ್ಪವಿದೆ. ಇದು ವಿಜಯನಗರ ಶೈಲಿಯ ಗುಡಿಯೆಂದು ತಿಳಿಯಲ್ಪಡುತ್ತದೆ. ಈ ದೇವರ ಪೂಜೆಗೆಂದು ಅರಸರು ಆನೆಗೊಂದಿಯಿಂದ ವೈಖಾನಸ ಬ್ರಾಹ್ಮಣ



ರನ್ನು ಕರೆತಂದರು. ಈಗಲೂ ಅವರೇ ಮುಂದುವರೆದಿದ್ದಾರೆ. ಇವರು ವೈಷ್ಣವರಾಗಿದ್ದು ಮೂರು ನಾಮ ಧರಿಸುತ್ತಾರೆ. ಆದರೆ ಶ್ರೀವೈಷ್ಣವರಲ್ಲ. ಇವರಿಗೆ ದೇಸಾಯರು ೬೦ ಎಕರೆ ಭೂಮಿಯನ್ನು ಉಂಬಳಿ ಹಾಕಿಕೊಟ್ಟಿದ್ದು, ಇದನ್ನು 'ವೆಂಕಟರಮಣನ ಮಾನೆ' ಎಂದು ಕರೆಯುತ್ತಾರೆ.

ಅರಮನೆಯಿಂದ ಪಶ್ಚಿಮಕ್ಕೆ ಅರ್ಧ ಕಿ.ಮೀ. ಉದ್ದದ ವಿಶಾಲ ರಾಜಬೀದಿ ಕಂಗೊಳಿಸುತ್ತಿದೆ. ಇದು ಜಾತ್ರೆಯ ಸಮಯದ ರಥಬೀದಿಯೂ ಹೌದು. ರಾಮದೇವರ ಗುಡಿ, ವಿಠೋಬದೇವರ ಗುಡಿ, ಬಸವಣ್ಣದೇವರ ಗುಡಿ, ಹಿರೇಮಠ, ಚೌಕಿಮಠಗಳು, ಈಶ್ವರ ದೇವಾಲಯ, ಗರಡಿ ಮನೆಗಳು ಈ ರಾಜಬೀದಿಗೆ (ಬಜಾರ) ಹೊಂದಿಕೊಂಡೇ ಇವೆ. ಅರಮನೆಯ ಉತ್ತರದಲ್ಲಿ ಊರ ಸುತ್ತಲಿನ ಕೋಟೆ ಗೋಡೆಯಲ್ಲಿ ಅಗಸೆಯ ಬಾಗಿಲು ಇತ್ತು. ಈಗ ಈ ಸ್ಥಳದಲ್ಲಿ ಗ್ರಾಮ ಪಂಚಾಯಿತಿ ಕಟ್ಟಡ ಆಗಿದೆ. ಅರಮನೆ ಮತ್ತು ಅಗಸೆಯ ಮಧ್ಯೆ ದೊಡ್ಡ ಬಯಲು ಇದ್ದು, ಈಗಲೂ ಕಾರಹುಣ್ಣಿಮೆ ದಿನ ಎತ್ತು ಓಡಿಸಿ ಇಲ್ಲಿಯೇ 'ಕರಿ' ಹರಿಯುತ್ತಾರೆ. ಈ ಬಯಲಿನ ಅಂಚಿನಲ್ಲಿ ಈಗ ಧ್ವಜದ ಕಟ್ಟೆ, ಸಭಾ ವೇದಿಕೆ ಕಟ್ಟಿದ್ದಾರೆ. ಅರಮನೆ ಪಕ್ಕದಲ್ಲಿಯೇ ಪೂರ್ವಕ್ಕೆ ನಿಲೂಗಲ್ಲ ಹುಚ್ಚಪ್ಪಯ್ಯನ ಮಠದ ದೊಡ್ಡ ನಿವೇಶನ, ಅದರಲ್ಲಿ ಲಿಂಗಮುದ್ರೆ ಕಲ್ಲು ಇದ್ದವು. ಈಗ ಇಲ್ಲಿ ಪ್ರಾಥಮಿಕ ಶಾಲೆಗಳ ಹೊಸ ಕಟ್ಟಡ ಕಟ್ಟಿದ್ದಾರೆ.

ಊರಿನ ಉತ್ತರಕ್ಕೆ ೧ ಮೈಲು ದೂರದಲ್ಲಿರುವ ಗುಡ್ಡದ ಮೇಲೆ ದೇಸಾಯರು ಭವ್ಯ ಬತೇರಿ (ಹುಡೆ) ಕಟ್ಟಿಸಿದ್ದಾರೆ. ಇಲ್ಲಿ ತೋಪು ಇತ್ತಂತೆ. ಹುಡೆಯ ಮೇಲುಗಡೆ ಚಿಕ್ಕಗಚ್ಚಿನ ಬಾವಿ (ಆಳವಾದ ಡೋಣಿ) ಇದೆ. ತೋಪಿನ ಮದ್ದಿಗೆ ಕಿಡಿ ಹಾಕಿದ ಕೂಡಲೇ ಸೈನಿಕನು ನೀರಲ್ಲಿ ಮುಳುಗುತ್ತಿದ್ದನಂತೆ. ಮದ್ದು ಹಾರಿದ ಭಾರಿ ಶಬ್ದಕ್ಕೆ ಕಿವಿ ಪಟಲಕ್ಕೆ ಧಕ್ಕೆ ಆಗಬಾರದೆಂದು ಈ ಉಪಾಯ. ಹುಡೆಯ ಕಲ್ಲಿನ ಚಿಕ್ಕ ಬಾಗಿಲ ಮೇಲೆ ಶಂಖ, ಚಕ್ರ, ನಡುವೆ ಮೂರು ನಾಮಗಳ ಉಬ್ಬು ಶಿಲ್ಪವಿದೆ. ಉತ್ತರ ಕರ್ನಾಟಕದ ಈ ಕ್ಷತ್ರಿಯ ಅರಸರು ಶ್ರೀ ವೈಷ್ಣವ ಅಂದರೆ ರಾಮಾನುಜೀಯ ಪಂಥದ ಅನುಯಾಯಿಗಳಾಗಿದ್ದರೆಂಬುದೊಂದು ವಿಶೇಷ. ವಿಜಯನಗರ ಸಾಮ್ರಾಜ್ಯ ಹಾಳಾದ ಮೇಲೂ ಈ ಸಂಸ್ಥಾನಿಕರು (ಆಂಧ್ರದಲ್ಲಿರುವ) ಪೆನುಗುಂಡೆ. ಚಂದ್ರಗಿರಿಗಳಿಗೆ ಹೋಗಿ ವಿಜಯನಗರ ಅರಸರ ವಂಶಿಕರಿಗೆ ಕಾಣಿಕೆ ಸಲ್ಲಿಸಿ ಬರುತ್ತಿದ್ದರಂತೆ.

ಊರ ಹೊರಗೆ (ಉತ್ತರದಲ್ಲಿ) ತೋಟಗೇರ ಹೊಲದಲ್ಲಿ ಈ ರಾಜರ ೩-೪ ಸಮಾಧಿ, ಕಟ್ಟೆಗಳಿವೆ. ಒಂದಂತು ದೊಡ್ಡದಾಗಿದ್ದು, ಕಲಾತ್ಮಕವಾಗಿದೆ. ಕಾಲ ೧೬ ಅಥವಾ ೧೭ನೆಯ ಶತಮಾನ. ಪೂರ್ವಕ್ಕೆ ಮುಖ ಮಾಡಿದ ಇದು ಕೆಂಪು ಮರಳು ಶಿಲೆ ಮತ್ತು ಗಾರೆಗಳಿಂದ ಕಟ್ಟಲ್ಪಟ್ಟಿದೆ. ಇದಕ್ಕೆ ಗರ್ಭಗೃಹ ಮಾತ್ರ ಇದೆ. ದ್ವಾರಬಂಧದಲ್ಲಿ ಎರಡು ನಿರಾಲಂಕಾರ ಶಾಖೆಗಳಿವೆ. ಹೊರ ಭಿತ್ತಿಯಲ್ಲಿ ಕುರುಡು ಕಮಾನಿನ ಅಲಂಕಾರವಿದೆ. ಮೇಲ್ಕಟ್ಟಡದಲ್ಲಿ ಚಜ್ಜು ಭಾಗವಿದೆ. ಅದರ ಮೇಲೆ ಕಂಗುರಗಳ ಅಲಂಕಾರವಿದೆ. ಗುಮ್ಮಟವಿದ್ದು ಅದಕ್ಕೆ ಪದ್ಮದ ಅಲಂಕಾರವಿದೆ. ಈ ಕಟ್ಟಡದ ಎಲ್ಲ ಭಾಗಗಳನ್ನು ಪರಿಶೀಲಿಸಲಾಗಿ, ಇದು ಇಂಡೋಸಾರ್ಸನಿಕ್ ಶೈಲಿಯದಾಗಿದೆ ಎಂದು ಹೇಳಬಹುದು. ಬಾದಾಮಿ ಪ್ರದೇಶದಲ್ಲಿ ಇಂಡೋ ಅರಬಿಯನ್ ಶೈಲಿಯಲ್ಲಿ ರಚಿತವಾದ ದೇವಾಲಯಗಳುಂಟು. ಉದಾ: ಹೊಸಕೋಟೆಯ ದೇವಾಲಯ. ಇದನ್ನು ಪುನರ್ರಚಿಸುವಾಗ ಕಮಾನುಗಳ ಆಕಾರ, ಗರ್ಭಗೃಹದ



ಮೇಲೆ ಗುಮ್ಮಟ ಮಾಡಲಾಗಿದೆ. ಜಾಲಿಹಾಳದ ದೇಸಾಯರ ಸಮಾಧಿಯೂ ಇದೇ ಶೈಲಿಯಲ್ಲಿ ರಚಿತವಾಗಿದೆ.



ಸಮಾಧಿಗಳ ಪಕ್ಕದಲ್ಲಿ ಗಟ್ಟಿಯಾಗಿರುವ ಸುಂದರ ಏತದ ಬಾವಿ ಇದೆ. ಇದನ್ನು ವೆಂಕಪ್ಪ ದೇಸಾಯಿ ಕಟ್ಟಿಸಿದ್ದರಿಂದ ಅವನ ಹೆಸರಿನಲ್ಲಿ 'ಎಂಕಾಬಸಿ ಬಾವಿ' ಎನ್ನುತ್ತಾರೆ. ಅರಮನೆಗೆ ಬೇಕಾದ ಕಾಯಿಪಲ್ಲೆ, ಹಣ್ಣು, ಹೂಗಳನ್ನು ಈ ತೋಟದಲ್ಲಿ ಬೆಳೆಸಲಾಗುತ್ತಿತ್ತು. ಊರಲ್ಲಿ ಮೂರು ಮಸೀದಿ, ಒಂದು ದರಗಾ (ಟೆಕ್ಕೆ) ಇವೆ. ಟಿಪ್ಪುಸುಲ್ತಾನ ಬಾದಾಮಿ ಕಡೆ ಬಂದಾಗ ಈ ದರಗಾದಲ್ಲಿ ಒಂದು ದಿನ ತಂಗಿದ್ದನೆಂದು ಹೇಳುತ್ತಾರೆ. ಗ್ರಾಮ ದೇವತೆಗಳಾದ ದ್ಯಾಮವ್ವ, ದುರ್ಗಾಮಾತೆಯ ಗುಡಿಗಳೂ ಇವೆ.

**ಆಡಳಿತ ಸ್ವರೂಪ:** ಈ ಕುರಿತು ನಿಖರ ಅಂಶಗಳು ದೊರೆಯುವುದಿಲ್ಲ. ಆದರೆ ಸುರನೀಸ, ಫಡನೀಸ, ಖಾಸನೀಸ, ಸಬನೀಸ ಮತ್ತು ಚಿಟ್ನೀಸರೆಂಬ ಕಾರಭಾರಿಗಳಿದ್ದರು. ಈ ಹೆಸರಿನ ಮನೆತನಗಳು ಊರಲ್ಲಿವೆ. ಕೆಲವರು ಊರು ಬಿಟ್ಟಿದ್ದಾರೆ. ಬಾಣದ, ಪಾಗಾದ, ಮೇಟಿ, ಚೋರಗಸ್ತಿ, ತಳವಾರ, ಭೋವಿ, ಬಳಿಯೆಲಿ, ಲಗಳಿ, ಕೊಟ್ವಗಿ, ತೋಟಗೇರ, ಬಾರಕೇರ, ಚೋಪದಾರ, ದಳವಾಯಿ, ಗ್ರಾಮ ಪುರೋಹಿತ ಮೊದಲಾದ ಆಡಳಿತ ಮತ್ತು ಸೇವಾವರ್ಗದ ವಂಶಜರು ಅವರವರ ಅನ್ವರ್ಥಕ ಹೆಸರಿನಿಂದ ಗ್ರಾಮದಲ್ಲಿದ್ದಾರೆ. ಈ ಊರಲ್ಲಿ ಸಾಮಾನ್ಯವಾಗಿ ಎಲ್ಲ ಕಸಬಿನವರೂ ಇದ್ದಾರೆ.

'ಗಿರಿತಿಮ್ಮಣ್ಣನವರ' ಮನೆತನದವರು ಸೈನ್ಯದ ಮುಖ್ಯಾಧಿಕಾರಿಯಾಗಿದ್ದರಂತೆ. ಈ ಹೆಸರಿನ ೮-೧೦ ಮನೆಗಳಿವೆ. ಇವರು ಲಿಂಗಾಯತ ಪಂಚಮಸಾಲಿಗಳು. ಆದರೆ ಇವರ ಮನೆದೇವರು ತಿರುಪತಿ ವೆಂಕಟರಮಣ. ಇದೇ ಊರಿನ ಇವರ ಸಂಬಂಧಿಗಳಾದ ಬಾಣದವರ ಮನೆದೇವರು ಬಾದಾಮಿ ಗುಡ್ಡದ ಮೇಲಿರುವ ರಂಗನಾಥ. ಲಕ್ಷ್ಮೀ ವೆಂಕಟೇಶ ಎಂದೂ ಈ ದೇವರನ್ನು ಕರೆಯುತ್ತಾರೆ. ಮೆಟ್ಟಿಲು ಏರುವಾಗ ಕೆಳಗಡೆ ಲಕ್ಷ್ಮಿಯಮೂರ್ತಿ ಇದೆ. ರಂಗನಾಥನದು ಮಾನವಾಕಾರದ ಮೂರ್ತಿ ಅಲ್ಲ. ರೂಪವಿಲ್ಲದ ಒಂದು ಚಿಕ್ಕ ಶಿಲೆ ಮಾತ್ರ. ಈ ಎರಡೂ ಮನೆತನದವರು ತಮ್ಮ ಲಗ್ನಪತ್ರಿಕೆಗಳ ಮೇಲೆ 'ಲಕ್ಷ್ಮೀವೆಂಕಟೇಶ್ವರ ಪ್ರಸನ್ನ' ಎಂದು ಬರೆದುಕೊಳ್ಳುತ್ತಾರೆ. ಇವರ ಈ ವೈಷ್ಣವ ಮನೆದೇವರ ಪರಂಪರೆ ಕುತೂಹಲಕರ ಮತ್ತು ಸಂಶೋಧನಾಸಕ್ತಿಯ ವಿಷಯ, 'ದಳವಾಯಿ', 'ಚಿಕ್ಕಬಾವಿ' ಮನೆತನದವರು ಸೈನ್ಯದಲ್ಲಿ ಅಧಿಕಾರಿಗಳಾಗಿದ್ದರಂತೆ. ಇವರು ಕುರುಬರು. ವಾಲ್ಮೀಕಿ ಮತದ 'ಅಮ್ಮಣ್ಣವರ' ಮನೆತನದ ಪೂರ್ವಜರು ಶಿರೂರದವರಾಗಿದ್ದು ಶಿರೂರ ದೇಸಾಯರ ಸೈನ್ಯದಲ್ಲಿ ಇಲ್ಲಿಗೆ ಬಂದು ನೆಲೆಸಿದರಂತೆ. ಶೂರ ಹಾಗೂ ಸ್ವಾಮಿನಿಷ್ಠರಾದ ಇವರನ್ನು ರಾಜರು ತಮ್ಮ ಅಂಗರಕ್ಷಕರನ್ನಾಗಿ (ಬಾಡಿಗಾರ್ಡ್) ನೇಮಿಸಿಕೊಂಡಿದ್ದರಂತೆ. ಇವರ ಉಪಜೀವನ, ಕುದುರೆಯ 'ಡಾಣಿ' (ಕಾಳಿನ ಆಹಾರ)ಗೆಂದು ೧೬ ಎಕರೆ ಎರೆಹೊಲ, ವಾಸಕ್ಕೆ, ಕುದುರೆ ಪಾಗಾಕ್ಕೆ ಅರಮನೆ ಪಕ್ಕದಲ್ಲಿ ಅರ್ಧ ಎಕರೆಯಷ್ಟು ನಿವೇಶನ ಕೊಟ್ಟರು. ಅರಮನೆಯ ವಿಶೇಷ ಭೋಜನಕ್ಕೆ ಇವರನ್ನು ಬಾಜಾ, ಭಜಂತ್ರಿ, ಹಗಲು ದೀವಟಿಗೆಗಳೊಂದಿಗೆ, ಆಮಂತ್ರಿಸಲಾಗುತ್ತಿತ್ತಂತೆ. ಈ ಮನೆತನದಲ್ಲಿ ಈಗಲೂ 'ಅಮ್ಮಣ್ಣಪ್ಪ' ಎಂಬ ಹೆಸರಿನ ವ್ಯಕ್ತಿ ಇದ್ದಾನೆ.

**ಸಾಂಸ್ಕೃತಿಕ ಪರಂಪರೆ:** ರಾಜರು ವಿದ್ಯಾಪಕ್ಷಪಾತಿಗಳೂ, ಸಂಸ್ಕೃತಿ ಪ್ರೇಮಿಗಳೂ ಆಗಿದ್ದರು; ವಿದ್ವಾಂಸರನ್ನು ಪ್ರೋತ್ಸಾಹಿಸುತ್ತಿದ್ದರು. ಪವಾಡ ಪುರುಷ ಅವರಾದಿ ಫಲಹಾರೇಶ್ವರ ಶಿವಯೋಗಿಗಳ ಬಾಲಲೀಲೆಗಳಿಗೆ ಮಾರುಹೋದ ದೊರೆ ಅಚ್ಯುತ ನಾಯಕನು ಅವರನ್ನು ಬರಮಾಡಿಕೊಳ್ಳಲು, ಅವರು ಇಲ್ಲಿಯ ಹಿರೇಮಠದಲ್ಲಿ ವಾಸವಾಗಿದ್ದು, ಮುಂದೆ ಕಂಬಿಯವರೊಡನೆ ಶ್ರೀಶೈಲಕ್ಕೆ ಹೊರಟು ಹೋದರು. ಪಟ್ಟದಕಲ್ಲಿನ ರಾಚೋಟೇಶ್ವರ, ನವಿಲುಗುಂದದ ನಾಗಲಿಂಗಸ್ವಾಮಿಗಳ ಪವಾಡಗಳ ಭೂಮಿ ಈ ಜಾಲಿಹಾಳ. ಈ ಊರಲ್ಲಿ ಎರಡು ಬ್ರಾಹ್ಮಣ ಓಣಿಗಳಿದ್ದು, ಆಗ ಹಲವಾರು ವಿದ್ವಾಂಸರಿದ್ದರು.

ಪ್ರಸಿದ್ಧ ವಿಮರ್ಶಕ, ಕವಿ ವಿ.ಕೃ. ಗೋಕಾಕರ ಪೂರ್ವಜರು, ಉತ್ತರಭಾರತದಲ್ಲಿ ದಿಗ್ವಿಜಯಗೈದ ತಪಸ್ವಿ ಬ್ರಹ್ಮಾನಂದರು ಜಾಲಿಹಾಳದವರು, ವಿ.ಕೃ. ಗೋಕಾಕ್‌ರ ತಂದೆಯ ದತ್ತು ಮನೆತನದ ಹೆಸರು ಗೋಕಾಕ ಅವರ ಚಿಕ್ಕಪ್ಪಂದಿರ ಅಡ್ಡ ಹೆಸರು ಜಾಲಿಹಾಳ. ಪ್ರಸಿದ್ಧ ಸಂಶೋಧಕ ಆರ್.ಎಸ್. ಪಂಚಮುಖಿ, ಸಾತ್ವಿಕ ಗುರುಚಾರ್ಯ ಜಾಲಿಹಾಳ, ಕುಂದಾಪುರ ವ್ಯಾಸರಾಯ ಸ್ವಾಮಿ ಮಠದಲ್ಲಿ ಆಸ್ಥಾನ ಪಂಡಿತರಾಗಿದ್ದ ಶ್ರೀನಿವಾಸಾಚಾರ್ಯ ಜಾಲಿಹಾಳ, ಸಂಸ್ಕೃತ 'ನ್ಯಾಯ ಸುಧಾ'ವನ್ನು ಕನ್ನಡಕ್ಕೆ ಅನುವಾದಿಸಿದ ಕೇಶವಾಚಾರ್ಯ ಜಾಲಿಹಾಳ. ಇವರೆಲ್ಲ ಕಳೆದ ಶತಮಾನದ ಆದಿಯಲ್ಲಿ ಜಾಲಿಹಾಳದಲ್ಲಿ ದೊರೆತ ವಿದ್ಯೆಯ ಅಡಿಪಾಯದ ಮೇಲೆ ರೂಪುಗೊಂಡ ವಿದ್ವಾಂಸರು. ತಮ್ಮ ಸಕಲ ಆಸ್ತಿಯನ್ನು ಬೆಳಧಡಿಯ ಶ್ರೀರಾಮ ಮಂದಿರಕ್ಕೆ ಅರ್ಪಿಸಿದ ತ್ಯಾಗಿ. ಪ್ರಸಿದ್ಧ ಆಧ್ಯಾತ್ಮ ಜೀವಿ ದಿ. ಗಾಡಗೋಳಿ ಭೀಮರಾಯರು ಇಲ್ಲಿಯವರೆ. ಆಗಿನ ಶಾಸ್ತ್ರ ಪಂಡಿತರ ವಂಶಜ ವಿದ್ವನ್ಮಣಿ ಗಂಗೂರು ರಾಮಾಚಾರ್ಯರು ನಡೆಸುತ್ತಿದ್ದ ಸಂಸ್ಕೃತ ಪಾಠಶಾಲೆ ಇತ್ತೀಚಿನವರೆಗೆ ಇತ್ತು. ವೆಂಕಟೇಶ್ವರ ಜಾತ್ರೆ ಈಗಲೂ ಪ್ರತಿವರ್ಷ ಸಕಲ ಸಂಪ್ರದಾಯಗಳೊಂದಿಗೆ ಜರುಗುತ್ತದೆ. ಮೊದಲು ಒಂಬತ್ತು ದಿನ (ಭಾರತ ಹುಣ್ಣಿಮೆಯಿಂದ) ವಿವಿಧ ದೇವತಾ ಮೂರ್ತಿಗಳ ಉತ್ಸವ (ಮೆರವಣಿಗೆ) ನಡೆಯುತ್ತದೆ. ಆಗ ಹಲವಾರು ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗುತ್ತವೆ. ತೇರು ತಲುಪುವ ಪಾದಗಟ್ಟೆಯಲ್ಲಿರುವ ಸಂಜೀವಪ್ಪನ (ಮಾರುತಿ) ಮೂರ್ತಿಯ ಕೆಳಗಿನ ಕರಿಕಲ್ಲಿನ ಪೀಠದಲ್ಲಿ ೩-೪ ಸಾಲುಗಳ ಬರಹವಿರುವುದು ಗುಡಿಯ ಜೀರ್ಣೋದ್ಧಾರದ ಕಾಲಕ್ಕೆ ಮೊನ್ನೆ ತಾನೆ ಗೊತ್ತಾಗಿದೆ (ವಿಷಯ ವಿನ್ನೂ ತಿಳಿದಿಲ್ಲ). ಚಿತ್ರಗಾರ ಮೊದಲಾದ ಹಲವಾರು ಕಲಾಕಾರರು ಇಲ್ಲಿ ಬೆಳಗಿದ್ದಾರೆ. ಮೊದಲಿನಿಂದ ಬೆಳೆದು ಬಂದಿರುವ ಜಾತಿ, ಸೌಹಾರ್ದ ಈ ಊರಿನ ಇನ್ನೊಂದು ವೈಶಿಷ್ಟ್ಯ. ಬ್ರಿಟಿಷರು ಈ ಸಂಸ್ಥಾನವನ್ನು ರದ್ದುಗೊಳಿಸಿ ತಮ್ಮ ರಾಜ್ಯಕ್ಕೆ ಸೇರಿಸಿಕೊಂಡು (ಶಾ.ಶಕೆ ೧೭೬೬ನೇ ಮಾಘ ಮಾಸ ಅಂದರೆ ಕ್ರಿ.ಶ. ೧೮೪೫) ೨೨ ವರ್ಷಗಳ ನಂತರ ಈ ಊರಲ್ಲಿ ಕನ್ನಡ ಪ್ರಾಥಮಿಕ ಶಾಲೆಯನ್ನು ದಿ. ೨೭-೭-೧೮೬೭ರಂದು ಸ್ಥಾಪಿಸಿದರು.

**ಕೆಲವು ವಿಭಿನ್ನ ಘಟನೆಗಳು:** ಕೆಲವು ರಾಜರು ಸ್ತ್ರೀಲೋಲುಪರಾಗಿದ್ದುದು ತಿಳಿದುಬರುತ್ತದೆ. ಒಂದು ಉದಾಹರಣೆ. ಸಮೀಪದ ಹಿರೇ ನಸಬಿ ಗ್ರಾಮದಲ್ಲಿದ್ದ ತರುಣ ಸುಂದರ ಗೃಹಿಣಿಯನ್ನು ತನ್ನಲ್ಲಿಗೆ ಕಳಿಸಿಕೊಡಲು ರಾಜ ಆಜ್ಞಾಪಿಸುತ್ತಾನೆ.

ಅವಳು ಬರುವುದಿಲ್ಲ. ಅವಳನ್ನು ಕರೆದೊಯ್ಯಲು ತಾನು ಬರುವುದಾಗಿ ರಾಜ ಹೇಳಿಕಳಿಸುತ್ತಾನೆ. ಆದರೆ ಅವಳು ತನ್ನನ್ನು ಜೀವಂತ ಹೂತುಬಿಡಲು ಮನೆಯವರಿಗೆ ದುಂಬಾಲು ಬಿದ್ದು ಹುಗಿಯಲ್ಪಡುತ್ತಾಳೆ. ರಾಜ ಬಂದು ನಿರಾಶನಾದರೂ, ಅವಳ ಶೀಲನಿಷ್ಠೆಗೆ ಮೆಚ್ಚಿ ಆ ಮನೆಯವರಿಗೆ ಜಮೀನು ಉಂಬಳಿ ಕೊಡುತ್ತಾನೆ. ಆಕೆಯ ಹೆಸರಿನ ಚಿಕ್ಕ ಗುಡಿ ಇಂದಿಗೂ ಆ ಊರಲ್ಲಿದೆ. ಅವಳ ವಂಶದವರೂ ಇದ್ದಾರೆ. ಆಕೆಯ ಹೆಸರು ರೇವಕ್ಕ.

ಗುಡ್ಡದ ಮೇಲಿನ ಹುಡೆ ಕಟ್ಟುವಾಗ, ಅದು ನಿಲ್ಲದೆ ಬೀಳುತ್ತಿರಲು ಸಂಪ್ರದಾಯದಂತೆ ಅದಕ್ಕೆ 'ಹಾರ' ಕೊಡಬೇಕಾಗುತ್ತದೆ. ಕಾರ ಹುಣ್ಣಿಮೆ ದಿನ ಕರಿಗಡಬು ಉಂಡ ಕಳ್ಳಿ ಸಂಜೀವಪ್ಪ, ದೇಸಾಯಿ ಆಜ್ಞೆಯಂತೆ ಹುಡೇದ ಕಟ್ಟಡದಲ್ಲಿ ಮುಗ್ಧವಾಗಿ ಕುಳಿತುಕೊಳ್ಳುತ್ತಾನೆ. ಆದರೆ ಎಲ್ಲರೂ ಮೋಸದಿಂದ ಜೋರಾಗಿ ಕಲ್ಲು ತುಂಬಿ ಹುಡೆ ಕಟ್ಟಿ ಮುಗಿಸುತ್ತಾರೆ. ಅವನ ನೊಂದ ತಾಯಿ ಸಕ್ರವ್ವ, ದೇಸಾಯಿಯ ರಾಜ್ಯ ಮಣ್ಣುಗೂಡಲೆಂದು ಶಪಿಸುತ್ತಾಳೆ. ಸಂಜೀವಪ್ಪನ ಮನೆಯವರಿಗೆ ೧೨ ಎಕರೆ ಎರೆ ಹೊಲ ನೀಡಲಾಗುತ್ತದೆ. ಸಕ್ರವ್ವ, ಸಂಜೀವಪ್ಪ ಎಂಬ ಹೆಸರಿನ ವ್ಯಕ್ತಿಗಳು ಕಳ್ಳಿ ಎಂಬ ಈ ಅಂಬಿಗರ ಮನೆತನದಲ್ಲಿದ್ದು, ಈ ಭೂಮಿಯನ್ನು ಎಲ್ಲರೂ ಉಪಭೋಗಿಸುತ್ತಿದ್ದಾರೆ.

ಸಮೀಪದ ಹೊಸೂರಿನ ತಿರುಮಲರಾಯನು ಅರಮನೆಯಲ್ಲಿ ಕಾರಕೂನನಾಗಿದ್ದು, ಗುಡ್ಡದ ಕಣಿವೆ ದಾಟಿ ಬೆಳಿಗ್ಗೆ ಬಂದು ಸಂಜೆ ಹೋಗುತ್ತಿದ್ದನು. ವಿಧವೆ ರಾಣಿ (ಬಹುಶಃ ಕೊನೆ ರಾಣಿ) ಯೊಂದಿಗಿನ ಅವನ ಸಲುಗೆಯನ್ನು ಕಂಡು ಸಂಶಯಪಟ್ಟು ಆಕೆಯ ಮೈದುನರು ಅವನನ್ನು ಕಣಿವೆಯಲ್ಲಿ ಬೆನ್ನಟ್ಟಿ ಕೊಂದು ಹಾಕಿದರು. ಅವನ ಸಮಾಧಿ ಅಲ್ಲೆ ಕಣಿವಿ ಹನುಮಪ್ಪನ ಗುಡಿ ಹಿಂದೆ ಸ್ವಲ್ಪ ದೂರದಲ್ಲಿ ದಾರಿ ಪಕ್ಕದಲ್ಲಿತ್ತು. ಅದರ ಮೇಲೆ ಹಾಸುಗಲ್ಲು ಹಾಕಿದ್ದರು. ಇದನ್ನು ತಿರುಮಲರಾಯನ ಕಟ್ಟೆ ಎಂದು ಕರೆಯುತ್ತಿದ್ದರು. ಇವನೊಬ್ಬ ದುಷ್ಟ ಎಂದು ದಾರಿಹೋಕರೆಲ್ಲ ಕಲ್ಲು ಒಗೆದು ಒಂದು ಎತ್ತರದ ರಾಶಿಯಾಗಿತ್ತು. ಒಂದು ಕಡೆ ಸಮಾಧಿ ಕಾಣುತ್ತಿತ್ತು. ಇಂದು ನಾಗರಿಕರ ಪರಿಸರ ಲೂಟಿಯಿಂದಾಗಿ ಈಗ ಅಲ್ಲಿ ಕಲ್ಲಿನ ರಾಶಿಯೂ ಇಲ್ಲ, ಸಮಾಧಿಯೂ ಇಲ್ಲ.

**ಕಾಗದ ಪತ್ರಗಳು:** ಈ ಸಂಸ್ಥಾನದ ವಂಶಿಕರು ಹೊಸೂರು, ಗಾಡಗೋಳಿ (ಕುರುಟ್ಟಿ)ಗಳಲ್ಲಿದ್ದು, ಹೊಸೂರ ದೇಸಾಯರಲ್ಲಿದ್ದ ೨೦-೨೫ ಮೋಡಿ ಭಾಷೆಯಲ್ಲಿರುವ ಕಾಗದ ಪತ್ರಗಳು (ಹಾಗೂ ಕನ್ನಡದಲ್ಲಿರುವ ವಂಶಾವಳಿ) ಒಂದು ವರ್ಷದ ಹಿಂದೆ ಹೊರಬಿದ್ದಿವೆ. ಹೊಸೂರ ದೇಸಾಯಿ ನರಸಪ್ಪ ನಾಯಿಕ ಬಿನ್ ಮುರಾರಿ ನಾಯಿಕ ದೇಸಾಯಿ, ಬಾದಾಮಿ ತಾಲೂಕ ಮಾಮಲೇದಾರ ಕಚೇರಿಯಲ್ಲಿ ಬರೆದುಕೊಟ್ಟ (ದಿ. ೩೧-೧೦-೧೮೮೯) ಕೈಫಿಯತ್ತಿನ ನಕಲೂ ಇದೆ. ಇದನ್ನು ಫೀ ತುಂಬಿ ೦೨-೧೦-೧೯೧೮ರಂದು ಪಡೆಯಲಾಗಿದೆ. (ಪುಟ ೧೪). ಇವುಗಳ ಕನ್ನಡಾನುವಾದವನ್ನೂ ಮಾಡಿಸಲಾಗಿದೆ. ಇವೆಲ್ಲ ಹೆಚ್ಚಾಗಿ ಹಳ್ಳಿಗಳ ಇನಾಮ ಕೊಟ್ಟದ್ದು, ಜಮೀನ ಉಂಬಳಿ ಕೊಟ್ಟದ್ದು, ಲಾವಣಿ ವಸೂಲಿ ಇತ್ಯಾದಿಗೆ ಸಂಬಂಧಿಸಿವೆ. ದೇಸಾಯರಿಗೆ ಕರಾರು ಮಾಡಿದ ಕಾಗದಗಳೂ ಇವೆ. ಇವು ಪೇಶವಾಯಿ, ವಿಜಾಪುರ, ಶಾಹಿ, ಕಂಪನಿ ಸರಕಾರಗಳಿಗೆ ಸಂಬಂಧ ಹೊಂದಿದವುಗಳಾಗಿವೆ. ಬದಾಮಿ ತಾಲೂಕು, ಬೆಳಗಾವಿ ಜಿಲ್ಲೆ ಎಂದು ಹಲವಾರು ಕಡೆ ಬಂದಿವೆ. ಎರಡು ಕಡೆ ಜಾಲಿಹಾಳ ತಾಲೂಕ ಎಂದೂ ಪ್ರಸ್ತಾಪಿಸಲ್ಪಟ್ಟಿರುವುದು ವಿಶೇಷ. ಕಾಗದಗಳಲ್ಲಿ ....... ಜಾಲಿಹಾಳ ದೇಸಾಯಿ ಎಂದು ಸಂಬೋಧಿಸದೆ, ..... ನಾಯಿಕ ದೇಸಾಯಿ ಕಿಲೆ ಬಾದಾಮಿ (ಅಥವಾ ಪರಗಣ ಬದಾಮಿ) ಇವರಿಗೆ..... ಎಂದು ಸಂಬೋಧಿತಸಲಾಗಿ. ಕೆಲವು ಕಾಗದಗಳಲ್ಲಿ ಬೇರೆ ಅಧಿಕಾರಿಗಳಿಗೂ ಸಂಬೋಧನೆಯಾಗಿದೆ. ಕೆಲವಕ್ಕೆ ಇಂಗ್ಲಿಷ್ ತಾರೀಖು, ತಿಂಗಳು ಇವೆ. ಇಸ್ವಿ ಇಲ್ಲ. ಉಳಿದ ಕೆಲವಕ್ಕೆ ಹಿಜರಿ ತಾರೀಖು ತಿಂಗಳ ಇವೆ. ಉದಾ: ೨೪ ಮಾಹೇ ಖೋವಾಲ; ತಾ. ೨೦ ಮಾಹೆ ರಮಜಾನ.

ಜಾಲಿಹಾಳ ೧೮೮ ಹಳ್ಳಿಗಳ ಸಂಸ್ಥಾನವಾಗಿತ್ತೆಂದು ಈ ಕಾಗದಗಳಲ್ಲಿ ಎರಡು ಕಡೆ ಬರುತ್ತದೆ (ಒಂದು ಕಡೆ ೧೯೦ ಹಳ್ಳಿಗಳೆಂದು ಇದೆ). ಈ ಸಂಸ್ಥಾನದ ಹದ್ದಿನಲ್ಲಿ ಈಗಿನ ಯಲಬುರಗಿ (ಪರಗಣಾ), ನರೇಗಲ್ಲ, ಅಬ್ಬಿಗೇರಿ, ಸಂದಿಗವಾಡ, ಯಾವಗಲ್ಲ, ಅರಹುಣಸಿ, ನಿಡಗುಂದಿ, ಮೆಣಸಿ, ಎರೆಬೂದಿಹಾಳ, ನವಿಲಹೊಳೆ, ಬಾದಾಮಿ, ಕೆರೂರು, ಶಿರೂರು, ಗುಳೇದಗುಡ್ಡ, ಕಲ್ಲಿಗ್ರಾಮ (ಕಲ್ಲಿಕೋಟೆ-ಬೇಚರಾಕ) ರುದ್ರಾಪೂರ ಇವು ಹೆಸರಿಸಲ್ಪಟ್ಟಿವೆ. ನರಗುಂದ, ಗಜೇಂದ್ರಗಡ, ಡಂಬಳ, ಬಾಗಲಕೋಟ- ಇವೂ ಪ್ರಸ್ತಾಪಿಸಲ್ಪಟ್ಟಿವೆ. ಆದರೆ ಇವುಗಳೊಡನೆ ಎಂತಹ ಸಂಬಂಧವಿತ್ತೆಂಬುದು ತಿಳಿದುಬರುವುದಿಲ್ಲ. ಜಾಲಿಹಾಳ ದೇಸಾಯರು ಸುಬೇದಾರ ಅಥವಾ ಪ್ರಾಂತಾಧಿಕಾರಿಗಳಾಗಿದ್ದರು.

ಈ ಕಾಗದಗಳಲ್ಲಿ ವಿಶೇಷ ಮಾಹಿತಿಯಾಗಲಿ, ಮಹತ್ವದ ಅಂಶಗಳಾಗಲಿ ಇಲ್ಲ. ಆದರೂ ಆಗಿನವರ ವಿಚಾರ, ಭಾಷೆ ತಿಳಿಯಲು ಕೆಲವು ಉದಾಹರಣೆ ನೋಡಬಹುದು:

೧) ........ ಇವರಿಗೆ, ಸದರಿ ಐದು ಊರು ನಿಮಗೇ ಹುಕುಂ ಮಾಡಿದೆ. ಖಾತೆ ಆದ ಬಗ್ಗೆ ಯಾವ ಹಯ್‌ಗಯ್ ಮಾಡಿಲ್ಲಾ. ಈ ಬಗ್ಗೆ ಮೆಹರಬಾನಗಿ ಮಾಡಿ ಮೌಜೇ ನಿಡಗುಂದ ಇನಾಮ ದಿಮಾಲೆ ಅದೆ. ಖಾತರಿ ಸಲುವಾಗಿ ಶರ್ತಿ ಬಗ್ಗೆ ಒಂದು ಎತ್ತು ತಿನ್ನುವ ಮೂಲ ಜಾರಿ ಮಾಡಿದೆ. ಈ ಪ್ರಕಾರ ಶರ್ತಿಯಂತೆ ಮುಂದೆ ನಡೆಯತಕ್ಕದ್ದು.

೨) ಕೌಲನಾಮಾ ಬಜಾನೇಬ ಹಣಮಿ ನಾಯಿಕ ದೇಸಾಯಿ ಕಿಲೇ ಬದಾಮಿ ಬಾಈ (ಇವರಿಗೆ)- ಮುರಾರಿ ನಾಯಿಕ ತೀರಿದ ನಂತರ ನಿಮ್ಮ ಮೇಲೆ ಮೆಹರ ಬಾನಗಿ ಮಾಡಿ ನಿಮಗೆ ಒಪ್ಪಿಸಿ

ನಡೆಸಿಕೊಟ್ಟಿರುತ್ತದೆ.... ನೀವು ಯಾರ ಕೂಡಾ ಸಂದೇಶಾ ಮಾಡಬಾರದು. ಕೇಳಿ ಮರಾಫದ ಮಾಡಬಾರದು. ದಿವಾಣರ ಮಾತು ಸುಳ್ಳು ಅಂತ ಜಾಹೀರಪಡಿಸುವದು. ನೀವು ಬಿರಣಿ ೬೦೦೦ ರೂಪಾಯಿಗೆ ಕಬೂಲ ಮಾಡಿರುವಿರಿ. ಒಂದು ವೇಳೆ ಮಜಕೂರ ಖಾಬಲ ಖಿದ ಮಾಡಿದರೆ ಅಂಜಿ ಹೊರತು ಫೇಣ ಮತ್ತು ಸೂಡಿಬೇನ ಹಿಮಾಹಾಲವನ್ನು ಕೊಟ್ಟಿದ್ದು ಅದೆ. ಮಜಕೂರ ವಿಲಾಯತಿ ಒಂದೇ ಖಂಡ ಹೊನ್ನ ೬೦೦೦ ಎರಡೂ ಹಪ್ತೆ ಮಾಡಿರುತ್ತದೆ. ಒಂದು ವೇಳೆ ಮಜಕೂರ ಖರೆ ಮಾಡಲಿಕ್ಕೆ ಒಂದು ಹಜಾರ ಕಡಿಮಿ ಮಾಡಿದರೆ ಅದನ್ನು ನೀವೇ ಭರಣಾ ಮಾಡಬೇಕಾಗುವುದು. ಈ ಹುಕುಂ ದಿವಾಣ ಸಾಹೇಬರದು ಅಂತ ತಿಳಿಯಬೇಕು ಮತ್ತು ವಿಲಾಯತಿ ಅಂತ ಸಿವಾಜಿ ಜನರ ಚಿತ್ತ ಅದೆ. ಅದಕ್ಕೆ ಯಾರ ತಕ್ರಾರ ಇಲ್ಲ. ದೇಖರೇಖ ದರಿಬಾದ ನೀವು ಆದೇಶವಿಲ್ಲದೆ ಬಾದಶಾಹೀ ಕೆಲಸದ ಬಗ್ಗೆ ಯಾವುದೇ ಸಂಶಯ ತರದೆ ಒಪ್ಪಬೇಕು ಮತ್ತು ಆ ಪ್ರಕಾರ ಹುಕುಂ ಜಾಹೀರ ಮಾಡಬೆಕು. ಥ. ೨೧ ವದಖು.

೩) ಯಾದಿ ಅಚ್ಚಪ ನಾಯಿಕ ದೇಸಾಯಿ ಪ॥ ಬದಾಮಿ ಇವರ ಕಡೆಗೆ, ಚಾಪ್‌ಮೆನ್ ಸಾಹೇಬ ಅಸಿಸ್ಟೆಂಟ್ ಇನಾಮ ಇವರ ಕಡೆಗೆ-ಕಮಿಶನರ್ ಇನ್‌ಚಾರ್ಜ್ ದೂಬಕಿ ಜಕಾತಿ ಮತ್ತು ಹಕ್ಕದಾರ ವೆಗೈರೆ ಕಮಿಶನರ, ಪ್ರಾಂತ ದಕ್ಷಿಣ ಭಾಗ ಇವರ ಕಡೆಯಿಂದ ಬರಕೊಡುವುದು ಏನೆಂದರೆ-

ನಮಗೆ ಮೌಜೇ ಗಾಡಗೋಳಿ ತಾಲೂಕ ಬದಾಮಿ ಈ ಊರ ದೂಮಾಲ ಅದೆ. ಅಲ್ಲಿಯ ಸನ್ ೧೮೩೮ ಇಸವಿಯ ಲೆಕ್ಕ ಮಾಡಿ ತಪಶೀಲ ತೆಗೆದರೆ ಜಕಾತಿ ಬಹಳ ಆಗುತ್ತದೆ. ಇದೆಲ್ಲ ಮಾಫ ಆಗಿದ್ದರಿಂದ ಖುಲಾಸಾ ಆಗಿದೆ. ಇದರ ಬಗ್ಗೆ ಯಾವುದೇ ದಾವೆ ಇದ್ದಲ್ಲಿ ಸರಕಾರ ಕಡೆಯಿಂದ ಜಾಹೀರ ಮಾಡುವ ಹುಕುಂ ಆಗಿದೆ. ಅದರ ನಕಲ ಕಳಿಸುತ್ತೇವೆ. ಮುದ್ದತ್ ಮುಟ್ಟಿದ ಮೂರು ತಿಂಗಳೊಳಗೆ ಸನದ ಪತ್ರ, ಲೆಕ್ಕ ಪತ್ರದ ಪುರಾವೆ ಕೊಡದೆ ಇದ್ದರೆ ಮತ್ತೆ ೧೫ ದಿನ ಮುದ್ದತ ಕೊಡಲಾಗುವುದು. ಆ ಮುದ್ದತಿನಲ್ಲಿ ಪುರಾವೆ ಆಗದಿದ್ದಲ್ಲಿ ದುಃಖ ಪಡೆಯುವುದು ಮತ್ತು ಪರದೇಸಗೆ ಹೋದ ಅಥವಾ ಬೇರೆ ಯಾವುದೂ ಸಬೂಬ ಕೇಳಲಾಗುವುದಿಲ್ಲ. ಇದನ್ನು ಧ್ಯಾನದಲ್ಲಿ ಇಟಕೊಂಡು ಮುದ್ದತಿನೊಳಗೆ ತಮ್ಮ ಮರ್ಜಿ ಇದ್ದರೆ ತಾವು ಅಥವಾ ಮುಖತ್ಯಾರ ಬರಬೇಕು. ಹಾಗೆ ಆಗದಿದ್ದಲ್ಲಿ ಮುದ್ದತ್ ಮೀರಿ ಹೋಗುತ್ತದೆ. ಮತ್ತು ದಾವೆ ತೆಗೆದು ಹಾಕುತ್ತಾರೆ ಮತ್ತು ಮುಂದೆ ನುಕಾಸನದ ಹೊರತಾಗಿ ಯಾವುದೂ ಫಾಯದೆ ಇಲ್ಲ. ತಾರೀಖ (೧೬) ಮಾಹೆ ನವ್ಹೆಂಬರ್ ಸನ್ ೧೮೫೨ ಇಸವಿ ಮುಕ್ಕಾಂ ಬೆಳಗಾಂವ

**ಚಂತೋ ರಾಮಚಂದ್ರ ಮಜಕೂರ ಖುದ್ದ**

೪) ಸಂಭೋಧನೆಯ ಒಂದು ಮಾದರಿ:

ರಾಜಶ್ರೀ ರಖಮಾಜಿ ಅನಂತ ಹವಾಲದಾರ ಮತ್ತು ಕಾರಕೂನ ಪರಗಣ ಯಲಬರಗೆ ಗೋಸಾವಿ ಇವರಿಗೆ ಶ್ರೀ ಅಖಂಡಿತ ಲಕ್ಷ್ಮಿ ಅಲಂಕ್ರತ ರಾಜಮಾನ್ಯ ಸೇವಕ ರಖಮಾಜಿ ದಾದಾಜಿ ಸುಬೆದಾರ (ಇವರ) ಕೋಮಲ ನಮಸ್ಕಾರ.

**ಜಾಲಿಹಾಳ ದೇಸಾಯರ ವಂಶಾವಳಿ:** ಈ ವಂಶಾವಳಿಯಲ್ಲಿ ಬರುವ ಪ್ರತಿ ದೇಸಾಯಿ ಅಥವಾ ದೇಸಾಯಿಣಿಯ ಹೆಸರಿನ ಮುಂದೆ, ಅವರು  ಯಾರ ಅಧೀನರಾಗಿ ಆಳಿದರೆಂಬುದನ್ನು ತಿಳಿಸಲಾಗಿದೆ. ಮತ್ತು ಅವರು ಆಳಿದ ಅವಧಿಯ ವರ್ಷಗಳ ಸಂಖ್ಯೆ ಬರೆಯಲಾಗಿದೆ. (ಬೇರೆ ಕೆಲವು ವಿವರಗಳೂ ಇವೆ) ಆದರೆ ಆಳಿಕೆ ಪ್ರಾರಂಭಿಸಿದ ಅಥವಾ ಆಳಿದ ಅವಧಿಯ ಕ್ರಿಸ್ತಶಕೆ ಅಥವಾ ಬೇರೆ ಶಕೆ ತಿಳಿಸಿಲ್ಲ.

ಆದರೆ ಕೊನೆ ದೇಸಾಯಿಣಿ ಮೃತಳಾದ ಶಕೆ, ಮಾಸ, ದಿವಸ ತಿಳಿಸಿರುವುದರಿಂದ ಹಿಂದಿನವರು ಆಳಿದ ಅವಧಿಯ ಲೆಕ್ಕವನ್ನು ಕ್ರಿ.ಶ.ದಲ್ಲಿ ತಿಳಿಯಲು ತುಂಬ ನೆರವಾಗಿದೆ. ಕ್ರಿ.ಶ.ದ ವರ್ಷಗಳನ್ನು ಆ ಮೇಲೆ ವಂಶಾವಳಿಗೆ ಸೇರಿಸಿದ್ದೇನೆ. ಹನ್ನೊಂದನೆಯ ದೇಸಾಯಿ ಹಿರೇಪಾವಾಡಿ ನಾಯಿಕ ರಾಜ್ಯವಾಳಿದ ಅವಧಿ ನಮೂದಿಸಲ್ಪಟ್ಟಿಲ್ಲ. ಆದ್ದರಿಂದ ಈ ಅವಧಿಯಲ್ಲಿ ದೇಸಗತಿಯನ್ನು ಮೇಲಿನ ಆಳರಸರು ತಮ್ಮ ಸ್ವಾಧೀನದಲ್ಲಿ (ಅಥವಾ ತಟಸ್ಥವಾಗಿ) ಇಟ್ಟುಕೊಂಡಿದ್ದರೆಂದು ಭಾವಿಸಬೇಕಾಗುತ್ತದೆ. ಹೊಸೂರ ದೇಸಾಯಿಯ ವಂಶಾವಳಿ ಒಳಗೊಂಡ ಇನ್ನೊಂದು ವಂಶಾವಳಿಯಲ್ಲೂ ಅದು (ಆಳಿದ ಅವಧಿ) ಇಲ್ಲ. (ಅಥವಾ ಅದನ್ನು ಪ್ರಮಾದವಶಾತ್ ಬಿಟ್ಟಿದ್ದಾರೇನೋ ಗೊತ್ತಿಲ್ಲ.) ಈ ಪಾವಾಡಿ ನಾಯಿಕ ದೊರೆಯ ಒಬ್ಬ ಮಗ ರಾಮಚಂದ್ರ ನಾಯಿಕ ಹೊಸೂರಿನ ದೇಸಗತಿಗೆ ನೇಮಿಸಲ್ಪಟ್ಟಿದ್ದಾನೆ. ಅಲ್ಲಿಂದ ಹೊಸೂರ ದೇಸಗತಿ ಪ್ರಾರಂಭವಾಗಿ, ಅಲ್ಲಿ ಏಳು ದೇಸಾಯರು ಆಳಿಕೆ ಮಾಡಿದ್ದಾರೆ. ಇನ್ನೊಬ್ಬ ಮಗ ಅಚ್ಚಪ್ಪನಾಯಿಕ ದೇಸಾಯಿ ಸವಣೂರಿನಲ್ಲಿ ೧೬ ವರ್ಷ ಆಳಿದನೆಂದಿರುವುದು ಗಮನಾರ್ಹ ಅಂಶ. ಮತ್ತು ಈ ದೇಸಗತಿಯ ವ್ಯಾಪ್ತಿ ಮತ್ತು ಸಂಬಂಧಗಳನ್ನು ಇದು ತೋರಿಸುತ್ತದೆ. ಪೇಶ್ವೆಯರು ಸವಣೂರನ್ನು ನವಾಬರಿಗೆ ವಾಪಸ್ ಕೊಟ್ಟ ಮೇಲೆ ಸವಣೂರಿನ ಕಂದಾಯ ವಿಭಾಗಕ್ಕೆ ಜಾಲಿಹಾಳ ಸೇರಿದ್ದನ್ನಷ್ಟೇ ಇದು ಸೂಚಿಸುತ್ತದೆ ಎಂದು ಕೆಲವರು ಹೇಳುತ್ತಾರೆ. ಈ ಕುರಿತು ಸ್ಪಷ್ಟನೆಯ ಅಗತ್ಯವಿದೆ.

ವಂಶಾವಳಿಯ ಪ್ರಾರಂಭದಲ್ಲೇ ಇವರು ಮೂಲತಃ ಶಿರೂರ ದೇಸಾಯರು ಎಂಬುದು ದಾಖಲಾಗಿದೆ. ಮೇಲೆ ತಿಳಿಸಿದ ಹೊಸೂರು ದೇಸಾಯರ ಕ್ರಿ.ಶ. ೧೮೪೯ರ ಕೈಫಿಯತ್ತಿನಲ್ಲೂ 'ಮೂಳ ವತನದ ಜಾಗಾ ನಾಯಿಕ ಶಿರೂರ, ತಾ. ಬಾಗಲಕೊಟ' ಎಂದು ಇದೆ. ಇಲ್ಲಿಯವರೆಗೆ ಹಿರಿಯರ ಹೇಳಿಕೆಯಿಂದ ಮೂಲ ಊರು ಶಿರೂರ ಎಂದು ತಿಳಿದದ್ದು ಈಗ ಹಳೆ ದಾಖಲೆಗಳಿಂದ ದೃಢಪಟ್ಟಿದೆ. ಮತ್ತು ಬೇಲೂರಿನ ಮೊದಲ ಹೆಸರು 'ಬೇಲುಗಿರಿ'

# ಜಾಲೀಹಾಳ ಸಂಸ್ಥಾನದ ದೇಸಾಯರ ವಂಶಾವಳಿ

ಅಮಲ ಆನೆಗುಂದಿ ರಾಜರ ಕಾಲಕ್ಕೆ ದೇಶಗತ ಆಳಿದ್ದು ಅಂತೂ ವರ್ಷ ೧೦೪

ಅಮಲ ಬಜಾಪೂರ ಬಾದಸಹನ ಕಾಲಕ್ಕೆ ದೇಶಗತ ಆಳಿದ್ದು ಅಂತೂ ವರ್ಷ ೬೯

| | | |
|---|---|---|
| ವರ್ಷ ೩೨ | ಮೂಲ ಪುರುಷ ನಾರಾಯಣ ಒಡೆಯರ ೧೪೩೨ | ಎಲ್ಲಾ ಕೂಡಿ ಆನೆಗುಂದಿ ರಾಜರ ಕಾಲಕ್ಕೆ ಮತ್ತು ಬಜಾಪೂರ ಬಾದಶಹಾರ ಕಾಲಕ್ಕೆ ಕಾರಬಾರ ಮಾಡಿದ ವರ್ಷ ಅಂತೂ (೧೭೩), ಶಿರೂರ, ತಾಲೂಕ ಬಾಗಲಕೋಟ ನಾಯ್ಕ ಸರ್ವ ಇನಾಂ ಊರ ಎಲ್ಲಾ ಬಾಗ ಕುಲಾಚ್ಚಾರ ಹಾಟೀಲಕಿ ಮತ್ತು ಕುಲಕರ್ಣಿಕಿ ಎಲ್ಲಾ ಹನ್ನೆರಡು ತರಹದ ಬಾಗ ವತನದಾರ ಎಲ್ಲಾ ನಾಯ್ಕ ಉಪಭೋಗ ಮಾಡಿಕೊಂಡು ದೇಶಗತ ಆಳಿದರು. |
| ವರ್ಷ ೩೦ | ರಾಮರಾವ್ ಒಡೆಯರ (೧೪೬೪) | |
| ವರ್ಷ ೪೧ | ಕೃಷ್ಣರಾವ ಒಡೆಯರ (೧೪೬೫) | |
| ವರ್ಷ ೩೯ | ಅಚ್ಚಪ್ಪ ಒಡೆಯರ (೧೫೩೬) | |
| ವರ್ಷ ೩೦ | ತಿಮ್ಮನಾಯ್ಕ ಒಡೆಯರ (೧೫೭೫) | |
| | ಪುತ್ರ ಅನ್ನದಾನ ಕೃಷ್ಣಪ್ಪ ನಾಯ್ಕ ದೇಸಾಯಿ (೧೬೦೫) | ವರ್ಷ ೩೧ ಬದಾಮಿ ತಾಲೂಕು ದೇಶಗತ ಮತ್ತು ನಾಡ ಪಟ್ಟಣಶೆಟ್ಟಿ ಪೈಕಿ ಎಲಬುರಗಿ ಊರ ಎಲ್ಲಾ ನಾಡ ಚೌದರಿ ಮಾಮಲೆ ಬಾಗಲಕೋಟ, ನಾಯ್ಕ ಶಿರೂರ ಕುಲಾಬಾಬ ಕುಲಾಚಾರ ನಾಡಪಟ್ಟಣಶೆಟ್ಟಿ ಇನಾಮಾ ಊರ ಕಲ್ಲಿ ಗ್ರಾಮ ಮತ್ತು ರುದ್ರಾಪೂರ ಸಹಿತ (೧೩೫೫೦೦) ಇಷ್ಟು ಉತ್ಪನ್ನವುಳ್ಳ ರಾಜನು ವಹಿವಾಟ ಮಾಡಿಕೊಂಡು ಆನಂದದಿಂದ ದೌಲತ ಮಾಡಿದ. |
| | ಪುತ್ರ ಗುಡ್ಡದ ತಿಮ್ಮಪ್ಪಾನಾಯ್ಕ ದೇಸಾಯಿ (೧೬೩೬) | ಮೇಲಿನ ದೇಸಾಯ ಅಂಣನು ದೌಲತ ಮಾಡಿದ ಪ್ರಕಾರ ಉಪಭೋಗ ಮಾಡಿದ ವರ್ಷ (೩೬) ವತನ ಬಂದೋಬಸ್ತಿ |
| | ಪುತ್ರ ನರಸಪ್ಪ ನಾಯ್ಕ ದೇಸಾಯಿ ಸರ್ ದೇಸಾಯಿ (೧೬೭೨) | ಮೇಲಿನ ಹಿರಿಯರು ಅನುಭೋಗ ಮಾಡಿದ ಪ್ರಕಾರ ದೌಲತ ಮಾಡುತ್ತಿರಲಿಕ್ಕಾಗಿ ನಡುವೆ ಗುಳೇದಗುಡ್ಡದ ಚಿಲ್ಲರ ಜನರು ಉಪದ್ರ ಮಾಡಲಿಕ್ಕೆ ಹತ್ತಿದರು. ಅದರ ಬಂದೊಬಸ್ತಿ ಮಾಡಿದ ದೌಲತ ಉಪಭೋಗ ಮಾಡಿದ ವರ್ಷ (೧೫) |
| | ಪುತ್ರ ಮುರಾರಿ ನಾಯ್ಕ ದೇಸಾಯಿ ಸರ್ ದೇಸಾಯಿ (೧೬೮೭) | ಮೇಲಿನ ಹಿರಿಯರು ಅನುಭೋಗ ಮಾಡಿದ ಪ್ರಕಾರ ದೌಲತ ಮಾಡಿದ ವರ್ಷ (೧೭) |
| | ಪುತ್ರ ಕದಮನಾಯ್ಕ ದೇಸಾಯಿ ಸರ್ ದೇಸಾಯಿ (೧೭೦೪) | ಹಿರಿಯುರು ಉಪಭೋಗ ಮಾಡಿದ ಪ್ರಕಾರ (೩) ತಿಂಗಳ ದೌಲತ ಮಾಡಿದನು. |
| | ಹಿರೇಪಾವಡಿನಾಯ್ಕ ದೇಸಾಯಿ ಸರ್ ದೇಸಾಯಿ | – |

| | |
|---|---|
| ಅಚ್ಚಪ್ಪನಾಯ್ಕ ದೇಸಾಯಿ ಸರ್‌ದೇಸಾಯಿ (೧೭೦೪) | ಹೊಷೂರ ಕಡೆ<br>ರಾಮಚಂದ್ರ ನಾಯ್ಕ ದೇಸಾಯಿ |

ದೌಲತ ಮಾಡಿದ ಮಾಜ (/?) ಅಮಲದ ವರ್ಷ (೯), ಸವಣೂರನ ವರ್ಷ (೧೬) ಎಲ್ಲಾ ಕೂಡಿ ೨೫ ವರ್ಷ ದೌಲತ್ ಮಾಡಿದನು.

| | |
|---|---|
| ಇಮ್ಮಡಿ ಪಾವಾಡಿನಾಯ್ಕ ದೇಸಾಯಿ ಸರದೇಸಾಯಿ ೧೭೨೯ | ಶಾವು ಸರಕಾರ ಕಾಲಕ್ಕೆ ವರ್ಷ (೩೬) ದೌಲತ |
| ವೆಂಕಪ್ಪನಾಯ್ಕ ದೇಸಾಯಿ ಸರದೇಸಾಯಿ ೧೭೬೫ | ಅಮಲಬಾದಶಾಹಿ ಕಾಲಕ್ಕೆ ವರ್ಷ (೯) ದೌಲತ |
| ವೆಂಕಪ್ಪನಾಯ್ಕ ಇವರ ಹೆಂಡತಿ ಲಕ್ಷ್ಮವ್ವ (ವ) ಪಾವಾಡಿನಾಯ್ಕ (೧೭೭೪) | ಅಮಲ ಪೇಶ್ವೆಯ ಕಾಲಕ್ಕೆ ವರ್ಷ (೧೧) ದೌಲತ) |
| ಹನುಮಪ್ಪನಾಯ್ಕ ದೇಸಾಯಿ<br>ಇಮ್ಮಡಿ ಪಾವಾಡಿನಾಯ್ಕ ದೇಸಾಯಿ (೧೭೮೫) | ಅಮಲ ಹೈದರನ ಕಾಲಕ್ಕೆ ವರ್ಷ (೭) ದೌಲತ |
| ಮುಮ್ಮಡಿ ಪಾವಾಡಿನಾಯ್ಕ್ ದೇಸಾಯಿ<br>ಇವರ ಹೆಂಡತಿ ಕೃಷ್ಣವ್ವ ದೇಸಾಯಿಣಿ (೧೭೯೨) | ಅಮಲ ಹೈದರ ಕಾಲಕ್ಕೆ ವರ್ಷ (೫೨),<br>ಅಮಲ ಪೇಶಾ ಪುಣೆ ಕಾಲಕ್ಕೆ ವರ್ಷ (೧೧) ದೌಲತ |

ಶಿವಲಿಂಗಪ್ಪ ನಾಯ್ಕ ದೇಸಾಯಿ

| | |
|---|---|
| ಬಾಲಪ್ಪನಾಯ್ಕ ದೇಸಾಯಿ ಇ‌ನ‌ರ ಹೆಂಡತಿ ರಮಾಬಾಯಿ ದೇಸಾಯಿಣಿ ದೌಲತ ಮಾಡಿದ ಶಕೆ ೧೭೬೬ ಕ್ರೋಧನನಾಮ ಸಂವಚ್ಚರ ಮಾಘ ಶುದ್ಧ ೫ ದಿವ್ಯ ಸ್ವರ್ಗ ಸ್ಥಳಾದಳು. ಇಲ್ಲಿಗೆ ದೇಶಗತಿ ಕಾಲಸಾತ ಆಯಿತು. (೧೮೦೯–೧೮೪೪) | ಅಮಲ ಪೇಶಾಪುಣೆ ಕಾಲಕ್ಕೆ ವರ್ಷ (೧೭) ಮತ್ತು ಅಮಲ ಕಂಪನಿ ಸರಕಾರ ಕಾಲಕ್ಕೆ ವರ್ಷ (೧೯) ದೌಲತ |

ಸದರಿ ಜಾಲಿಹಾಳ ದೇಸಗತಿಯ ವಂಶದವರ ವಂಶಾವಳಿಯನ್ನು ಹಿಂದಿನ ವಂಶದವರ ವಂಶಾವಳಿಯ ಲೇಖದಿಂದಲೂಮತ್ತು ಈಗಿನ ವಂಶಾವಳಿಯ ಲೇಖದಿಂದಲೂ ಮತ್ತು ಈ ಬಗ್ಗೆ ಯಾರು ಯಾರು ಹಾಜರು ಇರುತ್ತಾರೆ. ಅವರದು ಸಹಿತಾ ಈ ವಂಶಾವಳಿಯಲ್ಲಿ ಕಾಣಿಸಿ ಅಚ್ಚಪ್ಪಾ ದೇಸಾಯಿ ಭೀಮಪ್ಪಾ ದೇಸಾಯಿ ಅಚ್ಚಪ್ಪಾ ದೇಸಾಯಿ ಇನಾಂ ಗ್ರಾಮ ಗಾಡಗೋಳ್ಳಿಯವರು ತಯ್ಯಾರ ಮಾಡಿರುತ್ತಾರೆ. ತಾರೀಖು ೧೨-೦೧-೧೯೨೩.

ಆಗಿದ್ದಿತೆಂದೂ ಗೊತ್ತಾಗುತ್ತದೆ. ಬೇಲೂರು ಜಾಲಿಹಾಳಕ್ಕಿಂತ ಪೂರ್ವದ ಗ್ರಾಮ ಎಂದು ತಿಳಿದದ್ದೂ ದೃಢಪಡುತ್ತದೆ.

(ವಂಶಾವಳಿ ಮತ್ತು ಮೋಡಿ ಕಾಗದ ಪತ್ರಗಳನ್ನು ನೀಡಿದ ಹೊಸೂರಿನ ಶ್ರೀ ಮುರಾರಿನಾಯಿಕ ದೇಸಾಯಿ, ಇವನ್ನು ಶ್ರಮಪಟ್ಟು ದೊರಕಿಸಿ ಕನ್ನಡಾನುವಾದ ಮಾಡಿಸಿ ಪ್ರತಿಗಳನ್ನು ನನಗೆ ಒದಗಿಸಿದ ಮುಧೋಳದ ಮುಖ್ಯಾಧ್ಯಾಪಕ, ಪಿಎಚ್.ಡಿ. ವಿದ್ಯಾರ್ಥಿ ಸಂಗಮೇಶ ಕಲ್ಯಾಣಿ, ಅನುವಾದಿಸಿದ ನಿವೃತ್ತ ಕಾರಕೂನ ಲಕ್ಷ್ಮಣ ರಾಮಪ್ಪ ಡಂಗಿ, ಗುಮ್ಮಟ ಶಿಲ್ಪದ ಮಾಹಿತಿ ಕೊಟ್ಟ ಉಪನ್ಯಾಸಕ ವೀರನಗೌಡ ಬ. ಉಗಲಾಟ, ನನ್ನ ಸಂಶೋಧನೆ ಕಾರ್ಯಕ್ಕೆ ಉತ್ತೇಜನ ನೀಡುತ್ತಿರುವ ನಿವೃತ್ತ ಶಿಕ್ಷಕ, ಲೇಖಕ ಯ.ಹ. ಚಂದ್ರಗಿರಿ- ಇವರಿಗೆಲ್ಲ ನನ್ನ ಅನಂತ ಕೃತಜ್ಞತೆಗಳು. ಛಾಯಾಗ್ರಾಹಕ ಬಿ|| ಸುನೀಲ ಶಂಕರಪ್ಪ ಮಾಧವನವರ ಇವನಿಗೂ ನನ್ನ ನೆನಕೆಗಳು.)

***

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಧಾರವಾಡದ ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರಣಿ ರಚಿತ, ಹಿಂದಿನ ಮುಂಬಯಿ ರಾಜ್ಯದ ೧೯೪೫-೫೦ **ಕನ್ನಡ ಪ್ರಾಥಮಿಕ ಶಾಲೆಗಳ ಮೇಲ್ವರ್ಗಗಳ ಇತಿಹಾಸ ಪಠ್ಯಪುಸ್ತಕ**.

೨. ದೇವೇಂದ್ರ ಮಾಧವನವರ., 'ಅಜ್ಞಾತ ಐತಿಹಾಸಿಕ ನೆಲೆ ಹಾಳು ಹುಲ್ಲೂರು', **ಇತಿಹಾಸ ದರ್ಶನ**, ಸಂ. ೧೮/೨೦೦೩, ಪುಟ ೧೪೯-೧೫೨

೩. ಹೊಸೂರು ದೇಸಾಯರಲ್ಲಿರುವ ಮೋಡಿ ಕಾಗದ ಪತ್ರಗಳು.




ಗತ ಇತಿಹಾಸದ ನೆನಪಷ್ಟೆ ಸಂಸ್ಕೃತಿ ಚಾಲನೆ ಅಲ್ಲ
ಇಂದಿನ ಬದುಕಿಗೆ ಬಳಸುವ ಅನ್ವಯ ಮಾದರಿ ತಿಳಿವುದೆ ಸ್ಪಂದನಶೀಲ

ಡಾ. ವಿರೂಪಾಕ್ಷಿ ಪೂಜಾರಹಳ್ಳಿ*

# ತರೀಕೆರೆ ಪಾಳೆಯಗಾರ ಸರ್ಜಪ್ಪನಾಯಕನ ಕಥನ : ಹೊಸಪಾಠ

*ಭಾರತದಲ್ಲಿ ಪರಕೀಯರನ್ನು ಹೊರದೂಡುವ ದೇಶೀಯರ ಪ್ರಯತ್ನ ನಡೆದು ಬಂದೇ ಇದೆ. ಕರ್ನಾಟಕ ದಲ್ಲಿಯೂ ಅದೊಂದು ವಿಶೇಷದ ಪ್ರಯತ್ನ. ತರೀಕೆರೆ ಸರ್ಜಪ್ಪನಾಯಕ ಈ ದಿಸೆಯಲ್ಲಿ ವೀರ ಹೋರಾಟ ನಡೆಸಿದವ. ಆದರೆ ಆವನ ಬಗ್ಗೆ ಕರ್ನಾಟಕ ಚರಿತ್ರೆಯಲ್ಲಿ ನಿಖರವಾಗಿ ಚಿತ್ರಣವಾಗಿಲ್ಲ. ಕಥೆ, ಲಾವಣಿ, ಜನಪದ ಸಾಹಿತ್ಯ ಕಥನಗಳೂ ಆವನ ಚರಿತ್ರೆಯನ್ನು ಕಟ್ಟಿಕೊಡು ವಲ್ಲಿ ಹೊಸ ಆಯಾಮವನ್ನೂ ತೋರುತ್ತವೆ.*

ಕರ್ನಾಟಕದ ಮಧ್ಯಕಾಲೀನ ಚರಿತ್ರೆಯಲ್ಲಿ ಹೊಸ ತಿರುವನ್ನು ಹುಟ್ಟಿ ಹಾಕಿದವರು ಪಾಳೆಯಗಾರರು. ವಿಜಯನಗರ ಸಾಮ್ರಾಜ್ಯ ೧೫೬೫ ರಲ್ಲಿ ಅಸ್ತಂಗತವಾದಾಗ ಸಾಮಂತರು, ಸೈನಿಕರು, ದಂಡನಾಯಕರು ಸ್ವತಂತ್ರವಾಗಿ ಮತ್ತು ಸ್ವೇಚ್ಛೆಯಿಂದ ಆಳ್ವಿಕೆ ಮಾಡಲು ಮುಂದಾದರು. ಇಂಥ ಸು. ೭೭ ಪಾಳೆಯ ಪಟ್ಟುಗಳು ಕರ್ನಾಟಕದ ಸುತ್ತಮುತ್ತ ಆಳ್ವಿಕೆ ನಡೆಸಿದ್ದವು. ಅಂಥವರಲ್ಲಿ ಚಿತ್ರದುರ್ಗ, ಕೆಳದಿ, ರಾಯದುರ್ಗ, ಹರಪನಹಳ್ಳಿ, ತರೀಕೆರೆ, ಸಂತೆಬೆನ್ನೂರು, ಗುಡೇಕೋಟೆ, ಜರಿಮಲೆ, ಮೊಳಕಾಲ್ಮೂರು, ರತ್ನಗಿರಿ, ಕಣಕುಪ್ಪೆ, ನಾಯಕನಹಟ್ಟಿ, ಸಿರಾ, ಗುಮ್ಮನಾಯಕನ ಪಾಳ್ಯ, ಹಾಗಲವಾಡಿ, ನಿಡಗಲ್ಲು, ಹರತಿಕೋಟೆ, ಬಾಣವಾರ ಹೀಗೆ ಅನೇಕ ಪಾಳೆಯ ಪಟ್ಟುಗಳಿದ್ದದ್ದು ಸ್ಮರಣೀಯ. ಈ ಎಲ್ಲ ಪಾಳೆಯಪಟ್ಟುಗಳ ಸಮಕಾಲೀನವಾಗಿ ತರೀಕೆರೆಯ ಪಾಳೆಯ ಪಟ್ಟೂ ಇತ್ತು.

ತರೀಕೆರೆ ಪಾಳೆಯಗಾರರು ಮೂಲತಃ ಬಸವಾಪಟ್ಟಣ, ಸಂತೆಬೆನ್ನೂರುಗಳಲ್ಲಿ ಪಾಳೆಯಗಾರಿಕೆ ಮಾಡಿದ ತರುವಾಯ ತರೀಕೆರೆಯನ್ನು ರಾಜಧಾನಿಯಾಗಿ ಮಾಡಿಕೊಂಡು ಎರಡು ಶತಮಾನಗಳಿಗೂ ಹೆಚ್ಚು ಕಾಲ ಆಳ್ವಿಕೆ ನಡೆಸಿದ್ದಾರೆ. ಈ ಪಾಳೆಯ ಗಾರರಲ್ಲಿ ಚಿಕ್ಕ ಕೆಂಗಹನುಮಪ್ಪನಾಯಕ, ಸೀತಾಹನುಮಪ್ಪ ನಾಯಕ, ಪಟ್ಟಾಭಿರಾಮಪ್ಪನಾಯಕ, ಎರಡನೇ ಸರ್ಜಾ ಹನುಮಪ್ಪನಾಯಕ, ಸರ್ಜಾಕೃಷ್ಣಪ್ಪನಾಯಕ, ಸರ್ಜಾ ರಂಗಪ್ಪ ನಾಯಕ ಮತ್ತು ಹನುಮಪ್ಪನಾಯಕರು ಕ್ರಮವಾಗಿ ಆಳ್ವಿಕೆ ನಡೆಸಿರು ವರು. ಕೊನೆಯ ಅರಸನಾದ ಸರ್ಜಾಹನುಮಪ್ಪನಾಯಕ ಬ್ರಿಟಿಷರ ವಿರುದ್ಧ ಹೋರಾಡುವಾಗಲೇ ಹುತಾತ್ಮನಾಗುವುದು ಇತಿಹಾಸ. ಈ ಘಟನೆ ಚರಿತ್ರೆ ಮತ್ತು ಇತರ ಅಧ್ಯಯನ ಶಿಸ್ತುಗಳಲ್ಲಿ ತೀವ್ರ ಕುತೂಹಲ ಮೂಡಿಸಿರುವುದು ಸ್ಪಷ್ಟ. ಜನಪದ ಸಾಹಿತ್ಯ, ಕಥೆ, ಲಾವಣಿಗಳಲ್ಲಿ ಸರ್ಜಪ್ಪನಾಯಕನನ್ನು ಚಿತ್ರಿಸಿರುವುದು ಗಮನಾರ್ಹ. ಈ ಬಗೆಯ ಸಾಹಿತ್ಯ ಕೃಷಿ ಈತನ ಬಗ್ಗೆ ನಡೆದಿರುವುದು ವಿಶೇಷ, ವಿಶಿಷ್ಟ. ಪಾಳೆಯಗಾರನೊಬ್ಬನ ಬಗೆಗೆ ಹುಟ್ಟಿಕೊಂಡ ವಿಪುಲವಾದ ಜನಪದ ಸಾಹಿತ್ಯ ಇದಾಗಿದೆ. ಸರ್ಜಪ್ಪನಾಯಕನ (ಕಥೆ) ಚರಿತ್ರೆಯ ಬಗೆಗೆ ದ್ವಂದ್ವ, ತೀವ್ರವಾದ ವರ್ಣನೆಗಳಿಂದ ಕೂಡಿದ್ದು, ದುರಂತ, ಹಿಂಸೆ, ಕಪಟತನ, ಮೋಸ, ಕುತಂತ್ರ, ಸಂಚು ಮೊದಲಾದ ಕೃತ್ಯವನ್ನು ವಿರೋಧಿಗಳು ಮಾಡುತ್ತಾರೆ. ರಾಜನನ್ನು ಮೋಸದಿಂದ ಕೊಲ್ಲುವ ಪ್ರಯತ್ನಗಳು ಜನಪದರಲ್ಲಿ ಕರುಣರಸವನ್ನು ಉಕ್ಕಿಸಿದಂತೆ ಅವರ ಹಾಡು, ಲಾವಣಿ, ಕಥನಗಳಲ್ಲಿ ವ್ಯಕ್ತವಾಗಿದೆ.

ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳ ಗಡಿಭಾಗದ ಚಿನ್ನ ಹಗರಿ ನದಿ ಪರಿಸರದಲ್ಲಿ ಬೇಡ ಬುಡಕಟ್ಟಿನ ಜನ ಸರ್ಜಪ್ಪನಾಯಕನ

* ಅಧ್ಯಾಪಕ (ಹಿ.ಶ್ರೇ.), ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ - ೫೮೩ ೨೭೬.

ಕಥನ (ಮೌಖಿಕ) ಕಾವ್ಯವನ್ನು ನಿರರ್ಗಳವಾಗಿ ಹಾಡುವುದನ್ನು ಕಂಡರೆ ಬೆರಗಾಗುತ್ತದೆ. ಅವನ ಜೀವನ-ಸಾಧನೆ, ಪ್ರಗತಿ, ಯೌವನ, ರಸಿಕತೆ, ಅವಸಾನದ ಸಂದರ್ಭಗಳು ಈ ಕಥನ ದಲ್ಲಿರುವುದನ್ನು ಕಂಡು ಸಂಗ್ರಹಿಸಲು ನಾನು ಮುಂದಾದೆ. ಈ ಕಥನ ಕಟ್ಟಿದವರು ತರೀಕೆರೆ, ಹಾಸನ, ಚಿಕ್ಕಮಗಳೂರು ಮತ್ತು ಕೊಡಗು ಭಾಗದ ಗದ್ದೆ-ಕಾಫಿ ತೋಟಗಳಲ್ಲಿ ಕೂಲಿ ಮಾಡಿಕೊಂಡು ಬಂದವರು. ಬೇಡರು ಭೌತಿಕ ಹಾಗೂ ಚಾರಿತ್ರಿಕವಾಗಿ ಈ ಕಥನವನ್ನು ಪ್ರಜ್ಞಾಪೂರ್ಣಕವಾಗಿಯೇ ಸಮಕಾಲೀನ ಪ್ರಪಂಚಕ್ಕೆ ಪರಿಚಯಿಸಿಕೊಡುತ್ತಾರೆ. ಸು. ನಲವತ್ತು ಪುಟಗಳಷ್ಟು ಮುದ್ರಣವಾ ಗಿರುವ ಈ ಕಥನ ಅನೇಕ ವಿಧದಲ್ಲಿ ಪ್ರಸ್ತುತವಾಗಲಿದೆ. ಪ್ರಮುಖ ಸಂಗತಿಗಳನ್ನಷ್ಟೇ ಇಲ್ಲಿ ಚರ್ಚೆಗೆ ಬಳಸಿಕೊಳ್ಳಲಾಗಿದೆ (ಉಳಿದ ಕೆಲವು ಭಾಗಗಳನ್ನು ಪ್ರತ್ಯೇಕವಾಗಿ ಪ್ರಕಟಿಸುವ ಉದ್ದೇಶವಿದೆ).

ಭಾರತದಲ್ಲಿ ಪರಕೀಯರನ್ನು ಆದಿಯಿಂದಲೂ ಹೊರ ದೂಡುವ ಪ್ರಯತ್ನವನ್ನು ಸ್ಥಳೀಯರು ಮಾಡಿಕೊಂಡು ಬಂದಿರು ವುದು ಹೊಸ ಸಂಗತಿಯೇನಲ್ಲ. ಆರ್ಯರು ಭಾರತಕ್ಕೆ ಪ್ರವೇಶಿಸಿ ದಾಗ ಅನಾರ್ಯರಾದ ದ್ರಾವಿಡರು; ಶಬರ, ಪುಳಿಂದ, ನಿಷಾದರು ಅವರ ವಿಸ್ತರಣೆಗೆ ತಡೆಯೊಡ್ಡಿದ ಘಟನೆಗಳನ್ನು ರಾಹುಲ ಸಾಂಕೃತ್ಯಾಯನ ತನ್ನ ಕೃತಿಗಳಲ್ಲಿ ವಿವರಿಸಿದ್ದಾರೆ. ಮಧ್ಯಕಾಲದಲ್ಲಿ ಮಹಮದೀಯರನ್ನು ಕುಮ್ಮಟದುರ್ಗದ ಅರಸ ಕಂಪಿಲರಾಯರ ಮಗ ಕುಮಾರ ರಾಮ ಹಿಮ್ಮೆಟ್ಟಿಸಿದ್ದು ಶ್ಲಾಘನೀಯ. ಆಧುನಿಕ ಸಂದರ್ಭದಲ್ಲಿ ಬ್ರಿಟಿಷರನ್ನು ಇಲ್ಲಿಂದ ತೊಲಗಿಸಲು ನಡೆಸಿದ ಪ್ರಯತ್ನಗಳು ಹಲವು. ಹೀಗಾಗಿ ಅವರ ದಾಸ್ಯತ್ವದಿಂದ ಹೊರ ಬರಲು, ವಿಮೋಚನೆಗೊಳ್ಳುವ ಸಣ್ಣಪುಟ್ಟ ದಂಗೆಗಳಾದವು. ಆಂಗ್ಲರ ಶಸ್ತ್ರಾಸ್ತ್ರ ನಿಷೇಧ ಕಾಯ್ದೆ ವಿರೋಧಿಸಿ ಹಲಗಲಿ ಬೇಡರ ದಂಗೆ ಇಡೀ ದಕ್ಷಿಣ ಭಾರತದಲ್ಲಿ ಬ್ರಿಟಿಷರಿಗೆ ಕಲಿಸಿದ ಮೊದಲ ಪಾಠ ಎಂದರೆ ತಪ್ಪಲ್ಲ. ಆದರೂ ಬುಡಕಟ್ಟು ಜನರಾದ ಜಡಿಗ್ಯಾ, ಬಾಳ್ಯಾ ಇತರರು ಹುತಾತ್ಮರಾದುದು ೧೮೫೭ರ ದಂಗೆಗೆ ಪ್ರಮುಖ ಕಾರಣವಾಯಿತು. ಹಾಗೆಯೇ ಸುರಪುರದ ರಾಜಾ ವೆಂಕಟಪ್ಪನಾಯಕನು ಅತೀ ಚಿಕ್ಕ ವಯಸ್ಸಿನಲ್ಲಿ ಬ್ರಿಟಿಷರ ಕೆಂಗಣ್ಣಿಗೆ ಗುರಿಯಾಗಿ ಹುತಾತ್ಮರಾಗಿರುವುದು ದುರಂತವೇ ಸರಿ. ಹೀಗೆ ತರೀಕೆರೆಯ ಸರ್ಜಾರಂಗಪ್ಪನಾಯಕನು ರೈತರು ತನ್ನನ್ನು ತರೀಕೆರೆಯ ಪಾಳೆಯಗಾರನೆಂದು ಒಪ್ಪಿದರೆ, ನೆಲಗಂದಾಯವನ್ನು ತಗ್ಗಿಸುವ ಭರವಸೆಯನ್ನು ಕೊಟ್ಟಾಗ ಕೆಲವರನ್ನು ತನ್ನ ಸುತ್ತಾ ಸೇರಿಸಿಕೊಳ್ಳುವ ಪ್ರಯತ್ನ ನಡೆಯುತ್ತದೆ. ಆಗಲೇ ಬ್ರಿಟಿಷರ ವಿರುದ್ಧ ಅನೇಕ ದಂಗೆಗಳು ನಡೆಯುತ್ತವೆ.

ಕರ್ನಾಟಕದಲ್ಲಿ ಬ್ರಿಟಿಷರನ್ನು ಹೊರದೂಡಲು ಪಣತೊಟ್ಟ ವರು : ಹೈದರ್‌ಅಲಿ, ಟಿಪ್ಪುಸುಲ್ತಾನ್‌ರು., ಹಲಗಲಿ ಬೇಡರು, ಸುರಪುರದ ನಾಯಕರು, ವೀರ ಸಿಂಧೂರ ಲಕ್ಷ್ಮಣರನ್ನೂ ಹೆಸರಿಸ ಬೇಕು. ಈ ಮೂರು ಘಟನೆಗಳು ಉತ್ತರ ಕರ್ನಾಟಕಕ್ಕೆ ಸೀಮಿತ ವಾಗಿದ್ದರೆ, ದಕ್ಷಿಣ ಕರ್ನಾಟಕದಲ್ಲಿ ಬ್ರಿಟಿಷರ ವಿರುದ್ಧ ರಣಕಹಳೆ ಊದಿದವರು ತರೀಕೆರೆ ಸರ್ಜಾ ಹನುಮಪ್ಪ ಮತ್ತು ಸರ್ಜಾರಂಗಪ್ಪ ನಾಯಕರು ಪ್ರಮುಖರಾಗಿದ್ದಾರೆ.

ಆಂಗ್ಲರ ಆಡಳಿತ ವಿರುದ್ಧ ಕರ್ನಾಟಕದಲ್ಲಿ ದಂಗೆಯ ಕೂಗು ಎಲ್ಲರನ್ನು ಜಾಗ್ರತಗೊಳಿಸಿತು. ದೊಂಡಿಯ ವ್ಯಾಘ ಮೊದಲಾ ದವರು ಮೈಸೂರು ಒಡೆಯರನ್ನು ಮತ್ತು ಬ್ರಿಟಿಷರನ್ನು, ಸಮಾನ ವಾಗಿ ವಿರೋಧಿಸಿದರು. ತರೀಕೆರೆ ನಾಯಕರಂತೆ ಅನೇಕ ಪಾಳೆಯ ಗಾರರು ಬ್ರಿಟಿಷರ ವಿರುದ್ಧ ಹೋರಾಟ ಮಾಡಿದರು. ಉಸಿರು ಕಟ್ಟುವ ವಾತಾವರಣದ ನಡುವೆ, ಅವರ ಸೊಲ್ಲುಗಳನ್ನು ಗಮನಿ ಸುವ, ಅವರ ಬೇಡಿಕೆಯನ್ನು ಪೂರೈಸುವ ಉದಾರತೆ ಇಲ್ಲದಾ ಯಿತು. ಇಂಥ ವಿಷಮ ಸ್ಥಿತಿ ಬ್ರಿಟಿಷರ ಪಾಲಿಗೆ ಮುಳುವಾಯಿತು. ದೇಶಿಯ ಸಂಸ್ಥಾನಿಕರನ್ನು ಹತ್ತಿಕ್ಕುವ ಪ್ರಯತ್ನ ನಡೆಯಿತು. ತರೀಕೆರೆಯ ಅರಸ ಸರ್ಜಾ ಹನುಮಪ್ಪನಾಯಕನ ಬಗೆಗೂ ಇದೇ ಅನ್ವಯಿಸುತ್ತದೆ. ಇಡೀ ಭಾರತವೇ ಬ್ರಿಟಿಷರನ್ನು ವಿವಿಧ ಬಗೆಯಲ್ಲಿ ವಿರೋಧಿಸುವ ಪ್ರತಿಭಟಿಸುವ ಕಾಲವದು. ಮೈಸೂರು ಸಂಸ್ಥಾನ ಸೇರಿದಂತೆ ದಕ್ಷಿಣ ಭಾರತದ ಅನೇಕ ಸಂಸ್ಥಾನಗಳು ಆಗ ಆಳ್ವಿಕೆ ನಡೆಸುತ್ತಿದ್ದವು. ತರೀಕೆರೆಯವರು ಮೈಸೂರು, ಕೊಡಗಿನ ಹಾಲೇರಿ, ಹೈದರ್, ಟಿಪ್ಪು ಮೊದಲಾದವರೊಂದಿಗೆ ಹೊಂದಿರುವ ಸ್ನೇಹವೇ ಕೊನೆಯಲ್ಲಿ ಅವರಿಗೆ ತಿರುಗು ಬಾಣವಾಯಿತು. ಬ್ರಿಟಿಷರ ವಿರುದ್ಧ ಸರ್ಜಾ ರಂಗಪ್ಪನಾಯಕ ಪ್ರತಿಭಟನೆ ಮಾಡುತ್ತಲೇ ಬಂದಿದ್ದನು.

**ಮೂಲಪಠ್ಯಗಳ ಸಾರಾಂಶ**

* ಸರ್ಜಾ ಹನುಮಪ್ಪನಾಯಕನ ತಂದೆ ಸರ್ಜಾ ರಂಗಪ್ಪ ನಾಯಕ (೧೮೩೧-೩೭) ಮಡಿದ ತರುವಾಯ, ಸರ್ಜಾ ಹನುಮಪ್ಪ ನಾಯಕನನ್ನು ಬೆಂಗಳೂರಿಗೆ ಕರೆದೊಯ್ಯುತ್ತಾರೆ. ಕ್ರಿ.ಶ. ೧೮೩೪ರಲ್ಲಿ ಗುಟ್ಟಹಳ್ಳಿ ಅರಮನೆ ಪರಿಸರದ ವನವಿಹಾರದಲ್ಲಿ ಈತನಿಗೆ ಮೂರು ಬಾರಿ ಗಲ್ಲಿಗೇರಿಸಿದರು ಪ್ರಾಣ ಹೋಗಲಿಲ್ಲವಾದ ಕಾರಣ ಪ್ರಾಣದಾನ ನೀಡಿದ ಬ್ರಿಟಿಷರನ್ನು ವಿರೋಧಿಸಿ ತನ್ನ ಕೈಯಿಂದಲೇ ನೇಣು ಹಾಕಿಕೊಂಡು ಪ್ರಾಣ ಬಿಡುತ್ತಾನೆ. ಹೀಗೆ ಹುತಾತ್ಮನಾಗು ವುದು ಸರ್ಜಾ ಹನುಮಪ್ಪ ನಾಯಕನ ವಾಸ್ತವ ಘಟನೆ ಯಾಗಿದ್ದರೂ ಒಮ್ಮತಾಭಿಪ್ರಾಯವಿಲ್ಲ.
* ಕರ್ನಾಟಕ ಚರಿತ್ರೆಯಲ್ಲಿ ಸರ್ಜಪ್ಪನಾಯಕನ ಘಟನೆ ನಿಖರ ವಾಗಿ ಚಿತ್ರಣಗೊಂಡಿಲ್ಲ.
* ಜನಪದ ಸಾಹಿತ್ಯದಲ್ಲಿ ವಿಶೇಷವಾಗಿ ಕಾವ್ಯ, ಕಥನ, ಲಾವಣಿ, ನಿರೂಪಕಗಳಲ್ಲಿ ದಂಗೆ, ಹೋರಾಟದ ಕಿಚ್ಚು ಅವ್ಯಾಹತವಾಗಿ ಮೂಡಿಬಂದಿದೆ.
* ಕ್ರಿ.ಶ. ೧೮೫೭ ರಲ್ಲಿ ಮೊದಲ ಸ್ವಾತಂತ್ರ್ಯ ಹೋರಾಟದ ಹಂತಕ್ಕೂ ಮೊದಲೇ ೧೮೩೧ರಲ್ಲಿ ತರೀಕೆರೆ ನಾಯಕರು ಬ್ರಿಟಿಷರನ್ನು ವಿರೋಧಿಸಿದ್ದು ಗಮನಾರ್ಹ.

* ಚಾರಿತ್ರಿಕ ಪುರುಷನ ಕಥನ ಮತ್ತು ಲಾವಣಿಯಲ್ಲಿ ಲೌಕಿಕ ವಿಚಾರಗಳೇ ವ್ಯಾಪಕವಾಗಿವೆ. ರಾಜಪ್ರಭುತ್ವ, ಜನ ಸಾಮಾನ್ಯರ ಬಗ್ಗೆ ವಿರಳ ಉದಾಹರಣೆಗಳಿವೆ.
* ಸರ್ಜಪ್ಪನಾಯಕ ಬ್ರಿಟಿಷರ ವಿರುದ್ಧ ಹೋರಾಡುತ್ತಲೇ ಏಕಕಾಲಕ್ಕೆ ಹಾರುವರ ಹೆಣ್ಣೊಂದರ ಮೋಸದಿಂದ ಅವನ ಜೀವನದ ಭವಿಷ್ಯಕ್ಕೆ ಮುಳುವಾಯಿತು. ಹಾರುವರ ಹೆಣ್ಣು ನಿಂಗಮ್ಮನು ತನ್ನ ಅಣ್ಣಂದಿರಾದ ವೆಂಕಪರಾಯ, ಹಾಗು ಗೋವಿಂದರಾಯನ ಮಾತು ಕೇಳಿ ಇವನಿಗೆ ಮೋಸ ಮಾಡುವುದು ಪ್ರಾಣಕ್ಕೆ ಕುತ್ತು ತರುವುದು ಪ್ರಭುತ್ವದಲಿ ಅಂಥ ಮಹಿಳೆಯ ಕುತಂತ್ರ ಅನಾವರಣಗೊಂಡಿದೆ.
* ಮೈಸೂರು ಒಡೆಯರು ಮತ್ತು ಬ್ರಿಟಿಷರನ್ನು ಸಮಾನವಾಗಿ ವಿರೋಧಿಸುತ್ತಾ ಬಂದ ತರೀಕೆರೆ ಪಾಳೆಯಗಾರರು ಕನ್ನಡ ನಾಡು ನುಡಿಗೆ ಹಾಗೂ ತಮ್ಮ ಅಸ್ತಿತ್ವಕ್ಕಾಗಿ ಹೋರಾಡಿದ್ದು ಶ್ಲಾಘನೀಯ.
* ಕರ್ನಾಟಕದ ವಿವಿಧ ಭಾಗಗಳಲ್ಲಿ ಸರ್ಜಾನ ಬಗೆಗೆ ಹುಟ್ಟಿಕೊಂಡ ಕಥನಗಳೆಲ್ಲವು ಒಂದೇ ಪ್ರಕಾರದವಾಗಿವೆ. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆ ಗಡಿಭಾಗದಲ್ಲಿನ ಜನಪದರು ಕಟ್ಟಿಕೊಡುವ ಚಿತ್ರಣವೇ ಬೇರೆ.
* ಟಿಪ್ಪುವಿನೊಡನೆ ಸೇನಾನಿಗಳಾದ ತರೀಕೆರೆ ನಾಯಕರು ವಿಶ್ವಾಸಗಳಿಸಿದ್ದು ಬ್ರಿಟಿಷರಿಗೆ ನುಂಗಲಾರದ ತುತ್ತಾಯಿತು.
* ೧೮೩೦ರ ನಂತರ ದಂಗೆಯ ದಿನಗಳಲ್ಲಿ ಬ್ರಿಟಿಷರ ವಿರುದ್ಧ ಸರ್ಜಾರಂಗಪ್ಪನಾಯಕ ಮತ್ತು ಅವನ ಮಗ ಹನುಮಪ್ಪ ನಾಯಕ ದಂಗೆಯೇಳುವುದು, ವೀರ ಮರಣವನ್ನಪ್ಪುವುದು ಚರಿತ್ರೆಯಲ್ಲಿ ಭಿನ್ನರೂಪ ತಾಳಿರುವ ಸಂಗತಿಗಳಾಗಿವೆ.
* ತರೀಕೆರೆ ಪಾಳೆಯಗಾರರು, ನಾಯಕನಹಟ್ಟಿ, ಚಿತ್ರದುರ್ಗ, ಮೊಳಕಾಲ್ಮೂರು, ಕುಂದರ್ಪಿ ಮೊದಲಾದವರೊಡನೆ ಸ್ನೇಹ-ವೈವಾಹಿಕ ಸಂಬಂಧ ಇರಿಸಿಕೊಂಡಿದ್ದರು.

**ಕಥನದ ಹೊಸ ಪಾಠ**

ಪ್ರಸ್ತುತ ಕಥನವನ್ನು ಚಿನ್ನಹಗರಿ ನದಿಪ್ರದೇಶದ ಬೇಡರ ಹಟ್ಟಿಗಳಲ್ಲಿ ಹಾಡುತ್ತಾರೆ. ಈ ಪಾಠವನ್ನು ಪೂಜಾರಹಳ್ಳಿ ಗ್ರಾಮದ ಕೆ.ಬಿ. ಹಟ್ಟಿಯ ಗುಗ್ಗಿಪಾಲಯ್ಯ ಹಾಡಿರುತ್ತಾನೆ. ಇದೇ ರೀತಿ ಅಜ್ಜನ ಜುಮ್ಮೋಬನಹಳ್ಳಿ, ಕೊಂಡ್ಲಹಳ್ಳಿ, ಕೊಲೇಮನಹಳ್ಳಿ ಗ್ರಾಮಗಳಲ್ಲಿ ಕೋಲಾಟದ ಪದವಾಗಿ, ಹಬ್ಬ-ಹರಿದಿನಗಳಂದು ಮೈಕ್‌ಮೂಲಕ ನಾಟಕದಲ್ಲಿ ಹಾಡುತ್ತಾರೆ.

ಕಥನದಲ್ಲಿ ತರೀಕೆರೆ ಪಾಳೆಯಗಾರ ಸರ್ಜಾ ಹನುಮಪ್ಪ ನಾಯಕನ ಜನನ, ವಿದ್ಯಾಭ್ಯಾಸ, ಬೆಳವಣಿಗೆ ಬಗೆಗೆ ತರೀಕೆರೆ, ಶಿವಮೊಗ್ಗ, ಮೈಸೂರು ಮತ್ತು ಹಿರೇದುರುಗಗಳ ಉಲ್ಲೇಖವಿದೆ. ಸರ್ಜಪ್ಪನಾಯಕನ ತಂದೆ-ತಾಯಿಗಳು ರಂಗಪ್ಪ-ನಿಂಗಮ್ಮ ಮತ್ತು ಮನೆ ದೇವರಾದ ರಂಗನಾಥನ ಬಗೆಗೆ ಕಥನದಲ್ಲಿ ವಿವರಗಳಿವೆ: ಹಾಗೂ ಮುಂದಿನ ಸಂಗತಿಗಳು ಕಾಣಬರುತ್ತವೆ.

೧. ಬೇಡರ ಕುಲ, ವೀರ, ಶೌರ್ಯ, ಪರಾಕ್ರಮದ ಬಗ್ಗೆ ವರ್ಣನೆ.
೨. ಕೊಣನೂರು, ಮಳಲಕೆರೆ, ಗುಂಡನೂರು, ದುರುಗ, ಹೂವೇನಹಳ್ಳಿಗಳ ಉಲ್ಲೇಖ.
೩. ಉಪಪತ್ನಿ ನಿಂಗಮ್ಮ, ಅಣ್ಣ ವೆಂಕಪರಾಯ, ಭಾವ ಗೋವಿಂದರಾಯರ ಕುತಂತ್ರ, ಜಾತಿ, ವರ್ಗ, ವರ್ಣ, ಸಂಘಟನೆ ಮೊದಲಾದ ವಿವರಗಳು.
೪. ಬ್ರಾಹ್ಮಣರ ಕುಲದಲ್ಲಿ ಬ್ಯಾಡನು ಬರುತಾನ, ಕುಲಕಾದರೆ ಅಪಕೀರ್ತಿ, ಬ್ಯಾಡರ ಕುಲಕೆ ಸಂಚು ಕೊಡಬೇಕು ಎನ್ನುವ ಬೇಡಿಕೆಯ ತಿರಸ್ಕಾರ.
೫. ಒಂಟೆ, ಆನೆಸಾಲು, ಗದ್ದೆ ಆಳುವರಾಜ್ಯದ ಅರ್ಧಭಾಗ ಜಾಗೀರು ಕೊಡುತ್ತೇವೆ; ಬ್ಯಾಡನ ಒಳಸಂಚು ಕೊಡ ಬೇಕೆಂದು ಕುತಂತ್ರ, ವೈದಿಕ ಶಾಹಿಯಿಂದ ಕೂಡಿದೆ.
೬. ವೃತ್ತಿ, ವರ್ಗ, ಬಡಿಗೇರ, ಕಮ್ಮಾರ, ನೆವ್ವರ, ತಳವಾರ, ಮಾದಿಗ, ವಡ್ಡರು ಇತರೆ ಜಾತಿಗಳ ಉಲ್ಲೇಖವಿದೆ.
೭. ಗರಡಿಮನೆ, ಚಾವಡಿ, ದೇವಾಲಯ, ಅರಮನೆಗಳ ಪ್ರಸ್ತಾಪ.
೮. ತಳವಾರ ತಿಪ್ಪಯ್ಯ, ಕುದುರೆ, ತಂದೆಗೆ ಸಪುನ, ಕೊಟ್ಟೂರು ಬಸವಣ್ಣನ ತೇರು, ಹಟ್ಟಿ ತಿಪ್ಪಯ್ಯನ ತೇರಿನ ಕಳಸವಾದರೆ ಮುರುದಂಗಿತ್ತು. ಇವತ್ತಿನ ಪಯಣವ ಬೇಡ ಎಂದು ಹೇಳುವ ತಂದೆಯ ನಂಬಿಕೆ.
೯. ಶೋಕ, ದುಃಖ, ಹತಾಶೆ, ಗುರುಹಿರಿಯರು, ತಂದೆ ತಾಯಿಗಳು, ವೈರಿಗಳು ಇತ್ಯಾದಿ.
೧೦. ಕಣಕುಪ್ಪೆ, ಬಸವನಕೋಟೆ ರಾಜ್ಯದ ಗಡಿಯಾಗಿದ್ದವು (ಜಗಳೂರು-ತಾ).
೧೧. ಮಹಾನಾಯಕನಾಗಿದ್ದು, ಸಾವಿರಳ್ಳಿಗೆ ಸರ್ಜಾನು ನೂರಳ್ಳಿಗೆ ಅಧಿಕಾರವಿದ್ದರೂ ರಂಡಸಾವನ್ನು ಕೊಲ್ಲುತ್ತಾರೆ.
೧೨. ಪ್ರಭುತ್ವದ ಬಗೆಗಿನ ಮೋಸ, ವಂಚನೆ, ಕುತಂತ್ರ, ಮರಣ, ಕುಸಲೆ-ಗೊಂಬೆ ಮಂಚ.
೧೩. ಹತ್ತು ಲಕ್ಷ ದಂಡು ವಿರೋಧಿಗಳು, ಸರ್ಜಾನ ಮೇಲೆ ದಂಡೆತ್ತಿ ಬರುವರು. ಏಕಾಂಗಿಯಾಗಿ ಹೋರಾಡುವನು.
೧೪. ಮೋಸ ಅರಿತ ನಾಯಕ ಸೂಳೆಯ ಸಂಚಿನಿಂದ ಹೆಣ್ಣಿನ ಕುಲಕ್ಕೆ ಶಾಪಹಾಕುತ್ತಾನೆ. ಪ್ರಾಯಶ್ಚಿತ್ತ, ದುಃಖ, ಸಂಕಟ ಪಡುವುದು ಅನಾವರಣಗೊಂಡಿದೆ.
೧೫. ವಿರೋಧಿಗಳಿಗೆ ಮಾಂಸ, ಮದ್ಯವನ್ನು ಕೊಟ್ಟು ಗೋವಿಂದ ರಾಯ, ವೆಂಕಪರಾಯ ಹಗೆತನ ತೀರಿಸಿಕೊಳ್ಳುತ್ತಾರೆ.

೧೬. ಸೂಳೆ ನಿಂಗಿ, ವೆಂಕಪರಾಯ, ಗೋವಿಂದರಾಯ ಸೇರಿ ಕೊಲೆ ಮಾಡಲು ಕಂದಕ ತೋಡಿಸಿ ಶೂಲ ನೆಡುತ್ತಾರೆ. ನೂಲಗ್ಗಗಳ ಉಲ್ಲೇಖವಿರುವುದು ಗಮನಾರ್ಹ.

೧೭. ಇಡೀ ಕಥನವು ಮನೋವಿಜ್ಞಾನದ ಪರಿಧಿಯಲ್ಲಿ ವಿಶ್ಲೇಷಣೆಗೊಳಪಡುವುದು. ಅಲಕ್ಷಿತ ಘಟನೆಗಳು ಇಲ್ಲಿ ಅನಾವರಣಗೊಳ್ಳುವುದು ಸ್ಪಷ್ಟ.

**ಸರ್ಜಪ್ಪನಾಯಕನ ಸಾವು**

ಕಥನ ಹುಟ್ಟಿ ಜನಪ್ರಿಯತೆ ಪಡೆದಿರುವುದೇ ಅವನ ಸಾವಿನ ಘಟನೆಯಿಂದ. ಲಾವಣಿ, ಕಥನ, ಚರಿತ್ರೆಯಲ್ಲಿ ಮೂರು ಪ್ರತ್ಯೇಕವಾದ ಕಾರಣಗಳು ಕಂಡುಬರುತ್ತವೆ : ವಿಷಪ್ರಾಶನ ಮಾಡಿ, ಕೊಲೆ ಮಾಡಿ, ಗಲ್ಲಿಗೆ ಹಾಕಿ ಸಾಯಿಸಿದರೆಂದು.

ಬ್ರಿಟಿಷರ ದಂಡು ಮುತ್ತಿದಾಗ ಸರ್ಜಾನ ಪರಾಕ್ರಮವನ್ನು ತೋರಿದರೂ - ಸಾಲು ಹೆಣಗಳು ಬೀಳುತ್ತವೆ. ಆದರೆ, ಏಕಾಂಗಿ ವೀರ ಹೋರಾಟ ಮಾಡುವುದಾದರೂ ಹೇಗೆ. ಅಪಾರ ಸಾವು-ನೋವು ಚಿಂತೆ ಅವನಿಗೆ ಕಾಡುತ್ತದೆ. ಸರ್ಜಾ ಹನುಮಪ್ಪನನ್ನು ಬ್ರಿಟಿಷರು ಕಳ್ಳನೆಂದು ಕರೆದಿರುವ ಸಂಗತಿ ಅವನಿಗೆ ಕಾಡುತ್ತಿದೆ. ಕಥನದಲ್ಲಿ ಮಾತ್ರ ಹೀಗಿದೆ :

೧. ಇಂತೆಂಬ ಹಳ್ಳಿಗೆ ।
ಕಳ್ಳನು ಬಂದನೇ - ಗೊಲ್ಲಿಗಾರ್ಡು ಕೊಡಬೇಕು
ಪಾರಂಗಿ ದೊರೆಯೆ - ವಾಲೆನಾದರೆ ಬರೆದಾನೊ

೨. ಗಲ್ಲು ಗಾರ್ಡನು ಇಲ್ಲವಯ್ಯ
ಕೊಟ್ಟೆನಾದರೆ ಮಾಡತೀನಿ ॥
ವಾಲೆನಾದರೆ ಬರೆದಾನೊ
ಪಾರಂಗಿ ದೊರೆಯ
ವಾಲೆನಾದರೆ ಬರೆದಾನೊ೩

ಬ್ರಿಟಿಷರೇ ನೇರವಾಗಿ ಗಲ್ಲು ಶಿಕ್ಷಕೆಗೆ ಗುರಿ ಮಾಡಿದ್ದಾರೆ.

ಕಥನದಲ್ಲಿ ಸಾವು ಸಹಾ ಪರಂಗಿ ದೊರೆ ಬ್ರಿಟಿಷ್ ಅಧಿಕಾರಿಯಿಂದ ಆಗಿದೆ ಎಂದು ನಂಬಬಹುದಾಗಿದೆ. ಆದರೆ, ಸೂಳೆಯ ನಿಂಗಿಯೇ ಕೊಲೆ ಮಾಡಿದ್ದಾಳೆಂಬ ಜನಪದ ಸಂಗತಿಯನ್ನು ಕಥನದಲ್ಲಿ ಕರುಣಾರಸಕ್ಕೆ ಬಳಸಿದಂತಿದೆ. ಅಥವಾ ಇದೇ ಹೆಸರಿನ ಬೇರೊಬ್ಬ ಅರಸನು ನಿಂಗಮ್ಮನಿಂದ ಸತ್ತಿರಬಹುದೇ! ಸರ್ಜಪ್ಪನಾಯಕನ ಗಲ್ಲುಶಿಕ್ಷೆಯನ್ನು ಕಡೂರು ಕೋರ್ಟಿನಲ್ಲಿ ಆಜ್ಞೆ ಮಾಡಲಾಗುತ್ತದೆ. ಇಲ್ಲಿ ಬ್ರಾಹ್ಮಣ ಮತ್ತು ಬೇಡ ಕುಲಗಳ ನಡುವೆ ಸಂಘರ್ಷ ಮನೋಭಾವ ಇಲ್ಲದೆ, ಸೌಹಾರ್ದಯುತ ವಾತಾವರಣ ಇತ್ತು ಎಂದು ಮೇಲಿನ ಸಂಗತಿಗಳಿಂದ ತಿಳಿಯಲು ಆಗದು. ವಸಾಹತೋತ್ತರ ಚಿಂತನೆಗಳ, ಪ್ರಭಾವದ ನೆಲೆಯಲ್ಲಿ ಚರಿತ್ರೆ ಪುನಾರಚನೆಯ ಸಂದರ್ಭದಲ್ಲಿ ಇಂಥ ಸಂಗತಿಗಳನ್ನು ಅಳವಡಿಸಿಕೊಳ್ಳಬೇಕಾಗುತ್ತದೆ.



***

**ಆಧಾರಸೂಚಿ ಮತ್ತು ಟಿಪ್ಪಣಿಗಳು**


೧ **ಹೊನ್ನ ಬತ್ತೇವು ಹೊಲಕಲ್ಲ**, ೧೯೬೭, ಗೊ.ರು. ಚನ್ನಬಸಪ್ಪ (ಸಂ), ತರೀಕೆರೆ, ಚಿಕ್ಕಮಗಳೂರು ಜಿಲ್ಲೆ.
೨. ಜಿ.ಶಂ. ಪರಮಶಿವಯ್ಯ., ೧೯೬೯, **ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು**, ಮೈ.ವಿ.ವಿ. ಮೈಸೂರು.
೩. ಸೆಬಾಸ್ಟಿಯನ್ ಜೋಸೆಫ್., ೧೯೯೭, **ಕರ್ನಾಟಕ ಚರಿತ್ರೆ ಸಂಪುಟ-೬**, ಕನ್ನಡ ವಿ.ವಿ. ಹಂಪಿ.
೪. **ಚಿಕ್ಕಮಗಳೂರು ಡಿಸ್ಟ್ರಿಕ್ಟ್ ಗ್ಯಾಸೆಟಿಯರ್**; ಎಸ್.ವಿ. ರಂಗಣ್ಣ, ಎಲ್. ಗುಂಡಪ್ಪ, ಎಸ್.ವಿ. ಪರಮೇಶ್ವರಭಟ್ಟ, ಕರಾಕೃ, ಮತಿಘಟ್ಟ ಕೃಷ್ಣಮೂರ್ತಿ, ಕೊರಟಿ ಶ್ರೀನಿವಾಸ ರಾವ್ ಮತ್ತು ಮೊದಲಾದ ವಿದ್ವಾಂಸರ ಕೃತಿಗಳನ್ನು ಗಮನಿಸಲಾಗಿದೆ.




**ಸರ್ಜಾನ, ಆಂಗ್ಲರೆದುರು ಕೋಪಿಗೆ ಅಳಲಿಲ್ಲ**
**ಧೈರ್ಯದಲ್ಲಿ ಎದೆಯೊಡ್ಡಿ ಆಳಿದ**
**ಸರ್ಜಾನ, ಕಥನದಲ್ಲಿ ವೀರನಾಗಿ ಎದ್ದು ಬಂದ**
**ನಿಂಗಿಯ ಮೋಸದಲ್ಲಿ ಸಿಲುಕಿ ಆಂಗ್ಲರಲ್ಲಿ**
**ಗಲ್ಲಿಗೆದುರು ಗುಂಡಾಗಿ ಬದುಕಿದ**
**ಪ್ರಾಣಭಿಕ್ಷೆಯ ಬೇಡದೆಯೆ ಕೈಯಾರೆ ನೇಣೆಗೇರಿದ**

ಕೇಶವ ಉಮ್ಮರ್ಜಿ*

# ಬ್ರಿಟಿಷರ ಕಾಲದ ಸೇತುವೆಗಳು

ಬ್ರಿಟಿಷರ ಆಡಳಿತವು ೧೮ನೇ ಶತಮಾನದ ವೇಳೆಗೆ ಪ್ರಬಲ ರಾಜಕೀಯ ಶಕ್ತಿಯಾಗಿ ರೂಪುಗೊಂಡಿತ್ತು. ತತ್ಪರಿಣಾಮವಾಗಿ ಉತ್ತರ ಕರ್ನಾಟಕದ ಅಲ್ಲಲ್ಲಿ ಸಣ್ಣ ಪುಟ್ಟ ಸಂಸ್ಥಾನಗಳೊಂದಿಗೆ, ಮತ್ತು ಪೇಶ್ವೆಯೊಂದಿಗೆ ಬ್ರಿಟಿಷರ ಸಂಬಂಧ ಹದಗೆಟ್ಟು ಯುದ್ಧದ ಚಕಮಕಿ ಅಲ್ಲಲ್ಲಿ ಗೋಚರಿಸುತ್ತಿತ್ತು. ಮುಂದಿನ ಭೀಕರ ಕದನಗಳಿಗೆ ಸಿದ್ಧತೆ ಎಂಬಂತೆ ಬ್ರಿಟಿಷರು ಅಲ್ಲಲ್ಲಿ ಸುಸಜ್ಜಿತ ರಸ್ತೆ, ಹಳ್ಳ-ಕೊಳ್ಳ, ನದಿಗಳಿಗೆ ಬಲವಾದ ಸೇತುವೆಗಳನ್ನು ನಿರ್ಮಿಸತೊಡಗಿದರು.



*ಜಮಖಂಡಿ ತಾಲೂಕಿನಲ್ಲಿ ಜಲಜಶಿಲೆಗಳು ಹೆಚ್ಚು. ಇವುಗಳ ಮೇಲುಹೊದಿಕೆ ನೀರಿನ ಕೊರೆತಕ್ಕೆ ಈಡಾಗುತ್ತದೆ. ಈ ಭೌಗೋಳಿಕ ಪರಿಸರ ಕಂಡ ಬ್ರಿಟಿಷರು ತಮ್ಮ ಸೈನ್ಯ ಸಾಗಿಸಲು ಸಾರ್ವಕಾಲಿಕ ರಸ್ತೆ ನಿರ್ಮಾಣಕ್ಕಾಗಿ ಹಳ್ಳಕೊಳ್ಳ, ನದಿಗಳಿಗೆ ಸೇತುವೆಗಳನ್ನು ಕಟ್ಟಿದರು. ಸೇತುವೆಗೆ ಕೆಂಪು ಕಲ್ಲುಗಳನ್ನು ಬಳಸಿದರು. ಅವು ಇಂದಿಗೂ ಮುಕ್ಕಾಗದೆ ಉಳಿದಿವೆ.*

ಭಾರತದಲ್ಲಿ ಐದು ನದಿಗಳನ್ನು ಹೊಂದಿದ ಪಂಜಾಬಿನ ನಂತರದ ಸ್ಥಾನ ಬಿಜಾಪುರ ಜಿಲ್ಲೆಗೆ ಸೇರುತ್ತದೆ. ಹೀಗಾಗಿ ಜಮಖಂಡಿಯಿಂದ ಪಶ್ಚಿಮಕ್ಕೆ, ಉದ್ದಕ್ಕೆ ಹಬ್ಬಿದ ಬೆಟ್ಟದ ಶ್ರೇಣಿ ಮಳೆಗಾಲದಲ್ಲಿ ತುಂಬಿ ಹರಿಯುವ ಜಲರಾಶಿಗಳಿಗೆ ದಾರಿ ಮಾಡಿ ಕೊಟ್ಟಿದೆ.

ಜಮಖಂಡಿ ತಾಲೂಕಿನಲ್ಲಿ ಹೆಚ್ಚಾಗಿ ಕಂಡುಬರುವ ಜಲಜ ಶಿಲೆಗಳ ಮೇಲೆ ಪಶ್ಚಿಮ ಮತ್ತು ಉತ್ತರಗಳಲ್ಲಿ ದಖನ್ ಪದರು ಕಲ್ಲುಗಳು ಮುಚ್ಚಿಕೊಂಡಿವೆ. ಇವುಗಳ ಮೇಲು ಹೊದಿಕೆಯು ನೀರಿನ ಕೊರೆತಕ್ಕೆ ಸವೆತ ಕಂಡು ಒಳ ಪದರಿನ ಮೂಲಕ



* ಅಗಸ್ತ್ಯ ಕುಟೀರ, ಹುನ್ನೂರು, ಬಾಗಲಕೋಟೆ, ೫೮೭ ೧೧೯

ಜೇಡಿಮಣ್ಣು ಸುಣ್ಣ ಕಲ್ಲುಗಳು ಕರಗಿ, ಬೆಟ್ಟದಿಂದ ಇಳಿದು ಬರುವ ನೀರಿನ ಪ್ರಮಾಣ ಹೆಚ್ಚಲು ಸಹಕಾರಿಯಾಗಿದೆ.

ಈ ಎಲ್ಲ ಭೌಗೋಲಿಕ ಪರಿಸರವನ್ನು ಅಧ್ಯಯನ ಮಾಡಿದ ಬ್ರಿಟಿಷ್ ಅಧಿಕಾರಿಗಳು ತಮ್ಮ ಸೈನ್ಯವನ್ನು ಸುರಕ್ಷಿತವಾಗಿ ಈ ಭಾಗಕ್ಕೆ ತರಲು ಕುಡಚಿ- ಜಮಖಂಡಿ ನಡುವೆ ಸಾರ್ವಕಾಲಿಕ ರಸ್ತೆಯನ್ನು ನಿರ್ಮಿಸಿದರು. ಬ್ರಿಟಿಷ್ ಸೈನ್ಯಕ್ಕೆ ರೈಲು ಮೂಲಕ ಕುಡಚಿಗೆ ಬಂದು, ಕುಡಚಿಯಿಂದ ಜಮಖಂಡಿಗೆ ಬರಲು ಈ ರಸ್ತೆ ಸಂಪರ್ಕ ಅವಶ್ಯವಿತ್ತು.

ಇದೇ ವೇಳೆಗೆ ಬಿಜಾಪುರ ಜಿಲ್ಲೆಯ ಪಶ್ಚಿಮ ಭಾಗಕ್ಕೆ ಅಂದರೆ ಈಗಿನ ಬಾಗಲಕೋಟೆ ಜಿಲ್ಲೆಯಲ್ಲಿ ಹಲಗಲಿ ಬಂಡಾಯ, ಸಿಂಧೂರ ಲಕ್ಷ್ಮಣನ ಬಂಡಾಯ, ಮತ್ತು ಜಮಖಂಡಿ ಬಂಡಾಯ ಎಂಬ ಇತ್ಯಾದಿ ಹಲವು ಸ್ವಾತಂತ್ರ್ಯ ಚಳುವಳಿಯ ಬೆಂಕಿ ಕಿಡಿಗಳು ಬ್ರಿಟಿಷರನ್ನು ನಿದ್ದೆಗೆಡಿಸಲಾರಂಭಿಸಿದ್ದವು. ಹೀಗಾಗಿ ಬ್ರಿಟಿಷ್ ಪೊಲಿಟಿಕಲ್ ಏಜೆಂಟ್ ಮ್ಯಾನಸನ್ ಎಂಬವನು ಆರು ನೂರು ಅಶ್ವದಳದ ಸೈನ್ಯದೊಂದಿಗೆ ಬರುತ್ತಾನೆ ಎಂದು ತಿಳಿದ ಲೆಫ್ಟನಂಟ ಕರ್ನಲ್ ಸೆಟನ್‌ಕರ್ ಎಂಬುವನು ಆತುರಾತುರವಾಗಿ ಜಮುಖಂಡಿ - ಕುಡಚಿ ರಸ್ತೆ ನಿರ್ಮಾಣಕ್ಕೆ ತೊಡಗಿದನು.

ಆದರೆ ರಸ್ತೆ ಮಧ್ಯದಲ್ಲಿ ಹಲವಾರು ಹಳ್ಳ-ಕೊಳ್ಳಗಳು, ತುಂಬಿ ಹರಿಯುವ ಕೃಷ್ಣಾನದಿ ಅಡ್ಡ ಬರುತ್ತಿದ್ದು ಅವುಗಳಿಗೆಲ್ಲ ಸೇತುವೆಗಳನ್ನು ಕಟ್ಟುವ ಕಾರ್ಯ ಭರದಿಂದ ನಡೆಸಲಾಯಿತು. ೨೦ ಅಡಿ ಅಗಲ ೫೦ ಅಡಿ ಉದ್ದದ ಸೇತುವೆಯಿಂದ ಹಿಡಿದು ೫೦ ಅಡಿ ಅಗಲ ೭೦ ಅಡಿ ಉದ್ದದವರೆಗಿನ ಸೇತುವೆಗಳನ್ನು ನಿರ್ಮಿಸಲು ಆದೇಶಿಸಲಾಯಿತು. ಸ್ಥಳೀಯ ಲಭ್ಯವಿದ್ದ ಕೆಂಪು ಕಲ್ಲುಗಳನ್ನು (Red Granite) ಬಳಸಿ ಕೇವಲ ಕಲ್ಲು ಮತ್ತು ಗಾರೆಗಳಿಂದ ಒಟ್ಟು ಹನ್ನೊಂದು ಬ್ರಿಜ್‌ಗಳನ್ನು ನಿರ್ಮಿಸಲಾಯಿತು. ಮತ್ತು ಅವುಗಳಿಗೆ ಹೆಸರುಗಳನ್ನು ಕೊಟ್ಟರು. ಆದರೆ ಅವುಗಳಲ್ಲಿ ಕೆಲವು ಸ್ಥಳೀಯರು ನಾಶಗೊಳಿಸಿದರೆ, ಕೆಲವನ್ನು ಸರಕಾರದ ಲೋಕೋಪಯೋಗಿ ಇಲಾಖೆ ಮೇಲ್ದರ್ಜೆಗೆ ಏರಿಸುವ ನೆಪದಲ್ಲಿ ಒಡೆದು ಹಾಕಿತು.

ಅವುಗಳಲ್ಲಿ ಪ್ರಮುಖವಾದವುಗಳೆಂದರೆ :

೧) ಲೆಫ್ಟನಂಟ ಕರ್ನಲ್ ಸೆಟನ್‌ಕರ್ ಬ್ರಿಜ್.

೨) ಮ್ಯಾನಸನ್ ಬ್ರಿಜ್.

೩) ವಿಲಿಯಮ್ ಹೆನ್ರಿ ಬ್ರಿಜ್.

೪) ಲೆಫ್ಟನಂಟ ಕರ್ನಲ್ ವಾಲ್ಕಮ್ ಬ್ರಿಜ್.

೫) ಐದರ ಪೂಲು.

೬) ಕೆರೆ ಸೇತುವೆ.

೭) ಕೃಷ್ಣಾ ಸೇತುವೆ.

ಭರಪೂರ ಮಳೆಯಾದ ವರ್ಷ; ವರ್ಷದಲ್ಲಿ ಆರು ತಿಂಗಳು ತುಂಬಿ ಹರಿಯುವ ಹಳ್ಳದ ಮೇಲೆ ಸೈನ್ಯದ ಭಾರವಾದ ತೋಫುಗಳನ್ನು ಎಳೆದು ತಂದರೂ ಸೇತುವೆಗಳಿಗೆ ಯಾವುದೇ ಧಕ್ಕೆಯಾಗಿಲ್ಲ. ಅಷ್ಟೇ ಏಕೆ? ನೂರಾರು ವರ್ಷಗಳಿಂದ ಸ್ವಲ್ಪವೂ ಮುಕ್ಕಾಗದೇ ಹಾಗೇ ಇವೆ. ಇವುಗಳ ಮೇಲೆ ಇಂದಿಗೂ ನೂರಾರು ಟ್ರಕ್‌ಗಳು ಟನ್‌ಗಟ್ಟಲೇ ಭಾರ ಹೇರಿಕೊಂಡು ದಿನಾಲೂ ಸಂಚರಿಸುತ್ತವೆ. ಯಾವುದೇ ವ್ಯತ್ಯಯ ಉಂಟಾಗಿಲ್ಲ. ಇಂದು ಆಧುನಿಕ ತಂತ್ರಜ್ಞಾನ ಎಷ್ಟೊಂದು ಬೆಳವಣಿಗೆಯಾಗಿದೆ ಎಂದರೆ :

೧) ಮಹಾಪೂರ ಬಂದು ಎಷ್ಟೇ ನೀರಿನ ಭೋರ್ಗರೆತ ಸಂಭವಿಸಿದರೂ ಸೇತುವೆಗಳಿಗೆ ಹಾನಿಯಾಗದಂತೆ ಪ್ಲ್ಯಾನ್ ರೂಪಿಸುತ್ತಾರೆ.

೨) ಎಂತಹ ಭಾರವಾದ ವಾಹನಗಳೂ ನೂರಾರಲ್ಲ, ಸಾವಿರಾರು ಸಂಚರಿಸಿದರೂ ಜಪ್ಪೆನ್ನದಂತೆ ಅದರ ಭಾರ ಹೊರುವ ಶಕ್ತಿಯನ್ನು ಮುಂದಾಗಿ ಅಂದಾಜಿಸುತ್ತಾರೆ.

೩) ಇವನ್ನೆಲ್ಲ ರೂಪಿಸಲು, ಅಧ್ಯಯನ ಮಾಡಲು, ಪರೀಕ್ಷೆ ಮಾಡಲು ಹೊಸ ಹೊಸ ಅತ್ಯಾಧುನಿಕ ಬೃಹತ್ ಯಂತ್ರಗಳು ಲಭ್ಯವಿವೆ.

೪) ಇದಕ್ಕಾಗಿ ಇಂದು ಮುಂದುವರೆದ ಶಿಕ್ಷಣ ವ್ಯವಸ್ಥೆ ಇದೆ.

೫) ಕರಾರುವಾಕ್ಕಾಗಿ ನಿರೂಪಿಸುವ ಕಂಪ್ಯೂಟರ್ ತಂತ್ರಜ್ಞಾನವಿದೆ.

ಆದರೂ ಈ ಇಂಜಿನಿಯರ್‌ಗಳು ನಿರ್ಮಿಸಿದ ಸೇತುವೆಗಳು ಹತ್ತು ವರ್ಷಗಳೂ ಬಾಳುವದಿಲ್ಲ-ಎಂಬುದು ಅಚ್ಚರಿ ಮೂಡಿಸುವದರೊಂದಿಗೆ ಈ ಐಂದ್ರಜಾಲದ ಹಿಂದಿನ ಕಾಣದ ಕೈಯ ಭ್ರಷ್ಟಾಚಾರ ನಮ್ಮದೇ ದೇಶದ, ನಮ್ಮದೇ ಜನಗಳ ಸ್ವಾರ್ಥ ಸಾಧನೆಯ ಅತಿರೇಕದ ಪ್ರತೀಕವೆಂದರೆ ತಪ್ಪಾಗಲಿಕ್ಕಿಲ್ಲ.

ಆದರೆ ಬ್ರಿಟಿಷರು ಕಟ್ಟಿಸಿದ ಕಲ್ಲಿನ ಬ್ರಿಜ್‌ಗಳು ನೂರಾರು ವರ್ಷಗಳಿಂದ ಸ್ವಲ್ಪವೂ ಮುಕ್ಕಾಗದೇ ಹಾಗೇ ಇವೆ.



ಶ್ರೀಮತಿ ಇಂದಿರಾ ಹೆಗ್ಗಡೆ*

# ತುಳುನಾಡಿನಲ್ಲಿ ಗುರ್ಜರರು

*ಗುರ್ಜರರ ಮತ್ತು ರಾಷ್ಟ್ರಕೂಟರ ನಡುವೆ ನಡೆದದ್ದು ತಲೆಮಾರುಗಳವರೆಗಿನ ಕಾಳಗ. ತುಳುನಾಡಿನ ಗುರ್ಜರರು ಉತ್ತರದಿಂದ ವಲಸೆ ಬಂದಿರುವ ಸಾಧ್ಯತೆ ಇದೆ. ಅವರಲ್ಲಿ ಗುರ್ಜರನ್ನಾಯ, ಗುಜರನ್ನಾಯ ಕುಟುಂಬಗಳಿವೆ. ಬಂಟರಲ್ಲಿಯೂ ಗುರ್ಜರ ವಂಶವಿರುವುದು ಗಮನಾರ್ಹ.*

ಮೂಲತಃ ಗುರ್ಜರು ಎಂದರೆ ಗುಜರಾತಿನವರು. ಇಲ್ಲಿ ಗುರ್ಜರ ಎಂಬ ಪ್ರದೇಶವೂ ಇದೆ. ಉತ್ತರ ಭಾರತದಲ್ಲಿ ಗುರ್ಜರ ಎಂಬ ಬುಡಕಟ್ಟೂ ಇದೆ. ಇವರು ಪಶುಪಾಲನಾ ಜನಾಂಗ. ಪಶುಪಾಲನೆ ಇವರ ಕುಲ ಕಸುಬು. ಪಶುಗಳೊಂದಿಗೆ ಊರಿಂದೂರಿಗೆ ಅಲೆಯುತ್ತಾ ಪಶು ಉತ್ಪನ್ನಗಳನ್ನು ಮಾರಿ ಜೀವಿಸುವವರು. ಒಂದು ಊರಿನಲ್ಲಿ ನೆಲೆ ನಿಲ್ಲುವವರಲ್ಲ. ಇವರ ಮೈ ಬಣ್ಣ ಕೆಂಪು ಬಿಳಿ ಆಗಿದ್ದು ಇವರು ಹಾಲು ತುಪ್ಪ ತಿಂದು ಇವರ ಚರ್ಮ ಕಾಂತಿಯುತವಾಗಿದೆ ಎನ್ನುತ್ತಾರೆ ಈ ಪ್ರದೇಶದವರು.

ಗುರ್ಜರ-ಪ್ರತೀಹಾರ ಎಂಬುದು ಮಧ್ಯ ಭಾರತದ ರಾಜ ವಂಶಗಳು. ೬ನೆಯ ಶತಮಾನದ ಅಂತ್ಯದವರೆಗೆ ಗುರ್ಜರ ರಾಜ ವಂಶದ ಬಗ್ಗೆ ಮಾಹಿತಿ ಲಭ್ಯವಾಗುವುದಿಲ್ಲ. ಕ್ರಿ.ಶ. ೮ ಮತ್ತು ೯ನೆಯ ಶತಮಾನದಲ್ಲಿ ಇವರು ಪ್ರಬಲ ಅರಸು ಮನೆತನದವರಾಗಿ ಕಾಣಬರುತ್ತಾರೆ. ಗುರ್ಜರರು ಮೂಲತಃ ಹೂಣರ ಒಂದು ಉಪ ಪಂಗಡ ಆಗಿರಬಹುದು ಹಾಗೂ ಇವರು ಭಾರತವನ್ನು ಹೂಣರೊಂದಿಗೆ ಸುಮಾರು ೫ನೆಯ ಶತಮಾನದಲ್ಲಿ ಪ್ರವೇಶಿಸಿರಬಹುದು ಎಂಬ ವಾದವೂ ಇತ್ತು. ಆದರೆ ಈ ವಾದ ಈಗ ಬಿದ್ದುಹೋಗಿದೆ. ಗುರ್ಜರರು ಸ್ಥಳೀಯ ಮೂಲದವರು ಎಂಬುದಾಗಿ ಬಹುತೇಕ ಇತಿಹಾಸಕಾರರು ಹೇಳುತ್ತಾರೆ.

ಗುರ್ಜರರಿಗೂ ದಕ್ಷಿಣ ಭಾರತದ ರಾಷ್ಟ್ರಕೂಟ ದೊರೆಗಳಿಗೂ ಅನೇಕ ತಲೆಮಾರುಗಳವರೆಗೆ ಯುದ್ಧ ನಡೆದಿತ್ತು. ರಾಷ್ಟ್ರಕೂಟ ದೊರೆ ದಂತಿದುರ್ಗನು ಗಂಗಾ ಬಯಲಿನ ಕನ್ನೋಜವನ್ನು ವ್ಯಾಪಾರ ಕೇಂದ್ರವನ್ನಾಗಿ ಮಾಡಿಕೊಂಡಿದ್ದನು.

ರಾಷ್ಟ್ರಕೂಟರ ಒಂದು ಶಾಖೆ ಉಜ್ಜಯಿನಿಯಲ್ಲಿ ಇತ್ತು. ರಾಷ್ಟ್ರಕೂಟ ದೊರೆ ಅಮೋಘವರ್ಷನು ಬಂಡೆದ್ದ ತುಳುನಾಡಿನ ಆಳುಪ ವಿಮಲಾದಿತ್ಯನನ್ನು ಸೋಲಿಸಿ ಆಳ್ವಖೇಡವನ್ನು ಬಗ್ಗಿಸಿದನೆಂದು ಇತಿಹಾಸಕಾರ ಕೆ.ವಿ. ರಮೇಶರು ಹೇಳುತ್ತಾರೆ.[೧]

ಗುಜರಾತಿನಲ್ಲಿ ಇರುವ ಗುರ್ಜರ ವಂಶಕ್ಕೆ ಐತಿಹಾಸಿಕ ಹಿನ್ನೆಲೆ ಇರುವುದಲ್ಲದೆ ಅವರು ಅಲ್ಲಿಯ ಒಂದು ಬುಡಕಟ್ಟು ಜನಾಂಗ ಎಂಬುದು ಐತಿಹಾಸಿಕ ಸತ್ಯ. ಆದರೆ ತುಳುನಾಡಿನಲ್ಲಿ ಇರುವ ಗುರ್ಜರ ವಂಶದ ಹಿನ್ನೆಲೆ ಏನು ಎಂಬುದು ಇಲ್ಲಿಯ ಕುತೂಹಲ.

ಮೇಲೆ ತಿಳಿಸಿದಂತೆ ಸುಮಾರು ೫-೬ನೆಯ ಶತಮಾನದಿಂದ ಭಾರತದ ಎಲ್ಲ ಅರಸರು ಪರಸ್ಪರ ಕಾದಾಡುವುದರಲ್ಲೇ ನಿರತರಾಗಿದ್ದರು. ಈ ಕಾದಾಟ ಭಾರತದಲ್ಲಿ ಮುಸ್ಲಿಮರ ಆಳ್ವಿಕೆ ನೆಲೆಗೊಳ್ಳುವವರೆಗೂ ಮುಂದುವರಿದಿತ್ತು. ಈ ರೀತಿ ನಿರಂತರ ಯುದ್ಧಕ್ಕೆ ಸಿಲುಕುವ ಯೋಧ ಕುಟುಂಬಗಳು ಅಥವಾ ಅರಸು

* ಸಂ. ೬; ಕೃಷ್ಣ ರೆಸಿಡೆನ್ಸಿ, ಅಮರಜ್ಯೋತಿನಗರ, ವಿಜಯನಗರ, ಬೆಂಗಳೂರು - ೫೬೦ ೦೪೦

ಕುಟುಂಬಗಳು ತಮ್ಮ ಮೂಲ ನೆಲೆಯಿಂದ ಬಹುದೂರ ಹೋಗುವ ಹೋದಲ್ಲೇ ನೆಲೆಸುವ ಸಾಧ್ಯತೆ ಇದೆ.

ಇದಲ್ಲದೆ ಪುರಾತತ್ವ ವಿಶ್ಲೇಷಣಾಕಾರರು ಹೇಳುವಂತೆ ಒಂದು ಪ್ರದೇಶದಲ್ಲಿ ಆಗುವ ಪ್ರಾದೇಶಿಕ ವಿಕೋಪದಿಂದ ಆ ಪ್ರದೇಶದ ಕೆಲವು ಬುಡಕಟ್ಟುಗಳು ಇತರ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ಕಾಲಾನಂತರ ಅಲ್ಲಿಯ ಜನರ ಸಂಪ್ರದಾಯದಲ್ಲಿ ಬೆರೆತು ತಮ್ಮ ಮೂಲವಾಸನೆಯಿಂದ ದೂರವಾಗುವ ಸಾಧ್ಯತೆ ಕೂಡಾ ಇದೆ. ಉತ್ತರ ಭಾರತದಲ್ಲಿ ಬರಗಾಲ ಬಂದಾಗ ಚಂದ್ರಗುಪ್ತ ಅರಸನು ತನ್ನ ಪರಿವಾರದೊಂದಿಗೆ ಶ್ರವಣಬೆಳಗೊಳಕ್ಕೆ ಬಂದು ಅಲ್ಲಿಯೇ ಸಾವನ್ನಪ್ಪಿದ ಬಗ್ಗೆ ಐತಿಹಾಸಿಕ ದಾಖಲೆ ಇದೆ. ಸಾಳ್ವ ವಂಶದ ಸಾಂತರಸರು ಉತ್ತರದ ಮಥುರೆಯಿಂದ ಬಂದವರು ಎಂಬುದಕ್ಕೆ ಶಾಸನಾಧಾರಾವಿದೆ. ಆಳುಪರಿಗೂ ಪೊಂಬುಚ್ಚದ ಸಾಳ್ವ ವಂಶದ ಸಾಂತರರಿಗೂ ಅನೇಕ ತಲೆಮಾರುಗಳ ಕಾಲ ವೈವಾಹಿಕ ಸಂಬಂಧ ಮುಂದುವರಿದಿತ್ತು ಎಂಬುದಾಗಿ ಇತಿಹಾಸಕಾರ ಕೆ.ವಿ. ರಮೇಶ ಬರೆಯುತ್ತಾರೆ. ತುಳುವರಲ್ಲಿ ಸಾಳ್ವ ವಂಶದ ಅನೇಕ ಕುಟುಂಬಗಳಿವೆ.[೨]

ಮೇಲಿನ ಯಾವುದಾದರೂ ಕಾರಣಗಳಿಂದ ಗುರ್ಜರ ಗುಂಪು ದಕ್ಷಿಣಕ್ಕೆ ಬಂದಿರಬಹುದೆ? ಗುರ್ಜಗರ ಜೊತೆಗೆ ಅರಸುಗಳಿಗೆ, ಯೋಧರಿಗೆ ನಡೆದಿರುವ ವೈವಾಹಿಕ ನಂಟುತನ ಪರಿಣಾಮವಾಗಿ ಗುರ್ಜರ ವಂಶ ತುಳುನಾಡಿನಲ್ಲಿ ಯೋಧ ಜನಾಂಗವಾಗಿ ಮುಂದುವರಿಯಿತೆ? ಈ ಎರಡೂ ಸಾಧ್ಯತೆಗಳು ಇವೆ.

ತುಳುನಾಡಿನಿಂದ ಹೊರಗೆ ಹೆಣ್ಣು/ಕೊಟ್ಟು ತರುವುದನ್ನು (ಬ್ರಾಹ್ಮಣೇತರರು) ಈಗಲೂ ವಿರೋಧಿಸುತ್ತಿದ್ದಾರೆ. ಒಂದು ವೇಳೆ ಹೆಣ್ಣು ಕೊಟ್ಟರೂ ಹೆಣ್ಣು ತರಬಾರದು ಎಂಬ ಬಗ್ಗೆ ಅಭಿಪ್ರಾಯ ಭೇದ ಇಲ್ಲ. ಇಲ್ಲಿಗೆ ಬರುವ ಹೆಣ್ಣು ಪಿತೃಪ್ರಧಾನ, ಪಿತೃವಂಶೀಯ (ಮಕ್ಕಳ ಕಟ್ಟು) ಸಂಪ್ರದಾಯದವಳಾಗುವುದರಿಂದ ತುಳುವರು ಬಹಳ ಅಗತ್ಯ ಎಂದು ಭಾವಿಸುವ ಕುಟುಂಬ ಈ ಹೆಣ್ಣಿಗೆ (ಮನೆಗೆ ಬಂದ ಸೊಸೆಗೆ) ಮುಂದೆ ಇಲ್ಲವಾಗುವುದು. ಆಕೆ ಮತ್ತು ಅವಳ ಮಕ್ಕಳು ಕುಟುಂಬ ಇಲ್ಲದವರಾಗುತ್ತಾರೆ ಎಂಬ ಆತಂಕ ಇಲ್ಲಿ ಈಗಲೂ ಇದೆ. ಆದರೂ ಆಳರಸರ ಕಾಲದಲ್ಲಿ ಇಂತಹ ಮದುವೆಗಳು ತಮ್ಮ ರಾಜ್ಯದ ಮೇಲಾಗುವ ಆಕ್ರಮಣವನ್ನು ತಪ್ಪಿಸಲು ನೆರವಾಗುತ್ತಿದ್ದುವು ಎಂಬುದು ಐತಿಹಾಸಿಕ ಸತ್ಯ. ಹೀಗಾಗಿ ಆಳರಸರುಗಳ ಒಳಗೆ ವೈವಾಹಿಕ ನಂಟುತನ ನಡೆಯುತ್ತಿತ್ತು. ಉದಾಹರಣೆಗೆ ಹಲ್ಮಿಡಿಯ ಶಾಸನದಲ್ಲಿ ಬರುವ ಭಟರಿಕುಲದ ಆಳಪಗಣ ಪಶುಪತಿಯ ರಾಣಿ ಲಕ್ಷ್ಮಿಯು ಕಾಕುಸ್ಥವರ್ಮನ ಪುತ್ರಿಯಲ್ಲಿ ಒಬ್ಬಳು ಎಂಬುದು ಇತಿಹಾಸಕಾರರ ಅಂಬೋಣ. ಕದಂಬ ಕಾಕುಸ್ಥವರ್ಮನು ಬೇರೆ ಬೇರೆ ವಂಶಗಳಿಗೆ ಸೇರಿದ ಅರಸರುಗಳಿಗೆ ತನ್ನ ಪುತ್ರಿಯರನ್ನು ಮದುವೆ ಮಾಡಿ ಕೊಟ್ಟಿದ್ದನು ಎಂದು ಹೇಳಲಾಗಿದೆ. ಚಾಳುಕ್ಯ ವಿಜಯಾದಿತ್ಯನ ತಂಗಿ ಕುಂಕುಮಾದೇವಿಯನ್ನು ಕ್ರಿ.ಶ. ೭೮೦ರಿಂದ ೭೩೦ರವರೆಗೆ ಆಳಿದ್ದ ಗನೆಯ ಚಿತ್ರವಾಹನ ಮದುವೆಯಾಗಿದ್ದನು.[೩] ಹೊಯ್ಸಳ ಮೂರನೆಯ ವೀರ ಬಲ್ಲಾಳನಿಗೆ ಆಳುಪ ರಾಣಿ ಕಿಕ್ಕಾಯಿ ತಾಯಿಯನ್ನು ಮದುವೆ ಮಾಡಿಕೊಟ್ಟಿದ್ದು ಗುಡ್ಡಗಾಡು ಮೂಲದ ಹೊಯ್ಸಳರಿಗೆ ಪ್ರತಿಷ್ಠೆಯಾಗಿತ್ತು; ಆಳುಪರಿಗೆ ಅನಿವಾರ್ಯ ಒಪ್ಪಂದ ಆಗಿತ್ತು; ಆದುದರಿಂದ ಕಿಕ್ಕಾಯಿತಾಯಿ ತವರಿನಲ್ಲಿ ಉಳಿದಳು ಎನ್ನುತ್ತಾರೆ ಇತಿಹಾಸಕಾರರು. ಆದುದರಿಂದಲೇ ಆಕೆ ಹೊಯ್ಸಳ ರಾಜ್ಯದಲ್ಲಿ ನೆಲೆಸಿರಲಿಲ್ಲ. ಅವಳಾಗಲೀ ಅವಳ ಮಗ ಕುಲಶೇಖರ ನಾಗಲೀ ಆಳುಪ ವಂಶದವರಾಗಿ ಮುಂದುವರಿಯುತ್ತಾರೆ.

ಮಾತೃವಂಶೀಯ ತುಳುವ ಸಂಪ್ರದಾಯದ ಕುಟುಂಬಕ್ಕೆ ಪಿತೃವಂಶೀಯ ಕುಟುಂಬದಿಂದ ಹೆಣ್ಮು ತಂದರೆ ಆ ಹೆಣ್ಣು ಯಾವ ಮನೆತನದಿಂದ ಬರುತ್ತದೋ ಆ ಮನೆತನದ ಮೂಲಕ ಅಥವಾ ಆಕೆಯ ಮೂಲಕ ಅವಳ ಸಂತಾನ, ಅವಳ ಕುಟುಂಬ ತುಳುನಾಡಿನಲ್ಲಿ ಗುರುತಿಸಿ ತುಳುನಾಡಿನ ಸಂಪ್ರದಾಯಗಳಿಗೆ ಬದ್ಧವಾಗುತ್ತದೆ. ಉದಾಹರಣೆಗೆ ಹಲ್ಮಿಡಿಯ ಶಾಸನದಲ್ಲಿ ಬರುವ ಕದಂಬ ಕುಲದ ಮೂಲಕ ಗುರುತಿಸಬೇಕಾಗುತ್ತದೆ. (ಈಗಲೂ ಸಾಮಂತ ಬಲ್ಲಾಳರಲ್ಲಿ, ಬಂಟರಲ್ಲಿ ಮತ್ತು ಜೈನರಲ್ಲಿ ಕದಂಬ ಕುಲವಿದೆ.). ಚಾಳುಕ್ಯರ ಹೆಣ್ಣನ್ನು ಚಾಳುಕ್ಯ ಕುಲದ ಮೂಲಕ ತುಳುನಾಡಿನಲ್ಲಿ ಗುರುತಿಸಬೇಕಾಗುತ್ತದೆ. (ಬ್ರಾಹ್ಮಣರಲ್ಲಿ ಗೋತ್ರಗಳು ಗೊತ್ತಾಗದಾಗ ಅಥವಾ ಇನ್ನಿತರ ಸಂದರ್ಭದಲ್ಲಿ ಅವರನ್ನು ಕಾಶ್ಯಪ ಗೋತ್ರ ಎಂದು ವ್ಯವಹರಿಸುತ್ತಾರೆ. ಅಂತಹ ಪದ್ಧತಿ ತುಳುನಾಡಿನ ಬಳಿ -ವಂಶ-ವ್ಯವಸ್ಥೆಯಲ್ಲಿ ಇಲ್ಲ. ಇಲ್ಲಿ ಒಬ್ಬ ವ್ಯಕ್ತಿಗೆ ಅವರ ಮಾತೃ ಮೂಲವೇ ಮುಖ್ಯ.)

ಶಾಸನಗಳಲ್ಲಿ 'ಗುಜರಿ' ಎಂದು 'ಗೋಜರಡಿ' ಎಂದೂ ಉಲ್ಲೇಖವಾಗಿದೆ. ಕೋಡಿಯಾಲ ಬೈಲಿನ ಶಾಸನ ಕ್ರಿ.ಶ. ೧೪೨೦ರ ಕಾಲವನ್ನು ಸೂಚಿಸುತ್ತದೆ. 'ಹರಿಯಣಂಗಳ ಮಗ ದೇವರ ಸೇನಾಪತಿ ಗುಜರಿ ಬಳಿಯ ಸೆಟ್ಟಿಕಾರ (ಬಿ) ಕೇಸಣ್ಣಸೆಟ್ಟಿ (ಪ)ಯವರ ಮಾದಾಸತಿಯರಾದ ತೋಂಟ ಭೂಮಿ ವಿವರ....'[೪] ಈ ಶಾಸನದಲ್ಲಿ ಉಲ್ಲೇಖಿಸಲಾಗಿರುವವರು ಗುಜರಿ ಬಳಿಯ ಸೇನಾಪತಿ ಮನೆಯವರು ಕೊಡಿಯಾಲ ಗುತ್ತು ಸೇನಾಪತಿ ಮನೆ. ಈಗ ಇಲ್ಲಿ ಇರುವವರು ಗುಜರಿ ಬಳಿಯವರು. ಕ್ರಿ.ಶ. ೧೪೨೦ ರಿಂದ ಈ ಮನೆಯಲ್ಲಿ ಗುಜರಿ ವಂಶದವರೇ ಮುಂದುವರಿದುಕೊಂಡು ಬಂದಿದ್ದಾರೆ. ವಿಜಯನಗರ ಅರಸರ ಕಾಲದಲ್ಲಿ ಕುಡ್ಲದ ಗುತ್ತು ಮಂಗ್ಳೂರು ಹೋಬಳಿಗೆ ಒಂದನೆಯ ಮನೆಯಾಗಿತ್ತು. ಮಂಗಳೂರು ಪರಿಸರದ ಜನ 'ಕುಡ್ಲದ ಗುತ್ತು' ಅರಸು ಪರಂಪರೆಯ ಮನೆ ಎನ್ನುತ್ತಾರೆ. ಕುಡ್ಲದ ಗುತ್ತು ಯಾನೆ ಕೊಡಿಯಾಲ ಗುತ್ತಿಗೆ ಸೇರಿದ ಹಲವಾರು ಗುತ್ತುಗಳು ಇದ್ದುವು.

ತುಳುನಾಡಿನಲ್ಲಿ ಅನೇಕ ಗುರ್ಜರ ಕುಟುಂಬಗಳಿವೆ. ಇವರನ್ನು ಗುರ್ಜರನ್ನಾಯ, ಗುಜರನ್ನಾಯ ಎಂದು ಕರೆಯಲಾಗು

ತ್ತದೆ. ಹೆಚ್ಚಾಗಿ ಬಂಟರ ಗುತ್ತು ಬೀಡುಗಳ ಧನಿಕರಾಗಿ ಜಮೀನ್ದಾರರಾಗಿ ಕಾಣಬರುತ್ತಾರಾದರೂ ಬಿಲ್ಲವರಲ್ಲಿ ಮೊಗವೀರರಲ್ಲಿ ಇವರು ಇದ್ದಾರೆ. ಆಶ್ಚರ್ಯ ಎಂಬಂತೆ ಈ ಮೂರು ವರ್ಗಗಳನ್ನು ಕೊರಗರ ಹಾಡೊಂದು ಅಕ್ಕ ತಂಗಿಯರ ಮಕ್ಕಳು ಎಂದು ಬಣ್ಣಿಸುತ್ತವೆ. ಆ ಹಾಡಿನ ಕನ್ನಡಾನುವಾದ ಹೀಗಿದೆ:

ಧನಿಕರಾದ ಒಕ್ಕಲಿಗರು ಮೊಗೇರರ ತಂಗಿ ಮಕ್ಕಳು; ಬಿಲ್ಲವರ
ಅಕ್ಕನ ಮಕ್ಕಳು ।।ಲೇಲೇ-ಲೇಲೇಲಾ।।
ಆರು ಮೊಳ (ಕಾಂಗ್) ಕಪ್ಪು ವಸ್ತ್ರ ಉಟ್ಟರು; ಮೂರು ಮೊಳ
ಎದುರು ಸೆರಗು ಬಿಟ್ಟರು ।।ಲೇಲೇ।।
ಕಡಲಿನವರು ಮಡಲಿನವರು (ಮುರ್ತೆದಾರರು) ಪಾಲು ಕೇಳಿ
ಪಾಲು ತೆಗೆದರು. ।।ಲೇಲೇ।।
ಪುಣಿ ಇಲ್ಲದ ಉಪ್ಪು ನೀರ ಕಡಲ ಗದ್ದೆಯ ಮರಕಲರು
(ಮೊಗವೀರರು) ಪಾಲು ತೆಗೆದರು.
ತಣ್ಣೀರ ನೆಲದ ಗದ್ದೆ ಬಾರಗರು ಪಾಲು ತೆಗೆದರು. ।।ಲೇ।
ಕೆರೆ ಬದಿಯ ಸಿಹಿ ನೀರ ಮರದಲ್ಲಿ ದುಡಿದರು ಮಡಲರಲ್ಲವೇ।।
(ಬಿಲ್ಲವರು)
ಕಾಟು ಕಟ್ಟಿದರು ಕರ್ಬಾಸ್ ಖರೀದಿಸಿದರು; ಆರು ಜೋಡು
ಕೋಣ ಕಟ್ಟಿದರು;
ಮೂರು ಜೋಡು ಎತ್ತು ಕಟ್ಟಿದರು ।।ಲೇಲೇ।।
ಮೂರು ಬಲ್ಲ ಬಿತ್ತಿದರು; ಮೂವತ್ತು ಕೊಯಿಲು ಕುಯಿದರು
।।ಲೇಲೇ।।
ಮೂಡು ನೋಡಿದರು; ಪಡುವಲಿಗೆ ಬಿತ್ತಿದರು; ಬಲೆ ಕೊಡವಿದರು;
ದೋಣಿ ತುಂಬಿದರು ।।ಲೇಲೇ।।
ಬಲಕ್ಕೆ ಹಿಡಿದರು ಎಡಕ್ಕೆ ಹಚ್ಚಿದರು; ಮಡಕೆ ಕಟ್ಟಿದರು; ಕಳ್ಳು
ತೆಗೆದರು; ಕಾಲ ಕಳೆದರು ।।ಲೇಲೇ।।
ಕಾಲ ಕಳೆದರೂ ಕಾಲಕ್ಕೊಂದು ಕೋಲ; ಕೋಲ ಕೊಡಬಹುದು;
ಕೋಲ, ಕೋಲಕ್ಕೊಂದು 'ಕಂದೆಲು' ಕಳ್ಳು ಕೊಡಬಹುದು
।।ಲೇಲೇ।।

ಮೇಲಿನ ಉರಲ್‌ನ ಅಭಿಪ್ರಾಯಗಳು ಮೊಗವೀರರು ಬಂಟರ ತಂಗಿಯ ಮಕ್ಕಳು, ಬಿಲ್ಲವರು ಅಕ್ಕನ ಮಕ್ಕಳು ಎಂಬ ಹೇಳಿಕೆಯನ್ನು ನೀಡುತ್ತವೆ. ಈ ಮೂರು ವರ್ಗಗಳಲ್ಲಿ ಒಂದೇ ಹೆಸರಿನ ಕೆಲವು ಬಳಿಗಳು ಇವೆ. ಕೊರಗರ ಉರಲ್ ನೀಡುವ ಮಾಹಿತಿಯನ್ನು ಸಾಲಿಬಳಿ, ಗುಜರ ಬಳಿ, ಕುಂದರಬಳಿ ಬಂಗರ ಬಳಿ ಮುಂತಾದ ಬಳಿಗಳು ಸಮರ್ಥಿಸುತ್ತವೆ.[೫] ನಾನು ಗುರ್ಜರ ಬಳಿಯ ಬಂಟರ ಸುಮಾರು ೩೦ ಮೂಲ ಕುಟುಂಬಗಳನ್ನು ಗುರುತಿಸಿದ್ದೇವೆ.

ತುಳುನಾಡಿನ ಅನನ್ಯತೆ ಎಂದರೆ ಅದು ಬದಲಾವಣೆಗಳನ್ನು ಸ್ವೀಕರಿಸುತ್ತಲೇ ಪರಂಪರೆಯನ್ನು ಉಳಿಸಿಕೊಂಡಿರುವುದು. ಹೊಸದನ್ನು ಮುಕ್ತವಾಗಿ ಸ್ವಾಗತಿಸುತ್ತಲೇ ಪಾರಂಪರಿಕ ನಂಬುಗೆಗಳನ್ನು, ಸಂಸ್ಕೃತಿ ಸಂಪ್ರದಾಯಗಳನ್ನು ಅನುಚಾನವಾಗಿ ಮುಂದುವರಿಸಿಕೊಂಡು ಬರುತ್ತಿರುವುದು. ಅಂತಹ ಒಂದು ನಂಬಿಕೆ, ಪರಂಪರೆ ಇಲ್ಲಿಯ ಬಳಿ/ಬಜೆ ವ್ಯವಸ್ಥೆ.

ಬಳಿ ಎಂಬುದು ಗೋತ್ರ, ವಂಶ ಅಥವಾ ಕುಲಕ್ಕೆ ಸಂವಾದಿಯಾದ ಪದ. ಬ್ರಾಹ್ಮಣರಲ್ಲಿ ಗೋತ್ರ ಸಂಪ್ರದಾಯ ಹೇಗೋ ಹಾಗೆಯೇ ತುಳುನಾಡಿನ ಬ್ರಾಹ್ಮಣೇತರರಲ್ಲಿ ಬರಿ(ಜೆ)ಯ ಮೂಲಕ ಒಂದು ಕುಟುಂಬವನ್ನು ಮತ್ತು ಅದರ ಶಾಖೆಗಳನ್ನು ಗುರುತಿಸುತ್ತಾರೆ. ಶಾಖೆಗಳು ಎಷ್ಟು ಬೆಳೆದರೂ ಮೂಲತಃ ಆ ಬಳಿಯ ಹೆಸರು ಬದಲಾಯಿಸುವ ಕ್ರಮ ಇಲ್ಲ. ಗೋತ್ರದಲ್ಲಿ ಪ್ರವರ ಇರುವಂತೆ ಇಲ್ಲಿ ಕೂಡು ಬಳಿಯಿದೆ. ಉದಾಹರಣೆಗೆ ಶ್ರೀರಾಮನನ್ನು ಸೂರ್ಯ ವಂಶದ ಮೂಲಕ, ಇಕ್ಷ್ವಾಕು ವಂಶದ ಮೂಲಕ ರಘು ವಂಶದ ಮೂಲಕ ಗುರುತಿಸುವಂತೆ ತುಳುನಾಡಿನಲ್ಲಿಯೂ ಅಂತಹ ಪರಂಪರೆಯನ್ನು ಕೂಡು ಬಳಿ ಎನ್ನುತ್ತಾರೆ. ಉದಾಹರಣೆಗೆ ಹೇಳುವುದಿದ್ದರೆ ಇಲ್ಲಿ ಕುಂದರ ಬಳಿ ಇದೆ. ಕ್ರಿ.ಶ. ೯೬೮ರಲ್ಲಿ ಕದ್ರಿಯಲ್ಲಿ ಲೋಕೇಶ್ವರ ಪ್ರತಿಮೆಯನ್ನು ಪ್ರತಿಷ್ಠಾಪಿಸಿದ ಶ್ರೀಕುಂದ ವರ್ಮರಸನ ಅನಂತರ ಕುಂದಬಳಿಯ ಶಾಖೆ ಬೆಳೆದಿರಬೇಕು. ಈ ಕುಂದ ಬಳಿಯು ಮೂಲತಃ ಕೆಲ್ಲ ಬಳಿ ಎನ್ನುತ್ತಾರೆ. ಹಲ್ಮಿಡಿಯ ಶಾಸನದಲ್ಲಿ 'ಪಶುಪತಿ ನಾಮಧೇಯ ನಾ ಸರಕ್ಕೆಲ್ಲ ಭಟರಿಯಾ ಪ್ರೇಮಾಲಯ ಸುತನ್ಗೆ' ಎಂಬ ಉಲ್ಲೇಖ ಬರುತ್ತದೆ. ಮುಂದಿನ ಶತಮಾನಗಳ ಶಾಸನಗಳಲ್ಲಿ ನಮಗೆ ಕೆಲ್ಲ ವಂಶದ ಬಗ್ಗೆ ಹೆಚ್ಚು ವಿವರ ದೊರಕುತ್ತದೆ. ಈ ಕೆಲ್ಲ ವಂಶ ಬಂಟರಲ್ಲಿ ಜೈನರಲ್ಲಿ ಬಲ್ಲಾಳರಲ್ಲಿ ಈಗಲೂ ರೂಢಿಯಲ್ಲಿ ಇರುವ ವಂಶ.

೧೯೪೭ರವರೆಗೆ ಮುಲ್ಕಿಯ ಸಾಮಂತರಾಗಿದ್ದವರು ಕುಂದರ ಬಳಿಯವರು. ಅದೇ ರೀತಿ ಎಲ್ಲೂರಲ್ಲಿ ಅರಸರಾಗಿದ್ದವರು ಕುಂದ ಬಳಿಯವರು. ಕೆಲ್ಲ ಬಳಿ ಮತ್ತು ಕುಂದರ ಬಳಿ ಕೂಡು ಬಳಿ. ಕುಂದರ ಬಳಿಯ ಅನೇಕ ಕುಟುಂಬಗಳು ಕೆಲ್ಲರ ಬಳಿಯ ಅನೇಕ ಕುಟುಂಬಗಳು ಇಲ್ಲವೆ. ಸಂಪ್ರದಾಯ ಪ್ರಕಾರ ಈ ಎರಡೂ ಕೂಡು ಬಳಿಗಳೊಳಗೆ ಮದುವೆ ನಿಷೇಧವಿದೆ.

ಅದೇ ರೀತಿ ನಾಗ ಬಳಿಯ ಕೂಡು ಬಳಿಯಾಗಿ ತೋಳಾರ ಬಳಿಯಿದೆ. ನಾಗಬಳಿಯ ಒಂದು ಶಾಖೆ ಆ ಬಳಿಯ ಪ್ರಸಿದ್ಧ ಅರಸನಾದ ತೋಳಾರರ ಮೂಲಕ ಗುರುತಿಸಿ ತೋಳಾರ ಬಳಿಯು ಹುಟ್ಟಿರಬೇಕು.

ಸಾಳ್ವಬಳಿ ಮೂಲತಃ ಆರ್ಯಬಳಿ ಎನ್ನುತ್ತಾರೆ. ಸಾಳ್ವ ಬಳಿಯವರು ಮೂಲತಃ ಉತ್ತರ ಭಾರತದ ಮಥುರೆಯಿಂದ ದಕ್ಷಿಣಕ್ಕೆ ವಲಸೆ ಬಂದವರೆಂದೂ ದಕ್ಷಿಣ ದೇಶಕ್ಕೆ ಬಂದು ಜೈನಧರ್ಮಕ್ಕೆ ಪರಿವರ್ತನೆಗೊಂಡು ಸಾಂತರ ವಂಶದವರಾದರೆಂದು ಅವರ ಶಾಸನಗಳಲ್ಲಿ ಹೇಳಲಾಗಿದೆ ಎನ್ನುತ್ತಾರೆ ಕೆ.ವಿ. ರಮೇಶರು. ಸಾಂತರರು ಸಾಳ್ವ ವಂಶವೆಂದು ಗುರುತಿಸಲ್ಪಡುವುದರಿಂದ ಸಾಳುವ ವಂಶ ಮತ್ತು ಆರ್ಯವಂಶ ಕೂಡು ಬಳಿ ಎಂಬ ರೂಢಿಗತ

ನಂಬಿಕೆಯ ಖಚಿತತೆ ಲಭ್ಯವಾಗುತ್ತದೆ. ಈ ಎರಡೂ ಬಳಿಗಳು ತುಳುನಾಡಿನ ರೂಢಿಯಲ್ಲಿ ಇರುವ ಬಳಿಗಳು.

ಹೀಗೆ ತುಳುನಾಡಿನಲ್ಲಿ ಅನೇಕ ತುಳು ಕುಟುಂಬಗಳು ಬಳಿಗಳ ಮೂಲಕ ಗುರುತಿಸಿಕೊಳ್ಳುತ್ತಿವೆ. ಈ ಬಳಿಗಳು ಒಂದು ಕುಟುಂಬ ಎಂಬ ಪ್ರಬಲ ನಂಬಿಕೆ ಇರುವುದರಿಂದ ಈ ಬಳಿಗಳ ಒಳಗೆ ಪರಸ್ಪರ ಮದುವೆ ನಿಷಿದ್ಧ. ಮಾತ್ರ ವಂಶೀಯವಾಗಿ ಗುರುತಿಸಿಕೊಂಡು ಮುಂದುವರಿದು ಕೊಂಡು ಬಂದಿರುವ ಈ ಬಳಿಗಳು ರಕ್ತಸಂಬಂಧವಿರುವ ಸದಸ್ಯರನ್ನು ಗುರುತಿಸುತ್ತವೆ. ಈ ನಿಟ್ಟಿನಲ್ಲಿ ತುಳುನಾಡಿನ ಗುರ್ಜರ ವಂಶದ ಮೂಲ ಉತ್ತರಭಾರತ ಎಂದು ಹೇಳ ಬಹುದು.

ಬಂಟರಲ್ಲಿ ಕೆಲವರು ತಾವು ಉತ್ತರಭಾರತ ಮೂಲದವರು ಎನ್ನುವ ಹೇಳಿಕೆಗೂ ಬಂಟರಲ್ಲಿ ಇರುವ ಆರ್ಯವಂಶ, ಸಾಳ್ವವಂಶ, ರಾಣೋಜಿವಂಶ, ಗುರ್ಜರ ವಂಶಗಳಿಗೂ ಸಾಮ್ಯತೆ ಇದೆ.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಸೂರ್ಯನಾಥ ಕಾಮತ್., ೧೯೮೭, ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಪು. ೫೪.
೨. ವಿವರಗಳಿಗೆ ನೋಡಿ ಇಂದಿರಾ ಹೆಗ್ಗಡೆ., ಬಂಟರು ಒಂದು ಸಮಾಜೋ ಸಾಂಸ್ಕೃತಿ ಅಧ್ಯಯನ, ೨೦೦೩.
೩. ಕೆ.ವಿ. ರಮೇಶ., ತುಳುನಾಡಿನ ಇತಿಹಾಸ, ಪು. ೨೨.
೪. SII., Vol., VII, No. 187.
೫. ಈ ಬಳಿಗಳು ಕೊರಗರಲ್ಲೂ ರೂಢಿಯಲ್ಲಿ ಇದೆ ಎನ್ನುತ್ತಾರೆ. ಈ ಬಗ್ಗೆ ಹೆಚ್ಚಿನ ಶೋಧ ಆಗಬೇಕು.



### ಕ.ಇ. ಅಕಾದೆಮಿಯ ೬ನೇ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೨)

*ತಾನು ದುಡಿಯುತ್ತಿರುವ ಕ್ಷೇತ್ರದಲ್ಲಿ ಯಶಸ್ವಿಯಾಗಲು ಬಯಸುವ ಇತಿಹಾಸಕಾರನು ಇಂದಿನ ವಿದ್ಯಮಾನಗಳು ನಾಡಿನ ಪರಂಪರಾಗತ ಮೌಲ್ಯಾಪಮೌಲ್ಯಗಳ ಬಗೆಗೆ ಅವನಲ್ಲಿ ಕೆರಳಿಸಿರಬಹುದಾದ ಸಹ್ಯಾಸಹ್ಯ ಭಾವನೆಗಳನ್ನು ತನ್ನ ಐತಿಹಾಸಿಕ ಸತ್ಯಾನ್ವೇಷಣೆಗೆ ಪ್ರೇರಕಗಳನ್ನಾಗಿ ಮಾತ್ರ ಉಪಯೋಗಿಸಿಕೊಳ್ಳಬೇಕೇ ವಿನಾ ಗತಕಾಲದತ್ತಣ ಅವನ ಸಂಶೋಧನಾತ್ಮಕ ಪಯಣದಲ್ಲಿ ಸಹಚಾರಿಗಳನ್ನಾಗಿಯಲ್ಲ. ಇಂದಿನ ಪರಂಪರಾಧಾರಿತ ಒಳಿತು ಕೆಡಕುಗಳನ್ನು ಒಪ್ಪು ತಪ್ಪುಗಳನ್ನು ಮೂಲತಃ ಎಂದೆಂದಿಗೂ ಇಂದಿನಂತಹವೇ ಎಂದು ಪರಿಗಣಿಸಬಾರದು. ಅಷ್ಟೇ ಅಲ್ಲದೆ ಇತಿಹಾಸಕಾರನು ಮನಸಾ ಆಯಾ ಐತಿಹಾಸಿಕ ಕಲ್ಪದೊಂದಿಗೆ ಪೂರ್ಣವಾಗಿ ವಿಲೀನಗೊಳ್ಳುವ ಮೂಲಕ ಮಾತ್ರ ಆಯಾ ಐತಿಹಾಸಿಕ ಕಲ್ಪದ ಪುರಾವೆಗಳನ್ನು ಪರಿಶೀಲಿಸುವಾಗ ತತ್ವಾಲೋಚಿತ ಮನೋವೃತ್ತಿಯ ತಿಳಿವಳಿಕೆಯನ್ನು ಬೆಳೆಸಿಕೊಂಡಾಗ ಮಾತ್ರ ಅವನು ನಿಜವಾದ 'ಇತಿ ಹ ಆಸ' ಕಾರನಾಗಬಲ್ಲನು. ಹಾಗಲ್ಲದೆ ಇಂದಿನ ಅನುಭವಗಳನ್ನು ಹಿಂದಿನ ವಿದ್ಯಮಾನಗಳಿಗೆ ಅನ್ವಯಿಸುವವನೇ ಆದರೆ ಅವನು ಕೇವಲ ಇತಿಹಾಸದ ಒಬ್ಬ ಅಸಂಗತ ಟೀಕಾಕಾರನೇ ಆಗಬಲ್ಲ.*

**ಕೆ. ವಿ. ರಮೇಶ್**
ಸಮ್ಮೇಳನಾಧ್ಯಕ್ಷರು



**ಭಾರತದಲ್ಲಿ ಉತ್ತರಕಿರಲಿ ದಕ್ಷಿಣಕಿರಲಿ**
**ತುಳುನಾಡು ಗುರ್ಜರರಿಗಾಯ್ತು ಆಸರೆಯ ನೆಲೆ**
**ತುಳುನಾಡ ಬಳಿ ಒಳಗೆ ಒಂದಾದರಲ್ಲ**
**ಬಂಟ, ಮೊಗವೀರ, ಬಿಲ್ಲವರಿರಲಿ**
**ಬಳಿಗಳ ಕಟ್ಟಿಕೊಟ್ಟರಲ್ಲ.**

ಡಾ। ಕೆ.ಜಿ. ವಸಂತ ಮಾಧವ*

# ಕರಾವಳಿ ಕರ್ನಾಟಕದ ಜಾನಪದ - ಇತಿಹಾಸ

## ಒಂದು ವಿಶ್ಲೇಷಣೆ

*ಜಾನಪದವೇ ಜನಜೀವನದ ಪುಳಕಗಳ ನೆಲೆ. ಆದರೆ ಅಲ್ಲಿ ಇತಿಹಾಸದ ರೇಖೆಗಳು ಇಲ್ಲವೇ ಇಲ್ಲ ಎನ್ನುವಂತಿಲ್ಲ. ಹಾಗೆಯೇ ಇತಿಹಾಸದಲ್ಲಿ ಜಾನಪದ ಸ್ಪರ್ಶಗಳು ಎಲ್ಲಿಯೂ ಕಾಣಿಸುವುದಿಲ್ಲ ಎನ್ನುವಂತಿಲ್ಲ. ಕೆರೆಗಳ ಇತಿಹಾಸದಲ್ಲಿ ಇದು ಎದ್ದುಕಾಣುತ್ತದೆ. ಹೀಗಾಗಿ ಇತಿಹಾಸ ಮತ್ತು ಜಾನಪದ ಹೊಂದಾಣಿಕೆಯನ್ನು ಮಾಡುವಲ್ಲಿ ಸಾಂಸ್ಕೃತಿಕ ಪ್ರಯತ್ನ ಬೇಕಾಗುತ್ತದೆ. ಇದು ಕರಾವಳಿ ಕರ್ನಾಟಕದಲ್ಲಿ ಭೂತಪಾಂಡ್ಯನ ಕಟ್ಟು, ತುಳುಪಾಡ್ದನಗಳು ಜನಪದ ಗೀತೆಗಳಲ್ಲಿ ಬರುವ ಆದಿಲ್‌ಶಾಹಿ – ಸೋದೆಯವರ ನಡುವಣ ಕದನ ಇತ್ಯಾದಿಗಳು ನಮ್ಮ ಸಾಂಸ್ಕೃತಿಕ ವಿಶ್ಲೇಷಣೆಗೆ ಅನುವಾಗಿವೆ.*

**ಪೀಠಿಕೆ** : ಇತಿಹಾಸ ಮತ್ತು ಜಾನಪದ ಹೊಂದಾಣಿಕೆಯನ್ನು ಯಾವ ರೀತಿಯಲ್ಲಿ ನಡೆಸಬಹುದೆಂಬ ಜಿಜ್ಞಾಸೆ ಇತಿಹಾಸಗಾರರಿಗೂ ಮತ್ತು ಸ್ಥಳೀಯ ಮಾಹಿತಿ ತಜ್ಞರಿಗೂ ಇತ್ತೀಚೆಗೆ ತೋರಿ ಬರುತ್ತಿದೆ. ಇದಕ್ಕೆ ಮುಖ್ಯ ಕಾರಣ ಐತಿಹಾಸಿಕ ಘಟನೆಗಳು ಜಾನಪದ ಸಾಹಿತ್ಯದಲ್ಲಿ ತೇಲುತ್ತಾ ಇರುವುದರಿಂದ. ಜಾನಪದ ಘಟನೆಗಳನ್ನು ಇತಿಹಾಸದ ಚೌಕಟ್ಟಿನಲ್ಲಿ ಹೇಗೆ ತರಬಹುದೆಂಬ ಪ್ರಯತ್ನವು ಈ ಲೇಖನದ ಉದ್ದೇಶ. ಈ ಕೆಲಸ ನಡೆಸುವಲ್ಲಿ ಹಲವಾರು ಐತಿಹಾಸಿಕ ದಾಖಲೆಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಇಂತಹ ದಾಖಲೆಗಳಲ್ಲಿ ಶಾಸನ, ಸಮಕಾಲೀನ ಸಾಹಿತ್ಯ ಕೃತಿಗಳು ಮತ್ತು ವಿದೇಶಿ ದಾಖಲೆಗಳು ಗಮನಾರ್ಹ.

**ಇತಿಹಾಸ ಜಾನಪದ** : ಹಿಂದಿನ ಕಾಲದ ಮಾನವನು ನಡೆಸಿದ ಘಟನೆಗಳನ್ನು ಕ್ರಮಬದ್ಧವಾಗಿ ತಿಳಿಸುವುದೇ ಇತಿಹಾಸ. ಈ ಘಟನೆಗಳಿಗೆ ಲಿಖಿತ ಆಧಾರಗಳಿವೆ. ಪ್ರತಿಯೊಂದು ಘಟನೆಗಳಿಗೆ ಇತರ ಹಿಂದಿನ ಮತ್ತು ಮುಂದಿನ ಘಟನೆಗಳೊಳಗೆ ಸಂಬಂಧ ಹೊಂದಿದೆ. ಘಟನೆಗಳು ಹೇಗೆ ಸಂಭವಿಸಿದ್ದು ಎಂಬುದನ್ನು ತೋರಿಸುವುದು ಇತಿಹಾಸಗಾರರ ಕೆಲಸವೆಂದು ಜರ್ಮನ್ ಇತಿಹಾಸ ತಜ್ಞ ರಾಂಕೆ (Ranke) ಯ ವಾದ. ಇದರಿಂದಾಗಿ ಇತಿಹಾಸ ಅಧ್ಯಯನದಲ್ಲಿ ದಾಖಲೆಗಳು ಪ್ರಮುಖ ಸ್ಥಾನವನ್ನು ಪಡೆಯಿತು.[೧] ಜನರ ಬಾಯಿಂದ ಬಾಯಿಗೆ ಬಂದ ಘಟನೆಗಳ ಸರಮಾಲೆಯೇ ಜಾನಪದ. ಇಲ್ಲಿ ಘಟನೆ ನಿರೂಪಿಸುವಲ್ಲಿ ಕ್ರಮಬದ್ಧತೆ ಇಲ್ಲ. ಆದರೆ ತಿಳಿಸಿದ ಘಟನೆಗಳು ನೈಜವಾದುದು. ಇದು ಮಣ್ಣಿನ ಮಕ್ಕಳ ಬಾಳುಸಿರು. ಜಾನಪದವು ಗೀತೆ, ನೃತ್ಯ ಮತ್ತು ಐತಿಹ್ಯ ಪುರಾಣಗಳನ್ನೊಳಗೊಂಡಿದೆ. ಇವುಗಳ ವಿಷಯಗಳು ಮೌಖಿಕವಾಗಿದ್ದು, ಇವುಗಳಲ್ಲಿ ಸಮಾಜದ ನೋವು, ನಲಿವು ಮತ್ತು ಜನಜೀವನದ ಪರಂಪರೆ ಸೇರಿಕೊಂಡಿವೆ. ಜನಪದದವರು ತಮ್ಮ ಮನಸ್ಸನ್ನು ಕಲಕಿದ ಸಂಗತಿಗಳನ್ನು ಸಕ್ರಮವಾಗಿ ಲಿಪಿಬದ್ಧವಾಗಿರಿಸಲು ಶಕ್ತರಾಗಿರುವುದಿಲ್ಲ. ಆದರೆ ಅವರು ಸಂಗತಿಗಳನ್ನು ಎಂದೂ ಮರೆಯುವುದೂ ಇಲ್ಲ. ಇವುಗಳನ್ನು ಸ್ಮರಣೀಯವಾಗಿ ಉಳಿಸಿಕೊಂಡು ಬಂದಿರುತ್ತಾರೆ. ಇಲ್ಲಿ ತಿಳಿಸಿದ ಘಟನೆಗಳು ಪೀಳಿಗೆ ಮುಂದುವರಿದಂತೆ ಮಾತಿನ ಮೂಲಕ ತಿಳಿಸುವಲ್ಲಿ ಇವು ತಲೆಕೆಳಗಾಗಿ ಬದಲಾಗಿರುತ್ತವೆ. ಇದರೊಂದಿಗೆ ಅಂತೆ ಮತ್ತು ಕಂತೆಗಳು ಸೇರಿಕೊಂಡಿರುವ ಸಾಧ್ಯತೆಗಳು ಇವೆ. ಹೀಗಿದ್ದರೂ ಜನಜೀವನ ತಿಳಿಯಲು ಜಾನಪದ ಸಾಹಿತ್ಯಕ್ಕೆ ತನ್ನದೇಯಾದ ಮೌಲ್ಯವಿದೆ. ಇತಿಹಾಸದ ಎಳೆಗಳು ಜಾನಪದದಲ್ಲಿದೆ ಎಂಬುದನ್ನು ನಾವು ನೆನಪಿನಲ್ಲಿಟ್ಟುಕೊಂಡಿರ ಬೇಕು.[೨]

**ಕರಾವಳಿ ಕರ್ನಾಟಕದಲ್ಲಿ ಜಾನಪದ ಇತಿಹಾಸ ಅಧ್ಯಯನ ಪರಂಪರೆ** : ಜಾನಪದದಲ್ಲಿ ಕೆಲವು ಐತಿಹಾಸ ಸಂಗತಿಗಳಿದ್ದರೂ

* ಆರಾಧನಾ, ಪಾವಂಜೆ, ಹಳೆಯಂಗಡಿ, ದಕ್ಷಿಣ ಕನ್ನಡ

ಅವುಗಳನ್ನು ಐತಿಹಾಸಿಕ ಚೌಕಟ್ಟಿನಲ್ಲಿ ತರುವ ಪ್ರಯತ್ನ ನಡೆದದ್ದು ಕಳೆದ ಶತಮಾನದ ನಾಲ್ಕನೇ ದಶಕದ ನಂತರವೇ. ಇದಕ್ಕೆ ಮೊದಲು ಜಾನಪದ ಸಂಗ್ರಹ ಕೆಲಸವು ನಡೆಯಿತು. ಇದರಲ್ಲಿ ಪ್ರಥಮವಾಗಿ ತೊಡಗಿಸಿಕೊಂಡವರು ಪಾಶ್ಚಿಮಾತ್ಯ ವಿದ್ವಾಂಸರು. ಅವರ ಮೂಲ ಉದ್ದೇಶ ಇಲ್ಲಿನ ಜನಪದದಲ್ಲಿರುವ ಸಂಗತಿಗಳನ್ನು ಕ್ರೈಸ್ತ ಮತದ ಹಿನ್ನೆಲೆಯೊಡನೆ ವಿಶ್ಲೇಷಿಸಿ ಅವುಗಳಲ್ಲಿರುವ ಅಮಾನುಷ ಸಂಗತಿಗಳನ್ನು ಬೆಳಕಿಗೆ ತರುವುದು. ಇದರ ಹಿನ್ನೆಲೆಯಲ್ಲಿ ಕ್ರೈಸ್ತ ಮತದ ಶ್ರೇಷ್ಠತೆಯನ್ನು ಜನರಿಗೆ ತಿಳಿಸುವುದು. ಆದರೆ ಹಾಗಾಗದೆ ಜಾನಪದ ಸಂಬಂಧದಲ್ಲಿ ನೈಜ ಇತಿಹಾಸ ಬೆಳಕಿಗೆ ಬಂತು. ಜಾನಪದ ಸಂಗ್ರಹದಲ್ಲಿ ಆಸಕ್ತಿಯಿಂದ ಶ್ರಮಿಸಿದವರಲ್ಲಿ ಮೆನ್ನರ್ (Manner) ಮತ್ತು ಎ.ಸಿ. ಬರ್ನೆಲ್ ಗಮನಾರ್ಹರಾದವರು. ಇವರ ಪ್ರಯತ್ನದಿಂದಾಗಿ ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ರಚಿಸುವುದಕ್ಕೆ ಒಂದು ಉತ್ತೇಜನ ಬಂತು. ಜಾನಪದ ಸಂಬಂಧದಲ್ಲಿ ಇತಿಹಾಸ ನಿರೂಪಿಸುವಲ್ಲಿ ಶ್ರಮಿಸಿದ ವಿದ್ವಾಂಸರಲ್ಲಿ ಶೀನಪ್ಪ ಹೆಗ್ಗಡೆ ಮತ್ತು ಗಣಪತಿರಾವ್ ಐಗಳರು ಗಮನಾರ್ಹರು. ಇವರುಗಳ ಗ್ರಂಥಗಳಾದ **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ** ಮತ್ತು **ಭೂತ ಪಾಂಡ್ಯನ ಕಟ್ಟು** (೧೯೧೫), **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ**(೧೯೨೩)ದಲ್ಲಿ ಜಾನಪದದಲ್ಲಿ ಬರುವ ಕೆಲವು ಇತಿಹಾಸ ಘಟನೆಗಳನ್ನು ಐತಿಹಾಸಿಕ ನಿರೂಪಣೆಯಲ್ಲಿ ಅಳವಡಿಸಲಾಗಿವೆ. ಆದರೆ ಈ ಪ್ರಯತ್ನ ಹೆಚ್ಚು ಯಶಸ್ವಿಯಾಗದಿರಲು ಕಾರಣ ಐತಿಹಾಸಿಕ ದಾಖಲೆಗಳ ಸಂಶೋಧನೆ ದಾರಿ ಶೈಶವಾಸ್ಥೆಯಲ್ಲಿದ್ದಿತು. ಜಾನಪದ ಸಂಗತಿಗಳನ್ನು ಇತಿಹಾಸದ ಚೌಕಟ್ಟಿಗೆ ವೈಜ್ಞಾನಿಕವಾಗಿ ತರುವ ಪ್ರಯತ್ನ ಮಾಡಿ, ವಿದ್ವಾಂಸರ ಗಮನ ಸೆಳೆದವರಲ್ಲಿ ಡಾ। ಬಿ.ಎ. ಸಾಲೆತ್ತೂರ್ ಗಮನಾರ್ಹ ವ್ಯಕ್ತಿ. ಈ ವಿದ್ವಾಂಸರ (Ancient Karnataka (History of Tuluvas; 1936) ಗ್ರಂಥದಲ್ಲಿ ತುಳು ಪಾಡ್ದನಗಳನ್ನು ಉಪಯೋಗಿಸಿ ತುಳುನಾಡಿನ ಸಾಂಸ್ಕೃತಿಕ ಇತಿಹಾಸವನ್ನು ನಿರೂಪಿಸಿದರು. ಈ ಯತ್ನ ಇತಿಹಾಸ ಅಧ್ಯಯನದಲ್ಲಿ ನಡೆದ ಒಂದು ಪ್ರಮುಖ ಆಯಾಮವಾಗಿದೆ. ಆದರೆ ಇವುಗಳನ್ನು ತಿಳಿಸುವಾಗ ತುಳು ಪಾಡ್ದನದಲ್ಲಿ ತಿಳಿಸಿದ ಸಾಂಸ್ಕೃತಿಕ ಘಟನೆಗಳು ಕ್ರಿ.ಶ. ೧೩ನೇ ಶತಮಾನದ ಪೂರ್ವಕ್ಕೆ ಎಂದು ತಿಳಿಸಿದರು. ಈ ಅಭಿಪ್ರಾಯ ಈಗ ಬದಲಾಗಿದೆ. ಇದಕ್ಕೆ ಮುಖ್ಯ ಕಾರಣ ಇತಿಹಾಸ ಆಕರಗಳ ಸಂಶೋಧನೆಯು ತೀವ್ರ ರೀತಿಯಲ್ಲಿ ಸಾಗಿದ್ದು. ಈ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ವಿದ್ವಾಂಸರರು ಜಾನಪದ ಹಿನ್ನಲೆಯಲ್ಲಿ ಐತಿಹಾಸಿಕ ಸಂಗತಿಗಳನ್ನು ವಿಶ್ಲೇಷಿಸಿದರು. ಇವರುಗಳಲ್ಲಿ ಬಿ. ವಿವೇಕ ರೈ, ಸುಬ್ಬಣ್ಣ ರೈ ಮತ್ತು ವಾಮನ ನಂದಾವರ.[೩] ಏತನ್ಮಧ್ಯೆ ಶಿವರಾಮ ಕಾರಂತರು[೪] ತನ್ನ ಕೃತಿಗಳಲ್ಲಿ ಪಾಡ್ದನಗಳ ಆಧಾರದಿಂದ ತುಳುನಾಡಿನ ಸಂಸ್ಕೃತಿ ಇತಿಹಾಸ ಸಂಗತಿಗಳನ್ನು ಮಾನವ ವಿಜ್ಞಾನ ಹಿನ್ನಲೆಯಲ್ಲಿ ನಡೆಸಿದ್ದಾರೆ.

ಉತ್ತರ ಕನ್ನಡ ಜಿಲ್ಲೆಯ ಕೆಲವು ಐತಿಹಾಸಿಕ ಸಂಗತಿಗಳು ಜಾನಪದದಲ್ಲಿ ನುಸುಳಿಕೊಂಡಿದ್ದನ್ನು ಸಂಶೋಧಿಸಿ, ಮತ್ತು ಅವುಗಳ ಐತಿಹಾಸಿಕ ಮಹತ್ವವನ್ನು ಬೆಳಕಿಗೆ ತಂದ ಕೀರ್ತಿ ಎಸ್.ಆರ್. ನಾಯಕರಿಗೆ ಸಲ್ಲುತ್ತದೆ. ಇವರ ಗ್ರಂಥ ಒಂದರಲ್ಲಿ ಸ್ವಾದಿ ಅರಸರು, ಅವರ ಧರ್ಮ, ದೇವಾಲಯಗಳ ಕುರಿತಾದ ಜನಜನಿತ ಹೇಳಿಕೆ, ಟಂಕಸಾಲೆ, ಕೆರೆ, ಬಾವಿ, ಕೋಟೆಗಳು ಜನಜೀವನ ಸ್ವಾದಿ ಮತ್ತು ಅರಬರಿಗಾದ (sis ಬಿಜಾಪುರ ಸುಲ್ತಾನರು) ಯುದ್ಧ ಇತ್ಯಾದಿಗಳಲ್ಲಿಯ ವಿಷಯಗಳ ಐತಿಹಾಸಿಕಗಳ ವಿಶ್ಲೇಷಣೆ ಇದೆ.[೫]

**ಜಾನಪದ ಐತಿಹಾಸಿಕ ಸಂಗತಿಗಳು ಅವುಗಳ ಐತಿಹಾಸಿಕತೆ:** ಜಾನಪದ ಸಂಗತಿಗಳು ಹೆಚ್ಚಾಗಿ ಸಾಂಸ್ಕೃತೀಯ ಸಂಗತಿಗಳು. ಇವುಗಳಲ್ಲಿ ಜನರ ರೂಢಿ ನಿಯಮ ಮತ್ತು ಸಾಮಾಜಿಕ ಸಂಗತಿಗಳ ಸರಮಾಲೆಗಳು ಇವೆ. ಆದರೆ ಇವುಗಳ ಕ್ರಮಪಟ್ಟಿಯಂತೆ ಹೊಂದಿಸಿ ತಿಳಿಸಲಿಲ್ಲ. ಹೀಗಿದ್ದರೂ ಕೆಲವು ಘಟನೆಗಳನ್ನು ವೀಕ್ಷಿಸಿದಾಗ ಅವುಗಳು ಯಾವ ಕಾಲದವುಗಳೆಂದು ತೀರ್ಮಾನಕ್ಕೆ ಬರಬಹುದು. ಇಂತಹವುಗಳಲ್ಲಿ ನಮಗೆ ಪ್ರಥಮ ಗಮನಕ್ಕೆ ಬರುವುದು ಪರಶುರಾಮನ ಸೃಷ್ಠಿ. ಇದರಂತೆ ಇವನು ತನ್ನ ಕೊಡಲಿಯಿಂದ ಸಮುದ್ರವನ್ನು ಹಿಂದೆ ಸರಿಸಿದ.[೬] ಈ ಘಟನೆಯಲ್ಲಿ ಎರಡು ಸಂಗತಿಗಳು ಬೆಳಕಿಗೆ ಬರುತ್ತವೆ. ಇದು ಪಶ್ಚಿಮ ಕರಾವಳಿಯ ಮಟ್ಟಿಗೆ ಅರ್ಥಗರ್ಭಿತ ಪ್ರಾಗೈತಿಹಾಸಿಕ ನಿರೂಪಣೆ. ನೂರಾರು ವರ್ಷಗಳ ಹಿಂದೆ ಸಹ್ಯಾದ್ರಿ ಘಟ್ಟದುದ್ದಕ್ಕೂ ದಟ್ಟ ಕಾಡುಗಳು ಬೆಳೆದು ಇದ್ದಿತು. ಅಲ್ಲಿ ದುಷ್ಟ ಪ್ರಾಣಿಗಳು ನೆಲೆಸಿದ್ದವು. ಆದಿಮಾನವನು ಕಬ್ಬಿಣವನ್ನು ಕಂಡುಹಿಡಿದ. ಅನಂತರ ಕೊಡಲಿ(ಪರಶು)ಗಳನ್ನು ತಯಾರಿಸಿ ಪಶ್ಚಿಮ ಘಟ್ಟಗಳಲ್ಲಿದ್ದ ಮರಗಿಡಗಳನ್ನು ಕಡಿದು ಆ ಸ್ಥಳಗಳಲ್ಲಿ ಜನವಸತಿಯಾಗುವಂತೆ ಮಾಡಿದ. ಇದು ಅಚ್ಚಳಿಯದ ಘಟನೆಯಾಗಿದ್ದು ಪ್ರಾಗೈತಿಹಾಸಕ್ಕೆ ಕಾರಣವಾಯಿತು.[೭] ಎರಡನೆ ಸಂಗತಿ ಸಮುದ್ರ ಹಿಂಜರಿದಿದ್ದು. ಇದು ಕರಾವಳಿ ಕರ್ನಾಟಕದಲ್ಲಿ ಆಗಿಂದಾಗ್ಗೆ ನಡೆಯುತ್ತಿತ್ತು. ಇದನ್ನು ಪೋರ್ತುಗೀಜ ಪ್ರವಾಸಿ ಬಾರ್‌ಬೋಸ ತನ್ನ ವರದಿಯಲ್ಲಿ ತಿಳಿಸಿದ್ದಾನೆ.[೮] ಸಮುದ್ರದ ಚಲನ ವಲನದಿಂದ ಹಲವಾರು ರೇವುಗಳು ನಾಶವಾದ ಸಂಗತಿಗಳನ್ನು ಮಧ್ಯಕಾಲೀನ ಪೋರ್ತುಗೀಸ್ ಇತಿಹಾಸಗಾರರು ಗಮನಿಸಿದ್ದಾರೆ. ಸಮುದ್ರ ಹಿಂದೆ ಸರಿದ ಸ್ಥಳಗಳು ಶಾಸನಗಳಲ್ಲಿ ಖಜ್ಜಾನ ಅಥವಾ ಗಜನಿಯಾಗಿ ಹೆಸರಿಸಿದ್ದು ಶಾಸನಗಳಲ್ಲಿವೆ.[೯] ಇದರಿಂದ ಸಮುದ್ರ ಹಿಂದೆ ಸರಿದ ಘಟನೆಯು ಐತಿಹಾಸಿಕ ಸತ್ಯವಾಗಿದೆ.

ಜನಜನಿತ ಹೇಳಿಕೆ ಇರುವ ಬ್ರಾಹ್ಮಣರ ವಲಸೆ ಕರಾವಳಿ ಕರ್ನಾಟಕದಲ್ಲಿ ಮಯೂರಶರ್ಮನಿಂದ ನಡೆಯಿತು. ಈ ಹೇಳಿಕೆಯಲ್ಲಿ ಒಂದು ಐತಿಹಾಸಿಕ ಸಂಗತಿ ಹುದುಗಿದೆ. ಅದೇನೆಂದರೆ ತುಳುನಾಡಿಗೆ ಆರ್ಯ ಸಂಸ್ಕೃತಿ ಪ್ರವೇಶ ಹೇಗೆ ನಡೆಯಿತು ಎಂದು ತಿಳಿಸುತ್ತದೆ. ಇದು ಕ್ರಿ.ಶ. ೫ನೆಯ ಶತಮಾನದಲ್ಲಿ ಪರಿಪೂರ್ಣವಾಗಿರಬೇಕು. ಏಕೆಂದರೆ ಕರಾವಳಿ ಕರ್ನಾಟಕದಲ್ಲಿ

ಪ್ರಥಮವಾಗಿ ಬ್ರಾಹ್ಮಣರ ಉಲ್ಲೇಖ ಬರುವುದು ಅಂಕೋಲೆಯ ಕುಂಟಕಾಣಿ ಮತ್ತು ಉಡುಪಿಯ ವರ್ಡಸ್ಸೆ ಶಾಸನದಲ್ಲಿ.[೧೦]

ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಭೂತ ಪಾಂಡ್ಯರಾಯ ಮತ್ತು ಅವನಿಂದ ಆರಂಭಗೊಂಡ "ಅಳಿಯ ಸಂತಾನ ಕಟ್ಟು" ಎರಡು ಪ್ರಮುಖ ಐತಿಹಾಸಿಕ ಸಂಗತಿಗಳನ್ನು ತಿಳಿಸುತ್ತವೆ. ಇವುಗಳಲ್ಲಿ ಗಮನಾರ್ಹವಾದುದು ಬಾರಕೂರು ರೇವಿನಲ್ಲಿ ನಡೆಯುತ್ತಿದ್ದ ಸಾಗರೋತ್ತರ ವ್ಯಾಪಾರದ ವಿವರ. ಈ ಕತೆಯಂತೆ ಬಾರಕೂರಿನ ಸಾಗರೋತ್ತರ ವ್ಯಾಪಾರವು ಕೆಂಪು ಸಮುದ್ರದ ರೇವಿನವರೆಗೆ ಹಬ್ಬಿತ್ತು. ವ್ಯಾಪಾರದ ಅವಧಿ ಆರು ತಿಂಗಳುಗಳವರೆಗೆ ಆಗುತ್ತಿತ್ತು. ಬಾರಕೂರಿನಿಂದ ಹೊರಟ ಹಡಗು ಕೆಂಪು ಸಮುದ್ರ ದಾಟಿ ಅದರ ಉತ್ತರ ಭಾಗದಲ್ಲಿರುವ ಈಜಿಪ್ಟಿನ ಬಂದರಾದ "ಬರನಿಸ್" ಪಟ್ಟಣದ ಹತ್ತಿರ ಲಂಗುರು ಹಾಕಿತ್ತು. ನಿಂತ ಹಡಗು ಬಿರುಗಾಳಿಗೆ ತುತ್ತಾದದ್ದು ನಂತರ ಅವುಗಳು ತಪ್ಪಿಸಿಕೊಂಡು ಬಂದದ್ದು ಮತ್ತು ಹಡಗುಗಳು ಬರುವಾಗ ಹಸುರು ಶಿಲೆಯ ಕಲ್ಲನ್ನು ತಂದದ್ದು ಇತ್ಯಾದಿ ವಿವರಗಳು ಇದರಲ್ಲಿವೆ.[೧೧] ಈ ವೃತ್ತಾಂತದಲ್ಲಿ ಐತಿಹಾಸಿಕ ಸಂಗತಿಯು ತೇಲಿರುವುದು ಇತ್ತೀಚೆಗೆ ನಡೆಸಿದ ಪ್ರಾಗೈತಿಹಾಸಿಕ ಸಂಶೋಧನೆಯಿಂದ ತಿಳಿದುಬರುತ್ತದೆ. ಇದರಂತೆ ಉತ್ತರ ಈಜಿಪ್ಟಿನ "ಊರೊ"ಂದರಲ್ಲಿ ಎರಡು ಮಡಕೆ ಚೂರುಗಳಲ್ಲಿ ಬ್ರಾಹ್ಮಿ ಲಿಪಿ ಬರಹ ಸಿಕ್ಕಿದೆ. ಲಿಪಿ ಶಾಸ್ತ್ರ ದೃಷ್ಟಿಯಿಂದ ಇದು ಕ್ರಿ.ಶ. ಒಂದನೆಯ ಶತಮಾನಕ್ಕೆ ಸರಿಹೊಂದುತ್ತದೆ. ಬರೆದ ಬರಹಗಳು "ಶಾತನ್ ಕಣನ್". ಇದರಿಂದ ದಕ್ಷಿಣ ಭಾರತದ ಬಂದರುಗಳಿಗೂ ಈಜಿಪ್ಟ್‌ನ ಬಂದರುಗಳಿಗೂ ನಡುವೆ ಎರಡು ಸಾವಿರ ವರ್ಷಗಳಷ್ಟು ಹಿಂದಿನಿಂದ ವ್ಯಾಪಾರ ನಡೆಯುತ್ತಿರುವ ಸಂಗತಿ ಭೂತಾಳ ಪಾಂಡ್ಯನ ವೃತ್ತಾಂತವು ದೃಢೀಕರಿಸುತ್ತದೆ.[೧೨] ಇನ್ನೊಂದು ಗಮನಾರ್ಹವಾದ ಸಂಗತಿಯೆಂದರೆ ಭೂತಪಾಂಡ್ಯನ ಕಟ್ಟಿನ ಉಲ್ಲೇಖವು ಗುಜ್ಜಾಡಿ ಗುಹೇಶರ ಅರ್ಚಕ ದಿ। ಮಂಜಭಟ್ಟರ ಹತ್ತಿರವಿದ್ದ ತಾಮ್ರ ಶಾಸನದಲ್ಲಿದೆ. ಇದರ ಕಾಲ ೧೪೨೪.[೧೩]

ತುಳುನಾಡಿನಲ್ಲಿ ನಂದುರಾಯನ ಆಳ್ವಿಕೆ ವಿಚಾರ ಐತಿಹ್ಯದಲ್ಲಿದೆ ಇವನ ಭಂಡಾರ ನಾಯಿ ನರಿ ತಿಂದು ಹೋಯಿತು ಎಂಬ ಹೇಳಿಕೆ ಜನಜನಿತವಾಗಿದೆ. ಆದರೆ ನಂದನೆಂಬ ವ್ಯಕ್ತಿ ಇದ್ದ ಸಂಗತಿಯು ಎಂಟನೆ ಶತಮಾನಕ್ಕೆ ಸರಿ ಹೊಂದುವ ಬೆಳ್ಮಣ್ಣಿನ ತಾಮ್ರ ಶಾಸನದಲ್ಲಿ ವ್ಯಕ್ತವಾಗಿದೆ.[೧೪]

ಪಾಡ್ದನದಲ್ಲಿ ಬರುವ ಬೊಬ್ಬರ್ಯನ ಉಲ್ಲೇಖ ೧೫೪೦ ಮತ್ತು ೧೫೬೭ರ ಶಾಸನಗಳಲ್ಲಿವೆ.[೧೫]

ಉತ್ತರ ಕನ್ನಡ ಜಿಲ್ಲೆಯ ಕೆಲವು ಐತಿಹಾಸಿಕ ಘಟನೆಗಳು ಅಲ್ಲಿನ ಕೆಲವು ಜನಪದ ಗೀತೆಗಳಲ್ಲಿವೆ. ಮುಖ್ಯವಾಗಿ ಗೇರಸೊಪ್ಪೆ ರಾಣಿ (ಚೆನ್ನ ಭೈರಾದೇವಿ)ಯ ವೃತ್ತಾಂತ, ಹಳಿಪೈಕರ ದಂಗೆ ಇದನ್ನು ಉಪಯೋಗಿಸಿ ಕೆಳದಿ ವೆಂಕಟಪ್ಪ ನಾಯಕನು ಗೇರುಸೊಪ್ಪೆ ರಾಜ್ಯವನ್ನು ವಶಪಡಿಸಿಕೊಂಡದ್ದು, ಆದಿಲ್‌ಶಾಹನ ಸಹಾಯ ಕೇಳಿದ ರಾಣಿ ಇದನ್ನು ಪಡೆಯಲು ವಿಫಲವಾದದ್ದು ಇತ್ಯಾದಿಗಳು. ಇವುಗಳಲ್ಲಿನ ಕೆಲವು ಸಂಗತಿಗಳಿಗೆ ಸಮಕಾಲೀನ ವಿದೇಶಿ ದಾಖಲೆಗಳು ಮುಖ್ಯವಾಗಿ ಪೋರ್ತುಗೀಜ ದಾಖಲೆಯ ಆಧಾರಗಳಿವೆ.[೧೬]

ಸೋದೆ ಅರಸರಿಗೂ ಮತ್ತು ಮುಸ್ಲಿಂ ಆಡಳಿತಗಾರರೊಳಗೆ ನಡೆದ ಘರ್ಷಣೆಗಳು ಜಾನಪದದಲ್ಲಿ ಉಲ್ಲೇಖವಿದೆ. ಮುಖ್ಯವಾಗಿ ಅರಬರಿಗೂ (ಆದಿಲ್‌ಶಾಹಿ) ಸೋದೆಯವರಿಗಾದ ಕದನದ ವಿವರ ಈ ರೀತಿ ಇದೆ :

*"ಅರಬೀಯ ದಂಡೆ ಆರು ಸಾವಿರ*
*ಸೋದೆಯ ದಂಡು ಮೂರು ಸಾವಿರ*
*ಬೀಲುಗಿ ದಂಡೆ ಬೀಲಾಯ್ತೊ?*
*ಸೋದೆ ದಂಡೆ ಮೇಲಾಯ್ತೋ?*
*ಅರಬೀರ ದಂಡೇ ವೋಡೋಯ್ತೋ*
*ಶೋದೆಯ ದಂಡೇ ಗಂಡಾಯ್ತೋ*
*ದಂಡಂಬು ದಂಡೆ ಕಡಿದಾಯ್ತೋ*
*ಶರುಪನ ಹಗೆಯೇ ತೀರೋಯ್ತೋ"*[೧೭]

ಇಲ್ಲಿ ತಿಳಿಸಿದ ಕದನವು ಬಿಜಾಪುರ ಆದಿಲ್ ಶಾಹಿ ಮತ್ತು ಸ್ವಾದಿ ಅರಸರೊಳಗೆ ನಡೆಯಿತು. ಬೀಳಿಗಿ ಅರಸರು ಆದಿಲ್ ಶಾಹಿಯರ ಪಕ್ಷದಲ್ಲಿದ್ದರು. ಈ ಕದನದ ಉಲ್ಲೇಖ ಇದರಲ್ಲಿ ಸ್ವಾದಿ ಅರಸರು ಅಂಕೋಲೆಯನ್ನು ಗೆದ್ದದ್ದು, ಇತ್ಯಾದಿ ಮಾಹಿತಿ ಆಂಗ್ಲ ಪತ್ರ ದಾಖಲೆ (೧೬೭೩)ಯಲ್ಲಿ ಉಲ್ಲೇಖವಾಗಿದೆ.[೧೮]

ಆಬ್ ಕರೀಮ ಮುಸ್ಲಿಂ ಸರದಾರ ಅಂಕೋಲೆಯ ಕೋಟೆಯ ಮೇಲೆ ದಂಡೆತ್ತಿ ಬಂದದ್ದು, ಅವನನ್ನು ಸೊಂದೆ ಶೂರ ಅಲಗೇರಿಯಲ್ಲಿ ಧೈರ್ಯವಾಗಿ ಎದುರಿಸಿ ವೈರಿಯನ್ನು ಹಿಮ್ಮೆಟ್ಟಿಸಿದ್ದು ಇತ್ಯಾದಿಗಳು ಸ್ಥಳೀಯ ಜಾನಪದದಲ್ಲಿವೆ. ಈ ಸ್ವಾದಿ ಶೂರ ವೈರಿಗಳನ್ನು "ಬಾಳೆ ಕಡಿರಾ ಕಡದಾ ಕೆಶುವಾ ಕೊಶಿದಾಂಗೆ ಕೊಶದಾ"[೧೯] ಎಂದು ವರ್ಣಿಸಿದ್ದು ನೈಜತೆಯನ್ನು ತೋರಿಸುತ್ತದೆ. ಇಲ್ಲಿ ತಿಳಿಸಿದ ಸೊಂದ ಶೂರ ಕಲ್ಪಪ್ಪನಾಗಿರಬೇಕು. ವೈರಿ ಅಬಕರೀಮ ಮೊಗಲ ದಂಡಾಧಿಕಾರಿಯಾಗಿರಬೇಕು. ಸೊಂದೆಯವರು ಮೊಗಲರನ್ನು ಹಿಮ್ಮೆಟ್ಟಿಸಿದ ಸಂಗತಿ ಕಾರವಾರದಲ್ಲಿ ವ್ಯಾಪಾರ ಮಾಡಿಕೊಂಡಿದ್ದ ಇಂಗ್ಲಿಷರು ತಮ್ಮ ದಾಖಲೆಗಳಲ್ಲಿ ನಮೂದಿಸಿದ್ದು ಗಮನಾರ್ಹ ಈ ಘಟನೆಯು ೧೬೯೦ರಲ್ಲಿ ನಡೆದಿರಬೇಕು.[೨೦]

## ಉಪಸಂಹಾರ

ಜಾನಪದದಲ್ಲಿ ಇತಿಹಾಸದ ಸಂಗತಿಗಳು ಅಲ್ಲಲ್ಲಿ ಬರುತ್ತವೆ. ಆದರೆ ಅವುಗಳ ಕ್ರಮಬದ್ಧತೆಗಳ ಉಲ್ಲಂಘನೆ ಇವೆ. ಇವುಗಳನ್ನು ಇತಿಹಾಸದ ಚೌಕಟ್ಟಿಗೆ ತಂದಲ್ಲಿ ಇತಿಹಾಸವು ಫಲಭರಿತವಾಗುತ್ತದೆ. ಇದನ್ನು ಸಾಧಿಸಲು ಚರಿತ್ರಕಾರ ಮತ್ತು ಜಾನಪದ ತಜ್ಞರೊಳಗೆ

ಹೊಂದಾಣಿಕೆ ಇರಬೇಕು. ಇತಿಹಾಸ ತಜ್ಞರಿಗೆ ಜಾನಪದ ಸತ್ವವು ತಿಳಿದಿರಬೇಕು. ಅದೇ ರೀತಿಯಲ್ಲಿ ಜಾನಪದ ವಿದ್ವಾಂಸರಿಗೆ ಇತಿಹಾಸದ ಪರಿಜ್ಞಾನದ ಅರಿವು ಇರಬೇಕು. ಈ ಎರಡು ತಜ್ಞರು ಪರಸ್ಪರ ಹೊಂದಿಕೊಂಡು ಜಾನಪದ ಪರಂಪರೆಯ ಐತಿಹಾಸಿಕ ಸಾಮಗ್ರಿಗಳನ್ನು ಗಣನೆಗೆ ತೆಗೆದುಕೊಂಡು ಇತಿಹಾಸ ಪುನರ್ ರಚನೆ ಮಾಡುವ ಅವಶ್ಯಕತೆ ಇದೆ.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ। ಬಿ.ಆರ್. ಗೋಪಾಲ., ೧೯೯೭, **ಇತಿಹಾಸಶಾಸ್ತ್ರ ಮತ್ತು ಸಿದ್ಧಾಂತ** (ಮೈಸೂರು) ಪುಟ ೧೨-೧೩.

೨. ಎನ್.ಆರ್. ನಾಯಕ., ೧೯೯೭, **ಜಾನಪದ ಸಂಬಾರ ಬಟ್ಟಲು** (ಹೊನ್ನಾವರ) ಪುಟ ೧,೨.

೩. ಬಿ.ಎ. ವಿವೇಕ ರೈ **ತುಳುಜನಪದ ಸಾಹಿತ್ಯ** ಬೆಂಗಳೂರು, ೧೯೮೫, ಪುಟ ೧-೨೩.
ಸುಬ್ಬಣ್ಣ ರೈ **ದ.ಕ. ಜಿಲ್ಲೆಯ ಐತಿಹ್ಯಗಳು**, ಮಾಣಿ ೧೯೯೪, ಪುಟ ೮೩-೧೨೨.
ವಾಮನ ನಂದಾವರ **ಕೋಟಿ ಚೆನ್ನಯ ಜಾನಪದೀಯ ಅಧ್ಯಯನ**, ಮಂಗಳೂರು (೨೦೦೦) ಪುಟ ೧೦೯-೧೧೮.

೪. ಕೆ. ಶಿವರಾಮ ಕಾರಂತ **ಜಾನಪದ ಗೀತೆ**, (೧೯೬೬) **ಭೂತಾರಾಧನೆ** (೧೯೬೬), "Cultural Heritage of Coastal Karnataka" *Syndicate Bank Silver Jublee Mangalore* 1958.

೫. ಎಸ್.ಆರ್. ನಾಯಕ, **ಜಾನಪದ ಸಂಬಾರ ಬಟ್ಟಲು**, ಹೊನ್ನಾವರ, ೧೯೯೨, ಪುಟ ೧-೩೧.

೬. ಪರಶುರಾಮನ ಕತೆಯ ಐತಿಹಾಸಿಕ ವಿಶ್ಲೇಷಣೆ, ನೋಡಿ ಬಿ.ಎ. ಸಾಲೆತ್ತೂರು *Ancient Karnataka*, ಪುಟ ೯-೩೧.

೭. ಹೆಚ್ಚಿನ ವಿವರ ನೋಡಿ ಡಾ। ಕೆ.ವಿ. ರಮೇಶ *Geographical factors in Tulunad* (Manipal) ಪ್ರವೇಶನ ಮಂಜೇಶ್ವರ ಗಣಪತಿಬಾವು ಐಗಳ **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ**, ಉಡುಪಿ ೨೦೦೪, ಪುಟ ೨೩-೨೪.

೮. ಹೆಚ್ಚಿನ ವಿವರ ಸುಬ್ಬಣ್ಣ ರೈ ಅದೇ ಗ್ರಂಥ ಪುಟ ೯೦-೯೧ *The Book of Duarte Barbosa*, 1967, p. 198, ಇದೇ ಪುಟದ ೨ನೇ ಅಡಿಟಿಪ್ಪಣಿ ಗಮನಿಸಿ.

೯. ಆರಗ ತಾಮ್ರಶಾಸನ ಕಾಲ ೬ನೇ ಶತಮಾನ *Epigraphia Indica* XXXIII ಪುಟ ೬೩-೬೪ ಇದೇ XXXI ಪುಟ ೨೩೨-೪.

೧೦. ಆರ್.ಎಸ್. ಗುರುವ **ಕಾರವಾರ ಜಿಲ್ಲೆಯ ಶಾಸನಗಳು**, ಪುಟ ೨೩೨-೪.

೧೧. ಎಂ. ಗಣಪತಿರಾವ್ ಐಗಳ, ಅದೇ ಪುಟ ೩೦-೩೧.

೧೨. ಕೆ.ವಿ. ರಮೇಶ್ ಪ್ರವೇಶಕ **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ**, ಪುಟ ೩೦.

೧೩. ಕೆ.ಜಿ. ವಸಂತ ಮಾಧವ "ಭೂತಪಾಂಡನ್ಯ ಐತಿಹಾಸಿಕ ಹಿನ್ನಲೆ" **ಮಾನವಿ ಕರ್ನಾಟಕ**, ೧೯೭೬, ಮೇ ಪುಟ ೨೧-೨೨.

೧೪. ಕೆ.ವಿ. ರಮೇಶ, ಎಂ.ಜೆ. ಶರ್ಮ, **ತುಳುನಾಡಿನ ಶಾಸನಗಳು**, ನಂಬರ್ ೩.

೧೫. *South Indian Inscriptions*, Vol. VII 366, ಅದೇ ix pt II No. 620.

೧೬. ಬಿ.ಎಸ್. ಶಾಸ್ತ್ರಿ., ೧೯೭೨, **ಕೆಳದಿ ಅರಸರು ಹಾಗೂ ಪೋರ್ತುಗೀಸರು**, (ಧಾರವಾಡ) ಪುಟ ೮-೯ ಹಳೆಪೈಯಕರ ದಂಗೆ ನೋಡಿ *Kanara* (GBP XV II ಪುಟ ೧೩೧.)

೧೭. ಎನ್.ಆರ್. ನಾಯಕ್ **ಜಾನಪದ** ಪುಟ ೧೮ ಯುದ್ಧ ನಡೆದದ್ದು ಬಿಜಾಪುರ ಸುಲ್ತಾನ್ ಮತ್ತು ಸೋದೆಯ ಅರಸರೊಳಗೆ. ಇದನ್ನು ಜಾನಪದದವರು ಅರಬರೆಂದು ತಪ್ಪಾಗಿ ತಿಳಿಸಿದ್ದಾರೆ.

೧೮. *Fawcett, English Factories in India* 1936 (Oxford) ಪುಟ ೨೯೯-೩೦೦.

೧೯. ಎನ್.ಆರ್. ನಾಯಕ್, ಅದೇ ಪುಟ ೧೯-೨೦.

೨೦. *Surat Factory Record volume* 103, p. 7-8 ಪತ್ರದ ತಾರೀಖು ಜೂನ್ ೨೪, ೧೬೯೮ ಎಂ.ಎ. ದೇಸಾಯಿ. *Chittakula karwar* (A History, Bombay 1969) p. 51-63.

ಡಾ. ಬಿ. ಲೀಲಾ*

# ಸಂಗೀತ ಕಲೆಗೆ ರಾಷ್ಟ್ರೀಯ ಮನ್ನಣೆ ಬೆಳೆದು ಬಂದ ಹಾದಿಯಲ್ಲಿ ಮೈಸೂರಿನ ಕೊಡುಗೆ

*ಸಂಗೀತ ಕಲೆ ನಮ್ಮ ಪಾರಂಪರಿಕ ಸಾಂಸ್ಕೃತಿಕ ಹಿರಿಮೆ. ಮೊದಲಿಗೆ ನಮ್ಮ ಸಂಗೀತದ ಹೂರಣವನ್ನೂ ತಿಳಿಯಲಾಗದ ಪಾಶ್ಚಾತ್ಯರಲ್ಲಿ ಕೆಲವರು ಅಸಂಗತ ಟೀಕೆ ಮಾಡಿದ್ದರು. ಆದರೂ ಆಂಗ್ಲರ ಆಡಳಿತವು ಸಂಗೀತವನ್ನು ಒಂದು ಪಠ್ಯವನ್ನಾಗಿ ಶಾಲೆಯಲ್ಲಿ ಕಲಿಸುವ ವ್ಯವಸ್ಥೆ ಮಾಡಿದ್ದು ಅದರ ಕೊಡುಗೆ. ೧೯೨೦-೩೦ರ ವೇಳೆಗೆ ಸಾಂಪ್ರದಾಯಿಕ ಮಡಿವಂತಿಕೆ ಬಿಟ್ಟು, ಮಧ್ಯಮವರ್ಗದವರೂ ಸಂಗೀತದ ಕಡೆ ವಾಲಿದ್ದು; ರಾಜರ ಪ್ರೋತ್ಸಾಹ ಹಾಗು ಗಾಯನ ಸಮಾಜದ ಪರಿಶ್ರಮದ ಕಾರಣವೇ ಆಗಿದೆ. ಪತ್ರಿಕಾ ಮಾಧ್ಯಮಗಳು, ಆಕಾಶವಾಣಿಯೂ ಈ ದಿಸೆಯಲ್ಲಿ ಪೂರ್ಣ ನೆರವಾಗಿವೆ.*

ನಮ್ಮ ನಾಡಿನ ಕಲೆಯ ಬೆಳವಣಿಗೆಯನ್ನು ವೀಕ್ಷಿಸಿದಾಗ, ಸಂಗೀತಕ್ಕೆ ವೇದ ಕಾಲದಿಂದಲೂ ದೊರಕಿರುವ ಮಾನ್ಯತೆ ಸ್ಪಷ್ಟವಾಗಿ ಕಂಡುಬರುತ್ತದೆ. ರಾಮಾಯಣ, ಮಹಾಭಾರತದಲ್ಲೂ ವಾದ್ಯ ಸಂಗೀತದ ಉಲ್ಲೇಖವಿದೆ. ಭರತಮುನಿಯ **ನಾಟ್ಯಶಾಸ್ತ್ರ** (ಕ್ರಿ.ಶ. 400-500 ) ಮತಂಗಮುನಿ ಬೃಹದ್ದೇಶಿ (ಕ್ರಿ.ಶ. 800 ), ೧೩ನೇ ಶತಮಾನದ **ಸಂಗೀತ ರತ್ನಾಕರ** (ಯಾದವರ ಕಾಲಕ್ಕೆ ಸೇರಿದ್ದು; ಆದರೆ ಯಾದವರ ಪತನ ೧೪ನೇ ಶತಮಾನದಲ್ಲಾಯಿತು) **ಮಾನಸೋಲ್ಲಾಸ** ಅಥವಾ **ಅಭಿಲಷಿತಾರ್ಥ ಚಿಂತಾಮಣಿ**, ಜಗದೇಕಮಲ್ಲನ, ಸಂಗೀತ **ಚೂಡಾಮಣಿ** ಮತ್ತು ಹೊಯ್ಸಳ ರಾಜನ ಭರತ ಸಂಗ್ರಹ, ಹಾಗೂ ವಿಪುಲವಾಗಿ ಅನೇಕ ಸಂಗೀತ ಗ್ರಂಥಗಳು ೧೩-೧೬ ಶತಮಾನದಲ್ಲಿ ರಚಿತವಾದದ್ದು ಕಂಡುಬಂದಿದೆ. ಮಧ್ಯಕಾಲದಲ್ಲಿ ಬದಲಾದ ರಾಜಕೀಯ ಪರಿಸ್ಥಿತಿಯಿಂದಲೂ, ಸಂಗೀತದ ಮೇಲೆ ಯಾವ ಬದಲಾವಣೆಯೂ ಉಂಟಾಗಿಲ್ಲ. ೧೨ನೇ ಶತಮಾನದಲ್ಲಿ ಆಳಿದ ಸೋಮೇಶ್ವರ ತನ್ನ ರಾಜಕಾರ್ಯಗಳ ಮಧ್ಯದಲ್ಲೂ ಸಂಗೀತ ನೃತ್ಯಕ್ಕೆ ಪೋಷಣೆ ನೀಡಿ 'ಮಾನಸೋಲ್ಲಾಸ'ದಂಥ ಅಮೋಘವಾದ ಕೃತಿ ರಚನೆ ಮಾಡಿದ. ತಂಜಾವೂರಿನಲ್ಲಿ ರಾಜರ ಪೋಷಣೆಯಲ್ಲಿ ಗ್ರಂಥಗಳ ರಚನೆಯಾದದ್ದು ಕಂಡುಬಂದಿದೆ. ತಂಜಾವೂರಿನ ಪತನದ ನಂತರ ಕಲಾಕಾರರಿಗೆ ರಾಜಪ್ರೋತ್ಸಾಹ ಮೈಸೂರಿನಲ್ಲಿ, ದೊರಕಿತು.

ಆದರೆ ೧೮-೧೯ನೇ ಶತಮಾನದ ಕಲೆಯ ಬೆಳವಣಿಗೆಯನ್ನು ವೀಕ್ಷಿಸಿದಾಗ ಕಲೆಯ ಬೆಳವಣಿಗೆ ಕುಂಠಿತವಾದದ್ದು ಕಂಡುಬರುತ್ತದೆ. ಕಂಪನಿ ಸರ್ಕಾರ ಕಲೆಗೆ ಮಾನ್ಯತೆ ನೀಡುವದಿರಲಿ, ಕಲೆಗೆ ಹಾನಿ ಮಾಡಿದ್ದೇ ಹೆಚ್ಚು. ಇದೆಲ್ಲಾ ಆಂಗ್ಲ ಪ್ರಭಾವದ ಒಂದು ಅಂಗ. ಆಂಗ್ಲ ವಿದ್ಯಾಭ್ಯಾಸ ಮಾಡಿದ ನಮ್ಮ ನಾಗರೀಕರು ಪಾಶ್ಚಾತ್ಯ ನಾಗರೀಕತೆಗೆ ಕಟ್ಟುಬಿದ್ದು ನಮ್ಮಲ್ಲಿದ್ದ ಕಲೆಗಳ ಪ್ರಗತಿಗೆ ಶ್ರಮಿಸಿದ್ದು ಕಡಿಮೆ.

ಜಾನ್ ಸ್ಟೂವರ್ಟ್ ಮಿಲ್, ಮೆಕಾಲೆ ಇವರ್‍ಯಾರಿಗೂ ಭಾರತೀಯ ಕಲೆಗಳ ಬಗ್ಗೆ ಅಭಿಮಾನವಿರಲಿಲ್ಲ. ಕಲೆಯನ್ನು ವ್ಯಾಪಾರಿ ದೃಷ್ಟಿಯಿಂದ ನೋಡಿದ್ದನ್ನು ಕಾಣುತ್ತೇವೆ. ಮದ್ರಾಸ್, ಮುಂಬೈ ಮತ್ತು ಕಲಕತ್ತಾದಲ್ಲಿ (೧೮೫೭) ಸ್ಥಾಪಿತವಾದ ಕಲಾಶಾಲೆಗಳಲ್ಲಿ ಆಂಗ್ಲ ಪ್ರಾಧ್ಯಾಪಕರು ಬೋಧಿಸಬೇಕಾದ ವಿಷಯಗಳು ಬಹುತೇಕ ಪಾಶ್ಚಾತ್ಯದ ಅನುಕರಣೆಯಾವಾಗಿತ್ತು.

ಈ ಹಿಂದೆಯೇ ಸೂಚಿಸಿದಂತೆ ತಂಜಾವೂರಿನ ನಂತರ ಬಹುವಾಗಿ ಕಲೆಗೆ ರಾಜಪ್ರೋತ್ಸಾಹ ದೊರೆತದ್ದು ಕಲಾಭಿಮಾನಿಗಳಾದ ಮೈಸೂರು ಅರಸರಿಂದ. 'Mysore Court become a Cynosure of musical and Literary attention'. ಆದರೆ ಸಂಗೀತವನ್ನು ಶಾಲೆಗಳಲ್ಲೇ ಆಗಲಿ, ಕಾಲೇಜಿನಲ್ಲೇ ಆಗಲಿ ಕಲಿಸುವ

* ಪ್ಲಾಟ್ ನಂ. ४६, ಫಸ್ಟ್ ಫ್ಲೋರ್, 'ಶಾಮಲ' ಮಾತುಂಗ, ಮುಂಬಯಿ - ४೦೦ ೦೧೯.

ವಿಷಯ ಆಗಿರಲಿಲ್ಲ. ಇದಕ್ಕಾಗಿ ರಾಷ್ಟ್ರೀಯ ಆಂದೋಲನ ನಡೆಯಬೇಕಾಯಿತು. ಇದರಲ್ಲಿ ಮಾರ್ಗರೆಟ್ ಕಸಿನ್ಸ್ ಮುಖ್ಯ ಪಾತ್ರ ವಹಿಸಿದರು. ಕಸಿನ್ಸ್ ಇಂಡಿಯಾಕ್ಕೆ ಬಂದದ್ದು ೧೯೧೫ರಲ್ಲಿ. ೧೯ನೇ ಶತಮಾನದ ಕೊನೆಗೆ ಕಲೆಯ ಬಗ್ಗೆ, ವಿಚಾರವಂತ ಮೇಧಾವಿ ಮಧ್ಯಮ ವರ್ಗದಲ್ಲಿ ಜಾಗೃತಿ ಉಂಟಾಯಿತು. ಬಂಗಾಳದಲ್ಲಿ ಕಂಡು ಬಂದ ಈ ಜಾಗೃತಿ ಕ್ರಮೇಣ ಎಲ್ಲಾ ಕಡೆಗೂ ಹರಡಿತು. ಇದನ್ನು 'Cultural facet of Nationalism' ಅನ್ನಬಹುದು.

**ಸಂಗೀತಕ್ಕೆ ಪಾಶ್ಚಾತ್ಯರ ಪ್ರತಿಕ್ರಿಯೆ** : ಸಂಗೀತಕ್ಕೆ ಪ್ರತಿಕ್ರಿಯೆಯನ್ನು ತೋರಿಸಿದ ಹಲವಾರು ಆಂಗ್ಲರು; ಮುಖ್ಯವಾಗಿ ಜೇಮ್ಸ್ ಮಿಲ್‌ರ ಕೃತಿ, 'History of British India' ಯಲ್ಲಿ 'All Europeans even those who were the most disposed to Eulogise the attainment of the Hindus unite in describing the music of that people as unpleasing and void both of expression and Art'[೧]; ಮತ್ತು ಅವರ ವಾದ್ಯ ಸಂಗೀತವು 'ಕೇವಲ ಗದ್ದಲ' ಎಂದಿದೆ. ಇದು ಜೇಮ್ಸ್ ಮಿಲ್‌ನ ಪ್ರತಿಕ್ರಿಯೆ ಆದರೆ, ಜೇಮ್ಸ್ ಫೊರ್ಬಸ್‌ನ ಪ್ರತಿಕ್ರಿಯೆ ಇದಕ್ಕಿಂತ ಒಳ್ಳೆಯದಿರಲಿಲ್ಲ.[೨] Aldous Huxley, ತಮ್ಮ ಪುಸ್ತಕ *Jesting Pilate* ನಲ್ಲಿ ಹೀಗೆ ಹೇಳಿರುತ್ತಾರೆ. "There was accomplished Singers and Celebrated players of every Indian astonishment and greater disgust was permitted to snore and whine in what I was assured was the very sanctuary of Indian music.[೩] ಆದರೆ ಈ ಎಲ್ಲಾ ಟೀಕೆಗಳೂ ಒಳ್ಳೆಯ ಸಂಗೀತವನ್ನು ಕೇಳದ ಮತ್ತು ಕಳಪೆ, ತಾಪೆ ನೃತ್ಯ ಸಂಗೀತವನ್ನು ನೋಡಿದ್ದರ ಪರಿಣಾಮ. ಆದರೆ ಹಲವಾರು ಪಾಶ್ಚಾತ್ಯರು ೨೦ನೇ ಶತಮಾನದಲ್ಲಿ ತಮ್ಮ ಅಭಿಪ್ರಾಯವನ್ನು ಬದಲಿಸಬೇಕಾಯಿತು ಮತ್ತು ಸಂಗೀತದ ಮಹತ್ವವನ್ನು ಅರಿಯುವಂತಾಯಿತು. ಇದಕ್ಕೆ ಇನ್ನೂ ಒಂದು ಕಾರಣ ಕೊಡುವುದಾದರೆ, ಸಂಗೀತ ಬೇರೆ ಕಲೆಗಳ ಹಾಗೆ ಲಾಭದಾಯಕವಾಗಿರಲಿಲ್ಲ. ಅದೂ ಅಲ್ಲದೆ ಇಂಗ್ಲೆಂಡಿನಲ್ಲಿ ಆಗ ಪ್ರದರ್ಶನ ಕಲೆಗಳಲ್ಲಿ ಹೆಚ್ಚಿನ ಉತ್ಸಾಹ ವಿರಲಿಲ್ಲ. ಸಾಮಾನ್ಯವಾಗಿ ಕಲೆಗೆ ಸರ್ಕಾರದ ಪ್ರೋತ್ಸಾಹವಿಲ್ಲದೆ ಸ್ಥಳೀಯ ಮತ್ತು ಖಾಸಗಿ ಪ್ರೋತ್ಸಾಹದ ಮೇಲೆ ಅದು ನಿಂತಿತ್ತು. ಆದರೆ ಬರೋಡ, ಮೈಸೂರು ರಾಜ್ಯಗಳು ಹಲವಾರು ಕಲಾವಿದರಿಗೆ ಆಶ್ರಯವಿತ್ತು ಪೋಷಿಸಿದ್ದು ಕಲೆಯ ಬೆಳವಣಿಗೆಗೆ ಅನುಕೂಲವಾಗಿತ್ತು.

೧೮೮೦ರ ಹೊತ್ತಿಗೆ, ಹಲವಾರು ವಾಣಿಜ್ಯಪತಿಗಳು, ಭೂಮಾಲಿಕರೂ ಕಲೆಯ ಪೋಷಣೆಗೆ ನಿಂತರು. ಮದ್ರಾಸ್, ಮುಂಬೈ ಮತ್ತು ಕಲಕತ್ತಾದಲ್ಲಿ ಕಲೆಯ ಪೋಷಣೆಗೆ ನಿಂತವರು ವಾಣಿಜ್ಯಪತಿಗಳು. ಮೈಸೂರಿನಲ್ಲಿ ಕಲೆಯ ಪೋಷಣೆ ರಾಜಾಶ್ರಯದಲ್ಲಿ ಇದ್ದು, ಪುಸ್ತಕ ಪ್ರಕಟಣೆಯೂ ನಡೆದಿತ್ತು. ೧೮೯೩ರಲ್ಲೇ ಚಿನ್ನಸ್ವಾಮಿ ಮೊದಲಿಯಾರ್ ಅವರು ಇಂಗ್ಲಿಷ್ ಕಲಿತ ಆಂಗ್ಲ ಪ್ರಭಾವಿಕ ಯುವಕರಿಗೂ ಮತ್ತು ಆಂಗ್ಲರಿಗೆ ಸುಲಭವಾಗಿ ಅರ್ಥವಾಗುವಂತೆ *'Oriental Music in European notations'* ಪ್ರಕಟಿಸಿದ್ದರಿಂದ ಸ್ವಲ್ಪ ಮಟ್ಟಿಗೆ ಪಾಶ್ಚಾತ್ಯರಿಗೂ ಸಂಗೀತಕಲೆ ಅರ್ಥವಾಗುವಂತಾಯ್ತು. ಸಂಗೀತವನ್ನು ನಾಟಕಕ್ಕೆ ಅಳವಡಿಸಿ ನಾಟ್ಯ ಸಂಗೀತ ಪ್ರಸಿದ್ಧವಾಯಿತು. ಮುಂಬೈನಲ್ಲಿ ಕಿರ್ಲೋಸ್ಕರ್ ಸಂಸ್ಥೆ ನಾಟ್ಯ ಸಂಗೀತವನ್ನು ಪ್ರೋತ್ಸಾಹಿಸಿತು. ೧೯ನೇ ಶತಮಾನದಲ್ಲಿ ಹಲವಾರು ಮಧ್ಯಮ ವರ್ಗದ ಜನರಿಗೆ ಪಾಶ್ಚಾತ್ಯ ಸಂಗೀತದ ಪಾಂಡಿತ್ಯವಿತ್ತು. ಇದಕ್ಕೆಲ್ಲಾ ರಾಜ ಪ್ರೋತ್ಸಾಹವಿತ್ತು. ವಯಲಿನ್ ಹಾರ್ಮೋನಿಯಮ್, ಪಕ್ಕವಾದ್ಯಕ್ಕೆ ಉಪಯೋಗಿಸುತ್ತಿದ್ದರು. ಮೈಸೂರಿನಲ್ಲಿ ಸ್ವತಃ ಮಹಾರಾಜರು ಪಾಶ್ಚಾತ್ಯ ಸಂಗೀತದಲ್ಲಿ ಪರಿಣತಿ ಹೊಂದಿದ್ದಲ್ಲದೆ ಆಸ್ಥಾನದ Western Band ಕೂಡ ಸಾಕಷ್ಟು ಪ್ರಸಿದ್ಧಿ ಪಡೆದಿತ್ತು. ಮೈಸೂರಿನಲ್ಲಿ ಸಂಗೀತಕ್ಕೆ ಹೆಚ್ಚಿನ ಪ್ರೋತ್ಸಾಹವಿದ್ದು, ಕಲಾವಿದರ ಹೆಸರಿನಲ್ಲಿ ಹಲವಾರು ಸ್ಥಳಗಳಿಗೆ ಸಂಗೀತಗಾರರ ಹೆಸರು ಇರಿಸಿದ್ದನ್ನು ನೋಡುತ್ತೇವೆ. (ಉದಾಹರಣೆಗೆ: ತ್ಯಾಗರಾಜ, ಕ್ಷೇತ್ರಜ್ಞ, ಶೇಷಣ್ಣ) ಮೈಸೂರು ಅರಮನೆಯಲ್ಲಿ ಸಂಗೀತ ಕಛೇರಿಗಳು ಒಂದು ಕಲಾಪೋಷಣೆಯ ಅಂಗವಾಗಿದ್ದಿತು. ಆಗಾಗ ಹೊರಗಿನಿಂದ ಬಂದ ವಿದ್ವಾಂಸರು ಕಛೇರಿಗಳನ್ನು ಕೊಡುತ್ತಿದ್ದರು. ಅದಲ್ಲದೆ ಧ್ವನಿವರ್ಧಕಗಳನ್ನು ಅರಮನೆ ಆವರಣದಲ್ಲಿ ಅಳವಡಿಸುತ್ತಿದ್ದುದರಿಂದ ಸಾರ್ವಜನಿಕರಿಗೂ ಕೇಳಲು ಅವಕಾಶವಿತ್ತು. ದಸರಾ, ರಾಮನವಮಿ ಮತ್ತು ಕೃಷ್ಣಜನ್ಮಾಷ್ಟಮಿ ಇವುಗಳಲ್ಲಿ ಮುಖ್ಯವಾದವು. ಹಲವಾರು ಸಂಗೀತ ವಿದ್ವಾಂಸರು ವಾರ ಹಾಗು ತಿಂಗಳವರೆಗೆ ಭಜನೆ ಏರ್ಪಡಿಸಿ ಸಾರ್ವಜನಿಕರಿಗೆ ಸಂಗೀತ ಕೇಳಲು ಅವಕಾಶವಿತ್ತರು. ಹೀಗಾಗಿ ಮೈಸೂರು ಜನರಿಗೆ ಟಿಕೆಟ್ ಕೊಂಡು ಸಂಗೀತ ಕೇಳಲು ಗೊತ್ತಿರಲಿಲ್ಲ. ಹಾಗು ಬಿಡಾರಂ ಕೃಷ್ಣಪ್ಪನವರು ತಮ್ಮ ಪ್ರಸನ್ನ ಸೀತಾರಾಮಮಂದಿರ ಕಟ್ಟಡಕ್ಕೋಸ್ಕರ "ಎಂಟು ಆಣೆ" ಟಿಕೆಟ್ ಹಾಕಿದಾಗ ಸಂಗೀತ ಮಾರಾಟ ಮಾಡಬೇಕೆ ಎಂಬ **ಒಡಕು** ಧ್ವನಿ ರಸಿಕರಲ್ಲಿ ಕೇಳಿ ಬಂತು, ಎಂಬುದಾಗಿ ಬಿ.ವಿ.ಕೆ. ಶಾಸ್ತ್ರಿಗಳು ತಮ್ಮ ಪುಸ್ತಕ 'ಮುರಳಿವಾಣಿ'[೪] ಯಲ್ಲಿ ತಿಳಿಸಿಕೊಟ್ಟಿರುತ್ತಾರೆ.

೧೯೨೦-೩೦ರ ಹೊತ್ತಿಗೆ ತನ್ನತನ ಹಾಗೂ ಸಾಂಸ್ಕೃತಿಕ ಸಮಾನತೆ ಮತ್ತು ದೇಶೀಯತೆ ಇವುಗಳಿಗೆ ಮಧ್ಯಮ ವರ್ಗದ ಜನರು ಆಕರ್ಷಿತರಾದರು. ಇದರಿಂದ ಸಾಂಪ್ರದಾಯಿಕ ಪರಂಪರೆ ಕಲೆಗಳಾದ ಸಂಗೀತ ಕುಶಲಕಲೆಗೆ ಮಧ್ಯಮ ವರ್ಗದವರು ವಾಲುವಂತಾಯಿತು.

ಸಂಗೀತಕ್ಕೆ ಮಧ್ಯಮ ವರ್ಗದವರಿಂದ ಪ್ರೋತ್ಸಾಹ ದೊರಕಿ, ಸಂಗೀತ ಒಂದು ಉತ್ತಮ ಸಂಪ್ರದಾಯಸ್ಥರ ಕಲೆಯೆಂದು ಮಧ್ಯಮ ವರ್ಗದವರು ಭಾವಿಸುವಂತಾದ್ದು ಮತ್ತು ಮೈಸೂರು ಮತ್ತಿತರ ದಕ್ಷಿಣ ಭಾರತದಲ್ಲಿ ಸಂಪ್ರದಾಯ ಮನೆತನದಲ್ಲೂ ಸಂಗೀತಕ್ಕೆ

ಮನ್ನಣೆ ದೊರಕಿದ್ದು ೧೯೨೦ರ ನಂತರ. ಇದಕ್ಕಾಗಿ ಹಲವಾರು ಸಭೆಗಳು, ವ್ಯಕ್ತಿಗಳು ಸಂಗೀತವನ್ನು ಸಾಮಾನ್ಯ ಜನರಿಗೆ ತಲಪಿಸಲು ಸಾಕಷ್ಟು ಶ್ರಮಿಸಿದರು. ಬಹುಶಃ ೨೦ನೇ ಶತಮಾನದ ಆರಂಭದಲ್ಲಿ ಮೊದಲ ಸಂಗೀತ ಸಭಾ ಎಂದರೆ **'ಗಾಯನ ಸಮಾಜ'**.[೫] ಇದೀಗ ಅದಕ್ಕೆ ಶತಾಬ್ದಿ ಸಮಾರಂಭ ನಡೆಯುತ್ತಿದೆ. ೧೯೦೫ರಲ್ಲಿ ಬೆಂಗಳೂರು ಗಾಯನ ಸಮಾಜ ಸ್ಥಾಪಿಸಲಾಯ್ತು. ಈ ಸಮಾಜದ ಹಿಂದೆ ಹಲವಾರು ಮುತ್ಸದ್ದಿಗಳಿದ್ದರು. ವಕೀಲರು, ಶಿಕ್ಷಕರೂ ಮತ್ತಿತರ ಸದಸ್ಯರಿದ್ದರು. ಇದರ ಸದಸ್ಯರು ೧೦೦ ಜನರಿದ್ದರು ಮತ್ತು ತಿಂಗಳಿಗೆ ೪ ಆಣೆಯಂತೆ ಸದಸ್ಯ ಶುಲ್ಕವನ್ನು ವಸೂಲು ಮಾಡಲ್ಪಡುತ್ತಲಿದ್ದು, ಒಂದು ತಿಂಗಳಿಗೆ ಒಂದು ಕಛೇರಿಯನ್ನು ಏಕಾಂಬರ ಸಾಹೋಜಿ ಹಾಲ್, ಚಿಕ್ಕಪೇಟೆ, ಸಂಸ್ಕೃತ ಕಾಲೇಜು ಅಥವಾ ಲಂಡನ್ ಮಿಷಿನ್ ಹೈಸ್ಕೂಲಿನಲ್ಲಿ ನಡೆಸಲಾಗುತ್ತಿದ್ದು, ಸಂಘವು, ೨ ರೂಪಾಯಿ ಬಾಡಿಗೆ ಕೊಡುತ್ತಿತ್ತು. ಸಂಘವು ಹೆಂಗಸರಿಗೆಂದೇ ಪ್ರತ್ಯೇಕ ಜಾಗದ ವ್ಯವಸ್ಥೆ ಮಾಡಿ ಹೆಂಗಸರಿಗೆ ಸಂಗೀತ ಕೇಳುವ ಅವಕಾಶ ಕಲ್ಪಿಸಿತ್ತು.[೫೭]

ಇದನ್ನು ಸ್ಥಾಪಿಸಿದವರು ಕೆ. ರಾಮಚಂದ್ರರಾವ್. ಲಂಡನ್ ಮಿಷಿನ್ ಹೈಸ್ಕೂಲಿನ ಹೆಡ್‌ಮಾಸ್ಟರ್. ಸಮಾಜವು ಕೇವಲ ಮೈಸೂರು ಕಲೆಗಾರರಿಗಲ್ಲದೆ ಹೊರಗಿನವರಿಗೂ ಅವಕಾಶ ಕಲ್ಪಿಸಿದ್ದರಿಂದ ಅನೇಕ ವಿದ್ವಾಂಸರು ಗಾಯನ ಸಮಾಜದ ಮೂಲಕ ತಮ್ಮ ಪ್ರತಿಭೆ ತೋರಿಸಬಹುದಾಗಿತ್ತು. ಸಮಾಜವು ಸಾಮಾನ್ಯವಾಗಿ ಪತ್ರಿಕೆಗಳ ಮೂಲಕ ಪ್ರಚಾರ ಕೊಡುತ್ತಿದ್ದುದರಿಂದ ಎಲ್ಲರಿಗೂ ತಿಳಿಯುವಂತಿದ್ದಿತು. ೧೯೬೨ರಲ್ಲಿ ತನ್ನದೇ ಆದ ಸ್ವಂತ ಕಟ್ಟಡಕ್ಕೆ ಸ್ಥಳಾಂತರಿಸಿ, ಸಂಗೀತ, ವಿದ್ವತ್‌ಗೋಷ್ಠಿ, ಚರ್ಚೆ, ಸಂಶೋಧನೆ ಇವುಗಳಲ್ಲಿ ಅಮೋಘ ಸೇವೆ ಸಲ್ಲಿಸಿದೆ. ಸಮಾಜದ ಸದಸ್ಯರಲ್ಲಿ ಬಹುತೇಕ ವಿದ್ಯಾವಂತರೂ ಮತ್ತು ಜಾಗ್ರತರಿದ್ದರಿಂದ ಸಮಾಜವು ದೇಶೀಯತೆಯ ಕಡೆಗೆ ವಾಲಿದ್ದರಲ್ಲಿ ಆಶ್ಚರ್ಯವಿಲ್ಲ. ಸಾಕಷ್ಟು ವಾಹನ ಸೌಕರ್ಯ, ಸಾರಿಗೆ ಸಂಪರ್ಕ ಬೆಳೆದದ್ದರಿಂದ, ಊರಿಂದೂರಿಗೆ ಕಲಾಕಾರರು ಬಂದು ಹೋಗಿ ಮಾಡಲು ಕಷ್ಟವಿರಲಿಲ್ಲ. ಹೀಗಾಗಿ ಕಲೆಯ ಸಂಪರ್ಕ ಬೆಳೆಯಲು ಅನುಕೂಲ ವಾತಾವರಣ ಒದಗಿತು. ೨೦ನೇ ಶತಮಾನದ ಪೂರ್ವಾರ್ಧದಲ್ಲಿ ಯೂರೋಪಿನಲ್ಲಿ ಆದ ಬದಲಾವಣೆಯಿಂದ, ನಮ್ಮ ದೇಶದ ಸಂಗೀತವನ್ನು ಅಭ್ಯಸಿಸಲು ಬಂದ ಹಲವಾರು ವಿದ್ವಾಂಸರು ಸಂಗೀತದ ಬರವಣಿಗೆಯಲ್ಲಿ ತೊಡಗಿ ಅದರ ಬಗ್ಗೆ ರಚನಾಕ್ರಮ ಸ್ವರೂಪ, ಇದೆಲ್ಲವನ್ನೂ ಕೂಲಂಕಷವಾಗಿ ತಿಳಿಸಿಕೊಟ್ಟಿದ್ದರಿಂದ, ಪಾಶ್ಚಾತ್ಯರಿಗೆ ಹಿಂದೂಸ್ಥಾನದ ಸಂಗೀತದ ಅರಿವು ಉಂಟಾಗಿ, ಭಾರತೀಯ ಸಂಗೀತದ ಮೌಲ್ಯ ತಿಳಿಯುವಂತಾಯಿತು.[೬]

**ಪತ್ರಿಕೆಗಳ ಪಾತ್ರ** : ಪತ್ರಿಕೆಗಳು ಉತ್ತಮ ಮಾಧ್ಯಮವಾದರೂ ೨೦ನೇ ಶತಮಾನದ ಎರಡು ದಶಕದಲ್ಲೂ ಒಂದಾದರೂ ಕಲೆಗೆಂದು ಮೀಸಲಾದ ಕನ್ನಡ ಪತ್ರಿಕೆ ಇರಲಿಲ್ಲ. ೧೯೨೫ರಲ್ಲಿ ಡಿ.ಕೆ. ಭಾರದ್ವಾಜರು ಹೊರತಂದ **ರಂಗಭೂಮಿ**, ಮೊದಲು ಕಲೆಗೆಂದು ಹೊರತಂದ ಪತ್ರಿಕೆ. 'ರಂಗಭೂಮಿ'ಗೆ ೧೦ ವರ್ಷಕಾಲ ಜೀವಿತಾವಧಿಯಿದ್ದರೂ, ಸತತವಾಗಿ ಹೊರಬಂದದ್ದು ಎರಡು ಮೂರು ವರ್ಷ ಮಾತ್ರ ಎಂದು ನಿರಂಜನ ವಾನಳ್ಳಿ, ತಮ್ಮ ಕೃತಿಯಲ್ಲಿ[೬] ತಿಳಿಸಿರುತ್ತಾರೆ. ಆದರೆ ಕರ್ಣಾಟಕ ಪತ್ರಿಕೆಯಲ್ಲಿ ಆಗಾಗ ಕಲಾವಿದರ ಬಗ್ಗೆ ಪರಿಚಯಾತ್ಮಕ ಲೇಖನವಿರುತ್ತಿತ್ತು ಮತ್ತು ಆಗಾಗ ಜಾಹಿರಾತನ್ನು ಕೊಡುತ್ತಿತ್ತು.

**KARNATAKA**

Saturday, March 7, 1914

**Music**

**The Bangalore Gayana Samaja**

*Gana Visharada Bidaram Krishnappa of Mysore Palace*

will give a performance in vocal music in

**Sri Chamarajendra Sanskrit College Hall, Fort Bangalore**

on Sunday 8th instant

commencing at 5 p.m.

(Admission to non members. 8 Annas)

ಸಂಗೀತ ಪತ್ರಿಕೆಗಳ ದೃಷ್ಟಿಯಿಂದ ಕಳೆದ ೧೫೦ ವರುಷಗಳಿಂದ ಕನ್ನಡ ಪತ್ರಿಕೋದ್ಯಮ ಚರಿತ್ರೆಯಲ್ಲಿ ಹೇಳಿಕೊಳ್ಳುವ ಸಾಧನೆಯೇನೂ ಆಗಿಲ್ಲ.[೬೭] ೧೯೫೦ರಲ್ಲಿ ಮಂಡ್ಯದಿಂದ, ೧೯೫೪ರಲ್ಲಿ ಬೆಂಗಳೂರಿನಿಂದ ಬಂದ **'ಗಾಯನಗಂಗಾ'** ಪತ್ರಿಕೆ ಇಂದಿಗೂ ಕಲೆಗೆ ಮೀಸಲಾಗಿ ಬಂದ ಗಮನಾರ್ಹ ಪತ್ರಿಕೆಗಳು. ಈಗ ಕಳೆದ ೨೨ ವರುಷದಿಂದ **'ಗಾಯನ ಸಾಮ್ರಾಜ್ಯ'** ಮಾಸಪತ್ರಿಕೆ ಗಾಯನ ಸಮಾಜದಿಂದ ಹೊರಬರುತ್ತಿದೆ. ಇದರ ಸಂಪಾದಕತ್ವವನ್ನು ಗಾಯನ ಸಮಾಜದ ಅಧ್ಯಕ್ಷರಾದ ಕಮಲಾನಾಥ್‌ರವರು ವಹಿಸಿಕೊಂಡು ಸಮರ್ಪಕವಾಗಿ ನಡೆಸುದ್ದಾರೆ.[೬೭]

**ರಾಷ್ಟ್ರೀಯತೆ ಮತ್ತು ಸಂಗೀತ** : ರಾಜಾಶ್ರಯದಿಂದ ಪ್ರೋತ್ಸಾಹ ಸಿಕ್ಕಿದ್ದರೂ ೧೯೨೦ರ ತನಕ ಯಾವ ಸ್ಕೂಲಿನಲ್ಲೂ ಸಂಗೀತಕ್ಕೆ ಪ್ರಾಧಾನ್ಯವಿರಲಿಲ್ಲ. ಆದರೆ ೧೯೨೦ರ ಹೊತ್ತಿಗೆ ರಾಷ್ಟ್ರೀಯ ಜಾಗೃತಿ ಉಂಟಾಗಿ ಸಂಗೀತವನ್ನು ಸ್ಕೂಲಿನಲ್ಲಿ ಬೋಧಿಸಬೇಕೆಂಬ ಆಂದೋಲನ ಉಂಟಾಯಿತು. ೧೮೯೨-೧೯೩೨ರ ಮೈಸೂರಿನ ಆಡಳಿತ ವರದಿಗಳನ್ನು ಪರಿಶೀಲಿಸಿದಾಗ ಸಂಗೀತದ ಬಗ್ಗೆ ಯಾವ ವರದಿಯೂ ಇಲ್ಲ.[೭೭] ಕುಶಲ ಕೈಗಾರಿಕಾ ಕಲೆಗಳಿಗೆ ಹೆಚ್ಚು ಒತ್ತುಕೊಟ್ಟಿದ್ದು ಕಂಡು ಬರುತ್ತದೆ.[೭೭] ಆದರೆ ೧೯೩೨-೪೪ ಮೈಸೂರು ವಿದ್ಯಾಭ್ಯಾಸದ ವರದಿಯಲ್ಲಿ (Misscellaneous ch xv, p. 107) Aesthetic Education ತಲೆಬರಹದ ಅಡಿ ಸಂಗೀತದ ಬಗ್ಗೆ ಮೊದಲನೇ ಬಾರಿ ಸೂಚನೆ ಇದೆ.[೮೭] ಮತ್ತು ೧೯೩೬ರಲ್ಲಿ ಸಂಗೀತವು

ಮಾಧ್ಯಮ ಶಾಲೆಯಲ್ಲಿ ಆರಂಭಿಸಿದ್ದು ಕಂಡುಬರುತ್ತದೆ ಮತ್ತು ಸಂಗೀತವನ್ನು ಐಚ್ಛಿಕವಾಗಿ ಅಭ್ಯಾಸ ಮಾಡಲು ಸರ್ಕಾರ ಪರವಾನಗಿ ನೀಡಿತು. ಇದರಿಂದ ಹಲವಾರು ವಿದ್ಯಾರ್ಥಿಗಳು ಸಂಗೀತ ಕಲಿಯಲು ಅವಕಾಶವಾಗಿ ಹೈಸ್ಕೂಲಿನಲ್ಲಿ ಕೂಡ ಮುಂದು ವರಿಸಲು ಅನುಕೂಲವಾದರೂ ಎಸ್.ಎಸ್.ಎಲ್.ಸಿ. ಮುಗಿದ ಮೇಲೆ ಮುಂದಿನ ವ್ಯವಸ್ಥೆ ಇಲ್ಲದ್ದರಿಂದ ಸಂಗೀತದ ಮುಂದುವರಿಕೆ ಸಾಧ್ಯವಾಗುತ್ತಿರಲಿಲ್ಲ.[೮೭]

ಸಂಗೀತವನ್ನು ಹೆಚ್ಚು ಪ್ರೋತ್ಸಾಹಿಸಿದ್ದು ಮಹಿಳಾ ಸೇವಾ ಸಮಾಜ (೧೯೧೨) ಗಾಯನ ಸಮಾಜ (೧೯೦೫) ಮತ್ತು ಲೇಡಿಸ್ ಅಸೋಸಿಯೇಷನ್. ಸರ್ಕಾರ ಒಂದು ರಚನಾ ಮಂಡಳಿ ಯನ್ನು ರಚಿಸಿ ಅದರಲ್ಲಿ ಉತ್ತಮ ಸಂಗೀತ ವಿದ್ವಾಂಸರು ಪರೀಕ್ಷಾ ಮಂಡಳಿಯಲ್ಲಿ ಇರುವಂತೆ ಸೂಚಿಸಿತು. ಇದು ವಾದ್ಯ ಮತ್ತು ಬಾಹಿ ಹಾಡುಗಾರಿಕೆ ಎರಡನ್ನೂ ಪರೀಕ್ಷಿಸುವ ಅಧಿಕಾರ ಹೊಂದಿತ್ತು. ಇದೆಲ್ಲಾ ೧೯೩೦ರ ನಂತರದ ಬೆಳವಣಿಗೆ. ಈ ಬೆಳವಣಿಗೆಗೆ ಮಾರ್ಗರೆಟ್ ಕಸಿನ್ಸ್‌ರವರ್ ಅಪಾರ ಕೊಡುಗೆ ಇದೆ. ಸ್ವತಃ ಸಂಗೀತಗಾರ್ತಿಯೂ ಮತ್ತು ಸಂಗೀತದ ಬಗ್ಗೆ ಅಪಾರ ಕಾಳಜಿ ಹೊಂದಿದ ಥಿಯಾಸಫಿ ಪಂಗಡಕ್ಕೆ ಸೇರಿದ ಮಾರ್ಗರೆಟ್ ಕಸಿನ್ಸ್ ಸಂಗೀತದ ರಾಷ್ಟ್ರೀಯ ಮೌಲ್ಯವನ್ನು ಎತ್ತಿಹಿಡಿದದ್ದೇ ಅಲ್ಲದೆ ಇದು ಪಠ್ಯಕ್ರಮದಲ್ಲಿ ಸೇರಿಸಬೇಕೆಂದು ವಾದಿಸಿದರು.

"The Cultural value attatched to the tradition was and had to be in her view essentially hindu 'the culture of Nationalism; Any analysis of the national value of music will bring as its corollary an understanding of the value of national music and a demand for its inclusion in the curricula of schools and colleges. So that young India may grow up in the image of young Krishna with his beloved flute and of Saraswat radiant with veena. In drawing up a Course of study of Carnatic music in schools and colleges cousins drew on the experience and skills of large fraternity of Carnatic musicians in Tanjore. The Tanjore Conference resulted in a Comprahensive syllabus of musical studies for yearly graded instruction and examination. This Syllabus drew the attention of enthusiasists in the University Circles. **Cousins was invited to deliver a series of lectures in music in the year 1927 at the University of Mysore to prepare the ground for the introduction of music as optional subject in Mysore educational programme".**[೯೮]

ಮಾರ್ಗರೆಟ್ ಕಸಿನ್ಸ್‌ರವರ ಕಲೆಯ ಕಾಳಜಿಯಿಂದ ಸಂಗೀತವು ಐಚ್ಛಿಕ ವಿಷಯ ಆದದ್ದೇ ಅಲ್ಲದೆ ಸರ್ಕಾರದ ಗಮನವು ಸಂಗೀತದ ಕಡೆ ಹರಿಯುವಂತೆ ಮಾಡಿತು. ಅದೂ ಅಲ್ಲದೆ ಜನಸಾಮಾನ್ಯನಿಗೆ ಸಂಗೀತವನ್ನು ಸ್ಕೂಲು, ಕಾಲೇಜುಗಳಲ್ಲಿ ಕಲಿಯಲು ಅವಕಾಶವಾಯಿತು.

ಇಪ್ಪತ್ತನೇ ಶತಮಾನದ ಮಧ್ಯದ ಹೊತ್ತಿಗೆ ಸಂಗೀತ ಕೇವಲ ಗುರು, ಶಿಷ್ಯ ಬಾಂಧವ್ಯದಿಂದ ಮಾತ್ರ ಸಂಗೀತ ಕಲಿಯಲು ಸಾಧ್ಯ ಎಂಬ ಭಾವನೆ ಬೇರ್ಪಟ್ಟು, ಒಂದು ವ್ಯವಸ್ಥೆಗೆ ಒಳಪಟ್ಟು, ಸಂಗೀತಕ್ಕೂ ಒಂದು ಸ್ಥಾನವಿದೆ ಎಂಬುದನ್ನು ಗುರುತಿಸಿಕೊಂಡಿತು. ಹೀಗಾಗಿ ಸಂಗೀತ ಸಮಾಜದ ಅಂಗವಾಯಿತು ಮತ್ತು ರಾಷ್ಟ್ರೀಯ ಆಂದೋಲನದಲ್ಲಿ ಮುಖ್ಯ ಪಾತ್ರವಹಿಸಿತು.

**ಸ್ವಾತಂತ್ರ ಚಳುವಳಿ ಮತ್ತು ಸಂಗೀತ** : ಸ್ವಾತಂತ್ರ ಚಳುವಳಿಯ ಕಾಲಕ್ಕೆ ಜನರ್ನು ಆಕರ್ಷಿಸಲು, ಮೆರವಣಿಗೆ ಹೊರಟಾಗ, ಚಳುವಳಿಕಾರರಲ್ಲಿ ಸ್ಫೂರ್ತಿ ತುಂಬಲು ಹಾಡುಗಳನ್ನು ಹಾಡುತ್ತಿದ್ದರು. ಗಾಂಧೀಜಿಯವರ ತತ್ವಗಳಾದ ಅಹಿಂಸೆ, ಅಸಹಕಾರ ಚಳುವಳಿ, ಇವುಗಳ ಮೇಲೆ ಹಲವಾರು ಕವಿಗಳು, ಸಾಮಾನ್ಯರು ಹಾಡುಗಳನ್ನು ರಚಿಸಿದ್ದರು. (೧೯೩೦) ಜನರು ಸಣ್ಣ ಸಣ್ಣ ಗುಂಪಾಗಿ ಮೆರವಣಿಗೆ ಹೊರಟು (ಪ್ರಭಾತ್ ಪೇರಿ) ದಾರಿಯಲ್ಲಿ, ದೇಶಭಕ್ತಿ ಗೀತೆಗಳನ್ನು ಹಾಡಿ ಜನರಲ್ಲಿ ತಮ್ಮ ಕರ್ತವ್ಯವನ್ನೂ, ದೇಶಸೇವೆಯನ್ನೂ ಮಾಡುವಂತೆ ಪ್ರೇರೇಪಿಸುತ್ತಿದ್ದರು. ಈ ದೇಶಭಕ್ತಿಯ ಹಾಡುಗಳು, ಚಳುವಳಿಕಾರರನ್ನು ತಮ್ಮ ಚಳುವಳಿಯನ್ನು ಬಿಡದೆ ನಡೆಸುವ ಶಕ್ತಿ ನೀಡುತ್ತಿದ್ದುವು. ಮುಂಬೈನಲ್ಲಿ ಹಲವಾರು ಚಿಕ್ಕ ಚಿಕ್ಕ 'ಪ್ರಭಾತ್ ಪೇರಿಗಳು' ನಡೆಯುತ್ತಿದ್ದು. ಧಾರವಾಡದಲ್ಲಿ ಕೂಡ ಇದರ ಗುಂಪು ಇದ್ದಿತು. ಧಾರವಾಡ ಆಗ ಮುಂಬೈಗೆ ಸೇರಿದ್ದರಿಂದ (Bombay Presidency) 'ಕರ್ನಾಟಕ ಪ್ರಭಾತ್ ಪೇರಿ' (ಮುಂಬೈ ಪ್ರೊವಿನ್ಷಿಯಲ್ ಕಾಂಗ್ರೆಸ್ ಕಮಿಟಿಗೆ ಸೇರಿದ್ದು) ಅದನ್ನು ಬ್ರಿಟಿಷ್ ಸರ್ಕಾರ ಕಾನೂನು ವಿರುದ್ಧ ಎಂದು ಬಹಿರಂಗ ಪಡಿಸಿತ್ತು. ಈ ಪ್ರಭಾತ್ ಪೇರಿಗಳು ಬ್ರಿಟಿಷ್ ಸರ್ಕಾರಕ್ಕೆ ಸವಾಲಾಗಿ ದ್ದುವು.[೧೦] ಪೇರಿಗಳು ಚಿಕ್ಕ ಚಿಕ್ಕ ಗುಂಪಾಗಿ, ದೇವರ ಭಜನೆಗಳು ಮಾಡುವ ಬದಲು ರಾಷ್ಟ್ರೀಯತೆ ಮತ್ತು ಸಂಸ್ಕೃತಿಯನ್ನು ಎತ್ತಿ ಹಿಡಿದು ಜನರನ್ನು ಪ್ರಚೋದಿಸುತ್ತಿದ್ದುವು. ಗಾಂಧೀಜಿಯವರಿಗೆ ಇದು ಅತ್ಯಂತ ಪ್ರಿಯವಾಗಿದ್ದು, ರಾಷ್ಟ್ರೀಯ ಪ್ರಚೋದನೆಯನ್ನು ಸಂಗೀತದ ಮೂಲಕ ಮಾಡಿ ಜನರಲ್ಲಿ ಜಾಗೃತಿ ಮೂಡಿಸುತ್ತಿತ್ತು.

ಸೂರ್ಯನಾಥ ಕಾಮತರವರ ಸಂಪಾದಕತ್ವದಿಂದ ಹೊರ ಬಿದ್ದ 'ಸ್ವಾತಂತ್ರ ಸಮರದ ಗೇಯ ಗೀತೆಗಳಿಂದ', ಹಲವಾರು ಸ್ವಾತಂತ್ರ ಗೀತೆಗಳನ್ನು ಹೆಸರಿಸಬಹುದು.[೧೧] ಇದರಲ್ಲಿ ಹಲವಾರು ಹಾಡುಗಳು, ಅನೇಕ ಗಣ್ಯ ದೇಶಭಕ್ತರ ಹಾಡುಗಳು, ಒಟ್ಟಾರೆ ೧೧೪ ಹಾಡುಗಳು ಇದ್ದು, ಬ್ರಿಟಿಷರ ಆಡಳಿತದಿಂದ ಉಂಟಾದ ಆರ್ಥಿಕ ನಷ್ಟ, ದುರ್ದೆಶೆ, ನೈತಿಕ ಪತನ, ಮದ್ಯಪಾನದ ಹಾನಿ, ಅಸ್ಪೃಶ್ಯತಾ ಸಮಸ್ಯೆಯ ಹಲವು ಮುಖಗಳು, ಇವನ್ನೆಲ್ಲಾ ಎತ್ತಿ ಹೇಳುತ್ತವೆ.

೧೯೨೪ರ ಬೆಳಗಾಂ ಕಾಂಗ್ರೆಸ್ ಅಧಿವೇಶನದಲ್ಲಿ ಸಂಗೀತಕ್ಕೆ ಪ್ರಾಮುಖ್ಯತೆ ದೊರೆತು, ಕನ್ನಡ ನಾಡಿನ ಅಪೂರ್ವ ಕಲಾವಿದರಾದ, ವೈಣಿಕ ಶಿಖಾಮಣಿ ವೀಣೆಶೇಷಣ್ಣ, ಕೆ. ವಾಸು ದೇವಾಚಾರ್ಯ ಅವರು ಬೆಳಗಾಂ ಕಾಂಗ್ರೆಸ್‌ನಲ್ಲಿ ಉಪಸ್ಥಿತರಿದ್ದರು. ಸ್ವತಃ ಗಾಂಧೀಜಿಯವರು ಸದ್ದಿಲ್ಲದೆ ಚಪ್ಪರಕ್ಕೆ ಬಂದು ಶೇಷಣ್ಣನವರ ವೀಣೆಯನ್ನು ಆಲಿಸಿದರು. ಸ್ಥಳ ಸಂಕೋಚವಾದರೂ ಹಾಗೆಯೇ ಸಾವರಿಸಿಕೊಂಡು ದೇಶಪ್ರಮುಖರೆಲ್ಲಾ ಮಧ್ಯಾಹ್ನದವರೆಗೆ ಕದಲದೆ ಕುಳಿತರು. ಅದಲ್ಲದೆ ಗಾಂಧೀಜೀಯವರು ಶೇಷಣ್ಣನವರ ವೀಣಾ ವಾದನವನ್ನು ಪೂರ್ಣ ಆಲಿಸಿದರು.[೧೨] ಆಗ ಶೇಷಣ್ಣನವರು, "ಜಗತ್ತನ್ನೆಲ್ಲಾ ಗಾಂಧಿ ತನ್ನ ಮಹತ್ತಿನಿಂದ ಆಕರ್ಷಿಸಿದರೆ ಅಂತಹ ಗಾಂಧಿಯನ್ನು ನಾನು ನನ್ನ ವೀಣೆಯಿಂದ ಆಕರ್ಷಿಸಿಬಿಟ್ಟೆ. ಎಷ್ಟೋ ರಾಜಮಹಾರಾಜರ ಪುರಸ್ಕಾರ ಬಿರುದು ಬಾವಲಿಗಳನ್ನು ಕೊಟ್ಟಿರು ತ್ತಾರೆ. ದೇಶವೆಲ್ಲಾ ಒಂದಾಗಿ ಮಾಡಿದ ಈ ಪುರಸ್ಕಾರಕ್ಕೆ ಯಾವುದು ಸಮ."[೧೩] ತಿರುಮಲೆ ರಾಜಮ್ಮ (ಭಾರತಿ : ಕಾವ್ಯನಾಮ) ವೀಣೆ ಶೇಷಣ್ಣನವರ ಪ್ರಮುಖ ಶಿಷ್ಯೆ ಮತ್ತು ಖ್ಯಾತ ಪತ್ರಿಕೋದ್ಯಮಿ ತಿರುಮಲೆ ತಾತಾಚಾರ್ಯರ ಪತ್ನಿ. ಸ್ವತಃ ಗಾಂಧೀಜಿಯವರು ಅವರ ಸಂಗೀತ ಕೇಳಲು ಇಷ್ಟಪಟ್ಟು ಅವರ ಸಂಗೀತ ಕೇಳಿ ಸಂತೋಷಪಟ್ಟರು. ಆಗಿನ ಕಾಲದ ಜನಪ್ರಿಯ ಗೀತೆ

॥ಜೈ ಭಾರತ ಭೂಮಿಗೆ ಮಾತೆಗೆ, ಜೈ ಪಾವನ ಮೂರ್ತಿಗೆ
ಸನ್ಮಂಗಳವಾಗಲಿ ಸತತಂ ॥

ಈ ಅತ್ಯಂತ ಜನಪ್ರಿಯವಾದ ಗೀತೆಯ ಕರ್ತೃ ರಾಜಮ್ಮ, ರಾಗ, ತಾಳ, ಸಂಯೋಜಿಸಿ, ರಚಿಸಿದ್ದರು. ಇದನ್ನು ಎಲ್ಲಾ ಮಕ್ಕಳು ಸ್ಕೂಲು ಕಾಲೇಜಿನಲ್ಲಿ ಹಾಡುತ್ತಿದ್ದರು. ಹೀಗೆ ಸಾರ್ವಜನಿಕರಿಗೂ ಸಂಗೀತವು ೧೯೩೦-೩೫ರಲ್ಲಿ ತಲಪಿತ್ತು. ಮತ್ತೊಬ್ಬ ಕವಯಿತ್ರಿ 'ಮೊಗೇರಿ ಚಂದ್ರಮ್ಮ'ನವರ "ದೇಶಭಕ್ತರ ಉದ್ಗಾರಗಳು" ಕೂಡ ಸಾಕಷ್ಟು ಪ್ರಚಲಿತವಿದ್ದವು.

ಕರೀಮ್‌ಖಾನ್‌ರವರು ಲೋಕಮಾನ್ಯ ತಿಲಕ್‌ರವರ ಎದುರಿಗೆ ಹಾಡಿದಾಗ ತಿಲಕ್‌ರವರು ರಾಷ್ಟ್ರ ಪುನರ್‌ನಿರ್ಮಾಣದಲ್ಲಿ ಸಂಗೀತ ಅಗ್ರಗಣ್ಯವಾಗಬೇಕೆಂದದ್ದನ್ನು ಇಲ್ಲಿ ಸ್ಮರಿಸಬಹುದು. ಪಂಡಿತ ಪಲುಸ್ಕರ್‌ವರು 'ವಂದೇ ಮಾತರಂ'ಗೆ ರಾಗ ಹಾಕಿ ಪ್ರತಿಯೊಂದು ರಾಷ್ಟ್ರೀಯ ಸಮ್ಮೇಳನದಲ್ಲಿ ಹಾಡಿರುವುದಿದೆ. ಮತ್ತು 'ರಘುಪತಿ ರಾಘವ ರಾಜಾರಾಂ' ಅಂತೂ ದೇಶಾದ್ಯಂತ ಹೆಸರಾದ ಹಾಡು. ವಿಷ್ಣುನಾರಾಯಣ ಬಾತ್‌ಕಂಡೆ ಸಂಗೀತ ಒಂದು ವ್ಯವಸ್ಥೆಗೆ ಒಳಪಡಬೇಕೆಂದು ಶ್ರಮಪಟ್ಟು ಸಂಗೀತ ಸಮ್ಮೇಳನಗಳನ್ನು ಏರ್ಪಡಿಸಿದರು. ೧೯೨೬ರಲ್ಲಿ ಗ್ವಾಲಿಯರ್‌ನಲ್ಲಿ ಒಂದು ಸಂಗೀತ ವಿಶ್ವವಿದ್ಯಾನಿಲಯ ಸ್ಥಾಪಿಸಿದರು ಮತ್ತು ಬರೋಡದಲ್ಲಿ ಮಹಾ ರಾಜರ ಪ್ರೋತ್ಸಾಹದಿಂದ ಸಂಗೀತಗಾರರ ಮತ್ತು ಸಂಗೀತಶಾಸ್ತ್ರ ತಿಳಿದವರ ಸಮ್ಮೇಳನವನ್ನು ನಡೆಸಿದರು. ಇನ್ನು ಪಂಡಿತ ಪಲುಸ್ಕರ್ ರವರು ಗಾಂಧರ್ವ ಮಹಾವಿದ್ಯಾಲಯ ಸ್ಥಾಪಿಸಿ ಸಂಗೀತದ ಪುನರುಜ್ಜೀವನವನ್ನು ಮಾಡಿದರು. ಬಹುಶಃ ಇದು ಸಾರ್ವಜನಿಕ ರಿಂದ ಉತ್ಸಾಹದಿಂದ ಬಂದ ಮೊದಲನೆ ಪ್ರಯತ್ನ (೧೯೧೬, ೧೯೧೮, ೧೯೧೯, ೧೯೨೫) ನಡೆದ ಸಮ್ಮೇಳನಗಳು ಅತ್ಯಂತ ಮಹತ್ವದ್ದಾಗಿದ್ದು ಇದೆಲ್ಲಾ ಮೈಸೂರಿನಿಂದ ಹೊರಗಡೆ ನಡೆದ ಸಂಗೀತಕ್ಕೆ ಪ್ರೋತ್ಸಾಹವಾಗಿತ್ತು. ಇದಕ್ಕೆಲ್ಲಾ ನಮ್ಮ ಮಹಾರಾಜರ ಪ್ರೋತ್ಸಾಹವಿತ್ತೆಂದು ತಿಳಿದುಬಂದಿದೆ.

೧೯೩೨ರಲ್ಲಿ ಪ್ರೈಮರಿ ಮತ್ತು ಮಿಡಲ್ ಸ್ಕೂಲಿನಲ್ಲಿ ಸಂಗೀತವು ಐಚ್ಛಿಕವಾಗಿ ಬೋಧಿಸಲ್ಪಟ್ಟು ಮುಂದೆ ವಿಶ್ವವಿದ್ಯಾ ನಿಲಯದಲ್ಲಿ ಮುಂದುವರಿಯಿತು.

**ಪರಿವರ್ತನೆ** : ದೊಡ್ಡ ದೊಡ್ಡ ಸಭೆಗಳಲ್ಲಿ, ಸಂಗೀತ ಏರ್ಪಡಿಸಿ, ಟಿಕೆಟ್ ಮಾರಿ ಬಂದ ಹಣದಿಂದ ಕಲಾವಿದರ ಸಂರಕ್ಷಣೆ ಮತ್ತು ಮಾನ್ಯತೆ ಎರಡನ್ನೂ ೧೯೩೦ರ ಹೊತ್ತಿಗೆ ನೋಡುತ್ತೇವೆ. ಇದು ಒಂದು ಹೊಸ ಪರಿವರ್ತನೆಯನ್ನು ತಂದಿತು. ಇದರಿಂದ ಕಚೇರಿಗಳು ಒಂದು ವ್ಯವಸ್ಥಿತ ರೂಪದಲ್ಲಿ ಮೂರು ಅಥವಾ ನಾಲ್ಕು ಘಂಟೆಗಳ ಸಂಗೀತ ಕಚೇರಿಗೆ ಅಳವಡಿಸಲ್ಪಟ್ಟವು. ಮತ್ತೊಂದು ಬದಲಾವಣೆ; ಗ್ರಾಮಫೋನ್, ರೇಡಿಯೊ ಮತ್ತು ಸಿನಿಮಾ. ರೇಡಿಯೋ ಸಂಗೀತ ಸಾರ್ವಜನಿಕರ ಪಾಲಿಗೆ ವರವಾಗಿ ಪರಿಣಮಿಸಿದುವು. ೧೯೨೭ರಲ್ಲಿ ಇಂಡಿಯನ್ ಬ್ರಾಡ್‌ಕ್ಯಾಸ್ಟಿಂಗ್. ಕಂಪನಿ ಎಂಬ ಖಾಸಗಿ ಸಂಸ್ಥೆ ಮೊಟ್ಟಮೊದಲಿಗೆ ಸುವ್ಯವಸ್ಥಿತವಾದ ಪ್ರಸಾರವನ್ನು ಮುಂಬೈ ಮತ್ತು ಕಲಕತ್ತಾದಲ್ಲಿ ಪ್ರಾರಂಭಿಸಿತು. ಆದರೆ ಇದು ನಷ್ಟವಾಗಿ ಪರಿಣಮಿಸಿದ್ದರಿಂದ, ೧೯೩೦ರಲ್ಲಿ ಸರ್ಕಾರ Indian Broad Casting Service ಶುರುಮಾಡಿತು. ರಾಷ್ಟ್ರೀಯತೆಯ ಆಂದೋಲನದಿಂದ, ಸರ್ಕಾರ ರೇಡಿಯೋದಲ್ಲಿ ಬಿತ್ತರಿಸಬೇಕಾದ್ದು ಕೇವಲ ಸಾಂಸ್ಕೃತಿಕ ಮತ್ತು ಮನೋರಂಜನೆಗೆ ಮೀಸಲಾದದ್ದೆಂದು ದೃಢಪಡಿಸಿತು. ಹೀಗಾಗಿ ಶಾಸ್ತ್ರೀಯ ಸಂಗೀತ ಮುಖ್ಯ ಅಂಗವಾಯಿತು. ೧೯೩೬ರಲ್ಲಿ ಸಂಸ್ಥೆಯ ಹೆಸರನ್ನು All India Radio ಎಂದು ಬದಲಾಯಿಸಿತು.

**ಆಕಾಶವಾಣಿ (೧೯೩೭)** : ಈ ಸಂಸ್ಥೆಯ ಮೊದಲ ಸ್ಥಾಪಕರು ಮೈಸೂರಿನಲ್ಲಿ ಮನಶ್ಶಾಸ್ತ್ರ ಪ್ರಾಧ್ಯಾಪಕರಾಗಿದ್ದ ಡಾ॥ ಎಮ್.ವಿ. ಗೋಪಾಲಸ್ವಾಮಿ ಅವರು. ಅವರು ತಂತಿ ಇಲ್ಲದೆ ಧ್ವನಿ ಪ್ರಸಾರ ಮಾಡುವ ಪ್ರಯೋಗಗಳಲ್ಲಿ ಆಸಕ್ತರಾಗಿದ್ದರು. ವಾಣೀವಿಲಾಸ ಪುರದಲ್ಲಿದ್ದ ಅವರ ಮನೆಯಲ್ಲಿ, ಧ್ವನಿ ಪ್ರಸಾರ ಮಾಡುವ, ಸ್ವೀಕರಿಸುವ ಸಾಧನಗಳಿದ್ದವು. ಪ್ರೊ॥ ರಾಲೊ ಇವರನ್ನು ಪ್ರೋತ್ಸಾಹಿಸಿದ್ದರು. ಗೋಪಾಲಸ್ವಾಮಿಯವರಿಗೆ ಒಂದು ಚಿಕ್ಕ ಖಾಸಗಿ ರೇಡಿಯೋ ಸ್ಟೇಷನ್ ಆರಂಭಿಸಲು ಆಕರ್ಷಣೆ ಇತ್ತಾದ್ದ ರಿಂದ, ರೇಡಿಯೋ ಸ್ಟೇಷನ್ನಿಗೆ ಒಂದು ಸೂಕ್ತ ಹೆಸರನ್ನು ಸೂಚಿಸಲು, ಎಂ.ಎ. ಶ್ರೀನಿವಾಸನ್‌ರವರನ್ನು ಕೇಳಿದರು. ಎಮ್.ಎ. ಶ್ರೀನಿವಾಸನ್ ರವರಿಗೆ 'ಆಕಾಶವಾಣಿ' (Sky Voice) ಎಂಬ ಹೆಸರು ಸೂಕ್ತವಾಗಿ ಕಂಡಿದ್ದರಿಂದ ಹೆಸರನ್ನು ಎಮ್.ವಿ. ಗೋಪಾಲ ಸ್ವಾಮಿ ಅವರಿಗೆ ಸೂಚಿಸಿದರು. ಇದು ಒಪ್ಪಿಗೆಯಾಗಿ, ಹಲವು ತಿಂಗಳೊಳಗೆ "ಆಕಾಶವಾಣಿ ಸ್ಟೇಷನ್" ಮೈಸೂರಿನಲ್ಲಿ ವಾಣಿ ವಿಲಾಸಪುರಂ ಶುರುವಾಯಿತು.[೧೪]

ಖಾಸಗಿ ಸಂಸ್ಥೆಯಾಗಿ ನಡೆಯುತ್ತಿದ್ದ ಆಕಾಶವಾಣಿಯನ್ನು ೧೯೪೨ರಲ್ಲಿ ಸರ್ಕಾರ ವಹಿಸಿಕೊಂಡು ಪ್ರತ್ಯೇಕ ಕಟ್ಟಡ ಕೊಟ್ಟು ಕೇಂದ್ರ ಸರ್ಕಾರ ವಹಿಸಿಕೊಂಡ ಮೇಲೆ ಆಕಾಶವಾಣಿಯನ್ನು ಬೆಂಗಳೂರಿಗೆ ವರ್ಗಾಯಿಸಲಾಯಿತು. (೧೯೫೫ ನವೆಂಬರ್ ೨) ಇದು ಪ್ರಮುಖ ಕೇಂದ್ರವಾಗಿ ಇದಕ್ಕೆ ಧಾರವಾಡ, ಭದ್ರಾವತಿ ಮತ್ತು ಗುಲ್ಬರ್ಗದಲ್ಲಿ ಅಂಗ ಸಂಸ್ಥೆಗಳಿವೆ. ಕಾರ್ಯಕ್ರಮದಲ್ಲಿ ೫೩% ಶಾಸ್ತ್ರೀಯ ಸಂಗೀತ ಬಿತ್ತರಿಸುವದರಿಂದ ಸಂಗೀತಕ್ಕೆ ಪ್ರಾಮುಖ್ಯತೆ ಹಾಗೂ ಹಲವಾರು ಪ್ರತಿಭಾವಂತರಿಗೆ ಅವಕಾಶ ಒದಗಿಸಿತು. ೧೯೪೭ರ ತನಕ ಸರ್ಕಾರ ಯಾವುದೇ ಒಂದು ವ್ಯವಸ್ಥಿತ ಕ್ರಮದಲ್ಲಿ ತನ್ನ ನಿಲುವು ತಳೆಯದಿದ್ದರೂ ಸ್ವಾತಂತ್ರ್ಯದ ನಂತರ ತನ್ನ ನಿಲುವನ್ನು ಖಚಿತಪಡಿಸಿತು.

ಸ್ವಾತಂತ್ರ್ಯದ ನಂತರ ಪಾಶ್ಚಾತ್ಯ ಸಂಗೀತಕ್ಕೆ ಹೆಚ್ಚು ಮನ್ನಣೆ ಸಿಗಲಿಲ್ಲ. ಆದರೆ ಬಾನುಲಿಯ ಪ್ರಸಾರದಿಂದ ಸಂಗೀತ ಸಾಮಾನ್ಯ ಜನರ ಮೇಲೆ ಮಹತ್ತರವಾದ ಪರಿಣಾಮ ಮಾಡಿದ್ದಂತೂ ನಿಜ. ಅದೂ ಅಲ್ಲದೆ ಕಲೆಗಾರನ ಸ್ಥಾನಮಾನ ಇವೆರಡನ್ನೇ ಹೆಗ್ಗಳಿಕೆ ಮಾಡದೆ ಶ್ರೇಷ್ಠತೆ, ಹಿರಿಮೆ- ಇವೆರಡಕ್ಕೆ ಮಹತ್ವ ಕೊಟ್ಟಿತು.

ಒಟ್ಟಿನಲ್ಲಿ ಹೇಳಬೇಕಾದರೆ ಸಂಗೀತ ಕಲೆಗೆ ಬ್ರಿಟಿಷರ ಕೊಡುಗೆ ಅತ್ಯಲ್ಪ ಮತ್ತು ಸ್ವಾತಂತ್ರ್ಯದ ಮೊದಲಿನ ಮೂರು ದಶಕಗಳನ್ನು ಗಮನಿಸುವಾಗ ಸಂಗೀತ, ತಾಡಪತ್ರಗಳ ಸಂರಕ್ಷಣೆ ಯಾಗಲಿ, ವಿದ್ವಾಂಸರನ್ನು ಗುರುತಿಸಿ ಗೌರವಿಸುವುದಾಗಲಿ (ಬರೋಡ, ಗ್ವಾಲಿಯರ್, ಮೈಸೂರು ಸಂಸ್ಥಾನ ಬಿಟ್ಟು) ಸಂಗೀತದ ಪುನರುಜ್ಜೀವನದಲ್ಲಿ ಬ್ರಿಟಿಷರ ಪಾತ್ರ ಅತ್ಯಂತ ಕಡಿಮೆ. ಆದರೆ ಒಂದು ಕೊಡುಗೆ; ಅದು ಸ್ಕೂಲು, ಕಾಲೇಜುಗಳಲ್ಲಿ, ಪಠ್ಯ ಬೋಧನೆಯಲ್ಲಿ ಅಳವಡಿಸಿದ್ದು. ಆದರೆ ಇದರ ಹಿಂದೆ ನಮ್ಮ ಸ್ವಾತಂತ್ರ್ಯ ಹೋರಾಟಗಾರರ ಕೈವಾಡವಿತ್ತು ಎಂಬುದನ್ನು ಮರೆಯಲಾಗದು.

ಸ್ವಾತಂತ್ರ್ಯದ ನಂತರ ಸಂಗೀತದ ಬೆಳವಣಿಗೆ ಮತ್ತು ಸಂಗೀತ ನಮ್ಮ ಸಂಸ್ಕೃತಿಯ ಅಂಗವಾಗಿ ಬೆಳೆದದ್ದು ಇತಿಹಾಸ.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. James Mill., 1858. *The History of British India.* 5th ed. vol II london, p. 28-29.
೨. James Forbes., 1834, *Oriental Memoirs;* a narrative of Seventeen years residence in India. 2nd ed. vol II p. 306. ಆದರೆ ಫೊರ್ಬಸ್‌ರವರಿಗೆ ಸಂಗೀತದ ಬಗ್ಗೆ ಶಾಸ್ತ್ರ ಗ್ರಂಥಗಳಿರುವದು ತಿಳಿದಿತ್ತು.
೩. Aldous Huxley., 1926. *Jesting Pilate.* London, p. 130-131
೪. B.V.K. Sastri., 1990. *Murali Vani.*, Bangalore. p. 660.
೫. N. Nagaraja Rao, 'The Bangalore Gayana Samaja', A Short history (in) Bangalore Gayana Samaja, The *Platinum Jubilee and Twelth music Conference.* 1980. p. 42.
೫ಅ. ೧೯೦೫ರಲ್ಲಿ ಇನ್ನೂ ಹೆಂಗಸರು ಸಂಗೀತ ಕಲಿಯುವ, ಹಾಡುವ ಸಂಪ್ರದಾಯವಿನ್ನೂ ಬೆಳೆದಿರಲಿಲ್ಲ. ಸಾರ್ವಜನಿಕವಾಗಿ ಮಹಿಳೆಯರು ಹಾಡುವದಿರಲಿ, ಕೇಳುವದು ಕೂಡ ನಿಷಿದ್ಧವೆನಿಸಿದ್ದ ಕಾಲವದು.
೬. Arnold A. Blake., 1914. *The music of India,* H. Fox strange ways The music of Hindustan, oxford.
೭. ನಿರಂಜನ ವಾನಳ್ಳಿ., ೨೦೦೧. **ಕನ್ನಡದಲ್ಲಿ ಕಲೆ ಸಾಹಿತ್ಯ ಪತ್ರಿಕೆಗಳು.**
೭ಅ. ನಿರಂಜನ ವಾನಳ್ಳಿ., ಅದೇ, p. 568.
೭ಆ. ಕನ್ನಡ ಪ್ರಭ, ೨೨.೮.೨೦೦೫, 22 Aug. 2004. (ಕನ್ನಡದಲ್ಲಿ ಒಟ್ಟು ೩೦ ಪತ್ರಿಕೆಗಳು ಕಲೆಗಾಗಿ ಪ್ರಕಟವಾಗುತ್ತಿವೆ ಎನ್ನಬಹುದು)
೮. *Mysore Administration Report.* 1892-1932.
೮ಅ. ಇದು ಬ್ರಿಟಿಷರಿಗೆ ಲಾಭದಾಯಕವಾಗಿತ್ತು.
೯. Margaret Cousins., 1931. *Music of orient and Occident* Madras, p. 43.
೯ಅ. Ibid, p. 43.
೧೦. A.R. Kulkarni and N.K. Wagle (ed.) *Region, Nationality and Religion*, p. 99.
೧೧. ***ಸ್ವಾತಂತ್ರ್ಯ ಸಮರದ ಗೇಯ ಗೀತೆಗಳು***, ೧೯೯೮, ಸೂರ್ಯನಾಥ ಕಾಮತ್ (ಸಂ) ಬೆಂಗಳೂರು.
೧೨. ಭಾರತಿ, ವೈಣಿಕ ಶಿಖಾಮಣಿ ಶೇಷಣ್ಣ, ಬೆಂಗಳೂರು, ಜೀವನ ಕಾರ್ಯಾಲಯ. p. 112-115. (ಪಂಡಿತ ಮದನಮೋಹನ ಮಾಲವೀಯ, ಪಂಡಿತ ನೆಹ್ರು, ಶ್ರೀಮತಿ ಸರೋಜಿನಿನಾಯ್ಡು, ರಾಜೇಂದ್ರಪ್ರಸಾದ ಉಪಸ್ಥಿತರಿದ್ದರು)
೧೩. Ibid. p. 112-15.
೧೪. M.A. Sreenivasan., 1991. *Of the Raj, Maharajas and Me. Delhi,* Ravidayal, p. 142. (see also) ಎ.ಎನ್. ಮೂರ್ತಿರಾವ್, 1993, **ಚಿತ್ರಗಳು, ಪತ್ರಗಳು.** ಮೈಸೂರು, ಕಾವ್ಯಾಲಯ. p. 124-170 (ಇಲ್ಲಿ ಎ.ಎನ್. ಮೂರ್ತಿರಾಯರು ಎಂ.ವಿ. ಗೋಪಾಲಸ್ವಾಮಿಯವರ ಬಗ್ಗೆ ಸ್ಥೂಲವಾಗಿ ಚರ್ಚಿಸಿರುತ್ತಾರೆ. p. 124-170.




**ಸ್ವತಹ ರಂಜಿಸುವ ಸವಿದನಿಯ ಸ್ವರವೆ ಸಂಗೀತ**
**ಪರಂಪರೆಯ ಹಾದಿಯಲಿ ಸಂಸ್ಕೃತಿಯು ಬಿತ್ತಿದ ಮಾಧುರ್ಯ**
**ಸ್ರೋತ ಸಮ್ಮೇದೆಯ ಒಲವಿಂಗೆ, ಜಲಗಂಧ (ಪನ್ನೀರು)**
**ರಾಜರಾ ಸಾಮಾಜಿಕರುತ್ಸಾಹ ಬೀಜಫಲಿತ**

ಎಸ್.ಎ. ಲಕ್ಷ್ಮಿದೇವಿ*

# ಸ್ವಾತಂತ್ರ್ಯಪೂರ್ವ ಮೈಸೂರು ರಾಜ್ಯದ ಮಹಿಳಾ ಖೈದಿಗಳ ಸ್ಥಿತಿಗತಿ ಸುಧಾರಣೆ ಕಾಯ್ದೆ

*೧೯ನೇ ಶತಮಾನದ ಕಾಯ್ದೆಯು ಮಹಿಳಾ ಖೈದಿಗಳ ಸ್ಥಿತಿಗತಿಗಳನ್ನು ಹೋಲಿಸುತ್ತ ಬ್ರಿಟಿಷ್ ಸೆರೆಮನೆ ಕಾಯ್ದೆಯು ಜಾರಿಗೆ ಬಂದನಂತರ ಹೇಗೆ ಮಹಿಳಾ ಖೈದಿಗಳ ಬದುಕು ಸುಧಾರಿಸಿತು ಎಂಬುದರ ಚಿತ್ರ ಇಲ್ಲಿದೆ. ಆ ಖೈದಿಗಳ ವಿವಿಧ ವರ್ಗ, ಬಗೆಗಳನ್ನೂ ವಿವರಿಸಲಾಗಿದೆ.*

ಮೈಸೂರು ರಾಜ್ಯದಲ್ಲಿ ಬ್ರಿಟಿಷ್ ಕಮಿಷನರ್‌ಗಳ ಆಗಮನದ ಮುನ್ನ ಯಾವುದೇ ರೀತಿಯ 'ಸೆರಮನೆ ವ್ಯವಸ್ಥೆ' ಅಸ್ತಿತ್ವದಲ್ಲಿರಲಿಲ್ಲ. ಖೈದಿಗಳೆಲ್ಲಾ ತಂಗಲು ಒಂದು ಸ್ಥಳವಿರುತ್ತಿತ್ತೇ ವಿನಃ ಖೈದಿಗಳ ವರ್ಗೀಕರಣವೂ ಅಲ್ಲಿರಲಿಲ್ಲ. ಅಪರಾಧದ ಆರೋಪ ಹೊಂದಿರುವವರು, ಸಂಶಯಾಸ್ಪದ ಅಪರಾಧಿಗಳು, ತಪ್ಪಿತಸ್ಥ ಸೆರೆಯಾಳುಗಳು ಎಲ್ಲರನ್ನೂ ಒಂದೇ ಸ್ಥಳದಲ್ಲಿರಿಸುತ್ತಿದ್ದರು. (Accused, Suspected, Convicted) ಅಪರಾಧಿಗಳ ವಿಚಾರಣೆ ಮುನ್ನವೇ ಅವರನ್ನು ಶ್ರಮ ಕೆಲಸಗಳಲ್ಲಿ ತೊಡಗಿಸಿಕೊಳ್ಳುವ ವ್ಯವಸ್ಥೆಯಿದ್ದು, ಅದನ್ನು ಕಮಿಷನರ್‌ಗಳು ವಿಶೇಷ ಕಾಯ್ದೆ ಮೂಲಕ ರದ್ದುಪಡಿಸಿದರು.

ಬ್ರಿಟಿಷರು ಭಾರತದಲ್ಲಿ ಮಹಿಳಾ ಖೈದಿಗಳಿಗಾಗಿಯೇ ಪ್ರತ್ಯೇಕ ಸೆರೆಮನೆಗಳನ್ನು ಮದ್ರಾಸ್ ಪ್ರಾಂತ್ಯದ ವೆಲ್ಲೂರು, ಬಾಂಬೆ ಪ್ರಾಂತ್ಯದ ಯರವಾಡ, ಪಂಜಾಬ್‌ನ ಲಾಹೋರ್‌ನಲ್ಲಿ ಸ್ಥಾಪಿಸಿದರು. (ಬ್ರಿಟಿಷ್ ಆಳ್ವಿಕೆಯ ರಾಜ್ಯಗಳಲ್ಲಿ ೩ ತೆರನಾದ ಜೈಲುಗಳು: ಕೇಂದ್ರೀಯ ಜೈಲುಗಳು, ಜಿಲ್ಲಾ ಜೈಲುಗಳು, ವಿಶೇಷ ಜೈಲುಗಳು (ಇಲ್ಲಿ ಕ್ಷಯ ರೋಗದಿಂದ ಬಳಲುತ್ತಿರುವ ಖೈದಿಗಳು, ಮಹಿಳಾ ಖೈದಿಗಳು ಅಲ್ಲಿರುತ್ತಿದ್ದರು.) ಅವರ ದಿನನಿತ್ಯದ ಸರಾಸರಿ ಸಂಖ್ಯೆ ೧೦೦ ರಿಂದ ೨೫೦ರ ಒಳಗಿತ್ತು. ಆದರೆ ಮಹಿಳಾ ಖೈದಿಗಳಿಗಾಗಿಯೇ ಪ್ರತ್ಯೇಕ ಸೆರೆಮನೆ ವ್ಯವಸ್ಥೆ ಮೈಸೂರು ರಾಜ್ಯದಲ್ಲಿರಲಿಲ್ಲ. ಮೈಸೂರು ಬ್ರಿಟಿಷ್ ಆಳ್ವಿಕೆಗೆ ಒಳಪಟ್ಟಾಗ ಪ್ರತ್ಯೇಕ ಸೆರೆಮನೆ ವ್ಯವಸ್ಥೆ ಅಲ್ಲದಿದ್ದರೂ (ಸಂಖ್ಯೆ ಬಹಳ ಕಡಿಮೆ ಇತ್ತು) ಕಡಿಮೆ ಎಂದರೆ ೧೮೬೭ರಲ್ಲಿ-೬೨, ೧೮೬೯ರಲ್ಲಿ-೬೨, ೮೧೯ ಜನರಲ್ಲಿ (ಪುರುಷರು ೭೬೭); ೧೮೭೧-೧೯, ೧೮೭೨-೮೯, ೧೯೩೭-೨೯, ೧೯೩೮-೨೪, ೧೯೩೯-೨೯ ಇತ್ಯಾದಿ ಸಂಖ್ಯೆ ಇತ್ತು. ಕೇಂದ್ರ ಜಿಲ್ಲಾ ಜೈಲುಗಳಲ್ಲೇ ಅವರಿಗಾಗಿಯೇ ಪ್ರತ್ಯೇಕ ಬೇರ್ಪಡಿಸುವ ವಾರ್ಡ್ಸ್‌ಗಳನ್ನು ನಿರ್ಮಿಸಿದರು. (೧೯೪೦ರ ನಂತರ).

ಮಹಿಳಾ ಅಪರಾಧಿಗಳು ಯಾರು?-ಯಾವ ಯಾವ ಬಗೆಯ ಅಪರಾಧಿಗಳಾದರೆಂದರೆ-ವೇಶ್ಯಾವಾಟಿಕೆ, ಕೊಲೆ, ಆತ್ಮಹತ್ಯೆಗೆ ಯತ್ನ, ತಮ್ಮ ಮಕ್ಕಳನ್ನು ರಕ್ಷಿಸುವಲ್ಲಿ ಅಲಕ್ಷ್ಯತನ, ಬೇರೆಯವರನ್ನು ಅಪಕೀರ್ತಿಗೆ ಒಳಪಡಿಸುವುದು (Defamation), ಕಳ್ಳತನ, ಬಿದಿರನ್ನು ಕತ್ತರಿಸುವಿಕೆ, ನಂಬಿಕೆದ್ರೋಹ, ಸೈನಿಕರ ಕರ್ತವ್ಯಕ್ಕೆ ಚ್ಯುತಿ ತರುವುದು (Soliciting attention of soldiers) ಕುಡಿತ, ಮನೆ ಮುರಿಯುವುದು, ಮಗು ಜನನವನ್ನು ಮರೆ ಮಾಚುವುದು, (Concealing birth of a child) ಕದ್ದ ಮಾಲನ್ನು ವಶಪಡಿಸಿಕೊಳ್ಳುವುದು. ಕರಾರುಭಂಗ (breach of Contract) ಮುಂತಾದುವುಗಳಾಗಿದ್ದುವು.

* ಇತಿಹಾಸ ವಿಭಾಗ, ವಿ.ವಿ.ಎನ್. ಕಾಲೇಜು, ಬಸವನಗುಡಿ, ಬೆಂಗಳೂರು - ೫೬೦ ೦೦೪

ಮಹಿಳಾ ಖೈದಿಗಳಲ್ಲಿ ಹಿಂದೂ, ಯೂರೋಪಿಯನ್, ಮುಸ್ಲಿಂ ಜನಾಂಗಕ್ಕೆ ಸೇರಿದವರಿದ್ದರು. ಅಪರಾಧಿಗಳು ಎಲ್ಲಾ ಧರ್ಮ, (ಜೈನಧರ್ಮವೂ ಸೇರಿದಂತೆ) ಜಾತಿ, ಪಂಗಡ, ಜನಾಂಗದಿಂದ ಬಂದಿದ್ದು ಲಾಡರು (ಭವಾನಿ ಆರಾಧಕರು), ಬಣಜಿಗ, ಒಕ್ಕಲಿಗ, ದೇವಾಂಗ, ಕೋಮಟಿಗ, ನಗರತ, ತಿಗಳ, ಪಾಂಚಾಲ- goldsmith ಅಕ್ಕಸಾಲಿ, ಚಾತಾಳಿ- ಕೋರಮಂಡಲ ಕೋಸ್ಟ್ wandering mendicants by profession, ದರ್ಜಿ, ಕೊರಚ (ತಮಿಳು baskect making) ಹೆಚ್ಚಾಗಿ ಲಂಬಾಣಿ, ಕೂರಮರ್, ವಡ್ಡಾರ್ ಸಮುದಾಯದವರು ವೃತ್ತಿ ಕಳ್ಳರಾಗಿದ್ದರು. (೧೮೬೭ ರಲ್ಲಿ ಒಬ್ಬ ಜೈನ ಮಹಿಳೆ ಗೌರವ ಕುಟುಂಬಕ್ಕೆ ಸೇರಿದ್ದು, ಮಕ್ಕಳನ್ನು ಕಳೆದುಕೊಂಡ ದುಃಖದಿಂದಾಗಿ ಆತ್ಮಹತ್ಯೆಗೆ ಯತ್ನ) ಅಪರಾಧಿಗಳಲ್ಲಿ ಬ್ರಾಹ್ಮಣ, ಲಿಂಗಾಯಿತರು ಕಡಿಮೆ. (೧೮೬೯-೭೦ರಲ್ಲಿ ಒಬ್ಬಾಕೆಗೆ ಮರಣದಂಡನೆ) (ಅಪರಾಧಿಗಳ ವಯಸ್ಸು ೨೦-೪೦)

ವಿವಿಧ ಬಗೆಯ ಅಪರಾಧಿಗಳನ್ನು ಮಾಡಿದ ಎಲ್ಲರನ್ನು ಪ್ರತ್ಯೇಕಿಸಿರಲಿಲ್ಲ. ಆಕಸ್ಮಿಕ ಅಪರಾಧಿ ಮತ್ತು ಅಪರಾಧಿ ಚಾಳಿಗೆ ಸೇರಿದ ಸ್ತ್ರೀಯರು ಒಂದೇ ಕಡೆ ಇರಿಸಿದ್ದರು. ವಿಚಾರಣಾಧೀನ ಖೈದಿ ತಪ್ಪಿತಸ್ಥ ಖೈದಿಗಳು ಒಟ್ಟಿಗೆ ಜೊತೆಗೆ ಬಾಲಾಪರಾಧಿ Juveniles adolescents ಯುವ ಸ್ತ್ರೀ ಅಪರಾಧಿಗಳು ಒಟ್ಟಿಗೆ ಇದ್ದರು. ಆಸ್ತಿಗಾಗಿ ಅಪರಾಧ ಮಾಡುವ ಮಹಿಳೆಯರು ಸಾಮಾನ್ಯವಾಗಿ Criminal tribes ನ ಸದಸ್ಯರು ಇವರನ್ನು hardened Criminal ಎನ್ನುವರು. (criminal tribes act vii 1916- ಬುಡಕಟ್ಟು, ಸಾಮಾಜಿಕ-ದಂಗೆಯಾದಾಗ ಸಮಾಜದಿಂದ ಹೊರ ದೂಡಲ್ಪಟ್ಟವರು).

ಸೆರೆಮನೆಗಳಲ್ಲಿಯ ಖೈದಿಗಳು ಹೆಚ್ಚಾಗಿ ನೂಲುವುದು ಮತ್ತು ಜೈಲು ಕೆಲಸಗಳನ್ನು ಮಾಡಬೇಕಿತ್ತು, ಜೈಲು ಕೆಲಸಗಳೆಂದರೆ ಅಡುಗೆ, ಕಸ ಗುಡಿಸುವುದು, ಹಿಟ್ಟು ಗಿರಣಿ ಮಾಡುವುದು, ನೀರು ಸೇದುವುದು, ಬಟ್ಟೆ ಒಗೆಯುವುದು, ರಾಗಿ ಶುಚಿಗೊಳಿಸುವುದು (ಹೆಚ್ಚು ಮುತುವರ್ಜಿ ಅಗತ್ಯ) ಧಾನ್ಯ ಶುಚಿಗೊಳಿಸುವಿಕೆ, ಸಾಂಬಾರು ಪುಡಿ ಮಾಡುವುದು, ಬಟ್ಟೆ ಹೊಲಿಯುವುದು (repair) ಧಾನ್ಯಗಳನ್ನು ಪುಡಿ ಮಾಡುವುದು, ಒಂದು ಶಿಕ್ಷೆ-ಶಿಕ್ಷೆಗೆ ಅರ್ಹರಾದವರಿಗೆ ಆ ಕೆಲಸ ನೀಡುವುದು. ಅವರ ಸ್ಥಿತಿ ಎಷ್ಟೊಂದು ಶೋಚನೀಯವೆಂದರೆ ವರ್ಷಕ್ಕೊಮ್ಮೆ ೧ ಸೀರೆ, ಆಹಾರಕ್ಕಾಗಿ ಮಣ್ಣಿನ ೧ ಬೌಲ್, ಅದೇನಾದರೂ ಒಡೆದಲ್ಲಿ ಅದು ಕೂಡ ಶಿಕ್ಷಾರ್ಹವಾಗುತ್ತಿತ್ತು. (ರಾಗಿ ಆಹಾರವೇ ನೆಲದ ಮೇಲಿಟ್ಟು, ಬೌಲ್‌ನಲ್ಲಿ soup ಹಾಕಿಸಿಕೊಳ್ಳುತ್ತಿದ್ದು ಅನಾಗರಿಕ ಅನಾರೋಗ್ಯಕರವಾಗಿತ್ತು). ವಾರಕ್ಕೆ ೨ ಸ್ಪೂನ್ ಎಣ್ಣೆ ಕೊಡುತ್ತಿದ್ದರು. ಪ್ರತ್ಯೇಕ ಶೌಚಾಲಯವೂ ಇರಲಿಲ್ಲ. ಚಳಿಗಾಲದಲ್ಲಿ ಕಂಬಳಿ ಕೊಡುವ ವ್ಯವಸ್ಥೆ ಇರಲಿಲ್ಲ, ಕಮಿಷನರ್‌ಗಳ ಕಾಲದಲ್ಲಿ ನೈರುತ್ಯ ಮಾನ್‌ಸೂನ್‌ನಲ್ಲಿ ಚಳಿಯಿಂದಾಗಿ ಅನಾರೋಗ್ಯವಾಗಿ ಕೆಲಸ ಕಾರ್ಯಗಳಿಗೆ ತೊಂದರೆ ಆಗುತ್ತಿದ್ದರಿಂದ ಅದರಿಂದ ಪಾರು ಮಾಡಲು ಖೈದಿಗಳಿಗೆ ಕಂಬಳಿ ಕೊಡುವ ವ್ಯವಸ್ಥೆ ಜಾರಿಗೆ ಬಂದಿತು. ಈ ಎಲ್ಲಾ ಸಂಕಷ್ಟಗಳಿಂದಾಗಿ ಆಕೆ ಮತ್ತಷ್ಟು ಮಾನಸಿಕವಾಗಿ, ನೈತಿಕವಾಗಿ ಕುಗ್ಗಿ ಹೋಗುತ್ತಿದ್ದಳು.

೧೮೭೦ರ ಬ್ರಿಟಿಷ್ ಸೆರೆಮನೆ ಕಾಯ್ದೆಯ ೨೬ ಅಧಿನಿಯಮದಂತೆ ಈ ಕಾಯ್ದೆಯಲ್ಲಿ ೧೮೭೯ ಅಕ್ಟೋಬರ್ ೧ ರಿಂದ ಮೈಸೂರಿಗೂ ವಿಸ್ತರಿಸಲಾಯಿತು. ಅದರಂತೆ ಈ ಕಾಯ್ದೆಯ ೩೦ ಅಧಿನಿಯಮದಂತೆ, ಸ್ತ್ರೀ ಖೈದಿಗಳು, ಪುರುಷ ಖೈದಿಗಳನ್ನು ನೋಡದಂತೆ, ಮಾತನಾಡದಂತೆ, ಇನ್ನಿತರ ಸಂಬಂಧ ಏರ್ಪಡದಂತೆ ಅವರನ್ನು ಪ್ರತ್ಯೇಕಿಸಲಾಯಿತು. ಅಪರಾಧ ಸಾಬೀತಾದ ಸ್ತ್ರೀ ಖೈದಿಗಳಿಂದ, ಅಪರಾಧ ಸಾಬೀತಾಗದ ಖೈದಿಗಳನ್ನು ಬೇರ್ಪಡಿಸಲಾಯಿತು. ಸೆಕ್ಷನ್ ೪೯ರ ಪ್ರಕಾರ ಯಾವ ಮಹಿಳಾ ಖೈದಿಗೂ ಶಾರೀರಕ ಶಿಕ್ಷೆ ಸಲ್ಲದೆಂದು (Corporal Punishment)

೧) ಯಾವ ಪುರುಷನೂ ಮಹಿಳಾ ವಾರ್ಡ್‌ಗೆ ಪ್ರವೇಶಿಸುವಂತಿಲ್ಲ.

೨) ಮಹಿಳಾ ಅವರಣಕ್ಕೆ ಬೀಗ ಹಾಕುವುದು.

೩) ಯಾವ ಮಹಿಳಾ ಖೈದಿಯ ಕೂದಲನ್ನು ಆಕೆಯ ಅನುಮತಿ ಇಲ್ಲದೆ ಕತ್ತರಿಸುವಂತಿಲ್ಲ, ಗಮನಾರ್ಹವಾದುದು.

೪) ಯಾವ ಮಹಿಳಾ ಖೈದಿಗೂ ಕೈಕೋಳ ಹಾಕುವಂತಿಲ್ಲ. (hand cuffed)

೫) ಮಹಿಳಾ ಖೈದಿಗಳನ್ನು ಬಿಡುಗಡೆ ಮಾಡುವ ಮುನ್ನ ಜಿಲ್ಲಾ ಮಾಜಿಸ್ಟ್ರೇಟ್ ಮೂಲಕ ಆಕೆಯ ಸಂಬಂಧಿಕರಿಗೆ ಕಾಲೀನ ತಿಳುವಳಿಕೆ ಕಳಿಸುವುದು.

೬) ತಾಯಿ ಹಾಲು ಕುಡಿಯುವ ೨ ವರ್ಷದ ಒಳಗಿನ ಮಗು ತಾಯಿ ಜೊತೆಯಲ್ಲಿರಬಹುದು. ಸೆರೆಮನೆಯಲ್ಲಿ ಜನ್ಮ ತಾಳಿದ ಮಗು ೨ ವರ್ಷದವರೆಗೆ ತಾಯಿಯ ಬಳಿಯಲ್ಲಿರಬಹುದು. ೨ ವರ್ಷ ನಂತರ ಸಂಬಂಧಿಕರಿಗೆ ಕೊಡಬೇಕು. ಜಿಲ್ಲಾ ಮಾಜಿಸ್ಟ್ರೇಟ್ ಗಮನ ತೆಗೆದುಕೊಳ್ಳಬೇಕು. ಸಂದರ್ಭ ಬಂದಲ್ಲಿ ಮಗುವಿನ ಪಾಲನೆಗಾಗಿ ಜಿಲ್ಲಾ ಮ್ಯಾಜಿಸ್ಟ್ರೇಟ್ ಹಣ ಕೊಡಬಹುದು.

೭) ಸೆರೆಮನೆಯಲ್ಲಿ ಇರುವ ಖೈದಿಗಳ ಮಕ್ಕಳಿಗೆ ಸೂಕ್ತ ಪಥ್ಯ ಮತ್ತು ಉಡುಪು ವ್ಯವಸ್ಥೆಯಲ್ಲಿ ಮೆಡಿಕಲ್ ಆಫೀಸರ್ ಮೇರೆಗೆ ನೀಡಬೇಕು.

೮) ಮಕ್ಕಳನ್ನು ತಾಯಿಯಿಂದ ಪ್ರತ್ಯೇಕಿಸಿದ ನಂತರವೂ ದಿನಕ್ಕೆ ೧ ಅಥವಾ ೨ ಬಾರಿ ಆಕೆಯ ಭೇಟಿ ಮಾಡುವ ಅವಕಾಶವನ್ನು ಅವರಿಗೆ ಕಲ್ಪಿಸಬೇಕು. ಮುಂತಾದ ಅಂಶಗಳಿಂದ ಆಕೆಯ ಪರಿಸ್ಥಿತಿ ಸ್ವಲ್ಪಮಟ್ಟಿಗೆ ಸುಧಾರಿಸಿತು.

೧೯೧೯ರ ಏಪ್ರಿಲ್‌ನಲ್ಲಿ ಜೈಲು ವ್ಯವಸ್ಥೆಯ ಕಾರ್ಯಗಳ ಬಗ್ಗೆ ವ್ಯಾಪಕವಾದ ಅಧ್ಯಯನದ ವ್ಯವಸ್ಥೆ ಆಯಿತು. ಅದರಂತೆ Imperial legislative Councilನ ನಿರ್ಣಯದಂತೆ ಜೈಲು ಆಡಳಿತದ ವಿಷಯ ಮತ್ತು ಅದರ ಸುಧಾರಣೆಗೆ ಸಲಹೆಗಳನ್ನು ನೀಡಲು ಸರ್ ಅಲೆಗ್ಸಾಂಡರ್ ಕಾರ್‌ಡ್ಯು ನೇತೃತ್ವದಲ್ಲಿ ಒಂದು ಸಮಿತಿಯನ್ನು ನೇಮಕ ಮಾಡಲಾಯಿತು. ಇದು ಇಡೀ ಜೈಲು

ಆಡಳಿತವನ್ನು ಸುಧಾರಿಸುವಲ್ಲಿ ಒಂದು ಮೈಲುಗಲ್ಲಾಯಿತು. ಅದರಲ್ಲೂ ಮಹಿಳಾ ಖೈದಿಗಳ ಸ್ಥಿತಿಗತಿ ಸುಧಾರಿಸುವಲ್ಲಿ ಒಂದು ಪ್ರಮುಖ ಹೆಜ್ಜೆಯಾಯಿತು. ಈ ಸಮಿತಿಯ ಶಿಫಾರಿಸಿನಂತೆ ೧೯೪೦-೪೧ರಲ್ಲಿ ಮೈಸೂರಿನಲ್ಲಿ ಒಂದು ಸಮಿತಿ ನೇಮಕ ವಾಯಿತು.

ಇಲ್ಲಿಯೂ ಕೂಡ ೧೯೪೦-೪೧ ಸಮಿತಿಯ ಶಿಫಾರಸ್ಸಿನಂತೆ ಪ್ರತ್ಯೇಕ ಮಹಿಳಾ ಸೆರೆಮನೆ ಮಾಡಲಿಲ್ಲ. ಕಾರಣ ಸಂಖ್ಯೆ ಕಡಿಮೆ. ಆದರೆ ಸೆಂಟ್ರಲ್ ಕ್ಯಾಷುಯಲ್ ಪ್ರಿಸನ್‌ನಲ್ಲಿ ಬ್ಯಾಂಕ್ ಹೊರಗಡೆ ಸ್ವತಂತ್ರ ಬ್ಲಾಕ್‌ಗಳನ್ನು ಮಹಿಳೆಯರಿಗಾಗಿ ನಿರ್ಮಿಸಲಾಯಿತು. ಯುವ ಮಹಿಳಾ ಖೈದಿಗಳನ್ನು, ಪ್ರೌಢ ಖೈದಿಗಳಿಂದ ಬೇರ್ಪಡಿಸಲಾಯಿತು. (ಅದರಲ್ಲೂ ಅಪರಾಧಿ ಬುಡಕಟ್ಟಿಗೆ ಸೇರಿದ, ಆಸ್ತಿ ವಿಚಾರದ ಸ್ತ್ರೀ ಅಪರಾಧಿಗಳನ್ನು ಉಳಿದ ಅಪರಾಧಿಗಳಿಂದ ಪ್ರತ್ಯೇಕಿಸಿ, ಪ್ರತ್ಯೇಕ yardಗಳನ್ನು ನಿರ್ಮಿಸಲಾಯಿತು)

ಅಪರಾಧಿಗಳು ತಮ್ಮ ಅಪರಾಧ ತಿದ್ದಿಕೊಳ್ಳಲು ಅವರನ್ನು ಸುಧಾರಣೆ ಮಾಡಲು ಬೋರ್‌ಸ್ಟೆಲ್ ಶಾಲೆ ಮಾದರಿಯಲ್ಲಿ* (1908 Borstal Act was passed by the Parliament deformatary Syedyn) kent ನಲ್ಲಿ ಅವರನ್ನು ನೋಡಿಕೊಳ್ಳಲಾಯಿತು. (ಜೈಲಿನಲ್ಲಿ)ಸೆರೆಯಿಂದಾಗಿ ಸ್ತ್ರೀ ಸ್ವಗೌರವ ಕಳೆದುಕೊಳ್ಳುವುದರಿಂದ) ಅವರನ್ನು ಸುಧಾರಿಸಲು ಬೇಕಾದ ಎಲ್ಲಾ ಏರ್ಪಾಡುಗಳನ್ನು ಕೈಗೊಳ್ಳಲಾಯಿತು. ಮನೆಗೆಲಸಗಳಲ್ಲಿ ತರಬೇತಿ, ಅನುಕೂಲಕರವಾದ ಆಸಕ್ತಿಯುತವಾದ ಕೈಗಾರಿಕೆಗಳನ್ನು ಜಾರಿಗೊಳಿಸುವುದು, ಪ್ರಾಥಮಿಕ ಶಿಕ್ಷಣ ನೀಡುವುದು, ವೈದ್ಯಕೀಯ ನೆರವು ಪಾಲನೆಗಾಗಿ ವ್ಯವಸ್ಥೆ, ಹೆರಿಗೆ ವ್ಯವಸ್ಥೆಗಾಗಿ ಪ್ರತ್ಯೇಕ ವಾರ್ಡ್ ವ್ಯವಸ್ಥೆಗಳಿಗಾಗಿ ಜೊತೆಗೆ ಮನೋವೈದ್ಯಕೀಯ ಚಿಕಿತ್ಸೆಯ ಸೌಲಭ್ಯ ನೀಡಲಾಯಿತು.

ಯುವ ಸ್ತ್ರೀ ಅಪರಾಧಿಗಳನ್ನು, ವೇಶ್ಯೆ, ದಳ್ಳಾಳಿಗಳಿಂದಲೂ ಪ್ರತ್ಯೇಕಿಸಲಾಯಿತು (Prostitutes & Procuresses). ಬಾಲಾಪರಾಧಿ ಯುವ ಸ್ತ್ರೀ ಅಪರಾಧಿಗಳ ಮೇಲೆ ಇದರಿಂದಾಗುವ ಕೆಟ್ಟ ಪ್ರಭಾವವನ್ನು ಕಡಿಮೆ ಮಾಡಲೋಸುಗ. ಪ್ರೌಢ ಸ್ತ್ರೀ ಖೈದಿಗಳಿಂದ ಅಂದರೆ hardened criminals ಗಳಿಂದ ಪ್ರತ್ಯೇಕಿಸಲಾಯಿತು.

ವೇಶ್ಯಾವಾಟಿಕೆ, ಕಳ್ಳತನ ಬಿಟ್ಟಲ್ಲಿ ಶಿಶುಹತ್ಯೆ ಮಾಡಿರುವವರು ಅಪರಾಧಿಗಳು. ಶಿಶುಹತ್ಯೆ ಮಾಡಿದ ಅಪರಾಧಿಗಳಲ್ಲಿ ಒಂದು ರೀತಿಯ ಆರ್ಥಿಕ ಚಿಂತೆ, ನಾಚಿಕೆ, ಒಂಟಿತನ, ಕುಟುಂಬದಿಂದ ಹೊರದೂಡುವುದು ಮುಂತಾದ ಭಯ ಬಿಟ್ಟು ಅವರನ್ನು ಇತರ ಅಪರಾಧಿಗಳಿಂದ ಬೇರ್ಪಡಿಸುವುದು ತುಂಬಾ ಅಗತ್ಯವಾಯಿತು.

ಎಲ್ಲೆಲ್ಲಿ ಮಹಿಳಾ ಖೈದಿಗಳನ್ನು ಬಂಧಿಸಿಡುವರೋ ಅಲ್ಲೆಲ್ಲಾ ಮಹಿಳಾ ಬ್ಲಾಕ್‌ಗಳನ್ನು ನಿರ್ಮಿಸಲಾಯಿತು. ಈ ಮಹಿಳಾ ಬ್ಲಾಕ್ ನೋಡಿಕೊಳ್ಳುವ ಸಿಬ್ಬಂದಿ ವರ್ಗವೂ ಮಹಿಳೆಯರಿಂದ ಕೂಡಿರಬೇಕು. ಮಹಿಳೆಯರಿಗೆ ನೇಯುವುದು, ನೂಲುವುದು, ಹೆಣೆಯುವುದು, needle work, ಬುಟ್ಟಿ ಮತ್ತು ಚಾಪೆ ಹೆಣೆಯುವುದು, ಕಸೂತಿ ಕೆಲಸಗಳಲ್ಲಿ ತರಬೇತಿ ನೀಡಲಾಯಿತು.

ಮಹಿಳಾ ಖೈದಿಗಳಲ್ಲಿ ಅಗತ್ಯವಿರುವ ಉಡುಪು, ೪ ಸ್ಪೂನ್ ಎಣ್ಣೆ, ಕನ್ನಡಿ, ಬಾಚಣಿಗೆ ಮುಂತಾದುವುಗಳನ್ನು ಚೊಕ್ಕಟವಾಗಿರಲು ಸೌಲಭ್ಯ ಒದಗಿಸಲಾಯಿತು. ಇದರಿಂದ Self-respect ಹೆಚ್ಚಾಗುವುದು. Leeding of Pride in Personal appearance. ಆರೋಗ್ಯ ಮತ್ತು privacy ದೃಷ್ಟಿಯಿಂದ ಶೌಚಾಲಯ ನಿರ್ಮಿಸಲಾಯಿತು. ವಾರಕ್ಕೊಮ್ಮೆ ಮಹಿಳಾ ವೈದ್ಯೆ ಮಹಿಳಾ ಬ್ಲಾಕ್‌ಗಳಿಗೆ ಭೇಟಿ ಕೊಡಬೇಕು. ಈ ಮುನ್ನ ಜೈಲು ಕಾಯ್ದೆಯ ೭೩೨ ಅಧಿನಿಯಮದಂತೆ ೨ ವರ್ಷದ ಒಳಗಿನ ಮಗುವನ್ನು ತಾಯಿಯ ಜೊತೆ ಕಳುಹಿಸುತ್ತಿದ್ದು, Madras prison & Reframatory Manual 836 ನಿಯಮದಂತೆ ಮಗು ೬ ವರ್ಷದವರೆಗೆ ತಾಯಿಯ ಜೊತೆ ಇರಬೇಕು ಮತ್ತು ಮಗುವಿಗೆ ಬೇಕಾದ ಎಲ್ಲಾ ಅಗತ್ಯಗಳನ್ನು ಪೂರೈಸಬೇಕು. ಹೀಗೆ ಸುಧಾರಣೆ ಕ್ರಮಗಳನ್ನು ಕೈಗೊಳ್ಳಲಾಯಿತು. (The Criminal is mostly made & rarely born)

ಹೀಗೆ ಬ್ರಿಟಿಷ್ ಸರ್ಕಾರ ಮತ್ತು ಮೈಸೂರು ಸರ್ಕಾರ ಮಹಿಳಾ ಖೈದಿಯ ೪ ಗೋಡೆಗಳ ಮಧ್ಯೆಯೇ ಆಕೆಯ ಮಾನಸಿಕ ಸ್ಥಿರತೆ ಕಾಪಾಡಲು, ಆಕೆಯ ಸರ್ವಾಂಗೀಣ ಅಭಿವೃದ್ಧಿಗೆ ಶ್ರಮಿಸಿದರು. ಆಕೆಯು ಸಮಾಜಕ್ಕೆ ಮುಂದೆ ಕಂಟಕಪ್ರಾಯ ವಾಗದಂತೆ ಯತ್ನಿಸಿದರು.



***

## BIBLIOGRAPHY


1. *Report on the Jail administration in Mysore* - 1867.
2. *Report on the Jail administration* in Mysore - 1870, 72.
3. *Administrative report of Mysore* - 1891-96.
4. *Report of the Committee on prison reforms in Mysore* - 1941.
5. Appointment of a committee to investigate into the conditions of Jail life in the state - 1933.
6. *Mysore Jail Manaal* - vol I.
7. *Prison offences & punishment before* -1940. Committee report.

ವೇಮಗಲ್ ಸೋಮಶೇಖರ್*

# ಮೈಸೂರು ರಾಜ್ಯದ ೧೮೮೮ರ ಮೊದಲ ವಸ್ತುಪ್ರದರ್ಶನದಲ್ಲಿ ಶಿವಮೊಗ್ಗ ಜಿಲ್ಲೆಯ ಪಾತ್ರ

*ವಸ್ತು ಪ್ರದರ್ಶನ ನಮ್ಮ ಜೀವನದಲ್ಲಿ ಸಾಧಿಸಿದ ಸಿದ್ಧಮಾಡಿದ ವಸ್ತುಗಳ ಮೌಲ್ಯಮಾಪನವಾಗಲು ಒದಗುವ ಒಂದು ಸದವಕಾಶ. ಆದನ್ನು ಕೃಪಿ ಹಾಗು ಔದ್ಯೋಗಿಕ ಸಂಬಂಧದ ವಸ್ತುಗಳಾಗಿ ನಮ್ಮ ಗ್ರಾಮೀಣ ಜೀವನದ ಅಭಿವೃದ್ಧಿಯ ಕುರುಹಾಗಿ ಆ ವಸ್ತು ಪ್ರದರ್ಶನದಲ್ಲಿ ಕಾಣಿಸಿಸಬಹುದು. ವಿಶೇಷತಃ ಶಿವಮೊಗ್ಗಾಜಿಲ್ಲೆಯ ಎಸ್ಟೇಟು ಮಾಲೀಕರು ಅಹವಾಲನ್ನು ಆಡಳಿತ ಮುಖ್ಯರಿಗೆ ಇಟ್ಟಾಗ. ೧೮೮೮ರಲ್ಲಿ ಮೈಸೂರಿನಲ್ಲಿ ಪ್ರಪ್ರಥಮ ವಸ್ತುಪ್ರದರ್ಶನ ನಡೆದದ್ದು ಇತಿಹಾಸ: ಆ ಪರಂಪರೆ ವಿವಿಧ ಆಯಾಮ ಪಡೆದು ಮೈಸೂರು ವಸ್ತು ಪ್ರದರ್ಶನ ಅಂತರರಾಷ್ಟ್ರೀಯ ಖ್ಯಾತಿಯನ್ನು ದಸರೆಯೊಡಗೂಡಿ ಪಡೆಯುತ್ತಾ ಬಂದಿದೆ.*

ಇಡೀ ಜಗತ್ತಿನಲ್ಲಿ ಮೊದಲಿಗೆ ೧೮೫೧ರಲ್ಲಿ ಲಂಡನ್ ನಗರದಲ್ಲಿ ವಿಶ್ವಮಟ್ಟದಲ್ಲಿ ಭವ್ಯ ವಸ್ತು ಪ್ರದರ್ಶನವು (ಲಂಡನ್ ಗ್ರೇಟ್ ಎಕ್ಸಬಿಷನ್) ನಡೆದು ಜಗತ್ಪ್ರಸಿದ್ಧವಾಯಿತು. ಅದೇ ರೀತಿ ಭಾರತದಲ್ಲೂ ಪ್ರಪ್ರಥಮ ಬಾರಿಗೆ ವಸ್ತು ಪ್ರದರ್ಶನವು ೧೮೮೩-೮೪ರಲ್ಲಿ ಕೊಲ್ಕತ್ತಾದಲ್ಲಿ 'ಕಲ್ಕತ್ತಾ ಇಂಟರ್ ನ್ಯಾಷನಲ್ ಎಕ್ಸಬಿಷನ್' ನಡೆದರೆ ಮೈಸೂರು ನಗರದಲ್ಲಿ ಮೈಸೂರು ಸಂಸ್ಥಾನದಲ್ಲಿ ಪ್ರಥಮವಾಗಿ 'ಮೈಸೂರು ಕೃಷಿ ಮತ್ತು ಔದ್ಯೋಗಿಕ ವಸ್ತು ಪ್ರದರ್ಶನ ೧೮೮೮ರಲ್ಲಿ ನಡೆಯಿತು. 'ಸರ್ವ ವಸ್ತು ಪ್ರದರ್ಶನೋತ್ಸವ'ವೆಂದೂ ಹೆಸರು ಪಡೆದ ಈ ಪ್ರದರ್ಶನ ನಡೆಯಲು ಮುಖ್ಯ ಕಾರಣರಾದವರು ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ತಾಲ್ಲೂಕು ಸೂಳೆಕೆರೆ ಎಸ್ಟೇಟ್‌ನ ಮಾಲೀಕರಾಗಿದ್ದ ಕೆ. ತಿರುಮಲಾಚಾರ್ ಅವರು. ಇವರು ಆಗ್ಯೆ ಶಿವಮೊಗ್ಗ ಜಿಲ್ಲೆಯಲ್ಲಿನ ಗಣ್ಯ ವ್ಯಕ್ತಿಗಳಾಗಿದ್ದು ಮೈಸೂರು ಪ್ರಜಾಪ್ರತಿನಿಧಿ ಸಭಾ ಸದಸ್ಯರೂ ಆಗಿದ್ದರು.

ತಿರುಮಲಾಚಾರ್ ಅವರು ೫-೬-೧೮೮೬ರಂದು ಮೈಸೂರಿನಲ್ಲಿ ನಡೆದ ಪ್ರಜಾಪ್ರತಿನಿಧಿಗಳ ಸಭೆಯಲ್ಲಿ ಮೈಸೂರು ರಾಜ್ಯದ ರೈತರ ಹಾಗೂ ವ್ಯಾಪಾರಿಗಳ ಪರವಾಗಿ ವಸ್ತುಪ್ರದರ್ಶನವೊಂದನ್ನು ನಡೆಸಬೇಕೆಂದು ಆಗ ದಿವಾನರಾಗಿದ್ದ ಕೆ. ಶೇಷಾದ್ರಿ ಅಯ್ಯರ್ ಅವರಿಗೆ ಮನವಿ ಪತ್ರವನ್ನು ಸಲ್ಲಿಸಿದರು ಈ ಪತ್ರವೇ ಪ್ರದರ್ಶನ ನಡೆಯಲು ಮೂಲ ಕಾರಣವಾಯಿತು. ಆ ಪತ್ರ ಹೀಗಿದೆ :

SHIMOGA DISTRICT

Address Presented By K. Tirumalachar of Sulekere in the Channagiri Taluk.

To the Dewan of Mysore, Dated 5th June 1886.

Holding Agricultural Exhibitions in the Province.

The Mysore Province being Purely an agricultural State and three fourths of its revenue being purely from agricultural source, any moderate sum spent by the Govt, in the improvement of that branch is in no way a loss to the state. There are various ways of improving the agriculture of a country. I have already stated one viz 'Agricultural education'. In addition to I beg to state, holding of agricultural Exhibition is another means of encouraging agriculture. The various advantages which ryots can derive from these Exhibitions I need not point out, for it would be too long to dwell upon the subject. I propose that as there are Eight Districts in the Province for every two Districts an annual Exhibition might

* ೪ನೇ ಅಡ್ಡರಸ್ತೆ, ಲಕ್ಷ್ಮೀಪುರ, ಕೆಂಪೇಗೌಡನಗರ, ಬೆಂಗಳೂರು - ೫೬೦ ೦೧೯

be held, the cost of the Exhibition being borne out of the local fund amount collected with in Districts.

I beg to remain

Respected sir

your most obedient and humble servent

**K. Tirumalachar**

Representative member

Sulekere Estate.

**Reference :** Page No. 45, 46, 47. Assembly of representative ryots and Merchants from all Taluks of the Province of Mysore held at Mysore on 5th June 1886.

ಈ ಪತ್ರದ ಮೇರೆಗೆ ವಸ್ತು ಪ್ರದರ್ಶನ ನಡೆಸುವ ಬಗ್ಗೆ ೧೮೮೭ರಲ್ಲಿ ನಡೆದ ಪ್ರಜಾಪ್ರತಿನಿಧಿಗಳ ಸಭೆಯಲ್ಲಿ ಚರ್ಚೆ ನಡೆದ ನಂತರ ವಸ್ತು ಪ್ರದರ್ಶನ ನಡೆಸಲು ಚಾಮರಾಜೇಂದ್ರ ಒಡೆಯರ್ ಮತ್ತು ದಿವಾನರಾದ ಶೇಷಾದ್ರಿ ಅಯ್ಯರ್ ಅವರು ಒಪ್ಪಿಗೆ ನೀಡಿದರು.

ನಂತರ ೧೮೮೮ರ ಜೂನ್-ಜುಲೈನಲ್ಲಿ ಕಾರ್ಯರೂಪಕ್ಕೆ ಬಂದ ವಸ್ತುಪ್ರದರ್ಶನವು ೧೮೮೮ರ ಅಕ್ಟೋಬರ್ ೧೬ರಿಂದ ೨೨ರವರೆಗೆ ಒಂದು ವಾರ ನಡೆಯಿತು. ಈ ಪ್ರದರ್ಶನಕ್ಕೆ ಮೈಸೂರು ರಾಜ್ಯದ ಎಂಟು ಜಿಲ್ಲೆಗಳಿಂದಲೂ ಜನರು ಭಾಗವಹಿಸಿದ್ದರು. ಸದರೀ ಪ್ರದರ್ಶನದಲ್ಲಿ ಶಿವಮೊಗ್ಗ ಜಿಲ್ಲೆಯ ಪಾತ್ರವೇನು ಎಂಬುದನ್ನು ತಿಳಿಸುವುದೇ ಈ ಪ್ರಬಂಧದ ವಿಷಯ:

ಒಂದೊಂದು ಜಿಲ್ಲೆಯಿಂದಲೂ ಸುಮಾರು ಇಪ್ಪತ್ತು ಜನರ ಸಮಿತಿಯನ್ನು ಆಯ್ಕೆ ಮಾಡಲಾಗಿತ್ತು. ಅದೇ ರೀತಿ ಶಿವಮೊಗ್ಗ ಜಿಲ್ಲೆಯಿಂದ ಇಪ್ಪತ್ತು ಜನರನ್ನು ಆಯ್ಕೆ ಮಾಡಿದ್ದು ಅವರ ವಿವರ ಹೀಗಿದೆ.

**ಅಧಿಕಾರಸ್ಥ ಸದಸ್ಯರು**

೧) ವಿ.ಪಿ. ಮಾಧವರಾವ್, ಪ್ರದರ್ಶನದ ಅಧ್ಯಕ್ಷರು. ಶಿವಮೊಗ್ಗ ಜಿಲ್ಲೆಯ ಜಿಲ್ಲಾಧಿಕಾರಿಗಳಾಗಿದ್ದವರು. ನಂತರ ೧೯೦೬ರಿಂದ ೧೯೦೯ರವರೆಗೆ ದಿವಾನರಾಗಿದ್ದರು.

೨) ಬಿ. ತಿರುಮಲಾಚಾರ್, ಅಸಿಸ್ಟೆಂಟ್ ಕಮಿಷನರ್, ಉಪಾಧ್ಯಕ್ಷರು.

೩) ಕೆ.ಪಿ. ಪುಟ್ಟಣ್ಣಶೆಟ್ಟಿ, ಅಸಿಸ್ಟೆಂಟ್ ಕಮಿಷನರ್, ಉಪಾಧ್ಯಕ್ಷರು.

೪) ಕೆ. ನಾಗೇಶರಾವ್, ಅಸಿಸ್ಟೆಂಟ್ ಕಮಿಷನರ್, ಉಪಾಧ್ಯಕ್ಷರು.

೫) ಪಿ. ಸುಬ್ರಹ್ಮಣ್ಯಂ, ಅಮಲ್ದಾರ್.

೬) ಕೆ. ಶ್ಯಾಮಯ್ಯಂಗಾರ್, ಗೌರವ ಕಾರ್ಯದರ್ಶಿಗಳು.

೭) ಕೆ.ಪಿ. ಲವ್‌ರೀ, ಅಸಿಸ್ಟೆಂಟ್ ಕನ್ಸರ್‌ವೇಟರ್

೮) ಸಿ. ಗುಂಡಪ್ಪ, ಪ್ರದರ್ಶನದ ಕೋಶಾಧಿಕಾರಿಗಳು (ಇವರು ಶಿವಮೊಗ್ಗ ಜಿಲ್ಲೆ ಖಜಾನೆ ಅಧಿಕಾರಿಗಳಾಗಿದ್ದವರು)

**ಅಧಿಕಾರೇತರ ಸದಸ್ಯರು**

೧) ವಿ. ಸೀತಾರಾಮಯ್ಯ, ಶಿವಮೊಗ್ಗ ಟೌನ್

೨) ವೇದಾಂತ ಅಯ್ಯಂಗಾರ್, ಶಿವಮೊಗ್ಗ ಟೌನ್

೩) ಟಿ. ವೆಂಕಟಪ್ಪ

೪) ಜವರಪ್ಪ

೫) ಕರಿಬಸಪ್ಪ, ತೀರ್ಥಹಳ್ಳಿ

೬) ಮ (ನ)ಂಜುಂಡಪ್ಪ, ನಗರ

೭) ಹೊಸಬಾಳೆ ಸುಬ್ಬರಾವ್, ಸೊರಬ

೮) ಬೈಯಣ್ಣ ಗೋವಿಂದಪ್ಪ, ಸಾಗರ

೯) ಕೆ. ತಿರುಮಲಾಚಾರ್, ಸೂಳೆಕೆರೆ

೧೦) ಮುನಿಬಸಪ್ಪ, ನ್ಯಾಮತಿ

೧೧) ಕಲ್‌ಮನೆ ಸಂಗಪ್ಪ, ಶಿಕಾರಿಪುರ

೧೨) ಎ.ಎಸ್. ನಾಗಾಪ್ಪರ್

ಇವರೆಲ್ಲಾ ಶಿವಮೊಗ್ಗ ಜಿಲ್ಲೆಯಲ್ಲಿ ಕೃಷಿ ಹಾಗೂ ಇತರೆ ಕ್ಷೇತ್ರಗಳಲ್ಲಿ ಬಹಳಷ್ಟು ಅನುಭವಿಗಳೂ ಹಾಗೂ ಗಣ್ಯ ವ್ಯಕ್ತಿಗಳಾಗಿ ಪ್ರಸಿದ್ಧಿ ಪಡೆದಿದ್ದವರು.

ಸದರೀ ವಸ್ತು ಪ್ರದರ್ಶನದಲ್ಲಿ ಶಿವಮೊಗ್ಗ ಜಿಲ್ಲೆಯಿಂದ ಭಾಗವಹಿಸಿ ಬಹುಮಾನ ಪಡೆದವರ ವಿವರ ಹೀಗಿದೆ.

| ಪ್ರದರ್ಶಿಸಿದ್ದು | ಪ್ರದರ್ಶಕರ ಹೆಸರು | ಪಡೆದ ಬಹುಮಾನ |
|---|---|---|
| *ವಿವಿಧ ಬಗೆಯ ಭತ್ತ, ರಾಗಿ, ಜೋಳ* | *ಕೆ. ಶಾಮಯ್ಯಂಗಾರ್ (Forest Apprentice Shimoga)* | *೮ರೂ. ೮ರೂ. ೭ರೂ. ಪ್ರಥಮ ಬಹುಮಾನಗಳು* |
| *ತೋಟದ ರಾಗಿ* | *ಕಾಸಿಂಸಾಬ್, ಹೊನ್ನಾಳಿ* | *೫ ರೂ. ದ್ವಿತೀಯ ಬಹುಮಾನ* |
| *ಹೆಸರುಕಾಳು* | *ಗುರುಬಸಪ್ಪ, ಶಿವಮೊಗ್ಗ* | *೨ ರೂ. ತೃತೀಯ ಬಹುಮಾನ* |
| *ಎಣ್ಣೆಬೀಜಗಳು (Edible oils)* | *ಸಿ. ಚನ್ನಬಸಪ್ಪ, ಶಿವಮೊಗ್ಗ* | *೫ ರೂ. ಪ್ರಥಮ ಬಹುಮಾನ* |
| *ಕುಸುಂಬ (Sunflower Seed)* | *ಕಾಸಿಂಸಾಬ್, ಹೊನ್ನಾಳಿ* | *ಗೌರವಾರ್ಹ ಮನ್ನಣಾಪತ್ರ* |

| ಪ್ರದರ್ಶಿಸಿದ್ದು | ಪ್ರದರ್ಶಕರ ಹೆಸರು | ಪಡೆದ ಬಹುಮಾನ |
|---|---|---|
| ಹತ್ತಿಬೀಜ | ಸಿ. ಚಂದಪ್ಪ, ಶಿವಮೊಗ್ಗ | ೪ ರೂ. ದ್ವಿತೀಯ ಬಹುಮಾನ |
| ಎಣ್ಣೆಬೀಜಗಳು (oil seeds) | ಸಣ್ಣ ಸುಬ್ಬರಾವ್, ಗುರುಬಸಪ್ಪ ನರಸಯ್ಯ, ಶಿವಮೊಗ್ಗ | ೧೦ ರೂ. ಪ್ರಥಮ ಬಹುಮಾನ |
| ಅಡಿಕೆ | ರಾಮಣ್ಣ, ಸಾಗರ | ೫ ರೂ. ತೃತೀಯ ಬಹುಮಾನ |
| ಅಡಿಕೆ | ಮಾಳಿಗೆ ಕರಿಬಸಪ್ಪ | **ಬೆಳ್ಳಿಯ ಪದಕ** |
| ಹಸಿರು ಶುಂಠಿ | ಸಿ. ಗುಂಡಪ್ಪ, ಅಮಲ್ದಾರ್, ಸಾಗರ | ೫ ರೂ. ಪ್ರಥಮ ಬಹುಮಾನ |
| ಒಣಗಿದ ಶುಂಠಿ | ರಾಮಪ್ರಸಾದ್ ತಿವಾರಿ, ಶಿವಮೊಗ್ಗ | ೫ ರೂ. ಪ್ರಥಮ ಬಹುಮಾನ |
| Arrow root Tubers | ಕೆ. ತಿರುಮಲಾಚಾರ್, ಸೂಳೆಕೆರೆ ಎಸ್ಟೇಟ್ | ೫ ರೂ. ಪ್ರಥಮ ಬಹುಮಾನ |
| Arrow root Flour | ಕೆ. ತಿರುಮಲಾಚಾರ್, ಸೂಳೆಕೆರೆ ಎಸ್ಟೇಟ್ | **ತಾಮ್ರಪದಕ** |
| Arnatto (ರಂಗವಲ್ಲಿಬಣ್ಣ) | ಕೆ. ತಿರುಮಲಾಚಾರ್, ಸೂಳೆಕೆರೆ ಎಸ್ಟೇಟ್ | ಗೌರವಾರ್ಹ ಮನ್ನಣಾಪತ್ರ |
| ಅರಸಿನ ಕೊಂಬು | ಗುರುಬಸಪ್ಪ, ಶಿಕಾರಿಪುರ | ೩ ರೂ. ಪ್ರಥಮ ಬಹುಮಾನ |
| Edible Roots | ಮಿ. ಲವ್‌ರೀ, ಅಸಿಸ್ಟೆಂಟ್ ಕನ್ಸರ್‌ವೇಟರ್ | ಗೌರವಾರ್ಹ ಮನ್ನಣಾಪತ್ರ |
| Beeswax unbreached | ಗುರುಬಸಪ್ಪ, ಶಿಕಾರಿಪುರ | ೪ ರೂ. ಪ್ರಥಮ ಬಹುಮಾನ |
| Pulas of Mattuga flowers | ಗುರುಬಸಪ್ಪ, ಶಿಕಾರಿಪುರ | ಗೌರವಾರ್ಹ ಮನ್ನಣಾಪತ್ರ |
| ಈರುಳ್ಳಿ (ದಪ್ಪ ಸೈಜು) | ಗುರುಬಸಪ್ಪ, ಶಿಕಾರಿಪುರ | ಗೌರವಾರ್ಹ ಮನ್ನಣಾಪತ್ರ |
| Anise Seed (ಬಡೆ ಸೊಪ್ಪು ಗಿಡ ಮಂಗದಿಲೆ) | ಗುರುಬಸಪ್ಪ, ಶಿಕಾರಿಪುರ | ೩ ರೂ. ದ್ವಿತೀಯ ಬಹುಮಾನ |
| ಸಾಸಿವೆ | ಗುರುಬಸಪ್ಪ, ಶಿಕಾರಿಪುರ | ೨ ರೂ. ತೃತೀಯ ಬಹುಮಾನ |
| ಏಲಕ್ಕಿ | ವೆಂಕಟರಮಣ ಜೋಯಿಸ್, ತೀರ್ಥಹಳ್ಳಿ | ८ ರೂ. ಪ್ರಥಮ ಬಹುಮಾನ |
| ದಾಲ್ಚಿನ್ನಿ ಚಕ್ಕೆ | ಸಣ್ಣ ಸುಬ್ಬರಾವ್ | ೫ ರೂ. ಪ್ರಥಮ ಬಹುಮಾನ |
| Sappen Wood (ಪತಂಗ ಬಣ್ಣದ ಮರ) | " | ೧೫ ರೂ. ಪ್ರಥಮ ಬಹುಮಾನ |
| ಅಡಿಕೆ | ಆನವಟ್ಟಿ ನರಸಪ್ಪ, ಸೊರಬ | ೧೦ ರೂ. ದ್ವಿತೀಯ ಬಹುಮಾನ |
| ಅರಸಿನಕೊಂಬು | ಚಾರಿಕೊಡ್ಲು ಸುಬ್ಬರಾವ್, ಸಾಗರ | ८ ರೂ. ಪ್ರಥಮ ಬಹುಮಾನ |
| Shoe Flower (ದಾಸವಾಳದ ಬಣ್ಣ) | ವಿದ್ಯಾರ್ಥಿ ತಿರುಮಲಾಚಾರ್, ಮಿಡ್ಲ್ ಸ್ಕೂಲ್ ಶಿವಮೊಗ್ಗ | ೧೦ ರೂ. ಪ್ರಥಮ ಬಹುಮಾನ |
| Marking Nut (ಗೇರು ಬಣ್ಣ) | ಬಿ. ಕರಿಬಸಪ್ಪ, ಚನ್ನಗಿರಿ | ಗೌರವಾರ್ಹ ಮನ್ನಣಾಪತ್ರ |
| Collection of Gums | ಶಿವಮೊಗ್ಗ ಜಿಲ್ಲಾ ಸಮಿತಿ | ಗೌರವಾರ್ಹ ಮನ್ನಣಾಪತ್ರ |
| Farinaceous Foods | ಶಿವಮೊಗ್ಗ ಜಿಲ್ಲಾ ಸಮಿತಿ | ಗೌರವಾರ್ಹ ಮನ್ನಣಾಪತ್ರ |
| ಗಂಧದ ಮರದ ಕೆತ್ತನೆ | ದೊಡ್ಡಮನೆ ಕೃಷ್ಣಪ್ಪ, ಸೊರಬ | ೫೦ ರೂ. ಪ್ರಥಮ ಬಹುಮಾನ |
| ಗಂಧದ ಮರದ ಕೆತ್ತನೆ | ಗುಡಿಗಾರ ಶಿವಪ್ಪ, ಸಾಗರ | ೩೦ ರೂ. ದ್ವಿತೀಯ ಬಹುಮಾನ |
| ಗಂಧದ ಮರದ ಕೆತ್ತನೆ | ಶಾಂತಪ್ಪ, ಸೊರಬ | ೨೦ ರೂ. ತೃತೀಯ ಬಹುಮಾನ |
| ದಂತ ಕೆತ್ತನೆ | ಕಾಪುರ್ ಸುಬ್ರಾಯ, ಸೊರಬ | ೩೦ ರೂ. ದ್ವಿತೀಯ ಬಹುಮಾನ |
| ದಂತ ಕೆತ್ತನೆ | ಮುಡಿಗೋಡಿ ಪಿ. ಹಿರಣ್ಯಪ್ಪ, ಸೊರಬ | ೧೫ ರೂ. ತೃತೀಯ ಬಹುಮಾನ |
| ಬೆತ್ತದ ಕೆಲಸ | ಗುಡ್ಡೆಕೆರೆ ವೆಂಕಪ್ಪ ಹೆಗ್ಗಡೆ, ತೀರ್ಥಹಳ್ಳಿ | ८ ರೂ. ದ್ವಿತೀಯ ಬಹುಮಾನ |
| ಬೆತ್ತದ ಕೆಲಸ | ಐಗೂರು ಮಲ್ಲೇಗೌಡ (For umbrella) | ಗೌರವಾರ್ಹ ಮನ್ನಣಾಪತ್ರ |
| ಶಾಯಿ (Ink) | ಕೆಂಚ, ಸೊರಬ | ೩ ರೂ. ದ್ವಿತೀಯ ಬಹುಮಾನ |

| ಪ್ರದರ್ಶಿಸಿದ್ದು | ಪ್ರದರ್ಶಕರ ಹೆಸರು | ಪಡೆದ ಬಹುಮಾನ |
|---|---|---|
| | **ವಿಶೇಷ ಪ್ರಶಸ್ತಿಗಳು** | |
| ಎಮ್ಮೆಗಳು ಒಂದು ಜೊತೆ | ಪರಮೇಶ್ವರಯ್ಯ, ಶಿವಮೊಗ್ಗ | ೧೦ ರೂ. |
| ಬಂಡಿ | ಸಂಗಪ್ಪ ಕಲ್ಮನೆ, ಶಿಕಾರಿಪುರ | ೧೫ ರೂ. |
| ಇಪ್ಪೆ, Bassia Seed | ನಲ್ಲೂರು ಹಾಲಪ್ಪ, ಚನ್ನಗಿರಿ | ೨ ರೂ. |
| ಶಿಲ್ಪಿ | ಬಡಗಿ ಕಾಳಪ್ಪ, ಶಿಕಾರಿಪುರ ಅಮಲ್ದಾರ್ ನಾಗೇಶರಾವ್ ಮೂಲಕ | ೧೫ ರೂ. |
| Free Handwriting and Painting | ಚಿತ್ರಗಾರ ತಿಪ್ಪಾಜಿ, ಶಿಕಾರಿಪುರ | ೩೦ ರೂ. |
| Candles made from the seeds Dhupada mara | ನಾಗೇಶರಾವ್ ಅಮಲ್ದಾರ್, ಶಿಕಾರಿಪುರ | **ಬೆಳ್ಳಿಯ ಪದಕ** |

ಈ ವಸ್ತು ಪ್ರದರ್ಶನಕ್ಕೆ ಭೇಟಿ ಕೊಟ್ಟಿದ್ದ ಚಾಮರಾಜೇಂದ್ರ ಒಡೆಯರ್ ಅವರು ಸಾಗರ ಮತ್ತು ಸೊರಬದ ಶಿಲ್ಪಿಗಳು ರಚಿಸಿದ್ದ ಗಂಧದ ಮರದ ಕೆತ್ತನೆಯ ಕಲಾಕೃತಿಗಳನ್ನು ಖರೀದಿಸಿದರು. ಪ್ರದರ್ಶನ ಮುಗಿದ ನಂತರ ಶಿವಮೊಗ್ಗ ಜಿಲ್ಲೆಯ ಜಿಲ್ಲಾಧಿಕಾರಿಗಳಾಗಿದ್ದ ವಿ.ಪಿ. ಮಾಧವರಾಯರು ಸೊರಬ ಮತ್ತು ಸಾಗರದ ಮೂವರು ಗುಡಿಗಾರರನ್ನು ಮೈಸೂರು ಅರಮನೆಗೆ ಕರೆದುಕೊಂಡು ಹೋಗಿ ಮಹಾರಾಜರಿಗೆ ಪರಿಚಯಿಸಿದರು. ಆಗ ಮಹಾರಾಜರು "ಸಾಗರ ಮತ್ತು ಸೊರಬದ ಗುಡಿಗಾರರು ಬಹು ಮುಗ್ಧ ಜನರು" ಎಂದು ಪ್ರಶಂಸಿಸಿ ಶಾಲು ಹೊದಿಸಿ ಸತ್ಕರಿಸಿ ಬೀಳ್ಕೊಟ್ಟರು. ಇವರು ರಚಿಸಿದ್ದ ಕಲಾಕೃತಿಗಳು ೧೮೮೩-೮೩ರಲ್ಲಿ ಕಲ್ಕತ್ತಾದಲ್ಲಿ ನಡೆದ 'ಇಂಟರ್ ನ್ಯಾಶನಲ್ ಎಕ್ಸ್‌ಬಿಷನ್'ನಲ್ಲಿ ಪ್ರದರ್ಶಿಸಿದ್ದಕ್ಕೆ ಬೆಳ್ಳಿಯ ಪದಕವನ್ನು ಮತ್ತು ೧೮೮೬ರಲ್ಲಿ ಲಂಡನ್ ನಲ್ಲಿ ನಡೆದ 'ಇಂಡಿಯನ್ ಅಂಡ್ ಕಲೋನಿಯಲ್ ಎಕ್ಸ್‌ಬಿಷನ್' ನಲ್ಲೂ ಪ್ರದರ್ಶಿಸಿದ್ದಕ್ಕೆ ಕಂಚಿನ ಪದಕ ಲಭಿಸಿತ್ತು.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


1. *Report of the Agricultural and Industrial Exhibition held at Mysore, 1888* By J. Cameran & S.A. Bapu Rao.
2. *Report on the Administration of Mysore for the year 1886-87 to 1890-91.*
3. *The Mysore Gazetters,* August 11, 25, and Sept 1, 1888.
4. Catalogue of *'World's Columbian Fair'* Chicago, 1893.
5. M. Shamarao, *Modern Mysore,* vol II, 1930.

೬. ಎಮ್. ಶಿಂಗ್ರಯ್ಯ., ೧೯೦೫, **ಚಾಮರಾಜ ಒಡೆಯರ್ ಅವರ ಚರಿತ್ರೆ.**

೭. ಎಮ್.ಕೆ. ಲಿಂಗಯ್ಯ., ೧೯೮೨, **ಮೈಸೂರು ಒಂದು ಅಧ್ಯಯನ.**




**ಖ್ಯಾತಿ ಲಾಭಕ್ಕಲ್ಲದೆ ಸಮಾಜದ ಲಾಭಕ್ಕೆ**
**ತನ್ನ ಸಾಧನೆಯ ಬೆಳೆ ಇಟ್ಟರೆ ಹಿತಕಾರಣ**
**ಪ್ರದರ್ಶನ ಸತ್‌ಪ್ರಯತ್ನದ ದರ್ಶನವಾಗಿದೆ**
**ಸಮುದಾಯ ಹಿತದಾವರಣ**
**ನಮ್ಮ ಕೃಷಿಸಿದ್ಧಿ ಉದ್ಯಮ, ಸಿದ್ಧಿಯಸೊನೆಯಾಗಿ**
**ರೈತ ಬಾಳಿಗೆ ನೆಮ್ಮದಿ ತರೆ ಅದೆ ಬಹುಮಾನದ ಸೊದೆ**

ಡಾ. ಹೆಚ್. ಈ. ಬಸವರಾಜಪ್ಪ*

# ಕರ್ನಾಟಕದ ಏಕೀಕರಣದ ಚಳವಳಿಯಲ್ಲಿ ದಾವಣಗೆರೆಯ ಪಾತ್ರ

ಕರ್ನಾಟಕ ಏಕೀಕರಣದ ಪ್ರಯತ್ನಗಳು ಒಂದು ಪ್ರಕ್ರಿಯೆಯಾಗಿ ಬೆಳೆದು ಬಂದವು. ಆದರ ಸಾರ್ಥಕ ಮುಖಗಳಾಗಿ ಏಕೀಕರಣಕ್ಕಾಗಿ ದುಡಿದವರೆಲ್ಲರೂ ಕಾಣಬರುತ್ತಾರೆ. ವಿಶೇಷತಃ ದಾವಣಗೆರೆಯು ವ್ಯಾಪಾರ, ವಾಣಿಜ್ಯದ ಮೂಲಕ ಕನ್ನಡದ ಭಾಗಗಳಲ್ಲೆಲ್ಲ ಇದ್ದ ಕನ್ನಡ ಭಾಷಿಕರ ಸಂಪರ್ಕಬಿಂದುವಾಗಿತ್ತು; ಏಕೀಕರಣ ಚಳುವಳಿಯ ಮುಂಚೂಣಿ ನೆಲೆಯಾಗಿತ್ತು. ಇಲ್ಲಿಯ ಈ ಪರಂಪರೆಯ ಅಖಂಡ ಪರಿಶ್ರಮ, ಭಾವಭಾಂಧವ್ಯ ಭಿನ್ನಗೊಳ್ಳದೆ ನಿರಂತರವಿರಬೇಕೆಂಬುದು ಲೇಖನದ ಆಶಯ.

ಪ್ರಾದೇಶಿಕವಾಗಿ ಒಂದು ಭಾಷೆಯ ಆಧಾರದ ಮೇಲೆ ಏಕೀಕರಣಗೊಳಿಸುವ ಪ್ರಕ್ರಿಯೆಯು, ರಾಷ್ಟ್ರಭಾವನೆ, ವ್ಯಾಪಕವಾಗಿ ಹರಡಿದ ನಂತರವೇ ಆರಂಭವಾಯಿತು. ಭಾರತದ ಇತರ ಭಾಷೆಗಳನ್ನಾಡುವ ಜನರು ಸಹ ಭಾಷಾವಾರು ಪ್ರಾಂತ್ಯ ರಚನೆಗೆ ಚಳವಳಿ ನಡೆಸಿದರು. ಈ ಸಂದರ್ಭದಲ್ಲಿ ಜನರನ್ನು ಒಗ್ಗೂಡಿಸುವ ಸಾಧನವಾಗಿ ಭಾಷೆಯೂ ಪ್ರಮುಖ ಪಾತ್ರವಹಿಸಿತು. ಅಂದಿನ ಕನ್ನಡ ನಾಡು ವಿವಿಧ ಆಡಳಿತ ಭಾಗದಲ್ಲಿ ಹಂಚಿಹೋಗಿತ್ತು. ಅವುಗಳು ಒಂದೇ ಆಡಳಿತದಡಿಯಲ್ಲಿ ಬರಲು ಕನ್ನಡ ನಾಡಿನ ಎಲ್ಲಾ ಭಾಗದಿಂದಲೂ ಒತ್ತಾಯ ಬಂದಿತು. ಇಂತಹ ಏಕೀಕರಣ ಚಳವಳಿಯಲ್ಲಿ ದಾವಣಗೆರೆ ಜಿಲ್ಲೆಯೂ ಮುಂಚೂಣಿಯಲ್ಲಿತ್ತು.

ದಾವಣಗೆರೆ ಜಿಲ್ಲೆಯಲ್ಲಿ ನಡೆದ ಏಕೀಕರಣಪೂರ್ವ ಚಟುವಟಿಕೆಗಳು ಕರ್ನಾಟಕದ ಏಕೀಕರಣಕ್ಕೆ ಪೂರಕವಾಗಿದ್ದವು. ೧೮ನೇ ಶತಮಾನದ ಪ್ರಾರಂಭದಲ್ಲಿಯೇ ದಾವಣಗೆರೆ ಪ್ರದೇಶವು ಕರ್ನಾಟಕದ ಎಲ್ಲಾ ಭಾಗಗಳೊಂದಿಗೆ ನೇರ ಸಂಪರ್ಕ ಹೊಂದಿತ್ತು. ಪ್ರಸ್ತುತ ಅಧ್ಯಯನದಲ್ಲಿ ಕರ್ನಾಟಕದ ಏಕೀಕರಣದಲ್ಲಿ ದಾವಣಗೆರೆ ಪ್ರದೇಶವು ನಿರ್ವಹಿಸಿದ ಪಾತ್ರವನ್ನು ಕುರಿತು ಚರ್ಚಿಸಲಾಗಿದೆ.

ದಕ್ಷಿಣ ಭಾರತದಲ್ಲಿಯೇ ವಿಶಾಲ ರಾಜ್ಯವಾಗಿದ್ದ ವಿಜಯನಗರ ಆಡಳಿತಾವಧಿಯಲ್ಲಿ ಚಿತ್ರದುರ್ಗವು ಬೇರೆ ಬೇರೆ ಪ್ರಾಂತ್ಯಗಳೊಂದಿಗೆ ನಿಕಟಸಂಪರ್ಕ ಹೊಂದಿತ್ತು. ವಿಜಯನಗರದ ಪತನಾನಂತರ ಚಿತ್ರದುರ್ಗದ ಸ್ಥಳೀಯ ನಾಯಕ ಅರಸರು ಇಲ್ಲಿಯ ಸಂಸ್ಕೃತಿಯನ್ನು ಬೆಳೆಸುವ ಮೂಲಕ ಚಿತ್ರದುರ್ಗದ ವಿಶಿಷ್ಟ ಪರಂಪರೆಯನ್ನು ರೂಪಿಸುವ ಕಡೆ ಗಮನಹರಿಸಿದರು.[೧] ಹೀಗಾಗಿ ೧೭ನೇ ಶತಮಾನದ ಪ್ರಾರಂಭದಲ್ಲಿಯೇ ದಾವಣಗೆರೆ ಪ್ರದೇಶದ ಜನರ ನಡೆನುಡಿ, ಆಚಾರ ವಿಚಾರಗಳು, ಸಂಪ್ರದಾಯಗಳು ಸಂಪೂರ್ಣ ಕನ್ನಡತನವನ್ನು ಉಳಿಸಿಕೊಂಡಿದ್ದನ್ನು ಗಮನಿಸಬಹುದಾಗಿದೆ. ದಾವಣಗೆರೆ ಪ್ರದೇಶವು ೧೮ನೇ ಶತಮಾನದ ಪ್ರಾರಂಭದಲ್ಲಿಯೇ ಉತ್ತರ ಕರ್ನಾಟಕದ ಜನರೊಂದಿಗೆ ನೇರವಾದ ಸಂಪರ್ಕ ಪಡೆದಿತ್ತು. ಈ ರೀತಿಯಾದ ಆಡಳಿತಾತ್ಮಕ ಎಲ್ಲೆಯನ್ನು ದಾಟಿದ ಕನ್ನಡಿಗರು ಬಾಂಬೆ ಕರ್ನಾಟಕ, ಹೈದ್ರಾಬಾದ ಕರ್ನಾಟಕದ ಭಾಗಗಳ ವಾಣಿಜ್ಯೋದ್ಯಮಿಗಳು, ವ್ಯಾಪಾರಿಗಳು, ಕಾರ್ಮಿಕರು ದಾವಣಗೆರೆಯಲ್ಲಿ ಬಂದು ನೆಲೆಸಿದರು. ಆ ಮೂಲಕ ಕರ್ನಾಟಕದ ಎಲ್ಲ ಭಾಗದ ಜನರೊಂದಿಗೆ ಸಂಪರ್ಕ ಪಡೆಯಿತು. ಚಿತ್ರದುರ್ಗ ಪ್ರದೇಶದಲ್ಲಿ ೧೮೦೦ರ ವೇಳೆಯಲ್ಲಿ ಪ್ರವಾಸ ಮಾಡಿದ ಬುಕಾನನ್ ದಾವಣಗೆರೆ ನಗರವು ವಾಣಿಜ್ಯ ಚಟುವಟಿಕೆಗಳಿಂದ ಕೂಡಿತ್ತು ಎಂದು ವಿವರಿಸಿದ್ದಾನೆ. ಅವನ ಪ್ರಕಾರ ಇಲ್ಲಿ ಹಲವು ವ್ಯಾಪಾರಿ ಕುಟುಂಬಗಳು ನೆಲೆಸಿದ್ದವು. ಕರ್ನಾಟಕದ ವಿವಿಧ ಭಾಗಗಳಿಂದ ವಾಣಿಜ್ಯ ಸಾಮಗ್ರಿಗಳು ಇಲ್ಲಿಗೆ ಬರುತ್ತಿದ್ದವು. ಇಲ್ಲಿನ ಪ್ರಮುಖ

* ಇತಿಹಾಸ ಉಪನ್ಯಾಸಕರು, ಶಿಲ್ಪ ಮತ್ತು ವರ್ಣ ಚಿತ್ರಕಲಾ ವಿಭಾ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬಾದಾಮಿ-ಬನಶಂಕರಿ, ಬಾಗಲಕೋಟೆ ಜಿಲ್ಲೆ.

ವ್ಯಾಪಾರಿಗಳು ಶಿವಭಕ್ತರು, ಮರಾಠರು, ಮುಸ್ಲಿಮರು ಎಂದು ಗುರುತಿಸಿದ್ದಾನೆ. ಜೊತೆಗೆ ದಾವಣಗೆರೆ ಪ್ರದೇಶದಲ್ಲಿ ತಯಾರಾಗುವ ಕಂಬಳಿಗಳಿಗೆ ದೇಶದ ಎಲ್ಲಾ ಭಾಗದಲ್ಲಿಯೂ ಬೇಡಿಕೆ ಇತ್ತು. ಎರಡರಿಂದ ಹನ್ನೆರಡು ಪಗೋಡದವರೆಗೆ ಇಲ್ಲಿನ ಕಂಬಳಿಗಳು ಮಾರಾಟವಾಗುತ್ತಿದ್ದವು ಎಂದಿದ್ದಾನೆ. ಭಾನುವಾರದಂದು ದಾವಣಗೆರೆಯಲ್ಲಿ ಎರಡು ಸಾವಿರದಷ್ಟು ಕರ್ನಾಟಕದ ವಿವಿಧ ಭಾಗದ ಜನರು ಬಂದು ಸೇರುತ್ತಿದ್ದ ಬಗ್ಗೆ ಹೇಳುತ್ತಾನೆ.[೨] ೧೮೦೦ರಲ್ಲಿ ಕರ್ನಾಟದಲ್ಲಿ ಪ್ರವಾಸ ಮಾಡಿದ ಬುಕಾನನ ಬರವಣಿಗೆಯಿಂದ ದಾವಣಗೆರೆ, ಹರಿಹರದಲ್ಲಿ ಸೇರುತ್ತಿದ್ದ ಕರ್ನಾಟಕದ ವಿವಿಧ ಭಾಗಗಳ ಜನತೆಯಲ್ಲಿ ಆಗಲೇ ಕನ್ನಡದ ಭಾಷಿಕ ಸಮುದಾಯದ ಐಕ್ಯತೆಯ ಕುರಿತು ಒಂದು ಸ್ಪಷ್ಟ ಚಿತ್ರಣವಿತ್ತು ಎಂದು ಗೊತ್ತಾಗುತ್ತದೆ.

ಇದೇ ರೀತಿ ೧೮೦೦ರ ನಂತರ ದಾವಣಗೆರೆ ಜಿಲ್ಲೆಯಲ್ಲಿ ನಿರ್ಮಾಣವಾದ ರಸ್ತೆ ಮಾರ್ಗಗಳು ಹೊರ ಜಗತ್ತಿನೊಂದಿಗೆ ಸುಲಭ ಸಂಪರ್ಕ ಕಲ್ಪಿಸಿದವು. ಅವುಗಳಲ್ಲಿ ೧೮೩೦ರಲ್ಲಿ ನಿರ್ಮಾಣವಾದ ಬೆಂಗಳೂರು-ಹರಿಹರ ರಸ್ತೆ ಹರಿಹರ ಮಾರ್ಗವಾಗಿ ಬೆಂಗಳೂರು ಮತ್ತು ಧಾರವಾಡ ರಸ್ತೆ ಅತ್ಯಂತ ಪ್ರಮುಖ ಪಾತ್ರವಹಿಸಿದವು. ನಂತರದಲ್ಲಿ ನಿರ್ಮಾಣವಾದ ಹರಿಹರನ ಹತ್ತಿರದ ತುಂಗಭದ್ರಾ ನದಿಗೆ ೧೮೬೮ರಲ್ಲಿ ತುಂಗಭದ್ರಾ ಮೇಲು ಸೇತುವೆಯನ್ನು ಕಮೀಷನರ್ ಕಾಲಾವಧಿಯಲ್ಲಿ ನಿರ್ಮಿಸಲಾಯಿತು. ಇದರ ನಿರ್ಮಾಣದಿಂದಾಗಿ ಕನ್ನಡ ಮಾತನಾಡುವ ಎರಡು ಪ್ರದೇಶಗಳು ಒಂದಾಗಿ ಸೇರುವಂತೆ ಆಯಿತು. ಉತ್ತರ ಕರ್ನಾಟಕದಿಂದ ಮುಖ್ಯವಾಗಿ ಹಾವೇರಿ, ರಾಣೇಬೆನ್ನೂರು, ಕೊಟ್ಟೂರು ಇನ್ನಿತರ ಪ್ರದೇಶದಿಂದ ಬಂದ ಜನರು, ದಾವಣಗೆರೆ ಮತ್ತು ಚಿತ್ರದುರ್ಗದಲ್ಲಿ ನೆಲೆಸುವ ಮೂಲಕ ಈ ಎರಡು ಪ್ರದೇಶಗಳನ್ನು ಸಾಂಸ್ಕೃತಿಕವಾಗಿ ಒಂದು ಮಾಡಿದರು. ಅದೇ ರೀತಿ ರೈಲ್ವೆ ಸಂಪರ್ಕದಿಂದಾಗಿ ಆಧುನಿಕ ಜಗತ್ತಿನ ಸಂಪರ್ಕವೇ ಕನ್ನಡಿಗರಿಗೆ ದೊರೆತಂತಾಯಿತು. ಬೆಂಗಳೂರು ಮತ್ತು ಹರಿಹರದ ನಡುವಣ ರೈಲ್ವೆ ೧೮೮೮ರಲ್ಲಿ ಪೂರ್ಣಗೊಂಡಿತು. ಸದರನ್ ಮರಾಠ ರೈಲ್ವೆ ಕಂಪನಿಯು ಪುಣೆ-ಹರಿಹರದೊಂದಿಗೆ ರೈಲ್ವೆ ಸಂಪರ್ಕ ಕಲ್ಪಿಸುವ ಮೂಲಕ ದಾವಣಗೆರೆ ಪ್ರದೇಶವು ಕರ್ನಾಟಕದ ಉತ್ತರ ಮತ್ತು ದಕ್ಷಿಣ ಭಾಗಕ್ಕೆ ಸಂಪರ್ಕ ಸೇತುವೆಯಾಯಿತು. ಈ ಭಾಗದ ಜನರು ರೈಲ್ವೆ ಪ್ರಯಾಣದ ಮೂಲಕ ಒಂದುಕಡೆಯಿಂದ ಮತ್ತೊಂದು ಕಡೆಗೆ ಅಲ್ಪಾವಧಿಯಲ್ಲಿಯೇ ಪ್ರಯಾಣಿಸುವ ಅವಕಾಶ ಲಭಿಸಿದ್ದರಿಂದಾಗಿ ಒಂದೇ ಭಾಷೆಯನ್ನು ಮಾತನಾಡುವ ಜನರು ಸೇರಲು ಸುಲಭವಾಯಿತು. ಈ ಎಲ್ಲಾ ಚಾರಿತ್ರಿಕ ಹಿನ್ನೆಲೆಯಿಂದ ಕರ್ನಾಟಕದ ಏಕೀಕರಣ ಚಳವಳಿ ಈ ಭಾಗದಲ್ಲಿ ಪ್ರಬಲವಾಗಲು ಸಾಧ್ಯವಾಯಿತು.[೩]

ಕರ್ನಾಟಕದ ಸ್ವಾತಂತ್ರ್ಯ ಚಳವಳಿಯಲ್ಲಿ ಪ್ರಮುಖ ಪಾತ್ರವಹಿಸಿದ ಹರ್ಡೇಕರ ಮಂಜಪ್ಪನವರು ಗಾಂಧಿಜೀಯವರ ಮಾರ್ಗದಲ್ಲಿ ಸಾಬರಮತಿ ಆಶ್ರಮವನ್ನು ೧೮೦೬ರಲ್ಲಿ ಹರಿಹರದ ಸಮೀಪದ ತುಂಗಭದ್ರಾ ನದಿಯ ದಡದಲ್ಲಿ ಸ್ಥಾಪಿಸುವುದರ ಮೂಲಕ ಉತ್ತರ ಕರ್ನಾಟಕದ ಜನರು ಬಂದು ಹೋಗುವಂತೆ ಮಾಡಿದರು.[೪]

ಎರಡನೇ ಮಹಾಯುದ್ಧದ ವೇಳೆಗೆ ದಾವಣಗೆರೆಯು ವ್ಯಾಪಾರದ ಹೆಚ್ಚಳದಿಂದ ಮಲೆನಾಡು ಮತ್ತು ಬಯಲು ಪ್ರದೇಶಗಳಿಗೆ ಕೇಂದ್ರಸ್ಥಳವಾಗಿ, ಹೊರ ರಾಜ್ಯದ ರಸ್ತೆ ಸಂಪರ್ಕ ಪಡೆದು ಪ್ರಮುಖ ವಾಣಿಜ್ಯ ಕೇಂದ್ರವೆಂದು ಪ್ರಸಿದ್ಧಿ ಪಡೆದಿತ್ತು. ಈ ವೇಳೆಗಾಗಲೇ ದಾವಣಗೆರೆಯಲ್ಲಿ ಹತ್ತಿ ಮಿಲ್ಲುಗಳು, ಎಣ್ಣೆ ಮಿಲ್ಲುಗಳು ಸ್ಥಾಪನೆಯಾಗುವುದರೊಂದಿಗೆ ಕೆಲಸವನ್ನು ಹುಡುಕಿ ಬರುವ ಜನರಿಗೆ ಆಶ್ರಯ ತಾಣವಾಗಿತ್ತು. ಈ ನಗರದ ಅಭಿವೃದ್ಧಿಯ ಪ್ರಯೋಜನ ಪಡೆದವರಲ್ಲಿ ಬಹುಸಂಖ್ಯಾತರು ಉತ್ತರ ಕರ್ನಾಟಕದಿಂದ ಬಂದವರಾಗಿದ್ದರು. ಹೀಗಾಗಿ ಕರ್ನಾಟಕದ ಏಕೀಕರಣಕ್ಕೆ ದಾವಣಗೆರೆ ಜಿಲ್ಲೆಯೂ ಕನ್ನಡ ನಾಡಿನ ಮಧ್ಯಭಾಗದಲ್ಲಿದ್ದು, ಎರಡು ಭಾಗದ ಜನರನ್ನು ಒಂದಾಗಿ ಸೇರಿಸುವ ಪ್ರಕ್ರಿಯೆಯಲ್ಲಿ ಅತ್ಯಂತ ಪ್ರಮುಖ ಪಾತ್ರವಹಿಸಿತು. ಕರ್ನಾಟಕ ಏಕೀಕರಣ ಚಳವಳಿಯು ಸ್ವಾತಂತ್ರ್ಯ ಚಳವಳಿಯೊಂದಿಗೆ ನಡೆಯಿತು. ಕನ್ನಡ ನಾಡು ಒಂದಾಗಬೇಕೆಂಬ ಅಭಿಲಾಷೆಯೆಂದರೆ **ಅಖಂಡ ಕರ್ನಾಟಕ ನಿರ್ಮಾಣವೆಂಬುದೇ** ಆಗಿತ್ತು.

೨೦ನೇ ಶತಮಾನದ ಆದಿಭಾಗದ ವೇಳೆಗೆ ಕನ್ನಡ ಭಾಷೆಯನ್ನು ಮಾತನಾಡುವ ಜನವರ್ಗಗಳು ಐದು ಆಡಳಿತ ವಿಭಾಗಗಳಲ್ಲಿ ಹರಿದು ಹಂಚಿಹೋಗಿತ್ತು. ಈ ಐದು ಆಡಳಿತ ವಿಭಾಗಗಳೆಂದರೆ ಮೈಸೂರು ಪ್ರಾಂತ್ಯ, ಮದ್ರಾಸು ಪ್ರಾಂತ್ಯ, ಬೊಂಬಾಯಿ ಪ್ರಾಂತ್ಯ ಹೈದರಾಬಾದ ಪ್ರಾಂತ್ಯ ಹಾಗೂ ಕೊಡಗು. ಅಲ್ಲದೇ ಇಪ್ಪತ್ತೆರಡು ದೇಶಿಯ ಸಂಸ್ಥಾನಗಳು ಪ್ರತ್ಯೇಕವಾಗಿದ್ದವು. ಸ್ವಾತಂತ್ರ್ಯ ಚಳವಳಿಯ ಜೊತೆಯಲ್ಲಿಯೇ ಹರಿದು ಹಂಚಿ ಹೋದ ಕನ್ನಡನಾಡು ಒಂದೇ ಆಡಳಿತದಡಿ ಬರಲು ಕರ್ನಾಟಕದಲ್ಲಿ ಭಾಷಾವಾರು ಪ್ರಾಂತ್ಯ ರಚನೆ ಮಾಡಲು ಏಕೀಕರಣದ ಮುಂದಾಳುಗಳು ಒತ್ತಾಯ ತಂದರು ಎಂಬುದು ಇಲ್ಲಿ ಚರ್ಚೆಯ ವಿಷಯವಾಗಿದೆ. ಡೆಪ್ಯೂಟಿ ಚನ್ನಬಸಪ್ಪನವರು ೧೮೫೬ರಲ್ಲಿಯೇ ಇಂತಹ ಚಳವಳಿಯನ್ನು ಉತ್ತರ ಕನ್ನಡದಲ್ಲಿ ಆರಂಭಿಸಿದರು. ಈ ದಿಸೆಯಲ್ಲಿ ೧೮೯೦ರಲ್ಲಿ ಸ್ಥಾಪಿತವಾದ **ಕರ್ನಾಟಕ ವಿದ್ಯಾವರ್ಧಕ ಸಂಘ** ಒಂದು ಮಹತ್ವಪೂರ್ಣವಾದ ಮೈಲುಗಲ್ಲೆನ್ನಬಹುದು.[೫] ಈ ಸಂಘವು ಕನ್ನಡ ಭಾಷೆ ಮತ್ತು ಕಲೆಗಳ ಅಭಿವೃದ್ಧಿ ಹಾಗೂ ಕರ್ನಾಟಕವು ಸ್ವಾಯತ್ತತೆ ಪಡೆಯುವಲ್ಲಿ ಪ್ರಮುಖ ಪಾತ್ರವಹಿಸಿತು.

೧೯೨೪ರಲ್ಲಿ ಬೆನಗಲ್ ರಾಮರಾಯರು ಅಧ್ಯಕ್ಷರಾಗಿ, ಬಿ. ಶಿವಮೂರ್ತಿ ಶಾಸ್ತ್ರಿಗಳು ಕಾರ್ಯದರ್ಶಿಯಾಗಿ ಬೆಂಗಳೂರಿನಲ್ಲಿ ಸ್ಥಾಪನೆಯಾದ **ಕರ್ನಾಟಕ ಏಕೀಕರಣ ಸಂಘವು** ಮೈಸೂರು ಪ್ರದೇಶದಲ್ಲಿ ಏಕೀಕರಣ ಚಳವಳಿಯನ್ನು ತೀವ್ರಗೊಳಿಸಿತು.

ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ೧೯೩೮ರಲ್ಲಿ ಕರ್ನಾಟಕ ಏಕೀಕರಣಕ್ಕಾಗಿ ತನ್ನ ಸಮ್ಮತಿಯನ್ನು ಸೂಚಿಸಿ ನಿರ್ಣಯವನ್ನು ಮಂಡಿಸಿತು. ಇದನ್ನು ಅನುಮೋದಿಸಿದ ಮಹಾತ್ಮಗಾಂಧೀಜಿ ಅವರು ಪ್ರತ್ಯೇಕ ಕರ್ನಾಟಕ ಪ್ರಾಂತ್ಯದ ಅಸ್ತಿತ್ವವನ್ನು ಆಶಿಸಿ ಕರ್ನಾಟಕ ಚಿರಾಯುವಾಗಲಿ ಎಂದು ಘೋಷಿಸಿದರು. ೧೯೪೦ರ ನಂತರ ಎಸ್. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಕರ್ನಾಟಕ ಏಕೀಕರಣ ಸಂಘ, ಕನ್ನಡನಾಡಿನ ಎಲ್ಲ ಪ್ರದೇಶಗಳಲ್ಲಿಯೂ ಅಧಿವೇಶನಗಳನ್ನು ನಡೆಸಿ ಪ್ರಬಲ ಹೋರಾಟವನ್ನಾರಂಭಿಸಿತು. ಈ ಹೋರಾಟವು ಸ್ವಾತಂತ್ರ್ಯ ಚಳವಳಿಯ ಜೊತೆಯಲ್ಲಿಯೇ ನಡೆಯಿತು.

ಕರ್ನಾಟಕ ಏಕೀಕರಣಕ್ಕೆ ಮೈಸೂರು ಸಂಸ್ಥಾನದಲ್ಲಿಯೇ ಕೆಲವರು ವಿರೋಧಿಸುತ್ತಿದ್ದರು. ಅವರೆಲ್ಲರೂ ಮೈಸೂರು ಸಂಸ್ಥಾನವು ಉತ್ತಮ ಆಡಳಿತ ಹೊಂದಿ ಮುಂದುವರೆದಿದೆ, ಏಕೀಕರಣವಾದರೆ ಹಿಂದುಳಿದ ಪ್ರದೇಶಗಳು ಸೇರಿ ಸಂಸ್ಥಾನದ ಪ್ರಗತಿ ಕುಂಠಿತಗೊಳ್ಳುತ್ತದೆ ಎಂಬ ಅಭಿಪ್ರಾಯ ಹೊಂದಿದ್ದರು. ಎಚ್.ಸಿ. ದಾಸಪ್ಪ ಮತ್ತು ಸಚಿವರಾಗಿದ್ದ ಎಂ.ಜಿ. ರಾಮಚಂದ್ರರಾವ ಮುಂತಾದವರು ಕರ್ನಾಟಕ ಏಕೀಕರಣವಾದರೆ ವೀರಶೈವ ಸಮುದಾಯವು ಸಂಖ್ಯಾಬಲದಿಂದ ಪ್ರಬಲರಾಗುತ್ತಾರೆಂಬ ಸಂಶಯದಿಂದ ಅದನ್ನು ವಿರೋಧಿಸಿದರು. ಇವರು ಮೈಸೂರಿನೊಡನೆ ಉತ್ತರ ಕರ್ನಾಟಕದ ಭಾಗಗಳು ಸೇರುವುದನ್ನು ಕಟುವಾಗಿ ವಿರೋಧಿಸಿದರು. ಹೊಸದಾಗಿ ಸೇರ್ಪಡೆಯಾಗುವ ಭಾಗಗಳು ಸೇರಿ ಒಂದು ಪ್ರತ್ಯೇಕ ಕರ್ನಾಟಕ, ಮೈಸೂರೇ ಒಂದು ಪ್ರತ್ಯೇಕ ಕರ್ನಾಟಕ ಎರಡು ರಾಜ್ಯಗಳಾಗಿ ಉಗಮವಾಗಲೆಂದು ಅವರು ವಾದಿಸಿದ್ದರು. ಇಷ್ಟೆಲ್ಲಾ ವಿರೋಧಗಳಿದ್ದರೂ ಏಕೀಕರಣ ಚಳವಳಿ ದಿನದಿಂದ ದಿನಕ್ಕೆ ಬೆಳೆಯುತ್ತಲೇ ಹೋಯಿತು. ಇದಕ್ಕೆ ದಾವಣಗೆರೆಯು ಅಪವಾದವೇನಲ್ಲ.

೧೯೩೭ರ ಅಕ್ಟೋಬರ್ ೧೦ ರಂದು ಕರ್ನಾಟಕದಾದ್ಯಂತ ಕರ್ನಾಟಕ ಏಕೀಕರಣ ದಿನವನ್ನಾಗಿ ಆಚರಿಸಲಾಯಿತು. ಇದೇ ವೇಳೆಯಲ್ಲಿ ದಾವಣಗೆರೆ ಜಿಲ್ಲೆಯ ಹರಿಹರ ಇನ್ನಿತರ ಸ್ಥಳಗಳಲ್ಲಿಯೂ ಏಕೀಕರಣ ದಿನವನ್ನಾಚರಿಸಿದ ಬಗ್ಗೆ ವರದಿಗಳಿವೆ. ಕರ್ನಾಟಕ ಏಕೀಕರಣ ಚಳವಳಿಯ ನಾಯಕರಾಗಿದ್ದ ಎಸ್. ನಿಜಲಿಂಗಪ್ಪ, ಜಿ.ವಿ. ಹಳ್ಳಿಕೇರಿ, ಜಿನರಾಜ ಹೆಗ್ಗಡೆ ಮತ್ತು ಕೆ.ಆರ್. ಕಾರಂತ ಅವರು ಆ ಕಾಲದಲ್ಲಿ ಕರ್ನಾಟಕ ಏಕೀಕರಣ ಚಳವಳಿಯ ನೇತಾರರಾಗಿದ್ದರು. ಕೆ.ಎಫ್. ಪಾಟೀಲರು ಹೇಳುವಂತೆ ಕರ್ನಾಟಕ ಏಕೀಕರಣ ಆಗಲೇಬೇಕು ಎನ್ನುವ ಕಾತರವಿತ್ತು. ಅದಕ್ಕೆ ಮೊದಲು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರು ಯಾರಾಗಬೇಕು ಎನ್ನುವ ಪ್ರಶ್ನೆಯೂ ಇತ್ತು. ಮೈಸೂರು ಸಂಸ್ಥಾನ ಮತ್ತು ಬ್ರಿಟಿಷ್ ಕರ್ನಾಟಕದ ಭಾಗಗಳು ಈ ಎರಡು ಪ್ರದೇಶಗಳಿಗೂ ಸರಿಹೊಂದುವ ಸಮಾನ ಮನಸ್ಕ ವ್ಯಕ್ತಿಯೊಬ್ಬರು ಆಯ್ಕೆಯಾಗುವುದು ಸೂಕ್ತ ಎನ್ನುವುದು ಎಲ್ಲರ ಅಭಿಪ್ರಾಯವಾಗಿತ್ತು. ಚಿತ್ರದುರ್ಗ ಅಥವಾ ಶಿವಮೊಗ್ಗ ಜಿಲ್ಲೆಯ ಯಾರಾದರೊಬ್ಬರು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದರೆ ಎರಡೂ ಕಡೆಯವರನ್ನು ಸರಿದೂಗಿಸಿಕೊಂಡು ಹೋಗುತ್ತಾರೆ, ಎನ್ನುವುದು ಎಲ್ಲ ಕಾರ್ಯಕರ್ತರ ಅಭಿಪ್ರಾಯವಾಗಿತ್ತು. ಏಕೆಂದರೆ ಶಿವಮೊಗ್ಗ ಮತ್ತು ಚಿತ್ರದುರ್ಗ ಜಿಲ್ಲೆಗಳು ಉತ್ತರ ಕರ್ನಾಟಕದ ಗಡಿ ಪ್ರದೇಶವಾಗಿತ್ತು. ಉತ್ತರ ಕರ್ನಾಟಕದ ಕಾಂಗ್ರೆಸ್ ನಾಯಕರು ಸ್ವಾತಂತ್ರ್ಯ ಚಳವಳಿಯ ಸಂದರ್ಭದಲ್ಲಿ ನಿಕಟ ಸಂಬಂಧವನ್ನು ಇಟ್ಟುಕೊಂಡಿದ್ದರು. ಹೀಗಾಗಿ ಈ ಪ್ರದೇಶದ ವ್ಯಕ್ತಿಗಳು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಅಧ್ಯಕ್ಷರಾದರೆ ಸಮಗ್ರ ಕರ್ನಾಟಕದ ದೃಷ್ಟಿಯಿಂದ ಸರಿ ಎಂಬ ಅಭಿಪ್ರಾಯ ಕಾಂಗ್ರೆಸ್ ನಾಯಕರದಾಗಿತ್ತು. ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಮತ್ತು ಅಖಿಲ ಭಾರತ ಕಾಂಗ್ರೆಸ್ ಸಮಿತಿ ಎರಡೂ ಕಡೆ ಸದಸ್ಯರಾಗಿದ್ದವರು ಮಾತ್ರ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಬಹುದಾಗಿತ್ತು.

ಆದರೂ ಕಾರ್ಯಕರ್ತರ ಮೊದಲ ಆಯ್ಕೆ ಶಿವಮೊಗ್ಗದ ಹೆಚ್. ಸಿದ್ಧಯ್ಯನವರಾಗಿದ್ದರು. ಅವರು ಅಖಿಲ ಭಾರತ ಕಾಂಗ್ರೆಸ್ ಸಮಿತಿ ಸದಸ್ಯರಾಗಿರಲಿಲ್ಲ. ಆಗ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರು ಯಾರಾಗಬೇಕು ಎಂಬ ಪ್ರಶ್ನೆ ಕಗ್ಗಂಟಾಗಿತ್ತು. ಉತ್ತರ ಕರ್ನಾಟಕ ಕಾಂಗ್ರೆಸ್ ಪಕ್ಷದಲ್ಲಿ ಪ್ರಭಾವಿ ನಾಯಕರಾಗಿದ್ದ ಕೆ.ಎಫ್. ಪಾಟೀಲರು ಮೈಸೂರು ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದ ಎಸ್. ನಿಜಲಿಂಗಪ್ಪ ಅವರನ್ನೇ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಸ್ಥಾನಕ್ಕೆ ಸೂಕ್ತ ವ್ಯಕ್ತಿ ಎಂದು ಭಾವಿಸಿದರು. ಒಮ್ಮತದಿಂದ ೧೯೪೪ರಲ್ಲಿ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರನ್ನಾಗಿ ಅವರನ್ನು ಆಯ್ಕೆ ಮಾಡಲಾಗಿತ್ತು. ಎಸ್. ನಿಜಲಿಂಗಪ್ಪನವರು ಅಖಿಲ ಭಾರತ ಕಾಂಗ್ರೆಸ್ ಸಮಿತಿ ಸದಸ್ಯರಾಗಿಯೂ ಹಾಗೂ ಸಂವಿಧಾನ ರಚನಾ ಸಮಿತಿಯ ಸದಸ್ಯರೂ ಆಗಿದ್ದರು. ಅದಾಗಿ ಹಳೇ ಮೈಸೂರು, ಕರಾವಳಿ, ಕೊಡಗು ಮತ್ತು ಹೈದ್ರಾಬಾದ ಕರ್ನಾಟಕ ಪ್ರದೇಶದ ಕಾಂಗ್ರೆಸ್ ವಲಯಗಳ ಸದಸ್ಯರ ಅಪಾರ ವಿಶ್ವಾಸಗಳಿಸಿದ್ದ ಎಸ್. ನಿಜಲಿಂಗಪ್ಪನವರು ಅಧ್ಯಕ್ಷರಾಗಿ ಅವಿರೋಧವಾಗಿ ಆಯ್ಕೆಯಾದರು. ಅಧ್ಯಕ್ಷರಾಗಿ ಆಯ್ಕೆಯಾದ ನಂತರ ಉತ್ತರ ಕರ್ನಾಟಕದ ಕಾಂಗ್ರೆಸ್ ಧುರೀಣರ ವಿಶ್ವಾಸಗಳಿಸಲು ಸಮಿತಿಯ ಕಾರ್ಯದರ್ಶಿಯನ್ನಾಗಿ ಪ್ರಭಾವಿ ಉತ್ತರ ಕರ್ನಾಟಕದ ಕಾಂಗ್ರೆಸ್ ಧುರೀಣರಾಗಿದ್ದ ಹಳ್ಳಿಕೇರಿ ಗುದ್ಲಪ್ಪ ಅವರನ್ನು ನೇಮಿಸಿ ಪಕ್ಷದೊಳಗಿನ ಟೀಕಾಕಾರರ ಬಾಯಿ ಮುಚ್ಚಿದರು. ಈ ನೇಮಕ ಅವರ ದೂರದರ್ಶಿತ್ವ ಹಾಗೂ ಮುತ್ಸದ್ದಿತನದ ಪ್ರತೀಕವಾಗಿತ್ತು. ಎಸ್. ನಿಜಲಿಂಗಪ್ಪನವರು, ಕನ್ನಡ ಪ್ರದೇಶದಲ್ಲಿ ವ್ಯಾಪಕ ಸಂಚಾರ ಕೈಗೊಂಡು ಜನರ ಸಂಪರ್ಕ ಸಾಧಿಸಿದರು. ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ, ಕರ್ನಾಟಕ ಏಕೀಕರಣ

ಚಳವಳಿಯ ಮುಂಚೂಣಿಯಲ್ಲಿತ್ತು. ಎಸ್. ನಿಜಲಿಂಗಪ್ಪ ಅದರ ನಾಯಕರಾಗಿದ್ದರು.[೬]

**ದಾವಣಗೆರೆಯಲ್ಲಿ ಏಕೀಕರಣ ಸಭೆ**

ದಾವಣಗೆರೆಯಲ್ಲಿ ೧೯೪೬ ಆಗಸ್ಟ್ ೩೧ ರಂದು ನಡೆದ ಕರ್ನಾಟಕದ ಏಕೀಕರಣ ಸಭೆಯು ಅತ್ಯಂತ ಮಹತ್ವದ ರಾಜಕೀಯ ಘಟನೆ ಘಟಿಸಿದ ದಿನವಾಗಿತ್ತು. ಈ ಅಧಿವೇಶನವನ್ನು ಎಸ್. ನಿಜಲಿಂಗಪ್ಪನವರು ಏರ್ಪಡಿಸಿದ್ದರು. ಇದರ ಕಾರ್ಯದರ್ಶಿಗಳಾಗಿ ಪಾಟೀಲ ಪುಟ್ಟಪ್ಪನವರು ಇದ್ದರು. ಸ್ವಾಗತಾಧ್ಯಕ್ಷರಾಗಿದ್ದವರು ಉರುವಕೊಂಡ ಚನ್ನಬಸವಸ್ವಾಮಿಗಳು. ಕರ್ನಾಟಕದಲ್ಲಿ ನಡೆದ ಏಕೀಕರಣ ಸಭೆಯಲ್ಲಿ ದಾವಣಗೆರೆ ಸಭೆ ದೊಡ್ಡದಾಗಿತ್ತು. ಇದಕ್ಕೆ ಅಖಿಲ ಕರ್ನಾಟಕದ ಮಟ್ಟದ ಸದಸ್ಯರುಗಳು ಭಾಗವಹಿಸಿದ್ದರು. ಬಾಂಬೆ ಪ್ರಾಂತ್ಯದ ಕೃಷಿ ಮಂತ್ರಿಗಳಾದ ಪಾಟೀಲ ಮಲ್ಲನಗೌಡರು ಇದರ ಅಧ್ಯಕ್ಷತೆ ವಹಿಸಿದ್ದರು. ಮದ್ರಾಸ್ ಪ್ರಾಂತ್ಯದ ಕಂದಾಯ ಮಂತ್ರಿಗಳಾಗಿದ್ದ ಕೆ.ಆರ್. ಕಾರಂತರು ಉದ್ಘಾಟಿಸಿದರು. ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿ ಕರ್ನಾಟಕ ಏಕೀಕರಣ ಸಂಘ ಮುಂತಾದ ಸಂಘ ಸಂಸ್ಥೆಗಳ ಸದಸ್ಯರು, ಇದರಲ್ಲಿ ಭಾಗವಹಿಸಿದ್ದರು.[೭] ಬೊಂಬಾಯಿ, ಮದ್ರಾಸ್, ಹೈದರಾಬಾದ ಮತ್ತು ಮೈಸೂರಿನ ಶಾಸನ ಸಭೆಗಳ ಸದಸ್ಯರು ಜೊತೆಗೆ ಕರ್ನಾಟಕದ ಪ್ರಮುಖ ನಗರ ಸಭೆಗಳ ಮತ್ತು ಸ್ಥಳೀಯ ಸಂಸ್ಥೆಗಳ ಅಧ್ಯಕ್ಷರು ಹಾಗೂ ಸಾವಿರಾರು ಪದಾಧಿಕಾರಿಗಳು ಭಾಗವಹಿಸಿದ್ದರು. ದಾವಣಗೆರೆಯಲ್ಲಿ ನಡೆದ ಈ ಮಹಾಸಭೆಯು ಅಖಂಡ ಕರ್ನಾಟಕದ ಪ್ರಾತಿನಿಧಿಕ ಸಭೆಯಾಗಿತ್ತು ಎಂಬುದು ಗಮನಾರ್ಹ. ಕಾರ್ಯದರ್ಶಿಯಾಗಿದ್ದ ಪಾಟೀಲ ಪುಟ್ಟಪ್ಪನವರೇ ಹೇಳುವಂತೆ ಸಮಗ್ರ ಕರ್ನಾಟಕವನ್ನು ಒಂದು ಮಾಡಬೇಕೆನ್ನುವ ಮೊಟ್ಟಮೊದಲ ವಿಚಾರಬಂದಿತ್ತು. ಬ್ರಿಟಿಷರು ಭಾರತವನ್ನು ಬಿಟ್ಟು ಖಚಿತವಾಗಿ ಹೋಗುತ್ತಾರೆ ಎಂಬ ವಿಚಾರ ತಿಳಿದ ನಂತರ ಮಹಾರಾಜರು ಹೋಗಲಿ ಎನ್ನುವ ವಿಚಾರವು ಬಂದಿತು. ಏಕೆಂದರೆ ೧೯೪೬ರ ವೇಳೆಗಾಗಲೇ ಹೈದ್ರಾಬಾದ ಪ್ರಾಂತ್ಯ ಮತ್ತು ಬೊಂಬಾಯಿ ಪ್ರಾಂತ್ಯಗಳಲ್ಲಿ ಪ್ರಜಾಪ್ರತಿನಿಧಿಗಳಿಂದ ಕೂಡಿದ ಸರಕಾರ ರಚಿಸಲು ಎಲ್ಲಾ ರೀತಿಯ ಪ್ರಯತ್ನಗಳು ನಡೆದಿದ್ದವು. ಆದರೆ ಮೈಸೂರು ಸಂಸ್ಥಾನದಲ್ಲಿ ರಾಜ ಪ್ರಭುತ್ವವೇ ಇತ್ತು. ಹೀಗಾಗಿ ಕರ್ನಾಟಕದ ಇತರ ಪ್ರದೇಶಗಳಂತೆ ಮೈಸೂರು ಸಂಸ್ಥಾನದಲ್ಲಿಯೂ ಪ್ರಜಾಪ್ರತಿನಿಧಿಗಳಿಂದ ಕೂಡಿದ ಸರಕಾರವನ್ನು ಗಳಿಸುವುದಾಗಿತ್ತು. ಈ ಮಹಾ ಅಧಿವೇಶನವು ಅಖಿಲ ಕನ್ನಡಿಗರ ಪ್ರಥಮ ಮಹಾಅಧಿವೇಶನವಾಗಿತ್ತು[೮] ಎಂದಿದ್ದಾರೆ.

ಸಮಗ್ರ ಕರ್ನಾಟಕವೇ ಕನ್ನಡ ನಾಡೆಂದು ಹೇಳುತ್ತಿದ್ದ ಅಖಿಲ ಕರ್ನಾಟಕ ಏಕೀಕರಣ ಸಂಘದವರು ಈ ಮಹಾಪರಿಷತ್ತನ್ನು ಸೇರಿದ್ದು ಸಮಯೋಚಿತವಾಗಿತ್ತು. ಪ್ರಜಾಪ್ರಭುತ್ವದ ಯಶಸ್ಸು ಬಹುಮಟ್ಟಿಗೆ ಭಾಷಾವಾರು ಪ್ರಾಂತ್ಯ ರಚನೆಯನ್ನು ಒಳಗೊಂಡಿದೆ. ಆಡಳಿತದ ಎಲ್ಲಾ ಕಾರ್ಯ ಚಟುವಟಿಕೆಗಳಲ್ಲಿಯೂ ಜನತೆ ಭಾಗ ವಹಿಸಬೇಕಾದರೆ ಭಾಷಾವಾರು ಪ್ರಾಂತ್ಯಗಳ ರಚನೆ ಅನಿವಾರ್ಯವಾಗಿತ್ತು. ಈ ಚಳವಳಿಯ ವಿಚಾರದಲ್ಲಿ ದೇಶೀಯ ಸಂಸ್ಥಾನದ ಪ್ರಜೆಗಳು, ಬ್ರಿಟಿಷ್ ಆಡಳಿತಕ್ಕೊಳಪಟ್ಟ ಪ್ರಜೆಗಳು ಎಂದು, ಹೀಗೆ ಎರಡು ಭಾಗ ಮಾಡಿ ನೋಡುವುದು ಸಮಂಜಸವಾಗಿಲ್ಲ ಎಂಬುದಾಯಿತು. ಹಾಗಾಗಿ ಇನ್ನು ಮುಂದೆ ಮೈಸೂರು ಸಂಸ್ಥಾನದಿಂದ ಏಕೀಕರಣ ಚಳವಳಿಗೆ ವಿರೋಧವಿದೆ ಎಂಬ ಭಾವನೆ ದಾವಣಗೆರೆ ಅಧಿವೇಶನದಿಂದ ಸಂಪೂರ್ಣ ಬಗೆಹರಿಯಿತು.[೯]

ದಾವಣಗೆರೆಯ ೧೯೪೬ರ ಏಕೀಕರಣ ಸಮಾವೇಶವು ಆದಷ್ಟು ಬೇಗ ಕರ್ನಾಟಕದ ಏಕೀಕರಣದ ಬೇಡಿಕೆಯನ್ನು ಈಡೇರಿಸಬೇಕೆಂದು ಈ ಸಮಸ್ಯೆಯ ಬಗ್ಗೆ ಗಮನ ಸೆಳೆಯಲು, ಎಂ.ಪಿ. ಪಾಟೀಲ, ಎಸ್. ನಿಜಲಿಂಗಪ್ಪ ಹಾಗೂ ಕೆ.ಬಿ. ಜಿನರಾಜ ಹೆಗ್ಗಡೆ ಇವರನ್ನೊಳಗೊಂಡ ಮೂರು ಮಂದಿ ಸಮಿತಿಯನ್ನು ನೇಮಕ ಮಾಡಲಾಯಿತು. ನೂರಾರು ಸಂಖ್ಯೆಯಲ್ಲಿ ಮೈಸೂರು ಸಂಸ್ಥಾನದ ಸದಸ್ಯರು ಸಮಾವೇಶದಲ್ಲಿ ಭಾಗವಹಿಸಿದ್ದರು. ಏಕೀಕರಣದ ಬೇಡಿಕೆಗೆ ಮೈಸೂರು ಕಾಂಗ್ರೆಸ್ ತನ್ನ ಬೆಂಬಲ ಸೂಚಿಸಿತು. ಜವಾಬ್ದಾರಿ ಸರಕಾರಕ್ಕಾಗಿ ಮೈಸೂರಿನವರು ಸಲ್ಲಿಸಿದ್ದ ಈ ಬೇಡಿಕೆಯು ಇನ್ನೂ ಈಡೇರಿರಲಿಲ್ಲ. ಜವಾಬ್ದಾರಿ ಸರಕಾರ ರಚನೆಯಾಗುವುದೆಂಬ ಆಶಯದಿಂದ ಪ್ರಾಯಶಃ ಮೈಸೂರಿಗರು ಸಮಾವೇಶಕ್ಕೆ ಬೆಂಬಲ ಸೂಚಿಸಿದ್ದರು. ಏಕೆಂದರೆ ಕರ್ನಾಟಕದಲ್ಲಿ ಮೈಸೂರು ಸಂಸ್ಥಾನವನ್ನು ಬಿಟ್ಟು ಕರ್ನಾಟಕ ಏಕೀಕರಣ ನಿರ್ಮಾಣ ಮಾಡುವುದು ಸರಿಯಲ್ಲ; ಮದ್ರಾಸ್, ಬಾಂಬೆ ಪ್ರಾಂತ್ಯಗಳಲ್ಲಿ ಮಂತ್ರಿಮಂಡಲಗಳು ಯಾವ ಗೌರ್ನರರ ಅಡ್ಡಿ ಆಂತಕಗಳಿಲ್ಲದೇ ಜನರ ಸೇವೆಮಾಡುತ್ತವೆ. ಸ್ವಾತಂತ್ರ್ಯವನ್ನು ಪಡೆದಿರುವ ಬ್ರಿಟಿಷ್ ಕರ್ನಾಟಕದ ಜನರು, ಪ್ರಜಾಸ್ವಾತಂತ್ರ್ಯವಿಲ್ಲದ ಮೈಸೂರಿನಲ್ಲಿ ಸೇರುವುದು ಹೇಗೆ ಎಂಬ ಪ್ರಶ್ನೆ ಹುಟ್ಟಿತು. ಆದರೆ ಈ ಸಭೆ ಬ್ರಿಟಿಷ್ ಕರ್ನಾಟಕ ಪ್ರಾಂತ್ಯದ ಏಕೀಕರಣದ ಬಗ್ಗೆ ಮಾತ್ರ ನಿರ್ಣಯ ಅಂಗೀಕರಿಸಿದಾಗ ಮೈಸೂರಿಗರು ಆಕ್ರೋಶಗೊಂಡರು. ಈ ಆಕ್ರೋಶವು ಮೈಸೂರನ್ನು ಏಕೀಕರಣವಾಗಬೇಕಾದ ಪ್ರಾಂತ್ಯಕ್ಕೆ ಸೇರಿಸಲಿಲ್ಲ ಎಂಬ ಕಾರಣಕ್ಕಿಂತ, ದೇಶಿಯ ಸಂಸ್ಥಾನಗಳು ಜವಾಬ್ದಾರಿ ಸರಕಾರ ಪಡೆದುಕೊಂಡ ನಂತರ ಸೇರಿಸಿಕೊಳ್ಳಬಹುದು ಎಂದು ತೆಗೆದುಕೊಂಡ ನಿರ್ಣಯದಿಂದಾಗಿ ಉಂಟಾದದ್ದು ಎನ್ನಿಸುತ್ತದೆ. ಈ ಸಭೆಯಲ್ಲಿ ಹಾಜರಿದ್ದ ಕೆಂಗಲ್ ಹನುಮಂತಯ್ಯ ಮತ್ತು ಎಚ್.ಸಿ. ದಾಸಪ್ಪನವರು ಈ ನಿಯಮವನ್ನು ಒಪ್ಪಿಕೊಂಡರೆ ಮತ್ತೆ ಮೈಸೂರಿಗರು ರಾಜರ ನಿರಂಕುಶ ಆಡಳಿತದಲ್ಲಿ ಉಳಿಯಬೇಕಾಗುತ್ತದೆ; ಹಾಗೂ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯವರು ಮೈಸೂರಿಗರ ಹೋರಾಟಕ್ಕೆ ಬೆಂಬಲ ಕೊಡುವುದಿಲ್ಲವೇನೋ ಎಂದು ಶಂಕಿಸಿ ಈ ನಿಯಮದ ವಿರುದ್ಧ ಪ್ರತಿಭಟಿಸಿದರು - ಎಂಬುದಾಗಿ ಎಸ್. ಚಂದ್ರಶೇಖರ್ ವಿಶ್ಲೇಷಿಸಿದ್ದಾರೆ.[೧೦]

ಆದರೂ ಮೈಸೂರು ಮತ್ತು ಬ್ರಿಟಿಷ್ ಕರ್ನಾಟಕಗಳ ಏಕೀಕರಣಗಳಿಂದ ಎರಡೂ ಭಾಗಗಳಿಗೆ ಅನುಕೂಲವಾಗುತ್ತದೆ ಎಂಬ ಅಭಿಪ್ರಾಯವಿತ್ತು.

೧೯೪೬ ಸೆಪ್ಟೆಂಬರ್ ೩ ರಂದು ಆರ್.ಆರ್. ದಿವಾಕರ ಅವರು ಪತ್ರಿಕಾವರದಿಯಲ್ಲಿ ಕೆಲವು ಮಹತ್ವದ ಪ್ರಕಟಣೆ ನೀಡಿದರು. ಅದೇನೆಂದರೆ, "ಒಂದೇ ಭಾಷೆಯ ಬ್ರಿಟಿಷ್ ಪ್ರಾಂತ್ಯದ ಮತ್ತು ಸಂಸ್ಥಾನದ ಪ್ರಜೆಗಳು ಒತ್ತಟ್ಟಿಗೆ ಸೇರಿ ತಮ್ಮ ಪ್ರಾಂತ್ಯಕ್ಕೆ ಒಂದೇ ಆಡಳಿತದ ಬೇಡಿಕೆಯನ್ನು ಮಂಡಿಸಿದ ಈ ಮಹಾಸಭೆಯು ಇಡೀ ಭಾರತದಲ್ಲಿಯೇ ಮಹತ್ವದಾಗಿದೆ" ಎಂದಿತ್ತು. ಬ್ರಿಟಿಷ್ ಕರ್ನಾಟಕದಿಂದ ಮುಂಬೈ-ಮದ್ರಾಸ್, ಕೊಡಗುಗಳ ಶಾಸನ ಸಭೆಗಳಿಗೆ ಪ್ರತಿನಿಧಿಗಳಾಗಿದ್ದವರೇ ಈ ಮಹಾಸಭೆಗೂ ಪ್ರತಿನಿಧಿಗಳಾಗಿದ್ದಾರೆ. ಕರ್ನಾಟಕದ ಸಂಸ್ಥಾನಗಳ ಶಾಸನ ಸಭೆಗಳ ಸದಸ್ಯರಾಗಿದ್ದವರು ಈ ಮಹಾಸಭೆಗೆ ಪ್ರತಿನಿಧಿಗಳಾಗಿ ಬಂದಿದ್ದರು. ಹೀಗಾಗಿ "**ಅಖಂಡ ಕರ್ನಾಟಕದ**" ಪ್ರಾತಿನಿಧಿಕ ವಿಧಿ ವಿಧಾನಗಳಿಂದಲೇ ದಾವಣಗೆರೆ ಪರಿಷತ್ತು ಪ್ರಾರಂಭವಾಯಿತು. ದಾವಣಗೆರೆಯ ಮಹಾಅಧಿವೇಶನದಲ್ಲಿ ದೇಶೀಯ ಸಂಸ್ಥಾನ ಪ್ರದೇಶಗಳಿಗೆ ಸಂಬಂಧಪಟ್ಟ ನಿರ್ಣಯವೊಂದು ಅಂಗೀಕೃತವಾಯಿತು.[೧೧] ಇದು 'ಅಖಂಡ ಕರ್ನಾಟಕ' ಸ್ಥಾಪನೆಯ ಹಿತದೃಷ್ಟಿಯಿಂದ ಹಾಗೂ ಬ್ರಿಟಿಷ್ ಕರ್ನಾಟಕ ಎಂಬ ಭಿನ್ನತೆಗಳನ್ನು ಅಳಿಸಿ ಹಾಕುವುದರ ಹಿನ್ನೆಲೆಯಲ್ಲಿ ತೆಗೆದುಕೊಳ್ಳಲಾದ ನಿರ್ಣಯವಾಗಿತ್ತು. ಬ್ರಿಟಿಷ್ ಕರ್ನಾಟಕದ ವಿಭಾಗಗಳನ್ನು ಮೊದಲು ಒಂದೆಡೆ ಸೇರಿಸಿ ಕರ್ನಾಟಕ ಪ್ರಾಂತ್ಯವನ್ನು ನಿರ್ಮಿಸುವುದಕ್ಕೆ ಆತಂಕವುಂಟಾಗದಂತೆ ಬ್ರಿಟಿಷ್ ಕರ್ನಾಟಕ, ಸಂಸ್ಥಾನದ ಕರ್ನಾಟಕದ ಭಿನ್ನತೆಯನ್ನು ಎಣಿಸದೆ ಎಲ್ಲರೂ ಕರ್ನಾಟಕದಲ್ಲಿ ಒಂದೇ ಆಡಳಿತವುಳ್ಳ ಸರ್ಕಾರ ರಚಿಸುವುದು ಅಖಂಡ ಕರ್ನಾಟಕದ ಹಿತದೃಷ್ಟಿಯಿಂದ ಒಳ್ಳೆಯದೆಂದು, ಈ ಅಖಿಲ ಕರ್ನಾಟಕದ ಪ್ರತಿನಿಧಿಗಳ ಪರಿಷತ್ತು ವಿವೇಚಿಸಿತು. ಭಾಷಾವಾರು ಪ್ರಾಂತ್ಯ ರಚನೆಯ ವಿಷಯವನ್ನು ಮಹತ್ವದ ವಿಷಯವೆಂದು ಕರ್ನಾಟಕ ಏಕೀಕರಣ ಸಮಿತಿಯವರು ತಿಳಿದು ಕರ್ನಾಟಕ ಏಕೀಕರಣ ಕಾರ್ಯವು ಬೇಗನೆ ಮುಗಿಯಬೇಕೆಂದು ಈ ಮೂಲಕ ಪರಿಷತ್ತು ಸೂಚಿಸಿತು. ಈ ಏಕೀಕರಣ ಸಮಿತಿಗೆ ಬ್ರಿಟಿಷ್ ಭಾರತದಿಂದ ಆಯ್ಕೆಯಾದ ಪ್ರತಿನಿಧಿಗಳೇ ಇರುವುದರಿಂದ ಸಂಸ್ಥಾನಗಳಿಂದಲೂ ಚುನಾಯಿಸಲ್ಪಟ್ಟ ಪ್ರತಿನಿಧಿಗಳನ್ನು ಕಳುಹಿಸಬೇಕೆಂದು ಈ ಮಹಾ ಅಧಿವೇಶನದಲ್ಲಿ ತಿಳಿಸಲಾಯಿತು.[೧೨]

೧೯೪೮ರ ಡಿಸೆಂಬರ್‌ನಲ್ಲಿ ಜೈಪುರದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನಕ್ಕೆ ಭಾಷಾವಾರು ಪ್ರಾಂತ್ಯಗಳನ್ನು ಪ್ರತಿನಿಧಿಸುತ್ತಿದ್ದ ಡಾ. ಪಟ್ಟಾಭಿ ಸೀತಾರಾಮಯ್ಯನವರು ಅಧ್ಯಕ್ಷರಾದರು. ಅವರು ರಚಿಸಿದ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಮತ್ತು ಪಾರ್ಲಿಮೆಂಟರಿ ಬೋರ್ಡಿನಲ್ಲಿ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದ ಎಸ್. ನಿಜಲಿಂಗಪ್ಪನವರನ್ನು ಸದಸ್ಯರನ್ನಾಗಿ ಸೇರಿಸಿಕೊಂಡಿದ್ದರು. ಭಾಷಾವಾರು ಪ್ರಾಂತ್ಯದ ಬಗ್ಗೆ ನೆಹರೂ, ಪಟೇಲ್ ಮತ್ತು ಪಟ್ಟಾಭಿ ಸೀತಾರಾಮಯ್ಯನವರು ಒಂದು ವರದಿಯನ್ನು ನೀಡುತ್ತಾ ಅದರಲ್ಲಿ ಭಾಷಾವಾರು ಪ್ರಾಂತ್ಯ ರಚನೆಯಾಗಬೇಕಾದರೆ ದೇಶೀಯ ಸಂಸ್ಥಾನಗಳು ಆ ಪ್ರಾಂತ್ಯಗಳಲ್ಲಿ ವಿಲೀನವಾಗತಕ್ಕದ್ದು; ದೇಶೀಯ ಸಂಸ್ಥಾನಗಳು ವಿಲೀನವಾಗದೇ ಭಾಷಾವಾರು ಪ್ರಾಂತ್ಯ ರಚನೆ ಸಾಧ್ಯವಿಲ್ಲ ಎಂಬ ವಿಚಾರವನ್ನು ಪ್ರತಿಪಾದಿಸಿದರು. ಮೈಸೂರು ಸಂಸ್ಥಾನವು ಕರ್ನಾಟಕದಲ್ಲಿ ದೇಶೀಯ ಸಂಸ್ಥಾನವಾಗಿ ಪ್ರತ್ಯೇಕ ಆಡಳಿತ ಹೊಂದಿ ಒಡೆಯರ ಅಧೀನದಲ್ಲಿರುವುದರಿಂದ, ಅದು ವಿಲೀನವಾಗದ ಹೊರತು ಕರ್ನಾಟಕ ಏಕೀಕರಣ ಸಾಧ್ಯವಿಲ್ಲ ಎಂಬುದನ್ನು ಎಸ್. ನಿಜಲಿಂಗಪ್ಪನವರು ಚೆನ್ನಾಗಿ ಅರ್ಥಮಾಡಿಕೊಂಡಿದ್ದರು.

ಮೈಸೂರು ಸಂಸ್ಥಾನದಲ್ಲಿ ಕರ್ನಾಟಕ ಏಕೀಕರಣಕ್ಕೆ ಇದ್ದ ವಿರೋಧವನ್ನು ಕಡೆಗಣಿಸಿ ಏಕೀಕರಣ ಪರವಾದ ಜನಜಾಗೃತಿಯನ್ನು ಮಾಡುವುದು ಅನಿವಾರ್ಯವಾಯಿತು. ಏಕೀಕರಣ ಪರವಾಗಿದ್ದ ಮುಖಂಡರೆಲ್ಲ ಎಸ್. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಇದನ್ನು ಸಾಧಿಸಬೇಕಾದರೆ ಯುವಕರ ಬೆಂಬಲ ಅಗತ್ಯವೆಂದು ಮನಗಂಡರು. ಕರ್ನಾಟಕ ಯುವಕ ಪರಿಷತ್ತಿನ ಆಶ್ರಯದಲ್ಲಿ ಕರ್ನಾಟಕ ಏಕೀಕರಣ ಸಮಾವೇಶವನ್ನು ನಡೆಸಲಾಯಿತು. ಅವುಗಳಲ್ಲಿ ದಾವಣಗೆರೆಯಲ್ಲಿ ನಡೆದ ಯುವ ಅಧಿವೇಶನಗಳು ಕರ್ನಾಟಕ ಏಕೀಕರಣದ ದೃಷ್ಟಿಯಿಂದ ಮಹತ್ವದ ಪರಿಣಾಮ ಬೀರಿದ್ದವು.

**ಕರ್ನಾಟಕ ಯುವ ಅಧಿವೇಶನಗಳು**

ದಾವಣಗೆರೆಯಲ್ಲಿ 'ಅಖಿಲ ಕರ್ನಾಟಕ ಯುವಕ ಅಧಿವೇಶನ'ವನ್ನು ೧೯೪೮ರಲ್ಲಿ ಕೆ. ವೀರಭದ್ರಪ್ಪನವರು ಸಂಘಟಿಸಿದ್ದರು. ಈ ಅಧಿವೇಶನದಲ್ಲಿ ಸಂಸ್ಥಾನಗಳ ಮತ್ತು ಬ್ರಿಟಿಷ್ ಕರ್ನಾಟಕದ ಯುವಕರು ಅಧಿಕ ಸಂಖ್ಯೆಯಲ್ಲಿ ಸೇರಿದ್ದರು. ಈ ಅಧಿವೇಶನವು ಪಕ್ಷಾತೀತವಾಗಿತ್ತು. ಕೇವಲ ಕಾಂಗ್ರೆಸ್ ಪಕ್ಷವಲ್ಲದೆ ವಿರೋಧ ಪಕ್ಷದ ಮುಖಂಡರಾದ ಜೆ. ಮಹಮದ್ ಇಮಾಂ ಸಹ ಬಂದಿದ್ದರು. ಈ ಅಧಿವೇಶನದಲ್ಲಿ ತೆಗೆದುಕೊಂಡ ಮುಖ್ಯ ನಿರ್ಧಾರಗಳಿಗೆ ಕರ್ನಾಟಕ ಏಕೀಕರಣ ಸಂಘ ಬೆಂಬಲ ವ್ಯಕ್ತಪಡಿಸಿತ್ತು. ಈ ಅಧಿವೇಶನದ ಮುಖ್ಯ ಉದ್ದೇಶವೇ ಏಕೀಕೃತ ಕರ್ನಾಟಕದ ಸ್ಥಾಪನೆಯಾಗಿತ್ತು.[೧೩]

ಕರ್ನಾಟಕ ಯುವಕ ಸಂಘವು ದಾವಣಗೆರೆಯಲ್ಲಿ ೧೯೪೯ರ ಜುಲೈ ೭ ಮತ್ತು ೮ ರಂದು ಮೂರನೇ ಕರ್ನಾಟಕ ಯುವಕ ಅಧಿವೇಶನವನ್ನು ಏರ್ಪಡಿಸಿತು. ಇದನ್ನು ಸಹ ಪುರಸಭಾ ಉಪಾಧ್ಯಕ್ಷರಾಗಿದ್ದ ಕೆ. ವೀರಭದ್ರಪ್ಪನವರು ಸಂಘಟಿಸಿದರು. ಈ ಅಧಿವೇಶನವನ್ನು ನೇತಾಜಿ ಸುಭಾಷ್‌ಚಂದ್ರ ಬೋಸರ ಅಣ್ಣಂದಿರಾದ ಶರತ್‌ಚಂದ್ರಬೋಸರು ಉದ್ಘಾಟಿಸಿದರು. ಹಾಸನದ ವಕೀಲರು ಮತ್ತು ಯುವಜನ ಮುಂದಾಳು ಕೆ.ಎನ್. ರುದ್ರಪ್ಪನವರು

ಅಧ್ಯಕ್ಷತೆವಹಿಸಿದ್ದರು. ಕರ್ನಾಟಕ ಏಕೀಕರಣ ಸಮಸ್ಯೆಯನ್ನು ರಾಷ್ಟ್ರೀಯ ಸಮಸ್ಯೆ ಎಂಬಂತೆ ರಾಷ್ಟ್ರದ ಗಮನಸೆಳೆಯುವಲ್ಲಿ ಅದು ಯಶಸ್ವಿಯಾಗಿತ್ತು. ೧೯೪೯ರಲ್ಲಿಯೂ ಅದರ ಮುಖ್ಯ ಉದ್ದೇಶವು ಕರ್ನಾಟಕ ಏಕೀಕರಣವಾಗುವುದೇ ಆಗಿತ್ತು. ಸಾವಿರಾರು ಪ್ರತಿನಿಧಿಗಳು ಸಂಸ್ಥಾನಗಳಿಂದ ಮತ್ತು ಬ್ರಿಟಿಷ್ ಕರ್ನಾಟಕದ ಭಾಗದಿಂದ ಬಂದಿದ್ದರು. ಈ ಅಧಿವೇಶನದಲ್ಲಿ ಶರತ್‌ಚಂದ್ರ ಬೋಸ್ ಮಾತನಾಡುತ್ತಾ ಈ ಅಧಿವೇಶನವು "ಕಾಂಗ್ರೆಸ್‌ಪರವಾದುದಲ್ಲ, ಇದು ಕರ್ನಾಟಕ ಏಕೀಕರಣ ಪರವಾದುದು" ಎಂದು ಹೇಳಿದರು. ಹಾಗೆಯೇ ಅವರು ದಕ್ಷಿಣ ಭಾರತವು ಜಯಪ್ರಕಾಶ್ ನಾರಾಯಣರ ವಿಚಾರವಾದಗಳಿಂದ ಪ್ರಭಾವಿತವಾಗಿದೆ. ಅವರ ನಿಲುವುಗಳು ಸಹ ಭಾಷಾವಾರು ಪ್ರಾಂತ್ಯದ ರಚನೆಯ ಪರವಾಗಿವೆ ಎಂದು ಹೇಳಿದರು.[೧೪] ಅಧಿವೇಶನದಲ್ಲಿ ಪ್ರಮುಖ ಕಾಂಗ್ರೆಸ್ ನಾಯಕರಾದ ಶಿವಮೊಗ್ಗದ ಎಸ್.ಬಿ. ಕೃಷ್ಣಮೂರ್ತಿ, ಎಸ್. ನಿಜಲಿಂಗಪ್ಪ ಮತ್ತು ಕೆ.ಆರ್. ಕಾರಂತರು, ಉರುವಕೊಂಡ ಚನ್ನಬಸವಸ್ವಾಮಿಗಳು ಎನ್. ಕೃಷ್ಣರಾವ್, ದಾವಣಗೆರೆಯ ಎಚ್. ಶಿವಾನಂದ ಸ್ವಾಮಿ, ಶಿವಮೊಗ್ಗದ ಸಮಾಜವಾದಿ ಶಾಂತವೇರಿ ಗೋಪಾಲಗೌಡರು, ಕಾಂಗ್ರೆಸ್ ಯುವ ಮುಂದಾಳುವಾದ ಹಾರ್ನಳ್ಳಿರಾಮಸ್ವಾಮಿ, ಜಿ.ಎಂ. ಜವಳಿ, ಎಚ್.ಎಸ್. ದೊರೆಸ್ವಾಮಿ, ಪಾಟೀಲ ಪುಟ್ಟಪ್ಪ, ಕೂಲಿ ಕಾರ್ಮಿಕರ ಮುಖಂಡರಾದ ರಾಮಚಂದ್ರಶೆಟ್ಟಿ ಇವರು ಭಾಗವಹಿಸಿ ಕರ್ನಾಟಕ ಏಕೀಕರಣಕ್ಕೆ ಬೆಂಬಲ ವ್ಯಕ್ತಪಡಿಸಿದರು.

ಮೈಸೂರು ಸಹಿತ ಕರ್ನಾಟಕವಾಗಬೇಕೆಂಬುದರ ಬಗ್ಗೆ ಸಮಾವೇಶದಲ್ಲಿ ಭಾಷಣ ಮಾಡಿದವರಲ್ಲಿ ಒಮ್ಮತವಿದ್ದರೂ, ಮೈಸೂರು ರಾಜರು ತುಂಬಾ ಜನಪ್ರಿಯರು. ಅವರ ಸ್ಥಾನಕ್ಕೆ ಚ್ಯುತಿಬಂದರೆ ಹಳೇ ಮೈಸೂರಿನಲ್ಲಿ ಜನರ ಪ್ರತಿಕ್ರಿಯೆ ಏನಾದೀತೆಂಬುದು ಕೆಲವರ ಆತಂಕಕ್ಕೆ ಕಾರಣವಾಯಿತು. ಖಾದ್ರಿ ಶಾಮಣ್ಣನವರು ಮೈಸೂರು ರಾಜರು ತಮ್ಮ ಅರಸೊತ್ತಿಗೆಯನ್ನು ತ್ಯಜಿಸಿ ಕರ್ನಾಟಕ ಏಕೀಕರಣಕ್ಕೆ ಅನುವು ಮಾಡಿಕೊಡಬೇಕೆಂದು ಹೇಳಿದರು. ಅದಕ್ಕೆ ವಕೀಲರು ಮತ್ತು ಶಾಸಕರಾಗಿದ್ದ ಹೊಳಲ್ಕೆರೆ ಶಿವಲಿಂಗಪ್ಪನವರು ವಿರೋಧಿಸಿದರು. ಅನಂತರ ಎಸ್. ನಿಜಲಿಂಗಪ್ಪನವರು ಮಾತನಾಡಿದ ಮೇಲೆ ಸಭೆ ಶಾಂತವಾಯಿತು. ಅದೇ ಸಭೆಯಲ್ಲಿ ಮೈಸೂರು ಸಹಿತ ಕರ್ನಾಟಕ ಏಕೀಕರಣವನ್ನು ಸಾಧಿಸಬೇಕು ಎಂದಾಯಿತು. ಇದಕ್ಕಾಗಿ ಏಕೀಕರಣದ ಪರವಾಗಿ ಜನಾಭಿಪ್ರಾಯವನ್ನು ರೂಢಿಸಲು ಯುವಕರನ್ನೊಳಗೊಂಡ ಸಮಿತಿಯನ್ನು ರಚನೆ ಮಾಡುವ ಅಧಿಕಾರವನ್ನು ಸಭೆಯ ಅಧ್ಯಕ್ಷರಾಗಿದ್ದ ಕೆ.ಎಂ. ರುದ್ರಪ್ಪನವರಿಗೆ ವಹಿಸಿಕೊಟ್ಟರು. ಮೂರನೇ ದಿನ ಸಭೆಯಲ್ಲಿ ಕನ್ನಡ ಸಂಸ್ಕೃತಿ ಬಗ್ಗೆ ಜನಜಾಗೃತಿ ಮೂಡಿಸುವ ಬಗ್ಗೆ ಹಾಗೂ ಭಾವೈಕ್ಯತೆ ಬಗ್ಗೆ ಸೂಕ್ತ ನಿರ್ಣಯಗಳನ್ನು ಕೈಗೊಳ್ಳಲಾಯಿತು. ಸಭೆಯ ತೀರ್ಮಾನದಂತೆ ಕೆ.ಎಂ. ರುದ್ರಪ್ಪನವರು ಯುವಕ ಮುಂದಾಳುಗಳ ಜೊತೆ ಸಮಾಲೋಚಿಸಿ ಅವರ ಅಧ್ಯಕ್ಷತೆಯಲ್ಲಿ ಒಂದು ಸ್ಥಾಯಿ ಸಮಿತಿಯನ್ನು ರಚಿಸಿದರು.[೧೫] ಅದಕ್ಕೆ ಕೆ. ವೀರಭದ್ರಪ್ಪನವರನ್ನು ಅಧ್ಯಕ್ಷರನ್ನಾಗಿಯೂ ಹಾರ್ನಳ್ಳಿ ರಾಮಸ್ವಾಮಿಯವರನ್ನು ಪ್ರಧಾನ ಕಾರ್ಯದರ್ಶಿಯನ್ನಾಗಿಯೂ, ಜಿ.ಎಂ. ಜವಳಿ ಅವರನ್ನು ಸಂಘಟನಾ ಕಾರ್ಯದರ್ಶಿಯನ್ನಾಗಿ ಆಯ್ಕೆ ಮಾಡಲಾಯಿತು. ಇದರೊಂದಿಗೆ ಕರ್ನಾಟಕದ ಎಲ್ಲಾ ಭಾಗಗಳ ವರ್ಚಸ್ವಿ ಯುವಮುಂದಾಳುಗಳನ್ನು ಆ ಸಮಿತಿಗೆ ಆಯ್ಕೆ ಮಾಡಿದರು.

ಇದೇ ಸಂದರ್ಭದಲ್ಲಿ ಮೈಸೂರಿನ ಜನಸಾಮಾನ್ಯರೆಲ್ಲರೂ ಸಂಯುಕ್ತ ಕರ್ನಾಟಕದ ರಚನೆಗೆ ಹಾತೊರೆಯುತ್ತಿದ್ದರು. ವಾಣಿಜ್ಯ ಪ್ರಪಂಚವಂತೂ ಯಾವಾಗಲೂ ಇದನ್ನು ಸ್ವಾಗತಿಸುತ್ತಿತ್ತು. ೧೯೪೯ ನವೆಂಬರ್ ೨ ರಂದು ದಾವಣಗೆರೆಯ ವಾಣಿಜ್ಯ ಸಂಘವು ಸಂಯುಕ್ತ ಕರ್ನಾಟಕ ಪ್ರಾಂತ್ಯದ ಚಳವಳಿಗೆ ಸಹಾಯ ಮಾಡುವುದಕ್ಕಾಗಿ ಕರ್ನಾಟಕ ಪ್ರಾಂತ್ಯದ ಕಾಂಗ್ರೆಸ್ ಸಮಿತಿಗೆ ಹತ್ತು ಲಕ್ಷ ರೂಪಾಯಿಗಳ ನಿಧಿಯನ್ನು ಕೂಡಿಸಿಕೊಡಬೇಕೆಂದು ನಿರ್ಧರಿಸಿತು. ಅವರು ಕರ್ನಾಟಕದ ಸ್ವಾತಂತ್ರ್ಯ ಸಂಗ್ರಾಮದ ಜೊತೆಗೆ ಕರ್ನಾಟಕ ಏಕೀಕರಣಕ್ಕಾಗಿ ಎಸ್. ನಿಜಲಿಂಗಪ್ಪನವರು ಚಿತ್ರದುರ್ಗವನ್ನು ಕೇಂದ್ರ ಮಾಡಿಕೊಂಡು ಹೋರಾಟ ಮಾಡುತ್ತಿದ್ದ ಪ್ರಮುಖರಾಗಿದ್ದರೆಂಬುದನ್ನು ಈಗಾಗಲೇ ವಿವರಿಸಲಾಗಿದೆ. ಅನೇಕ ವರ್ಷಗಳಿಂದಲೂ ನಡೆದು ಬಂದ ಹಾಗೂ ಸರ್ವರಿಗೂ ಸಮ್ಮತವಾಗಿದ್ದ ಕರ್ನಾಟಕ ಏಕೀಕರಣಕ್ಕೆ ಕೆಲವರಿಂದ ಉಂಟಾಗಬಹುದಾದ ತೊಂದರೆಯನ್ನು ಗಮನಿಸಿ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದ ಎಸ್. ನಿಜಲಿಂಗಪ್ಪನವರು ದಾವಣಗೆರೆಯಲ್ಲಿ ಒಂದು ಹೇಳಿಕೆ ನೀಡಿದರು. ಆ ಹೇಳಿಕೆಯಲ್ಲಿ, "ದ್ವಿ ಕರ್ನಾಟಕವನ್ನು ಸಕಾರಣವಾಗಿ ಖಂಡಿಸಿದ್ದರು. ಎರಡು ಕರ್ನಾಟಕಗಳಿರಬೇಕೆಂಬುದು ತರ್ಕಬದ್ಧವೂ ಅಲ್ಲ, ಜಾಣತನದ್ದೂ ಅಲ್ಲ, ವ್ಯವಹಾರಿಕವೂ ಅಲ್ಲ" ಎಂದು ಅವರು ಸಾರಿ ಹೇಳಿದರು. ಉತ್ತರ ಪ್ರದೇಶವೊಂದರಲ್ಲೇ ಆರು ಕೋಟಿ ಜನರಿರುವುದು ಸಾಧ್ಯವಿದ್ದ ಮೇಲೆ ಅಖಂಡ ಕರ್ನಾಟಕದಲ್ಲಿ ಸುಮಾರು ಮೂರುಕೋಟಿ ಜನರಿರುವುದು ಏಕೆ ಸರಿಯಲ್ಲವೆಂದು ಅವರು ಪ್ರಶ್ನಿಸಿದ್ದರು.

ಎಸ್. ನಿಜಲಿಂಗಪ್ಪನವರು ಮೈಸೂರು ಪ್ರಾಂತ್ಯದಲ್ಲಿ ಸಂಚರಿಸಿ ಕರ್ನಾಟಕ ಏಕೀಕರಣಕ್ಕೆ ಪರವಾಗಿದ್ದ ವಿಧಾನ ಸಭೆ, ವಿಧಾನ ಪರಿಷತ್ತು ಮತ್ತು ಮೈಸೂರು ಪ್ರಾಂತ್ಯ ಕಾಂಗ್ರೆಸ್ ಸದಸ್ಯರ ಸಹಿ ಸಂಗ್ರಹಿಸಿದರು. ನಂತರ ಎಸ್. ನಿಜಲಿಂಗಪ್ಪ, ಬಿ. ಶಿವಮೂರ್ತಿ ಶಾಸ್ತ್ರಿ, ಸಿ.ಆರ್. ಬಸಪ್ಪನವರೊಂದಿಗೆ ಮೈಸೂರು ಸರಕಾರಕ್ಕೆ ಒಂದು ಬಿನ್ನವತ್ತಳೆಯನ್ನು ಅರ್ಪಿಸಿದರು. ಅದರಲ್ಲಿ ಕರ್ನಾಟಕ ಏಕೀಕರಣಕ್ಕೆ ಸರ್ವಪಕ್ಷಗಳು ಒಂದಾಗಿ ಒಗ್ಗಟ್ಟಿನಿಂದ ಹೋರಾಡುವುದು, ಅದಕ್ಕೆ ಮೈಸೂರು ಸರಕಾರದ ಬೆಂಬಲವು ಇರಬೇಕೆಂಬುದಾಗಿತ್ತು.[೧೬]

ಎಸ್. ನಿಜಲಿಂಗಪ್ಪ, ಎ. ಭೀಮಪ್ಪನಾಯಕ, ಟಿ. ಸಿದ್ಧಲಿಂಗಯ್ಯ ಮುಂತಾದವರು ಸೇರಿ ದೆಹಲಿಗೆ ಹೋಗಿ ಕೇಂದ್ರನಾಯಕ

ರನ್ನು ನೋಡಿ ಕರ್ನಾಟಕ ಏಕೀಕರಣ ಸಮಸ್ಯೆಯನ್ನು ಪರಿಶೀಲಿಸಲು, ತೀರ್ಮಾನಿಸಿದರು. ನಂತರ ೧೯೪೮ರ ಜನವರಿಯಲ್ಲಿ ಎಸ್. ನಿಜಲಿಂಗಪ್ಪನವರ ನೇತೃತ್ವದಲ್ಲಿ ದೆಹಲಿಗೆ ತೆರಳಿದರು. ಅಲ್ಲಿ ಡಾ. ರಾಜೇಂದ್ರಪ್ರಸಾದ್ ಪಂಡಿತನೆಹರು, ಸರ್ದಾರ ವಲ್ಲಭಾಯಿ ಪಟೇಲ ಮುಂತಾದವನ್ನು ಭೇಟಿ ಮಾಡಿದರು. ಆಂಧ್ರ ಪ್ರಾಂತ್ಯದ ಜೊತೆಗೆ ಕರ್ನಾಟಕ ಪ್ರಾಂತ್ಯ ನಿರ್ಮಾಣವಾಗಬೇಕೆಂದು ಅವರನ್ನು ಎಸ್. ನಿಜಲಿಂಗಪ್ಪನವರ ನಿಯೋಗ ಒತ್ತಾಯಿಸಿತು.[೧೭] ದಾವಣಗೆರೆ, ಜಿಲ್ಲೆಯಲ್ಲಿ ಎಸ್. ನಿಜಲಿಂಗಪ್ಪನವರ ಜೊತೆಯಲ್ಲಿ ಕರ್ನಾಟಕ ಏಕೀಕರಣಕ್ಕಾಗಿ ಹೋರಾಡಿದ ಪ್ರಮುಖರಲ್ಲಿ ಹೆಚ್.ಕೆ. ಸಿದ್ದವೀರಪ್ಪ (ಮಂತ್ರಿಗಳಾಗಿದ್ದರೂ) ದಾವಣಗೆರೆಯ ಗಂಜಿ ವೀರಪ್ಪ, ಕೆ. ವೀರಭದ್ರಪ್ಪ, ಎಣ್ಣೆಕೊಪ್ಪದ ಮಲ್ಲಿಕಾರ್ಜುನಪ್ಪಗೌಡ್ರು ಪ್ರಮುಖ ಪಾತ್ರವಹಿಸಿದರು. ಅದರಲ್ಲಿ ಎಚ್. ಸಿದ್ಧವೀರಪ್ಪ ಕರ್ನಾಟಕದ ಏಕೀಕರಣಕ್ಕೋಸ್ಕರ ಅವಿರತವಾಗಿ ದುಡಿದ ವ್ಯಕ್ತಿಯಾಗಿದ್ದಾರೆ.

ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ ೧೯೪೯ರ ಜನವರಿಯಲ್ಲಿ ಹರಿಹರದ ತುಂಗಭದ್ರಾ ನದಿಯ ತೀರದಲ್ಲಿ ಎಚ್. ಸಿದ್ಧಯ್ಯನವರ ಅಧ್ಯಕ್ಷತೆಯಲ್ಲಿ ಸಭೆ ಸೇರಿತ್ತು. ಈ ಸಭೆಯಲ್ಲಿ ಮೈಸೂರು ಅರಸರ ಮುಂದಾಳತ್ವದಲ್ಲಿ ಮೈಸೂರು ಕರ್ನಾಟಕ ಪ್ರದೇಶವನ್ನು ನಿರ್ಮಿಸುವ ಆಲೋಚನೆ ಮಾಡಿದರು. ಅಂದಿನ ಮೈಸೂರು ಕಾಂಗ್ರೆಸ್ ನಾಯಕರಲ್ಲಿ ಬಿ. ಶಿವಮೂರ್ತಿಶಾಸ್ತ್ರಿಗಳು, ಟಿ. ಸುಬ್ರಹ್ಮಣ್ಯಂ, ಎಸ್. ನಿಜಲಿಂಗಪ್ಪ ಮೊದಲಾದ ನಾಯಕರು ಅದನ್ನು ಪ್ರೋತ್ಸಾಹಿಸಿದರು. ಇವರೆಲ್ಲರೂ ಸೇರಿ ಮೈಸೂರಿನ ನೇತೃತ್ವದಲ್ಲಿಯೇ ಕರ್ನಾಟಕ ರಾಜ್ಯ ರಚನೆಯಾಗಬೇಕೆಂದು ದೃಢ ನಿರ್ಧಾರ ಹೊಂದಿದ್ದರು. ಈ ಸಂದರ್ಭವನ್ನು ಪಾಟೀಲಕಲ್ಲನಗೌಡ ಹೀಗೆ ವಿವರಿಸಿದ್ದಾರೆ: ಎಸ್. ನಿಜಲಿಂಗಪ್ಪನವರು ಮೈಸೂರು ನಾಯಕರ ಮನವೊಲಿಸಲು ಸತತವಾಗಿ ಪ್ರಯತ್ನಿಸುತ್ತಿದ್ದರು. ಅವರ ಧೋರಣೆಯ ಗುರಿಯನ್ನು ಬಲವಾಗಿ ವಿರೋಧಿಸುತ್ತಿದ್ದುದು ಅಸ್ವಾಭಾವಿಕವೇನು ಆಗಿರಲಿಲ್ಲ. ಹೈದ್ರಾಬಾದಿನ ಕನ್ನಡಿಗರು ಸಹ ಅವರ ನೀತಿಗೆ ವಿರೋಧವಾಗಿದ್ದರು. ಮೈಸೂರನ್ನು ತಮ್ಮ ನಿಲುವಿಗೆ ಒಪ್ಪಿಸುವುದು ಎಸ್. ನಿಜಲಿಂಗಪ್ಪನವರಗೆ ತಾವು ತಿಳಿದು ಕೊಂಡಷ್ಟು ಸುಲಭವಾಗಿರಲಿಲ್ಲ.[೧೮] ಅಂತೇ ಅವರು "ಮೈಸೂರಿನ ಸಂಸ್ಕೃತಿಯೂ ಇತರರಿಗಿಂತಲೂ ಮೇಲ್ಮಟ್ಟದ್ದೂ, ಭಿನ್ನವಾದುದು ಆಗಿರುವುದರಿಂದ ಅದು ಪ್ರತ್ಯೇಕವಾದ ಸ್ಥಾನದಲ್ಲಿರಬೇಕು ಎಂಬುದೇ ಮೊದಲಾದ ವಿಚಾರಗಳಿಂದ ಭಿನ್ನತೆ ಹೆಚ್ಚಿತು. ಕೊಡಗು ಪ್ರದೇಶವನ್ನು ಮೈಸೂರಿನಲ್ಲಿ ಸೇರಿಸಿಕೊಳ್ಳಬಹುದೆಂದು ಹೇಳುತ್ತಿದ್ದರು. ಉತ್ತರಕನ್ನಡದಲ್ಲಿ ಅತಿ ಹೆಚ್ಚು ಜನ ಸಂಖ್ಯೆಯನ್ನು ಹೊಂದಿರುವ ಲಿಂಗಾಯತರು ಏಕೀಕರಣ ಸಾಧಿಸುವ ಮೂಲಕ, ತಮ್ಮ ಕೈಯಲ್ಲೇ ಅಖಂಡ ಕರ್ನಾಟಕ ಸೂತ್ರವನ್ನು ಕೇಂದ್ರೀಕರಿಸುವ ಪ್ರಯತ್ನದಲ್ಲಿದ್ದಾರೆಂದು ಕೆಲವರು ಆರೋಪಿಸುತ್ತಿದ್ದರು. ಆದ್ದರಿಂದ ಮೈಸೂರು ಕರ್ನಾಟಕ ಮತ್ತು ಉತ್ತರ ಕರ್ನಾಟಕಗಳೆಂಬ ಎರಡು ಪ್ರತ್ಯೇಕ ಕರ್ನಾಟಕಗಳಾಗಲೆಂದು ಕೆಲವರು ಪ್ರತಿಪಾದಿಸುತ್ತಿದ್ದರು" ಎಂದಿದ್ದಾರೆ.[೧೯] ಕರ್ನಾಟಕ ಏಕೀಕರಣ ಸಂದರ್ಭದಲ್ಲಿ ಹಲವು ಎಡರುತೊಡರುಗಳು ಬಂದರೂ ಎಸ್. ನಿಜಲಿಂಗಪ್ಪನವರು ಕೊನೆಯವರೆಗೂ ಅಖಂಡ ಕರ್ನಾಟಕ ನಿರ್ಮಿಸುವತ್ತ ತಮ್ಮ ಗಮನಹರಿಸಿದರು. ಕರ್ನಾಟಕ ಪ್ರಾಂತ್ಯ ನಿರ್ಮಾಣದ ಬೇಡಿಕೆಯನ್ನು ಕೇಂದ್ರದ ಮುಂದಿಟ್ಟು ಚರ್ಚಿಸಲು/ವರಿಷ್ಠರ ಒಂದು ನಿಯೋಗವು ೧೯೪೯ರ ಅಕ್ಟೋಬರ್‌ನಲ್ಲಿ ಕೆ.ಎಂ. ರುದ್ರಪ್ಪನವರ ನೇತೃತ್ವದಲ್ಲಿ ದೆಹಲಿಗೆ ಹೋಯಿತು. ದೆಹಲಿಯಲ್ಲಿ ವರಿಷ್ಠರನ್ನು ಕಂಡು ಮಾತುಕತೆ ನಡೆಸಿತು. ಆದರೆ ಯಾರಿಂದಲೂ ಸ್ಪಷ್ಟ ಉತ್ತರ ದೊರೆಯಲಿಲ್ಲ. ಸರ್ದಾರ ಪಟೇಲರು ಮಾತ್ರ ಕರ್ನಾಟಕ ಪ್ರಾಂತ್ಯ ನಿರ್ಮಾಣವಾಗಬೇಕಾದರೆ ಮೈಸೂರು ಸಂಸ್ಥಾನ ವಿಲೀನವಾಗಬೇಕು ಎಂದರು. ಹೀಗೆ ಎಸ್. ನಿಜಲಿಂಗಪ್ಪನವರು ಕರ್ನಾಟಕದ ಇತರ ನಾಯಕರನ್ನು ತಮ್ಮ ವಿಶ್ವಾಸಕ್ಕೆ ತೆಗೆದುಕೊಳ್ಳಲು ಅವರಿಗೂ ಜವಾಬ್ದಾರಿ ನೀಡುವ ಮೂಲಕ ಕರ್ನಾಟಕ ಏಕೀಕರಣ ಚಳವಳಿಯಲ್ಲಿ ಪ್ರಮುಖ ಪಾತ್ರವಹಿಸಿದ್ದರು.[೨೦]

**ದಾವಣಗೆರೆಯಲ್ಲಿ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಸಭೆ**

ಕರ್ನಾಟಕದ ಈ ಭಾಗದ ಜನತೆಯ ಉತ್ಸಾಹ ಹಾಗೂ ಕಟ್ಟಾ ಅಭಿಮಾನವನ್ನು ಮನಗಂಡು, ಅಂದು ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಸಭೆ ಹಾಗೂ ಕರ್ನಾಟಕ ಏಕೀಕರಣ ಮಹಾಸಮಿತಿಯ ಅಧ್ಯಕ್ಷರಾಗಿದ್ದ ಎಸ್. ನಿಜಲಿಂಗಪ್ಪನವರು ೧೯೪೯ರ ನವೆಂಬರ್ ತಿಂಗಳಲ್ಲಿ ದಾವಣಗೆರೆಯಲ್ಲಿ ಕರ್ನಾಟಕ ಪ್ರಾಂತೀಯ ಸಮಿತಿಯ ಸಭೆಯನ್ನು ಕರೆದರು. ಕರ್ನಾಟಕದ ಎಲ್ಲಾ ಭಾಗದಿಂದ ಮೈಸೂರು ಹಾಗೂ ಹೈದರಾಬಾದ ಸಂಸ್ಥಾನಸಹಿತ ಎಲ್ಲ ಜನತೆಯು ಆ ಸಭೆಯಲ್ಲಿ ಭಾಗವಹಿಸಿದ್ದರು. ಅಲ್ಲಿ ಕೆಳಕಂಡ ನಿರ್ಣಯವನ್ನು ಕೈಗೊಳ್ಳಲಾಯಿತು. ಮೈಸೂರು ಮಹಾರಾಜರನ್ನು ಸಂವಿಧಾನಾತ್ಮಕ ಮುಖ್ಯಸ್ಥರನ್ನಾಗಿ ಮಾಡಿ ಮೈಸೂರು ಪ್ರದೇಶದೊಳಗೆ ಬಾಂಬೆ ಕರ್ನಾಟಕ, ಹೈದ್ರಬಾದ ಕರ್ನಾಟಕ ಪ್ರದೇಶವನ್ನು ವಿಲೀನಗೊಳಿಸಿ. ಅಖಂಡ ಕರ್ನಾಟಕ ರಚಿಸಬೇಕೆಂದು ಈ ಸಮ್ಮೇಳನ ಒತ್ತಾಯಿಸಿತು.[೨೧]

ಕರ್ನಾಟಕ ಪ್ರಾಂತ್ಯರಚನೆಯಲ್ಲಿ ವಿಳಂಬ ಮಾಡುತ್ತಿರುವುದರಿಂದ ಕೇಂದ್ರ ಮತ್ತು ಪ್ರಾಂತ್ಯ ಶಾಸನ ಸಭೆಯ ಕನ್ನಡಿಗರು ರಾಜೀನಾಮೆ ನೀಡುವುದು ಇಲ್ಲವೇ ಪ್ರತಿಭಟಿಸಲು ನಿರ್ಧರಿಸಿದರು. ಪ್ರಾಂತ್ಯ ರಚನೆಯ ಬಗೆಗೆ ಕೇಂದ್ರ ಸರ್ಕಾರ ಘೋಷಣೆ ಮಾಡದಿದ್ದರೆ, ಅನ್ಯಮಾರ್ಗವಿಲ್ಲದೆ ರಾಜೀನಾಮೆ ನೀಡಬೇಕಾಗುತ್ತದೆ. ಅದಕ್ಕೆ ಕಾಂಗ್ರೆಸ್ ವರಿಷ್ಠ ಮಂಡಳಿ ಅನುಮತಿ ನೀಡಬೇಕೆಂದು ಗೊತ್ತುವಳಿಯು ಸ್ವೀಕೃತವಾಯಿತು. ಆ ಗೊತ್ತುವಳಿಯ ಪ್ರಕಾರ

೧೯೫೦ ಜನವರಿ ೧೪ ರಂದು ಎಸ್. ನಿಜಲಿಂಗಪ್ಪನವರು ಕಾಂಗ್ರೆಸ್ ವರಿಷ್ಠರನ್ನು ಸಂಪರ್ಕಿಸಿ ರಾಜೀನಾಮೆ ಸಲ್ಲಿಕೆಗೆ ಅನುಮತಿ ಕೇಳಿದರು. ಆಗ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದ ಡಾ. ಬಾಬುರಾಜೇಂದ್ರ ಪ್ರಸಾದರು ಕರ್ನಾಟಕದ ಬಗೆಗೆ ಯಾರಿಗೂ ಭೇದಭಾವನೆಯಿಲ್ಲವೆಂದು ತಿಳಿಸಿ ರಾಜೀನಾಮೆಗೆ ಅನುಮತಿ ನೀಡಲಿಲ್ಲ.

ಕಾಂಗ್ರೆಸ್ ಪಕ್ಷ ೧೯೫೧ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯ ತನ್ನ ಪ್ರಣಾಳಿಕೆಯಲ್ಲಿ ಭಾಷಾವಾರು ಪ್ರಾಂತ್ಯ ರಚನೆ ತನ್ನ ಮುಖ್ಯಗುರಿಗಳಲ್ಲಿ ಒಂದು ಎಂದು ಹೇಳಿಕೊಂಡು ಅಧಿಕಾರಕ್ಕೆ ಬಂದಿತು. ಆದರೆ ತನ್ನ ಭರವಸೆಯನ್ನು ಈಡೇರಿಸಲು ಯಾವುದೇ ಕ್ರಮಕೈಗೊಳ್ಳಲಿಲ್ಲ. ಇದನ್ನು ಗಮನಿಸಿ ಕರ್ನಾಟಕದಲ್ಲಿ ಕೆ.ಆರ್. ಕಾರಂತ ಅವರ ಅಧ್ಯಕ್ಷತೆಯಲ್ಲಿ **ಅಖಂಡ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತು** ಎಂಬ ಸಂಸ್ಥೆ ಸ್ಥಾಪಿತವಾಯಿತು. ಇದು ಕರ್ನಾಟಕದ ಏಕೀಕರಣ ಹೋರಾಟಕ್ಕೆ ಪುನಃ ಕರೆ ನೀಡಿತು. ಈ ಪರಿಷತ್ತಿನಲ್ಲಿದ್ದ ನಾಯಕರೆಂದರೇ ಕೆ.ಆರ್. ಕಾರಂತ, ಜಿನರಾಜ ಹೆಗ್ಗಡೆ, ಎಸ್. ನಿಜಲಿಂಗಪ್ಪ, ಅಳವಂಡಿ ಶಿವಮೂರ್ತಿಸ್ವಾಮಿ ಮುಂತಾದವರಿದ್ದಾರು.

ನಂತರ ಕಾಂಗ್ರೆಸ್ ವರಿಷ್ಠರ ಮಾತಿಗೆ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದಿಯಾಗಿ ಎಲ್ಲರ ಒಪ್ಪಿಗೆಯಿತ್ತು. ಕರ್ನಾಟಕ ರಾಜ್ಯ ರಚನೆಯನ್ನು ಪ್ರತ್ಯೇಕವೆಂದು ಪರಿಗಣಿಸದೆ ರಾಜ್ಯ ಪುನರ್‌ವಿಂಗಡಣೆಯ ಸಂದರ್ಭದಲ್ಲಿಯೇ ತೀರ್ಮಾನಿಸುವುದಾಗಿ ಪ್ರಧಾನ ಮಂತ್ರಿ ನೆಹರು ಹೇಳುತ್ತಲೇ ಇದ್ದರು. ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದ ಎಸ್. ನಿಜಲಿಂಗಪ್ಪನವರು ಸಮಯ ದೊರೆತಾಗಲೆಲ್ಲ ನೆಹರೂ ಅವರನ್ನು ಭೇಟಿಯಾಗಿ ಏಕೀಕರಣ ವಿಷಯ ಪ್ರಸ್ತಾಪಿಸುತ್ತಲೇ ಇದ್ದರು. ಎಸ್. ನಿಜಲಿಂಗಪ್ಪನವರು ೧೯೫೩ ಜೂನ್ ೧೫ ರಂದು ಅವರ ಪತ್ರಕ್ಕೆ ನೆಹರೂ ಉತ್ತರಿಸುತ್ತ "೧೯೫೩ ಸೆಪ್ಟೆಂಬರ್ ೨೦ರಲ್ಲಿ ಕರ್ನಾಟಕ ರಾಜ್ಯ ರಚನೆಯು ಸುಲಭವಾಗಿದೆ.[೨೨] ಬೇರೆ ಕಾರಣಗಳಿಂದ ಆ ಬಗ್ಗೆ ನಿರ್ಧಾರ ಕೈಗೊಳ್ಳಲು ತಡವಾಗಿದೆ. ಮೈಸೂರು ಏಕೀಕರಣಕ್ಕೆ ಯಾವ ಅಡ್ಡಿ ಆತಂಕವುಂಟಾಗಿಲ್ಲ- ಯಾವುದೇ ಪ್ರಾಂತ ರಚನೆಯನ್ನು ಪ್ರತ್ಯೇಕವಾಗಿ ನಿರ್ಧರಿಸುವ ಬದಲು ಎಲ್ಲಾ ಪ್ರಾಂತ್ಯಗಳ ಸಮಸ್ಯೆಗಳನ್ನು ಒಮ್ಮೆಗೆ ಬಗೆ ಹರಿಸುವುದು ಸೂಕ್ತವೆಂದು ವಿಶಿಷ್ಟಾಧಿಕಾರವುಳ್ಳ ಪ್ರಾಂತ್ಯ ಪುನರ್ ವಿಂಗಡಣಾ ಸಮಿತಿಯನ್ನು ಈ ವರ್ಷದ ಕೊನೆಗೆ ರಚಿಸಲಾಗುವುದೆಂದು" ತಿಳಿಸಿದರು. ಕರ್ನಾಟಕದಲ್ಲಿ ಏಕೀಕರಣಕ್ಕೆ ಧ್ವನಿ ಎತ್ತದಂತೆ ಮಾಡಲು ನೆಹರೂ ಅವರ ಪತ್ರ ಮಾತ್ರ ಯಶಸ್ವಿಯಾಗಿತ್ತು. ಕಾಂಗ್ರೆಸಿಗರ ಪೈಕಿ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಅಧ್ಯಕ್ಷರಾದ ಎಸ್. ನಿಜಲಿಂಗಪ್ಪನವರು ಮಾತ್ರ ಏಕೀಕರಣಕ್ಕೆ ಶ್ರಮಿಸುತ್ತಿದ್ದಾರೆಂದು ಭಾವಿಸುವ ಕಾಲ ಬಂದಿತೆಂದು ಕಾಂಗ್ರೆಸ್ಸೇತರ ಕೆಲವು ನಾಯಕರ ಮಾತುಗಳಿಂದ ಗ್ರಹಿಸಬಹುದಾಗಿದೆ. ಏಕೆಂದರೆ ಎಸ್. ನಿಜಲಿಂಗಪ್ಪನವರು ಕಾಂಗ್ರೆಸ್ ಪಕ್ಷದ ಮತ್ತು ವಿರೋಧ ಪಕ್ಷದ ನಾಯಕರ ಜೊತೆಯೂ ಏಕೀಕರಣ ಕುರಿತು ಚರ್ಚಿಸಿದರು. ಹಾಗೆಯೇ ಉತ್ತರ ಕರ್ನಾಟಕದ ನಾಯಕರೊಂದಿಗೂ ಸ್ವಾತಂತ್ರ್ಯ ಹೋರಾಟದ ಕಾಲಾವಧಿಯಿಂದಲೂ ಸಂಪರ್ಕ ಹೊಂದಿದ್ದರು. ಹೀಗಾಗಿ ಏಕೀಕರಣ ವೇಳೆಯಲ್ಲಿ ಸಮಗ್ರ ಕರ್ನಾಟಕವನ್ನು ಎಸ್. ನಿಜಲಿಂಗಪ್ಪನವರು ಪ್ರತಿನಿಧಿಸಿದ್ದರೆಂಬುದು ಗಮನಾರ್ಹ. ೧೯೫೩ನೇ ಅಕ್ಟೋಬರ್ ೧ ರಿಂದ ಪ್ರತ್ಯೇಕ ಆಂಧ್ರ ರಾಜ್ಯವು ಅಸ್ತಿತ್ವದಲ್ಲಿ ಬಂದುದರ ಪರಿಣಾಮವಾಗಿ ಕನ್ನಡಿಗರ ಮೇಲೆ ಪ್ರಭಾವ ಬೀರಿತು. ನಂತರ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯು 'ಉಗ್ರ ಹೋರಾಟ' ಮಾಡಲು ನಿರ್ಧರಿಸಿತು.

೧೯೫೪ರ ಮೇ ತಿಂಗಳೂ ೨೮-೨೯ರಲ್ಲಿ ದಾವಣಗೆರೆಯಲ್ಲಿ ಸರ್ವಪಕ್ಷದ ಸಮ್ಮೇಳನದಲ್ಲಿ ಸಭೆ ಸೇರಿ ಕಾಂಗ್ರೆಸ್‌ನ ನಾಯಕತ್ವದಲ್ಲಿ ಹೋರಾಡಲು ನಿರ್ಧರಿಸಿತು. ಅಷ್ಟರಲ್ಲಿ ಸ್ಥಾಪಿತವಾಗಿದ್ದ ಕೇಂದ್ರ ಸರಕಾರ ೧೯೫೩ ಡಿಸೆಂಬರ್ ೨೨ ರಂದು ರಾಜ್ಯ ಪುನರ್ವಿಂಗಡಣ ಸಮಿತಿಯನ್ನು ಸೈಯದ್ ಫಜಲ್ ಅಲಿ ಅಧ್ಯಕ್ಷತೆಯಲ್ಲಿ ತ್ರಿಸದಸ್ಯರ ಸಮಿತಿಯನ್ನು ರಚಿಸಿತು. ಈ ಸಮಿತಿಯಲ್ಲಿ ಎಚ್.ಎಸ್. ಕುಂಜ್ರು ಮತ್ತು ಕೆ.ಎಂ. ಫಣಿಕ್ಕರ್ ಸದಸ್ಯರಾಗಿ ನೇಮಕಗೊಂಡರು. ಈ ಸಮಿತಿಯೂ ಭಾರತದ ಎಲ್ಲಾ ಪ್ರಮುಖ ಸ್ಥಳಗಳಿಗೆ ಭೇಟಿ ನೀಡಿ ಸಾವಿರಾರು ಜನರನ್ನು ಸಂದರ್ಶಿಸಿ ಅವರ ಅಹವಾಲುಗಳನ್ನು ಪರಿಶೀಲಿಸಿ ೧೯೫೫ ಸೆಪ್ಟೆಂಬರ್ ೩೦ ರಂದು ತನ್ನ ವರದಿ ಸಲ್ಲಿಸಿತು. ಫಜಲ್ ಅಲಿ ಸಮಿತಿಯ ಎದುರು ಏಕಮುಖವಾದ ವರದಿ ಮಂಡಿಸಲು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದ ಎಸ್. ನಿಜಲಿಂಗಪ್ಪನವರಿಗೆ ಅಧಿಕಾರವೀಯುವ ಗೊತ್ತುವಳಿಯನ್ನು ಮಾಡಿದ್ದು, ಒಂದು ವಿಶೇಷವೆಂದೇ ಹೇಳಬೇಕು. ಈ ದೃಷ್ಟಿಯಿಂದ ೧೯೫೪ರ ದಾವಣಗೆರೆ ಸರ್ವಪಕ್ಷದ ಸಮ್ಮೇಳನ ಮಹತ್ವದ್ದಾಗಿದೆ. ಕರ್ನಾಟಕ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾದ ಎಸ್. ನಿಜಲಿಂಗಪ್ಪನವರು ಪತ್ರಿಕಾ ಪರಿಷತ್ತಿನಲ್ಲಿ ಮಾತನಾಡುತ್ತಾ ಎರಡು ಕರ್ನಾಟಕ, ಎರಡು ಆಂಧ್ರ ಮತ್ತು ಎರಡು ಮಹಾರಾಷ್ಟ್ರಗಳನ್ನು ರಚಿಸಬೇಕೆಂಬ ವಿಚಾರಕ್ಕೆ ತಾವು ವಿರುದ್ಧವಿರುವುದಾಗಿ ಸಾರಿದರು. ಆಡಳಿತದ ಸೌಕರ್ಯ ದೃಷ್ಟಿಯಿಂದ ಸಹ, ಇದು ವಿಚಾರಕ್ಕೆ ನಿಲುಕದ ಸೂಚನೆಯಾಗಿದೆ ಎಂದು ಹೇಳಿದರು.[೨೩]

ಅದೇ ವೇಳೆಯಲ್ಲಿ ಎಸ್. ನಿಜಲಿಂಗಪ್ಪನವರು ಸಂದರ್ಶನವೊಂದರಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯ ಹೀಗಿದೆ. "ಒಂದು ಕರ್ನಾಟಕ ರಚನೆಯಿಂದ ಮೈಸೂರಿನ ಅಭಿವೃದ್ಧಿಗೆ ಕುಂಠಿತವಾಗುವುದೆಂದು" ಮೈಸೂರಿನಲ್ಲಿಯೇ ಭೀತಿಗೊಂಡಿದ್ದಾರೆ. ನನಗೆ ತಿಳಿದಿರು

ವಂತೆ ಕೆಲವು ನಾಯಕರನ್ನು ಹೊರತುಪಡಿಸಿ ಉಳಿದ ಕಾಂಗ್ರೆಸಿಗರೆಲ್ಲರೂ ಕರ್ನಾಟಕ ಏಕೀಕರಣಕ್ಕೆ ಬೆಂಬಲ ವ್ಯಕ್ತಪಡಿಸಿದ್ದಾರೆ. ಇದರಿಂದ ಒಂದು ಕರ್ನಾಟಕ ರಾಜ್ಯ ರಚನೆಗೆ ಅನುಕೂಲಕರವಾಗಿದೆ. ಎರಡೂ ಪ್ರದೇಶಗಳನ್ನು ಚೆನ್ನಾಗಿ ಅರಿತುಕೊಂಡಿರುವ ನಾನು ಮೈಸೂರಿನ ತಾಂತ್ರಿಕ-ವಿಜ್ಞಾನ ಹಾಗೂ ಹೊರಗಿನ ಫಲವತ್ತಾದ ಪ್ರದೇಶವು ದೊರೆತು ಎರಡು ಪ್ರದೇಶದ ಜನರಿಗೆ ಆಡಳಿತ ದೃಷ್ಟಿಯಿಂದ ಅನುಕೂಲವಾಗುವುದು. ಮೈಸೂರಿನಲ್ಲಿಯ ವಿಚಾರವಂತ ಜನರು ಒಂದು ಕರ್ನಾಟಕ ರಾಜ್ಯ ನಿರ್ಮಾಣವು ಸರಿಯೆಂಬ ಅಭಿಪ್ರಾಯಕ್ಕೆ ಬರತೊಡಗಿದ್ದಾರೆ. ಮೈಸೂರಿನ ವರಿಷ್ಠ ಮಂಡಳಿಯು ಈ ಅಂಶವನ್ನು ಅರಿತುಕೊಳ್ಳಬೇಕಾಗಿದೆ ಎಂದು ವಿವರಿಸಿದ್ದರು.

ಮೈಸೂರಿನ ಹಿತ ದೃಷ್ಟಿಯಿಂದಲೂ ಒಂದು ಕರ್ನಾಟಕ ರಾಜ್ಯವಾಗಬೇಕೆಂದು ಹೇಳಿದರು. ಮೈಸೂರು ಪ್ರದೇಶ ಕಾಂಗ್ರೆಸ್‌ನ ಕಾರ್ಯಸಮಿತಿ ಹಾಗೂ ಸಾಧಾರಣ ಸಭೆಗಳು ಈ ಬಗ್ಗೆ ಅವಿರೋಧ ನಿರ್ಣಯ ಸ್ವೀಕರಿಸುತ್ತವೆಂದು ನಾನು ನಿರೀಕ್ಷಿಸಿದ್ದೇನೆ ಎಂದರು. ಎಸ್. ನಿಜಲಿಂಗಪ್ಪನವರು ಸ್ವಾತಂತ್ರ್ಯ ಚಳವಳಿಯ ವೇಳೆಯಲ್ಲಿ ಬಾಂಬೆ ಕರ್ನಾಟಕದ ಕಾಂಗ್ರೆಸ್‌ನೊಂದಿಗೆ ಮತ್ತು ಸ್ವಾತಂತ್ರ್ಯ ಹೋರಾಟಗಾರರೊಂದಿಗೆ ನಿಕಟಸಂಬಂಧವನ್ನು ಇಟ್ಟುಕೊಂಡಿದ್ದರು. ಸ್ವಾತಂತ್ರ್ಯ ಚಳವಳಿಯ ಪ್ರಚಾರಕ್ಕಾಗಿ ಮುಂಬೈ-ಕರ್ನಾಟಕ ಪ್ರದೇಶದಲ್ಲಿ ಅನೇಕ ಸಾರಿ ಅವರು ಸಂಚರಿಸಿ ಈ ಭಾಗದ ಕಾರ್ಯಕರ್ತರಲ್ಲಿ ಚೈತನ್ಯವನ್ನು ತುಂಬಿದ್ದರು. ಅವರು ಮುಂಬೈ ಕರ್ನಾಟಕದವರೆನ್ನುವಷ್ಟು ಉತ್ತರ ಕರ್ನಾಟಕದೊಂದಿಗೆ, ನಿಕಟಸಂಬಂಧವನ್ನು ಹೊಂದಿದ್ದರು. ಹೀಗಾಗಿ ಅವರಿಗೆ ಕರ್ನಾಟಕದ ಏಕೀಕರಣದ ಹಾದಿ ಸುಗಮವಾಗಿತ್ತು.[೨೪]

ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯೂ ೧೯೫೬ ಫೆಬ್ರವರಿ ೧೯ ರಂದು ಎಚ್.ಕೆ. ವೀರಣ್ಣಗೌಡ, ಎಚ್.ಸಿ. ದಾಸಪ್ಪ ಮತ್ತು ಎಂ.ವಿ. ಕೃಷ್ಣಪ್ಪನವರ ನೇತೃತ್ವದಲ್ಲಿ ಬೆಂಗಳೂರಿನಲ್ಲಿ ಸಭೆ ಸೇರಿ ಪುನಃ ಕರ್ನಾಟಕ ಏಕೀಕರಣವನ್ನು ವಿರೋಧಿಸಿದರು. ಕಾರಣ ಏಕೀಕರಣವಾದಲ್ಲಿ ಲಿಂಗಾಯಿತರು ರಾಜಕೀಯ ಮೇಲುಗೈ ಪಡೆಯುತ್ತಾರೆಂಬ ಭಯದಿಂದ ಏಕೀಕರಣ ಚಳವಳಿಯನ್ನೇ ವಿರೋಧಿಸಿದ ಎಂ.ವಿ. ಕೃಷ್ಣಪ್ಪನವರಂತಹ ನಾಯಕರ ನಿಷ್ಠುರ ಕಟ್ಟಿಕೊಂಡು ಕರ್ನಾಟಕ ರಾಜ್ಯ ರಚನೆಯನ್ನು ಬೆಂಬಲಿಸುವ ಮೂಲಕ ಎರಡು ಕರ್ನಾಟಕಗಳ ಬಗ್ಗೆ ಮುಖ್ಯವಾಗಿ ತಮ್ಮದೇ ಒಕ್ಕಲಿಗ ಸಮುದಾಯದಿಂದ ಬಂದಿದ್ದ ಕೂಗನ್ನು ಸಮರ್ಥವಾಗಿ ಕೆಂಗಲ್ ಹನುಮಂತಯ್ಯ ಹತ್ತಿಕ್ಕಿದರು : ಇದೇ ವೇಳೆಯಲ್ಲಿ ೧೯೫೬ ಫೆಬ್ರುವರಿ ೨೦ ರಂದು ಎಸ್. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ೨೫, ೨೬-೨೭, ೨೮ ರಂದು ದಾವಣಗೆರೆಯಲ್ಲಿ ನಡೆದ ಸಭೆಯಲ್ಲೂ ವಿರೋಧಿಸಿದರು.

ಒಟ್ಟಿನಲ್ಲಿ ಕರ್ನಾಟಕ ಏಕೀಕರಣ ಚಳವಳಿಯಲ್ಲಿ ನಡೆದ ಅನೇಕ ಮಹತ್ವದ ನಿರ್ಣಯಗಳು ದಾವಣಗೆರೆಯಲ್ಲಿ ನಡೆದ ಸಭೆ, ಸಮ್ಮೇಳನಗಳಲ್ಲಿ ಮಂಡಿಸಲ್ಪಟ್ಟಿರುವುದು ತಿಳಿಯುತ್ತದೆ. ದಾವಣಗೆರೆಯ ಜನ ಸಾಮಾನ್ಯರು, ಮುಖಂಡರು ಏಕೀಕರಣ ಚಳವಳಿಗೆ ಹೊಸ ಚೈತನ್ಯ ತುಂಬಿದರು. ಈ ಭಾಗದ ಜನರು ನಡೆಸಿದ ಆಂದೋಲನ, ಸಂಘಟನೆಗಳನ್ನು ಮುಖ್ಯ ವಿಷಯವಾಗಿ ಚರ್ಚಿಸುವ ಸಂದರ್ಭದಲ್ಲಿ, ಕರ್ನಾಟಕ ಏಕೀಕರಣ ಚಳವಳಿಯ ಇತರ ಮಹತ್ವದ ಘಟನೆಗಳೊಂದಿಗೆ ಸೇರಿಸಿ ವಿವೇಚಿಸುವ ಪ್ರಯತ್ನ ಮಾಡಲಾಗಿದೆ. ಇಂತಹ ಸ್ಥಳೀಯ ಜನರ ಹೋರಾಟದ ಫಲವಾಗಿ ಕರ್ನಾಟಕ ೧೯೫೬, ನವೆಂಬರ್ ೧ ರಂದು ಏಕೀಕೃತ ಕರ್ನಾಟಕ ವಾಯಿತು.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಎಂ.ಎಸ್. ಪುಟ್ಟಣ್ಣ., **ಚಿತ್ರದುರ್ಗದ ಪಾಳೆಯಗಾರರು**, ಪು. ೧-೯.

೨. ಬುಕಾನನ ಜರ್ನಿ ಫ್ರಂ ಮದ್ರಾಸ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು ಕೆನರಾ ಆ್ಯಂಡ್ ಮಲಬಾರ್, ಸಂಪುಟ ೩, ಪು. ೩೩೦.

೩. ಬಿ.ಎಲ್. ರೈಸ್., **ಮೈಸೂರು ಗ್ಯಾಜೆಟಿಯರ್**, ಸಂಪುಟ-೨, ಪು. ೪೮೭.

೪. ಜಿ.ಎಸ್. ಹಾಲಪ್ಪ., *ಹಿಸ್ಟರಿ ಆಫ್ ಫ್ರೀಡಂ ಮೂಮೆಂಟ್ ಇನ್ ಕರ್ನಾಟಕ*, ಪು. ೪೨೩.

೫. ಕೆ. ವೀರತಪ್ಪ, **'ಮೈಸೂರು ಸಂಸ್ಥಾನದ ಏಕೀಕರಣ ಮನೋಭೂಮಿಕೆಯ ನಿರ್ಮಾಣ' ಭಾರತದ ಸ್ವಾತಂತ್ರ್ಯ ಮತ್ತು ಕರ್ನಾಟಕ ಏಕೀಕರಣದಲ್ಲಿ ಲಿಂಗಾಯತರ ಪಾತ್ರ**, ಕಲಬುರ್ಗಿ ಎಂ.ಎಂ. (ಸಂ) ತೋಂಟದಾರ್ಯ ಮಠ, ಗದಗ, ೧೯೯೭, ಪು. ೬೧.

೬. ಎಸ್. ನಿಜಲಿಂಗಪ್ಪ ಅವರೊಡನೆ ಈ ವಿಷಯಕ್ಕೆ ಸಂಬಂಧಿಸಿದಂತೆ ದಿನಾಂಕ ೧೫-೦೧-೨೦೦೦ ರಂದು ಸಂದರ್ಶನ ಮಾಡಲಾಯಿತು. ಜೊತೆಯಲ್ಲಿ ಅವರ ಮಗ ರಾಜಶೇಖರ್ ಇದ್ದರು. ಧ್ವನಿ ಮುದ್ರಣ ಮಾಡಿಕೊಳ್ಳಲಾಯಿತು. ಕರ್ನಾಟಕ ಏಕೀಕರಣ ಕುರಿತು ಮಾತನಾಡಿದ ಅವರು ವಿಶೇಷವಾಗಿ ಕರ್ನಾಟಕ ಏಕೀಕರಣಕ್ಕಾಗಿ ಶ್ರಮಿಸಿರುವ ಎಸ್. ನಿಜಲಿಂಗಪ್ಪನವರು ಅದರ ಬಗೆಗೆ ಕಿಂಚಿತ್ತೂ 'ಅಹಂ' ಇಲ್ಲದೆ ಹೇಳಿದ ಮಾತುಗಳು ಅವರ ಸರಳತೆಗೆ ಸಾಕ್ಷಿಯಾಗಿದ್ದವು. 'ಭಾಷಾವಾರು ಪ್ರಾಂತ್ಯವಾಗಬೇಕೆಂಬುದು ಗಾಂಧೀಜಿ ಅಭಿಪ್ರಾಯವಾಗಿತ್ತು. ನಮ್ಮ ಕರ್ನಾಟಕ ಏಕೀಕರಣ ಸೇವೆ ಮಾಡಲು ಅವರೇ ನನಗೆ ಪ್ರೇರಕರು. ಗಾಂಧೀಜಿ ಸಾಧಾರಣ ಮನುಷ್ಯರಲ್ಲ. ಅವರು ನಿಜಕ್ಕೂ ಮಹಾತ್ಮ. ಅವರ ಮಾರ್ಗದರ್ಶನದಲ್ಲಿ ಹೋಗುವಂತೆ

ಆದದ್ದು ನನ್ನ ಪುಣ್ಯ. ಏಕೀಕರಣಕ್ಕಾಗಿ ಶ್ರಮಿಸಿದ್ದು ನಿಜ. ಅದಕ್ಕಾಗಿ ಹಲವಾರು ರಾಜಕಾರಣಿಗಳು, ಸಾಹಿತಿಗಳು, ಜನಸಾಮಾನ್ಯರು ಎಲ್ಲರೂ ಶ್ರಮಿಸಿದ್ದಾರೆ. ನನ್ನೊಬ್ಬನದೇ ಹೆಚ್ಚುಗಾರಿಕೆ ಎಂದು ಹೇಳಿಕೊಳ್ಳಲಾರೆ' .... ಅಂದರು.


೭. ಜಿ.ಎಸ್. ಹಾಲಪ್ಪ, ಹಿಸ್ಟರಿ ಆಫ್ ಫ್ರೀಡಂ ಮೂಮೆಂಟ್ ಇನ್ ಕರ್ನಾಟಕ, ಪು. ೪೨೨.

೮. ಎಚ್.ಎಸ್. ಗೋಪಾಲರಾವ್., ೧೯೯೬, **ಕರ್ನಾಟಕ ಏಕೀಕರಣ ಇತಿಹಾಸ**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪು. ೩೧೦.

೯. **ಕರ್ನಾಟಕ ಥ್ರೂ ದ ಏಜಸ್**, ಆರ್.ಆರ್. ದಿವಾಕರ್ (ಸಂ)., ಮೈಸೂರು ರಾಜ್ಯ ಸರಕಾರ, ಬೆಂಗಳೂರು, ೧೯೬೮, ಪು. ೯೪೮.

೧೦. ಎಸ್. ಚಂದ್ರಶೇಖರ್, **'ಮೈಸೂರು ಮತ್ತು ಏಕೀಕೃತ ಕರ್ನಾಟಕದ ರಚನೆ'** ೧೯೩೭-೧೯೫೬ **ಸಾಧನೆ**, ಸಂಪುಟ-೧೩, ಸಂಚಿಕೆ-೧, ಜನವರಿ ಮಾರ್ಚ್, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೪, ಪು. ೪೦.

೧೧. ಆರ್.ಆರ್. ದಿವಾಕರ್., ೧೯೫೬, **ಕರ್ನಾಟಕ ಏಕೀಕರಣದ ಕಥೆ**, ಹುಬ್ಬಳ್ಳಿ, ಪು. ೧೨೯.

೧೨. ಸಿ.ಆರ್. ಗೋವಿಂದರಾಜು., ೧೯೯೮, **ಕರ್ನಾಟಕದ ಏಕೀಕರಣ ಚಳವಳಿ ಮತ್ತು ಕನ್ನಡ ಸಾಹಿತ್ಯ** ಬೆಂಗಳೂರು, ಪು. ೨೦೮.

೧೩. ಜಿ.ಎಸ್. ಹಾಲಪ್ಪ, ಹಿಸ್ಟರಿ ಆಫ್ ಫ್ರೀಡಂ ಮೂಮೆಂಟ್ ಇನ್ ಕರ್ನಾಟಕ, ಸಂಪುಟ, ಪು. ೪೨೩.

೧೪. ಅದೇ ಪು. ೪೪೯-೪೫೦.

೧೫. ಕೆ.ಎಂ. ರುದ್ರಪ್ಪ, 'ಕರ್ನಾಟಕ ಏಕೀಕರಣ'., ಕಾಳೇಗೌಡನಾಗವಾರ (ಸಂ) ಜಿ.ವಿ. ಆನಂದಮೂರ್ತಿ, **ಶಾಂತವೇರಿ ಗೋಪಾಲಗೌಡ ನೆನಪಿನ ಸಂಪುಟ**, ೧೯೯೭, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೯೪-೯೬.

೧೬. ಪಾಟೀಲ ಕಲ್ಲನಗೌಡ., ೧೯೮೬, **ಕರ್ನಾಟಕ ಏಕೀಕರಣದ ಹಾದಿಯಲ್ಲಿ** ವಿವೇಕ ಪ್ರಕಾಶನ, ಹುಬ್ಬಳ್ಳಿ, ಪು. ೧೩೩.

೧೭. ಅದೇ, ಪು. ೧೩೩.

೧೮. ಅದೇ, ಪು. ೧೦೩.

೧೯. ಎಸ್. ನಿಜಲಿಂಗಪ್ಪ, **'ಕರ್ನಾಟಕ ಏಕೀಕರಣ'**, ದಿವಾಕರ್ ಆರ್.ಆರ್. (ಸಂ) **ಕರ್ನಾಟಕ ಥ್ರೂ ದ ಏಜಸ್**, ಪು. ೫೬೦.

೨೦. ಎಂ. ಜಮುನ., 'ಕರ್ನಾಟಕ ಏಕೀಕರಣ ಚಳವಳಿ', ಎಸ್. ಚಂದ್ರಶೇಖರ್ ಸಂಪುಟ ಸಂಪಾದಕರು, **ಕರ್ನಾಟಕ ಚರಿತ್ರೆ**, ಸಂಪುಟ-೭, ಪು. ೨೨೮.

೨೧. ಬಿ.ಸಿ. ಮಹಾಬಲೇಶ್ವರಪ್ಪ., ೧೯೯೭, **ಹೈದ್ರಾಬಾದ-ಕರ್ನಾಟಕದಲ್ಲಿ ರಾಜಕೀಯ ಚಳವಳಿಗಳು**, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ ಪು. ೭೭.

೨೨. ಕೆ. ರಾಘವೇಂದ್ರ ರಾವ್, 'ರಾಷ್ಟ್ರಬಂಧು ಎಸ್. ನಿಜಲಿಂಗಪ್ಪ' ಮ್ಯಾನ್ ಅಂಡ್ ಸ್ಟೇಟ್, ೨೦೦೧, ಪು. ೮೧.

೨೩. ಅದೇ, ಪು. ೮೨.

೨೪. ಎನ್.ಎ. ಪಾಟೀಲ, **'ಮುಂಬಯಿ ಕರ್ನಾಟಕ ಏಕೀಕರಣದ ಸ್ಫೂರ್ತಿಯ ಸೆಲೆ'**, ಕಲಬುರ್ಗಿ ಎಂ.ಎಂ. (ಸಂ) **ಭಾರತದ ಸ್ವಾತಂತ್ರ್ಯ ಮತ್ತು ಕರ್ನಾಟಕ ಏಕೀಕರಣದಲ್ಲಿ ಲಿಂಗಾಯತರ ಪಾತ್ರ**, ಪು. ೫೨.

೨೫. **ಲಂಕೇಶ್ ವಾರಪತ್ರಿಕೆ**, ಬೆಂಗಳೂರು, ಆಗಸ್ಟ್ ೨೩, ೨೦೦೦, ಪು. ೪.

೨೬. **ನೂತನ ಸಾಪ್ತಾಹಿಕ**, ಬೆಂಗಳೂರು, ಆಗಸ್ಟ್ ೨೦, ೨೦೦೦, ಪು. ೧೪-೧೫.

೨೭. **ನೂತನ ಸಾಪ್ತಾಹಿಕ**, ಬೆಂಗಳೂರು, ಆಗಸ್ಟ್ ೨೦, ೨೦೦೦, ಪು. ೧೪-೧೫.

೨೮. **ವಿಜಯ ಕರ್ನಾಟಕ**, ದಿನಪತ್ರಿಕೆ, ಆಗಸ್ಟ್ ೧೦, ೨೦೦೦.




**ನುಡಿಎತ್ತಿ, ಕೊರಳೆತ್ತಿ ಭಾವ ಬಾಂಧವ್ಯ ಭಾಷೆ**
**ಕಡೆದಿತ್ತು ಕರ್ನಾಟಕ ಏಕೀಕರಣವೆಂಬ ನವನೀತ**
**ನಡೆಬಿಟ್ಟು ಅಖಂಡ ಪರಿಶ್ರಮದ ಈ ಕನ್ನಡದ ಬಾಳುವೆಯ**
**ಭಿನ್ನಸ್ವರಗಳನೆ ಬಿತ್ತಿ ಒಡೆಯದಿರಲಿ ಯಾವುದೇ ಯತ್ನ**
**ಬದಲು ನಮ್ಮೆದೆಯ ಹಾಡಿರಲಿ ಸುನೀತ ಸಖಿಗೀತ**



ಡಾ. ಪಿ.ಎನ್. ನರಸಿಂಹಮೂರ್ತಿ*

# ಎರಡು ಪ್ರಮುಖ ಪ್ರಾಕ್ಚಾರಿತ್ರಿಕ ನೆಲೆಗಳ ಶೋಧ - ಒಂದು ಟಿಪ್ಪಣಿ

*ಅರಸೀಕೆರೆ ತಾ. ಬಾಣಾವರಕ್ಕೆ ೩-೪ ಕಿ.ಮೀ. ದೂರದಲ್ಲಿರುವ ರಾಮೇಶ್ವರ ದೇಗುಲದ ಬಳಿಯ ಗುಡ್ಡ ಸಾಲುಗಳಲ್ಲಿರುವ ಪ್ರಾಕ್ಚಾರಿತ್ರಿಕ ಗುಹೆಗಳ, ಹೆಬ್ಬಂಡೆ ವಾಸ್ತವ್ಯಗಳ ಶೋಧ ವಿಶೇಷವೆನಿಸಿದೆ. 'ರಾಮದೇವರ ವಿಭೂತಿಗುಡ್ಡ' ಎಂದು ಸ್ಥಳೀಯರ ಆಡಿಕೆಯಲ್ಲಿದೆ. ಇಲ್ಲಿ ಕಲ್ಗಾಸರಗಳೂ ಇವೆ. ಹೀಗೆಯೇ ಉಡುಪಿ ತಾಲೂಕಿನ ಕುರ್ಕಾಲು ಗ್ರಾಮದ ಗುಡ್ಡಪ್ರದೇಶ ಕುಂಜಾರು ಗಿರಿಯ ಕಂದಕ ಭಾಗದಲ್ಲಿ ಹೊಸಶಿಲಾಯುಗದ ಕೊಡಲಿಗಳು ಹಾಗು ಮಡಕೆಯ ಚೂರುಗಳೂ ಲಭ್ಯವಾಗಿದ್ದು ಆ ಕಾಲದ ಜನವಾಸ್ತವ್ಯದ ಸೂಚಿ ಆಗಿದೆ. ಗುಜರಾತಿನಿಂದ ಕೇರಳದವರೆಗಿನ ಪ್ರದೇಶದಲ್ಲಿ ನವಶಿಲಾಯುಗದ ಕುರುಹುಗಳು ದೊರೆತಿದ್ದರೂ, ಆ ಕಾಲದ ಜನವಾಸ್ತವ್ಯದ ಸಾಕ್ಷ್ಯವನ್ನು ಮೊಟ್ಟಮೊದಲಿಗೆ ಕುರ್ಕಾಲಿನ ಹಾಜಿಯು ತೋರಿಸಿದೆ ಎನ್ನಲಾಗಿರುವ ವಿಷಯ ಹೆಮ್ಮೆಯ ಶೋಧವೆನ್ನುವಂತಾಗಿದೆ.*

ಇತ್ತೀಚಿನ ದಿನಗಳಲ್ಲಿ ದೇಶದ ಗಮನವನ್ನು ಸೆಳೆಯಬಲ್ಲಂತಹ ಚಾರಿತ್ರಿಕ ಮತ್ತು ಪ್ರಾಕ್ಚಾರಿತ್ರಿಕ ನೆಲೆಗಳ ಶೋಧನೆ ಕರ್ನಾಟಕದಲ್ಲಿ ನಡೆದಿದೆ. ಇಲ್ಲಿಯ ಇತಿಹಾಸ ಮತ್ತು ಸಂಸ್ಕೃತಿಗೆ ಹೊಸ ಮೆರುಗನ್ನು ಕೊಡಬಲ್ಲ ಶೋಧಕಾರ್ಯಗಳನ್ನು ಈ ನಿಟ್ಟಿನಲ್ಲಿ ಅವಲೋಕಿಸಿದಾಗ ಇತ್ತೀಚೆಗೆ ಪತ್ತೆಯಾಗಿರುವ ಎರಡು ಪ್ರಾಕ್ಚಾರಿತ್ರಿಕ ನೆಲೆಗಳು ತಮ್ಮ ರೀತಿಯಲ್ಲಿ ವಿಶಿಷ್ಟತೆಯನ್ನು ಪಡೆದಿರುವ ಪ್ರಮುಖ ನೆಲೆಗಳಾಗಿವೆ. ಇವುಗಳಲ್ಲಿ ಒಂದು ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನಲ್ಲಿದ್ದರೆ ಇನ್ನೊಂದು ಉಡುಪಿ ಜಿಲ್ಲೆಯ ಉಡುಪಿ ತಾಲೂಕಿನಲ್ಲಿದೆ. ನಾನು ಕೈಗೊಂಡಿರುವ ಪ್ರಾಚೀನ ಶಾಸನಗಳ ಶೋಧಕಾರ್ಯ ಸಂದರ್ಭದಲ್ಲಿ ಪತ್ತೆಯಾದ ನೆಲೆಗಳು ಇವು. ಇವುಗಳ ಬಗ್ಗೆ ಒಂದು ಟಿಪ್ಪಣಿ ಇಲ್ಲಿದೆ.

**ರಾಮದೇವರ ವಿಭೂತಿಗುಡ್ಡ :** ಈ ಸ್ಥಳ ಹಾಸನ ಜಿಲ್ಲೆ ಅರಸೀಕೆರೆ ತಾಲೂಕಿನ ಬಾಣಾವರದಿಂದ ಪಶ್ಚಿಮಕ್ಕೆ ಸುಮಾರು ೩-೪ ಕಿ.ಮೀ. ದೂರದಲ್ಲಿದೆ. ಇಲ್ಲೊಂದು ಅತ್ಯಂತ ಪ್ರಾಚೀನವಾದ ಈಶ್ವರ ದೇವಸ್ಥಾನವಿದೆ. ಕಟ್ಟಡದ ಸ್ವರೂಪ ಮಧ್ಯಕಾಲೀನದ್ದಾದರೂ ಗರ್ಭಗುಡಿಯಲ್ಲಿನ ಶಿವಲಿಂಗ ತನ್ನ ಪ್ರಾಚೀನತೆಯನ್ನು ಸಾರುತ್ತದೆ. ಇದನ್ನು ಸ್ಥಳೀಯರು **'ರಾಮೇಶ್ವರ'** ಎಂದು ಕರೆಯುತ್ತಾರೆ. ಇದಕ್ಕೆ ಪೂಜೆ ಉತ್ಸವಾದಿಗಳೆಲ್ಲವೂ ಇವೆ. ಈ ದೇವಾಲಯಕ್ಕೆ ದಕ್ಷಿಣ, ಆಗ್ನೇಯ ಮತ್ತು ಈಶಾನ್ಯ ಭಾಗಗಳಲ್ಲಿ ಬಂಡೆಗಲ್ಲುಗಳಿಂದ ಕೂಡಿದ ಎತ್ತರವಾದ ಮೂರು ಗುಡ್ಡ ಸಾಲುಗಳಿವೆ. ಆಗ್ನೇಯ ಭಾಗದ ಗುಡ್ಡದ ಬುಡದಲ್ಲಿ (ಪೂರ್ವ ಭಾಗದಲ್ಲಿ) ಹಲವು ಗವಿಗಳಿವೆ. ಇದರಲ್ಲಿ ಎರಡು ಸಾಧಾರಣ ಗಾತ್ರದ ಬಂಡೆಗಲ್ಲುಗಳನ್ನು ಕೊರೆದು ಮಾಡಿದವು - ಒಂದರಲ್ಲಿ ವೀರಭದ್ರನಿದ್ದರೆ ಇನ್ನೊಂದರಲ್ಲಿ ಕಾರ್ತಿಕೇಯನಿದ್ದು - ಈ ಎರಡೂ ದೇವರುಗಳು ಪೂಜೆಗೊಳ್ಳುತ್ತಿವೆ. ಇವುಗಳ ಸಮೀಪ ದಕ್ಷಿಣಕ್ಕೆ ಒಂದು ಬೃಹದ್ ಬಂಡೆಯನ್ನು ಕೊರೆದು ಮಾಡಿದ್ದು, ಸ್ವಲ್ಪ ಭಾಗ ಪ್ರಾಕೃತಿಕವಾದ್ದು ವಾಸಯೋಗ್ಯ ಮಾಡಲ್ಪಟ್ಟ ಗವಿ ಇದೆ. ಇಲ್ಲಿ ಒಂದು ವೀರಶೈವ ಮಠ ಹಾಗೂ ವ್ಯವಸ್ಥಿತವಾಗಿ ನಡೆಯುತ್ತಿರುವ ವಿದ್ಯಾಕೇಂದ್ರವಿದೆ. ಇದನ್ನು ಗವಿಮಠ ಎಂದು ಕರೆಯುತ್ತಾರೆ. ಇಲ್ಲಿಯ ಸನ್ನಿವೇಶ ಕೊಪ್ಪಳ ಜಿಲ್ಲೆಯ ಕೊಪ್ಪಳದ ಸಮೀಪ ಇರುವ **ಗವಿಮಠ**ವನ್ನು ನೆನಪಿಗೆ ತರುತ್ತದೆ. ಈ ಗುಡ್ಡ ಸಾಲುಗಳನ್ನು **ರಾಮದೇವರ ಗುಡ್ಡ** ಎಂದು ಸ್ಥಳೀಯರು ಕರೆಯುತ್ತಾರೆ. ಮೈಸೂರು ಆರ್ಕಿಯಲಾಜಿಕಲ್ ರಿಪೋರ್ಟ್‌ನ ಯಾವ ಸಂಪುಟದಲ್ಲೂ ಈ ಗುಡ್ಡಗಳ ಬಗ್ಗೆ ಮತ್ತು ರಾಮೇಶ್ವರ ದೇವಾಲಯದ ಬಗ್ಗೆ ವರದಿ ಇಲ್ಲ.

ಈ ಗುಡ್ಡಗಳ ವಿಶೇಷವೆಂದರೆ ಇಲ್ಲಿರುವ ಪ್ರಾಕ್ಚಾರಿತ್ರಿಕ ಗುಹೆಗಳು ಮತ್ತು ಹೆಬ್ಬಂಡೆ ವಾಸ್ತವ್ಯಗಳು, ಅಷ್ಟೇ ಅಲ್ಲ ಈ ಸ್ಥಳಕ್ಕೆ

* ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಎಂ.ಜಿ.ಎಂ. ಕಾಲೇಜು, ಉಡುಪಿ - ೫೭೬ ೧೦೨

ಇರುವ "ರಾಮೆದೇವರ ವಿಭೂತಿಗುಡ್ಡ" ಎಂಬ ಜನಬಳಕೆಯ ಹೆಸರು. ಕಾರಣ ಇಲ್ಲಿ ಸಿಗುವ ಸುಟ್ಟ ಸಗಣಿಯ ಗಟ್ಟಿ ಉಂಡೆಗಳು. ಪ್ರಾಕ್ಚಾರಿತ್ರಿಕ ಕಾಲದಲ್ಲಿ ಪಶುಪಾಲನೆಯನ್ನು ಪ್ರಾರಂಭಿಸಿದ ಸಮಯದಲ್ಲಿ ಅದರಿಂದ ದೊರೆತ ಸಗಣಿಯ ಉಪಯೋಗ ತಿಳಿಯದ ಜನ ಅದನ್ನು ಗುಡ್ಡೆಯಂತೆ ಪೇರಿಸಿ ಅದಕ್ಕೆ ಬೆಂಕಿ ಕೊಡುವ ರೂಢಿ ಬೆಳೆಯಿತು. ಇಂತಹ ಬೂದಿಗುಡ್ಡಗಳು (ಹೊಂಡ; ash mounds) ಉತ್ತರ ಕರ್ನಾಟಕದ ಕೃಷ್ಣಾನದಿ ಕಣಿವೆಯಲ್ಲಿ ವಿಶೇಷವಾಗಿ ಕಂಡುಬಂದಿದ್ದು ಅದು ಆಂಧ್ರದ ಕರ್ನೂಲು ಜಿಲ್ಲೆಯವರೆಗೂ ವಿಸ್ತರಿಸಿತ್ತು ಎಂದು ಡಾ. ಅ. ಸುಂದರ ಅವರು ಅಭಿಪ್ರಾಯಪಟ್ಟಿದ್ದಾರೆ. ದಕ್ಷಿಣ ಕರ್ನಾಟಕದಲ್ಲಿ ಇದರ ಕುರುಹು ಕಂಡುಬಂದಿಲ್ಲ ಎನ್ನುವುದು ಅವರ ಅಭಿಪ್ರಾಯ. ಆದರೆ ಈಗ ಅರಸೀಕೆರೆ ತಾಲೂಕಿನಲ್ಲಿ (ಹಳೆ ಮೈಸೂರು ವಿಭಾಗದಲ್ಲಿ) ಪತ್ತೆಯಾಗಿರುವ ಪ್ರಾಕ್ಚಾರಿತ್ರಿಕ ವಿಭೂತಿ ಗುಡ್ಡವು ಸಂಶೋಧನೆಗೆ ಒಂದು ಹೊಸ ಆಯಾಮವನ್ನೆ ಸೃಷ್ಟಿಸಿದೆ.

ಇಲ್ಲಿಯ ಬೂದಿಯನ್ನು ಸುತ್ತಮುತ್ತಲಿನ ಜನ ಬಹಳ ಹಿಂದಿನಿಂದ ತಮ್ಮ ಭೂಮಿಗಳಿಗೆ ಸಾಗಿಸಿದ್ದಾರೆ. ಹಾಗಾಗಿ ಇದ್ದಿರಬಹುದಾದ ಗಟ್ಟಿ ಉಂಡೆಗಳು ಈಗ ಚೂರು ಚೂರಾಗಿದ್ದು ಅದರ ಹುಡಿ ಮಾತ್ರ ಲಭ್ಯ. ಜನ ವಿಭೂತಿ ಉಂಡೆ ಮಾಡುವ ಸಲುವಾಗಿ ಈಗಲೂ ಇಲ್ಲಿಯ ಹುಡಿ ಬೂದಿಯನ್ನು ತೆಗೆದುಕೊಂಡು ಹೋಗುತ್ತಾರೆ. ಕಳೆದ ಕೆಲವು ಶತಮಾನಗಳಿಂದ ನಡೆದಿರುವ ಈ ಕಾರ್ಯದಿಂದಾಗಿ ಬೂದಿಗುಡ್ಡಗಳು ಮಾಯವಾಗಿವೆ (ಹೆಸರು ಮಾತ್ರ ಉಳಿದಿದೆ). ಇಲ್ಲಿ ಬೆಳೆ ಬೆಳೆಯುವ ಸಲುವಾಗಿ ಉಳುಮೆ ಚಟುವಟಿಕೆಗಳು ಸದಾ ನಡೆದಿವೆ. ಹಾಗಾಗಿ ಮಳೆಗಾಲದ ನಂತರ ಹೊಲದಲ್ಲಿ ಬೆಳೆ ಇಲ್ಲದಿದ್ದಲ್ಲಿ ಅಗೆತ ಮಾಡಿದರೆ ನೆಲಮಟ್ಟದಿಂದ ಸ್ವಲ್ಪ ಆಳದಲ್ಲಿ ಬೂದಿಹುಡಿ, ಚೂರು ಉಂಡೆಗಳು ದೊರೆಯುತ್ತವೆ. ಅದರೊಂದಿಗೆ ಹೊಳಪಿನ ಕಂದು ಮತ್ತು ಕೆಂಪು ವರ್ಣಗಳ ನಾನಾ ರೀತಿಯ ಮಡಿಕೆ ಚೂರುಗಳು ದೊರೆಯುತ್ತವೆ. ಸದ್ಯಕ್ಕೆ ಆ ಸ್ಥಳದಲ್ಲಿ ನನಗೆ ಯಾವುದೇ ಪ್ರಾಕ್ಚಾರಿತ್ರಿಕ ಕಾಲಕ್ಕೆ ಸಂಬಂಧಿಸಿದಂತೆ ಶಿಲಾ ಆಯುಧ - ಉಪಕರಣಗಳು ದೊರೆತಿಲ್ಲ. ವ್ಯವಸ್ಥಿತವೂ ವಿಸ್ತೃತವೂ ಆದ ಕ್ಷೇತ್ರ ಕಾರ್ಯ ಇಲ್ಲಿ ನಡೆದರೆ ಒಂದು ಅದ್ಭುತವಾದ ಪ್ರಾಕ್ಚಾರಿತ್ರಿಕ ಇತಿಹಾಸ ಅನಾವರಣಗೊಳ್ಳುವ ಸಾಧ್ಯತೆ ಇದೆ. ಇಲ್ಲಿಯ ಮಡಿಕೆ ಚೂರುಗಳು ಚಾಲ್ಕೋಲಿತಿಕ್ (ತಾಮ್ರಶಿಲಾ) ಯುಗದ ವಸ್ತುಗಳನ್ನು ನೆನಪಿಗೆ ತರುತ್ತವೆ.

ರಾಮೇಶ್ವರ ದೇವಾಲಯಕ್ಕೆ ಆಗ್ನೇಯ ಭಾಗದಲ್ಲಿರುವ ಬೃಹದ್ ಬಂಡೆಗಳ ಬೆಟ್ಟ ಈಗ ವಿನಾಶದ ಅಪಾಯ ಹೊಂದುತ್ತಿದೆ. ಇಲ್ಲಿ ಅವಿರತವಾಗಿ ಬಂಡೆಗಳನ್ನು ಒಡೆದು ಕಲ್ಲು ಸಾಗಿಸುವ ಗಣಿಗಾರಿಕೆ ನಡೆದಿದೆ. ಗವಿಮಠದ ಪಕ್ಕದಲ್ಲೆ ಇರುವ ಈ ಬೆಟ್ಟದಲ್ಲಿ ದ್ದಿರಬಹುದಾದ ಬಂಡೆಗಲ್ಲುಗಳ ಮೇಲಿನ ಬರಹ ಪ್ರಾಯಶಃ ನಾಶವಾಗಿದೆ. ಈ ಬೆಟ್ಟದ ಮೇಲೆ ಹೆಚ್ಚಿನ ಕಲ್ಲಾಸರೆಗಳಿವೆ.

ದೇವಾಲಯದ ದಕ್ಷಿಣ ಮತ್ತು ನೈಋತ್ಯ ಭಾಗದಲ್ಲಿ ಹಬ್ಬಿರುವ ಇನ್ನೊಂದು ಬೆಟ್ಟ ಸಾಲು ಸಾಕಷ್ಟು ವಿಸ್ತಾರವಾಗಿದೆ. ಇಲ್ಲಿ ಹಲವು ಕಲ್ಲಾಸರೆ ಮತ್ತು ಗುಹೆಗಳಿವೆ. ಸ್ಥಳೀಯರ ಪ್ರಕಾರ ಹಲವುಗವಿಗಳು ವಿಸ್ತಾರವಾಗಿವೆ. ಆದರೆ ಈ ಬೆಟ್ಟದಲ್ಲಿ ಪರಿಶೀಲನಾ ಕಾರ್ಯ ನಡೆಸಬೇಕಾದರೆ ಕರಡಿ, ತೋಳ ಅಥವಾ ಚಿರತೆಗಳ ಕಾರಣ ಸಾಕಷ್ಟು ಮುಂಜಾಗ್ರತೆ ಮತ್ತು ರಕ್ಷಣಾ ಕ್ರಮಗಳನ್ನು ಕೈಗೊಳ್ಳಬೇಕು.

ರಾಮೇಶ್ವರ ದೇವಾಲಯದ ಈಶಾನ್ಯಕ್ಕಿರುವ ಬೆಟ್ಟಸಾಲು ಸಾಕಷ್ಟು ಎತ್ತರವಾಗಿದ್ದರೂ ಹೆಚ್ಚು ವಿಸ್ತಾರವಾಗಿಲ್ಲ. ಇಲ್ಲೆಲ್ಲಾ ಕಡಿದಾದ ಗುಡ್ಡ ಪಂಕ್ತಿಗಳಿವೆ, ಕಲ್ಲಾಸರೆಗಳಿವೆ.

ಆದರೆ ಈ ಮೂರೂ ಬೆಟ್ಟ ಸಾಲುಗಳ ಯಾವ ಭಾಗವೂ ಇನ್ನೂ ವೈಜ್ಞಾನಿಕ ಅನ್ವೇಷಣೆಗೆ ಒಳಪಟ್ಟಿಲ್ಲವಾದ ಕಾರಣ ವಿಸ್ತೃತ ಅಧ್ಯಯನ ಅತಿ ಅಗತ್ಯವಾಗಿ ಆಗಬೇಕಾಗಿದೆ.

**ಪಾಜೆಯ ಹೊಸ ಶಿಲಾಯುಗದ ನೆಲೆ** : ೧೯೯೭ರಲ್ಲಿ ರೂಪುಗೊಂಡ ಉಡುಪಿ ಜಿಲ್ಲೆ - ಕಾರ್ಕಳ, ಕುಂದಾಪುರ ಮತ್ತು ಉಡುಪಿ ಎಂಬ ಮೂರು ತಾಲೂಕುಗಳನ್ನು ಹೊಂದಿದ್ದು ಈ ಭಾಗದ ಇತಿಹಾಸ ಮತ್ತು ಸಂಸ್ಕೃತಿ ಪರಂಪರೆಯಲ್ಲಿ ಮುಂಚೂಣಿ ಯಲ್ಲಿರುವ ಪ್ರದೇಶವಾಗಿದೆ. ಪ್ರಾಕ್ಚಾರಿತ್ರಿಕ ನೆಲೆಗಳ ಶೋಧ ಕಾರ್ಯ ಇಲ್ಲಿ ಅವಿರತವಾಗಿ ನಡೆದಿದೆ. ಈ ಭಾಗದ ಸಂಪರ್ಕವನ್ನು ಇಟ್ಟುಕೊಂಡಿರುವ ಖ್ಯಾತ ಪುರಾತತ್ವ ಡಾ. ಅ. ಸುಂದರ ಅವರು ಇಲ್ಲಿಯ ಶೋಧ ಕಾರ್ಯಗಳ ಪ್ರಗತಿಯನ್ನು ಅಭಿಮಾನದಿಂದಲೇ ನೋಡಿದ್ದಾರೆ. ಇಲ್ಲಿ ಇತ್ತೀಚಿಗೆ ಪ್ರಮುಖ ಸ್ಥಳವೊಂದರ ಶೋಧ ಆಗಿದೆ. ಶ್ರೀ ಮಧ್ವಾಚಾರ್ಯದಿಂದ ಪಾವನಗೊಂಡಿರುವ ಪಾಜಕ ಕ್ಷೇತ್ರದ ಸಮೀಪವೇ ಈ ಪತ್ತೆ ಕಾರ್ಯ ಆಗಿದೆ. ಇದು ಉಡುಪಿ ತಾಲೂಕಿನ ಕುರ್ಕಾಲು ಗ್ರಾಮದಲ್ಲಿದೆ.

ಕುರ್ಕಾಲು ಉಡುಪಿನಗರದಿಂದ ದಕ್ಷಿಣಕ್ಕೆ ಸುಮಾರು ೧೫ ಕಿ.ಮೀ. ದೂರದಲ್ಲಿದೆ. ಈ ಗ್ರಾಮ ಪ್ರವೇಶದಲ್ಲೆ ಇಕ್ಕೆಲಗಳಲ್ಲಿ ಕಲ್ಲು ಬಂಡೆಗಳಿಂದ ಕೂಡಿದ ಗುಡ್ಡ ಸಾಲುಗಳಿವೆ. ಇಲ್ಲಿ ಸ್ವಲ್ಪ ಕಾಡು ಇದೆ. ಬರಿ ಬಂಡೆಗಲ್ಲಿನ ಗುಡ್ಡದ ಮೇಲೆ ಒಂದು ಪರಶು ರಾಮ ದೇವಾಲಯವಿದೆ. ಇದರ ಉತ್ತರಕ್ಕೆ ರಸ್ತೆಯ ಇನ್ನೊಂದು ಬದಿಯಲ್ಲಿರುವ ಎತ್ತರವಾದ ಗುಡ್ಡದ ಮೇಲೆ ಅತ್ಯಂತ ಪ್ರಾಚೀನ ವಾದ ದುರ್ಗಾ ಪರಮೇಶ್ವರಿ ದೇವಾಲಯವಿದೆ. ಇಡೀ ಗುಡ್ಡ ಪ್ರದೇಶವನ್ನು **"ಕುಂಜಾರುಗಿರಿ"** ಎಂಬ ಹೆಸರಿನಿಂದ ಕರೆಯುತ್ತಾರೆ. ಇದರ ಸಮೀಪ ಇದೆ **ಪಾಜಕ ಕ್ಷೇತ್ರ**.

ಕುಂಜಾರು ಗಿರಿಯ ಉತ್ತರಕ್ಕೆ ಹರಡಿರುವ ಗುಡ್ಡ ಸಾಲಿನ ತುದಿ ಭಾಗವನ್ನು **"ಪಾಜೆ"** ಎಂದು ಕರೆಯುತ್ತಾರೆ. **ಪಾಜೆ** ಎಂದರೆ **ಪಾದೆ** ಅರ್ಥಾತ್ ಕಲ್ಲುಬೆಟ್ಟ. ಇಲ್ಲಿ ಕಾಡೂ ಬೆಳೆದಿದೆ. ಈ ಕಾಡು ಮಯೂರ ನರ್ತನಕ್ಕೆ ಹೆಸರಾಗಿದೆ. ಇಲ್ಲಿ ಸಣ್ಣ ಕಂದರ ದಂತಿರುವ ಭಾಗದಲ್ಲಿ ಹೊಸ ಶಿಲಾಯುಗದ ಕೊಡಲಿಗಳು ಮತ್ತು ಅದರೊಂದಿಗೆ ಆ ಕಾಲದ ಮಡಿಕೆ ಚೂರುಗಳು ಭೂಮಿಯ

ಮೇಲ್ಪದರದಲ್ಲೆ ದೊರೆತಿವೆ. ಈ ಎರಡೂ ವಸ್ತುಗಳು ಬೇರೆ ಬೇರೆಯಾಗಿ ದೊರೆತಿರುವ ನೂರಾರು ಸ್ಥಳಗಳು ಕರ್ನಾಟಕದಲ್ಲಿ ಪತ್ತೆಯಾಗಿವೆ. ಆದರೆ ಎರಡೂ ಒಟ್ಟಿಗೆ ಒಂದೆಡೆ ದೊರೆತದ್ದಿಲ್ಲ. ಕರ್ನಾಟಕದ ಹೊರಗಿನ ಪರಿಸ್ಥಿತಿಯೂ ಇದಕ್ಕಿಂತ ಭಿನ್ನವಾಗಿಲ್ಲ. ಉಡುಪಿ-**ಕುರ್ಕಾಲಿನ ಪಾಜೆ** ಈ ನಿಟ್ಟಿನಲ್ಲಿ ದಕ್ಷಿಣ ಭಾರತದ ಒಂದು ಅಪೂರ್ವ ಹೊಸ ಶಿಲಾಯುಗದ ಮಾನವನ ನೆಲೆಯಾಗಿ ಹೊರಹೊಮ್ಮಿದೆ.

ಡಾ. ಅ. ಸುಂದರ ಅವರ ಗಮನಕ್ಕೆ ಈ ನೆಲೆಯಲ್ಲಿ ದೊರೆತ ವಸ್ತುಗಳನ್ನು ತಂದಾಗ ಅವರು ಹೇಳಿದ್ದು - "ಇದನ್ನು ನೋಡಿ ನನಗೆ ರೋಮಾಂಚನವಾಗಿದೆ." ಈ ನೆಲೆಯನ್ನು ಪತ್ತೆ ಮಾಡಿದ ನನಗೂ ಈ ಮಾತನ್ನು ಕೇಳಿ ಒಂದು ರೀತಿಯಲ್ಲಿ ರೋಮಾಂಚನವಾಯಿತು.

ಅವರ ಪ್ರಕಾರ ಗುಜರಾತ ಭಾಗದಿಂದ ಹಿಡಿದು ಕೇರಳದ ಮಹೇಂದ್ರಗಿರಿ ಕರಾವಳಿಯವರೆಗೆ ಇರುವ ಬಹು ವಿಸ್ತಾರವಾದ ಪ್ರದೇಶದಲ್ಲಿ ಶಿಲಾಯುಗಗಳ ನಾನಾ ಹಂತಗಳ ಕುರುಹುಗಳು ದೊರೆತಿವೆ. ವಿಶೇಷವಾಗಿ ಹೊಸ ಶಿಲಾಯುಗದ ವಸ್ತುಗಳು ಹಲವಾರು ಕಡೆಗಳಲ್ಲಿ ಪತ್ತೆಯಾಗಿವೆ. ಆದರೆ ಆ ಕಾಲದ ಮಾನವನ ನೆಲೆ ಎಂದು ಗುರುತಿಸಬಲ್ಲಂತಹ ಸ್ಥಳ ಎಲ್ಲೂ ಪತ್ತೆಯಾಗಿಲ್ಲ. ಹಾಗಾಗಿ ಆ ಕಾಲದ ಮಾನವನ ವಾಸ್ತವ್ಯದ ಬಗ್ಗೆ ಖಚಿತವಾದ ಅಭಿಪ್ರಾಯ ಮೂಡಲು ಸಾಧ್ಯವಾಗಿಲ್ಲ. ಇದೊಂದು ದೊಡ್ಡ ಕೊರತೆಯೇ ಸರಿ.

ಡಾ. ಸುಂದರ ಅವರಿಗೆ ಪಾಜೆಯಲ್ಲಿ ದೊರೆತ ವಸ್ತುಗಳನ್ನು ತೋರಿಸಿದಾಗ ಸಂತೋಷಗೊಂಡರೂ ಏನೋ ಒಂದು ಸಂಶಯ ಅವರನ್ನು ಕಾಡಿತ್ತು. ಏನು ಅನ್ನುವುದನ್ನು ಮಾತ್ರ ಅವರು ಕೂಡಲೆ ಹೇಳಲಿಲ್ಲ. ಕರ್ನಾಟಕ ಇತಿಹಾಸ ಅಕಾದೆಮಿ ಉಡುಪಿ ಜಿಲ್ಲಾ ಘಟಕದ ಕಾರ್ಯಕ್ರಮಕ್ಕಾಗಿ ಅವರು ಒಂದು ವಾರ ಕಾಲ ಇಲ್ಲಿದ್ದಾಗ ಅವರನ್ನು ಪಾಜೆಯ ಸ್ಥಳಕ್ಕೆ ಕರೆದುಕೊಂಡು ಹೋದೆ. ಸ್ಥಳವನ್ನು ಪರಿಶೀಲಿಸಿದ ನಂತರ ಅವರ ಸಂಶಯ ನಿವಾರಣೆಯಾಯಿತು. ಸಂಶಯ ಏನೆಂದು ಅಲ್ಲಿ ಬಹಿರಂಗಪಡಿಸಿದರು. ಇದು ನಿಜಕ್ಕೂ ಮಾನವನ ವಾಸ್ತವ್ಯದ ಸ್ಥಳವೇ ಅಥವಾ ಸಮಾಧಿ ಸ್ಥಳವೆ - ಅನ್ನುವುದು ಅವರ ಸಂಶಯ. ಆದರೆ ಅದು ಸಮಾಧಿ ಸ್ಥಳ ವಾಗಿರದೆ ವಾಸ್ತವ್ಯದ ಸ್ಥಳವಾಗಿರುವುದು ಖಚಿತವಾಯಿತು.

ಇದರಿಂದ ಒಂದು ಬೃಹತ್ ವ್ಯಾಪ್ತಿಯ (ಗುಜರಾತದ ಸೌರಾಷ್ಟ್ರದಿಂದ ಕೇರಳದ ದಕ್ಷಿಣದ ತುಟ್ಟತುದಿಯವರೆಗಿನ) ಪ್ರದೇಶಕ್ಕೆ ಉಡುಪಿ ಕುರ್ಕಾಲಿನ ಪಾಜೆ ಹೊಸ ಪ್ರಾಕ್ಚಾರಿತ್ರಿಕ ಇತಿಹಾಸ ಬರೆದ ಪ್ರಪ್ರಥಮ ಪ್ರಮುಖ ಸ್ಥಳವಾಗಿರುವುದು ಖಚಿತ ವಾಯಿತು.

(ರಾಮದೇವರ ವಿಭೂತಿ ಗುಡ್ಡದ ಶೋಧ ಕಾರ್ಯದಲ್ಲಿ ನೆರವಾದ ಡಾ. ಡಿ.ಆರ್. ಪಾಂಡುರಂಗ, ಕನ್ನಡ ಪ್ರಾಧ್ಯಾಪಕ, ಎಂ.ಜಿ.ಎಂ. ಕಾಲೇಜು ಉಡುಪಿ ಅವರಿಗೆ ಹಾಗು ಪಾಜೆ ಶೋಧದಲ್ಲಿ ಉತ್ಸುಕತೆಯಿಂದ ನೆರವಾಗಿ ಸಹಕರಿಸಿದ ಉಡುಪಿ ಶಾರದಾ ರೆಸಿಡೆನ್ಷಿಯಲ್ ಸ್ಕೂಲ್‌ನ ಪ್ರಾಂಶುಪಾಲರಾದ ಶ್ರೀ ವಿದ್ಯಾವಂತ ಆಚಾರ್ಯ ಹಾಗು ಅವರ ಸಿಬ್ಬಂದಿ ವರ್ಗಕ್ಕೆ ನಾನು ಕೃತಜ್ಞತಾಪೂರ್ವಕ ವಂದನೆಗಳನ್ನು ಅರ್ಪಿಸುತ್ತೇನೆ.)



❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀

## ಕೆ.ಇ. ಅಕಾದೆಮಿಯ ೭ನೇಯ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೩)

*ಪುರಾತತ್ತ್ವ ಅಧ್ಯಯನದಲ್ಲಿ ಪ್ರಮುಖವಾಗಿ ಪ್ರಾಗಿತಿಹಾಸ ಪುರಾತತ್ತ್ವ, ಇತಿಹಾಸ ಪುರಾತತ್ತ್ವ ಎಂಬ ಎರಡು ವಿಭಾಗಗಳಿವೆ. ಕರ್ನಾಟಕದಲ್ಲಿಯ ಪ್ರಾಗಿತಿಹಾಸ ಪುರಾತತ್ತ್ವ ಶೋಧನೆಯ ಆಧಾರದ ಮೇಲೆ ಅತಿ ದೀರ್ಘಕಾಲದ ಸಾಂಸ್ಕೃತಿಕ ಬೆಳವಣಿಗೆಯನ್ನು ಆರು ಘಟ್ಟಗಳಲ್ಲಿ ಅಂದರೆ ಇಂದಿಗೆ ಕನಿಷ್ಠ ೨ ಲಕ್ಷದಿಂದ ೫ ಲಕ್ಷ ವರ್ಷಗಳ ಆದಿ ಶಿಲಾಯುಗದಿಂದ ಹಿಡಿದು ಕ್ರಿ.ಪೂ. ೧೨೦೦ ರಿಂದ ೨೦೦೦ವರೆಗಿನ ಕಬ್ಬಿಣ ಯುಗದ ಬೃಹತ್ ಶಿಲಾ ಸಂಸ್ಕೃತಿಯವರೆಗೆ ಗುರುತಿಸಲಾಗಿದೆ; ಈ ಕೊನೆಯ ಘಟ್ಟದಿಂದ ಇತಿಹಾಸ ಕಾಲದ ಪುರಾತತ್ತ್ವವನ್ನು ಮೌರ್ಯ-ಶಾತವಾಹನರಿಂದ ಹಿಡಿದು ಮೈಸೂರು ಒಡೆಯರ್, ಹೈದರಾಬಾದ ನಿಜಾಮರ - ಬೊಂಬಾಯಿ ಕರ್ನಾಟಕದ ತನಕ ಕೆಲವು ಪ್ರಮುಖ ಘಟ್ಟಗಳನ್ನು ಗುರುತಿಸಲಾಗಿದೆ.*

*ಇಲ್ಲಿನ ಸಮಸ್ಯೆ ಎಂದರೆ ಇವೆಲ್ಲವು ೫ ಲಕ್ಷ ವರ್ಷಗಳಿಗಿಂತಲೂ ಹಿಂದಿನಿಂದ ಇಂದಿನವರೆಗೆ ಸುದೀರ್ಘಕಾಲದ ಸಾಂಸ್ಕೃತಿಕ ಬೆಳವಣಿಗೆಯ ಹಲವಾರು ಘಟ್ಟಗಳಲ್ಲಿಯ ಕೆಲವುದರ ಅಲ್ಲೊಂದು ಇಲ್ಲೊಂದು ಕೇವಲ ಎಳೆಗಳಂತಿವೆಯೇ ಹೊರತು ಪೂರ್ಣವಲ್ಲದಿದ್ದರೂ ಸ್ಪಷ್ಟವಾಗಿ ಗುರುತಿಸಬಹುದಾದ ಕರ್ನಾಟಕದ ಸಾಂಸ್ಕೃತಿಕ ವಿರಾಟರೂಪವು ತಿಳಿದಿಲ್ಲ. ಈವರೆಗೆ ಶೇ. ೨೦ಕ್ಕಿಂತಲೂ ಕಡಿಮೆ ಕರ್ನಾಟಕದಲ್ಲಿಯ ಪುರಾತತ್ತ್ವ ಅವಶೇಷಗಳು ಶೋಧನೆಯಾಗಿವೆಯೆಂದು ಅಂದಾಜು ಮಾಡಬಹುದು. ಸದ್ಯ ನಡೆಯುತ್ತಿರುವ ಸಂಶೋಧನೆಯ ಪ್ರಮಾಣ ಮತ್ತು ವೇಗ ತೀರ ನಿಧಾನ ಮತ್ತು ಅಲ್ಪ. ಕೇವಲ ಇತಿಹಾಸ ಮತ್ತು ಪುರಾತತ್ತ್ವ ಶಾಸ್ತ್ರಜ್ಞರಿಂದ ಈ ಬೃಹತ್ ಅನ್ವೇಷಣೆ ಕಾರ್ಯವನ್ನು ಪೂರೈಸಲು ಸಾಧ್ಯವಿಲ್ಲ. ಈ ಸಾಂಸ್ಕೃತಿಕ ಸಂಪತ್ತನ್ನು ಉಳಿಸಿ ರಕ್ಷಿಸುವುದಕ್ಕೆ ಅಧ್ಯಯನಕ್ಕೆ ಬೇಕಾದ ವ್ಯವಸ್ಥಿತ ವೈಜ್ಞಾನಿಕ ಚಳುವಳಿಯ ಮನೋಭಾವವನ್ನೆ ಯುವಕರಲ್ಲಿ ಮೂಡಿಸಬೇಕಾಗಿದೆ.*

*ಡಾ. ಅ. ಸುಂದರ*
*ಸಮ್ಮೇಳನಾಧ್ಯಕ್ಷರು*

❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀❀

ಡಾ. ಕೂ.ಸ. ಅಪರ್ಣ, ಡಿ.ಲಿಟ್.*

# ವಾಸ್ತುವಿನ ಭಾಗಗಳನ್ನು ಬೆಸೆಯುವ ಸಂಧಿಕರ್ಮ

*'ಸಂಧಿಕರ್ಮ' ಎಂಬುದು ಮರ ಜೋಡಣೆಯ ತಾಂತ್ರಿಕ ಸಂಬಂಧದ ಕಾರ್ಯವಾಗಿದೆ. ನಮ್ಮಲ್ಲಿಯ ಪಾರಂಪರಿಕ ಶಿಲ್ಪಶಾಸ್ತ್ರ ಕೃತಿಗಳೂ ಈ ಬಗ್ಗೆ ವಿವರ-ವ್ಯಾಖ್ಯಾನಗಳೊಡನೆ ಮಂಡಿಸಿವೆ. ವಿಶೇಷತಃ ಕಾಷ್ಠದ ಪ್ರಯೋಜನವನ್ನು ಕಲಾತ್ಮಕವಾಗಿ ಬಳಸುವುದು ಇಲ್ಲಿನ ಉದ್ದೇಶವಾಗಿಯೂ ತಾಂತ್ರಿಕ ಪರಿಣತಿಯಿಂದ ಅದನ್ನು ಮತ್ತುಷ್ಟು ಅಭಿರಂಜಕ ಮಾಡುವುದೂ ಇದೆ. ಮರದ ಭಾಗಗಳನ್ನು ಬೆಸೆಯುವಲ್ಲಿ ಸರ್ವತೋಭದ್ರ, ಸ್ವಸ್ತಿಕ ಬಗೆ, ಕಂಬಗಳ ಜೋಡಣೆಯ ಸಂಧಿಕರ್ಮ ಇತ್ಯಾದಿಗಳಲ್ಲಿ ನಮ್ಮ ಸಾಂಸ್ಕೃತಿಕ ಚರ್ಯೆಗಳೂ ಕಾಣಬರುತ್ತವೆ. ಬಳಕೆಗೊಳ್ಳುವ ಮರ ಯಾ ಕಾಷ್ಠದ ಗುಣಲಕ್ಷಣಗಳು, ಲಿಂಗಸಂಹಿತೆ ಹಾಗು ತಾಂತ್ರಿಕ ಪಾರಿಭಾಷಿಕತೆಯನ್ನು ಅರ್ಥೈಸಿಕೊಂಡು, 'ಸಂಧಿಕರ್ಮ'ದ ಕ್ರಿಯೆ ನಡೆಯಬೇಕು. ಆಗಲೇ ಅವಕ್ಕೆ ವೈಜ್ಞಾನಿಕ ಮೌಲ್ಯವೂ ಕೂಡುತ್ತದೆ.*

ಕಟ್ಟಡಗಳ ನಿರ್ಮಾಣದಲ್ಲಿ ಮರ (Timber) ವನ್ನು ಸೇರಿಸುವುದನ್ನು ಗ್ರಂಥಗಳು 'ಸಂಧಿಕರ್ಮ' (Joinery) ಎಂದು ಕರೆದಿವೆ.[೧] ದೇವಾಲಯದ ವಿವಿಧ ಭಾಗಗಳಲ್ಲಿ ವಿವಿಧ ಪ್ರಕಾರಗಳಿರುವಂತೆಯೇ 'ಸಂಧಿಕರ್ಮ'ದಲ್ಲೂ ವಿವಿಧ ಪ್ರಕಾರಗಳೂ, ವಿವಿಧ ವಿಧಾನಗಳೂ ಇವೆ. ಇವು, ಯಾವ ಯಾವ ಭಾಗದಲ್ಲಿ ಯಾವ ಯಾವ ರೀತಿ 'ಸಂಧಿ' ಮಾಡಬೇಕೆಂಬ ಸೂಚನೆಗಳನ್ನೂ ನೀಡುತ್ತವೆ. ಸಂಧಿಕರ್ಮದ ವಿಧಿ-ನಿಷೇಧಗಳೂ ಗ್ರಂಥಗಳಲ್ಲಿವೆ. ಈ ಗ್ರಂಥಗಳು ನಿವಾಸಗಳ ಬಗ್ಗೆ ಸಾಮಾನ್ಯವಾಗಿ ಹೇಳಿದೆಯಾದರೂ ಈ ವಿವರಗಳು ದೇವಾಲಯಕ್ಕೂ ಹೊಂದುತ್ತವೆ. ಮಯಮತವು, ಮನೆ ಅಥವಾ ದೇವಾಲಯ - ಯಾವುದಕ್ಕೂ ಈ ನಿಯಮಗಳನ್ನು ಅನುಸರಿಸಬೇಕು ಎಂದು ನೇರವಾಗಿ ಹೇಳಿದೆ.[೨]

ಸಂಧಿಕರ್ಮದ ಬಗ್ಗೆ ಮಯಮತ ಮತ್ತು ಮಾನಸಾರಗಳ ೧೭ನೇ ಅಧ್ಯಾಯದಲ್ಲಿ ವಿವರವಿದೆ. ಅಂತೇ, ಈಶಾನ ಶಿವಗುರು ದೇವ ಪದ್ಧತಿ (ಕ್ರಿಯಾಪಾದ, ಅಧ್ಯಾಯ ೩೩) ಮತ್ತು ಶಿಲ್ಪರತ್ನ (ಅಧ್ಯಾಯ ೨೧) ಗಳಲ್ಲಿಯೂ ಈ ಬಗ್ಗೆ ವಿವರವಿರುವುದಾಗಿ ತಿಳಿದುಬರುತ್ತದೆ.[೩] ಈ ಲೇಖನದಲ್ಲಿ ಮಯಮತ ಮತ್ತು ಮಾನಸಾರಗಳ ವಿವರಗಳನ್ನಷ್ಟೇ ಗಮನಿಸಲಾಗಿದೆ. ಏಕನಿರ್ಮಾಣ ಎನ್ನುವುದು ವಿವಿಧ ತುಂಡುಗಳನ್ನು ಸೇರಿಸುವುದರಿಂದ ಉಂಟಾಗುತ್ತದೆ. ಲಂಬವಾಗಿ, ಸಮತಲವಾಗಿ ಮತ್ತು ಓರೆಯಾಗಿರುವ ಭಾಗಗಳನ್ನು ಸೇರಿಸುವುದರ ಬಗ್ಗೆ ಗ್ರಂಥಗಳಲ್ಲಿದೆ.[೪] ಇವುಗಳಲ್ಲಿ, 'ಸಂಧಿಕರ್ಮ' ಎನ್ನುವಾಗ ಪ್ರಧಾನವಾಗಿ ಮರದ ತುಂಡುಗಳನ್ನು ಸೇರಿಸುವುದರ ಬಗ್ಗೆಯೇ ಹೇಳಿದ್ದು, ಕೆಲವೆಡೆ ಮಾತ್ರ ಕಲ್ಲಿನ ನಿರ್ಮಾಣದ ಬಗ್ಗೆ ಹೇಳಿದೆ. ಮರ ಮತ್ತು ಕಲ್ಲಿನ ಜೋಡಣೆಗಳು ಒಂದೇ ರೀತಿ ಎಂಬುದನ್ನಿಲ್ಲಿ ಗಮನಿಸಬಹುದಾಗಿದೆ.

**ಸಂಧಿಕಾರ್ಯದ ನಿಯಮಗಳು / ವಿಧಾನಗಳು**

೧. ಭಾಗಗಳನ್ನು ಬಂಧಿಸಲು ಒಳ್ಳೆಯ ಮರ ಮತ್ತು ಒಂದೇ ರೀತಿಯ ಮರವನ್ನು ಉಪಯೋಗಿಸಬೇಕು.[೫]

೨. ವೃಕ್ಷದ ಮೂಲಭಾಗವನ್ನು ಬಳಸಬೇಕು. ಏಕೆಂದರೆ, ವೃಕ್ಷದ ಮೇಲ್ಭಾಗವು ಶಕ್ತಿಯುತವಾಗಿರುವುದಿಲ್ಲ.[೬]

೩. ವಕ್ರವಾಗಿರುವ ಅಥವಾ ಭಿನ್ನವಾಗಿರುವ ಮರವನ್ನು ಬಳಸಬಾರದು.[೭]

೪. ಮರವನ್ನು ನಾಲ್ಕು ಕಡೆಗಳಲ್ಲಿ ಪರೀಕ್ಷಿಸಿ ಅದರ ಲಿಂಗವನ್ನು ದೃಢಪಡಿಸಿಕೊಳ್ಳಬೇಕೆಂದು ಮಾನಸಾರವು ಹೇಳಿದೆಯಲ್ಲದೆ, ಅದರ ಎಡ ಮತ್ತು ಬಲಭಾಗಗಳನ್ನು ತಿಳಿದುಕೊಳ್ಳಬೇಕೆಂದಿದೆ.[೮]

* ೩೫೬, ಕಶ್ಯಪ, ೧೧ನೇ ಮುಖ್ಯರಸ್ತೆ, ಶ್ರೀನಿವಾಸನಗರ, ಬೆಂಗಳೂರು - ೫೦.

೫. ಮರದಲ್ಲಿ ತುಂಬ ಉದ್ದವಾದ ಮರವನ್ನು ಬಲಕ್ಕೆ ಮತ್ತು ಚಿಕ್ಕದಾದ ಮರವನ್ನು ಎಡಕ್ಕೆ ಸೇರಿಸಬೇಕು. ಮಧ್ಯದಲ್ಲಿ ಮತ್ತು ಬಲಕ್ಕೆ ಸೇರಿಸಬೇಕಾಗಿದ್ದಲ್ಲಿ ತುಂಬ ಉದ್ದವಾದ ತುಂಡನ್ನು ಮಧ್ಯದಲ್ಲಿ ಸೇರಿಸಿ, ಚಿಕ್ಕದನ್ನು ಎಡಕ್ಕೂ, ದೊಡ್ಡದನ್ನು ಬಲಕ್ಕೂ ಸೇರಿಸಬೇಕು. ಇಲ್ಲವಾದಲ್ಲಿ, ಸಮನಾದ ಅಳತೆಯ ಭಾಗಗಳನ್ನು ಎಡ ಮತ್ತು ಬಲಕ್ಕೆ ಸೇರಿಸಬೇಕು ಮತ್ತು ಮಧ್ಯದಲ್ಲಿ ಉದ್ದವಾದ ತುಂಡು ಇರಬೇಕು; ಮಧ್ಯದ ತುಂಡು ಇಲ್ಲವಾದಲ್ಲಿ ಸಮನಾದ ತುಂಡುಗಳನ್ನು ಎಡಕ್ಕೆ ಮತ್ತು ಬಲಕ್ಕೆ ಸೇರಸಬೇಕು ಎಂದು ಮಯಮತವು ಹೇಳಿದೆ.[೯] ಮಾನಸಾರವೂ ಇದೇ ರೀತಿಯಾಗಿ ವಿವರಿಸಿದ್ದು, ಉದ್ದವಾದ ಮರವನ್ನು ಕಟ್ಟಡದ ಬಲಕ್ಕೆ ಸೇರಿಸಬೇಕು ಅಥವಾ ಮಧ್ಯದಲ್ಲಿ ಸೇರಿಸಬೇಕು ಎಂದು ಹೇಳಿದೆ; ಅಲ್ಲದೆ, ಬಾಗಿದ (?) ಮರದ ಬಗ್ಗೆಯೂ ಇದರಲ್ಲಿ ಹೇಳಿದ್ದು, ಅದನ್ನು ಕಟ್ಟಡದ ಬಲಕ್ಕೆ ಅಥವಾ ಎಡ-ಬಲಕ್ಕೆ ಸೇರಿಸಬೇಕು ಎಂದಿದೆ.[೧೦]

೬. ಒಂದು ಭಾಗದ ತಳವನ್ನು ಇನ್ನೊಂದು ಭಾಗದ ತಳದೊಂದಿಗಾಗಲೀ, ಒಂದು ಭಾಗದ ಮೇಲ್ಭಾಗವನ್ನು ಇನ್ನೊಂದರ ಮೇಲ್ಭಾಗದೊಂದಿಗಾಗಲೀ ಸೇರಿಸಬಾರದು; ಬದಲಿಗೆ, ಒಂದು ಭಾಗದ ತಳವನ್ನು ಇನ್ನೊಂದರ ಮೇಲ್ಭಾಗದೊಂದಿಗೆ ಸೇರಿಸಿದರೆ ಯಶಸ್ಸು.[೧೧]

೭. ಕೆಳಗಿನ ಅಂತಸ್ತಿನಲ್ಲಿ ಮಾಡಿದಂತೆಯೇ ಮೇಲಿನ ಅಂತಸ್ತಿನಲ್ಲೂ ಸಂಧಿಕರ್ಮವನ್ನು ಮಾಡಬೇಕು ಎಂಬ ಸೂಚನೆ ಮಯಮತದಲ್ಲಿದೆ.[೧೨] ಅಂತೇ, ಒಂದು ಭಾಗವನ್ನು ವಿವಿಧ ಸಂಧಿಗಳಿಂದ ಸೇರಿಸುವಾಗಲೂ ಮೇಲ್ಭಾಗದಲ್ಲಿ ಮಾಡಿದಂತೆಯೇ ಕೆಳಭಾಗದಲ್ಲೂ ಮಾಡಬೇಕು.[೧೩]

೮. ಭಾಗಗಳನ್ನು ಸೇರಿಸಿದಾಗ, ಒಂದು ಭಾಗವು ಆಸರೆ ನೀಡುತ್ತದೆ; ಇನ್ನೊಂದು ಭಾಗವು ಆಸರೆ ಪಡೆಯುತ್ತದೆ. ಇದೇ ರೀತಿಯಾಗಿ, ಸಂಧಿಯು ಒಂದರ ಮೇಲೊಂದು ಜೋಡಿಸಿದಂತಿದ್ದು, ಮಧ್ಯೆ ಮಧ್ಯೆ ಯಾವುದೇ ತುಂಡು ತೂರಿಕೊಂಡಂತಿರಬಾರದು.[೧೪]

೯. ಸಂಧಿ ಮಾಡಿರುವುದು ಗೊತ್ತಾಗದಂತೆ ಸೇರಿಸಬೇಕು.[೧೫]

೧೦. ಸಂಧಿಕಾರ್ಯ ಮಾಡುವಾಗ, ಆ ಒಂದು ಮರದ ಮೇಲ್ಭಾಗ ಮತ್ತು ತಳಭಾಗದಲ್ಲಿ ಮಾಡುವುದು ಹೆಚ್ಚು ಸೂಕ್ತವಾದುದು.[೧೬]

೧೧. 'ಸಂಧಿ'ಗಳು (ಕಂಬಗಳು ?) ಸಾಲಾಗಿದ್ದಾಗ ಮತ್ತು ಒಂದೇ ಆಕಾರದಲ್ಲಿದ್ದಾಗ, ಸಂಧಿಯೂ ಒಂದೇ ರೂಪದಲ್ಲಿರಬೇಕು.[೧೭]

೧೨. ಹೊಸ ಮರದ ತುಂಡನ್ನು ಹೊಸ ಮರದೊಂದಿಗೆ ಸೇರಿಸಬೇಕು. ಮತ್ತು ಹಳೆಯ ಮರವನ್ನು ಹಳೆಯ ಮರದೊಂದಿಗೆ ಸೇರಿಸಬೇಕು; ಹೊಸತನ್ನು ಹಳೆಯದ ರೊಂದಿಗೆ ಸೇರಿಸಬಾರದು.[೧೮]

೧೩. ಮರದ ತುಂಡನ್ನು ದಕ್ಷಿಣೋತ್ತರವಾಗಿಡುವಾಗ ಅದರ ಕೆಳಭಾಗವು ದಕ್ಷಿಣದಿಸೆಗಿರಬೇಕು; ಪೂರ್ವ-ಪಶ್ಚಿಮವಾಗಿಡುವಾಗ ಕೆಳಭಾಗವು ಪಶ್ಚಿಮದೆಡೆಗಿರಬೇಕು; ಅದೇ, ಮರದ ತುಂಡನ್ನು ಪಶ್ಚಿಮ-ದಕ್ಷಿಣವಾಗಿಸುವಾಗ ಕೆಳಭಾಗದ ಸಂಧಿಯು ನೈಋತ್ಯದಲ್ಲಿರಬೇಕು. ಮರವನ್ನು ಪೂರ್ವ-ಉತ್ತರಮುಖಿಯಾಗಿಡುವಾಗ ಮೇಲ್ಭಾಗದ ಸಂಧಿಯು ಈಶಾನ್ಯದಲ್ಲಿರಬೇಕು. ಅಲ್ಲದೆ, ಮೇಲ್ಭಾಗ ಮತ್ತು ಕೆಳಭಾಗದ ಸಂಧಿಯನ್ನು ಆಗ್ನೇಯ ಮತ್ತು ವಾಯುವ್ಯ ದಿಕ್ಕಿನಲ್ಲಿ ಮಾಡಬೇಕು.[೧೮ಎ]

ಸಂಧಿಕರ್ಮದಲ್ಲಿ ಉಪಯೋಗಿಸುವ ಶಂಕು, ಆಣಿ, ಶಲ್ಯ - ಇವು ಕೀಲ (Nails) ದ ಪರ್ಯಾಯಪದಗಳು; ವೃದ್ಧ ಶೂಲ, ದಂತ - ಇವು 'ಶಿಖಾ'ದ (Point, Apex) ಪರ್ಯಾಯಪದಗಳು.[೧೯] (ಚಿತ್ರ - ೧,೨)

## ವಿವಿಧ ರೀತಿಯ ಸಂಧಿ ಮತ್ತು ಸಂಧಿಕರ್ಮಗಳು

ಎಷ್ಟು ಭಾಗಗಳನ್ನು ಅಥವಾ ತುಂಡುಗಳನ್ನು ಸೇರಿಸಬೇಕು ಎಂಬುದರ ಆಧರದ ಮೇಲೆ ಸಂಧಿಗಳನ್ನು ಬೇರೆ ಬೇರೆ ಹೆಸರಿನಿಂದ ಕರೆಯಲಾಗಿದೆ. ಎರಡು ತುಂಡುಗಳನ್ನು ಸೇರಿಸುವ ಒಂದು ಸಂಧಿ ಇದ್ದರೆ, ಅದು ಮಲ್ಲಬಂಧ (ಚಿತ್ರ-೩) ಅಥವಾ ಮಲ್ಲಲೀಲ. ಮೂರು ಭಾಗಗಳನ್ನು ಎರಡು ಬೆಸುಗೆಗಳಿಂದ ಸೇರಿಸಿದರೆ, ಅದು 'ಬ್ರಹ್ಮರಾಜ' ಎಂದು ಮಯಮತವು ಹೇಳಿದರೆ, ಮೂರು ತುಂಡುಗಳನ್ನು ಕ್ರಮವಾಗಿ ಎರಡು ಅಥವಾ ಮೂರು ಸಂಧಿಗಳಿಂದ ಸೇರಿಸಿದರೆ ಅದು 'ಬ್ರಹ್ಮರಾಜ' ಎಂದು ಮಾನಸಾರವು ಹೇಳಿದೆ. ಮಯಮತದ ಪ್ರಕಾರ ಮೂರು ಅಥವಾ ನಾಲ್ಕು ಸಂಧಿಗಳೂ, ಮಾನಸಾರದ ಪ್ರಕಾರ ನಾಲ್ಕು ಸಂಧಿಗಳೂ ಇದ್ದರೆ ಅದಕ್ಕೆ 'ವೇಣುಪರ್ವ' ಸಂಧಿ ಎಂದು ಹೆಸರು. 'ಪೂಗ(ಕ)ಪರ್ವ' ಸಂಧಿಯಲ್ಲಿ ಐದು ಸಂಧಿಗಳಿರುವುದೆಂದು ಮಾನಸಾರವೂ, ಐದು ಅಥವಾ ಆರು ಸಂಧಿಗಳಿರುವುದೆಂದು ಮಯಮತವೂ ಹೇಳಿದೆ. ಇದೇ ರೀತಿಯಾಗಿ, ಆರು ಸಂಧಿಗಳಿದ್ದರೆ ಮಾನಸಾರದ ಪ್ರಕಾರ ಅದಕ್ಕೆ 'ದೇವಸಂಧಿ' ಎಂದು ಹೆಸರು; ಅದೇ, ಮಯಮತದ ಪ್ರಕಾರ 'ದೇವಸಂಧಿ'ಗೆ ಏಳು ಅಥವಾ ಎಂಟು ಸಂಧಿಗಳಿರುವುದು. ಇದರೊಂದಿಗೆ ಮಾನಸಾರವು 'ಋಷಿಸಂಧಿ' ಮತ್ತು 'ಇಕ್ಷುಪರ್ವ' ಸಂಧಿಗಳನ್ನೂ ಹೇಳಿದ್ದು, ಇವುಗಳಿಗೆ ಕ್ರಮವಾಗಿ ಏಳು ಮತ್ತು ಎಂಟು ಸಂಧಿಗಳಿರಬೇಕು. ಹೆಚ್ಚಿನ ಭಾಗಗಳಿದ್ದು, ಹೆಚ್ಚಿನ ಸಂಧಿಗಳಿದ್ದರೆ ಅದನ್ನು 'ದಂಡಿಕಾ' ಎಂದು ಎರಡೂ ಗ್ರಂಥಗಳು ಹೆಸರಿಸಿವೆ.[೨೦]

## ಚೌಕಾಕಾರ ಭಾಗಗಳ ಸಂಧಿಕರ್ಮ

ಭಾಗಗಳನ್ನು ಬಂಧಿಸುವ ರೀತಿಯಲ್ಲಿ ವ್ಯತ್ಯಾಸಗಳಿದ್ದು, ಒಂದೊಂದು ಭಾಗಗಳನ್ನು ಒಂದೊಂದು ರೀತಿಯಲ್ಲಿ ಬೆಸೆಯ

ಲಾಗುತ್ತದೆ; ಅಲ್ಲದೆ, ಅವುಗಳಿಗೆ ತಕ್ಕಂತೆ ಬೇರೆ ಬೇರೆ ಹೆಸರುಗಳನ್ನು ನೀಡಲಾಗಿದೆ. ಇವುಗಳಲ್ಲಿ, ಸರ್ವತೋಭದ್ರ, ನಂದ್ಯಾವರ್ತ, ಸ್ವಸ್ತಿಕ ಮತ್ತು ವರ್ಧಮಾನ - ಎಂಬ ರೀತಿಗಳಿದ್ದು, ಇವೆಲ್ಲವೂ ಬಹುಪಾಲು ಚೌಕಾಕಾರದ ಭಾಗಗಳನ್ನು ಬೆಸೆಯುವ ರೀತಿಯ ದಾಗಿವೆ.

**ಸರ್ವತೋಭದ್ರ** : ನಾಲ್ಕು ತುಂಡುಗಳನ್ನು ಚೌಕಾಕಾರವಾಗಿ ಸೇರಿಸುವ ಸಂಧಿ ಇದು. ಇದರಲ್ಲಿ, ಆಧಾರವಾಗಿರುವ ಮೊದಲ ತುಂಡು ಪೂರ್ವಭಾಗದಲ್ಲಿ (ಲಂಬವಾಗಿ)ರಬೇಕು. ಇದರ ಕೆಳಭಾಗವು ಆಗ್ನೇಯ ಮೂಲೆಯಲ್ಲಿದ್ದು, ಮೇಲ್ಭಾಗವು ಈಶಾನ್ಯ ಮೂಲೆಯಲ್ಲಿರಬೇಕು. ಈ ಪೂರ್ವದಿಕ್ಕಿನ ತುಂಡಿನ ಕೆಳಭಾಗ ಮತ್ತು ಮೇಲ್ಭಾಗದ ಮೇಲ್ಮುಖವನ್ನು (upper face) ತುಂಡರಿಸ ಬೇಕು; ಮತ್ತು ಇದರ ಮೇಲೆ ಕ್ರಮವಾಗಿ ದಕ್ಷಿಣ ಮತ್ತು ಉತ್ತರ ದಿಕ್ಕಿನ ತುಂಡುಗಳನ್ನು (ಸಮತಲವಾಗಿ) ಸೇರಿಸಬೇಕು. ದಕ್ಷಿಣ ದಲ್ಲಿರುವ ತುಂಡಿನ ಮೇಲ್ಮುಖವನ್ನು ಕತ್ತರಿಸಿ, ಅದರ ಮೇಲೆ ಪಶ್ಚಿಮದಿಕ್ಕಿನ ತುಂಡನ್ನು (ಲಂಬವಾಗಿ) ಇರಿಸಬೆಕು. ಈ ಪಶ್ಚಿಮದ ತುಂಡಿನಲ್ಲಿ ಮೇಲ್ಭಾಗ ಮತ್ತು ಕೆಳಭಾಗದಲ್ಲಿ ತಳಮುಖವನ್ನು ಕತ್ತರಿಸಬೇಕು. (ಉತ್ತರದಿಕ್ಕಿನ ಸಮತಲ ತುಂಡಿನಲ್ಲಿ ವಾಯವ್ಯ ದಿಕ್ಕಿನಲ್ಲಿ ಮೇಲ್ಮುಖವೂ, ಈಶಾನ್ಯ ದಿಕ್ಕಿನಲ್ಲಿ ತಳಮುಖವೂ ಕತ್ತರಿಸಲ್ಪಡುತ್ತದೆಯಲ್ಲದೆ, ಇದು ಕ್ರಮವಾಗಿ ಪಶ್ಚಿಮದಿಕ್ಕಿನ ತುಂಡಿನ ಕೆಳಭಾಗದಲ್ಲೂ, ಪೂರ್ವದ ತುಂಡಿನ ಮೇಲ್ಭಾಗದಲ್ಲೂ ಸ್ಥಾನ ಪಡೆಯುತ್ತದೆ). ಈ ರೀತಿಯ ಬೆಸುಗೆಯನ್ನು 'ಸರ್ವತೋಭದ್ರ' ರೀತಿ ಎಂದು ಕರೆಯಲಾಗಿದೆ.[೨೧] ಇದನ್ನು ದಕ್ಷಿಣದಿಂದ ಆರಂಭಿಸಿ ಸೇರಿಸಬೇಕು. (ಚಿತ್ರ - ೪) ಇದನ್ನೇ ಮಾನಸಾರವು, 'ಪೂರ್ವದ ತುಂಡು (ಲಂಬವಾಗಿ) ಆಧಾರವಾಗಿದ್ದು, ತುದಿ ಪೂರ್ವದೆಡೆಗಿರ ಬೇಕು; ಪಶ್ಚಿಮದ ತುಂಡಿನ ಕೆಳಭಾಗವು ದಕ್ಷಿಣದ ತುಂಡಿನ ಮೇಲಿರಬೇಕು. ಉತ್ತರದ ತುಂಡಿನ ಕೆಳಭಾಗವನ್ನು ಪಶ್ಚಿಮದ ತುಂಡಿನ ಮೇಲ್ಭಾಗದೊಂದಿಗೂ, ಮೇಲ್ಭಾಗವನ್ನು ಪೂರ್ವದ ತುಂಡಿನ ಮೇಲ್ಭಾಗದೊಂದಿಗೂ ಸೇರಿಸಬೇಕು' ಎಂದು ಹೇಳಿದೆ.[೨೨] (ಚಿತ್ರ - ೫). ಈ ರೀತಿಯ ಸಂಧಿಯು ಚೌಕಾಕಾರದ ಕಂಬಗಳಿಗೆ ಸೂಕ್ತವೆಂದು ಮಾನಸಾರವು ಹೇಳಿದೆ.[೨೩] ಇದು ಜಾಲಂದ್ರಗಳ ಚೌಕಟ್ಟು ರಚನೆಗೂ ಸೂಕ್ತವೆಂದು ಹೇಳಬಹುದಾಗಿದೆ.

**ನಂದ್ಯಾವರ್ತ** : ಈ ರೀತಿಯ ಸಂಧಿಯಲ್ಲಿ, ಒಂದು ಉದ್ದ ವಾದ ಭಾಗವು ಉತ್ತರ-ದಕ್ಷಿಣವಾಗಿದ್ದು, ದಕ್ಷಿಣದ ತುದಿಯಲ್ಲಿ ಅದು (ಪಶ್ಚಿಮದೆಡೆಗೆ)[೨೪] ಹೊರಚಾಚಿರಬೇಕು; ಇನ್ನೊಂದು ಉದ್ದವಾದ ಭಾಗವು ಪೂರ್ವ-ಪಶ್ಚಿಮವಾಗಿದ್ದು, ಅದು ಪಶ್ಚಿಮ ದಿಕ್ಕಿನಲ್ಲಿ (ಉತ್ತರದೆಡೆಗೆ) ಹೊರಚಾಚಿರಬೇಕು. ಮೂರನೇ ಉದ್ದವಾದ ಭಾಗವು ದಕ್ಷಿಣ-ಉತ್ತರವಾಗಿದ್ದು, ಉತ್ತರದ ತುದಿ ಯಲ್ಲಿಯೂ (ಪೂರ್ವದೆಡೆಗೆ), ನಾಲ್ಕನೇ ಉದ್ದವಾದ ಭಾಗವು ಪಶ್ಚಿಮ-ಪೂರ್ವವಾಗಿದ್ದು ಪೂರ್ವದಲ್ಲಿಯೂ (ದಕ್ಷಿಣದೆಡೆಗೆ) ಹೊರಚಾಚಿರಬೇಕು. ಇದನ್ನು ಪೂರ್ವ ಅಥವಾ ದಕ್ಷಿಣದಿಂದ ಆರಂಭಿಸಿ ಸೇರಿಸಬಹುದು. ಈ ಸಂಧಿಯಲ್ಲಿ ಒಂದು ಆಧಾರವೂ ಇನ್ನೊಂದು ಆಧಾರಿತವೂ ಆಗಿರುತ್ತದೆ.[೨೫] ಇದನ್ನು ನಂದ್ಯಾವರ್ತ ಚಿತ್ರದಂತೆಯೇ ಮಾಡಬೇಕೆಂಬ ಸೂಚನೆಯೂ ಗ್ರಂಥಗಳಲ್ಲಿದೆ. ಇದು 'ನಂದ್ಯಾವರ್ತ'ಕ್ಕೆ ಯಾವ ರೀತಿಯಲ್ಲಿ ಹೋಲಿಕೆಯಾಗುತ್ತ ದೆಂದು ನನಗೆ ಸ್ಪಷ್ಟವಾಗಿಲ್ಲ.[೨೫ಅ] ಈ ಬಗ್ಗೆ ಮಾನಸಾರವು ನೀಡಿರುವ ಚಿತ್ರವು (ಚಿತ್ರ-೬) 'ಸರ್ವತೋಭದ್ರ'ದಂತೆಯೇ ಇದೆಯ ಲ್ಲದೆ, ವಿವರಣೆಗಿಂತ ಭಿನ್ನವಾಗಿದೆ. ಒಟ್ಟಾರೆ ವಿವರಣೆಯನ್ನು ಗಮನಿಸಿದರೆ, ಇದು 'ಸ್ವಸ್ತಿಕ' ( 卐 ) ದ ಆಕಾರದಲ್ಲಿರುವಂತೆ ತೋರುತ್ತದೆ. ಈ ಸಂಧಿಯನ್ನು ಎಲ್ಲ ರೀತಿಯ ಕಲ್ಲಿನ ಕಟ್ಟಡಗಳಲ್ಲಿ ಮುಂಭಾಗದಲ್ಲಿ, ಬಲಭಾಗದಲ್ಲಿ, ಮೇಲ್ಭಾಗದಲ್ಲಿ ಮತ್ತು ಅಂತ್ಯದಲ್ಲಿ ಮಾಡಬೇಕೆಂದು ಮಾನಸಾರವು ಹೇಳಿದೆ.[೨೬] ನಾಲ್ಕು ತುಂಡುಗಳನ್ನು ಸೇರಿಸಿ ಕಂಬವನ್ನು ಮಾಡುವಲ್ಲಿ ಈ ರೀತಿಯಾದ ಸಂಧಿಕರ್ಮವನ್ನೂ ಮಾಡಬಹುದಾಗಿ ತಿಳಿದುಬರುತ್ತದೆ.

**ಸ್ವಸ್ತಿಕ** : ಈ ಸಂಧಿಯ ಬಗ್ಗೆ ಮಯಮತವು ನೀಡುವ ವಿವರವು ಈ ರೀತಿಯಾಗಿದೆ : 'ಒಂದು ಉದ್ದವಾದ ಭಾಗವಿದ್ದು, ಅದರ ಮೇಲ್ಭಾಗವು ಈಶಾನ್ಯದಲ್ಲಿಯೂ (ಕೆಳಭಾಗ ನೈಋತ್ಯ ದಲ್ಲಿಯೂ) ಇದ್ದು, ಅಕ್ಕಪಕ್ಕದ ಅನೇಕ ಭಾಗಗಳೊಂದಿಗೆ ಸೇರಿರ ಬೇಕು. ಲಂಬಕೋನದ (Perpendicular) ಭಾಗವಿದ್ದು, ಕುಳಿ ಯಲ್ಲಿ ಕೂರುವ ಚಾಚುಗಳಿದ್ದು, ಎರಡು ಅಥವಾ ಹೆಚ್ಚಿನ ತುಂಡುಗಳೊಂದಿಗೆ ಸೇರಿರಬೇಕು. ಇವೆಲ್ಲವನ್ನೂ ಸ್ವಸ್ತಿಕ ರೀತಿಯಲ್ಲಿ ಸೇರಿಸಿದರೆ ಅದಕ್ಕೆ 'ಸ್ವಸ್ತಿಬಂಧ' ಅಥವಾ 'ಸ್ವಸ್ತಿಕ' ಸಂಧಿಕರ್ಮ ಎಂದು ಹೆಸರು.[೨೭] ಈ ಬಗ್ಗೆ ಮಾನಸಾರವು ಹೆಚ್ಚಿನ ವಿವರಗಳನ್ನು ನೀಡಿದೆ. ಇದರಂತೆ, ಮರದ ತಳಭಾಗದಲ್ಲಿ ರಂಧ್ರವೂ ಮೇಲ್ಭಾಗ ದಲ್ಲಿ 'ಶಿಖಾ'ವೂ (Point, Apex) ಇರಬೇಕು. ರಂಧ್ರ ಮತ್ತು ಶಿಖಾ ಇರಬೇಕಾದ ದಿಕ್ಕನ್ನೂ, ಸಂಧಿಕರ್ಮ ಮಾಡಬೇಕಾದ ದಿಕ್ಕನ್ನೂ ಈ ಗ್ರಂಥವು ವಿವರಿಸಿದೆ.[೨೮] ಒಟ್ಟಾರೆ ಇದು ಸ್ವಸ್ತಿಕ ಚಿತ್ರದಂತೆಯೇ ಇರುತ್ತದೆ (ಚಿತ್ರ-೭). ಈ ಮೊದಲು ಹೇಳಿದ 'ನಂದ್ಯಾವರ್ತ'ದ ವಿವರಣೆಯ ಹಿನ್ನೆಲೆಯಲ್ಲಿ ಗಮನಿಸಿದರೆ, ಬಹುಶಃ ಇದು 'ಸ್ವಸ್ತಿಕ' ಸಂಧಿಕರ್ಮದ ಸಂಕೀರ್ಣರೂಪದಂತೆ ತೋರುತ್ತದೆ. ಒಂದು ಮೂಲೆಯ ಅಕ್ಕಪಕ್ಕಗಳಲ್ಲಿ ಕಂಬಗಳಿದ್ದಾಗ, ಈ ಸಂಧಿಯನ್ನು ಬಳಸಬಹುದಾಗಿ ತಿಳಿದುಬರುತ್ತದೆ.

**ವರ್ಧಮಾನ** : ಈ ಸಂಧಿಯನ್ನು ವರ್ಧಮಾನ ರೀತಿಯ ಕಟ್ಟಡಗಳಲ್ಲಿ ಬಳಸಬೇಕೆಂದು ಮಾನಸಾರವು ಹೇಳಿದೆ[೨೯] ಯಾದರೂ, ಈ ಬಗ್ಗೆ ಅದು ನೀಡುವ ವಿವರಗಳು[೩೦] ಅಸ್ಪಷ್ಟ ವಾಗಿವೆ.

**ಕಂಬಗಳಲ್ಲಿ ಮಾಡುವ ಸಂಧಿಕರ್ಮ** : ಕಂಬಗಳಲ್ಲಿ ಮಾಡುವ ಸಂಧಿಕ್ರಿಯೆಗೆ ಸಂಬಂಧಿಸಿದಂತೆ ಮೇಷಯುದ್ಧ, ತ್ರಿಖಂಡ, ಸೌಭದ್ರ, ಅರ್ಧಪಾಣಿ ಮತ್ತು ಮಹಾವೃತ್ತ ಎಂಬ ೫

ವಿಧಗಳನ್ನು ಮಯಮತವು ಹೇಳಿದೆ.[೩೧] ಮಾನಸಾರವು ತ್ರಿಖಂಡವನ್ನು 'ತ್ರಿಕರ್ಣಾಭ' ಎಂದೂ, ಅರ್ಧಪಾಣಿಯನ್ನು 'ಅರ್ಧಪ್ರಾಣ' ಎಂದೂ ಕರೆದಿದೆ.

**ಮೇಷಯುದ್ಧ** : ಈ ರೀತಿಯ ಸಂಧಿಯಲ್ಲಿ ಸ್ತಂಭದ ೧/೩ನೇ ಒಂದು ಭಾಗದಷ್ಟು ಅಗಲ ಮತ್ತು ಅಗಲದ ೨ ಅಥವಾ ೨೧/೨ ಯಷ್ಟು ಉದ್ದ 'ಮಧ್ಯಮ ಶಿಖಾ' ಇದ್ದಲ್ಲಿ ಅದು 'ಮೇಷಯುದ್ಧ' ಸಂಧಿ ಎಂದು ಮಯಮತವು ಹೇಳಿದೆ.[೩೨] ಮಾನಸಾರದಲ್ಲೂ ಇದೇ ರೀತಿಯ ವಿವರಗಳಿವೆ. ಅದರ ಪ್ರಕಾರ, ಉದ್ದ ಮತ್ತು ಅಗಲ ಸಮನಾಗಿರಬೇಕು; ಜೊತೆಗೆ ಕೆಳಭಾಗದ ಕರ್ಣದಲ್ಲಿ ರಂಧ್ರ ಇರಬೇಕು; ಮೇಲ್ಭಾಗದ ಕರ್ಣದಲ್ಲಿ ಮಧ್ಯೆ '=ಶಿಖಾ' ಇರಬೇಕು (ಅಂದರೆ, ಈ ರಂಧ್ರದೊಳಗೆ 'ಶಿಖಾ'ವನ್ನು ಕೂರಿಸಲಾಗುತ್ತದೆ). ಈ ಸಂಧಿಯ ೪ ಪಕ್ಕಗಳಲ್ಲೂ ಅಡ್ಡಕಂಬಿ (Pikes) ಗಳಿರಬೇಕೆಂದೂ ಇದರಲ್ಲಿದೆ.[೩೩] (ಚಿತ್ರ-೮) ಈ ರೀತಿಯ ಸಂಧಿಕರ್ಮವನ್ನು ಎಲ್ಲ ರೀತಿಯ ಕಲ್ಲಿನ ಸ್ತಂಭಗಳಲ್ಲಿ ಮಾಡಬಹುದಾಗಿದೆ.[೩೪] 'ಪ್ರಣಾಳ' ರಚನೆಯಲ್ಲಿಯೂ ಇದೇ ತಂತ್ರವನ್ನು ಬಳಸಬಹುದಾಗಿ ತಿಳಿದುಬರುತ್ತದೆ.

**ತ್ರಿಖಂಡ/ತ್ರಿಕರ್ಣಾಭ** : ಮೂರು ಕುಳಿಗಳು ಮತ್ತು ಮೂರು ಚಾಚುಗಳಿದ್ದು (Mortrices and Tenons), ಅದನ್ನು ಸ್ವಸ್ತಿ ಆಕಾರದಲ್ಲಿ ಸೇರಿಸಿದರೆ, ಅದಕ್ಕೆ 'ತ್ರಿಖಂಡ' ಸಂಧಿಕರ್ಮ ಎಂದು ಹೆಸರು.[೩೫] ಮಾನಸಾರವೂ ಇದೇ ರೀತಿಯಾಗಿ, ಮೂರು 'ಚೂಲಿಕಾ' ಮತ್ತು ಮೂರು ಕರ್ಣ ಇದ್ದು, ಅದು ಸ್ವಸ್ತಿ ಆಕಾರದಲ್ಲಿ ಸೇರಿರಬೇಕೆಂದು ಹೇಳಿದೆಯಲ್ಲದೆ, ಇದರೊಂದಿಗೆ ಒಂದು 'ಕೀಲ' ಇದ್ದರೆ ಭದ್ರವಾಗಿರುತ್ತದೆಂದೂ ಹೇಳಿದೆ.[೩೬] (ಚಿತ್ರ-೯) ಇದನ್ನು ವೃತ್ತಾಕಾರದ ಸ್ತಂಭದಲ್ಲಿ ಮಾಡಬಹುದು ಎಂದು ಮಾನಸಾರವು ಸೂಚಿಸಿದೆಯಾದರೂ, ಇದನ್ನು ಬೇರೆ ಆಕಾರದ ಕಂಬಗಳಲ್ಲಿಯೂ ಬಳಸಬಹುದಾಗಿ ತಿಳಿದುಬರುತ್ತದೆ.

**ಅರ್ಧಪಾಣಿ** : ಎರಡು ಮೇಲಿನ ತುಂಡಿನ ಅರ್ಧಭಾಗ (-ದ ಹಿಂಭಾಗ) ಮತ್ತು ಕೆಳಗಿನ ತುಂಡಿನ ಅರ್ಧಭಾಗ (-ದ ಮುಂಭಾಗ) ವನ್ನು ಸ್ತಂಭದ ದಪ್ಪಕ್ಕೆ ಬೇಕಾದಂತೆ ತುಂಡರಿಸಿ ಒಂದರೊಡನೊಂದನ್ನು ಸೇರಿಸುವ ಸಂಧಿಯನ್ನು 'ಅರ್ಧಪಾಣಿ' ಎಂದು ಕರೆಯಲಾಗಿದೆ.[೩೭] (ಚಿತ್ರ-೧೦) ಈ ಸಂಧಿಯಲ್ಲಿ 'ಕರ್ಣ'ದ ಅಳತೆಯನ್ನೂ ಹೇಳಿರುವ ಮಾನಸಾರವು, ಮೂಲದಿಂದ ತುದಿಯವರೆಗೂ 'ಕೀಲ'ಗಳಿಂದ ಕೂಡಿರಬೇಕು ಎಂದೂ ಹೇಳಿದೆ.[೩೮] ಈ ಬೆಸುಗೆಯು ಹಡೆಯಂತೆ ಅಥವಾ ಗವುಸಿನಂತೆಯೂ ಹರಡಿರಬಹುದೆಂದು ಈ ಗ್ರಂಥಗಳಿಂದ ತಿಳಿದುಬರುತ್ತದೆ. (ಚಿತ್ರ-೧೧). ಇದನ್ನು ಎಲ್ಲಾ ಸಂಧಿಗಳ ತುದಿಯಲ್ಲಿ ಮಾಡಬಹುದೆಂದು ಮಾನಸಾರವೂ,[೩೯] ಸಮತಲ ಭಾಗಗಳ ಬೆಸುಗೆಯಲ್ಲಿ ಮಾಡಬಹುದೆಂದು ಮಯಮತವೂ ಹೇಳಿದೆ.[೪೦] ಕೊನೆಯ ಅಂಚಿನಲ್ಲಿ ಸ್ತಂಭವು ಇದ್ದಾಗ, ಈ ರೀತಿಯ (ಚಿತ್ರ-೧೧) ಸಂಧಿಕಾರ್ಯವನ್ನು ಮಾಡುವುದಾಗಿ ತಿಳಿದುಬರುತ್ತದೆ. ಈ ಸಂಧಿಯ ಬಗ್ಗೆ ಎರಡೂ ಗ್ರಂಥಗಳು ನೀಡುವ ವಿವರಗಳು, ಚಿತ್ರ ಮತ್ತು ಉಪಯುಕ್ತತೆಯನ್ನು ಗಮನಿಸಿದರೆ, ಎರಡೂ ಬೇರೆ ಬೇರೆ ರೀತಿಯ ಸಂಧಿಗಳಾಗಿರಬಹುದೇ ಎಂಬ ಅನುಮಾನ ಬರುತ್ತದೆ.

**ಮಹಾವೃತ್ತ** : ಮಹಾವೃತ್ತ ಸಂಧಿಯಲ್ಲಿ ಎರಡು ಲಲಾಟ(?)ಗಳಿದ್ದು, ಅದು ಅರ್ಧಚಂದ್ರಾಕಾರದಲ್ಲಿ ಅಗಲವಾಗಿ ಹರಡಿರುವುದು; ಮಧ್ಯೆ, ಮೇಲೆ ಮತ್ತು ಕೆಳಭಾಗದಲ್ಲಿ 'ದಂತ'ಗಳಿರುವುದು ಎಂದು ಮಾನಸಾರವು ಹೇಳಿದೆ.[೪೧] (ಚಿತ್ರ-೧೨) ಮಯಮತದ ಪ್ರಕಾರ, ಅರ್ಧವೃತ್ತಾಕಾರದ ಚಾಚು (Tenon) ಮಧ್ಯದಲ್ಲಿದ್ದರೆ, ಅದು 'ಮಹಾವೃತ್ತ'[೪೨]. ವೃತ್ತಾಕಾರದ ಸ್ತಂಭಗಳಲ್ಲಿ ಈ ರೀತಿಯ ಬೆಸುಗೆಯನ್ನು ಮಾಡಬಹುದೆಂದು ಮಯಮತವು ಹೇಳಿದೆ. ಒಟ್ಟಾರೆ ಇದು ಮೇಷಯುದ್ಧ ರೀತಿಯ ಸಂಧಿಯಂತೆಯೇ. ಆದರೆ, ಮೇಲಿನಿಂದ ಹೆಚ್ಚಿನ ಭಾರ ಬೀಳುವ ಸಂದರ್ಭದಲ್ಲಿ ಈ ರೀತಿಯ ಸಂಧಿಕರ್ಮವನ್ನು ಮಾಡುತ್ತಾರಲ್ಲದೆ, ತುಲಾ (Beam) ರಚನೆಯಲ್ಲಿಯೂ ಬಳಸಬಹುದಾಗಿದೆ.

**ಸೌಭದ್ರ** : ಈ ರೀತಿಯ ಬೆಸುಗೆಯು ನಾಲ್ಕು 'ಶಿಖಾ'ಗಳಿಂದ ಕೂಡಿರುತ್ತದೆಂದು ಮಯಮತವು ಹೇಳಿದೆ.[೪೩] ಚೌಕಾಕಾರದ ಕಂಬದಲ್ಲಿ ಮಧ್ಯದಲ್ಲಿ ಪಟ್ಟಿಕೆಯನ್ನು ಮುಕುಟದಂತೆ ಮಾಡಿದ್ದು, ಸಂಧಿಯು 'ದಂತ'ಗಳಿಂದ ಕೂಡಿದ್ದರೆ, ಅದು 'ಸರ್ವತೋಭದ್ರ' ಸಂಧಿ ಎಂದು ಮಾನಸಾರವು ಹೇಳಿದೆ.[೪೪] ಇದು ಚೌಕಾಕಾರದ ಕಂಬಗಳಲ್ಲಿನ ಸಂಧಿ ಎಂಬ ಸೂಚನೆಯೂ ಇದರಲ್ಲಿದೆ. ಇದರಿಂದಾಗಿ, ಮಯಮತವು ಹೇಳುವ ಸೌಭದ್ರವನ್ನೇ ಇಲ್ಲಿ 'ಸರ್ವತೋಭದ್ರ' ಎಂದಿರುವಂತೆ ತೋರುತ್ತದೆ.

ಈ ಎಲ್ಲವೂ ಕಂಬಗಳಲ್ಲಿ ಮಾಡುವ ಸಂಧಿಗಳಾಗಿದ್ದು, ಈ ಬಗ್ಗೆ ಇನ್ನೂ ಕೆಲವು ವಿವರಗಳನ್ನು ಮಾನಸಾರವು ನೀಡಿದೆ : ೧) ಕಂಬದ ಮಧ್ಯದಲ್ಲಿ ಸಂಧಿಯನ್ನು ಸೂಕ್ತ ರೀತಿಯಲ್ಲಿ ಮಾಡಬೇಕಲ್ಲದೆ, ಅದರ ಮೇಲಿನ ಭಾಗವನ್ನು ಕೆಳಗಿನಂತೇ ಮಾಡಬೇಕು.[೪೫] ೨) ಕಂಬದ ಮುಂಭಾಗದಲ್ಲಿ 'ಶಿಖಾ' ಇರಬೇಕಲ್ಲದೆ, ಕಂಬದ ಮಧ್ಯೆ ಕಾಣದಂತಿರಬೇಕು.[೪೬] ೩) (ಮರದ) ಮೇಲ್ಭಾಗ ಮತ್ತು ತಳಭಾಗದಲ್ಲಿ ಸಂಧಿ ಇರುವುದು ಸೂಕ್ತವಾದುದು; ಸಂಧಿಯ ಮೂಲವು ಮಧ್ಯದಲ್ಲಿರಬಾರದು; ಆದ್ದರಿಂದ, ಸ್ತಂಭದ ಮಧ್ಯ ಭಾಗವು 'ಸಂಧಿಮಧ್ಯಮ'ಗಳಿಂದ ಹೊರತಾಗಿರಬೇಕು. ಅಂದರೆ, ಕಂಬದ ಮಧ್ಯದಲ್ಲಿ ಸಂಧಿಕಾರ್ಯವನ್ನು ಮಾಡಬಾರದು.[೪೭] ೪) 'ಕೀಲ'ದ ಮೂಲವು ಸ್ತಂಭದ ಚಾಚುಭಾಗದಿಂದ (-'ಭಿತ್ತಿಪಾದ'ದಿಂದ) ಹೊರಗಿರಬಾರದು.[೪೮] ೫) ಕಂಬದ ತಳಭಾಗವನ್ನು ಮರದ ಬೇರಿನಂತೆ ಮರ ಮತ್ತು ಕಲ್ಲಿನಿಂದ ಭದ್ರವಾಗಿ ಮಾಡಬೇಕು.[೪೯] ೬) ಮರವನ್ನು 'ಉತ್ತರ'ದಲ್ಲಿ ಸೇರಿಸಬೇಕಾಗಿದ್ದಲ್ಲಿ, ಅದರ ಮುಖಭಾಗವು (?) 'ಆಲಿಂಗ' ದಲ್ಲಿರಬೇಕು; ಮರವನ್ನು ಕೆಳಭಾಗದಲ್ಲಿ ('ಉದಯ')ದಲ್ಲಿ ಸೇರಿಸಬೇಕಾದಲ್ಲಿ ಮೂಲವು

ಮೇಲ್ಭಾಗದಲ್ಲಿದ್ದು, ಮುಂಭಾಗವು ಕೆಳಗಿರಬೇಕು. ಇದು ಕಂಬಗಳು ಅಥವಾ ಯಾವುದೇ ಭಾಗದಲ್ಲೂ ಅನುಸರಿಸಲು ಯೋಗ್ಯ ವಾಗಿದೆ.[೪೯]

**ಸಮತಲ ಭಾಗಗಳ ಸಂಧಿಗಳು** : ಝುಕ್ಷದಂತ, ಸಂಕೀರ್ಣ, ವಜ್ರಸನ್ನಿಭ / ವಜ್ರಾಭ ಸೂಕರಘ್ರಾಣ ಮತ್ತು ಷಟ್‌ಶಿಖಾ - ಈ ಐದು - ಸಮತಲ ಭಾಗಗಳಿಗೆ, ಸೂಕ್ತವಾದ ಸಂಧಿಗಳೆಂದು ಮಯಮತವು ಹೇಳಿದೆ. ಮಾನಸಾರವು, ಝುಕ್ಷದಂತವನ್ನು 'ಇಕ್ಷುದಂತ'ವೆಂದೂ, ವಜ್ರಸನ್ನಿಭವನ್ನು 'ಬ್ರಹ್ಮಮಸ್ತಕ'ವೆಂದೂ ಹೆಸರಿಸಿದೆ.

**ಸೂಕರಘ್ರಾಣ** : ಏಡಿಯ ಪಾದದ ಆಕೃತಿಯಲ್ಲಿದ್ದು, ಅದಕ್ಕೆ ಹಂದಿಯ ನಾಸಿಯಂತಹ ಭಾಗವನ್ನು ಸೇರಿಸಿರಬೇಕು. ಮಧ್ಯೆ ಕೀಲ ಇದ್ದು, ಅದನ್ನು ಬಲಯುಕ್ತವಾಗಿ ಸೇರಿಸಬೇಕು. ಇದು ಸೂಕರಘ್ರಾಣ ಬೆಸುಗೆ.[೫೦] (ಚಿತ್ರ-೧೩)

**ಸಂಕೀರ್ಣ** : ಅನೇಕ 'ಕೀಲ'ಗಳು ಮತ್ತು 'ಶೂಲ'ಗಳನ್ನು ಮರದ ತುಂಡಿಗೆ ಸೇರಿಸಿದ್ದರೆ, ಅದು 'ಸಂಕೀರ್ಣ ಸಂಧಿ' ಎಂದು ಮಾನಸಾರವು ಹೇಳಿದ್ದರೆ,[೫೧] ಬೇರೆ ಬೇರೆ ಅಳತೆಯ ಕೀಲಗಳಿಂದ ಸಂಧಿ ಮಾಡಿದ್ದರೆ ಅದು ಸಂಕೀರ್ಣ ಸಂಧಿ ಎಂದು ಮಯಮತವು ಹೇಳಿದೆ.[೫೨] ಇದು ಎಲ್ಲ ರೀತಿಯ ಕಟ್ಟಡಗಳಿಗೆ ಹೊಂದುತ್ತದೆ ಎಂದು ಗ್ರಂಥಗಳು ಹೇಳಿವೆ.

**ಷಟ್‌ಶಿಖಾ** : ನೇಗಿಲಿನಂತೆ ಸೇರಿಸಿದ ಆರು ಚಾಚುಗಳಿದ್ದರೆ, ಅದು 'ಷಟ್‌ಶಿಖಾ' ಸಂಧಿ.[೫೩] ಮೇಲೆ ಮತ್ತು ಕೆಳಗಿನ ಭಾಗವು ಆರುಮುಖದಲ್ಲಿರಬೇಕು ಎಂದು ಮಾನಸಾರವು ಒಂದು ಸಂಧಿಯ ಬಗ್ಗೆ ಹೇಳಿರುವುದು[೫೪] ಈ ಷಟ್‌ಶಿಖಾಸಂಧಿಯನ್ನೇ ಎನಿಸುತ್ತದೆ.

**ಝುಕ್ಷದಂತ** : ಇದರಲ್ಲಿ, 'ಷಟ್‌ಶಿಖಾ' ದಂತೇ ಚಾಚು ಗಳಿದ್ದರೂ, ಮೇಲಿನ ಮತ್ತು ಕೆಳಗಿನ ತುಂಡುಗಳಲ್ಲಿ ದೃಢತೆಗೆ ತಕ್ಕಂತೆ ಹೆಚ್ಚಿನ ಚಾಚುಗಳಿರುತ್ತವೆ. ಅವು ಆಯೋಜಿಸಿರುವ ಬೆಸುಗೆಗೆ ಲಂಬವಾಗಿರುತ್ತವೆ.[೫೫] ಮಾನಸಾರವು ಇದನ್ನು 'ಇಕ್ಷುದಂತ' ಎಂದಿದ್ದು, ಇದರ ವಿವರಣೆಯು ಸ್ಪಷ್ಟವಾಗಿಲ್ಲ.[೫೬] ಈಶಾನ ಶಿವಗುರುದೇವ ಪದ್ಧತಿಯಲ್ಲೂ ಇದರ ವಿವರವಿರುವುದಾಗಿ ತಿಳಿದುಬರುತ್ತದೆ.[೫೭]

**ವಜ್ರಸನ್ನಿಭ** : ಈ ರೀತಿಯ ಸಂಧಿಯಲ್ಲಿ ಒಂದೇ ಒಂದು 'ಶಿಖಾ' ಇದ್ದು, ಅದು ವಜ್ರಾಕೃತಿಯಲ್ಲಿರುತ್ತದೆ.[೫೮] ವಜ್ರಾಕೃತಿಯ ಶೂಲವಿರುವ ಸಂಧಿಯನ್ನು ಮಾನಸಾರವು 'ಬ್ರಹ್ಮಮಸ್ತಕ' ಎಂದಿದ್ದು,[೫೯] ಈ ಎರಡೂ ಒಂದೇ ಎನ್ನಿಸುತ್ತದೆ.

ಈ ಎಲ್ಲ ಸಮತಲ ಸಂಧಿಗಳನ್ನು ಯಾವುದೇ ರೀತಿಯ ಕಟ್ಟಡಗಳಲ್ಲಿ, ಗೋಡೆಗಳಲ್ಲಿ ಮಾಡಬಹುದೆಂದು ಮಾನಸಾರವು ಹೇಳಿದೆ.[೬೦] ಇವೆಲ್ಲವೂ ಸಮತಲ ಭಾಗಗಳ ಬೆಸುಗೆಗಳಾದರೂ, ಲಂಬಭಾಗಗಳ ಬೆಸುಗೆಗೂ ಉಪಯುಕ್ತವೆಂಬ ಸೂಚನೆ ಇದೆ. ಒಂದು ನಿರ್ಮಾಣದಲ್ಲಿ, ಈ ವಿವಿಧ ಸಂಧಿಗಳಲ್ಲಿ ಮೇಲಿನಿಂದ ಕೆಳಗೆ ಒಂದನ್ನು ಮಾತ್ರ ಉಪಯೋಗಿಸಬೇಕು ಎಂದು ಮಯ ಮತವು ಹೇಳಿದೆ.[೬೧]

ಇಷ್ಟೇ ಅಲ್ಲದೆ, ದಿಕ್ಕು-ವಿದಿಕ್ಕುಗಳಲ್ಲಿ ಮಾಡುವ ಸಂಧಿಯನ್ನು ಆದಿತ್ಯ, ಧರ್ಮರಾಜ, ಜಲೇಶ ಮತ್ತು ನಿಶಾಧಿಪ ಎಂದು ಮಾನ ಸಾರವು ಹೇಳಿದೆ.[೬೨] ಇನ್ನೂ ಎರಡು ಸಂಧಿಗಳ ಚಿತ್ರಗಳನ್ನು ಮಾನಸಾರವು ನೀಡಿದೆ. ಅದರಲ್ಲಿ ಒಂದು, ಸಮತಲ-ಲಂಬ ಪಟ್ಟಿಗಳ ಬೆಸುಗೆ (ಚಿತ್ರ-೧೪) ಇದನ್ನು ದಪ್ಪಕಂಬಗಳಲ್ಲಿ ಮಧ್ಯೆ ಮತ್ತು ಎರಡು ದಪ್ಪ ಕಂಬಗಳನ್ನು ಸೇರಿಸುವಾಗ ಬಳಸುತ್ತಾರೆಂದು ತಿಳಿದುಬರುತ್ತದೆ. ಅಂತೇ ಇನ್ನೊಂದರಲ್ಲಿ (ಚಿತ್ರ-೧೫) ಪಟ್ಟಿಕೆಗಳ ಬೆಸುಗೆಯನ್ನು ಹೇಳಲಾಗಿದೆ. ಇದನ್ನು 'ಪ್ರಸ್ತರ'ದ ಭಾಗದಲ್ಲಿ ಬಳಸುವುದು ಸೂಕ್ತವೆಂದು ತಿಳಿದುಬರುತ್ತದೆ.

ಸಂಧಿಕಾರ್ಯಕ್ಕೆ ಸಂಬಂಧಿಸಿದಂತೆ ಇನ್ನೂ ಕೆಲವು ಸೂಚನೆ ಗಳನ್ನು ಗ್ರಂಥಗಳು ನೀಡಿವೆ : ೧) 'ಪ್ರತಿವಂಶ' (frieze)ದ ಲಂಬಭಾಗದಲ್ಲಿ ಮರದ ಎಡ ಮತ್ತು ಬಲಮುಖವನ್ನು ನಿಶ್ಚಯಿಸಿ ಕೊಂಡು 'ಶಿಖಾ'ವನ್ನು ಬಲಮುಖದ ಮೂಲದಲ್ಲಿ ಮತ್ತು ಎಡ ಮುಖದ ಮೇಲ್ಭಾಗದಲ್ಲಿಯೂ ಜೋಡಿಸಬೇಕು.[೬೩] ೨) ಪಾರ್ಶ್ವ ದಲ್ಲಿರುವ ತುಂಡುಗಳಿಗೆ ಸಂಬಂಧಿಸಿದಂತೆ, ಕೆಳಭಾಗವು ಒಳ ಗಡೆಗೂ ಮೇಲ್ಭಾಗವು ಹೊರಗೂ ಇರುವಂತೆ ಜೋಡಿಸಬೇಕು.[೬೪] ೩) ಪಾರ್ಶ್ವದಲ್ಲಿ ಸೇರಿಸಿದ ಮರವನ್ನು ಮುಂಭಾಗದ ಕುಳಿಯಲ್ಲಿ ('ಕುಲೀರಗ್ರ') ಬೆಸೆಯಬೇಕು.[೬೫] ೪) ಎಲ್ಲ ಪಕ್ಕಗಳಲ್ಲೂ ಸಂಧಿ ಮಾಡಿದ್ದರೆ, ಮತ್ತೆ ಪ್ರತ್ಯೇಕವಾದ ಸಂಧಿಯ ಅವಶ್ಯಕತೆ ಇಲ್ಲ.[೬೬] ೫) ದಂತದ ತಳಭಾಗದಲ್ಲಿ ರಂಧ್ರವಿರಬಾರದು; ಮರದ ತುಂಡಿನ ಮಧ್ಯೆ, ಮೇಲ್ಭಾಗ ಮತ್ತು ಮರದ ಮಧ್ಯಭಾಗ - ಈ ಸ್ಥಾನಗಳಿಂದ 'ದಂತ' ಹೊರಚಾಚಿರಬೇಕು.[೬೭] ೬) 'ಕೀಲ'ವನ್ನು ಒಬ್ಬರ ಇಚ್ಛೆ ಮತ್ತು ಶಕ್ತಿಗೆ ತಕ್ಕಂತೆ ಸೇರಿಸಿರಬೇಕು.[೬೮]

ಹೀಗೆ, ಅನೇಕ ರೀತಿಯ 'ಸಂಧಿ'ಗಳ ಬಗ್ಗೆ ಗ್ರಂಥಗಳು ಹೇಳಿವೆ. ಒಂದೊಂದು ರೀತಿಯ ಭಾಗಕ್ಕೂ ಒಂದೊಂದು ಸಂಧಿ ಯನ್ನು ನಿಶ್ಚಿತವಾಗಿ ಹೇಳಿದ್ದರೂ, ಗ್ರಂಥದಲ್ಲೇ ಹೇಳಿರುವಂತೆ ಅದನ್ನು ಬೇರೆ ಭಾಗಕ್ಕೂ ಅನ್ವಯಿಸಬಹುದಾಗಿದೆ. ಲಂಬ ಭಾಗಕ್ಕೆ ಲಂಬ ರೀತಿಯಲ್ಲೂ, ಸಮತಲವಾಗಿರುವ ಭಾಗಕ್ಕೆ ಸಮತಲ ರೀತಿಯಲ್ಲೂ ಸಂಧಿ ಮಾಡುವುದು ಮುಖ್ಯ. ಒಂದು ಭಾಗದ ಮೇಲೆ ಎಷ್ಟರ ಮಟ್ಟಿಗೆ ಭಾರ ಬೀಳುತ್ತದೆ ಮತ್ತು ಭಾರದ ಒತ್ತಡವು ಯಾವ ಕಡೆಯಲ್ಲಿದೆ ಎಂಬುದರ ಆಧಾರದ ಮೇಲೆ ಅದಕ್ಕೆ ಹೊಂದುವಂತೆ ಸಂಧಿ ಮಾಡಬೇಕು. ದೇಗುಲದ ವಿಸ್ತಾರ ಮತ್ತು ಹೊರಬೇಕಾದ ಭಾರಕ್ಕೆ ತಕ್ಕಂತೆ ಅದರ ಮುಖ್ಯಭಾಗಗಳಿರುತ್ತವೆ ಎಂಬುದನ್ನಿಲ್ಲಿ ಗಮನಿಸಬೇಕು. ಇದನ್ನು ಅರ್ಥಮಾಡಿಕೊಂಡು ಸಂದರ್ಭಕ್ಕೆ ಹೊಂದುವಂತೆ ಆ ಭಾಗವನ್ನು ರಚಿಸಿ, ಸೂಕ್ತ

ಚಿತ್ರ ೧ : ಇಂದ್ರಕೀಲ



ಚಿತ್ರ ೨ : ದಂತಕೀಲ




ಚಿತ್ರ ೩ : ಮಲ್ಲಬಂಧ



ಚಿತ್ರ ೪ : ಸರ್ವತೋಭದ್ರ (ಮಯಮತ)



ಚಿತ್ರ ೫ : ಸರ್ವತೋಭದ್ರ



ಚಿತ್ರ ೬ : ನಂದ್ಯಾವರ್ತ



ಚಿತ್ರ ೭ : ಸ್ವಸ್ತಿಕ



ಚಿತ್ರ ೮ : ಮೇಷಯುದ್ಧ



ಚಿತ್ರ ೯ : ತ್ರಿಕರ್ಣಾಭ




ಚಿತ್ರ ೧೦ : ಅರ್ಧಪಾಣಿ (ಮಯಮತ)



ಚಿತ್ರ ೧೧ : ಅರ್ಧಪಾಣಿ




ಚಿತ್ರ ೧೨ : ಮಹಾವೃತ್ತ



ಚಿತ್ರ ೧೩ : ಸೂಕರಘ್ರಾಣ



ಚಿತ್ರ ೧೪ : ವಜ್ರಸನ್ನಿಭ; ಸಮತಲ - ಲಂಬ ಪಟ್ಟಿಗಳ ಬೆಸುಗೆ



ಚಿತ್ರ ೧೫ : ವಜ್ರಸನ್ನಿಭ; ಪಟ್ಟಿಕೆಗಳ ಬೆಸುಗೆ



ರೀತಿಯಲ್ಲಿ ಸಂಧಿಮಾಡಬೇಕು. ಗ್ರಂಥಗಳು ಸಂಧಿಕರ್ಮದ ಹಿನ್ನೆಲೆಯಲ್ಲಿ ನಿರೂಪಿಸುವ ಈ ತತ್ವ ಮತ್ತು ತಂತ್ರಗಳನ್ನುಪಯೋಗಿಸಿ ಕಟ್ಟಡದ ಬೇರೆ ಬೇರೆ ಭಾಗಗಳಲ್ಲೂ ಇದೇ ರೀತಿಯ ಸಂಧಿಕರ್ಮವನ್ನು ಮಾಡಬಹುದಾಗಿದೆ. ಉದಾ:ಗೆ ಮೇಷಯುದ್ಧ ಸಂಧಿಯನ್ನು ಶಿಖರದಲ್ಲೂ ಅಳವಡಿಸಬಹುದಾಗಿದೆ. ಒಂದು ಭಾಗದ ಮೇಲೆ ಬೀಳುವ ಭಾರ. ಸಂಧಿಯಾಗಬೇಕಾದ ಭಾಗ, ಅದು ಇರುವ ಸ್ಥಳ, ಆ ಪ್ರದೇಶದ ಹವಮಾನ ಗುಣ - ಈ ಎಲ್ಲವನ್ನೂ ಆಧಾರವಾಗಿಟ್ಟುಕೊಂಡು ಸಂಧಿಕರ್ಮವನ್ನು ಮಾಡಬೇಕು. ಒಟ್ಟಾರೆ, ಒಂದು ಭಾಗವು ಇನ್ನೊಂದರೊಂದಿಗೆ ಸೇರಿಕೊಂಡಿರುವಂತೆ ಮತ್ತು ಒಂದು ಭಾಗವು ಇನ್ನೊಂದಕ್ಕೆ ಆಧಾರವೂ, ಇನ್ನೊಂದರಿಂದ ಆಧಾರಿತವೂ ಆಗಿರುವಂತೆ ಮಾಡುವುದು ಮುಖ್ಯ; ಯಾವುದೇ ಭಾಗವೂ ಆಧಾರರಹಿತವಾಗಿರ ಬಾರದು. ಹೀಗೆ ಒಂದರ ಆಧಾರದಿಂದ ಮತ್ತೊಂದನ್ನು ನಿಲ್ಲಿಸಿ ದೇಗುಲದ ಬಂಧವು ಸ್ಥಿರವಾಗುವಂತೆ ಮಾಡುವುದು - ಈ ಸಂಧಿಕರ್ಮದ ಮೂಲ ಉದ್ದೇಶ.

ಹೀಗೆ, ವಿವಿಧ ರೀತಿಗಳನ್ನು, ವಿವಿಧ ನಿಯಮಗಳನ್ನು ಗ್ರಂಥಗಳು ನಿರೂಪಿಸಿದ್ದರೂ, ಇವುಗಳನ್ನು ದೇವಾಲಯದ ಯಾವ ಭಾಗದಲ್ಲಿ ಅನುಸರಿಸಿರುವರೆಂದು ಅರ್ಥಮಾಡಿಕೊಳ್ಳಲು ಸಾಧ್ಯವಾಗಿದೆಯೇ ಹೊರತು ಅವುಗಳನ್ನು ಸೋದಾಹರಣವಾಗಿ ನಿರೂಪಿಸಲು ಸದ್ಯಕ್ಕೆ ಸಾಧ್ಯವಾಗುತ್ತಿಲ್ಲ. ಈ ಸಂಧಿಕರ್ಮವು ನಿಯಮದಂತೆ, ಹೊರಗೆ ಕಾಣದಂತೆ ವಾಸ್ತುವಿನ ಒಳಗೆ ನಡೆದಿರುವ ಕ್ರಿಯೆಯಾದುದರಿಂದ ಪೂರ್ಣರೂಪದಲ್ಲಿರುವ ದೇವಾಲಯಗಳಲ್ಲಿ ಇದನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಈ ವಿವರಣೆಗಳನ್ನು, ಪಾಳು ದೇವಾಲಯಗಳನ್ನು ಗಮನಿಸಿ ಖಚಿತಪಡಿಸಿಕೊಳ್ಳಬೇಕಾಗಿರುವುದರಿಂದ, ಕೆಲವು ವಿಷಯಗಳು ಇನ್ನೂ ಸ್ಪಷ್ಟವಾಗಬೇಕಾಗಿದೆ ಹಾಗೂ ಈ ಬಗ್ಗೆ ಇನ್ನೂ ಕ್ಷೇತ್ರಕಾರ್ಯ ಮಾಡಬೇಕಾಗಿದೆ. ಈಗಿನ ಕಾಲದಲ್ಲೂ ಇದೇ ರೀತಿಯ ಸಂಧಿಕರ್ಮವನ್ನು ಅನುಸರಿಸುತ್ತಿರುವುದಾಗಿ ತಿಳಿದು ಬಂದಿರುವುದರಿಂದ ಹಿಂದೆಯೂ ಇದೇ ಕ್ರಮದಲ್ಲಿ ಸಂಧಿಕರ್ಮವನ್ನು ಮಾಡುತ್ತಿದ್ದರೆಂದು ಊಹಿಸಲು ಸಾಧ್ಯವಿದೆ.*



***

## ಆಧಾರಸೂಚಿ ಮತ್ತು ಟಿಪ್ಪಣಿಗಳು

* ಈ ಗ್ರಂಥಗಳು ಹೇಳುವ ಸಂಧಿಕರ್ಮದ ಬಗ್ಗೆ ನನಗೆ ತಿಳುವಳಿಕೆ ನೀಡಿ ಅದರ ಉಪಯುಕ್ತತೆಯನ್ನು ತೋರಿಸಿಕೊಟ್ಟ ವಾಸ್ತುಶಿಲ್ಪಜ್ಞ (Civil Engineer) ನಾದ ನನ್ನ ಸೋದರ ಶ್ರೀ ಸಿ.ಎ. ಸಂಜಯ್‌ಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಹಾಗೂ ಚಿತ್ರಗಳನ್ನು ಪ್ರತಿಮಾಡಿಕೊಟ್ಟ ಗೆಳತಿ ಶ್ರೀಮತಿ ಜಯಶ್ರೀ ಅವರಿಗೆ ಧನ್ಯವಾದಗಳು. ಈ ಲೇಖನದ ಚಿತ್ರಗಳನ್ನು 'ಮಾನಸಾರ ಸೀರೀಸ್' - ಸಂಪುಟ IV ಮತ್ತು VII ರಿಂದಲೂ, ಉಳಿದಂತೆ ಚಿತ್ರದಲ್ಲೇ ತೋರಿಸಿರುವಂತೆ ಮಯಮತದಿಂದಲೂ ಕೃತಜ್ಞತೆಯಿಂದ ಬಳಸಿಕೊಳ್ಳಲಾಗಿದೆ.

೧ 'ಹರ್ಮ್ಯಾಣಾಂ ದಾರುಸಂಯೋಗಂ ಸಂಧಿಕರ್ಮಮುದೀರಿತಂ।' - ಮಾನಸಾರ-೧೭.೧.

೨. ಮಯಮತ - ೧೭.೧೨೨, ೬೧.

೩. ಕಾಮಿಕಾಗಮ, ಕಾಶ್ಯಪಶಿಲ್ಪ ಮುಂತಾದ ಗ್ರಂಥಗಳಲ್ಲಿ ಈ ಬಗ್ಗೆ ನನಗೆ ಯಾವ ವಿವರಗಳೂ ದೊರೆಯಲಿಲ್ಲ.

೪. ಮಯ - ೧೭.೧

೫. ಮಯ - ೧೭.೨

೬. ಮಯ / ಮಾನ - ೧೭.೨

೭. ಮಾನ - ೧೭.೧೪

೮. ಮಾನ - ೧೭.೩

೯. ೧೭.೪ - ೭೨

೧೦. ೧೭.೧೬ - ೧೭

೧೧. ಮಯ - ೧೭.೯೨

೧೨. ೧೭.೨೬ಬಿ - ೨೭ಎ

೧೩. ಮಾನ - ೧೭.೪೩

೧೪. ಮಯ - ೧೭.೮

೧೫. ಮಾನ - ೧೭.೮೧

೧೬. ಮಾನ - ೧೭.೧೮

೧೭. ಮಾನ - ೧೭.೭೮

೧೮. ಮಾನ - ೧೭.೯೬

೧೮ಎ. ಮಾನ - ೧೭.೧೯-೨೧; ನೋಡಿ : ಟಿಪ್ಪಣಿ - ೨೨.

೧೯. ಮಾನ - ೧೭.೬೩; ಮಯ - ೧೭.೪೪

೨೦. ಮಾನ - ೧೭.೪-೯; ಮಯ - ೧೭.೩-೫ಎ

೨೧. ಮಯ - ೧೭.೧೫ಬಿ-೧೮

೨೨. ೧೭.೨೪-೨೭. 'ಮಯಮತ'ದ ಸಂಪಾದಕರು ಅಡಿಟಿಪ್ಪಣಿಯಲ್ಲಿ, ಮಾನಸಾರದ 'ಸರ್ವತೋಭದ್ರ' ರೀತಿಯು ಭಿನ್ನವಾಗಿದೆಯೆಂದು ಹೇಳಿ ಅದರ ಶ್ಲೋಕವನ್ನು (ಮಾನ - ೧೭.೧೯-೨೧) ಉಲ್ಲೇಖಿಸಿದ್ದಾರೆ. ಆದರೆ ಇದು ಬಹುಶಃ ಸಂಧಿಕಾರ್ಯದ ಬಗ್ಗೆ ನೀಡಿರುವ ಸಾಮಾನ್ಯ ಸೂಚನೆಗಳಾಗಿದ್ದು, 'ಸರ್ವತೋಭದ್ರ'ದ ವಿವರಣೆಯು ಅದರ ಮುಂದಿನ ಶ್ಲೋಕಗಳಲ್ಲಿರುವಂತೆ ತೋರುತ್ತದೆ.

೨೩. ಬಹುಶಃ ನಾಲ್ಕು ತುಂಡುಗಳನ್ನು ಸೇರಿಸಿ ಚೌಕಾಕಾರವಾಗಿ ಸಂಧಿ ಮಾಡುವಾಗ ಈ ಸಂಧಿ ಸೂಕ್ತವೆನಿಸುತ್ತದೆ.

೨೪. ಯಾವ ದಿಕ್ಕಿನಲ್ಲಿ ಹೊರಚಾಚಿರಬೇಕೆಂದು ಮಾನಸಾರವು ಮಾತ್ರ ಹೇಳಿದೆ.

೨೫. ಮಯ - ೧೭.೧೯-೨೨ಎ; ಮಾನ - ೧೭.೨೮-೩೦

೨೫ಎ. 'ಪಶ್ಚಿಮದ ಬಾಗಿಲಲ್ಲಿದೆ ಮೂರು ಬಾಗಿಲುಗಳುಳ್ಳ ಮನೆ' ಎಂಬ ಅರ್ಥವು 'ಸಂದ್ಯಾವರ್ತ' ಪದಕ್ಕೆ ಇದೆ (ಸಂ. - ಕ.ವಿ. III ಪು. ೧೪೯೮)

೨೬. ೧೭.೧೦೨

೨೭. ೧೭.೨೨ಬಿ-೨೩.

೨೮. ೧೭.೩೦ - ೪೦.

೨೯. ೧೭.೪೨

೩೦. ೧೭.೪೦ - ೪೨

೩೧. ೧೭.೨೯

೩೨. ೧೭.೩೧

೩೩. ೧೭.೪೬-೪೭

೩೪. ಮಾನ - ೧೭.೫೭

೩೫. ಮಯ - ೧೭.೩೧ಎ

೩೬. ೧೭.೫೨-೫೩

೩೭. ಮಯ - ೧೭.೩೩

೩೮. ೧೭.೪೭ - ೫೦. ಈ ಸಂಧಿಯನ್ನು 'ಅರ್ಧಪ್ರಾಣ' ಸಂಧಿ ಎಂದು ಮಾನಸಾರವು ಕರೆದಿದ್ದರೂ, 'ಅರ್ಧಪಾಣಿ' ಎಂಬ ಹೆಸರೇ ಸೂಕ್ತವೆಂದು ಅದರ ಸಂಪಾದಕರು ಹೇಳಿದ್ದಾರೆ (ಅನು. ಪು. ೧೯೩)

೩೯. ೧೭.೪೯

೪೦. ೧೭.೩೮

೪೧. ೧೭.೫೧ .

೪೨. ೧೭.೩೪

೪೩. ೧೭.೩೨

೪೪. ೧೭.೫೪-೫೫

೪೫. ೧೭.೫೬

೪೬. ೧೭.೮೦-೮೧

೪೭. ೧೭.೮೨, ೮೩, ೯೧

೪೮. ೧೭.೧೦೪

೪೯. ೧೭.೭೮

೪೯ಎ. ಮಾನ - ೧೭.೨೨-೨೩. ಇದು ಬಹುಪಾಲು 'ಪ್ರಸ್ತರ' ರಚನೆಗೆ ಸಂಬಂಧಿಸಿದ ನಿಯಮವೆನಿಸುತ್ತದೆ.

೫೦. ಮಾನ - ೧೭.೭೨-೭೩; ಮಯ - ೧೭.೩೩

೫೧. ೧೭.೭೪

೫೨. ೧೭.೪೦ಎ

೫೩. ೧೭.೭೮

೫೪. ೧೭.೨೧

೫೫. ಮಯ - ೧೭.೩೯

೫೬. ೧೭.೭೦-೭೧

೫೭. ಉದ್ಧೃತ - ಮಯಮತ

೫೮. ಮಯ - ೧೭.೪೧

೫೯. ೧೭.೭೫

೬೦. ೧೭.೭೬

೬೧. ೧೭.೪೨

೬೨. ೧೭.೮೪

೬೩. ಮಾನ - ೧೭.೯೦

೬೪. ಮಯ - ೧೭.೪೩

೬೫. ಮಾನ - ೧೭.೭೭

೬೬. ಮಾನ - ೧೭.೯೨

೬೭. ಮಾನ - ೧೭.೯೮

೬೮. ಮಾನ - ೧೭.೯೯

**ಗ್ರಂಥಋಣ :**

ಪಿ.ಕೆ. ಆಚಾರ್ಯ (ಸಂ) - ಮಾನಸಾರ ಸೀರೀಸ್ - ಸಂ. ೩, ೭ ಮತ್ತು ೪ ೧೯೭೯, ೧೯೮೦ - ನವದೆಹಲಿ.

ಬ್ರೂನೋ ಡಗೆನ್ಸ್ (ಸಂ) - ಮಯಮತ, ೧೯೭೦ ಪಾಂಡಿಚೆರಿ.

ಬ್ರೂನೋ ಡಗೆನ್ಸ್ (ಅನು) - ಮಯಮತ, ೧೯೮೫ ನವದೆಹಲಿ.







ಡಾ॥ ಬಿ. ನಂಜುಂಡಸ್ವಾಮಿ*

# ಗುಬ್ಬಿ ಹೊಸಹಳ್ಳಿ ಅರಸು ಮನೆತನದಲ್ಲಿಯ

## ಕಂಠೀರವ ನರಸರಾಜ ಒಡೆಯರ ನಿರೂಪಗಳು ಮತ್ತು ಚಿಕ್ಕದೇವರಾಜ ಒಡೆಯರ ನಿರೂಪ

*'ಮಹಾನಾಡ ಪ್ರಭು'ಗಳ ವಂಶವು ವಿಜಯನಗರ ಕಾಲದಿಂದ ಪ್ರಸಿದ್ಧಿಗೊಂಡು ಬಂದದ್ದು. ವಿಜಯನಗರದ ಅರಸರಿಂದಲೇ ಹಾಗೆ ಆರೋಪಿತರಾದವರು, ತಮ್ಮ ಶೌರ್‍ಯವನ್ನು ವಿಸ್ತರಿಸಿಕೊಂಡು ಅಲ್ಲಲ್ಲಿನ ನೆಲೆಬೀಡುಗಳಲ್ಲಿ ಜನಪ್ರಿಯ ಪ್ರಭುಗಳೆನಿಸಿದ್ದರು. ಮೈಸೂರು ದೊರೆಗಳ ಅಂಕೆಗೆ ಬಂದ ಮೇಲೆ, ಅವರೊಡನೆ ನಡೆದ ಪತ್ರ ವ್ಯವಹಾರಗಳಲ್ಲಿ ಪಡೆದ ಪಗೋಡ ದೊರೆಧನ, ಅಧಿಕಾರ ವರ್ಗ, ಕೈಫಿಯತ್ತು ಸ್ವರೂಪ, ವೀರಶೈವ ಜಗದ್ಗುರುಗಳು, ಉಪಾಚಾರ್‍ಯರು, ವಿರಕ್ತರು, ಮಠಮಹಂತುಗಳು ಬರೆದ ಬರೆಹಗಳಿವೆ - ಶಾಸನಗಳಿವೆ. ನಿರೂಪಗಳಿವೆ. ಸಂಘರ್ಷದ ಸಂಗತಿ ಹೇಳುವ ನಿರೂಪವೂ ಇದೆ - ಒಟ್ಟಾರೆ ಸಾಂಸ್ಕೃತಿಕ ಚಲನೆ ಹಾಗೂ ರಾಜಕೀಯ ಹಾದಿಯು ಗುಬ್ಬಿ ಹೊಸಹಳ್ಳಿ ಅರಸರ ಜೀವನಕ್ರಮದಲ್ಲಿ ಹೊಕ್ಕಿದ್ದ ಬಗೆಯನ್ನು ಈ ಇಲ್ಲಿಯ ನಿರೂಪಗಳು ತೋರುತ್ತವೆ.*

ಕನ್ನಡ ನಾಡಿನ ಉದ್ದಗಲಕ್ಕೂ, ಹಲವು ಅರಸು ಮನೆತನದವರಲ್ಲಿ ಅಳಿದು ಉಳಿದಿರುವ ಕಾಗದಪತ್ರಗಳನ್ನು ಎಚ್ಚರಿಕೆಯಿಂದ ಅಧ್ಯಯನ ಮಾಡಿದರೆ ಇತಿಹಾಸ ಪುಟಗಳ ಹಲವು ಪ್ರಶ್ನಾರ್ಥಕ ಚಿಹ್ನೆಗಳಿಗೆ ಉತ್ತರ ಹೇಳಬಹುದಾಗಿದೆ. ಈ ನಿಟ್ಟಿನಲ್ಲಿ ಯುವ ವಿದ್ವಾಂಸರು ತಮ್ಮ ಪರಿಸರದಲ್ಲಿ ಅಳಿದು ಉಳಿದಿರುವ ಕಾಗದ ಪತ್ರಗಳನ್ನು ಎಚ್ಚರಿಕೆಯಿಂದ ಅಧ್ಯಯನ ಮಾಡಿ ಮೂಲ ನಿರೂಪದ ಫೋಟೋ ಸಮೇತ ಪ್ರಕಟಿಸಬೇಕು. ಮೋಡಿ ಅಕ್ಷರಗಳನ್ನು ಓದುವಂತಹ ಹಿರಿಯರು ಇನ್ನಿಲ್ಲವಾಗುವಂತಹ ಕಾಲಮಾನದಲ್ಲಿ, ಅಂತಹ ಹಿರಿಯರಿಂದ ಯುವಕರು ತರಬೇತಿಯನ್ನು ಪಡೆದು ನಮ್ಮ ನಾಡಿನ ಇತಿಹಾಸವನ್ನು ಉಳಿಸುವಂತಹ ಕಾರ್ಯವನ್ನು ಮಾಡಬೇಕಾಗಿದೆ.

ಗುಬ್ಬಿಹೊಸಹಳ್ಳಿ ಅರಸು ಮನೆತನದ ಇತಿಹಾಸ, ವಿಜಯನಗರದ ಅರಸರ ಇತಿಹಾಸದೊಂದಿಗೆ ಪ್ರಾರಂಭವಾಗುತ್ತದೆ. ಗುಬ್ಬಿ ಪರಿಸರದ ಗುಬ್ಬಿಹೊಸಹಳ್ಳಿಯಲ್ಲಿ ಇರುವ ಈ ಮನೆತನದ ಆಡಳಿತ ಕೊನೆಗೊಂಡಿದ್ದು ಹೈದರ್ ಟಿಪ್ಪುವಿನ ಕಾಲದಲ್ಲಿ. ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಕಾಲದಲ್ಲಿ ಈ ಅರಸರಿಗೆ ಆಡಳಿತಾತ್ಮಕವಾದ ಯಾವ ಚಟುವಟಿಕೆ ಇಲ್ಲದೆ ಇದ್ದರು. ಮತ ಸಂಬಂಧವಾದ ಆಚಾರವಿಚಾರಗಳನ್ನೇ ನೋಡಿಕೊಳ್ಳುವುದಕ್ಕೆ ವಿಶೇಷವಾದ ಸ್ಥಾನ ಈ ಅರಸುಮನೆತನದವರಿಗೆ ಇತ್ತು. ಈ ಮನೆತನದವರ ಕಾಗದ ಪತ್ರ ಸಂಗ್ರಹದಲ್ಲಿ ಉಳಿದಿರುವ ಕೈಫಿಯತ್ತಿನಲ್ಲಿ ಈ ಮಾಹಿತಿ ಇದೆ. "........ ಶ್ಯಾಲಿವಾಹನ ಶಕ ೧೩೨೭ನೆ ಆಂಗಿರಸ ಸಂವತ್ಸರದಲ್ಲಿ ಕೋಟೆಯನ್ನೇ ನಿರ್ಮಾಣಮಾಡಿ ಪೂರ್ವದಲ್ಲಿ ಇದ್ದ ಸಣ್ಣ ಗ್ರಾಮದ ಹೆಸರು ಈ ಗ್ರಾಮಕ್ಕೆ ಗುಬ್ಬಿ ಎಂಬುದಾಗಿ ಹೆಸರು ಇಟ್ಟು, ಆ ಸಣ್ಣ ಗ್ರಾಮಕ್ಕೆ ಹಳೆಗುಬ್ಬಿ ಎಂಬುದಾಗಿ ಹೆಸರು ಇಟ್ಟು ಶೃಂಗಮುನಿ ಆಶ್ರಮ ಸ್ಥಳದಲ್ಲಿ 'ಶಿಂಗೋನಹಳ್ಳಿ' ಎಂಬುದಾಗಿ ಗ್ರಾಮ ನಿರ್ಮಾಣ ಮಾಡಿ. ಸೀಮೆಯನ್ನು ಅನುಭವಿಸಿಕೊಂಡು ಇದ್ದರು. ಇವರ ಮಗ ವೀರಪ್ಪಗೌಡರು ಯಿ ಗುಬ್ಬಿಗೆ ಪೂರ್ವಭಾಗದಲ್ಲಿ ಅರಣ್ಯ ಸ್ಥಳದಲ್ಲಿ 'ಧಾತೃ ಸಂವತ್ಸರದ ಮಾಘ ಮಾಸದಲ್ಲಿ' ಒಂದು ಕೋಟೆ ನಿರ್ಮಾಣ ಮಾಡಿ ನಾವು ಪ್ರಭುವಾಡದವರ್‍ರು ಆದ್ದರಿಂದ ಪ್ರಭುವನಹಳ್ಳಿ ಎಂಬುದಾಗಿ ಹೆಸರಿಟ್ಟರು." [ಈಗಲೂ ಪ್ರಭುವನಹಳ್ಳಿಯಲ್ಲಿ ಅಳಿದು ಉಳಿದ ದೇವಾಲಯಗಳು ಮಠಗಳು ಕೋಟೆ ಇವೆ.]

ಕೆಲವು ಕಾಲಾಂತರದ ಮೇಲೆ ತೋಟಪ್ಪಗೌಡರು ಬಂದು ನಿಂತು ಉದ್ದಾರ ಮಾಡಿದ ಗ್ರಾಮಕ್ಕೆ ಸಮೀಪವಾಗಿ ಪ್ರಶಸ್ತವಾದ ಸ್ಥಳದಲ್ಲಿ ನೂತನವಾಗಿ ಒಂದು ಕೋಟೆಯನ್ನು ವೀರಪ್ಪಗೌಡರು ನಿರ್ಮಾಣ ಮಾಡಿ ಅದಕ್ಕೆ [ಗುಬ್ಬಿ ಹೊಸಹಳ್ಳಿ] ಎಂಬುದಾಗಿ ಹೆಸರಿಟ್ಟು, ಇವರ ಮನೆದೇವರು ವೀರಭದ್ರನಾದ್ದರಿಂದ್ದ ಈ ಸ್ಥಳ

* ಪಂಡಿತ್ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಬಿ.ಹೆಚ್.ರಸ್ತೆ, ತುಮಕೂರು - ೫೭೨ ೧೦೨

ಗ್ರಾಮದಲ್ಲೂ ವೀರಭದ್ರದೇವರ ಪ್ರತಿಷ್ಠೆ ಮಾಡಿ ದೇವಸ್ಥಾನ ಕಟ್ಟಿಸಿ ಈ ದೇವಸ್ಥಾನದ ಸಮೀಪದಲ್ಲಿ 'ಅವೇಲಿ' ಕಟ್ಟಿಸಿಕೊಂಡು ತಾವು ವಾಸ ಮಾಡಿಕೊಂಡು ಇದ್ದರು. ಶ್ಯಾಲಿವಾಹನ ಶಕ ೧೩೮೮ನೆ ಅಂಗಿರಸ ನಾಮ ಸಂವತ್ಸರದ ಆ ತರುವಾಯ॥ "ಮುಂಮಡಿ ತೋಟಪ್ಪಗೌಡರ್ರು" ಮೊಮ್ಮಗ "ಮಲ್ಲಂಣ ಗೌಡರ" ದೊರೆತನ ಆದ ಮೇಲೆ ಈತನ ಮಗ "ಹಿರೇ ಹೊನ್ನಪ್ಪ ಗೌಡ್ರರ" ದಿವ್ಸದಲ್ಲಿ ಯಿ ಗುಬ್ಬಿ ಪ್ಯಾಟೆ ಅಂಗಡಿಗಳ ಕಟ್ಟಿಸಿ ಸ್ಥಳ ಪರಸ್ಥಳ ಸಹಾ ಸಂತೆ ನಡೆಯುವಂತೆ ಮಾಡಿದರು. "ಯೀ ಗುಬ್ಬಿ ಗ್ರಾಮದಲ್ಲಿ ಒಬ್ಬ ಚರಂತಿ ಒಡೆಯರು ಬಹುಕಾಲದಿಂದ ಇದ್ದರು. ಇವರು ಇದ್ದಕಾಲದಲ್ಲಿ ಮಹಿಮಾ ಪುರುಷರಾಗಿದ್ದರು. ಕೆಲವು ಕಾಲಾಂತರದ ಮೇಲೆ ದೇವರಾಯದುರ್ಗಸ್ಥಳದ ಹೊನ್ನುಡಿಕೆಯಂಬ ಗ್ರಾಮದಲ್ಲಿ ದೇಹಬಿಟ್ಟರು." [ಗುಬ್ಬಿ ಶ್ರೀ ಚನ್ನಬಸವೇಶ್ವರರ ತೋರುಗದ್ದುಗೆ ಹೊನ್ನುಡಿಕೆ ಗ್ರಾಮದಲ್ಲಿ ಇದೆ].

ಹಯವದನರಾಯರ ಗ್ಯಾಜೆಟೆಯರ್‌ನಲ್ಲಿ ಈ ಮನೆತನದ ಬಗ್ಗೆ ಈ ಮಾಹಿತಿ ಇದೆ. "೧೮೮೬ರ ತನಕ ಕಡಬ ತಾಲ್ಲೂಕ್ ಅಂತ ಕರೆಯುತ್ತಾ ಇದ್ದರು. ೪೦೦ ವರ್ಷಗಳ ಹಿಂದೆ ಹೊಸಹಳ್ಳಿ ಗೌಡ ಇದನ್ನು ಸ್ಥಾಪನೆ ಮಾಡಿದ. ಅವನು ಹಿಂದೆ ಆಳುತ್ತಿದ್ದ ಹೊನ್ನಪ್ಪಗೌಡನ ವಂಶಸ್ಥ. ೩,೦೦೦ ಪಗೋಡಗಳಷ್ಟು ಅವರಿಗೆ ಕಂದಾಯ ಬರುತ್ತಾ ಇತ್ತು. ಮೈಸೂರು ಮಹಾರಾಜರು ಇವರಿಗೆ ೫೦೦ ಪಗೋಡಗಳನ್ನು ಕೊಡುತ್ತಾ ಇದ್ದರು. ಹೈದರಾಲಿ ಇವರಿಗೆ ೨,೫೦೦ ಪಗೋಡದಷ್ಟು ಜಾಸ್ತಿಮಾಡಿದ. ಟಿಪ್ಪು ಸುಲ್ತಾನ್ ಎಲ್ಲವನ್ನು ನಿಲ್ಲಿಸಿ ಬಿಟ್ಟ. ಅವರು ಈಗ ಸಾಮಾನ್ಯ ಜೀವನ ಮಾಡುತ್ತಾ ಇದ್ದಾರೆ.

**ತುಮಕೂರಿನಿಂದ ಸಂಗ್ರಹಿಸಿ ಬೆಂಗಳೂರು ಮ್ಯೂಜಿಯಂನಲ್ಲಿ ಇರುವ ತಾಮ್ರಶಾಸನ**

೫ . . . . .। ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಖ ವರು

೬ ಷಂಗಳು ೧೬೮೨ ಸಂದ ವರ್ತಮಾನವಾದ ವಿಕ್ರ [ಮ] ನಾಮಸಂವತ್ಸ

೭ ರದ ಆಷಢ ಬ ೭ಲು ಶ್ರೀಮನ್ಮಮಹಾನಾಡ ಪ್ರಭು ಗುಬ್ಬಿ

೮ ಮುಂಮಡಿ ಹೊಂನಪ್ಪಗೌಡರ್ರೆಯ್ಯನವರು ಗುಬ್ಬಿ ಹೊಸಹಳಿ

೯ ಯಲ್ಲು ರಾಜ್ಯವನಾಳುತ್ತಿರಲು ಶಂಕರಗೋತ್ರದ ಶಿ ವಸೂತ್ರದ

೧೦ ಶ್ರೀ ಮನ್ಮಹಾನಾಡಪ್ರಭು ಗುಬ್ಬಿ ಮುಂಮಡಿಹೊಂನಪ್ಪ

೧೧ ಗೌಡರ್ರೆಯ್ಯನವರ ಪೌತ್ರರಾದ ತೋಟಪ್ಪಗೌಡರ್ರೆಯ್ಯನವರ

೧೨ ಪುತ್ರರಾದ ಶ್ರೀಮಂನ್ಮಹಾನಾಡಪ್ರಭು ಗುಬ್ಬಿ ಮುಂ

೧೩ ಮಡಿಹೊಂನಪ್ಪ ಗೌಡರ್ರೆಯ್ಯನವರು ಶಂಕ್ರಗೋತ್ರದ ಶಿ

೧೪ ವಸೂತ್ರದ ಗುಬ್ಬಿಪ್ಯಾಟೆ ಚಂನಸೆಟ್ಟಿಗೆ ಪೌತ್ರರಾದ ಶಿದ

೧೫ ಸೆಟ್ಟಿ ಪುತ್ರರಾದ ನೆಲವಂಗಲದ ಚಂನ್ನಸೆಟ್ಟಿಗೆ ಬರಶಿಕೊ

೧೬ ಟ್ಟ ಶ್ಯಾಸನಕ್ರಮವೆಂತ್ತೆಂದರೆ ನಂಮ್ಮ ಆಳುವಿಕೆ

೧೭ ಗೆ ಸಲುವ ಗುಬ್ಬಿಗೆ ಉತ್ರದಿಕ್ಕಿನಲ್ಲಿ ಯಿರುವ ಕೊಂ

೧೮ ಡದ ಮರಕ್ಕೆ ದಕ್ಷಿಣವಾಗಿ।. . . .

ಈ ಶಾಸನದಿಂದ ಸ್ಪಷ್ಟವಾಗಿ ತಿಳಿದು ಬರುವುದು ಏನೆಂದರೆ ಶಾಲಿವಾಹನ ಶಕ ವರುಷ ೧೬೮೨ ಸಂದ ವರ್ತಮಾನದ ವಿಕ್ರಮ ನಾಮ ಸಂವತ್ಸರದ ಆಷಾಢ ಬ ೭ಲು ಶ್ರೀಮಂನ್ಮ ಮಹಾನಾಡ ಪ್ರಭು ಗುಬ್ಬಿ ಮುಂಮಡಿ ಹೊಂನ್ನಪ್ಪಗೌಡರ್ರೆಯನವರು ಗುಬ್ಬಿ ಹೊಸಹಳ್ಳಿಯಲ್ಲು ರಾಜ್ಯವನಾಳುತ್ತಿರಲು ಅರ್ಥಾತ್ ಕ್ರಿ.ಶ ೧೭೬೦ರಲ್ಲಿ ರಾಜ್ಯವಾಳುತ್ತಾ ಇದ್ದ ಅರಸ ಶ್ರೀಮಂನ್ಮಮಹಾನಾಡ ಪ್ರಭು ಗುಬ್ಬಿ ಮುಂಮಡಿ ಹೊಂನ್ನಪ್ಪಗೌಡ. ಇಲ್ಲಿ ಮುಂಮಡಿ ಅನ್ನುವುದು ಏಳುಜನ ಮಹಾನಾಡ ಪ್ರಭುಗಳಲ್ಲಿ ಉಲ್ಲೇಖ ಗೊಂಡಿರುವ ಪಟ್ಟಣದ ಹೆಸರು. ಮುಂಮಡಿ ಪಟ್ಟಣ ಮದ್ದಗಿರಿ-ಆಂಧ್ರ ಗಡಿ ಹತ್ತಿರ ಇದೆ. ಈ ಶಾಸನದಿಂದ ಈತನ ತಾತ ಮತ್ತು ತಂದೆಯ ಹೆಸರು ಸ್ಪಷ್ಟವಾಗುತ್ತದೆ.

ಶ್ರೀಮಂನ್ಮಹಾನಾಡಪ್ರಭು ಗುಬ್ಬಿ ಮುಂಮಡಿ ಹೊಂನಪ್ಪ ಗೌಡ - ಶ್ರೀಮಂನ್ಮಹಾನಾಡಪ್ರಭು ಗುಬ್ಬಿ ತೋಟಪ್ಪಗೌಡ - ಶ್ರೀ ಮಂನ್ಮಹಾನಾಡ ಪ್ರಭು ಗುಬ್ಬಿ ಮುಂಮಡಿ ಹೊಂನಪ್ಪ ಗೌಡ (೧೭೬೦) ಈ ಮನೆತನದ ಸಂಗ್ರಹದಲ್ಲಿ ಬಹಳಷ್ಟು ದಾಖಲೆಗಳ ಸಂಗ್ರಹ ಇದೆ. ಅದರಲ್ಲಿ ಸಿಂಹಪಾಲು ಮೈಸೂರು ಅರಸರದು, ಮಂತ್ರಿಗಳು, ದಳವಾಯಿಗಳು, ಪ್ರಧಾನಿಗಳು, ಆಯಕಟ್ಟಿನವರು, ಸುಬೆದಾರ್ರು, ಬರದ ಪತ್ರಗಳು ಇವೆ. ಸಂಸ್ಥಾನಕ್ಕೆ ಸಂಬಂಧ ಪಟ್ಟ ಕೈಫಿತ್ತು, ಮುರುಘಾಮಠದ ಪತ್ರಗಳು, ಬಾಳೆಹೊನ್ನೂರು ಜಗದ್ಗುರುಗಳ ಪತ್ರ, ಮಠ ಸಂಬಂಧವಾಗಿ ಉಪಾಚಾರ್ಯರು, ವಿರಕ್ತರು, ಮಠ ಮಹಂತುಗಳು ಬರೆದ ಪತ್ರಗಳು ಇವೆ. ಇವುಗಳ ವ್ಯವಸ್ಥಿತವಾದ ಅಧ್ಯಯನ ನಡೆಯಬೇಕಾಗಿದೆ.

ಕಂಠೀರವ ನರಸರಾಜ ಒಡೆಯರು, ಚಾಮರಾಜ ಒಡೆಯರು, ಚಿಕ್ಕದೇವರಾಜ ಒಡೆಯರು, ಕೃಷ್ಣರಾಜ ಒಡೆಯರು, ದಳವಾಯಿ ದೇವರಾಜಯ್ಯ, ದಳವಾಯಿ ನಂಜರಾಜಯ್ಯ, ದಳವಾಯಿ ಬಸವರಾಜಯ್ಯ, ಹೈದರಾಲಿ, ಟಿಪ್ಪುಸುಲ್ತಾನ್, ಮುಮ್ಮಡಿ ಕೃಷ್ಣರಾಜ ಒಡೆಯರು, ಮಹಿಶೂರು ಪ್ರಧಾನಿ ಚಂನವೀರಯ್ಯ ಪ್ರಧಾನಿ ವೆಂಕಟಕೃಷ್ಣಯ್ಯ,ಪ್ರಧಾನಿ ಸುಬ್ಬಾ ಪಂಡಿತರು, ಸುಬೇಧಾರು ವೆಂಕಟಕೃಷ್ಣಯ್ಯ, ಸುಬೇಧಾರು ವೆಂಕಟೇಶಯ್ಯ, ಪ್ರಧಾನ ಸಲುಂದರ ಪಂಡಿತರು, ಅಯಕಟ್ಟಿನ ಭಾಸ್ಕರೈಯ್ಯನವರು, ಅಯಕಟ್ಟಿನ ವೀರಯ್ಯನವರು, ಬಂದಗಾವರಿ ನವಾಬ, ಖಂಡೂಜಿ, ಆಯಕಟ್ಟಿನ ವಿರುಪಯ್ಯನವರು, ರಾಜಶ್ರೀ ಲಿಂಗೂಚಿ ಸಂಗರಸ ಪಂಡಿತರುಗಳು ಬರೆದ ಪತ್ರಗಳು ಇವೆ. ಮುರಿಗಾ ಗುರುಪಾದಸ್ವಾಮಿಗಳು ಬರೆದ ಒಂದು ಪತ್ರ ಸಹ ಇದೆ. ಸಂಸ್ಕೃತ, ಮರಾಠಿ, ದಾಖಲೆಗಳು ಇವೆ. ಪೇಷ್ವೇಕಾಲದ

ಪತ್ರಗಳು ಮುಂದೆ ಮುಮ್ಮಡಿ ಕೃಷ್ಣರಾಜ ಒಡೆಯರ್ ಕಾಲದಲ್ಲಿ ಬಂದ ಕಮೀಷನರುಗಳ ಕಾಗದ ಪತ್ರಗಳು ಇವೆ. ಕಟ್ಟೆಮನೆಯಾಗಿ ಹೆಣ್ಣುಗಂಡಿನ ಬದುಕಿನ ವಿವಿಧ ಮುಖಗಳ ಬಗ್ಗೆ ಕಟ್ಟೆಮನೆಯಾಗಿ ನ್ಯಾಯ ತೀರ್ಮಾನ ಕೊಡುವಂತಹುದು ಆಗಿದೆ. ಇಂತಹ ಘಟನೆಗಳ ನೂರಾರು ಕಾಗದ ಪತ್ರಗಳು ಇವೆ. ೧೮೭೫ರ ನಂತರ ನಡೆದ ಬ್ರಾಹ್ಮಣ-ಬ್ರಾಹ್ಮಣೇತರ ಚಳುವಳಿಗೆ ಸಂಬಂಧಪಟ್ಟ ಕರಪತ್ರಗಳು, ಲಿಂಗವಂತರ ಗುರುಗಳು ಕಳುಹಿಸಿರುವ ನಿರೂಪಗಳು, ಮಠಾಧಿಪತಿಗಳ ಪಟ್ಟಾಭಿಷೇಕದ ಆಹ್ವಾನಪತ್ರಿಕೆಗಳು, ಶ್ರೀಮದ್‌ಮತ್ತಿಕ ವೀರಶೈವ ಮಹಾಸಭೆ ಬಗ್ಗೆ ಹೊರಡಿಸಿರುವ ನಿರೂಪ. ಈ ಶತಮಾನದ ಆದಿ ಭಾಗದಲ್ಲಿ ರಂಭಾಪುರಿ ಜಗದ್ಗುರುಗಳು ಕಳುಹಿಸಿರುವ ನಿರೂಪಗಳು, ಮುರುಘಾಮಠದ ಜಯದೇವ ಜಗದ್ಗುರುಗಳು ಕಳುಹಿಸಿರುವ ನಿರೂಪಗಳು ಸಹ ಇವೆ. ಈ ಎಲ್ಲಾ ಕಾಗದ ಪತ್ರಗಳು ಅಧ್ಯಯನಕ್ಕೆ ಒಳಪಡಬೇಕು ಮತ್ತು ಪ್ರಕಟವಾಗಬೇಕು.

### ಪತ್ರ ೧

ಮುದ್ರೆ [ಅಷ್ಟಕೋನಾಕೃತಿಯ ಒಂದು ಚಿಕ್ಕ ಮೊಹರು ಇದ್ದು ಇದರಲ್ಲಿ ದೇವನಾಗರಿಯಲ್ಲಿ ಶ್ರೀ ಕೃಷ್ಣ ಎಂಬ ಬರಹವಿದೆ]

೧ ಕಂಠಿರವ ನರಸರಾಜವಡೆಯರವರು

೨ ಸರ್ವದಾರಿ ಸಂವತ್ಸರದ ಪುಷ್ಯ ಶುಕ್ಷಿಲ್ಲು ಶ್ರೀಮತು

೩ ,, ,, ಗುಬ್ಬಿ ಹೊಸಹಳ್ಳಿ ಹೊಂನೆಗಲುಡಗೆ ಬರಸಿ ಕಳುಸಿದ ನಿರೂ

೪ ಪ ಆದಾಗಿ ನಿಂನಿಂದಾ ಅರಮನೆಗೆ ಸಲುವ ಸರ್ವದಾರ್‍ರಿ ಸಂವತ್ಸರದ

೫ ಬಗಿದಿ ಹಣಉ ಬಂತ್ತು ಅರಮನೆಕಾರ್‍ಯದ ಸಟ್ಟಿನಲ್ಲಿ ಬುಧಿವಂ

೬ ತನಾಗಿ ನಡದು ಕೊಂಬದು (ಶ್ರೀ) (ಅತಿ ಚಿಕ್ಕ ದುಂಡು ಮೊಹರು ಇದರಲ್ಲಿ ಕನ್ನಡದಲ್ಲಿ 'ಶ್ರೀ' ಎಂದಿವೆ)

ಆರು ಸಾಲಿನ ಈ ಪತ್ರ ಪ್ರತಿವರ್ಷ ಅಧೀನರಾಜರುಗಳು ಕಳುಹಿಸುತ್ತಾ ಇದ್ದ ಪಗಿದಿ ಹಣದ ವಿಷಯ ೫ನೇ ಸಾಲಿನಲ್ಲಿ ಬರವಣಿಗೆಯಲ್ಲಿ ಪ ಬದಲು ಲಿಪಿಗಾರ ಬ ಬರೆದಿದ್ದಾನೆ ಅದು ಪಗಿದಿ ಇದ್ದು ಲಿಪಿಗಾರನ ಹಸ್ತದೋಷವಾಗಿದೆ. ಅರಮನೆ ವಿಷಯದಲ್ಲಿ ಬುದ್ಧಿವಂತನಾಗಿ ನಡೆದುಕೊಳ್ಳಬೇಕು ಎಂಬ ಆಜ್ಞೆ ಬಂದಿದೆ. ಈ ಪತ್ರದ ಕಾಲ ಶಾಲಿವಾಹನ ಶಕ ೧೫೭೦, ಕ್ರಿ.ಶ೧೬೪೯ಕ್ಕೆ ಸರಿಹೊಂದುತ್ತದೆ.

### ಪತ್ರ ೨

(ಅಷ್ಟಕೋನಾಕೃತಿಯ ಒಂದು ಚಿಕ್ಕಮೊಹರು - ಇದರಲ್ಲಿ ದೇವನಾಗರಿಯಲ್ಲಿ ಶ್ರೀ ಕೃಷ್ಣ ಎಂಬ ಬರಹವಿದೆ)

೧ ಕಂಠಿರವ ನರಸರಾಜ ವಡೆಯರವರು

೨ ಖರ ಸಂವತ್ಸರದ ವೈಶಾಖ ಶು ೩ಲ್ಲು ಶ್ರೀಮತು ॥ ॥ ಗುಬಿ ಹೊಂನೆ

೩ ಗ ಉಡನಿಗೆ ಬರಸಿ ಕಳುಹಿದ ನಿರೂಪ ಅದಾಗಿ ನಿಂನ ಬಗೆ ಪಗಿದಿ ಉಳುವರ್‍ರಿ ಹ

೪ ಣ ನಾಂಣ್ಯದ ಪಟ್ಟಿ ಮುಂತ್ತಾಗಿ ನಾನೂರೈವತ್ತು ವರಹಾಂನ್ನು ಕಳುಹಿಸುವ

೫ ಹಾಗೆ ನಿರೂಪವ ಕಳುಹಿಸಿ ಯಿದ್ದ ಹಾಗೆ ಯೊವರೆಗೂ ಕಳಹಸಲಿಲ್ಲ ಯೊ ರ್‍ರಿತಿ

೬ ಗೆ ಅಲಸ್ಯ ಮಾಡಿಕೊಂಡ್ಡು ಯಿರಬಾರದಲ್ಲ ಯೊ ಅರಮನೆ ಹರಕಾರರ

೭ ಕಳುಹಸಿ ಯಿಧಿತು ಉಳುವರ್‍ರಿ ಬಗೆ ಹಣ ನಾನೂರೈವತ್ತು ವರಹಾಂನ್ನು ತ

೮ ಕ್ಷಣದಲ್ಲೆ ಕಟ್ಟಿಸಿ ಯಿ ಹರಕಾರರ ಸಂಗಡಲೆ ಸಾಗಿಸಿ ಕಳುಹಿಸುವ

೯ ದು (ಶ್ರೀ) (ಅತಿ ಚಿಕ್ಕ ದುಂಡು ಮೋಹರು ಇದರಲ್ಲಿ ಕನ್ನಡದಲ್ಲಿ ಶ್ರೀ ಎಂದಿದೆ)

ಒಂಭತ್ತು ಸಾಲಿನ ಈ ಪತ್ರ ಪಗಿದಿ ಹಣದ ಒಂದು ಭಾಗ ಕಳುಹಿಸಿದ್ದು ಉಳಿದ ಹಣ ಕಳುಹಿಸಲು ಸಮಯ ತೆಗೆದುಕೊಂಡು, ಸಮಯ ಮೀರಿದ್ದರಿಂದ ಹಣವನ್ನ ತೆಗೆದುಕೊಂಡು ಬರಲು ಅರಮನೆ ಹರಿಕಾರನನ್ನೆ ಕಳುಹಿಸಲಾಗಿದೆ. ನಾನೂರೈವತ್ತು ವರಹಾವನ್ನು ಗುಬ್ಬಿ ಹೊಸಹಳ್ಳಿ ಹೊಂನೆಗೌಡರು ಕಳುಹಿಸಿ ಕೊಡಬೇಕು. ಇನ್ನು ಸ್ವಲ್ಪ ಸಮಯ ಕೇಳಬಹುದು ಎಂದು ಅರಮನೆ ಹರಿಕಾರನನ್ನೆ ಕಳುಹಿಸಿದ್ದಾರೆ. ಈ ಪತ್ರದ ಕಾಲ ಶಾಲಿವಾಹನ ಶಕ ೧೫೭೩, ಕ್ರಿ.ಶ ೧೬೫೧ಕ್ಕೆ ಸರಿಹೊಂದುತ್ತದೆ.

### ಪತ್ರ ೩

(ಅಷ್ಟಕೋನಾಕೃತಿಯ ಒಂದು ಚಿಕ್ಕ ಮೊಹರು ಇದರಲ್ಲಿ ದೇವನಾಗರಿಯಲ್ಲಿ ಶ್ರೀ ಕೃಷ್ಣ ಎಂಬ ಬರಹವಿದೆ)

೧ ಕಂಠಿರವ ನರಸರಾಜವಡೆಯರವರ್‍ರು

೨ ನಂದನ ಸಂವತ್ಸರದ ಆಶ್ವಿಜ ಶು ೪ ಲೂ ಶ್ರೀಮತು॥ ॥ ಗುಬಿ ಹೋ

೩ ನೆ ಗೌಡಗೆ ಬರಶಿ ಕಳುಹಿದ ನಿರೂಪ ಅದಾಗಿ ಮಹರ್ನವಮಿ ಕಟ್ಲೆ ಪಗದಿ ಹಣವಂನ್ನು ಯಿ

೪ ವರ್‍ರೆಗು ಕಳುಹಿಸದ ಯಿರಬಾರದಲ್ಲ ಯಿಾಗ ಅರಮನೆ ಹರಕಾರರ ಕಳುಹಿಸಿ ಯಿಧಿತು

೫ ಯೊ ಸಂವತ್ಸರಕ್ಕೆ ಸಲುವ ಪಗದಿ ಹಣವಂನ್ನು ಸಿಗ್ರದಲ್ಲಿ ಸಾಗಿಸಿ ಕಳುಹಿಸುವದು (ಶ್ರೀ) (ಅತಿ ಚಿಕ್ಕ ದುಂಡು ಮೊಹರು ಇದರಲ್ಲಿ ಕನ್ನಡದಲ್ಲಿ 'ಶ್ರೀ' ಎಂದಿದೆ)

ಐದು ಸಾಲಿನ ಈ ಪತ್ರ ಅಂದಿನ ದಿನಮಾನದ ಮಹಾನವಮಿ ಹಬ್ಬದ ಪಗದಿ ಬಗ್ಗೆ ತಿಳಿಸುತ್ತದೆ. ವಿಜಯದಶಮಿ

ಆಚರಣೆಗೆ 'ಮಹರ್ನವಮಿ ಕಟ್ಲೆ' ತಮ್ಮ ಅಧೀನ ಸಂಸ್ಥಾನಗಳಿಂದ ಪಡೆಯುತ್ತಾ ಇದ್ದುದನ್ನು ಈ ಪತ್ರ ಸ್ಪಷ್ಟಪಡಿಸುತ್ತದೆ. ಜೊತೆಗೆ ಈ ಸಂವತ್ಸರದ ಪಗದಿ ಹಣವನ್ನು ಕಳುಹಿಸುವ ಬಗ್ಗೆ ನಿರೂಪ ತಿಳಿಸುತ್ತದೆ. ಈ. ಪತ್ರದ ಕಾಲ ಶಾಲಿವಾಹನ ಶಕ ೧೫೭೪, ಕ್ರಿ.ಶ. ೧೬೫೩ಕ್ಕೆ ಸರಿಹೊಂದುತ್ತದೆ.

**ಪತ್ರ ೪**

(ಅಷ್ಟಕೋನಾಕೃತಿಯ ಒಂದು ಚಿಕ್ಕ ಮೊಹರು ಇದರಲ್ಲಿ ದೇವನಾಗರಿಯಲ್ಲಿ ಶ್ರೀ ಕೃಷ್ಣ ಎಂಬ ಬರಹವಿದೆ)

೧ ಕಂಠಿರವ ನರಸರಾಜವಡೆಯರವರು
೨ ವಿಜಯ ಸಂವತ್ಸರದ ಪುಷ್ಯ ಶು ೧೨ ಲೂ ಶ್ರೀಮತು॥ ॥ ಗುಬಿ ಹೊಸಹಳಿ ಹೊಂ
೩ ನೆಗಲುಡನಿಗೆ ಬರಸಿ ಕಳುಹಿದ ನಿರೂಪ ಅದಾಗಿ ಪಗಿದಿ ಹಣವನೂ ಕಳುಹಿಸಿ ಯಿಧೆನೆ ಕೆರೆಕಟ್ಟಿ
೪ ಸಿ ಕೊಂಬದಕ್ಕೆ ಹಣರಿಗೆ ಅಪ್ಪಣೆ ಪಾಲಿಸಬೇಕೆಂಬ ಕ್ರಮಗಳಾಗಿ ನೀನು ಕಳುಹಿದ ವಾಲೆಯಿಂದಾ ಸ
೫ ಕಲವೂ ಶ್ರುತವಾಯಿತು ಪಗಿದಿ ಹಣವೂ ಬಂತ್ತು ನೀನು ಅರಮನೆ ಶ್ರಯಸ್ಸಿ ಮುಖ್ಯವಾಗಿ ನಡದು
೬ ಕೊಳುತ್ತಾ ಯಿದ್ದ ಬಳಿಕ ನಿಂನ ಕಾಪಾಡಿ ನಡಸುವದಕ್ಕೆ ಯೊಚನೆ ಯೆನು ಯಿಧಿತು ನಿನು ಕೊಡುವ
೭ ಪಗಿದಿ ಹಣಂನಲ್ಲಿಗು ೧೦೦ ವರಹಾಂನೂ ತೆಗೆದು ಕೊಂಡು ಕೆರೆಕಟ್ಟಿಸಿ ಕೊಂಬ ಹಾಗೆ ಕಟ್ಲೆ ಮಾಡಿ
೮ ಸಿ ಯಿಧೆವೆ ಆ ಪ್ರಕಾರಕ್ಕೆ ನೀನು ಕೊಡುವ ಪಗಿದಿ ಹಣವಿಗೆ ಉತ್ತಾರವಾಗಿ ನೂರು ವರಹಾವಂನೂ
೯ ತೆಗದುಕೊಂಡು ಕೆರೆಯಂನೂ ಕಟ್ಟಿಸಿಕೊಂಡು ಬುಧಿವಂತ ನಾಗಿ ನಡೆದುಕೊಂಬುದು (ಶ್ರೀ)

(ಅತಿ ಚಿಕ್ಕ ದುಂಡು ಮೊಹರು ಅದರಲ್ಲಿ ಕನ್ನಡದಲ್ಲಿ ಶ್ರೀ ಎಂದಿದೆ)

ಒಂಬತ್ತು ಸಾಲಿನ ಈ ಪತ್ರ ಅಂದಿನ ದಿನಮಾನದ ರಾಜನ ಕರ್ತವ್ಯದ ಕಡೆ ಗಮನ ಸೆಳೆಯುತ್ತದೆ. ತಮ್ಮ ಅಧೀನವಾಗಿ ರಾಜ್ಯವಾಳುತ್ತಾ ಇದ್ದ ಸಾಮಂತರು ತಮ್ಮ ಪ್ರದೇಶದಲ್ಲಿ ಮಾಡ ಬೇಕಾದ ಜನಹಿತ ಕಾರ್ಯಗಳಿಗೆ ರಾಜನ ಅಪ್ಪಣೆ ತೆಗೆದುಕೊಳ್ಳ ಬೇಕಾಗಿತ್ತು. ಅಲ್ಲದೆ ತಾನೆ ಕಳುಹಿಸಿದ ಪಗದಿ ಹಣದಲ್ಲಿ ಅಲ್ಪ ಭಾಗವನ್ನು ಇಂತಹ ಜನೋಪಯೋಗಿ ಕಾರ್ಯಗಳಿಗೆ ನೀಡುತ್ತಾ ಇದ್ದರು ಎಂದು ತಿಳಿಯುತ್ತದೆ. ಅಧೀನ ರಾಜರು ಸದಾ ಅರಮನೆ ಶ್ರೇಯಸ್ಸನ್ನು ಬಯಸುತ್ತಾ ಕೆಲಸ ಕಾರ್ಯಗಳನ್ನು ಮಾಡಬೇಕು. ಈ ಬಗ್ಗೆ ಓಲೆ ಅಂದರೆ ಪತ್ರವನ್ನೆ ಬರೆದು ಗುಬ್ಬಿ ಹೊಸಹಳ್ಳಿ ಹೊಂನ್ನೆ ಗೌಡರು ವಿನಂತಿ ಮಾಡಿದ್ದರಿಂದ, 'ನಿನ್ನ ಕಾಪಾಡಿ ನಡೆಸುವುದಕ್ಕೆ ಯೋಚನೆ ಏನು ಇದ್ದಿತು" ಎಂದು ಸಂತೋಷವಾಗಿ ಅಪ್ಪಣೆ ಕೊಟ್ಟಿದ್ದಾರೆ. ಅಂದಿನ ದಿನ ಮಾನದಲ್ಲಿ ೧೦೦ ವರಹಾದಿಂದ ಒಂದು ಕೆರೆ ಕಟ್ಟಬಹುದಾಗಿತ್ತು. ಪತ್ರದಲ್ಲಿ ಇಂತಹ ಊರಿನ ಕೆರೆ ಎಂದು ನಮೂದಿಸಿದ್ದರೆ, ಇನ್ನು ಹೆಚ್ಚಿನ ಅಧ್ಯಯನಕ್ಕೆ ಅವಕಾಶ ವಾಗುತ್ತಾ ಇತ್ತು. ಈ ಪತ್ರದ ಕಾಲ ಶಾಲಿವಾಹನ ಶಕ ೧೫೭೫, ಕ್ರಿ.ಶ. ೧೬೫೪ಕ್ಕೆ ಸರಿಹೊಂದುತ್ತದೆ.

**ಪತ್ರ ೫**

(ಅಷ್ಟ ಕೋನಾಕೃತಿಯ ಒಂದು ಚಿಕ್ಕ ಮೊಹರು ಇದರಲ್ಲಿ ದೇವನಾಗರಿಯಲ್ಲಿ ಶ್ರೀ ಕೃಷ್ಣ ಎಂಬ ಬರಹವಿದೆ)

೧ ಚಿಕದೇವರಾಜವಡೆಯರವರು
೨ ಸ್ವಭಾನು ಸಂವತ್ಸರದ ಆಷಾಢ ಬ ೮ ಲ್ಲೂ ಶ್ರೀಮತು॥ ॥ ಗುಬ್ಬಿ ಹೊಂನ್ನೇಗಲುತಗೆ ಬರ
೩ ಸಿ ಕಳುಹಿದ ನಿರೂಪ ಅದಾಗಿಲ್ಲಿಂನದ ವಿವರ ಕಾವಲ ಮೆರೆ ಪಟಣಕ್ಕೆ ಕಳುಹಿಸಿಯಿದ್ದೆನೆಂಬ ವಿವರಗಳಾಗಿ
೪ ನಿನು ಕಳುಹಿದ ವಾಲೆಯಿಂದೆಲ್ಲೂ ಶ್ರುತವಾಯಿತು ಆ ಬಗೆಯಲ್ಲಿ ದುರ್ಮಾರ್ಗಿಗಳಾಗಿ ನಡೆದುಕೊಂಡ್ಡ
೫ ಬಣಜಿಗರು ಕಾಳ್ಳೆನ ಸಿದ್ದ ಜ೧ ಅಂಗಡಿ ಸಿದ್ದನ ಜ೧ ಗುರುವನ ಜ೧ ಶಾಂತ್ತಬಸವನ ಜ೧ ಸೂಲಬನ ಜ೧
೬ ಅಂತ್ತೂ ಯಿ ಬಗೆ ಅಯಿದು ಮಂದ್ದಿ ಮನೆಯಂನ್ನೂ ಅಂಕ್ಕೆ ಮಾಡಿಸಿ ಸರ್ವಸ್ಸುವಂನ್ನೂ ಪಟ್ಟಿ ಬರಸಿ
೭ ಕಳುಹಿಸೊ ಹಾಗೆ ಕಟ್ಲೆ ಮಾಡಿಸಿ ಯಿ ನಿಮಿತ್ತ ಅರಮನೆ ಗೊಲ್ಲನ ಕಳುಹಿಸಿ ಯಿಧೆವೇ ಯಿ ಬಗೆ ಬಣ
೮ ಜಿಗರು ಅಯಿದು ಮಂದ್ದಿ ಮನೆಯಂನ್ನೂ ಯಿ ನಿರೂಪ ಕಂಡಾಕ್ಷಣವೆ ಅಂಕ್ಕೆ ಮಾಡಿಸಿ ವಂದ್ದು ತೃ
೯ ಣವಾದರು ಚದರದ ಹಾಗೆ ಅರಮನೆ ಗೊಲ್ಲನ ಮುಂದಿಟ್ಟು ಅವರುಗಳ ಮನೆಗಳಲ್ಲಿ ಯಿರುವಂತ್ತಾ
೧೦ ಹಣ ಚಿಂನ್ನ ಬೆಳಿ ನಗನಾಂಣ್ಯ ಕಂಚ್ಚು ತಾಂಬ್ರ ಜವಳಿ ದವಸ ಧಾಂನ್ಯ ಪತ್ರಗಳು ಮುಂತ್ತಾದ ಪಶ್ಚಾದೀ(?)
೧೧ ಪಂಚ್ಚಲೋಹವಂನ್ನೂ ಪಟ್ಟಿ ಬರಸಿ ಆ ಬಗೆ ಪಟ್ಟಿಯಂನ್ನು ಕಳುಹಿಸುವುದು ಯಿ ಬಗೆ ಬಣಜಿಗರು ವಬ್ಬ
೧೨ ರೊಬ್ಬರೂ ನಾಲ್ಕು ಅಯಿದು ಸಾವಿರದ ವರಹದ ಬದುಕಿ ನವರು ಯಂಬದಾಗಿ ಕೆಳಪಡುತ್ತಾ ಯಿಧಿತು
೧೩ ಯಿದ್ದದರಲ್ಲಿ ವಂದ್ದು ತೃಣವಾದರು ಕಡೆಗೆ ದಾಟ್ಟಿದರೆ ಆ ಬಗೆ ಹಣವಂನ್ನು ನಿಂನ್ನ ಕೈಲಿ ತೆಗೆದುಕೊಳು
೧೪ ತ್ತಾ ಯಿಧೆವೆ ಅದನರ್‍ರಿತು ಅಯಿದು ಮಂದ್ದಿ ಮನೆಯಲ್ಲಿ ಯಿರುವಂತಾ ಸರ್ವಸ್ಸುವಂನ್ನೂ ದೆಚಿಕೊಂ
೧೫ ಡ್ದು ಪಟ್ಟಿ ಬರಸಿ ಕಳುಹಿಸುವದೂ. (ಶ್ರೀ) (ಅತಿ ಚಿಕ್ಕ ಮೋಹರು ದುಂತಾದದ್ದು ಇದರಲ್ಲಿ ಕನ್ನಡದಲ್ಲಿ ಶ್ರೀ ಎಂದಿದೆ)

ಚಿಕ್ಕದೇವರಾಜ ಒಡೆಯರ್ ಕಾಲದ ಈ ಕಾಗದ ಎಂತಹ ಭೀಕರ ಘಟನೆಯನ್ನು ದಾಖಲಿಸಿದೆ. ಅಂದಿನ ದಿನ ಮಾನದಲ್ಲಿ ನಂಜನಗೊಡು ಜಂಗಮರ ವಧೆವಿಷಯ ಜನಜನಿತ ವಾದದ್ದು; ಅಂತಹ ಸಂದರ್ಭದಲ್ಲಿ ಗುಬ್ಬಿ ಹೊಸಹಳ್ಳಿ ವೀರಶೈವ ಬಣಜಿಗರು ಆ ಘಟನೆ ನಂತರ ಪ್ರತಿರೋಧ ತೋರಿಸಿದ್ದರಿಂದ ಶ್ರೀಮಂತ ವ್ಯಾಪಾರಿಗಳನ್ನು ನೆಲಸಮ ಮಾಡಿದರೆ ಮಿಕ್ಕವರು ಯಾವ ವಿಧ ವಾದ ತಂಟೆತಕರಾರು ಮಾಡುವುದಿಲ್ಲ ಎಂದು ಇಂತಹ ಕಠಿಣಕ್ರಮ ತೆಗೆದುಕೊಂಡರು ಎಂದು ಕಾಣುತ್ತದೆ. ಈ ಪತ್ರದ ಕಾಲ ಶಾಲಿವಾಹನ ಶಕ ೧೬೨೫, ಕ್ರಿ.ಶ. ೧೭೦೪ಕ್ಕೆ ಸರಿಹೊಂದುತ್ತದೆ.

(ಈ ಕಾಗದ ಪತ್ರಗಳು ನನ್ನ ಅಧ್ಯಯನಕ್ಕೆ ಅವಕಾಶ ಮಾಡಿ ಕೊಟ್ಟ ಗುಬ್ಬಿಹೊಸಹಳ್ಳಿ ಅರಸು ಮನೆತನದ ಮಹಾಪ್ರಭುಗಳಾದ ಚಿಕ್ಕಣ್ಣಪ್ಪಾಜಿ ಅರಸರಿಗೂ ಅವರ ಮಾತೋಶ್ರೀ ಅವರಿಗೂ ಧನ್ಯವಾದಗಳು.)





ಪ್ರೊ. ವಸಂತ ಕುಷ್ಟಗಿ*

# ಹೈದರಾಬಾದ ಸಂಸ್ಥಾನದ ವಿಮೋಚನೆಯ ಕನ್ನಡ ಚಳುವಳಿಯಲ್ಲಿ ಕಲಬುರಗಿ ಕನ್ನಡ ಸಾಹಿತ್ಯ ಸಂಘದ ಪಾತ್ರ

*ಹೈದರಾಬಾದ್ ಸಂಸ್ಥಾನದ ಕನ್ನಡ ಪ್ರದೇಶ ಹಾಗು ಕನ್ನಡ ಭಾಷೆ ಇವೆರಡೂ ತೆಲುಗು ಮರಾಠಿ ಭಾಷೆಗಳ ಒತ್ತಡಗಳ ನಡುವೆಯೂ ತಮ್ಮತನ ಉಳಿಸಿಕೊಂಡು ಬಂದುವು. ಆಡಳಿತ ಭಾಷೆಯಾಗಿದ್ದ ಉರ್ದು, ರಾಷ್ಟ್ರದಲ್ಲೆಲ್ಲ ಹಿಡಿತ ಬೆಳೆಸಿಕೊಂಡಿದ್ದ ಇಂಗ್ಲಿಷ್, ಇವುಗಳ ಎದುರೂ ಕನ್ನಡ ಸೆಣಸುತ್ತಲೇ ಬಂದಿದೆ. ಇಂಥ ಸ್ವಯಂಭೂ, ಸ್ವಯಾರ್ಜಿತ ಶಕ್ತಿ ಪುಟಿಯಲು ಹೃದಯಶ್ರೀಯನ್ನು ಸಂಘಟನೆಯ ಗಟ್ಟಿತನದಿಂದ ಎರೆದುಕೊಟ್ಟವರು ಮೈಸೂರು ಕಡೆಯಿಂದ ಬಿ.ಎಂ.ಶ್ರೀ. ಹಾಗು ಗೆಳೆಯ ವೃಂದ ಮತ್ತು ಸ್ವಸ್ಥಳದಲ್ಲಿ ಕಪಟರಾಳ ಕೃಷ್ಣರಾಯರು ಮುಂತಾದವರಾಗಿದ್ದಾರೆ. ಒಂದು ಕನ್ನಡ ಪುನರ್‌ಪ್ರತಿಷ್ಠಾನದ ಐತಿಹಾಸಿಕ ಯಾತ್ರೆಗೆ, ಕಲಬುರಗಿಯ ಕನ್ನಡ ಸಾಹಿತ್ಯ ಸಂಘದ ಕನ್ನಡ ಚಳುವಳಿಯು ಮುಂಚೂಣಿಯಲ್ಲಿತ್ತು ಎಂಬುದು ಇಲ್ಲಿ ಗಮನಾರ್ಹ.*

ಆಸಫ್‌ಜಾಹಿ ಸಲ್ತನತ್ತಿನ ನಿಜಾಂರು ಹೈದರಾಬಾದ ಸಂಸ್ಥಾನವನ್ನು ಸುಮಾರು ೨೨೫ ವರ್ಷಗಳ ಕಾಲ ಆಳಿದರು. ಈ ಸಂಸ್ಥಾನದಲ್ಲಿ ತೆಲಗು, ಮರಾಠಿ, ಹಾಗು ಕನ್ನಡ ಭಾಷಿಕರು ಪ್ರಜೆಗಳಾಗಿದ್ದರು. ಇವರಲ್ಲಿ ಕನ್ನಡಿಗರು ಮೂರನೆಯ ಸ್ಥಾನದಲ್ಲಿದ್ದವರು. ಇದಕೆ ಕಾರಣವೆಂದರೆ ಅಂದಿನ ಸಂಸ್ಥಾನದ ಹದಿನಾರು ಜಿಲ್ಲೆಗಳಲ್ಲಿ ಕನ್ನಡ ಭಾಷಿಕರ ಜಿಲ್ಲೆಗಳು ಕೇವಲ ಮೂರು ಮಾತ್ರ. ಅವುಗಳೆಂದರೆ ಬೀದರ, ಕಲಬುರಗಿ ಹಾಗು ರಾಯಚೂರು ಜಿಲ್ಲೆಗಳು. ಈಗ, ಅಂದಿನ ರಾಯಚೂರು ಜಿಲ್ಲೆಯಲ್ಲಿಯ ಕೊಪ್ಪಳ, ಕುಷ್ಟಗಿ, ಯಲಬುರಗಿ ಮತ್ತು ಗಂಗಾವತಿ ತಾಲ್ಲೂಕುಗಳು ಸೇರಿ ಕೊಪ್ಪಳ ಜಿಲ್ಲೆಯೆಂಬ ಒಂದು ಹೊಸ ಜಿಲ್ಲೆಯಾಗಿದೆ.

ಹೈದರಾಬಾದ ಸಂಸ್ಥಾನದ ಆರಂಭದಿಂದಲೂ, ಈ ಸಂಸ್ಥಾನದ ಕನ್ನಡ ಪ್ರದೇಶವು ತೆಲಗು, ಮರಾಠಿ ಭಾಷೆಗಳ ಒತ್ತಡವನ್ನು ತಾಳಿಕೊಂಡು ಬಾಳುತ್ತ ಬಂದಿತು. ಜೊತೆಗೆ ಆಡಳಿತ ಭಾಷೆಯಾಗಿದ್ದ ಅಂದಿನ ಉರ್ದು ಭಾಷೆ, ಹಾಗು ಇಡೀ ದೇಶವನ್ನೇ ತನ್ನ ಹಿಡಿತದಲ್ಲಿಟ್ಟುಕೊಂಡಿದ್ದ ಇಂಗ್ಲಿಷ್ ಭಾಷೆಗಳು ಅಧಿಕಾರದ ವರ್ಚಸ್ಸಿನಲ್ಲಿ ಕನ್ನಡವು ಕುಸಿಯುತ್ತಲೇ ಬದುಕಬೇಕಾಯಿತು. ಇಂತಹ ಒತ್ತಡದಲ್ಲಿ ಕನ್ನಡ ಬದುಕಿನ ಮೈಸಿರಿಯಾದ ಸಾಹಿತ್ಯ, ಕಲೆ, ಶಿಕ್ಷಣ, ಕೃಷಿ ಇತ್ಯಾದಿ ಕ್ಷೇತ್ರಗಳಲ್ಲಿ ಕನ್ನಡ ಬದುಕಿನ ಸ್ವಂತಿಕೆಯು ಉಳಿದು ಬರಬೇಕಾದರೆ ಪುಣ್ಯವನ್ನೆಲ್ಲ ಖರ್ಚು ಮಾಡಿಕೊಂಡು ಬಂದಂತಾದುದ್ದೇ ಇತಿಹಾಸ. ಅಂತೆಯೇ ಹೈದರಾಬಾದ ಕರ್ನಾಟಕದಲ್ಲಿ ಕನ್ನಡದ ಮೂಲಸೊಗಸನ್ನು ಉಳಿಸಿಕೊಂಡು ಬರಲು ಅಂದಿನಿಂದಲೂ ಚಳುವಳಿ ನಡದೇ ಇದೆ. ಅದು ಪ್ರಮುಖತಃ ಪ್ರಸಾರದ ಸ್ವರೂಪದಲ್ಲಿಯೂ ಇದೆ. ಇವೆಲ್ಲ ಆ ಕಾಲದ ಪರಿಸ್ಥಿತಿಗನುಸರಿಸಿ ಬಹಳ ಜಾಗರೂಕತೆಯಿಂದ ನಡೆದು ಬಂದುವುಗಳು. ಅಂತಹವುಗಳಲ್ಲಿ ವಾಚನಾಲಯ, ಗ್ರಂಥಾಲಯಗಳೂ ಒಂದು ಸ್ವರೂಪದವು. ಈ ದಿಸೆಯಲ್ಲಿ ಕನ್ನಡ ಪುಸ್ತಕಗಳನ್ನು ಸಂಗ್ರಹಿಸಿ ಒಳ್ಳೊಳ್ಳೆ ಪುಸ್ತಕಗಳನ್ನು ಓದಿ ಕೇಳಿಸಿ, ಓದು ಕಲಿಸಿ, ಓದುವಂತೆ ಮಾಡುವ ಪ್ರಕ್ರಿಯೆಯೂ ನಡೆದಿವೆ. ಮುಂದೆ ಈ ಕ್ರಮವು, ಕನ್ನಡ ಸಂಸ್ಕೃತಿಯ ವಿವಿಧ ಮುಖಗಳನ್ನು ಪರಿಚಯಿಸಿ ಜೀವಂತವಿಡುವ ಕೆಲಸಕ್ಕೆ ವಿಸ್ತೃತವಾಯಿತು. ಹಾಗಾಗಿ ನಾಡಹಬ್ಬಗಳು ಸಂಘಟಿತವಾಗ ತೊಡಗಿದುವು. ಅಷ್ಟೊತ್ತಿಗಾಗಲೇ ಕನ್ನಡ ಕುಲಪುರೋಹಿತ ಆಲೂರು ವೆಂಕಟರಾಯರು ಹಾಗು ಕನ್ನಡಶ್ರೀ ಶ್ರೀ ಬಿ.ಎಂ. ಶ್ರೀಕಂಠಯ್ಯನವರ ಕನ್ನಡಪರ ಪ್ರಚಾರದ ನಿಲುವುಗಳು ಪರಿಣಾಮ ಬೀರತೊಡಗಿದ್ದುವು. ಇದೇ ಸಂದರ್ಭದಲ್ಲಿ ಹೈದರಾಬಾದ ಸಂಸ್ಥಾನದ ವಿಮೋಚನಾ ಶಿಲ್ಪಿ ಸ್ವಾಮೀ ರಾಮಾನಂದ ತೀರ್ಥರು ಭಾಷಾ ಪರಿಷತ್ತುಗಳಿಗೆ ಪ್ರಾಧಾನ್ಯ ನೀಡತೊಡಗಿದ್ದು, ದೇಶ ಸ್ವಾತಂತ್ರ್ಯದ ಆಂದೋಲನವನ್ನು ತೀವ್ರಗೊಳಿಸಲು ವಾಚನಾಲಯ/

* ಎಂ.ಜಿ.ಐ. ೨೬, ಆದರ್ಶನಗರ, ಮೊದಲ ಹಂತ, ಕಲಬುರಗಿ - ೫೮೫ ೧೦೫.

ಗ್ರಂಥಾಲಯ ಚಳುವಳಿಗೆ ಆದ್ಯತೆ ನೀಡಿದರು. ಹೀಗಾಗಿ ಗ್ರಂಥಾಲಯಗಳು / ವಾಚನಾಲಯಗಳು ಸಾಂಸ್ಕೃತಿಕ ಸಾಹಿತ್ಯಿಕ ಕ್ಷೇತ್ರಗಳನ್ನು ವಿಕಾಸಗೊಳಿಸುವುದರ ಜೊತೆಗೆ ನಿಜಾಂರ ಹಾಗು ಬ್ರಿಟಿಷರ ದುರಾಡಳಿತಗಳ ವಿರುದ್ಧ ಚಳುವಳಿಯನ್ನು ಎಬ್ಬಿಸುವ ಕಾರ್ಯಕ್ಕೆ ಗುಪ್ತ ಶಕ್ತಿಯ ಪ್ರವಾಹವಾಗಿ ಉತ್ತೇಜನ ನೀಡಿದುವು. ಒಂದರ್ಥದಲ್ಲಿ ಸ್ವಾತಂತ್ರ್ಯಾಂದೋಲನದ ಮುಖವಾಣಿಯಾದುವು.

ಈ ಹಿನ್ನೆಲೆಯಲ್ಲಿ ೨೦ನೆಯ ಶತಮಾನದ ಆರಂಭ ದಿಂದಲೇ ಈ ಬಗ್ಗೆ ಸಣ್ಣಾಗಿ ಮೊಳೆತು, ಸಂಘಟನೆಗಳು ಸಾಹಿತ್ಯ ಸಂಘಗಳೆಂಬ ಸಂಸ್ಥೆಗಳಾಗಿ ರೂಪುಗೊಳ್ಳುತ್ತ ನಾಡುನುಡಿಯ ಸರ್ವ ತೋಮುಖದ ವಿಕಾಸಕ್ಕೆ ಹಾಗು ದೇಶವನ್ನು ಸ್ವತಂತ್ರಗೊಳಿಸುವ ಹೋರಾಟಕ್ಕೆ, ಪ್ರೇರಣಾ ಕ್ಷೇತ್ರಗಳಾದುವು. ಸಂಸ್ಥಾನಾಧೀಶರಾದ ನಿಜಾಂರಿಗೂ, ಸಮಗ್ರ ದೇಶದ ಚುಕ್ಕಾಣಿ ಹಿಡಿದ ಬ್ರಿಟಿಷರಿಗೂ ಅನುಮಾನ ಬಾರದಂತೆ ಅವರಿಂದ ಸಂಘಟನೆಗೆ ಆಪತ್ತು ಬಾರ ದಂತೆ ಕಣ್ಣೆಚ್ಚರಿಕೆಯಲ್ಲಿ ಈ ಸಂಸ್ಥೆಗಳು ಕೆಲಸ ಮಾಡಿದ ಪರಿ ಬೆರಳು ಕಚ್ಚುವಂತಹದು. ಇಂಥ ಸಂಸ್ಥೆಗಳು ಹೈದರಾಬಾದ ಕರ್ನಾಟಕದ ಪ್ರಮುಖ ಸ್ಥಳಗಳಲ್ಲಿ ಕೆಲಸ ಮಾಡತೊಡಗಿದುವು. ಅವುಗಳಲ್ಲಿ ಕಲಬುರಗಿ, ಶಹಾಬಾದ, ರಂಗಂಪೇಟೆ, ಸುರಪುರ, ರಾಯಚೂರು, ಕೊಪ್ಪಳ, ಬೀದರ, ಭಾಲ್ಕಿ ಹಾಗು ಹೈದರಾಬಾದು ಗಳಲ್ಲಿದ್ದ ಸಂಸ್ಥೆಗಳು ಪ್ರಮುಖವಾದುವು.

ಪ್ರಸ್ತುತ ಪ್ರಬಂಧದಲ್ಲಿ ಕಲಬುರಗಿಯ ಕನ್ನಡ ಸಾಹಿತ್ಯ ಸಂಘವು ಕ್ರಿ.ಶ. ೧೯೪೦ರ ಮೊದಲೇ ಕನ್ನಡ ಭಾಷೆ ಹಾಗು ಕನ್ನಡ ಸಂಸ್ಕೃತಿಗಳನ್ನು ಕಲಬುರಗಿ ಜಿಲ್ಲೆಯಲ್ಲಿ ಉಳಿಸಿಕೊಂಡು ಬೆಳೆಸಿಕೊಂಡು ಬರಲು ಶತಾಯಗತಾಯ ಪ್ರಯತ್ನ ಮಾಡಿದೆ. ಅದೇ ರೀತಿ ಗುಲಾಮಗಿರಿಯಿಂದ ನಾಡನ್ನು ದೇಶವನ್ನು ವಿಮೋಚನ ಗೊಳಿಸಿ ಸ್ವತಂತ್ರ ಭಾರತದ ಕನಸನ್ನು ನನಸುಗೊಳಿಸಲು ತಾನು ಮಾಡಿದ ದಿಟ್ಟವಾದ ಕಾರ್ಯಗಳನ್ನು ವಸ್ತುನಿಷ್ಠವಾಗಿ ಹಿಡಿದಿಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಈ ಎರಡು ಮಹತ್ವದ ಗುರಿಗಳ ಸಾಧನೆಯ ಜೊತೆಗೆ ತನ್ನ ಕಾರ್ಯಚಟುವಟಿಕೆಗಳನ್ನು ಜನಬದುಕಲು, ಆ ಬದುಕಿಗರಲ್ಲಿ ನೆಮ್ಮದಿ ತುಂಬಲು ಕಾಂತಾ ಸಂಹಿತೆಯ ನೆಲೆಗಟ್ಟಿನಲ್ಲಿ ಲೋಕ ಶಿಕ್ಷಣವನ್ನು ಪ್ರದಾನ ಮಾಡುತ್ತ ಬಂದಿದೆ. ನಾಡಹಬ್ಬಗಳನ್ನು ಸಂಘಟಿಸಿ, ಮಹಾಪುರುಷರ, ಇತಿಹಾಸ ಪುರುಷರ, ಕವಿಗಳ ಜನ್ಮದಿನೋತ್ಸವಗಳನ್ನು ಆಚರಿಸಿ, ದೇಶ ಹಾಗು ನಾಡು ನುಡಿಯ ಬಗ್ಗೆ ಕಳಕಳಿಯುಳ್ಳ ವಿದ್ವಾಂಸರನ್ನು ಕಾಲಕಾಲಕ್ಕೆ ಕರೆಸಿ ಭಾಷಣಗಳನ್ನು ಏರ್ಪಡಿಸಿದೆ. ಕನ್ನಡದ ಭಾಷಣಗಳನ್ನು ಉರ್ದುವಿಗೆ ತರ್ಜುಮೆಗೊಳಿಸಿ (ನಿಜಾಂಸರಕಾರಕ್ಕೆ ಗುಟ್ಟು ಗೊತ್ತಾಗದ ರೀತಿಯಲ್ಲಿ) ನಿಜಾಂ ಸರಕಾರದ ಅನುಮತಿ ಯನ್ನು ಪಡೆದ ಅನಂತರ ಕನ್ನಡದಲ್ಲಿ ಉದ್ಬೋಧಕ ಭಾಷಣಗಳನ್ನು ಮಾಡಿಸಿದೆ. ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳ ಭಾಷಣವನ್ನು ಪ್ರೊ. ಡಿ.ಕೆ. ಭೀಮಸೇನರಾಯರು ಉರ್ದುವಿಗೆ ಅನುವಾದ ಮಾಡಿದ ಕತೆಯಂತಹ ಅನೇಕ ಕತೆಗಳು ನಡೆದು ಬಂದಿವೆ. ವಿದ್ಯಾರ್ಥಿಗಳಲ್ಲಿ ದೇಶಭಕ್ತಿ, ನಾಡುನುಡಿಗಳ ಬಗ್ಗೆ ಆಸಕ್ತಿ ಬೆಳೆಯಲು ಸಾಹಿತ್ಯಿಕ ಸಾಂಸ್ಕೃತಿಕ ವಿಷಯಗಳ ಬಗ್ಗೆ ಸ್ಪರ್ಧೆಗಳನ್ನು ಏರ್ಪಡಿಸಿ, ಬಹುಮಾನಗಳನ್ನು ನೀಡಿ ಪ್ರೋತ್ಸಾಹಿಸಿದೆ. ಪುಸ್ತಕಗಳನ್ನು ಪ್ರಕಟಿಸಿ ಪುಸ್ತಕ ಸಂಸ್ಕೃತಿಯನ್ನು ಅರಳಿಸಲು ಪ್ರಯತ್ನಿಸಿದ.

ಹೈದರಾಬಾದ ಸಂಸ್ಥಾನದ ವಿಮೋಚನೆಯ ಅನಂತರ (೧೭-೯-೧೯೪೮) ಕಲಬುರಗಿಯ ಕನ್ನಡ ಸಾಹಿತ್ಯ ಸಂಘವು ವಿಜಯೋತ್ಸಾಹದ ಸಂತೃಪ್ತಿಯ ನೆಲೆಯಲ್ಲಿ ಸುಸಂಘಟಿತವಾಗಿ ಬೆಳೆಯಿತು. ಕರ್ನಾಟಕ ಏಕೀಕರಣಕ್ಕೆ ತನ್ನ ಪಾತ್ರವನ್ನು ಅತ್ಯಂತ ದಕ್ಷತೆಯಿಂದ ನಿರ್ವಹಿಸಿತು. ಸ್ವಾಮಿರಾಮಾನಂದತೀರ್ಥರೂ ಕೂಡ ಹೈದರಾಬಾದು ಸಂಸ್ಥಾನವನ್ನು ವಿಘಟನೆಗೊಳಿಸಿ ಆಯಾ ಭಾಷಾವಾರು ಪ್ರಾಂತಗಳಿಗೆ ಆಯಾ ಭಾಗಗಳನ್ನು ಸೇರಿಸಬೇಕೆಂದು ಸಲಹೆ ಮಾಡಿದರು. ಪೊಟ್ಟಿ ಶ್ರೀರಾಮಲು ಅವರ ಬಲಿದಾನ ದಿಂದಾಗಿ ಭಾಷಾವಾರು ರಾಜ್ಯಪುನರ್‌ಘಟನೆಗಾಗಿ ತೀವ್ರಗತಿಯಲ್ಲಿ ಆಯೋಗಗಳು ಬಂದುವು. ೧ನೆಯ ನವೆಂಬರ್ ೧೯೫೬ ರಂದು ಭಾರತ ದೇಶದಲ್ಲಿಯ ಬಹುತೇಕ ಕನ್ನಡ ಪ್ರದೇಶವೆಲ್ಲ ಒಂದು ಹಂತದಲ್ಲಿ ಒಂದಾಯಿತು. ಆಗಿನಿಂದ ಹೈದರಾಬಾದ ಕರ್ನಾಟಕ ಭಾಗದ ಸಾಹಿತ್ಯಿಕ ಸಾಂಸ್ಕೃತಿಕ ಬದುಕು, ಕನ್ನಡದ ಪ್ರಮುಖ ಪ್ರವಾಹದಲ್ಲಿ ಒಂದಾಗಲು ಈ ಸಂಸ್ಥೆಯು ತನಗಿರುವ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತ ಸಾಗಿದೆ. ಜನಪರ ಕಾಳಜಿಯನ್ನು ಇಟ್ಟು ಕೊಂಡು, ತನಗೆ ಬೇಕಾಗಿರುವ ವಿಶೇಷ ಸೌಲಭ್ಯಕ್ಕಾಗಿ ಪ್ರಾದೇಶಿಕ ಅನುಕೂಲತೆಗಳನ್ನು ನೀಗಿಸಿಕೊಳ್ಳಲು ನಾಲ್ಕೂ ದಿಕ್ಕಿನಲ್ಲಿ ಪ್ರಯತ್ನಿಸು ತ್ತಿದೆ. ಒಟ್ಟಾರೆ ಈ ಸಂಸ್ಥೆಯು ಜನರ ಬದುಕಿಗೆ ಪ್ರೇರಣಾಕೇಂದ್ರವಾಗಿ ನಿಂತಿರುವುದು ಮೆಚ್ಚಿಕೊಳ್ಳುವ ವಿಷಯ. ಏಕೆಂದರೆ ಈ ಸಂಸ್ಥೆಯ ಪ್ರೇರಣೆಯಿಂದಲೇ ಜಿಲ್ಲೆಯ ಪ್ರಮುಖ ಸ್ಥಳಗಳಾದ ಶಹಾಬಾದ, ಸುರಪುರ, ರಂಗಂಪೇಟೆಯಂತಹ ನೆಲೆಯಲ್ಲಿ ಸಾಹಿತ್ಯ ಸಂಘಗಳು ಜನ್ಮತಾಳಿ ಕಲಬುರಗಿಯ ಕನ್ನಡ ಸಾಹಿತ್ಯ ಸಂಘವನ್ನು ಮಾರ್ಗ ದರ್ಶಿಯಾಗಿಟ್ಟುಕೊಂಡು ಅಂತೆಯೇ ಸಾಗಿ ಬೆಳೆಯುತ್ತ ಬಂದುದೇ ಸಾಕ್ಷಿ.

ಇಂಥ ಕನ್ನಡ ಸಾಹಿತ್ಯ ಸಂಘವು ಸ್ಥಾಪನೆಯಾಗಲು ಮಹತ್ವದ ಕಾರಣಗಳನ್ನು ಕೆಳಗಿನಂತೆ ಸಂಗ್ರಹಿಸಬಹುದು, ಮತ್ತು ಅದು ಬೆಳೆದ ಬಗೆಯನ್ನು ಪರಿಚಯಿಸಬಹುದು. ಕಲಬುರಗಿ ಜಿಲ್ಲೆಯು ಕನ್ನಡ ನಾಡುನುಡಿಯ ಘನತೆಯನ್ನು ವಿಶ್ವತೋಮುಖ ಗೊಳಿಸಿದ ನೆಲೆ. ತಿರುಳುಗನ್ನಡದ ನೆಲೆಗಳನ್ನು ಸಾರಿ ಬದುಕಿನ ವಿಕಾಸಕ್ಕೆ ಬೇಕಾಗುವ ಎಲ್ಲ ಮಾತುಗಳನ್ನು ಸೆರೆಹಿಡಿದ ಕನ್ನಡದ ಪ್ರಪ್ರಥಮವಾಗಿ ಉಪಲಬ್ಧವಾದ ಲಕ್ಷಣ ಗ್ರಂಥವು ಉದಿಸಿದ್ದು ಈ ಜಿಲ್ಲೆಯ ಮಾನ್ಯಖೇಡದಲ್ಲಿ. ಅದೇ ಅದು ಕವಿರಾಜಮಾರ್ಗ. ಶ್ರೀ ವಿಜಯ ರಚಿಸಿದ್ದು. ವಿಶ್ವಮಾನವತೆಯನ್ನು ಮೆರೆದದ್ದು ರಾಷ್ಟ್ರ ಕೂಟರ ನೃಪತುಂಗನ ಆಸ್ಥಾನದಲ್ಲಿ. ಇಷ್ಟೆಲ್ಲ ಗಾಢವಾದ

ಪರಂಪರೆಯಿದ್ದರೂ ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಇಲ್ಲಿ ಕನ್ನಡ ಭಾಷಾಸ್ಥಿತಿಯು ವಿಶೇಷವಾಗಿ ಜಿಲ್ಲಾಕೇಂದ್ರವಾಗಿ ಕಲಬುರಗಿಯಲ್ಲಿ ಚಿಂತಾಕ್ರಾಂತವಾಗಿತ್ತು. ಆಡಳಿತ ಭಾಷೆ ಉರ್ದು, ಬದುಕಿನ ವ್ಯವಹಾರದ ಮೇಲೆ ತೀವ್ರ ಪ್ರಭಾವ ಬೀರಿ ತನ್ನ ಅಸ್ತಿತ್ವವನ್ನು ಸ್ಥಾಪಿಸಿತ್ತು. ಪೇಶ್ವೆಯವರ ಕಾಲದಿಂದಲೂ ಮರಾಠಿಯು ಒಳಗಿನ ಬದುಕಿನ ಮೇಲೆ ತೀವ್ರವಾದ ಮುದ್ರೆಯನ್ನು ಒತ್ತಿ ನಿಂತಿತ್ತು. ಏಕೆಂದರೆ ಮರಾಠಿಯೇ ಕನ್ನಡ ಜನತೆಯ ಮಾತೃಭಾಷೆಯೇನೋ ಎನ್ನುವಷ್ಟರ ಮಟ್ಟಿಗೆ ಅದು ಬದುಕು ಬರೆಹಗಳನ್ನೆಲ್ಲ ಆವರಿಸಿತ್ತು. ಮತ್ತೆ ಬ್ರಿಟಿಷರ ಒತ್ತಡದಲ್ಲಿ ನಡೆಸುತ್ತಿದ್ದ ನಿಜಾಂರ ಆಡಳಿತವು ಪರ್ಯಾಯವಾಗಿ ಇಂಗ್ಲಿಷಿನ ಒತ್ತಡವನ್ನು ಸಾಮಾನ್ಯ ಬದುಕಿನ ಮೇಲೆ ಹಾಕಿತ್ತು. ನಿಜಾಂ ಸರಕಾರವು ಪ್ರಾಥಮಿಕ ಶಿಕ್ಷಣವನ್ನು ಅವರವರ ಮಾತೃ ಭಾಷೆಯಲ್ಲಿ ನಡೆಸಲು ವ್ಯವಸ್ಥೆಗೊಳಿಸಿದ್ದರೂ ಇಲ್ಲಿ ಮರಾಠಿ ಉರ್ದು ಇಂಗ್ಲಿಷ್‌ಗಳ ಒತ್ತಡದ ಪ್ರಭಾವದಲ್ಲಿ ಕನ್ನಡವು ಉಳಿದು ಬರಬೇಕಾದರೆ ಸಾಕುಬೇಕಾಗಿತ್ತು.

ಸ್ವಾತಂತ್ರ್ಯಪೂರ್ವದ ಈ ಸ್ಥಿತಿಯು ಗಂಭೀರವಾಗುತ್ತಿರುವ ಸಂದರ್ಭದಲ್ಲಿ ಹರಿದು ಹಂಚಿಹೋದ ಕರ್ನಾಟಕದ ಉತ್ತರದಲ್ಲಿ ಆಲೂರು ವೆಂಕಟರಾಯರು ಮತ್ತು ದಕ್ಷಿಣದಲ್ಲಿ ಬಿ.ಎಂ. ಶ್ರೀಕಂಠಯ್ಯನವರು ಕನ್ನಡವನ್ನು ಎತ್ತುವ, ಶಕ್ತವಾಗಿ ನಿಲ್ಲಿಸುವ ಚಳುವಳಿ ಆರಂಭಿಸಿದ್ದರು. ಆ ಗಾಳಿ ಕಲಬುರಗಿಯ ಮೇಲೂ ಬೀಸಿತು. ಕಪಟ್ರಾಳ ಕೃಷ್ಣರಾಯರಂತಹವರು ಮುಂಚೂಣಿಯಲ್ಲಿ ನಿಂತು ಇಲ್ಲಿ ಕನ್ನಡ ಜಾಗೃತಿಗೆ ಪ್ರೇಕ್ಷಕರಾದರು. ನಿಜಾಂನ ಕಟ್ಟಾಣತಿಯಿದ್ದರೂ ಕನ್ನಡಕ್ಕೆ ಕವಿದಿದ್ದ ಕತ್ತಲನ್ನು ಸರಿಸತೊಡಗಿದರು. ಅವರ ಕನ್ನಡ ಕಹಳೆಯ ಮೊಳಗಿನಿಂದಾಗಿ ಮರಾಠಿ ಶಿಕ್ಷಣ ಪಡೆದವರು ಕನ್ನಡ ಕಲಿಯತೊಡಗಿದರು. ಖುದ್ದಾಗಿ ಕಪಟರಾಳ ಕೃಷ್ಣರಾಯರು ಸ್ವಯಂಶಿಕ್ಷಕರಾಗಿ ಕನ್ನಡ ಕಲಿತು - ಕನ್ನಡ ಕಲಿಯಲು ಹೇಳಿದರು. ತತ್ ಪರಿಣಾಮವಾಗಿ ಹೇರೂರು ದತ್ತಾತ್ರೇಯರಂತಹ ತರುಣರು ಪ್ರಭಾವಿತರಾಗಿ ಮುಂದೆ ಬಂದು ಅಡತಿಗಳ ಲೆಕ್ಕವನ್ನು ಕನ್ನಡದಲ್ಲಿ ಬರೆಯಲು ಒತ್ತಾಯಿಸುವ ಚಳುವಳಿ ಹೂಡಿದರು. ಈ ಕಾರ್ಯಸಾಧನೆಗಾಗಿ ಮುಷ್ಠಿಫಂಡು ಎತ್ತಿದರು. ಕನ್ನಡ ತರುಣ ಸಂಘ ಕಟ್ಟಿದರು. ಸಾರ್ಥಕ ಚಳುವಳಿ ನಡೆಸಿದರು. ಈ ತರುಣ ಸಂಘವು ಕನ್ನಡ ಸಾಹಿತ್ಯದಲ್ಲಿ ವಿಲೀನವಾಯಿತು.

ಈ ಚಳುವಳಿಯ ಭುಜಬಲದಲ್ಲಿ ಇನ್ನಷ್ಟು ಶಕ್ತಿ ತುಂಬು ವಂತೆ ಕಪಟ್ರಾಳರು ಮುಂದೆ ೧೯೨೮ರಲ್ಲಿ ಕಲಬುರಗಿ ಯಲ್ಲಿ ಅಖಿಲ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಸಂಘಟಿಸಿದರು. ಈ ಸಮ್ಮೇಳನದ ಸ್ವಾಗತಾಧ್ಯಕ್ಷರಾಗಿ ಶ್ರೀ ಶರಣ ಬಸವೇಶ್ವರ ಸಂಸ್ಥಾನದ ಪೀಠಾಧಿಪತಿ ಪೂಜ್ಯ ದೊಡ್ಡಪ್ಪ ಅಪ್ಪ ಅವರನ್ನು ನಿಯೋಜಿಸಿ ಕೊಂಡು, ತಾವು ಕಾರ್ಯದರ್ಶಿಗಳಾಗಿ ನಿಂತುಕೊಂಡು ಬಿ.ಎಂ. ಶ್ರೀಕಂಠಯ್ಯನವರನ್ನು ಸಮ್ಮೇಳನಾಧ್ಯಕ್ಷರಾಗಿ ಆಯೋಜಿಕೊಂಡು ಕನ್ನಡ ಜಾಗೃತಿಯ ನೆಲೆಗೆ ಭದ್ರ ತಳಹದಿ ನೀಡಿದರು.

ಆ ಪ್ರೇರಣೆಯಿಂದ ಕಲಬುರಗಿ ಪಟ್ಟಣದಲ್ಲಿ ಕನ್ನಡ ಕಲಿ ಸುವ, ಓದುವ ಕೆಲಸಕ್ಕೆ ಭರಾಟೆ ಬಂದಿತು. ಬ್ರಹ್ಮಪುರ, ಜಗತ್ತು, ಕಿರಾಣಿ ಬಜಾರ, ಮಖ್ತುಂಪುರ, ಸ್ಟೇಷನ್ ಓಣಿಗಳಲ್ಲಿ ಕನ್ನಡ ಕಲಿಸುವ ತರಗತಿಗಳು ಸ್ವಯಂಪ್ರೇರಣೆಯಿಂದ ನಡೆದುವು. ಹಾಡು ಹರಿಕಥೆ ಭಜನೆಗಳಲ್ಲಿ ಕನ್ನಡವು ತೂರಿಕೊಂಡು ಬಂದಿತು.

ಆಗ ಈ ವಾತಾವರಣವು ಇನ್ನಷ್ಟು ಸಂಘಟಿತವಾಗಬೇಕೆಂಬ ಉದ್ದೇಶದಿಂದ ೧೯೪೦ರಲ್ಲಿ ಕನ್ನಡ ಸಾಹಿತ್ಯ ಸಂಘವನ್ನು ಹುಟ್ಟು ಹಾಕಲು ಕಪಟ್ರಾಳರು ಮುಂದಾದರು. ಆ ಪ್ರಕಾರ ಅದು ಅಸ್ತಿತ್ವಕ್ಕೆ ಬಂದು ಅಂದಿನ ಸರಕಾರಿ ನಿಯಮದಂತೆ ಕನ್ನಡ ಸಾಹಿತ್ಯ ಸಂಘ ವನ್ನು ರಿಜಿಸ್ಟರ್ ಮಾಡಲಾಯಿತು. ಅನಂತರ ಕನ್ನಡ ಕ್ರಾಂತಿ ಪ್ರಜ್ವಲಿಸತೊಡಗಿತು. ನಿತ್ಯ ಪ್ರಭಾತಫೇರಿಗಳು ಕನ್ನಡ ಹಾಡುಗಳನ್ನು ಹಾಡುತ್ತ ಓಣಿಓಣಿಗಳಲ್ಲಿ ನಡೆದುವು. ಮುಂದೆ ೨೭-೯-೧೯೪೬ ರಲ್ಲಿ ನಡೆದ ಸರ್ವಸದಸ್ಯರ ಸಾಮಾನ್ಯ ಸಭೆಯಲ್ಲಿ ಈ ಸಂಸ್ಥೆಯನ್ನು ಟ್ರಸ್ಟ್ ಆಗಿ ಪರಿವರ್ತಿಸಿ ರಿಜಿಸ್ಟರ್ ಮಾಡಲು ನಿರ್ಣಯ ತೆಗೆದು ಕೊಳ್ಳಲಾಯಿತು. ಅದನ್ನು ಮುಂದೆ ೦೧.೦೬-೧೯೬೨ರಲ್ಲಿ ಕನ್ನಡ ಸಾಹಿತ್ಯ ಸಂಘದ ಕಾರ್ಯ ಸಮಿತಿಯು ಮಾನ್ಯಮಾಡಿತು. ಆ ಸಮಿತಿಯಲ್ಲಿ, ಸರ್ವಶ್ರೀ ಭೀಮಸೇನರಾವ್ ತವಗ ಅವರು ಅಧ್ಯಕ್ಷರಾಗಿಯೂ, ಸಿ. ನರಸಿಂಗರಾವ್ ಮತ್ತು ವಿಟ್ಠಲರಾವ್ ದೇವುಳಗಾಂವಕರ್ ಉಪಾಧ್ಯಕ್ಷರುಗಳಾಗಿಯೂ, ಪಾಂಡುರಂಗ ರಾವ್ ಪ್ಲೀಡರ್ ಮತ್ತು ವಾಮದೇವ ದೀಕ್ಷಿತರು ಕಾರ್ಯದರ್ಶಿ ಗಳಾಗಿಯೂ, ಸುಬ್ಬಾಚಾರ್ಯಕಟ್ಟಿ, ನಾರಾಯಣರಾವ್ ಕಾನಿ ಹಾಳ, ಸಿ. ಎಸ್. ರಾಮಚಂದ್ರ, ಕುಸುಮಾಕರ ದೇಸಾಯಿ, ಡಾ. ಗಿರಿರಾವ್ ಸಾಂಬ್ರಾಣಿ, ಶ್ರೀಮತಿ ಎನ್.ವಿ. ಜಯಮ್ಮ ಸದಸ್ಯರಾಗಿಯೂ ಇದ್ದರು. ಇವರೆಲ್ಲರ ಸರ್ವಾನುಮತದ ಒಪ್ಪಿಗೆ ಪಡೆದು ಟ್ರಸ್ಟಅನ್ನು ದಿನಾಂಕ ೧೨-೭-೧೯೬೨ರಂದು ರಿಜಿಸ್ಟರ್ ಮಾಡಿಸಲಾಯಿತು. ಆ ಪ್ರಕಾರ ಸರ್ವಶ್ರೀ ಸಂಜೀವರಾವ್ ದೇಸಾಯಿ, ಹನುಮಂತರಾವ್ ಕಕ್ಕೇರಿ, ದತ್ತಾತ್ರೇಯರಾವ್ ಅವರಾದಿ, ಭೀಮಸೇನರಾವ್ ತವಗ ಮತ್ತು ಜಗನ್ನಾಥರಾವ್ ಚಂದ್ರಿಕಿ ಅವರು ಸಂಸ್ಥೆಯ ಟ್ರಸ್ಟಿಗಳಾದರು. ಇವರಲ್ಲಿ ಒಬ್ಬರಾದ ತವಗ ಭೀಮಸೇನರಾಯರನ್ನು ವ್ಯವಸ್ಥಾಪಕ ಟ್ರಸ್ಟಿಗಳೆಂದು ನೇಮಿಸಲಾಯಿತು. ಮುಂದೆ ಸಾಗಿದಂತೆ, ಟ್ರಸ್ಟಿನಲ್ಲಿ ತೆರವಾದ ಸ್ಥಳಗಳಲ್ಲಿ ಸರ್ವಶ್ರೀ ಶ್ರೀನಿವಾಸರಾವ್ ಮಲ್ಲಾಪುರ, ಗುಂಡಾ ಚಾರ್ಯ ತೆಂಗಳಿ, ವಿ. ಸತ್ಯನಾರಾಯಣರು ಟ್ರಸ್ಟಿಗಳಾಗಿ ಕಾರ್ಯ ನಿರ್ವಹಿಸಿದ್ದಾರೆ. ಈಗ (೨೦೦೫) ವಾಮದೇವ ದೀಕ್ಷಿತರು ವ್ಯವಸ್ಥಾಪಕ ಟ್ರಸ್ಟಿಗಳಾಗಿಯೂ ಪ್ರೊ. ವಸಂತ ಕುಷ್ಟಗಿ, ಪ್ರೊ. ಪ್ರಭಾಕರ ಸಾತಖೇಡ ಅವರು ಟ್ರಸ್ಟಿಗಳಾಗಿದ್ದು, ತೆರವಾದ ಎರಡು ಸ್ಥಳಗಳನ್ನು ಇಷ್ಟರಲ್ಲೆ ತುಂಬ ಬೇಕಿದೆ. ಸಹ ಟ್ರಸ್ಟಿಗಳೆಂದು ಹನುಮಂತ ರಾವ್ ಕಾನಿಹಾಳ, ಶ್ರೀಮತಿ ಶೋಭಾ ರಂಜೋಳಕರ್ ಅವರು ಇದ್ದಾರೆ. ಕಾನೂನು ಸಲಹೆಗಾರರಾಗಿ ಕಲ್ಯಾಣರಾವ್ ಬಕ್ಷಿ ಅವರು ಇದ್ದಾರೆ.

ಈ ಸಂಸ್ಥೆಗೆ ಸ್ವಾತಂತ್ರ್ಯಪೂರ್ವದಿಂದಲೂ ಎಂದರೆ ೧೯೪೧ ರಿಂದಲೇ ಜಗತ್ತು ಓಣಿಯಲ್ಲಿ ಸ್ವಂತ ಕಟ್ಟಡವಿದೆ. ಅದು ಮುಂಚೆ ದಿವಂಗತ ಅಜೀಜಖಾನ ಮಾಸ್ತರ್ ಅವರದಾಗಿತ್ತು. ಆ ಅವರ ಮನೆಯನ್ನು ರೂ. ೧೧,೦೦೦/- (ರೂಪಾಯಿ ಹನ್ನೊಂದು ಸಾವಿರ) ಮೊತ್ತಕ್ಕೆ ಖರೀದಿ ಮಾಡಿದ್ದು, ಈ ಕಟ್ಟಡವನ್ನು ಪಡೆಯುವುದಕ್ಕಾಗಿ ಆರಂಭದಲ್ಲಿ ಒಂದು ಸಾವಿರ ರೂಪಾಯಿಗಳ ಮೊತ್ತದ ದೇಣಿಗೆಯನ್ನು ಬನ್ನಿಕೊಪ್ಪ ಬಸಪ್ಪ ಭೂಮರೆಡ್ಡಿ ಅವರು ನೀಡಿದರು. ಅನಂತರ ಈ ಪಟ್ಟಣದ ಕನ್ನಡ ಕಾರ್ಯ ದುರಂಧರರಾದ ಸರ್ವಶ್ರೀ ಕಪಟ್ರಾಳ ಕೃಷ್ಣರಾವ್, ತವಗ ಭೀಮಸೇನರಾವ್, ಸಂಜೀವರಾವ್ ದೇಸಾಯಿ, ಕಕ್ಕೇರಿ ಹನುಮಂತ ರಾವ್, ಎಸ್. ಹನುಮಂತರಾವ್, ಹುಣಸಗಿ ಶ್ರೀನಿವಾಸಾಚಾರ್ಯ, ಮಲ್ಲಾಪುರ ಶ್ರೀನಿವಾಸರಾವ್, ಅವರಾದಿ ದತ್ತಾತ್ರೇಯರಾವ್, ಹೇರೂರ ದತ್ತಾತ್ರೇಯರಾವ್, ಸುಬ್ಬಾಚಾರ್ಯಕಟ್ಟೆ, ವಾಜೇಂದ್ರರಾವ್ ಹನುಮಸಾಗರ, ರಂಗರಾವ್ ಹರವಾಳ, ರಂಗರಾವ್ ಕಾನಿಹಾಳ, ಬಿ. ಅಶ್ವತ್ಥರಾವ್ ಮೊದಲಾದ ಇನ್ನೂ ಅನೇಕರು ತಮ್ಮ ತಮ್ಮ ಕೈಲಾದಮಟ್ಟಿಗೆ ಧನ ಸಹಾಯ ಮಾಡಿದರು. ಈ ಕಟ್ಟಡವನ್ನು ಖರೀದಿಸುವಾಗ ಹನುಮಂತರಾವ್ ಕಕ್ಕೇರಿಯವರು, ಖರೀದಿ ಮೊತ್ತಕ್ಕೆ ಹೊಂದಿಕೆಯಾಗುವ ಮೊತ್ತವನ್ನು ಕೈಗಡವಾಗಿ ನೀಡಿದರು. ಆಮೇಲೆ ದೇಣಿಗೆಯ ಸಂಗ್ರಹವಾದಂತೆ ಆ ಮೊತ್ತವನ್ನು ಮರುಪಾವತಿ ಮಾಡಲಾಯಿತು.

ಹೀಗೆ ರೂಪಗೊಂಡ ಕನ್ನಡ ಸಾಹಿತ್ಯ ಸಂಘದ ಕಟ್ಟಡದಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಕನ್ನಡ ಮಾತೃಭಾಷೆಯಲ್ಲಿ ಓದು ಬರೆಹ ಬಾರದ ಪ್ರಬುದ್ಧರನ್ನು ಪತ್ತೆ ಮಾಡಿ ಕನ್ನಡ ಕಲಿಸಲಾಯಿತು. ಮಕ್ಕಳಿಗಾಗಿ ಮಕ್ಕಳ ಕೂಟವನ್ನು ಕಟ್ಟಲಾಯಿತು. ರೇಡಿಯೋ ಕೇಳಿಸಿ ಓದುವ ಆಸಕ್ತಿಯನ್ನು ಬೆಳಿಸಲಾಯಿತು. ಅದಕ್ಕಾಗಿ ಪ್ರಮಿಳಾ ಬಾಯಿ ಪಟ್ಟಣಕರರು ಸಹಾಯಹಸ್ತ ನೀಡಿದರು. ವಾಚನಾಲಯ ನಡೆಸಿ ಪತ್ರಿಕೆಗಳನ್ನು ಓದಲು ಸಾರ್ವಜನಿಕರಲ್ಲಿ ಆಸಕ್ತಿ ಬೆಳೆಸಿತು. ಪ್ರಾಥಮಿಕ ಮಟ್ಟದಲ್ಲಿ ಕನ್ನಡ ಮಾಧ್ಯಮಕ್ಕೆ ವಿದ್ಯಾರ್ಥಿಗಳನ್ನು ಸೇರಿಸುವ ಅಭಿಯಾನಕ್ಕೆ ತೊಡಗಿ ಯಶಪಡೆಯಿತು. ಗಣೇಶ ಹಬ್ಬ, ನಾಡಹಬ್ಬಗಳನ್ನು ಸಂಘಟಿಸಿ ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನ ನೀಡಿ ಯುವಕರಲ್ಲಿ ಕನ್ನಡದ ಆಕರ್ಷಣೆ ಬೆಳೆಸಿತು. ಸರ್ವಶ್ರೀ ಸಿದ್ಧಯ್ಯ ಪುರಾಣಿಕ, ಜರ್ಕುಂಟಿ ಜಯರಾವ್, ದೇವೇಂದ್ರಕುಮಾರ ಹಕಾರಿ, ಕಂಠೀರಾವ್, ವಸಂತಕುಷ್ಟಗಿ, ಮಂದಾಕಿನಿಬಾಯಿ, ಶಶಿಕಲಾ ಬಾಯಿ, ಕಾಡಮ್ಮ, ಚಂದ್ರಕಾಂತ ಕುಸನೂರು, ಸರಿತಾದೇಸಾಯಿ, ಆರ್. ರೇವಣಸಿದ್ಧಯ್ಯ, ಪಂಚಾಕ್ಷರಿ ಹಿರೇಮಠ, ಚಂದ್ರಕಾಂತ ಕುಸನೂರ, ಕೇಶವರಾವ್ ಮಹಾಗಾಂವಕರ್ ಮೊದಲಾದ ಅಂದಿನ ವಿದ್ಯಾರ್ಥಿಗಳು ಈ ಸಂಸ್ಥೆಯಿಂದ ಸ್ಫೂರ್ತಿ ಪಡೆದವರು. ಇಂದು ಸಾಹಿತ್ಯ ಕ್ಷೇತ್ರದಲ್ಲಿ ಹೆಸರು ಗಳಿಸಿದ್ದಾರೆ. ಮುಂದೆ ಇಂತಹ ದೊಡ್ಡ ಪಡೆಯೇ ಇಲ್ಲಿಂದ ನಿರ್ಮಾಣವಾಗಿದೆ. ಸಾಹಿತ್ಯ ಹಾಗು ಸಂಸ್ಕೃತಿಯ ವಿವಿಧ ಕ್ಷೇತ್ರಗಳನ್ನು ಅವರು ಬೆಳಗಿಸಿದ್ದಾರೆ.

ದೇಶದ ಸ್ವಾತಂತ್ರ್ಯದ ಚಳುವಳಿ ನಡೆದಾಗಲೂ, ಅನಂತರ ಹೈದರಾಬಾದ ಸಂಸ್ಥಾನದ ವಿಮೋಚನ ಚಳುವಳಿ ನಡೆದಾಗಲೂ ಕನ್ನಡ ಸಾಹಿತ್ಯ ಸಂಘವು ಗುಪ್ತವಾಗಿ ಕರಪತ್ರಗಳನ್ನು ಸಿದ್ಧಪಡಿಸಿ, ಹಂಚಿ, ಹೋರಾಟಗಳ ಸೇನಾನಿಗಳ ಪಡೆಯನ್ನು ನಿರ್ಮಿಸಿತು. ಜಿಲ್ಲೆಯ ತುಂಬ ಕನ್ನಡದ ಮುಖಾಂತರ ಆಂದೋಲನಗಳನ್ನು ಜ್ವಲಂತಗೊಳಿಸಿ ತುಂಬಾ ಪರಿಣಾಮ ಬೀರುವಂತೆ ಮಾಡಿತು. ತತ್‌ಕಾರಣವಾಗಿ ಬಾಡುವ ಸ್ಥಿತಿಯಲ್ಲಿದ್ದ ಕನ್ನಡದ ಮರುಗ, ದವನ, ಮಲ್ಲಿಗೆ, ಸೇವಂತಿಗೆ ಇರುವಂತಿಗೆಯಾಗಿ ಚೇತರಿಸಿದುವು.

ಹೈದರಾಬಾದು ಸಂಸ್ಥಾನದ ವಿಲೀನದ ಅನಂತರ ಕನ್ನಡ ಸಾಹಿತ್ಯ ಶಕ್ತಿಯನ್ನು ಬೆಳೆಸುವ ಕಾರ್ಯವನ್ನು ಸತತವಾಗಿ ಮಾಡುತ್ತ ಬಂದಿದ್ದು, ಲಕ್ಷ್ಮೀಶನ ಕನ್ನಡ ಜೈಮಿನಿ ಭಾರತಕ್ಕೆ ಮುನ್ನುಡಿ (ದ.ರಾ. ಬೇಂದ್ರೆ), ಬೇಂದ್ರೆ ಹಾಗು ಕನ್ನಡ ಕಾವ್ಯ (ಕೀರ್ತಿನಾಥ ಕುರ್ತಕೋಟಿ) ಕನ್ನಡ ಭಗವದ್ಗೀತೆ (ವೆಂಕಟರಾವ್ ನಾಯಕ), ಹಾಲುಜೇನು ಕಾದಂಬರಿ (ಜಯತೀರ್ಥ ರಾಜಪುರೋಹಿತ), ಸಿಂಹನಾದ (ರಸಿಕ ಪುತ್ತಿಗೆ) ಕನಕದಾಸರ ಗೀತೆಗಳು (ಸಂ-ವಸಂತಕುಷ್ಟಗಿ), ಅಧ್ಯಯನದ ಹಾದಿಯಲ್ಲಿ (ಜಯತೀರ್ಥ ರಾಜಪುರೋಹಿತ), ಶ್ರೀರಾಮಲೀಲಾಮೃತ (ವೆಂಕಟರಾವ್ ನಾಯಕ), ತವಗ ಶ್ರೀ ಸಂಭಾವನಾ ಗ್ರಂಥ (ಸಂ - ಜಯತೀರ್ಥ ರಾಜಪುರೋಹಿತ ಮತ್ತು ವಸಂತಕುಷ್ಟಗಿ) ಇತ್ಯಾದಿ ಪ್ರಮುಖ ಗ್ರಂಥಗಳನ್ನು ಪ್ರಕಟಿಸಿದೆ. ಜೊತೆಗೆ ಮಹತ್ವಪೂರ್ಣ ಮೌಲಿಕ ಗ್ರಂಥಗಳಿರುವ ಗ್ರಂಥಾಲಯವನ್ನು ಹೊಂದಿದೆ. ಕಾಲಕಾಲಕ್ಕೆ ವಿಚಾರ ಸಂಕಿರಣಗಳನ್ನು ಏರ್ಪಡಿಸುತ್ತ ಬಂದಿದೆ. ಈ ಸಂಘದ ಆಶ್ರಯದಲ್ಲಿ ಹತ್ತು ದತ್ತಿ ಉಪನ್ಯಾಸಗಳು ಪ್ರತಿವರ್ಷ ನಡೆಯುತ್ತವೆ. ಭಾರತ ಬಿಂದುರಾಯರಿಂದ ಕಾರ್ಯಕ್ರಮ ನಡೆಸಿ ಗಮಕಕಲೆಯು ಮೈಕೊಡಹಿಕೊಂಡು ಏಳುವಂತೆ ಮಾಡಿದೆ. ಕನ್ನಡ ಸಾಹಿತ್ಯ ಪರಿಷತ್ತು ಜಿಲ್ಲಾ ಸಮಿತಿಗಳನ್ನು ಅನುಷ್ಠಾನಕ್ಕೆ ತರುವ ಮುನ್ನ ಈ ಸಂಸ್ಥೆಯ ಆಶ್ರಯದಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನಗಳು ಏರ್ಪಟ್ಟಿವೆ. (೧೯೫೦ರಲ್ಲಿ ನಡೆದ ಅಖಿಲಭಾರತ ಸಾಹಿತ್ಯ ಸಮ್ಮೇಳನ ಹಾಗು ಪ್ರಥಮ್ಮ ದ್ವಿತೀಯ ಜಿಲ್ಲಾ ಸಮ್ಮೇಳನಗಳು). ಕನ್ನಡ ಸಾಹಿತ್ಯ ಪರಿಷತ್ತು ನಡೆಸುತ್ತಿರುವ ಕನ್ನಡ ಪರೀಕ್ಷೆಗಳನ್ನು ನಡೆಸುತ್ತ ಬಂದಿದೆ. ಕನ್ನಡ ಆಡಳಿತ ಭಾಷೆಯ ಅನುಷ್ಠಾನಕ್ಕೆ ಹಾಗು ಗೋಕಾಕ ಚಳುವಳಿಯಲ್ಲಿ ಕ್ರಿಯಾಶೀಲತೆಯಿಂದ ಪಾಲುಗೊಂಡಿದೆ. ನಾಟಕಗಳ ಪ್ರದರ್ಶನ, ಕವಿಸಮ್ಮೇಳನ, ಜಾನಪದ ಸಮ್ಮೇಳನಗಳನ್ನು ಏರ್ಪಡಿಸಿದೆ. ನಾಟಕಗಳ ಪ್ರದರ್ಶನಕ್ಕಾಗಿ 'ಶ್ರೀರಂಗ ಬಯಲು ರಂಗಮಂಟಪ'ವನ್ನು ಅಣಿಗೊಳಿಸಲಾಗಿದೆ.

೧೯೪೦ ರಿಂದ ಈವರೆಗೂ ನಾಡಿನ ಪ್ರತಿಭಾವಂತ ಸಾಹಿತಿಗಳು, ಸಂಶೋಧಕರು ಸಮಾಜ ಚಿಂತಕರು ವಿದ್ವಾಂಸರು

ಅನೇಕರು ಅನೇಕರು ಈ ಸಂಸ್ಥೆಗೆ ಆಗಮಿಸಿ ಉದ್ಬೋಧಕ ಉಪನ್ಯಾಸಗಳನ್ನು ನೀಡಿ ವಿಶೇಷತಃ ವಿದ್ಯಾರ್ಥಿಗಳಿಗೆ ಹೊಸ ನೋಟವನ್ನು ನೀಡಿದ್ದಾರೆ. ಅಷ್ಟೇ ಅಲ್ಲ ಕಲಬುರಗಿ ಪಟ್ಟಣದ ಶ್ರೀಸಾಮಾನ್ಯರೆಲ್ಲ ಕನ್ನಡದ ಮರುದೀಕ್ಷೆಯನ್ನು ಪಡೆದು ಕನ್ನಡ ಕೈ, ಕನ್ನಡದ ಶ್ರೀ, ಕನ್ನಡದ ಕಲ್ಪತುರವಾಗಿದ್ದಾರೆ. ಇಂತಹ ಪ್ರೇರಣೆ ನೀಡಿದ ಆ ಮಹಾನುಭಾವರು ಸಂಘಕ್ಕೆ ಬಂದಾಗ ನೀಡಿದ ಬರೆಹಗಳು ಈ ಸಂಸ್ಥೆಯ ಶಕ್ತಿಯ ಸ್ವರೂಪವನ್ನು ತಿಳಿಸುವ ಸಾಮಗ್ರಿ. ಅಂತಹ ಬರೆಹಗಳಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸಬಹುದು.

"...ಸಂಘವು ಈಗ ಚಿಕ್ಕದಾಗಿದೆ. ಬಹು ಮುಖ್ಯವಾಗಿಯೂ ಊರ್ಜಸ್ವಲವಾಗಿಯೂ ಬೆಳೆವ ಸಾಮರ್ಥ್ಯವು ಅದರಲ್ಲಿದೆ.... ನನ್ನ ಚಿತ್ರಸೃಷ್ಟಿಯ ಪ್ರತಿಯನ್ನು ಕಾಣಿಕೆಯಾಗಿ ಕೊಡುತ್ತೇನೆ...." (೨೬-೧೨-೧೯೪೧) - ಸಾಲಿರಾಮಚಂದ್ರರಾವ್

"ಈ ಸಂಘದ ಸರ್ವತೋಮುಖವಾದ ಕನ್ನಡ ಚಟುವಟಿಕೆಗಳನ್ನು ಕಂಡು ಆನಂದಪಟ್ಟೆ" (೨೬-೨-೧೯೪೨) - ಬಿ.ಎಂ. ಶ್ರೀಕಂಠಯ್ಯ

"ಸಂಘದ ಶಿಸ್ತಾದ ಕನ್ನಡತನವನ್ನು ಮೆಚ್ಚಲೇಬೇಕು" (೮-೫-೧೯೪೩) - ಅ.ನ. ಕೃಷ್ಣರಾವ್

"ಸಂಘದ ಕೆಲಸ ಶಿಸ್ತಾಗಿ ನಡೆಯುತ್ತಿದೆ. ಹೀಗೇ ಸಾಗಲಿ ಮುಂದೆ ಮುಂದೆ" - ಮಾಸ್ತಿವೆಂಕಟೇಶ ಅಯ್ಯಂಗಾರ ಹಾಗು ವಿ.ಕೃ. ಗೋಕಾಕ

"ಈ ಸಂಘವು ದಿನದಿನವೂ ಬೆಳೆದು ಮುನ್ನುಡಿಯಿಟ್ಟು ಈ ಪ್ರಾಂತದ ಕನ್ನಡ ಜನತೆಯ ಜೀವನದಲ್ಲಿ ಒಂದು ಪ್ರಧಾನ ಸ್ಥಾನವನ್ನು ಗಳಿಸಿಕೊಂಡಿದೆ" (೨೦-೭-೧೯೪೨) - ಕ.ವೆಂ. ರಾಘವಾಚಾರ್

"ಸಂಘವು ಸದೃಢವಾಗಿ ಬೆಳೆದು ವಿಶಾಲವಾಗಲಿ" (೧೦-೭-೧೯೪೪) - ತೀ.ನಂ. ಶ್ರೀಕಂಠಯ್ಯ

"ಸಂಘವು ಕಳೆದ ಮೂರು ವರ್ಷಗಳಲ್ಲಿ ಅತ್ಯುತ್ತಮ ಸೇವೆ ಮಾಡಿದೆ.... ತನ್ನ ಕಾರ್ಯಕ್ಷೇತ್ರವನ್ನು ಇಡೀ ಜಿಲ್ಲೆಯಲ್ಲಿ ಬೆಳಸಿ ಹಳ್ಳಿಹಳ್ಳಿಗೂ ಕನ್ನಡ ಜ್ಞಾನ ಹಂಚಲಿ" (೧೨-೭-೧೯೪೪) - ಸಂ.ವಾ. ಕೃಷ್ಣಮೂರ್ತಿರಾವ್

"ಸಂಘವನ್ನು ನೋಡಿ ಅತ್ಯಾನಂದವಾಯಿತು. ಸಂಘದ ಶಿಸ್ತು ಲೆಖ್ಖಪತ್ರ ಯಾವತ್ತೂ ಯೋಗ್ಯ ರೀತಿಯಿಂದ ಇದೆ." - ಬಿ.ಬಿ. ಭೂಮರಡ್ಡಿ.

"ಸಂಘಗಳಲ್ಲಿ ಇದು ಒಂದು ಗಣ್ಯವಾದ ಸಂಸ್ಥೆ" (೯-೧೦-೧೯೪೫) - ಶಿ.ಶಿ. ಬಸವನಾಳ

"ನಿಜಾಂ ಕರ್ನಾಟಕದಲ್ಲಿ ಚೈತನ್ಯವುಳ್ಳ ಸಂಘವಿದು" (೧೩-೧೦-೧೯೪೫) - ರಾ. ಸ್ವ. ಪಂಚಮುಖಿ

"ತೀರ ಸ್ವಲ್ಪ ಸಮಯದಲ್ಲಿಯೇ ಕನ್ನಡದ ಜಾಗೃತಿಯ ಹೊಸ ಪ್ರಕರಣವನ್ನೇ ಪ್ರಾರಂಭಿಸಿದೆ" - ಬುರ್ಲಿ ಬಿಂದುಮಾಧವ.

"ಸಂಘವು ಕಲಬುರಗಿಗೆ ಮಾತ್ರವಲ್ಲ ಕನ್ನಡ ನಾಡಿಗೇ ವಿಶಿಷ್ಟವೆನಿಸಿದೆ" (೪-೨-೧೯೪೬) - ತಿ.ತಾ. ಶರ್ಮ.

"ಕನ್ನಡದ ಬಾವುಟವನ್ನು ಗಡಿನಾಡಿನಲ್ಲಿ ಎತ್ತಿಹಿಡಿದಿದ್ದೀರಿ. ಅಳಿಸಿ ಹೋಗುತ್ತಿರುವ ಕನ್ನಡಕ್ಕೆ ಹೊಸಕಳೆ ಇತ್ತು ಉಜ್ವಲ ಗೊಳಿಸಿದ್ದೀರಿ" (೧೪-೨-೧೯೪೬) - ಎಂ.ಆರ್. ಲಕ್ಷ್ಮಮ್ಮ.

"ಕಲಬುರ್ಗಿಯ ಕನ್ನಡಿಗರ ಜೀವನದ ಉಸಿರಾಗಿ ಹತ್ತಾರು ವರ್ಷ ಶ್ರಮಿಸಿ ೧೯ ನಾಡಹಬ್ಬಗಳನ್ನು ನಡೆಸಿದ್ದೇ ಒಂದು ಶ್ರೇಷ್ಠ ಸಾಧನೆ. (೨೦-೧೦-೧೯೫೦) - ವಿ. ಸೀತಾರಾಮಯ್ಯ.

"ಕರ್ನಾಟಕದಲ್ಲಿಯೇ ಇದೊಂದು ಅತ್ಯುತ್ಕೃಷ್ಟ ಸಂಘ" (೬-೧೧-೧೯೫೬) - ದ.ರಾ. ಬೇಂದ್ರೆ.

"ಕನ್ನಡ ಕಾರ್ಯಗಳು ಶ್ಲಾಘನೀಯವಾಗಿ ನಡೆಯುತ್ತಿವೆ" (೨೫-೧೧-೧೯೫೯) - ಬಿ. ಶಿವಮೂರ್ತಿಶಾಸ್ತ್ರಿ.

"ಕನ್ನಡ ನುಡಿ ಹಾಗೂ ಸಾಹಿತ್ಯದ ಪ್ರಚಾರ ಹಾಗು ಬೆಳವಣಿಗೆಯಲ್ಲಿ ಈ ಸಂಸ್ಥೆಯ ಪಾತ್ರ ದೊಡ್ಡದು" (೧೪-೫-೧೯೬೫) - ಎಸ್. ನಿಜಲಿಂಗಪ್ಪ ಹಾಗು ಕೆ. ರಾಮಕೃಷ್ಣ ಹೆಗಡೆ.

"ಕನ್ನಡಿಗರೂ ತೆಲುಗರೂ ಮರಾಠಿಗರೂ ತಮಿಳರೂ ಇಲ್ಲಿ ಅಣ್ಣತಮ್ಮಂದಿರಂತೆ ಬಾಳುತ್ತಿರುವುದು ಇಡಿನಾಡು ಕಲಿಯಬೇಕಾದ ಪಾಠ - ಸಾಹಿತ್ಯ ಸಂವರ್ಧನೆಯ ಜೊತೆಗೆ ಅನ್ಯೋನ್ಯ ಜೀವನಕ್ಕೆ ಸಹಕಾರಿಯಾದ ಕಾರ್ಯಕ್ರಮಗಳು ಪ್ರಶಂಸನೀಯ. ಈ ಬಗೆಯ ಉದಾತ್ತ ಸೇವೆಯನ್ನು ಸದ್ದುಗದ್ದಲವಿಲ್ಲದೆ ನಿರಾಡಂಬರ ಜೀವಿಯಂತೆ ಈ ಸಂಘವು ಸಲ್ಲಿಸುತ್ತಿರುವುದಕ್ಕಾಗಿ ಪರಿಷತ್ತು ತನ್ನ ಹೃತ್ಪೂರ್ವಕ ಅಭಿನಂದನೆ ಅಭಿವಂದನೆಗಳನ್ನು ಸಲ್ಲಿಸುತ್ತದೆ. (೩-೨-೧೯೭೦) - ಜಿ. ನಾರಾಯಣ, ಅಧ್ಯಕ್ಷರು, - ಹಂ. ಪ. ನಾಗರಾಜಯ್ಯ, ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತು.

"ಈ ಸಂಘದಿಂದ ನಗರ ಭವಿಷ್ಯ ಜೀವನ ಕನ್ನಡನಂದನವಾಗಿ ಬೆಳೆಯಲು ಕಾರಣ" (೩-೧೦-೧೯೯೫) - ಪ್ರಹ್ಲಾದ ಕುಮಾರ ಭಾಗೋಜಿ.

ಹೀಗೆ ಇಂತಹ ಬರೆಹಗಳುಳ್ಳ ಎರಡು ದೊಡ್ಡ ಗಾತ್ರದ ಹಸ್ತಪ್ರತಿಯ ಗ್ರಂಥಗಳಿವೆ. ಅದರಲ್ಲಿ ೩-೬-೧೩೫೦ನೆಯ ಫಸಲಿ (ಕ್ರಿ.ಶ. ೧೯೪೧ ಮಾರ್ಚ್‌ದಿಂದ) ಯಿಂದ ಈವರೆಗೆ ಸಂಘಕ್ಕೆ ಆಗಮಿಸಿದವರ ಸ್ವಂತ ಲಿಖಿತದ ಸ್ವಅಭಿಪ್ರಾಯಗಳು ಬಿಚ್ಚಿಕೊಂಡಿವೆ. ಆ ಪುಟಗಳೆಲ್ಲ ಸುವರ್ಣ ದಾಖಲೆಗಳು : ನಿಜಾಂ ಕರ್ನಾಟಕ ಪರಿಷತ್ತಿನ ಅಧ್ಯಕ್ಷರಾಗಿದ್ದ ಜನಾರ್ದನರಾವ್ ದೇಸಾಯಿ ಅವರಿಂದ ಆರಂಭವಾಗಿ ವೀರಭದ್ರಶರ್ಮಾ, ಜಿ.ಪಿ. ರಾಜರತ್ನಂ, ಕೃಷ್ಣಾಚಾರ್ಯ ಜೋಶಿ, ಪಾಂ.ಭೀ. ದೇಸಾಯಿ ಕೀರ್ತನ ಕೇಸರಿ ಜಯರಾಮಾಚಾರ್ಯ, ಶಿವರಾಮಕಾರಂತ, ರಂ.ಶ್ರೀ. ಮುಗಳಿ, ಸ.ಸ. ಮಾಳವಾಡ ದಂಪತಿಗಳು, ಸಿ.ಕೆ. ವೆಂಕಟರಾಮಯ್ಯ, ಆರ್.ಬಿ. ಜಾಗೀರಧಾರ್, ಗುಡೂರು ಶ್ರೀನಿವಾಸರಾವ್,

ಜಿ.ಎಸ್. ಮೇಲುಕೋಟೆ, ಶಾಂತೇಶಪಾಟೀಲ, ಧರಗೇಂದ್ರಯ್ಯ, ಎಸ್.ಆರ್. ಮಳಗಿ, ಎಸ್.ವಿ. ರಂಗಣ್ಣ, ಶ್ರೀರಂಗ, ನಾ.ಶ್ರೀ. ರಾಜಪುರೋಹಿತ, ಎಂ.ಆರ್. ಶ್ರೀನಿವಾಸಮೂರ್ತಿ, ಬೀಚಿ, ಪಾಟೀಲಪುಟ್ಟಪ್ಪ, ಸಿಂಪಿ ಲಿಂಗಣ್ಣ, ವರದರಾಜ ಆದ್ಯ, ಜಯ ದೇವಿ ತಾಯಿಲಿಗಾಡೆ, ಹಾ.ಮಾ. ನಾಯಕ, ಅ.ರಾ. ತೋರೋ, ಬಸವರಾಜ ಕಟ್ಟಿಮನಿ, ಎ.ಎನ್. ಮೂರ್ತಿರಾವ್, ನಿಟ್ಟೂರು ಶ್ರೀನಿವಾಸರಾವ್, ಗೋಪಾಲಕೃಷ್ಣ ಅಡಿಗ, ಸಾ.ಶಿ. ಮರುಳಯ್ಯ, ಜಿ.ಡಿ. ಜೋಶಿ, ಸೂರ್ಯನಾಥಕಾಮತ, ಎಂ.ಜಿ. ನಾಗರಾಜ್, ಅರಳುಮಲ್ಲಿಗೆ ಪಾರ್ಥಸಾರಥಿ, ತಾಳ್ತಜೆ ವಸಂತಕುಮಾರ ದಂಪತಿಗಳು - ಹೀಗೆ ಸುಮಾರು ೫೦೦ಕ್ಕೂ ಹೆಚ್ಚು ಕನ್ನಡ ಬಂಟರು ಇಲ್ಲಿರುವ ಪುಸ್ತಕಗಳಲ್ಲಿ ಅಕ್ಷಯವಾದ ಅಕ್ಷರಗಳಿಂದ ಸುಪ್ರಸನ್ನರಾಗಿದ್ದಾರೆ.

ಇನ್ನು ಮುಂದೆ, ಈ ಸಂಘವು ತನ್ನ ನಿತ್ಯ ಚಟುವಟಿಕೆಗಳ ಜೊತೆಗೆ ಬಹುದಿವಸದ ಕನಸಾಗಿದ್ದ ಸಂಶೋಧನಾ ವಿಭಾಗವನ್ನೂ ಆರಂಭಿಸಬೇಕೆಂದಿದೆ. ಸಾಹಿತ್ಯ ಸಂಶೋಧನೆಗೆ ಮೀಸಲಾದ ತ್ರೈಮಾಸಿಕವನ್ನು ಹೊರಡಿಸುವ ಸಿದ್ಧತೆಯಲ್ಲಿಯೂ ಇದೆ. ಪ್ರತಿ ತಿಂಗಳೂ ಒಂದೆರಡು ಸಾಹಿತ್ಯ ಕಮ್ಮಟಗಳನ್ನು ಯುವಕರಿಗಾಗಿ ಏರ್ಪಡಿಸಲೂ ಯೋಜಿಸಿದೆ. ಡಾ. ಮಲ್ಹಾರರಾವ್ ಮಲ್ಲೆ ಅವರು ತಮ್ಮ ತಂದೆಯ ಸ್ಮರಣಾರ್ಥ, ಕನ್ನಡ ಸಾಹಿತ್ಯ ಸಂಘ ದಲ್ಲಿಯ ಸಭಾಭವನಕ್ಕೆ "ದಿವಂಗತ ಕಿಶನ್‌ರಾವ್ ಮಲ್ಲೆ ಸಭಾ ಭವನ' ಎಂದು ನಾಮಕರಣ ಮಾಡುವಲ್ಲಿ ಸ್ವಪ್ರೇರಣೆಯಿಂದ ನಿಧಿಯನ್ನು ಸಲ್ಲಿಸಿದ್ದಾರೆ. ಆ ಸಭಾಭವನವು ಸುಸಜ್ಜಿತವಾಗಿದ್ದು ಈಗ ಅಲ್ಲಿಯೇ ಕಾರ್ಯಚಟುವಟಿಕೆಗಳು ನಡೆಯುತ್ತಿವೆ.

ಈ ಕನ್ನಡ ಸಾಹಿತ್ಯ ಸಂಘವು ಇನ್ನಷ್ಟು ಅಭಿವೃದ್ಧಿಗೊಳ್ಳಲು ಪ್ರಶಸ್ತವಾದ ಸ್ವಂತ ವಿಶಾಲವಾದ ನಿವೇಶನವನ್ನು ಹೊಂದಿದೆ. ಹೀಗಾಗಿ ಇನ್ನು ಮುಂದೆಯೂ ಹೊಸ ಹೊಸ ಆಯಾಮಗಳನ್ನು ಪಡೆದುಕೊಂಡ, "ಹತ್ತು ಜನ ಒಟ್ಟಿಗೆ ಸೇರಿ ಮಾಡುವಂಥ ಕಾರ್ಯವನ್ನು ನಾವಿನ್ನೂ ನೋಡಬೇಕಾಗಿದೆ" ಎಂದುಕೊಳ್ಳುತ್ತಿರು ವಾಗ ಕಲಬುರಗಿಯ ಕನ್ನಡ ಸಾಹಿತ್ಯ ಸಂಘವು ಎದುರು ಬಂದು ನಿಲ್ಲುತ್ತದೆ. ಬರಗಾಲದಲ್ಲಿ ಮೃಷ್ಟಾನ್ನ ಭೋಜನದ ನೆಲೆಯಾಗಿ ಕಂಗೊಳಿಸುತ್ತಿದೆ. ನಾಡನ್ನು ಕಟ್ಟಬೇಕೆನ್ನುವವರು ಇಲ್ಲಿಯ ಪವಿತ್ರ ಬೆಳಕಿನಲ್ಲಿ ತಮ್ಮ ಹೃದಯದ ಹಣತಿಯನ್ನು ಹೊತ್ತಿಸಿಕೊಂಡು ಹೋಗಬೇಕಾಗಿದೆ. ಯೋಗ್ಯತೆಯ ಹೆಗ್ಗುರುತಾಗಿ ಎದ್ದು ನಿಂತಿರುವ ಈ ಸಂಘದ ಪರಂಪರೆ ಸಾವಿರ ಮಡಿ, ಅಕ್ಷಮಡಿ ಉಜ್ವಲವಾಗಿ ಪ್ರಜ್ವಲಿಸಲಿ" ಎಂದು ಪಾಟೀಲ ಪುಟ್ಟಪ್ಪನವರು ೬-೧೦-೧೯೫೧ ರಂದು ಹಾರೈಸಿ ಬರೆದ ಬರೆಹವನ್ನು ಸ್ಫೂರ್ತಿಯ ನೆಲೆಯಾಗಿಸಿ ಕೊಂಡು, ಅದರಂತೆ ನಂದಾದೀಪವಾಗಿರಲು ಈ ಸಂಘವು ಸದಾ ಆದರ್ಶವಾಗಿರುವುದರಲ್ಲಿಯೇ ಪ್ರಯತ್ನಿಸುತ್ತ ಸಾಗಿದೆಯೆಂದು ವ್ಯವಸ್ಥಾಪಕ ಧರ್ಮದರ್ಶಿಗಳಾದ ಒಂಬತ್ತರ ದಶಕದಲ್ಲಿರುವ ವಾಮದೇವ ದೀಕ್ಷಿತರು ಹುರುಪಿನಿಂದ ಹೇಳುತ್ತಾರೆ.

(ಆಧಾರ : ಸಂಸ್ಥೆಯಲ್ಲಿರುವ ದಾಖಲೆಗಳು.)



### ಕ.ಇ. ಅಕಾದೆಮಿಯ ೭ನೇ ವಾರ್ಷಿಕ ಸಮ್ಮೇಳನಾಧ್ಯಕ್ಷರ ಭಾಷಣದಿಂದ (೧೯೯೨)

*ಇಂದು ನಮ್ಮ ಸಾಮಾಜಿಕ ಜೀವನದ ಎಲ್ಲ ಹಂತಗಳನ್ನು, ಎಲ್ಲ ಅಂಶಗಳನ್ನು ಕಲುಷಿತಗೊಳಿಸಿರುವ ಜಾತಿ ಪದ್ಧತಿಯು ಮೂಲತಃ ಕನ್ನಡಿಗನ ಸೃಷ್ಟಿ ಅಲ್ಲ. ಶತಮಾನಗಳ ಹಿಂದೆ ಆರ್ಯಾವರ್ತದಿಂದ ವಿಂಧ್ಯ ಪರ್ವತವನ್ನು ಹತ್ತಿ ಇಳಿದು ಬಂದದ್ದು. ಆರ್ಯಾವರ್ತದಲ್ಲೂ ಕೂಡ ಈ ಪದ್ಧತಿಯ ಅವನತಿಯು ಪ್ರಾರಂಭವಾದದ್ದು ಸುಮಾರು ಸಾವಿರದ ಐದುನೂರು ವರ್ಷಗಳ ಹಿಂದಷ್ಟೆ. ವರ್ಣಕ್ಕೂ ಜಾತಿಗೂ ಅಜಗಜಾಂತರ. ನಿಜಸಂಗತಿ ಎಂದರೆ ಮೂಲತಃ 'ಆಯ್ಕೆ'ಯ ಅರ್ಥದ 'ವೃ', 'ವರ್' ಎಂಬ ಧಾತುವಿನಿಂದ ಹುಟ್ಟಿಕೊಂಡ, 'ವರ್ಣ'ವು ಯಾವುದೇ ವಂಶ ಪಾರಂಪರ್ಯದ ಸಾಮೂಹಿಕ ಕೋಮಿನ ಸೂಚಕವಿರಲಿಲ್ಲ. ಬದಲಾಗಿ ವ್ಯಕ್ತಿಯನ್ನು ವೈಯುಕ್ತಿಕ ಸಾಮರ್ಥ್ಯಗಳನ್ನು ಅವಲಂಬಿಸಿತ್ತು. ಅದರ ಪ್ರಕಾರ ವೈದಿಕ ಸಮಾಜದಲ್ಲಿ ಜನ್ಮ ತಾಳಿದವರೆಲ್ಲರೂ ಹುಟ್ಟಿನಿಂದ ಶೂದ್ರರೇ ಆಗಿದ್ದು ಕಾಲಕ್ರಮದಲ್ಲಿ ಬೆಳೆಸಿಕೊಂಡ ವೈಯುಕ್ತಿಕ ಶಕ್ತಿ ಸಾಮರ್ಥ್ಯಗಳಿಗೆ ಅನುಗುಣವಾಗಿ ನಾಲ್ಕು ವರ್ಣಗಳಲ್ಲೊಂದನ್ನು ಆರಿಸಿಕೊಳ್ಳುವ ಸಾಧ್ಯತೆ ಇತ್ತು. ಪಾಶ್ಚಾತ್ಯರ ದುರನುವಾದದ ಪ್ರಭಾವದಿಂದಾಗಿ ನಮ್ಮವರು ದಶಕಗಳ ಕಾಲ ಹೀಗಳೆಯುತ್ತ ಬಂದಿರುವ ಋಕ್ಸಂಹಿತಾಂತರ್ಗತ ಪುರುಷಸೂಕ್ತವೂ ಇದನ್ನೆ ಸಾರಿ ಹೇಳುತ್ತದೆ. ಮನುಷ್ಯರು ಬ್ರಹ್ಮನ ಬಾಯಿಂದ ಬ್ರಾಹ್ಮಣರಾಗಿ ... ಬಂದವರೆಂಬ ಹಾಸ್ಯಾಸ್ಪದ ಪ್ರತಿಪಾದನೆ ಈ ಸೂಕ್ತದ ತಿರುಳಲ್ಲ....ತಲೆಮಾರಿನಿಂದ ತಲೆಮಾರಿಗೆ ನಿಶ್ಚಯವಾಗುತ್ತಿದ್ದ ವ್ಯಕ್ತಿಯ ವರ್ಣಧರ್ಮವನ್ನು ಬಣ್ಣಿಸುತ್ತದಷ್ಟೆ. ನನಗನಿಸುವ ಮಟ್ಟಿಗೆ ಈ ಪುರುಷಸೂಕ್ತದ ದ್ರಷ್ಟಾರನು ಮಾನವ ಇತಿಹಾಸದ ಪ್ರಪ್ರಥಮ ಸಾಮಾಜಿಕ ಇತಿಹಾಸಕಾರನಿದ್ದನು.*

**ಡಾ. ಕೆ. ವಿ. ರಮೇಶ್**
ಸಮ್ಮೇಳನಾಧ್ಯಕ್ಷರು

ಡಾ. ಕೆ. ವಸಂತಲಕ್ಷ್ಮಿ*

# ಮಾಘಣಂದಿ ಭಟಾರಕರ ನೆಲೆ : ಕೆಲ್ಲಂಗೆಱೆ

*ಮಾಘಣಂದಿ ಭಟಾರಕ, ನಮ್ಮಲ್ಲಿಯ ಜೈನ ಪರಂಪರೆಯ ಸೈದ್ಧಾಂತಿಕ ಚಕ್ರವರ್ತಿ, ಶಾಸ್ತ್ರಸಾರವೇತ್ರ, ಜಿನಾಗಮೋದ್ಧಾರಕ, ಸಮುದಾಯ ಮಾಘಣಂದಿ ಯತಿ, ಎನಿಸಿದ್ದಾನೆ. ಯಾವುದೇ ಇಂಥ ವ್ಯಕ್ತಿತ್ವಗಳು ಆಯಾ ನಾಡಿನ ಘನತೆಗೆ ಹಿರಿಮೆಗೆ ಸಾಕ್ಷ್ಯವಾಗುವಂಥವು. ಅವರು, ನೆಲಸಿದ್ದ ನೆಲೆ, ಸಮುದಾಯಕ್ಕೆ, ಒಂದು ಪವಿತ್ರ ನೆಲೆ, ಚಿರಂತನ ಸ್ಮರಣೆಯ ನೆಲೆ. ಇಂತಿರುವಲ್ಲಿ ಮಾಘಣಂದಿ ಭಟಾರಕರ ನೆಲೆ, ಸೈದ್ಧಾಂತಿಕ ನೆಲೆಬೀಡು ಎನಿಸಿರಬೇಕು. ಅದೇ ಕೆಲ್ಲಂಗೆಱೆ ತೀರ್ಥ, ಅದು ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನಲ್ಲಿರುವ ಇಂದಿನ ಕೆಲಗೆರೆಯೆ ಆಗಿದೆ ಎಂಬುದಕ್ಕೆ ವಿವಿಧ ಆಕರಗಳ ಮೂಲಕ ಇಲ್ಲಿ ಮಂಡನೆಯಾಗಿರುವುದು ಗಮನಾರ್ಹವಾಗಿದೆ.*

ಕರ್ನಾಟಕದಲ್ಲಿ ನೆಲೆಸಿದ್ದ ಜೈನಧರ್ಮದ ಇತಿಹಾಸವನ್ನರಿಯುವಲ್ಲಿ ಆ ಧರ್ಮದ ಉನ್ನತಿಗೆ ಕಾರಣರಾದ ಜೈನಮುನಿಗಳ ಪಾತ್ರ ಪ್ರಮುಖವಾಗುತ್ತದೆ. ಮಧ್ಯಕಾಲೀನ ಕರ್ನಾಟಕದಲ್ಲಿ ಜೈನಧರ್ಮದ ಮೂಲಸಂಘದ ನಾನಾಗಣಗಳ ಆಚಾರ್ಯರು ಜೈನಮತದ ಪ್ರಸಾರದಲ್ಲಿ ತೊಡಗಿದ್ದರೆಂಬುದು ಸರ್ವವಿದಿತ. ಮೂಲಸಂಘದ ದೇಶೀಯಗಣದ ಕೊಂಡಕುಂದಾನ್ವಯದ ಪರಂಪರೆಯ ಪುಸ್ತಕಗಚ್ಛದ ಮುನಿಗಳ ಕೇಂದ್ರವು ಶ್ರವಣಬೆಳ್ಗೊಳವಾಗಿದ್ದಂತೆ, ಮೂಲಸಂಘದ ನಂದಿಗಣದ ಬಲಾತ್ಕಾರಗಣದ ಕೇಂದ್ರವು ಹೊಯ್ಸಳರ ರಾಜಧಾನಿಯಾಗಿದ್ದ 'ದ್ವಾರಸಮುದ್ರ'ವಾಗಿತ್ತು. ದ್ವಾರಸಮುದ್ರದ ಒಂದು ಭಾಗವಾದ ಬಸ್ತಿಹಳ್ಳಿಯು ಈ ಬಲಾತ್ಕಾರಗಣದ ಯತಿಗಳ ನೆಲೆಯಾಗಿತ್ತೆಂದು ಶಾಸನವು ತಿಳಿಸುತ್ತಿದೆ. ಹಳೇಬೀಡಿನ ಬಸ್ತಿಹಳ್ಳಿ ಶಾಸನವೊಂದು (ಎಕ ೯. ಬೇ ೩೨೧) ಮಾಘಣಂದಿ ವ್ರತಿಗಳ ಮಹತ್ವವನ್ನು ವಿವರವಾಗಿ ತಿಳಿಸಿದೆ ಮತ್ತು ದ್ರವಿಳ ಸಂಘದ ಗುರುಪರಂಪರೆಯನ್ನೂ, ಹೊಯ್ಸಳ ದೊರೆ ನಾರಸಿಂಹದೇವ ನೀಡಿದ ದಾನವನ್ನು ತಿಳಿಸಿದೆ.

ಮೂಲಸಂಘದ ಶಾಖೆಯಾದ ನಂದಿಸಂಘದ ಬಲಾತ್ಕಾರ ಗಣದ ವರ್ಧಮಾನ ಮುನಿಗಳು ಹೊಯ್ಸಳಾನ್ವಯದ ಗುರುಗಳಾಗಿದ್ದರೆಂದು ತಿಳಿದುಬರುತ್ತದೆ.

ಸ್ವಸ್ತಿಶ್ರೀ ಮೂಲಸಂಘೇಶ್ರೀ ಬಲಾತ್ಕಾರ ಗಣೋದ್ಭವಃ।
ಶ್ರೀ ಮಾಘಣಂದಿ ಸೈದ್ಧಾಂತಿರ್ಜ್ಜೈನ ಶಾಸನ ದೀಪಕಃ॥

- ಎಂದು ಈ ಮುನಿಯ ಸ್ತುತಿಯಿಂದಲೇ ಶಾಸನವು ಆರಂಭವಾಗಿದ್ದು ಇವರಿಗಿದ್ದ ಘನತೆಗೆ ಸಾಕ್ಷಿಯಾಗಿದೆ. ಇವರ ಬಗೆಗೆ ಶಾಸನವು - "ಶ್ರೀ ಕುಮುದ ಚಂದ್ರ ಭಟ್ಟಾರಕ ದೇವ ಪ್ರಿಯ ಸಿಷ್ಯಾಗ್ರಗಣ್ಯಾಯ, ವರೇಣ್ಯಾಗಣ್ಯ ಪುಣ್ಯಾಯ, ಭೇದಾಭೇದ ರತ್ನತ್ರಯ ಪವಿತ್ರಕಾಯ, ನಿರವದ್ಯ ಚರಿತ್ರಾಯ" ಎಂದೂ, " 'ಸಿದ್ಧಾಂತಸಾರ' 'ಸ್ರಾವಕಾಚಾರಸಾರ' 'ಪದಾರ್ಥಸಾರ' 'ಶಾಸ್ತ್ರಸಾರ ಸಮುಚ್ಚಯಾಭಿಧಾನಾಭಿನವ **ಸಾರಚತುಷ್ಟಯಕರ್ತೇ**", ಚಾತುರ್ವರ್ಣ್ಯಭರ್ತ್ರೇ, ಚತುರ್ವ್ವಿಧ ಪಾಂಡಿತ್ಯ ಚಕ್ರವರ್ತ್ತಿ, ಚತುರದಧಿ ಬ್ಯಾಪ್ತ ಕೀರ್ತ್ತಿ, ಜಿನಸಮಯ ಕಮಳ-ಮಾರ್ತ್ತಾಂಡ, ಪರವಾದಿ ಗಂಡಭೇರುಂಡ, ಶ್ರೀಮತ್ಕುಮುದ ಚಂದ್ರ ಪಂಡಿತ ಗುರುವೇ, ವಿನೇಯಜನ ಸುರತರುವೇ, ಶ್ರೀ ಮಾಘಣಂದಿ ಸಿದ್ಧಾಂತ ಚಕ್ರವರ್ತ್ತಿ" ಎಂದು ಪ್ರಶಂಸಿಸಿದೆ.

ಹೊಯ್ಸಳದೊರೆ ವೀರನಾರಸಿಂಹದೇವನು, ಕ್ರಿ.ಶ.೧೨೬೫ರಲ್ಲಿ **ಕಲುಕುಣಿ ನಾಡೊಳಗಣ** ಕೆಲ್ಲಂಗೆಱೆ, ತಂನ ಕಾಲುವಳ್ಳಿಗಳ ಸಹಿತ ಅಷ್ಟಭೋಗ ತೇಜಸಾಮ್ಯನಿಧಿ ನಿಕ್ಷೇಪ ಸಮಸ್ತ ಬಳಿ ಸಹಿತವಾಗಿ ಎಂದೆಂದಿಗೂ ಸಲ್ಲುವಂತೆ-ಶ್ರೀಮತ್ತ್ರಿಕೂಟ ರತ್ನತ್ರಯ

* ೩೫೬, ೧೧ನೇ ಮುಖ್ಯರಸ್ತೆ, ಶ್ರೀನಿವಾಸನಗರ, ೨ನೇ ಹಂತ, ಬೆಂಗಳೂರು - ೫೬೦ ೦೫೦.

ಶಾನ್ತಿನಾಥ ಜಿನಾಲಯದ ಜಿನೇಂದ್ರನ ಚೈತ್ಯಾಲಯದ ಅಂಗಭೋಗ, ರಂಗಭೋಗ, ಚತುರ್ವಿಧದಾನದ ನಿಮಿತ್ತವಾಗಿ ದಾನಬಿಟ್ಟನೆಂದು ತಿಳಿಸಿದೆ.

ದಾನದ ಭೂಮಿಯ ಸೀಮಾವಿವರಗಳನ್ನು ತಿಳಿಸುವಲ್ಲಿ ಕೆಲ್ಲಂಗೆಂಱು'ಯ ಕಾಲುವಳ್ಳಿಗಳಪ್ಪ-"ಕರಡಿಯ ಹಳ್ಳಿ, ಹೋತನಡಕೆ ಹಳ್ಳಿ ಅಱು'ಯಹಳ್ಳಿ, ಅಜ್ಜಯನಾಯಕನ ಹಳ್ಳಿ, ಹೂಲಿಯಕೆಱು', ಚೊಟ್ಟನಹಳ್ಳಿ, ನರಗನಹಳ್ಳಿ, ಸೇಱನಹಳ್ಳಿ, ಚೋಳೆಯನಹಳ್ಳಿ, ಲೊಕ್ಕಿಯಹಳ್ಳಿ, ಗೌರಿಯಹಳ್ಳಿ, ಕುಂಚದಹಳ್ಳಿ, ಹಿರಿಯ ಕಂನೆಯನಹಳ್ಳಿ, ಚಿಕ್ಕಕಂನೆಯನಹಳ್ಳಿಗಳನ್ನುಳ್ಳ ಕೆಲ್ಲಂಗೆಱ್' ಎಂಬ ಉಲ್ಲೇಖವಿದೆ.[೧] ದ್ವಾರಸಮುದ್ರದಲ್ಲಿ ನಿರ್ಮಿಸಿದ್ದ ತ್ರಿಕೂಟಾಚಲ ವಾದ 'ಕಲಿಹೊಯ್ಸಳ ಜಿನಾಲಯ'ವನ್ನು ನಾರಸಿಂಹ ದೇವನು ಮಾಘಣಂದಿ ಸಿದ್ಧಾಂತಿ ದೇವರಿಗೆ ಧಾರೆಯೆರೆದನೆಂದು ಶಾಸನವು ತಿಳಿಸಿದೆಯಲ್ಲದೇ- "ನೃಸಿಂಹ ಜಿನಾಲಯವೀ ತ್ರಿಕೂಟವಂ ಗೀತ ಸುರೇಖೆ ವಾದ್ಯ ಕಹಳಾರವ ಸಂಭ್ರಮಂ ಲೋಕ ಮೆಚ್ಚಲು ಖ್ಯಾತಿಗೆ ಸಂದುದು" - ಎಂದಿದೆ. ಈ ಶಾಸನದ ವಿವರಗಳನ್ನಾಧರಿಸಿ ಈ ಪ್ರಬಂಧದಲ್ಲಿ ಮಾಘಣಂದಿ ಸಿದ್ಧಾಂತಿಗಳ ಮಹತ್ವವನ್ನು ಅವರ ನೆಲೆಯಾಗಿದ್ದ ಕೆಲ್ಲಂಗೆಱು'ಯನ್ನು ತಿಳಿಯಲು ಯತ್ನಿಸಲಾಗಿದೆ.

"ಮಾಘಣಂದಿ ಸಿದ್ಧಾಂತ ದೇವ"- ಎಂಬ ಹೆಸರಿನ ಮೂವರು ಯತಿಗಳು ಹಾಸನ ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖಿತ ರಾಗಿದ್ದಾರೆ. ಕ್ರಿ.ಶ.೧೧೦೦ರ ಶ್ರವಣಬೆಳ್ಗೊಳದ ಶಾಸನವು (ಶಾ ೭೯; ಎಕ ಸಂ. ೨) ಮೂಲಸಂಘ, ದೇಶೀಯ ಗಣ ವಕ್ರಗಚ್ಛದ ಮುನಿಪರಂಪರೆಯನ್ನು ತಿಳಿಸುತ್ತಾ- ಗುಣಚಂದ್ರದೇವರ ಸದ್ಧರ್ಮರು - ಎಂದು ತಿಳಿಸಿದೆ.

ಎರಡನೇ ಮಾಘಣಂದಿ ಮುನಿಪರನ್ನು ಶ್ರವಣಬೆಳ್ಗೊಳದ ಶಾಸನವು (ಎಕ ಸಂ. ೨ - ಶಾ. ೭೧) ತೀರ್ಥಾಧಿಪನಾದ ಮಾಘಣಂದಿ ಮುನಿಯು ಕುಳಭೂಷಣಯತಿಗಳ ಶಿಷ್ಯರೆಂದು ತಿಳಿಸಿದೆ. ಈ ಶಾಸನದ ಅಂತ್ಯದಲ್ಲಿ ನಾರಸಿಂಹದೇವನ ಮಹಾ ಪ್ರಧಾನಿಯೂ, ಅಭಿನವ ಗಂಗ ದಂಡನಾಯಕ ನೆನಿಸಿದ್ದ ಹುಳ್ಳ ರಾಜನು ಗುರುಗಳಾದ ಶ್ರೀ ದೇವಕೀರ್ತಿ ಪಂಡಿತ ದೇವರಿಗೆ ನಿಶಿದಿಯನ್ನು ಮಾಡಿಸಿದನಲ್ಲದೇ, ಶ್ರೀಮತ್ಕೆಲ್ಲಂಗೆರೆಯ ಪ್ರತಾಪ ಪುರವನ್ನು ಪುನರ್ಭರಣವನ್ನು ಮಾಡಿಸಿದನೆಂದೂ, ಜಿನನಾಥ ಪುರದಲ್ಲಿ ಕಲ್ಲದಾನ ಶಾಲೆಯನ್ನು ಮಾಡಿಸಿದನೆಂದು ಶಾಸನ ತಿಳಿಸಿದೆ. ಈ 'ಕೆಲ್ಲಂಗೆರೆಯ ಪ್ರತಾಪಪುರ'ವನ್ನು ತಿಳಿಯಬೇಕಾಗಿದೆ.

ಮೂರನೆಯ ಮಾಘಣಂದಿ ಸಿದ್ಧಾಂತಿಪರನ್ನು "ಸಮೂದಾ ಯದ ಮಾಘಣಂದಿ" ಎಂದೂ ಕರೆಯುವರು. ಇವರು ಕ್ರಿ.ಶ. ೧೨೪೪ರ ಸುಮಾರಿನಲ್ಲಿದ್ದರು. ಅರಕಲಗೂಡು ತಾಲೂಕಿನ ಮಳಲಕೆರೆ ಶಾಸನವು (ಎಕ ೮; ಅಗೂ.೧೫೭) ಶಾಂತಿನಾಥ ಬಸದಿಯನ್ನು ಜೀರ್ಣೋದ್ಧಾರ ಮಾಡಿಸಿದ ಸಾತಣ್ಣನ ಗುರುಗ ಳಾದ ಮಾಘಣಂದಿ ಸಿದ್ಧಾಂತದೇವರನ್ನು ಸ್ತುತಿಸಿದೆ. ಶಿಷ್ಯರೊಂದಿಗೆ ವಿರಾಜಿಸುತ್ತಿದ್ದ ಇವರನ್ನು "ಸಮುದಾಯದ ಮಾಘಣಂದಿ ಯತಿ"ಗಳೆಂದು ಉಲ್ಲೇಖಿಸಲಾಗಿದೆ. ಬೇಲೂರಿನ ಬಸ್ತಿಹಳ್ಳಿ ಶಾಸನವು (ಎಕ ೯; ಬೇ ೪೦೫) ಅಭಯಚಂದ್ರ ಸಿದ್ಧಾಂತದೇವರ 'ನಿಶಿಧಿ ಶಾಸನ'ವಾಗಿದೆ. ಈ ಮುನಿಯು ಕೊಂಡಕುಂದಾನ್ವಯದ ಪುಸ್ತಕಗಚ್ಛದ ಇಂಗಳೇಶ್ವರ ಬಳಿಯವರಾಗಿದ್ದು, ಶಾಸನವು ಗುರುಪರಂಪರೆಯನ್ನು ತಿಳಿಸುವಲ್ಲಿ 'ಮಾಘಣಂದಿ'ಯನ್ನು ಉಲ್ಲೇಖಿ ಸಿದೆ. "ಕುಮತೌಘನಿವಾರಕರೂ, ವಿಮಳದಯಾಧಾರಕರೂ, ಜಿನಾಗಮೋದ್ಧಾರಕರಾದ ಸಮೂದಾಯದ ಮಾಘಣಂದಿ ಭಟ್ಟಾರ ಕರಿಗೆ ನಮಸ್ಕರಿಸಿದೆ. ಇವರು ಅಭಯಚಂದ್ರ ಸೈದ್ಧಾಂತಿಕರಿಗೂ ನೇಮಿಚಂದ್ರ ಭಟ್ಟಾರಕರಿಗೂ ಗುರುಗಳಾಗಿದ್ದರೆಂದು ಶಾಸನ ತಿಳಿಸಿದೆ.

ಬಸ್ತಿಹಳ್ಳಿಯ ಮತ್ತೊಂದು ಶಾಸನ (ಅದೇ; ಬೇ೪೦೬) ರಾಮಚಂದ್ರ ಮಲಧಾರಿದೇವರ ನಿಶಿಧಿಗೆಯಾಗಿದ್ದು ಸಮುದಾಯದ ಮಾಘಣಂದಿ ಭಟಾರಕರ ಶಿಷ್ಯರಾದ ನೇಮಿಚಂದ್ರ ಭಟಾರಕರನ್ನು, ಅಭಯಚಂದ್ರರನ್ನು ಹೆಸರಿಸಿದೆ. ಈ ನಿಶಿಧಿಶಾಸನಗಳು ಸಮಾಧಿ ಮರಣದ ಸಂದರ್ಭದಲ್ಲಿ 'ಸಾರಚತುಷ್ಟಯಾ'ಗಳನ್ನು ವ್ಯಾಖ್ಯಾನ ಮಾಡುತ್ತಿದ್ದದ್ದನ್ನು ದಾಖಲಿಸಿವೆ. ಶ್ರವಣಬೆಳ್ಗೊಳದ (ಎಕ೨; ಶ್ರಬೆ೩೭) ಶುಭಚಂದ್ರ ಸಿದ್ಧಾಂತ ದೇವರ ನಿಶಿಧಿಶಾಸನವು- "ಮಾಘಣಂದಿ ವ್ರತಿಯ ಶಿಷ್ಯರಾದ ಶುಭಚಂದ್ರ ಸಿದ್ಧಾಂತಿ ದೇವರು"-ಎಂದು ಉಲ್ಲೆಖಿಸಿದೆ - ಹೀಗೆ ಸುಮಾರು ೧೨೪೦-೧೩೧೫ರ ವರೆಗೆ ಇದ್ದಿರಬಹುದಾದ ಈ ಸಮುದಾಯದ ಮಾಘಣಂದಿ ವ್ರತಿಗಳು 'ಜೈನ ಸಾಹಿತ್ಯ ಲೋಕ'ದಲ್ಲೂ ಚಿರಸ್ಥಾಯಿ ಯಾಗಿದ್ದಾರೆ.

ಜೈನವಿದ್ವಾಂಸರಾದ ಶ್ರೀ ಎಂ.ಸಿ. ಪದ್ಮನಾಭಶರ್ಮರು ಮಾಘಣಂದಿ ವ್ರತಿಗಳ ಕೃತಿ - "ಪದಾರ್ಥಸಾರ" ಗ್ರಂಥದ ಮುನ್ನುಡಿಯಲ್ಲಿ - "ಕನ್ನಡ ಭಾಷೆಯ ಬೆಳವಣಿಗೆಯ ಹಂತಗಳಲ್ಲಿ ಪ್ರಪ್ರಥಮವಾದ, ಶಾಸ್ತ್ರೀಯವಾದ, ಸ್ವತಂತ್ರವಾದ, ವಿಚಾರಧಾರೆ ಯನ್ನುಳ್ಳ ಪ್ರಾಚೀನವಾದ **ಕನ್ನಡ ಗದ್ಯದರ್ಶನಗ್ರಂಥ**ವೆಂದಿದ್ದಾರೆ.[೨]

ಮಾಘಣಂದಿ ಪ್ರಶಿಷ್ಯರಾದ ಬಾಲಚಂದ್ರ ಪಂಡಿತ ದೇವರು **ದ್ರವ್ಯ ಸಂಗ್ರಹ ಸೂತ್ರ**ದ ಟೀಕೆಯನ್ನು ರಚಿಸಿದ್ದಾರೆ. ಕುಮುದಚಂದ್ರ ಭಟಾರಕರ ಶಿಷ್ಯರಾದ 'ಮಾಘಣಂದಿವ್ರತಿ'ಗಳನ್ನು ಕುಮುದೇಂದು ಕವಿಯು (ಕ್ರಿ.ಶ.೧೨೭೫) 'ಕುಮುದೇಂದು ರಾಮಾಯಣ' ದಲ್ಲಿ ಪೀಠಿಕಾಭಾಗದಲ್ಲಿ ಸ್ತುತಿಸಿದ್ದಾನೆ.[೩] ಕಮಲಭವ ಕವಿಯು' ಶಾಂತೀಶ್ವರ ಪುರಾಣದ ಆರಂಭದಲ್ಲಿ ಇವರನ್ನು ಸ್ತುತಿಸಿದ್ದಾನೆ.

ಮಾಘಣಂದಿ ವ್ರತಿಯ 'ಶಾಸ್ತ್ರಸಾರ ಸಮುಚ್ಚಯ' ಗ್ರಂಥವು ನಾಲ್ಕು ಅಧ್ಯಾಯಗಳನ್ನು ಹೊಂದಿದೆ. ಕವಿಯು 'ಶಾಸ್ತ್ರಸಾರ'ವು ಪ್ರಾಕೃತ ಸಂಸ್ಕೃತ ಭಾಷೆಗಳಲ್ಲಿದೆಯಾದರೂ, ಕರ್ನಾಟಕ ಜನತೆಗೆ ತಿಳಿಸಲು ಕನ್ನಡದಲ್ಲಿ ಗ್ರಂಥ ರಚನೆ ಮಾಡಿದ್ದಾಗಿ ಹೇಳಿಕೊಂಡಿದ್ದಾರೆ. 'ಶ್ರಾವಕಾಚಾರ' ಗ್ರಂಥದಲ್ಲಿ ತೇದಿ ವಿವರವಿದ್ದು, ಗ್ರಂಥವು ಕ್ರಿ.ಶ.

೧೨೫೩ರಲ್ಲಿ ರಚಿಸಿದ್ದೆಂದು ತಿಳಿಯುತ್ತದೆ. 'ಪದಾರ್ಥಸಾರ' ಗ್ರಂಥವು ಜೈನ ಸಿದ್ಧಾಂತ ಸಾರವೇ ಆಗಿದೆ. ಈ ಕೃತಿಗಳನ್ನು ರಚಿಸಿದ ಮಹಾಕವಿ, ಮಾಘಣಂದಿವ್ರತಿಗಳ ನೆಲೆಯಾದ 'ಕೆಲ್ಲಂಗೆರೆ' ಇಂದು ಗಮನಾರ್ಹವಾಗಿದೆ.

**ಕೆಲ್ಲಂಗೆಱೆ' ತೀರ್ಥ**

'ಕೆಲ್ಲಂಗೆಱೆ'' ತೀರ್ಥದ ಬಗ್ಗೆ ಗಮನ ಹರಿಸಿದರೆ, ಈ ಹೆಸರಿನ ಅನೇಕ ಗ್ರಾಮಗಳಿದ್ದು ಗೊಂದಲಕ್ಕೀಡಾಗಿದೆ. ಜೈನ ವಿದ್ವಾಂಸರಾದ ಶ್ರೀ ಹಂಪ. ನಾಗರಾಜಯ್ಯನವರು. 'ಶಾಸನಗಳಲ್ಲಿ ಜೈನತೀರ್ಥಗಳ' ಬಗೆಗೆ ತಿಳಿಸುತ್ತಾ - "ಹಾಸನ ಜಿಲ್ಲೆಯ ಬೇಲೂರು ತಾಲೂಕು ಹಳೆಯಬೀಡಿನ ಪರಿಸರವೇ ಕೆಲ್ಲಂಗೆಱೆ'ಯ ಆದಿತೀರ್ಥ. 'ಇದನ್ನು' ಆದಿತೀರ್ಥವೆಂದು ಕರೆದಿರುವುದು ಇದರ ಪುರಾತನತೆಯನ್ನು ಪ್ರಾಮುಖ್ಯತೆಯನ್ನು ಹೇಳುತ್ತದೆ" ಎಂದಿದ್ದಾರೆ.[೫]

ಕೆಲ್ಲಂಗೆಱೆ' ತೀರ್ಥವು ಮೊದಲು ಗಂಗರಿಂದ ನಿರ್ಮಿತವಾಗಿತ್ತು. ಮುಂದೆ ಕಾಲವಶದಿಮದ ಕೆಲ್ಲಂಗೆಱೆ' ತೀರ್ಥ ನಾಮಾವಶೇಷವಾದಾಗ, ಅದನ್ನು ಮತ್ತೆ ಹೊಯ್ಸಳರ ಭಂಡಾರಿ ಹುಳ್ಳ ದಂಡಾಧಿಪನು 'ತಳದಿಂದ ಕಳಸದವರೆಗೆ' - ಕಲ್ಪಸ್ಥಿರವಾಗಿರುವಂತೆ ಜಿನಾಗರವನ್ನು ಮಾಡಿಸಿದನೆಂದು ಶಾಸನ ತಿಳಿಸಿದೆ. (ಎಕ ೨; ಶ್ರ.ಬೆ. ೪೭೬), ಈ ಕೆಲ್ಲಂಗೆಱೆ'ಯ ಬಗೆಗೆ ತಿಳಿಯಲು ಯತ್ನಿಸಿದಾಗ



- ಅರಸಿಕೆರೆ ತಾಲುಕಿನಲ್ಲೊಂದು ಕೆಲ್ಲಂಗೆರೆ ಇದೆ. ಈ ಗ್ರಾಮದಲ್ಲಿ ಗಂಗರ ಕಾಲದ ವಾಸ್ತು ವಿಶೇಷವೂ ದೊರೆತಿದೆ. ಆದರೆ ಹೊಯ್ಸಳರ ಭಂಢಾರಿ ನಿರ್ಮಿಸಿದ್ದ 'ಜಿನಾಲಯ'ಕ್ಕೆ ಸಂಬಂಧಿಸಿದ ವಿವರಗಳು, ಅವಶೇಷಗಳು ದೊರೆಯುವುದಿಲ್ಲ.

'ಕೆಲ್ಲಂಗೆಱೆ' - ಸ್ಥಳನಾಮದ ಬಗೆಗೆ ಹಂಪನಾರವರು- ಹಳೇಬೀಡಿನ ಪರಿಸರದಲ್ಲಿ 'ಕೆಲ್ಲ' ಎಂಬ ಜೈನಮನೆತನ ನೆಲೆಸಿದ್ದರು. ಈ 'ಕೆಲ್ಲ' ವಂಶದವರು ಕಟ್ಟಿಸಿದ ಕೆರೆಯೂ ಇಲ್ಲಿತ್ತು. ಜೈನ ಮನೆತನವಾದ ಕೆಲ್ಲಕುಲದವರು ಕಟ್ಟಿಸಿದ ಕೆರೆಯಿಂದಾಗಿ 'ಕೆಲ್ಲಂಗೆರೆ' ಎಂದು ಹೆಸರಾಯಿತು ಎಂದು ಒಂದೆಡೆ ಅಭಿಪ್ರಾಯ ಪಟ್ಟಿದ್ದಾರೆ.[೬]

ಮತ್ತೊಬ್ಬ ಜೈನ ವಿದ್ವಾಂಸರಾದ ಪದ್ಮನಾಭಯ್ಯ, ಭುವನಹಳ್ಳಿ ಯವರು - "ಭಾರತದ ಜೈನ ತೀರ್ಥಕ್ಷೇತ್ರಗಳು" ಎಂಬ ಪುಸ್ತಕವನ್ನು ರಚಿಸಿದ್ದಾರೆ. ಆದರೆ ಈ ಪುಸ್ತಕದಲ್ಲಿ ಕೆಲ್ಲಂಗೆರೆ ಹೆಸರೇ ದಾಖಲಾಗಿಲ್ಲ. ಹಳೆಬೀಡಿನ ಬಗೆಗೆ ಬರೆಯುವರಾದರೂ ಅದನ್ನು 'ಕೆಲ್ಲಂಗೆರೆ' ಎಂದು ಕರೆದಿಲ್ಲ.[೭] ಹೀಗಿರುವಾಗ ಈ ಕೆಲ್ಲಂಗೆರೆ ಬಗೆಗೆ ಶಾಸನಗಳೇ ಬೆಳಕು ಚೆಲ್ಲಿವೆ.

ಮಂಡ್ಯಜಿಲ್ಲೆಯ ನಾಗಮಂಗಲ ತಾಲೂಕಿನ ಕೆಳಗೆರೆ ಶಾಸನವು (ಎಕ೭; ನಾಗಮಂ.೬೦) ಹೊಯ್ಸಳ ದೊರೆ ೩ನೇ ನಾರಸಿಂಹ ದೇವನ ಕಾಲದ್ದಾಗಿದೆ. ಶಾಸನವು ಹೊಯ್ಸಳರ 'ವೀರ ನಾರಸಿಂಹ ದೇವರಸರು ದೋರಸಮುದ್ರದ ತ್ರಿಕೂಟ ರತ್ನಾತ್ರಯದ ಶ್ರೀಶಾನ್ತಿನಾಥ ದೇವರ ಅಂಗಭೋಗ ರಂಗಭೋಗ ಆಹಾರದಾನ, ಮುನ್ತಾದ ಸಮಸ್ತ ಧರ್ಮಕಾರ್ಯಕ್ಕೆ.... ಚಿಕ್ಕಕಂನೆಯನ ಹಳ್ಳಿ.... ಬಯೇನುಳ್ಳಂಥಾ ಅಷ್ಟಭೋಗ ತೇಜಸ್ವಾಮ್ಯ ಸಹಿತವಾಗಿ ಮಾಘಣಂದಿ ಸಿದ್ಧಾಂತಿ ಚಕ್ರವರ್ತಿಗಳ ಶ್ರೀಪಾದಪದ್ಮಗಳಿಗೆ ಧಾರಪೂರ್ವಕ'ವಾಗಿ ಬಿಟ್ಟದಾನವನ್ನು ದಾಖಲಿಸಿದೆ. ಬಸ್ತಿಹಳ್ಳಿಯ ಶಾಸನೋಕ್ತ ವಿವರಗಳನ್ನು ಈ ಶಾಸನದೊಂದಿಗೆ ಹೋಲಿಸಿ, ನೋಡಿದರೆ, ಕೆಲ್ಲಂಗೆರೆಯು ನಾಗಮಂಗಲ ತಾಲೂಕಿನಲ್ಲಿದೆ ಎನ್ನಿಸುತ್ತದೆ. ಇದಕ್ಕಾಗಿ ನಾಗಮಂಗಲ ತಾಲೂಕಿನ ಕಂದಾಯದ ಸರ್ವೆ ನಕ್ಷೆಯನ್ನು ಪರಿಶೀಲಿಸಿದಾಗ ನಕ್ಷೆಯಲ್ಲಿ ಶಾಸನೋಕ್ತನಾದ ಕರಡಿಹಳ್ಳಿ, ಅರೆಹಳ್ಳಿ, ಹೂಲಿಕೆರೆ, ಚಟ್ಟನಹಳ್ಳಿ, ಚೋಳನಹಳ್ಳಿ, ಕುಂಚೇನಹಳ್ಳಿ, ಕೆಲ್ಲಂಗೆರೆ (ಕೆಳಗೆರೆ)ಗಳನ್ನು ಗುರುತಿಸಬಹುದಾಗಿದೆ.

ಈ ಹಿನ್ನೆಲೆಯಲ್ಲಿ 'ಕೆಳಗೆರೆ' ಗ್ರಾಮದ ಅವಶೇಷಗಳನ್ನು ಗಮನಿಸಿದರೆ. ಕೆಳಗೆರೆ ಮಲ್ಲಿಕಾರ್ಜುನ ದೇವಾಲಯದ ಶಾಸನವೊಂದು (ಎಕ ೭; ನಾಮಂ. ೫೮) ವಿಜಯನಗರದ ಅರಸು ದೇವರಾಯರ ಕಾಲದಲ್ಲಿ ಕೆಲ್ಲಂಗಱೆಯ ವರದೆಯನಾಯಕ ನೆಂಬುವನು- "ಊರ ಮುಂದಣ ಶ್ರೀ ಮಲ್ಲಿಕಾರ್ಜುನ ದೇವರ ದೇವಾಲ್ಯವನೂ ಗರ್ಭಗೃಹ, ಸುಕನಿವಾಸ, ರಂಗಮಂಟಪ ಮುಂತಾದ ಶ್ರೀ ಮಲ್ಲಿಕಾರ್ಜುನ ದೇವರ ಶ್ರೀಪಾದಸೇವೆಯನೂ ಮಾಡಿ ಈ ಗ್ರಾಮ ಶೂದ್ರವಾಡವಾಗಿದ್ದುದನೂ ಅಘ್ರಾರವ ಮಾಡಿ, ಈ ಊರಕೆಱೆಯು..... ಜೀರ್ಣೋದ್ಧಾರವ ಮಾಡಿ'- ಎಂಬ ಉಲ್ಲೇಖವಿದೆ. ಇದರಿಂದ ಬಹುಶಃ ಮಲ್ಲಿಕಾರ್ಜುನ ದೇವಾಲಯವೇ ಹಿಂದಿನ ಶಾನ್ತಿನಾಥ ಬಸದಿಯೇ ಎಂದು ಸಂದೇಹವಾಗುತ್ತದೆ. ಇದಕ್ಕೆ ಪೂರಕವೆಂಬಂತೆ ಮಂಡ್ಯ ಜಿಲ್ಲೆಯ ಗ್ಯಾಸೆಟಿಯರ್‌ನಲ್ಲಿ- "ಊರ ಪ್ರವೇಶದಲ್ಲಿರುವ ಕೆರೆಯ ಏರಿಯಲ್ಲಿರವ ದೇವಾಲಯವೇ ಮಲ್ಲಿಕಾರ್ಜುನ ದೇವಾಲಯ. ಗರ್ಭಗೃಹದಲ್ಲಿ ತೀರ್ಥಂಕರ ಪೀಠವಿದ್ದು ಬರಿದಾಗಿದೆ ಎಂಬ ಉಲ್ಲೇಖವಿದೆ. ಅಗಸೆಬಳಿ ಜೈನಸ್ತಂಭ, ಆನೆಶಿಲ್ಪ, ಗರುಡಗಂಬಗಳಿವೆ. ಬಸವೇಶ್ವರನ ಗುಡಿ ಬಳಿ ತೀರ್ಥಂಕರ, ಆನೆ, ಮತ್ತು ವಾಮನ ಮುದ್ರೆಕಲ್ಲುಗಳ ಅವಶೇಷಗಳಿವೆ ಎಂದು ತಿಳಿಸಲಾಗಿದೆ.[೮]

ಈ ಎಲ್ಲಾ ವಿವರಗಳನ್ನು ಸಮೀಕ್ಷಿಸಿದರೆ, ಸಮುದಾಯದ ಮಾಘಣಂದಿ ವ್ರತಿಗಳು ನೆಲೆಸಿದ ಕೆಲ್ಲಂಗೆಱೆ ತೀರ್ಥವು ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನ ಕೆಲಗೆರೆಯೇ ಎಂದು ಖಚಿತವಾಗಿ ತಿಳಿಯುತ್ತದೆ.

(ವಿಸೂ : ಈ ಪ್ರಬಂಧವನ್ನು ಸಿದ್ಧಪಡಿಸುವಲ್ಲಿ ಕರ್ನಾಟಕ ಗ್ಯಾಸೆಟಿಯರ್ಸ್‌ನಲ್ಲಿರುವ ಡಾ. ಅ. ಲ. ನರಸಿಂಹನ್ ರವರು ನಾಗಮಂಗಲ ತಾಲೂಕಿನ ಮೂಲ ನಕ್ಷೆಯನ್ನು ಕೊಟ್ಟು ಸಹಕರಿಸಿದ್ದಾರೆ. ಡಾ. ಪಿ.ವಿ. ಕೃಷ್ಣಮೂರ್ತಿ ಮಾಸ್ತರರು ಅದನ್ನು ಪ್ರಕಟಣೆಗೆ ಸೂಕ್ತವಾಗುವಂತೆ ಸಿದ್ಧಪಡಿಸಿ ಕೊಟ್ಟಿದ್ದಾರೆ. ಅವರಿಗೆ ನಾನು ಋಣಿಯಾಗಿದ್ದೇನೆ.)



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಕೆಲ್ಲಂಗೆಱೆಗೆ ಸಮೀಪದ ಶಾಸನೋಕ್ತವಾದ ಕಾಲುವಳ್ಳಿಗಳನ್ನು ನೀಡಲಾಗಿರುವ ನಾಗಮಂಗಲ ತಾಲೂಕಿನ ನಕ್ಷೆಯಲ್ಲಿ ಈ ಸಂಖ್ಯೆಗಳಿಂದ ಗುರುತಿಸಲಾಗಿದೆ. ಕರಡಿಹಳ್ಳಿ(39) ಅಱೆಯಹಳ್ಳಿ(35), ಹೂಲಿಯಕೆರೆ(32), ಚೊಟ್ಟನಹಳ್ಳಿ(255?), ನರಗನಹಳ್ಳಿ(30), ಚೋಳಿಯನಹಳ್ಳಿ(29), ಲೊಕ್ಕಿಯಹಳ್ಳಿ(285), ಗೌರಿಯಹಳ್ಳಿ(29), ಕುಂಚದಹಳ್ಳಿ (276), ಹಿರಿಯ ಕಂನೆಯನಹಳ್ಳಿ(41), ಕೆಲ್ಲಂಗೆರೆ(36) ಈ ಸಂಖ್ಯೆಗಳು ನಕ್ಷೆಯ ಜೊತೆಯಲ್ಲಿ ನೀಡಲಾಗಿರುವ ಗ್ರಾಮದ ಹೆಸರು ಪಟ್ಟಿಗಳಲ್ಲಿ ನಮೂದಿಸಿರುವ 'ಸಂಕೇತ ಸಂಖ್ಯೆ'ಗಳಾಗಿವೆ.

೨. **ಶ್ರೀ ಮಾಘಣಂದಿ ವಿರಚಿತ - "ಪದಾರ್ಥಸಾರ- ಭಾಗ-೨"** ೧೯೭೨ (ಸಂ.), ಎಂ.ಸಿ. ಪದ್ಮನಾಭಶರ್ಮ, ಪ್ರಸ್ತಾವನೆ - ಪು. XIV, ಕನ್ನಡ ಅಧ್ಯಯನ ಸಂಸ್ಥೆ ಮೈ. ವಿ.ವಿ..

೩. **ಕುಮುದೇಂದು ರಾಮಾಯಣ.,** ೧೯೮೧, (ಸಂ.) ಹಂಪ ನಾಗರಾಜಯ್ಯ : ಪದ್ಯ -೨೦, ಪು-೮. ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೪. **ಶಾಂತೀಶ್ವರ ಪುರಾಣ.,** (ಸಂ.) ಆರ್.ವಿ. ಕುಲಕರ್ಣಿ, ಆಶ್ವಾಸ ೧- ಪದ್ಯ-೪೫, ಪು-೧೪.

೫. **ಚಂದ್ರಕೊಡೆ.,** ಡಾ।। ಹಂಪ ನಾಗರಾಜಯ್ಯ,- "ಶಾಸನಗಳಲ್ಲಿ ಜೈನತೀರ್ಥಗಳು"- ಪು -೧೦೬: ಕನ್ನಡ ವಿಶ್ವವಿದ್ಯಾಲಯ ವಿದ್ಯಾರಣ್ಯ - ೧೯೯೭.

೬. ಅದೇ..... ಡಾ ।। ಹಂಪ. ನಾ. - "ಶಾಸನಗಳಲ್ಲಿ ಊರ ಹೆಸರುಗಳು" - ಪುಟ - ೯

೭. "ಭಾರತದ ಜೈನ ತೀರ್ಥಕ್ಷೇತ್ರಗಳು" ಪದ್ಮನಾಭಯ್ಯ ಭುವನಹಳ್ಳಿ .

೮. *Kamataka Gazelteers-Mandya* - District p. 918-19.

ಬಿ. ಪಂಪಾದೇವಿ*

# ಮೈಸೂರಿನ ಅರಣ್ಯಾಡಳಿತದಲ್ಲಿ ಗಜಸಂರಕ್ಷಣಾ ನೀತಿ (೧೮೩೧ - ೧೯೪೭)

*ಆನೆಗಳ ಅಸ್ತಿತ್ವ, ಪರಿಸರ ನಿರ್ವಹಣೆಯ ಕಾರಣ, ಅಗತ್ಯವಿದೆ ದಿಟ. ನಮ್ಮ ಆರ್ಥಿಕ ಸಂಪನ್ಮೂಲದ ಅರಣ್ಯ ವಸ್ತುವಾಗಿ ಅದರ ದಂತ, ಮೂಳೆ ಇತ್ಯಾದಿಗಳು ಬಳಕೆಗೊಂಡು ಬಂದಿವೆ ಸರಿ. ಆದರೆ ಅವುಗಳ ಹಾವಳಿ ಪೈರುಪಚ್ಚೆಗಳ ಬೆಳೆನಾಶಕ್ಕೆ ಕಾರಣವಾದಾಗ ಅದಕ್ಕೆ ಪರಿಹಾರೋಪಾಯ ಬೇಕಲ್ಲ. ಇದನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಿ ನಾಡಿಗೆ ಬಂದು ಹಾವಳಿ ಮಾಡದೆ, ಕಾಡಿನಲ್ಲಿಯೇ ಉಳಿಯುವಂತೆ ಮಾಡುವ ಹಾಗೂ ಅವುಗಳ ಸಂರಕ್ಷಣೆಯೂ ಆಗುವ ಮಾರ್ಗೋಪಾಯವನ್ನು ಬ್ರಿಟಿಷರ ಆಡಳಿತ ಕಾಲದ ಅರಣ್ಯ ನೀತಿಯಿಂದ ಅನುಸರಿಸಲಾಯಿತು ಎಂಬುದು ಗಮನಾರ್ಹ.*

ಮೈಸೂರಿನ ಅರಣ್ಯಾಡಳಿತವು ಗಜಸಂರಕ್ಷಣಾ ವಿಷಯದ ಬಗ್ಗೆ ವಿಶೇಷ ಆಸಕ್ತಿಯನ್ನು ಹೊಂದಿತ್ತು. ೧೮೩೧ ರಿಂದ ೧೯೪೭ ಎಂದರೆ ವಸಾಹತು ಸರ್ಕಾರದ ಕಾಲ ಎಂದು ಎಲ್ಲರಿಗೂ ತಿಳಿದ ವಿಷಯ. ಆಡಳಿತದಲ್ಲಿನ ಎಲ್ಲಾ ಕ್ಷೇತ್ರದಲ್ಲೂ ಬ್ರಿಟಿಷರ ಪ್ರಭಾವವೇ ಕಾಣುತ್ತಿದ್ದ ಕಾಲವದು. ಆದುದರಿಂದ ಬ್ರಿಟಿಷರ ಅರಣ್ಯಾಡಳಿತದಲ್ಲಿ ಗಜನೀತಿ ಹೇಗಿತ್ತೆಂದು ಮುಂದಿಡುವ ಪ್ರಯತ್ನ ಇಲ್ಲಿದೆ.

ಪ್ರಸಕ್ತ ಪ್ರಬಂಧವು ಪ್ರಾಥಮಿಕ ಆಧಾರಗಳ ಮೇಲೆ ರಚನೆಯಾಗಿದೆ. ಬೆಂಗಳೂರು ವಿಧಾನಸೌಧದಲ್ಲಿರುವ ಕರ್ನಾಟಕ ಪತ್ರಾಗಾರ ಇಲಾಖೆಯಲ್ಲಿ ದೊರಕಿದ ಕಡತಗಳೇ ಇಲ್ಲಿ ಪ್ರಮುಖವಾದುದು. ಇದಲ್ಲದೆ, ಬೆಂಗಳೂರಿನ ಅರಣ್ಯ ಭವನದಲ್ಲಿ ದೊರಕುವ ಹಲವಾರು ಕಾರ್ಯ ಯೋಜನೆಗಳು Forest Manual ಇತ್ಯಾದಿಗಳು ಸಹಾಯಕವಾಗಿವೆ.

ಭಾರತದಲ್ಲಿ ವೈಜ್ಞಾನಿಕ ಅರಣ್ಯಾಡಳಿತ ಪದ್ಧತಿ ಪ್ರಾರಂಭವಾದುದು ಬ್ರಿಟಿಷರ ಕಾಲದಿಂದಲೇ ಎಂದರೆ ಸುಳ್ಳಲ್ಲ. ಅಶೋಕನ ಶಾಸನವು ಅರಣ್ಯ ವಸ್ತುಗಳ ಮೇಲಿನ ತೆರಿಗೆಯ ಬಗ್ಗೆ ಪ್ರಸ್ತಾಪಿಸುತ್ತದೆ. ಅಶೋಕ ಕಾಡುಗಳನ್ನು ನಾಶ ಮಾಡುವವರಿಗೆ ಶಿಕ್ಷೆ ವಿಧಿಸುವ ಬಗೆಯನ್ನು ಶಾಸನವೊಂದು ತಿಳಿಸುತ್ತದೆ. ಅದೇ ರೀತಿಯಲ್ಲಿ ಪುರಾತನ ಕಾಲದಲ್ಲಿ ವಾನಪ್ರಸ್ಥ ಎಂಬ ಆಶ್ರಮ ವ್ಯವಸ್ಥೆಯು ಕಾಡಿನ ಮಹತ್ವದ ಬಗ್ಗೆ ತಿಳಿಸುತ್ತವೆ. ಆದರೆ ವೈಜ್ಞಾನಿಕವಾಗಿ ಅರಣ್ಯಾಡಳಿತ ನಡೆಸುವ ಬಗೆಯನ್ನು ಬ್ರಿಟಿಷರು ಜಾರಿಗೆ ತಂದರು ಎಂಬುದು ಸ್ಪಷ್ಟ ಅಭಿಪ್ರಾಯವಾಗಿದೆ.

'ಆನೆ' ಅನಾದಿ ಕಾಲದಿಂದಲೂ ಅರಣ್ಯ ಸಂಪತ್ತೆನಿಸಿದೆ. ಅದರ ದಂತ, ಮೂಳೆ, ಕೇಶ, ಇತ್ಯಾದಿ ಬಹಳ ಬೆಲೆ ಬಾಳುವ ವಸ್ತುಗಳಾಗಿದ್ದವು. ಅನೆಗಳನ್ನೇ ಮಾರಾಟಮಾಡುವ ಪದ್ಧತಿಯು ಆಚರಣೆಯಲ್ಲಿತ್ತು. ಈ ಎಲ್ಲಾ ಅಂಶಗಳು ಆನೆಗಳ ಮೌಲ್ಯ ಮತ್ತು ಅದಕ್ಕೆ ಸದಾ ಇದ್ದ ಬೇಡಿಕೆಯನ್ನು ಸ್ಪಷ್ಟ ಪಡಿಸುತ್ತವೆ.

ಆನೆಗಳನ್ನು ಬೇಟೆ ಆಡುವುದು, ಪಳಗಿಸುವುದು ಮುಂತಾದ ಕಾರ್ಯಗಳು ಸಾಹಸ ಕಾರ್ಯಗಳೆನ್ನಿಸಿದ್ದುವು. ಮೈಸೂರಿನ ಅರಣ್ಯಗಳಲ್ಲಿ ಆನೆ ಹಿಡಿಯುವ ಖೆಡ್ಡಾ ಕ್ರಿಯೆಯು ಬಹಳ ಪ್ರಸಿದ್ಧಿ ಹೊಂದಿತ್ತು. ಹೀಗೆ ಆನೆ ಮೈಸೂರಿನ ಅರಣ್ಯಾಡಳಿತದಲ್ಲಿ ವಿಶೇಷ ಸ್ಥಾನವನ್ನು ಪಡೆದಿತ್ತು. ಈ ನಿಟ್ಟಿನಲ್ಲಿ ನನಗೆ ದೊರೆತ ಕೆಲವು ಆಕರಗಳ ಮಾಹಿತಿಯಿಂದ ಬ್ರಿಟೀಷರ ಗಜನೀತಿಯ ಬಗ್ಗೆ ಕೆಲವು ಅಂಶಗಳು ತಿಳಿಯಬರುತ್ತದೆ.

೧೮೬೪ರಲ್ಲಿ ಮದರಾಸು ಪ್ರೆಸಿಡೆನ್ಸಿಯಿಂದ ಹೊರತುಪಡಿಸಿ ಪ್ರತ್ಯೇಕವಾದ ಅರಣ್ಯ ಇಲಾಖೆ ಮೈಸೂರು ಸರ್ಕಾರದಡಿಯಲ್ಲಿ ಅಸ್ತಿತ್ವಕ್ಕೆ ಬಂದಿತು. ೧೮೯೮ರಲ್ಲಿ ಕರ್ನಲ್ ಕ್ಯಾಂಪ್ ಬೆಲ್

* ಇತಿಹಾಸ ಸಂಶೋಧನಾ ವಿದ್ಯಾರ್ಥಿನಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

ವಾಕರ್ ಎಂಬುವವನ ನೇತೃತ್ವದಲ್ಲಿ (Working Plan) "ಕಾರ್ಯ ಯೋಜನೆ" ಆಚರಣೆಗೆ ಬಂದಿತು. ಇದರಲ್ಲಿ ಗಜ ಸಂರಕ್ಷಣೆಯ ಬಗ್ಗೆ ಮಾಹಿತಿ ಇದೆ. ಹಲವಾರು ಅರಣ್ಯ ವಲಯಗಳನ್ನು ಗುರುತಿಸಿ ಅವುಗಳಿಗೆ ಪ್ರತೇಕವಾದ 'ಕಾರ್ಯ ಯೋಜನೆ'ಯನ್ನು ಅನುಸರಿಸುತ್ತಿದ್ದರು. ಈ ಯೋಜನೆಯಲ್ಲಿ ಆನೆಗಳ ಗಣಪತಿಯ ಬಗ್ಗೆ ವಿವರಿಸುತ್ತದೆ. ಅರಣ್ಯಾಡಳಿತ ನೀತಿಯಲ್ಲಿ ಆನೆಯ ಬಗ್ಗೆ ವಿಶೇಷ ಗಮನವನ್ನು ವಹಿಸಿರುವುದಕ್ಕೆ ಅನೇಕ ಸ್ಪಷ್ಟ ನಿದರ್ಶನಗಳಿವೆ.

No.27-ft-f-3-1890 ಈ ದಾಖಲೆಯಲ್ಲಿ ಗಂಡಾನೆಮರಿಯೊಂದು ಕಾಡಿನಲ್ಲಿ ಹಿಂಡು ತಪ್ಪಿಸಿಕೊಂಡು ಓಡಾಡುವುದನ್ನು ಗಮನಿಸಿ ಅದನ್ನು ಹಿಡಿದು ಮೈಸೂರಿನ ಮೃಗಾಲಯಕ್ಕೆ ತಂದೊಪ್ಪಿಸಲಾಗುತ್ತದೆ. ಅದೇ ರೀತಿ ಮತ್ತೊಂದು ದಾಖಲೆಯಲ್ಲಿ ಮರಿ ಆನೆಯೊಂದು ಕಂದರದಲ್ಲಿ ಬಿದಿರುವುದು ಹಗ್ಗದ ಮೂಲಕ ಎಳೆದು ಕಾಡಿನೊಳಕ್ಕೆ ಅಟ್ಟುವುದರ ಬಗ್ಗೆ ಸೂಚಿಸುತ್ತದೆ.

ಆನೆಗಳ ಮನಸ್ಥಿತಿಯ ಬಗ್ಗೆ, ಆದರ ಆಹಾರ, ವಿಹಾರದ ಬಗ್ಗೆ, ಅವುಗಳ ಸಹಜ ಸ್ವಭಾವ, ಗುಣ ಅವಗುಣಗಳ ಬಗ್ಗೆ ಆಳವಾಗಿ ಅನೇಕ ಅರಣ್ಯಾಡಳಿತಾಧಿಕಾರಿಗಳು ಅಭ್ಯಸಿಸಿದ್ದರು ಎಂಬುದು ಕೆಲವು ಮೇಲ್ನೂಚಿತಧಾರದಿಂದ ಸ್ಪಷ್ಟವಾಗುತ್ತದೆ. ಒಮ್ಮೆ ಅರಣ್ಯ ಇಲಾಖೆಗೆ ಕೆಲವು ಗ್ರಾಮಸ್ಥರು ಆನೆಗಳ ಹಾವಳಿ, ಅದರಿಂದ ಉಂಟಾದ ಬೆಳೆ ಹಾನಿಯ ಬಗ್ಗೆ ನಿವೇದಿಸಿ ಸೂಕ್ತ ಕಾರ್ಯ ಕೈಗೊಳ್ಳಬೇಕೆಂದು ಕೋರಿ ಅರ್ಜಿಯನ್ನು ನೀಡುತ್ತಾರೆ.

(10 of 1870 1-3) ನಿಯಮ ರೀತ್ಯಾ, ಅಂಥ ಸಂದರ್ಭಗಳಲ್ಲಿ ಆಂಗ್ಲ ಅಧಿಕಾರಿಯು ಆನೆಗಳು ಗ್ರಾಮಕ್ಕೆ ನುಗ್ಗುವುದು ಕೇವಲ ಅವುಗಳಿಗೆ ಕಾಡಿನಲ್ಲಿ ಉಂಟಾಗಿರಬಹುದಾದ ಆಹಾರದ ಕೊರತೆಯಿಂದಲೇ ಎಂದು ಭಾವಿಸಿ ಅರಣ್ಯದೊಳಗೆ ಕೃತಕ ನೀರಿನ ಹೊಂಡಗಳನ್ನು ಮಾಡಿಸಿ ಅಲ್ಲಿಯೇ ಕಬ್ಬು ಬಾಳೆ ಮುಂತಾದ ಬೆಳೆಗಳನ್ನು ಬೆಳೆಸುತ್ತಾನೆ. ಇದಾದ ನಂತರ ಆನೆಗಳ ಹಾವಳಿ ನಿಯಂತ್ರಣವಾದ ಬಗ್ಗೆ ಕೆಲವು ತಿಂಗಳುಗಳ ನಂತರ ತಿಳಿದು ಬರುತ್ತದೆ. ಹೀಗೆ ವೈಜ್ಞಾನಿಕವಾಗಿ ಆಲೋಚಿಸಿ ಅವುಗಳ ಸಂರಕ್ಷಣೆಯ ಬಗ್ಗೆ ಕ್ರಮ ಕೈಗೊಳ್ಳಲಾಗುತ್ತಿತ್ತು.

ಇದೇ ರೀತಿಯಲ್ಲಿ ಕಾಡಿನಲ್ಲಿ ಆನೆಯೊಂದು ಸತ್ತು ಬಿದ್ದಿರುವ ಬಗ್ಗೆ ವರದಿಯಾದಾಗ, ಮೃತ ಆನೆಗೆ ಶವ ಪರೀಕ್ಷೆ ಮಾಡುವಂತೆ ಆದೇಶ ನೀಡಲಾಗುತ್ತದೆ. ಶವ ಪರೀಕ್ಷೆಯಲ್ಲಿ ಅದು ಸಾಂಕ್ರಾಮಿಕ ಕಾಯಿಲೆಯಿಂದಾಗಿ ಸತ್ತಿರುವ ಬಗ್ಗೆ ವರದಿಯಾದಾಗ, ರೋಗ ಬೇರೆ ಆನೆಗಳಿಗೆ ಹರಡಬಾರದೆಂದು ತಕ್ಷಣವೇ ಸಾಂಕ್ರಾಮಿಕ ರೋಗ ನಿರೋಧಕ ಚುಚ್ಚುಮದ್ದನ್ನು ಅರಣ್ಯದಲ್ಲಿನ ಹಲವಾರು ಆನೆಗಳಿಗೆ ನೀಡಲಾಗುತ್ತದೆ. ಇದರಿಂದಾಗಿ ಸಾಂಕ್ರಾಮಿಕ ರೋಗ ಉಲ್ಬಣಗೊಳ್ಳದೆ ನಿಯಂತ್ರಣದಲ್ಲಿ ಉಳಿಯುತ್ತದೆ.

ಮೈಸೂರಿನ ಕಾಕಾನಕೋಟೆ ಅರಣ್ಯ ಪ್ರದೇಶದಲ್ಲಿ ಆನೆಗಳ ಸಂತತಿ ಹೆಚ್ಚಾದಾಗ 'ಖೆಡ್ಡಾ' ಎಂಬ ಕ್ರಿಯೆಯನ್ನು ನಡೆಸಲಾಗುತ್ತದೆ. ಖೆಡ್ಡಾ ಬಹಳ ಹಿಂದಿನಿಂದಲೂ ನಡೆಸಲಾಗುತ್ತಿತ್ತು. ಆದರೆ ಆ ಕ್ರಿಯೆಯಲ್ಲಿ ಆನೆಗಳು ಗುಂಡಿಗೆ ಬಿದ್ದಾಗ ಅವುಗಳಿಗೆ ಉಂಟಾಗುತ್ತಿದ್ದ ಗಾಯ ನೋವು ಹಾಗೂ ಕೆಲವೊಮ್ಮೆ ಮರಣವನ್ನು ಹೊಂದುತ್ತಿದ್ದುದರ ಬಗ್ಗೆ ಕಾಳಜಿ ವಹಿಸಿ ಖೆಡ್ಡಾ ಪದ್ಧತಿಯಲ್ಲಿ ಬದಲಾವಣೆ ಮಾಡಿಕೊಳ್ಳಲಾಯಿತು. ಇದರಿಂದ ಆನೆಗಳನ್ನು ಬಹಳ ಉಪಾಯವಾಗಿ ಹಾಗೂ ಅತಿ ಮುತುವರ್ಜಿಯಿಂದ ಹಿಡಿಯಲಾಗುತ್ತಿದ್ದ ಕಾರಣ ಆನೆಗಳ ಸಂತತಿ ಸಂರಕ್ಷಣೆಗೊಳ್ಳಪಟ್ಟಿತ್ತು. ಅನೇಕ ಜನರನ್ನು ಈ ಖೆಡ್ಡಾಕ್ರಿಯೆ ಆಕರ್ಷಿಸುತ್ತಿದ್ದ ಕಾರಣ ಇದರಿಂದ ಇಲಾಖೆಗೆ ಆದಾಯ ಉಂಟಾಗುತ್ತಿತ್ತು. ಹಿಡಿದ ಆನೆಗಳನ್ನು ಪಳಗಿಸಿ ಕಾಡಿನಲ್ಲಿ ದಿಮ್ಮಿಗಳನ್ನು ಸಾಗಿಸಲು ಉಪಯೋಗಿಸಲಾಗುತ್ತಿತ್ತು. ಕಾಡಿನಲ್ಲಿ ಪಳಗಿಸಿ ಬೇರೆ ದೇಶಗಳಿಗೂ ಈ ಆನೆಗಳು ಮಾರಾಟಗೊಳ್ಳುತಿತ್ತು.

ಒಟ್ಟಿನಲ್ಲಿ ಆನೆಗಳ ಸಂರಕ್ಷಣೆಯ ಬಗ್ಗೆ ಹಲವಾರು ಯೋಜನೆಗಳು ಬಿಟಿಷರ ಆಡಳಿತ ನೀತಿಯಲ್ಲಿ ಒಳಗೊಂಡಿದ್ದುವು ಹೇಳಬಹುದಾಗಿದೆ.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


**G.P. Sanderson**

1. Arrangements for the management of Kheddah operations during Mr.Sanderson's absence. -5 of 1875 1-3
2. Capture of a young male elephant by Mr.Sanderson - 3 1876 1-2
3. Reports on the prospects of elephant catching 4 of 1876 1-2
4. Proposition statement for the Kheddah establishment for 1876; 9 of 1876 1 -4
5. Entertainment of a temporary establishment for the Kheddah; 10 of 1870 1-3
6. Proposal to undertake the caputre of elephants as a private speculation; 12 of 1876 1-3
7. Leave to Mr. G.P. Sanderson; 6 of 1890 1-21
8. Report on the death of an elephant; 27 of1890 1-3
9. M/s.King and Co. Bill for telephonic instruments; 4 of 1891 1- 11
10. Death of Mr. Sanderson; 5 of 1891 1-5

ಡಾ॥ ಹೆಚ್. ಚಂದ್ರಶೇಖರ*

# ಶಿಲ್ಪಗಳಲ್ಲಿ ಆನೆ - ವೈವಿಧ್ಯದ ಚಿತ್ರಗಳು

*ಆನೆ ನಮ್ಮ ಸಾಂಸ್ಕೃತಿಕ ವಲಯದಲ್ಲಿ ದೈವಿಕ ಪ್ರತೀಕವಾಗಿರುವುದಲ್ಲದೆ ಸಾಮಾನ್ಯ ಬದುಕಿನಲ್ಲಿ ಬಳಕೆಗೂ ಮಾಧ್ಯಮವಾಗಿದೆ. ಧರ್ಮ, ಯುದ್ಧ ಮೌಲ್ಯ ಶಿಕ್ಷೆ ಇತ್ಯಾದಿ ಸಂದರ್ಭಗಳಲ್ಲಿ ಅವುಗಳ ಪಾತ್ರ ವಿಶಿಷ್ಟ. ಹಾಗೆಯೇ ಅವುಗಳ ಬದುಕಿನ ಸಂದರ್ಭಗಳಲ್ಲಿ 'ಗಜಪ್ರಸವ'ವೊಂದು ವಿಶೇಷ; ಸಿಂಹದೊಡನೆ ಹೋರಾಟವೊಂದು ಆಕರ್ಷಕ ದಿಟ. ಅಲ್ಲದೆ ಅಪಾಯಗಳ ಸಂಕೇತವಾಗಿ ಕೆಲವು ಸಂದರ್ಭಗಳಲ್ಲಿ ಅವುಗಳು ಕಾಣಿಸಿಕೊಂಡರೂ ಒಟ್ಟಾರೆ ಪರಿಸರ ಹಾಗು ಮಾನವನ ಬದುಕಿನ ಉಪಯೋಗಕಾರಕ ಜೀವಿಗಳೂ ಆಗಿರುವುದಿದೆ. ಇವೆಲ್ಲವೂ ಶಿಲ್ಪಗಳಲ್ಲಿ ಮೂಡಿರುವ ಬಗೆಯನ್ನು ಕಲಾತ್ಮಕವಾಗಿ ಸೆರೆಹಿಡಿಯಲಾಗಿರುವುದನ್ನು ಸದ್ಯ ಗಮನಿಸಬಹುದು.*

ಆನೆಯು ಭೂಮಿಯ ಮೇಲೆ ವಾಸಿಸುತ್ತಿರುವ ಅತ್ಯಂತ ಶಕ್ತಿಶಾಲಿ ಹಾಗೂ ದೊಡ್ಡ ಸಸ್ತನಿ ಪ್ರಾಣಿ. ಇದು ಸಂಪೂರ್ಣವಾಗಿ ಶಾಖಾಹಾರಿ ಹಾಗೂ ಪ್ರಾಣಿಗಳಲ್ಲಿ ತುಂಬಾ ಬುದ್ಧಿವಂತ ಹಾಗೂ ಸ್ಮರಣಶಕ್ತಿಯುಳ್ಳ ಪ್ರಾಣಿ. ಸುಮಾರು ೪-೫ಕೋಟಿ ವರ್ಷಗಳ ಹಿಂದೆ ಹಂದಿಯಂತೆ ಇದ್ದ ಪ್ರಾಣಿಯಿಂದ ಹುಟ್ಟಿ ಬೆಳವಣಿಗೆಯನ್ನು (Evolution) ಪಡೆದಿದೆ. ಮೊದಲಿಗೆ, ಈ ಸಸ್ತನಿ ಪ್ರಾಣಿಯಲ್ಲಿ ಹಲವು ಪ್ರಭೇದಗಳಿದ್ದವು. ಸದ್ಯಕ್ಕೆ ಎರಡು ಪ್ರಭೇದಗಳು ಮಾತ್ರ ಉಳಿದಿವೆ. ಒಂದು, ಏಶಿಯಾದ ಆನೆ (Elephas Maximus) ಎರಡು, ಆಫ್ರಿಕಾದ ಆನೆ (Laxodenta Africana) ಏಶಿಯಾದ ಆನೆಗಳ ಅತ್ಯಂತ ಪ್ರಮುಖನೆಲೆ ಕರ್ನಾಟಕ ಮತ್ತು ನೆರೆಯ ಕೇರಳ ಹಾಗೂ ತಮಿಳುನಾಡು.

ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿ ಆನೆಗೆ ಸಿಕ್ಕಷ್ಟು ಪ್ರಾಮುಖ್ಯತೆ ಬಹುಶಃ ಯಾವ ಪ್ರಾಣಿಗೂ ಸಿಕ್ಕಿಲ್ಲ. ರಾಮಾಯಣ ಮಹಾಭಾರತ ಇತ್ಯಾದಿ ಪುರಾಣಗಳಲ್ಲಿ ಆನೆಗಳ ಉಲ್ಲೇಖ ಬರುತ್ತದೆ. ಗಣೇಶನು-ಗಜಮುಖನೆಂಬುದು ಸರ್ವವಿದಿತ. ಅದರಂತೆಯೇ ಶಿವನು ಗಜಚರ್ಮವನ್ನು ಹೊದಿದ್ದನೆಂಬುದು ಪುರಾಣಗಳಲ್ಲಿ ಚಿತ್ರಿತವಾಗಿದೆ.

ಆದರೆ, ಈ ಪ್ರಾಣಿಯ ವಿವರಣೆ ಐತಿಹಾಸಿಕ ದಾಖಲೆಗಳಲ್ಲಿ ಅಪರೂಪವಾಗಿ ಬರುತ್ತದೆ. ಗ್ರೀಸ್ ದೇಶದ ಅಲೆಕ್ಸಾಂಡರ ಪರ್ಶಿಯಾದ ಯುದ್ಧದಲ್ಲಿ (ಕ್ರಿ.ಪೂ. ೩೩೧) ಭಾರತದಿಂದ ತರಿಸಿದ್ದ ಆನೆಯ ಮೇಲೆ ಕುಳಿತು ಯುದ್ಧ ಮಾಡಿದ್ದನೆಂಬುದು ಅತ್ಯಂತ ಹಳೆಯ ಉಲ್ಲೇಖ. ಇದಲ್ಲದೆ ಚಾಣಕ್ಯನ ಅರ್ಥಶಾಸ್ತ್ರದಲ್ಲಿ ಆನೆಯನ್ನು ಪಳಗಿಸುವ ಮತ್ತು ಅವುಗಳ ಉಸ್ತುವಾರಿ ಅಧಿಕಾರಿಗಳ ವಿವರಣೆ ಇದೆ. ಇವುಗಳನ್ನು ಗಮನಿಸಿದರೆ ಆನೆಯು ನಮ್ಮ ದೇಶದ ಇತಿಹಾಸದಲ್ಲಿ ಪ್ರಮುಖ ಸ್ಥಾನ ಹೊಂದಿತ್ತು ಎಂಬುದು ವ್ಯಕ್ತವಾಗುತ್ತದೆ. ಆನೆಯು ನಮ್ಮ ಇತಿಹಾಸದಲ್ಲಿ ಬಳಕೆಯಾಗುತ್ತಿದ್ದ ರೀತಿಗಳನ್ನು ನಮ್ಮ ಶಿಲ್ಪಿಗಳು ಹೇಗೆ ಕಂಡರಿಸಿದ್ದಾರೆಂಬುದನ್ನು ಅಧ್ಯಯನ ಮಾಡುವುದೇ ಪ್ರಸ್ತುತ ಸಂಪ್ರಬಂಧದ ಉದ್ದೇಶವಾಗಿದೆ.

ಈ ಅಧ್ಯಯನದಲ್ಲಿ ಪ್ರಮುಖವಾಗಿ ಗದಗ ಜಿಲ್ಲೆಯ ಡಂಬಳದ ದೊಡ್ಡ ಬಸಪ್ಪನ ಗುಡಿ ಮತ್ತು ಲಕ್ಕುಂಡಿಯ ಕಾಶಿ ವಿಶ್ವೇಶ್ವರ ಗುಡಿ, ಇವುಗಳಲ್ಲಿ ಕೆತ್ತಲಾದ ಆನೆಯ ಶಿಲ್ಪಗಳನ್ನು ಅಧ್ಯಯನಕ್ಕೆ ಗುರಿಪಡಿಸಲಾಗಿದೆ. (ಚಿತ್ರ ೧ಮತ್ತು೨) ಇವೆರಡು ಗುಡಿಗಳು ಕಲ್ಯಾಣ ಚಾಳುಕ್ಯರ ಕಾಲದ ಕಲಾಕೃತಿಗಳು. ಇದರಂತೆಯೇ ವಿಜಯನಗರ ಅರಸರ ಕಾಲದ ಗುಡಿಗಳಲ್ಲಿ ಆನೆಯ ವಿವಿಧ ಶಿಲ್ಪಗಳಿವೆಯಾದರೂ, ಪ್ರಸ್ತುತ ಅಧ್ಯಯನಕ್ಕೆ ದೇವದುರ್ಗ ತಾಲ್ಲೂಕಿನ ಗೊಬ್ಬೂರಿನ ವೆಂಕಟೇಶ್ವರ ಗುಡಿಯಲ್ಲಿ ಕೆತ್ತಲಾದ

* ಸಂಗಮ ಎಮ್.ಐ.ಜಿ. ೭೭, ಕೆ.ಹೆಚ್.ಬಿ ಕಾಲೋನಿ ೨ನೇ ಹಂತ ಬಸವೇಶ್ವರ ನಗರ ಬೆಂಗಳೂರು - ೫೬೦ ೦೭೯

ಒಂದು ಶಿಲ್ಪವನ್ನು ಮಾತ್ರ ಅಧ್ಯಯನಕ್ಕೊಳಪಡಿಸಲಾಗಿದೆ. ಈ ಎಲ್ಲಾ ಕಲಾಕೃತಿಗಳು ಉಬ್ಬುಶಿಲ್ಪಗಳೆಂಬುದನ್ನು ಹೇಳಬಯಸುತ್ತೇನೆ.

ಆನೆಯ ಶಿಲ್ಪಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಅವುಗಳ ಬಳಕೆಯ ಆಧಾರದ ಮೇಲೆ ಈ ಕೆಳಗಿನಂತೆ ವರ್ಗೀಕರಿಸಲಾಗಿದೆ :

(೧) ಧಾರ್ಮಿಕ ಮತ್ತು ವೈಹಾಳಿ ಶಿಲ್ಪಗಳು; (೨) ಭಾರ ಹೊರುವ ಸಾಂಕೇತಿಕ ಪ್ರಾಣಿ; (೩) ಆನೆಗಳನ್ನು ಪಳಗಿಸುವ ದೃಶ್ಯ ಶಿಲ್ಪಗಳು;·(೪) ಯುದ್ಧದಲ್ಲಿ ಆನೆಗಳು; (೫) ತಪ್ಪಿತಸ್ಥ ರನ್ನು ಶಿಕ್ಷಿಸಲು ಆನೆಗಳ ಬಳಕೆ (೫) ಕುಟುಂಬ ಮತ್ತು ಪ್ರಸವ; (೭) ಆನೆಯ ಪ್ರಸವ ;(೮) ಆನೆಯ ಶಿಲ್ಪವನ್ನು ಕೆತ್ತುವ ಹಂತಗಳು.

**ಧಾರ್ಮಿಕ ಮತ್ತು ವೈಹಾಳಿ ದೃಶ್ಯಗಳಲ್ಲಿ ಆನೆ :** ಕಲ್ಯಾಣ ಚಾಳುಕ್ಯರ ಮತ್ತು ಹೊಯ್ಸಳರ ದೇಗುಲಗಳ ಮುಖಮಂಟಪ ಮತ್ತು ಗರ್ಭಗುಡಿಯ ಬಾಗಿಲ ಚೌಕಟ್ಟುಗಳ ಹಣೆಪಟ್ಟಿಯಲ್ಲಿ ತಪ್ಪದೆ ಗಜಲಕ್ಷ್ಮಿಯ ಶಿಲ್ಪಗಳನ್ನು ಕೆತ್ತಲಾಗಿದೆ. ಹಣೆಪಟ್ಟಿಯ ಮಧ್ಯದಲ್ಲಿ ಕಮಲದ ಮೇಲೆ ಲಕ್ಷ್ಮಿ ಆಸೀನಳಾಗಿದ್ದರೆ ಎಡ ಮತ್ತು ಬಲ ಬದಿಗಳಲ್ಲಿ ಆನೆಗಳು ತಮ್ಮ ಸೊಂಡಿಲುಗಳನ್ನು ಎತ್ತಿ ಪುಷ್ಪ ವೃಷ್ಟಿ ಅಥವಾ ಜಲವೃಷ್ಟಿಯನ್ನು ಮಾಡುವ ನೋಟ ಸಾಮಾನ್ಯ. ಈ ಶಿಲ್ಪಗಳು ಬಹುಪಾಲು ಸಲ ಕಲಾತ್ಮಕವಾಗಿ ಕೆತ್ತಲ್ಪಟ್ಟಿದ್ದರೂ ತೀರ ಸಾಧಾರಣ ಶಿಲ್ಪಗಳನ್ನೂ ನೋಡಬಹುದಾಗಿದೆ. (ಚಿತ್ರ೩).

ಲಕ್ಕುಂಡಿಯ ಕಾಶಿವಿಶ್ವನಾಥ ದೇವಾಲಯದ ಕಕ್ಷಾಸನದ ಹೊರಗಡೆ ಗೋಡೆಯ ಮೇಲೆ ಕೆತ್ತಲಾದ ಶಿಲ್ಪದಲ್ಲಿ ರಾಜನೊಬ್ಬ (ಬಹುಶಃ ಚಕ್ರವರ್ತಿ) ಅತ್ಯಂತ ಸಿಂಗಾರಗೊಂಡ ಆನೆಯ ಮೇಲೆ ಇರುವ ಅಂಬಾರಿಯೊಳಗೆ ಕುಳಿತು ಗಜವೈಹಾಳಿಗೆ ಹೊರಟಿರುವ ನೋಟ ಶಿಲ್ಪಿಯ ಕುಶಲತೆಗೆ ಸಾಕ್ಷಿಯಾಗಿದೆ. ಈ ಶಿಲ್ಪದಲ್ಲಿ ಶಿಲ್ಪಿಯು ಆನೆಯ ಎರಡು ಕುಂಭಗಳ ಸುತ್ತಲೂ ಆಭರಣ ಸರಪಳಿ, ಕೊರಳಲ್ಲಿ ಗಂಟೆಯ ಸರಪಳಿ, ಮತ್ತು ಆಸ್ತರಣ ಇವುಗಳನ್ನು ಸೂಕ್ಷ್ಮವಾಗಿ ಕೆತ್ತಿದ್ದಾನೆ ಶಿಲ್ಪಿ. ಆನೆಯ ಮುಂದೆ ವಾದ್ಯಗಾರರು ಸೇವಕರು; ಆನೆಯ ಹಿಂದೆಯೂ ಸೇವಕರು ಇದ್ದಾರೆ. ಮೇಲೆ ರಾಜನು ಪರಿವಾರ ಸಮೇತ ಪ್ರಸನ್ನಚಿತ್ತನಾಗಿ ಕುಳಿತ್ತಿದ್ದಾನೆ. ಆನೆಯ ಕಾಲುಗಳಿಗೆ ಕಡಗ ಸೊಂಡಿಲುಗಳಿಗೆ ಕಂಕಣಗಳನ್ನು ಕೆತ್ತಲಾಗಿದೆ. ಆನೆ ತುಂಬಾ ಗಂಭೀರವಾಗಿ ಹೆಜ್ಜೆ ಇಡುವದನ್ನು ಶಿಲ್ಪಿಯು ಕೆತ್ತಿದ್ದಾನೆ. ಇದೊಂದು ಶ್ರೇಷ್ಠ ದಂತಶಿಲ್ಪಗಳಲ್ಲಿ ಒಂದು (ಚಿತ್ರ. ೪)

**ಭಾರಹೊರುವ ಸಾಂಕೇತಿಕ ಪ್ರಾಣಿ :** ಆನೆಯು ಅತ್ಯಂತ ಎತ್ತರದ ಹಾಗೂ ಶಕ್ತಿ ಶಾಲಿ ಪ್ರಾಣಿ. ಆದ್ದರಿಂದ ಹೆಚ್ಚು ಭಾರವನ್ನು ಹೊರಬಲ್ಲದು. ಇದನ್ನು ಸಂಕೇತಿಸಲೆಂಬಂತೆ ಆನೆಯ ಶಿಲ್ಪಗಳ ಮುಖಗಳನ್ನು ಗುಡಿಯ ಅಧಿಷ್ಠಾನದ ಮೇಲಿನ ಸ್ತರದಲ್ಲಿ, ದೇವಾಲಯದ ಗೋಡೆ ಆರಂಭವಾಗುವದಕ್ಕಿಂತ ಮೊದಲು, ಸಾಲು ಸಾಲಾಗಿ ಕೆತ್ತುವದು ಸಾಮಾನ್ಯ- ಈ ತತ್ವವನ್ನು ಲಕ್ಕುಂಡಿಯ ಕಾಶಿ ವಿಶ್ವನಾಥ ದೇವಾಲಯದಲ್ಲಿ ಸ್ಪಷ್ಟವಾಗಿ ಕಾಣುತ್ತೇವೆ. (ಚಿತ್ರ. ೫)

ಆನೆಯನ್ನು ಪಳಗಿಸುವ ಅಥವಾ ನಿಯಂತ್ರಿಸುವ ದೃಶ್ಯಗಳು : ಸೆರೆಹಿಡಿಯಲಾದ ಆನೆಯನ್ನು ಪಳಗಿಸಲು ಈಗಾಗಲೇ ನುರಿತ ಹಾಗೂ ಪಳಗಿಸಿದ ಆನೆಯನ್ನು ಬಳಸಲಾಗುತ್ತದೆ (ಚಿತ್ರ ೬). ಅದೇ ರೀತಿಯಾಗಿ ನಿಯಂತ್ರಣ ತಪ್ಪಿದ ಸಾಕಿದ ಆನೆಯನ್ನು ನಿಯಂತ್ರಿಸಲು ಇನ್ನೊಂದು ಪಳಗಿದ ಹಿರಿಯ ಬಲಶಾಲಿ ಆನೆಯನ್ನು ಬಳಸಲಾಗುತ್ತದೆ (ಚಿತ್ರ ೭). ಈ ಪ್ರಕ್ರಿಯೆಯು ಹಿಂದಿನ ಕಾಲಕ್ಕೂ ಇಂದಿನ ಕಾಲಕ್ಕೂ ಸತ್ಯ ಇದನ್ನು ಶಿಲ್ಪಿಯು ಕಲಾತ್ಮಕವಾಗಿ ಕೆತ್ತಿದ್ದಾನೆ.

**ಯುದ್ಧದಲ್ಲಿ ಆನೆಗಳ ಬಳಕೆ :** ಬಹುಹಿಂದಿನ ಕಾಲ ದಿಂದಲೂ ಬಹುಶಃ ೧೬-೧೭ನೇ ಶತಮಾನದವರೆಗೆ ಆನೆಯನ್ನು ಯುದ್ಧದಲ್ಲಿ ರಾಜ ಮಹಾರಾಜರ ಸವಾರಿಗಾಗಿ ಅಥವಾ ಕೋಟೆ ಬಾಗಿಲುಗಳನ್ನು ಒಡೆಯುವದಕ್ಕಾಗಿ ಬಳಸಲಾಗುತ್ತಿತ್ತು. ಆನೆಯ ಮೇಲೆ ಕುಳಿತ ರಾಜನು ಹೆಚ್ಚು ಸುರಕ್ಷಿತನಷ್ಟೇ ಅಲ್ಲದೆ ಯುದ್ಧದ ಮೈದಾನದ ಮೇಲೆ ಪಕ್ಷಿನೋಟ ಬೀರಲು ಸಾಧ್ಯವಾಗುತ್ತಿತ್ತು. ಕೆಲವೊಂದು ಸಲ ಆನೆ ನೇರವಾಗಿ ವೈರಿಯ ಮೇಲೆ ದಾಳಿ ಮಾಡುತಿತ್ತು. ರಾಮಾಯಣದಲ್ಲಿ ರಾವಣನು ಇಂದ್ರನೊಡನೆ ಯುದ್ಧ ಮಾಡಿದಾಗ ಇಂದ್ರನ ಐರಾವತ (ಆನೆ) ರಾವಣನ ಎದೆಯ ಎಡಭಾಗದಲ್ಲಿ ತನ್ನ ದಂತದಿಂದ ತಿವಿದು ಗಾಯಗೊಳಿಸುತ್ತದೆ. ಆನೆ ಮಾಡಿದ ಈ ಗಾಯದ ಗುರುತು ರಾಮನ ಬಾಣದಿಂದ ಹತನಾದ ನಂತರ ರಾವಣನ ದೇಹದ ಮೇಲೆ ಕಾಣಿಸಿಗುತ್ತದೆ. ಇಂದ್ರನ ಹಸ್ತಿಯು ರಾವಣನ ಎದೆಯ ಎಡಭಾಗವನ್ನು ತಿವಿಯುವ ದೃಶ್ಯವನ್ನು ತುಂಬ ಸೂಕ್ಷ್ಮವಾಗಿ ಅಷ್ಟೇ ಕಲಾತ್ಮಕವಾಗಿ ಕಾಶಿವಿಶ್ವನಾಥ ದೇವಾಲಯದ ಶಿಲ್ಪದಲ್ಲಿ ಕೆತ್ತಲಾಗಿದೆ (ಚಿತ್ರ೮). ಇದೇ ದೇವಾಲಯದಲ್ಲಿ ಇನ್ನೊಂದು ಪೌರಾಣಿಕ ಶಿಲ್ಪದಲ್ಲಿ ಯೋಧನೊಬ್ಬ, ನೇರವಾಗಿ ರಾಜನನ್ನು ಹೊತ್ತಿರುವ ಆನೆಯ ಸೊಂಡಿಲನ್ನು ಹಿಡಿದು ಹೋರಾಡುವ ಯುದ್ಧದ ದೃಶ್ಯವನ್ನು ಕಣ್ಣಿಗೆ ಕಟ್ಟುವಂತಿದೆ. ಇದಲ್ಲದೆ ರಥದ ಮೇಲೆ ಕುಳಿತ ವೀರನೊಬ್ಬ, ಅಂಬಾರಿಯಲ್ಲಿ ಕುಳಿತ ರಾಜನ ಮೇಲೆ ಬಾಣ ಹೊಡೆಯುತ್ತಿರುವ ನೋಟ ತುಂಬಾ ಮನೋಜ್ಞವಾಗಿದೆ. ಇದಲ್ಲದೆ ಗಗನದಲ್ಲಿ ಮೋಡಗಳ ಸಮೂಹವನ್ನು ಕೆತ್ತಿರುವ ಶಿಲ್ಪಿಯು ರಣರಂಗವು ಬಯಲು ಪ್ರದೇಶವಾಗಿತ್ತು ಎಂದು ಸಂಕೇತಿಸುತ್ತಾನೆ (ಚಿತ್ರ ೯).

ಯುದ್ಧಕ್ಕೆ ಹೊರಟಾಗಲೂ ಯುದ್ಧದಲ್ಲಿ ತೊಡಗಿದ್ದಾಗಲೂ ಆನೆಗಳನ್ನು ಸರ್ವಾಂಗವಾಗಿ ಸಿಂಗರಿಸಲಾಗುತ್ತಿತ್ತು ಎಂಬುದನ್ನು ಡಂಬಳದ ದೊಡ್ಡ ಬಸಪ್ಪಗುಡಿಯ ಹಲವಾರು ಶಿಲ್ಪಗಳಲ್ಲಿ ನೋಡಬಹುದು (ಚಿತ್ರ.೧೦). ಯುದ್ಧಕ್ಕೆ ಹೋಗುವಾಗ ಅಥವಾ ತರಬೇತಿಗಾಗಿ ಕರೆದು ಕೊಂಡು ಹೋಗವಾಗ ಆನೆಯ ಶಕ್ತಿಗೆ ಅಥವಾ ಸೊಂಡಿಲಿಗೆ ಸರಪಳಿಯನ್ನು ಕಟ್ಟಿ ಯೋಧನೊಬ್ಬ ಕರೆದು ಕೊಂಡು ಹೋಗುವ ನೋಟವನ್ನು ಇನ್ನೊಂದು ಶಿಲ್ಪದಲ್ಲಿ ನೋಡಬಹುದು (ಚಿತ್ರ.೧೧).

**ಆನೆಯ ಕಾಲ್ತುಳಿತದ ಶಿಕ್ಷೆ :** ರಾಜನು ತಾನು ತಪ್ಪಿತಸ್ಥರೆಂದು ಘೋಷಿಸಿದವರಿಗೆ ಮರಣದಂಡನೆಯನ್ನು ವಿಧಿಸುತ್ತಿದ್ದನು. ಅದರಲ್ಲಿಯೂ, ೧೬ನೇ ಶತಮಾನದ ವರೆಗೆ ಮರಣದಂಡನೆಯನ್ನು ಆನೆಯ ಕಾಲ್ತುಳಿತದ ಮೂಲಕ ಅಥವಾ ಎಳೆಹೂಟೆ ಶಿಕ್ಷೆಯನ್ನು ನೀಡುವುದರ ಮೂಲಕ ನೀಡಲಾಗುತ್ತಿತ್ತು. ಇದೊಂದು ಭೀಕರ ಹಾಗೂ ಭೀಭತ್ಸಕರ ಶಿಕ್ಷೆ. ಜನರ ಮನಸ್ಸಿನಲ್ಲಿ ಭಯವನ್ನು ಹುಟ್ಟಿಸುವದೇ ಇದರ ಉದ್ದೇಶ. ಇಂಥ ಶಿಕ್ಷೆಯನ್ನು ವಿಧಿಸುವ ವಿವಿಧ ಹಂತಗಳನ್ನು ಚಿತ್ರಿಸುವ ಕೆಲವು ಶಿಲ್ಪಗಳನ್ನು ಡಂಬಳದ ಗುಡಿಯ ದಕ್ಷಿಣದ ದ್ವಾರದ ಕಕ್ಷಾಸನದಲ್ಲಿ ಕೆತ್ತಲಾಗಿದೆ. ಈ ಶಿಕ್ಷೆನೀಡಲು ಬಳಸಲಾದ ಆನೆಯನ್ನು ಸರ್ವಾಂಗವಾಗಿ ಸಿಂಗರಿಸಲಾಗಿದೆ. ಮೊದಲ ಹಂತದಲ್ಲಿ ಆನೆಯು ಶಿಕ್ಷೆಗೊಳಗಾದ ವ್ಯಕ್ತಿಯನ್ನು ಸೊಂಡಿಲಿನಿಂದ ಎತ್ತುವ ದೃಶ್ಯ ಮತ್ತು ಎರಡನೇ ಹಂತದಲ್ಲಿ ಈ ವ್ಯಕ್ತಿಯನ್ನು ನೆಲಕ್ಕೆ ಕುಕ್ಕಿ ಬಲಗಾಲಿನಿಂದ ಆನೆಯು ತುಳಿಯುತ್ತಿರುವ ನೋಟ ಭೀಭತ್ಸಕರವಾಗಿದೆ (ಚಿತ್ರ ೧೨).

**ಆನೆಯ ಕುಟುಂಬ ಮತ್ತು ಪ್ರಸವ :** ಆನೆಯದು ಮಾತೃ ಪ್ರಧಾನ ಸಂಸ್ಕೃತಿ. ಆನೆಯನ್ನು ಹೆರುವ ಮತ್ತು ಕಾಪಾಡುವ ಜವಾಬ್ದಾರಿ ಹೆಣ್ಣಿನದು. ಅಪರೂಪಕ್ಕೆ ನಿಸರ್ಗದಲ್ಲಿ ಗಂಡಾನೆಯು ಕುಟುಂಬದಲ್ಲಿರುತ್ತದೆ; ಆದರೆ ಯೌವನಕ್ಕೆ ಬಂದಾಗ ಅದು ತನ್ನ ಕುಟುಂಬದಿಂದ ದೂರವಾಗುತ್ತದೆ. ಇಂಥ ಆನೆಯ ಕುಟುಂಬದ ಶಿಲ್ಪವನ್ನು ಡಂಬಳದಲ್ಲಿ ಕೆತ್ತಲಾಗಿದೆ. ಒಂದು ಆನೆ ಮರಿ ಒಂದು ಗಂಡಾನೆ ಮತ್ತು ಹೆಣ್ಣಾನೆ (ತಾಯಿ)ಯ ಮಧ್ಯದಲ್ಲಿ ಗಿಡದ ನೆರಳಲ್ಲಿ ನಿಂತಿದೆ. ಗಂಡಾನೆಯು ಗಿಡದಿಂದ ಎಲೆಗಳ ಟೊಂಗೆಯನ್ನು ಮುರಿಯುವಂತೆ ಕೆತ್ತಲಾಗಿದೆ. ಹೆಣ್ಣಾನೆಯ ಕಡೆ ಮೊಗಮಾಡಿ ಮರಿ ಆನೆ ನಿಂತಿದೆ. ಇವು ಕಾಡಾನೆಗಳಲ್ಲ ಎಂಬುದಕ್ಕೆ ಅವುಗಳ ಕೊರಳಲ್ಲಿ ನೇತಾಡುತ್ತಿರುವ ಸರಪಳಿ ಮತ್ತು ಗಂಟೆಗಳೇ ಸಾಕ್ಷಿಯಾಗಿವೆ. ಅಂದರೆ ಸಾಕು ಆನೆಗಳು ಮರಿಯನ್ನು ಹಾಕುತ್ತಿದ್ದವು ಎಂಬುದಕ್ಕೆ ಸಾಕ್ಷಿ ಈ ಶಿಲ್ಪ (ಚಿತ್ರ ೧೩).

ಹೆಣ್ಣಾನೆ ಗಭರಧರಿಸಿದ ನಂತರ ಸುಮಾರು ೧೮-೨೩ ತಿಂಗಳುಗಳ ನಂತರ ಶಿಶುವಿಗೆ ಜನ್ಮನೀಡುತ್ತದೆ. ಇಷ್ಟು ದೀರ್ಘಕಾಲ ಗರ್ಭಧರಿಸುವದರಿಂದ **ಗಜಪ್ರಸವ** ಎಂಬ ನಾಣ್ಣುಡಿ ಚಾಲ್ತಿಯಲ್ಲಿ ಬಂದಿದೆ. ಹೆಣ್ಣಾನೆಯು ಪ್ರಸವದ ಸಮಯ ಬಂದಾಗ ಕಾಡಿನ ಮಧ್ಯಕ್ಕೆ ಹೋಗುತ್ತದೆ. ಗಜಪ್ರಸವವನ್ನು ನೋಡುವದು ದುರ್ಲಭ. ಇಂಥ ದುರ್ಲಭ ದೃಶ್ಯವನ್ನು ವಿಜಯನಗರ ಕಾಲದ ಶಿಲ್ಪಿಯು ಗೊಬ್ಬೂರಿನ (ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ) ವೆಂಕಟೇಶ್ವರ ದೇವಸ್ಥಾನದ ಗೋಡೆಯ ಹೊರಮೈಮೇಲೆ ಕೆತ್ತಿದ್ದಾನೆ. (ಚಿತ್ರ ೧೪). ಬಹುಶಃ ಇಂಥ ಉಬ್ಬು ಶಿಲ್ಪ ಇನ್ನೊಂದಿರಲಾರದು. ಹೆಣ್ಣಾನೆಯ ಜನನದ ದ್ವಾರದಿಂದ ಶಿಶು ಆನೆಯು ಮುಖ ಮುಂದೆ ಮಾಡಿ ಹೊರ ಬರುತ್ತಿದೆ.

ಶಿಶು ಆನೆ ತಾಯಿಯ ಗರ್ಭದಿಂದ ಹೊರಬರುತ್ತಿರುವದನ್ನು ಗಂಡಾನೆಯೊಂದು ಪಕ್ಕದಲ್ಲಿ ನೋಡುತ್ತ ನಿಂತಿರುವಂತೆ ಶಿಲ್ಪಿ ಕೆತ್ತಿದ್ದಾನೆ. ಆದರೆ ನಿಜಜೀವನದಲ್ಲಿ ಇದು ಅಸಾಧ್ಯ. ನಿಸರ್ಗದಲ್ಲಿ ಆನೆ ಪ್ರಸವ ಸಮಯ ಸಮೀಪಿಸಿದಾಗ ತನ್ನ ಸೋದರಿಯರನ್ನು ಕರೆದುಕೊಂಡು ಕಾಡಿನ ಮಧ್ಯ ಸೇರುತ್ತದೆ. ಪ್ರಸವವಾಗುವಾಗ ಕೇವಲ ಹೆಣ್ಣಾನೆಗಳು ಸುತ್ತುವರೆದಿರುತ್ತವೆ. ಗಂಡಾನೆ ಸಮೀಪದಲ್ಲಿ ಇರುವುದಿಲ್ಲ. ಬಹುಶಃ ಆ ಶಿಲ್ಪಿಗೆ ಈ ವೈಜ್ಞಾನಿಕ ಸತ್ಯ ಗೊತ್ತಿಲ್ಲವೆಂದು ತೋರುತ್ತದೆ. ಈ ಶಿಲ್ಪವನ್ನು ಕರ್ಣ ಶಿಲೆಯಲ್ಲಿ ಕೆತ್ತಲಾಗಿದೆ. ಸುಣ್ಣವನ್ನು ಬಳಿಯಲಾಗಿದೆ.

**ಆನೆ ಮತ್ತು ಸಿಂಹ :** ಬಸವಣ್ಣನವರ ವಚನವೊಂದರಲ್ಲಿ "ಆನೆ ಅಂಕುಶಕ್ಕೆ ಅಂಜುವುದೆ ಅಯ್ಯ? ಮಾಣದೆ ಸಿಂಹದ ನಖವೆಂದು ಅಂಜುವುದಲ್ಲದೆ" ಎಂಬ ಮಾತು ಆನೆಯು ಸಿಂಹಕ್ಕೆ ಅಂಜುತ್ತದೆ ಎಂಬ ಸತ್ಯವನ್ನು ಹೇಳುತ್ತದೆ. ಆನೆ ಮತ್ತು ಸಿಂಹಗಳ ಕಾಳಗ ನೋಡಲು ಸಿಗುವದು ತುಂಬಾ ಅಪರೂಪ. ಆದರೆ ಡಂಬಳ ದೇಗುಲದ ದಕ್ಷಿಣದ ದ್ವಾರದ ಕಕ್ಷಾಸನದ ಹೊರ ಮೈ ಮೇಲೆ ಮತ್ತು ಅಧಿಷ್ಠಾನದ ಮೇಲೆ ಆನೆಯ ಮೇಲೆ ಸಿಂಹಗಳು ದಾಳಿ ಮಾಡುವ ದೃಶ್ಯವನ್ನು ಶಿಲ್ಪಿಯು ಯಶಸ್ವಿಯಾಗಿ ಕೆತ್ತಿದ್ದಾನೆ. (ಚಿತ್ರ ೧೫). ಆನೆಯ ಕತ್ತಿನ ಮೇಲೆ ಮತ್ತು ಹಿಂಗಾಲಿನ ತೊಡೆಯ ಮೇಲೆ ಒಂದೊಂದು ಸಿಂಹ ದಾಳಿ ಮಾಡುವ ನೋಟವನ್ನು ಕೆತ್ತಲಾಗಿದೆ. ಆನೆ ನೋವಿನಿಂದ ಬಾಗಿ ಬಿಟ್ಟಿದೆ. ಇಂಥ ಎರಡು ದೃಶ್ಯಗಳನ್ನು ಈ ಪಟ್ಟಿಕೆಯಲ್ಲಿ ನೋಡಬಹುದು (ಚಿತ್ರ ೧೫). ಅಧಿಷ್ಠಾನದಲ್ಲಿ ಒಂದೊಂದು ಆನೆಯು ಮೇಲೆ ಒಂದೊಂದು ಸಿಂಹವು ಎರಗಿ ತನ್ನ ಉಗುರುಗಳಿಂದ ಆನೆಯ ಮೇಲೆ ದಾಳಿ ಮಾಡುತ್ತಿರುವ ದೃಶ್ಯ ಗಮನ ಸೆಳೆಯುತ್ತದೆ. ನೋವಿನಿಂದ ಆನೆ ಕುಗ್ಗಿ ಮಲಗಿಬಿಟ್ಟಿದೆ. ಆನೆಯ ನೋವಿನ ದೃಶ್ಯ ನಮ್ಮನ್ನು ತಟ್ಟುತ್ತದೆ. ಅಷ್ಟು ಯಶಸ್ವಿಯಾಗಿವೆ ಈ ಶಿಲ್ಪಗಳು. (ಚಿತ್ರ ೧೬)

**ಆನೆಯ ಶಿಲ್ಪವನ್ನು ಕೆತ್ತುವ ಹಂತ :** ಈ ಹಿಂದೆ ವಿವರಿಸಲಾದ ಶಿಲ್ಪಗಳೆಲ್ಲಾ ಉಬ್ಬುಶಿಲ್ಪಗಳು. ಡಂಬಳದ ಗುಡಿಯಲ್ಲಿ ಆನೆಯ ಶಿಲ್ಪವನ್ನು ಕೆತ್ತುವ ಹಂತವನ್ನು ತೋರಿಸಲಾಗಿದೆ. ಅಧಿಷ್ಠಾನದ ಮೇಲೆ ಸುಮಾರು ೧೨-೧೫ ಇಂಚು ಉದ್ದದ ಹಾಗೂ ೧೦ ಇಂಚು ಎತ್ತರದ ಮತ್ತು ೬ ಇಂಚು ಮಂದವಾಗಿರುವ ಬಳಪದ ಸೈಜುಕಲ್ಲನ್ನು ಬಳಸಿ ಈ ಶಿಲ್ಪಗಳನ್ನು ಕೆತ್ತಲಾಗಿದೆ. ಆರಂಭದಲ್ಲಿ ಇಂಥ ಸೈಜು ಕಲ್ಲನ್ನು ಕೂಡಿಸುತ್ತಿದ್ದರು (ಚಿತ್ರ ೧೭). ನಂತರ ಆನೆಯ ರೇಖಾ ಚಿತ್ರದ ಕರಡನ್ನು (Rough Sketch) ಕೊರೆಯಲಾಗುತ್ತಿತ್ತು (ಚಿತ್ರ ೧೮). ನಂತರ ಶಿಲ್ಪವನ್ನು ಪೂರ್ಣಗೊಳಿಸಲಾಗುತಿತ್ತು, ಎಂಬುದನ್ನು ಈ ಗುಡಿಯಲ್ಲಿ ಯಾವ ಚಿತ್ರವಿಲ್ಲದ ಹಾಗೂ ಅರ್ಧ ಚಿತ್ರಗಳಿರುವ ಸೈಜುಗಲ್ಲುಗಳಿಂದ ಗುರ್ತಿಸಬಹುದಾಗಿದೆ. ಈ ಕುಸುರಿ ಕೆಲಸವನ್ನು ನುರಿತ ಹಾಗೂ ಪ್ರವೀಣನಾದ ಶಿಲ್ಪಿಯ ನೇತೃತ್ವದಲ್ಲಿ ನಡೆಯುತ್ತಿತ್ತು ಎಂದು ಊಹಿಸಬಹುದಾಗಿದೆ.

**ಉಪಸಂಹಾರ :** ಮೇಲಿನ ಅಧ್ಯಯನವು ಆನೆಯನ್ನು ನಮ್ಮ ಹಿಂದಿನ ಕಾಲದಲ್ಲಿ ಸಂಭ್ರಮದ ಸಮಯಗಳಲ್ಲಿ, ಯುದ್ಧ ಸಮಯದಲ್ಲಿ ಹೇಗೆ ಬಳಸಲಾಗುತ್ತಿತ್ತು ಎಂಬುದನ್ನು ತೋರಿಸಿಕೊಡುತ್ತದೆ. ಅಷ್ಟೇ ಅಲ್ಲದೆ ಆನೆಯ ಕೌಟುಂಬಿಕ ಜೀವನ ಹೇಗಿರುತ್ತದೆಂಬುದನ್ನು

ಡಾ. ಬಿ. ರಾಜಶೇಖರಪ್ಪ*

# ಹುಲ್ಲೂರು ವೀರಭದ್ರ ದೇವಾಲಯದ ಶಾಸನ - ಒಂದು ಮರುಪರಿಶೀಲನೆ

ಹುಲ್ಲೂರು ವೀರಭದ್ರ ದೇಗುಲ ಶಾಸನದ ಮರು ಪರಿಶೀಲನೆಯಲ್ಲಿ, ಇಮ್ಮಡಿ ಮದಕೇರಿನಾಯಕರು ಹುಲ್ಲೂರು ಗ್ರಾಮದ ವೀರಭದ್ರ ದೇವರ ತಮ್ಮಡಿಯಾದ ಉದ್ದಂಡನಿಗೆ, ಆವನು ಗತಿ ಇಲ್ಲದಂತಾದ್ದಕ್ಕೆ ದೇವರ ಸ್ವತ್ತನ್ನು ಮಾರಿದ್ದ ಕಾರಣ. ಹಾಕಿದ ದಂಡವನ್ನು ತೆತ್ತ ಬಗ್ಗೆ ಶಾಸನವು ಹೇಳಿರುವುದು ಹಾಗು ಈ ದಂಡ ವಿಧಿಸುವಲ್ಲಿ ಸಾಕ್ಷಿಯಾಗಿ ೧೨ ಜನ ಕೈವಾಡದವರು ಮತ್ತು ಊರ ಪ್ರಮುಖರು ಹಾಜರಿದ್ದ ಬಗ್ಗೆ ತಿಳಿಯುತ್ತದೆ. ಈಗಾಗಲೇ ಪ್ರಕಾಟವಾಗಿರುವ ಕೆಲವು ಶಾಸನಗಳಲ್ಲಿ ಪಾಠಗಳು ಎಷ್ಟೊಂದು ನ್ಯೂನತೆಯಿಂದ ಕೂಡಿವೆ ಮತ್ತು ಕಾಲದ ಪೂರ್ಣ ನೈಜಚಿತ್ರ ಅಥವಾ ವಾಸ್ತವಿಕ ವಿವರಕ್ಕೆ ಎರವಾಗಿದೆ ಎಂಬುದಕ್ಕೆ ಈ ಶಾಸನವೂ ಒಂದು ಉದಾಹರಣೆ ಎಂದು ಪ್ರತಿಪಾದಿಸಲಾಗಿದೆ.

ಶ್ರೀ ಬಿ. ಎಲ್. ರೈಸ್ ಅವರು ಪ್ರಕಟಿಸಿರುವ ಚಿತ್ರದುರ್ಗ ಜಿಲ್ಲೆಯ ಶಾಸನಗಳ 'ಎಪಿಗ್ರಾಫಿಯ ಕರ್ನಾಟಿಕ ಸಂಪುಟ ೧೧' ರಲ್ಲಿಯ ಒಂದು ಶಾಸನ ಕುರಿತ ಮರುಪರಿಶೀಲನೆ ಈ ಸಂಪ್ರಬಂಧದ ವಿಷಯ.

ಚಿತ್ರದುರ್ಗ ತಾಲ್ಲೂಕು ಹುಲ್ಲೂರು ಗ್ರಾಮದ 'ವೀರಭದ್ರ ದೇವಾಲಯದ ಒಳಭಾಗದಲ್ಲಿ ನಟ್ಟ ಕಲ್ಲು' ಎಂದು ಹೆಸರಿಸಿದ ಒಂದು ಶಾಸನವನ್ನು ಶ್ರೀ ರೈಸ್ ಪ್ರಕಟಿಸಿದ್ದಾರೆ (ಆ ಶಾಸನದ ಸಂಖ್ಯೆ ಚಿತ್ರದುರ್ಗ ೨೨). ೧೩ಸಾಲಿನ ಈ ಶಾಸನದಲ್ಲಿ ಮೊದಲ ೩ ಸಾಲುಗಳನ್ನು ಬಿಟ್ಟು ಉಳಿದ ೧೦ ಸಾಲಿನಲ್ಲಿ ಅಲ್ಲಲ್ಲಿ ಅಕ್ಷರಗಳು ಮುಕ್ಕಾಗಿರುವಂತೆ ಅವರು ತೋರಿಸಿದ್ದಾರೆ. ಅವರು ಕೊಟ್ಟಿರುವ ಕನ್ನಡ ಲಿಪಿಯ ಪಾಠಕ್ಕೂ ರೋಮನ್ ಲಿಪಿಯ ಪಾಠಕ್ಕೂ ಅಲ್ಲಲ್ಲಿ ಪರಸ್ಪರ ಕೆಲವು ವ್ಯತ್ಯಾಸ ಕಾಣಿಸುತ್ತವೆ. ಕನ್ನಡ ಲಿಪಿಯಲ್ಲಿ ಕೊಟ್ಟಿರುವ ಪಾಠ ಹೀಗಿದೆ:

**ರೈಸ್ ಅವರು ಕನ್ನಡದಲ್ಲಿ ಕೊಟ್ಟಿರುವ ಪಾಠ**

೧ ಶುಭಮಸ್ತು। ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾ
೨ ಹನ ಶಖ ೧೫೩೧ಯ ಸಉಮ್ಯ ಸಂವತ್ಸರದ ಅಶ್ವಿಜ ಶು ೧೫ ಬು
೩ ವಾರದಲು ಶ್ರೀಮನ್ಮಹಾನಾಯಕಾಚಾರ್ಯ ಕಾಮಗೆತ್ತಿ ಯಿಂಮಡಿ
೪ ಮದಕೆರಿ ನಾಯ್ಕ ಅಯ್ಯನವರು ಹುಲ್ಲುರ ವೀರಭದ್ರದೇವರ . . .
೫ ಉಡ್ಯೆರವರ ಕೈಯ್ಯ ೨೪. . . ಅಪರಾಧವ ಕೈಕೊಳಲಾಗಿ ಆ ಉರ. . .
೬ . . .ಯಿಲ್ಲದೆ. . . . ವೀರಭದ್ರದೇವರ ಮಹೋಭವ ನೈ
೭ ವೈದ್ಯ. . . ಹದ ಮಲ್ಲಪ್ಪಗೆ . . . . . . . . . . .
೮ . . . . . . . . ದಳವಾಯಿ. . . . . . ಅಪ್ಪಣೆಯಲಿ ಮಾ
೯ ಡಿದ ಶಾಸನ ಯಿದಕೆ ಸಾಕ್ಷಿ ಗೌಡರ ಅಚ್ಚಣ ಗವು. . . . .
೧೦. ಡರ ಬಸವಂಣ. . . ದ ಪದುಮಂಣ ಅಕ್ಕಸಾಲೇರ ಜೋಗಂಣ ಗ
೧೧ ಣಾಚಾರಿ ದೊಡಂಣ ತಂಮಡಿ ಚೆಂನಣ ಪೂಜಾರಿ. . . . ದಸ
೧೨ ಸಿದ್ದೇದೇವರ ಪೂಜಾ [ರಿ] ಬೌಳೊಡೆಯರು ತಂಮ . . . . ಯ್ಯ. . . .
೧೩ . . . . . . ಶ್ರೀ ಹರಿಹರಾದಿಗಳೂ

ಈ ಮೇಲಿನ ಕನ್ನಡ ಲಿಪಿಪಾಠಕ್ಕೆ ರೋಮನ್ ಲಿಪಿ ಪಾಠದಲ್ಲಿ ಆಗಿರುವ ವ್ಯತ್ಯಾಸಗಳಲ್ಲಿ ಮುಖ್ಯವಾದವು ಹೀಗಿವೆ: ೪ನೆಯ ಸಾಲಿನಲ್ಲಿ ನಾಯ್ಕ ಅಯ್ಯನವರು ಎಂಬುದಕ್ಕೆ

* ಕನ್ನಡ ಪ್ರಾಧ್ಯಾಪಕರು, ಪ್ರಾಂಶುಪಾಲರು(ನಿ), ೨ನೇ ಅಡ್ಡರಸ್ತೆ,(ಪಶ್ಚಿಮ), ಜೆ ಸಿ ಆರ್ ಬಡಾವಣೆ, ಚಿತ್ರದುರ್ಗ - ೫೭೭ ೫೦೧

Nayakayyanavaru ಎಂದಿದೆ. ೫ನೆಯ ಸಾಲಿನಲ್ಲಿ ೨೪. . . . ಎಂಬುದರ ಮುಂದೆ hana ಎಂದಿದೆ. ೬ನೆಯ ಸಾಲಿನಲ್ಲಿ ಮಹೋಛವ ಎಂಬುದಕ್ಕೆ Mahatsava ಎಂದಿದೆ. ೭ನೆಯ ಸಾಲಿನಲ್ಲಿ ಮಲ್ಲಪ್ಪಗೆ ಎಂಬುದರ ಮುಂದೆ Krayavagi go 26 varaha . . . ಎಂದಿದೆ. ೮ ನೆಯ ಸಾಲಿನಲ್ಲಿ ದಳವಾಯಿ ಎಂಬುದರ ಹಿಂದೆ Mindudakke ಎಂದಿದ್ದರೆ ಅದರ ಮುಂದೆ tiri. . . na ಎಂದಿದೆ. ೯ನೆಯ ಸಾಲಿನಲ್ಲಿ ಗೌಡರ ಅಚ್ಚಣ ಎಂಬುದರ ಅನಂತರ (rest contains names of other witnesses) ಎಂದು ಕಂಸಗಳಲ್ಲಿ ಹೇಳಿದೆ. ಈ ಅಂಶಗಳಿಂದ ಎರಡೂ ಲಿಪಿಪಾಠಗಳ ಪರಸ್ಪರ ವ್ಯತ್ಯಾಸದ ಸ್ವರೂಪವನ್ನು ಗ್ರಹಿಸಬಹುದು.

ಹೀಗಿರುವ ಪಾಠವನ್ನೆ ಶ್ರೀ ರೈಸ್ ಅವರು ತಾವು ಅರ್ಥೈಸಿಕೊಂಡ ಹಾಗೆ ಒಂದು ತಾತ್ಪರ್ಯವನ್ನು ಇಂಗ್ಲಿಷಿನಲ್ಲಿ ಕೊಟ್ಟಿರುತ್ತಾರೆ. ಅದರ ಕನ್ನಡೀಕರಣವನ್ನು ಹೀಗೆ ಕೊಡಬಹುದು.

'ತೇದಿ ೧೬೦೯ ಕ್ರಿ. ಶ.'

(ನಮೂದಿಸಿದ ದಿನದಂದು) ಮಹಾನಾಯಕಾಚಾರ್ಯ ಕಾಮಗೇತಿ ಇಮ್ಮಡಿ ಮೆದಕೆರಿ ನಾಯಕ ಅಯ್ಯನವರು ಹುಲ್ಲೂರಿನ ವೀರಭದ್ರದೇವರ ಅರ್ಚಕನಿಂದ ದಂಡವಾಗಿ ೨೪ ಹಣವನ್ನು ತೆಗೆದುಕೊಂಡು, ಅದನ್ನು ಆ ದೇವರ ಮಹೋತ್ಸವ ನೈವೇದ್ಯ ಸಮರ್ಪಣೆಗೆಂದು ನೀಡಿರುತ್ತಾರೆ, ಆ ಸಂಬಂಧವಾಗಿ ದಳವಾಯಿ ಮಲ್ಲಪ್ಪನಿಗೆ ಅಪ್ಪಣೆಯನ್ನು ಕೊಟ್ಟು. ಇದಕ್ಕೆ ಸಾಕ್ಷಿಗಳು. . ."

**ಪ್ರಸ್ತುತ ಶಾಸನದ ಪುನರ್ ಪರಿಶೀಲನೆ**

ಹೀಗೆ ಕುತೂಹಲಕರವಾದ ಸಂಗತಿಯನ್ನು ಹೊಂದಿರುವ ಈ ಶಾಸನವನ್ನು ಒಮ್ಮೆ ಖುದ್ದಾಗಿ ನೋಡಬೇಕೆಂಬ ಅಪೇಕ್ಷೆಯಿಂದ ನಾನು ನನ್ನ ಮಿತ್ರರೊಂದಿಗೆ ಅದು ಇರುವಲ್ಲಿಗೆ ಹೋಗಿ ನೊಡಿದಾಗ ಅದು ಕ್ಲೋರೈಟ್ ಸಿಸ್ಟ್ ಜಾತಿಯ ಕಲ್ಲು ಚಪ್ಪಡಿಯಲ್ಲಿ ಕೆತ್ತಿದ್ದ ಶಾಸನವಾಗಿದ್ದು, ಅದು ಶ್ರೀ ರೈಸ್ ಅವರು ಹೆಸರಿಸಿರುವಂತೆ 'ವೀರಭದ್ರ ದೇವಾಲಯದ ಒಳಭಾಗದಲ್ಲಿ ನಟ್ಟ ಕಲ್ಲು' ಆಗಿರದೆ, ಆ ದೇವಸ್ಥಾನದ ಮುಂಭಾಗದಲ್ಲಿ ಹೊರಗೆ ಬಲಗೋಡೆಯ ಮುಂದೆ ನಿಲ್ಲಿಸಿದ ಕಲ್ಲು - ಚಪ್ಪಡಿಯಾಗಿದ್ದುದೂ, ಮತ್ತು ಇದೂ ಅಲ್ಲದೆ ಅದರ ಪ್ರಮಾಣ ಕೂಡಾ ಶ್ರೀ ರೈಸ್ ಅವರು ಕೊಟ್ಟಂತೆ ೨' ೩" x ೧" ಇರದೆ ಸ್ವಲ್ಪ ಭಿನ್ನವಾಗಿದ್ದುದೂ ಕಂಡು ಬಂತು. ಕಲ್ಲಿನ ಪ್ರಮಾಣ : ಎತ್ತರ ೩', ಅಗಲ ೧' ೪" ಮತ್ತು ದಪ್ಪ ೭"; ಲಿಪಿ ಪ್ರಮಾಣ : ಎತ್ತರ ೧' ೩", ಅಗಲ ೧' ೩" ಕಲ್ಲಿನ ಮೇಲು ಭಾಗದಲ್ಲಿ ಚಂದ್ರ ಸೂರ್ಯರು, ನಡುವೆ ಕೆಳಗೆ ಲಿಂಗ ನಂದಿ, ಇವುಗಳ ರೇಖಾ ಕೆತ್ತನೆ ಇದ್ದು, ಕೆಳಗೆ ೧೩ ಸಾಲುಗಳ ಬರಹವನ್ನು ಕೊರೆಯಲಾಗಿದೆ. ಆಶ್ಚರ್ಯದ ಸಂಗತಿಯೆಂದರೆ, ಕಲ್ಲಿನಲ್ಲಿ ಅಲ್ಲಲ್ಲಿ ಕೆಲವು ಕಚ್ಚುಗಳಾಗಿದ್ದರೂ, ಅದೃಷ್ಟವಶಾತ್ - ಶ್ರೀ ರೈಸ್ ಅವರು ತೋರಿಸಿರುವಂತೆ - ಯಾವೊಂದು ಅಕ್ಷರವೂ ಮುಕ್ಕಾಗಿರದೆ ಬರಹ ಸಂಪೂರ್ಣವಾಗಿ ಸುರಕ್ಷಿತವಾಗಿರುವುದು ಕಂಡುಬಂದಿತು. ಹಾಗೆಯೇ ಮರುಓದಿಕೆಯಿಂದ ಇದರಲ್ಲಿರುವ ವಿಷಯ ಪೂರ್ಣ ಸ್ಪಷ್ಟವಾಯಿತಲ್ಲದೆ, ಈ ಮೊದಲು ಶ್ರೀ ರೈಸ್ ಅವರು ಮಾಡಿದ್ದ ಅರ್ಥಕ್ಕೂ ಶಾಸನದಲ್ಲಿರುವ ನಿಜವಾದ ವಿಷಯಕ್ಕೂ ಅಪಾರ ವ್ಯತ್ಯಾಸ ಇದ್ದುದೂ ಗೋಚರಿಸಿತು. (ಬರಹದಲ್ಲಿ ಹಲವೆಡೆ ಕಾಗುಣಿತ ದೋಷ ಘಟಿಸಿರುವುದನ್ನು ನೋಡಬಹುದು). ಮರುಓದಿಕೆಯ ಪಾಠ ಹೀಗಿದೆ:

೧ ಶುಭಮಸ್ತು! ಸ್ವಸ್ತಿ ಶ್ರೀ ಜಯದ್ಯಭದಯ ಶಾಲಿವಾ
೨ ಹನ ಶಖ ೧೫೩೧ಯ ಸಉಮ್ಯ ಸಂವತ್ಸರದ ಆಶ್ವೀಜ ಶು ೬ ಆದಿವಾ
೩ ರದಲ್ಲು ಶ್ರೀಮಂನ್ಮಹಾನಾಯಕಚಾರ್ಯ್ಯ ಕಾಮುಗೆತ್ತಿ ಯಿಂಮ್ಮಡಿ
೪ ಮೆದಕೇರಿ ನಾಯ್ಕ ಅಯ್ಯನವರು ಹುಲ್ಲೂರ ವೀರಭದ್ರಾ ದೇವರ ತಂಮ್ಮಡಿ
೫ ಉದ್ದಂಡನ ಕೈಯ ಗ ೨೪ ಹನ ಅಪರಾಧವ ತೆಕೊಳಾಲಾಗಿ ಆ ಉದ್ದಂ
೬ ಡನು ತನಗೆ ಗತ್ತಿಯಿಲ್ಲದೆ ತಂನ ವೀರಭದ್ರಾದೇವರನು ಹೊಲಮನೆ ಗದ್ದೆ
೭ ಆ ಸ್ವಾಮ್ಯ ಯಿಪ್ಪನು ಮಣೆಹದ ಮಲ್ಲಪ್ಪಗೆ ಕ್ರಯವಾಗಿ ಗ ೨೬ ವರಹಕೆ ಮಾ
೮ ರ್‍ರಿದನು ಆ ಮಾರಿದುದಕ್ಕೆ ದಳವಾಯಿ ಗಿರಿಯ್ಯನ ಅಪ್ಪಣೆಯಲ್ಲಿ ಮಾ
೯ ಡಿದ ಶಾಸನ ಯಿದಕೆ ಸಾಕ್ಷಿ ಗೌಡರ ಅಚ್ಯಣ ಸೇನಬೋಗ ಮಲಣ ಬಡ
೧೦ ಗೇರ ಬಸವಣ ಕಂಮಾರ ಪರುಮಂಣ ಅಕಸಲೀರ ಜೋಗಂಣ ಗ
೧೧ ಣಾಚಾರಿ ದೊಡಂಣ ತ್ತಂಮಡಿ ಚೆಂನಂಣ ಪೂಜರ್‍ರಿತ್ತಿಂಮ್ಮದಸ
೧೨ ಸಿಧೇದೇವರ ಪುಜ ಬೋಳೊಡೆಯರು ತಳವಾರ ವೋಬಯ್ಯ ಮುಲಕರ್ತು
೧೩ ವಿನ ವೋಬೈನು ಶ್ರೀ ಹರಿಹರಾದಿಗಳು

**ಮರುಪರಿಶೀಲನೆಯಿಂದ ಕಂಡು ಬಂದ ಹೊಸ ಅಂಶಗಳು**

ಮೊದಲಿಗೆ ಹೇಳಿದ ಶ್ರೀ ರೈಸ್ ಅವರ ಪಾಠಕ್ಕೂ ಮರುಓದಿಕೆಯಿಂದ ದೊರೆತ ಈ ಮೇಲಿನ ಪಾಠಕ್ಕೂ ಹೋಲಿಸಿ ನೋಡಿದಾಗ ಎಲ್ಲೆಲ್ಲಿ ಏನೇನು ಆಗಿದೆ ಎನ್ನುವುದು ಸ್ಪಷ್ಟವಾಗುತ್ತದೆ. ಮುಖ್ಯವಾದ ಕೆಲವು ಅಂಶಗಳನ್ನು ಇಲ್ಲಿ ನೋಡಬಹುದು.

(೧) ಶ್ರೀ ರೈಸ್ ಅವರು ಕೊಟ್ಟ ತೇದಿಯ ವಿವರದಲ್ಲಿ ಶಾಲಿವಾಹನ ಶಕರ್ಷ ೧೫೩೧ರ ಸೌಮ್ಯ ಸಂವತ್ಸರದ ಆಶ್ವೀಜ ಶು ೧೫ ಬುಧವಾರ ಎಂದಿದೆಯಷ್ಟೆ. ಇದರಲ್ಲಿ ಕೊಟ್ಟ ಶಕವರ್ಷ ಸಂಖ್ಯೆ, ಸಂವತ್ಸರ ಮತ್ತು ಮಾಸ ಇವುಗಳ ಹೆಸರು ಸರಿಯಾಗಿವೆ.

ಆದರೆ ಮುಂದಿನ ತಿಥಿ ಮತ್ತು ವಾರದ ಹೆಸರಿನ ಪಾಠಭಾಗ ಸರಿಯಿಲ್ಲ. ತಿಥಿಯ ಪಾಠ ಶು ೧೫ ಅಲ್ಲ, ಶು ೬; ವಾರದ ಹೆಸರು ಬುಧವಾರ ಅಲ್ಲ, ಆದಿವಾರ.

ಈಗ ಇಲ್ಲಿರುವ ಸರಿಯಾದ ಪಾಠ 'ಶಾಲಿವಾಹನ ಶಖ ೧೫೩೧ಯ ಸಲುಮ್ಯ ಸಂವತ್ಸರದ ಆಶ್ವೀಜ ಶು ೬ ಆದಿವಾರ' ಕ್ರಿ.ಶ. ೧೬೦೯ರ ಸೆಪ್ಟಂಬರ್ ೨೪ರ ಆದಿತ್ಯವಾರಕ್ಕೆ ಸರಿ ಹೊಂದುತ್ತದೆ.

(೨) ಶ್ರೀ ರೈಸ್ ಅವರ ಪಾಠದಲ್ಲಿ ವೀರಭದ್ರದೇವರ ತಮ್ಮಡಿಯನ್ನು ಕುರಿತು ಹೇಳುವಾಗ 'ಉದ್ಯೆಯವರ' ಎಂಬ ಮಾತು ಬಂದಿದೆ. ಅಲ್ಲಿ ತಮ್ಮಡಿಯ ಹೆಸರು ಇಲ್ಲ. ಆದರೆ ಮರು ಓದಿಕೆಯಲ್ಲಿ ತಮ್ಮಡಿಯ ಹೆಸರು ಉದ್ದಂಡ ಎಂದಿದ್ದದು ಬೆಳಕಿಗೆ ಬರುತ್ತದೆ. ಪರಿಷ್ಕೃತ ಪಾಠದಲ್ಲಿ ಈ ಹೆಸರು ಎರಡು ಕಡೆ ಬಂದಿರುವುದನ್ನು ಗಮನಿಸಬೇಕು (ಸಾಲು ೫ ಮತ್ತು ೬).

(೩) ಶ್ರೀ ರೈಸ್ ಅವರ ಪಾಠದಲ್ಲಿ 'ಅಪರಾಧವ ಕೈಕೊಳಲಾಗಿ' ಎಂದಿದೆಯಷ್ಟೆ. ಆದರೆ, ಇಲ್ಲಿರುವ ಸರಿಯಾದ ಪಾಠ 'ಅಪರಾಧವ ತೆಕೋಳಾಲಾಗಿ'.

ಈ ಸಂದರ್ಭದಲ್ಲಿ 'ಕೈಕೊಳ್ಳುವುದು' ಹಾಗೂ 'ತೆಕ್ಕೊಳ್ಳುವುದ'ರ ಭಾಷಾ ಸೂಕ್ಷ್ಮ ಮತ್ತು ಅರ್ಥ ಸಾಮಂಜಸ್ಯ ಕೂಡಾ ಚಿಂತನೀಯ. 'ಅಪರಾಧ ಎಂದರೆ ಇಲ್ಲಿ 'ದಂಡದಹಣ' ಎಂದರ್ಥ. ಅಂಥಮ 'ಕೈಕೊಳ್ಳು'ವಂಥದು ಎನ್ನುವುದಕ್ಕಿಂತ 'ತೆಕ್ಕೊಳ್ಳು'ವಂಥದು ಎಂದಿರುವುದು ಸೂಕ್ತವಾಗಿದೆ.

(೪) ಶ್ರೀ ರೈಸ್ ಅವರ ಪಾಠದಲ್ಲಿ ಅರ್ಚಕನಿಂದ ದಂಡ ವಸೂಲಾದ ಸಂಗತಿ ಇದೆ. ಆದರೆ, ಆ ದಂಡಕ್ಕೆ ಕಾರಣವಾದ ಅರ್ಚನದ ದುಷ್ಕೃತ್ಯ ಏನು ಎಂಬ ಮುಖ್ಯ ಸಂಗತಿ ಇಲ್ಲ. ಈಗ ಮರುಓದಿಕೆಯಿಂದ ಈ ಅಂಶ ಸುಸ್ಪಷ್ಟ. ಅರ್ಚಕನು ಮಾಡಿದ ದುಷ್ಕೃತ್ಯ ಎಂದರೆ, ದೇವರಿಗೆ ಸೇರಿದ - ಹೊಸ ಮನೆ ಗದ್ದೆ ಈ ಎಲ್ಲ - ಆಸ್ತಿಯನ್ನು ಮಾರಿಕೊಂಡದ್ದು. ಅವನು ಆಸ್ತಿಯನ್ನು ಮಾರಿಕೊಂಡ ಎಂಬ ಸಂಗತಿ ಅಷ್ಟೇ ಅಲ್ಲ, ಯಾಕೆ ಮಾರಿಕೊಂಡ ಎಂಬ ವಿವರ ಸಹ ಮರುಪರಿಶೀಲನೆಯಿಂದ ಸ್ಪಷ್ಟ. ಅರ್ಚಕನು ದೇವರ ಆಸ್ತಿಯನ್ನು ಮಾರಲು ಅವನಿಗೆ ಏನೂ ಇಲ್ಲದಂತಾದ ಪರಿಸ್ಥಿತಿ ಒದಗಿದ್ದೆ ಕಾರಣ, ಎಂಬುದನ್ನೂ ಶಾಸನ ತಿಳಿಸುತ್ತದೆ.

(೫) ಶ್ರೀ ರೈಸ್‌ರ ಪಾಠದಲ್ಲಿ ಪಂಕ್ತಿ ೭ರಲ್ಲಿ 'ಮಲ್ಲಪ್ಪ' ಎಂಬೊಂದು ಹೆಸರು ಬಂದಿದೆ. ಆದರೆ, ಅವನ ಹಿಂದಿನ ವಿಶೇಷಣ ಪೂರ್ಣವಿಲ್ಲ. ಅಲ್ಲದೆ ಅವನು ದಳವಾಯಿ ಎಂದೂ ಸ್ಪಷ್ಟವಾಗಿ ಇಲ್ಲ. ಆದರೂ ಅವರು ಈ ಮಲ್ಲಪ್ಪ ದೊರೆಯ ಅಪ್ಪಣೆಯನ್ನು ಪಾಲಿಸಲು ನಿಯೋಜಿತವಾದ ಒಬ್ಬ ದಳವಾಯಿ ಎಂದು ಅವರು ಹೇಗೋ ಭಾವಿಸಿಬಿಟ್ಟಿದ್ದರು.

ಈಗ ಮರುಓದಿಕೆಯಿಂದ ಇಲ್ಲಿರುವ ಮಲ್ಲಪ್ಪನಿಗೆ 'ಮಣಿಹದ' ಎಂಬ ವಿಶೇಷಣ ಇರುವುದು ಕಂಡುಬರುತ್ತದೆ. ಇದರಿಂದ ದಳವಾಯಿಯಾಗಿದ್ದವನಲ್ಲ ಎಂಬ ಅಂಶ ಸ್ಪಷ್ಟ. ಅಷ್ಟೇ ಅಲ್ಲ, ಅರ್ಚಕನು ದೇವರ ಆಸ್ತಿಯನ್ನು ಮಾರಿದ್ದು ಈ ವ್ಯಕ್ತಿಗೆ ಎಂಬುದೂ ಸ್ಪಷ್ಟ.

ಇಲ್ಲಿ 'ಮಣಿಹ' ಎಂಬ ಶಬ್ದವನ್ನು ಕುರಿತು ಸ್ವಲ್ಪ ಪ್ರಸ್ತಾಪಿಸುವುದು ಅಗತ್ಯ. ಇದಕ್ಕೆ 'ಮಣೆಯ' ಎಂಬ ಇನ್ನೊಂದು ರೂಪವೂ ಇದೆ. ಪ್ರಾದೇಶಿಕವಾಗಿ ಇದರ ಒಂದು ಅರ್ಥ ಭೂಕಂದಾಯ ಎಂದಿದ್ದರೆ ಇನ್ನೊಂದು ಅರ್ಥ ದೇವಾಲಯ ಮಠ ಅರಮನೆ ಸುಂಕದ ಕಟ್ಟೆ ಮುಂತಾದವುಗಳ ಉಸ್ತುವಾರಿಯನ್ನು ನೋಡಿಕೊಳ್ಳುವ ಅಧಿಕಾರ ಅಥವಾ ಪಾರುಪತ್ಯ ಎಂದಿದೆ. ಮಣಿಹದ (ಅಥವಾ ಮಣೆಯದ) ಕರ್ತವ್ಯವನ್ನು ನಿರ್ವಹಿಸುವವನೇ 'ಮಣಿಹಗಾರ' ಅಥವಾ 'ಮಣೆಯಗಾರ', ಈ ಪದಕ್ಕೆ ಮಣಿಹಗಾರ, ಮಣೆಯಗಾರ, ಮಣೆಗಾರ ಮುಂತಾದ ಬೇರೆ ಬೇರೆಯ ರೂಪಗಳೂ ಇವೆ. ಹೀಗಾಗಿ ಈ ಶಾಸನದಲ್ಲಿ ಬರುವ ಮಣಿಹದ ಮಲ್ಲಪ್ಪ ಒಬ್ಬ ಮಣಿಹಗಾರನೆಂಬುದು ಸ್ಪಷ್ಟ. ಅವನು ಇದೇ ವೀರಭದ್ರ ದೇವಸ್ಥಾನ ಅಥವಾ ಬೇರಾವುದಾದರೂ ಇನ್ನೊಂದು ದೇವಸ್ಥಾನದ ಉಸ್ತುವಾರಿ ನಿರ್ವಹಿಸುತ್ತಿದ್ದವನಿರಬಹುದು; ಅಥವಾ ಯಾವುದಾದರೂ ಸುಂಕದ ಕಟ್ಟೆಯ ಅಧಿಕಾರಿಯಾಗಿದ್ದವನೋ ಇಲ್ಲವೆ ಭೂಕಂದಾಯ ಸಂಗ್ರಹ ಮಾಡುತ್ತಿದ್ದ ಸ್ಥಾನದವನೋ ಇದ್ದಿರಬಹುದು. ಅವನ ಮಣಿಹ ಯಾವುದಕ್ಕೆ ಸಂಬಂಧಿಸಿದ್ದು ಎಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟ.

ಚಿತ್ರದುರ್ಗ ಹಾಗೂ ದಾವಣಗೆರೆ ಜಿಲ್ಲೆಗಳ ಗ್ರಾಮಾಂತರ ಪ್ರದೇಶದಲ್ಲಿ 'ಮಣೆವು' ಎಂದು ಕರೆಯುವ ಜನಪದರ ಆಚರಣೆಯೊಂದಿದೆ. 'ಮಣಿಹ'ದ ಮತ್ತೊಂದು ರೂಪವೇ ಈ 'ಮಣೇವು' ಎಂದು ಕಾಣುತ್ತದೆ. ಇದನ್ನು 'ಭೂತನ ಸೇವೆ' ಎಂದೂ ಕರೆಯುತ್ತಾರೆ. ಇದೊಂದು ಬಗೆಯ ಹರಕೆಯ ಸೇವೆಯೂ ಹೌದು. ಮನುಷ್ಯರು ಕೆಂಪು ಮತ್ತು ಕಪ್ಪು ಬಣ್ಣದ ಭೂತದ ಹಲಗೆಗಳನ್ನು 'ಹಿಡಿ'ದಾಗ ಆವೇಶವೇರಿ ಅವರ ಮೈಯಲ್ಲಿ ಭೂತದ ಆವಾಹನೆಯಾಗುತ್ತದೆಂದೂ, ಆ 'ಭೂತ'ಗಳು ಹಸಿದು 'ಹಾಹಾಕರಿಸಿ' ಬೆನ್ನಟ್ಟಿ ಬರುವಾಗ, ಕತ್ತರಿಸಿಟ್ಟುಕೊಂಡ ಬೆಲ್ಲ ಬಾಳೇಹಣ್ಣುಗಳನ್ನು ಆಗ ಅವಕ್ಕೆ 'ಶಾಂತಿ'ಯಾಗುವಷ್ಟು ತಿನ್ನಿಸಬೇಕೆಂದೂ ಅದರಿಂದ ಒಳ್ಳೆಯದಾಗುತ್ತದೆಂದೂ ಜನಪದರಲ್ಲಿ ದಟ್ಟವಾದ ನಂಬಿಕೆ ಇದೆ. ಪ್ರಸ್ತುತ ಶಾಸನದ ಮಲ್ಲಪ್ಪ ಇಂಥ ಮಣೇವಿನ ಸೇವೆಯಲ್ಲಿ ಭೂತದ ಹಲಗೆ ಹಿಡಿಯುತ್ತಿದ್ದವನೋ ಅಥವಾ ಭೂತದ ಹಲಗೆ ಹಿಡಿದವರಿಗೆ ಬೆಲ್ಲಬಾಳೇಹಣ್ಣು ತಿನ್ನಿಸುತ್ತಿದ್ದವನೋ ಇದ್ದು, ಆ ಕಾರಣಕ್ಕೆ ಮಣಿಹದ ಸೇವೆಯವನು ಎಂದು ಗುರ್ತಿಸಲ್ಪಡುತ್ತಿದ್ದ ವ್ಯಕ್ತಿ ಆಗಿದ್ದಿರಬಹುದೇ? ಎಂದೂ ಒಂದು ಸಂದೇಹವೂ ಬರುತ್ತದೆ. ಒಟ್ಟಿನಲ್ಲಿ ಈ ಬಗ್ಗೆ ನಿರ್ದಿಷ್ಟವಾಗಿ ಏನು ಹೇಳುವುದು ಸದ್ಯಕ್ಕೆ ಕಷ್ಟವಾಗಿದೆ.

(೬) ಶ್ರೀ ರೈಸ್ ಅವರು, ತಾತ್ಪರ್ಯದಲ್ಲಿ, ಈ ಪ್ರಕರಣ ಕುರಿತು ಏನು ಮಾಡಬೇಕೆಂಬ ಬಗ್ಗೆ ಅಪ್ಪಣೆ ಕೊಟ್ಟದ್ದು ದಳವಾಯಿ

ಮಲ್ಲಪ್ಪನಿಗೆ ಎಂದು ಹಿಂದೆಯೇ ನೋಡಿದ್ದೇವಷ್ಟೆ. ಮರುಓದಿಕೆಯಿಂದ ಆ ದಳವಾಯಿಯಾಗಿದ್ದವನು, ಅವನಲ್ಲ, ಗಿರಿಯಪ್ಪ ಎಂಬ ಅಂಶ ೮ನೆಯ ಪಂಕ್ತಿಯಿಂದ ಸ್ಪಷ್ಟವಾಗುತ್ತದೆ. ಇದಲ್ಲದೆ ೮ ಮತ್ತು ೯ನೆಯ ಪಂಕ್ತಿಗಳಿಂದ ಈ ಶಾಸನವನ್ನು ಹಾಕಿಸಲಾದದ್ದು ದಳವಾಯಿ ಗಿರಿಯಪ್ಪನ ಅಪ್ಪಣೆಯಂತೆ ಎಂಬುದೂ ವ್ಯಕ್ತವಾಗುತ್ತದೆ.

(೭) 'ಮಣಿಹದ ಮಲ್ಲಪ್ಪ' ನಲ್ಲದೆ ಮಲ್ಲಣ್ಣಾ ಎಂಬ ಇನ್ನೊಬ್ಬ ವ್ಯಕ್ತಿಯ ಹೆಸರೂ ಶಾಸನದಲ್ಲಿದೆ (ಪಂಕ್ತಿ೯). ಶ್ರೀ ರೈಸ್ ಅವರ (ಕನ್ನಡ ಲಿಪಿಯ) ಪಾಠದಲ್ಲಿ ಈ ಹೆಸರಿಲ್ಲ. ಇದಲ್ಲದೆ ಇನ್ನು ಕೆಲವು ಹೆಸರುಗಳೂ ಇಲ್ಲ. ಪ್ರಸ್ತುತ ಮಲ್ಲಣ್ಣಾ ಒಬ್ಬ ಸೇನಭೋಗನಾಗಿದ್ದನೆಂದೂ ಅದೇ ಪಂಕ್ತಿಯಲ್ಲಿ ಹೇಳಿದೆ.

(೮) ವೀರಭದ್ರ ದೇವರ ಮಹೋತ್ಸವ ಮತ್ತು ನೈವೇದ್ಯ ಇತ್ಯಾದಿ ಶಬ್ದಗಳು ಶಾಸನಪಾಠದಲ್ಲಿ ಇರುವಂತೆ ಶ್ರೀ ರೈಸ್ ಅವರ ಓದುವಿಕೆ ಇದೆ. ಅಲ್ಲದೆ ಅರ್ಚಕನಿಂದ ತೆಗೆದುಕೊಂಡ ದಂಡದ ಹಣವನ್ನು ದೊರೆ ಇಮ್ಮಡಿ ಮೆದಕೇರಿನಾಯಕನು ವೀರಭದ್ರದೇವರ ಮಹೋತ್ಸವದಲ್ಲಿ ನೈವೇದ್ಯ ಸಮರ್ಪಣೆಗಾಗಿ ನೀಡಿದ ಎಂದೂ ಶ್ರೀ ರೈಸರ ತಾತ್ಪರ್ಯದಲ್ಲಿದೆ. ಅವರು ಕೊಟ್ಟಿರುವ ಪಾಠದಲ್ಲಿ ಶಬ್ದಗಳು ಆ ಅರ್ಥ ಬರುವಂತೆ ವಾಕ್ಯ ರೂಪದಲ್ಲೇನೂ ಇಲ್ಲ, ಆದರೂ ಸಂದರ್ಭ ನೋಡಿ ಒಂದು ಅಂದಾಜಿನಿಂದ ಅವರು ತಾತ್ಪರ್ಯ ಕೊಟ್ಟಿದ್ದಾರೆನ್ನುವುದು ಸ್ಪಷ್ಟ.

ಈಗ ಮರುಪರಿಶೀಲನೆಯಿಂದ ದೊರೆತ ಪಾಠದಲ್ಲಿ ವೀರಭದ್ರ ದೇವರ ಹೆಸರು ಇರುವುದಾದರೂ, ಮಹೋತ್ಸವ ನೈವೇದ್ಯ ಈ ಯಾವ ಶಬ್ದಗಳೂ ಇಲ್ಲ. ಹೀಗಾಗಿ ದೊರೆಯು ದಂಡರ ಹಣವನ್ನು ಆ ದೇವರ ಮಹೋತ್ಸವದಲ್ಲಿ ನೈವೇದ್ಯ ಸಮರ್ಪಣೆಗೆ ನೀಡಿದನೆನ್ನುವ ಮಾತಿಗೆ ನೆಲೆಯೇ ಇಲ್ಲವಾಗುತ್ತದೆ.

(೯) ಅರ್ಚಕನು ಮಾಡಿದ ತಪ್ಪಿಗೆ ಅವನಿಂದ ತಪ್ಪುದಂಡ ವಸೂಲಿ ಮಾಡಿದುದಕ್ಕೆ ಈ ಶಾಸನ ಹಾಕಿಸುವಾಗ್ಗೆ ಹಲವಾರು ವ್ಯಕ್ತಿಗಳು ಸಾಕ್ಷಿಗಳಾಗಿದ್ದುದು ಶಾಸನದಿಂದ ತಿಳಿಯುತ್ತದೆ. ಶ್ರೀ ರೈಸರ ಪಾಠದಲ್ಲಿ ಅಲ್ಲಲ್ಲಿ ಅಕರಗಳು ಮುಕ್ಕಾಗಿರುವಂತೆ ತೋರಿಸಿರುವುದರಿಂದ ಎಲ್ಲ ಸಾಕ್ಷಿಗಳ ಹೆಸರೂ ಅಲ್ಲಿ ಕಾಣಸಿಗುವುದಿಲ್ಲ. ಅಷ್ಟೇ ಅಲ್ಲ, ಅಲ್ಲಿ 'ಬಸವಂಣ' ಎಂಬ ಹೆಸರಿಗೆ 'ಗವುಡರ' ಎಂಬ ವಿಶೇಷಣ ಇರುವಂತೆ ಮತ್ತು 'ಪದುಮಂಣ' ಎಂಬ ಇನ್ನೊಬ್ಬ ವ್ಯಕ್ತಿಯ ಹೆಸರಿರುವಂತೆ ತಿಳಿವಳಿಕೆಯಾಗುತ್ತದೆ.

ಆದರೆ ಮರುಓದಿಕೆಯಿಂದ ಸಾಕ್ಷಿಗಳ ಹೆಸರುಗಳೆಲ್ಲವೂ ಸ್ಪಷ್ಟವಾಗಿ, ವಿಶೇಷಣ ಸಹಿತವಾಗಿ ದೊರೆಯುತ್ತವೆ. ಅವನ್ನು ಮರುಓದಿಕೆಯ ಪಾಠದಲ್ಲಿ ಗಮನಿಸಬಹುದು. 'ಬಸವಣ್ಣಾ'ನಿಗೆ 'ಗವುಡರ' ಎಂಬುದರ ಬದಲಿಗೆ 'ಬಡಗೇರ' ಎಂಬ ವಿಶೇಷಣವಿದೆ. ಹಾಗೆಯೇ ಪದುಮಂಣ ಎಂಬುದರ ಬದಲಿಗೆ ಪರುಮಣ್ಣಾ ಎಂಬ ಹೆಸರಿದೆ. ಜೊತೆಗೆ ಅವನು ಕಮ್ಮಾರ ಎಂಬುದೂ ಕಂಡು ಬರುತ್ತದೆ. ಇದಲ್ಲದೆ ಇವರೊಟ್ಟಿಗೆ ಗೌಡರ ಅಚ್ಚಣ್ಣಾ, ಸೇನಭೋಗ ಮಲ್ಲಣ್ಣಾ, ಅಕ್ಕಸಾಲೇರ ಜೋಗಣ್ಣಾ, ಗಣಾಚಾರಿ ದೊಡ್ಡಣ್ಣಾ, ತಮ್ಮಡಿ ಚೆನ್ನಣ್ಣಾ, ಪೂಜಾರಿ ತಿಮ್ಮದಾಸ, ಸಿದ್ದೇದೇವರ ಪೂಜಾರಿ ಚೋಳೊಡೆಯರು, ತಳವಾರ ಓಬಯ್ಯ, ಮೂಲಕರ್ತ್ರವಿನ ಓಬಯ್ಯ ಇವರಲಾ ಇತರ ಸಾಕ್ಷಿಗಳಾಗಿದ್ದಾರೆ. ಇದರಿಂದ ಅಂದಿನ ಕಾಲದಲ್ಲಿ ಇಂಥ ತಪ್ಪುಗಳಿಗೆ ಅಥವಾ ದುಷ್ಕೃತ್ಯಗಳಿಗೆ ದಂಡವಿಧಿಸುವುದು ಮುಂತಾದ ಸಂದರ್ಭಗಳಲ್ಲಿ ಗ್ರಾಮದ ೧೨ ಜನ ಕೈವಾಡದವರು ಮತ್ತು ಯಾವೆಲ್ಲ ಪ್ರಮುಖರು ಸಾಕ್ಷಿಗಳಾಗಿ ಹಾಜರಿರುತ್ತಿದ್ದರು ಎಂಬ ನ್ಯಾಯಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ವಿಚಾರ ಕಣ್ಣಿಗೆ ಕಟ್ಟುತ್ತದೆ.

ಅನೇಕ ಕಡೆ ವೀರಭದ್ರ ದೇವರನ್ನು ಪೂಜಿಸುವವರು ಅದಕ್ಕೆ ನಡೆದುಕೊಳ್ಳುವವರು ವಿಶ್ವಕರ್ಮ ಜನಾಂಗದವರು. ಇಲ್ಲೂ ಸಹ ಸಾಕ್ಷಿಗಳಲ್ಲಿ ಮೂವರು ವಿಶ್ವಕರ್ಮರೆಂಬುದು ಸ್ಪಷ್ಟವಾಗಿ ಕಾಣುತ್ತದೆ. ಅವರಲ್ಲಿ ಒಬ್ಬ ಬಡಗೇರ ಬಸವಣ್ಣಾ, ಇನ್ನೊಬ್ಬ ಕಮ್ಮಾರ ಪರುಮಣ್ಣಾ, ಮತ್ತೊಬ್ಬ ಅಕ್ಕಸಾಲೇರ ಜೋಗಣ್ಣಾ. ವೀರಭದ್ರದೇವರ ಅರ್ಚಕನಾಗಿದ್ದ ಉದ್ದಂಡನೂ ವಿಶ್ವಕರ್ಮ ಜನಾಂಗಕ್ಕೆ ಸೇರಿದವನೋ ಹೇಗೋ ಸ್ಪಷ್ಟವಿಲ್ಲ. ಹಾಗೆಯೇ ಸಾಕ್ಷಿಗಳಲ್ಲಿ ಒಬ್ಬನಾದ ತಮ್ಮಡಿ ಚೆನ್ನಣ್ಣಾ ಕೂಡಾ ಅದೇ ಜನಾಂಗದವನೊ ಬೇರೆಯೋ ಸ್ಪಷ್ಟವಿಲ್ಲ. ಹಾಗೆಯೇ ಸಾಕ್ಷಿಗಳಲ್ಲಿ ಒಬ್ಬನಾದ ತಮ್ಮಡಿ ಚೆನ್ನಣ್ಣಾ ಕೂಡಾ ಅದೇ ಜನಾಂಗದವನೊ ಸ್ಪಷ್ಟವಿಲ್ಲ.

**ಮರು ಓದಿಕೆಯ ಪಾಠದ ತಾತ್ಪರ್ಯ**

ಮರು ಓದಿಕೆಯ ದೊರೆತ ಪಾಠದ ತಾತ್ಪರ್ಯವನ್ನು ಈಗ ಹೀಗೆ ಕೊಡಬಹುದು: ಶಾಲಿವಾಹನ ಶಕವರ್ಷ ೧೫೩೧ನೆಯ ಸೌಮ್ಯ ಸಂವತ್ಸರದ ಆಶ್ವೀಜ ಶುದ್ಧ ೬ ರ ಆದಿತ್ಯವಾರ, (ಚಿತ್ರದುರ್ಗದ ದೊರೆ) ಇಮ್ಮಡಿ ಮೆದಕೇರಿ ನಾಯಕರು ಹುಲ್ಲೂರು ಗ್ರಾಮದ ವೀರಭದ್ರ ದೇವರ ತಮ್ಮಡಿಯಾದ ಉದ್ದಂಡನಿಂದ ಗ ೨೪ ಹಣವನ್ನು ದಂಡವಾಗಿ ತೆಗೆದುಕೊಂಡರು. ಏಕೆಂದರೆ, ಇ ಉದ್ದಂಡನು ತನಗೆ ಗತಿ ಇಲ್ಲದಂತಾದ್ದಕ್ಕೆ ದೇವರಿಗೆ ಸೇರಿದ್ದ ಹೊಲ ಮನೆ ಗದ್ದೆ ಈ ಸ್ವತ್ತನ್ನು ಮಣಿಹದ ಮಲ್ಲಪ್ಪ ಎಂಬುವನಿಗೆ ಗ ೨೬ ವರಹಕ್ಕೆ ಮಾರಿದ್ದನು. ಅವನು ಹೀಗೆ ಮಾಡಿದ್ದ ತಪ್ಪಿಗೆ ದಂಡತೆತ್ತದ್ದಕ್ಕೆ ದಳವಾಯಿ ಗಿರಿಯಪ್ಪನ ಅಪ್ಪಣೆಯಂತೆ ಈ ಶಾಸನವನ್ನು ಹಾಕಿಸಲಾಗಿದೆ. ಇದಕ್ಕೆ ಸಾಕ್ಷಿಗಳು ಗೌಡರ ಅಚ್ಚಣ್ಣಾ ಸೇನಭೋಗ ಮಲ್ಲಣ್ಣಾ, ಬಡಗೇರ ಬಸವಣ್ಣಾ, ಕಮ್ಮಾರ ಪರುಮಣ್ಣಾ, ಅಕ್ಕಾಸಾಲೇರ ಜೋಗಣ್ಣಾ ಗಣಾಚಾರಿ ದೊಡ್ಡಣ್ಣಾ, ತಮ್ಮಡಿ ಚೆನ್ನಣ್ಣಾ, ಪೂಜಾರಿ ತಿಮ್ಮದಾಸ, ಸಿದ್ದೇದೇವರ ಪೂಜಾರಿ ಚೋಳ ಒಡೆಯರು, ತಳವಾಡ ಓಬಯ್ಯ, ಮೂಲಕರ್ತ್ರವಿನ ಓಬಯ್ಯ ಇವರುಗಳು. ಇಲ್ಲಿಯ 'ಸಿದ್ದೇದೇವರ ಪೂಜಾರಿ' ಬಹುಶಃ ಚಿತ್ರದುರ್ಗದ ಬೆಟ್ಟದ ಮೇಲಿರುವ ಸಂಪಿಗೆ ಸಿದ್ದೇಶ್ವರ ದೇವರ ಪೂಜಾರಿ ಇದ್ದಿರಬಹುದು. ಹಾಗೆಯೇ 'ಮೂಲಕರ್ತ್ರವಿದೆ' ಎಂದಿರುವಲ್ಲಿ ಯಾವ ಮೂಲಕರ್ತ್ರವಿನ ಎಂಬ ಅಂಶ ಸ್ಪಷ್ಟವಾಗು

ವುದಿಲ್ಲ. ಕಡೆಯಲ್ಲಿ ಶ್ರೀಹರಿಹರಾದಿಗಳು ಎಂದು ದೇವರುಗಳ ಹೆಸರನ್ನು ಸರ್ವರ ಒಪ್ಪಿತವೆಂಬಂತೆ ಹಾಕಲಾಗಿದೆ.

**ಉಪಸಂಹಾರ**

ಅರ್ಚಕನಿಗೆ ಜೀವನ ನಡೆಸಲು ಎಷ್ಟೇ ಮತ್ತು ಎಂಥದೇ ಇದ್ದರೂ, ತಾನು ಪೂಜಿಸುವ ದೇವರಿಗೆ ಸ್ವತ್ತನ್ನು ತನ್ನ ಸ್ವಂತ ಸ್ವತ್ತೆಂಬಂತೆ ಮಾರುವುದು ಸರಿ ಎನಿಸುವ ಸಂಗತಿಯಿಲ್ಲ. ಅದೊಂದು ಗುರುತರವಾದ ತಪ್ಪೇ. ಅಂಥ ತಪ್ಪೊಂದು ಘಟಿಸಿದ್ದು ಗಮನಕ್ಕೆ ಬಂದಾಗ ಯಾವುದೇ ಪ್ರಭುತ್ವವಿದ್ದರೂ ಅದು ಗಂಭೀರ ಕ್ರಮವನ್ನು ಕೈಕೊಳ್ಳಲೇಬೇಕಾಗುತ್ತದೆ. ತಪ್ಪು ಮಾಡಿದ್ದರ ಬಗ್ಗೆ ಸೂಕ್ತ ವಿಚಾರಣೆ ಮತ್ತು ದಂಡನೆ ಇವನ್ನು ಮಾಡಲೇಬೇಕಾಗುತ್ತದೆ. ಅದೆಲ್ಲ ಆದ ಮೇಲೆ ಹಾಕಿಸಿದ ಶಾಸನ ಇದು ಎಂದು ಸಹಜವಾಗಿ ಊಹಿಸ ಬಹುದು. ದೇವರ ಸ್ವತ್ತನ್ನು ಮಾರಿದಂತಹ ಗುರುತರವಾದ ತಪ್ಪಿಗೆ ಗುರುತರವಾದ ದಂಡನೆಯನ್ನೇ ವಿಧಿಸ ಬೇಕಾಗಿದ್ದರೂ, ಇಲ್ಲಿ ತುಂಬ ಮಾನವೀಯವಾಗಿ ದಂಡ ವಿಧಿಸಿ ದಂತೆ ಕಂಡು ಬರುತ್ತದೆ. ಏಕೆಂದರೆ ಅಂಥ ದೊಡ್ಡ ತಪ್ಪಿಗೆ ಗ ೨೪ ಹಣದ ದಂಡ ಎಂದರೆ ಅದು ತುಂಬ ಕಡಮೆಯೇ. ಅಂದರೆ ಕನಿಷ್ಠ ದಂಡ ಗ ೧೨ ಹಣದ ಎರಡರಷ್ಟನ್ನು ಮಾತ್ರ ಇಲ್ಲಿ ವಿಧಿಸಿದೆ. ಇದನ್ನು ನೋಡಿದರೆ, ಅರ್ಚಕನು ಹಾಗೆ ಮಾಡಲು ಅವನ ಕಠೋರ ಬಡತನದ ಪರಿಸ್ಥಿತಿ ಕಾರಣ ಎಂಬುದನ್ನು ಮನಸ್ಸಿಗೆ ತಂದುಕೊಂಡು, ಪ್ರಕರಣವನ್ನು ಸಾಕಷ್ಟು ಉದಾರವಾಗಿಯೆ ನೋಡಿ, ಈ ಅಲ್ಪ ದಂಡವನ್ನು ವಿಧಿಸಿದಂತೆ ಕಾಣುತ್ತದೆ. ಇಷ್ಟು ದಂಡ ಹಾಕದೆ ಹೋದರೆ, ದೇವರ ಆಸ್ತಿಯನ್ನು ದುರುಪಯೋಗ ಮಾಡಿಕೊಳ್ಳುವವರ ಸಂಖ್ಯೆ ಹೆಚ್ಚಲು ಕಾರಣವಾಗಬಹುದು; ಹಾಗಾದಲ್ಲಿ ಆಡಳಿತ, ಕಾನೂನು ಪಾಲನೆ ಮತ್ತು ಶಾಂತಿ - ಸುವ್ಯವಸ್ಥೆಯನ್ನು ಕಾಪಾಡಿಕೊಳ್ಳುವುದು ಕಷ್ಟವೂ ಆಗುತ್ತದೆ. ಇಲ್ಲಿ ಮತ್ತೊಂದು ವಿಚಾರವೆಂದರೆ, ಮೇಲೆ ತಿಳಿಸಿದ ಅಲ್ಪ ದಂಡವನ್ನು ಕೊಡಲು ಕೂಡಾ ಆ ಅರ್ಚಕನಿಗೆ ಸಾಧ್ಯವಾಗು ವಂತಿತ್ತೋ ಹೇಗೋ ಎಂದು ಅನುಮಾನವು ಆಗುತ್ತದೆ. ಅವನ ಸ್ಥಿತಿಗೆ ಏನಿದ್ದರೂ ಅವನಿಂದ ದಂಡವನ್ನು ವಸೂಲಿಮಾಡಲಾಗಿದೆ. ಚಿತ್ರದುರ್ಗ ಪಾಳೆಯಗಾರರ ನ್ಯಾಯಪದ್ಧತಿ, ಆಡಳಿತ ಕ್ರಮ ಹೇಗಿತ್ತೆಂಬ ಬಗ್ಗೆ ಹೇಳದಿದ್ದುದನ್ನು ಈ ಒಂದು ಶಾಸನ ನೀಡುತ್ತದೆ, ಎನ್ನಬಹುದು.

ಇಲ್ಲಿ ಮತ್ತೊಂದು ವಿಚಾರವೂ ಇದೆ. ಅರ್ಚಕನು ಮಾರಿದ್ದು ದೇವರ ಸ್ವತ್ತು ಎಂಬುದು ಕೊಂಡವನಿಗೆ ತಿಳಿದಿರಲಿಲ್ಲವೆ? ಅಥವಾ ತಿಳಿದೂ ದುರ್ಲಾಭಕ್ಕೆ ಆಸೆ ಪಟ್ಟಿರಬಹುದೆ? ದೇವರ ಸ್ವತ್ತನ್ನು ಕೊಂಡವನೂ ಗುರುತರವಾದ ತಪ್ಪಿನಲ್ಲಿ ಭಾಗಿಯಾದಂತಲ್ಲವೆ? ಹಾಗಿದ್ದರೆ ಅವನ ಮೇಲೆ ಏನು ಕ್ರಮ ಕೈಕೊಳ್ಳಲಾಯಿತು? ದೇವರ ಸ್ವತ್ತು ಆ ಮೇಲೆ ದೇವರಿಗೆ ವಾಪಸು ಬಂತೆ? ಇಂಥ ತಪ್ಪು ಮಾಡಿದ ಅರ್ಚಕನನ್ನು ಅದೇ ಅರ್ಚಕ ಸ್ಥಾನದಲ್ಲಿಯೇ ಮುಂದು ವರಿಸಲಾಯಿತೆ? ಅಥವಾ ಅವನಿಗೆ ಅದನ್ನು ತಪ್ಪಿಸಿ ಬೇರೆಯವರಿಗೆ ಒಪ್ಪಿಸಲಾಯಿತೆ?- ಇಂಥ ಅನೇಕ ಪ್ರಶ್ನೆಗಳು ಬರುತ್ತವೆ. ದೇವರ ಸ್ವತ್ತನ್ನು ಕೊಂಡುಕೊಂಡವನು ವಿಚಾರಣೆಯ ಮತ್ತು ತೀರ್ಪಿನ ನಂತರ ಅದೆಲ್ಲವನ್ನೂ ಹಿಂತಿರುಗಿಸಿರಬಹುದು ಅಥವಾ ಆ ಆಸ್ತಿ ಯನ್ನು ಅವನಿಂದ - ಅವನ ಹಕ್ಕು ಅಥವಾ ಒಡೆತನ ರದ್ದು ಪಡಿಸಿ - ಕಿತ್ತುಕೊಂಡಿರಬಹುದು. ಅವನು ಆ ಸ್ವತ್ತಿಗಾಗಿ ತೆತ್ತಿದ್ದ ಹಣ ಮಾತ್ರ ಅವನಿಗೆ ಪ್ರಾಯಃ ವಾಪಸು ಬಂದಿರಲಾರದೆಂದು ಭಾವಿಸಿದರೆ, ಅವನಿಗೆ ಆದ ದಂಡನೆ ಅದೇ ಎಂದು ತಿಳಿಯ ಬಹುದು. ಇನ್ನು ಸಾಮಾನ್ಯವಾಗಿ ಇಂಥ ಗುರುತರವಾದ ತಪ್ಪು ಮಾಡಿದವನಿಗೆ ಪೂಜಾರಿಕೆಯ ಹಕ್ಕು ಮುಂದುವರಿದಿರಲಾರದೆಂದೇ ಕಾಣುತ್ತದೆ. ಅವನ ಅರ್ಚಕತನದ ಹಕ್ಕನ್ನು ರದ್ದುಪಡಿಸಿ ಪ್ರಾಯಃ ಬೇರೊಬ್ಬರಿಗೆ ಅದನ್ನು ನೀಡಿರಬಹುದು. ಪ್ರಸ್ತುತ ಶಾಸನದಲ್ಲಿ ಸಾಕ್ಷಿಗಳ ಪಟ್ಟಿಯಲ್ಲಿ ಬರುವ ತಮ್ಮಡಿ ಚೆನ್ನಣ್ಣನಿಗೇನಾದರೂ ಆ ಹಕ್ಕನ್ನು ನೀಡಿದ್ದಿರಬಹುದೆ? ಎಂಬ ಸಂದೇಹವೊಂದು ಮಾಡುತ್ತದೆ. ಈ ಎಲ್ಲ ಅಂಶಗಳನ್ನು ಶಾಸನದಲ್ಲಿ ದಾಖಲಿಸಿದ್ದರೆ, ಪ್ರಭುತ್ವ ತೆಗೆದುಕೊಂಡ ಗಂಭೀರ ಕ್ರಮದ ಪೂರ್ಣ ವಿವರ ಲಭ್ಯವಾದಂತಾ ಗುತ್ತಿತ್ತು. ಚಿಕ್ಕ ಹರಹುಳ್ಳ ಕಲ್ಲಿನ ಮೇಲ್ಮೈಯಲ್ಲಿ ಆ ಎಲ್ಲ ಅಂಶಗಳನ್ನು ದಾಖಲಿಸಲು ಸಾಧ್ಯವಾಗದೆ ಕೇವಲ ಮುಖ್ಯವಾದ - ದೇವರ ಆಸ್ತಿಯನ್ನು ಮಾಡಿದ್ದಕ್ಕೆ ತಪ್ಪು ದಂಡ ವಸೂಲಿ ಮಾಡಿದ - ಒಂದು ಅಂಶಕ್ಕೆ ಮಾತ್ರ ಪ್ರಾಶಸ್ತ್ಯ ಕೊಟ್ಟು ಅಷ್ಟನ್ನೇ ದಾಖಲಿಸಿ ಉಳಿದದ್ದನ್ನು ಮೌಖಿಕವಾಗಿ ತಿಳಿಸಿ ಜಾರಿಮಾಡಿರಬೇಕೆಂದು ಕಾಣುತ್ತದೆ.

ಈಗಾಗಲೇ ಪ್ರಕಟವಾಗಿರುವ ಕೆಲವು ಶಾಸನಗಳಲ್ಲಿ ಪಾಠ ಗಳು ಎಷ್ಟೊಂದು ನ್ಯೂನತೆಯಿಂದ ಕೂಡಿವೆ ಮತ್ತು ಕಾಲದ ಪೂರ್ಣ ನೈಜ ಚಿತ್ರ ಅಥವಾ ವಾಸ್ತವಿಕ ವಿವರ ಎಷ್ಟೊಂದು ಎರವಾಗಿವೆ, ಎಂಬುದಕ್ಕೆ ಈ ಶಾಸನವೂ ಒಂದು ನಿದರ್ಶನ. ಇದರಿಂದ ಶಾಸನಗಳ ಮರು ಪರಿಶೀಲನೆಯ ಕಾರ್ಯ ಅತ್ಯಂತ ಅವಶ್ಯಕವಾಗಿ ಆಗಬೇಕಾದ್ದು ಎಂಬುದಕ್ಕೆ ಈ ಶಾಸನವೂ ಒಂದು ತೋರು ಬೆರಳಾಗಿದೆ ಎನ್ನಬಹುದು.

(ಈ ಶಾಸನದ ಮರುಪರಿಶೀಲನೆಗಾಗಿ ಹುಲ್ಲೂರಿಗೆ ನಾನು ಹೋದಾಗ ಜೊತೆಯಲ್ಲಿ ಬಂದು ಸಹಕರಿಸಿದವರು ಚಿತ್ರದುರ್ಗದ ಶ್ರೀ ಶಂಕರ ಎಸ್. ಅಥಣಿ, ಶ್ರೀ ಝಡ್. ಮಹ್ಮದ್ ಜಪ್ರುಲ್ಲಾ, ಶ್ರೀ ಟಿ.ಎಸ್. ಮಂಜಣ್ಣ ಮತ್ತು ಹುಲ್ಲೂರಿನ ಗೌಡರ ಸಿದ್ದಜ್ಜ ಇವರು. ಇವರಿಗೆ ನನ್ನ ಕೃತಜ್ಞತೆಗಳು.)



ಡಾ. ಮಹಾದೇವಿ*

# ಮೈಸೂರು ಒಡೆಯರ ಕಾಲದಲ್ಲಿ ಕ್ರೀಡಾ - ಮನರಂಜನೆ

## (ಕ್ರಿ.ಶ. ೧೬೧೦-೧೭೬೧)

ಪ್ರಾಚೀನ ಕಾಲದಿಂದಲೂ ನಮ್ಮ ಜನತೆ ಬಿಡುವಿನ ವೇಳೆಯನ್ನು ಜೀವನದ ಉಲ್ಲಾಸಕ್ಕೆ ಹಾಗು ವಿಕಾಸಕ್ಕೆ ಬಳಸಿಕೊಳ್ಳುತ್ತಿದ್ದ ಮಾಧ್ಯಮವು ಕ್ರೀಡೆಯ ವಿವಿಧ ರೂಪಗಳಾಗಿದ್ದುವು. ವಿಶೇಷತಃ ಮೈಸೂರು ಅರಸರು ಮಲ್ಲಯುದ್ಧಕ್ಕೆ ನೀಡಿದ ಉತ್ತೇಜನ ಕೇವಲ ಪೌರುಷ ಪ್ರದರ್ಶನದ ಪ್ರೋತ್ಸಾಹದ ಸಂಕೇತವಾಗದೆ, ಜೀವನೋತ್ಸಾಹದ ಸಂಕೇತವೂ ಆಗಿತ್ತು. ವಿಜಯನಗರದ ಸಾಂಸ್ಕೃತಿಕ ವಾರಸುದಾರರಾಗಿ ಸಾಂಸ್ಕೃತಿಕ ಮಾಧ್ಯಮಗಳೆಲ್ಲವನ್ನು ಬಳಸಿ ಜನತೆಯ ಮನಸ್ಸು ಬುದ್ಧಿ ಹೃದಯಗಳಲ್ಲಿ ತುಂಬಿದರು; ತುಂಬಿಕೊಂಡರು. ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿಯೂ ಇವೆಲ್ಲ ಸಾಕ್ಷೀ ದೃಷ್ಟಿಯಿಂದ ವರ್ಣನೆಗೊಂಡಿರುವಲ್ಲಿ ಇತಿಹಾಸದ ಸ್ಪರ್ಶಗಳನ್ನು ದಟ್ಟವಾಗಿ ಪಡೆದುಕೊಂಡಿರುವುದು ಗಮನಾರ್ಹ.

ಯಾವುದೇ ಒಂದು ಸಾಮ್ರಾಜ್ಯದ ಸಾಂಸ್ಕೃತಿಕ ಇತಿಹಾಸವನ್ನು ಅವಲೋಕಿಸಿದಾಗ ಹತ್ತಾರು ಪಾರಂಪರಿಕ ಮುಖಗಳ ಪರಿಚಯದ ಚಿತ್ರಣ ನಮಗೆ ದೊರಕುತ್ತದೆ. ಅಂತಹ ಪಾರಂಪರಿಕ ಪರಿಚಯ ಚಿತ್ರಣಗಳಲ್ಲಿ ಮನೋರಂಜನಾ ವ್ಯವಸ್ಥೆಯೂ ಒಂದು. ಪ್ರಾಚೀನ ಕಾಲದಿಂದಲೂ ಜನರು ತಮ್ಮ ಬಿಡುವಿನ ವೇಳೆಯನ್ನು ಕಳೆಯಲು ಹಾಗೂ ಜೀವನ ಉಲ್ಲಾಸಗೊಳಿಸಿಕೊಳ್ಳಲು ಅನೇಕ ಹವ್ಯಾಸಗಳನ್ನು ಬೆಳೆಸಿಕೊಂಡು ಬಂದಿದ್ದಾರೆ. ಹೀಗೆ ತಮ್ಮ ಬಾಳಿನ ಬೇಸರಿಕೆಯನ್ನು ಕಳೆದುಕೊಂಡು ಜೀವನವನ್ನು ಹಗುರಾಗಿಸಲು ಜನರು ಕಂಡುಕೊಂಡ ಮನರಂಜನೆ ಸಾಧನಗಳಲ್ಲಿ ಕ್ರೀಡೆಯು ಒಂದು. ಸಾಮಾನ್ಯವಾಗಿ ಈ ಕ್ರೀಡಾ ಪಂದ್ಯಾವಳಿಗಳು ಹಬ್ಬ ಹರಿದಿನೋತ್ಸವಗಳು ಮತ್ತು ವಿಶೇಷ ಸಂದರ್ಭಗಳಲ್ಲಿ ನಡೆಯುತ್ತಿದ್ದವು.

ವಿಜಯನಗರ ಅರಸರ ಸಾಂಸ್ಕೃತಿಕ ಪರಂಪರೆಯನ್ನು ಮುಂದುವರೆಸುವ ನಿಜವಾದ ವಾರಸುದಾರರಾಗಿ ಪರಿಣಮಿಸಿದ ಮೈಸೂರು ಒಡೆಯರು ಸಾಹಿತ್ಯ ಕಲೆಗಳಿಗೆ ಆಶ್ರಯ ನೀಡಿದಂತೆ ಕ್ರೀಡೆಗಳಿಗೂ ಆಶ್ರಯ ಮತ್ತು ಪ್ರೋತ್ಸಾಹ ನೀಡಿ ಪೋಷಿಸಿದರು. ಈ ಕಾಲದ ಶಿಲ್ಪಕಲೆಗಳಲ್ಲಿ, ಸಾಹಿತ್ಯ ಕೃತಿಗಳಲ್ಲಿ ಮತ್ತು ವಿದೇಶಿಯರ ಬರವಣಿಗೆಗಳಲ್ಲಿ ಈ ವೈವಿಧ್ಯಮಯ ಕ್ರೀಡೆಗಳ ಬಗೆಗೆ ವರ್ಣನೆಗಳು ಕಂಡುಬರುತ್ತವೆ. ಮಲ್ಲಯುದ್ಧ, ಜಟ್ಟಿಗಳ ಕಾಳಗ, ಬೇಟೆ, ಬಿಲ್ಲುಗಾರಿಕೆ, ಕತ್ತಿವರಸೆ, ಅಶ್ವಾರೋಹಣ, ಗಜಾರೋಹಣ, ರಥಾರೋಹಣ ಮೊದಲಾದವು ಮೈಸೂರು ರಾಜಾಶ್ರಯದಲ್ಲಿ ಬೆಳೆದು ಬಂದ ಪ್ರಮುಖ ಕ್ರೀಡೆಗಳಾಗಿದ್ದವು. ಇವು ಶಕ್ತಿಸಾಹಸ ಪ್ರದರ್ಶನಗಳೂ ವ್ಯಾಯಾಮ ಕ್ರೀಡೆಗಳೂ ಹಾಗೂ ಜನಸಾಮಾನ್ಯರನ್ನು ಆಕರ್ಷಿಸುವ ಮನರುಂಜಕ ಕ್ರೀಡೆಗಳೂ ಆಗಿದ್ದವು. ಕೋಲಾಟ, ಬೊಂಬೆಯಾಟ, ದೊಂಬರಾಟ, ಬಯಲಾಟ, ಚೆಂಡಾಟ, ಜಲಕ್ರೀಡೆ, ಇಂದ್ರಜಾಲ, ಯಕ್ಷಗಾನ, ಉದ್ಯಾನವಿನೋದ, ಭರತನಾಟ್ಯ ಮೊದಲಾದವುಗಳೂ ಮೈಸೂರು ರಾಜಾಶ್ರಯದಲ್ಲಿ ಬೆಳೆದು ಬಂದ ಪ್ರಮುಖ ಕಲೆಗಳಾಗಿದ್ದವು. ಇವು ಸೌಮ್ಯ ಕ್ರೀಡಾ-ಮನರಂಜನೆಗಳಾಗಿದ್ದವು. ಚದುರಂಗ ಪಗಡೆಯಾಟಗಳು ಒಳಾಂಗಣ ಕ್ರೀಡೆಗಳಾದರೆ ಮೃಗಗಳ ಕಾಳಗ, ಪಕ್ಷಿಗಳ ಕಾಳಗ, ಜೂಜಾಡುವುದು ಇವು ಇತರ ಮನರಂಜನ ಕ್ರೀಡೆಗಳಾಗಿದ್ದವು. ಜನಪ್ರಿಯವಾಗಿ ಈ ಎಲ್ಲಾ ಕ್ರೀಡೆಗಳೂ ಒಡೆಯರ ಕಾಲದ ಜನಜೀವನದಲ್ಲಿ ಸ್ಥಾನ ಪಡೆದು ಇತ್ತೀಚಿನವರೆಗೂ ಅವು ರೂಢಿಯಲ್ಲಿದ್ದವು. ಕ್ರೀಡೆಗಳು ಜನರ ಮನೋಲ್ಲಾಸಪಡಿಸುವುದು ಮಾತ್ರವಲ್ಲ, ಕ್ರೀಡೆಯಲ್ಲಿ ಭಾಗವಹಿಸುವುದು ವ್ಯಾಯಾಮಕ್ಕೂ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುತ್ತಿದ್ದುದರಿಂದ ಅವರ ದೈಹಿಕ ಮತ್ತು ಮಾನಸಿಕ ವಿಕಸನಕ್ಕೂ ಪೂರಕವಾಗಿದ್ದವು.

* ಅಧ್ಯಾಪಕರು, ಇತಿಹಾಸ ಅಧ್ಯಯನ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು

ಸಾಮಾನ್ಯವಾಗಿ ಕ್ರೀಡಾ-ಮನರಂಜನೆಗಳು ಶ್ರೀರಂಗಪಟ್ಟಣ ದಲ್ಲಿ ವೈಭವದಿಂದ ನಡೆಸಲಾಗುತ್ತಿದ್ದ ಮಹಾನವಮಿ ಉತ್ಸವ ಮತ್ತು ಅರಮನೆಯಲ್ಲಿ ಏರ್ಪಡಿಸಲಾಗುತ್ತಿದ್ದ ವಿಶೇಷ ಸಂದರ್ಭ ಗಳಲ್ಲಿ ನಡೆಯುತ್ತಿದ್ದವು. ಶ್ರೀರಂಗಪಟ್ಟಣದ ಶ್ರೀರಂಗನಾಥನ ರಥೋತ್ಸವ, ಮೇಲುಕೋಟೆ ನಾರಾಯಣ ರಥೋತ್ಸವ, ಮೈಸೂರಿನ ಚಾಮುಂಡೇಶ್ವರಿ ರಥೋತ್ಸವ, ದಸರಾ ಉತ್ಸವ ಇವು ಅಂದಿನ ಜನಪ್ರಿಯ ಹಬ್ಬಗಳಾಗಿದ್ದು ರಾಜ್ಯದಲ್ಲಿ ವೈಭವ ಆಡಂಬರಗಳಿಂದ ಇವುಗಳನ್ನು ಆಚರಿಸಲಾಗಿತ್ತು.[೧] ಇದು ರಾಜ್ಯದ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದ ಪ್ರಮುಖ ಲಕ್ಷಣವೂ ಆಗಿತ್ತು. ಉತ್ಸವಗಳ ದಿನ ಜನರು ತಂತಮ್ಮ ಮನೆಗಳನ್ನು ಬೀದಿಗಳನ್ನು ಸ್ವಚ್ಛಗೊಳಿಸಿ[೨], ಅಲಂಕಾರ ಮಾಡಿ ವಿನೋದಾವಳಿ ಆಟಗಳನ್ನಾಡುತ್ತ ಸಂತೋಷದಿಂದ ಕಾಲ ಕಳೆದರೆ; ದಸರಾ ಉತ್ಸವದ ಸಂದರ್ಭದಲ್ಲಿ ರಾಜರು ಆಸ್ಥಾನದಲ್ಲಿ ಆಡಂಬರ ದರ್ಬಾರು ನಡೆಸಿ, ಮನರಂಜನೆಗಾಗಿ ಪ್ರತಿದಿನವೂ ಕಲಾ ಪ್ರದರ್ಶನ ಮತ್ತು ಕ್ರೀಡೆಗಳನ್ನು ಏರ್ಪಡಿಸುತ್ತಿದ್ದರು. ಇವುಗಳನ್ನು ವೀಕ್ಷಿಸಲು ಜನರು ರಾಜ್ಯದ ನಾನಾ ಭಾಗಗಳಿಂದ ತಂಡೋಪ ತಂಡಗಳಲ್ಲಿ ಆಗಮಿಸುತ್ತಿದ್ದರೆಂದು ಸಮಕಾಲೀನ ಕವಿಗಳು ವರ್ಣಿಸುತ್ತಾರೆ[೩]. ಕೇವಲ ಹಬ್ಬಹರಿದಿನೋತ್ಸವಗಳಲ್ಲಿ ಮಾತ್ರವೇ ಅಲ್ಲದೆ ಅರಮನೆಯಲ್ಲಿ ನಡೆಯುತ್ತಿದ್ದ ಪಟ್ಟಾಭಿಷೇಕ, ವಿವಾಹ, ಪುತ್ರೋತ್ಸವ, ನಾಮಕರಣ, ಗಣ್ಯವ್ಯಕ್ತಿಗಳ ಆಗಮನ ಹಾಗೂ ರಾಜರು ತಮಗೆ ಬೇಸರವಾದಾಗ ಹೊತ್ತು ಕಳೆಯಲೂ ಕೂಡ ಇಂತಹ ಕ್ರೀಡಾ-ಕಲಾ ಪ್ರದರ್ಶನಗಳನ್ನು ಏರ್ಪಡಿಸುತ್ತಿದ್ದರು. ಶ್ರೀರಂಗಪಟ್ಟಣದಲ್ಲಿ ನಡೆಯುತ್ತಿದ್ದ ಕ್ರೀಡಾ - ಮನರಂಜನೆಗಳು ಮೈಸೂರು ರಾಜ್ಯದ ಜನರನ್ನು ಮಾತ್ರವಲ್ಲ, ಅದರ ನೆರೆಹೊರೆಯ ರಾಜ್ಯಗಳಾದ ಕೊಡಗು, ಕೆಳದಿ ಮೊದಲಾದ ರಾಜ್ಯಗಳ ಜನರನ್ನು ಆಕರ್ಷಿಸಿದ್ದವು[೪].

ವಿಜಯನಗರ ಸಂಪ್ರದಾಯದಂತೆ ಮಹಾನವಮಿ ಉತ್ಸವ ವನ್ನು ರಾಜ ಒಡೆಯರು ಕ್ರಿ.ಶ. ೧೬೧೦ರಲ್ಲಿ ಶ್ರೀರಂಗಪಟ್ಟಣದಲ್ಲಿ ಆಚರಣೆಗೆ ತಂದರು[೫]. ಉತ್ಸವದ ಸಂದರ್ಭದಲ್ಲಿ ಕ್ರೀಡೆ ಮತ್ತು ಕಲೆಗಳ ಪ್ರದರ್ಶನವನ್ನು ಬಹಳ ಶಿಸ್ತಿನಿಂದ ಅವರು ಮುಂದುವರಿಸಿ ಕೊಂಡು ಬಂದರು. ಇದನ್ನು ಅನಂತರ ಬಂದ ಒಡೆಯರುಗಳು ಕೂಡ ಯಶಸ್ವಿಯಾಗಿ ನಡೆಸಿಕೊಂಡು ಬಂದರು. ರಣಧೀರ ಕಂಠೀರವ ನರಸರಾಜರ ಕಾಲದಲ್ಲಿ ಅದು ಹೆಚ್ಚು ಪ್ರಸಿದ್ಧಿ ಪಡೆಯಿತು. ಕ್ರಿ.ಶ. ೧೬೪೬ರಲ್ಲಿ ಕಂಠೀರವ ಆಸ್ಥಾನದಲ್ಲಿ ಮಹಾನವಮಿ ಉತ್ಸವದ ಸಂದರ್ಭದಲ್ಲಿ ಶ್ರೀರಂಗಪಟ್ಟಣದಲ್ಲಿ ನಡೆದ ವಿವಿಧ ಕ್ರೀಡೆ ಮತ್ತು ಕಲೆಗಳ ಪ್ರದರ್ಶನವನ್ನು ಕವಿ ಗೋವಿಂದ ವೈದ್ಯ ಕಣ್ಣಾರೆ ಕಂಡು ಆನಂದಿಸಿದುದಾಗಿ ತಿಳಿಸಿದ್ದಾನೆ[೬].

ಮಹಾನವಮಿ ಉತ್ಸವದ ಸಂದರ್ಭದಲ್ಲಿ ಏರ್ಪಡಿಸ ಲಾಗುತ್ತಿದ್ದ ಪ್ರಮುಖ ಪ್ರದರ್ಶನ - ಕ್ರೀಡೆ ಎಂದರೆ ಪೌರುಷ ಪ್ರದರ್ಶನವಾಗಿದ್ದ ಮಲ್ಲಯುದ್ಧದಂಥ ಕ್ರೀಡೆಯಲ್ಲಿ ಪಾಲ್ಗೊಂಡರೆ ಸಮಾಜದಲ್ಲಿ ಒಂದು ಗಣ್ಯ ಸ್ಥಾನವನ್ನು ಹೊಂದಿದಂತೆ ಪರಿಗಣಿಸ ಲಾಗುತ್ತಿದ್ದುದರಿಂದ ಅನೇಕರು ರಾಜರಿಂದಾದಿಯಾಗಿ ಸಾರ್ವತ್ರಿಕ ಮನ್ನಣೆ ಪಡೆದು ಕುಸ್ತಿಪಟುಗಳಾಗಲು ಬಯಸುತ್ತಿದ್ದರು. ಶ್ರೀರಂಗ ಪಟ್ಟಣ ಮತ್ತು ಮೈಸೂರು ಪಟ್ಟಣಗಳಲ್ಲಿ ಅನೇಕ ಕುಸ್ತಿ ಶಿಕ್ಷಣದ ಗರಡಿಗಳಿದ್ದು ಇಂತಹ ಮಲ್ಲರು ಅಲ್ಲಿ ಉತ್ತಮ ತರಬೇತಿ ಪಡೆದುಕೊಳ್ಳುತ್ತಿದ್ದರು; ತಮ್ಮ ಸಾಧನೆಗಳನ್ನು ಪ್ರದರ್ಶಿಸಿ ರಾಜರ ಮನ್ನಣೆಗೆ ಪಾತ್ರರಾಗಿದ್ದರು. ಕಲಾ ಪೋಷಕರಾಗಿದ್ದ ಒಡೆಯರು ಕುಸ್ತಿ ಪಟುಗಳಿಗೆ ವಿಶೇಷ ಪ್ರೋತ್ಸಾಹ ನೀಡಿ ಅವರ ಕಲಾ ಪ್ರದರ್ಶನಕ್ಕೆ ಆಸ್ಥಾನದಲ್ಲಿ ಅವಕಾಶ ಮಾಡಿಕೊಟ್ಟಿದ್ದರು. ಕೆಲವೊಮ್ಮೆ ರಾಜರೇ ಪ್ರದರ್ಶನಗಳಲ್ಲಿ ಭಾಗಿಗಳಾಗಿ ಮಲ್ಲರಿಗೆ ಮಾರ್ಗದರ್ಶನ ನೀಡುತ್ತಿದ್ದುದೂ ಉಂಟು. ಹೀಗೆ ಈ ಕುಸ್ತಿ ಕಲೆ ಮೈಸೂರಿನಲ್ಲಿ ನೆಲೆಯೂರಲು ಮೈಸೂರರಸರು ಹೆಚ್ಚಿನ ಪ್ರೋತ್ಸಾಹ ನೀಡಿದರು. ಸ್ವತಃ ಕುಸ್ತಿಪಟುವಾಗಿದ್ದ ರಣಧೀರ ಕಂಠೀರವ ನರಸರಾಜ ಒಡೆಯರು ಇದಕ್ಕೆ ಅಗಾಧವಾದ ಪ್ರೋತ್ಸಾಹ ನೀಡಿದರಲ್ಲದೆ, ತಿರುಚನಾಪಳ್ಳಿಯಲ್ಲಿ ಕುಸ್ತಿಗೆ ಆಹ್ವಾನಿಸಿದ್ದ ಮಲ್ಲಜೆಟ್ಟಿಯನ್ನು ಸೋಲಿಸಿ ಬಂದು ಇತಿಹಾಸ ನಿರ್ಮಿಸಿದರು. ಇವರ ನಂತರ ಚಿಕ್ಕದೇವರಾಜ ಒಡೆಯರು, ಇಮ್ಮಡಿ ಕೃಷ್ಣರಾಜ ಒಡೆಯರು, ಮುಮ್ಮಡಿ ಕೃಷ್ಣರಾಜ ಒಡೆಯರು ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರುಗಳು ಈ ಕಲೆಯ ಬೆಳವಣಿಗೆಗೆ ಅಹರ್ನಿಶಿ ದುಡಿದರು. ರಾಜ್ಯ ಮತ್ತು ಅಂತರರಾಜ್ಯ ಕುಸ್ತಿಪಟುಗಳನ್ನು ಕರೆಸಿ ಪಂದ್ಯಾವಳಿಗಳನ್ನೇರ್ಪಡಿಸಿ ಗೆದ್ದವರಿಗೆ ಬಹುಮಾನ, ಬಿರುದುಗಳನ್ನು ನೀಡುತ್ತಿದ್ದರು. ರಾಜತ್ವ ಹೋದರೂ ಈ ಪ್ರದರ್ಶನ ಕ್ರೀಡೆಗಳು ಇಂದಿಗೂ ಬೇರೆ ಬೇರೆ ರೀತಿಗಳಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಪ್ರದರ್ಶಿಸಲ್ಪಡುತ್ತಿವೆ. ಮೈಸೂರು ಅರಸರ ಈ ಬಗೆಯ ಪ್ರೋತ್ಸಾಹವೇ ಕಾರಣವಾಗಿ ಮೈಸೂರಿನಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಗರಡಿ ಮನೆಗಳು ಹುಟ್ಟಿ ಕೊಂಡಿದ್ದವು. ಇಂತಹ ಗರಡಿ ಮನೆಗಳಲ್ಲಿ ತರಬೇತಿ ಪಡೆದ ಅನೇಕ ಮಂದಿ ಕುಸ್ತಿ ಪಟುಗಳು ತಮ್ಮ ಪಟುತ್ವ ಪ್ರದರ್ಶಿಸಿ ಖ್ಯಾತನಾಮರಾಗಿದ್ದರು. ಮೈಸೂರಿನಲ್ಲಿ ಈಗಲೂ ಅಂತಹ ಅನೇಕ ಗರಡಿ ಮನೆಗಳಿರುವುದನ್ನು ಗುರುತಿಸಬಹುದಾಗಿದೆ. ಕುಸ್ತಿ ಕಲೆಗಳಿಗೆ ಒಡೆಯರ ಕಾಲದಲ್ಲಿ ಎಷ್ಟರ ಮಟ್ಟಿಗೆ ಪ್ರೋತ್ಸಾಹ ಸಿಕ್ಕಿದ್ದಿತು ಎಂಬುದು ಇದರಿಂದ ವೇದ್ಯವಾಗುತ್ತದೆ.

ಕಂಠೀರವನ ನರಸರಾಜ ಒಡೆಯರ ಕಾಲದಲ್ಲಿ ನವ ರಾತ್ರಿಯ ಸಮಯದಲ್ಲಿ ಒಂಬತ್ತು ದಿನಗಳ ಕಾಲ ಸತತವಾಗಿ ಕುಸ್ತಿ ಪ್ರದರ್ಶನ ನಡೆಯುತ್ತಿತ್ತು[೭]. ಅರಮನೆಯ ಮುಂಭಾಗದ ಬಯಲಿನಲ್ಲಿ, ಮಹಾರಾಜರ ಸಮ್ಮುಖದಲ್ಲಿ ನಡೆಯುತ್ತಿದ್ದ ಈ ಕುಸ್ತಿ ರೋಮಾಂಚಕವಾಗಿರುತ್ತಿತ್ತು. ಹೀಗೆ ಮೈಸೂರು ರಾಜಾಶ್ರಯ ವನ್ನು ಪಡೆದ ಅನೇಕ ಮಂದಿ ಮಲ್ಲರು ಈ ಕುಸ್ತಿ ಪಂದ್ಯಗಳಲ್ಲಿ ಭಾಗವಹಿಸಿ ಇದರ ಉಳಿವಿಗೆ, ವೈಭವಕ್ಕೆ ಕಾರಣರಾದರು[೮]. ಗೆದ್ದವರಿಗೆ ತಾಂಬೂಲ, ಹಾರ ತುರಾಯಿ ಬಿರುದು ಬಾವಲಿಗಳನ್ನು ಮತ್ತೊಂದು ನೀಡಿ ಗೌರವಿಸುವ ಮೂಲಕ ಒಡೆಯರು ಈ ಕಲೆಯನ್ನು ಕಲೆಗಾರರನ್ನು ಉಚ್ಛ್ರಾಯ ಗೊಳಿಸಿದರು.

ಕುಸ್ತಿಯಂತೆ ವಜ್ರಮುಷ್ಠಿಕಾಳಗವು ಆ ಕಾಲದಲ್ಲಿ ಬೆಳೆದು ಬಂದ ಮತ್ತೊಂದು ಪ್ರಮುಖ ಕ್ರೀಡೆಯಾಗಿತ್ತು. ಇದೊಂದು ಬಗೆಯ ಕಾಳಗವಾಗಿದ್ದು, ಮೈಸೂರು ಅರಮನೆಗೆ ಮಾತ್ರ ಸೀಮಿತವಾಗಿದ್ದ ಕ್ರೀಡೆಯಾಗಿತ್ತು. ಶತಮಾನಗಳಷ್ಟು ಇತಿಹಾಸವನ್ನು ಹೊಂದಿರುವ ಈ ಕಾಳಗವನ್ನು ದಸರಾ ಉತ್ಸವದಂದು ಆಸ್ಥಾನದ ಒಳ ಆವರಣದಲ್ಲಿ ಕೆಂಪು ಮಣ್ಣಿನ ಅಖಾಡವನ್ನು ನಿರ್ಮಿಸಿ ಅದರ ಮೇಲೆ ಆಡಲಾಗುತ್ತಿತ್ತು. ಇದರಲ್ಲಿ ಭಾಗವಹಿಸುವ ಜಟ್ಟಿಗಳು ಕುಸ್ತಿಪಟುಗಳಂತೆ ಇದ್ದರೂ ಇದು ಹೆಚ್ಚು ಅಪಾಯಕಾರಿಯಾದುದಾಗಿತ್ತು. ಈ ಕಾಳಗದಲ್ಲಿ "ಮಲ್ಲರು ತಮ್ಮ ಬಲಗೈಗೆ ಹಿಡಿಯುಳ್ಳ ವಜ್ರಾನುಖಗಳನ್ನು ಧರಿಸಿ ಹೋರಾಡುತ್ತಿದ್ದರು. ಚೂಪುಹಲ್ಲುಗಳನ್ನು ಹೊಂದಿದ ಕಬ್ಬಿಣದ ಆಯುಧ ಧರಿಸಿ ಸೆಣಸಾಡುತ್ತಿದ್ದರು. ಇತ್ತೀಚಿನ ವರ್ಷಗಳಲ್ಲಿ ಕಬ್ಬಿಣದ ಬದಲು ದಂತ ಅಥವಾ ಸಾರಂಗದ ಕೊಂಬಿನಿಂದ ಮಾಡಿದ್ರ ವಜ್ರಾನಖಗಳನ್ನು ಮಲ್ಲರು ತಮ್ಮ ಹೋರಾಟದಲ್ಲಿ ಬಳಸುತ್ತಾರೆ[೯]".

ಕ್ರಿ.ಶ. ೧೬೪೭ರಲ್ಲಿ ಕಂಠೀರವ ನರಸರಾಜರ ಸಮ್ಮುಖದಲ್ಲಿ ನಡೆದ ವಜ್ರಮುಷ್ಠಿ ಕಾಳಗದ ಬಗ್ಗೆ ಗೋವಿಂದ ವೈದ್ಯನು ಕೊಡುವ ವರ್ಣನೆ ಹೀಗಿದೆ. -"ಜಟ್ಟಿಗಳು ಜೋಡಿ ಜೋಡಿಗಳಲ್ಲಿ ರೋಷಾವೇಶಭರಿತರಾಗಿ ಘೋಷಣೆಗಳನ್ನು ಕೂಗುತ್ತ, ಭುಜಗಳನ್ನು ತಟ್ಟುತ್ತ ನೆಗೆದುಬಂದು ಪಂಥಕ್ಕೆ ನಿಂತರು. ಕೈಯಲ್ಲಿ ವಜ್ರಮುಷ್ಠಿ, ಹಣೆಯಲ್ಲಿ ಕುಂಕುಮ, ಕೊರಳಲ್ಲಿ ಹೂಮಾಲೆ, ಮೈಗೆಲ್ಲ ಕಸ್ತೂರಿ ಲೇಪನಗಳನ್ನು ಅಲಂಕರಿಸಿಕೊಂಡು ಕಾಳಗಕ್ಕೆ ನಿಂತರು. ಅವರ ಚರಣಹತಿಗೆ (ಪಾದಹತಿಗೆ) ಭೂಮಿ ಬರಿಯಿತು. ಭೂಯೆಂದುರುಗಬಂಧದಲ್ಲಿ ಬಂಧಿಸಿ ಬಗೆಬಗೆಯ ಕೌಶಲಗಳಿಂದ ಮುಷ್ಠಿಗಾಯಗಳನ್ನು ಮಾಡಿದರು. ಗಳ, ಹತ್ತ, ಡೊಕ್ಕರ, ತಳಮೇಲು, ಪೈಸರ, ಸುಳಿವು, ವಂಚನೆ, ಪತನ, ಮುಂತಾದ ಪಟ್ಟುಗಳಿಂದ ಕಾಳಗ ಮಾಡಿದರು. ಅದರಿಂದಾದ ಗಾಯಗಳಿಂದ ರಕ್ತಧಾರೆ ಹರಿಯಿತು. ಬಿಗಿವ, ಬಿಡಿಸಿಕೊಳ್ಳುವ, ತೆಗೆವ, ತವಕಿಸುವ, ನೆಗೆವ, ನಿಗುರಯಳಸರಿವ, ಲಗಡಿನಂತೆರಗಿಲಾಗಿಸುವ, ಹೋರಾಟದ ವಿಗಡ ಮಲ್ಲರುಗಳೊಪ್ಪಿದರು. ಇಂತಪ್ಪ ಮಲ್ಲರು ನೂರಾರು ಜೋಡಿಯಲ್ಲಿ ಪಂತದೊಳಗೆ ಕಾದುತಿರಲು, ಕಂತು ಸನ್ನಿಭ ಕಂಠೀರವೇಶ್ವರ ಬಲು ಸಂತೋಷವ ತಾಳಿದನು[೧೦].

ಮಲ್ಲಯುದ್ಧ ಮತ್ತು ಮೃಗಯಾ ವಿನೋದಗಳು ಆಗಿನ ಕಾಲದ ಜನರಿಗೆ ಬಹು ಪ್ರಿಯವಾದ ವಿನೋದಗಳಾಗಿದ್ದವು. ಕವಿಗಳು ಕೊಡುವ ವರ್ಣನೆಯಲ್ಲಿ ಅವುಗಳನ್ನು ಕಾಣಬಹುದು. ಆದುದರಿಂದಲೇ ಕೆಲವು ಸಂದರ್ಭಗಳಲ್ಲಿ ಮಲ್ಲಪಟುಗಳು ಬಹು ಅಪಾಯಕಾರಿ ಕಾಳಗದಲ್ಲಿ ತೊಡಗುತ್ತಿದ್ದರು. "ಅವರು ಆನೆ, ಹುಲಿ, ಚಿರತೆ ಮತ್ತಿತರ ವನ್ಯಮೃಗಗಳೊಂದಿಗೂ ಕಾದಾಡುತ್ತಿದ್ದರು[೧೧]. ಆ ಸಂದರ್ಭಗಳಲ್ಲಿ ಮಲ್ಲರು ಮದವೆದ್ದ ಆನೆಯಂತೆ ಭಯಂಕರವಾಗಿ ಮಲ್ಲಯುದ್ಧ ಮಾಡುತ್ತ ನೆರೆದಿದ್ದ ಪ್ರೇಕ್ಷಕರ ಮೈನವಿರೇಳುವಂತೆ ಮಾಡುತ್ತಿದ್ದರು. ಮಲ್ಲರು ಘೋರವಾಗಿ ಹೋರಾಡುತ್ತ ಏಟು ತಿಂದು ವಿಕೃತಗೊಳ್ಳುತ್ತಿದ್ದರಲ್ಲದೆ ಅಂಗವಿಕಲರೂ ಆಗುತ್ತಿದ್ದರು. ಅವರು ಆವೇಶದಿಂದ ಹೋರಾಡುವಾಗ ತಲೆ, ಕಪೋಲ, ಕಂಠ, ಎದೆಯ ಮೇಲೆ ಗಾಯಗಳಾಗಿ ರಕ್ತ ಸುರಿಯುತ್ತಿತ್ತೆಂದು ಸಮಕಾಲೀನ ಸಾಹಿತ್ಯಗಳಲ್ಲಿ ವರ್ಣನೆಗಳಿವೆ[೧೨]. ಆದರೂ ಕಣ್ಣಲ್ಲಿ ಕಿಡಿ ಕಾರುತ್ತಾ ಏದುಸಿರು ಬಿಡುತ್ತಾ ಕಾದಾಡುತ್ತಿದ್ದರು. ಇದನ್ನು ಕಂಡ ಕಂಠೀರವ ನರಸರಾಜ ಒಡೆಯನು ತಕ್ಷಣ ಮಲ್ಲರ ಕಾಳಗವನ್ನು ಬಿಡಿಸಿ ಅವರಿಗೆ ವೀಳೆಯ ಉಡುಗೊರೆಗಳನ್ನು ನೀಡಿ ಗೌರವಿಸಿದನು[೧೩]. ಇಂತಹ ಸಾಹಸ ಪ್ರದರ್ಶನಗಳಲ್ಲಿ ಭಾಗವಹಿಸುವುದರಲ್ಲಿ ಆಳರಸರಾದ ಒಡೆಯರು ಹಿಂದೆ ಬೀಳುತ್ತಿರಲಿಲ್ಲ. ರಣಧೀರ ಕಂಠೀರವರು (೧೬೩೮-೧೬೫೯) ಪಟ್ಟಕ್ಕೆ ಬರುವುದಕ್ಕೆ ಮೊದಲು ತಿರುಚನಾಪಳ್ಳಿಯ ಜಟ್ಟಿಯೊಬ್ಬನನ್ನು ವೇಷ ಮರೆಸಿಕೊಂಡು ಹೋಗಿ ತಮ್ಮ ಚಮತ್ಕಾರಗಳಿಂದ ಯಾರೂ ಜಯಿಸದ ಆ ಜಟ್ಟಿಗೆ ಬಲವಾದ ಪೆಟ್ಟು ನೀಡಿ ನೀರು ಕುಡಿಯುವಂತೆ ಮಾಡಿದ್ದರು[೧೪]. ಇದು ಮೈಸೂರು ಒಡೆಯರ ಮಲ್ಲಯುದ್ಧ ಪ್ರಿಯತೆಗೆ ಮತ್ತು ಪರಾಕ್ರಮಕ್ಕೆ ಉತ್ತಮ ನಿದರ್ಶನವೆನ್ನಬಹುದು.

ಚಿಕ್ಕದೇವರಾಜ ಒಡೆಯರು ಹೊತ್ತು ಕಳೆಯುತ್ತಿದ್ದ ರೀತಿಯನ್ನು 'ಚಿಕ್ಕದೇವರಾಜ ವಿಜಯ'ದಲ್ಲಿ ಹೀಗೆ ವರ್ಣಿಸಲಾಗಿದೆ. "ಚಿಕ್ಕದೇವರಾಜ ಒಡೆಯರು ಗರಡಿಯಲ್ಲಿ ಸಾಧನೆಯನ್ನು ಮಾಡುತ್ತಿದ್ದರು. ಗರಡಿಯಲ್ಲಿ ಗೆಯ್ಮೆಯಲ್ಲಿ ಅವರ ಶರೀರ ಬಿಗಿಯಾಗಿತ್ತು. ಅವರು ಸಾತ್ವಿಕ ಪುರಾಣಗಳನ್ನು ಆಲಿಸುತ್ತಿದ್ದರು. ತತ್ತ್ವ ಚಿಂತನೆಯಲ್ಲಿ ವಿದ್ವಾಂಸರನ್ನು ತೊಡಗಿಸುತ್ತಿದ್ದರು. ಅಶ್ವಗಜಾದಿ ಶಾಸ್ತ್ರಗಳನ್ನು ಪರಿಶೀಲಿಸುತ್ತಿದ್ದರು. ಧರ್ಮಗತಿ ಭೇದದಲ್ಲಿ ಉಂಟಾದ ಶಂಕೆಯನ್ನು ಹೋಗಲಾಡಿಸುತ್ತಿದ್ದರು. ಕಾವ್ಯಗಳನ್ನು ಓದಿಸಿ ಕೇಳುತ್ತಿದ್ದರು. ನಾಟಕವನ್ನು ಆಡಿಸಿ ನೋಡುತ್ತಿದ್ದರು. ಹಾಡುತ್ತಾ, ವೀಣೆಯನ್ನು ಬಾರಿಸುತ್ತಾ ವಿವಿಧ ವಿನೋದದಿಂದ ಕಾಲವನ್ನು ಕಳೆಯುತ್ತಿದ್ದರು. ಸಮ ವಿಷಯ ಎನ್ನುವ ಎರಡು ತರಹೆಯ ಸಮಸ್ಯೆಗಳನ್ನು ಬಿಡಿಸುತ್ತಿದ್ದರು. ನೆತ್ತ (ಪಗಡೆ) ಚದುರಂಗದ ಚಾತುರಿಯನ್ನು ತೋರಿಸುತ್ತಿದ್ದರು. ವಿಕ್ರಮರಸದಿಂದ ಶೋಭಿಸುವ ಲಾವಕ, ಕುಕ್ಕುಟ, ಮೇಷ, ಮಲ್ಲ, ಸಾದಿ, ಮದಗಜಗಳಿಂದ ವಿನೋದಿಸುತ್ತಿದ್ದರು. ಗರಡಿಗೆ ಹೋಗಿ ಹಲವು ದೊರೆ ಮಕ್ಕಳೊಡನೆ ಪರಿವಿಡಿಗೆಯ್ಯುತ್ತಿದ್ದರು. ರಾಯರಾವುತರು ಆಶ್ಚರ್ಯ ಪಡುವಂತೆ ತುಂಗತುರುಗಗಳನ್ನೇರುತ್ತಿದ್ದರು"[೧೫]. ಇದಲ್ಲದೆ ಚಿಕ್ಕದೇವರಾಜರ ಕಾಲದಲ್ಲಿ ಮಹಾನವಮಿಯ ಸಮಯದಲ್ಲಿ ಪ್ರೇಕ್ಷಕರ ಮನರಂಜನೆಗಾಗಿ ಅರಮನೆಯ ಮುಂದೆ ಕತ್ತಿವರಸೆ, ಜಟ್ಟಿಕಾಳಗ ಮೊದಲಾದುವನ್ನು ಏರ್ಪಡಿಸುತ್ತಿದ್ದರು. ಇದನ್ನು ಅನಂತರ ಬಂದ ಒಡೆಯರುಗಳು ಕೂಡ ಯಶಸ್ವಿಯಾಗಿ ನಡೆಸಿಕೊಂಡು ಬಂದರು.

ಕ್ರಿ.ಶ. ೧೮೪೦ರಲ್ಲಿ ಇಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ಮಹಾನವಮಿ ಉತ್ಸವದ ಸಂದರ್ಭದಲ್ಲಿ ವಿಶಾಲ ರಂಗದಲ್ಲಿ ಒಡೆಯರ ಸಮ್ಮುಖದಲ್ಲಿ ನಡೆದ ಜಟ್ಟಿಗಳ ಕಾಳಗ, ಅವರ ಸಾಹಸ ಪ್ರದರ್ಶನವನ್ನು ಕವಿ ನೂರೊಂದ ತನ್ನ

"ಸೌಂದರ್ಯ ಕಾವ್ಯ'ದಲ್ಲಿ ಸ್ವಾರಸ್ಯವಾಗಿ ತಿಳಿಸಿದ್ದಾನೆ. ಅವನ ಪ್ರಕಾರ "ಮಲ್ಲರು ಅನೇಕ ಜೋಡಿಗಳಲ್ಲಿ ಬಂದು ರೋಷ ಮತ್ತು ಆವೇಶಗಳಿಂದ ಘೋಷಣೆಗಳನ್ನು ಕೂಗಿ, ನೆಗೆದು ಭುಜಗಳ ಸ್ಫೋಟನೆ ಮಾಡಿ ಪಂಥಕ್ಕೆ ಸದಾ ಮುಂದಾಗಿರುತ್ತಿದ್ದರು. ಕೈಯಲ್ಲಿ ವಜ್ರಮುಷ್ಠಿ, ಹಣೆಯಲ್ಲಿ ಕುಂಕುಮ, ಕೊರಳಲ್ಲಿ ಹೂಮಾಲೆ, ಕಸ್ತೂರಿ ಲೇಪನಗಳಿಂದ ಅಲಂಕೃತರಾದ ಮಲ್ಲರು ಎದುರಾಳಿಯ ಕರೆಗೆ ಸದಾ ಕಾತುರರಾಗಿರುತ್ತಿದ್ದರು". ಮಹಾನವಮಿ ಉತ್ಸವವನ್ನು ವರ್ಣಿಸುತ್ತ ಆಸ್ಥಾನದಲ್ಲಿ ತೀವ್ರ ಸ್ವರೂಪದಲ್ಲಿ ನಡೆಯುತ್ತಿದ್ದ ಮಲ್ಲಯುದ್ಧಗಳು, ಮಲ್ಲರ ಕೈ ಚಳಕ (ವಿವಿಧ ಪಟ್ಟು) ಹೋರಾಟದ ಸ್ವರೂಪ, ಪ್ರೇಕ್ಷಕರ ಪ್ರಶಂಸೆ ಮುಂತಾದವುಗಳನ್ನು ಕವಿ ನೂರೊಂದನ ಮುಂದಿನ ಈ ಪದ್ಯಗಳು ಹೀಗೆ ತಿಳಿಸುತ್ತದೆ. "ಪಿಡಿದ ಕೈ ಚಳಕ ತಪ್ಪಿಸಿ ಬಾಹುಭುಜ ಬಲ ಕೆಡಹಿ ಅವನ ಮೇಲೆ ಕುಳಿತು ಪಿಡಿದ ಮುಷ್ಟಿಗಳಿಂದ ತಿವಿದ ಸಮಯದೊಳು ಬಿಡಿಸಿಕೊಂಡರು". "ಈ ಮಲ್ಲರು ಕುಸ್ತಿ ಆಡುವಾಗ ಗಳಹತ್ತಿ ಡೊಕ್ಕರ ತಳಮೇಲು ಪೈಸರ ಸುಳಿವು, ವಂಚನೆ, ಪತನ, ಮೊದಲಾದ ವರಸೆಗಳನ್ನು ಬಳಸುತ್ತಿದ್ದರು. ಅವರು ಒಬ್ಬೊಬ್ಬರನ್ನೊಬ್ಬರು ಬಿಗಿಯುತ್ತಿದ್ದರು, ಬಿಡಿಸಿಕೊಳ್ಳುತ್ತಿದ್ದರು, ತವಕಿಸುತ್ತಿದ್ದರು, ನೆಗೆಯುತ್ತಿದ್ದರು, ನಿಗುರಿ ಒಳಗೆ ಸರಿಯುತ್ತಿದ್ದರು" ಎನ್ನುತ್ತಾನೆ. ಹೀಗೆ ಮಲ್ಲಯುದ್ಧದ ಬಗೆಗೆ ಅನೇಕ ಸ್ವಾರಸ್ಯಕರವಾದ ಸಂಗತಿಗಳು ಒಡೆಯರ ಕಾಲದ ಸಾಹಿತ್ಯ ಕೃತಿಗಳಲ್ಲಿ ಕಂಡುಬರುತ್ತವೆ. ಪೂರ್ವಿಕರಂತೆ ಮಲ್ಲಯುದ್ಧ ಮುಗಿದ ತರುವಾಯ ಎರಡನೆ ಕೃಷ್ಣರಾಜ ಒಡೆಯರು (೧೭೩೪-೧೭೬೬) ಗೆದ್ದ ಮಲ್ಲರಿಗೆ "ವೀಳೆಯ ನೀಡಿ, ಅದರ ಜೊತೆಗೆ ಹಾರ, ತುರಾಯಿ, ಪದಕ, ಕಂಠಮಾಲೆ, ಬಾವುಲಿ, ಜಟ್ಟಿಧಾರ, ಚೌಕುಳಿ, ನೀರಾಜಿದುಪ್ಪಟ, ಚಿಂದಿ ಊರು ಉಮ್ಮಳಿಗಳನ್ನಿತ್ತು ಸನ್ಮಾನಿಸಿ" ದನೆಂದು ಕವಿ ನೂರೊಂದ ತಿಳಿಸುತ್ತಾನೆ[೧೬]. ಈ ಎಲ್ಲಾ ಸಾಂಪ್ರದಾಯಿಕ ಮೂಲ ವೈಭವ ಮತ್ತು ಆಡಂಬರಗಳನ್ನು ಮೈಸೂರು ಅರಸರು ಇತ್ತೀಚಿನವರೆಗೂ ಅನುಸರಿಸಿಕೊಂಡು ಬಂದುದು ಅವರ ಸಾಂಪ್ರದಾಯಿಕ ಬದ್ಧತೆಗೆ ಶ್ರೇಷ್ಠ ನಿದರ್ಶನವೆನ್ನಬಹುದು.

ಮೈಸೂರು ಒಡೆಯರು ಕುಸ್ತಿಕಲೆಯೇ ಅಲ್ಲದೆ, ದೊಣ್ಣೆವರಸೆ, ಕತ್ತಿವರಸೆ, ಕುದುರೆಸವಾರಿ, ರಥಾರೋಹಣ, ಗಜಾರೋಹಣ, ದೊಂಬರ ಮೇಲಾಟ, ಟಗರಿನ ಕಾಳಗ, ಬೇಟೆ, ಮದಕರಿಗಳ ಹೋರಾಟ[೧೭], ಮೊದಲಾದ ಕಲೆಗಳಿಗೂ ಪ್ರೋತ್ಸಾಹ ನೀಡುತ್ತಿದ್ದರಲ್ಲದೆ, ತಾವು ಕೂಡ ಭಾಗವಹಿಸುತ್ತಿದ್ದರು. ಪಗಡೆ, ಚದುರಂಗ, ಅಣ್ಣೇಕಲ್ಲು, ಚನ್ನಮಣೆ ಮುಂತಾದ ಒಳಾಂಗಣದ ಆಟಗಳಿಗೂ, ಕಲೆಗಳಿಗೂ ಆಸ್ಥಾನದಲ್ಲಿ ಪ್ರೋತ್ಸಾಹವಿದ್ದಿತು.

ಮೈಸೂರು ಒಡೆಯರಿಗೆ ಕುದುರೆ ಸವಾರಿ, ಆನೆ ಸವಾರಿ, ಹುಲಿ ಸವಾರಿ, ರಥಾರೋಹಣ ಮತ್ತು ಬೇಟೆಯಾಡುವುದು ಬಹಳ ಪ್ರಿಯವಾಗಿದ್ದವು. ರಾಜಕುಮಾರರು ಯೌವ್ವನದಲ್ಲಿ ಪರಾಕ್ರಮವನ್ನು ರಾಜ್ಯಾಡಳಿತ ಸಂದರ್ಭದಲ್ಲಿ ದಿಟ್ಟತನವನ್ನು ತೋರುವ ಸಲುವಾಗಿ ಬಾಲ್ಯದಲ್ಲಿಯೇ ಇವುಗಳಲ್ಲಿ ವಿಶೇಷ ತರಬೇತಿ ಪಡೆದುಕೊಳ್ಳುತ್ತಿದ್ದರು[೧೮]. ಗೋವಿಂದ ವೈದ್ಯ ಹೇಳುವಂತೆ ರಾಜಧಾನಿ ಶ್ರೀರಂಗಪಟ್ಟಣದ ಹೆದ್ದಾರಿಗಳಲ್ಲಿ ರಾಜಕುಮಾರರು ಮತ್ತು ಇತರ ಗಣ್ಯರ ಮಕ್ಕಳು ಕುದುರೆಗಳನ್ನು ನಡೆಸಿಕೊಂಡು ಹೋಗುವುದು, ಕಿರಿಯ ಆನೆಗಳ ಮೇಲೆ ಕುಳಿತು ಸವಾರಿ ಮಾಡುವುದು ಸಾಮಾನ್ಯವಾಗಿ ದಿನವೂ ಕಂಡು ಬರುವ ದೃಶ್ಯವಾಗಿತ್ತು. ಕುಸ್ತಿ, ಆನೆಸವಾರಿ, ಕುದುರೆಸವಾರಿ ಮತ್ತು ಈಜುಗಾರಿಕೆಯಿಂದ ಮನೋಲ್ಲಾಸವುಂಟಾಗುವುದರೊಂದಿಗೆ ಶಾರೀರಿಕ ಬಲವೃದ್ಧಿಯಾಗುತ್ತದೆ ಎಂಬ ನಂಬಿಕೆಯಿಂದ ರಾಜಕುಮಾರರು ಮೇಲಿನ ಸವಾರಿಗಳನ್ನು ಪ್ರತಿನಿತ್ಯ ಬೆಡಗಿನಿಂದ ಮಾಡುತ್ತಿದ್ದರು[೧೯].

ಒಂದನೆಯ ಕೃಷ್ಣರಾಜ ಒಡೆಯರ (೧೭೧೪-೧೭೩೨) ಆಸ್ಥಾನದಲ್ಲಿದ್ದ ಕಳಲೆ ವೀರರಾಜನು 'ಸಕಲ ವೈದ್ಯಸಂಹಿತಾ ಸಾರಾರ್ಣವ'ದಲ್ಲಿ ಗಜ, ಅಶ್ವ, ರಥಾರೋಹಣ ಮುಂತಾದವುಗಳಿಂದ ವೃದ್ಧಿಯಾಗುವ ಶಾರೀರೀಕ ಬಲದ ವಿವರಣೆಯನ್ನು ಈ ರೀತಿ ನೀಡಿದ್ದಾನೆ. "ಶ್ರೇಷ್ಠವಾದ ಕೊಂಬುಗಳುಳ್ಳ, ಅಲಂಕರಿಸಿದ ಆನೆಯನ್ನು ಏರುವುದರಿಂದ ಶರೀರದ ಶ್ಲೇಷ್ಮದೋಷ ಕೆಡುತ್ತದೆ. ಜಟರಾಗ್ನಿ ಉದ್ದೀಪನವಾಗುತ್ತದೆ. ಇದರಿಂದ ಆರೋಗ್ಯ ವೃದ್ಧಿಸುತ್ತದೆ. ಐಶ್ವರ್ಯ ಮತ್ತು ಕೀರ್ತಿಗಳು ದೊರೆಯುತ್ತದೆ"[೨೦].

"ಕುದುರೆಯನ್ನು ಏರುವುದರಿಂದ ಶರೀರಕ್ಕೆ ಅಗ್ನಿಯನ್ನುಂಟು ಮಾಡುತ್ತದೆ. ಬಲವನ್ನು, ಯೌವನವನ್ನು ಹೆಚ್ಚಿಸುತ್ತದೆ. ದುರ್ಮಾರ್ಗಗಳನ್ನು ಕೆಡಿಸಿ ಶ್ಲೇಷ್ಮ ದೋಷವನ್ನು ಹೋಗಲಾಡಿಸುತ್ತದೆ. ಬೆವರು, ರೋಮಾಂಚನವನ್ನುಂಟು ಮಾಡಿ ಆ ಕ್ಷಣ ಶರೀರಕ್ಕೆ ಕಾಂತಿಯನ್ನುಂಟುಮಾಡುತ್ತದೆ. ಇದು ಕೀರ್ತಿ ಐಶ್ವರ್ಯಗಳಿಗೆ ಕಾರಣವಾಗುತ್ತದೆ. ಭಗಂಧರ ವ್ಯಾಧಿಯನ್ನು ಹುಟ್ಟಿಸುತ್ತದೆ. ರಕ್ತಪಿತ್ತವ್ಯಾಧಿಗೆ ಆಸ್ಪದವಾಗಿರುತ್ತದೆ". "ರಥಾರೋಹಣದಿಂದ ಮಂಗಳಗಳು ಒದಗುತ್ತದೆ. ರಥಾರೋಹಣದಲ್ಲಿ ವೇಗವಾಗಿ ಹೋಗುವುದರಿಂದ, ಕುಲುಕಾಟ ಉಂಟಾಗಿ ಶರೀರವನ್ನು ಅಲ್ಲೋಲ ಕಲ್ಲೋಲ ಮಾಡಿ ಅತಿ ದಾಹವನ್ನು, ತಾಪವನ್ನು ಉಂಟು ಮಾಡುತ್ತದೆ. ಇದರಿಂದ ಶ್ಲೇಷ್ಮದೋಷ ಇಲ್ಲವಾಗುತ್ತದೆ. ಪಿತ್ತಕಾರಣವಾಗಿ ಅಗ್ನಿಯುಂಟಾಗುತ್ತದೆ. ದೇಹ ಧರ್ಮಕ್ಕೂ ಮೂಳೆಗಳೂ ದುಃಖವನ್ನುಂಟು ಮಾಡುತ್ತದೆ".

"ಪಲ್ಲಕ್ಕಿಯನ್ನು ಏರಿ ತಿರುಗಾಡುವುದರಿಂದ ಆಯಸ್ಸು ವೃದ್ಧಿಸುತ್ತದೆ. ವಿಶೇಷ ಬುದ್ಧಿ ಉಂಟಾಗಿ ಐಶ್ವರ್ಯ ಕೀರ್ತಿಗಳು ದೊರೆತು ಬಹಳ ಸಿದ್ಧಿಕರವಾಗಿ ಮಂಗಳಪ್ರದವಾಗುತ್ತದೆ. ಆತನು ಹೆಚ್ಚು ಪ್ರಸಿದ್ಧನಾಗುತ್ತಾನೆ. ವಾತ ಪಿತ್ತಶ್ಲೇಷ್ಮ ದೋಷಗಳು ಕೆಡುತ್ತವೆ. ಮನೋಹರವಾದ ಕಾಂತಿ ಸಕಲ ಶ್ರೇಷ್ಠತ್ವ ಉಂಟಾಗುತ್ತದೆ' ಎಂದಿರುವನು[೨೧].

ವೀರರಾಜನು ಮುಂದುವರಿದು "ದಂಡಧಾರಣದಿಂದ (ದೊಣ್ಣೆಯನ್ನು ತಿರುಗಿಸುವುದರಿಂದ) ಮಹಾ ಉತ್ಸಾಹ, ಸದ್ಬಲ, ಸ್ಥೈರ್ಯ, ಧೈರ್ಯ, ವೀರ್ಯ ಮುಂತಾದ ಪರಾಕ್ರಮಾತಿಶಯಗಳನ್ನು

ಹೆಚ್ಚಿಸುತ್ತದೆ ಎಂದಿದ್ದಾನೆ. ನಾನಾ ಶಸ್ತ್ರಗಳನ್ನು ಧಾರಣ ಮಾಡುವುದರಿಂದ ಲಕ್ಷ್ಮೀದೇವಿಗೆ ಆವಾಸಸ್ಥಾನವಾಗುತ್ತಾನೆ. ಪರಾಕ್ರಮಗಳಿಗೆ ಆಕರನಾಗುತ್ತಾನೆ. ಧರಿಸಿದಾತನಿಗೆ ದೇವಗ್ರಹ, ಗಂಧರ್ವ ಗ್ರಹ, ಯಕ್ಷಗ್ರಹ ಮುಂತಾದ ದುಷ್ಟ ಗ್ರಹಗಳು ಮತ್ತು ಶತ್ರುಗಳಿಂದಾಗುವ ಹಾನಿಯನ್ನು ಕೆಡಿಸುತ್ತದೆ" ಎಂದಿದ್ದಾನೆ.

"ಚಾಪಾಭ್ಯಾಸ (ಬಿಲ್ವಿದ್ಯೆ)ಯನ್ನು ಪ್ರತಿನಿತ್ಯ ಮಾಡುವುದರಿಂದ ಶರೀರದ ದುರ್ಮಾಂಸ ಕೆಡುತ್ತದೆ. ವಾತಪಿತ್ತ ಶ್ಲೇಷ್ಮ ದೋಷಗಳನ್ನು ಶಮನ ಮಾಡುತ್ತದೆ. ಶರೀರದಲ್ಲಿ ಅಗ್ನಿಬಲವನ್ನುಂಟುಮಾಡುತ್ತದೆ. ಕಾಯಕ್ಕೆ ಪುಷ್ಟಿಕರವಾಗಿ ಕಾಂತಿಯನ್ನುಂಟುಮಾಡಿ, ಆರೋಗ್ಯವನ್ನು ಕೊಡುತ್ತದೆ. ಯುದ್ಧದಲ್ಲಿ ಶತ್ರು ನಾಶ ಮಾಡುತ್ತದೆ. ಮುಪ್ಪನ್ನು ಕೆಡಿಸುತ್ತದೆ"[೨೨] ಎಂದಿದ್ದಾನೆ.

ಈ ಎಲ್ಲದರ ಅರಿವು ಒಡೆಯರಿಗೂ ಅವರ ಪರಿವಾರದವರಿಗೂ ಇದ್ದುದರಿಂದ ಅವರು ಬಾಲ್ಯದಲ್ಲಿಯೇ ತಮ್ಮ ಮಕ್ಕಳಿಗೆ ಗಜಾರೋಹಣ, ಅಶ್ವಾರೋಹಣ ಮುಂತಾದ ವಿದ್ಯೆಗಳಲ್ಲಿ ತರಬೇತಿ ಕೊಡಿಸುತ್ತಿದ್ದರು. ಬಾಲಕರಿಗೆ ಹನ್ನೆರಡು ವರುಷ ತುಂಬುತ್ತಿದ್ದಂತೆಯೇ ತುರಗದೋರಾಟ, ಗಜಾರೋಹಣ ಮತ್ತು ನಾನಾ ಬಗೆಯ ಆಯುಧಗಳ ಸಾಧನಗಳಲ್ಲಿ ಪರಿಣತಿ ದೊರೆತಿದ್ದಿತು. ಕಂಠೀರವ ನರಸರಾಜ ಒಡೆಯರು 'ತುರಗಾರೋಹಣರೇವಂತ' ಎಂದು ಪ್ರಸಿದ್ಧರಾಗಿದ್ದರು[೨೩]. ಬಲ್ಲೆಯ, ಬಾಕು, ಕಠಾರಿ, ಚಕ್ರಾಯುಧಗಳ ಅಂಗವಣೆಯನ್ನು ಅವರು ಅರಿತಿದ್ದರು.

ವಾಸ್ತವವಾಗಿ ಯಶಸ್ವಿಯಾಗಿ ಬೇಟೆ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುವುದು ರಾಜರಿಗೆ ಮತ್ತು ಗಣ್ಯರಿಗೆ ಗೌರವದ ಪ್ರತಿಷ್ಠೆಯ ವಿಷಯವಾಗಿದ್ದಂತೆ ವಿನೋದಕ್ಕಾಗಿ ಬೇಟೆಯಾಡುವುದು ವಾಡಿಕೆಯಲ್ಲಿದ್ದುದು ಗೋವಿಂದ ವೈದ್ಯನ ಈ ವರ್ಣನೆಯಿಂದ ತಿಳಿದು ಬರುತ್ತದೆ. -"ಮಹಾನವಮಿಯ ಉತ್ಸವದಂದು ನಡೆಯುವ ಶಮಿಾಮಂಟಪ ದೃಶ್ಯ ಅಮೋಘವಾದುದಾಗಿದ್ದು, ಅಲ್ಲಿಗೆ ಕಂಠೀರವನು ವ್ಯಾಘ್ರ, ವರಾಹ, ಭಲ್ಲೂಕ ಮುಂತಾದ ಅನೇಕ ಅರಣ್ಯ ಮೃಗಗಳನ್ನು ಹಿಡಿದು ತರಿಸಿ ವಿನೋದದಿಂದ ಬೇಟೆಯಾಡುತ್ತಿದ್ದನು. ಪಟ್ಟದ ಆನೆಯ ಮೇಲೆ ಕುಳಿತು ಸವಾರಿ ಮಾಡುತ್ತಿದ್ದನು. ಈ ಸಂದರ್ಭದಲ್ಲಿ ಟಗರು ಕಾಳಗ, ಗೂಳಿಕಾಳಗ, ಪಕ್ಷಿಗಳ ಕಾಳಗಗಳೂ ನಡೆಯುತ್ತಿದ್ದವು"[೨೪]. ಒಡೆಯರಿಗೆ ಬೇಟೆಯಾಡುವುದರಲ್ಲಿ ಬಹು ಆಸಕ್ತಿಯಿತ್ತು. ಅದು ಕ್ಷತ್ರಿಯ ಧರ್ಮವೂ ಆಗಿತ್ತು. ಕ್ರಿ.ಶ. ೧೬೨೬ರಲ್ಲಿ ಅಂದಿನ ಮೈಸೂರು ದೊರೆಯಾದ ಚಾಮರಾಜ ಒಡೆಯರು ಕಟ್ಟೆ ಮಳಲವಾಡಿಯನ್ನು ಆಳುತ್ತಿದ್ದ ಚೆನ್ನರಾಜ ಒಡೆಯರು ಎಂಬುವನೊಂದಿಗೆ, ತಮ್ಮ ಸೇನೆಗೆ ಬೇಕಾಗಿದ್ದ ಆನೆಗಳನ್ನು ಹಿಡಿಯಲು ಮತ್ತು ಕೊಳ್ಳಲು ವ್ಯವಸ್ಥೆ ಮಾಡಿಕೊಂಡಿದ್ದರು. ಆದುದರಿಂದಲೇ ಅವರಿಗೆ 'ಗಜಬೇಂಟೆಕಾರ' ಎಂಬ ಬಿರುದಿತ್ತು[೨೫].

ಚದುರಂಗ, ಪಗಡೆ ಮೊದಲಾದುವು ಒಳಾಂಗಣ ಕ್ರೀಡೆಗಳಾಗಿದ್ದು ಅವು ಸಮಾಜದ ಎಲ್ಲಾ ಸ್ತರಗಳಲ್ಲೂ ಪ್ರಚಾರದಲ್ಲಿದ್ದವು. ರಾಜ ಮತ್ತು ರಾಣಿಯರು ಬಿಡುವಿನ ಕಾಲದಲ್ಲಿ ಆ ಆಟಗಳನ್ನು ಆಡುತ್ತಿದ್ದರು. "ದೊರೆವೀರಮಕ್ಕಳು ಅರಮನೆಯೊಳು ಆರೋಗಿಸಿ ನಾರಿಪುರುಷ ವಿನಯದಿ ತರಿಸಿದರಾಗ ಪಗಡೆಲೆಕ್ಕ ಚದುರಂಗ ಇರದೆ ದಂಪತಿಗಳಾಡಿದರು[೨೬] ಎಂಬುದಾಗಿ ರಾಜ ರಾಣಿಯರು ಆಡಿ ಸಂತೋಷಗೊಳ್ಳುತ್ತಿದ್ದ ಪಗಡಿಯಾಟದ ವರ್ಣನೆಯನ್ನು ನೂರೊಂದ ಮೇಲಿನಂತೆ ನೀಡಿದ್ದಾನೆ.

ಚದುರಂಗ, ಪಗಡೆ ಮೊದಲಾದ ಒಳಾಂಗಣ ಕ್ರೀಡೆಗಳೊಂದಿಗೆ ಜೂಜು ಕೂಡ ನಡೆಯುತ್ತಿತ್ತು. ರಾಜಧಾನಿಯಲ್ಲಿದ್ದ ಗಣಿಕೆಯರು ಹಲವು ರೀತಿಯ ಜೂಜಾಟಗಳಿಂದ ತಮ್ಮ ಗ್ರಾಹಕರನ್ನು ಮನಸಂತೋಷ ಪಡಿಸುತ್ತಿದ್ದ ಬಗೆಗೆ ಈ ಕಾಲದ ಕವಿಗಳು ವರ್ಣರಂಜಿತ ವಿವರಣೆ ನೀಡಿರುವರು. ಶ್ರೀಮಂತ ಸಮಾಜದಲ್ಲಂತೂ ಜೂಜಾಟವು ಸರ್ವಸಾಮಾನ್ಯವಾಗಿದ್ದಿತು. ಇವುಗಳಲ್ಲದೆ ಕೋಳಿಕಾಳಗ, ಆನೆಕಾಳಗ ಮತ್ತಿತರ ಹಕ್ಕಿಪಕ್ಷಿಗಳ ಕಾಳಗಗಳು ನಡೆಯುತ್ತಿದ್ದು ಇವು ಎಲ್ಲಾ ಜನರು ಸಂತೋಷ ಪಡುತ್ತಿದ್ದ ಜನಪ್ರಿಯ ಮನರಂಜನೆಗಳಾಗಿದ್ದವು.

ವಸಂತೋತ್ಸವ ಕಾಲದಲ್ಲಿ ಪುಷ್ಪೋದ್ಯಾನಗಳಿಗೆ ಬಂದು ಉಯ್ಯಾಲೆಯಾಡುವುದು ಶ್ರೀಮಂತ ಕನ್ಯೆಯರಿಗೆ ಬಹುಪ್ರಿಯವಾಗಿದ್ದಿತು. ಉಜ್ವಲ ವೇಷಾಲಂಕೃತರಾಗಿ ಬಂದ ರಸಿಕ ನಲ್ಲನಲ್ಲೆಯರ ಉಯ್ಯಾಲೆಯಾಟವನ್ನು ಸಮಕಾಲೀನ ಕವಿಗಳು ಮನಮೋಹಕವಾಗಿ ಬಣ್ಣಿಸಿದ್ದಾರೆ. ವನವಿಹಾರ, ಜಲಕ್ರೀಡೆಗಳು ಹಿಂದಿನಿಂದಲೂ ನಡೆದುಬಂದ ವಿಹಾರಗಳೆಂಬುದನ್ನು ಮರೆಯುವಂತಿಲ್ಲ. ಮತ್ತೊಂದು ಕ್ರೀಡೆಯೆಂದರೆ ಕೋಲಾಟವು ಒಡೆಯರ ಒಡ್ಡೋಲಗದ ಕಾಲದಲ್ಲಿ ಹಾಗೂ ವಿಶೇಷ ಸಮಾರಂಭಗಳಲ್ಲಿ ನಡೆಯುತ್ತಿದ್ದ ಸೌಮ್ಯ ಕ್ರೀಡಾ-ಕಲಾಪ್ರದರ್ಶನವಾಗಿತ್ತು. ಬಾಲೆಯರು ಸಿಂಗರಿಸಿಕೊಂಡು ಬಂದು, ಕೈಯಲ್ಲಿ ರತ್ನ ಖಚಿತವಾದ ಕೋಲು ಹಿಡಿದುಕೊಂಡು ಮದ್ದಳೆ ಮೊದಲಾದ ವಾದ್ಯಗಳ ಹಿನ್ನೆಲೆಯಲ್ಲಿ ಲಯಬದ್ಧವಾಗಿ ಕೋಲಾಟವಾಡುತ್ತ, ರಾಜರಾಣಿಯರಾದಿಯಾಗಿ ನರೆದಿದ್ದ ಸಭಿಕರು, ಪೋಷಕರೆಲ್ಲರ ಮನವನ್ನು ತಣಿಸುತ್ತಿದ್ದರು. "ರಾತ್ರಿಯಲ್ಲಿ ನಡೆಯುತ್ತಿದ್ದ ಮಹಾನವಮಿಯ ಒಡ್ಡೋಲಗದಲ್ಲಿ, ಸಭಾಂಗಣವು ದೀವಟಿಕೆಗಳ ಬೆಳಕಿನಿಂದ ಪ್ರಜ್ವಲಿಸುತ್ತಿದ್ದಂತೆಯೇ, ಕೋಲಾಟ, ಇಂದ್ರಜಾಲ ಮತ್ತು ಬಯಲೋಪದ ಆಟಗಳು ಪ್ರದರ್ಶಿತಗೊಂಡವು" ಎಂಬುದಾಗಿ ಕಂಠೀರವ ನರಸರಾಜ ವಿಜಯದಲ್ಲಿ ವರ್ಣಿಸಲ್ಪಟ್ಟಿದೆ.[೨೭] ಬುಗುರಿ ಮಕ್ಕಳಿಗೆ ಅತ್ಯಂತ ಪ್ರಿಯವಾಗಿದ್ದಿತೆಂಬುದನ್ನು ಕವಿ ದೇವಚಂದ್ರನು ಸೂಚಿಸುತ್ತಾನೆ[೨೮].

ವಿಶೇಷ ಸಮಾರಂಭಗಳಲ್ಲಿ ಇತರ ಮನೋರಂಜನಾ ಪ್ರದರ್ಶನಗಳಿದ್ದಂತೆ ನಾಟಕ ಪ್ರದರ್ಶನಗಳೂ ಇದ್ದವು. ಎರಡನೇ ಕಂಠೀರವ ನರಸರಾಜರ ಕಾಲದಲ್ಲಿ 'ಅನಂಗವಿಜಯಭಾಣ' ಮತ್ತು ಆರನೇ ಚಾಮರಾಜ ಒಡೆಯರ ಕಾಲದಲ್ಲಿ 'ಶೃಂಗಾರರಾಜ ತಿಲಕ ಭಾಣ' ಅನ್ನುವ ನಾಟಕಗಳನ್ನು ಶ್ರೀರಂಗಪಟ್ಟಣದ ಶ್ರೀರಂಗನಾಥ ದೇವರ ವಸಂತೋತ್ಸವ ಕಾಲದಲ್ಲಿ ಅಭಿನೀತವಾಗಿದ್ದಿತು[೨೯]. ಈ ನಾಟಕಕ್ಕೆ ಆಸ್ಥಾನದ ಸಾಮಂತ ಮನೆಯವರೊಡನೆ ಅಪಾರ

ಜನಸ್ತೋಮ ನೆರಿದಿದ್ದಿತು. ಯಕ್ಷಗಾನ, ಬಯಲಾಟ ಮತ್ತು ಬೊಂಬೆಯಾಟಗಳೂ ಈ ಕಾಲದಲ್ಲಿ ಜನಪ್ರಿಯವಾಗಿದ್ದವು[೩೦].

ಎರಡನೇ ಕೃಷ್ಣರಾಜನ ಒಡ್ಡೋಲಗದ ಸಂದರ್ಭದಲ್ಲಿ ರಾಮಾಯಣ, ಮಹಾಭಾರತ, ಭಾಗವತ ಮತ್ತು ಪುರಾಣಗಳಲ್ಲಿ ಬರುವ ವಿಶೇಷ ದೃಶ್ಯಗಳನ್ನೂ ಅಭಿನಯಿಸಲಾಗುತ್ತಿತ್ತು. ಪಾಮರ ರಂಜಕರಾದ ಡೊಂಬರೂ ಗಾರುಡಿಗರೂ ಊರಿಂದೂರಿಗೆ ಅಲೆದಾಡಿ ಜನಮನವನ್ನು ವಿನೋದಗೊಳಿಸುತ್ತಿದ್ದರು[೩೧]. ಡೊಂಬರು ಗ್ರಾಮ ನಗರಗಳಿಗೆ ಬಂದು, ಡೋಲು ನಗಾರಿಗಳನ್ನು ಬಾರಿಸಿ, ಜನರನ್ನು ಆಕರ್ಷಿಸುತ್ತಿದ್ದರು. ಅವರು ಹಗ್ಗಗಳೊಂದಿಗೆ ಲಘುಲಾಗು ಲಂಘನೆಗಳ ಮೂಲಕ, ದೊಣ್ಣೆ ಏರುವ ಮೂಲಕ ಹೀಗೆ ಬಗೆಬಗೆಯ ಆಟಗಳನ್ನು ತೋರಿಸಿ ಜನರನ್ನು ರಂಜಿಸುತ್ತಿದ್ದರು. ಇವರು ರಾಜರ ಆಸ್ಥಾನಗಳಲ್ಲೂ ತಮ್ಮ ಕೈಚಳಕವನ್ನು ಪ್ರದರ್ಶಿಸಿ ಸಂಭಾವನೆ ಪಡೆಯುತ್ತಿದ್ದರು. ಹೀಗೆ ಮೈಸೂರು ಒಡೆಯರು ವಿನೋದಕ್ಕಾಗಿ, ಸಾರ್ವಜನಿಕವಾಗಿ ಹಾಗೂ ಆಸ್ಥಾನಗಳಲ್ಲಿ ವಿಶೇಷ ಸಂದರ್ಭಗಳಲ್ಲಿ ಇಂತಹ ಕ್ರೀಡಾಕಲಾ ಪ್ರದರ್ಶನಗಳನ್ನು ಏರ್ಪಡಿಸಿ ಜನರಿಗೆ ಮನೋಲ್ಲಾಸ ಪಡಿಸುತ್ತಿದ್ದರಲ್ಲದೆ ತಾವೂ ಪಾಲ್ಗೊಂಡು ಮನೋಲ್ಲಾಸ ಪಡುತ್ತಿದ್ದರು. ಇವರ ಈ ವಿಶೇಷ ಪ್ರೋತ್ಸಾಹಗಳಿಂದಾಗಿ ಮೈಸೂರು ಕಲೆಗಳ ತವರು ಮನೆಯೆನಿಸಿತು.



***

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಹಯವದನರಾವ್ ಸಿ., **ಮೈಸೂರು ಇತಿಹಾಸ**, ಭಾಗ-೧ ಪು. ೧೬೩-೧೬೬, ೧೭೩-೧೮೦, ೧೮೪-೧೮೬, ೧೮೯, ೨೪೭-೨೪೮, ೩೯೭; **ಕಂಠೀರವ ನರಸರಾಜ ವಿಜಯಂ**, ಸ-೭, ಪಸ-೧೦೯, ಸ-೨೩-೨೫; **ಚಿಕ್ಕದೇವರಾಜ ವಿಜಯಂ**, ಸ-೫, ಪಸ-೧೬೪-೧೬೯.

೨. ಗೋವಿಂದ ವೈದ್ಯ ಕ.ನ.ವಿ. ಸ-೨೦, ಪಸ-೧೫-೧೬.

೩. ಅದೇ., ಪಸ ೫೨-೭೫; ಸ-೨೧, ಪಸ ೧೨, ೫೩-೫೪; ಸ-೧೨, ಪಸ-೭೮-೧೦೮; ಸ-೨೫, ಪಸ ೧-೧೦೩;

೪. ಅದೇ., ಸ-೨೧, ಪಸ ೫೩-೫೪; ಸ-೨೦, ಪಸ ೭೩-೭೪; ಸ-೨೩, ಪಸ ೨೪-೪೩, ೭೫-೭೭, ೫೫-೫೮, ೮೯-೮೭;

೫. ಬಿ. ರಾಮಕೃಷ್ಣರಾವ್., **ಶ್ರೀಮನ್ಮಹಾರಾಜರವರ ವಂಶಾವಳಿ**, ಭಾಗ - ೧, ಪುಟ ೩೩-೪೦; **ಕರ್ನಾಟಕ ಪರಂಪರೆ** - ಸಂಪುಟ -೨, ಪು. ೨೩೭-೨೩೮; **ಕರ್ನಾಟಕ ಥ್ರೂ ದಿ ಏಜಸ್**, ಪು. ೬೯೧.

೬. ಅದೇ, ಪು. ೫೮-೫೯, ೮೮-೮೯.

೭. ಕಂ.ನ.ವಿ. ಸಂಧಿ ೨೧, ಪಸಂ ೧-೨೪.

೮. ಅದೇ, ಪಸಂ ೯೫.

೯. ಮಂಜಪ್ಪಶೆಟ್ಟಿ ಮಸಗಲಿ., **ಮೈಸೂರು ಅರಮನೆ**, ಪು.. ೧೬೧.

೧೦. ಕಂ.ನ.ವಿ. ಸಂಧಿ ೨೧, ಪಸಂ ೮೯-೯೧; ೯೨-೯೫.

೧೧. ಅದೇ, ಪಸಂ ೯೮.

೧೨. ಅದೇ.

೧೩. ಅದೇ, ಪಸಂ ೯೬, ೯೭.

೧೪. ಹಯವದನ್ ರಾವ್ ಸಿ. ಭಾಗ-೧ ಪು-೧೩.

೧೫. **ಚಿಕ್ಕದೇವರಾಜ ವಿಜಯಂ**., ಸ-೫, ಪಸ ೧೬೪-೧೬೮; ಸ-೬, ಪಸ ೧೦೬; ೨೭೦-೨೭೪, ೮೦-೮೨, ೮೭, ೯೯, ೧೦೮, ೧೫೨, ೧೫೪, ೨೦೦;

೧೬. **ಸೌಂದರ್ಯ ಕಾವ್ಯ ಸಂಧಿ**., ೧೨, ಪ.ಸಂ. ೭೯-೯೧.

೧೭. ಕಂ.ನ.ವಿ., ಸಂಧಿ - ೨೧, ಪಸಂ ೮೯-೯೧; ೯೩, ೯೫-೯೮.

೧೮. ಹಯವದನ್ ರಾವ್ ಸಿ. ಭಾಗ-೧., ಪು-೧೬೩-೧೬೬, ೧೭೩-೧೮೦; ಕಂ.ನ.ವಿ.-ಸ-೨, ಪಸ ೭೬, ೯೬-೯೭; ಸ-೭, ಪಸ ೧೧೭-೧೨೦; ೧೯೭.

೧೯. ಅದೇ,

೨೦. **ಸಕಲ ವೈದ್ಯ ಪರಿಹಿತಾ ಸಾಕಾರ್ಣವ** - ಭಾಗ-೧,

೨೧. ಅದೇ,

೨೨. ಅದೇ,

೨೩. ಕಂ.ನ.ವಿ., ಸಂಧ ೨೨, ಪಸ ೪೨-೪೩.

೨೪. ಹಯವದನರಾವ್ ಸಿ., ಪು-೧೮೬-೧೮೭;

೨೫. ಕಂ.ನ.ವಿ, ೭೬, ೯೬-೯೭; ಬಿ. ರಾಮಕೃಷ್ಣರಾವ್, ಭಾಗ-೧, ಪು-೧೫೧;

೨೬. ಸಾಂ.ಕಾ. ಸಂಧಿ-೪, ಪ.ಸಂ. ೪೬-೫೦

೨೭. ಹಯವದನ್ ರಾವ್ ಸಿ., ಪು-೧೭೩-೧೮೦; ಜಿ.ಎಸ್. ಶಿವರುದ್ರಪ್ಪ - **ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ** ಭಾಗ-೫, ಪು-೩೦-೩೧.

೨೮. ದೇವಚಂದ್ರ., **ರಾಜಾವಳಿ ಕಥೆ**, ಪು. ೩೭೩-೩೭೪

೨೯. **ಅನಂಗವಿಜಯಭಾಣ**, ಪು. ೩

೩೦. **ಶೃಂಗಾರರಾಜ ತಿಲಕ ಭಾಣ**, ಪು ೧-೩.

೩೧. ಡಾ. ಮಹಾದೇವಿ - '**ಮೈಸೂರು ಒಡೆಯರ ಕಾಲದ ಸಮಾಜ ಮತ್ತು ಸಂಸ್ಕೃತಿ**, ಮೈ.ವಿ.ವಿ. (ಅಪ್ರಕಟಿತ ಮಹಾಪ್ರಬಂಧ ಪು.೨೧೬-೨೧೮).

# ಒಂದು ತಿದ್ದುಪಡಿ

**ಹುಣಸವಾಡಿ ತಾಮ್ರಶಾಸನ :** ಈ ಸಂಪುಟದ ೧೨೧-೧೨೨ನೇ ಪುಟದಲ್ಲಿ ಇರುವ ಕನ್ನಡ ಲಿಪಿಯ ಸಂಸ್ಕೃತ ತೆಲುಗು ಭಾಷೆಯ (ಈ ತೆಲುಗು ಶಾಸನದಲ್ಲಿ ಕೆಲವು ಕನ್ನಡ ಶಬ್ದಗಳೂ ಸೇರಿಕೊಂಡಿವೆ) ಈ ಶಾಸನದ ಪಾಠದ ಕರಡನ್ನು ತಿದ್ದುವಲ್ಲಿ ಶಾಸನದಲ್ಲಿರುವಂತೆಯೇ ಸೂಚಿಸಿದ ತಿದ್ದುಪಡಿಗಳು ಆಕಸ್ಮಿಕವಾಗಿ ಬಿಟ್ಟುಹೋಗಿರುವ ಕಾರಣ, ಈ ಕೆಳಗೆ ಸೂಚಿಸಿರುವಂತೆ ಆಯಾ ಸಾಲುಗಳ ಶಬ್ದಗಳನ್ನು ದಯವಿಟ್ಟು ಓದಿಕೊಳ್ಳಲು ಪ್ರಾರ್ಥಿಸಲಾಗಿದೆ.

**ಶಾಸನ ಪಾಠದ ಸಾಲುಗಳು**

೧೦ ವಾನಿ ಕೊಡಕುಲು ಯೇಡುಗುರು। . . . .

.

೧೬ ಲ್ಲಿಂಗನಗಾನಿಕಿಯಿನಿ ಸಥಿನಿಂಡ ವುಡುಗುರು ಗುರಂ।ಸುರ[ಛಿ]। ಚೌರಿಲ್ಲು . . .

.

೧೮ ಲ್ಲೇಶ್ವರಡು ಕೊಳದ ಮಲ್ಲೇಶ್ವರುಡು।ಕಲ್ಯಾಣಪಟ್ಟನಿಕಿ ಪೋಯಿ

೧೯ ವಾರ್ರಿಕಿಯೆಂಡಿ . . . . . . ಪಾದಕಾಣಿಕೆ ಅಡವರು

೨೦ ವಂ ಚೇಸಿ ಗುರು ಜಂಗಮಾರ್ಚನಕು . . .

.

೨೨ ಕಿಂದ . . . . . . . ಅವಲು ರೊಪಂ।ಲೊ ದೆವಿನಿ . . .

೨೩ . . . ಪಿಲುವನಂಪಿ ಭದುಕು

೨೪ ಲು ದ್ರವ್ಯಂ ಮುಡುಗುಳ್ಳು . . . . .

೨೫ ಪಂಪಿನಿ . . . . ಸಕ[ನ್ನ]ಫ ಪಂಚಾಂಗಂ ಸುಭಭಟ್ಲು।ತಲಾರ್ರಿ ಕದುಪಲ

೨೬ ಚಜಗೆ ಮಲ್ಲಫ। ಮಂಗಲಲ್ಲಿಂಗುಡು। ಕುಂಭರ ರಾಮುಡು। ಚ್ಯಕಲ ಚಿಂನುಡು। . . ಚ್ಯಲವಾಧಿ . .

.

೨೮ ಯಂಗಟನ ಬೋಯಿಡು . . . ಮಲಕೋಟ ಶಾಂತಿ ಚೇಸಿರ್ರಿ । ಕೋಟ ಇರುಲು ಆಮಿದಿ।೯ಮಿದಿ

೨೯ . . . ನಾಲ್ಗು ದೇಶಲು ರಾಯಲು

೩೦ ನಿ ತೋಡುಕೋನಿ . . . . ವಚಿ ರ್ಯಸರುಪಟ್ನ

೩೧ ಚವುಡುಗೌಡುನಿ [ಕೋ]ಡುಕೋನಿ . . . . ಅನುದಪಿ ಪ್ಯದಕೆಂಪಗೌನಿ

೩೨ ನ ಗೌನಿ ತೋಡುಕೋನಿ ವಚಿ।ಲೆರಮಾಳಗೆಕು ಪೋಯಿ ತಿರುಮಳಚಾರ್ಯಲುನಿ ತೋಡುಕೋನಿ . . .

೩೩ ಗಂನಿ ಜಯಂ ಚೇಸಿ . . . ಅನೆ ಪೇರು ಪೆಸ ಪೆಟಿರ್ರಿ । ಅಸುರಾಮುನಿ ಗುಡಿ ೧ ಕಟಿಕಿಂದ

.

೩೬ ತುರ್ಪದಿಕುನ ಪಲುಮ್ಯಾರರಾಯಿ ೧ . . ಪಡಮಟ೧

೩೭ ಲ ರಾಳ್ಲು । ಗೌನಿ ಮಾನ್ಯ ಚೇಸಿ . . . . . . ಚಲಿ

.

೩೯ . . . . . . ಪಿಲು । ಚುಕೋನಿ . . . .

೪೦ . . . . . ವೀರು ಪೆಟಿರ್ರಿ

೪೧ . . . . . . . ರಾಗಿಕಿ

೪೨ . . ಕೊರಮುಟುಯಿದು ಚೊರುವು

೪೩ . . . . ಛಿದುಕುಲಲೋ . . . ಭಲಿಚೆಲ್ಲಿ

೪೪ . . . . . . . . ವೀರಿನಿ . . . ಪೋಯಿ

೪೫ ಆಪು[ಡು] ಪೇರು . . . . ಅನೆ ಪೆಸಟರ್ರಿ ಮುಟುವ [ಳಿ=ಳ ?]

.

೪೭ ಲಲೋನಲು ರಾಳ್ಲು ಕೋಟ [ದ್ವಾ]ರನಿಕಿ ಯಸಿವುಂಡಿದಿ . . . .

.

೫೧ ಕಳತ್ರಡುಲುಂ

೫೨ ಯಿಂದು

೫೩ ಮಲು ಸಾಕ್ಷಿ ಪಶು ಕೀಟಾಂ [ಅ]ವಲು

೫೪ ದಿಕಿ ಯಿಚಿರಿ ಹುಚಿವಾಪಿ ಅಂಪಿಗಯು[ಮು?]ನಿ ಗುಡಿ ಪೋಯಿ

೫೫ [ಯಿ] ಚಿರ್ರಿ ॥

[ಪುಟ ೧೨೪ರ 'ಮಂಗಪಲ್ಲಿ' ಶಬ್ದವನ್ನು ಬಿಡಬೇಕು.]

(ಈ ಶಾಸನದ ಕೆಲವು ತೆಲುಗು ಶಬ್ದಗಳ ಸೂಕ್ತ ಅರ್ಥವನ್ನು ತಿಳಿಯಲು ತುಮಕೂರಿನ ಉದ್ಯಮಿ ತೆಲುಗು ಭಾಷಾತಜ್ಞರಾದ ಶ್ರೀ ಎಸ್. ರಾಜಗೋಪಾಲ್ ಅವರಿಂದಲೂ ನೆರವು ಪಡೆದು ಅವರಿಗೆ ಕೃತಜ್ಞತೆಯನ್ನು ಈ ಮೂಲಕ ಅರ್ಪಿಸಲಾಗಿದೆ). [- ಸಂ].

# HIGHLIGHTS

1. **A Megalithic site in Arasikere Taluk**

*Dr. Hanuma Naik*

Dr. Naik has drawn our attention towards the menhirs at Cheluvanahalli and a relative discussion has also been placed. The origin and further prevalence of menhirs has also been dealt with.

2. **The prehistoric relics at Hale Dodderi**

*S.G. Ramadasa Reddy*

Sri Reddy has explained the characteristic features of the relics found at Dodderi since stone-age. He draws our attention especially to the relics of the Satavahana period and later the historical war between Mogals & Marathas at Dodderi during A.D. 1690-1696. The physical features of the location has also been well noted.

3. **Mallappana Gudda a prehistoric location since neolithic age**

*Mutturaju*

The author has given the full details of pre-historic figures engraved on the rocks of Mallappana Gudda and presents the concommittant conclusions.

4. **Kenchana Gudda - A Field Study**

*Dr. M. Kotresh*

The Kenchana Gudda location with prehistoric preamble and historical development of the location with reference to its forts, temples and existing inscriptions have been explained, in detail.

5. **A newlight on Buddhism in Karnataka - the continued excavation at Rajagatta**

*Dr. M.S. Krishna Murthy*
*Dr. M.V. Krishnappa*

The authors have explained the architecture of the structures found at the complex of Rajagatta chaitya and vihara during their excavation. The scientific analysis of the structural aspects supported by illustrative ground plan is quite interesting and it is a research pleasure to read their findings. The authors opine that the Rajagatta chaitya-vihara complex is so big and probably unique, and rare in entire South India. This 'Gajaprushta Chaityalaya' was a prayer hall and had all model accessories of Buddhistic structure. This kind of Buddhistic chaitya-vihara complex has come to the notice for the first time in Karnataka. In the midst of the opinion that South Karnataka had not contributed anything to the history and architecture of Buddhism, the availabity of the chaitya-vihara complex at Rajagatta since the excavation is a matter of pride and prime recitation.

6. **Antiquities near Mattigoodu Kudure Birappa Circle**

*Jayadevappa Jainakeri*

Sri Jayadevappa has explained the characteristic features of the antiquities like hero stone, inscription, Saptamatrika plank and Keshava idol found near Kudure Birappa Circle.

7. **The relics (antiquities) at Madihalli and Benevada village**

*Dr. Smt. Smita Surebankar*

Dr. Smt. Smita has explained the art & architecture of the antiquities found at the two villages, along with due illustrations of jina sculpture and hero stones available.

8. **The antiquities of Muttagi village**

*Pro. K.C. Malligavad*

Sri Malligavad has explained the special characteristics of antiquities like Shaiva, Jina idols and temples found at village Muttagi. He draws our attention towards the historical aspects and the present condition of these antiquities which are to be safe guarded by the concerned authorities.

9. **Relics in the Vipra village**

*Dr. H. Jayamma Kariyanna*

Dr. Jayamma has explained the artistic & architectural eminence of the temples in the Vipra-Narayana village, and its historical importance as delineated in the inscriptions of Nolamba period.

10. **The antiquities of Konanatale village**

*Rakesh B.C.*

The author has given the details of geographical location, place name & historical factors, architecture and the sculpture of the temples along with caves existing. The folk practies vogue in this area are also described.

11. **Museums as a communication centre - A cultural review**

*Dr. S.K. Melakara*

Dr. Melakara has traced the evolution of Museums and their conceptual basis with relative citations. He stresses mainly the communication aspects of Museums w.r.t. social, literal and cultural implications in the society in relation to the individual and community; He opines it is a media for evolution of visual learning activity for all round development of a human being.

12. **Jaina Yakshis in Sculptures**

*Dr. Channakka Pavate*

Dr. Channakka has given a beautiful characteristic description of Jaina yakshis found in the sculptures of Karnataka. The vivid facets of sculpture has been explained with inscriptional evidences and citations from literary sources.

13. **The rare Gazalakshmi sculpture at Hubballi and Kundagola Taluk**

*Jayamma B.*

The author draws our attention to Gazalakshmi diety who is also termed as Badubbe, since Chalukyan period. The sculptural characteristics also have been furnished. Baduvammaiah sculpture shown in place of Gazalakshmi is a rare phenomenon as opined by the author.

14. **Some characteristic sculptures of Honnali Taluk**

*Dr. Balasubramanya*

The author has explained the special characteristic sculptures found at different village temples of Honnali Tq. He has caroborated his findings in the background of inscriptions, local history and sculptural aspects. He draws our attention as to how Jina basadi has given place to Hindu temples. He draws our attention to the Sharabha form of Virabhadra in the sculpture in the Kunkuva temple.

15. **Buddist religion in North Canara District**

*Dr. Ganapathi Gowda*

The author has traced the existence of Buddhistic religion, with reference to inscriptions, sculpture, and historical evidences found in the various locations in the District. The excavational evidences have also been referred in his essay and the findings presented by different authorities in this regard.

**16. Obsolete Nakareshwara Temple at Tonnur**

*Dr. C. Mahadev*

Dr. Mahadeva has traced the characteristic history of the Nakareshwara temple of the Hoysala period. He has also furnished the reasons for the obsolete condition of this old temple when Vyshnavism became popular and powerful in this area since Ramanuja. A Darga has been constructed in A.D. 1358 behind the Nakareshwara temple since this temple was completely neglected by the local people.

**17. Historical Kuruvagadde Rameshwara temple**

*Pro. K. Vinodamma*

The author has explained the geographical location of the temple, and its beautiful landscape. She has also given the historical, architectural, inscriptional evidences about the Rameshwara Temple in addition to the oral history.

**18. Three ancient temples - A research**

*Sasalu J. Vishwanath*

The author has discovered a Shivalinga of a Shiva temple said to have been of the Ganga period and has detailed the characteristics of the Shivalinga. He further stresses that 'Kolala' was the former Kuvalalapura of Gangas to which he presents an evidence of a velavali veeragal inscription of Ganga period recently discovered. Sri Vishwanatha also draws our attention to the idols of Bhairaveshwara, Koteshwara of 13th century resembling Hoysala style found at Hosakote of Pandavapura Tq. It is interesting to note that the Vyshnavi Idol found in Rajagatta area is suggestive of Sapthamatrica worship or Durga worship. It should also be noted that Chamundi is one aspect or form of Durga, who represents Saptamatrica in entirety.

**19. The memorial sculptures of Kalkeri Hanagal Tq.**

*Dr. R.M. Shadaksharaiah*

Dr. Shadaksharaiah has described the characteristic features of the sculptures such as hero stones, Mastigals Nisadi stones found at Kalkeri etc. He opines that these characteristics especially 'Apsarayana', sculpture an hero stones. which was believed to be existing till 10th century only, now it can be extended upto 12-13th century.

**20. Wooden sculptures in Parvathi Temple at Keladi**

*Dr. G.V. Kallapura*

Dr. Kallapura has presented in his essay the special features of wooden sculptures of Ganesha, Rama Lakshmana - Sita, Kalingamardana Krishna etc., found at Parvathi temple in Keladi. He opines the structural characteristics of these wooden figures probably have been based on the shilpa text-classic works like Amshumad bhedagama, Shilparatna Kashyapa Silpashastra etc., since the texts on wooden sculptures are not available.

**21. Unpublished inscriptions and sculptures at Hiregutti**

*Jayasri B. Deshamanye*

The author has presented the details of an unpublished Jina Sasana inscribed on the pedastal of Jina Idol at Hiregutti. Further she has explained the sculptural characteristics of hero stones and Mahasati stones, found in that locality.

**22. An unpublished inscription of Attimabbe**

*Dr. D.V. Paramashiva Murthy*

Dr. Murthy has discovered a new inscription pertaining to Attimabbe and has

rightly pointed out, that the dependence for the life history of Attimabbe more on poetical works has been lightened by this discovery. Further he argues that the text of this inscription has been composed by the poet Ranna and some of the lines of this inscription have been incorporated in his Ajitapurana. This naturally suggests that the composition of Ajitapurana was after 987 AD, this being the date of the inscription.

**23. An unpublished inscription in Balaganur Village**

*Channabasappa B.*

Sri Channabasappa a research student brings to our attention that the importance of the present unpublished inscription lies in being the first inscription that throws light on the diety Ellamma of Belaganuru village & endowments given by the chieftains of this area has also been noted here.

**24. Some unpublished inscriptions of Kodagu, Bangalore and Tumkur Districts**

*M.G. Nagaraja*

The inscriptions from Doddamalate, Choudlu, Kusubur of Somwarpet Tq. in Kodagu District; Hucchirayyana doddi, Chakkalur, of Channapatna Tq. and Kempagowdan doddi of Ramanagaram Tq. Bangalore (R) District; and supposed to be a spurious copper plate of Hunasavadi in Tumkur district - all these indicate the political, cultural and social aspects and economic situation of their times. Their period vary from 11$^{th}$ century upto 16-17$^{th}$ century. The texts and their implications have been presented along with the folk traditions related to them. The author also opines the text of spurious copper plate can be subjected to further review and any how he has also given a corriandum.

**25. An unpublished inscription; Nirupa of Chendoor village**

*Dr. H. Ravindranath*

The author while categorising the varieties of Nirupa, pleads that the Nirupas will help in the constructing the local History. It also helps to know the social, economic and cultural life of the people of any place to which it pertains in general.

**26. A bronze inscription pertaining to Sena Boyatti**

*Dr. Umanatha Shenai*

Dr. Shenai has presented an interesting inscriptional evidence regarding a Senaboyatti in the regime of Bangarasas of Bangadi in South Canara. He has explained the work schedule of this officer and the charties made by her to 'Gomatanatha'.

**27. Identifying Kappe Arabhatta - an attempt**

*Dr. H.S. Gopala Rao*

The author draws our attention to the discussions made over on the Kappe Arabhatta and his inscription at Badami. Accordingly Kappe Arabhatta was a great warrior; the word 'Kappe' is an the epithet attached to his name; it is also the family name. But comparing with the text of a two lined inscritpion at Badami published in 1990 and epithets attached to the King, with that of Kappe Arabhatta's main inscription, Dr. Gopala Rao puts forth that Polekeshi who won against Sri Harsha, but felt depressed when Pallava Narasimhavarma occupied Badami, lead a life of oblivion in the caves of Badami, was probably Kappe Arabhatta himself. He also says if any additional clarity is obtained on the epithet 'Kappe' the opinion hither to arrived can be subjected to the modification.

**28. A published inscription of Kanyana - A study**

*Dr. B. Jagadeesh Shetty*

Dr. Jagadeesh discusses about the Vijayanagara king 'Veerapratapa Prouda Devaraya Maharaya' mentioned in this inscription (1457) is none other than Mallikarjuna who used to be addressed in that fashion. He further states the taxes viz kula, upachara were vogue in Vijayanagara period and gives some more details about Jananis the land lords. Horahina Heggade the one who is not related directly to the village, had also an important role in the local administration as they were Landowners of the place. The author opines that this inscription is an useful record to study economic History of the Vijayanagara period.

**29. Bangalore East Taluk - an inscriptional study**

*Dr. P.V. Krishna Murthy*

Dr. P.V.K. has delineated the geographical area of Bangalore East Taluk formed in 2001 AD, duly specifying its characteristic features. Furthur he has explained the classic dynasties that have ruled this area, and progress done under their regime. It may be tank system that has enriched underground water, agriculture and has shown how it has fed the people, culture that has mould the life this area - all this has been presented. In toto, in the formation of a taluk, what are the ingrediant features to be catered for has been put forth.

**30. A published unknown copper plate of Nayakas of Santhebennur**

*Santhebennur Sumatindra Nadig*

Sri Nadig has drawn our attention towards a copper plate, (though published, it has not come to the limelight) present in Indian Historical Research Institute of Poona. The copper plate furnishes more information about Sitharamappa Nayaka the son of Sharja Hanumappa Nayaka and their dynasty origin.

**31. An unpublished copperplate of Kundur in Honnali Taluk**

*Dr. S.G. Samak*

Dr. Samak, draws our attention through this inscription, regarding the rulers among the Nayakas of Kundur 1566-1577 A.D., giving a comparitive note with Santhe bennur Nayaks. The rural language used in the Copper plate and place names mentioned have been discussed. Interestingly the plate furnishes the information regarding the treatment shown to the person who was sent to fight against the enemy but returned defeated and in conseuqence to it and withdrawal of the titles conferred till then and the fines imposed on him has been explained.

**32. The copper plate with Mandeyam Devashikhamani ParthaSarathi Ayyangar**

*G.K. Devaraja Swami*

Sri Swami has explained the main characteristics of the contents of the copper plate with its text and draws our attention to the regime of Rajawodeyar at Srirangapattana and the authorship of Sriranga Mahatme of Singarangaiangar mentioned in the inscription. The two other inscriptions of the period of Rajawodeyar have also been dealt with.

**33. The pillar edict of Malvalli - A perview**

*B.S. Ramabhatta*

The author has analysed the contents of the pillar edict with related references. He refers to the reign of the Chutus and also matriarchal conventions w.r.t. individual names. The author opines the Buddistic

way of writing matriarchal epithets was discontinued after the Kadambas in the individual names of Bramhin kings.

**34. Halmidi Inscription - A study**

*K.V. Raja Gopal*

Pro. Raja Gopal has enumerated the studies made hither to on Halmidi inscription and a comparitive analysis of the same has been presented along with the conclusions he has drawn on his account also. He opines computer technology may be used in this regard, which may shed new light hither to not defined.

**35. Honnali Hirekalmatha in the inscriptions - A note**

*Dr. Jagadeesh*

Dr. Jagadeesh in his note has traced the traditional Guruparampare of the Hirekalmatha, the donations to the mutt by Keladi rulers and urbanisation of the village Kudi with its rename Basavarajapura.

**36. The language of the Kannada inscriptions during the reign of A Krishnadevaraya**

*S.S. Bhagavathi*
*S.S. Melinamani*

The authors being the research students have brought out the linguistic characters found in the Kannada inscriptions during the period of Vijayanagara King Krishnadeva Raya. The analysis is quite interesting.

**37. Reference of plant, tree, earth, water and tax etc., in the inscriptions at Harihara - a scientific view**

*Harihara Srinivasa Rao*

The author has given a comparitive analysis between the textual words pertaining to vegetables, soil and agriculture, duly giving respective botanical names. Further the materials donoted for 'Trikāla Nivēdya' (Three times offering to God) and other accessories to the God Harihareshwara has been listed. He has dealt about some of the place names of the surrounding area.

**38. The Garudas of Mugilakula referred in inscriptions**

*R. Venkatesha Murthy*

Sri Venkatesha Murthy has explained the functions of Mugilakula Garudas as found in inscriptions and sculpture. He has also derived the Shaiva attributes of Mugilakula and its religious importance.

**39. Inscriptional poets, inscribers etc in the Chikkamagalur Dt.**

*Dr. S.M. Nagabushana*

Dr. Nagabhushana draws our attention regarding the role of poets, writers and engraveres in preparing, an inscription on stones or copper plate. He has concentrated these factors w.r.t. Chikkamangalur District and draws our attention to the Kannada poet Janna who composed the inscritpion of Tarikere. As a result, many inscriptions do have poetical or literary touch in their composition. The author also has attempted to present the dynasty tree of these poets etc, and titles they had due to their artistic achievements.

**40. Reference to mathas and temples of Keladi Nayakas' period in the records of the Sringeri Matha**

*Dr. A.K. Shastry*

Owing to land endowments made by the Vijayanagar Emperors, Nayakas of Keladi, Odeyars, Haider Ali and Tipu Sultan of Mysore, Marathas, British and several chieftains to the Sringeri Matha, through the ages and in the course it developed as a Dharmasamsthana. In this connection

Dr. Shastri brings to our attention the endowments and their continuations, conformations made by Keladi kings like Venkatappa Nayaka I (A.D. 15823-1629).

The records also refer to erection of agrahara and a fort at Bhuvanagiridurga. The author also says that in A.D. 1757, Somasekhara Nayaka, adopted son of Virammaji, endowed land valued 360 varahas and 4 hanas, for amritapadi and nandadeepa of Sri Chennavira Rajesvara and Ratnamaya Venugopalakrisna.

The records also refer to Sringeri, Swarna valli, Ramachandrapura, Nelemavu, Gokarna, Sode Haigriva, Palimaru, Adamaru, Nerambali, Pejavar, Tirthahalli, Mulvagil, Ramanuja, Sri Yogisvara, Sri Yogindra, Viramahesvara, Virakta Mahantina Matha, etc.

**41. Sanketi Samaja in century letters - A review**

*Dr. B.V. Sudhamani*

The letters covering the factors like social and culture in the habits, food and agriculture, pains and reliefs, poverty, unemployment, modern education, undergoing enculturation and acculturation from 1881-1991; all have been analysed w.r.t. to Sanketi samaj; who hailed originally from Tamilnadu. The cultural aspect in the communion of tradition and social change with best suitability is being attempted in modern times in this community - Dr. Sudhamani reviews these aspects in her essay with conscious honesty.

**42. Gazanur Agrahara - Pallakki Krishnachar - unpublished inscription of Keladi Basappa Nayaka**

*Keladi Gunda Jois*

Sri Jois has traced the history of Gazanoor, history of 'pallaki' family and its relations with Akshobhyathritha Matha and Keladi, furnishing concomitant annextures. He has also noted the researches done and projects undertaken, in this direction.

**43. A rare unpublished record of Halasanadu Karanika family in Keladi period**

*Dr. Keladi Venkatesh Jois*

Dr. Venkatesh has dealt in detail the Karanikas in the services of Keladi rulers in historical dimension. The service rendered, reasons for the migration of the family to different areas has been substantiated by a record and a map.

**44. Three unpublished records of Keladi Kings**

*V. Ramesh Karanth*

Sri Karanth has deciphered three unpublished Nirupa records of the Keladi period from 1559 to 1748. They mention about the i. Keladi Sankanna Nayaka, entrusted parupathegar seeme office to Lakshmipathi Ayya, since Malenahallisime was destroyed by Muslims, ii. Chinna Bandarada Ramachandraiah was made prime minister of Keladi and Araga states; Also donations made by Virabhadra Nayaka to the different temples and donations by Somashekhara Nayaka-II etc., The author says the records give an information regarding the role of Mahajanas of Agraharas and how they were Liason offers between common people and the palace.

**45. An unpublished Mekenji collected Tamil Kaifiat of Devaraya**

*Dr. Tamil Selvi*

Dr. Selvi has present an interesting Kaifiat of Vijayanagara times which deals about a conflict between Bramhmins and natives

of the village, in connection with a donated land. When the complaint was given to Devaraya, a group of 'Mallaga Settis' were sent and Bramhins' encroachment was removed. In a class and caste oriented conflict i.e. a conflict between the village community and caste group it is interesting to observe that the justice was given to community. The 'paravente' which has a folk touch has also been notified by the author. A picture of a socio-cultural life of Vijayanagara period can be traced in this Kaifiat.

**46. Applications by merchants of Mangalore and Krishna Math of Udupi seeking tax concessions**

*Dr. Malathi K. Murthy*

The author has described the tax structure and method of collection in the early part of 19th century in Kanara area and the representations by the merchants for minor modifications in the increased tax placement. It is interesting to note that the representation was probably by the parpattedar of the Krishna temple in udupi to give tax concession on the articles of daily use for the temple; but the same was turned down with the observation any concession to a particular temple will be partial and undesirable advantage may set in. The author opines the Company Government responded to merchants, in view of the tax profit.

**47. A rare Gold Coin of Nanni Nolamba**

*Mandarke Nityananda Pai*

The author while explaining the historical existence of Nolambas in Nolambavadi from 8th - 11th century says about the titles they had attached to their names being the samanthas of Kalyani Chalukya prominently. He explains the coinage characteristics of Trilokya Nanni Nolamba-II and concludes the samanthas not only use to attach the titles of their lords to their names and print the coins.

**48. Some peeps in Nitivakyamratam**

*Dr. Jotsna Kamat*

Smt. Kamat has compared the ironical situation in modern life with that of depicted life in Nitivakyamritam of 10th century, regarding marriage age, religious tolerance, generacity of the king, loyalty to the nation, condemnation of bribery, transfer of key post offices and (demerits), limitations of administrative officers, etc., where in the administration with moral integrity has been stressed. The book Nitivakyamrata edited by Pro. Dixit and etal in 2000 A.D. has been referred by the author.

**49. Mixed Rice (Kattoraga) varieties among Kannadigas**

*Dr. B. Manjula*

The author has explained the food habits and varieties of rice preparations, vogue among Kannadigas. The facts have been extracted from the literary and folk sources; And the modern practices have also been compared.

**50. The well water abundance during Bijapur Sultans**

*Dr. S.K. Joshi*

Dr. Joshi explaining the geographical characteristics of Bijapur area and medieval Islamic Indian Architecture, has furnished full details of the variety of wells during Bijapur Sultans regime. How they have been useful for the public use and developed historical tradition also has been explained.

| ಕ್ರ.ಸಂ. | ದಿನಾಂಕ | ಸ್ಥಳ | ಅಧ್ಯಕ್ಷತೆ/ಉದ್ಘಾಟನೆ | ಮುಖ್ಯ ಅತಿಥಿಗಳು/ಉಪನ್ಯಾಸಕರು | ಇತರ ವಿಷಯಗಳು |
|---|---|---|---|---|---|
| ೮. | ೧೮.೮.೦೪ | ಪಿ.ಎಂ.ಸಿ. ಬಾಲಕಿಯರ ಪ್ರೌಢಶಾಲೆ, ಹೊಸಪೇಟೆ | **ಸರ್ವಶ್ರೀ** ಶ್ರೀಮತಿ ಕೆ. ಫಣಿವೇಣಿ (ಮುಖ್ಯೋಪಾಧ್ಯಾಯಿನಿ) | **ಸರ್ವಶ್ರೀ** ಡಾ. ಮೀನಾಕ್ಷಿ ಜಂಗಮನಿ (ವಿಜಯನಗರ ಕಾಲೇಜ್) ಡಾ. ಮಂಜುಳ (ಥಿಯಾಸಾಫಿಕಲ್ ಮಹಿಳಾ ಕಾಲೇಜ್) | |
| ೯. | ೧೮.೦೮.೦೪ | ಕಟೀಲ್ ದುರ್ಗಾಪರಮೇಶ್ವರಿ ಪ್ರಥಮ ದರ್ಜೆ ಕಾಲೇಜ್ ಕಟೀಲು | ಬಾಲಕೃಷ್ಣಭಟ್, ಮಳವಳ್ಳಿ (ಪ್ರಾಂಶುಪಾಲರು) | ಡಾ. ಪುಂಡಿಕ್ಯಾ ಗಣಪತಿಭಟ್ (ಇತಿಹಾಸ ವಿಭಾಗ ಮುಖ್ಯಸ್ಥರು) | ವಿದ್ಯಾರ್ಥಿಗಳು ಕ್ಷೇತ್ರಕಾರ್ಯ ನಡೆಸಿ ವರದಿ ಮಂಡಿಸಿದರು. |
| ೧೦. | ೧೮.೦೮.೦೪ | ಕಲಾ ವಾಣಿಜ್ಯ ಮತ್ತು ಬಿಸಿಎ ಕಾಲೇಜ್ ವಿಜಾಪುರ | ಎ.ಜಿ. ಕುಲಕರ್ಣಿ (ಪ್ರಾಂಶುಪಾಲರು) | ಪ್ರೊ. ಮುಸ್ತಾಕ್ ಇನಾಂದಾರ್ | |
| ೧೧. | ೧೯.೦೮.೦೪ | ಕೊಟ್ಟೂರೇಶ್ವರ ಪ.ಪೂ. ಕಾಲೇಜ್ ಕೊಟ್ಟೂರು | ಆರ್. ಸಕ್ರೆರಡ್ಡಿ (ಪ್ರಾಚಾರ್ಯರು) | ಎಂ. ದಿವಾಕರ್ (ವಿಜಯನಗರ ಕಾಲೇಜ್) | |
| ೧೨. | ೧೯.೦೮.೦೪ | ಕಿಟೆಲ್ ಕಲಾ ಮಹಾವಿದ್ಯಾಲಯ ಧಾರವಾಡ | **ಉದ್ಘಾಟನೆ** : ಡಾ.ಎಂ.ಟಿ. ಕಾಂಬಳೆ (ಇತಿಹಾಸ ವಿಭಾಗ ಮುಖ್ಯಸ್ಥರು ಕರ್ನಾಟಕ ವಿ.ವಿ.) **ಅಧ್ಯಕ್ಷರು** : ಎಂ.ಜೆ. ಪುನೀತ್ (ಪ್ರಾಂಶುಪಾಲರು) | ಡಾ. ಎಂ.ವೈ. ಸಾವಂತ್ | |
| ೧೩. | ೧೯.೦೮.೦೪ | ಸಿ.ಜಿ. ಬೆಲ್ಲದ ಸರ್ಕಾರಿ ಪ್ರ.ದ. ಕಾಲೇಜ್ ಅಕ್ಕಿ ಆಲೂರು | **ಉದ್ಘಾಟನೆ** : ಸಿ.ಎಂ. ಉದಾಸಿ (ವಿಧಾನಸಭಾ ಸದಸ್ಯರು ಹಾನಗಲ್ಲು) **ಅಧ್ಯಕ್ಷತೆ** : ಬಿ.ಸಿ. ಪಾಟೀಲ್ (ಅಧ್ಯಕ್ಷರು, ಗ್ರಾ. ಪಂ.) | ಶ್ರೀಮತಿ ಸುಲೋಚನಾ ಪೋತ್ನೀಸ್ (ಸಹಾಯಕ ನಿರ್ದೇಶಕರು, ಪುರಾತತ್ವ ವಸ್ತು ಸಂಗ್ರಹಾಲಯ, ಗದಗ) ನಾರಾಯಣಶಾಸ್ತ್ರಿ (ಕನ್ನಡ ಪಂಡಿತರು) | ಹಾವೇರಿ ವಾರ್ತಾ ಇಲಾಖೆಯ ಸಹಯೋಗದೊಂದಿಗೆ ಕಾರ್ಯಕ್ರಮ ನಡೆಸಲಾಗಿದೆ. |
| ೧೪. | ೧೯.೦೮.೦೪ | ಶ್ರೀಮತಿ ಬ್ಯಾ. ಮೆಮೋರಿಯಲ್ ಸರಕಾರಿ ಮ್ಯೂಸಿಯಂ, ಬಿಜ್ಜೆ ಮಂಗಳೂರು | ಡಾ. ಪ್ರಭಾಕರ ಜೋಷಿ | ಗೋಪಾಲಕೃಷ್ಣಭಟ್ ಸೇರಾಜೆ ನಾಗರಾಜ್ ಸಿ. | ಮ್ಯೂಸಿಯಂ ಸಂದರ್ಶನ ಮಾಡಿದರು. |
| ೧೫. | ೧೯.೦೮.೦೪ | ಸರಕಾರಿ ಪ್ರೌಢಶಾಲೆ ಕಮಲಾಪುರ | ಡಿ. ಗುರುಸ್ವಾಮಿ (ಮುಖ್ಯೋಪಾಧ್ಯಾಯರು) | ಡಾ. ಕೊಟ್ರೇಶ್ ಎಂ. (ವಸ್ತು ಸಂಗ್ರಹಾಲಯ ಕ.ವಿ.ವಿ. ಹಂಪಿ) | |
| ೧೬. | ೧೯.೦೮.೦೪ | ಕಲಾ, ವಾಣಿಜ್ಯ ಮತ್ತು ಬಿಸಿಎ ಕಾಲೇಜ್, ವಿಜಾಪುರ | ಪ್ರೊ. ಎ.ಜಿ. ಕುಲಕರ್ಣಿ (ಪ್ರಾಂಶುಪಾಲರು) | ಪ್ರೊ. ಮುಸ್ತಾಕ್ ಇನಾಂದಾರ್ ಪ್ರೊ. ಎಸ್.ಬಿ. ಪೂಜಾರಿ | |

| ಕ್ರ.ಸಂ. | ದಿನಾಂಕ | ಸ್ಥಳ | ಅಧ್ಯಕ್ಷತೆ/ಉದ್ಘಾಟನೆ | ಮುಖ್ಯ ಅತಿಥಿಗಳು/ಉಪನ್ಯಾಸಕರು | ಇತರ ವಿಷಯಗಳು |
|---|---|---|---|---|---|
| ೧೭. | ೨೦.೦೮.೦೪ | ಸರ್ದಾರ್ ಪಟೇಲ್ ಪ್ರೌಢಶಾಲೆ, ಹೊಸಪೇಟೆ | **ಸರ್ವಶ್ರೀ** ಬಿ. ನಾಗರಾಜ್ (ಮುಖ್ಯೋಪಾಧ್ಯಾಯರು) | **ಸರ್ವಶ್ರೀ** ಎಂ. ದಿವಾಕರ (ಇತಿಹಾಸ ಉಪನ್ಯಾಸಕ, ವಿಜಯನಗರ ಕಾಲೇಜ್) | |
| ೧೮. | ೨೦.೦೮.೦೪ | ಸಂದೇಶ್ ಲಲಿತ ಕಲಾ ಮಹಾವಿದ್ಯಾಲಯ | ಶ್ರೀಮತಿ ಆರತಿ ಶೆಟ್ಟಿ (ಪ್ರಾಂಶುಪಾಲರು) | ಅನಂತರಾಜ ಇಂದ್ರ | ವಿದ್ಯಾರ್ಥಿಗಳು ಪ್ರಬಂಧ ಮಂಡಿಸಿದರು. 'ಭಾರತೀಯ ಸಂಸ್ಕೃತಿ'-ರಸಪ್ರಶ್ನೆ ಕುರಿತ ಕಾರ್ಯಕ್ರಮವನ್ನು ಶ್ರೀ ಸತೀಶ್‌ಶೆಟ್ಟಿ ನಿಯೋಜಿಸಿದ್ದರು. |
| ೧೯. | ೨೧.೦೮.೦೪ | ವಾಲ್ಮೀಕಿ ಪ್ರೌಢಶಾಲೆ ಹೊಸಪೇಟೆ | ಜೆ. ಭೀಮಪ್ಪ (ಮುಖ್ಯೋಪಾಧ್ಯಾಯರು) | ಟಿ. ಮಂಜುನಾಥಸ್ವಾಮಿ (ಉಪನ್ಯಾಸಕರು) | |
| ೨೦. | ೨೧.೦೮.೦೪ | ಕನ್ನಡ ವಿಭಾಗ ಮಂಗಳಗಂಗೋತ್ರಿ | **ಅಧ್ಯಕ್ಷರು** : ಪ್ರೊ. ವಿವೇಕರೈ | ಡಾ. ಕೆ. ಚಿನ್ನಪ್ಪಗೌಡ | ಭೌತಿಕ ಸಂಸ್ಕೃತಿ ಸಂರಕ್ಷಣೆ ಕುರಿತು ಸಂವಾದ ನಡೆಯಿತು. ವಿದ್ಯಾರ್ಥಿಗಳು ಜಾನಪದ ವಸ್ತು ಸಂಗ್ರಹಾಲಯವನ್ನು ವೀಕ್ಷಿಸಿದರು. |
| ೨೧. | ೨೨.೦೮.೦೪ | ರೋಟರಿ ಜಿ.ಎಲ್. ಸಭಾ ಭವನ, ಪುತ್ತೂರು | ರೊ॥ ವಿ.ಜೆ. ಫರ್ನಾಂಡಿಸ್ (ಅಧ್ಯಕ್ಷರು, ರೋಟರಿ ಸಂಸ್ಥೆ) | ತುಕರಾಮ್ ಪೂಜಾರಿ (ಅಧ್ಯಕ್ಷರು, ರಾಣಿ ಅಬ್ಬಕ್ಕದೇವಿ ಅಧ್ಯಯನ ಕೇಂದ್ರ, ಬಂಟ್ವಾಳ) | ರೊ. ಡಾ. ಕೆ. ಸೂರ್ಯನಾರಾಯಣ (ಅಸಿಸ್ಟೆಂಟ್ ಗರ್ವನರ್) ಅವರು ವಸ್ತು ಪ್ರದರ್ಶನವನ್ನು ಉದ್ಘಾಟಿಸಿದರು. ನಾಣ್ಯ ಪ್ರದರ್ಶನವೂ ಏರ್ಪಾಟಾಗಿತ್ತು. |
| ೨೨. | ೨೩.೦೮.೦೪ | ಗೋಪಿನಾಥರಾವ್ ಸ್ಮಾರಕ ಪ್ರೌಢಶಾಲೆ, ಹೊಸಪೇಟೆ | ಶ್ರೀಮತಿ ಪುಷ್ಪಲತಾ ಕುಷ್ಟಗಿ (ಮುಖ್ಯೋಪಾಧ್ಯಾಯಿನಿ) ಮಂಟೇಲಿಂಗಾಚಾರ್ (ಕ್ಷೇತ್ರ ಶಿಕ್ಷಣಾಧಿಕಾರಿಗಳು) | ಪ್ರೊ. ಯು. ರಾಘವೇಂದ್ರರಾವ್ ಡಾ. ಡಿ.ವಿ. ಪರಮಶಿವಮೂರ್ತಿ (ಅಧ್ಯಕ್ಷರು, ಕ.ಇ.ಅ. ಹೊಸಪೇಟೆ ಘಟಕ) | |
| ೨೩. | ೨೩.೦೮.೦೪ | ಕಲಾ ವಾಣಿಜ್ಯ ಮತ್ತು ಬಿಸಿಎ ಕಾಲೇಜ್ ವಿಜಾಪುರ | ಪ್ರೊ. ಎ.ಜಿ. ಕುಲಕರ್ಣಿ | ಪ್ರೊ. ಎ.ಜಿ. ಕುಲಕರ್ಣಿ | |
| ೨೪. | ೨೪.೦೮.೦೪ | ಶಂಕ್ರಪ್ಪ ಸಕ್ರಿ ಕಲಾ ವಾಣಿಜ್ಯ ಪದವಿ ಪೂರ್ವ ವಿದ್ಯಾಲಯ ಬಾಗಲಕೋಟೆ | **ಉದ್ಘಾಟಕರು** : ಕೆ.ಎಸ್. ಪ್ರಭಾಕರ **ಅಧ್ಯಕ್ಷತೆ** : ಶ್ರೀಮತಿ ಬಿ.ಬಿ. **ಕಂಚಿ** (ಪ್ರಾಚಾರ್ಯರು) | ಡಾ. ವೀರೇಶ್ ಬಡಿಗೇರಾ ಎಸ್.ಬಿ. ಸತ್ಯನಾರಾಯಣ | |
| ೨೫. | ೨೪೦೮.೦೪ | ಜಿ.ವಿ.ಪಿ.ಪಿ. ಸರ್ಕಾರಿ ಪ್ರಥಮ ದರ್ಜೆ ಕಾಲೇಜ್ ಹಗರಿಬೊಮ್ಮನಹಳ್ಳಿ | **ಉದ್ಘಾಟನೆ** : ಟಿ. ಮಲ್ಲೇಶಪ್ಪ (ಮಾಜಿ ನಿರ್ದೇಶಕರು, ಗ್ರಂಥಾಲಯ ಇಲಾಖೆ) **ಅಧ್ಯಕ್ಷತೆ** : ಎ. ಬಸವರಾಜ್ (ಪ್ರಾಚಾರ್ಯರು) | ವ್ಹಿ.ಜಿ. ಗಲಗಲಿ ಡಾ. ದೇವರ ಕೊಂಡಾರೆಡ್ಡಿ (ಪ್ರಾಧ್ಯಾಪಕರು, ಕ.ವಿ.ವಿ.) | |
| ೨೬. | ೨೪.೦೮.೦೪ | ಕಲಾ ವಾಣಿಜ್ಯ ಮತ್ತು ಬಿಸಿಎ ಕಾಲೇಜ್, ವಿಜಾಪುರ | ಪ್ರೊ. ಎ.ಜಿ. ಕುಲಕರ್ಣಿ | ಶ್ರೀಮತಿ ಶೈಲಜಾ ಬಾಗೇವಾಡಿ | |

| ಕ್ರ.ಸಂ. | ದಿನಾಂಕ | ಸ್ಥಳ | ಅಧ್ಯಕ್ಷತೆ/ಉದ್ಘಾಟನೆ | ಮುಖ್ಯ ಅತಿಥಿಗಳು/ಉಪನ್ಯಾಸಕರು | ಇತರ ವಿಷಯಗಳು |
|---|---|---|---|---|---|
| | | | ಸರ್ವಶ್ರೀ | ಸರ್ವಶ್ರೀ | |
| ೧೭. | ೧೫.೦೮.೦೪ | ಸರ್ಕಾರಿ ಪ್ರೌಢಶಾಲೆ ತಳಗಿಹಾಳ, ಸಿರಗುಪ್ಪ | ಹೆಚ್.ಬಿ. ಕೆಂಪಣ್ಣವರ್ (ಮುಖ್ಯೋಪಾಧ್ಯಾಯರು) | ಎಸ್.ಜಿ. ಕೋಟಿ (ಕ್ಷೇತ್ರ ಶಿಕ್ಷಣಾಧಿಕಾರಿ) ಎಸ್.ಆರ್. ಚಿನ್ನವೀರಪ್ಪ ಎ.ಜಿ. ಕುಲಕರ್ಣಿ | |
| ೧೮. | ೧೫.೦೮.೦೪ | ಕಲಾ ವಾಣಿಜ್ಯ ಬಿಸಿಎ ಕಾಲೇಜ್ ವಿಜಾಪುರ | | ಎ.ಜಿ. ಕುಲಕರ್ಣಿ | |
| ೧೯. | ೧೫.೦೮.೦೪ | ಇಂದಿರಾಗಂಧಿ ಪೌಢಶಾಲೆ ಹಗರಿಬೊಮ್ಮನಹಳ್ಳಿ | ಕೆ. ಪ್ರಕಾಶ್ (ಮುಖ್ಯೋಪಾಧ್ಯಾಯರು) | ರಾ.ಲಾ. ಪುರುಷೋತ್ತಮ (ಸಂಶೋಧಕರು) | |
| ೨೦. | ೧೬.೦೮.೦೪ | ಪಿ.ಎಂ. ನಾಡಗೌಡ ಪದವಿಪೂರ್ವ ಕಾಲೇಜ್ ಬಾಗಲಕೋಟೆ | ಎಂ.ಕೆ. ಮಂದಗಾಣಿ (ಪ್ರಾಚಾರ್ಯರು) | ಬಲರಾಮನಾಯಕ್ ಡಾ. ವೆಂಕಟಗಿರಿ ದಳವಾಯಿ | |
| ೨೧. | ೧೬.೦೮.೦೪ | ಪಾಪುಸ್ವಾಮಿ ಸರ್ಕಾರಿ ಪೌಢಶಾಲೆ ಹಗರಿಬೊಮ್ಮನಹಳ್ಳಿ | ಬಿ.ಎಲ್. ಚಂದ್ರಪ್ಪ (ಮುಖ್ಯೋಪಾಧ್ಯಾಯರು) | ಡಾ. ಮೃತ್ಯುಂಜಯಸ್ವಾಮಿ ರುಮಾಲೆ (ವಿಜಯನಗರ ಕಾಲೇಜ್) | |
| ೨೨. | ೧೭.೦೮.೦೪ | ಗಂ.ಭೀ. ಸಂಯುಕ್ತ ಪದವಿ ಪೂರ್ವ ಕಾಲೇಜ್ ಹಗರಿಬೊಮ್ಮನಹಳ್ಳಿ | ಪಿ.ಸಿ. ರಾವಣಪ್ಪ (ಪ್ರಾಂಶುಪಾಲರು) | ಡಾ. ಎಚ್. ಚಂದ್ರಶೇಖರಶಾಸ್ತ್ರಿ (ವಿಜಯನಗರ ಕಾಲೇಜ್) | |
| ೨೩. | ೧೭.೦೮.೦೪ | ಸರಸಗಂಗ ದೊಡ್ಡವಾಡ ಹೈಸ್ಕೂಲ್, ಧಾರವಾಡ | ಶ್ರೀಮತಿ ಎಲ್.ಬಿ. ಪಾಟೀಲ್ (ಮುಖ್ಯೋಪಾಧ್ಯಾಯಿನಿ) | ಪ್ರೊ. ವ್ಹಿ.ಜಿ. ದೀಕ್ಷಿತ್ | |
| ೨೪. | ೧೭.೦೮.೦೪ | ಪರಪ್ಪ ಸಂಗಪ್ಪ ಸಜ್ಜನ ಕಲಾ ಮಹಾವಿದ್ಯಾಲಯ ಬೇವೂರು | ಬಿ.ವೈ. ಕೆಳಗಿನಮನಿ (ಪ್ರಾಚಾರ್ಯರು) | ಡಾ. ಬಿ.ಕೆ. ಹಿರೇಮಠ್ (ಮುಖ್ಯಸ್ಥರು, ಕನ್ನಡ ಸ್ನಾತಕೋತ್ತರ ಕೇಂದ್ರ) ಬೊಮ್ಮೇಗೌಡರು (ಕ್ಷೇತ್ರ ಶಿಕ್ಷಣಾಧಿಕಾರಿ) | |
| ೨೫. | ೧೮.೦೮.೦೪ | ರೇಣುಕಾ ಸಂಯುಕ್ತ ಪದವಿ ಪೂರ್ವ ಕಾಲೇಜ್ | ಕೆ.ಎಂ. ತಿಪ್ಪೇಸ್ವಾಮಿ (ಕಾರ್ಯದರ್ಶಿಗಳು, ಶ್ರೀ ಎ.ಪಿ. ವಿದ್ಯಾಪೀಠ) | ಡಾ. ಎಸ್. ಶಿವಾನಂದ | |
| ೨೬. | ೧೮.೦೮.೦೪ | ಸಂಗಮೇಶ್ವರ ಪದವಿ ಪೂರ್ವ ಮಹಾವಿದ್ಯಾಲಯ ಕೂಡಲಸಂಗಮ | ಶ್ರೀಮತಿ ಎನ್.ಸಿ. ರಾಟಿಮನಿ (ಪ್ರಾಚಾರ್ಯರು) | ಡಾ. ಶೀಲಕಾಂತ ಪತ್ತಾರ (ಪ್ರಾಧ್ಯಾಪಕರು, ಬಾದಾಮಿ) ಶ್ರೀಶೈಲಕರಿ ಶಂಕರಿ (ಸಹಾಯಕ ನಿರ್ದೇಶಕರು, ಜಿಲ್ಲಾ ಕನ್ನಡ ಸಂಸ್ಕೃತಿ ಇಲಾಖೆ) | |
| ೨೭. | ೧೮.೦೮.೦೪ | ಸರಕಾರಿ ಮಜೀದ ಪದವಿ ಪೂರ್ವ ಮಹಾವಿದ್ಯಾಲಯ, ಸವಣೂರು | | ಎಂ.ಪಿ. ಕುಂಬಾರರು ಮತ್ತು ರಾ.ಸೇ. ಸಂಯೋಜಕರಾದ ಎಂ. ಆಂಜನೇಯರ ನೇತೃತ್ವದಲ್ಲಿ ವಿದ್ಯಾರ್ಥಿಗಳು ಕೋಟೆ ದ್ವಾರವನ್ನು ಸ್ವಚ್ಛಗೊಳಿಸಿದ್ದಾರೆ. | |

| ಕ್ರ.ಸಂ. | ದಿನಾಂಕ | ಸ್ಥಳ | ಅಧ್ಯಕ್ಷತೆ/ಉದ್ಘಾಟನೆ | ಮುಖ್ಯ ಅತಿಥಿಗಳು/ಉಪನ್ಯಾಸಕರು | ಇತರ ವಿಷಯಗಳು |
|---|---|---|---|---|---|
| | | | **ಸರ್ವಶ್ರೀ** | **ಸರ್ವಶ್ರೀ** | |
| ೩೮. | ೨೯.೦೮.೦೪ | ಬಾಲಕಿಯರ ಸರಕಾರಿ ಪದವಿ ಪೂರ್ವ ಕಾಲೇಜು ಗುಳೇದಗುಡ್ಡ | ಶ್ರೀಮತಿ ಅಂಜನಾದೇವಿ ಅರಮನಿ, (ಪ್ರಾಚಾರ್ಯರು) | ವಿಶ್ವನಾಥ ಸತ್ತಿಗೇರಿ<br>ಡಾ. ಎಸ್.ಸಿ. ಪಾಟೀಲ್ (ಮುಖ್ಯಸ್ಥರು, ದೃಶ್ಯ ಕಲಾ ವಿಭಾಗ, ಬಾದಾಮಿ) | |
| ೩೯. | ೩೦.೦೮.೦೪ | ವಿಜಯಾ ಮಹಾಂತೇಶ್ವರ ಕಲೆ, ವಿಜ್ಞಾನ, ವಾಣಿಜ್ಯ ಮಹಾವಿದ್ಯಾಲಯ, ಇಲಕಲ್ | ಆರ್.ಎಂ. ಶಿವಪೂಜಿಮಠ (ಪ್ರಾಚಾರ್ಯರು) | ಡಾ. ಕರೀಗೌಡ ಬೀಚನಹಳ್ಳಿ (ಕುಲಸಚಿವರು, ಕ.ವಿ.ವಿ. ಹಂಪಿ)<br>ಅನ್ನದಾನಿ ಹಿರೇಮಠ (ಅಧ್ಯಕ್ಷರು, ಜಿಲ್ಲಾ ಕಸಾಪ) | |
| ೪೦. | ೩೦.೦೮.೦೪ | ಶ್ರೀ ಕೌದಿ ಮಹಾಂತೇಶ್ವರ ಪ್ರೌಢಶಾಲೆ ಬಾಚಿಗೊಂಡನಹಳ್ಳಿ | ಕೊಟ್ರಗೌಡರು (ಅಧ್ಯಕ್ಷರು, ಸ್ಥಳೀಯ ಆಡಳಿತ ಮಂಡಳಿ) | ಡಾ. ಕೆ. ರವೀಂದ್ರನಾಥ (ಹಸ್ತಪ್ರತಿ ವಿಭಾಗ, ಕ.ವಿ.ವಿ.) | |
| ೪೧. | ೩೧.೦೮.೦೪ | ಯು. ಕಮಲಬಾಯಿ ಪ್ರೌಢಶಾಲೆ, ಕಡಿಯಾಳ ಉಡುಪಿ | ಕೆ. ಶ್ರೀಧರಭಟ್ | | ವಿದ್ಯಾರ್ಥಿಗಳಿಗೆ ಕರ್ನಾಟಕ ದೇವಾಲಯ ವಾಸ್ತುಶಿಲ್ಪ ಪರಂಪರೆ ಕುರಿತು 'ಸ್ಲೈಡ್ ಷೋ' ತೋರಿಸಲಾಗಿದೆ. |
| ೪೨. | ೩೧.೦೮.೦೪ | ರಾಷ್ಟ್ರೋತ್ಥಾನ ಪ್ರೌಢಶಾಲೆ ಹಗರಿಬೊಮ್ಮನಹಳ್ಳಿ | ಬಸವನಗೌಡರು (ರಾಷ್ಟ್ರೋತ್ಥಾನ ಪರಿಷತ್, ಹಗರಿಬೊಮ್ಮನಹಳ್ಳಿ) | ಡಾ. ಮಲ್ಲೇಪುರಂ ಜಿ. ವೆಂಕಟೇಶ್<br>ಎಂ.ಯಂ. ವಡಿಗೇರಿ<br>ನಾಣ್ಯಾಪುರ ಹನುಮಂತಶೆಟ್ಟರು<br>ಗಂಗಾವತಿ ಮುರಳೀಧರ | ಹಗರಿಬೊಮ್ಮನಹಳ್ಳಿ ಕೇಂದ್ರದಲ್ಲಿ ಸಪ್ತಾಹವನ್ನು ಗುರುಮೂರ್ತಿ ಪೆಂಡಕೂರ್‌ರವರು ಸಂಯೋಜಿಸಿದ್ದರು. |
| ೪೩. | ೧.೦೯.೦೪ | ಕಲಾ ವಾಣಿಜ್ಯ ಮತ್ತು ಬಿಸಿಎ ಕಾಲೇಜು, ವಿಜಾಪುರ | ಪ್ರೊ. ಎ.ಜಿ. ಕುಲಕರ್ಣಿ (ಪ್ರಾಂಶುಪಾಲರು) | ಪ್ರೊ. ಆರ್.ಜಿ. ನಾಡಗೌಡರು | |
| ೪೪. | ೨.೦೯.೦೪ | ಮಜೀದ ಪದವಿ ಪೂರ್ವ ಕಾಲೇಜ್ | ಎಂ.ಪಿ. ಕುಂಬಾರರು ಮತ್ತು ರಾ.ಸೇ.ನಿ.ರ ನೇತೃತ್ವದಲ್ಲಿ ವಿದ್ಯಾರ್ಥಿಗಳು ಸ್ಮಾರಕಗಳನ್ನು ಸಂದರ್ಶಿಸಿದರು. | | |
| ೪೫. | ೩.೦೯.೦೪ | ಸರಕಾರಿ ಪದವಿ ಕಾಲೇಜು ಕುರುಗೋಡು | **ಉದ್ಘಾಟನೆ** : ಅ. ರವೀಂದ್ರ (ಉಪಾಧ್ಯಕ್ಷರು, ಕರ್ನಾಟಕ ಅಂಗವಿಕಲರ ಪರಿಷತ್)<br>**ಅಧ್ಯಕ್ಷರು** : ಎಸ್. ದುದಗಿ (ಪ್ರಾಚಾರ್ಯರು) | ವೈ. ಹನುಮಂತರೆಡ್ಡಿ (ನಿ) ಇತಿಹಾಸ ಉಪನ್ಯಾಸಕ<br>ಟಿ.ಎಚ್.ಎಂ. ಬಸವರಾಜು | ಕುರುಗೋಡಿನ ಸ್ಮಾರಕಗಳನ್ನು ವೀಕ್ಷಿಸಲಾಯಿತು. ಶ್ರೀಮತಿ ಸುಗಂಧ ಅವರು ಐತಿಹಾಸಿಕ ಚುಟಕಗಳನ್ನು ವಾಚಿಸಿದರು. ಕು. ಹೆಚ್. ಸಿದ್ದಮ್ಮ ಮಧುಸೂದನರೆಡ್ಡಿ ಪ್ರಭಾಕರ್, ಕೊಟ್ರೇಶ್ ಪ್ರಕಾಶ್ ಅವರುಗಳೂ ಸಹ ಕಾರ್ಯಕ್ರಮದ ಸಂಘಟನೆಯಲ್ಲಿ ತೊಡಗಿ ಕೊಂಡಿದ್ದರು. ಈ ಎಲ್ಲ ಕಾರ್ಯಕ್ರಮದ ಸಂಘಟನೆಯನ್ನು ಶ್ರೀ ಟಿ.ಎಚ್.ಎಂ. ಬಸವರಾಜು ಅವರು ಮಾಡಿದ್ದರು. |
| ೪೬. | ೪.೦೯.೦೪ | " " | ಇದೇ ಕಾಲೇಜಿನ ವಿದ್ಯಾರ್ಥಿಗಳು ಇತಿಹಾಸದ ಜಾಥಾ ನಡೆಸಿದರು. | | |
| ೪೭. | ೧೧.೦೯.೦೪ | ಕಿತ್ತೂರ ರಾಣಿ ಚೆನ್ನಮ್ಮ ಬಾಲಕಿಯರ ಪ್ರೌಢಶಾಲೆ ಬಳ್ಳಾರಿ | ಶಾಂತ ವೀರಪ್ಪ (ಮುಖ್ಯ ಗುರುಗಳು) | ವೈ. ಹನುಮಂತರೆಡ್ಡಿ | ಬಳ್ಳಾರಿ ಸ್ಮಾರಕ ಚಿತ್ರಗಳ ಪ್ರದರ್ಶನ ನಡೆಸಿದೆ. |

| ಕ್ರ.ಸಂ. | ದಿನಾಂಕ | ಸ್ಥಳ | ಅಧ್ಯಕ್ಷತೆ/ಉದ್ಘಾಟನೆ | ಮುಖ್ಯ ಅತಿಥಿಗಳು/ಉಪನ್ಯಾಸಕರು | ಇತರ ವಿಷಯಗಳು |
|---|---|---|---|---|---|
| | | | ಸರ್ವಶ್ರೀ | ಸರ್ವಶ್ರೀ | |
| ೪೮. | ೧೪.೦೯.೦೪ | ಸರಕಾರಿ ಪ್ರೌಢಶಾಲೆ ಸಿಬಿ ಬಳ್ಳಾರಿ | ಬಿ.ಎಚ್. ಚಿನ್ನಬಸಪ್ಪ (ಪ್ರಾಚಾರ್ಯರು) ಪಿ.ಎನ್. ಸಚ್ಚಿದಾನಂದ (ಮುಖ್ಯ ಗುರುಗಳು) | ವೈ. ಹನುಮಂತರೆಡ್ಡಿ | ವೈ. ಹನುಮಂತರೆಡ್ಡಿಯವರು ಕುರುಗೋಡಿನ ಸಪ್ತಾಹ ಕಾರ್ಯಕ್ರಮವನ್ನು ಸಂಯೋಜಿಸಿದ್ದರು. |
| ೪೯. | ೧೫.೦೯.೦ | ನ್ಯೂ ಹೈಸ್ಕೂಲ್, ಧಾರವಾಡ | ಎಸ್.ಸಿ. ದಾನಪ್ಪನವರ್ (ಮುಖ್ಯಾಧ್ಯಾಪಕರು) | ಪ್ರೊ. ವ್ಹಿಜಿ. ದೀಕ್ಷಿತ್ | |
| ೫೦. | ೧೬.೧೦.೦೪ | ಮಧುಶ್ರೀ ಮಹಿಳಾ ಸಂಘ ಬೆಂಗಳೂರು | ಶ್ರೀಮತಿ ರಾಜಮ್ಮ ಶ್ರೀಮತಿ ಕ್ಷಮಾಂಬ (ಅಧ್ಯಕ್ಷೆ) | ಡಾ. ಎಚ್. ಜಯಮ್ಮ ಕರಿಯಣ್ಣ | |
| ೫೧. | ೨೨.೧೧.೦೪ | ನಿಜಾಮುದ್ದೀನ್ ಹೈಸ್ಕೂಲ್ ಧಾರವಾಡ | ಬಿ.ಎಂ. ಜಾಗೀರ್‌ದಾರ್ (ಮುಖ್ಯೋಪಾಧ್ಯಾಯರು) | ಪ್ರೊ. ವ್ಹಿಜಿ. ದೀಕ್ಷಿತ್ | |
| ೫೨. | ೨೭.೧೧.೦೪ | ವನಿತಾ ಶಿಕ್ಷಕಿಯರ ತರಬೇತಿ ಸಂಸ್ಥೆ, ಧಾರವಾಡ | ಎಲ್.ಪಿ. ತೋಗಿ (ಪ್ರಾಂಶುಪಾಲರು) | ಪ್ರೊ. ವ್ಹಿಜಿ. ದೀಕ್ಷಿತ್ | |
| ೫೩. | ೨೮.೧೨.೦೪ | ಲಿಂಗರಾಜ ಕಾಲೇಜ್ ಬೆಳಗಾವಿ | ಪ್ರೊ. ಸ್ಹಿವಿ. ಮಠದ್ [(ನಿ) ಪ್ರಾಂಶುಪಾಲರು] | ಪ್ರೊ. ಸಿ.ಬಿ. ಕಮತೆ | |
| ೫೪. | ೨೯.೧೨.೦೪ | ಮರಾಠ ಮಂಡಳ ಕಾಲೇಜ್ | ಡಾ. ಎ.ಬಿ. ಪವಾರ್ | ಪ್ರೊ. ಶ್ರೀಕಾಂತ ಶ್ಯಾನವಾಡ | |
| ೫೫. | ೨೯.೦೧.೦೫ | ಸರಕಾರಿ ಶಿಕ್ಷಣ ಮಹಾ ವಿದ್ಯಾಲಯ, ಬೆಳಗಾವಿ | ಪ್ರೊ. ಕೆ.ಎನ್. ಅಶೋಕಕುಮಾರ್ (ಪ್ರಾಚಾರ್ಯರು) | ಡಾ. ಸ್ಮಿತಾ ಸುರೇಬಾನಕರ್ | |
| ೫೬. | ೩೧.೦೧.೦೫ | ಬಸವನಾಳ ಶಿಕ್ಷಕರ ಕಾಲೇಜು | ಪ್ರೊ. ಎಸ್.ಎಲ್. ಕಳಸದ (ಕಳಸದ) | ಪ್ರೊ. ಶ್ರೀಕಾಂತ ಶ್ಯಾನವಾಡ | |
| ೫೭. | ೨೯.೦೪.೦೫ | ಲಿಂಗರಾಜ ಕಾಲೇಜ್ ಬೆಳಗಾವಿ | ಜಿನದತ್ ದೇಸಾಯಿ | ಡಾ. ಸ್ಮಿತಾ ಸುರೇಬಾನಕರ್ | |
| ೫೮. | ೩೦.೦೪.೦೫ | ವಿವೇಕಾನಂದ ಬಿ.ಎಡ್. ಕಾಲೇಜ್ | ಪ್ರೊ. ಸಿ.ವಿ. ಮಠದ್ | ಪ್ರೊ. ಸಿ.ಬಿ. ಕಮತೆ | |

*

| | | | | | |
|---|---|---|---|---|---|
| **ದಕ್ಷಿಣ ಕನ್ನಡ : ಇನ್ನಷ್ಟು ಕಾರ್ಯಕ್ರಮಗಳ ವರದಿ** | | | **ಉದ್ಘಾಟನೆ :** | | |
| ೫೯. | ೧೬.೮.೨೦೦೪ | ಶ್ರೀ ಶಾಂತಿನಾಥ ಬಸದಿ ನಿಡುಗಲ್ | ಪ್ರೊ. ನಾಗರಾಜ ಪೂವಣಿ ವಿಶ್ರಾಂತ ಹಿಂದಿ ಪ್ರಾಧ್ಯಾಪಕರು ಎಸ್.ಡಿ.ಎಂ.ಸಿ. ಕಾಲೇಜು ಉಜಿರೆ | ಶ್ರೀಯುತ ರತನ್‌ಕುಮಾರ್ ಹುಣಿಪಾಜೆ, ಮೊಕ್ತೇಸರು ಶ್ರೀ ಶಾಂತಿನಾಥ ಬಸದಿ ನಿಡುಗಲ್ | ಇತಿಹಾಸ ಪರಂಪರೆ ಉಳಿಸಿ ಸಪ್ತಾಹದ ಉದ್ಘಾಟನೆ ಮತ್ತು ಬಸದಿಯ ಆವರಣವನ್ನು ಸ್ವಚ್ಛಗೊಳಿಸಲಾಗಿದೆ. ಡಾ. ವೈ. ಉಮಾನಾಥ ಶೆಣೈ ಅವರು ಈ ಕಾರ್ಯಕ್ರಮವನ್ನು ಸಂಘಟಿಸಿದವರಾಗಿದ್ದಾರೆ. |

| ಕ್ರ.ಸಂ. | ದಿನಾಂಕ | ಸ್ಥಳ | ಅಧ್ಯಕ್ಷತೆ/ಉದ್ಘಾಟನೆ | ಮುಖ್ಯ ಅತಿಥಿಗಳು/ಉಪನ್ಯಾಸಕರು | ಇತರ ವಿಷಯಗಳು |
| --- | --- | --- | --- | --- | --- |
| | | | **ಸರ್ವಶ್ರೀ** | **ಸರ್ವಶ್ರೀ** | |
| ೬೦. | ೧೭.೮.೨೦೦೪ | ಎಸ್.ಡಿ.ಎಂ. ಕಾಲೇಜು ಉಜಿರೆ | **ಉದ್ಘಾಟನೆ :** ಡಾ. ವೈ. ಉಮಾನಾಥ ಶೆಣೈ (ಇತಿಹಾಸ ಪ್ರಾಧ್ಯಾಪಕರು) | | ಕಾಲೇಜಿನ ವಿದ್ಯಾರ್ಥಿಗಳಿಗೆ ಅವರ ತಾಲ್ಲೂಕಿನ ಪ್ರಾಚೀನ ಸ್ಮಾರಕದ ಚಿತ್ರ ಬರೆಯುವ ಸ್ಪರ್ಧೆ ಏರ್ಪಡಿಸಲಾಗಿತ್ತು. ಪ್ರಮೋದ್ ಕುಮಾರ್ ಕಾರ್ಯಕ್ರಮದ ಸಂಘಟಕರಾಗಿದ್ದರು. |
| ೬೧. | ೧೮.೮.೨೦೦೪ | ಎಸ್.ಡಿ.ಎಂ. ಕಾಲೇಜು ಉಜಿರೆ | | | ಪ್ರಮೋದ್ ಕುಮಾರ್ ಅವರು ಸಂಘಟಿಸಿದ ಕಾರ್ಯಕ್ರಮವಾಗಿ 'ನಿಮ್ಮ ಗ್ರಾಮ ಪ್ರಾಚೀನ ದೇವಾಲಯ/ಜಿನಾಲಯ ಹಾಗೂ ಸಂರಕ್ಷಣೆ' ವಿಷಯದ ಮೇಲೆ ಪ್ರಬಂಧ ಸ್ಪರ್ಧೆ ಏರ್ಪಡಿಸಲಾಗಿತ್ತು. |
| ೬೨. | ೧೯.೮.೨೦೦೪ | ಎಸ್.ಡಿ.ಎಂ. ಕಾಲೇಜು ಉಜಿರೆ | | ಡಾ. ವೈ. ಉಮಾನಾಥ ಶೆಣೈ (ಇತಿಹಾಸ ಪ್ರಾಧ್ಯಾಪಕರು) | ಇತಿಹಾಸ ಲೇಖನ ಬರೆಯುವ ಬಗ್ಗೆ ತರಬೇತಿ ಏರ್ಪಡಿಸಲಾಗಿತ್ತು. |
| ೬೩. | ೨೦.೮.೨೦೦೪ | ಎಸ್.ಡಿ.ಎಂ. ಕಾಲೇಜು | | ಡಾ. ಎಲ್.ಎನ್. ಸ್ವಾಮಿ (ಇತಿಹಾಸ ಉಪನ್ಯಾಸಕರು) | 'ನೀರತೆ ಹರಿದಿತ್ತು ವೀರ ರಸವಿಲ್ಲ' ಶ್ರೀರಂಗಪಟ್ಟಣದ ಬಗೆಗಿನ ಸಾಕ್ಷ್ಯ ಚಿತ್ರ ಪ್ರದರ್ಶನ. |
| ೬೪. | ೨೧.೮.೨೦೦೪ | ಎಸ್.ಡಿ.ಎಂ. ಕಾಲೇಜು ಉಜಿರೆ | | ಡಾ. ವೈ. ಉಮನಾಥ ಶೆಣೈ (ಇತಿಹಾಸ ಪ್ರಾಧ್ಯಾಪಕರು) | ಶಾಸನ ಸಂರಕ್ಷಣೆ ಕುರಿತು ಪರಿಚಯಾತ್ಮಕ ಉಪನ್ಯಾಸ. |
| ೬೫. | ೨೨.೮.೨೦೦೪ | ಎಸ್.ಡಿ.ಎಂ. ಕಾಲೇಜು ಉಜಿರೆ | **ಉದ್ಘಾಟನೆ :** ಡಾ. ಬಿ. ಯಶೋವರ್ಮ (ಪ್ರಾಂಶುಪಾಲರು) ಎಸ್.ಡಿ.ಎಂ.ಸಿ. ಕಾಲೇಜು ಉಜಿರೆ ಎಸ್.ಡಿ.ಎಂ. ಕಾಲೇಜು, ಉಜಿರೆ | ಡಾ. ಕೆ. ಶೇಷಪ್ಪ ರೈ ರಸಾಯನಶಾಸ್ತ್ರ ಪ್ರಾಧ್ಯಾಪಕರು ಮೈಸೂರು ವಿಶ್ವವಿದ್ಯಾನಿಲಯ ಮೈಸೂರು | ಅನ್ವೇಷಣೆಭಿತ್ತಿ ಪತ್ರಿಕೆಯ ಉದ್ಘಾಟನೆ ಮತ್ತು ಸ್ಪರ್ಧಾ ವಿಜೇತರಿಗೆ ಬಹುಮಾನ ವಿತರಣಾ ಕಾರ್ಯಕ್ರಮವನ್ನು ನಡೆಸಲಾಯಿತು. |
| **ಮೈಸೂರು ಜಿಲ್ಲೆ** | | | | | |
| ೬೬. | ೯.೧೧.೨೦೦೪ | ಹಿಸ್ಟರಿ ಅಂಡ್ ಹೆರಿಟೇಜ್ ಅಸೋಸಿಯೇಷನ್ ಟಿ. ನರಸೀಪುರ | **ಉದ್ಘಾಟನೆ :** ಡಿ.ಎಂ. ನಾಗರಾಜ್ (ಸೂಪರಿಂಟೆಂಡೆಂಟ್ ಆಫ್ ಎಪಿಗ್ರಫಿ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ) | | ಡಾ.ಎಚ್.ಎಸ್. ಉಷಾರಾಣಿ ಅವರು ಸಂಘಟಿಸಿದ ಈ ಕಾರ್ಯಕ್ರಮದಲ್ಲಿ ವಿದ್ಯಾರ್ಥಿಗಳಿಗೆ ಏರ್ಪಡಿಸಿದ್ದ ಶಾಸನಗಳ ಪ್ರತಿ ತೆಗೆಯುವ ಕಾರ್ಯಾಗಾರದಲ್ಲಿ ವಿದ್ಯಾರ್ಥಿಗಳು ಶಾಸನದ ಪಡಿಯಚ್ಚುಗಳನ್ನು ತೆಗೆದರು. ಶಾಸನಗಳ ಛಾಯಾಚಿತ್ರ ವಸ್ತುಪ್ರದರ್ಶನ ಕುರಿತು ವಿಶೇಷ ಉಪನ್ಯಾಸವನ್ನು ಶ್ರೀ ಡಿ.ಎಂ. ನಾಗರಾಜ್ ನೀಡಿದರು. |

ಇನ್ನೂ ಹಲವು ಕಾರ್ಯಕ್ರಮಗಳು ನಡೆದಿವೆ ಎಂದು ತಿಳಿದಿದೆ. ಆದರೆ ಆ ಬಗ್ಗೆ ವಿವರವಾದ ವರದಿಗಳು ಬಂದಿಲ್ಲ.

## ಹದಿನೆಂಟನೆಯ ವಾರ್ಷಿಕ ಸಮ್ಮೇಳನ

ಅಕಾದೆಮಿಯ ಹದಿನೆಂಟನೆಯ ವಾರ್ಷಿಕ ಸಮ್ಮೇಳನವು ದಾವಣಗೆರೆ ಜಿಲ್ಲೆಯ ಹೊನ್ನಾಳಿಯಲ್ಲಿ ಶ್ರೀ ಚನ್ನಪ್ಪಸ್ವಾಮಿ ವಿದ್ಯಾಪೀಠ (ರಿ.,). ಚನ್ನ-ಚೇತನ ಪ್ರಕಾಶನ ಮತ್ತು ಹಿರೇಕಲ್ಮಠಗಳ ಆಶ್ರಯದಲ್ಲಿ, ಶ್ರೀ ಷ॥ಬ್ರ। ಒಡೆಯರ್ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳವರ ನೇತೃತ್ವ ಮತ್ತು ಶ್ರೀ ಷ॥ಬ್ರ॥ ಸಿದ್ಧಾದ ಶಿವಾಚಾರ್ಯ ಸ್ವಾಮಿಗಳವರ ಮಾರ್ಗದರ್ಶನದಲ್ಲಿ ೨೦೦೪ರ ಸೆಪ್ಟಂಬರ್ ೨೪, ೨೫ ಮತ್ತು ೨೬ನೆಯ ತಾರೀಕುಗಳಂದು ನಡೆಯಿತು. ದಿನಾಂಕ ೨೪-೯-೨೦೦೪ರಂದು ಬೆಳಗ್ಗೆ ೧೦ ಘಂಟೆಗೆ ನಡೆದ ಸಮ್ಮೇಳನದ ಉದ್ಘಾಟನಾ ಸಮಾರಂಭದಲ್ಲಿ ಬಾಳೇಹೊನ್ನೂರು ಶ್ರೀ ಪೀಠದ ಶ್ರೀಮದ್ರಂಭಾಪುರಿ ವೀರಸಿಂಹಾಸನಾಧೀಶ್ವರ ಶ್ರೀ ಶ್ರೀ ೧೦೦೮ ಜಗದ್ಗುರು ವೀರ ಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರು ಸಾನ್ನಿಧ್ಯ ವಹಿಸಿದ್ದರು. ಶ್ರೀ ಎಂ.ಜಿ. ನಾಗಾರಾಜ್ ಮತ್ತು ಡಾ ಪಿ.ವಿ. ಕೃಷ್ಣಮೂರ್ತಿ ಸಂಪಾದಿತ **'ಇತಿಹಾಸ ದರ್ಶನ'**ದ ೧೯ನೆಯ ಸಂಪುಟವನ್ನು ಎಸ್.ಜೆ.ವಿ.ಪಿ.ವಿದ್ಯಾಪೀಠದ ಉಪಾಧ್ಯಕ್ಷರಾದ ಪ್ರೊ॥ ಜಿ.ಎಂ.ಬಸವರಾಜ್ ಅವರು ಬಿಡುಗಡೆ ಮಾಡಿದರು. ಖ್ಯಾತ ಇತಿಹಾಸ ತಜ್ಞ ಡಾ॥ ಬಾ.ರಾ. ಗೋಪಾಲ್ ಅವರ ಹೆಸರಿನಲ್ಲಿ ನೀಡಲಾಗುತ್ತಿರುವ, ೩ನೆಯ ಡಾ॥ ಬಾ.ರಾ.ಗೋಪಾಲ್ ಪ್ರಶಸ್ತಿಯನ್ನು ಶಾಸನ ತಜ್ಞ ಡಾ॥ ಬಿ.ರಾಜಶೇಖರಪ್ಪ ಅವರಿಗೆ ನೀಡಿ ಗೌರವಿಸಲಾಯಿತು. ಸಮ್ಮೇಳನಾಧ್ಯಕ್ಷರಾಗಿ ಗೌರವ ಸ್ವೀಕರಿಸಿದ ಕೆಳದಿಯ ಶ್ರೀ ಗುಂಡಾ ಜೋಯಿಸ್ ಅವರು ಇತಿಹಾಸದ ಅಧ್ಯಯನದಲ್ಲಿ ಹಸ್ತಪ್ರತಿಗಳ ಮಹತ್ವ ಕುರಿತು ತಮ್ಮ ಅನುಭವಗಳನ್ನು ಹಂಚಿಕೊಂಡರು. ಹೊನ್ನಾಳಿ ಕ್ಷೇತ್ರದ ಶಾಸಕರಾದ ಶ್ರೀ ಎಂ. ಪಿ. ರೇಣುಕಾರ್ಯ ಅವರು ನಾಣ್ಯ ಪ್ರದರ್ಶನ ಮತ್ತು ಹೊನ್ನಾಳಿ ತಾಲ್ಲೂಕಿನ ಇತಿಹಾಸ ಹಾಗೂ ಸಾಂಸ್ಕೃತಿಕ ವಸ್ತುಪ್ರದರ್ಶನಗಳ ಉದ್ಘಾಟನೆ ಮಾಡಿದರು.

ಇದೇ ಸಂದರ್ಭದಲ್ಲಿ, ಕಳೆದ ಸಮ್ಮೇಳನದ ನಂತರ ಈವರೆಗೆ ಪಿಎಚ್.ಡಿ., ಪಡೆದಿರುವ ಈ ಕೆಳಕಂಡ ಅಕಾದೆಮಿಯ ಸದಸ್ಯರನ್ನು ಸನ್ಮಾನಿಸಲಾಯಿತು.

| ಕ್ರ. ಸಂ. | ಪಿಎಚ್.ಡಿ.,/ಡಿ.ಲಿಟ್ ಪದವಿ ಪಡೆದವರ ಹೆಸರು | ಮಾರ್ಗದರ್ಶಕರ ಹೆಸರು | ವಿಷಯ | ವಿಶ್ವವಿದ್ಯಾಲಯ |
|---|---|---|---|---|
| ೧ | ರಾಘವೇಂದ್ರರಾವ್ ಎಚ್. ಕುಲಕರ್ಣಿ | ಡಾ॥ ಎಂ.ಎಸ್. ಕೃಷ್ಣಮೂರ್ತಿ | Pre and early Chalukya art in Karnataka | ಮೈಸೂರು ವಿಶ್ವವಿದ್ಯಾಲಯ, ಮೈಸೂರು |
| ೨ | ಉಮಾನಾಥ ಶೆಣೈ | ಡಾ॥ ಮಾದೇಗೌಡ | ಧರ್ಮ ಮತ್ತು ಪ್ರದೇಶ: ಧರ್ಮಸ್ಥಳ-ಒಂದು ಅಧ್ಯಯನ | ಮೈಸೂರು ವಿಶ್ವವಿದ್ಯಾಲಯ, ಮೈಸೂರು |
| ೩ | ಮೇಲಕಾರ ಸಾಯಬಣ್ಣಾ ಕಲ್ಲಪ್ಪ | ಡಾ॥ ರವಿ ಕೋರಿಶೆಟ್ಟರ | ಕೊಪ್ಪಳ ಜಿಲ್ಲೆಯ ಶಾಸನಗಳು : ಸಾಂಸ್ಕೃತಿಕ ಅಧ್ಯಯನ (ಪ್ರಾರಂಭದಿಂದ ಕ್ರಿ.ಶ. ೧೩೩೬ರವರೆಗೆ) | ಮೈಸೂರು ವಿಶ್ವವಿದ್ಯಾಲಯ ಧಾರವಾಡ |
| ೪ | ಪಾಟೀಲ ಮಹೇಶಕುಮಾರ್ ಹಂಪನಗೌಡ | ಡಾ॥ ಎಸ್. ರಾಜಶೇಖರ | ಕರ್ನಾಟಕದ ಸಾಮಂತ ಅರಸು ಮನೆತನಗಳು ಮತ್ತು ಅವರ ಆಳ್ವಿಕೆಯ ಪ್ರದೇಶಗಳಲ್ಲಿ ಅವರು ಕೈಗೊಂಡ ಸಾಂಸ್ಕೃತಿಕ ಅಭಿವೃದ್ಧಿ (ಆರಂಭ ಕಾಲದಿಂದ ಕ್ರಿ.ಶ. ೧೩೩೬ರವರೆಗೆ) | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ |
| ೫ | ಶ್ರೀಮತಿ ಬಾರಕೇರ ವಾಣಿಶ್ರೀ ಶರಣಪ್ಪ | ಡಾ॥ ಎಸ್. ರಾಜಶೇಖರ | ಕರ್ನಾಟಕದಲ್ಲಿ ಹಿಂದುಳಿದ ವರ್ಗಗಳ ಆಂದೋಲನ: ಡಿ. ದೇವರಾಜ ಅರಸರ ಪಾತ್ರ- ಒಂದು ಅಧ್ಯಯನ | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ |
| ೬ | ರಾಜಶೇಖರಪ್ಪ ಬಿ. | ಡಾ॥ ಎಂ.ಎಂ. ಕಲಬುರ್ಗಿ | ಪ್ರಾಚೀನ ಚಿತ್ರದುರ್ಗ | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ |

| | | | | |
|---|---|---|---|---|
| ೭ | ಶ್ರೀಮತಿ ಕೆ.ಎಸ್. ನಳಿನಿ | ಡಾ|| ಗೋಕುಲನಾಥ್ | ರನ್ನನ ಕಾವ್ಯದ ಮೇಲೆ ಪಂಪನ ಪ್ರಭಾವ: ಒಂದು ಅಧ್ಯಯನ | ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು |
| ೮ | ಶ್ರೀಮತಿ ಎಂ.ಟಿ. ರಮಾ ಮಣಿ | ಡಾ|| ಬಿ.ಎಸ್. ಶಾಮಲಾ ರತ್ನ ಕುಮಾರಿ | Confribution of Srivaishnavas to Karnataka-History and | ಬೆಂಗಳೂರು ವಿಶ್ವವಿದ್ಯಾಲಯ, |
| | | | Culture during the 20th century | ಬೆಂಗಳೂರು |
| ೯ | ಶ್ರೀಮತಿ ಎಸ್. ನಾಗರತ್ನಮ್ಮ | ಡಾ|| ವಿಜಯಲಕ್ಷ್ಮಿ ಕೆ.ಎಸ್. | ಕರ್ನಾಟಕದಲ್ಲಿ ಅಸಹಕಾರ ಮತ್ತು ನಾಗರಿಕ ಕಾನೂನು ಭಂಗ ಚಳುವಳಿ ೧೯೨೦-೧೯೩೯ | ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು |
| ೧೦ | ಶ್ರೀಮತಿ ಶಕುಂತಲಾ ಗೋಪಶೆಟ್ಟಿ | ಡಾ|| ಕೆ. ರವೀಂದ್ರನಾಥ | ರೇವಣ್ಣಸಿದ್ಧರು : ಒಂದು ಅಧ್ಯಯನ | ಕನ್ನಡ ವಿಶ್ವವಿದ್ಯಾಲಯ ಹಂಪಿ |
| ೧೧ | ಜಯಣ್ಣ ಯು. | ಡಾ|| ಸಿ.ಎಸ್. ವಾಸುದೇವನ್ | ಮೊಳಕಾಲ್ಮೂರು ತಾಲೂಕಿನ ಪುರಾತತ್ವೀಯ ಪರಿಸರ | ಕನ್ನಡ ವಿಶ್ವವಿದ್ಯಾಲಯ ಹಂಪಿ |
| ೧೨ | ದುರುಗಪ್ಪ ಎಂ.ಕೆ. | ಪ್ರೊ|| ಲಕ್ಷ್ಮಣ್ ತೆಲಗಾವಿ | ವಿಜಯನಗರೋತ್ತರ ಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು: ಚಾರಿತ್ರಿಕ ಅಧ್ಯಯನ | ಕನ್ನಡ ವಿಶ್ವವಿದ್ಯಾಲಯ ಹಂಪಿ |
| ೧೩ | ಬಸವರಾಜಪ್ಪ ಎನ್. (ಕುರುವ ಬಸವರಾಜ್) | ಪ್ರೊ|| ಕಿ. ರಂ. ನಾಗರಾಜ | ಜನಪದ ಮಾಹಾಕಾವ್ಯಗಳ ನಿರ್ಮಾಣ ಪ್ರತಿಭೆಯ ನೆಲೆಗಳು | ಕನ್ನಡ ವಿಶ್ವವಿದ್ಯಾಲಯ ಹಂಪಿ |
| ೧೪ | ವಜೀರಬಾಶಾ ಮ. ಬಾಗಾಯತ | ಡಾ|| ಎಸ್. ಸಿ. ಪಾಟೀಲ | ಕರ್ನಾಟಕದ ಮುಸ್ಲಿಮ್ ಅರಸರ ಕಾಲದ ಚಿತ್ರಕಲೆ : ಒಂದು ಅಧ್ಯಯನ (ಕ್ರಿ.ಶ. ೧೪೦೦ ರಿಂದ ಕ್ರಿ.ಶ. ೧೮೦೦) | ಕನ್ನಡ ವಿಶ್ವವಿದ್ಯಾಲಯ ಹಂಪಿ |
| ೧೫ | ಶ್ರೀಮತಿ ಬಿ. ಮಂಜುಳಾ | ಡಾ|| ಕೆ. ರವೀಂದ್ರನಾಥ | ಸೂಪಶಾಸ್ತ್ರ : ಒಂದು ಅಧ್ಯಯನ | ಕನ್ನಡ ವಿಶ್ವವಿದ್ಯಾಲಯ ಹಂಪಿ |
| ೧೬ | ಶ್ರೀಮತಿ ಸುಜಾತ ಎ. | ಡಾ|| ಮಂಜುನಾಥ ಬೇವಿನಕಟ್ಟಿ | ಬಳ್ಳಾರಿ ಜಿಲ್ಲೆಯ ರಂಗನಟಿಯರ ಅಧ್ಯಯನ | ಕನ್ನಡ ವಿಶ್ವವಿದ್ಯಾಲಯ ಹಂಪಿ |
| ೧೭ | ಟಿ.ಎಂ. ಮಂಜುನಾಥಯ್ಯ | --- | ಕುಮ್ಮಟ ನಾಯಕರು: ಒಂದು ಸಾಂಸ್ಕೃತಿಕ ಅಧ್ಯಯನ | ಕನ್ನಡ ವಿಶ್ವವಿದ್ಯಾಲಯ ಹಂಪಿ |
| ೧೮ | ಶಿವಪ್ರಕಾಶ್ ಎಂ.ಎಸ್. | ಡಾ|| ಜಿ.ಲಕ್ಷ್ಮಮ್ಮ | ತುಮಕೂರು ಜಿಲ್ಲೆಯ ಪಾಳೆಪಟ್ಟುಗಳ ಆರ್ಥಿಕ ನೆಲೆಗಟ್ಟು- ಒಂದು ಸಮಗ್ರ ಅಧ್ಯಯನ | ಮೈಸೂರು ವಿಶ್ವವಿದ್ಯಾಲಯ ಮೈಸೂರು |

| | | | | |
|---|---|---|---|---|
| ೧೯ | ಕುಮಾರಿ ದಾಸ್ ಶುಭಾ ಶ್ರೀನಿವಾಸ | ಡಾ|| ಚೆನ್ನಕ್ಕ ಪಾವಟೆ | ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಸ್ತ್ರೀ ಸಂವೇದನೆ | ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ |
| ೨೦ | ಬಡಿಗೇರ ವಾಸಪ್ಪ ಸಿದ್ದಪ್ಪ | ಡಾ|| ಎಸ್. ವಿ. ಪಾಡಿಗಾರ್ | ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ | ಕರ್ನಾಟಕ ವಿಶ್ವವಿದ್ಯಾಲಯ |
| | | | | ಧಾರವಾಡ |
| ೨೧ | ಎಸ್. ತಿಪ್ಪೇಸ್ವಾಮಿ | ಡಾ|| ಸಿ. ಮಹಾದೇವ | ರಕ್ಷಣಾ ವಾಸ್ತು ಶಿಲ್ಪ ಚಿತ್ರದುರ್ಗ ಜಿಲ್ಲೆ | ಕನ್ನಡ ವಿಶ್ವವಿದ್ಯಾಲಯ ಹಂಪಿ |

೨೪-೯-೨೦೦೪ರಂದು ಮೂರು, ೨೫-೯-೨೦೦೪ ರಂದು ನಾಲ್ಕು ಮತ್ತು ೨೬-೯-೨೦೦೪ರಂದು ನಾಲ್ಕು, ಹೀಗೆ ಹನ್ನೆರಡು ವಿಚಾರ ಗೋಷ್ಠಿಗಳು ನಡೆದು, ಅಕಾದೆಮಿಯ ಸದಸ್ಯರು ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಗಳನ್ನು ಕುರಿತು ತಾವು ಶೋಧಿಸಿದ ಹೊಸ ವಿಚಾರಗಳ ವಿನಿಮಯ ಮಾಡಿಕೊಂಡರು. ಡಾ|| ಅ.ಸುಂದರ, ಡಾ|| ಚೆನ್ನಕ್ಕ ಪಾವಟೆ, ಡಾ|| ಜ್ಯೋತ್ಸ್ನಾ ಕಾಮತ್, ಪ್ರೊ|| ಎಂ.ಜಿ. ನಾಗರಾಜ್, ಡಾ|| ದೇವರ ಕೊಂಡಾರೆಡ್ಡಿ, ಡಾ|| ಕೆ. ಆರ್. ಗಣೇಶ್, ಪ್ರೊ|| ವಸಂತ ಕುಷ್ಟಗಿ, ಡಾ|| ಎಸ್. ಕೆ. ಜೋಷಿ, ಡಾ|| ಚೂಡಾಮಣಿ ನಂದ ಗೋಪಾಲ್, ಡಾ|| ಎ.ಕೆ. ಶಾಸ್ತ್ರಿ, ಡಾ|| ಹೆಚ್. ಚಂದ್ರಶೇಖರ ಮತ್ತು ಡಾ|| ಪಿ. ಎನ್. ನರಸಿಂಹಮೂರ್ತಿ ಅವರುಗಳ ಅಧ್ಯಕ್ಷತೆಯಲ್ಲಿ ನಡೆದ ಹನ್ನೆರಡು ವಿಚಾರ ಗೋಷ್ಠಿಗಳಲ್ಲಿ ೯೯ ಸಂಶೋಧನಾ ಪ್ರಬಂಧಗಳು ಮಂಡನೆ ಆದುವು. ಮೊದಲ ದಿನ ಮಧ್ಯಾಹ್ನ ಡಾ|| ಬಾ.ರಾ. ಗೋಪಾಲ್ ಪ್ರಶಸ್ತಿ ಪಡೆದ ಡಾ||ಬಿ. ರಾಜಶೇಖರಪ್ಪ ಅವರು ವಿಶೇಷ ಉಪನ್ಯಾಸ ನೀಡಿದರು.

ಸಮ್ಮೇಳನದ ಯಶಸ್ಸಿಗೆ ಶ್ರಮಿಸಿದ ಎಲ್ಲ ಗಣ್ಯರಿಗೂ ಅಕಾದೆಮಿಯು ಧನ್ಯವಾದಗಳೊಡನೆ ಕೃತಜ್ಞತೆಗಳನ್ನು ಸಮರ್ಪಿಸಿತು.

**ಸರ್ವಸದಸ್ಯರ ಸಭೆಯ ವರದಿ - ೨೦೦೩**

ದಿನಾಂಕ ೨೫ -೯-೨೦೦೪, ಶನಿವಾರ ಸಂಜೆ ೬.೩೦ ಗಂಟೆಗೆ, ಅಕಾದೆಮಿಯ ೧೮ನೆಯ ವಾರ್ಷಿಕ ಸಮ್ಮೇಳನದ ಸಭಾಸ್ಥಾನವಾದ, ಹೊನ್ನಾಳಿಯ ಹಿರೇ ಕಲ್ಮಠದ ಸಭಾಂಗಣದಲ್ಲಿ ಆ ಮೊದಲೇ ಸರ್ವಸದಸ್ಯರಿಗೂ ಪತ್ರಮುಖೇನ ತಿಳಿಸಿದ್ದ ಪ್ರಕಾರ, ಅಕಾದೆಮಿಯ ಅಧ್ಯಕ್ಷರಾದ ಡಾ|| ಸೂರ್ಯನಾಥ ಕಾಮತ್ ಅವರ ಅಧ್ಯಕ್ಷತೆಯಲ್ಲಿ ನಡೆದ ಸರ್ವಸದಸ್ಯರ ಸಭೆಯ ನಡವಳಿಕೆಗಳು ಈ ಕೆಳಕಂಡಂತಿವೆ.

ಸರ್ವಸದಸ್ಯರ ಸಭೆಯ ತಿಳುವಳಿಕೆ ಪತ್ರವನ್ನು ಅಂಚೆಯ ಮೂಲಕ ಎಲ್ಲ ಸದಸ್ಯರಿಗೂ ಮೊದಲೇ ಕಳುಹಿಸಲಾಗಿತ್ತು. ಪ್ರಧಾನ ಕಾರ್ಯದರ್ಶಿ ಡಾ|| ಎಚ್.ಎಸ್. ಗೋಪಾಲರಾವ್ ಅವರು ಸಭೆಯನ್ನು ಆರಂಭಿಸಲು, ಹಾಜರಿದ್ದ ಸದಸ್ಯರ ಅನುಮತಿ ಕೇಳಿದರು. ಸರ್ವಸದಸ್ಯರ ಸಭೆಯನ್ನು ಆರಂಭಿಸಲು ಸರ್ವಸದಸ್ಯರ ಅನುಮೋದನೆಯೂ ದೊರೆಯಿತು. ನಂತರ ಶ್ರೀ ಟಿ.ಎಚ್.ಎಂ. ಬಸವರಾಜು ಅವರ ಪ್ರಾರ್ಥನೆಯೊಂದಿಗೆ ಸಭೆಯು ಆರಂಭವಾಯಿತು. ಕಳೆದ ಸರ್ವಸದಸ್ಯರ ಸಭೆಯ ನಂತರ ಈವರೆಗೆ ನಿಧನರಾಗಿರುವ ಅಕಾದೆಮಿಯ ಸದಸ್ಯರು ಮತ್ತು ಭಾರತದ ಗಣ್ಯ ವ್ಯಕ್ತಿಗಳ ನಿಧನಕ್ಕಾಗಿ ಸಭೆಯು ಒಂದು ನಿಮಿಷಗಳ ಮೌನಾಚರಣೆಯ ಮೂಲಕ ಶ್ರದ್ಧಾಂಜಲಿ ಅರ್ಪಿಸಿತು. ಶ್ರದ್ಧಾಂಜಲಿಗೆ ಪಾತ್ರರಾದವರ ಹೆಸರುಗಳು ಈ ಕೆಳಕಂಡಂತಿವೆ.

**ಅಕಾದೆಮಿಯ ಸದಸ್ಯರು**

೧. ಕರ್ನಾಟಕ ಇತಿಹಾಸ ಅಕಾದೆಮಿಯ ಆಜೀವ ಗೌರವಾಧ್ಯಕ್ಷರಾಗಿದ್ದ ಪ್ರೊ| ಜಿ.ಎಸ್. ದೀಕ್ಷಿತ್, ೨. ಕರ್ನಾಟಕ ಇತಿಹಾಸ ಅಕಾದೆಮಿಯ ಉಪಾಧ್ಯಕ್ಷರಲ್ಲಿ ಒಬ್ಬರಾಗಿದ್ದ ಡಾ|| ಹೆಚ್. ಆರ್. ರಘುನಾಥ ಭಟ್ ಮತ್ತು ಕರ್ನಾಟಕ ಇತಿಹಾಸ ಅಕಾದೆಮಿಯ ಸಕ್ರಿಯ ಸದಸ್ಯರಾಗಿದ್ದ ಡಾ||ಎನ್. ಹವಳಯ್ಯ

ಇತರ ಗಣ್ಯರು: ೧. ಖ್ಯಾತ ಕವಿ ಶ್ರೀ ಕೆ.ಎಸ್. ನರಸಿಂಹಸ್ವಾಮಿ
೨. ಶತಾಯುಷಿ ಶ್ರೀ ನಿಟ್ಟೂರು ಶ್ರೀನಿವಾಸ ರಾವ್
೩. ಖ್ಯಾತ ಅಣು ವಿಜ್ಞಾನಿ ಡಾ|| ರಾಜಾ ರಾಮಣ್ಣ

ಶ್ರದ್ಧಾಂಜಲಿ ಸಲ್ಲಿಕೆಯಾದ ನಂತರ, ಸಭೆಯಲ್ಲಿ ಹಾಜರಿದ್ದ ಎಲ್ಲ ಸದಸ್ಯರನ್ನೂ, ಅಕಾದೆಮಿಯ ಕಾರ್ಯದರ್ಶಿಗಳಲ್ಲಿ ಒಬ್ಬರಾದ ಡಾ॥ ಚೆನ್ನಕ್ಕ ಪಾವಟೆ ಸ್ವಾಗತಿಸಿದರು.

**೨೦೦೩ನೆಯ ಸಾಲಿನ ವರದಿ**

೨೦೦೩ನೆಯ ಸಾಲಿನ ವಾರ್ಷಿಕ ವರದಿಯನ್ನು ಪ್ರಧಾನ ಕಾರ್ಯದರ್ಶಿ ಡಾ॥ ಎಚ್. ಎಸ್. ಗೋಪಾಲರಾವ್ ಮಂಡಿಸಿದರು. ವಾರ್ಷಿಕ ವರದಿಯ ಮುದ್ರಿತ ಪ್ರತಿಗಳನ್ನು ಸಭೆಯ ಆರಂಭದಲ್ಲೇ ಹಾಜರಿದ್ದ ಎಲ್ಲ ಸದಸ್ಯರಿಗೂ ವಿತರಿಸಲಾಗಿತ್ತು. ಅದರ ವಾಚನದ ಅವಶ್ಯಕತೆ ಇದೆಯೇ ಎಂದು ಅಕಾದೆಮಿಯ ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್ ಪ್ರಶ್ನಿಸಿದಾಗ, ಅದರ ಅವಶ್ಯಕತೆ ಇಲ್ಲವೆಂದು ಸದಸ್ಯರೆಲ್ಲ ಘೋಷಿಸಿದರು. ವರದಿಯನ್ನು ಸ್ವೀಕರಿಸಬಹುದೆಂದು ಶ್ರೀ ಟಿ.ಎಚ್. ಎಂ. ಬಸವರಾಜು ಸೂಚಿಸಿದರು. ಆ ಸೂಚನೆಯನ್ನು ಪ್ರೊ॥ ಕೆ.ಸಿ. ಮಲ್ಲಿಗವಾಡ ಅನುಮೋದಿಸಿದರು.

**೨೦೦೩ನೆಯ ಸಾಲಿನ ಪರಿಶೋಧಿತ ಲೆಕ್ಕ ಪತ್ರ ಮಂಡನೆ**

೨೦೦೩ನೆಯ ಸಾಲಿನ ವರದಿಯ ಜೊತೆಗೇ ೨೦೦೩ನೆಯ ಸಾಲಿನ ಪರಿಶೋಧಿತ ಲೆಕ್ಕ ಪತ್ರಗಳ ಮುದ್ರಿತ ಪ್ರತಿಯನ್ನೂ ಸದಸ್ಯರಿಗೆ ನೀಡಲಾಗಿತ್ತು. ಅದನ್ನು ಅಕಾದೆಮಿಯ ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್ ಮಂಡಿಸಿದರು.

೨೦೦೩ನೆಯ ಸಾಲಿನ ಪರಿಶೋಧಿತ ಲೆಕ್ಕ ಪತ್ರಗಳನ್ನು ಸ್ವೀಕರಿಸಬಹುದೆಂಬ ಸೂಚನೆಯನ್ನು ಡಾ॥ ಚೂಡಾಮಣಿ ನಂದಗೋಪಾಲ್ ನೀಡಿದರು. ಆ ಸೂಚನೆಯನ್ನು ಶ್ರೀ ಎಸ್.ಎಲ್. ಶ್ರೀನಿವಾಸಮೂರ್ತಿ ಅನುಮೋದಿಸಿದರು.

**೨೦೦೪ನೆಯ ಸಾಲಿನ ಮುಂಗಡ ಲೆಕ್ಕ ಪತ್ರಗಳು**

೨೦೦೩ನೆಯ ಸಾಲಿನ ಪರಿಶೋಧಿತ ಲೆಕ್ಕ ಪತ್ರಗಳ ಜೊತೆಗೇ ೨೦೦೪ನೆಯ ಸಾಲಿನ ಮುಂಗಡ ಲೆಕ್ಕ ಪತ್ರಗಳ ಪ್ರತಿಗಳನ್ನೂ ಸದಸ್ಯರಿಗೆ ನೀಡಲಾಗಿತ್ತು. ಅದನ್ನು ಡಾ॥ ಸೂರ್ಯನಾಥ ಕಾಮತ್ ವಿವರವಾಗಿಯೇ ಮಂಡಿಸಿದರು.

ವಿವರವಾದ ಚರ್ಚೆಗಳ ನಂತರ ಮಂಡಿತವಾದ ೨೦೦೪ನೆಯ ಸಾಲಿನ ಮುಂಗಡ ಲೆಕ್ಕ ಪತ್ರಗಳನ್ನು ಒಪ್ಪಿಕೊಳ್ಳಲು ಡಾ॥ ಮಲ್ಲಿಕಾರ್ಜುನ ಕಂಬಾರ ಸೂಚಿಸಿದರು. ಸೂಚನೆಯನ್ನು ಡಾ॥ ಟಿ. ಮುರುಗೇಶಿ ಅನುಮೋದಿಸಿದರು. ಅದಕ್ಕೆ ಸರ್ವಸದಸ್ಯರ ಅನುಮೋದನೆಯೂ ದೊರೆಯಿತು.

**೨೦೦೪ನೆಯ ಸಾಲಿಗೆ ಆಡಿಟರ್ ನೇಮಕ**

ಈವರೆಗೆ ಅಕಾದೆಮಿಯ ಲೆಕ್ಕಪತ್ರಗಳನ್ನು ಪರಿಶೋಧಿಸಿ ಕೊಟ್ಟಿರುವ ಶ್ರೀ ಕೆ.ವಿ. ಆಚಾರ್ಯ (ಆಚಾರ್ಯ ಅಂಡ್ ಕಂಪೆನಿ), ಬೆಂಗಳೂರು ಅವರನ್ನೇ ೨೦೦೪ನೆಯ ಸಾಲಿನ ಲೆಕ್ಕ ಪತ್ರಗಳ ಪರಿಶೋಧನೆಗೂ ನೇಮಿಸಿಕೊಳ್ಳಬಹುದೆಂದು ಡಾ॥ ಹೆಚ್. ಚಂದ್ರಶೇಖರ್ ಸೂಚಿಸಿದರು. ಆ ಸೂಚನೆಯನ್ನು ಶ್ರೀ ಕುಂ.ಬಾ. ಸದಾಶಿವಪ್ಪ ಅನುಮೋದಿಸಿದರು. ಆಡಿಟರ್ ಅವರಿಗೆ ರೂ. ೫,೦೦೦/- (ಐದು ಸಾವಿರ) ಗೌರವ ಸಂಭಾವನೆ ನೀಡಬಹುದೆಂದು ಡಾ॥ ಬಿ.ಜಗದೀಶ ಶೆಟ್ಟಿ ಸೂಚಿಸಿದರು ಮತ್ತು ಅದನ್ನು ಶ್ರೀ ಎಂ. ಎನ್. ಪ್ರಭಾಕರ್ ಅನುಮೋದಿಸಿದರು.

**ಠರಾವುಗಳ ಮಂಡನೆ**

ಹುಬ್ಬಳ್ಳಿಯ ಶ್ರೀ ಶಿವಶರಣ ಬಾರಕೇರ ಅವರು ಜುಲೈ ತಿಂಗಳಿನಲ್ಲೇ ಪತ್ರವೊಂದನ್ನು ಬರೆದು, ಇತಿಹಾಸ ಅಕಾದೆಮಿಯು ಪಿಎಚ್.ಡಿ. ಪಡೆದ ತನ್ನ ಸದಸ್ಯರಿಗೆ, ವಾರ್ಷಿಕ ಸಮ್ಮೇಳನದಲ್ಲಿ ಸನ್ಮಾನಿಸುವ ಸಂದರ್ಭದಲ್ಲಿ, ಗೌರವ ಪಡೆಯುವ ಸದಸ್ಯರು ಒಂದು ಬಣ್ಣದ ಮತ್ತು ಅಕಾದೆಮಿಯ ಅಧ್ಯಕ್ಷರು ಪ್ರಧಾನ ಕಾರ್ಯದರ್ಶಿಗಳು, ಸಮ್ಮೇಳನಾಧ್ಯಕ್ಷರು ಮತ್ತು ಅತಿಥಿಗಳು ಬೇರೆ ಒಂದು ಬಣ್ಣದ ಗೌನ್ ಧರಿಸುವುದರಿಂದ ಹಬ್ಬದ ವಾತಾವರಣ ಇರುತ್ತದೆ ಎಂಬ ಸಲಹೆ ನೀಡಿದ್ದರು. ಆ ಸಲಹೆಯನ್ನು ಸರ್ವ ಸದಸ್ಯರ ಸಭೆಯಲ್ಲಿ ಮಂಡಿಸುವುದಾಗಿ ತಿಳಿಸಲಾಗಿತ್ತು. ಆ ಪ್ರಕಾರ ಸಲಹೆಯನ್ನು ಸಭೆಯಲ್ಲಿ ಮಂಡಿಸಲಾಯಿತು. ಸಲಹೆಯನ್ನು ಠರಾವಾಗಿ ಸ್ವೀಕರಿಸಬೇಕಾದ ಅವಶ್ಯಕತೆ ಇಲ್ಲವೆಂದು ಪರಿಗಣಿಸಿ, ಈಗ ವಿಶ್ವವಿದ್ಯಾಲಯಗಳ ಪದವೀ ಪ್ರದಾನ ಸಮಾರಂಭಗಳಲ್ಲೇ ಸಮವಸ್ತ್ರವನ್ನು ಕಡ್ಡಾಯ ಮಾಡದೆ ಇರುವುದರಿಂದ ಅಕಾದೆಮಿಯು ಗೌರವ ನೀಡಿಕೆಯ ಸಲುವಾಗಿ ಸಮವಸ್ತ್ರದ ಬಳಕೆ ಅವಶ್ಯಕತೆ ಇಲ್ಲವೆಂದು ತೀರ್ಮಾನಿಸಲಾಯಿತು.

**ಠರಾವು : ೧**

ಹಲವು ರಾಜ್ಯಗಳಲ್ಲಿ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯ ಇಲಾಖೆಯಗಳು ಪ್ರತ್ಯೇಕವಾಗಿಯೇ ಕಾರ್ಯ ನಿರ್ವಹಿಸುತ್ತಿವೆ. ಅಂತೆಯೇ ಕರ್ನಾಟಕದಲ್ಲಿಯೂ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯ ಇಲಾಖೆಯನ್ನು ಪ್ರಾಚ್ಯವಸ್ತು ಇಲಾಖೆ ಮತ್ತು ವಸ್ತು

ಸಂಗ್ರಹಾಲಯ ಇಲಾಖೆ ಎಂದು ಪ್ರತ್ಯೇಕಗೊಳಿಸುವುದು ಸೂಕ್ತ ಎಂದು ಅಕಾದೆಮಿಯ ಈ ಸರ್ವ ಸದಸ್ಯರ ಸಭೆಯು ಕರ್ನಾಟಕ ಸರ್ಕಾರಕ್ಕೆ ಮನವಿ ಮಾಡುತ್ತದೆ.

**ಸೂಚನೆ : ಕೆಳದಿ ಗುಂಡಾ ಜೋಯಿಸ್** **ಅನುಮೋದನೆ : ಡಾ|| ಸೂರ್ಯನಾಥ ಕಾಮತ್**

**ಠರಾವು : ೨**

ಕೆಳದಿ, ಇಕ್ಕೇರಿ, ನಗರ (ಬಿದನೂರು), ಕವಲೇದುರ್ಗ, ಚೆನ್ನಗಿರಿ, ಬೇಕಲ್‌ಗಳನ್ನು ಪ್ರವಾಸೀ ಆಕರ್ಷಣೀಯ ಕೇಂದ್ರಗಳನ್ನಾಗಿ ಅಭಿವೃದ್ಧಿಪಡಿಸಲು ಕ್ರಮ ತೆಗೆದುಕೊಳ್ಳಬೇಕೆಂದು ಕರ್ನಾಟಕ ಇತಿಹಾಸ ಅಕಾದೆಮಿಯ ಸರ್ವ ಸದಸ್ಯರ ಸಭೆಯು ಕರ್ನಾಟಕ ಸರ್ಕಾರಕ್ಕೆ ವಿನಂತಿ ಮಾಡುತ್ತದೆ.

**ಸೂಚನೆ : ಕೆಳದಿ ಗುಂಡಾ ಜೋಯಿಸ್** **ಅನುಮೋದನೆ : ಡಾ|| ಸೂರ್ಯನಾಥ ಕಾಮತ್**

**ಠರಾವು : ೩**

ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಗೆ ಕಾಯಕಲ್ಪ ನೀಡಲು ಕರ್ನಾಟಕ ಸರ್ಕಾರವು ಶೀಘ್ರವೇ ಕ್ರಮ ತೆಗೆದುಕೊಳ್ಳುವುದು ಸೂಕ್ತ ಎಂದು ಕರ್ನಾಟಕ ಇತಿಹಾಸ ಅಕಾದೆಮಿಯ ಈ ಸರ್ವಸದ್ಯರ ಸಭೆಯ ಕರ್ನಾಟಕ ಸರ್ಕಾರವನ್ನು ಒತ್ತಾಯಿಸುತ್ತದೆ.

**ಸೂಚನೆ : ಕೆಳದಿ ಗುಂಡಾ ಜೋಯಿಸ್** **ಅನುಮೋದನೆ : ಡಾ|| ಸೂರ್ಯನಾಥ ಕಾಮತ್**

ಶ್ರೀ ಕೆಳದಿ ಗುಂಡಾ ಜೋಯಿಸರ ಇನ್ನೂ ಕೆಲವು ಸಲಹೆಗಳಸ್ನು ಕೇಂದ್ರ ಸರ್ಕಾರ ಮತ್ತು ಕರ್ನಾಟಕ ಸರ್ಕಾರದ ಸಂಬಂಧಿಸಿದ ವಿವಿಧ ಇಲಾಖೆಗಳಿಗೆ ಮನವಿಯ ರೂಪದಲ್ಲಿ ಕಳುಹಿಸಲು ತೀರ್ಮಾನಿಸಲಾಯಿತು. ಆ ಸಲಹೆಗಳೆಂದರೆ,

೧. ಕರ್ನಾಟಕ ಇತಿಹಾಸ ಅಕಾದೆಮಿಯ ಮನವಿಗೆ ಮಾನ್ಯತೆಯಿತ್ತು ಶಿವಮೊಗ್ಗ -ತಾಳಗುಪ್ಪ ರೈಲ್ವೆ ಮಾರ್ಗವನ್ನು ಬ್ರಾಡ್‌ಗೇಜ್‌ಗೆ ಪರಿವರ್ತಿಸಲು ಈಗಾಗಲೇ ಮಂಜೂರಾತಿ ದೊರೆತಿದ್ದು, ಕೆಲಸವನ್ನು ಶೀಘ್ರವೇ ಕೈಗೊಳ್ಳಲು ರೈಲ್ವೆ ಇಲಾಖೆ ಮತ್ತು ಸಂಬಂಧಿಸಿದ ಸಚಿವರಿಗೆ ಪತ್ರ ಬರೆದು, ಒತ್ತಾಯದ ಕೋರಿಕೆ ಸಲ್ಲಿಸಲು ತೀರ್ಮಾನಿಸಲಾಯಿತು.

೨. ಕರ್ನಾಟಕ ಸರ್ಕಾರವೇ ಹಣ ಮಂಜೂರು ಮಾಡಿ, ಕೆಳದಿಯಲ್ಲಿ ಕೆಳದಿ ರಾಣಿ ಚೆನ್ನಮ್ಮಾಜಿಯ ಪುತ್ಥಳಿಯನ್ನು ಸ್ಥಾಪಿಸಲು ಉದ್ದೇಶಿಸಿರುವ ಕೆಲಸವು ಶೀಘ್ರವೇ ಕಾರ್ಯರೂಪಕ್ಕೆ ಬರಲು ಸಂಬಂಧಿಸಿದ ಇಲಾಖೆಗಳು ಕ್ರಮ ತೆಗೆದುಕೊಳ್ಳತಕ್ಕದ್ದು.

ಶ್ರೀ ಕೆಳದಿ ಗುಂಡಾ ಜೋಯಿಸರ ಇನ್ನೂ ಕೆಲವು ಸಲಹೆಗಳನ್ನು ಕುರಿತು ಸಭೆಯಲ್ಲಿ ಚರ್ಚಿಸಲಾಯಿತು. ಅವುಗಳು ಈ ಕೆಳಕಂಡತಿವೆ.

೧. ಪ್ರೊ|| ಜಿ.ಎಸ್. ದೀಕ್ಷಿತ್ ಅವರ ಭಾವಚಿತ್ರವನ್ನು ಕೆಳದಿ ವಸ್ತು ಸಂಗ್ರಹಾಲಯದಲ್ಲಿ ಅಳವಡಿಸುವ ಕೆಲಸವು, ಆ ವಸ್ತು ಸಂಗ್ರಹಾಲಯಕ್ಕೆ ಸಂಬಂಧಿಸಿದ ವಿಷಯವಾಗಿದ್ದು, ಆ ಬಗ್ಗೆ ಕರ್ನಾಟಕ ಇತಿಹಾಸ ಅಕಾದೆಮಿಯು ಮಧ್ಯೆ ಪ್ರವೇಶಿಸುವುದು ಅನವಶ್ಯಕ ಎಂದು ತೀರ್ಮಾನಿಸಲಾಯಿತು.

೨. ಪ್ರೊ|| ಜಿ.ಎಸ್. ದೀಕ್ಷಿತ್ ಅವರ ಹೆಸರಿನಲ್ಲಿ ಪ್ರತ್ಯೇಕವಾಗಿ ದತ್ತಿ ನಿಧಿಯೊಂದನ್ನು ಸ್ಥಾಪಿಸುವ ಅವಶ್ಯಕತೆ ಇಲ್ಲವೆಂದೂ, ಈಗಾಗಲೇ ಅವರ ಹೆಸರಿನಲ್ಲಿ,ಹರಿಹರದಲ್ಲಿ ಸ್ಥಾಪಿಸಲಾಗಿರುವ ಗ್ರಂಥಾಲಯಕ್ಕೆ ಸಾಧ್ಯವಾದ ನೆರವು ನೀಡಿ ಬಲಪಡಿಸಬಹುದೆಂದೂ ಅಭಿಪ್ರಾಯಪಡಲಾಯಿತು.

೩. ಕರ್ನಾಟಕ ಇತಿಹಾಸ ಕುರಿತ ಸಂಶೋಧನೆ ನಡೆಸುತ್ತಿರುವ ವ್ಯಕ್ತಿಗಳನ್ನು ಕುರಿತ ವಿವರಗಳನ್ನು ಈಗಾಗಲೇ ಸಂಸ್ಥೆಯೊಂದು ಸಂಗ್ರಹಿಸುತ್ತಿದ್ದು. ಅದೇ ಕೆಲಸವನ್ನು ಕರ್ನಾಟಕ ಇತಿಹಾಸ ಅಕಾದೆಮಿಯ ಕೈಗೆತ್ತಿಕೊಳ್ಳುವುದು ಅನಗತ್ಯ ಎಂದು ಅಭಿಪ್ರಾಯಪಡಲಾಯಿತು.

**ಇತರ ವಿಷಯಗಳು**

೧. ಕರ್ನಾಟಕ ಇತಿಹಾಸ ಅಕಾದೆಮಿಯ ಕಚೇರಿಗೆ ದೂರವಾಣಿ ಸಂಪರ್ಕ ಪಡೆಯಬೇಕು ಎಂಬ ಶ್ರೀ ಸಿ. ಆರ್. ಚೆಲುವರಾಜು ಅವರ ಸಲಹೆಗೆ ಉತ್ತರಿಸಿದ ಡಾ|| ಸೂರ್ಯನಾಥ ಕಾಮತ್ ಅವರು ಅಕಾದೆಮಿಯು ಸದ್ಯದಲ್ಲಿ ಬಾಡಿಗೆ ಕೊಠಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅಲ್ಲಿ ಯಾರೂ ಸಂಬಳಕ್ಕೆ ದುಡಿಯುತ್ತಿರುವ ನೌಕರರಿಲ್ಲ ಮತ್ತು ಕಚೇರಿಯಲ್ಲಿ ಕೆಲಸದ ಅವಧಿ ನಿಗದಿತವಲ್ಲ. ಆದ್ದರಿಂದ ದೂರವಾಣಿ ಸಂಪರ್ಕ ಪಡೆಯುವ ಅವಶ್ಯಕತೆ ಇಲ್ಲ ಎಂದು ತಿಳಿಸಿದರು.

೨. ಆಯಾ ವರ್ಷ ಪಿಎಚ್.ಡಿ., ಪದವಿ ಯ ಗೌರವ ಪಡೆದ ಸದಸ್ಯರ ಪ್ರತ್ಯೇಕ ಗೋಷ್ಠಿಯನ್ನು ಏರ್ಪಡಿಸಿ, ಅವರ ಸಂಶೋಧನಾ ವಿಷಯಗಳ ಮಂಡನೆಗೆ ಅವಕಾಶ ಕಲ್ಪಿಸಬೇಕೆಂಬ ಡಾ||ಕುರುವ ಬಸವರಾಜ್ ಅವರ ಸಲಹೆಗೆ ಉತ್ತರಿಸಿದ ಡಾ|| ಸೂರ್ಯನಾಥ ಕಾಮತ್ ಅವರು ಈಗಲೇ ಒಂದು ನೂರಕ್ಕೂ ಪ್ರಬಂಧಗಳು ಮಂಡನೆಗೆ ಮೂರು ದಿನಗಗಳ ಸಮ್ಮೇಳನದ ಅವಧಿಯಲ್ಲಿ

ಅವಕಾಶ ಕಲ್ಪಿಸಬೇಕಾಗಿದೆ. ಆದ್ದರಿಂದ ಯಾವುದೇ ಪ್ರತ್ಯೇಕ ಗೋಷ್ಠಿಗಳಿಗೆ ಅವಕಾಶ ಕಲ್ಪಿಸುವುದು ಕಷ್ಟ ಎಂದು ತಿಳಿಸುತ್ತಾ ಗೋಷ್ಠಿಗಳು ಕಾಲಾವಧಿಗೆ ಸರಿಯಾಗಿ ಮುಗಿಸಲು ಆಯಾ ಗೋಷ್ಠಿಗಳ ಅಧ್ಯಕ್ಷರು ಸಹಕರಿಸಬೇಕು ಹಾಗೂ ಅನಗತ್ಯ ಪ್ರಶ್ನೆಗಳನ್ನು ಕೇಳುವುದನ್ನು ಸದಸ್ಯರು ನಿಲ್ಲಿಸಬೇಕು ಎಂದು ಮನವಿ ಮಾಡಿದರು.

೩. ಹಳೆಯ ಇತಿಹಾಸ ದರ್ಶನದ ಸಂಚಿಕೆಗಳು ಅಲಭ್ಯವಾಗಿರುವುದರಿಂದ, ಹಲವು ಮುಖ್ಯ ಲೇಖನಗಳ ಪ್ರಾತಿನಿಧಿಕ ಸಂಕಲನಗಳನ್ನು ಪ್ರಕಟಿಸಿದರೆ ಸಂಶೋಧಕರಿಗೆ ಅನುಕೂಲ ಆಗುತ್ತದೆ ಎಂಬ ಶ್ರೀ ದೊಡ್ಡಣ್ಣವರ್ ಅವರ ಸಲಹೆಗೆ ಉತ್ತರಿಸಿದ ಡಾ॥ ಸೂರ್ಯನಾಥ ಕಾಮತ್ ಅವರು ದುಬಾರಿಯಾಗಿರುವ ಮುದ್ರಣ ವೆಚ್ಚ ಮತ್ತು ಸಂಕಲನಕ್ಕೆ ಬೇಕಾಗುವ ಶ್ರಮವು ಪತ್ಯೇಕ ಪ್ರಾತಿನಿಧಿಕ ಸಂಕಲನದ ಪ್ರಕಟಣೆಗೆ ಅಡ್ಡಿಯಾಗಿದೆ ಎಂದು ತಿಳಿಸಿದರು.

೪. ಇತಿಹಾಸ ದರ್ಶನವನ್ನು ಆಯಾ ವರ್ಷ ಅಗಲಿದ ಸದಸ್ಯ/ಗಣ್ಯರಿಗೆ ಅರ್ಪಿಸಬೇಕೆಂದು ಡಾ॥ ಪಿ.ಎನ್. ನರಸಿಂಹ ಮೂರ್ತಿ ಅವರ ಸಲಹೆಗೆ ಉತ್ತರಿಸಿದ ಡಾ॥ ಸೂರ್ಯನಾಥ ಕಾಮತ್ ಅವರು ಈ ಕ್ರಮವು ಒಂದು ಕೆಟ್ಟ ರೂಢಿ ಆಗಬಹುದೆಂಬ ಕಾರಣದಿಂದ ಸಾಧು ಅಲ್ಲವೆಂದು ತಿಳಿಸಿದರು.

೫. ಡಾ॥ ಜಿ.ಎಸ್. ದೀಕ್ಷಿತ್ ಅವರ ಬದುಕು-ಬರಹ ಕುರಿತು ವಿಚಾರ ಸಂಕಿರಣವನ್ನು ಹಮ್ಮಿಕೊಳ್ಳಬೇಕೆಂಬ ಡಾ॥ ಬಿ. ನಂಜುಂಡಸ್ವಾಮಿ ಅವರ ಸಲಹೆಗೆ ಉತ್ತರಿಸಿದ ಡಾ॥ ಸೂರ್ಯನಾಥ ಕಾಮತ್ ಅವರು, ಬೆಂಗಳೂರಿನ ಮಿಥಿಕ್ ಸೊಸೈಟಿಯು ಕರ್ನಾಟಕ ಇತಿಹಾಸ ಅಕಾದೆಮಿಯ ಜೊತೆಗೆ ಪ್ರೊ॥ ಜಿ.ಎಸ್. ದೀಕ್ಷಿತರ ಮೊದಲ ಪುಣ್ಯ ತಿಥಿಯ ಹೊತ್ತಿಗೆ ವಿಶೇಷ ವಿಚಾರ ಸಂಕಿರಣವನ್ನು ಹಮ್ಮಿಕೊಳ್ಳುವುದೆಂದು ತಿಳಿಸಿದರು.

೬. ಪಿ.ಎಚ್.ಡಿ., ಪದವಿ ಪಡೆದವರಿಗೆ ಅಕಾದೆಮಿಯು ಪ್ರಶಸ್ತಿ ಪತ್ರಗಳನ್ನು ನೀಡಬೇಕು ಮತ್ತು ಯುವ ಸಂಶೋಧಕರನ್ನು ಪ್ರಶ್ನೆಗಳ ಮೂಲಕ ನಿರುತ್ಸಾಹಗೊಳಿಸಬಾರದು ಎಂಬ ಡಾ॥ ಎಸ್. ಕೆ. ಮೇಲಕಾರ ಅವರ ಸೂಚನೆಗೆ ಉತ್ತರಿಸಿದ ಡಾ॥ ಸೂರ್ಯನಾಥ ಕಾಮತ್ ಅವರು ವಿಶ್ವ ವಿದ್ಯಾಲಯವೇ ಒಂದು ಪ್ರಶಸ್ತಿ ಪತ್ರ ಕೊಡುತ್ತದೆ. ನಾವು ಗೌರವಿಸಿ ಸ್ಮರಣ ಫಲಕ ನೀಡುತ್ತಿದ್ದೇವೆ. ಜೊತೆಗೆ ಪ್ರತ್ಯೇಕ ಪ್ರಶಸ್ತಿ ಪತ್ರದ ಅವಶ್ಯಕತೆ ಇದೆಯೇ? ಎಂದು ಸದಸ್ಯರಿಗೇ ಪ್ರಶ್ನಿಸಿದರು. ಅದಕ್ಕೆ ಹೆಚ್ಚು ಸದಸ್ಯರು ಅವಶ್ಯಕತೆ ಇಲ್ಲ ಎಂದು ಸೂಚಿಸಿದರು. ಯುವ ಸಂಶೋಧಕರನ್ನು ಪ್ರೋತ್ಸಾಹಿಸಲೆಂದೇ ದುಡಿಯುತ್ತಿರುವ ಅಕಾದೆಮಿಯು ಅವರನ್ನು ನಿರುತ್ಸಾಹಗೊಳಿಸುವ ಪ್ರಶ್ನೆಯೇ ಇಲ್ಲ ಎಂದು ಸ್ಪಷ್ಟಪಡಿಸಿದ ಡಾ॥ ಸೂರ್ಯನಾಥ ಕಾಮತ್ ಅವರು ಯುವ ಸಂಶೋಧಕರು ಪ್ರಶ್ನೆಗೆ ಉತ್ತರಿಸುವ ಸಾಮರ್ಥ್ಯವನ್ನೂ ಗಳಿಸಿಕೊಳ್ಳಬೇಕು ಎಂದು ಸೂಚಿಸಿದರು.

೭. ಸಂಪ್ರಬಂಧ ಮಂಡನೆಯ ಕಾರ್ಯಸೂಚಿಯಲ್ಲಿರುವ 'ಅಜ್ಞಾತರು' ಬಗ್ಗೆ ಶ್ರೀ ಸಂತೇಬೆನ್ನೂರು ಸುಮತೀಂದ್ರ ನಾಡಿಗ್ ಅವರು ಕೇಳಿದ ಪ್ರಶ್ನೆಗೆ ಉತ್ತರಿಸಿದ, ಡಾ॥ ಎಚ್. ಎಸ್.ಗೋಪಾಲರಾವ್ ಅವರು, ಅಜ್ಞಾತರು ಸಂಪ್ರಬಂಧದ ಸಾರಾಂಶದಲ್ಲಿ ತಮ್ಮ ಹೆಸರನ್ನು ನಮೂದಿಸಿಲ್ಲವಾದ ಕಾರಣ ಅಜ್ಞಾತರು ಎಂದು ನಮೂದಿಸಲಾಗಿದೆ ಎಂದೂ, ಆದರೆ, ಅವರು ಅಕಾದೆಮಿಯ ಸುತ್ತೋಲೆಗೆ ಉತ್ತರವಾಗಿಯೇ ಸಾರಾಂಶ ಕಳುಹಿಸಿರುವುದರಿಂದ ಅವರು ಅಕಾದೆಮಿಯ ಸದಸ್ಯರೇ ಆಗಿದ್ದಾರೆ ಎಂದು ತಿಳಿಸಿದರು.

**೨೦೦೪-೦೫, ೨೦೦೫-೦೬ನೆಯ ಸಾಲಿಗೆ ಕಾರ್ಯಕಾರೀ ಸಮಿತಿಯ ಆಯ್ಕೆ**

ಶಿವಮೊಗ್ಗ ಜಿಲ್ಲೆಯ ಹೊಸನಗರದ ರಾಮಚಂದ್ರಾಪುರ ಮಠದ ಆಶ್ರಯದಲ್ಲಿ ಅಕಾದೆಮಿಯ ೧೬ನೆಯ ವಾರ್ಷಿಕ ಅಧಿವೇಶನವು ನೆಡೆದಾಗ ದಿನಾಂಕ ೨೩-೯-೨೦೦೨ರಂದು ನಡೆದ ಸರ್ವಸದಸ್ಯರ ಸಭೆಯಲ್ಲಿ ನಂತರದ ಎರಡು ವರ್ಷಗಳ ಅವಧಿಗೆ ಆಯ್ಕೆ ಆಗಿದ್ಧ ಕಾರ್ಯಕಾರೀ ಸಮಿತಿಯ ಅವಧಿಯು ಮುಗಿಯಲಿರುವ ಕಾರಣದಿಂದ, ಮುಂದಿನ ಎರಡು ವರ್ಷಗಳ ಅವಧಿಗೆ ಹೊಸದಾಗಿ ಕಾರ್ಯಕಾರೀ ಸಮಿತಿಯ ಆಯ್ಕೆ ಆಗಬೇಕಾಗಿದ್ದು, ಈ ಸಂಬಂಧ ಸರ್ವಸದಸ್ಯರ ಸಭೆಯ ತಿಳುವಳಿಕೆಯ ಸುತ್ತೋಲೆಯಲ್ಲಿ ತಿಳಿಸಲಾಗಿತ್ತು. ಬೆಂಗಳೂರಿನ ಡಾ॥ ಕೆ.ಬಿ. ಸುದರ್ಶನ್ ಅವರು ತಾವು ಸಿದ್ಧಪಡಿಸಿದ್ದ ೨೦ ಜನರ ಒಂದು ಕಾರ್ಯಕಾರೀ ಸಮಿತಿಯ ಸದಸ್ಯರ ಪಟ್ಟಿಯನ್ನು ಮಂಡಿಸಿದರು. ಪ್ರತ್ಯೇಕವಾಗಿ ಯಾವುದೇ ಹೆಸರುಗಳು ಪ್ರಸ್ತಾಪ ಆಗದ ಕಾರಣದಿಂದ ಆ ಪಟ್ಟಿಯಲ್ಲಿರುವ ಹೆಸರುಗಳನ್ನು ಮುಂದಿನ ಎರಡು ವರ್ಷಗಳ ಕಾರ್ಯಕಾರೀ ಸಮಿತಿಗೆ ಒಪ್ಪಬಹುದೆಂಬ ಉಡುಪಿಯ ಪ್ರೊ॥ ಟಿ. ಮುರುಗೇಶಿ ಅವರ ಸೂಚನೆಯನ್ನು ಶಿವಮೊಗ್ಗೆಯ ಶ್ರೀ ಸಿದ್ದಯ್ಯ ಹಿರೇಮಠ ಅವರು ಅನುಮೋದಿಸಿದರು. ಹೀಗೆ ಮಂಡನೆಯಾಗಿ, ಅನುಮೋದನೆಗೆ ಸೂಚನೆ ದೊರೆತು, ಅನುಮೋದನೆ ಆದ ಕಾರ್ಯಕಾರೀ ಸಮಿತಿಯಲ್ಲಿರುವ ಇಪ್ಪತ್ತು ಜನರ ಹೆಸರುಗಳು ಈ ಕೆಳಕಂಡಂತಿವೆ.

೧. ಪ್ರೊ॥ ಎಂ.ಜಿ.ನಾಗರಾಜ್, ಬೆಂಗಳೂರು
೨. ಡಾ॥ ಹೆಚ್. ಚಂದ್ರಶೇಖರ, ಬೆಂಗಳೂರು
೩. ಡಾ॥ ಬಿ. ರಾಜಶೇಖರಪ್ಪ, ಚಿತ್ರದುರ್ಗ
೪. ಡಾ॥ ಕೆ. ವಸಂತಲಕ್ಷ್ಮಿ, ಬೆಂಗಳೂರು
೫. ಡಾ॥ ದೇವರಕೊಂಡಾರೆಡ್ಡಿ, ಹಂಪಿ
೬. ಶ್ರೀ ಎಂ. ಬಿ. ಪಾಟಿಲ್, ಬೆಂಗಳೂರು
೭. ಡಾ॥ ಸ್ಮಿತಾ ಸುರೇಬಾನಕರ, ಬೆಳಗಾವಿ
೮. ಡಾ॥ ಕೆಳದಿ ವೆಂಕಟೇಶ ಜೋಯಿಸ್ ಕೆಳದಿ
೯. ಪ್ರೊ॥ ಎಂ. ಶಿವಶಂಕರಯ್ಯ, ಹೊನ್ನಾಳಿ
೧೦. ಡಾ॥ ಡಿ.ಎನ್. ಯೋಗೀಶ್ವರಪ್ಪ, ತುಮಕೂರು
೧೧. ಡಾ॥ ಪಿ.ಎನ್. ನರಸಿಂಹಮೂರ್ತಿ, ಉಡುಪಿ
೧೨. ಡಾ॥ ಸೂರ್ಯನಾಥ ಕಾಮತ್, ಬೆಂಗಳೂರು
೧೩. ಶ್ರೀ ಕುಂ.ಬಾ. ಸದಾಶಿವಪ್ಪ, ಹರಪನಹಳ್ಳಿ
೧೪. ಡಾ॥ ಗಣಪತಿ ಗೌಡ, ಮಡಿಕೇರಿ
೧೫. ಡಾ॥ ಚೆನ್ನಕ್ಕ ಪಾವಟೆ, ಧಾರವಾಡ
೧೬. ಡಾ॥ ಅ. ಸುಂದರ, ಧಾರವಾಡ
೧೭. ಪ್ರೊ॥ ವಸಂತ ಕುಷ್ಟಗಿ, ಕಲಬುರ್ಗಿ
೧೮. ಅಮರೇಶ ಯತಗಲ್, ಲಿಂಗಸೂಗೂರು
೧೯. ಡಾ॥ ಎಂ.ಕೆ.ದುರುಗಪ್ಪ, ಕನಕಗಿರಿ
೨೦. ಡಾ॥ ಎಚ್. ಎಸ್. ಗೋಪಾಲರಾವ್, ಅರಸಿನಕುಂಟೆ

ಸಭೆಯಲ್ಲಿ ಶ್ರೀ ಎಂ.ಬಿ.ಪಾಟೀಲ್ ಅವರ ವಿನಹ ಆಯ್ಕೆ ಆದ ಉಳಿದ ಸದಸ್ಯರೆಲ್ಲಾ ಹಾಜರಿದ್ದು ಹೆಸರುಗಳನ್ನು ಹೇಳಿದಾಗ, ಎದ್ದು ನಿಂತು ಸಭೆಗೆ ವಂದಿಸಿ, ತಮ್ಮ ಪರಿಚಯ ಮಾಡಿಕೊಂಡರು.

ವಿದೇಶ ಪ್ರವಾಸದಲ್ಲಿರುವ ಶ್ರೀ ಎಂ.ಬಿ.ಪಾಟೀಲರು, ವಿದೇಶದಿಂದ ಹಿಂದಿರುಗಲು ಸಕಾಲಕ್ಕೆ ತಮಗೆ ಟಿಕೆಟ್ ಸಿಗುತ್ತಿಲ್ಲವೆಂದೂ, ಸರ್ವಸದಸ್ಯರ ಸಭೆಯು ತಮಗೆ ಯಾವುದೇ ಜವಾಬ್ದಾರಿ ಒಪ್ಪಿಸಿದರೂ, ಅದನ್ನು ಸಂತೋಷದಿಂದ ನಿರ್ವಹಿಸುವುದಾಗಿ ಅಕಾದೆಮಿಯ ಅಧ್ಯಕ್ಷರಿಗೆ ಪತ್ರಮುಖೇನ ತಿಳಿಸಿದ್ದರು.

**ಅಕಾದೆಮಿಯ ೧೯ನೆಯ ವಾರ್ಷಿಕ ಸಮ್ಮೇಳನ**

ಬಾಳೆಹೊನ್ನೂರಿನ ಶ್ರೀ ರಂಭಾಪುರಿ ಪೀಠದ ಶ್ರೀ ಶ್ರೀಗಳು ತಮ್ಮ ಪೀಠದಲ್ಲಿ ಯಾವುದೇ ವರ್ಷವಾದರೂ ಸಮ್ಮೇಳನ ನಡೆಸಲು ಮುಕ್ತ ಆಹ್ವಾನ ನೀಡಿದ್ದು ಗುಲಬರ್ಗಾದ ಪ್ರೊ॥ ವಸಂತ ಕುಷ್ಟಗಿ ಅವರ ಮೂಲಕ ಕಲಬುರಗಿ ಜಿಲ್ಲೆಯ ಸೇಡಂ ಪಟ್ಟಣದ ರಾಷ್ಟ್ರಕೂಟ ಇತಿಹಾಸ ಸಂಶೋಧನಾ ಸಂಸ್ಥೆ ಹಾಗೂ ಗಡಿನಾಡು ಅಭಿವೃದ್ಧಿ ಸಂಘಗಳು ಮನವಿ ಮಾಡಿರುವುದರ ಹಿನ್ನೆಲೆಯಲ್ಲಿ ಅಕಾದೆಮಿಯ ೧೯ನೆಯ ವಾರ್ಷಿಕ ಸಮ್ಮೇಳನವನ್ನು ಕಲಬುರಗಿ ಜಿಲ್ಲೆಯಲ್ಲಿ ಹಮ್ಮಿಕೊಳ್ಳಬಹುದೆಂದು ತೀರ್ಮಾನಿಸಲಾಯಿತು.

**ಅಧ್ಯಕ್ಷ ಭಾಷಣ**

ಸರ್ವಸದಸ್ಯರ ಸಭೆಯ ಅಧ್ಯಕ್ಷತೆ ವಹಿಸಿದ್ದ ಡಾ॥ ಸೂರ್ಯನಾಥ ಕಾಮತ್ ಅವರು ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ಬೆಂಗಳೂರು ವಲಯದವರ ಕೋರಿಕೆಯ ಮೇರೆಗೆ ಅವರ ವ್ಯಾಪ್ತಿಗೆ ಸೇರಿದ ಆರು ಸ್ಥಳಗಳಲ್ಲಿ ಈ ವರ್ಷ, ಅವರು ಒದಗಿಸುವ ಭಿತ್ತಿ ಪತ್ರಗಳನ್ನು ಬಳಸಿಕೊಂಡು ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ ನಡೆಸಲು ಕ್ರಮ ಕೈಗೊಂಡಿರುವುದನ್ನು ಸಭೆಗೆ ತಿಳಿಸಿ, ಆಯಾ ಸ್ಥಳಗಳಲ್ಲಿನ ಸದಸ್ಯರ ಸಕ್ರಿಯ ಸಹಕಾರ ಕೋರಿದರು. ಈ ವರ್ಷದ ಸಮ್ಮೇಳನದ ಉದ್ಘಾಟನೆ ಮಾಡಿದ ಬಾಳೆಹೊನ್ನೂರಿನ ಪೂಜ್ಯ ಗುರುಗಳು, ಉದ್ಘಾಟನಾ ಸಂದರ್ಭದಲ್ಲಿಯೇ ಅಕಾದೆಮಿಯ **ಇತಿಹಾಸದರ್ಶನ** ಸಂಚಿಕೆಯ ಮುದ್ರಣ ವೆಚ್ಚಕ್ಕಾಗಿ ಪ್ರತಿವರ್ಷ ರೂ. ಇಪ್ಪತ್ತೈದು ಸಾವಿರ (೨೫,೦೦೦) ನೆರವು ನೀಡುವುದಾಗಿ ಘೋಷಿಸಿರುವುದನ್ನು ಕೃತಜ್ಞತೆಯಿಂದ ಸ್ಮರಿಸಿ ಧನ್ಯವಾದಗಳನ್ನು ಅರ್ಪಿಸಿದರು. ಈವರೆಗೆ ಅಕಾದೆಮಿಗೆ ಹತ್ತು ಹಲವು ರೀತಿಗಳಲ್ಲಿ ನೆರವು ನೀಡಿರುವ ಸದಸ್ಯರು ಮತ್ತು ಸಮ್ಮೇಳನಗಳ ಆಶ್ರಯದಾತರು ಹಾಗೂ ಇನ್ನಿತರ ಮಹನೀಯರ ಸೇವೆಯನ್ನು ತುಂಬು ಗೌರವದಿಂದ ನೆನೆಯುವುದಾಗಿ ತಿಳಿಸಿದರು.

**ಕೃತಜ್ಞತೆಗಳು**

ಅಕಾದೆಮಿಯ ೧೮ನೆಯ ವಾರ್ಷಿಕ ಸಮ್ಮೇಳನಕ್ಕೆ ಆಶ್ರಯ ನೀಡಿ, ಎಲ್ಲಾ ಸದಸ್ಯರಿಗೂ ಸಂತೋಷವಾಗುವಂತೆ ಸಮರ್ಥವಾಗಿ ಸಮ್ಮೇಳನವನ್ನು ನಡೆಸಿಕೊಟ್ಟ, ಹೊನ್ನಾಳಿಯ ಹಿರೇಕಲ್ಮಠದ ಗುರುವರ್ಗ, ಶ್ರೀ ಚನ್ನಪ್ಪಸ್ವಾಮಿ ವಿದ್ಯಾಪೀಠ (ರಿ.,), ಶ್ರೀ ಮೃತ್ಯುಂಜಯ ಶಿವಾಚಾರ್ಯ ಪ್ರಥಮ ದರ್ಜೆ ಕಲಾ ಮತ್ತು ವಾಣಿಜ್ಯ ಕಾಲೇಜು, ಶ್ರೀ ಚನ್ನಚೇತನ ಪ್ರಕಾಶನ, ಹಿರೇಕಲ್ಮಠ ಮತ್ತು ಸಹಕರಿಸಿದ ಎಲ್ಲಾ ಗಣ್ಯರಿಗೆ ಅಕಾದೆಮಿಯ ಕಾರ್ಯದರ್ಶಿಗಳಲ್ಲಿ ಒಬ್ಬರಾದ ಡಾ॥ ಕೆ. ವಸಂತಲಕ್ಷ್ಮಿ ಅವರು ವಂದನೆ ಸಲ್ಲಿಸಿದರು.

**ಇತಿಹಾಸ ಪ್ರಶಸ್ತಿ ಪರೀಕ್ಷೆಗಳು ೨೦೦೪**

೨೦೦೪ನೇ ಸಾಲಿನಲ್ಲಿ ೨೯-೨-೨೦೦೪ ಭಾನುವಾರದಂದು ಮಧ್ಯಾಹ್ನ ೧ ಗಂಟೆಯಿಂದ ೪ ಗಂಟೆಯವರೆಗೆ, ಎರಡನೆಯ ಪಿ.ಯು.ಸಿ. ಇತಿಹಾಸ ವಿದ್ಯಾರ್ಥಿಗಳಿಗಾಗಿ ಕರ್ನಾಟಕ ಏಳು ಕೇಂದ್ರಗಳಲ್ಲಿ ನಡೆಸಿದ 'ಇತಿಹಾಸ ಪ್ರಶಸ್ತಿ' ಪರೀಕ್ಷೆಗಳಿಗೆ ಒಟ್ಟು ೩೧೫೦ ವಿದ್ಯಾರ್ಥಿಗಳು ಅರ್ಜಿ ಸಲ್ಲಿಸಿದ್ದು ಶೇಕಡಾ ೮೦ರಷ್ಟು ವಿದ್ಯಾರ್ಥಿಗಳು ಪರೀಕ್ಷೆಗಳಿಗೆ ಹಾಜರಾಗಿದ್ದಾರೆ. ತೇರ್ಗಡೆಯಾದವರ ಪೈಕಿ ಕೆಳಕಂಡ ವಿದ್ಯಾರ್ಥಿಗಳು ಬಹುಮಾನಗಳನ್ನು ಗಳಿಸಿದ್ದಾರೆ.

ಒಂದನೆ ಬಹುಮಾನ (ರೂ ೧,೦೦೦): ಶ್ರೀ ಮಹೇಂದ್ರ ಕುಮಾರ್ ಎ.ಎಸ್., ಬಸವೇಶ್ವರ ಕೇಂದ್ರಿಯ ಪಿ.ಯು.ಕಾಲೇಜು, ಕೋಳಾಲ, (ಊರ್ಡಿಗೆರೆ ಮಾರ್ಗ) ತುಮಕೂರು ಜಿಲ್ಲೆ.

ಎರಡನೆ ಬಹುಮಾನ (ರೂ.೬೦೦): ಶೀ ಶಿವರುದ್ರಪ್ಪಮೇಟಿ, ಜಿ.ಇ.ಪಿ.ಯು. ಕಾಲೇಜು, ಕಲಘಟಗಿ ಧಾರವಾಡ ಜಿಲ್ಲೆ.

ಮೂರನೇ ಬಹುಮಾನ (ರೂ.೪೦೦): ಕು॥ಮನು ಆರ್. ಸರಕಾರಿ ಬಾಲಕಿಯರ ಕಾಲೇಜು, ಚನ್ನಪಟ್ಟಣ, ಬೆಂಗಳೂರು ಜಿಲ್ಲೆ. ಸಮಾಧಾನ ಮತ್ತು ಕೇಂದ್ರದಲ್ಲಿ ಅತ್ಯಂತ ಹೆಚ್ಚಿನ ಅಂಕ ಪಡೆದ ಬಹುಮಾನಗಳು( ರೂ. ೨೦೦):

೧. ಶ್ರೀ. ಟಿ. ಸಿ. ಸಿದ್ಧಲಿಂಗಾರಾಧ್ಯ, ವಿದ್ಯಾವಾಹಿನಿ ಪಿ.ಯು.ಕಾಲೇಜು, ತುಮಕೂರು,

೨. ಶ್ರೀ ಬಿ.ವಿ. ತಿಮ್ಮರಾಜು, ಬಸವೇಶ್ವರ ಕೇಂದ್ರಿಯ ಪಿ.ಯು ಕಾಲೇಜು, ಕೋಳಾಲ, ತುಮಕೂರು ಜಿಲ್ಲೆ.

೩. ಶ್ರೀ ಅಮರೇಶ (ಶ್ರೀ ಬಸವಣ್ಣನವರ ಮಗ), ಟ್ಯಾಗೂರ್ ಸ್ಮಾರಕ ಪದವಿ ಪೂರ್ವ ಕಾಲೇಜು, ರಾಯಚೂರು

೪. ಶ್ರೀ ಸಿ.ಬಿ.ರುದ್ರೇಶ್ ವಿವೇಕಾನಂದ ಗಿರಿಜನ ಪಿ.ಯು. ಕಾಲೇಜು, ಬಿಳಿಗಿರಿರಂಗನ ಬೆಟ್ಟ ಚಾಮರಾಜನಗರ ಜಿಲ್ಲೆ

೫. ಕು॥ ಸ್ಮಿತಾ, ಎಸ್.ಡಿ. ಎಂ.ಕಾಲೇಜು, ಉಜಿರೆ, ದಕ್ಷಿಣ ಕನ್ನಡ

ಪರೀಕ್ಷೆಗಳ ಯಶಸ್ಸಿಗೆ ಕಾರಣರಾದ ಬೆಂಗಳೂರಿನ ಶೇಷಾದ್ರಿಪುರ ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲ ಪ್ರೊ॥ ಜೆ.ಎಸ್. ವೆಂಕಟರಾಜು ಮತ್ತು ಇತಿಹಾಸ ವಿಭಾಗದ ಪ್ರೊ॥ ರಾಧಾಕೃಷ್ಣ, ಎಸ್.ಜೆ.ಆರ್.ಸಿ. ಮಹಿಳಾ ಕಾಲೇಜಿನ ಇತಿಹಾಸ ವಿಭಾಗದ ಶ್ರೀಮತಿ ಬಿ.ಎಸ್. ಪಂಪಾದೇವಿ ಮತ್ತು ಕನ್ನಡ ವಿಭಾಗದ ಶ್ರೀ ಸಾಸಲು ವಿಶ್ವನಾಥ್, ತುಮಕೂರಿನ ಸಿದ್ಧಗಂಗಾ ಪದವಿ ಕಾಲೇಜಿನ ಪ್ರಾಂಶುಪಾಲರು, ಇತಿಹಾಸದ ಪ್ರಾಧ್ಯಾಪಕರಾದ ಡಾ॥ ಡಿ.ಎನ್. ಯೋಗೀಶ್ ಮತ್ತು ಸಿದ್ಧಗಂಗಾ ಶಿಕ್ಷಣ ಸಂಸ್ಥೆಗಳ ಆಡಳಿತ ವರ್ಗ ಹಾಗೂ ನೆಲಮಂಗಲದ ಮುರಳಿ ಕಾಲೇಜಿನ ಇತಿಹಾಸ ಪ್ರಾಧ್ಯಾಪಕರಾದ ಪ್ರೊ॥ ಹಾಲೇಶಪ್ಪ ಮತ್ತು ಇತರ ಸ್ನೇಹಿತರು, ಮೈಸೂರಿನ ಡಾ॥ ಮೈ. ನಾಗರಾಜ ಶರ್ಮ, ಧಾರವಾಡದ ಡಾ॥ ಅಜಿತ್ ಪ್ರಸಾದ್ ಜೈನ್ ಹಾಗೂ ಗುಲಬರ್ಗಾದ ಪ್ರೊ॥ ವಸಂತ ಕುಷ್ಟಗಿ ಹಾಗೂ ಮಂಗಳೂರಿನ ಪ್ರೊ॥ ರಾಘವೇಂದ್ರ ಪ್ರಭು ಅವರಿಗೆ ಅಕಾದೆಮಿ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಅಂತೆಯೇ ಎಲ್ಲಾ ಪರೀಕ್ಷಾ ಕೇಂದ್ರಗಳಲ್ಲೂ ಪರೀಕ್ಷಾ ಸಂದರ್ಭದಲ್ಲಿ ಸಹಕರಿಸಿದ ಆಯಾ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿ ಹಾಗೂ ಅಧಿಕಾರ ವರ್ಗ ಮತ್ತು ಉತ್ತರ ಪತ್ರಿಕೆಗಳ ಮೌಲ್ಯಮಾಪನ ಮಾಡಿದ ಇತಿಹಾಸ ಉಪನ್ಯಾಸಕರು ಹಾಗೂ ಸ್ಥಳಾವಕಾಶ ನೀಡಿದ ಬಸವೇಶ್ವರ ಶಿಕ್ಷಣ ಸಂಸ್ಥೆಗಳ ಅಧಿಕಾರ ವರ್ಗಕ್ಕೆ ಅಕಾದೆಮಿಯು ಧನ್ಯವಾದಗಳನ್ನು ಸಲ್ಲಿಸುತ್ತದೆ.

**ಕಾರ್ಯಕಾರಿ ಸಮಿತಿ ಸಭೆಗಳು**

೨೦೦೪ನೆಯ ಸಾಲಿನಲ್ಲಿ ಅಕಾದೆಮಿಯ ಕಾರ್ಯಕಾರೀ ಸಮಿತಿಯು ನಾಲ್ಕು ಬಾರಿ (೨೦-೭-೨೦೦೪, ೨೨-೮-೨೦೦೪, ೨೬-೯-೨೦೦೪ ಮತ್ತು ೨೭-೧೨-೨೦೦೪) ಸಭೆ ಸೇರಿ, ಅಕಾದೆಮಿಯ ಚಟುವಟಿಕೆಗಳು ಉತ್ತಮವಾಗಿ ನಡೆಯಲು ಕಾರಣವಾಗಿದೆ. ತಮ್ಮ ಎಲ್ಲಾ ಕಾರ್ಯಕ್ರಮಗಳ ನಡುವೆಯೂ ಬಿಡುವು ಮಾಡಿಕೊಂಡು, ಖುದ್ದಾಗಿ ಪಾಲ್ಗೊಂಡು ಅಥವಾ ಪತ್ರಮುಖೇನ ಸಲಹೆಗಳನ್ನು ನೀಡುತ್ತಾ ಅಕಾದೆಮಿಯ ಕಾರ್ಯಕಾರೀ ಸಮಿತಿಯ ಸದಸ್ಯರೆಲ್ಲರೂ ಸಹಕರಿಸಿದ್ದಾರೆ.

**ಸದಸ್ಯಬಲ**

೨೦೦೪ರ ಅಂತ್ಯಕ್ಕೆ ಅಕಾದೆಮಿಯ ಸದಸ್ಯಬಲವು ಈ ಕೆಳಕಂಡಂತಿದೆ.

| ಆಜೀವ | ಸಾಮಾನ್ಯ | ಸಂಸ್ಥೆ | ಒಟ್ಟು |
|---|---|---|---|
| ೧೦೭೬ | ೧ | ೨೯ | ೧೧೦೬ |

**ಅಕಾದೆಮಿಯ ಘಟಕಗಳು**

ಡಾ॥ ಬೆಂ. ಶಾ.ಶ್ಯಾಮಲಾ ರತ್ನಕುಮಾರಿ ಅವರ ಅಧ್ಯಕ್ಷರ ಮತ್ತು ಡಾ॥ ಕೆ.ಬಿ. ಸುದರ್ಶನ್ ಅವರ ಪ್ರಧಾನ ಕಾರ್ಯದರ್ಶಿತ್ವದಲ್ಲಿ ಬೆಂಗಳೂರು ಜಿಲ್ಲಾ ಘಟಕವು ಕಾರ್ಯ ನಿರ್ವಹಿಸುತ್ತಿದೆ. ಪತ್ರಿ ವರ್ಷದಂತೆ ಈ ವರ್ಷವೂ ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹದ ನಿಮಿತ್ತ ಬೆಂಗಳೂರು ನಗರದ ಪೌಢಶಾಲೆಗಳು ಮತ್ತು ಕಾಲೇಜು ವಿದ್ಯಾರ್ಥಿಗಳಿಗೆ ಹಲವು ಸ್ಪರ್ಧೆಗಳನ್ನು ಘಟಕವು ಹಮ್ಮಿಕೊಂಡಿತ್ತು. ವಿಜೇತ ಸಂಸ್ಥೆಗಳಿಗೆ ಡಾ॥ ಸೂರ್ಯನಾಥ ಕಾಮತ್, ಡಾ॥ ಜಿ.ಎಸ್. ದೀಕ್ಷಿತ್ ಮತ್ತು ದಿವಂಗತ ಅಂಗದ ಹೆಸರಿನಲ್ಲಿರುವ ಪರ್ಯಾಯ ಪಾರಿತೋಷಕಗಳನ್ನು ವಿತರಿಸಲಾಯಿತು, ಮೊದಲ, ಎರಡನೆಯ ಮತ್ತು ಮೂರನೆಯ ಬಹುಮಾನ ಪಡೆದವರಿಗೆ ಶ್ರೀ ಗಾಳಿಸ್ವಾಮಿ ಅವರು ನಗದು ಬಹುಮಾನಗಳನ್ನು ನೀಡಿದರು.

ಹೊಸಪೇಟೆ ತಾಲ್ಲೂಕು ಘಟಕವು ಡಾ॥ಕೆ. ಎಂ. ಸುರೇಶ್ ಅವರ ಗೌರವಾಧ್ಯಕ್ಷತೆ ಮತ್ತು ಡಾ॥ಎಂ. ಕೊಟ್ರೇಶ್ ಅವರ ಅಧ್ಯಕ್ಷತೆ ಹಾಗೂ ಶ್ರೀ ಟಿ. ಮಂಜುನಾಥ ಸ್ವಾಮಿ ಅವರ ಕಾರ್ಯದರ್ಶಿತ್ವದಲ್ಲಿ ಕಾರ್ಯನಿರ್ವಹಿಸುತ್ತಿದೆ. ಪ್ರಮುಖವಾಗಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಗಳ ಆಯೋಜನೆಯಲ್ಲಿ ಈ ಘಟಕವು ವಿಶೇಷ ಮುತುವರ್ಜಿ ವಹಿಸುತ್ತಿದೆ.

ಡಾ|| ಪಿ.ಎನ್. ನರಸಿಂಹಮೂರ್ತಿ ಅವರ ಅಧ್ಯಕ್ಷತೆ, ಡಾ|| ಬಿ.ಜಗದೀಶ ಶೆಟ್ಟಿ ಅವರ ಕಾರ್ಯದರ್ಶಿತ್ವ ಶ್ರೀ ಎಸ್. ಆರ್. ಅರುಣಕುಮಾರ್ ಅವರ ಕೋಶಾಧಿಕಾರದ ಜವಾಬ್ದಾರಿಯಲ್ಲಿ ತಾತ್ಕಾಲಿಕವಾಗಿ ಎಂದು ಉಲ್ಲೇಖಗೊಂಡು, ಕಾರ್ಯನಿರ್ವಹಿಸುತ್ತಿರುವ ಅಕಾದೆಮಿಯ ಉಡುಪಿ ಜಿಲ್ಲಾ ಘಟಕವು, ಅಕಾದೆಮಿಯ ಪ್ರಧಾನ ಕಾರ್ಯದರ್ಶಿ ಡಾ|| ಎಚ್. ಎಸ್. ಗೋಪಾಲರಾವ್ ಅವರಿಂದ ೨೯-೧೧-೨೦೦೪ರಂದು ವಿಧ್ಯುಕ್ತವಾಗಿ ಉದ್ಘಾಟನೆಗೊಂಡು, ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದೆ.

ಉದ್ಘಾಟನಾ ಸಮಾರಂಭವನ್ನು ಅನುಸರಿಸಿ, ಘಟಕವು, ಡಾ|| ಅ. ಸುಂದರ ಅವರಿಂದ ಜಿಲ್ಲೆಯ ಹನ್ನೆರಡು ಕಾಲೇಜುಗಳಲ್ಲಿ ೧೨ ಉಪನ್ಯಾಸಗಳ ಉಪನ್ಯಾಸ ಸಪ್ತಾಹವನ್ನು ಆಚರಿಸಿತು. ೩೦-೧೧-೨೦೦೪ರಂದು ಶಿರ್ವದ ಎಂ.ಎಸ್.ಆರ್.ಎಸ್. ಕಾಲೇಜಿನಲ್ಲಿ ಡಾ|| ಅ. ಸುಂದರ ಮತ್ತು ಡಾ|| ಎಚ್.ಎಸ್. ಗೋಪಾಲರಾವ್ ಅವರಿಂದ ಒಂದು ದಿನದ ವಿಚಾರ ಗೋಷ್ಠಿಯನ್ನೂ ಆಯೋಜಿಸಿತ್ತು.

ಘಟಕದ ಉದ್ಘಾಟನೆಗೆ ಮೊದಲೇ, ಅಕಾದೆಮಿಯ ಸ್ಥಳೀಯ ಸದಸ್ಯರು ಜಿಲ್ಲೆಯ ಹಲವು ಶಾಲೆಗಳಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡೆಸಿತ್ತು. ಡಾ|| ಮಾಲತಿ ಕೆ. ಮೂರ್ತಿ, ಡಾ|| ಬಿ.ಜಗದೀಶ ಶೆಟ್ಟಿ, ಡಾ|| ಪಿ.ಎನ್. ನರಸಿಂಹಮೂರ್ತಿ ಅವರು ಸಂಪನ್ಮೂಲ ವ್ಯಕ್ತಿಗಳಾಗಿ ಸುಮಾರು ೧೫೦ ಶಿಕ್ಷಕ/ಶಿಕ್ಷಕಿಯರಿಗೆ ಸಮಾಜ ವಿಜ್ಞಾನ ವಿಷಯದ ತರಬೇತಿ ಕಮ್ಮಟಗಳನ್ನು ಉಡುಪಿ ಮತ್ತು ಕುಂದಾಪುರ ವಿಭಾಗಗಳಲ್ಲಿ ಯಶಸ್ವಿಯಾಗಿ ನಡೆಸಿದ್ದಾರೆ. ಈ ಸಂದರ್ಭದಲ್ಲಿ ಶ್ರೀ ಕೆ. ಶ್ರೀಧರ ಭಟ್ಟರು ನೀಡಿದ ನೆರವನ್ನು ಘಟಕವು ಸ್ಮರಿಸಿದೆ.

ಉಡುಪಿಯ ಜಿಲ್ಲಾ ಘಟಕಕ್ಕೆ ಉಡುಪಿಯ ಅಕಾದೆಮಿ ಆಫ್ ಜನರಲ್ ಎಜುಕೇಶನ್, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಎಂ.ಜಿ. ಎಂ. ಕಾಲೇಜು ಮತ್ತು ಬ್ರಹ್ಮಾವರದ ಡಾ|| ಬಿ. ವಸಂತ ಶೆಟ್ಟಿ ಸ್ಮಾರಕ ಕೇಂದ್ರಗಳು ಎಲ್ಲ ರೀತಿಯ ನೆರವು ನೀಡುತ್ತಿವೆ ಎಂದು ಘಟಕದ ವರದಿ ತಿಳಿಸಿದೆ.

ಉಳಿದಂತೆ ಯಾವ ಘಟಕಗಳ ವರದಿಯೂ ಲಭ್ಯವಾಗಿಲ್ಲ, ಕೆಲವು ಘಟಕಗಳು ಪ್ರಚಾರಕ್ಕೆ ಗಮನ ನೀಡದೆ ಕಾರ್ಯಕ್ರಮಗಳತ್ತ ಗಮನವಿಟ್ಟು ಕಾರ್ಯೋನ್ಮುಖವಾಗಿವೆ ಎಂದು ತಿಳಿಯಲಾಗಿದೆ.

**ಕೃತಜ್ಞತೆಗಳು**

ಅಕಾದೆಮಿಯ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಕ್ಕೆ ನೆರವು ನೀಡುತ್ತಿರುವ ಕರ್ನಾಟಕ ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯ, ಅಕಾದೆಮಿಯ ಹಲವಾರು ಕಾರ್ಯಗಳಿಗೆ ಸಹಯೋಗ ನೀಡಿ ಸಹಕರಿಸುತ್ತಿರುವ ಬೆಂಗಳೂರಿನ ಮಿಥಿಕ್ ಸೊಸೈಟಿ, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ, ಬಿ.ಎಂ.ಶ್ರೀ. ಪ್ರತಿಷ್ಠಾನ, ಬಿ.ಆರ್.ಆರ್. ಫ್ಯಾಮಿಲಿ ಟ್ರಸ್ಟ್ ಮತ್ತು ಲಕ್ಷ್ಮಿ ಮುದ್ರಣಾಲಯದ ಶ್ರೀ ಅಶೋಕ ಕುಮಾರ್, ವಾಗ್ದೇವಿ ಮುದ್ರಣಾಲಯ, ಶ್ರೀ ಗಾಳಿಸ್ವಾಮಿ, ಶ್ರೀ ಜಗಜ್ಯೋತಿ ಬಸವೇಶ್ವರ ಸಹಕಾರ ಸಂಘ, ಪ್ರಗತಿ ಸಹಕಾರ ಬ್ಯಾಂಕ್, ಬಸವೇಶ್ವರ ಕಾಲೇಜಿನ ಅಧಿಕಾರ ವರ್ಗ ಮತ್ತು ಸಿಬ್ಬಂದಿ, ೧೮ನೆಯ ಸಮ್ಮೇಳನಕ್ಕೆ ಆಶ್ರಯ ನೀಡಿದ್ದ ಹೊನ್ನಾಳಿಯ ಶ್ರೀ ಚನ್ನಪ್ಪ ಸ್ವಾಮಿ ವಿದ್ಯಾಪೀಠ (ರಿ.,), ಚನ್ನ-ಚೇತನ ಪ್ರಕಾಶನ ಮತ್ತು ಹಿರೇಮಠಗಳ ಪೂಜ್ಯ ಗುರುವರ್ಗಕ್ಕೆ, ಅಕಾದೆಮಿಯ ವಾರ್ಷಿಕ ಸಂಚಿಕೆ ಇತಿಹಾಸ ದರ್ಶನದ ಮುದ್ರಣಕ್ಕೆಂದು ವಾರ್ಷಿಕ ರೂ. ಇಪ್ಪತ್ತೈದು ಸಾವಿರ ನೆರವು ನೀಡುವ ಆಶ್ವಾಸನೆ ನೀಡಿರುವ ಬಾಳೇ ಹೊನ್ನೂರಿನ ಶ್ರೀ ಮಠದ ಪೂಜ್ಯ ಸ್ವಾಮೀಜಿ ಅವರಿಗೆ, ೧೯ನೆಯ ಸಮ್ಮೇಳನಕ್ಕೆ ಆಶ್ರಯ ನೀಡಿರುವ ಸೇಡಂನ ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಂಸ್ಥೆಗಳ ಎಲ್ಲಾ ಅಧಿಕಾರ ವರ್ಗಕ್ಕೆ ಅಕಾದೆಮಿಯ ಇತಿಹಾಸ ಪ್ರಶಸ್ತಿ ಪರೀಕ್ಷೆಗಳ ಸಂದರ್ಭ ಸಹಕರಿಸಿರುವ ಶಿಕ್ಷಣ ಸಂಸ್ಥೆಗಳ ಪ್ರಾಂಶುಪಾಲರು ಹಾಗೂ ಸಿಬ್ಬಂದಿ ಮತ್ತು ಬಹುಮಾನ ನೀಡಿಕೆಗೆ ಸಹಕರಿಸುವ ಶ್ರೀ ಗಾಳಿಸ್ವಾಮಿ ಮತ್ತು ಇನ್ನೂ ಅನೇಕ ವಿಶ್ವಾಸಿಗಳಿಗೆ ಅಕಾದೆಮಿಯು ಕೃತಜ್ಞವಾಗಿದೆ.

*ಕಾರ್ಯಕಾರೀ ಸಮಿತಿಯ ಅನುಮತಿಯ ಮೇರೆಗೆ,*

**ಡಾ|| ಸೂರ್ಯನಾಥ ಕಾಮತ್**
ಅಧ್ಯಕ್ಷರು

**ಪ್ರೊ|| ಎಂ.ಜಿ. ನಾಗರಾಜ್**
**ಪ್ರೊ|| ವಸಂತಕುಷ್ಟಗಿ**
ಉಪಾಧ್ಯಕ್ಷರು

**ಡಾ|| ಎಚ್. ಎಸ್. ಗೋಪಾಲರಾವ್**
ಪ್ರಧಾನಕಾರ್ಯದರ್ಶಿ

**ಎಂ. ಬಿ. ಪಾಟೀಲ್**
ಕೋಶಾಧಿಕಾರಿ

**ಡಾ|| ಕೆ. ವಸಂತಲಕ್ಷ್ಮಿ, ಡಾ|| ಚೆನ್ನಕ್ಕ ಪಾವಟೆ**
ಕಾರ್ಯದರ್ಶಿಗಳು

**ಬೆಂಗಳೂರು**
**೨೦-೮-೨೦೦೫**

## ಈ ಘೋಷಣೆಗಳನ್ನು ಜನಪ್ರಿಯಗೊಳಿಸಿ

✿ ಮನುಷ್ಯನಿಗೆ ನೆನಪು ಹೇಗೋ
ದೇಶಕ್ಕೆ ಇತಿಹಾಸ ಹಾಗೆ

✿ ನೆನಪು ನಮಗೆ ದಾರಿ ತೋರ್ವ ಉರಿಯುವಾ ಬತ್ತಿ
ಇತಿಹಾಸವು ನೆನಪಿನಂತೆ ನಾಡಿಗೊಂದು ಬುತ್ತಿ

✿ ಇತಿಹಾಸ ಸಂಶೋಧನೆ
ನಮ್ಮ ತಿಳಿವಿನ ವರ್ಧನೆ

✿ ತಾಳೆ ಹೊತ್ತಗೆಯ ರಕ್ಷಣೆ
ಹಳೆಯ ಪರಂಪರೆಗೆ ಪೋಷಣೆ

✿ ಹಳೆಯ ಕೋಟೆ ಹಳೆ ದೇಗುಲ ಹಳೆ ಕಾಗದ ಕಡತ
ಹೇಳುವುದು ನಮಗೆಲ್ಲ ಪ್ರಾಚೀನರ ತುಡಿತ

✿ ಪ್ರಾಚೀನ ಶಾಸನಗಳ ನಾಶ
ಇತಿಹಾಸ ಪುರುಷನಿಗೆ ಪಾಶ

✿ ಪ್ರಾಚೀನ ದೇಗುಲ, ಶಿಲ್ಪ, ಮೂರ್ತಿ
ನಮ್ಮ ಹಿರಿಯರ ಕಲೆಯ ಕೀರ್ತಿ

✿ ಪ್ರಾಚೀನ ಇಗರ್ಜಿ ಮಸೀದಿ ಗುಡಿ
ನಮ್ಮ ಪರಂಪರೆಯ ಭವ್ಯ ಮುಡಿ

✿ ಕೋಟೆ ಕೊತ್ತಲದ ಕಲ್ಲು ಕಿತ್ತರೆ
ಪ್ರಾಚೀನ ಪರಂಪರೆಯ ಪಂಚಾಂಗ ಕಿತ್ತಂತೆ

✿ ಹಳೆಯ ಕೆರೆಗಳ ದುರ್ಲಕ್ಷ
ತಂದಿತೆಮಗೆ ದುರ್ಭಿಕ್ಷ

**ಕರ್ನಾಟಕ ಇತಿಹಾಸ ಅಕಾದೆಮಿ (ರಿ.)**
ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಆವರಣ
ಬಸವನಗುಡಿ ರಸ್ತೆ, ಬೆಂಗಳೂರು - ೫೬೦ ೦೧೯

**ಇ ವ ರ ಪ್ರ ಕ ಟ ಣೆ**

# ಗುಲಬರ್ಗಾ ಜಿಲ್ಲೆಯ ಕೆಲವು ದೇಗುಲ - ಶಿಲ್ಪಗಳು



ಬಂಕೂರು ಗಣೇಶ



ನಾಗಾವಿಯ ನಂದೀಶ್ವರ ಮಂದಿರ



ಸನ್ನತಿಯ ಶಿವಲಿಂಗ

## ಸನ್ನತಿಯ ಚಂದ್ರಲಾಪರಮೇಶ್ವರಿ ದೇಗುಲದ ಆವರಣದಲ್ಲಿರುವ ಕೆಲವು ಶಿಲ್ಪಗಳು

















 ಕರ್ನಾಟಕ ಇತಿಹಾಸ ಅಕಾದೆಮಿ (ರಿ)

# ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ

ಪ್ರಾಚೀನ ದೇಗುಲ, ಶಿಲ್ಪ, ಮೂರ್ತಿ
ನಮ್ಮ ಹಿರಿಯರ ಕಲೆಯ ಕೀರ್ತಿ

ಪ್ರಾಚೀನ ಇಗರ್ಜಿ ಮಸೀದಿ ಗುಡಿ
ನಮ್ಮ ಪರಂಪರೆಯ ಭವ್ಯ ಮುಡಿ



ತಾಳೆ ಹೊತ್ತಗೆಯ ರಕ್ಷಣೆ
ಹಳೆಯ ಪರಂಪರೆಗೆ ಪೋಷಣೆ

ಹಳೆಯ ಕೋಟೆ ಹಳೆ ದೇಗುಲ ಹಳೆ ಕಾಗದ ಕಡತ
ಹೇಳುವುದು ನಮಗೆಲ್ಲ ಪ್ರಾಚೀನರ ತುಡಿತ

ನೆರವು: ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆ

೨೦೦೪-೦೫



